


# ಜಯ-ಕರ್ನಾಟಕ

ವರ್ಷ ೫. | ಸಂ. ೨. | ಧಾರವಾಡ, ೧೯-೧೨-೨೬, ಮಾರ್ಗಶೀರ್ಷ ಶು. ೧೫, ಶಕ, ೧೮೪೮


ಸಂಪಾದಕರು:- ಆಲೂರ ವೆಂಕಟರಾಯರು, ಬಿ.ಎ.ಎಲ್‌ಎಲ್.ಬಿ.
ಉಪಸಂಪಾದಕರು:-ಪಾಲ ರಾಮಚಂದ್ರರಾಯರು, ಬಿ.ಎ.

# ವಿ ಷ ಯಾ ನು ಕ್ರ ಮ ಣಿ ಕೆ.





# ಜಯಕರ್ನಾಟಕ



೫ನೆಯ ವರ್ಷ



ಶಕೆ ೧೮೪೮-೧೮೪೯, ಇಸವಿ ೧೯೨೬-೧೯೨೭



ಸಂಪಾದಕರು:—

## ಆಲೂರ ವೆಂಕಟರಾಯರು.

ಬಿ. ಎ. ಎಲ್ ಎಲ್. ಬಿ.



ಧಾರವಾಡ

ಈ ಮಾಸಪತ್ರಿಕೆಯನ್ನು ಮಾಧವ ಕೃಷ್ಣ ಜೋಶಿಯವರು.
ಕರ್ನಾಟಕ ಪ್ರಿಂಟಿಂಗ ವರ್ಕ್ಸ್, ಧಾರವಾಡ ಮುದ್ರಣಾಲಯದಲ್ಲಿ
ಮುದ್ರಿಸಿದರು. ಮತ್ತು ವೆಂಕಟೇಶ ಭೀಮರಾವ ಆಲೂರವರು ಧಾರವಾಡ
ಮು. ನ. ೧೦೮೦ನೆಯ ಮನೆಯಲ್ಲಿ ಪ್ರಕಟಿಸಿದರು.

# ೫ನೆಯ ವರ್ಷದ ಅನುಕ್ರಮಣಿಕೆ.

# ಲೇಖಕರ ಹೆಸರುಗಳು






ॐ सह नाववतु ॥ सह नौ भुनक्तु ॥ सह वीर्यं करवावहै ॥
तेजस्विनावधीतमस्तु मा विद्विषावहै ॥ ॐ शान्तिः ॥३॥

—श्रुतिः


ಸಂಪುಟ ೫ | ಕ್ಷಯನಾಮ ಸಂವತ್ಸರದ ಹೊಸ್ತಲ ಹುಣ್ಣಿವೆ, ಶಕ ೧೮೫೮ ೧೯ ನೆಯ ಡಿಸೆಂಬರ ೧೯೩೬. | ಸಂಚಿಕೆ ೨


# ಮಾನವ ಇತಿಹಾಸದ ಸಂಕ್ಷಿಪ್ತ ವಿಹಾವಲೋಕನ.


ಲೇ:— ಶ್ರೀ ಸುಬ್ಬರಾವ್ ಚಿನ್ನಭಂಡಾರ ಬಿ. ಎ., ತೀರ್ಥಹಳ್ಳಿ.


( ೧ನೆಯ ಸಂಚಿಕೆಯಿಂದ ಮುಂದುವರಿದುದು. )

ಅತಿ ಪ್ರಾಚೀನಕಾಲದಲ್ಲಿ ಪಾಂಡವರು ತಮಗೆ ಅರಿತಿದ್ದ ರಾಜ್ಯಗಳೆಲ್ಲವನ್ನೂ ಜಯಿಸಿದ್ದರು. ಅವರ ಉದ್ದೇಶವು, ಧರ್ಮ ಸಂಸ್ಥಾಪನೆ, ಶಾಂತಿ, ಸರ್ವಜನರ ಸುಖ, ಇವುಗಳೇ ಆಗಿದ್ದುವು. ಅನಂತರದಲ್ಲಿ ಬೌದ್ಧಮತವು ಪ್ರಬಲ ಸ್ಥಿತಿಗೆ ಬರುವ ವೇಳೆಯಲ್ಲಿ ಅಶೋಕಮಹಾರಾಜನು ತನ್ನ ಕ್ಷಾತ್ರಬಲದಿಂದ ರಾಜ್ಯಗಳನ್ನು ಜಯಿಸುತ್ತಿದ್ದನು. ಇವನು ಕಳಿಂಗ ರಾಜವನ್ನು ಜಯಿಸಿದನು. ಯುದ್ಧದಲ್ಲಿ ನಡೆದ ಪ್ರಾಣ ಹಿಂಸೆಯನ್ನು ನೋಡಿ ಕಂಪಿತನಾದನು. ಬುದ್ಧ ಧರ್ಮದ ಅಹಿಂಸಾ ತತ್ವವನ್ನು ಅಂಗೀಕರಿಸಿ ಯುದ್ಧಮಾಡುವುದನ್ನು ತ್ಯಜಿಸಿದನು. ಅಶೋಕಮಹಾರಾಜನಂಥ ಪ್ರಬಲನಾದ ಚಕ್ರವರ್ತಿಗೆ ಜಗತ್ತಿನ ವೀರನಾಗುವುದು ಕಷ್ಟವಿರಲಿಲ್ಲ. ಇವನ ಅಜ್ಜನಾದ ಚಂದ್ರಗುಪ್ತನು ಪಾಶ್ಚಾತ್ಯ ಪ್ರಪಂಚದ ರಣಾಧೀಶನಾಗಿದ್ದ ಯವನರ ಅಲೆಕ್ಸಾಂಡರನನ್ನೂ ಹಿಂದಕ್ಕೆ ಓಡಿಸಿ ಅವನ ಕಡೆಯ ಸಿಲಕ್ಯೂಸನನ್ನೂ ಸೋಲಿಸಿ ಭಾರತೀಯರ ಸ್ವಾತಂತ್ರ್ಯವನ್ನೂ ಸ್ವರಾಜ್ಯವನ್ನೂ ಕಾಪಾಡಿದ್ದನು. ಪ್ರಾಚೀನ ಭಾರತೀಯರು, ಜಗತ್ತಿನ ಏಕಛತ್ರಾಧಿಪತ್ಯವನ್ನೇ ಮಹಾ ಉದ್ದೇಶವನ್ನಾಗಿಟ್ಟುಕೊಂಡು ಪ್ರಯತ್ನಪಟ್ಟಿದ್ದರೆ ಅದು ಅವರಿಗೆ ಸುಲಭಸಾಧ್ಯವಾಗಿಯೇ ಇತ್ತು. ಆದರೆ ಅವರು ಧಾರ್ಮಿಕ ಸಾಮ್ರಾಜ್ಯದ ಕಡೆಗೆ ಹೆಚ್ಚು ಲಕ್ಷ್ಯವನ್ನು ಕೊಟ್ಟರು. ವೈದಿಕ ಧರ್ಮವೂ ಬೌದ್ಧ ಧರ್ಮವೂ ಸಂಯೋಜನವಾಗಿ, ಭಾರತೀಯ ಧಾರ್ಮಿಕ ಸಂಸ್ಕೃತಿಯನ್ನು ಅಭಿವೃದ್ಧಿಪಡಿಸಿ, ಕೋಟ್ಯಂತರ ಜನಗಳನ್ನು ಉದ್ಧಾರಮಾಡಿದುವು. ಭರತವರ್ಷವು ಧಾರ್ಮಿಕ ನಾಗರಿಕತೆಗೆ ತವರು ಮನೆಯಾಯಿತು. ಭಾರತಮಾತೆಯು, ಅಹಿಂಸಾ ತತ್ವದ ತೇಜಸ್ಸಿನಿಂದಲೂ, ವಿದ್ಯಾವೈಭವದಿಂದಲೂ, ಧಾರ್ಮಿಕ ಶಾಂತತೆಯಿಂದಲೂ ಮೆರೆಯುತ್ತಿದ್ದಳು. ಬೌದ್ಧಮತವು ಮಲಿನವಾಗಿ ಕಳೆಗುಂದುತ್ತಿರಲು ಶಂಕರಾಚಾರ್ಯರು ಮೊದಲಾದ

ಆಚಾರ್ಯರುಗಳು ಅವತರಿಸಿ ವೈದಿಕಮತವನ್ನೂ, ಸನಾತನ ಧರ್ಮಗಳನ್ನೂ ಉದ್ಧಾರಮಾಡಿದರು. ಅನಂತರ ಮಹಮ್ಮದೀಯ ಮತವು ಭರತಖಂಡವನ್ನು ವ್ಯಾಪಿಸಿ, ಹೀನದೆಸೆಗೆ ಬರುತ್ತಿದ್ದ ಹಿಂದೂ ಸಂಸ್ಕೃತಿಗೆ ಕೆಲಕಾಲ ನವಶಕ್ತಿಯನ್ನು ಕೊಟ್ಟರೂ, ಭಾರತೀಯ ಜನಾಂಗವು ಪ್ರಾಚೀನ ಉನ್ನತಾವಸ್ಥೆಯನ್ನು ಪಡೆಯಲಿಲ್ಲ. ಈಚಗಿನ ನಾಲ್ಕು ಶತಮಾನಗಳಿಂದೀಚೆಗೆ ಐರೋಪ್ಯರು ಪ್ರಬಲದೆಸೆಗೆ ಬಂದರು. ಹಿಂದುಸ್ಥಾನದ ಸಂಪತ್ತು ಇವರಿಗೆ ಧನದಾಸೆಯನ್ನುಂಟುಮಾಡಿತು. ಹಿಂದುಸ್ಥಾನವು ಬಿಳಿಯ ಜನರ ಪ್ರಾಬಲ್ಯಕ್ಕೂ, ಆಳ್ವಿಕೆಗೂ ಆಧೀನವಾಯಿತು.

ಭಾರತೀಯ ಸಂಸ್ಕೃತಿಯು ಮಹತ್ವದಿಂದ ಹಿಂದೀಯರು ಮಾನವ ಕುಟುಂಬದ ಸೇವೆಯನ್ನು ಈಗಲೂ ಮಾಡಬಹುದು. ಪ್ರಪಂಚದಲ್ಲಿ ಅಹಿಂಸಾ ತತ್ವವು ಎಲ್ಲಾ ಜನಾಂಗಗಳಿಂದಲೂ ಮಾನ್ಯಮಾಡಲ್ಪಟ್ಟಿಲ್ಲ. ಜನಾಂಗಗಳು ಮತ್ಸ್ಯ ನ್ಯಾಯವನ್ನೆ ಅನುಸರಿಸುತ್ತಾ ಇವೆ. ಪ್ರಾಣಹಿಂಸೆಯೂ, ಮಾಂಸಾಹಾರವೂ ಬಹಳ ಜನರಲ್ಲಿ ಆಚರಣೆಯಲ್ಲಿವೆ. ಪಾಶ್ಚಾತ್ಯ ಜನಾಂಗಗಳಲ್ಲಿ ಅಧಿಕಾರ ಮದವೂ, ಸಂಪತ್ತಿನ ಮದವೂ, ರಣರಂಗದ ಅಭಿಲಾಷೆಯೂ, ವಿಶೇಷವಾಗಿವೆ. ಇವುಗಳನ್ನು ಹೋಗಲಾಡಿಸಿ, ಮಾನವಕುಟುಂಬದ ಸುಖವೇ ಮುಖ್ಯವಾದುದು. ಎಲ್ಲಾ ಜನಗಳೂ, ಜನಾಂಗಗಳೂ, ಸರಿಸಮಾನವಾದ ಹಕ್ಕು ಬಾಧ್ಯತೆಗಳಿಗೆ, ಬಾಧ್ಯರು; ಎಲ್ಲಾ ಜನರೂ ಒಬ್ಬನೇ ದೇವರ ರಕ್ಷಣೆಗೆ ಪಾತ್ರರಾಗಿರುವುದರಿಂದ ಸಕಲರೂ ಸಹೋದರರು; ಪೃಥ್ವಿಯ ಭೂಭಾಗಗಳೂ, ಅವುಗಳಲ್ಲಿನ ಸಂಪತ್ತು ಎಲ್ಲಾ ಜನಾಂಗಗಳ ಪೋಷಣೆಗೆ ಭಗವಂತನಿಂದ ನಿಯಾಮಕವಾಗಿದೆ; ಅದನ್ನು ಪ್ರಬಲರಾದವರು ಮಾತ್ರವೇ ಸ್ವಾರ್ಥತೆಯಿಂದ ಭೋಗಿಸುವುದು ಪಾಪಕರ; ಎಂಬ ವಿಷಯಗಳನ್ನು, ಜನಸಾಮಾನ್ಯದಲ್ಲಿಯೂ, ಜನಾಂಗಗಳಲ್ಲಿಯೂ, ಧಾರ್ಮಿಕ ರೀತಿಯಲ್ಲಿ ಸಾತ್ವಿಕ ಮಾರ್ಗದಲ್ಲಿ ಪ್ರಚುರಗೊಳಿಸಬೇಕು. ಮತವಿಚಾರಗಳಲ್ಲಿ ಪರಸ್ಪರ ಸಮಾಧಾನವೂ, ಶಾಂತಗುಣವೂ, ಜ್ಞಾನಾಭಿವೃದ್ಧಿಗೆ ಸಂಬಂಧಪಟ್ಟ ಐಕಮತ್ಯವೂ, ಹಿಂದೂ ಮತದಲ್ಲಿ ಕಂಡುಬರುವಷ್ಟು ಇನ್ಯಾವ ಧರ್ಮದಲ್ಲಿಯೂ ಹೆಚ್ಚಿಗೆ ಪ್ರಕಾಶವಾಗಿಲ್ಲ. ಈ ಭಾವನೆಗಳೂ, ತನ್ಮೂಲಕದ ಆಚರಣೆಗಳೂ, ಮಾನವ ಕುಟುಂಬದ ಕಲ್ಯಾಣಕ್ಕೆ ಅವಶ್ಯಕವಾದುವೆಂದು ಎಲ್ಲಾ ದೇಶಗಳಲ್ಲಿಯೂ ಪ್ರಕಾಶ ಮಾಡಬಹುದು. ಪಾಶ್ಚಾತ್ಯ ನಾಗರಿಕತೆಯು, ಕೇವಲ ಇಂದ್ರಿಯ ಸುಖದಲ್ಲಿಯೂ, ಧನದಾಸೆಯಲ್ಲಿಯೂ ಸುಖಸಾಧನೆಯನ್ನು ಹೆಚ್ಚಿಸಿಕೊಳ್ಳುವದರಲ್ಲಿಯೂ, ನಿರತವಾಗಿ, ವೇದಾಂತ ತತ್ವಗಳನ್ನೂ, ದೈವಿಕ ಜ್ಞಾನವನ್ನೂ, ಮಾನವ ಕುಟುಂಬದ ಸಹೋದರ ಭಾವನೆಯನ್ನು ತಾತ್ಸಾರಮಾಡಿ ಅಬಲ ಜನಾಂಗಗಳ ಅಭಿವೃದ್ಧಿಗೆ ಅಡಚಣೆಯನ್ನುಂಟು ಮಾಡುತ್ತಿರುವುದರಿಂದ, ಇವುಗಳಿಂದ ತಪ್ಪಿಸಿಕೊಳ್ಳುವುದಕ್ಕೆ ಮತ್ತು ಎಲ್ಲಾ ಜನಗಳ ಸುಖಶಾಂತತೆಯನ್ನೂ ಧಾರ್ಮಿಕ ಜ್ಞಾನಾಭಿವೃದ್ಧಿಯನ್ನೂ ಹೆಚ್ಚಿಸುವುದಕ್ಕೆ ಹಿಂದೀಯರು ಪ್ರಯತ್ನಪಡಬೇಕು. ಶಾಂತತೆ ಮತ್ತು ಸಕಲ ಜೀವಿಗಳ ಕಲ್ಯಾಣ ಇವುಗಳೇ ಭಾರತೀಯ ಸಂಸ್ಕೃತಿಯ ಉದ್ದೇಶಗಳು. ಪ್ರಪಂಚವು ಪರಮಾತ್ಮನ ವಿಶ್ವರೂಪವು. ಈ ಜಗತ್ತು ಭಗವಂತನ ಲೀಲೆ ಕಾರ್ಯಕ್ಷೇತ್ರವು. ಸಕಲ ಕಾರ್ಯಗಳೂ ದೈವ ಕೃಪೆಯಿಂದ ನಡೆಯುತ್ತವೆ; ಎಂಬ ವೇದಾಂತತತ್ವಗಳನ್ನು ಕಾರ್ಯರೂಪದಲ್ಲಿ ತರಲು ಸಾಹಸಪಡಬೇಕು. ವೇದಾಂತತತ್ವಗಳ ಆಚರಣೆಯಿಂದ ಜನಗಳಲ್ಲಿ ಸ್ವಾರ್ಥವು ನಾಶವಾಗಿ ಸಮಾನತ್ವಭಾವವೂ ಸಾರ್ವಜನಿಕ ಹಿತವೂ ಉಂಟಾಗುವುದು.

ಭಾರತೀಯ ನಾಗರೀಕತೆಯಂತೆ, ಚೀನೀ ಜನರ ನಾಗರಿಕತೆಯೂ ಪುರಾತನವಾದುದು; ಮತ್ತು ಸಾತ್ವಿಕವಾದುದು. ಚೀಣಾ ದೇಶವು, ಭರತಖಂಡಕ್ಕಿಂತಲೂ ವಿಸ್ತಾರವಾಗಿಯೂ, ಜನಭರಿತವಾಗಿಯೂ ಇದೆ. ಭರತಖಂಡದ ಜನಸಂಖ್ಯೆ ೩೨ ಕೋಟಿಯೂ, ಚೀನೀ, ಜಪಾನಿಯರ ಜನಸಂಖ್ಯೆ ೪೮ ಕೋಟಿಯೂ, ಆಗಿವೆ. ಇಂಡಿಯಾ, ಚೀಣಾ, ಜಪಾನು, ಈ ದೇಶಗಳ ಒಟ್ಟು ಜನಸಂಖ್ಯೆ ಮಾನವ ಕೋಟಿಯ ಅರ್ಧಭಾಗವಾಗುತ್ತೆ. ಭಾರತೀಯಸಂಸ್ಕೃತಿಯೇ ಏಷ್ಯಾಖಂಡದ ಸಂಸ್ಕೃತಿಯಾಗಿರುದವುರಿಂದ ಹಿಂದೀಯರೂ, ಚೀನಿಯರೂ, ಜಪಾನಿಯರೂ ಐಕಮತ್ಯವನ್ನು ತಾಳಿದರೆ, ಪೃಥ್ವಿಯಲ್ಲಿ, ಶಾಂತತೆಯೂ, ಸುಖವೂ ನೆಲಿಸುವುದು. ಚೀನಾದೇಶದ ಪ್ರಾಚೀನ ಇತಿಹಾಸವು ಬಹಳ ಪೂರ್ವಕಾಲದಿಂದಲೇ ಪ್ರಾರಂಭವಾಗುತ್ತದೆ. ಭಾರತೀಯರ ಮತ್ತು ಚೀನಿಯರ ನಾಗರಿಕತೆಗಳು ಸುಮಾರು ಎಂಟು–ಹತ್ತು ಸಾವಿರ ವರ್ಷಗಳ ಕಾಲದಿಂದ ಅಭಿವೃದ್ಧಿ ಹೊಂದುತ್ತಾ ಇವೆ. ಪ್ರಾಚೀನ ಸಂಗತಿಗಳಿಗೆ ಗೊತ್ತಾದ ಕಾಲನಿರ್ಣಯವನ್ನು ನಿರ್ಧರಿಸುವುದು ಬಹಳ ಪ್ರಯಾಸವಿರುವುದು. ಐತಿಹಾಸಿಕ ಪಂಡಿತರು ಸುಮಾರು ಎಂಟು–ಹತ್ತು ಸಾವಿರ ವರ್ಷಗಳ ಅವಧಿಯನ್ನು ಅಂಗೀಕರಿಸಿದ್ದಾರೆ.

ಪ್ರಪಂಚದ ಇತರ ಭಾಗಗಳಲ್ಲಿ ನಡೆದಂತೆ ಅತಿ ಪ್ರಾಚೀನ ಕಾಲದಲ್ಲಿ ಚೀನೀ ನಾಗರಿಕತೆಯ ಅರುಣೋದಯವು ಚೀಣಾ

ದೇಶದ ದೊಡ್ಡ ನದಿಗಳಾದ ಹೊಯ್ಯಾಂಗೊ-ಯಾಂಗ್ಟ್ಸೀಶಿಕಿಯಾಂಗ್ ಮೊದಲಾದವುಗಳ ಬಯಲು ನಾಡುಗಳಲ್ಲಿ ಪ್ರಕಾಶವಾಯಿತು. ದೇವಾಲಯಗಳಲ್ಲಿ ವಿಗ್ರಹಾರಾಧನೆಯೂ--ಸೂರ್ಯಾರಾಧನೆಯೂ ನಡೆಯುತ್ತಿದುವು. ಪುರೋಹಿತರೂ ರಾಜರುಗಳೂ, ಕ್ಲಪ್ತಕಾಲಗಳಲ್ಲಿ ಯಜ್ಞ-ಯಾಗಾದಿಗಳನ್ನು ಆಚರಿಸುತ್ತಿದ್ದರು. ಜನಸಾಮಾನ್ಯವು ಹಳ್ಳಿಗಳಲ್ಲಿಯೂ-ಸಣ್ಣ ಪಟ್ಟಣಗಳಲ್ಲಿಯೂ ಜೀವನವನ್ನು ನಡಿಸುತ್ತಿದ್ದಿತು. ವ್ಯವಸಾಯ ವೃತ್ತಿಯೂ-ಜೀವನೋಪಾಯದ ಕೈಗಾರಿಕೆ ಕಸಬುಗಳೂ ಅಭಿವೃದ್ಧಿಯಾಗುತ್ತಿದ್ದವು. ಚಿತ್ರರೂಪದ ಲೇಖನಪದ್ಧತಿಯು ಚೀನೀಯರಲ್ಲಿ ಈಗ ಸುಮಾರು ಮೂರು ಸಾವಿರ ವರ್ಷಗಳ ಹಿಂದೆಯೇ ರೂಢಿಯಲ್ಲಿತ್ತು. ಚೀಣಾದೇಶದ ಪಶ್ಚಿಮದ ಮತ್ತು ಉತ್ತರದ ಭಾಗಗಳಲ್ಲಿ ಅನಾಗರಿಕರಾದ ಕ್ರೂರ ಜನರು ಇರುತ್ತಿದ್ದರು. ಇವರಲ್ಲಿ ಮಂಗೋಲರೂ-ತುರುಕರೂ-ಟಾರಟರರೂ ಆಗಾಗ ಚೀಣಾದೇಶದ ಫಲವತ್ತಾದ ಬಯಲುನಾಡುಗಳಲ್ಲಿನ ಸಂಪದ್ಯುಕ್ತವಾದ ಪ್ರಾಂತಗಳಲ್ಲಿ ಹಾವಳಿಮಾಡುತ್ತ-ಕಾಲಾಂತರದಲ್ಲಿ ಚೀನೀ ಜನರಲ್ಲಿ ಮಿಶ್ರರಾಗುತ್ತಿದ್ದರು. ಚೀನೀ ನಾಗರಿಕತೆಯಲ್ಲಿ ಸಹಾ ಮೊಟ್ಟಮೊದಲು ದ್ರಾವಿಡರಂತೆ ಮೂಲಜನರೊಬ್ಬರು ಮೂಲ ನಾಗರಿಕತೆಯನ್ನು ಚೀಣಾದೇಶದ ದಕ್ಷಿಣ ಭಾಗದಲ್ಲಿ ಉತ್ಪನ್ನಮಾಡಿರಬಹುದು. ಈಗ ಸುಮಾರು ಮೂರುವರೆ ಸಾವಿರ ವರ್ಷಗಳ ಹಿಂದೆಯೇ ಚೀಣಾದೇಶದಲ್ಲಿ ಪ್ರಬಲವಾದ ರಾಜ್ಯಗಳೂ-ಚಿಕ್ಕ ಸಂಸ್ಥಾನಗಳೂ ಪ್ರಸಿದ್ಧಿಯಾಗಿದ್ದವು. ಚೀಣಾ ಚಕ್ರವರ್ತಿಗೆ"ದೇವಲೋಕದ ಅಥವಾ ಸ್ವರ್ಗಲೋಕದ ಪುತ್ರ" ನೆಂದು ಜನರು ಕರೆಯುತ್ತಿದ್ದರು. ಷಾಂಗ್ ಚಕ್ರವರ್ತಿಗಳ ವಂಶವು ಕ್ರಿ ಪೂ. ೧೧೨೫ರಲ್ಲಿ ಅಂತ್ಯವಾಯಿತು. ಅನಂತರ 'ಚೋವು' ಚಕ್ರವರ್ತಿಗಳ ವಂಶವು ಚಕ್ರಾಧಿಪತ್ಯವನ್ನು ಆಳಿತು. ಕ್ರಿ. ಪೂ ಏಳನೆ ಶತಮಾನದಲ್ಲಿ ಚೀಣಾದೇಶದಲ್ಲಿ ರಾಜಕೀಯ ಅನಾಯಕತ್ವವಿತ್ತು. ಸುಮಾರು ೫-೬ ಸಾವಿರ ಚಿಕ್ಕ ರಾಜ್ಯಗಳು ಇದ್ದವಂತೆ. ಚೀಣಾ ದೇಶದಲ್ಲಿಯೂ ತತ್ವಪಂಡಿತರೂ-ಮಹಾವೀರರೂ ವಿಶೇಷವಾಗಿದ್ದರು. ಕಾನ್ಫೂಷಿಯಸ್ ಮತ್ತು ಲಾವುಟ್ಸೆ ಎಂಬ ತತ್ವಪಂಡಿತರೂ ಮಹಾತ್ಮರೂ ಈಗ ಸುಮಾರು ೨೫೦೦ ವರ್ಷಗಳ ಪೂರ್ವದಲ್ಲಿ ಚೀನೀ ನಾಗರಿಕತೆಗೆ ಉತ್ತಮವಾದ ನೀತಿಧರ್ಮಗಳನ್ನೂ ಮತಧರ್ಮಗಳನ್ನೂ ಕೊಟ್ಟರು. ಅನಂತರ ಭರತಖಂಡದಿಂದ ಬೌದ್ಧಧರ್ಮವು ಚೀಣಾದೇಶವನ್ನು ಪ್ರವೇಶಮಾಡಿತು. ಕಾನ್ಫೂಷಿಯಸನ ನೀತಿಧರ್ಮಗಳೂ—ಲಾವುಟ್ಸೆನ ತತ್ವಧರ್ಮಗಳೂ ಬೌದ್ಧಧರ್ಮದ ಆಚರಣೆಗಳೂ ಚೀನೀ ಜನರ ಧಾರ್ಮಿಕ ನಾಗರಿಕತೆಯನ್ನು ಅಭಿವೃದ್ಧಿಗೊಳಿಸಿದುವು. ಕ್ರಿ. ಪೂ. ಮೂರನೆಯ ಶತಮಾನದಲ್ಲಿ ಚೀಣಾ ದೇಶದಲ್ಲಿ ಷೀವಾಂಗ್ಟೀ ಎಂಬ ಪ್ರಬಲನಾದ ಚಕ್ರವರ್ತಿಯು ಬಹಳ ವೈಭವದಿಂದ ೩೬ ವರ್ಷಗಳ ಕಾಲ ರಾಜ್ಯವಾಳಿದನು. ಚೀಣಾದೇಶದ ಪಶ್ಚಿಮದಲ್ಲಿರುವ ೧೫೦೦ ಮೈಲುಗಳ ಉದ್ದವಾದ ಅದ್ಭುತವಾದ ಮಹಾ ಗೋಡೆಯನ್ನು ಇವನು ನಿರ್ಮಿಸಿದನು. ಪಶ್ಚಿಮದಿಂದ ಅನಾಗರಿಕ ಶತ್ರುಗಳು ಚೀಣಾರಾಜ್ಯಕ್ಕೆ ಬಾರದಹಾಗೆ ಈ ಮಹಾ ಗೋಡೆಯನ್ನೂ ಇದರಲ್ಲಿ ಅಲ್ಲಲ್ಲಿ ಕೋಟೆ ಕೊತ್ತಲಗಳನ್ನೂ ಕಟ್ಟಿಸಿದನು. ಈ ಚಕ್ರವರ್ತಿಯ ಕಾಲದಲ್ಲಿ ಚೀಣಾ ರಾಜ್ಯವು ಬಹಳ ಪ್ರಖ್ಯಾತವಾಗಿಯೂ ಸಂಪದ್ಯುಕ್ತವಾಗಿಯೂ ಇತ್ತು.

ಕ್ರಿ. ಶ. ೫,೬,೭ ಮತ್ತು ೮ನೆ ಶತಮಾನಗಳಲ್ಲಿ ಮಂಗೋಲಿಯಾ ಪ್ರಾಂತದಿಂದ ತಂಡೋಪತಂಡ ಅನಾಗರಿಕ ಜನರು ಪಶ್ಚಿಮಾಭಿಮುಖವಾಗಿ ಚಲಿಸಿ ಯೂರೋಪುಖಂಡದ ಮೇಲೆಯೂ ಹಿಂದುಸ್ಥಾನದ ಮೇಲೆಯೂ ಹೋಗಿ ನೆಲಸಿದರು. ಮೊದಲು ಕ್ರಿ. ಪೂ. ೧-೨-೩ ಶತಮಾನಗಳಲ್ಲಿ ಇವರು ರೋಮನ ಚಕ್ರಾಧಿಪತ್ಯದಮೇಲೆಯೂ ಹಿಂದುಸ್ಥಾನ ಕುಷಾಣರ ಚಕ್ರಾಧಿಪತ್ಯದ ಮೇಲೆಯೂ ಬಿದ್ದು ಹಾವಳಿಮಾಡಿದ್ದರು ಮಂಗೋಲಿಯ ಪ್ರಾಂತದ ಅನಾಗರಿಕ ಜನರು ಚೀಣಾದೇಶದ ಮೇಲೆ ಆಗಾಗ ಬೀಳುತ್ತಿದ್ದರು. ಇವರಲ್ಲಿ ಅನೇಕರು ಚೀನೀಯರಲ್ಲಿ ಮಿಶ್ರರಾದರು. ೭-೮-೯ ನೆಯ ಶತಮಾನಗಳಲ್ಲಿ ಚೀಣಾದೇಶದಲ್ಲಿ ಪ್ರಬಲವಾದ ಮತ್ತು ಸುರಕ್ಷಿತವಾದ ರಾಜ್ಯಭಾರವಿತ್ತು. ನಾಗರಿಕತೆಯು ಅಭಿವೃದ್ಧಿ ಸ್ಥಿತಿಯಲ್ಲಿತ್ತು. ಜನಸಾಮಾನ್ಯದಲ್ಲಿ ಬೌದ್ಧಮತವು ನವಶಕ್ತಿಯನ್ನೂ ಆಚರಣೆಗಳನ್ನೂ ಪ್ರಚಾರಮಾಡಿತು. ವಿದ್ಯಾಭಿವೃದ್ಧಿಯೂ-ಕಲಾಭಿವೃದ್ಧಿಯೂ ವಿಶೇಷವಾಗಿ ನಡೆಯಿತು. ಕಾಗದದ ತಯಾರಿಯೂ, ಮುದ್ರಾಲೇಖನ ಯಂತ್ರಸಾಧನಗಳೂ ಅಭಿವೃದ್ಧಿಯಾದವು. ಕೋಟ್ಯಂತರ ಜನರು ನಾಗರಿಕತೆಯ ಜೀವನ ಕ್ರಮಗಳನ್ನನುಸರಿಸಿ ಸುಖವಾಗಿದ್ದರು. ಇದೇ ಕಾಲದಲ್ಲಿ ಪಾಶ್ಚಿಮಾತ್ಯ ಪ್ರಪಂಚದಲ್ಲಿ ಅಜ್ಞಾನವೂ-ಅನಾಗರಿಕತೆಯೂ ಕವಿದುಕೊಂಡು ಇತ್ತು. ಚೀನೀಯರು ವಿಚಾರಪರರಾಗಿ ನಾಗರಿಕತೆಯಲ್ಲಿಯೂ, ಜ್ಞಾನಾರ್ಜನೆಯಲ್ಲಿಯೂ ಮಗ್ನರಾಗಿದ್ದರು.

ಕ್ರಿ. ಶ. ೫—೬—೭ ನೆಯ ಶತಮಾನಗಳಲ್ಲಿ ಚೀಣಾದೇಶದಲ್ಲಿ " ಸುಯಿ " ಮತ್ತು " ಟಾಂಗ " ವಂಶದ ಚಕ್ರವರ್ತಿಗಳು ಆಳಿದರು. ಇವರ ಕಾಲದಲ್ಲಿ ಚೀಣಾ ರಾಜ್ಯವು ಸಂಪತ್ತಿ

ನಿಂದಲೂ ವೈಭವದಿಂದಲೂ ಪ್ರಸಿದ್ಧವಾಗಿತ್ತು. ಅನೇಕ ಪರ ದೇಶದ ರಾಯಭಾರಿಗಳೂ, ವರ್ತಕರೂ. ಚೀಣಾ ದೇಶಕ್ಕೆ ಬಂದು ಹೋಗುತ್ತಿದ್ದರು. ೧೩ನೆಯ ಶತಮಾನದಲ್ಲಿ ಮಂಗೋಲಿಯಾ ಪ್ರಾಂತದಿಂದ ಅನಾಗರಿಕ ಜನರ ಸಂಗಡಗಳು ಪಶ್ಚಿಮಾಭಿಮುಖವಾಗಿಯೂ ದಕ್ಷಿಣಾಭಿಮುಖವಾಗಿಯೂ ನಡೆದರು. ಮಂಗೋಲಿಯಾ ಪ್ರಾಂತದ ಈ ತುರುಕರು ಪಶ್ಚಿಮ ಏಷ್ಯಾ ದೇಶಗಳ ಮೇಲೆಯೂ ತೈಮೂರನೊಡನೆ ಹಿಂದುಸ್ಥಾನದ ಮೇಲೆಯೂ ಝಂಗೀಸಖಾನನೊಡನೆ ಚೀಣಾದೇಶದ ಮೇಲೆಯೂ ಕಾದಾಡಿದರು. ಇವೆಲ್ಲಾ ದೇಶಗಳಲ್ಲಿ ಇವರ ಪರಿಣಾಮವು ಪ್ರಬಲವಾಯಿತು. ಕುಬ್ಲಖಾನ ಮತ್ತು ಜಂಗೀಖಾನ ಈ ಮಂಗೋಲ ಚಕ್ರವರ್ತಿಗಳ ವಂಶದವರು ಚೀಣಾದಲ್ಲಿ ಅನೇಕ ಕಾಲ ಆಳಿದರು. ಮಂಗೋಲ ಚಕ್ರವರ್ತಿಗಳ ಕಾಲದಲ್ಲಿ ಸಹಾ ಚೀನಾ ರಾಜ್ಯವು ಪ್ರಸಿದ್ಧವಾಗಿತ್ತು. ಅನಾಗರಿಕ ಮಂಗೋಲ ಜನರು ಚೀನೀ ಜನರಲ್ಲಿ ಕಲೆತು ಅವರ ನಾಗರಿಕತೆಯನ್ನು ಅನುಸರಿಸಿದರು. ಹೀಗೆ ಕೆಲಕಾಲ ದೊಡ್ಡ ರಾಜ್ಯಗಳು ಚೀಣಾ ದೇಶದಲ್ಲಿ ಪ್ರಸಿದ್ಧವಾಗಿದ್ದವು. ಮತ್ತು ಕೆಲಕಾಲ ದೊಡ್ಡ ರಾಜ್ಯಗಳು ಹೀನದೆಸೆಗೆ ಬಂದು ರಾಜಕೀಯ ಅನಾಯಕತ್ವವಿತ್ತು. ಆದರೂ ಜನ ಸಾಮಾನ್ಯವು ಹೆಚ್ಚು ತೊಂದರೆಗೆ ತುತ್ತಾಗಲಿಲ್ಲ. ಈಚೆಗೆ ಒಂದೆರಡು ಶತಮಾನಗಳಿಂದ ಪ್ರಬಲರಾದ ಪಾಶ್ಚಾತ್ಯ ಜನಗಳು ಚೀಣಾ ರಾಜ್ಯವನ್ನು ತಮ್ಮ ವಶಮಾಡಿಕೊಂಡು ಬಿಡಲು ಹವಣಿಸಿರುತ್ತಾರೆ. ಜರ್ಮನಿಯವರೂ, ಇಂಗ್ಲೀಷರೂ, ಪೋರ್ತುಗೀಸರೂ, ಫ್ರೆಂಚರೂ ಮೊದಲಾಗಿ ಚೀಣಾ ರಾಜ್ಯದ ರೇವು ಪಟ್ಟಣಗಳಲ್ಲಿ ಕೆಲವನ್ನು ಹಿಡಿದುಕೊಂಡರು. ಜರ್ಮನರು ಕಿಯೂಚೊ ಪ್ರಾಂತವನ್ನೂ, ಬ್ರಿಟಿಶರು ವಿಹಾವ್ಹೆ ಪ್ರಾಂತವನ್ನೂ, ರಷ್ಯನರು ಪೋರ್ಟ್ಆರ್ಥರ್ ಪ್ರಾಂತವನ್ನೂ, ಈ ಶತಮಾನದ ಪ್ರಾರಂಭದ ವರ್ಷಗಳಲ್ಲಿ ಆಕ್ರಮಿಸಿದರು. ಅಂದಿನಿಂದ ಈಚೆಗೆ ಚೀಣಾರಾಜ್ಯವು ಪರದೇಶಿ ಪಾಶ್ಚಾತ್ಯ ಜನಾಂಗಗಳ ರಾಜಕೀಯ ತಂತ್ರಗಳಿಗೆ ಗುರಿಯಾಗಿ ಸಂಕಟ ಪಡುತ್ತಾ ಇದೆ. ಇವರ ಕಾಟದಿಂದ ಚೀಣಾ ದೇಶದ ಪರದೇಶದ ವ್ಯಾಪಾರವೆಲ್ಲವೂ ಕೆಟ್ಟು ಹೋಗಿದೆ. "ಸುಂಕವಿಲ್ಲದ ಸ್ವತಂತ್ರ ವ್ಯಾಪಾರ" ಮತ್ತು "ರೇವು ಪಟ್ಟಣಗಳ ಅಧಿಕಾರ" ಇವೆರಡು ಪಾಶ್ಚಾತ್ಯರ ಆಚರಣೆಗಳು ಚೀಣಾ ದೇಶದ ಗೊಂದಲವನ್ನು ಹೆಚ್ಚಿಸಿವೆ. ಯುದ್ಧದನಂತರ ಚೀಣಾ ರಾಜ್ಯದ ಜರ್ಮನರ ಪ್ರಾಂತಗಳನ್ನು ಜಪಾನಿಯರೂ ಇಂಗ್ಲಿಷರೂ ಹಂಚಿಕೊಂಡರು.

ಕ್ರಿ. ಶ. ೧೬ ನೆಯ ಶತಮಾನದಲ್ಲಿ ಕೆಲವು ಪೋರ್ತುಗೀಸರು ಜಪಾನು ದೇಶವನ್ನು ಪ್ರವೇಶಿಸಿದರು. ಜಪಾನಿಯರು ಕೆಲಕಾಲ ಪಾಶ್ಚಾತ್ಯರಿಗೆ ಹೆಚ್ಚು ಮರ್ಯಾದೆಯನ್ನೂ ಆಶ್ರಯವನ್ನೂ ಪ್ರೋತ್ಸಾಹವನ್ನೂ ಕೊಟ್ಟರು. ಪೋರ್ತುಗೀಸರು ಕೆಥೊಲಿಕ ಕ್ರಿಶ್ಚಿಯನ ಮತವನ್ನು ಜಪಾನಿಯರಿಗೆ ಉಪದೇಶ ಮಾಡುತ್ತಲೂ ರಾಜಕೀಯ ತಂತ್ರಗಳನ್ನು ನಡಿಸುತ್ತಲೂ ಇದ್ದರು. ಜಪಾನುದೇಶದಲ್ಲಿ ಬೌದ್ಧರನ್ನು ಪೀಡಿಸಿದರು. ಸ್ಪೆಯಿನು ದೇಶದವರು ಫಿಲಿಪೈನು ದ್ವೀಪಗಳನ್ನು ವಶಮಾಡಿಕೊಂಡರು. ಪಾಶ್ಚಾತ್ಯರ ಈ ಹಾವಳಿಯನ್ನು ನೋಡಿ ಜಪಾನಿಯರು ತಮ್ಮ ದೇಶಕ್ಕೆ ಬಿಳಿಯ ಜನರು ಯಾರೂ ಬರಕೂಡದೆಂದು ವಿಧಿಸಿದರು. ಈ ರೀತಿ ಇನ್ನೂರು ವರ್ಷಗಳು ಕಳೆದುವು. ಜಪಾನಿಯರು ತಮ್ಮ ದೇಶದಲ್ಲಿ ಪ್ರಬಲವಾದ ರಾಜ್ಯಭಾರವನ್ನು ನಡಿಸಿಕೊಳ್ಳುತ್ತಾ ಸ್ವತಂತ್ರರಾಗಿದ್ದರು. ಕಳೆದ ಶತಮಾನದ ಮಧ್ಯಭಾಗದಲ್ಲಿ ಅಮೇರಿಕದವರ ಕೆಲವು ಹೊಗೆಯ ಜಹಜುಗಳು ಜಪಾನು ತೀರಕ್ಕೆ ಬಂದವು. ಕಮೊಡೋರ ಪೆರ್ರಿ ಎಂಬವನು ಈ ಯುದ್ಧ ಹಡಗಗಳ ನೌಕಾಧ್ಯಕ್ಷನಾಗಿದ್ದನು. ಜಪಾನಿಯರು ಪರದೇಶದವರೊಡನೆ ವ್ಯಾಪಾರ ನಡಿಸಬೇಕೆಂದು ಇವನು ಬಲಾತ್ಕರಿಸಿದನು. ಅಮೇರಿಕಾದವರು ಈ ರೀತಿ ಮಾಡಿದ್ದನ್ನು ತಿಳಿದು ರಷ್ಯನರೂ–ಡಚ್ಚರೂ–ಇಂಗ್ಲಿಷರೂ ಹಾಗೆಯೇ ಮಾಡಿದರು. ಜಪಾನಿಯರು ಅವಮಾನದಿಂದ ಪರದೇಶಿಯರ ವ್ಯಾಪಾರದ ಒಡೆತನವನ್ನು ಒಪ್ಪಿಕೊಂಡರು. ಆದರೆ ಪಾಶ್ಚಾತ್ಯರನ್ನು ಮೀರಿಸಬೇಕೆಂದು ಹಟಹಿಡಿದು ಸಾಧಿಸಿ ಜಪಾನಿಯರು ಪಾಶ್ಚಾತ್ಯರ ಕೈಗಾರಿಕೆ ವಿದ್ಯವನ್ನೂ ನೌಕಾ ವಿದ್ಯೆಯನ್ನೂ–ಯುದ್ಧ ವಿದ್ಯೆಯನ್ನೂ–ಸುಮಾರು ೫೦ ವರ್ಷಗಳಲ್ಲಿ ಸಂಪೂರ್ಣವಾಗಿ ಕಲಿತುಕೊಂಡರು. ೧೯೦೪–೬ ರಲ್ಲಿ ನಡೆದ ರಷ್ಯಾ–ಜಪಾನಿಯರ ಯುದ್ಧದಲ್ಲಿ ರಷ್ಯದವರನ್ನು ಸೋಲಿಸಿದರು. ಅಂದಿನಿಂದ ಈಚೆಗೆ ಜಪಾನಿಯರಿಗೆ ಪಾಶ್ಚಾತ್ಯ ಜನರು ಪೂರ್ಣ ಮರ್ಯಾದೆಯನ್ನು ಕೊಡುತ್ತಾ ಇದ್ದಾರೆ.

ಅತಿ ಪ್ರಾಚೀನ ಕಾಲದಲ್ಲಿ ಈಜಿಪ್ಟುದೇಶವು ನಾಗರಿಕತೆಯಲ್ಲಿ ಪ್ರಸಿದ್ಧವಾಗಿತ್ತು. ಈಜಿಪ್ಟುದೇಶದ ಪಿರಮಿಡ್ಡುಗಳು, ಜಗತ್ತಿನ ಆಶ್ಚರ್ಯಕರವಾದ ವಸ್ತುಗಳು. ಗ್ರೀಕರು ಈಜಿಪ್ಟ ಜನರ ನಾಗರಿಕತೆಯನ್ನು ಕೆಲವು ಮಟ್ಟಿಗೆ ಅಂಗೀಕರಿಸಿದರು. ಗ್ರೀಕರು ನಾಗರಿಕತೆಯ ಲಲಿತ ಕಲೆಗಳನ್ನು ಅಭಿವೃದ್ಧಿ ಮಾಡಿದರು. ವಿದ್ಯಾರ್ಜನೆಯಲ್ಲಿಯೂ, ತತ್ವಜಿಜ್ಞಾಸೆಯಲ್ಲಿಯೂ, ಶಿಲ್ಪಕಲೆಯಲ್ಲಿಯೂ, ರಾಜಕೀಯ ಸಂಸ್ಥೆಗಳ ಅಭಿವೃದ್ಧಿಯಲ್ಲಿಯೂ, ಯುದ್ಧವಿದ್ಯೆಯಲ್ಲಿಯೂ ಗ್ರೀಕರು ಪ್ರಾಚೀನ ಕಾಲದಲ್ಲಿ ಈಗ ಎರಡು ಸಾವಿರ ವರ್ಷಗಳ ಪೂರ್ವದಲ್ಲಿ ಕೀರ್ತಿಪಡೆದರು. ಅಥೆನ್ಸು ಮತ್ತು ಸ್ಪಾರ್ಟಾ ದೇಶಗಳು ನಾಗರೀಕತೆಯಲ್ಲಿ ಪ್ರಸಿದ್ಧವಾಗಿದ್ದ

ವು. ಮೆಸಿಡೋನಿಯಾ ದೇಶದ ಅಲೆಕ್ಸಾಂಡರನ ಕೈಕೆಳಗೆ ಗ್ರೀಕರು ಜಗತ್ತಿನ ದಿಗ್ವಿಜಯವನ್ನೆ ನಡಿಸಿದರು. ಅಲೆಕ್ಸಾಂಡರನ ನಂತರ ಗ್ರೀಕರು ಹೀನದೆಸೆಗೆ ಬಂದರು. ರೋಮನರು ಮುಂದೆ ಬಂದರು. ಕಾರ್ಥಜೀನಿಯನರನ್ನು ಗೆದ್ದರು. ಗ್ರೀಕ ನಾಗರಿಕತೆಯ ಉತ್ತಮ ಅಂಶಗಳನ್ನು ಅಂಗೀಕರಿಸಿದರು. ಯೂರೋಪು ಖಂಡದ ದಕ್ಷಿಣಾರ್ಧ ಭಾಗಕ್ಕೆಲ್ಲಾ ರೋಮನರು ಒಡೆಯರಾದರು. ರೋಮನರ ನಾಗರಿಕತೆಯೂ, ರಾಜಕೀಯ ಪದ್ಧತಿಗಳೂ, ಧರ್ಮಶಾಸ್ತ್ರಗಳೂ ಪಾಶ್ಚಾತ್ಯ ನಾಗರಿಕತೆಗೆ ಅಸ್ತಿಭಾರವಾದುವು. ಕ್ರಿ. ಶ. ೫ನೆಯ ಶತಮಾನದಲ್ಲಿ ರೋಮನ ಚಕ್ರಾಧಿಪತ್ಯವು ಹಾಳಾಯಿತು. ನಾಗರಿಕ ಜನರು ಯೂರೋಪು ಖಂಡವನ್ನೆಲ್ಲಾ ವ್ಯಾಪಿಸಿದರು. ೧೫ನೆಯ ಶತಮಾನದವರೆಗೆ ಯೂರೋಪುಖಂಡವು ಹೀನದೆಸೆಯಲ್ಲಿಯೂ, ಅಜ್ಞಾನದಲ್ಲಿಯೂ ಇತ್ತು. ಈ ಮಧ್ಯೆ ಅರೇಬಿಯಾದಲ್ಲಿ ಮಹಮ್ಮದೀಯ ಮತವು ಉತ್ಪನ್ನವಾಗಿ ಅಭಿವೃದ್ಧಿ ಹೊಂದಿತು. ಮಹಮ್ಮದೀಯ ಮತವೂ-ನಾಗರೀಕತೆಯೂ ೭–೮–೯ನೆಯ ಶತಮಾನಗಳಲ್ಲಿ ಸಿಂಧೂ ನದಿಯಿಂದ ಸ್ಪೈಯಿನು ದೇಶದವರೆಗೂ ವ್ಯಾಪಿಸಿತು. ಅರಬೀ ಜನರು ಭಾರತೀಯ ನಾಗರಿಕತೆಯನ್ನೂ-ಗ್ರೀಕರ ನಾಗರಿಕತೆಯನ್ನೂ-ಅಭ್ಯಾಸ ಮಾಡಿದರು. ಮಹಮ್ಮದೀಯ ನಾಗರೀಕತೆಯ ತೇಜಸ್ಸನ್ನು ಹೆಚ್ಚಿಸಿದರು. ಮಹಮ್ಮದೀಯ ಕಲೀಪರೂ-ಸುಲ್ತಾನರೂ- ಚಕ್ರವರ್ತಿಗಳೂ— ಅರೇಬಿಯಾದಲ್ಲಿಯೂ—ಪರ್ಷಿಯಾನದಲ್ಲಿಯೂ- ಬಗದಾದಿನಲ್ಲಿಯೂ, ಈಜಿಪ್ಟಿನಲ್ಲಿಯೂ—ಸ್ಪೈಯಿನು ದೇಶದಲ್ಲಿಯೂ ವೈಭವದಲ್ಲಿ ಆಳಿದರು. ಅನಂತರ ತುರುಕರು ಮಹಮ್ಮದೀಯರಾದರು. ಇವರ ಪ್ರಾಬಲ್ಯದಿಂದ ಯೂರೋಪಿನ ಪೂರ್ವದೇಶಗಳೂ–ಹಿಂದುಸ್ಥಾನವೂ ಮಹಮ್ಮದೀಯ ಅಧಿಕಾರಕ್ಕೆ ೧೭ನೆಯ ಶತಮಾನದವರೆಗೆ ಅಧೀನವಾಯಿತು. ಅಂತೂ ಸುಮಾರು ಒಂದು ಸಾವಿರ ವರ್ಷ ಕಾಲ ಮಹಮ್ಮದೀಯ ನಾಗರಿಕತೆಯು ಜಗತ್ತಿನ ಒಡೆತನವನ್ನು ಅನುಭವಿಸಿತು. ಮಹಮ್ಮದೀಯ ನಾಗರೀಕತೆಯ ಪ್ರಭಾವವನ್ನು ನೋಡಿ ಯೂರೋಪುದೇಶದ ಅಜ್ಞಾನಿಗಳಾದ ಬಿಳಿಯ ಜನರು ಆಶ್ಚರ್ಯಭರಿತರಾದರು. ಈ ಮಧ್ಯೆ ರೋಮನ ಚಕ್ರಾಧಿಪತ್ಯದ ಹೀನದೆಸೆಯ ಕಾಲದಿಂದ ಹದಿನೈದನೆ ಶತಮಾನದವರೆಗೆ ಯೂರೋಪುದೇಶದವರೆಲ್ಲಾ ಕ್ರಿಶ್ಚಿಯನರಾದರು. ಕ್ರಿಶ್ಚಿಯನರ ಪವಿತ್ರ ಯಾತ್ರಸ್ಥಾನಗಳು ಮಹಮ್ಮದೀಯರ ಆಳಿಕೆಯಲ್ಲಿದ್ದ ಪ್ಯಾಲಸ್ಟೈನು ದೇಶದಲ್ಲಿದ್ದುದರಿಂದ ಶತಮಾನಗಳ ಕಾಲ ಕ್ರಿಶ್ಚಿಯನರಿಗೂ ಮಹಮ್ಮದೀಯರಿಗೂ ಮತ ಧರ್ಮಸಂಬಂಧವಾದ ಯುದ್ಧಗಳು ನಡೆದುವು.

ಮಹಮ್ಮದೀಯರ ವ್ಯಾಪಾರವನ್ನೂ, ಪ್ರಾಬಲ್ಯವನ್ನೂ ಮುರಿಯಬೇಕೆಂಬುದೇ ಯೂರೋಪು ಜನಾಂಗಗಳ ಪ್ರಯತ್ನವಾಗಿತ್ತು. ಪೂರ್ವ ದೇಶಗಳ ವ್ಯಾಪಾರವೆಲ್ಲವೂ ಮಹಮ್ಮದೀಯರ ಕೈಯಲ್ಲಿತ್ತು. ಹೊಸದಾದ ಸಮುದ್ರ ದಾರಿಗಳನ್ನು ಕಂಡು ಹಿಡದು ಹಿಂದುಸ್ಥಾನ ಚೀನಾ ದೇಶಗಳೊಡನೆ ವ್ಯಾಪಾರ ಮಾಡಬೇಕೆಂದು ಯೂರೋಪಿಯನರು ಸಾಹಸಪಡುತ್ತಿದ್ದರು. ಯಾಕಂದರೆ ಈಗ ನಾಲ್ಕು–ಐದು ಶತಮಾನಗಳಿಗೆ ಪೂರ್ವದಲ್ಲಿ ಏಷ್ಯಾ ಖಂಡದ ಜನಾಂಗಗಳೇ ಜಗತ್ತಿನ ಒಡೆತನವನ್ನು ಅನುಭವಿಸುತ್ತಿದ್ದರು. ಹಿಂದುಸ್ಥಾನ–ಚೀಣಾ–ಪರ್ಷಿಯಾ–ತುರ್ಕಿ–ಈಜಿಪ್ಟ ಈ ದೇಶಗಳೇ ನಾಗರಿಕತೆಯಲ್ಲಿಯೂ, ವ್ಯಾಪಾರದಲ್ಲಿಯೂ ಪ್ರಸಿದ್ಧವಾಗಿದ್ದುವು. ಯೂರೋಪಿಯನರು ಹೀನ ದೆಸೆಯಲ್ಲಿದ್ದರು. ಹಿಂದುಸ್ಥಾನದೊಡನೆ ವ್ಯಾಪಾರ ಮಾಡಲು ಸಮುದ್ರ ಮಾರ್ಗಗಳನ್ನು ಕಂಡು ಹಿಡಿದು ಮಹಮ್ಮದೀಯರ ಪ್ರಾಬಲ್ಯವನ್ನು ಮುರಿಯಬೇಕೆಂದು ಬಿಳಿಯ ಜನರು ಸಾಹಸಪಡುತ್ತಿದ್ದರು. ಯೂರೋಪ ದೇಶದ ನಾವಿಕರು ಸಮುದ್ರದ ಮೇಲೆ, ಹಿಂದುಸ್ಥಾನವನ್ನು ಹಿಡಿಯಬೇಕೆಂಬ ಭ್ರಮೆಯಿಂದ ದಿಕ್ಕು ದಿಕ್ಕುಗಳಿಗೆ ಚಲಿಸಿದರು. ಕೋಲಂಬಸನು ಅಟ್ಲಾಂಟಿಕ ಸಾಗರದಲ್ಲಿ ಪಶ್ಚಿಮಾಭಿಮುಖವಾಗಿ ಪ್ರಯಾಣ ಮಾಡಿ ಹಿಂದುಸ್ಥಾನವೆಂಬ ಭ್ರಮೆಯಿಂದ ಅಮೇರಿಕಾ ಖಂಡವನ್ನು ಕಂಡುಹಿಡಿದನು. ವಾಸ್ಕೋಡಿಗಾಮನು ಆಫ್ರಿಕಾಖಂಡವನ್ನು ಸುತ್ತುಹಾಕಿ ಹಿಂದುಸ್ಥಾನವನ್ನು ಸೇರಿದನು. ಅಂದಿನಿಂದ ಈಚೆಗೆ ಪಾಶ್ಚಾತ್ಯರು ದಿಗ್ದೇಶಗಳಲ್ಲಿ ತಿರುಗುತ್ತಾ ನಾಗರೀಕತೆಯಲ್ಲಿಯೂ-ಪ್ರಾಬಲ್ಯದಲ್ಲಿಯೂ ಅಭಿವೃದ್ಧಿ ಪಡೆದರು. ಪ್ರಪಂಚದ ನಾನಾಭಾಗಗಳು ಯೂರೋಪ ಜನಾಂಗಗಳ ಅಧೀನತೆಗೆ ಒಳಗಾದುವು. ವ್ಯಾಪಾರಸಂಬಂಧವಾದ ಯುದ್ಧಗಳು ಯೂರೋಪಜನಾಂಗಗಳಲ್ಲಿ ಅನೇಕ ವೇಳೆ ನಡೆದುವು. ವ್ಯಾಪಾರ ನಿಮಿತ್ತದಿಂದ ಯುದ್ಧಗಳುಂಟಾಗಿ ಹಿಂದುಸ್ಥಾನ–ಆಫ್ರಿಕಾ–ಅಮೇರಿಕಾ ಇವುಗಳು ಯುರೋಪಿಯನರಿಗೆ ಅಧೀನವಾದುವು.

ಈ ಮಧ್ಯೆ ಯೂರೋಪಖಂಡದಲ್ಲಿ ಜ್ಞಾನಾಭಿವೃದ್ಧಿಯೂ–ಯಂತ್ರ ಸಾಧನಗಳ ಅಭಿವೃದ್ಧಿಯೂ–ನಾಗರಿಕತೆಯ ಅಭಿವೃದ್ಧಿಯೂ ವಿಶೇಷವಾಗಿ ನಡೆಯಿತು. ಸ್ಪೈಯಿನು ಜನರು ಅಮೇರಿಕಾ ದೇಶವನ್ನು ವಶಪಡಿಸಿಕೊಂಡರು. ಅಮೇರಿಕದ ಮೆಕ್ಸಿಕೊ ಮತ್ತು ಪೆರೂ ದೇಶಗಳು ತಾಮ್ರವರ್ಣದ ಜನಾಂಗಗಳಿಂದ ಆಳಲ್ಪಡುತ್ತಿದ್ದುವು. ನಾಗರಿಕತೆಯಲ್ಲಿ ಅಭಿವೃದ್ಧಿಯಾಗಿದ್ದುವು.

ಈಗ ಸುಮಾರು ನಾಲ್ಕೈದು ಸಾವಿರ ವರ್ಷಗಳಿಗೆ ಪೂರ್ವದಲ್ಲಿ ಪೆಸಿಫಿಕ್ ಸಾಗರದ ಉತ್ತರದಲ್ಲಿರುವ ಬೆಹರಿಂಗ್ ಜಲಸಂಧಿಯ ಮೂಲಕ ಮಂಗೋಲ ವಂಶದ ಕೆಲನಜರು ಏಷ್ಯಾ ಖಂಡದಿಂದ ಉತ್ತರ ಅಮೇರಿಕಾ ಖಂಡವನ್ನು ಪ್ರವೇಶಿಸಿದರೆಂದು ಇತಿಹಾಸ ಪಂಡಿತರ ಮತವು. ಇವರು ಅಮೇರಿಕಾವ ಮೂಲ ನಿವಾಸಿಗಳಾದ ಕೆಂಪು ಜನರ ಅಥವಾ ತಾಮ್ರವರ್ಣದ ಜನರ ಮೂಲಪುರುಷರು. ಅಂದರೆ ಅಮೇರಿಕಾ ಖಂಡಕ್ಕೆ ಮೂಲ ನಿವಾಸಿಗಳು ಏಷ್ಯಾ ಖಂಡದಿಂದ ಪ್ರವೇಶಮಾಡಿದರು. ಅಮೇರಿಕದ ತಾಮ್ರವರ್ಣದ ಜನಗಳಿಗೂ—ಚೀನಾ-ಜಪಾನು ಮೊದಲಾದ ದೇಶಗಳಲ್ಲಿರುವ ಮಂಗೋಲ ವಂಶದ ಹಳದಿ ಜನರಿಗೂ—ಶಾರೀರಿಕ ರಚನೆಯ ಹೋಲಿಕೆಗಳೂ, ಕೆಲವು ವಿಚಾರಗಳಲ್ಲಿ ಭಾಷಾಸಂಬಂಧವಾದ ಹೋಲಿಕೆಗಳೂ ಕಂಡು ಬಂದಿವೆ. ಈಗ ಒಂದು ಸಾವಿರ ವರ್ಷಗಳ ಹಿಂದೆ ಅಮೇರಿಕದ ತಾಮ್ರವರ್ಣದ ಜನಗಳು—ಮೆಕ್ಸಿಕೋ ದೇಶದಲ್ಲಿ ಅಜ್ಟೆಟಿಕ್ ನಾಗರಿಕತೆಯನ್ನೂ—ಮಧ್ಯ ಅಮೇರಿಕಾದಲ್ಲಿ ಮಾಯಾ ನಾಗರಿಕತೆಯನ್ನೂ—ದಕ್ಷಿಣ ಅಮೇರಿಕಾದಲ್ಲಿ ಇಂಕಾ ಜನರ ನಾಗರಿಕತೆಯನ್ನೂ ಅಭಿವೃದ್ಧಿ ಮಾಡಿದರು. ಕೈಗಾರಿಗೆ ಕಸಬುಗಳಲ್ಲಿಯೂ ನೆಯ್ಗೆಯ ವಿದ್ಯೆಯಲ್ಲಿಯೂ—ದೇವಾಲಯಗಳ ನಿರ್ಮಾಣದಲ್ಲಿಯೂ—ಕೆರೆಕಾಲುವೆ ರಸ್ತೆ ಇವುಗಳ ನಿರ್ಮಾಣದಲ್ಲಿಯೂ ಈ ಜನಗಳು ಪ್ರಸಿದ್ಧಿಯಾಗಿದ್ದರು. ಇವರು ಕಟ್ಟಿದ ರಸ್ತೆಗಳೂ, ದೇವಾಲಯಗಳೂ ದಕ್ಷಿಣ ಅಮೇರಿಕದಲ್ಲಿ ಈಗಲೂ ಪ್ರಸಿದ್ಧವಾಗಿವೆ. ಸೂರ್ಯಾರಾಧನೆಯೂ ಪಶುಯಜ್ಞ—ನರಯಜ್ಞಗಳೂ ಇವರಲ್ಲಿ ವಾಡಿಕೆಯಾಗಿದ್ದವು. ಅಮೇರಿಕಾ ಖಂಡದಲ್ಲಿ ಬೆಳ್ಳಿ ಬಂಗಾರದ ಗಣಿಗಳು ವಿಶೇಷವಾಗಿದ್ದವು. ಪೆರು—ಮೆಕ್ಸಿಕೊ ದೇಶಗಳ ಸಂಪತ್ತನ್ನು ನೋಡಿ ಬಿಳಿಯ ಜನರು ಆಶಾಭರಿತರಾದರು. ಆ ದೇಶಗಳನ್ನು ಗೆದ್ದು ಯೂರೋಪಿಗೆ ಅಪಾರವಾದ ಸಂಪತ್ತನ್ನು ಸಾಗಿಸಿದರು. ತಾಮ್ರವರ್ಣದ ಜನರು ನಾಶವಾದರು. ಅವರ ನಾಗರಿಕತೆಯು ಮಾಯವಾಯಿತು.

ಸ್ಪೆಯಿನು ಜನರು ಮೆಕ್ಸಿಕೋ ದೇಶದಲ್ಲಿಯೂ ದಕ್ಷಿಣ ಅಮೇರಿಕಾದಲ್ಲಿಯೂ ಪ್ರಬಲರಾದರು. ಇಂಗ್ಲಿಷರು ಫ್ರೆಂಚರು ಉತ್ತರ ಅಮೇರಿಕಾದಲ್ಲಿ ಪ್ರಬಲರಾದರು. ಉತ್ತರ ಅಮೇರಿಕಾ ಖಂಡವು ಕೆಲಕಾಲ ಇಂಗ್ಲಂಡಿನ ಅಧೀನವಾಗಿತ್ತು. ಅನಂತರ ಸ್ವತಂತ್ರವಾಗಿ ಅಮೇರಿಕದ ಸಂಯುಕ್ತ ಸಂಸ್ಥಾನವಾಯಿತು. ಉತ್ತರಾರ್ಧದ ಕೆನಡಾ ರಾಜ್ಯವು ಇಂಗ್ಲಂಡಿಗೆ ಸೇರಿತು. ಯೂರೋಪದೇಶದಲ್ಲಿ ಯಂತ್ರ ಸಾಧನಗಳ ನಾಗರಿಕತೆಯು ಅಭಿವೃದ್ಧಿ ಹೊಂದಿತು. ಹೊಗೆಯ ಜಹಜುಗಳೂ ರೈಲು ಮಾರ್ಗಗಳೂ ವಾಡಿಕೆಗೆ ಬಂದವು. ದೊಡ್ಡ ಕಾರ್ಖಾನೆಗಳು ಅಭಿವೃದ್ಧಿಯಾದವು. ಅಮೇರಿಕಾಖಂಡದವರು ಈ ಸಾಧಗಳನ್ನು ಉಪಯೋಗಿಸಿ ಸಂಯುಕ್ತ ಸಂಸ್ಥಾನವನ್ನು ಅತಿ ಪ್ರಬಲವಾದ ಮತ್ತು ಅತ್ಯಂತ ಸಂಪದ್ಯುಕ್ತವಾದ ರಾಜ್ಯವನ್ನಾಗಿ ಬೆಳೆಸಿದರು. ಪ್ರಪಂಚದಲ್ಲಿ ಈಗ ಸಂಯುಕ್ತ ಸಂಸ್ಥಾನವು ಎಲ್ಲಾ ವಿಚಾರಗಳಲ್ಲಿಯೂ ಮೊದಲನೆಯ ಸ್ಥಾನವನ್ನು ಪಡೆದಿವೆ. ಯೂರೋಪಿನ ಬಿಳಿಯ ಜನಾಂಗಗಳೂ ಎಲ್ಲಾ ಭೂಭಾಗಗಳನ್ನು ವ್ಯಾಪಿಸಿ ಪ್ರಪಂಚದ ಸಂಪತ್ತೆಲ್ಲವನ್ನೂ ತಮ್ಮ ಅಧೀನದಲ್ಲಿಯೇ ಇಟ್ಟುಕೊಂಡಿರುತ್ತಾರೆ. ಯುದ್ಧ ವಿದ್ಯೆಯಲ್ಲಿಯೂ ಅವರು ಪ್ರವೀಣರು. ಹಳದೀ ಜನರೂ—ಕಂದು ಬಣ್ಣದ ಜನರೂ—ಕಪ್ಪು ಜನರೂ ಹೀನದೆಸೆಯಲ್ಲಿದ್ದಾರೆ. ಏಷ್ಯಾ ಖಂಡದಲ್ಲಿ ಚೀನಿಯರಿಗೂ—ಹಿಂದೀಯರಿಗೂ—ಜಪಾನೀಯರಿಗೂ ಸ್ಥಳ ಸಾಲದು. ದಕ್ಷಿಣ ಅಮೇರಿಕಾ—ಆಸ್ಟ್ರೇಲಿಯಾ—ಆಫ್ರಿಕಾ ಖಂಡಗಳು ವಿಶಾಲವಾದ ಫಲವತ್ತಾದ ಪ್ರಾಂತಗಳನ್ನುಳ್ಳವಾಗಿವೆ. ಇವುಗಳಲ್ಲಿ ಬಿಳಿಯರಲ್ಲದ ಇತರ ಜನರು ಕೋಟ್ಯಂತರವಾಗಿ ಜೀವನ ಮಾಡಬಹುದು. ಜಗತ್ತಿನ ಸಂಪತ್ತು ಎಲ್ಲರಿಗೂ ಸೇರಿದುದಾದ್ದರಿಂದ ಪ್ರಪಂಚದ ಭೂಭಾಗಗಳು ಮಾನವ ಕುಟುಂಬದ ಎಲ್ಲ ಜನಾಂಗಗಳ ಜೀವನಕ್ಕೆ ಅಗತ್ಯವಾದುವು. ಇವುಗಳನ್ನು ಈಚೆಗೆ ನಾಲ್ಕೈದು ಶತಮಾನಗಳಿಂದ ಮಾತ್ರ ಪ್ರಬಲರಾಗುತ್ತಿರುವ ಪಾಶ್ಚಾತ್ಯ ಬಿಳಿಯ ಜನರು ಮಾತ್ರವೇ ಭೋಗಿಸುತ್ತಿರುವುದು ಜಗತ್ತಿನ ಶಾಂತತೆಗೆ ಭಂಗ ತರುವಂತಿದೆ. ಆದುದರಿಂದ ಏಷ್ಯಾ ಖಂಡದ ಜನರು ತಮ್ಮ ಪ್ರಾಚೀನ ಐತಿಹಾಸಿಕ ವೈಭವವನ್ನು ಸ್ಮರಿಸಿಕೊಂಡು ಐಕಮತ್ಯವನ್ನು ಪಡೆಯಬೇಕು. ಚೀನಿಯರೂ—ಜಪಾನೀಯರೂ—ಹಿಂದೀಯರೂ- ಮಹಮ್ಮದೀಯರೂ ಏಷ್ಯಾ ಖಂಡದ ಐಕಮತ್ಯವನ್ನು ಸಾಧಿಸಬೇಕು. ಇವರು ಐಕಮತ್ಯವನ್ನು ತಾಳದೆ ಬಿಳಿಯ ಜನರು ಇತರರೂ ತಮಗೆ ಸಮಾನರು ಎಂಬ ಭಾವನೆಯನ್ನು ಪಡೆಯುವುದಿಲ್ಲ. ಯೂರೋಪ ದೇಶದ ನಾಗರಿಕತೆಯಲ್ಲಿ ಅನೇಕ ಉತ್ತಮ ಅಂಶಗಳಿವೆ. ರಾಜಕೀಯ ಸಂಸ್ಥೆಗಳ ಅಭಿವೃದ್ಧಿ—ಜ್ಞಾನಾಭಿವೃದ್ಧಿ—ಯಂತ್ರ ಸಾಧನಗಳ ಅಭಿವೃದ್ಧಿ—ಇವುಗಳು ಮುಖ್ಯವಾದುವು. ತನ್ಮೂಲಕ ಸಾರ್ವಜನಿಕ ಸುಖ—ವಿಶ್ವದ ನಿಜವಾದ ಸ್ವರೂಪ—ಅಹಿಂಸಾ ತತ್ವದ ಅಭಿವೃದ್ಧಿ ಇವುಗಳನ್ನು ಹೆಚ್ಚಿಸಬಹುದು. ಆದರೆ ಇದಕ್ಕೆ ಮೊದಲು ಯೂರೋಪಿಯನರೂ—ಹಿಂದೀಯರೂ—ಚೀನೀಯರೂ — ಜಪಾನೀಯರೂ ಸಮಾನತ್ವ ಸ್ಥಿತಿಯನ್ನು ಪಡೆಯಬೇಕು. ಜನಾಂಗಗಳ ವಿಶ್ವಕೂಟದಲ್ಲಿ ಎಲ್ಲರೂ ಸಮಭಾಗಿಗಳಾಗಿ ಸ್ವತಂತ್ರ ಹಕ್ಕುಗಳನ್ನುಳ್ಳವರಾಗಿರಬೇಕು.

(ಮುಗಿದುದು.)

# ಶ್ರೀ ಬದರಿಕಾಶ್ರಮ ಪ್ರವಾಸವು.

ಲೇ:-ಶ್ರೀ. ರಾಘವೇಂದ್ರ ಭೀಮರಾವ ಮುತಾಲಿಕದೇಸಾಯಿ, ಬಿ. ಎಜಿ. ಎ ಬ್ಯಾಂಕಮೊಟ ಆಫೀಸರ, ಧಾರವಾಡ.

ಹಿಂದೂ ಜನರ ಯಾತ್ರೆಯ ಸ್ಥಾನಗಳಲ್ಲಿ ಹಿಮಾಚಲದಲ್ಲಿ ರತಕ್ಕ ಯಾತ್ರೆಯ ಸ್ಥಾನಗಳು ಬಹು ಇಕ್ಕಟ್ಟಿನ ಸ್ಥಳಗಳಲ್ಲಿ ಇರುವುದರಿಂದ ಅವುಗಳ ಪವಿತ್ರತೆಯು ವಿಷಯುವಾಗಿಯೂ, ಮಹತ್ವದ ವಿಷಯುವಾಗಿಯೂ, ಪ್ರತಿಯೊಬ್ಬ ಹಿಂದುವಿನಲ್ಲಿ ಅತ್ಯಾದರವು ಕಂಡುಬರುತ್ತದೆ. ಹಿಮಾಲಯ ಪರ್ವತದಲ್ಲಿ ಒಟ್ಟು ೮೪ ಲಕ್ಷ ತೀರ್ಥಯಾತ್ರೆಯ ಸ್ಥಾನಗಳಿರುತ್ತವೆಂದು ಹೇಳುತ್ತಾರೆ. ಅವುಗಳಲ್ಲಿ ಗಂಗೋತ್ರಿ (ಗಂಗಾನದಿಯ ಉಗಮಸ್ಥಾನ), ಜಮನೋತ್ರಿ ( ಯಮುನಾ ನದಿಯ ಉಗಮ ಸ್ಥಾನ), ಕೇದಾರನಾಥ ( ಮಹೇಶ್ವರ ) ಮತ್ತೂ ಬದರಿನಾಥ ( ಶ್ರೀಮನ್ನಾರಯಣ ) ಈ ನಾಲ್ಕು ಸ್ಥಳಗಳು ಒಳ್ಳೇ ಮಹತ್ವದ್ದು ಇರುತ್ತವೆ. ಹಿಮಾಚಲದಲ್ಲಿ ಯಾತ್ರೆ ಮಾಡತಕ್ಕವರು ಮೊದಲಿಗೆ ಜಮನೋತ್ರಿ, ಗಂಗೋತ್ರಿ, ಕೇದಾರನಾಥ ಹಾಗೂ ಬದರೀನಾಥ ಹೀಗೆ ಕ್ರಮವಾಗಿ ಯಾತ್ರೆ ಮುಗಿಸಿಕೊಂಡು ತಿರುಗಿ ಬರುವರು. ಈ ನಾಲ್ಕು ಸ್ಥಳಗಳಲ್ಲಿ ಬದರಿನಾಥಕ್ಕೆ ಅಂದರೆ ಬದರಿಕಾಶ್ರಮಕ್ಕೆ ಬಹಳ ಮಹತ್ವವು, ಯಾವ ಸಾಂಪ್ರದಾಯದ ಹಿಂದುವಾದರೂ ಹಿಮಾಚಲದಲ್ಲಿ ತೀರ್ಥಯಾಟನೆ ಮಾಡುವುದಾದರೆ ಬದರಿಕಾಶ್ರಮಕ್ಕೆ ಹೋಗಿಯೇ ತೀರಬೇಕು. ಬದರಿಕಾಶ್ರಮದ ಯಾತ್ರೆಗೆ ಇಷ್ಟು ಮಹತ್ವ ಬರಲು ಕಾರಣವೇನಂದರೆ:—ಅಲ್ಲಿ ಶ್ರೀಮನ್ನಾರಾಯಣನ ಯೋಗ ಮೂರ್ತಿಯ ದರ್ಶನವೂ, ತೀರ್ಥರಾಜನೆನಿಸಿಕೊಳ್ಳುವ ತಪ್ತ ಕುಂಡದ ತೀರ್ಥಸ್ನಾನವೂ ನಾರಾಯಣ ದೇವರ ಸನ್ನಿಧಾನದಲ್ಲಿರತಕ್ಕ ಬ್ರಹ್ಮಕಪಾಲದಲ್ಲಿ ಪಿಂಡದಾನವೂ ಸಾಧ್ಯವಾಗುತ್ತವೆ. ಈ ಮೂರು ಮುಖ್ಯ ಉದ್ದೇಶಗಳು ಏಕಕಾಲಕ್ಕೆ ಯಾತ್ರಿಗರಿಗೆ ಉಳಿದ ಮೇಲೆ ಹೇಳಿದ ಮೂರು ಸ್ಥಳಗಳಲ್ಲಿ ದೊರಕುವುದಿಲ್ಲವು. ಆದುದರಿಂದಲೇ ಬದರಿಕಾಶ್ರಮವನ್ನು ಭೂವೈಕುಂಠವೆಂತಲೂ, ಕೈಲಾಸವೆಂತಲೂ, ಪುಣ್ಯಭೂಮಿ ಎಂತಲೂ, ಕೊಂಡಾಡುತ್ತಿರುವರು. ಇಂಥ ಮಹತ್ವದ ಬದರಿಕಾಶ್ರಮದ ವೃತ್ತಾಂತವನ್ನು ನಾವು ಪ್ರತ್ಯಕ್ಷ ಹೋಗಿ ನೋಡಿ ಆನಂದ ಪಟ್ಟು ತಿಳಿದುಕೊಂಡ ಮಟ್ಟಿಗೆ ಕೆಳಗೆ ವಿವರಿಸುತ್ತೇವೆ.

ಬದರಿಕಾಶ್ರಮವು ಅಲ್ಹಾಬಾದ (ಸಂಯುಕ್ತ) ಪ್ರಾಂತದಲ್ಲಿ ಗಡಿವಾಲ ಎಂಬ ಹಿಮಾಚಲದ ಗುಡ್ಡಗಾಡು ಜಿಲ್ಹೆಗೆ ಸೇರಿರುತ್ತದೆ. ಪಂಜಾಬ ಸಿಂಧ ಪ್ರಾಂತದಿಂದ ಹೋಗತಕ್ಕವರು ರಾಮನಗರ ಇಲ್ಲವೆ ಕೋಟದ್ವಾರ ಎಂಬ ರೇಲ್ವೆ ಸ್ಟೇಶನಗಳಿಗೆ ಇಳಿದು ಮುಂದೆ ಹಿಮಾಚಲದಲ್ಲಿ ಪ್ರಯಾಣ ಬೆಳಿಸುವರು. ಆದರೆ ಹಿಂದುಸ್ಥಾನದ ಉಳಿದ ಭಾಗಗಳಿಂದ ಹೋಗತಕ್ಕವರು ಹರಿದ್ವಾರ ಸ್ಟೇಶನಕ್ಕೆ ಇಳಿದು ಮುಂದೆ ಹೃಷಿಕೇಶ ಮಾರ್ಗವಾಗಿ ಪ್ರಯಾಣ ಬೆಳಿಸುವರು. ಮತಸ್ಥಾಪಕರಾದ ಎಲ್ಲ ಆಚಾರ್ಯರು ಬಹುತರವಾಗಿ ಹರಿದ್ವಾರ ಮಾರ್ಗದಿಂದಲೇ ಬದರಿಕಾಶ್ರಮಕ್ಕೆ ತೆರಳಿರುವುದರಿಂದ ಹರಿದ್ವಾರ ಮಾರ್ಗದಿಂದ ಬದರಿಕಾಶ್ರಮಕ್ಕೆ ಪ್ರಯಾಣ ಬೆಳಿಸುವುದು ಸಾಂಪ್ರದಾಯಕ್ಕನುಸರಿಸಿ ಹೆಚ್ಚು ಪ್ರಾಶಸ್ತ್ಯವುಳ್ಳದ್ದಾಗಿರುತ್ತದೆ. ಹರಿದ್ವಾರವು ದೇಹರಾದನಕ್ಕೆ ಹೋಗುವ ಮಾರ್ಗದಲ್ಲಿ ಔಧ ಮತ್ತು ರೋಹಿಲಖಂಡ ರೇಲ್ವೆಯ ಮುಖ್ಯ ಸ್ಟೇಶನವಾಗಿರುತ್ತದೆ.

ಈ ಹರಿದ್ವಾರವು ನಮ್ಮ ಧರ್ಮಗ್ರಂಥಗಳಲ್ಲಿ ಮಾಯಾಪುರಿ ಕ್ಷೇತ್ರವೆಂಬ ಹೆಸರಿನಿಂದ ಪ್ರಸಿದ್ಧವಿರುತ್ತದೆ. ಇಲ್ಲಿ ಭಾಗೀರಥೀ ನದಿಯ ಘಾಟವು ಬಹು ಸೊಗಸಾಗಿ ಕಟ್ಟಲ್ಪಟ್ಟಿರುವುದು. ಇಲ್ಲಿ ಬ್ರಹ್ಮಕುಂಡತೀರ್ಥದಲ್ಲಿ ಸ್ನಾನ ಮಾಡುವುದೂ ಪಿಂಡದಾನ ಮಾಡುವುದೂ ಮುಖ್ಯ ವಿಧಿಗಳಾಗಿರುತ್ತವೆ. ಇಲ್ಲಿ ಅನೇಕ ದೇವಾಲಯಗಳಿರುವುವು. ಅವುಗಳಲ್ಲಿ ದಕ್ಷಪ್ರಜಾಪತಿಯ ದೇವಾಲಯವು ಅತಿ ಪ್ರಸಿದ್ಧವಿರುತ್ತದೆ. ಇಲ್ಲಿ ಜಗದ್ಗುರು ಶ್ರೀ. ಶಂಕರಾಚಾರ್ಯರ ಮಠವಿರುವುದು. ಪ್ರತಿ ದಿವಸ ಸಾಯಂಕಾಲಕ್ಕೆ ಇಲ್ಲಿ ಭಾಗೀರಥೀ ಘಾಟದ ಮೇಲೆ ಆರತಿಯ ಸಮಾರಂಭವು ಒಳ್ಳೇ ವೈಭವದಿಂದ ಸಾಗುತ್ತದೆ. ವಿಶೇಷತಃ ಬೆಳದಿಂಗಳ ದಿವಸಗಳಲ್ಲಿ ಇಲ್ಲಿಯ ನೋಟವು ಅತಿಶಯ ರಮಣೀಯವಾಗಿರುತ್ತದೆ. ಇಲ್ಲಿಂದ ಹೃಷಿಕೇಶವು ೧೪ ಮೈಲು ಇರುವುದು. ಈಗ ಮೋಟಾರ ಗಾಡಿಗಳು ಬಾಡಿಗೆಯಿಂದ ಸಿಕ್ಕುತ್ತವೆ. ಒಬ್ಬ ಮನುಷ್ಯನಿಗೆ ೧ – ೧I. ರೂ. ವರೆಗೆ ಬಾಡಿಗೆ ಬೀಳುವುದು.

ಹೃಷಿಕೇಶವು ಕೊಳ್ಳದಲ್ಲಿರುವದು. ಇಲ್ಲಿ ಭಾಗೀರಥಿಯ ದಂಡೆಗುಂಟ ಹಿಮಾಚಲದ ವನಶ್ರೀಯು ಅತಿಶಯ ಮನೋಹರವಾಗಿರುವುದು. ಭಾಗೀರಥಿಯ ದಂಡೆಯಲ್ಲಿರುವ ಇಂಥ

ಅಹ್ಲಾದಕರವಾದ ಸ್ಥಾನವನ್ನು ಪೂರ್ವಕಾಲದಲ್ಲಿ ಮುನಿಗಳು ತಮ್ಮ ತಪೋ ಭೂಮಿಯನ್ನಾಗಿ ಮಾಡಿಕೊಂಡಿದ್ದರೆಂಬುದು ಸೋಜಿಗವಲ್ಲ. ಅಲ್ಲಲ್ಲಿಗೆ ತಪೋವನದ ಕುರುಹುಗಳು ಈಗ್ಯೂ ಕಂಡು ಬರುತ್ತವೆ. ಹಿಮಾಚಲದಲ್ಲಿ ಪ್ರಯಾಣ ಬೆಳಿಸಬೇಕಾದರೆ ಇಲ್ಲಿಂದಲೇ ಮುಂದೆ ಕಾಲುದಾರಿಯಿಂದ ಹೋಗಬೇಕಾಗುತ್ತದೆ. ಹೃಷೀಕೇಶದಲ್ಲಿ ಬಾಬಾಕಾಲೀ ಕಮಳಿವಾಲೆ ಎಂಬ ಸತ್ಪುರುಷರ ಹೆಸರಿನಿಂದ ಒಂದು ದಿವ್ಯವಾದ ಧರ್ಮಶಾಲೆಯು ಸ್ಥಾಪಿಸಲ್ಪಟ್ಟಿರುವುದು. ಅಲ್ಲಿ ಯಾತ್ರೆಗಾರರು ಉಳಿದುಕೊಳ್ಳಲಿಕ್ಕೆ ಎಲ್ಲತರದ ಅನುಕೂಲತೆಯಿರುವುದು. ಈ ಧರ್ಮಶಾಲೆಗೆ ವ್ಯವಸ್ಥಾಪಕರದೊಂದು ಕಚೇರಿಯು ಜೋಡಿಸಲ್ಪಟ್ಟಿರುವುದು. ಅವರು ತಮ್ಮಲ್ಲಿಗೆ ಬಂದ ಯಾತ್ರೆಗಾರರ ಯೋಗಕ್ಷೇಮವನ್ನು ಚನ್ನಾಗಿ ಕೇಳಿಕೊಳ್ಳುವರು. ಹಿಮಾಚಲದಲ್ಲಿ ಪ್ರಯಾಣ ಬೆಳಿಸುವಾಗ ಯಾತ್ರೆಗಾರರು ತಮ್ಮಲ್ಲಿ ಹೆಚ್ಚಾಗಿರುವ ಸಾಮಾನುಗಳನ್ನು ಚನ್ನಾಗಿ ಕಟ್ಟಿ ಈ ಕಚೇರಿಯಲ್ಲಿ ಇಟ್ಟು ಹೋಗಿ ತಿರುಗಿ ಬಂದಮೇಲೆ ಪುನಃ ಇಸಕೊಳ್ಳಬಹುದು. ಅವರಂತೆ ನಮ್ಮ ಹತ್ತರ ಹೆಚ್ಚಾಗಿದ್ದ ಹಣವನ್ನು ಈ ಕಚೇರಿಯಲ್ಲಿಟ್ಟು ಅದರ ಬಗ್ಗೆ ಪಾವತಿ ತಕ್ಕೊಂಡು ಹೋಗಿ ತಿರುಗಿಬಂದು ಪಾವತಿಯನ್ನು ತೋರಿಸಿದರೆ ನಮ್ಮ ಹಣವನ್ನು ನಮಗೆ ತಿರುಗಿಕೊಡುವರು. ಹಿಮಾಚಲದಲ್ಲಿ ಕಾಲುದಾರಿಯಿಂದ ಪ್ರವಾಸ ಮಾಡಬೇಕಾದರೆ ಮೂರು ನಾಲ್ಕು ತರದ ವಾಹನಗಳಿರುತ್ತವೆ. ಒಂದು ತೊಟ್ಟಿಲಲ್ಲಿ ಒಬ್ಬನನ್ನು ಕುಳ್ಳಿರಿಸಿಕೊಂಡು ನಾಲ್ಕು ಜನರು ಹೊತ್ತುಕೊಂಡು ಹೋಗುವ ಡೋಲಿಗೆ ಇಲ್ಲಿ "ಝುಂಪಾನು" ಅನ್ನುತ್ತಾರೆ. ಮೇಣೆಯಂತೆ ಒಂದು ವಾಹನವಿರುವುದು. ಅದನ್ನು ನಾಲ್ಕು ಜನರು ಹೊರಬೇಕಾಗುತ್ತದೆ. ಅದಕ್ಕೆ ದಾಂಡಾ ಅನ್ನುತ್ತಾರೆ. ಒಂದು ಬುಟ್ಟಿಯಲ್ಲಿ ಒಬ್ಬನನ್ನು ಕುಳ್ಳಿರಿಸಿಕೊಂಡು ಒಬ್ಬನೇ ಹೊತ್ತುಕೊಂಡು ಹೋಗುತ್ತಾನೆ. ಇದಕ್ಕೆ "ಕಂಡಿ" ಅನ್ನುತ್ತಾರೆ. ಇವಲ್ಲದೆ ಕುದುರೆಯ ಮೇಲಿಂದ ಸಹ ಹೋಗಬಹುದು. ಅತಿಶಯ ಇಕ್ಕಟ್ಟಿನ ಹಾದಿಗಳಲ್ಲಿ ಆಗಾಗ್ಗೆ ಇಳಿದು ಮುಂದೆ ಚಲೋ ಹಾದಿ ಹತ್ತಿದ ಮೇಲೆ ಕುದುರೆಯ ಮೇಲೆ ಕುಳಿತು ಹೋಗಬೇಕಾಗುತ್ತದೆ. ಒಜ್ಜೆಯನ್ನು ಹೊರಲಿಕ್ಕಾಗಲಿ ಡೋಲಿಯನ್ನು ಹೊರಲಿಕ್ಕಾಗಲಿ ಕೂಲಿ ಆಳುಗಳು ಬೇಕಾದರೆ ಈ ಕಚೇರಿಯ ವ್ಯವಸ್ಥಾಪಕರಿಗೆ ತಿಳಿಸಬೇಕು. ಅಂದರೆ ಅವರು ಯೋಗ್ಯದರಕ್ಕೆ ಗೊತ್ತುಮಾಡಿಕೊಡುವರು.

ನಾಲ್ವತ್ತು ಪಕ್ಕಾಸೇರಿನ ಒಂದು ಮಣ ಭಾರವನ್ನು ಬದರೀನಾಥದವರೆಗೆ ಹೊತ್ತುಕೊಂಡು ಹೋಗಲಿಕ್ಕೂ ತಿರುಗಿ ಹೃಷೀಕೇಶಕ್ಕೆ ಬರಲಿಕ್ಕೂ ಸುಮಾರು ನಾಲ್ವತ್ತು ರೂಪಾಯಿ ಕೂಲಿ ಕೊಡಬೇಕಾದರೆ ಒಂದು ಡೋಲಿಗೆ ಸುಮಾರು ೧೫೦ ರೂಪಾಯಿ ಕೊಡಬೇಕಾಗುತ್ತವೆ. "ದಾಂಡಾ" ಎಂಬ ವಾಹನವು ಡೋಲಿಗಿಂತ ಹೆಚ್ಚು ಸುಖಕರವಾಗಿದ್ದು ಅದಕ್ಕಾಗಿ ೩೦-೪೦ ರೂಪಾಯಿ ಹೆಚ್ಚು ವೆಚ್ಚವು ಬರುತ್ತದೆ. ಈ ಕೂಲಿಕಾರರು ಯಾತ್ರೆಗಾರರಿಂದ ಆದಷ್ಟು ಮಟ್ಟಿಗೆ ಹೆಚ್ಚಿಗೆ ದುಡ್ಡು ಉಚ್ಚಿಕೊಳ್ಳುವುದಕ್ಕಾಗಿ ಪ್ರಯತ್ನಪಡುತ್ತಾರೆ. "ಬಾಬಾ ಕಾಲೀ ಕಮಳಿವಾಲೆ" ಇವರ ಧರ್ಮಶಾಲೆಯ ಅಧಿಕಾರಸ್ಥರ ಮುಖಾಂತರವಾಗಿ ಮೊದಲಿಗೆ ಕೂಲಿ ಗೊತ್ತುಮಾಡಿದ್ದರೂ ಕೂಡ ದಾರಿಯಲ್ಲಿ ಕೂಲಿಯವರು ತಮಗೆ ಖುಷಿಬೇಕೆಂದು ಆಗಾಗ್ಗೆ ಉಪದ್ರವಕೊಡುತ್ತಾರೆ. ಇವರಿಗೆ ಒಂದುವೇಳೆ ಸಮಾಧಾನ ಮಾಡುವುದಕ್ಕಾಗಿ ತುಸು ತುಸು ಇನಾಮುಕೊಡತ್ತಾ ಹೋದಂತೆ ಇವರ ಆಶೆಯು ಹೆಚ್ಚಾಗಿ ಉಪದ್ರವಕೊಡುವುದು ಬೆಳೆಯುತ್ತದೆ. ಆದುದರಿಂದ ಇವರ ಸಂಗಡ ಜಾಗರೂಕತೆಯಿಂದ ನಡೆಯಬೇಕು. ತೆಹರಿ ಸಂಸ್ಥಾನದಿಂದ ಕೂಲಿಯವರನ್ನು ಯಾತ್ರೆಗಾರರಿಗೆ ಒದಗಿಸಿಕೊಡುವುದಕ್ಕಾಗಿ ಒಬ್ಬ ಕಂತ್ರಾಟದಾರನಿರುತ್ತಾನೆ. ಈ ಕೂಲಿಕಾರರಲ್ಲಿ ನೇಪಾಳಿ ಕೂಲಿ ಜನರು ಬಹು ತುಂಟರಿರುತ್ತಾರೆಂದು ಹೇಳುತ್ತಾರೆ. ಈಗ ಇಪ್ಪತ್ತು ಮೂವತ್ತು ವರ್ಷಗಳ ಹಿಂದೆ ಈ ಕೂಲಿಕಾರರ ತುಂಟತನದಿಂದ ಅಪಘಾತಗಳಾಗುತ್ತಿದ್ದುವು. ಈಗ ಮಾತ್ರ ವಿಶೇಶ ಅಂಜಿಕೆಯು ಇರುವುದಿಲ್ಲ.

ಹೃಷೀಕೇಶದಿಂದ ಬದರಿಕಾಶ್ರಮವು ೧೬೭ ಮೈಲು ಇರುತ್ತದೆ. ಸುಮಾರು ೩-೩॥ ಮೊಳ ಅಗಲಾಗಿ ಗಂಗಾನದಿಯ ದಂಡೆಗುಂಟ ಪರ್ವತಗಳ ಓರೆಗುಂಟ ಹಾದಿಯನ್ನು ಕಟ್ಟಿರುತ್ತಾರೆ. ಹಾದಿಯಲ್ಲಿ ಅನೇಕ ಚಿಕ್ಕ ದೊಡ್ಡ ನದಿಗಳು ಹತ್ತುವುದರಿಂದ ಅಲ್ಲಲ್ಲಿಗೆ ಅನುಕೂಲವಿದ್ದಂತೆ ಸೇತುಗಳನ್ನು ಕಲ್ಲುಗಚ್ಚಿನಿಂದಾಗಲಿ, ತಂತಿಗಳಿಂದಾಗಲಿ, ಕಟ್ಟಿಗೆಗಳಿಂದಾಗಲಿ, ಹಗ್ಗಗಳಿಂದಾಗಲಿ ಕಟ್ಟಿರುವರು. ಮಾರ್ಗದಲ್ಲಿ ಆಗಾಗ್ಗೆ ನಮಗೆ ಹೇಡಿಮಣ್ಣಿನ ಪರ್ವತಗಳು ದೃಷ್ಟಿಗೆ ಬೀಳುತ್ತವೆ. ಅಸ್ಥಿರವಾದ ಈ ಸೌಳು ಪರ್ವತಗಳೂ ಹಗ್ಗ ಕಟ್ಟಿಗೆ ಪೂಲುಗಳೂ ( ಸೇತು ) ಮೇಲಿಂದ ಮೇಲೆ ಆಕಸ್ಮಿಕವಾಗಿ ದಾರಿಯ ಮೇಲೆ ಕಡಿದುಕೊಂಡು ಬಿದ್ದು ಅಪಘಾತವಾಗುವ ಸಂಭವವಿರುತ್ತದೆ. ಬಹುತರವಾಗಿ ಮಾರ್ಗದ ಒಂದು ಬದಿಗೆ ಅದ್ಭುತವಾದ ಪರ್ವತಗಳ ಸಾಲೂ ಇನ್ನೊಂದು ಬದಿಗೆ ಭಯಂಕರ

ವಾದ ನದಿಗಳಾಗಲಿ ಕೊಳ್ಳಗಳಾಗಲಿ ಇರುವುದರಿಂದ ಸೌಳು ಪರ್ವತಗಳಾಗಲಿ, ಅಭದ್ರವಾದ ಸೇತುಗಳಾಗಲಿ ಒಮ್ಮೊಂದೊಮ್ಮೆ ಜರಿದು ಹಾದಿಯನ್ನು ಕಟ್ಟು ಮಾಡಿದಾಗ ದಾರಿಕಾರರು ವಿಶೇಷತಃ ಬೈಲು ಪ್ರದೇಶದ ಯಾತ್ರೆಗಾರರು ಬಹು ಕಷ್ಟಕ್ಕೆ ಒಳಗಾಗುವರು. ಯಾತ್ರೆಗಾರರ ಈ ಕಷ್ಟವನ್ನು ದೂರ ಮಾಡುವುದಕ್ಕಾಗಿ ಎಷ್ಟೋ ಉದಾರಾಂತಃಕರಣರಾದ ಧನಾಢ್ಯ ಗೃಹಸ್ಥರು ಯತ್ನ ಮಾಡುತ್ತಿರುವರು. ಈ ಪ್ರದೇಶವೆಲ್ಲಾ ಮೇಲೆ ಹೇಳಿದಂತೆ ಬ್ರಿಟಿಷ ಆಧಿಪತ್ಯಕ್ಕೆ ಒಳಪಟ್ಟಿರುವುದರಿಂದ ಪಿ. ಡಬ್ಲ್ಯು. ಡಿ. ಖಾತೆಯವರಿಂದ ಈ ಮಾರ್ಗದ ದುರಸ್ತಿಯು ನಡೆಯುತ್ತಿರುವುದು. ಆದರೂ ಕೂಡ ಮಾರ್ಗದಲ್ಲಿ ಎಷ್ಟೋ ಸಾರೆ ಕೈ ಊರಲಿಕ್ಕೂ ಆಸ್ಪದ ಕೊಡದ ಜರಿದು ಬಂದಿರುವ ಬೋಳ ಪರ್ವತದ ಮಗ್ಗಲಿಗೆ ಒಂದೇ ಒಂದು ಗೇಣು ಹಾದಿಯಲ್ಲಿ ಮೆಲ್ಲನೆ ಕೋಲು ಊರುತ್ತಾ ರುತ್ತ ಹೆಜ್ಜೆಯಲ್ಲಿ ಹೆಜ್ಜೆಯನ್ನು ಸಾವಕಾಶವಾಗಿ ಇಡುತ್ತ ನಾರಾಯಣನನ್ನು ಗಟ್ಟಿಯಾಗಿ ಸ್ಮರಿಸುತ್ತ ಪಾರಾಗಿ ಹೋಗುವ ಯಾತ್ರೆಗಾರರನ್ನು ಮುಖ್ಯವಾಗಿ ಅತಿ ವೃದ್ಧ ಯಾತ್ರೆಗಾರರನ್ನು ನೋಡಿ ಎಂಥ ನಾಸ್ತಿಕನಾದರೂ ಭಕ್ತಿಮಾರ್ಗಕ್ಕೆ ಶರಣು ಹೋಗುವನು. ಇಂಥಾ ಇಕ್ಕಟ್ಟಿನ ಹಾದಿಯಲ್ಲಿ ಪಾರಾಗುವಾಗ ಸ್ವಲ್ಪ ಜೋಲಿ ಹೋದರೆ ಸಾಕು; ನಿಮಿಷಾರ್ಧದಲ್ಲಿ ಕೆಳಗಿರುವ ಭಯಾನಕವಾದ ಕೊಳ್ಳದಲ್ಲಿಯಾಗಲಿ ನದಿಯಲ್ಲಾಗಲಿ ಯಾತ್ರೆಗಾರರು ಜೀವಂತ ಸಮಾಧಿಯನ್ನು ಹೊಂದಬೇಕಾಗುತ್ತದೆ. ಇಂಥ ಸ್ಥಳಗಳಲ್ಲಿ ಕೂಲಿಯವರು ಯಾತ್ರೆಗಾರರನ್ನು ವಾಹನಗಳಿಂದ ಕೆಳಗಿಳಿಸಿ ಸ್ವಲ್ಪದೂರ ಮೆಲ್ಲಕ್ಕೆ ನಡೆಯಿಸಿಕೊಂಡು ಹೋಗಿ ಪುನಃ ಚಲೋ ದಾರಿಯು ಬಂದ ಮೇಲೆ ವಾಹನದಲ್ಲಿ ಕುಳ್ಳಿರಿಸಿಕೊಂಡು ಹೋಗುವರು. ಇಪ್ಪತ್ತು ಮೂವತ್ತು ವರ್ಷಗಳ ಹಿಂದೆ ಮಾರ್ಗವು ಈಗಿನಷ್ಟು ಸುಗಮ್ಯವಾಗಿರಲಿಲ್ಲವಾದುದರಿಂದ ಇಂಥಾ ಮರಣಸೂಚಕವಾದ ಗಂಡಾಂತರಗಳು ಹೆಜ್ಜೆಜ್ಜೆಗೆ ಇದ್ದವಂತೆ.

ಹಾದಿಯನ್ನು ನಡೆಯುವಾಗ ನಾವು ನದಿಯ ದಂಡೆಗುಂಟ ಹೋಗುತ್ತಿದ್ದರೂ ಕೂಡ ನೀರಡಿಕೆಯಾದಾಗ ನದಿಯಲ್ಲಿ ಇಳಿದು ನೀರು ಕುಡಿಯುವುದು ದುಸ್ಸಾಧ್ಯವು. ಯಾಕಂದರೆ, ನಮ್ಮಿಂದ ನದಿಯು ನೂರಾರು ಮೊಳ ಕೆಳಗೆ ಹರಿಯುತ್ತಿದ್ದು ನೀರಿಗೆ ಹೋಗಲು ಹಾದಿಯೇ ಇರುವುದಿಲ್ಲ. ಇಂಥ ಇಕ್ಕಟ್ಟಿನ ಸ್ಥಳಗಳಲ್ಲಿ ಹೋಗಬೇಕಾದುದರಿಂದಲೂ ಹಾದಿಯಲ್ಲಿ ಕಲ್ಲು ಹರಳುಗಳು ಪರ್ವತಗಳ ಓರೆಗುಂಟ ವಿಪುಲವಾಗಿ ಹಾಸಿರುವುದರಿಂದಲೂ ಯಾತ್ರೆಗಾರರು ಪಾದರಕ್ಷೆಗಳನ್ನೂ, ಕೈಯಲ್ಲಿ ಹಿಡಿಯಲು ೪—೫ ಫೂಟು ಎತ್ತರವಾದದೊಂದು ಕೋಲನ್ನೂ ಸಂಗಡ ತಪ್ಪದೇ ತಕ್ಕೊಂಡು ಮಾರ್ಗ ನಡೆಯಲಿಕ್ಕೆ ಸನ್ನದ್ಧರಾಗುವರು. ಕೈಯಲ್ಲಿ ಕೋಲು ಇರುವುದರಿಂದ ಇಕ್ಕಟ್ಟಿನ ಸ್ಥಳಗಳಲ್ಲಿ ಕಾಲು ಜಾರುವ ಅಂಜಿಕೆಯು ಕಡಿಮೆ. ಹೃಷೀಕೇಶದಿಂದ ಬದರಿಕಾಶ್ರಮವು ೮–೧೦ ಸಾವಿರ ಫೂಟು ಎತ್ತರವಾಗಿದ್ದರೂ ಕೂಡ ಹಾದಿಯಲ್ಲಿ ಹೇಳಿಕೊಳ್ಳುವಷ್ಟು ಕಡಿದಾದ ಏರಿಳಿವುಗಳು ಇರುವುದಿಲ್ಲ. ನದಿಯ ಗುಂಟ ನಾವು ಏರಿಹೋಗಬೇಕಾದುದರಿಂದ ಕ್ರಮಕ್ರಮವಾಗಿ ಏರಿಕೆಯು ಹತ್ತುವುದು. ಮೂರು ನಾಲ್ಕು ಸ್ಥಳಗಳಲ್ಲಿ ಮಾತ್ರ ೧–೧॥ ಮೈಲುಗಳವರೆಗೆ ಕಡಿದಾದ ಏರಿಳುವುಗಳು ಇರುವುವು. ಆದರೂ ಅಲ್ಲಲ್ಲಿಗೆ ಗಿಡದ ನೆರಳು ದಟ್ಟಾಗಿರುವುದರಿಂದ ಮಾರ್ಗಶ್ರಮವು ಆಗುವುದಿಲ್ಲ. ಹರಿದ್ವಾರದಿಂದ ಸುಮಾರು ೫೦ ಮೈಲುಗಳವರೆಗೆ ಹಾದಿಯಲ್ಲಿ ದೊಡ್ಡ ಮರಗಳ ವನವು ಹಬ್ಬಿಕೊಂಡಿರುತ್ತದೆ. ಮುಂದೆ ಸುಮಾರು ಒಂದು ನೂರು ಮೈಲುಗಳವರೆಗೆ ಹಾದಿಯಲ್ಲಿ ದಟ್ಟಾಗಿ ಬೆಳೆದ ಕಂಟಿಗಳು ಹತ್ತುತ್ತವೆ. ಇವುಗಳಿಂದಾದರೂ ದಾರಿಯಲ್ಲಿ ಅಲ್ಪಸ್ವಲ್ಪ ನೆರಳು ಸಿಕ್ಕೇ ಸಿಗುತ್ತದೆ. ಆದರೆ ಮುಂದೆ ಮಾತ್ರ ಕೇವಲ ಅಖಂಡವಾದ ಕಲ್ಲು ಬಂಡೆಯ ಪರ್ವತಗಳೇ ಮೋಡಗಳಿಗೆ ಹೋಗಿ ಮುಟ್ಟುವಷ್ಟು ಎತ್ತರವಾಗಿರುವವು. ಬದರಿಕಾಶ್ರಮವು ಇನ್ನೂ ೩೦–೩೫ ಮೈಲು ದೂರ ಇರುವಾಗಲೇ ಬರ್ಫದಿಂದ ಆಚ್ಛಾದಿತವಾದ ದೊಡ್ಡ ದೊಡ್ಡ ಪರ್ವತಗಳ ಶಿಖರಗಳು ದೃಷ್ಟಿಗೆ ಬೀಳುತ್ತವೆ. ಮೊದಲಿಗೆ ಎಂದೂ ನೋಡದೆ ಇದ್ದ ಮನುಷ್ಯನಿಗೆ ಈ ನೋಟವು ಅತಿ ಅಹ್ಲಾದಕರವಾಗಿ ಕಾಣುತ್ತದೆ. ಬರ್ಫದಿಂದ ಆಚ್ಛಾದಿತವಾದ ಪರ್ವತದ ಶಿಖರವನ್ನು ಎಷ್ಟೆಂದು ವರ್ಣಿಸಬೇಕು. ಅದು ಹೊಸದಾಗಿ ಕಡೆದು ಇಟ್ಟಿರುವ ಬೆಣ್ಣೆಯ ಮುದ್ದೆಗಳ ರಾಶಿಯೋ, ಶುಭ್ರವಸ್ತ್ರಗಳ ಸಮೂಹವೋ, ಗಂಗೆಯನ್ನು ಧರಿಸಿದ ಶ್ರೀ.ಶಂಕರನ ಮಸ್ತಕವೋ ಎಂದು ಪ್ರೇಕ್ಷಕರು ಆನಂದಾಶ್ಚರ್ಯಗಳಲ್ಲಿ ಮಗ್ನರಾಗುತ್ತಾರೆ. ಬದರಿಕಾಶ್ರಮವು ಇನ್ನೂ ೨೦ ಮೈಲು ಇರುವಾಗ ಜೋಶಿಮಠ ( ಜೋತಿರ್ಮಠ ) ಎಂಬುದೊಂದು ಗ್ರಾಮವು ಹತ್ತುವುದು. ಇದಕ್ಕೆ ಬದರಿಕಾಶ್ರಮದ ಅಗಸೆಯ ಬಾಗಿಲ ಅನ್ನಬಹುದು. ಯಾಕಂದರೆ, ಇಲ್ಲಿಂದಲೇ ತೀಕ್ಷ್ಣವಾದ ಚಳಿಗೆ ಪ್ರಾರಂಭವಾಗುತ್ತದೆ. ಇಲ್ಲಿಗೆ ಬರುವವರೆಗೆ ಹವೆಯಲ್ಲಿ ಹೇಳಿಕೊಳ್ಳುವಷ್ಟು ಬದಲಾವಣೆಯಾದದ್ದು ಕಂಡು ಬರುವುದಿಲ್ಲ. ಇಲ್ಲಿಂದ ಬದರಿಕಾಶ್ರಮದ ವರೆಗೆ ಚಳಿಯು ಹೆಚ್ಚುತ್ತ ಹೋಗುವುದು. ಬದರಿಕಾಶ್ರಮದಲ್ಲಿ ಚಳಿಗಾಲವು

ಕಾರ್ತಿಕ ಮಾಸದಿಂದ ವೈಶಾಖಮಾಸದ ವರೆಗೆ ೬ ತಿಂಗಳು ಇದ್ದು ಆಗ ಆ ಪ್ರದೇಶದಲ್ಲಿ ಬರ್ಫವು ಬಹಳ ಬೀಳುತ್ತದೆ. ಆದ್ದರಿಂದ ಚಳಿಗಾಲದಲ್ಲಿ ೬ ತಿಂಗಳು ಬದರಿಕಾಶ್ರಮದಲ್ಲಿ ಮನುಷ್ಯರು ವಾಸಮಾಡಿಕೊಂಡಿರುವುದಿಲ್ಲ. ಆಗ ನಾರಾಯಣ ದೇವರನ್ನು ಉದ್ದೇಶಿಸಿ ಪೂಜೆಯನ್ನು ಜ್ಯೋತಿರ್ಮಠದಲ್ಲಿರುವ ನರಸಿಂಹ ದೇವರ ಗುಡಿಯಲ್ಲಿ ಮಾಡುವರು. ವೈಶಾಖಮಾಸವು ಸುರು ಆಗುತ್ತಲೇ ಬರ್ಫವು ಕರಗಹತ್ತಿ ಮಾರ್ಗವು ಬಿಡುಗಡೆಯಾಗುತ್ತದೆ. ಅಕ್ಷಯತೃತಿಯಾಕ್ಕೆ ಅಲ್ಲಿ ಪುನಃ ಪೂಜೆಯು ಪ್ರಾರಂಭವಾಗುತ್ತದೆ. ಜೇಷ್ಟ, ಆಷಾಢ, ಶ್ರಾವಣ ಮಾಸಗಳಲ್ಲಿಯೇ ಯಾತ್ರೆಗಾರರು ಬಹಳವಾಗಿ ನಾರಾಯಣ ದೇವರ ದರ್ಶನಕ್ಕೆ ಹೋಗುವರು. ಭಾದ್ರಪದ ಆಶ್ವಿನ ಮಾಸಗಳಲ್ಲಿ ಯಾತ್ರೆಗಾರರ ದಟ್ಟಣಿಯು ಕಡಿಮೆಯಾಗುತ್ತದೆ. ಜ್ಯೋತಿರ್ಮಠದಿಂದ ಕೆಳಗೆ ಬಹುತರವಾಗಿ ಬಿಸಿಲ ತಾಪವು ಬಹಳ. ಮಳೆಯಾದರೂ ಆಗಾಗ್ಗೆ ಬಹು ಜೋರಿನಿಂದ ಬೀಳುವುದು. ಬದರಿಕಾಶ್ರಮದ ಹಾದಿಯಲ್ಲಿ ಬಟ್ಟಿಸೇರಾ ಎಂಬ ಗ್ರಾಮದಿಂದ ಕರ್ಣಪ್ರಯಾಗದವರೆಗೆ ಸುಮಾರು ೩೦ಮೈಲು ಹಾದಿಯಲ್ಲಿ ಹುಲಿಯ ಅಂಜಿಕೆ ಇರುತ್ತದೆಂದು ಹೇಳುತ್ತಾರೆ. ಮಾರ್ಗದಲ್ಲಿ ರುದ್ರ ಪ್ರಯಾಗ, ಶಿವಾನಂದಿ ಚಟಾಪಿಂಪಲ ಎಂಬ ದೊಡ್ಡ ಛಬ್ಬಿಗಳು ಅಂದರೆ ಇಳಿದುಕೊಳ್ಳುವ ಸ್ಥಳಗಳು ಇರುವವು. ಇಲ್ಲಿ ಭದ್ರವಾದ ಮನೆಗಳು ಸಿಗುವುದರಿಂದ ಬಹುತರವಾಗಿ ಯಾತ್ರೆಗಾರರು ಇವೇ ಸ್ಥಳಗಳಲ್ಲಿ ಉಳಿದುಕೊಳ್ಳುವರು. ಭದ್ರವಾದ ಮನೆಗಳೆಂದರೆ ಬಾಗಿಲಗಳಿರತಕ್ಕ ಕಲ್ಲಿನಿಂದ ಕಟ್ಟಿದ ಮನೆಗಳು. ವಾಡಿಕೆಯಾಗಿ ಎಲ್ಲ ಛಟ್ಟಿಗಳಲ್ಲಿ ಬಾಗಿಲಗಳಿಲ್ಲದೆ ಹಾಗೇ ಧರ್ಮಶಾಲೆಯಂಥ ಬೋಳು ಮನೆಗಳಿರುತ್ತವೆ. ಬೆಳಗಿನ ಜಾವಿನಲ್ಲಿಯಾಗಲಿ, ಸಾಯಂಕಾಲದಲ್ಲಿಯಾಗಲಿ ಕಣ್ಣು ಕತ್ತಲೆಯ ಸಮಯದಲ್ಲಿ ಈ ಹುಲಿಯ ಅಂಜಿಕೆ ಇರುವ ಮಾರ್ಗದಲ್ಲಿ ಯಾರು ಹಾದೀ ನಡೆಯುವುದಿಲ್ಲ.

ಯಾತ್ರೆಗಾರರಿಗೆ ಸೋಯಿನಾಗುವಂತೆ ಮಾರ್ಗದಲ್ಲಿ ಎರಡು ಮೂರು ಮೈಲುಗಳು ಅಂತರದಲ್ಲಿ ಛಬ್ಬಿಗಳು ಅಂದರೆ ಇಳಿದುಕೊಳ್ಳುವ ಸ್ಥಳಗಳು ಇರುತ್ತವೆ. ಇವುಗಳಲ್ಲಿ ಕೆಲವು ಗುಡ್ಡದ ಓರೆಯಲ್ಲಿರುವ ಸಣ್ಣ ಊರುಗಳೇ ಇರುತ್ತಿದ್ದು ಮಾರ್ಗದಲ್ಲಿಯೇ ಯಾತ್ರೆಗಾರರಿಗೆ ಇಳಿಮಕೊಳ್ಳುವುದಕ್ಕೆ ಅಂಗಡಿಗಳು ಇರುತ್ತವೆ. ಆದರೆ ಉಳಿದ ಸ್ಥಳಗಳಲ್ಲಿ ಮಾತ್ರ ಕೇವಲ ಯಾತ್ರೆಗಾರರಿಗೆ ಅನುಕೂಲವಾಗುವಂತೆ ಯಾತ್ರೆಯ ಕಾಲದಲ್ಲಿ ಅಂಗಡಿಗಳನ್ನು ಮಾರ್ಗದಲ್ಲಿ ಅಲ್ಲಲ್ಲಿಗೆ ಇಟ್ಟಿರುತ್ತಾರೆ. ನಾವು ಸಾಮಾನು ತೆಗೆದುಕೊಳ್ಳುವ ಅಂಗಡಿಯಲ್ಲಿ ನಮಗೆ ಇಳಿದುಕೊಳ್ಳಲಿಕ್ಕೂ ಅಡಿಗೆಗೂ ಜಾಗೆ ಸಿಗುವುದಲ್ಲದೆ ನಮಗೆ ಬೇಕಾದ ಪಾತ್ರೆಗಳೂ ಸಿಗುತ್ತವೆ. ಇಲ್ಲಿ ತುಡುಗಿನ ಅಂಜಿಕೆಯು ಕಡಿಮೆ. ಗಂಗೆಯ ನೀರು ದೂರ ಇರುವುದರಿಂದ ಎಷ್ಟೋ ಛಬ್ಬಿಗಳಲ್ಲಿ ಗುಡ್ಡಗಳಲ್ಲಿಯ ಝರಿಗಳ ನೀರನ್ನೇ ಉಪಯೋಗ ಮಾಡಬೇಕಾಗುತ್ತದೆ. ಬಿಳೀ ಗೋದಿಯ ಹಿಟ್ಟು ಅಕ್ಕಿ, ಬಟಾಟಿ ಹಾಗೂ ತುಪ್ಪ ಇಷ್ಟು ಸಾಮಾನುಗಳು ಪ್ರತಿಯೊಂದು ಛಬ್ಬಿಯಲ್ಲಿ ಸಿಕ್ಕೇ ಸಿಗುತ್ತವೆ. ಬಾಳೇ ಹಣ್ಣು, ಪೇಡೆ, ಸಕ್ಕರಿ, ಹಾಲು, ಲಿಂಬಿ ಹಣ್ಣು ಮತ್ತು ತಾಜಾ ಕಾಯಿಪಲ್ಯಗಳು ದೊಡ್ಡ ಛಬ್ಬಿಗಳ ಅಂಗಡಿಗಳಲ್ಲಿ ದೊರೆಯುತ್ತವೆ. ಪ್ರತಿಯೊಂದು ಸಾಮಾನು ಇಲ್ಲಿ ತೂಗಿ ಕೊಡುತ್ತಾರೆ. ೮೦ ರೂಪಾಯಿ ತೂಕಕ್ಕೆ ಒಂದು ಸೇರು ಅನ್ನುತ್ತಾರೆ. ಉತ್ತಮ ಅಕ್ಕಿಯ ಧಾರಣೆಯು ೧೦—೧೨ ಆಣೆಗೆ ಒಂದು ಸೇರು. ಗೋದಿಯ ಹಿಟ್ಟು ೬—೭ ಆಣೆಗೆ ಒಂದು ಸೇರು. ಬಟಾಟಿ ೫—೬ ಆಣೆ ಹಾಲು ೪—೫ ಆಣೆ ಪೇಡೆ ಹಾಗೂ ಸಕ್ಕರಿ ೧—೧। ರೂಪಾಯಿ ಬಾಳೇ ಹಣ್ಣು ೨ ದುಡ್ಡಿಗೊಂದು. ಈ ಪ್ರಕಾರವಾಗಿ ಧಾರಣೆಯು ನಾವು ಹೋದ ವೇಳೆಯಲ್ಲಿ ಅಂದರೆ ಹೋದ ಭಾದ್ರಪದ ಮಾಸದಲ್ಲಿ ಇತ್ತು. ಇಲ್ಲಿ ನೀರು ಕೂಡಿಸಿ ಹಾಲು ಮಾರುವವರನ್ನು ಕಾಣುವುದು ಅಪರೂಪ. ಒಬ್ಬ ಅಂಗಡಿಕಾರನಿಗೆ ಒಂದು ವರ್ಷದ ಹಂಗಾಮಿನಲ್ಲಿ ಸುಮಾರು ೨೦೦—೩೦೦ ರೂಪಾಯಿ ಉಳಿತಾಯವಾಗುತ್ತದೆಂದು ಹೇಳುತ್ತಾರೆ.

ಈ ಗುಡ್ಡಗಾಡಿನ ಊರುಗಳಲ್ಲಿ ಮುಖ್ಯ ವ್ಯವಸಾಯವು ಅಂದರೆ ಒಕ್ಕಲತನವೇ. ಗುಡ್ಡದ ಓರೆಯಲ್ಲಿ ಅತಿಶಯ ಜಾಣತನದಿಂದ ಭೂಮಿಯನ್ನು ಕಡಿದು ಉತ್ತಮ ಬತ್ತದ ಗದ್ದೆಗಳನ್ನು ತಯಾರ ಮಾಡಿರುತ್ತಾರೆ. ಮುಖ್ಯವಾಗಿ ಬತ್ತ ಹಾಗೂ ಬಿಳಿಗೋದಿ ಇವೇ ಎರಡು ಪೈರುಗಳು. ರಾಗಿಯನ್ನಾದರೂ ವಿಪುಲವಾಗಿ ಬೆಳೆಯುವುದುಂಟು. ರಾಮ-ಧಾನ್ಯ ಎಂಬ ನವಣಿಯಂಥ ಪೈರನ್ನು ಬರ್ಫ ಬೀಳುವ ಪ್ರದೇಶದಲ್ಲಿ ಬಹಳವಾಗಿ ಬೆಳೆಯಿಸುತ್ತಾರೆ. ಮತ್ತು ಚಳಿಯ ಕಾಲದಲ್ಲಿ ಈ ರಾಮಧಾನ್ಯವು ಅತಿಶಯವಾಗಿ ಶರೀರಕ್ಕೆ ಕಾವು ಪೂರೈಸಿಕೊಟ್ಟು ಆರೋಗ್ಯದಾಯಕವಾಗಿರುತ್ತದೆಂದು ಹೇಳುತ್ತಾರೆ. ಅನುಕೂಲವಾದ ಮಾರ್ಗಗಳಿಲ್ಲದುದರಿಂದ ಈ ಪ್ರದೇಶದಲ್ಲಿ ಒಂದು ಊರಿಂದ ಮತ್ತೊಂದು ಊರಿಗೆ ಕಾಳು ಒಯ್ಯುವುದು ಬಹಳ ವೆಚ್ಚದ ಕೆಲಸವಿರುತ್ತದೆ. ಏನೇ ಇರಲಿ. ಒಕ್ಕಲತನವೇ ಇಲ್ಲಿಯ ಜನರ ಜೀವಿತದ ಮುಖ್ಯ ಉದ್ಯೋಗವಾದುದರಿಂದಲೂ ಪ್ರತಿಯೊ

ಬ್ಬನುನುಷ್ಯನು ಸ್ವತಃ ತನ್ನ ಕೈಯಿಂದ ಭೂಮಿಯನ್ನು ಸಾಗು ಮಾಡುವುದರಿಂದಲೂ ಇಲ್ಲಿಯ ಜನರು ಬಹುತರವಾಗಿ ಸರಳ ಸ್ವಭಾವದವರು ಇರುತ್ತಾರೆ. ಇವರಿಗೆ ಕೊರತೆಗಳು ಕಡಿಮೆ. ಭೋಗದ (ಚೈನಿಯ) ವಿಚಾರಗಳಾದರೂ ಅಷ್ಟೊಂದು ಕಾಣು ವುದಿಲ್ಲ. ಎಷ್ಟೋ ಕಡೆಯಲ್ಲಿ ಕೊಬ್ಬರಿಯ ಎಣ್ಣೆಯು ದೊರೆ ಯುವುದಿಲ್ಲ. ಜನರು ಬೇವಿನ ಇಲ್ಲವೆ ಹುಲಗಲಿ ಎಣ್ಣೆಯನ್ನು ಮೈಗೆ ಹಚ್ಚಿಕೊಳ್ಳುವುದುಂಟು. ಬ್ರಾಹ್ಮಣರು ಮನೆಯಲ್ಲಿ ಉಂಚೆಯನ್ನು ನೂಲುವರು. ವೈದಿಕ ಕರ್ಮಗಳನ್ನು ಮಾಡಿ ಸುವ ಬ್ರಾಹ್ಮಣರು ಹೆಚ್ಚಿಗೆ ಧೂರ್ತರಿರುವರೆಂದು ಕಂಡುಬ ರುತ್ತದೆ.

ಜನರಲ್ಲಿ ಸ್ವಚ್ಛತೆಯು ಕಡಿಮೆ. ಹೆಣ್ಣುಮಕ್ಕಳು ಕಂಬಳಿ ಯನ್ನು ಉಟ್ಟುಕೊಳ್ಳುತ್ತಾರೆ. ಗಂಡಸರು ಕಂಬಳಿಯ ಚಣ್ಣ ವನ್ನೂ ಅಂಗಿಯನ್ನೂ ಹಾಕಿಕೊಳ್ಳುತ್ತಾರೆ. ಹೆಂಣು ಮಕ್ಕಳು ಮೂಗಿನಲ್ಲಿ ತಪ್ಪಡೇ ಸುಮಾರು ೬ ಇಂಚು ವ್ಯಾಸವುಳ್ಳ ನತ್ತಿನಂಥ ಆಭರಣವನ್ನು ಇಟ್ಟುಕೊಂಡಿರುತ್ತಾರೆ. ಈ ಅಸಾ ಧಾರಣವಾಗಿರುವ ಮೂಗಿನಲ್ಲಿಯ ಆಭರಣವನ್ನು ನೋಡಿ ಇತ್ತಕಡೆಯ ಜನರಿಗೆ ವಿಸ್ಮಯವೆನಿಸುತ್ತದೆ. ಈ ಸ್ಥಳಗಳಲ್ಲಿ ಮುಸಲ್ಮಾನರು ಯಾರೂ ಇರುವುದಿಲ್ಲವೆಂದು ಹೇಳಿದರೂ ನಡೆಯ ಬಹುದು. ಒಬ್ಬಿಬ್ಬರು ಮುಸಲ್ಮಾನ ವ್ಯಾಪಾರಸ್ಥರು ದೊಡ್ಡ ಊರುಗಳಲ್ಲಿ ಕಂಡು ಬರುತ್ತಾರೆ.

( ಮುಂದುವರಿವುದು. )

---

## ಬಲ್ಲವರದಾರು ?

ಏನಿಲ್ಲ ! ಏನಿಲ್ಲವೆಂಬುದೂ ಅಲ್ಲಿಲ್ಲ !
ಏನದೆಂಬುದನರಿವರಾರೊಬ್ಬರೂ ಇಲ್ಲ !
ಕರಿದಿಲ್ಲ; ಬಿಳಿದಿಲ್ಲ; ದಿನವಿಲ್ಲ; ನಿಶೆಯಿಲ್ಲ ;
ಅರಿವಿಲ್ಲ; ಮನವಿಲ್ಲ; ಅಳಿವಿಲ್ಲ; ಉಳಿವಿಲ್ಲ !
ಶೂನ್ಯವಲ್ಲವು ! ಸರ್ವವೂ ನೇತಿ ನೇತಿ !
ಕಾಲದೇಶಗಳಿಲ್ಲ; ಸಾವುಬಾಳುಗಳಿಲ್ಲ!
ನಾನಿಲ್ಲ; ನೀನಿಲ್ಲ; ಸರ್ವವೂ ಮೌನ !
ತಿಮಿರ ಬೆಳಕಿನೊಳಡಗಿ, ಬೆಳಕುತಿಮಿರದೊಳವಿತು
ಭಾವ ಶೂನ್ಯವ ಸೇರಿದುದು ಐಕ್ಯವಾಗಿ !
ರವಿಯಿಲ್ಲ; ಶಶಿಯಿಲ್ಲ; ನಭವಿಲ್ಲ; ಧರೆಯಿಲ್ಲ ;
ರಂಜಿಸುವ ಉಡುಗಣದ ಸೌಂದರ್ಯವಿಲ್ಲ !
ತುದಿಯಿಲ್ಲ; ಮೊದಲಿಲ್ಲ; ಒಂದಿಲ್ಲ; ಎರಡಿಲ್ಲ;
ಏನು ಏನಾಗಿರ್ದುದೋ ಬಲ್ಲವರದಾರು ?
ಭಾವದೊಳಭಾವವೋ ? ಶೂನ್ಯದೊಳಶೂನ್ಯವೋ
ಅರಿವಿನಾಚೆಯು ತೀರ ಬರಿ ಮೌನ ಮೌನ !
ಜ್ಞಾನ ತಾನಲ್ಲಿಲ್ಲ ಜ್ಞೇಯವದುಮಿಲ್ಲ !
ಜ್ಞಾನಜ್ಞೇಯಗಳೆಲ್ಲ ಜ್ಞಾತನೊಳು ಸೇರೆ
ಏನು ಏನಾಗಿರ್ದುದೋ ಬಲ್ಲವರದಾರು ?

—ಕಿಶೋರಚಂದ್ರವಾಣಿ.

# ಭರ್ತೃಹರಿಯ ಬಗ್ಗೆ ಒಂದು ದಂತಕಥೆ.

ಲೇ:— ಶ್ರೀ. ಚಿದರಿಮಠೀಯ ವೀರಭದ್ರಶರ್ಮಾ, ಹೈದ್ರಾಬಾದ ( ಕಾಶೀಕ್ಷೇತ್ರದೀದ )

ಸುಸಿದ್ಧ ಸಂಸ್ಕೃತ ಕವಿಯಾದ ಭರ್ತೃಹರಿಯು ತನ್ನ ಪತ್ನಿಯು ವ್ಯಭಿಚಾರಿಣಿಯಾಗಿದ್ದಳೆಂದು ತಿಳಿದು ಸಂಸಾರವು ನಿಃಸಾರವಾಮುದೆಂದು ಮನಗಂಡು ಸಂಸಾರವನ್ನು ತ್ಯಜಿಸಿ ವೈರಾಗ್ಯವನ್ನು ತಾಳಿದನೆಂದು ದಂತಕಥೆಯು ಪ್ರಚಾರದಲ್ಲಿರುವುದು. ಆದರೆ ಇದಕ್ಕೆ ವಿರುದ್ಧವಾಗಿ ಅವನ ಧರ್ಮಪತ್ನಿಯು ಲೋಕೋತ್ತರವಾದ ಪಾತಿವ್ರತ್ಯವೇ ಅವನ ವೈರಾಗ್ಯಕ್ಕೆ ಕಾರಣವಾಯಿತೆಂದು ಬೇರೊಂದು ದಂತಕಥೆಯು ಉತ್ತರ ಹಿಂದುಸ್ಥಾನದಲ್ಲಿ ಪ್ರಚಾರದಲ್ಲಿರುವುದು. ಆ ಕಥೆಯು ಮನೋರಂಜಕವಾಗಿರುವುದರಿಂದ ಜಯಕರ್ನಾಟಕದ ವಾಚಕರಿಗೋಸ್ಕರ ನಾವಿಲ್ಲಿ ಕೊಡುವೆವು.

ಯಮುನಾ ನದೀತೀರದಲ್ಲಿ ಸುಪ್ರಸಿದ್ಧವಾದ ಮಥುರಾ ನಗರವಿರುವುದು. ಲೋಕಪೂಜ್ಯನಾದ ವಿಷ್ಣುಮೂರ್ತಿಗೆ ಜನ್ಮಸ್ಥಾನವೆನಿಸಿ ಈಗಲೂ ಲಕ್ಷಗಟ್ಟಲೆ ಯಾತ್ರಿಕರಿಂದ ಸೇವಿಸಲ್ಪಡುತ್ತಿದ್ದು ಅವಂತ್ಯಾದಿ ಸಪ್ತ ಪುಣ್ಯ ಕ್ಷೇತ್ರಗಳಲ್ಲಿ ಒಂದಾದುದು ಈ ಮಥುರಾ ನಗರವು. ಪೂರ್ವದಲ್ಲೀ ಪಟ್ಟಣವನ್ನು ಶೃಂಗಾರಶೇಖರನೆಂಬ ರಾಜನು ಪಾಲಿಸುತ್ತಿದ್ದನು. ಆತನೊಂದು ದಿನ ಸಚಿವ ಸಾಮಂತ ಚಾರ ಶೂರ ನಟ ಭಟ ವಿದ್ವಾಂಸ ಕವಿ ಗಾಯಕ ಪರಿಜನ ಬಂಧುಗಳೊಡನೆ ಒಡ್ಡೋಲಗದಲ್ಲಿದ್ದನು. ಆ ಸಮಯದಲ್ಲಿ ಶಿವಾನುಗ್ರಹದಿಂದ ಪುನಃ ಅವತರಿಸಿ ಬಂದ ಮನ್ಮಥನೋ ಅವಯವಗಳನ್ನು ಧರಿಸಿದ ಕಾಂತಿಪುಂಜವೋ ಅನ್ನುವಂತಿರುವ ಬ್ರಾಹ್ಮಣ ಯುವಕನೋರ್ವನು ಸಭಾಮಂಟಪದಲ್ಲಿ ಪ್ರವೇಶಿಸಿ ರಾಜನಿಗೆ ಸಮ್ಮುಖವಾಗಿ ನಿಂತನು. ಅವನ ದೇಹಸೌಂದರ್ಯವೂ ಸೌಕುಮಾರ್ಯವೂ ಲಾವಣ್ಯವೂ ಸಭಾಸದರನ್ನೆಲ್ಲ ಆನಂದಸಾಗರದಲ್ಲಿ ಮುಳಗಿಸಿತು. ಎಲ್ಲರೂ ಈ ಯುವಕನ ಕಡೆಗೆ ಮುಖ ತಿರುಗಿಸಿ ಅವನ ಮುಖದಿಂದ ವಚನವನ್ನು ಕೇಳಲು ಆತುರರಾಗಿರುವಾಗ ರಾಜನಿಗೂ ಸಂತೋಷವಾಗಿ ಹೀಗಂದನು "ಭೂಸುರತಿಲಕಾ! ನಿನ್ನನ್ನು ನೋಡಿದ ಹಾಗೆಲ್ಲ ಮತ್ತಿಷ್ಟು ನೋಡಲು ಕುತೂಹಲವು ಜನಿಸುವುದು. ನಿನ್ನ ಮುಖ—ವಿಭಾಕರನ ಕಿರಣಗಳಿಂದ ಈ ಸಭಿಕರ ಹೃದಯಸರೋಜಗಳು ವಿಕಸಿತವಾಗಿರುವುವು. ನಿನ್ನ ದೇಶವಾವುದು ? ನಿನ್ನಂತಹ ಲೋಕೋತ್ತರನನ್ನು ಪಡೆದ ದಂಪತಿಗಳಾರು ? ಯಾವ ಸದ್ವರವನ್ನು ದಯಪಾಲಿಸಲು ಈ ರಾಜ್ಯಕ್ಕೆ ಬಂದಿರುವಿರಿ? ನಿಮ್ಮ ಪಾವನ ಚರಿತ್ರೆಯನ್ನು ಮರೆಮಾಚದೆ ಹೇಳಿರೆಂಬ ರಾಜನ ವಾಕ್ಯವನ್ನು ಕೇಳಿದೊಡನೆ "ರಾಜಾ! ಕಲಿಯುಗ ವೈಕುಂಠವೆನಿಸಿದ ಮಥುರಾನಗರದ ಪಾಲಕನಾಗಿ ಧನ್ಯಾತ್ಮನಾದ ನಿನ್ನನ್ನು ಸಂದರ್ಶಿಸಿ ಕೃತಾರ್ಥನಾಗಲು ಬಂದಿರುವೆನು. ನಾನು ಜನನೀಜನಕರಿಲ್ಲದೆ ಏಕಾಕಿಯಾಗಿರುವೆನು. ಇನ್ನೂ ನನಗೆ ವಿವಾಹವಾಗಿರುವುದಿಲ್ಲ. ನನ್ನ ಹೆಸರು ಚಂದ್ರಗುಪ್ತ. ನೀವು ಸಂಬೋಧಿಸಿದಂತೆ ನಾನು ಬ್ರಾಹ್ಮಣನೇ ಸರಿ. ನಾನು ಬಾಲ್ಯದಲ್ಲಿಯೇ ಕಾವ್ಯ ನಾಟಕ ಅಲಂಕಾರ ವೇದ ವೇದಾಂತಾದಿ ಶಾಸ್ತ್ರಗಳಲ್ಲಿ ಪ್ರಜ್ಞೆಯನ್ನು ಸಂಪಾದಿಸಿ ಚತುಃಷ್ಷಷ್ಠಿ ಕಲೆಗಳಲ್ಲಿ ನಿಪುಣನೆನಿಸಿ ಗುರುವಿನಿಂದ ಕುಶಾಗ್ರಬುದ್ಧಿಯೆಂಬ ಹೆಸರನ್ನು ಪಡೆದಿರುವೆನು. ರಸವತ್ತಾಮುದೋ ಅಲ್ಲವೋ, ಕವಿತ್ವವನ್ನು ಕೂಡ ಮಾಡಬಲ್ಲೆನು. ವಜ್ರವಾದರೂ ಬಂಗಾರದ ಆಶ್ರಯವಿಲ್ಲದೆ ಶೋಭಿಸದಂತೆ, ಕವಿಜನಕಲ್ಪತರುವೂ ಪಂಡಿತಜನಪಾರಿಜಾತವೂ ದಿಗಂತಕೀರ್ತಿಸಂತನೂ ಆದ ನಿನ್ನನ್ನಾಶ್ರಯಿಸಿ ಆಸ್ಥಾನ ಪಂಡಿತನಾಗಲು ಬಂದಿರುವ ನನ್ನನ್ನು ಸ್ವೀಕರಿಸು" ಎಂದೆನ್ನಲು ರಾಜನು ಆನಂದಪರವಶನಾಗಿ ದಿವ್ಯಾಸನದಲ್ಲಿ ಕುಳ್ಳಿರಿಸಿ ಅರ್ಘ್ಯಾದಿಗಳಿಂದ ಪೂಜಿಸಿ ನೂತನವಸ್ತ್ರಭೂಷಣದೊಡನೆ ಆಸ್ಥಾನವಿದ್ವಾಂಸನನ್ನಾಗಿ ಪರಿಗ್ರಹಿಸಿ ಬೇಕಾದ ಪದಾರ್ಥಗಳಿಂದ ಸಂತೋಷಗೊಳಿಸುತ್ತಿದ್ದನು. ಪಂಡಿತನಾದರೂ ತನ್ನ ಕವಿತಾಮೃತದಿಂದ ರಾಜನಿಗೆ ಪ್ರತ್ಯುಪಕಾರವನ್ನು ಮಾಡುತ್ತ ಸದಾನಂದನಾಗಿ ಆ ಪ್ರಾಂತದಲ್ಲಿಯ ಸರ್ವ ಬುಧರಿಂದ ಪೂಜಿಸಲ್ಪಡುತ್ತಿದ್ದನು.

ಹೀಗೆ ಸರ್ವ ಭೋಗಾನಂದದಿಂದ ಆ ಪಂಡಿತನು ಕುಳಿತಿರುವಾಗ ಓರ್ವ ಮುದಿಕೆಯು ಬಂದು "ಪಂಡಿತೋತ್ತಮಾ! ನನ್ನ ಪ್ರಾರ್ಥನೆಯನ್ನು ಸಮಾಧಾನಚಿತ್ತದಿಂದ ಕೇಳಿರಿ. ಶೃಂಗಾರಶೇಖರಮಹಾರಾಜರ ಸೇನಾಪತಿಯಾದ ವೀರವರ್ಮನಿಗೆ ಮದನರೇಖೆಯೆಂಬ ಮಗಳಿರುವಳು. ಈಕೆಯು ರೂಪದಿಂದ ರತಿಸಮಾನಳು. ನೀವು ಮೊನ್ನೆ ಸಾಯಂಕಾಲದಲ್ಲಿ ಸರಸ—ಸಲ್ಲಾಪಗಳಾಡುತ್ತ ಹೋಗುತ್ತಿರುವಾಗ ನಿಮ್ಮ ಲಾವಣ್ಯ ಚಾತುರ್ಯಾದಿಗಳನ್ನು ನೋಡಿ ಮೋಹವಿವಶಳಾಗಿರುವಳು. ಅಂದಿನಿಂದ ನಿಮ್ಮ ಸ್ಮರಣೆಯೆ ನಿಮ್ಮ ಕಥಾಶ್ರವಣವೇ ನಿಮ್ಮ ಚಿಂತ

ನೆಯೇ ಹೊರತು ಕ್ಷುತ್ಪಿಪಾಸಾದಿಗಳನ್ನು ಕೂಡಾ ಅಗಲಿ ಕ್ಷೀಣಿಸುತ್ತಿರುವಳು. ಆದುದರಿಂದ ಆ ಬಾಲಿಕೆಯನ್ನು ಪರಿಗ್ರಹಿಸಿ ಪ್ರಾಣದಾನದಿಂದ ವೀರವರ್ಮನಿಗೆ ಪುತ್ರಿಕಾಭಿಕ್ಷೆಯನ್ನು ಪ್ರಸಾದಿಸುವಿರೆಂದು ನಂಬುವೆ" ನನ್ನುವವನ್ನು ಕೇಳಿದಾಗಳೇ ಚಂದ್ರಗುಪ್ತನು ಕ್ರೋಧಗ್ರಸ್ತಮಾನಸದಿಂದ "ಮೂರ್ಖಳೇ! ಮುದಿಕೆಯಾಗಿರುವುದರಿಂದ ನಿನ್ನ ಮಿದುಳು ಕೆಟ್ಟಂತೆ ಕಾಣಿಸುತ್ತದೆ. ಇಲ್ಲವಾದರೆ ನೀನು ಹೀಗೆನ್ನುತ್ತಿರಲಿಲ್ಲ. ಸಕಲ ಶಾಸ್ತ್ರಕೋವಿದನೂ ಶುದ್ಧ ವೈದಿಕ ಬ್ರಾಹ್ಮಣನೂ ವಿಶೇಷವಾಗಿ ನೈಷ್ಠಿಕನೂ ಆದ ನಾನು ಶೂದ್ರ ಕನ್ಯೆಯನ್ನು ಲಗ್ನವಾಗುವುದು ಹೇಗೆ? ಯುವ್ವನಮದದಿಂದ ಮದನ ರೇಖೆಯು ನಿನ್ನನ್ನು ಪ್ರೋತ್ಸಾಹಿಸಿ ಕಳುಹಿಸಿದರೂ ನಿನಗೀ ಪಾಪಕಾರ್ಯಾಚರಣೆಯನ್ನು ಹೇಳಲು ಬಾಯಿ ಹೇಗೆ ಬಂತು ? ಸಾಕು ಸಾಕು ಹೊರಗೆ ನಡೆ!" ಎನಲು ಮುದಿಕೆಯು ಖಿನ್ನಳಾಗಿ ಬಂದು ಮದನರೇಖೆಗೆ ನಿಜಸ್ಥಿತಿಯನ್ನು ತಿಳಿಸಿದಳು. ಅದನ್ನು ಕೇಳಿದ ಮದನರೇಖೆಯು ಚಿಂತಾಗ್ರಸ್ತಳಾಗಿ ಭುಂಜಿಸದೆ ಅಲಂಕರಿಸಿಕೊಳ್ಳದೆ ಶೋಚನೀಯ ಸ್ಥಿತಿಯಲ್ಲಿದ್ದುದನ್ನು ದಾಸೀ ಜನರು ತಂದೆಯಾದ ವೀರವರ್ಮನಿಗೆ ತಿಳಿಸಿದರು. ಅವನು ಪುತ್ರಿಯು ಮೃತಪಡುವಳೆಂಬ ಭಯದಿಂದ ತನ್ನ ಪ್ರಭುವಾದ ಶೃಂಗಾರಶೇಖರನಿಗೆ ಇದನ್ನು ಸಂಪೂರ್ಣವಾಗಿ ಹೇಳಿ ನನ್ನ ಪುತ್ರಿಕೆಯ ಪ್ರಾಣವನ್ನುಳಿಸಿರೆಂದು ಪ್ರಾರ್ಥಿಸಿದನು. ರಾಜನು ಪಂಡಿತನನ್ನು ಕರೆಯಿಸಿ ವಿನಯದಿಂದ ಮದನರೇಖೆಯನ್ನು ವಿವಾಹ ಮಾಡಿಕೊಳ್ಳಿರೆಂದು ಬೇಡಿದನು. ಅದನ್ನುಕೇಳಿ ಚಂದ್ರಗುಪ್ತನು "ರಾಜಾಗ್ರಗಣ್ಯಾ! ಸಕಲ ಧರ್ಮವೇದಿಯಾದ ನೀನೀ ಪಾಪಕಾರ್ಯವೆನಿಸಿದ ವರ್ಣಸಾಂಕರ್ಯಕ್ಕೆ ಒಡಂಬಡುವುದು ಯೋಗ್ಯವೋ? ನಿರುಪಮಾನ ನಿಷ್ಠಾಗರಿಷ್ಠನಾದ ಬ್ರಾಹ್ಮಣನೆಲ್ಲಿ ! ಶೂದ್ರಕನ್ಯಾವಿವಾಹವೆಲ್ಲಿ ? ನನಗೆ ಅನ್ನವಸ್ತ್ರಗಳನ್ನುಕೊಟ್ಟು ಪೋಷಿಸುವ ಪ್ರಭುವಿನ ಆಜ್ಞೆಯಾದರೂ ನಾನೀ ಅಧರ್ಮಕಾರ್ಯವನ್ನು ಆಚರಿಸಲು ಒಪ್ಪುವುದಿಲ್ಲ. ಇದೇ ದಿನವಲ್ಲಿ ನನ್ನನ್ನೀ ಆಸ್ಥಾನದಿಂದ ಬಹಿಷ್ಕರಿಸಿದರೂ ಶಿರಚ್ಛೇದವಾದರೂ ಸಂತೋಷವೇ ಸರಿ." ಎಂಬ ಆತನ ಪವಿತ್ರ ಭಾವವನ್ನೂ ಚಿತ್ತಸ್ಥೈರ್ಯವನ್ನೂ ತಿಳಿದು ಅಲ್ಲಿಗೆ ವಿರಮಿಸುವುದು ಯೋಗ್ಯವಾಗಿ ಕಂಡರೂ ವೀರವರ್ಮನ ಪುತ್ರಿಕೆಯಲ್ಲಿ ತನಗಿರುವ ಪ್ರೇಮಾತಿಶಯದಿಂದ ಮತ್ತೊಂದು ಧರ್ಮಯುಕ್ತಿಯನ್ನು ಕಂಡು ಹಿಡಿದನು. ರಾಜನು ಚಂದ್ರಗುಪ್ತನೊಡನೆ "ಪಂಡಿತಾಗ್ರಗಣ್ಯಾ! ನೀವು ಅಧರ್ಮಾಚರಣೆಗೆ ಒಳಗಾಗದಂತೆ ನನ್ನ ಮನೋರಥವನ್ನು ಪೂರ್ತಿಗೊಳಿಸುವಂತಹ ಧರ್ಮ ಯುಕ್ತಿಯುಂಟು. ಅದನ್ನಾಚರಿಸಿದರೆ ಯಾವುದಕ್ಕೂ ಕೊರತೆಬರುವುದಿಲ್ಲ, ಬ್ರಾಹ್ಮಣನಾದವನು ಮೊದಲು ಬ್ರಾಹ್ಮಣ ಕನ್ಯೆಯನ್ನು ವಿವಾಹಮಾಡಿಕೊಂಡು ಆ ಮೇಲೆ ಕ್ಷತ್ರಿಯ ವೈಶ್ಯ ಶೂದ್ರ ಕನ್ಯೆಯರನ್ನು ಲಗ್ನವಾಗಬಹುದೆಂದು ಧರ್ಮಶಾಸ್ತ್ರಗಳು ಹೇಳುತ್ತಿರುವುವು. ( ಜಾತಿಜಾಂ ಪ್ರಥಮಂ ವೃತ್ವಾ। ತತೋವಿಟ್ ಕ್ಷತ್ರಶೂದ್ರಜಾ– ಪಾಣಿಪೀಡನಮಾಕಾರ್ಯಂ ವಿಪ್ರಾಣಾಮಸ್ತಿ ಸಾಧನವತ್।) ಆದುದರಿಂದ ನಮ್ಮ ಪುರೋಹಿತ ವಿಷ್ಣುಶರ್ಮನ ಮಗಳನ್ನು ಪ್ರಥಮಭಾರ್ಯಳನ್ನಾಗಿ ಪರಿಗ್ರಹಿಸಿ ನನ್ನ ಸುಪುತ್ರಿಯಾದ ರಾಗಮಂಜರಿಯನ್ನು ದ್ವಿತೀಯಳನ್ನಾಗಿಯೂ ಕೋಶಾಧ್ಯಕ್ಷ ಧನಗುಪ್ತನ ಪುತ್ರಿಕೆಯಾದ ಸುಮತಿಯನ್ನು ತೃತೀಯಳನ್ನಾಗಿಯೂ ವಿವಾಹಮಾಡಿಕೊಂಡು ಅನಂತರ ಮದನ ರೇಖೆಯ ಪಾಣಿಗ್ರಹಣ ಮಾಡುವುದು ಯೋಗ್ಯದಾಗಿರುವುದು. ಇದರಿಂದ ನಿಮ್ಮ ಧರ್ಮ ರಕ್ಷಣೆಯೂ ನನ್ನ ಆಶಾಪೂರ್ತಿತೆಯೂ ಸಂಭವಿಸುವುವು. ನನ್ನ ಅಳಿಯನಾದ ನಿಮಗೆ ಬಹುಕುಟುಂಬತ್ವದಿಂದ ಸಾಂಸಾರಿಕ ಕಷ್ಟವಾದರೂ ಸಂಭವಿಸಲವಕಾಶವಿಲ್ಲ" ವೆಂಬ ರಾಜನ ವಾಕ್ಯಗಳು ಧರ್ಮವಿರುದ್ಧವಾಗದಿರುವುದರಿಂದ ಚಂದ್ರಗುಪ್ತನು ವಿವಾಹಚತುಷ್ಟಯವನ್ನು ಮಾಡಿಕೊಳ್ಳಲೇ ಬೇಕಾಯಿತು.

ಕೆಲವು ದಿನಗಳಾದನಂತರ ಚಂದ್ರಗುಪ್ತ ಪಂಡಿತನ ನಾಲ್ವರು ಸತಿಯರು ಗರ್ಭವತಿಯರಾಗಿ ಪುರೋಹಿತ ಪುತ್ರಿಯಾದ ಶೀಲವತಿಗೆ ಮಹಾವ್ಯಾಕರಣ ಪಂಡಿತನೆನಿಸಿದ ವರರುಚಿಯು ಜನಿಸಿದನು. ರಾಜಕುವರಿಯಾದ ರಾಗಮಂಜರಿಯು ಶಕಪುರುಷನಾದ ವಿಕ್ರಮಾದಿತ್ಯನನ್ನು ಪಡೆದಳು. ಸುಮತಿಯು ಬುದ್ಧಿಶಾಲಿ ಮಂತ್ರಿಸತ್ತಮನೆನಿಸಿದ ಭಟ್ಟಿಯನ್ನು ಪಡೆದು ಮಾನ್ಯಳಾದಳು. ಮದನ ರೇಖೆಗೆ ನಮ್ಮ ಕಥಾನಾಯಕನಾದ ಭರ್ತೃಹರಿಯುದ್ಭವಿಸಿ ರಸಿಕಕವಿಶಿಖಾಮಣಿಯಾಗಿ ಸುಭಾಷಿತಾಮೃತದಿಂದ ಪಂಡಿತ ಪಾಮರರನ್ನು ಆನಂದಸಾಗರದಲ್ಲಿ ಮುಳಿಗಿಸುತ್ತಿದ್ದನು:—

ಭರ್ತೃಹರಿಯು ಭಾನುಮತಿಯೆಂಬ ಕನ್ಯೆಯ ಪಾಣಿಗ್ರಹಣವನ್ನು ಮಾಡಿದನು ಆಕೆಯು ರೂಪಲಾವಣ್ಯಾದಿಗಳಿಂದಲೂ ಗುಣಸಂಪತ್ತಿನಿಂದಲೂ ಕುಲಶೀಲಗಳಿಂದಲೂ ಅದ್ವಿತೀಯಳೆನಿಸಿ ಭರ್ತೃಹರಿಯ ಹೃದಯಹಾರಿಣಿಯಾಗಿದ್ದಳು. ಭರ್ತೃಹರಿಯು ಅಗ್ರಜನಾದ ವಿಕ್ರಮಾದಿತ್ಯನ ರಾಜ್ಯದಲ್ಲಿ ಸೇನಾಪತಿಯಾಗಿ ಬಾಹುಬಲದಿಂದ ಶತ್ರುಗಳನ್ನು ಗೆದ್ದು ಸೋದರನಿಗೆ ಸಹಾಯಕನಾಗಿದ್ದನು. ಒಂದುದಿನ ಭಾನುಮತೀ ಭರ್ತೃಹರಿ

ಗಳು ತಮ್ಮ ಸೌಧಾಗ್ರಭಾಗವಲ್ಲಿ ಕುಳಿತು ಸರಸ ಸಲ್ಲಾಪಗಳ ನ್ನಾಡುತ್ತ ಸುಖಾಸೀನರಾಗಿದ್ದರು. ಅದು ಪ್ರಾತಃಕಾಲವು. ಮಲ್ಲಿಕಾವನದಿಂದ ಮಂದಮಾರುತವು ಸೌರಭವನ್ನು ಚಲ್ಲು ತ್ತಿತ್ತು. ಚಂದ್ರನು ಶತ್ರುಪರಾಜಿತನಂತೆ ಕಾಂತಿಹೀನನಾಗಿ ಅಸ್ತಾದ್ರಿಯನ್ನು ಪ್ರವೇಶಿಸಿದನು. ಆಗ ಆ ದಂಪತಿಗಳಿಗೆ ಬೀದಿ ಯಲ್ಲಿ ದುಃಖಿಸುತ್ತ ಅಮಂಗಲವಾದ್ಯದೊಡನೆ ಒಂದು ಶವ ವನ್ನು ಹೊತ್ತುಕೊಂಡು ಹೋಗುವ ಜನ ಸಮೂಹವು ಕಾಣಿ ಸಿತು. ಅದರ ಹಿಂದೆ ಅರಿಶಣ ಬಣ್ಣದ ಶೀರೆಯನ್ನುಟ್ಟು ಚಂದ ನಾದಿಗಳಿಂದಲಂಕೃತಳಾಗಿ ಭೋರೆಂದು ಅಳುತ್ತಲಿರುವ ಕುಲೀ ನಾಂಗನೆಯನ್ನು ನೋಡಿ ಇದು ತನಗೆ ಅದೃಷ್ಟಪೂರ್ವವಾಗಿ ರುವುದರಿಂದ ಭಾನುಮತಿಯು ಆಶ್ಚರ್ಯಚಕಿತಳಾಗಿ ಪ್ರಿಯ ಪತಿಯಾದ ಭರ್ತೃಹರಿಯನ್ನು ಕುರಿತು ಇದೇನೆಂದು ಕೇಳಿ ದಳು, "ಮನೋಹರೀ! ಇದು ನಿನಗೆ ಗೊತ್ತಿಲ್ಲವೋ ? ನಿಜ- ಪತಿ ಮೃತಪಟ್ಟರೆ ಭಾರ್ಯೆಳು ಭರ್ತೃ ಸಹಗಮನವನ್ನು ಮಾಡುವುದಕ್ಕಾಗಿ ಹೋಗುತ್ತಿರುವಳು. ಈ ದುಃಖಜನಕ ವಿಷ ಯವನ್ನು ನೋಡುವುದಕ್ಕಾಗಿಯೇ ಬಂಧುಜನಸಮೂಹವು ಹಿಂಬಾಲಿಸುವುದು " ಎಂನು ಭರ್ತೃಹರಿ ಹೇಳಿದನು. 'ಏನು? ಪತಿ ಮೃತನಾದರೆ ಸಹಗಮನಕ್ಕಾಗಿ ಹಿಂದೆ ಹೋಗಬೇಕೋ? ಎಂದು ಭಾನುಮತಿಯು ವಿಸ್ಮಯಾಂತರ್ಗತ ವಾಕ್ಯವನ್ನಂದಳು. ಅದನ್ನು ಕೇಳಿ ಹೋಗಬೇಕಿಲ್ಲದೇನೆಂದು ಭರ್ತೃಹರಿಯು ನುಡಿದು ಸುಮ್ಮನಿದ್ದನು. ಇಷ್ಟರಲ್ಲಿ ಭಾನುಮತಿಯು ಗೃಹ ಕೃತ್ಯ ನಿರ್ವಹಣಕ್ಕಾಗಿ ಪ್ರಾಸಾದವನ್ನಿಳಿದು ಹೋದಳು. ಭರ್ತೃಹರಿಯು ಮನಸ್ಸು ವಿಚಾರಸಾಗರವಾಯಿತು. ಸಂಶಯ ತರಂಗಗಳಿಂದ ಹೆಚ್ಚಾಗಿ ಕ್ಷೋಭೆಯುಂಟಾಯಿತು. ಪ್ರಶಾಂ ತವಾದ ಆತನ ಮನಸ್ಸು ಕ್ರೋಧಮಾತ್ಸರ್ಯಗಳಿಗೆ ರಣರಂ ಗವಾಯಿತು. ಪುನಃಪುನವಾಗಿ ವಿಚಾರ ನಿಶ್ವಾಸಗಳು ಭೋ ರ್ಗರೆಯುತ್ತಿದ್ದುವು. ಕಣ್ಣು ಕೆಂಪಗೆ ಮಾಡಿ ದಂತಗಳನ್ನು ಕಡಿಯಹತ್ತಿದನು. ಇಷ್ಟೇಕೆ ? ಹುಚ್ಚನಂತೆ ಭ್ರಾಂತಿಗ್ರಸ್ತನಾ ದನು! ಸ್ವಲ್ಪ ಹೊತ್ತಿನ ಮೇಲೆ ಧೈರ್ಯವನ್ನು ತಂದುಕೊಂಡು ಮನಸ್ಸಿನಲ್ಲೀ ಪ್ರಕಾರವಾಗಿ ಯೋಚಿಸಿದನು. "ಭಾನುಮ- ತಿಯು ಪತಿವ್ರತೆಯೆಂದು ನಾನು ತಿಳಿದಿದ್ದೆನು. ಈಗ ಹೊರಪ ಡಿಸಿದ ವಾಕ್ಯದಿಂದ ಸಾಧ್ವಿಯಲ್ಲವೆಂದು ಗ್ರಹಿಸಲ್ಪಟ್ಟಿತು. ಪತಿ ಮೃತರಾದರೆ ಸತಿಯು ಸಹಗಮನವಮಾಡುವುದಕ್ಕಾಗಿ ಹೋಗಬೇಕೋ ? ಎಂದಲ್ಲವೆ ಕೇಳಿದ್ದು ? ಉತ್ತಮಜಾತಿ- ನಾರೀ ಲಕ್ಷಣಗಳೀಕೆಗೆ ಪರಿಚಯವಿಲ್ಲ. ಸತ್ಕುಲಜನಿತಳೂ ಲೋಕಜ್ಞಾನವುಳ್ಳವಳೂ ತಕ್ಕಮಟ್ಟಿಗೆ ವಿದ್ಯಾವತಿಯೂ ಆಗಿ ರುವಳೆಂಬುದು ನಿಜ. ಆದರೇನು ? ನನ್ನ ಮುಂದೆಯೇ ಈ ಪ್ರಕಾರವಾಗಿ ಮಾತನಾಡಿದ ಮೇಲೆ ಈಕೆ ಯಾವ ಕಾರ್ಯ ದಲ್ಲಾದರೂ ಸಾಹಸದಿಂದ ಕೈಹಾಕಬಹುದು. ನಿರ್ಭಯ ದಿಂದ ಸಹಗಮನಕ್ಕಾಗಿ ಹೋಗಬೇಕೋ ? ಎಂದು ಉತ್ತರ ಕೊಟ್ಟವಳು ನನ್ನ ಅನಂತರದಲ್ಲಿ ಸಹಗಮನನಾಡುವಳೆಂದು ನಂಬಿಗೆ ಏನು ? ಮಾಡಲಿ ! ಮಾಡದಿರಲಿ !! ನಾನೇನು ನೋಡ ಬಲ್ಲೆನೋ ? ಈಗಲೆ ಈಕೆಯ ಮನವನ್ನು ಪರೀಕ್ಷಿಸುತ್ತೇನೆ. ನಿಜಸ್ಥಿತಿಯು ತಾನೇ ಹೊರಬೀಳುವುದು. " ಎಂದು ನಿಶ್ಚೈಸಿ ಕೊಂಡು ಆ ಹೊತ್ತು ಸ್ನಾನಪಾನಾದಿಗಳನ್ನು ತ್ಯಜಿಸಿ ಚಿಂತಾಗ್ರ ಸ್ತನಾಗಿ ಮಾತಾಡದಿರುವುದರಿಂದ ಭಾನುಮತಿಯು ಪತಿಯ ಅಸ್ವಸ್ಥತೆಗೆ ಭಯಪಟ್ಟು ಭರ್ತೃಹರಿಯ ಸನ್ನಿಧಿಯನ್ನು ಸೇರಿ "ಪ್ರಿಯ ವಲ್ಲಭಾ! ನಿಮ್ಮ ಚಿತ್ತವು ಹೀಗೇಕೆ ಪರಾಯತ್ತವಾಗಿ ರುವುದು ? ಇದನ್ನರಿಯಲು ನಾನು ಶಕ್ತಳಲ್ಲ. ಅಗ್ರಜನಾದ ವಿಕ್ರಮಾರ್ಕ ಮಹಾರಾಜನಿಂದ ಅಕಾರ್ಯದಲ್ಲೇನಾದರೂ ನಿಯೋಗಿಸಲ್ಪಟ್ಟಿರೋ ? ನಿಮ್ಮ ಬಂಧುಗಳಿಗೇನಾದರೂ ವಿಪ ತ್ತು ಸಂಭವಿಸಿರುವುದೋ? ಇಲ್ಲವಾಸರೆ ತಮ್ಮ ದೇಹದಲ್ಲಿ ಅನಾ ರೋಗ್ಯವಾಗಿರುವುದೋ ? ಈ ದಾಸಿಯಿಂದಾಗಲಿ ಅಥವಾ ಸೇವಕರಿಂದಾಗಲಿ ಅಪರಾಧವಾಗಿದ್ದರೆ ಕ್ಷಮಿಸಿ ಸರ್ವ ವಿಷ ಯಗಳನ್ನು ಸಾವಧಾನದಿಂದ ತಿಳಿಸಿ ನನ್ನ ಚಿಂತೆಯನ್ನು ದೂರ ಮಾಡಿರಿ" ಎಂದು ಭಕ್ತಿಪುರಸ್ಸರವಾಗಿ ಕೇಳಲು ಭರ್ತೃಹರಿಯು " ಮಹಾರಾಜರಿಂದ ಅಯೋಗ್ಯವಾದ ಅಪ್ಪಣೆಯಾಗಿಲ್ಲವು. ಬಂಧುಗಳಿಗೆ ವಿಪತ್ತೂ ಇಲ್ಲ. ನನ್ನ ವಿಚಾರದ ಕಾರಣವನ್ನು ಇತರರಿಗೆ ತಿಳಿಸಲು ಇಷ್ಟವಿಲ್ಲ. ಕಾಲಕ್ರಮದಿಂದ ಇದು ತಾನೇ ನಿನಗೆ ವಿದಿತವಾಗುವುದು " ಎಂದು ಹೇಳಿ ತತ್ಕ್ಷಣದಲ್ಲಿಯೇ ಬೇಟೆಗೆ ಹೋಗಲು ಸಿದ್ಧರಾಗಿರೆಂದು ಸೇವಕರಿಗೆ ತಿಳಿಸಿ ವಸ್ತ್ರಾ ಲಂಕೃತನಾಗಿ ಆಯುಧಗಳಂ ಗ್ರಹಿಸಿ ಎಂದಿನಂತೆ ಭಾನುಮ ತಿಗೆ ಮೃಗಯಾಗಮನವನ್ನು ಹೇಳದೆ ಅಶ್ವವನ್ನಾರೋಹಿಸಿ ಪರಿಜನರೊಂನೆ ಹೊರಟುಹೋದನು. ಪೂರ್ವದಲ್ಲಿ ಅಪ ರಿಮಿತವಾದ ಅನುರಾಗವುಳ್ಳ ಪ್ರಾಣವಲ್ಲಭನು ತನ್ನನ್ನು ಮಾ ತಾಡಿಸದೆ ಅನಾದರಣೆಯಿಂದ ಹೋದುದಕ್ಕಾಗಿ ಭಾನುಮತಿಗೆ ಬಹಳ ಸಂಕಟವೆನಿಸಿತು. ಬೇಟೆಗೆ ಹೋದ ಪ್ರಿಯ ಪತಿಯ ಮೂರ್ತಿಯನ್ನು ಸ್ಮರಿಸುತ್ತ ಶಯನಾಗಾರದಲ್ಲಿ ಪ್ರವೇಶಿಸಿ ತನ್ನ ಅವಸ್ಥೆಯನ್ನು ಕುರಿತು ವಿಷಾದಪಟ್ಟಳು. ಆ ಚಿಂತೆಯಲ್ಲಿ ನಾಲ್ಕು ದಿನಗಳನ್ನು ಕಳೆದರೂ ಪತಿಯ ಆಗಮನವೇ ಇಲ್ಲ. ಐದನೆಯ ದಿವಸದಲ್ಲಿ ಭಾನುಮತಿಯು ಶುದ್ಧಾಂತಃಕರಣದಿಂದ ಸ್ನಾನವಂ ಗೈದು ನಿರಂತರದಲ್ಲಿ ತನ್ನ ಇಷ್ಟಾರ್ಥಗಳನ್ನು

ಪೂರೈಸುತ್ತಿದ್ದ ಜಗಜ್ಜನನಿಯಾದ ಪಾರ್ವತೀ ದೇವಿಯನ್ನು ಪೂಜಿಸಿ "ದೇವೀ ! ಮನೋವಾಕ್ಕಾಯಕರ್ಮಗಳಿಂದಲೂ ನನ್ನ ಪತಿಯ ವಿಷಯದಲ್ಲಿ ಅಪರಾಧವನ್ನು ಮಾಡಿರುವದಿಲ್ಲ. ಅವರ ಆಜ್ಞಾಪಾಲನೆಯಲ್ಲಿಯೇ ನಿರತಳಾಗಿ ನನ್ನ ಭಾಗ್ಯರಾಶಿಯೆಂದು ಪೂಜಿಸುತ್ತಿದ್ದೆನು. ಹೀಗಿದ್ದರೂ ನಾಲ್ಕು ದಿನಗಳ ಹಿಂದೆ ಹೇತುವಿಲ್ಲದಲೇ ನನ್ನ ಮನೋನಾಥನು ನನ್ನಲ್ಲಿ ಅಪ್ರೀತಿಯನ್ನು ಪ್ರಕಟಿಸಿರುವುದರಿಂದ ಅಪರಾಧವೇನಾದರೂ ಮಾಡಲ್ಪಟ್ಟಿರುವುದೆಂದು ನನ್ನ ಚರಿತ್ರೆಯನ್ನೆಷ್ಟು ವಿಧವಾಗಿ ಪರಿಶೋಧಿಸಿದರೂ ಗೋಚರಿಸಲಿಲ್ಲ. ತಪ್ಪಿಲ್ಲವೆನ್ನುವುದೇ ನನ್ನ ದೃಢನಂಬಿಗೆಯು; ಆದರೆ ನನ್ನ ಮನಸ್ಸಿನಲ್ಲಿ ಮಾತ್ರ ಒಂದು ಸಂದೇಹವು ಬಾಧಿಸುತ್ತಿರುವುದು,ನ್ನಿ ವೊನ್ನಿನ ದಿನದಲ್ಲಿ ಪತಿಮರಣಾನಂತರ ಸಹಗಮನಕ್ಕಾಗಿ ಶವದೊಡನೆ ಹೋಗುತ್ತಲಿರುವ ಕಾಂತೆಯನ್ನು ನೋಡಿ "ಪ್ರತಿವ್ರತೆಯು ಸಹಗಮನಕ್ಕಾಗಿ ಭರ್ತೃ ಶವದೊಡನೆ ಹೋಗಬೇಕೇ"ನೆಂದೆನು. ಇದನ್ನು ಕೇಳಿದಾಗಳಿಂದಲೇ ನನ್ನ ಪತಿಯು ವಿಚಾರಗ್ರಸ್ತನಾಗಿರುವನು. ಈ ವಾಕ್ಯದಿಂದ ಅವರ ಮನಸ್ಸಿನಲ್ಲಿ ನಾನು ಪತಿವ್ರತೆಯಲ್ಲವೆಂದು ಅನುಮಾನವು ಜನಿಸಿರಬಹುದು. ಈ ಅನುಮಾನವು ಅವರು ಬೇಟೆಗೆ ಹೋಗುವುದಕ್ಕಿಂತ ಮುಂಚೆಯೇ ನನ್ನ ಹೃದಯಕ್ಕೆ ಸ್ಫುರಣವಾಗಿದ್ದರೆ ಅವರನ್ನು ಸಮಾಧಾನ ಗೊಳಿಸುತ್ತಿದ್ದೆನು. ಈಗ ಅವರು ದೂರದಲ್ಲಿರುವರು. ದೇವೀ ! ನಿನ್ನ ಸನ್ನಿಧಿಯಲ್ಲಿಯೇ ನಿಜಾಭಿಪ್ರಾಯವನ್ನು ಹೇಳುವೆನು."ಪತಿವ್ರತೆಯಾದವಳು ಭರ್ತೃ ಮರಣವಾರ್ತೆಯನ್ನು ಕೇಳಿದಕೂಡಲೇ ಪ್ರಾಣಗಳನ್ನು ಬಿಡಬೇಕೇ ಹೊರತು ಸಹಗಮನಕ್ಕಾಗಿ ನಗರವಾಸಿಗಳಿಗೆ ಮುಖವನ್ನು ತೋರಿಸುತ್ತ ಶವದೊಡನೆ ಹೋಗಬೇಕೇ"ನೆಂಬ ಅಭಿಪ್ರಾಯದಿಂದಲೇ ನಾನು ಹಾಗೆ ಮಾತನಾಡಿದನೇ ಅಲ್ಲದೆ, ಬೇರೊಂದು ರೀತಿಯಿಂದಲ್ಲ. ಸರ್ವಾಂತರ್ಯಾಮಿಯಾದ ನೀನು ನನ್ನ ಹೃದ್ಗತಾಭಿಪ್ರಾಯವನ್ನು ಗ್ರಹಿಸದೇ ಇರುವುದಿಲ್ಲ. ಜಗಜ್ಜನನೀ ! ನನ್ನ ವಲ್ಲಭನ ಸಂದೇಹಗಳನ್ನು ನಿವಾರಿಸಲು ನೀನಲ್ಲದೆ ನನಗೆ ಶರಣ್ಯವಾವುದು. ಮತ್ತು ನಿರಪಾಯದಿಂದ ಜೀವಿತೇಶ್ವರನು ಗೃಹವನ್ನು ತಲುಪುವ ಹಾಗೆ ಕಟಾಕ್ಷಿಸು." ಎಂದು ಪ್ರಾರ್ಥಿಸಿ ಪೂಜಾಗೃಹವನ್ನು ಬಿಟ್ಟು ಹೊರಗೆ ಬಂದಳು. ಅಷ್ಟರಲ್ಲಿಯೇ ವಿಜಯನೆಂಬ ತಮ್ಮ ಸೇವಕನು ಖಿನ್ನವಾದ ಮುಖದೊಡನೆ ಗೃಹದೊಳಗೆ ಬಂದನು. ಅವನನ್ನು ನೋಡಿ ಭಾನುಮತಿಯು ವಿಜಯಾ ! ನನ್ನ ವಲ್ಲಭರು ಕುಶಲರಾಗಿಹರೋ? ಯಾಕೆ ದುಃಖಿಸುವಿ ? ತೀವ್ರವಾಗಿ ಹೇಳೆಂದು ಗಟ್ಟಿಯಾಗಿ ಕೇಳಿದಳು. ವಿಜಯನು ಬಹಳ ಹೊತ್ತಿನವರೆಗೆ ಸುಮ್ಮನೆ ನಿಂತು"ತಾಯಿಯೇ ಏನು ಹೇಳಲಿ, ಕ್ರೂರಮೃಗದ ಕೈಯಲ್ಲಿ ಸಿಕ್ಕು ಗಾಯಗಳಾದರೂ ತಮ್ಮ ಪರಾಕ್ರಮವನ್ನೆಲ್ಲ ತೋರಿಸಿ ನಿರ್ಭಯದಿಂದ ಮುಷ್ಟಿ ಯುದ್ಧವನ್ನು ಮಾಡಿದರಾಗಲಿ ಫಲಕಾರಿಯಾಗಲಿಲ್ಲ. ಮೃಗಕ್ಕೇನೇ ಜಯವಾಯಿತು. ಪ್ರಭುಗಳ ಶರೀರದಿಂದ ರಕ್ತವು ಪ್ರವಹಿಸುತ್ತಿತ್ತು. ನಾವು ಅವರಿಗೆ ಮೂರ್ಛೆಯಾಗಿರಬಹುದೆಂದು ಸಮೀಪಕ್ಕೆ ಹೋಗಿ ನೋಡಿದೆವು. ತಾಯೀ! ಏನಿದೆ? ಅವರೀಲೋಕದಲ್ಲಿಯೇ ಇಲ್ಲ ! " ಎಂದು ಹೇಳುತ್ತಿರುವಾಗಲೇ ಭಾನುಮತಿಯು ಚಿಟ್ಟನೆ ಚೀರಿ ಭೂಮಿಯಲ್ಲಿ ಬಿದ್ದಳು ಹಾ ದೇವೀ! ಮಹಾಕಷ್ಟವು ಸಂಭವಿಸಿತೆಂದು ದಾಸಿಯರು ಬಹಳವಾಗಿ ಉಪಚರಿಸಿದರಾಗಲಿ ಭಾನುಮತಿಗೆ ಮೂರ್ಛೆಯೇ ತಿರುಗಲಿಲ್ಲ. ದಾಸಿಯರು ದುಃಖಿಸಿದರು. ವಿಜಯನು ಎದೆಯನ್ನು ಬಡೆದುಕೊಳ್ಳುತ್ತ ಶಿವಶಿವಾ ! ನಾನು ಎಂತಹ ಪಾಪಿಯೂ ದುಷ್ಟನೂ ಆದೆನು. ಅಸತ್ಯ ಮರಣ ವಾರ್ತೆಯನ್ನು ಮಹಾಪತಿವ್ರತೆಗೆ ಹೇಳಿ, ಆ ಮಹಾಸಾಧ್ವಿಯ ಪ್ರಾಣಗಳನ್ನು ತಿಂದೆನು. ಶತ ಗೋದಾನ ವ್ರತವಾಚರಿಸಿದರೂ ನನ್ನ ಈ ಪಾಪವು ದೂರವಾಗುವ ಹಾಗಿಲ್ಲ. ದುರಾತ್ಮನಾದ ನಾನಿಲ್ಲಿರಲು ಯೋಗ್ಯನಲ್ಲ " ವೆಂದು ದುಃಖಿಸುತ್ತ ವಿಜಯನು ಪುನಃ ಅಡವಿಯ ಮಾರ್ಗವನ್ನು ಹಿಡಿದನು.

ವಿಜಯನು ಸಾಧ್ಯವಾದ ಮಟ್ಟಿಗೆ ಬಹು ವೇಗದಿಂದ ಬೇಟೆಯ ಸ್ಥಳದಲ್ಲಿದ್ದ ಭರ್ತೃಹರಿಯ ಸನ್ನಿಧಿಯನ್ನು ಸೇರಿ ದುಃಖದಿಂದ ನಿಂತನು "ವಿಜಯಾ! ಏನಾಗಿದೆ ? ನಿನ್ನ ಮುಖವಿಷ್ಟೇಕೆ ಖಿನ್ನವಾಗಿರುವುದು ? " ಎಂದು ಭರ್ತೃಹರಿಯು ಕೇಳಲಾಗಿ ವಿಜಯನು ಅಳುತ್ತ"ಸ್ವಾಮೀ! ನಾನು ಕಡುಪಾಪಿಯಾದೆನು ನನ್ನ ಈ ಕೃತಿಗೆ ನರಕವಲ್ಲದೆ ಮತ್ತಾವ ಪ್ರಾಯಶ್ಚಿತ್ತವೂ ಇಲ್ಲ. ಅಸತ್ಯವಾದ ಮರಣವಾರ್ತೆಯನ್ನು ದೇವಿಯರಿಗೆ ತಿಳಿಸಿದುದಕ್ಕೆ ನಿಜವಾದ ಮರಣವಾರ್ತೆಯನ್ನೇ ತಮಗೆ ತಿಳಿಸ ಬೇಕಾಯಿತು. ಈ ಪ್ರಕಾರವಾದ ಭಾರ್ಯಾಗುಣ ಪರೀಕ್ಷೆಯು ನಿಮಗೇ ಯೋಗ್ಯವು. ಆ ಸಾಧ್ವಿಯು ಈ ವಾರ್ತೆಯನ್ನು ಕೇಳಿದಕ್ಷಣದಲ್ಲಿಯೇ ಭೂಮಿಯ ಮೇಲೆ ಎಚ್ಚರವಿಲ್ಲ ಬಿದ್ದಳು. ದಾಸಿಯರೆಷ್ಟು ಉಪಚರಿಸಿದರೂ ಜೀವವು ತಿರುಗಲಿಲ್ಲವು. ಈ ದಾರುಣಕೃತ್ಯವನ್ನಾಚರಿಸಿದ ನಾನು ಮಾತ್ರ ಪ್ರಾಣವನ್ನು ಬಿಡದೆ ಜೀವಚ್ಛವದಂತೆ ಬಂದಿರುವೆನು." ಇದನ್ನು ಕೇಳುತ್ತಲೇ ಭರ್ತೃಹರಿಯು "ವಿಜಯಾ ! ಏನೇನು? ದೇವಿ ಪ್ರಾಣವನ್ನು ಬಿಟ್ಟಳೋ? ಇಲ್ಲ ! ಈ ಕಠೋರವಾರ್ತೆಯನ್ನು ಕೇಳಿದೊಡನೆಯೇ ಶೋಕಭಾರದಿಂದ ಮೂರ್ಛಿತ

ಳಾಗಿರ ಬಹುದು. ಪ್ರಯಾಣಕ್ಕೆ ಸಿದ್ಧರಾಗಿ ಕುದುರೆಯನ್ನು
ತೆಗೆದುಕೊಂಡು ಬನ್ನಿರಿ” ಎಂದು ಹೇಳಿ ತನ್ನ ಮನಸ್ಸಿನಲ್ಲಿ
“ಶಿವಶಿವಾ ! ಏನಿದು ? ಉಂಡುಟ್ಟು ಮಾಡಿದ ಕ್ರೂರತನವು?
ಬಹುಶಃ ನನ್ನ ಪ್ರಿಯಳಿಗೆ ಮೂರ್ಛೆಯಾಗಿರಬಹುದು. ಮೂ
ರ್ಛೆಯಲ್ಲದೆ ಮರಣವೇ ಆದರೆ ನಾನು ಲೋಕನಿಂದಾ ಸಮು
ದ್ರದಲ್ಲಿ ನಿಮಗ್ನನಾಗಬೇಕಾದುದಲ್ಲದೆ ನನ್ನ ಪ್ರಿಯಳ ವಿಯೋ
ಗ್ನಿಯಿಂದ ದಹಿಸಬೇಕಾಗುವುದು, ಪರಮೇಶ್ವರಾ ? ಜೀವರ
ಕ್ಷಕಾ ! ನೀನಲ್ಲದೆ ಮತ್ತಾರು ನನ್ನನ್ನೀ ವಿಪದಂಬುಧಿಯಿಂದ
ದಾಂಟಿಸುವವರು ? ” ಎಂದು ಚಿಂತಿಸುತ್ತಿರುವಷ್ಟರಲ್ಲಿಯೇ
ಸೇವಕನು ಕುದುರೆಯನ್ನು ಸಿದ್ಧಗೊಳಿಸಿ ತಂದನು. ಅದನ್ನು
ಹತ್ತಿ ನಾನು ಮುಂದೆ ಹೋಗುವೆನು. ನೀವು ಹಿಂದೆ ಬನ್ನಿರೆಂದು
ಹೇಳುತ್ತಲೇ ಭರ್ತೃಹರಿ ಮಹಾವೇಗದಿಂದ ಕುದುರೆಯನ್ನು
ನಡೆಯಿಸಿ ಗಂಟೆಯೊಳಗಾಗಿಯೇ ಸ್ವನಗರಸಮೀಪವನ್ನು
ಸೇರಿದನು. ಅಲ್ಲಿಯೇ ಶ್ಮಶಾನ ಭೂಮಿಯಿತ್ತು, ಸಾವಿರಗಟ್ಟಲೆ
ಜನರು ಗುಂಪಾಗಿ ಕೂಡಿದ್ದರು, ಇನ್ನು ಕೆಲವರು ಬರುತ್ತ
ಲಿದ್ದರು. ಅವರಲ್ಲಿ ಒಬ್ಬನನ್ನು ನೋಡಿ ಭರ್ತೃಹರಿಯು
ಇದೇನೆಂದು ಕೇಳಿದನು. ಅವನು ಇವರು ಭರ್ತೃಹರಿ ಎಂಬುವ
ದನ್ನು ತಿಳಿಯದೆ, “ಸ್ವಾಮೀ ! ಭರ್ತೃಹರಿಯು ಬೇಟೆಗಾಗಿ
ಹೋಗಿ ಅಡವಿಯಲ್ಲಿ ವ್ಯಾಘ್ರ ಪೀಡಿತನಾಗಿ ಪರಲೋಕವಾಸಿ
ಯಾದನಂತೆ. ಆ ವಾರ್ತೆಯನ್ನು ಕೇಳಿ ಅವರ ಪತ್ನಿಯು ಮೃತ
ಪಟ್ಟಳು. ಆಕೆಯನ್ನು ದಹನಮಾಡುವುದಕ್ಕಾಗಿ ಬಂಧುಗಳೆ
ಲ್ಲರು ಬಂದಿರುವರು ” ಎಂದನು. ಭರ್ತೃಹರಿಯು ಕುದುರೆ
ಯಿಂದ ಬಿದ್ದನು ಕೆಲಜನಗಳು ಇವರೇ ಭರ್ತೃಹರಿಯೆಂದು
ಕೂಗಿದರು. ಮೂರ್ಛಿತನಾದ ಭರ್ತೃಹರಿಯನ್ನು ಶ್ಮಶಾನಕ್ಕೆ
ಒಯ್ದು ಬಹಳವಾಗಿ ಉಪಚರಿಸಿದ ಮೇಲೆ ಎಚ್ಚರಿಕೆಯಾ
ಯಿತು. ಪ್ರಿಯ ಪತ್ನಿಯ ಶವವನ್ನು ನೋಡಿ ಜಲಪೂರಿತ
ನಯನಗಳಿಂದ, ಪ್ರಿಯಕಾಂತೇ ! ನಾನು ನಿನ್ನಪಾಲಿಗೆ ಪತಿ
ಯಲ್ಲ. ಯಮನೇ ಸರಿ. ನಿನ್ನ ವಾಕ್ಯಗಳ ಅಭಿಪ್ರಾಯ
ವನ್ನು ತಿಳಿಯದೆ ಅಸತ್ಯ ಮರಣ ವಾರ್ತಾ ಶೂಲದಿಂದ ನಿನ್ನನ್ನು
ಕೊಂದೆನು. “ ಭರ್ತೃಮರಣ ವಾರ್ತೆ ಕೇಳಿದನಂತರ ಸಹಗ
ಮನಕ್ಕಾಗಿ ಹಿಂದೆ ಹೋಗಬೇಕೋ ” ಅನ್ನುವ ಮಾತನ್ನು
ಸಾರ್ಥಕಗೊಳಿಸಿದಿ. ನೀನು ಕೇಳಿದಲ್ಲಿಯೇ ಪ್ರಾಣವನ್ನು
ಬಿಟ್ಟಿಯೇ ಹೊರತು ಸಹಗಮನಕ್ಕಾಗಿ ಹೋಗಲಿಲ್ಲ.
ನಿಜವು ! ನಿಜವು !! ಆಹಾ ! ಏನೀಉನ್ನತಭಾವವು ? ಪರಿ
ಶುದ್ಧ ಜೀವನವು ? ಅಗ್ನಿಗಿಂತಲೂ ಪವಿತ್ರಳಾದ ನಿನ್ನನ್ನು
ನನ್ನ ಕೈಯಿಂದಲೇ ಕೊಂದಿಟ್ಟೆನು. ನಿನ್ನಂತಹ ಮಹಾಪತಿ
ವ್ರತೆಯರಿಂದ ಭರ್ತೃ ಸಹಗಮನವು ಪ್ರಸಿದ್ಧಿಯಾಯಿತು.
ನಾನೀಹೊತ್ತು ನಿನ್ನ ಸಹಗಮನವನ್ನು ಮಾಡಿ ಪತ್ನೀಸಹಗ
ಮನವನ್ನು ಲೋಕದಲ್ಲಿ ಸ್ಥಾಪಿಸುವೆನು. ” ಎಂದು ದುಃಖಿಸಿ
ಪ್ರಾಣತ್ಯಾಗವನ್ನು ಮಾಡುವ ಭರ್ತೃಹರಿಯನ್ನು ಬಂಧು
ಜನವು ನಿವಾರಿಸಿದರು. ಆಕೆಯನ್ನು ನೋಡುತ್ತಿರುವ ಭರ್ತೃಹ
ರಿಯ ಮನವು ಕೂಡಾ ಆಕೆಯ ಶರೀರದಂತೆ ಸುಡುತ್ತಿತ್ತು.
ಶೋಕಾಗ್ನಿಯ ತಾಪವನ್ನು ಸಹಿಸುವುದಶಕ್ಯವಾಯಿತು.

ಸ್ಮಶಾನದ ಸಮೀಪದಲ್ಲಿ ಒಂದು ವಟವೃಕ್ಷವಿರುವುದು ನೆರ
ಳಿನಲ್ಲೊರ್ವ ಸನ್ಯಾಸಿಯು ನಿಂತು ತನ್ನ ಟೆಂಗಿನ ಕಮಂಡಲ
ವನ್ನು ಒಡೆದುಕೊಂಡು ಉಚ್ಚಸ್ವರದಿಂದ “ ಹಾ ! ನನ್ನ
ಕಮಂಡಲವೇ ! ಭೂಮಂಡಲವೆಲ್ಲವನ್ನು ಹುಡಿಕಿದರೂ
ನೀನು ಮರಳಿ ಸಿಗುವಿಯಾ? ನೀನು ಇಕ್ಷುರಸದಂಥಾ ನೀರನ್ನು
ಕೊಟ್ಟು ಆನಂದಗೊಳಿಸುತ್ತಿರಲಿಲ್ಲವೆ ? ಇನ್ನು ನನ್ನ ದಾಹ
ವನ್ನು ತೀರಿಸುವರಾರು ? ನೀನು ಹೋಗಿರುವುದರಿಂದ ನನ್ನ
ಕೈಗಳು ಕಡಿದಂತಾದುವು. ನಿನ್ನ ಕುತ್ತಿಗೆಯ ಸೌಂದರ್ಯವ
ನ್ನೆಷ್ಟೆಂದು ವರ್ಣಿಸಲಿ? ಹಾ ! ನಿನ್ನ ನೀರಿನ ಸವಿ? ನಿನ್ನತಂಪು!
ನಿನ್ನ ಬಣ್ಣ !! ನನ್ನ ಚಿಂತಾಮಣೀ ! ನನ್ನ ಪಾಲಿನ ಪಾರಿಜಾ
ತವೇ ! ಹೋದೆಯಾ ? ನಾನು ಜೀವಿಸುವುದು ಹೇಗೆ ? ”
ಎಂದು ಒಡೆದ ತುಂಡುಗಳನ್ನೆಲ್ಲ ಒತ್ತಟ್ಟಿಗೆ ಸೇರಿಸಿ ಅಳ ಹತ್ತಿ
ದನು. ಇವನನ್ನು ನೋಡಿ ಜನಗಳೆಲ್ಲರು “ಏನೀ ಹುಚ್ಚುತನ!
ನಾಲ್ಕು ದುಡ್ಡಿನ ಕಮಂಡಲಕ್ಕಾಗಿ ಅಳಬೇಕೊ ! ಗಾಂಜೇಸೇ
ದುವ ಸನ್ಯಾಸಿಗಳ ಗತಿಯೇ ಇದು”ಎಂದು ನುಡಿದರು. ಕೆಲ
ವರು ಮಹಾ ಆಶೆಯುಳ್ಳವನೆಂದರು. ಈ ಗದ್ದಲವನ್ನು ನೋಡು
ತ್ತಿದ್ದ ಭರ್ತೃಹರಿಯು ತನ್ನ ದುಃಖವನ್ನು ಸ್ವಲ್ಪ ತಡೆದು
ಕೊಂಡು, “ ಸ್ವಾಮೀ ? ನೀವು ಯತಿಗಳೂ ಜ್ಞಾನಿಗಳೂ
ವಿಶೇಷವಾಗಿ ವಯೋವೃದ್ಧರೂ ಆಗಿರುವಿರಿ. ನಿಮ್ಮ ಆಶ್ರಮ
ಧರ್ಮವಿರುದ್ಧವಾಗಿಯೂ ಲೋಕವಿರುದ್ಧವಾಗಿಯೂ ಏಕೆ ಅಳು
ವಿರಿ? ನಿಮಗೆ ಬೇಕಾದರೆ ನೂರಾರು ಕಮಂಡಲುಗಳು ಕ್ಷಣದಲ್ಲಿ
ಸಿಗುವುವು. ನಿಮ್ಮ ದುಃಖಹೇತುವಾವುದೋ ಊಹಿಸಲು
ಶಕ್ಯವಿಲ್ಲ, ಅಲ್ಲದೆ ನಿಮ್ಮ ಕೈಯಿಂದ ನೀವೇ ಒಡೆದುಕೊಂಡು
ದುಃಖಿಸಬಹುದೋ ? ” ಎಂದು ಕೇಳಿದೊಡನೆಯೇ ಸನ್ಯಾ
ಸಿಯು ನಸು ನಗುತ್ತ “ ಮಗೂ ? ಯೋಗ್ಯವಾದ ಪ್ರಶ್ನೆ
ಯನ್ನೇ ಮಾಡಿದಿ, ನನ್ನ ಪ್ರಶ್ನೆಗೆ ಮೊದಲು ನೀನುತ್ತರ
ಕೊಟ್ಟನಂತರ ನಿನಗೆ ಸಮಾಧಾನವನ್ನು ಹೇಳುವೆನು. ನಿನ್ನ
ಕೈಯಿಂದಲೇ ಕೊಲ್ಲಲ್ಪಟ್ಟ ಭಾರ್ಯಳಿಗಾಗಿ ನೀನೆಷ್ಟೇಕೆ
ಅಳುವಿ ? ನನ್ನ ಕಮಂಡಲುವೆಂಥದೋ ನಿನ್ನ ಭಾರ್ಯಾ

ದೇಹಘಟವಾದರೂ ಅಂಥಾದ್ದೇ! ಈ ತುಂಡುಗಳನ್ನು ಕೂಡಿಸಿ ಕಮಂಡಲವನ್ನು ಮಾಡುವುದು ಹೇಗೆ ಸಾಧ್ಯವಿಲ್ಲವೋ ಹಾಗೆಯೇ ನಿನ್ನ ಪತ್ನಿಯನ್ನೂ ಬದುಕಿಸುವದು ಸಾಧ್ಯವಿಲ್ಲ. ಬೇಕಾದರೆ ನಿನಗೂ ನೂರು ಜನ ಪತ್ನಿಯರು ಸಿಗುವರು" ಎಂದನು. ಅವನ್ನು ಕೇಳಿದ ಭರ್ತೃಹರಿಯ ಮನಸ್ಸು ತಿರುಗಿತು. ದುಃಖಪರ್ವತವು ಜ್ಞಾನವಜ್ರಾಯುಧದಿಂದ ಭೇದಿಸಲ್ಪಟ್ಟು ನಿಶ್ಶೇಷವಾಯಿತು, ಚಿಂತಾಂಧಕಾರವು ಬೋಧಾದಿತ್ಯನಿಂದ ಹೋಗಲಾಡಿಸಲ್ಪಟ್ಟಿತು. ವೈರಾಗ್ಯಜ್ಞಾನೋದಯವಾಯಿತು "ಯತೀಶ್ವರಾ! ನೀನು ಹುಚ್ಚನಲ್ಲ, ಮದಿರಾಮತ್ತನಲ್ಲ, ನನಗೆ ಜ್ಞಾನೋಪದೇಶಮಾಡುಲು ಆಗವಿಸಿದ ಅವತಾರಮೂರ್ತಿಯಾಗಿರುವಿಯೇ ಹೊರತು ಬೇರೊಂದಲ್ಲ. ನಾನಿದೇ ಸನ್ಯಾಸಿಯಾದೆನು, ತಮ್ಮಶಿಷ್ಯನನ್ನಾಗಿ ಪರಿಗ್ರಹಿಸಿರಿ" ಎಂದು ಸಾಷ್ಟಾಂಗವನ್ನು ಗೈಯ್ದು, ಭರ್ತೃಹರಿಯು ವೈರಾಗ್ಯ ಮೂರ್ತಿಯಾಗಿ ಹೀಗೆ ಗಾಯನ ಮಾಡಿದನು:—

ಭೋಗೇ ರೋಗಭಯಂ ಕುಲೇ ಚ್ಯುತಿಭಯಂ ನಿತ್ತೇ
ನೃಪಾಲಾದ್ಭಯಂ ।
ಮೌನೇ ದೈನ್ಯಭಯಂಬಲೇ ರಿಪುಭಯಂ ರೂಪೇ ಜ—
ರಾಯಾ ಭಯಂ ॥
ಶಾಸ್ತ್ರೇ ವಾದಭಯಂ ಗುಣೇ ಖಲಭಯಂ ಕಾಯೇ
ಕೃತಾಂತಾದ್ಭಯಂ ।
ಸರ್ವಂ ವಸ್ತು ಭಯಾನ್ವಿತಂ ಭುವಿ ನೃಣಾಂ ವೈರಾಗ್ಯ
ಮೇವಾಭಯಂ ॥

---

# ಮನದಲ್ಲಿಯ ಮಿಂಚು.

— ೦ —

( ವಾರ್ಧಿಕಾರ್ಧಗಳು )

ನೊಂದಿತೆನ್ನಯ ಜೀವ, ಬೆಂದಿತೆನ್ನಯ ಭಾವ, ।
ಕುಂದಿತೆನ್ನಯ ಬಗೆಯು ಕಂದಿತೆನ್ನಯ ನಗೆಯು, ।
ಕುಂದುಗಳ ಕಣ್ದಣಿಯೆ ಕಾಣುತಲೆ ಭವದಲ್ಲಿ—ಮಾಯಾ
ಪ್ರಪಂಚದಲ್ಲಿ ॥೧॥
ಎಲ್ಲ ವಸ್ತುಗಳೊಳಗೆ 'ನಿನ್ನ' ವಾಸವು ದಿಟವೆ ? !
ಕಲ್ಲೆದೆಯ ಕುನ್ನಿಗಳ ಕಟುಕ ಬಗೆಯನು ಕಂಡು, ।
ಇಲ್ಲವೆಂಬುವುದೆನ್ನ ಕಿರಿಮನವು ! ಕೆಲಕಾಲ ನೆನವಿನೊಳು
ಮುಳುಗುತಿಹುದು ॥೨॥
ನೆನವೆಂಬ ನಿದ್ದೆಯೊಳು ಮಲಗಿದ್ದ ಮನವೆದ್ದು, ।
'ನೆನಸೆ'ಂದು ತಂದೆ ! ನಿನ್ನಯ ಬೆರಳಪಿಡಿಯುವುದು ! ।
ಕನಸು ಕನವರಿಕೆಗಳ ಮುಸುಕುಮುರೆಯನು ಬಿಸುಟ ಉ
ದ್ಬುದ್ಧವಹುದು ಬುದ್ಧಿ ॥೩॥
ಮರುಗುವೇತಕೆ ನೀನು ? ಕೊರಗುವೇತಕೆ ನೀನು? ।
ಮರುಗುವುದು ಕೊರಗುವುದು ಕಂದುವುದು ಕುಂದುವುದು।
'ಕುರುಹ' ನರಿಯಲು ಚಣದಿ ಚದರಿ ಪೋಗುವುದಯ್ಯ
ರವಿಯೇಳೆ ಮಂಜಿನಂತೆ ॥೪॥

— ಸೋಮಾನುಜ.

# ವಸುಧಾರೆಯ ಕೈಫಿಯತ್ತು

ಲೇ:—ಶ್ರೀ. ಬೆನಗಲ್‌ರಾಮರಾವ ಎಂ. ಎ., ಎಲ್‌ಎಲ್. ಬಿ.ಮದ್ರಾಸು.



(೧ನೆಯ ಸಂಚಿಕೆಯಿಂದ ಮುಂದೆ ಸಾಗಿದ್ದು.)

ಆ ಮೇಲೆ ಈತನ ಹೆಂಡತಿ ಚೆನ್ನಮ್ಮಾಜಿಯು ಪ್ರಭುತ್ವಕ್ಕೆ ಬಂದು ಪುತ್ರಸಂತಾನವಿಲ್ಲದ್ದರಿಂದ ಮರಿಯಪ್ಪಸೆಟ್ಟಿಯ ಮಗನನ್ನು ಸಾಕು ತೆಗೆದುಕೊಂಡು, ಹಳಬರು ಸಾಮಾಜಿಕರನ್ನು ತೆಗೆದು ಹಾಕಿ, ಹೊಸ ಸಾಮಾಜಿಕರನ್ನು ನೇಮಕ ಮಾಡಿಸಿ, ಆಯಾ ಕೆಲಸಕ್ಕೆ ಇಟ್ಟು, ೨೫ ಸಾವಿರ ಕೂಲಿಯವರ ಹಳೆ ಪರಿಕೀ ಕೊಟ್ಟು, ಕಾಸರಗೋಡು ತಿಮ್ಮಣ್ಣನಾಯಕ, ಕೊಳಪಾಡು ಬೊಮ್ಮರಸಯ್ಯನನ್ನು ಸಹ ಕಳುಹಿಸಿ, ಈ ಇಕ್ಕ—ರ್ತರು ವಸ್ತಾರೆ ಪರ್ಯಂತಕ್ಕೂ ಬಂದು ವಸ್ತಾರೆಗೆ ದಕ್ಷಿಣ ದಿಕ್ಕಿನಲ್ಲಿ ಬೈಲು ಹೊಲದಲ್ಲಿ ಅಡಿವಿತೆವರೆಂಬ ಸ್ಥಳದಲ್ಲಿ ಒಂದು ಹರದಾರಿಯ ಮೇಲೆ ಇಳುಕೊಂಡರು. ಮೈಸೂರವರ ಕಡೆಯಿಂದ ವಸ್ತಾರೆ ಕೋಟೆಯಲ್ಲಿದ್ದ ತಿಮ್ಮಣ್ಣ ದಳವಾಯಿಯು ಮೂರು ದಿವಸ ಪರ್ಯಂತ ಬಹಳ ಯುದ್ಧವನ್ನು ಮಾಡಿ, ಎಡೇಹಳ್ಳಿಯ ಬದಿಯಲ್ಲಿ ಅರ್ಧ ಹರದಾರೀ ಮೇಲೆ ದೇಹಬಿಟ್ಟನು. ಮೈಸೂರವರ ಮಂದಿಗಿಂತ ಬಿದರೂರವರ ಮಂದಿ ಹೇರಳವಾದ ಕಾರಣ, ಮೈಸೂರವರ ಸೈನ್ಯವು ಪೆಟ್ಟುಬಿದ್ದು, ಪರಾಜಿತವಾಗಿ ಓಡಿಹೋಯಿತು. ಆ ಮೇಲೆ ಈ ಬಿದರೂರವರು ಈ ವಸ್ತಾರೆ ತೆಗೆದುಕೊಂಡು, ಈ ಕೋಟೆಯಲ್ಲಿ ತಮ್ಮ ಕಡೆ ಮಂದಿ ಕೆಲವು ಇಟ್ಟು, ಬಂದೋಬಸ್ತು ಮಾಡಿ ಹೋದರು. ಆ ಮೇಲೆ ಕೆಲವು ದಿವಸವಾಗುವುದರಲ್ಲಿ ದೊಡ್ಡ ದೇವರಾಜ ಒಡೆಯರ ಮಗ ಕೃಷ್ಣರಾಜ ಒಡೆಯರು ಮಂದಿ ತೆಗೆದುಕೊಂಡು ಈ ಕೋಟೆಗೆ ಮುತ್ತಿಗೆ ಹಾಕಿಸಿ ಯುದ್ಧಮಾಡಿದರು. ಈ ವಸ್ತಾರೆ ಕಿಲ್ಲೆಯಲ್ಲಿದ್ದವರಿಗೆ ಬಿದರೂರ ಕಡೆಯವರ ಕುಮ್ಮಕ್ಕು ಬಾರದೆ ಹೋದ ಕಾರಣ, ಆ ಕಿಲ್ಲೆದಲ್ಲಿದ್ದವರು ಮೈಸೂರವರ ಕಡೆಯಿಂದ ಬಹಳ ಗಾಸಿಬಟ್ಟು, ಹತಶೇಷರಾದರು. ಕಿಲ್ಲೆಬಿಟ್ಟು ಓಡಿಹೋದರು. ಆಗ ಕೃಷ್ಣರಾಜ ಒಡೆಯರು ಈ ವಸ್ತಾರೆ ಕಿಲ್ಲೆಯನ್ನು ಸ್ವಾಧೀನಮಾಡಿಕೊಂಡು ತಮ್ಮ ಕಡೆಯ ಕೆಲವು ಮಂದಿಯನ್ನು ಈ ಗಡಿಯಲ್ಲಿಟ್ಟು ಬಂದೋಬಸ್ತು ಮಾಡಿ, ಕೃಷ್ಣರಾಜ ಒಡೆಯರು ಈ ವಸ್ತಾರೆಯನ್ನು ಮೈಸೂರು ಸಂಸ್ಥಾನಕ್ಕೆ ಸೇರಿಸಿ ಕೆಲವು ದಿವಸ ಆಳಿದರು. ಆ ಸಮಯದಲ್ಲಿ ಚೆನ್ನಮ್ಮಾಜಿ ದೇಹಬಿಟ್ಟಳು. ಆಕೆ ಆದ ತರುವಾಯ ಸಾಕುಮಗ ಬಸಪ್ಪನಾಯಕನು ಸ್ವತಂತ್ರ ಪ್ರಭುತ್ವ ಮಾಡುತ್ತ ಬಂದು, ಆತನ ಕಾಲದಲ್ಲಿ ಮತ್ತೂ ಬಹಳವಾಗಿ ದಂಡು ತೆಗೆದುಕೊಂಡು ಬಂದು ಮೈಸೂರ (ನರ) ಕಡೆಯವರ ಸಂಗಡ ಯುದ್ಧಮಾಡಿ ವಸ್ತಾರೆ ಕಿಲ್ಲೆಯಿಂದ ಅವರನ್ನು ಪರಾಜಿತರಾಗುವಂತೆ ಮಾಡಿಸಿ, ಕಿಲ್ಲೆ ಸ್ವಾಧೀನಮಾಡಿಕೊಂಡು, ಮುಂದೆ ಶ್ರೀರಂಗ ಪಟ್ಟಣದ ತನಕ ಹೋಗಿ ರಾಜ್ಯ ಸಾಧಿಸಬೇಕೆಂಬ ಅಭಿಲಾಷೆಯಿಂದ ದಂಡುಸಹಿತವಾಗಿ ಇಳಿದುಕೊಂಡಿದ್ದ ಸಮಾಚಾರ ತಿಳಿದು, ಮೈಸೂರು ಕೃಷ್ಣರಾಜ ಒಡೆಯರು ಕೇಳಿ, ತಮ್ಮ ದಂಡು ಸಿದ್ಧಮಾಡಿಕೊಂಡು ಬೇಲೂರು ಗಡಿಯಲ್ಲಿ ಈ ಬಿದನೂರವರ ಸಂಗಡ ಸಲ್ಲಾ ಮಾಡಿಕೊಳ್ಳುವ ಸಂವಿಧಾನದಲ್ಲಿದ್ದು, ತಮ್ಮ ಕಡೆಯಿಂದ ಪ್ರಹ್ಲಾದ ಪಂಡಿತನ ಹೆಜ್ಜೀಬಿಗೆ ಬಿದರೂರು ಅರಸಿನ ಬಳಿಗೆ ವಸ್ತಾರೆಗೆ ಕಳುಹಿಸುವಾಗ್ಗೆ (!) ಏನೆಂತೆಂದರೆ :—

ಮೈಸೂರವರೂ ಬಿದರೂರವರೂ ದಂಡೆತ್ತಿ ಸ್ವಾರಿ ಮಾಡುವುದರಿಂದ ಈ ಭಾಗದಲ್ಲಿರುವ ಸೀಮೆಗಳು ಅನೇಕಕಾಲದಿಂದ ನಿರ್ಮೂಲವಾಗುವುದಾಯಿತು. ಇದರಿಂದ ರೈತರೆಲ್ಲರೂ ಅನೇಕವಾಗಿ ಲುಕ್ಸಾನು ಪಡೆದರು. ಅದಕ್ಕೋಸ್ಕರವಾಗಿ ಉಭಯತ್ರರು ಸಲ್ಲಾ ಮಾಡಿಕೊಳ್ಳಬೇಕೆಂದು ಅವರು ನಿರೀಕ್ಷಿಸುತ್ತಾರೆ. ಇದು ಹೊರತು ಸಮಾಸೀಕರಿಗೆ ಅರ್ಥವ್ಯಯ ಮಾಡಿದರು. ಆಗ ಅವರು ತಮ್ಮ ಧಣಿಯರಿಗೆ ಹೇಳಿ ಆಲೋಚನೆ ಮಾಡಿ, ಈ ಕರ್ತರಿಗೆ ಒಂದು ತಹಾ ಮಾಡಿಸಿ ವಸ್ತಾರೆಯನ್ನು ಬಿದರೂರವರಿಗೆ ಕೊಡಿಸಿ, ಬೇಲೂರು ಮೈಸೂರುವರಿಗೆ ಕೊಡಿಸಿ ಕಂಚಿನ ಕಲ್ಲು ದುರ್ಗ ಗಡೀ ಗೊತ್ತು ಮಾಡಿ ಇದು ವಸ್ತಾರೆಗೂ ಬೇಲೂರಿಗೂ ಮಧ್ಯಸ್ಥಾನವಾದ ಕಾರಣ ಗೊತ್ತು ಮಾಡಿ, ಈ ಭಾಷಾ ಪತ್ರಗಳನ್ನು ಉಭಯತ್ರರಿಗೂ ಹುಟ್ಟಿಸಿ ಕೊಟ್ಟರು. ಇನ್ನು ಉಪದ್ರವ ಬಾರದ ಹಾಗೆ ಗೊತ್ತಾದ ಗಡಿ ಮೀರಿ ಇವರವರ ದಂಡುಗಳು ಮುಂದೆ ಹೋಗದ ಹಾಗೆ ಗೊತ್ತಾದದ್ದು ವ್ಯಯ ಸಂವತ್ಸರದಲ್ಲಿ ಆ ವರೆಗೆ ಈ ಉಭಯತರಿಗೂ ಸಲ್ಲಾ ಆಗುವವರೆಗೆ ೪೯ ವರ್ಷ ಈ ವಸ್ತಾರೆ ಸೀಮೆಯು ಬಹಳ ಘಾಸಿಯಾಗಿ ಹಲಾಕಿಯಿಂದ

ಇತ್ತು. ಈ ಸೀಮೆಗೆ ಉಭಯತ್ರರ ಕಡೆ ಸ್ವಾರಿಯು ಅನೇಕಾವೃತ್ತಿ ಬರುತ್ತಿದ್ದ ಕಾರಣ ಮೇಲೆ ಬರೆದ ಮಿತಿ ಪರ್ಯಂತರಕ್ಕೂ ಈ ಪ್ರಕಾರ ಇತ್ತು. ಅದರಲ್ಲಿ ಹೇವಿಳಂಬಿ ಮೊದಲ್ಗೊಂಡು ಪರೀಧಾವಿ ಸಂವತ್ಸರದವರೆಗೆ ಅತಿಶಯವಾಗಿ ೧೬ ವರ್ಷ ಈ ಸೀಮೆ ನಿರ್ಮೂಲವಾಯಿತು. ಆ ಮೇಲೆ ವ್ಯಯ ಸಂವತ್ಸರದಾರಭ್ಯ ಚಿತ್ರಭಾನು ಸಂವತ್ಸರ ಮಾಘ ಶುದ್ಧ ೨ ಪರ್ಯಂತರ ವಸ್ತಾರೆಯು ಬಿದರೂರು ಸಂಸ್ಥಾನದ ಧೊರೆಗಳ ಅಧಿಕಾರದೊಳಗೆ ಬಸವಪ್ಪ ನಾಯಕ ಮೊದಲು ಮಾಡಿ ಸೋಮಶೇಖರನಾಯಕನು (ಬಿದನೂರು ಸಂಸ್ಥಾನಕ್ಕೆ ರಾಣಿಯಾದ ಮಿರಮ್ಮಾಜಿಯು ಸಾಕು ತೆಗೆದುಕೊಂಡ ಮಗ) ಇವರ ಪರ್ಯಂತರಕ್ಕೂ ಏನೂ ತೊಂದರೆ ಡಾಂಬರವಿಲ್ಲದೆ ಈ ಉಭಯ ಪಕ್ಷದವರು ತಹಾವು ನಿರ್ಮೂಲವಾಗಿರುವ ಸಮಯದಲ್ಲಿ ಈ ಬಿದನೂರು ಸಂಸ್ಥಾನದವರು ತಮ್ಮ ಕಡೆಯಿಂದ ಈ ವಸ್ತಾರೆ ಕೋಟೆಯಲ್ಲಿ ಮದ್ದು ಗುಂಡು ಸಾಮಾನು ಸರಂಜಾಮೆ ಸುದಾ ಇಟ್ಟು, ಈ ಕೋಟೆಯಲ್ಲಿ ಈ ಬಿದರೂರವರಿಗೆ ಕಡೆಗಡಿಯಾದ ಕಾರಣ ದುರಸ್ತು ಮಾಡಿಸಿ ಸರ್ವದಾ ಮತ್ತೇನೂ ಅವಿವೇಕಗಳು ಬಾರದಹಾಗೆ ದೃಷ್ಟಿಯಲ್ಲಿಟ್ಟಿರುತ್ತಿದ್ದರು. ಈ ವಸ್ತಾರೆಯು ಬಿದರೂರವರ ಒಳಗೆ ದಾಖಲಾದ ಮೇಲೆ ಸಂಸ್ಥಾನದ ರಾಜ್ಯ ಭಾರ ಮಾಡಿದವರು— ವಿವರ ಈ ಕೆಳಗೆ ಬರೆದ ಪ್ರಕಾರಕ್ಕೆ ವ್ಯಯ ಸಂವತ್ಸರದಾರಭ್ಯ ಚಿತ್ರಭಾನು ಸಂವತ್ಸರದವರೆಗೆ—

| | | |
|---|---|---|
| ಬಸವಪ್ಪ ನಾಯಕ | ೧೦ | ವರ್ಷ |
| ಸೋಮಶೇಖರ ನಾಯಕ | ೨೪ | ,, |
| ಬೂದಿ ಬಸವಪ್ಪ ನಾಯಕ | ೧೫ | ,, |
| ಚನ್ನಬಸವಪ್ಪ ನಾಯಕ | ೨ | ,, |
| ಸೋಮಶೇಖರ (ವೀರಮ್ಮಾಜಿಯ ಸಾಕು ಮಗ) | ೫ | ,, |
| ಅಂತೂ ಜನ ಶಿಕ್ಕೆ ಆಳಿದ ವರ್ಷ— | ೫೬ | |

ಚಿತ್ರಭಾನು ಸಂವತ್ಸರದ ಮಾಘಬಹುಳ ೨ರಲ್ಲು ಹೈದರಲ್ಲಿ ಖಾನಗೆ ಬರಾಜನದ ವೇಷದಾರಿ ಸಂಗಡ ಲಷ್ಕರು ತೆಗೆದುಕೊಂಡು ಬಂದು ಈಗ್ಗೆ ಬರಾಜ ಮೇಲೆ ಬರೆದ ನಾಲ್ಕನೆಯವನು ಈತನೂ ವೀರಮ್ಮಾಜಿಯೂ ತನ್ನ ಪ್ರಾಣಕ್ಕೆ ತಂದದ್ದರಿಂದ ಚಿತ್ರಕಲ್ಲುಪಾಳೆಯಗಾರನ ಹತ್ತರ ತೆದರನಸಹಸೇರಿಕೊಂಡವನು ಇವನ ಹೆಸರಲ್ಲಿ ಬಿದನೂರಿಗೆ ಬರುವ ಮಾರ್ಗದಲ್ಲಿ ಸುಲಭವಾಗಿ ಗಡಿಗಳೆಲ್ಲಾ ಠಾಣೆ ಹಾಕಿಕೊಳ್ಳುತ್ತಾ ಬಂದರು. ವೀರಮ್ಮಾಜಿಯು ದುಷ್ಟ ಚರಿತ್ರೆಯಿಂದ ಹೈದರ್ ಬಹದ್ದೂರವರು ಮೇದಕೆರೆನಾಯಕನ ಸಂಗಡ ಫವುಜು ತೆಗೆದುಕೊಂಡು ಬರುವುದಕ್ಕೆ ಮೊದಲೇ, ಈ ಸಂಸ್ಥಾನನಲ್ಲಿ ಬಹಳತೊಂದರೆಯಾಗಿ ಅಸ್ವಾರಸ್ಯವಾಗಿತ್ತು. ಹೀಗೆ ಇರುವಲ್ಲಿ ಬಹದ್ದೂರವರ ಪವುಜು ಬಂದ ವರ್ತಮಾನ ತಿಳಿದು ಅರಮನೆಗೆ ಬೆಂಕಿ ಹಾಕಿ ಕೆಲವು ಖಜಾನೆ ತೆಗೆದುಕೊಂಡು ಬಲ್ಲಾಳರಾಯದುರ್ಗಕ್ಕೆ ಓಡಿ ಹೋದಳು. ಆ ಮೇಲೆ ಈ ಬಹದೂರನು ಬಿದನೂರು ಠಾಣೆ ಹಾಕಿದನು. ಥಾಳೀ ಲೂಟೀ ಮಾಡಿಸಿದನು. ಆ ಮೇಲೆ ಬದರೂರು ಸ್ವಾಧೀನಮಾಡಿಕೊಂಡಬಳಿಕ ತಾರಶಹಾ ಎಂಬ ತನ್ನ ಗುರುವನ್ನು ವೀರಮ್ಮಾಜೀ ಬಳಿಗೆ ಕಳುಹಿಸಿ, ಒಡಂಬಡಿಕೆಯಿಂದ ಕರೆದುಕೊಂಡು ಬರಬೇಕೆಂದು ಕಳುಹಿಸಿದಲ್ಲಿ ಆತ ಹೋಗಿ ಈ ವೀರಮ್ಮಾಜಿಯನ್ನು ಬಹದ್ದೂರನ ದರ್ಶನಕ್ಕೆ ಕೊಡಿಯಾಲಕ್ಕೆ ಕರೆದುಕೊಂಡು ಬಂದನು. ಆಕೆ ಬಂದು ದರ್ಶನ ತೆಗೆದುಕೊಂಡ ಬಳಿಕ, ಎರಡನೆ ಸಾಕು ಮಗನ ಸಂಗಡ ಈಕೆಯನ್ನು ಸಹ ಮಧುಗಿರಿ ದುರ್ಗಕ್ಕೆ ಪಹರಾ ಹಾಕಿ ಕಳುಹಿಸಿ ಬಹಳ ಬಂದೋಬಸ್ತು ಆಗಿ ಇಡುವ ಹಾಗೆ ತಾಕೀತಿ ಮಾಡಿಸಿದ್ದು, ಕೆಲವು ಕಾಲದ ಮೇಲೆ ಮರಾಟೆಯವರು ಮಧುಗಿರಿಯಲ್ಲಿ ಠಾಣೆ ಹಾಕಿದ ಮೇಲೆ, ಈ ವೀರಮ್ಮಾಜಿ ಈ ಸಾಕು ಮಗನು ಸಹ ಪಾರಾದಿಂದ ಬಿಡಿಸಿ, ತಮ್ಮ ಸಂಗಡಲೇ ಕರೆದುಕೊಂಡು ಹೋಗುತ್ತಿರುವಾಗ್ಗೆ ಮಧ್ಯ ಮಾರ್ಗದಲ್ಲಿ ಈಕೆಯು ಸತ್ತು ಹೋದಳು. ಆ ಸಾಕು ಹುಡುಗನು ಮಾತ್ರ ಮರಾಠಿಯವರ ಸೀಮೆಯಲ್ಲಿ ಇದ್ದುಕೊಂಡು ಹೋದನು. ಈಚೆಗೆ ಆತನೂ ಆ ಸೀಮೆಯಲ್ಲಿ ಸತ್ತು ಹೋದರೆಂದು ಸಮಾಚಾರ.

(ಹೈದರ್ ಬಹದ್ದೂರನು) ಚಿತ್ರಭಾನುಸಂವತ್ಸರದಾರಭ್ಯ ಶುಭಕೃತು ಸಂವತ್ಸರದವರೆಗೆ ವರ್ಷ ೧೬ ಆಳಿದನು. ಈತನು ತನ್ನ ದಿನವಲ್ಲಿ ದೇವದಾಯ ಬ್ರಹ್ಮದಾಯಕ್ಕೆ ಅರ್ಧಮಾನ್ಯ ಮಾಡಿದನು. ಇವರ ದಿವಸದಲ್ಲಿ ನಗರದ ಸುಭೇದಾರನ ಕೆಳಗೆ ಅನೇಕ ಅಮಲ್‌ದಾರರು ಅಮಲ್‌ಮಾಡಿದರು. ಸುಭೇದಾರ ತನಕ್ಕೆ ಸೇಕ ಅಯಾಜನು ಮಾಡುತ್ತಾ ಇದ್ದನು. ಈ ಸೇಕ ಅಯಾಜಿಯ ಕಾಲಕ್ಕೆ ಹೈದರ ನವಾಬನು ಆರ್ಕಾಡು ಮೇಲೆ ಮೃತವಾದ ಸಮಾಚಾರವನ್ನು ಕೇಳಿ, ಇಂಗ್ರೀಜಿಯವರಿಗೆ ಕರೆಕಳುಹಿಸಿ ಠಾಣ್ಯವನ್ನು ಹಾಕಿಸಿಕೊಟ್ಟರು. ತರುವಾಯ ಇಂಗ್ರೀಜಿಯವರು ಪುನಃ ಸೇಕು ಅಯಾಜಿಗೆ ಕೊಟ್ಟದ್ದರಿಂದ ಈತನು ೨ ತಿಂಗಳು (ರಾಜ್ಯಧಾರ) ಮಾಡಿದನು. ಈ ಸಮಾಚಾರವನ್ನು ಟೀಪೂಸುಲ್ತಾನನು ಕೇಳಿ, ಅತಿಶೀಘ್ರದಲ್ಲಿ ಫವುಜುತೆಗೆದುಕೊಂಡು ಬಂದು, ನಗರವನ್ನು ಠಾಣೆಹಾಕಿಕೊಂಡನು. ಈ ಟೀಪೂಸುಲ್ತಾನನು ನಗರಕ್ಕೆ ಬರುವುದಕ್ಕೆ ಮುಂ

ಚಿತವಾಗಿ ಶೇಕ್ ಅಯಾಜನು ಜಹಜು ಮೇಲೆ ಹೊರಟು ಬೊಂಬಾಯಿಗೆ ಹೋದನು. ಟೀಪೂಸುಲ್ತಾನನು ಸಿದ್ಧಾರ್ಥಿ ಸಂವತ್ಸರದವರೆಗೆ ರಾಜ್ಯಭಾರವನ್ನು ಮಾಡಿದನು. ಆಗ್ಗೆ ವಸ್ತಾರೆಯಲ್ಲಿ ಅಮಲುತನಕ್ಕೆ ಇದ್ದವನು ಪ್ರಾಕ್ತಿನ ಮೇರೆಗೆ ನಗರದ ಸುಭೇದ ಕೆಳಗೆ ನಡೆದುಕೊಳ್ಳುತ್ತಾ ಇದ್ದನು. ತರುವಾಯ ಸಿದ್ಧಾರ್ಥಿಸಂವತ್ಸರದಲ್ಲಿ ಕುಂಪಣಿಯವರು ಶ್ರೀರಂಗಪಟ್ಟಣವನ್ನು ಠಾಣೆ ಹಾಕಿಕೊಂಡರು. ಆಗ ವಸ್ತಾರೆ ಅಮಿಲಿಗೆ ಬೇಲೂರು ಚಿನ್ನಬಸವಪ್ಪಯ್ಯ ಎಂಬವನು ಮಾಡಿಕೊಂಡು ಇದ್ದಲ್ಲಿ ಟೀಪೂಸುಲ್ತಾನನ ದಿವಸದಲ್ಲಿ ನಗರದ ಸಂಸ್ಥಾನದವರೇ ರಾಯರೆನಿಸಿರುತ್ತಿದ್ದರು. ಇದನ್ನು ಅವನು ಕುಂಪಣಿ ತಾಲ್ಲೂಕು ಸರದಾರರು ನಗರಸಂಸ್ಥಾನ ನಮಗೆ ಕೊಟ್ಟಿದ್ದಾರೆ ಕಾಗದವು ನಮ್ಮ ಬಳಿಯಲ್ಲಿದೆ, ಎಂದು ಸಹಾ ವಸ್ತಾರೆ ಬಳಿಗೆ ಬಂದು ಈ ಊರಿಗೆ ಅಮಲ್‌ದಾರ ಬಸವಪ್ಪಯ್ಯ ಎಂಬುವನು ಇರುವನು. ಈ ವಸ್ತಾರೆ ಕಿಲ್ಲೆದಲ್ಲಿ ಹಾಜರು ಇಲ್ಲದೆ, ಆತನ ತಮ್ಮ ತಿಮ್ಮಪ್ಪಯ್ಯ ಎಂಬುವನು ಕಿಲ್ಲೆದಲ್ಲಿ ಇರುವಂತಾವನಿಗೆ ತನ್ನ ಬಳಿಯ ಇರುವ ಅಬದ್ಧಕಾಗದವನ್ನು ತೋರಿಸಿ ಇಲ್ಲಿಂದ ಈ ಕಿಲ್ಲೆ ತೈನಾತಿ ಜನರು, ಓಲೆಕಾರರು, ಸೀಮೆರೈತರನ್ನು ಸಹ ಕರೆದುಕೊಂಡು ಎಡೆಹಳ್ಳಿ ಸೀಮೆಗೆ ಹೋದನು. ಆ ಮೇಲೆ ಈ ಸೀಮೆ ಮೇಲೆ ಬಂದ ಪಾಳೆಯಗಾರನಿಗೆ ಅಮಲದಾರಿಕೆ ಕೊಡಲಿಲ್ಲ ಎಂಬದಾಗಿ ಪೂರ್ಣಯ್ಯನವರ ಪರವಾನೆ ಬಂದದ್ದರಿಂದ ಆ ಮೇಲೆ ಆ ಅಮೀರನು ರೈತವಗೈರೆಯ್ನು ಕರೆಕಳುಹಿಸಿದಲ್ಲಿ ರೈತರು ಬಾರದೆ ಇದ್ದಸಂಬಂಧ ಫಂಥ ಫಿತೂರಿಮಾಡಿ ಸದರಹೂ, ಪಾಳೆಯಗಾರನಿಗೆ ಜಮೆಯ ಸಹ ಈ ಕಿಲ್ಲೆಗೆ ಮುತ್ತಿಗೆ ಹಾಕಿಸಿ, ಕಿಲ್ಲೆದ ಒಳಗೆ ಬಂದು, ಕಿಲ್ಲೆಯ ಬಾಗಿಲಲ್ಲಿದ್ದ ಪಾರಾದ ಜನುರನ್ನು ಶಿಕ್ಷೆಮಾಡಿಸಿ, ಸದರೀ ಅಮೀಲಗೆ ಠಾರ ಮಾಡಿದರು. ಈ ವರ್ತಮಾನ ಪೂರ್ಣಯ್ಯನವರಿಗೆ ತಿಳಿದು ಕಂದಾರದ ಇಶಾಖೆ ಮುತ್ಸದ್ದಿ ತಮ್ಮಾಜಿಪಂತನ ಹಮರಹಾ ಕೆಲವು ಫವುಜನ್ನು ಕೊಟ್ಟು ಕಳುಹಿಸಿದ್ದರಿಂದ, ಕೆಂಚನಹಳ್ಳಿ ಉತ್ತರಕ್ಕೆ ಈ ಫವುಜು ಬಂದು ದಾಖಲಾದ ವರ್ತಮಾನ ಕೇಳಿ ಸದರಹೂ ಪಾಳೆಯಗಾರನು ರಾತೋರಾತು ಓಡಿಹೋದನು. ಆ ಮೇಲೆ ತಮ್ಮಾಜಿಪಂತನು ಫವುಜುಸಹಿತವಾಗಿ ಬಂದು ಖಿಲ್ಲೆದ ಠಾಣೆ ತೆಗೆದುಕೊಂಡು, ಶಹತಮಿನಾ ಎಂಬ ಕಿಲ್ಲೆದಾರರನನ್ನು ಮೊಕರೂರು ಮಾಡಿಟ್ಟನು. ಆ ಮೇಲೆ ಪತ್ತೆಹೈದರ ಎಂಬ ಹೆಸರ ಹೇಳಿಸಿಕೊಂಡು, ಸಂಗಡ ಕೆಲವು ಫೌಜುತೆಗೆದುಕೊಂಡು, ಸಂಗಡ ಸುರಳೀಸುಬ್ಬರಾಯನೆಂಬ ಮುತ್ಸದ್ದಿಗೆ ಫೌಜುದಾರೀ ಮೊಕರೂರು ಮಾಡಿದನು. ತರುವಾಯ ಅವನು ಈ ಕಿಲ್ಲೆ ಕಿಲ್ಲೆದಾರಿಸಹ, ತನ್ನ ಸ್ವಾಧೀನಮಾಡಿಕೊಡಬೇಕು ಎಂದು ಕಿಲ್ಲೆದಾರನ ಸಂಗಡ ಜಬಾಬು ಸವಾಲು ಮಾಡಿದಲ್ಲಿ ಆಗ ಕಿಲ್ಲೆದಾರನು ಪಿತೂರಿತನದಲ್ಲಿ ಸದರಹೂ ಪತ್ತೆಹೈದರಗೆ ಆ ಸರಳೆ ಸುಬ್ಬರಾಯರಿಗೂ ಸಹ ಈ ಕರ್ತರನ್ನು ಕರೆಕಳುಹಿಸಿದಲ್ಲಿ ಪತ್ತೆಹೈದರು ಬಾರದೆ ಸುರಳೀ ಸುಬ್ಬರಾಯ, ಸರದಾರನು ಮಾತ್ರ ಒಬ್ಬನೇ ಸಂಗಡ ಇದ್ದ ೫೦ ಜನ ಸುದಾ ಬಂದು, ಕಿಲ್ಲೆಯ ಪಶ್ಚಿಮದ ಬಾಗಿಲಿನಲ್ಲಿ ಇರುವ ಅಂಚೆಚಾವಡಿಯಲ್ಲಿ ಬಂದು ಕುಳಿತನು. ಅನಂತರ ಹತ್ತರಿನ ಕಿಲ್ಲೆದಾರನು ಕಿಲ್ಲೆಯಲ್ಲಿರುವ ಮಂದಿಯನ್ನು ಯಾವತ್ತೂ ಬುರುಜು ಬಾಕಿಗೆ ಇಟ್ಟು ತೋಪುಗಳು ತಯಾರು ಮಾಡಿ, ತಾನು ೭–೮ ಜನ ಸಂಗಡ ಕರಕೊಂಡು ಹೊರಗೆ ಹೋದನು. ಆ ಮೇಲೆ ಅವನ ಇವನ ಜಬಾಬು ಸವಾಲು ಆಗುವಲ್ಲಿ, ಸುಬ್ಬರಾಯನು "ಕೀಲೀಕಯಜ್ ನಮ್ಮ ಸ್ವಾಧೀನಕ್ಕೆ ಕೊಡುತ್ತೇವೆಂತ ಅಂದಿರಷ್ಟೆ ಇನ್ನೂ ಆಲಸ್ಯವೇಕೆ, ಕೊಂಡು ಬಾ" ಎಂದು ಕೇಳಿದಲ್ಲಿ, ಒಳ್ಳೇಯದು, ಕೊಡುತ್ತೇವೆಂತ ಕಾಲಹರಣ ಮಾಡುತ್ತಬಂದನು. ಇಷಾರೆ ತಿಳಿಕೊಂಡು ಸುರಳೀ ಸುಬ್ಬರಾಯನು ಕಿಲ್ಲೆದಾರನ ಬೆನ್ನ ಮೇಲೆ ಕತ್ತಿಗಾಯ ಮಾಡಿದನು. ಅದು ನೋಡಿಕೊಂಡು ಕಿಲ್ಲೆದಾರನು ತಿರುಗಿ ಸುಬ್ಬರಾಯನನ್ನು ಕತ್ತಿಯಿಂದ ಹೊಡೆದು ಠಾರು ಮಾಡಿದನು. ಆ ಸುಬ್ಬರಾಯನಸಂಗಡ ಇದ್ದವರನ್ನು ಕಿಲ್ಲೆದಾರನ ಸಂಗಡ ಇದ್ದವರು ಹೊಡೆದು ಹಾಕಿದರು- ಕಿಲ್ಲೆಯ ಮೇಲಿನಿಂದ ಗುಂಡುಗಳು ಹಾರಿದುವು. ಈ ವರ್ತಮಾನ ತಮ್ಮಾಜಿಪಂತನು ಕೇಳಿ ಕಿಲ್ಲೆಗೆ ಜರೂರ್ ದಾಖಲಾದನು. ಆ ಸುರಳೀ ಸುಬ್ಬರಾಯನ ಸಂಗಡ ಬಂದ ಜನ ಯತ್ತುತತ್ತೂ ಹಿಂದಕ್ಕೆ ಓಡಿಹೋದರು. ಆ ಮೇಲೆ ಗೈಬರಾಜು ಎಂಬ ಪತ್ತೆ ಹೈದರನ ಸಂಗಡ ಇದ್ದ ದಳವಾಯಿ ವೀರಭದ್ರಯ್ಯ, ಬಸವಪ್ಪಯ್ಯ ಎಂಬವರು, ಕೆಳಗೂರವೀರಪ್ಪಗೌಡ, ಜೆಂಜಿ ಅರಸು, ಇವರು ತಮ್ಮ ದೇವೇಗೌಡ ಮೊದಲಾದವರು ಈ ಪ್ರಕಾರ ತುಂಟತನಮಾಡಿದ ವರ್ತಮಾನ ಪೂರ್ಣಯ್ಯ ತಿಳಿದು, ಗೈಬರಾಜನ ಮೊದಲುಮಾಡಿಕೊಂಡು ಈ ಹತ್ತು ಜನವನ್ನೂ ವಸ್ತಾರೆಕೋಟೆ ಪಶ್ಚಿಮದಿಕ್ಕಿನಲ್ಲಿ ಬಾಗೀಸಮೀಪದಲ್ಲಿ, ಪೂರ್ಣಯ್ಯನವರ ಅಪ್ಪಣೆ ಪ್ರಕಾರ ಊರವರಿಗೆ ಕಾಣುವ ಹಾಗೆ ಗಲ್ಲು ಹಾಕಿದರು. ಆ ಮೇಲೆ ತಾಲೋಕು ಬಂದೋಬಸ್ತು ಮಾಡಿದರು. ಆ ದಿನ ಮೊದಲುಮಾಡಿಕೊಂಡು ಅಮೀಲದಾರರು ಮೈಸೂರು ಕೃಷ್ಣರಾಜ ಒಡೆಯರ ಕಡೆ ದಿವಾನನ ಕೈಕೆಳಗಿನಿಂದ ಅಧಿಕಾರ ಮಾಡುತ್ತ ಬಂದರು. (ಮುಗಿದುದು.)

॥ ಶ್ರೀ ॥

# ಗೋಪಾಲ ಅಥವಾ ಪವಿತ್ರಪ್ರೇಮ.

ಲೇ:—ಶ್ರೀ. ಗಂಗಾ.

## ಮೊದಲನೆಯ ಪರಿಚ್ಛೇದ.

ಮಾಲಿನಿಯು ಆಹ್ಲಾದದಿಂದ ಮಂಜುಳದನಿಗೈಯುತ್ತ ಮೃದುವಾಗಿ ಹರಿಯುತ್ತಿದ್ದಳು. ಚಂದ್ರನು ಮೇಘಗಳೊಂದಿಗೆ ಕ್ರೀಡಿಸುವನೋ ಎಂಬಂತೆ ಕೆಲವು ವೇಳೆ ಅವುಗಳ ಕೈಗೆ ಸಿಕ್ಕುತ್ತಲೂ ತತ್ಕ್ಷಣವೇ ಬಿಡಿಸಿಕೊಂಡು ನಾಲ್ಕೆಡೆಯನ್ನು ಪ್ರಕಾಶಗೊಳಿಸುತ್ತಲೂ ಇದ್ದನು. ಮಾಲಿನಿಯೂ ಅವನೊಡನೆ ಸಂತೋಷಪಟ್ಟು ಅವನು ತನ್ನ ವಕ್ಷದ ಮೇಲೆ ಬೀರಿದ ಒಂದೊಂದು ಕಿರಣವನ್ನೂ ಸಹಸ್ರಾರು ಕಿರಣಗಳಾಗಿ ಪ್ರತಿಬಿಂಬಿಸುತ್ತಿದ್ದಳು. ನಕ್ಷತ್ರಗಳಾದರೋ ಚಂದ್ರನು ಮೇಘಗಳ ವಶವಾದಾಗ ಅಧಿಕವಾಗಿ ಪ್ರಕಾಶಿಸುತ್ತಲೂ ಅವನು ಬಿಡಿಸಿಕೊಂಡೊಡನೆಯೇ ಮತ್ಸರದಿಂದ ಕಾಂತಿವಿಹೀನವಾಗುತ್ತಲೂ ಇದ್ದುವು. ಮಂದಾನಿಲನು ವನಕುಸುಮಗಳ ಸೌರಭವನ್ನೂ, ನದಿಯ ತಣ್ಪನ್ನೂ ಕದ್ದುಕೊಂಡು, 'ಲೂಟಿ ಮಾಡಿದರೂ ರಾಜಭಂಡಾರವನ್ನೇ ಲೂಟಿ ಮಾಡಬೇಕು.' ಎಂಬ ನಾಣ್ಣುಡಿಯನ್ನು ಎಲ್ಲರಿಗೂ ನೆನಪು ಮಾಡುತ್ತಾ ಅನಂತ ದೂರದಲ್ಲಿದ್ದ ತನ್ನ ಗೃಹವನ್ನು ಕುರಿತು ಅತಿ ಜಾಗ್ರತೆಯಾಗಿ ಹೋಗುತ್ತಿದ್ದನು. ತೀರದಲ್ಲಿ ತರಂಗಿಣಿಯ ಮೃದುರವವಲ್ಲದೆ ಮತ್ತಾವ ಶಬ್ದವೂ ಇರಲಿಲ್ಲ.

ಈ ಸಮಯದಲ್ಲಿ ಒಬ್ಬ ಯುವಕನು ನದೀ ತೀರದಲ್ಲಿ ಕುಳಿತಿದ್ದನು. ಸುಮಾರು ಹದಿನಂಟು ವರುಷವಿರಬಹುದು. ಸುಂದರ; ಒಂದು ಸಾಮಾನ್ಯವಾದ ಮಲ್ಲಿನ ಪಂಚೆಯನ್ನು—ಟ್ಟಿದ್ದನು. ಮಾಲಿನಿಯ ಮೃದುಹಾಸದಿಂದ ಏಳುತ್ತಿದ್ದ ಸಣ್ಣ ಅಲೆಗಳ ಸೌಂದರ್ಯವನ್ನು ನೋಡುವುದರಲ್ಲಿ ಮಗ್ನನಾಗಿದ್ದನು. ಆರೋ ಅವನನ್ನು ಕರೆದಂತೆ ಬೋಧೆಯಾಯಿತು. ನೋಡಲು ಮತ್ತೊಬ್ಬ ಪುರುಷನು ನಿಂತಿದ್ದನು. ಬಂದವನು, 'ಮಾಧವ ! ಇಷ್ಟು ಹೊತ್ತಿನಲ್ಲಿ ಇಲ್ಲಿಗೆ ಬಂದುದೇಕೆ?' ಎಂದು ಕೇಳಿದನು.



ಮಾಲಿನಿಯ ಮೃದುಹಾಸದಿಂದ ಏಳುತ್ತಿದ್ದ ಸಣ್ಣ ಅಲೆಗಳ ಸೌಂದರ್ಯವನ್ನು ನೋಡುವುದರಲ್ಲಿ ಮಗ್ನನಾಗಿದ್ದನು.

ಮಾ—ಬಾ, ಶಂಕರ, ಕೂತುಕೋ. ನೀನು ಬಂದುದೇನು?

ಶಂ— ಶೆಕೆಯನ್ನು ತಡೆಯಲಾರದೆ ಇಲ್ಲಿಯಾದರೂ ಸ್ವಲ್ಪ ತಣ್ಣಗಿರಬಹುದೆಂದು ಬಂದೆ.

ಮಾ— ನಾನೂ ಅದಕ್ಕಾಗಿಯೇ ಬಂದೆ.

ಶಂ—ನಿನಗೇನು, ಮನಸ್ಸು ಬಂದ ಹಾಗೆ ಮಾಡಬಹುದು. ಆವ ಆತಂಕವೂ ಇಲ್ಲ. ದೊರೆಯ ಮಗನ ಹಾಗಿದ್ದೀ.

ಮಾ—ಆಹಾ, ಅಡ್ಡಿಯೇನು! ಬೆಳಗ್ಗೆ ಏಳು ಗಂಟೆಗೆ ಹೊರಟರೆ ಹನ್ನೆರಡರ ವರೆಗೂ ಅಲೆವುದು. ಆ ಮೇಲೆ ನಾನೇ ಅಡಿಗೆ ಮಾಡಿಕೊಳ್ಳುವುದು ಪುನಃಮೂರರಿಂದಆರರವರೆಗೂ ಅಲೆಯುವುದು, ಅನಂತರ ಮನೆಗೆ ಬಂದರೆ 'ಬಂದೆಯಾ' ಎಂದು ಕೇಳುವವರು ಗತಿಯಿಲ್ಲ. ಎಂತಹ ದೊರೆತನ! ಇದರ ಮೇಲೆ ನನ್ನ ಕೆಲಸವೋ ಗಾಳಿ ಮಳೆ ಬಿಸಿಲೆನ್ನದೆ ಮನೆಮನೆಗೂ ಹೋಗಿ ಹಣ ವಸೂಲ್ಮಾಡುವುದು. ಒಂದು ಮನೆ ಊರಿನ ಈ ಕೊನೆಯಲ್ಲಿದ್ದರೆ ಮತ್ತೊಂದು ಮನೆ ಆ ಕೊನೆಯಲ್ಲಿರುವುದು. ಎಷ್ಟು ಜನರು ನನ್ನನ್ನು ಶಪಿಸುವರೋ, ಹಲವು ವೇಳೆ ಎಷ್ಟು ಸಂಕಟಪಟ್ಟು ಕೊಡು

ವರೋ ಆ ದೇವರೇ ಬಲ್ಲ. ಏನು ಮಾಡಲಿ ಈ ಪ್ರಪಂಚದಲ್ಲಿ ನನ್ನವರೆಂದು ಹೇಳಿಕೊಳ್ಳುವವರು ಯಾರೂ ಇಲ್ಲದಿದ್ದರೂ ನನ್ನ ಜೀವನವಾದರೂ ಸಾಗಬೇಕಷ್ಟೆ?

ಈ ಮಾತುಗಳನ್ನು ಹೇಳುತ್ತಿರಲು ಮಾಧವನ ಕಣ್ಣುಗಳಲ್ಲಿ ನೀರು ತುಂಬಿತು. ಇದನ್ನು ನೋಡಿ ಶಂಕರನು ವ್ಯಸನ ಪಟ್ಟು, 'ಮಾಧವ! ಈಗ ನೀನು ಮದುವೆಯಾದರೆ ನಿನ್ನದೆ ಒಂದು ಸಂಸಾರ. ಆ ಮೇಲೆ ನಿನ್ನ ಮಕ್ಕಳು, ಅವರ ಮಕ್ಕಳು ಹೀಗೆಯೇ ಹೆಚ್ಚುವುದು. ಆದ್ದರಿಂದ ಈಗ ನೀನು ಜೀವನ ನಡೆಯಬೇಕಲ್ಲಾ ಎಂದು ಮಾತ್ರವೆ ಅಲ್ಲದೆ ಉತ್ಸಾಹದಿಂದ ಕೆಲಸ ಮಾಡಬೇಕು. ಆದರೆ ಈಗ ನೀನು ಮೊದಲಗಿಂತಲೂ ಬಹು ಸೊರಗಿರುವಿ. ಬಿಸಿಲಿನಲ್ಲಿಯೇ ತಿರುಗುವ ಈ ಕೆಲಸವನ್ನು ಬಿಟ್ಟು ಬೇರೆ ಯಾವುದಾದರೂ ಕೆಲಸವನ್ನು ಮಾಡಬಾರಗೆ?

ಮಾ— ನಾನು ಅಷ್ಟು ವಿದ್ಯಾವಂತನೂ ಅಲ್ಲ. ಅಧಿಕಾರಿಗಳಿಗೆ ಕೊಡಲು ನನ್ನಲ್ಲಿ ಧನವೂ ಇಲ್ಲ. ಈ ಸ್ಥಿತಿ ಯಲ್ಲಿ ನನಗೆ ಕೆಲಸವನ್ನು ಕೊಡುವವರು ಯಾರು ?

ಶಂ:—ನಿಜ! ಈಗಿನ ಕಾಲದಲ್ಲಿ ಆವ ಕೆಲಸಕ್ಕೂ ದುಡ್ಡು ಮೊದಲು ಬೇಕು.

ಸ್ವಲ್ಪ ಹೊತ್ತು ಇಬ್ಬರೂ ಮೌನವಾಗಿದ್ದರು. ಶಂಕರನು ಹೊರಡಲುದ್ಯುಕ್ತನಾಗಿ ಮಾಧವನನ್ನು ಕರೆದನು. ಮಾಧವನು ಇನ್ನೂ ಸ್ವಲ್ಪ ಹೊತ್ತು ಇಲ್ಲಿಯೇ ಕುಳಿತುಕೊಳ್ಳುವೆನೆಂದು ಹೇಳಲು ಅವನು ಹೊರಟನು. ಆ ಅನಾಥನ ಕಣ್ಣುಗಳಿಂದ ತಡೆಯಿಲ್ಲದೆ ನೀರು ಸುರಿಯಿತು. ಕೆಲ ಹೊತ್ತಿನ ಮೇಲೆ ಕಣ್ಣೊರಿಸಿಕೊಂಡು ತನಗೆ ತಾನೇ ಹೇಳಿಕೊಂಡನು, 'ಇದುವರೆಗೂ ಅವನನ್ನು ನಂಬಿದವರಾರೂ ಕೆಟ್ಟಿಲ್ಲ. ಈಗ ನಾನಾದರೂ ಏಕೆ ಭಯಪಡಬೇಕು? ಇಂತಹ ಜಗತ್ತನ್ನು ಸೃಷ್ಟಿಸಿದ ಈಶ್ವರನಿಗೆ ಆವುದು ತಾನೆ ಅಸಾಧ್ಯ. ಅವನ ಚಿತ್ತದಲ್ಲಿದ್ದಂತಾಗಲಿ!' ಮಾಧವ ಕಣ್ಣೆತ್ತಿ ನೋಡಿದನು. ಸುತ್ತಲಿನ ಶೋಭೆ ಅವನಿಗೆ ಆನಂದವನ್ನೂ ಆಶ್ಚರ್ಯವನ್ನೂ ಉಂಟುಮಾಡಿತು- ಇದನ್ನು ಸೃಷ್ಟಿಸಿದ ಜಗದೀಶ್ವರನ ಮಹತ್ವವೆಂತಹದು! ಆಗವನು ಭಕ್ತಿಯಿಂದ,

'ನೀಲಕಂಠ ಭಕ್ತಾರ್ತಿವಿನಾಶನ ।
ಹರ ಹರ ಹರ ಹರ ಸಾಂಬ ಸದಾಶಿವ
ಶಿವ ಶಿವ ಶಿವ ಶಿವ ಸಾಂಬ ಸದಾಶಿವ ॥

ಎಂಬ ಗೀತವನ್ನು ಹಾಡತೊಡಗಿದನು. ಆ ಕಂಠವೆಷ್ಟು ಮಧುರ! ಒಂದಾವರ್ತಿ, ಎರಡಾವರ್ತಿ, ಹೀಗೆಯೇ, ಪುನಃ ಪುನಃ ಉಚ್ಚಸ್ವರದಲ್ಲಿ ಹಾಡುತ್ತಲಿದ್ದನು. ಆ ಅಮೃತಮಯವಾದ ಧ್ವನಿಯು ಮಾಲಿನಿಯ ಮೃದುರವದೊಂದಿಗೆ ಸೇರಿ ಈ ವಿಶ್ವ ಪ್ರಪಂಚದಲ್ಲಿ ಅದೆಲ್ಲಿಯೋ ಲೀನವಾಗಿ ಹೋಯಿತು. ಹೀಗೆ ಎಷ್ಟು ಹೊತ್ತಿನವರೆಗೆ ಹಾಡುತ್ತಲಿದ್ದನೋ ಆವಾಗ ಮನೆಗೆ ಹೋದನೋ ಆ ಮಾಲಿನಿಯೇ ಬಲ್ಲಳು.

---

## ಎರಡನೆಯ ಪರಿಚ್ಛೇದ.

ಬೆಳಗ್ಗೆ ಹನ್ನೊಂದರ ಸಮಯ. ವಿದ್ಯಾನಿಲಯಗಳಿಗೆ ಹೋಗುವ ಬಾಲಕಬಾಲಕಿಯರಿಂದಲೂ ಕೋರ್ಟುಕಚೇರಿಗಳಿಗೆ ಹೋಗುವ ಅನೇಕ ಜನರಿಂದಲೂ ಗೌರೀಪುರದ ರಾಜಬೀದಿಯು ನಿಬಿಡವಾಗಿತ್ತು. ನಡೆದು ಹೋಗುವವರಂತೂ ಅನೇಕ ಮಂದಿ. ಗಾಡಿ, ಬೈಸಿಕಲ್, ಮೋಟಾರ್ ಇವುಗಳ ಓಡಾಟವನ್ನಂತೂ ಹೇಳಿ ತೀರದು. ಕೆಲವರು 'ತಾವುಂಟೋ ಮೂರು ಲೋಕ ಉಂಟೋ' ಎಂಬ ಹೇಳಿಕೆಗೆ ಸರಿಯಾಗಿ ಹೋಗುವ ಮಾರ್ಗದಲ್ಲಿ ಲಕ್ಷ್ಯವಿಡದೆ ಅತಿ ರಭಸದಿಂದ ತಮ್ಮ ಕಾರುಗಳನ್ನು ಬಿಡುವರು. ಇಂತಹ ಕಾರುಗಳು ನಡೆದು ಮಾರ್ಗಸ್ಥರಿಗೆ ಮೃತ್ಯುಸ್ವರೂಪವಾಗಿಯೂ ಧನಿಕರಿಗೆ ವಿಮಾನಗಳಾಗಿಯೂ ತೋರುವುವು. ಮಿತಿಮೀರಿ ವೇಗವಾಗಿ ಅಜಾಗರೂಕರಾಗಿ ಬಿಡುವುದರಿಂದ ಅನೇಕರ ಪ್ರಾಣಹಾನಿಯಾಗುವುದು. ಇದೇಕೆ ಇಂಥವರ ಲಕ್ಷ್ಯಕ್ಕೆ ಬಾರದೋ ತಿಳಿಯದು.

ರಾಜಮಾರ್ಗದಲ್ಲಿ ಒಂದು ಅಂಗಡಿಯ ಮುಂದೆ ವಿಶೇಷ ಗದ್ದಲವಿದ್ದಿತು. ಜನರು ಗಾಯಹೊಂದಿ ಬಿದ್ದಿದ್ದ ಒಬ್ಬ ಯುವಕನನ್ನು ಸುತ್ತುಕಟ್ಟಿಕೊಂಡಿದ್ದರು. ಅವನು ಮತ್ತಾರೂ ಅಲ್ಲ; ನಮಗೆ ಪೂರ್ವಪರಿಚಿತನಾದ ಮಾಧವ. ಅವರ ಮಾತಿನಿಂದ ರಭಸವಾಗಿ ಹೋಗುತ್ತಿದ್ದ ಒಂದು ಮೋಟಾರಿನಿಂದ ತಳ್ಳಲ್ಪಟ್ಟು ಅವನು ಬಿದ್ದಿದ್ದನೆಂದೂ, ಮೋಟಾರಿನವನು ಲಕ್ಷಿಸದೆ ಹೊರಟು ಹೋಗಿದ್ದನೆಂದೂ ತಿಳಿಯಬಂದಿತು. ಗಾಡಿಯಲ್ಲಿ ಹೋಗುತ್ತಿದ್ದ ಒಬ್ಬ ಯುವಕನು ಗದ್ದಲವನ್ನು ನೋಡಿ ಇಳಿದು ಬಂದನು. ಈ ಸುದ್ದಿಯನ್ನು ಕೇಳಿ ಮರುಕಗೊಂಡು ನೆರೆದ ಜನರಂತೆ ಮರುಕಗೊಳ್ಳುವುದರಲ್ಲಿಯೇ ತೃಪ್ತನಾಗದೆ ಬಿದ್ದಿದ್ದ ಯುವಕನನ್ನು ತನ್ನ ಗಾಡಿಯಲ್ಲಿ ಹಾಕಿಕೊಂಡು ಸಮೀಪದಲಿದ್ದ ಒಂದು ಔಷಧಾಲಯಕ್ಕೆ ಕರೆದುಕೊಂಡು ಹೋದನು. ವೈದ್ಯನು ಗಾಯಗಳನ್ನು ತೊಳೆದು ಔಷಧವನ್ನು ಹಾಕಿ ಕಟ್ಟಿ ಇನ್ನು ಐದಾರು ದಿನಗಳು ಹೀಗೆಯೇ ಕಟ್ಟಬೇಕಾಗುವುದೆಂದು ತಿಳಿಸಿದನು. ಹೊರಗೆ ಬಂದ ಮೇಲೆ ಮಾಧವನುಯುವಕ

ನನ್ನು ವಂದಿಸಿ ತನ್ನ ಮನೆಗೆ ಹೋಗುವುದಕ್ಕೆ ಅಪ್ಪಣೆಯನ್ನು ಬೇಡಿದನು. ಯುವಕನು ಅದಕ್ಕೊಪ್ಪಲಿಲ್ಲ. ತಾನೂ ಜತೆಯಲ್ಲಿಯೇ ಬರುವುದಾಗಿ ತಿಳಿಸಿದನು. ಸ್ವಲ್ಪ ಹೊತ್ತಿನಲ್ಲಿಯೇ ಮಾಧವನ ಮನೆಯನ್ನು ತಲುಪಿದರು. ಮುಂಬಾಗಿಲಿಗೆ ಬೀಗ ಹಾಕಲ್ಪಟ್ಟಿದ್ದಿತು. ಯುವಕನು, 'ಮಹಾಶಯ! ತಮ್ಮ ಮನೆಯವರೆಲ್ಲರೂ ಎಲ್ಲಿಯೋ ಹೋದ ಹಾಗಿದೆ. ಈಗೇನು ಮಾಡುವಿರಿ? ಎಂದು ಕೇಳಿದನು.

ಮಾ:— ಸ್ವಾಮಿ! ಇಲ್ಲಿ ನನ್ನ ವಿನಾ ಇನ್ನಾರೂ ಇಲ್ಲ. ಈ ಪ್ರಪಂಚದಲ್ಲಿ ನಾನೊಬ್ಬನೇ. ಕಷ್ಟಕಾಲದಲ್ಲಿ ರಕ್ಷಿಸಿದ ದಯಾಳುಗಳ ಪರಿಚಯವನ್ನು ಕೇಳಬಹುದೆ ? ಕೇವಲ ದರಿದ್ರನಾದ ನಾನು ಏನನ್ನು ಮಾಡಲು ಸಮರ್ಥನಾಗಿದ್ದೇನೆ ? ಸಕಲ ವಿಧದಲ್ಲಿಯೂ ನಿಮಗೆ ಶ್ರೇಯಸ್ಸುಂಟಾಗಲೆಂದು ಆವಾಗಲೂ ಕೋರುವೆನು.

ಯುವಕ:— ನಾನು ನನ್ನ ಕರ್ತವ್ಯವನ್ನು ಮಾಡಿದೆನೇ ವಿನಾ ಬೇರೆ ಇಲ್ಲ. ನನ್ನನ್ನು ಗೋಪಾಲನೆಂದು ಕರೆಯುವರು. ಈಗ ನೀವು ಬಹು ನಿಶ್ಶಕ್ತರಾಗಿರುವಿರಿ. ಕೆಲದಿನಗಳ ಮಟ್ಟಿಗಾದರೂ ಆವ ಕೆಲಸವನ್ನೂ ಮಾಡಕೂಡದು. ಇಲ್ಲಿ ಒಬ್ಬರೇ ಇರುವುದು ಯೋಗ್ಯವಲ್ಲ. ತಾವು ದಯೆಯಿಟ್ಟು ನನ್ನ ಜತೆಯಲ್ಲಿಯೇ ಬರಬೇಕು.

ಮಾ:—ಇದುವರೆಗೂ ತಾವು ಮಾಡಿದ ಉಪಕಾರವೇ ಹೇರಳವಾಯಿತು. ಇನ್ನು ಹೆಚ್ಚು ತೊಂದರೆ ತೆಗೆದುಕೊಳ್ಳಬಾರದೆಂಬುದೇ ನನ್ನ ಪ್ರಾರ್ಥನೆ. ಇಂದಿನವರೆಗೂ ನಾನೊಬ್ಬನೇ ಇದ್ದೆನು. ಇನ್ನು ಚಿರಕಾಲವೂ ನಾನೊಬ್ಬಂಟಿಗನೇ. ಎಡಬಿಡದೆ ಕಾಪಾಡಿಕೊಂಡು ಬಂದ ಪರಮಾತ್ಮನು ಇಂದು ತಮ್ಮಲ್ಲಿ ಪ್ರತ್ಯಕ್ಷವಾಗಿ ಬಂದು ಸಹಾಯಮಾಡಿದನು ನನ್ನಿಂದ ಆವ ಕೆಲಸಕ್ಕೆ ಆತಂಕವಾಯಿತೋ ಏನೋ ತಾವು ಈಗ ಹೊರಡೋಣಾಗಲಿ.

ಗೋ:—ತಮಗೀಗ ಶಕ್ತಿಗುಂದುತ್ತ ಬಂದಿದೆ; ಜ್ವರ ಹೆಚ್ಚಾಗಿದೆ. ಹೆಚ್ಚು ವಾದ ಅನವಶ್ಯಕ.

ಮಾಧವ ಎಷ್ಟೋ ಹೇಳಿಕೊಂಡನು. ತಾನು ದರಿದ್ರನೆಂದೂ ಅಷ್ಟು ಉಪಚಾರಕ್ಕೆ ಯೋಗ್ಯನಲ್ಲವೆಂದೂ, ಅನಾಥನೆಂದೂ ಏನೇನೊ ಹೇಳಿಕೊಂಡ. ಗೋಪಾಲ ಆವುದನ್ನೂ ಕೇಳಿಲ್ಲಿಲ್ಲ. ಗುಣವಾಗುವವರೆಗೂ ಏನನ್ನೂ ಹೇಳದೆ ಆಮೇಲೆ ಅವನಿಗೆ ತೋರಿದಂತೆ ಮಾಡಬಹುದೆಂದು ಹೇಳಿ, ಅವನ ಮಾತನ್ನು ಲಕ್ಷಿಸದೆ ತನ್ನ ಮನೆಗೆ ಕರೆದುಕೊಂಡು ಹೋದನು.

ಗೋಪಾಲನ ತಾಯಿತಂದೆಗಳು ನಡೆದ ಸಂಗತಿಯನ್ನೆಲ್ಲಾ ಕೇಳಿ ಕರುಣೆಯಿಂದ ಮಾಧವನನ್ನು ತಮ್ಮ ಮಗನಂತೆ ಉಪಚರಿಸತೊಡಗಿದರು. ಮಾಧವನಿಗೆ ಜ್ವರ ವಿಶೇಷವಾಗಿದ್ದಿತು. ಬಿಸಿಲಿನ ತಾಪದಿಂದ ದಿನಕಳೆದ ಹಾಗೆಲ್ಲಾ ಹೆಚ್ಚೇ ಆಯಿತು. ಔಷಧೋಪಚಾರಗಳು ಯಥಾವಿಧಿಯಾಗಿ ನಡೆಯುತ್ತಿದ್ದುವು

ನಂಬಿದವರನ್ನು ದೇವರು ಎಂದೂ ಕೈಬಿಡುವುದಿಲ್ಲ. ಹಾಗಲ್ಲದಿದ್ದರೆ ಈ ಸಮಯದಲ್ಲಿ ಮಾಧವನು ತನ್ನ ಮನೆಯಲ್ಲಿ ಒಬ್ಬನೇ ಏನು ಮಾಡಬೇಕಾಗಿದ್ದಿತು? ಈಗಲಾದರೋ ಸ್ವಲ್ಪ ಹೊರಳಿದರೂ ಏನು ಬೇಕೆಂದು ಕೇಳಲು ಸಾಧ್ವಿಯಾದ ರಾಧಾಬಾಯಿಯು ಪಕ್ಕದಲ್ಲಿಯೇ ಇರುತ್ತಿದ್ದಳು. ಗೋಪಾಲನು ತನ್ನ ವಿರಾಮ ಕಾಲವನ್ನೆಲ್ಲಾ ಅವನ ಬಳಿಯಲ್ಲಿಯೇ ಕಳೆಯುತ್ತಿದ್ದನು.

---

## ಮೂರನೆಯ ಪರಿಚ್ಛೇದ.

ಮಾಧವನಿಗೆ ಗುಣವಾಗುತ್ತ ಬಂದಿತು. ಹೆಚ್ಚು ಓಡಾಡಲು ಶಕ್ತಿಯಿಲ್ಲ. ಅವನೆಷ್ಟು ಬೇಡವೆಂದರೂ ಗೋಪಾಲನು ಶಾಲೆಯ ಕೆಲಸವನೆಲ್ಲಾ ಬಿಟ್ಟು ಅವನ ಬಳಿಯೇ ಕುಳಿತಿರುವನು. ಅವರವರ ಸ್ನೇಹವು ದಿನೇದಿನೇ ಹೆಚ್ಚುತ್ತಾ ಬಂದಿತು. ಈಗ ಅವರು ಅಣ್ಣತಮ್ಮಂದಿರಂತಿದ್ದರು. ಆದರೆ ಮಾಧವನ ಪೂರ್ವ ಚರಿತ್ರೆಯು ಸಂಪೂರ್ಣವಾಗಿ ಗೋಪಾಲನಿಗೆ ತಿಳಿದಿರಲಿಲ್ಲ. ಅದನ್ನು ವಿಚಾರಿಸಬೇಕೆಂದಿದ್ದನು.

ಗೋ:—ಮಾಧವ! ಈ ದಿನ ಹೇಗಿದೆ ?

ಮಾ:—ಗೋಪಾಲ! ನಿಮ್ಮೆಲ್ಲರ ದಯದಿಂದ ಈಗ ನಾನು ಸಂಪೂರ್ಣವಾಗಿ ಗುಣಹೊಂದಿದ್ದೇನೆ.

ಗೋ:—ಅದೆಲ್ಲಾ ಸುಳ್ಳು. ಸಂಪೂರ್ಣವಾಗಿ ಗುಣಹೊಂದುವುದಕ್ಕೆ ಇನ್ನೂ ಕೆಲ ದಿನಗಳು ಬೇಕು. ಈಗ ಔಷಧವನ್ನು ತೆಗೆದುಕೊಂಡೆಯಾ ?

ಮಾ:—ಇಲ್ಲ. ಆದರ ಯೋಚನೆಯೇ ನನಗಿಲ್ಲ. ಅಮ್ಮ ತಪ್ಪದೆ ಔಷಧವನ್ನು ಕೊಡುವರು. ಗೋಪಾಲ ! ನಾನೇನು ಮಾಡಿದರೆ ಈ ಋಣವನ್ನು ತೀರಿಸಬಲ್ಲೆ? ಧನವಾದರೆ ಕಾಲಾನುಭಾಗದಲ್ಲಿ ಒಂದಕ್ಕೆ ಎರಡಾಗಿ ಕೊಡಬಹುದು. ಇದಕ್ಕೆ ಬೆಲೆ ಇದೆಯೆ ?

ಗೋ:— ಋಣವೂ ಇಲ್ಲ; ತೀರಿಸ ಬೇಕಾದುದು ಮೊದಲೇ ಇಲ್ಲ. ನಿನಗೆ ಗುಣವಾಗುವುದೇ ನಮ್ಮೆಲ್ಲರಿಗೂ ಮುಖ್ಯವಾಗಿ ಬೇಕಾದುದು.

ಸ್ವಲ್ಪ ಹೊತ್ತು ಇಬ್ಬರೂ ಸುಮ್ಮನಿದ್ದರು.

ಮಾ:— ನನಗೆ ಒಂದು ತಿಂಗಳ ರಜಾಕ್ಕಾಗಿ ಬರೆದಿರುವುದಾಗಿ ಹೇಳಿದಿಯಲ್ಲವೆ ?

ಗೋ:— ಹೌದು; ಈಗ ಅದರ ಯೋಚನೆಯೇಕೆ ?

ಮಾ:— ಯೋಚನೆಯೇಕೆಂದರೆ ಕೆಲದಿನಗಳ ಹೆಚ್ಚು ಕಡಿಮೆಯಾದರೂ ನನ್ನ ಕೆಲಸವೇ ಹೋಗುವುದು. ತಿಂಗಳೆಂದರೆ— ತಡಿ, ಇಂದು ತಾರೀಖೇನು?

ಗೋ:— ಹದಿಮೂರು

ಮಾ:—ಸರಿ; ನಾಳೆಗೆ ಸರಿಯಾಗಿ ರಜೆ ಮುಗಿಯುತ್ತೆ.

ಗೋ:— ಮುಗಿದರೇನು ? ಇನ್ನೊಂದು ತಿಂಗಳು ತೆಗೆದುಕೊಳ್ಳುವುದು.

ಮಾ:— ಅದಾಗದು. ಎಷ್ಟು ಕಾಲವಾದರೂ ನೀನು ಹೀಗೆಯೇ ಹೇಳುವಿ. ಇನ್ನೆಷ್ಟು ದಿನ ಹೀಗಿರಲು ಸಾಧ್ಯ. ಎಂದಿಗಿದ್ದರೂ ಒಂಟಿಯಾಗಿ ದುಡಿದು ಜೀವಿಸಬೇಕಾದ ನನಗೆ ಈ ಸುಖವೂ, ಈ ಸ್ನೇಹವೂ ಒಳ್ಳೆಯದಲ್ಲ.

ಗೋ:— ಮಾಧವ! ಪದೇ ಪದೇ ಒಂಟಿಗನೆಂದು ಹೇಳಿಕೊಳ್ಳುವುದೇಕೆ? ನಾವೆಲ್ಲರೂ ನಿನಗೆ ಆಪ್ತರಲ್ಲವೆ? ಈಗ ಹೇಳುತ್ತೇನೆ ಕೇಳು, ಸರ್ವವ್ಯಾಪಿಯಾದ ದೇವರೇ ಇದಕ್ಕೆ ಸಾಕ್ಷಿ ! ನಮ್ಮಿಬ್ಬರ ಸ್ನೇಹ ಚಿರಕಾಲವಿರತಕ್ಕದ್ದು. ನಾನು ನಿನ್ನನ್ನು ತಮ್ಮನಂತೆ ಪ್ರೀತಿಸುತ್ತೇನೆ. ಎಂದೆಂದಿಗೂ ಹಾಗೆಯೇ ನೋಡಿಕೊಳ್ಳುವೆನು. ಇಂದಿನಿಂದ ನೀನು ಆ ಕೆಲಸಕ್ಕೆ ಹೋಗುವ ಚಿಂತೆಯನ್ನು ಬಿಡು. ಕೇಳು; ನಡೆದ ಸಂಗತಿಯನ್ನು ಹೇಳುವೆನು. ನಿನಗೆ ರಜಾಕ್ಕೆ ಹೇಳುವುದಕ್ಕೆ ಹೋಗಿದ್ದೆ. ಆ ಅಂಗಡಿಯ ಯಜಮಾನನು ಎಂಟು ದಿನಗಳ ಮೇಲಾದರೆ ಆಗುವುದಿಲ್ಲ ಎಂದು ಹೇಳಿದರು. ನಾನದಕ್ಕೆ ಬೇರೆಯೊಬ್ಬನನ್ನು ಗೊತ್ತು ಮಾಡಿಕೊಳ್ಳಿರೆಂದು ಹೇಳಿದೆ. ನೀನು ನಿಶ್ಶಕ್ತನಾಗಿದ್ದುದರಿಂದ ಈವರೆಗೂ ನಿನಗೆ ಹೇಳಲಿಲ್ಲ.

ಮಾಧವನಿಗೆ ದಿಕ್ಕೇ ತೋಚದಂತಾಯಿತು. ಆ ಹದಿನೈದು ರೂಪಾಯಿಯ ಕೆಲಸಕ್ಕೆ ಎಷ್ಟೋ ಕಷ್ಟಪಟ್ಟಿದ್ದನು. ಊಟವಿಲ್ಲದೆ ಬಿಸಿಲಿನಲ್ಲಿ ಎರಡು ಮೂರು ಗಂಟೆಗಳವರೆಗೂ ಅಂಗಡಿಯ ಬಳಿಗೆ ಕಾದುನಿಂತಿದ್ದನು. ಎಷ್ಟೋ ಬೇಡಿಕೊಂಡಿದ್ದನು. ಇವೆಲ್ಲಾ ಅವನಿಗೆ ನೆನಪಾದುವು. ಒಂದು ಕ್ಷಣದಲ್ಲಿಯೇ ಜೀವನಕ್ಕೆ ಮಾರ್ಗವಾಗಿದ್ದ ಆ ಚಾಕರಿಯು ಹೋಯಿತು. ಮುಂದೇನು ಗತಿ? ಭಿಕ್ಷೆ ಬೇಡುವುದೆ? ಅವನ ಕಣ್ಣುಗಳಿಂದ ಕಂಬನಿಗಳುದುರಲಾಭಿಸಿದುವು. ಗೋಪಾಲನು ಆಶ್ಚರ್ಯದಿಂದ ಚಕಿತನಾದನು. ಅವನು ಮಾಧವ ಇದೇನು ? ಆ ಚಾಕರಿ ಹೋದುದಕ್ಕಾಗಿ ಅಳುವಿಯಾ? ಎಂದು ಕೇಳಿದನು.

ಮಾ:— ನೀನು ನನ್ನ ಪೂರ್ವ ಚರಿತ್ರೆಯನ್ನು ತಿಳಿದುಕೊಂಡಿದ್ದರೆ ಹೀಗೆ ಮಾಡುತ್ತಿರಲಿಲ್ಲ. ನಮ್ಮ ತಂದೆಯು ಧನಿಕರಾಗಿದ್ದರು. ನನಗೆ ಒಂದು ವರುಷವಾದಾಗ ನನ್ನ ತಾಯಿಯು ಕಾಲವಾದಳಂತೆ ಅದರ ಮೇಲೆ ನಮ್ಮ ತಂದೆಯು ಜೂಜು ಕುಡಿತ ಇವುಗಳಲ್ಲಿ ಹಣವನ್ನು ದುಂದು ಮಾಡಲು ಆರಂಭಮಾಡಿದರು. ನನ್ನ ಹದಿನಾಲ್ಕನೆಯ ವರುಷದಲ್ಲಿ ಅವರೂ ತೀರಿಕೊಂಡರು. ಇದ್ದ ಸ್ವಲ್ಪ ಹಣವೂ ಉತ್ತರಕ್ರಿಯೆಗಳಿಗೆ ವ್ಯವವಾಯಿತು. ಆಸ್ತಿಯೆಲ್ಲಾ ಸಾಲಕ್ಕೆ ಹೋಗಿ ಈಗ ನಾನಿರುವ ಗುಡಿಸಲೊಂದು ಮಾತ್ರ ಉಳಿದುಕೊಂಡಿತು. ಹಿಂದೆ ಬರುತ್ತಲಿದ್ದ ನೆಂಟರಿಷ್ಟರೂ, ಸ್ನೇಹಿತರೂ, ಎಲ್ಲರೂ ಕೈಬಿಟ್ಟರು. ಆಗ ಹೊಟ್ಟೆಗಿಲ್ಲದೆ ಅನೇಕ ದನಗಳ ವರೆಗೆ ಅಲೆದು ಪಡಬಾರದ ಕಷ್ಟವನ್ನೆಲ್ಲಾ ಪಟ್ಟು ಈ ಕೆಲಸಕ್ಕೆ ಸೇರಿಕೊಂಡೆನು.

ಮಾಧವನಿಂದ ಮುಂದೆ ಮಾತನಾಡಲಾಗಲಿಲ್ಲ. ಗೋಪಾಲನು ಅವನ ದುಃಖದಲ್ಲಿ ದುಃಖಿತನಾಗಿ ಇನ್ನು ಮುಂದೆ ಅಂತಹ ಕೆಲಸಕ್ಕೆ ಹೋಗಬೇಕಾದುದಿಲ್ಲವೆಂದು ಸಮಾಧಾನಪಡಿಸುತ್ತಿದ್ದನು.

ಮಾ:— ಅದೆಂದಿಗೂ ಆಗದು.

ಗೋ:— ಏಕೆ? ನೋಡು. ನಿನ್ನನ್ನು ಸೋಮಾರಿಯಾಗಿ ಕಾಲಕಳೆಯೆಂದು ನಾನು ಖಂಡಿತವಾಗಿಯೂ ಹೇಳುವುದಿಲ್ಲ. ಎಲ್ಲಿಯಾದರೂ ನೀನು ಕಷ್ಟಪಟ್ಟು ಜೀವಿಸಬೇಕು. ಇಲ್ಲಿಯೇ ಕೆಲಸ ಮಾಡಿಕೊಂಡಿರು.

ಮಾ:— ಇಲ್ಲಿ ನನಗೆ ಮಾಡುವುದಕ್ಕೆ ಬಹಳ ಕೆಲಸವಿದೆಯಲ್ಲವೆ ?

ಗೋ:— ಹೇಳುವುದನ್ನು ಪೂರ್ತಿಯಾಗಿ ಕೇಳು. ಈಗ ನಮ್ಮ ತಂದೆಗೆ ವಯಸ್ಸಾಯಿತು. ಮೊದಲಿನಂತೆ ಕೆಲಸ ಮಾಡಲು ಶಕ್ತಿಯಿಲ್ಲ. ಆದ್ದರಿಂದ ಅವರ ಔಷಧಾಲಯವನ್ನು ನೋಡಿಕೊಳ್ಳಲು ಒಬ್ಬನನ್ನು ಗೊತ್ತುಮಾಡಬೇಕೆಂದಿರುವರು. ಅದನ್ನು ನೀನೇ ಏತಕ್ಕೆ ಒಪ್ಪಿಕೊಳ್ಳಬಾರದು?

ಮಾ:— ನನಗೆ ಅಷ್ಟರ ಯೋಗ್ಯತೆಯಿದೆಯೆ ?

ಗೋ:— ಇದೆಯೆಂತಲೇ ಹೇಳಿದ್ದು ಆಲೋಚಿಸಿ ಹೇಳು. ಈಗ ಅವಸರವಿಲ್ಲ.

ಗೋಪಾಲನನ್ನು ಆರೋ ಕರೆದರು; ಅವನು ಎದ್ದು ಹೋದನು.

## ೪ನೆಯ ಪರಿಚ್ಛೇದ.

ರಾಮರಾಯರು ಗೌರೀಪುರದಲ್ಲಿ ಒಬ್ಬ ವೈದ್ಯರು. ಒಂದು ಔಷಧಾಲಯವನ್ನಿಟ್ಟು ತಾವೇ ಔಷಧಗಳನ್ನು ಕೊಡುತ್ತಿದ್ದರು. ಇವರು ಧನಿಕರಲ್ಲ. ಜೀವನಕ್ಕೆ ಸಾಕಾದಷ್ಟು ಅನುಕೂಲವಿದ್ದಿತು. ಇವರಲ್ಲಿ ವೈದ್ಯರಿಗೆ ಮುಖ್ಯವಾಗಿ ಬೇಕಾದ ಧಾರ್ಮಿಕತನ ಮತ್ತು ಕಾರುಣ್ಯ ಇವುಗಳು ಸಂಪೂರ್ಣವಾಗಿದ್ದುವು. ಬಡವರು ದೊಡ್ಡವರು ಎಂಬ ಭೇದವಿಲ್ಲ. ಆದ್ದರಿಂದ ಅನೇಕರು ಇವರ ಬಳಿಗೆ ಬರುತಿದ್ದರು. ಸಾಧ್ವೀಮಣಿಯಾದ ರಾಧಾಬಾಯಿಯು ಎಲ್ಲದರಲ್ಲಿಯೂ ಇವರಿಗೆ ಅನುರೂಪಳಾದ ಪತ್ನಿಯಾಗಿದ್ದಳು. ನಮಗೆ ಪೂರ್ವಪರಿಚಿತನಾದ ಗೋಪಾಲನು ಮತ್ತು ಸರಳೆ ಇವರು ರಾಮರಾಯರ ಮಕ್ಕಳು. ಗೋಪಾಲನಿಗೆ ಹದಿನೇಳು ವರುಷ; ಪ್ರವೇಶ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ್ದನು. ಮುಂದೆ ತಂದೆಯಂತೆ ತಾನೂ ವೈದ್ಯನಾಗಬೇಕೆಂಬುದೇ ಇವನ ಇಷ್ಟ. ಸರಳೆಗೆ ಹದಿನಾಲ್ಕು ವರುಷ ಇವಳ ಗಂಡನು ಬಿ. ಎ. ಪರೀಕ್ಷೆಗೆ ಓದುತ್ತಲಿದ್ದನು.

ರಾಮರಾಯರು ಪ್ರಾತರ್ವಿಧಿಗಳನ್ನು ತೀರಿಸಿ ತಮ್ಮ ಕೋಣೆಯಲ್ಲಿ ಕುಳಿತ್ತಿದ್ದರು. ಗೋಪಾಲ ಎದುರಿಗೆ ನಿಂತಿದ್ದನು.

ರಾಮ:— ಮಾಧವನಿಗೆ ಗುಣವಾಗಿ ಹೆಚ್ಚು ಕಡಿಮೆ ತಿಂಗಳಾಯಿತು. ಈಗ ಅವನು ಏನು ಮಾಡಬೇಕೆಂದಿರುವನು?

ಗೋ:— ಮೊದಲಿನಂತೆಯೇ ಆವುದಾದರೂ ಕೆಲಸಕ್ಕೆ ಸೇರಬೇಕೆಂದಿರುವನು. ನಾನು ಇಲ್ಲಿಯೇ ಇದ್ದು ಔಷಧಾಲಯದಲ್ಲಿ ತಮಗೆ ಸಾಹಾಯಮಾಡಿಕೊಂಡಿರುವಂತೆ ಹೇಳಿದೆನು.

ರಾ:— ಸರಿ; ನೀನು ಹೇಳಿದ ಮೇಲೆ ಅವನ ಪೂರ್ವೋತ್ತರವನ್ನು ವಿಚಾರಿಸಿದೆ. ತಾಯಿತಂದೆಗಳಿಬ್ಬರೂ ಸದ್ವಂಶಸ್ಥರೆ. ಏನೋ ಗ್ರಹಚಾರ ದೋಷದಿಂದ ತಂದೆಯು ಜೂಜು-ಕುಡಿತಗಳಲ್ಲಿ ಬಿದ್ದನು. ಹುಡುಗನೂ ನಡತೆತಂತ. ಸಹಾಯಮಾಡುವುದಕ್ಕೆ ಯೋಗ್ಯನಾಗಿದ್ದಾನೆ. ನೀನು ಹೇಳಿದ್ದು ಸರಿಯೇ ಆಯಿತು. ಇನ್ನು ಮುಂದೆ ಅವನೂ ಒಬ್ಬ ಮಗನಂತೆ ಇಲ್ಲಿಯೇ ಇರಲಿ.

ಗೋಪಾಲನಿಗೆ ಬಹು ಸಂತೋಷವಾಯಿತು. ಆದಿನವೇ ಇದನ್ನು ಮಾಧವನಿಗೆ ತಿಳಿಸಿದನು. ಮಾಧವನಿಗಾದರೋ ಅಷ್ಟೆ ಸಂತೋಷವಾಯಿತು. ಮರುದಿನದಿಂದಲೇ ಲೆಖ್ಖಪತ್ರಗಳನ್ನು ನೋಡಿಕೊಳ್ಳುವುದು, ಔಷಧಗಳನ್ನು ಕೊಡುವುದು ತರಿಸುವುದು ಮುಂತಾದುವುಗಳನ್ನು ಅವನೇ ನೋಡಿಕೊಳ್ಳಲು ಆರಂಭಮಾಡಿದನು. ರೋಗಿಗಳನ್ನು ಪರೀಕ್ಷಿಸಿ ಚಿಕಿತ್ಸೆಯನ್ನು ಹೇಳುವುದರ ವಿನಾ ರಾಮರಾಯರಿಗೆ ಮತ್ತಾವ ಕೆಲಸವೂ ಬೀಳುತ್ತಿರಲಿಲ್ಲ. ಇಷ್ಟೇ ಅಲ್ಲದೆ ಮಾಧವನು ಮನೆಯಲ್ಲಿ ತನ್ನ ಕೈಲಾದ ಕೆಲಸವನ್ನೆಲ್ಲಾ ಮಾಡುತ್ತಿದ್ದನು. ಇವನ ನಡೆನುಡಿಯು ಸರ್ವಸಮರ್ಪಕವಾಗಿತ್ತು. ಎಲ್ಲರ ಪ್ರೀತಿಗೂ ಪಾತ್ರನಾಗಿದ್ದನು.

ಗೋಪಾಲ ಮಾಧವ ಇವರ ಸ್ನೇಹ ಶುಕ್ಲಪಕ್ಷದ ಚಂದ್ರನಂತೆ ದಿನೇ ದಿನೇ ವೃದ್ಧಿಯಾಯಿತು.

---

## ೫ನೆಯ ಪರಿಚ್ಛೇದ.

ಸರಳೆ ತಾಯಿಯಂತೆ ಸದ್ಗುಣಿ, ಆದರೆ ಅಷ್ಟೇನು ರೂಪವತಿಯಲ್ಲ. ಈ ವಿಷಯದಲ್ಲಿ ಅವಳನ್ನು ಗೋಪಾಲನ ತಂಗಿಯೆಂದು ಹೇಳುವುದು ಕಷ್ಟವಾಗಿತ್ತು. ಅವಳು ಲೋಅರ್ ಸೆಕೆಂಡರಿ ಪರೀಕ್ಷೆಯಲ್ಲಿ ತೇರ್ಗಡೆಯಾದೊಡನೆಯೇ ಶಾಲೆಯನ್ನು ಬಿಟ್ಟಿದ್ದಳು. ತಾಯಿತಂದೆಗಳಿಗೆ ಓದಿಸುವುದಕ್ಕೆ ಇಷ್ಟವಾದರೂ ಅವರ ಅತ್ತೆಯು ಇದಕ್ಕೆ ಒಪ್ಪಿಗೆಯನ್ನು ಕೊಡಲಿಲ್ಲ. ಈಗ ಮನೆಯ ಕೆಲಸಗಳಲ್ಲಿ ಸಾಹಾಯ ಮಾಡುವುದರಲ್ಲಿಯೂ, ಟೋಪಿ ಕಾಲುಚೀಲ ಮುಂತಾದುವುಗಳನ್ನು ಹೆಣೆಯುವುದರಲ್ಲಿಯೂ, ನೀತಿ ಬೋಧಕವಾದ ಮತ್ತು ಇತರ ಗ್ರಂಥಗಳನ್ನು ಓದುವುದರಲ್ಲಿಯೂ ಕಾಲವನ್ನು ಕಳೆಯುತ್ತಿದ್ದಳು. ಇವರ ಮನೆಯ ಸಮೀಪದಲ್ಲಿಯೆ ಇದ್ದ ಅಮಲ್ದಾರ್ ಗೋವಿಂದರಾಯರ ಮಗಳು ಸೀತೆ. ಇವಳ ಪರಮಾಪ್ತ ಗೆಳತಿ. ಸೀತೆಗೆ ಹದಿನಾಲ್ಕು ವರುಷ, ಇನ್ನೂ ಮದುವೆಯಿಲ್ಲ. ಲೋವರ್ ಸೆಕೆಂಡರಿ ಪರೀಕ್ಷೆಯಲ್ಲಿ ತೇರ್ಗಡೆಯಾಗಿ ಮುಂದಿನ ತರಗತಿಯಲ್ಲಿ ಓದುತ್ತಿದ್ದಳು.

ಸೀತೆ ಪ್ರತಿನಿತ್ಯವೂ ಶಾಲೆ ಮುಗಿದೊಡನೆಯೇ ರಾಮರಾಯರ ಮನೆಗೆ ಬರುತ್ತಿದ್ದಳು. ಸರಳೆಯೊಡನೆ ಸ್ವಲ್ಪ ಹೊತ್ತು ವಿನೋದವಾಗಿ ಕಾಲಕಳೆದು ಅನಂತರ ಮನೆಗೆ ಹೋಗುತ್ತಿದ್ದಳು. ಕೆಲವು ವೇಳೆ ಸರಳೆಯೇ ಅಲ್ಲಿಗೆ ಹೋಗುತ್ತಿದ್ದಳು. ಹೀಗೆ ಪರಸ್ಪರ ಅವರು ಸ್ನೇಹದಿಂದ್ದರು. ಈ ದಿನವೂ ಹಾಗೆಯೆ ಸೀತೆ ಬಂದಿದ್ದಳು.

ರೂಪದಲ್ಲಿ ಸೀತೆ ಲಕ್ಷ್ಮಿಯಂತಿದ್ದಳು. ಮೈಬಣ್ಣವು ಕೇತಕಿವರ್ಣವನ್ನು ಧಿಕ್ಕರಿಸುವಂತಿದ್ದಿತು. ಅವಳ ದೇಹಲತೆಯು ಕೋಮಲತೆಯನ್ನು ನೋಡಿ ಕಮಲದ ಬಳ್ಳಿಯು ನಾಚಿಕೊಂಡು ಕೆಸರಿನಲ್ಲಿ ಅಡಗಿಕೊಂಡಿರಬೇಕು. ನಿಜ; ಆ ಮೃದುಲತೆಯನ್ನು ನೋಡಿ, ಅದೆಷ್ಟು ಮನೋಹರವಾಗಿದೆ! ವೇಣೀ

ಬದ್ಧವಾದ ಅವಳ ಕೂದಲು ಸರ್ಪವೆಂದು ಭ್ರಮಿಸುವಂತಿದೆ. ಮೇಣವನ್ನು ಹಚ್ಚಿ ಹಿಂಸಿಸುವ ಅವಶ್ಯಕತೆಯಿಲ್ಲದೆ ತಾವಾಗಿಯೇ ಉಂಟಾಗಿರುವ ಆ ಮುಂಗುರುಳುಗಳು ಭ್ರಮರಗಳಂತೆ ವಿಶಾಲವಾದ ಲಲಾಟದ ಮೇಲೆ ಮಂದಾನಿಲನ ಮೃದು ಸಂಚಲನದಿಂದ ನರ್ತಿಸುತ್ತಲಿವೆ. ನೀವೆಂದಾದರೂರ ಎರಳೆಯ ಕಣ್ಣುಗಳ ಆಕಾರವನ್ನೂ ಅವುಗಳ ಚಂಚಲತೆಯನ್ನೂ ನೋಡಿರುವಿರಾ? ಅಂತಹ ಕಣ್ಣುಗಳನ್ನು ನೋಡಿ ನೀವು ಆನಂದಿಸದಿದ್ದರೆ ನೀವು ರಸಿಕರೇ ಅಲ್ಲ. ನೋಡಿ, ಆ ಚಂಚಲತೆಯು ವಿದ್ಯುತ್ತನ್ನೂ ಹಾಸ್ಯಮಾಡುತ್ತಲಿದೆ! ಸದಾ ನೆಲೆಸಿರುವ ಆ ಮುಗುಳ್ನಗೆ, ಅದೆಷ್ಟು ಮಧುರ ! ಸರಳೆಯು ಕೈಯಲ್ಲಿರುವುದು ಕಮಲದ ಮೊಗ್ಗುಗಳೆಂದು ತಿಳಿದಿರಾ? ಏನು ಭ್ರಮೆ, ವೈಶಾಖದಲ್ಲಿ ಕಮಲಗಳೆಲ್ಲಿ ಬರಬೇಕು! ಅಲ್ಲಿ ಅವಳು ಸೀತೆಯ ಕೈಗಳನ್ನು ಹಿಡಿದುಕೊಂಡು ಹಾಸ್ಯಮಾಡುತ್ತಿರುವಳು. ಸಾಮಾನ್ಯವಾದ ಬೂದುಬಣ್ಣದ ಸೀರೆ, ಸೀತೆಯುಟ್ಟಿರುವುದರಿಂದ ಅದೆಷ್ಟು ಶೋಭಿಸುತ್ತಿರುವುದು!

ಸರಳೆ ಸೀತೆಯ ಎರಡು ಕೈಗಳನ್ನೂ ಹಿಡಿದುಕೊಂಡು ತನ್ನ ಕೊಟಡಿಗೆ ಕರೆದುಕೊಂಡು ಹೋದಳು.

ಸರಳೆ:—ಸೀತಾ! ಮತ್ತೆ, ಏನು ಕಾರಣ ಇಷ್ಟು ತಡವಾಯಿತು?

ಸೀ:—ಇವತ್ತು ಹೊಸವಿಧವಾದ ಹೊಲಿಗೆಯನ್ನು ಕಲಿತುಕೊಂಡೆ. ಆದ್ದರಿಂದ ಶಾಲೆಯಿಂದ ಬರುವಾಗಲೇ ಸ್ವಲ್ಪ ತಡವಾಯಿತು.

ಸ:—ಎಂಥ ಹೊಲಿಗೆ?

ಸಿ:—ತೋರಿಸುವೆನು. ಅದಕ್ಕಾಗಿಯೇ ಅದಕ್ಕೆ ಬೇಕಾಗುವ ಧಾರವನ್ನು ತಂದಿರುವೆನು.

ಸ:—ಮತ್ತೆ, ಇವತ್ತು ಬೇಡಮ್ಮ.

ಸಿ:—ಅದೇಕೆ ಸರಳಾ! ಅಷ್ಟೊಂದು ಬೇಸರ? ಏನೂ ಆಲಸ್ಯವಿಲ್ಲವಷ್ಟೆ.

ಸ:—ಆಲಸ್ಯವೇನೂ ಇಲ್ಲ. ಏನೋ ಬೇಸರ.

ಸಿ:—ಹಾಗೆಯೇ ಆಗಲಿ. ನಿನಗಾವಾಗ ಬೇಕಾದರೂ ಹೇಳಿಕೊಡುವೆನು. ನಿಮ್ಮ ಅಣ್ಣನಿಗೆ ಈಗ ಸಂಪೂರ್ಣವಾಗಿ ಗುಣವಾಗಿದೆಯಷ್ಟೆ?

ಸ:—(ನಗುತ್ತ) ಮತ್ತೆ ಈಗ ಅಣ್ಣನೆಂದರೆ ತಿಳಿಯೋದಿಲ್ಲ; ಗೋಪಾಲನೊ ಮಾಧವನೋ?

ಸೀ:—ದೇವರ ದಯೆಯಿಂದ ಗೋಪಾಲನು ಸುಖವಾಗಿಯೇ ಇದ್ದಾನಲ್ಲವೆ?

ಸ:—ಹಾಗಾದರೆ ಮಾಧವ; ಅವನಿಗೇನು? ಚೆನ್ನಾಗಿಯೇ ಇದ್ದಾನೆ.

ಸೀ:—ಹಾಗಲ್ಲ; ಇನ್ನೂ ನಿಶ್ಶಕ್ತಿಯಿದೆಯೆಂದು ಈಗ ಕೆಲ ದಿನಗಳಿಂದೆ ನೀನು ಹೇಳಲಿಲ್ಲವೆ? [ಸಶೇಷ]

---

## ಜಗವೆಂಬ ಗುಡಿ.

॥ ವಾರ್ಧಿಕ ಷಟ್ಪದಿ ॥

ಜಗದೊಡೆಯ ನೆಲಸಿರುವ ಜಗವೆಂಬ ದೇಗುಲದ ।
ಬಗೆಬಗೆಯ ಸೌಂದರ್ಯಸಾರಮಂ ನೋಡುವಾ! ।
ಚಿಗಿತು ಪೂಬಿಡುವ ತರು-ಲತೆಗಳಿಂ ಪೋಣಿಸಿದ
ವನಮಾಲೆ ಮೆರೆವುದೆಂತು ॥
ಖಗಜಾತಿ ನಲುವಿಂದ ಮಿಂಚರದೆ ಪಾಡುವುದು ।
ಸೊಗಸಾದ ಗಂಧಮಂ ಕುಸುಮತತೀ ಬಿರುವದು ।
ಮುಗಿಲೊಳುಜ್ವಲಿಸುವುದು ರವಿಯೆಂಬ ದೀಪ—
ಮೂರಡಿ ಮಂತ್ರಮಂ ನುಡಿವುದು ॥೧॥

ಅಡಿಗಡಿಗೆ ಹೊಳೆಯಾಗಿ ಮುರಹರನ ತೀರ್ಥವೀ— ।
ಗುಡಿಯೊಳಗೆ ಹರಿವುದತಿಮಂಜುಲಧ್ವನಿಯಿಂದೆ ।
ಸಡಗರದಿ ನಭದಿಂದೆ ಸುರಿವುದಭಿಷೇಕಜಲ
ಮೋಡಗಳು ಭೇರಿಹೊಡೆಯೆ ॥
ಉಡುರಾಜ ಮಧ್ಯದಲಿ ಬೆಳಗುವನು ಕೆಲಬಲಕೆ ।
ಕಿಡಿಗಳಂದದಿ ತಾರೆಗಳು ಪೊಳೆದು ಕಂಗೊಳಿಸೆ ।
ಕಡಲೆಂಬ ಮುಕುರದೊಳು! ಗುಡಿಯೆಂಬ ಜಗವಾಯ್ತು ।
ಜಗವೆಂಬ ಗುಡಿಯಾಯಿತು! ॥೨॥

—ದಿನಕರ ದೇಸಾಯಿ, ಅಂಕೋಲಾ.

# ಪಾಶ್ಚಿಮಾತ್ಯ ತತ್ವಜ್ಞಾನದ ರೂಪರೇಷೆಯು.

ಲೇ:—ಶ್ರೀ. ಕೃಷ್ಣಾಚಾರ ಜೋಯಿಸ್ಸ ಬಿ. ಎ. (ದ. ಹೈದ್ರಾಬಾದ)

## ಪ್ರಾಚೀನ ತತ್ವಜ್ಞಾನವು.

ಮಾನವಿಸಂಸ್ಕೃತಿಯ ಬೆಳವಣಿಗೆಯನ್ನು ಸೂಕ್ಷ್ಮದೃಷ್ಟಿಯಿಂದ ನಿರೀಕ್ಷಿಸಲು ಒಂದು ಸೋಜಿಗವಾದ ಮಾತು ಕಂಡು ಬರುವುದೇನಂದರೆ, ಮನುಷ್ಯನು ಸಾವಿರಾರು ವರ್ಷಗಳವರೆಗೆ ಅವಿಶ್ರಾಂತ ಶ್ರಮದಿಂದ ಬೌದ್ಧಿಕ ಪ್ರಗತಿಯನ್ನು ಮಾಡಿ, ಹಿಂದಿರುಗಿ ನೋಡಿ, ಸಂಶಯ ಪಟ್ಟು ಅದರ ಪರೀಕ್ಷಣೆಯನ್ನು ಮಾಡಿ, ಅದರಲ್ಲಿ ದೋಷಗಳನ್ನು ತೆಗೆಯಲು ಯತ್ನಿಸುವನು. ಇಷ್ಟೇ ಅಲ್ಲ. ಕೆಲವುಸಾರೆ ತಾನು ಮಾಡಿದ ಪ್ರಗತಿಯನ್ನೇ ಬೇರಿಸಿಂದ ಕಿತ್ತಿಹಾಕಲು ಉದ್ಯುಕ್ತನಾಗುವನು! ಇದರ ಕಾರಣಗಳು ಏನೇ ಇರಲಿ; ಜಗತ್ತಿನ ಇತಿಹಾಸದಲ್ಲಿ ಈ ಮಾತಿಗೆ ದೃಷ್ಟಾಂತಗಳು ವಿಪುಲವಾಗಿ ಸಿಗುತ್ತವೆ. ಒಂದು ಕಾಲದವರೆಗೆ ಉತ್ಪತ್ತಿಕಾರಕ ಶಕ್ತಿಗಳು ಕೆಲಸಮಾಡುತ್ತಿದ್ದು ಅನೇಕ ಮಾನವೀ ಸಂಸ್ಥೆಗಳು ಅಸ್ತಿತ್ವದಲ್ಲಿ ಬರುವುವು. ಈ ಕಾಲವು ಮುಗಿದ ಕೂಡಲೆ ಇವುಗಳಿಗೆ ವಿರುದ್ಧವಾದ ಪರೀಕ್ಷಕ ಅಥವಾ ಧ್ವಂಸಕ ಶಕ್ತಿಗಳು ಹುಟ್ಟಿ, ಆ ಸಂಸ್ಥೆಗಳ ಪರೀಕ್ಷಣೆ ಅಥವಾ ನಾಶಮಾಡಲು ಯತ್ನಿಸುವುವು. ಈರೀತಿಯಾಗಿ ಕ್ರಿಯೆ ಮತ್ತು ಪ್ರತಿಕ್ರಿಯೆಗಳ ಕಲಹದಿಂದಲೇ ಮನುಷ್ಯನ ಉನ್ನತಿಯು ಆಗುತ್ತಿರುವುದು. ಆದರೆ ಈ ಪ್ರತಿಕ್ರಿಯೆಯ ಕಾಲದಲ್ಲಿ ಎರಡು ವಿಧವಾದ ಜನರು ಹುಟ್ಟುವರು. ಮೊದಲನೆಯ ವರ್ಗದವರಿಗೆ ಸುಧಾರಕರೆಂತಲೂ, ಎರಡನೆಯ ವರ್ಗದವರಿಗೆ ವಿರೋಧಿಗಳು ಅಥವಾ ಧಾರ್ಮಿಕ ಪರಿಭಾಷೆಯಲ್ಲಿ ಹೇಳುವುದಾದರೆ ಪಾಖಂಡಿಗಳೆಂತಲೂ ಅನ್ನಬಹುದು.

### ಥೆಲೀಸನು.

ಸುಧಾರಕನೇ ಆಗಲಿ, ಅಥವಾ ಪಾಖಂಡಿಯೇ ಆಗಲಿ, ಥೆಲೀಸನೆಂಬ ಮೊದಲನೆಯ ತತ್ವಜ್ಞಾನಿಯು ಕ್ರಿ. ಶಕದ ಆರುನೂರು ವರ್ಷಗಳ ಪೂರ್ವದಲ್ಲಿ ಆಗಿನ ಧರ್ಮ ಸಂಸ್ಥೆಗಳ ವಿರುದ್ಧ ರಣಭೇರಿಯನ್ನು ಹೊಡಸಿದನು. ಧರ್ಮಕ್ಕೆ ಅಭಿಮಾನಿ ದೇವತೆಯಾದ ಶ್ರದ್ಧೆಯಿಂದ ಆ ಸಂಸ್ಥೆಗಳಲ್ಲಿ ಹುಟ್ಟಿದ ದೋಷಗಳನ್ನು ತಿರಸ್ಕರಿಸುವುದಲ್ಲದೇ, ವಿಶ್ವದ ತೊಡಕನ್ನು ಬಿಡಿಸಲಿಕ್ಕೆ ಶ್ರದ್ಧೆಯು ದುರ್ಬಲ ಮತ್ತು ಅಯೋಗ್ಯವಾದ ವಸ್ತುವೆಂದು ಗಟ್ಟಿಯಾಗಿ ಪ್ರತಿಪಾಸಿದನು. ವಸ್ತು ತತ್ವವನ್ನು ತಿಳಿಯಲಿಕ್ಕೆ ಬುದ್ಧಿ ಒಂದೇ ಸಾಧನವೆಂದು ಯೋಚಿಸಿ ಅಂಥ ಶ್ರದ್ಧೆಯಿಂದ ಮಲಿನವಾದ ಬುದ್ಧಿಯನ್ನು ಶುದ್ಧಮಾಡಿ, ತತ್ವಗಳ ಶೋಧಕ್ಕೋಸ್ಕರ ಆ ಶುದ್ಧಬುದ್ಧಿಯನ್ನು ಮಾರ್ಗದರ್ಶಕವಾದ ದೀವಟಿಗೆಯನ್ನು ಮಾಡಿದನು. ಈ ವಿಧವಾದ ಥೆಲೀಸನ ಕ್ರಾಂತಿಕರ ವಿಚಾರಗಳ ಪರಿಣಾಮದಿಂದ ಬಹು ಪುರಾತನ ಧರ್ಮಶಾಸ್ತ್ರದಿಂದ ಭಿನ್ನವಾದ ತತ್ವಜ್ಞಾನ ಶಾಸ್ತ್ರವು ಅಸ್ತಿತ್ವದಲ್ಲಿ ಬಂದು, ಬುದ್ಧಿಗೆ ಧರ್ಮದ ಸೆರೆಮನೆಯಿಂದ ಬಿಡುಗಡೆಯಾಯಿತು.

## ನಿಸರ್ಗದ ತತ್ವಜ್ಞಾನವು, ಮತ್ತು ಜಗತ್ತಿನ ಮೂಲ ಕಾರಣವು.

ಈ ವಿಶಾಲವಾದ ಆಕಾಶವು, ಅದರೊಳಗಿನ ಸೂರ್ಯ, ಚಂದ್ರ, ನಕ್ಷತ್ರಗಳು, ಮತ್ತು ಭೂಮಿ ಮತ್ತದರ ಮೇಲಿನ ಚಿತ್ರ ವಿಚಿತ್ರ ವಸ್ತುಗಳಲ್ಲಿ ವ್ಯಕ್ತವಾಗುವ ಸೃಷ್ಟಿಸೌಂದರ್ಯವನ್ನು ನೋಡಿ, ಆಶ್ಚರ್ಯಪಟ್ಟು, ಇವುಗಳನ್ನು ಯಾರು ನಿರ್ಮಾಣಮಾಡಿರಬಹುದೆಂದು ವಿಚಾರಮಾಡಲಾರಂಭಿಸಿದರು ತಾತ್ವಿಕ ಪರಿಭಾಷೆಯಲ್ಲಿ ಹೇಳುವುದಾದರೆ ಈ ವಸ್ತುಗಳ ಮೂಲಕಾರಣ ( First Principle ) ವೇನು ಮತ್ತು ವಸ್ತುಗಳಿಗೆ ಈಗಿದ್ದ ಸ್ಥಿತಿಯು ಹೇಗೆ ಪ್ರಾಪ್ತವಾಯಿತು ? ಅಂದರೆ ಜಗತ್ತಿನ ಆದಿಕಾರಣ ಮತ್ತು ಸೃಷ್ಟಿಯ ಉತ್ಪತ್ತಿಯ ಪದ್ಧತಿಯನ್ನು ಕುರಿತು ಜ್ಞಾನಿಗಳು ವಿಚಾರಬೆಳಿಸಿದರು.

ಉದಕವು ಜಗತ್ತಿನ ಮೂಲಕಾರಣವೆಂದು ಪಾಶ್ಚಿಮಾತ್ಯ ತತ್ವಜ್ಞಾನದ ಜನಕನಾದ ಥೆಲೀಸನು ಪ್ರತಿಪಾದಿಸಿದನು. ಈ ಉದಕದಿಂದಲೇ ಜಗತ್ತಿನೊಳಗಿನ ಭಿನ್ನಭಿನ್ನ ವಸ್ತುಗಳು ಅಸ್ತಿತ್ವದಲ್ಲಿ ಬಂದು ಅದರಲ್ಲಿಯೇ ಲಯವಾಗುವುವು. ಪ್ರತಿಯೊಂದು ವಸ್ತುವಿನ ಜೀವಿತವು ಉದಕವೆಂದೇ ಈ ತತ್ವಜ್ಞಾನಿಯು ಕಂಡುಹಿಡಿದನು ಇದಲ್ಲದೆ ಥೇಲಿಸನು ಮೊದಲನೆಯ ಭೂಮಿತಿ ಶಾಸ್ತ್ರಜ್ಞನೂ ಜ್ಯೋತಿಷಿಯೂ ಇದ್ದನೆಂದು ತಿಳಿದು ಬರುವುದು.

## ೨ ಅನೆಕ್ಸಮೆಂಡರನು ಮತ್ತು (೩) ಅನೆಕ್ಸಮಿನಿಯು

ಈ ನೀರಿನ ತತ್ವಜ್ಞಾನಿಯು ಶಿಷ್ಯನಾದ ಅನೆಕ್ಸಮೆಂಡರನು ತನ್ನ ಗುರುವಿನ ಪಂಥವನ್ನೇ ಎತ್ತಿಹಿಡಿದವನು. ಆದರೆ ಈತನು ಆದಿಕಾರಣ ಉದಕವಲ್ಲ, ಅನಂತವಾತಾವರಣವೆಂದು ಹೇಳಿದನು. ಈ ಅನಂತ ವಾತಾವರಣದಿಂದಲೇ ವಿಶ್ವದಲ್ಲಿ ಅಸಂಖ್ಯ ಜಗತ್ತುಗಳು ಹುಟ್ಟಿ ಅವರಲ್ಲಿಯೇ ನಾಶವಾಗುವುವು. ಜೀವಿಗಳು ಮೊದಲು ನೀರಿನಲ್ಲಿ ಹುಟ್ಟಿದುವು. ಮನುಷ್ಯನು ಮೀನದಿಂದ ಹುಟ್ಟಿದನು. ಪ್ರಪಂಚದೊಳಗಿನ ಸರ್ವ ವಸ್ತುಗಳು ಅನಿತ್ಯವಿದ್ದು, ಮೂಲಕಾರಣವೊಂದೇ ನಿತ್ಯ ಮತ್ತು ಅವಿನಾಶಿಯಾದೆಂದು ಈತನ ಮತವಾಗಿತ್ತು. ಇದೇ ವಿಚಾರಸರಣಿಯನ್ನನುಸರಿಸಿ ಈತನ ಶಿಷ್ಯನಾದ ಅನೆಕ್ಸಮಿನಿಯು ಜಗತ್ತಿನ ಮೂಲಕಾರಣ 'ವಾಯು' ಎಂದು ಪ್ರತಿಪಾದಿಸಿದನು.

### ಉತ್ಪತ್ತಿಯ ಕೂಟ ಪ್ರಶ್ನವು.

(The Problem of Becoming.)

ಉದಕವೇ ಆಗಲಿ, ವಾತಾವರಣವೇ ಆಗಲಿ, ಅಥವಾ ವಾಯುವೇ ಆಗಲಿ, ನಿತ್ಯವೂ ಅವಿನಾಶಿಯೂ ಆದ ವಿಶ್ವದ ಮೂಲಕಾರಣವೆಂದು ಹೇಳಿದ ಮಾತ್ರಕ್ಕೆ ಮಾನವ ಬುದ್ಧಿಗೆ ಸಮಾಧಾನವಾಗುವ ಹಾಗೆ ಇದ್ದಿಲ್ಲ. ವಿಶ್ವೋತ್ಪತ್ತಿಯು ಹೇಗೆ ಆಗುವುದೆಂಬ ಕೂಟ ಪ್ರಶ್ನವು ಹೊರಟು ವಾದಕ್ಕೆ ಪ್ರಾರಂಭವಾದ ಕಾರಣ ಸೃಷ್ಟಿ-ಸ್ಥಿತಿ-ಲಯಗಳ ಅರ್ಥವನ್ನು ಹೇಳಲಿಕ್ಕೆ ಭಿನ್ನ ಭಿನ್ನ ಪಂಥಗಳು ಹುಟ್ಟಿದುವು. (ಅ) ನಿತ್ಯವು ಮತ್ತು ಅವಿನಾಶವು ಆದ ಭಾವ (Being) ವೆಂಬ ಒಂದೇ ಒಂದು ವಸ್ತು ತತ್ವವಿದ್ದು, ಅದರಿಂದ ಅನಿತ್ಯ ಮತ್ತು ಅಸ್ಥಿರವಾದ ವಸ್ತುಗಳು ಹುಟ್ಟುವುದು ಅಶಕ್ಯವಿದ್ದಕಾರಣ, ಜಗತ್ತಿನಲ್ಲಿದ್ದ ಭಿನ್ನ ಭಿನ್ನ ಪದಾರ್ಥಗಳು ಕೇವಲ ತೋರುವ ತೋರಿಕೆಯೆಂದು ಇಲಿಯಾಟಿಕ್ ಪಂಥದವರು ಪ್ರತಿಪಾದಿಸಿದರು. ಇದಕ್ಕೆ ವಿರೋಧವಾಗಿ (ಬ) ಹೆರೆಕ್ಲಿಟಸನು ಭಾವವೆಂಬ ನಿತ್ಯ ಮತ್ತು ಅವಿನಾಶಿಯಾದ ವಸ್ತು ತತ್ವದ ಅಸ್ತಿತ್ವವು ಇಲ್ಲವೆಂತಲೂ ಈ ಪ್ರಪಂಚದೊಳಗೆ ಎಲ್ಲಿ ನೋಡಿದರಲ್ಲಿ (Change) ಅಸ್ಥಿರತೆ ಅಥವಾ ಚಂಚಲತೆಯು ಸಾಮ್ರಾಜ್ಯವೇ ಕಂಡುಬರುತ್ತಿದ್ದು, ನಿತ್ಯ ಮತ್ತು ಸ್ಥಿರವಾದ ವಸ್ತು ತತ್ವಂದರೆ "ಅಸ್ಥಿರತೆ"ಯೆಂದೇ ಹೇಳಿದನು. (ಕ) ಈ ಉಭಯ ಮತಗಳೊಳಗಿನ ವಿರೋಧವನ್ನು ತೆಗೆದು ಹಾಕಿ ಅವುಗಳ ಮೇಲೆ ತಂಮ ಪಂಥವನ್ನು ಕಟ್ಟಿ; ಪರಿಣಾಮವಾದಿಗಳು ಭಾವದ ನಿಜವಾದ ಅರ್ಥವನ್ನು ಹೇಳಲಿಕ್ಕೆ ಯತ್ನಿಸಿದರು.

ಪರಿತುಸಿಡಿಸನ ಪದಾರ್ಥ ವಿಜ್ಞಾನೋತ್ತರವಾದ*ವನ್ನು ವಿಸ್ತಾರವಾಗಿ ಬರೆಯಲು ಶಕ್ಯವಿಲ್ಲ. ಈಲಿಯಾಟಿಕ ಪಂಥದಲ್ಲಿ ಪ್ರಮುಖನಾದ ಈ ವಿಚಾರಶಾಲಿಯು ತತ್ವಜ್ಞಾನದಲ್ಲಿ, ಪ್ಲೇಟೋನ ಕಲ್ಪನಾವಾದ ಮುಂತಾದ ಅನೇಕ ಮುಂದೆ ಬರುವ ಪಂಥಗಳು ಬೀಜರೂಪದಿಂದ ಕಂಡು ಬರುವುವು; ಎಂದು ಇಲ್ಲಿ ಹೇಳಿದರೆ ಸಾಕೆಂದು ನಮಗೆ ತೋರುತ್ತದೆ.

### ೬. ಝೀನೊ.

ಪರಮನಿಡೆಸನ ಶಿಷ್ಯನಾದ ಝೀನೊ ಎಂಬವನು ಈ ಅದ್ವೈತವಾದವನ್ನು ಕಳಸಕ್ಕೆ ಮುಟ್ಟಿಸಿದನು. ಮಾನವಿಬುದ್ಧಿಗೆ ಒಂದೇ ಒಂದು ವಸ್ತುವಿನ ಕಲ್ಪನೆಯಾಗುತ್ತದೆ. ಸ್ಥಲ ಆಕಾರಮಾನ, ವಿಸ್ತಾರ, ಚಲನ ಇವೆ ಮುಂತಾದವುಗಳು ಅಸ್ತಿತ್ವದ ಮಾತು ಒತ್ತಟ್ಟಿಗಿರಲಿ, ಅವುಗಳ ಕಲ್ಪನೆಯು ಕೂಡಾ ಅಶಕ್ಯವಾಗಿದೆ. ತನ್ನ ಅದ್ವೈತವಾದವನ್ನು ಸಿದ್ಧಮಾಡಲಿಕ್ಕೆ ಕೈಕೊಂಡ ಝೀನೋನ ಯುಕ್ತಿವಾದವನ್ನು ಯೋಚಿಸುವಾ. ಭಾವವೆಂಬ ಒಂದೇ ಒಂದು ವಸ್ತುತತ್ವವು ಇರುವುದೆಂದು ಆತನ ಪೂರ್ವ ಪಕ್ಷವು. ಇನ್ನು ಚಲನವು (movement) ಉಂಟೆಂದರೆ ಪದಾರ್ಥವು ಒಂದು ಸ್ಥಲದಿಂದ ಮತ್ತೊಂದು ಸ್ಥಲಕ್ಕೆ ಹೋಗುವುದು ಎಂದಂತಾಗಿ ಏಕತ್ವಕ್ಕೆ ಭಂಗವು ಬರುವುದು. ಅಷ್ಟೇಕೆ ಚಲನವನ್ನುಮಾನ್ಯಮಾಡಿದರೆ, ಭಾವವು, ಸ್ಥಲವು ಮತ್ತು ಚಲನೆಯೆಂಬ ದ್ವೈತ ಶಬ್ದಗಳನ್ನೇ ಬಳಸಬೇಕಲ್ಲವೇ? ಆದುದರಿಂದ ಚಲನೆಯು ಅಸಂಭವವೆಂದು ವ್ಯವಸ್ಥೆಮಾಡಿದರೆ ಭಾವವು ಒಂದೇ ಎಂದು ತಾನೆ ಸಿದ್ಧವಾಗುವುದು. ಆದಕಾರಣ ಚಲನವು ಅಸಂಭವವಾಗಿದೆ ಎಂದು

---

* Meta-physic ಎಂಬ ಶಬ್ದಕ್ಕೆ ಶಬ್ದಶಃ ಅರ್ಥ ಮಾಡಿದರೆ ಉತ್ತರ—ಪದಾರ್ಥ ವಿಜ್ಞಾನಶಾಸ್ತ್ರ ಅಥವಾ ಪದಾರ್ಥ ವಿಜ್ಞಾನೋತ್ತರವಾದ ಅನ್ನಬಹುದು. ಯಾಕಂದರೆ Meta ಅಂದರೆ ನಂತರ (after) ಅಥವಾ ಉತ್ತರ, ಮತ್ತು Physic ಅಂದರೆ ಪದಾರ್ಥ ವಿಜ್ಞಾನಶಾಸ್ತ್ರವು Meta physic ಶಬ್ದದ ಭಾವಾರ್ಥವು ಉತ್ಕಟತರವ ಗಹನ ತತ್ವಜ್ಞಾನವೆಂದು ಆಗುವುದು. ಈ ಶಬ್ದದ ಉತ್ಪತ್ತಿಯು ವಿಲಕ್ಷಣವಾಗಿದೆ. ಅರಿಸ್ಟಾಟಲಿನ ಶಾಸ್ತ್ರೀಯ ಗ್ರಂಥಗಳ ವರ್ಗೀಕರಣವನ್ನು ಮಾಡುವಾಗ್ಗೆ ಆತನ Physic ಅಂದರೆ ಪದಾರ್ಥ ವಿಜ್ಞಾನಶಾಸ್ತ್ರದ ನಂತರ ಆತನ ತತ್ವಜ್ಞಾನದ ನಂಬರು ಬಂದ ಕಾರಣ, ಅದು ಉತ್ತರ ಪದಾರ್ಥ ವಿಜ್ಞಾನಶಾಸ್ತ್ರ (Meta-Physic) ಎಂದು ಸಂಬೋಧಿಸಲ್ಪಟ್ಟಿತು. ಈ ಶಬ್ದವು ಸಹ ಅರಿಸ್ಟಾಟಲನಿಗೆ ಗೊತ್ತಿರಲಿಲ್ಲ!

ಪ್ರತಿಪಾದಿಸಿದಂತಾಯಿತು. ಅದು ಹೇಗಂದರೆ ಪದಾರ್ಥವು ಚಲಿಸಬೇಕಾದರೆ ಅದು ಒಂದು ಸ್ಥಳದಿಂದ ಮತ್ತೊಂದು ಸ್ಥಲಕ್ಕೆ ಹೋಗಬೇಕಾಗುವುದು. ಅಪೇಕ್ಷಿತ ಸ್ಥಲವನ್ನು ಮುಟ್ಟಬೇಕಾದರೆ ಎರಡು ಸ್ಥಲಗಳ ನಡುವೆ ಇದ್ದ ಅಂತರದ ಅರ್ಧ ಹಾದಿಯನ್ನು ಹೋಗಬೇಕಲ್ಲವೇ ? ಅರ್ಧ ಹಾದಿಯನ್ನು ದಾಟುವುದಕ್ಕೆ ಮುಂಚೆ ಅದರ ಅರ್ಧ ಹೋಗಬೇಕಲ್ಲವೇ ? ಇದರಂತೆ ಅನಂತ ಅರ್ಧಗಳನ್ನು ಹೋಗಬೇಕಾಗುವ ಕಾರಣ ಅತಿ ಸಮೀಪದ ಹಾದಿಯನ್ನು ಹೋಗಲು ಕೂಡಾ ಅಶಕ್ಯವು! ಒಂದು ಪದಾರ್ಥವು ನಿಂತ ಬಿಂದು ಮತ್ತು ಅದು ಚಲಿಸುವ ಮೊದಲನೆಯ ಬಿಂದುವಿನ ಮಧ್ಯದಲ್ಲಿ ಅನಂತ ಬಿಂದುಗಳಿದ್ದು (ಮತ್ತು ಬಿಂದುಗಳಿಗೆ ಅಳತೆಯಿಲ್ಲದ) ಅನಂತ ಬಿಂದುಗಳನ್ನು ದಾಟಲಿಕ್ಕೆ ಅನಂತ ಕಾಲವು ಬೇಕಾಗಿದ್ದ ಕಾರಣ, ಆ ಪದಾರ್ಥವು ನಿಂತ ಬಿಂದುವಿನಿಂದ ಅತಿ ಸಮೀಪ ಚಲಿಸುವ ಮೊದಲನೆ ಬಿಂದುವನ್ನು ಮುಟ್ಟುವುದು ಕೂಡಾ ಅಸಂಭವವು! ಅರ್ಧ ಫರಲಾಂಗಿನ ಮುಂದಿದ್ದ ಎತ್ತಿನ ಬಂಡಿಯನ್ನು ಅತಿ ವೇಗದಿಂದ ಹೋಗುವ ಉಗಿಬಂಡಿಯು ಮೇಲ್ಕಂಡ ಕಾರಣದಿಂದ ಹಿಮ್ಮೆಟ್ಟಿಲಾರದು. ಆತನ ಎರಡನೆಯ ಪ್ರಮಾಣವೇನಂದರೆ, ಬಾಣವು ಆಕಾಶದಲ್ಲಿ ಉಡ್ಡಾಣಮಾಡುವುದೆಂದು ಜನರು ಅನ್ನುವರು. ಆದರೆ ಇದೂ ಕೂಡಾ ಅವರ ಭ್ರಮವೇ ಸರಿ. ಯಾಕಂದರೆ ಅದು ಚಲಿಸಿದರೆ ಸ್ಥಲದಲ್ಲಿಯೇ ಚಲಿಸುವುದಲ್ಲವೇ? ಇನ್ನು ಮನುಷ್ಯನ ಕೈಯೊಳಗಿನ ಬಿಲ್ಲಿನಿಂದ ಅದು ಆಕಾಶದಿಂದ ಕೆಳಗೆ ಬೀಳುವ ಬಿಂದುವಿನ ತನಕ ಅಸಂಖ್ಯ ಬಿಂದುಗಳು ಉಂಟು. ಇನ್ನು ಆ ಬಾಣವು ಚಲಿಸಿತು ಎಂದು ತಿಳಿದರೆ ಅವೆರಡು ಸ್ಥಲಗಳ ಮಧ್ಯದಲ್ಲಿದ್ದ ಅಸಂಖ್ಯ ಬಿಂದುಗಳ ಮೇಲೆ ಒಂದೊಂದು ಕ್ಷಣ ನಿಲ್ಲುತ್ತದೆ. ಆ ಪದಾರ್ಥವು ಒಂದು ಬಿಂದುವಿನ ಮೇಲೆ ಒಂದು ಕ್ಷಣ ನಿಲ್ಲುತ್ತದೆಂದು ಕಲ್ಪಿಸಿ ಅವೆಲ್ಲ ಬಿಂದುಗಳ ಬೇರೀಜನ್ನು ಮಾಡಿದರೆ, ಅದು ಎಲ್ಲ ಬಿಂದುಗಳ ಮೇಲೆ ನಿಂತರೆ ಆಯಿತು. ಅಂದರೆ ಅದು ಯಾವಾಗಲೂ ನಿಂತಂತೆ ಸಿದ್ಧವಾಗಲಿಲ್ಲವೇ? ಆದುದರಿಂದ ಚಲನವು ಅಸಂಭವವು.

## ಉತ್ಪತ್ತಿಯ ನಿಷೇಧವಾದವು.
## ( Negation of Becoming )
## ಇಲಿಯಾಟಿಕ್ ಪಂಥವು
### ಝೆನೊಫನ

ಇಲಿಯಾಟಿಕ್ ಪಂಥದ ಮೊದಲನೆಯ ತತ್ವಜ್ಞಾನಿಯಾದ ಝೆನೋಫನನು ಪುರಾಣೋಕ್ತ ದೇವತೆಗಳನ್ನು ತಿರಸ್ಕರಿಸಿ ಎಕೇಶ್ವರ ವಾದವನ್ನು ಸ್ಥಾಪಿಸಿದನು. ಆ ಈಶ್ವರನು ಹೋಮರನ ದೇವತೆಗಳಂತೆ, ಅಥವಾ ಮಾನವಿ ಪ್ರಾಣಿಗಳಂತೆ ಪ್ರಾಕೃತ ಶರೀರವನ್ನು ಧಾರಣಮಾಡಿ ಸಂಸಾರವನ್ನು ಮಾಡುವುದಿಲ್ಲ. ಆತನು ಶರೀರ ಮತ್ತು ಅದರಿಂದ ಹುಟ್ಟುವ ಸುಖದುಃಖಗಳಿಂದ ರಹಿತನಾಗಿಯೂ ಸರ್ವ ವ್ಯಾಪಿಯಾಗಿಯೂ ಇರುವನೆಂದು ಹೇಳಿದನು.

### ಪರಮನಿಡೆಸನು.

ಝೆನೋಫನನ ಶಿಷ್ಯನಾದ ಪರಮನಿಡೆಸನು ಗುರುವಿನ ಎಕೇಶ್ವರವಾದದ ಮೇಲೆ ತನ್ನ ಅದ್ವೈತ ಪಂಥವನ್ನು ಸ್ಥಾಪಿಸಿದನು. ಸರ್ವವು ಒಬ್ಬನೇ ದೇವರಿದ್ದು, ದೇವರಲ್ಲಿ ನಾಶವು ಮತ್ತು ಅಸ್ಥಿರತೆಯು ಇಲ್ಲದ ಕಾರಣ, ಜಗತ್ತಿನಲ್ಲಿ ಕಂಡುಬರುವ ನಾಶವು ಮತ್ತು ಅಸ್ಥಿರತೆಯು ನಿಜವಾದದ್ದಲ್ಲ. ಅದು ತೋರಿಕೆಯು, ಅದು ಮಾಯೆಯು ಎಂದು ಚರ್ಚಿಸಿದನು. ಯಾಕಂದರೆ — ಅನಾದಿಯಾದ ಭಾವ (Being) ವೆಂಬ ಒಂದೇ ಒಂದು ವಸ್ತು ತತ್ವವು ಇದ್ದ ಕಾರಣ ಇಲ್ಲಿ ನಾನಾತ್ವದ ಅಸ್ತಿತ್ವವು ಅಶಕ್ಯವೇ ಸರಿ.

ಅನಾದಿಯೂ ಸರ್ವವೂ ಆದ ಈ ಭಾವವೆಂಬ ಏಕತ್ವದ ಸತ್ಯತೆಯನ್ನು ಸಿದ್ಧಮಾಡಲಿಕ್ಕೆ ಆತನು ಕೆಳಗಿನ ಯುಕ್ತಿವಾದವನ್ನು ಕೈಕೊಂಡನು. ಈ ಭಾವವು ಅನಾದಿಯು, ಅವಿನಾಶಿಯು ಮತ್ತು ಅಚಲವಾಗಿರುವುದು. ಇದಕ್ಕೆ ಆದಿ ಅಂದರೆ ಜನನವು ಇದೆ ಅಂದರೆ, ಅದು ಭಾವ ಅಥವಾ ಅಭಾವದಿಂದ ಆಗಿರಬಹುದಲ್ಲವೇ? ಅಭಾವದಿಂದ ಭಾವವು ಹುಟ್ಟಿತು ಅನ್ನುವಿರಾ? ಅಭಾವದಿಂದ ಯಾವ ಪದಾರ್ಥವೂ ಅಸ್ತಿತ್ವದಲ್ಲಿ ಬರುವುದಿಲ್ಲ. ಇನ್ನು ಅದು ಭಾವದಿಂದ ಹುಟ್ಟಿರಬಹುದು. ಇನ್ನು ಭಾವವು ಭಾವದಿಂದ ಹುಟ್ಟಿದರೆ, ಹೊಸದಾಗಿ ಅಸ್ತಿತ್ವದಲ್ಲಿ ಬರಲಿಲ್ಲ. ಇದ್ದದ್ದು ಇದ್ದಂತೆ ಆಯಿತು. ಅದು ಹುಟ್ಟಲೇ ಇಲ್ಲ. ಅಂದರೆ ಅನಾದಿಯು. ಇದೇ ರೀತಿಯಿಂದ ಭಾವವು ಅವಿನಾಶಿಯು. ಭಾವವು ನಾಶವಾಗುತ್ತದೆ ಅಂದರೆ ಅದು ಭಾವ ಅಥವಾ ಅಭಾವದಲ್ಲಿ ಅಡಗಿ ಹೋಗಬೇಕಲ್ಲವೇ? ಅಸ್ತಿತ್ವದಲ್ಲಿ ಇದ್ದ ಪದಾರ್ಥವು ಅಭಾವದಲ್ಲಿ ಎಂದಿಗೂ ಹೋಗಲಾರದು. ಇನ್ನು ಭಾವವು ಭಾವದಲ್ಲಿ ನಾಶವಾಯಿತು; ಅಂದರೆ ಅದು ಇದ್ದದ್ದು ಇದ್ದಂತೆ ಆಯಿತು. ನಾಶವಾಗಲಿಲ್ಲ ಅಂದರೆ ಅವಿನಾಶಿಯು, ಈ ಭಾವವು ಅಚಲವು. ಅದು ಚಲಿಸಿದರೆ ಭಾವ ಅಥವಾ ಅಭಾವದಲ್ಲಿ ಚಲಿಸಬೇಕಲ್ಲವೇ? ಭಾವವು ಅಭಾವದಲ್ಲಿ ಚಲಿಸಲಾರದು. ಇನ್ನು ಅದು ಭಾವದಲ್ಲಿ ಚಲಿ

ಸಿದರೆ ಭಾವವು ಸ್ಥಿರವಾಗಿ ಇದ್ದಂತೆ ಆಯಿತು. ಇದರ ಹೊರ್ತು ಚಲನಕ್ಕೆ ಸ್ಥಲದ ಅವಶ್ಯಕತೆ ಉಂಟು. ಸ್ಥಲದ ಅಸ್ತಿತ್ವವು ಇದೆ ಅಂದರೆ ಅದು ಭಾವಕ್ಕೆ ಸಮಾನ ಶಬ್ದವಾಗಿದೆ. ಸ್ಥಲವು ಇಲ್ಲವು ಅನ್ನುವಿರೋ? ಅಂದರೆ ಚಲನವೇ ಅಸಂಭವವು. ಆದುದರಿಂದ ಚಲನವು ಅಸಂಭವನಾಗಿದೆ. ಭಾವವು ಸ್ವತಂತ್ರವಾಗಿದೆ. ಅದಕ್ಕೆ ಅಸ್ವತಂತ್ರ ಅಂದರೆ ಅದು ಭಾವ ಅಥವಾ ಅಭಾವಕ್ಕೆ ಅಧೀನವಾಗಿರಬೇಕಲ್ಲವೇ? ಭಾವವು ಭಾವದ ಅಧೀನವಾಗಿದ್ದರೆ ತಾನು ತನ್ನ ಅಧೀನವಿದ್ದಂತಾಯಿತು. ಅಂದರೆ ಸ್ವತಂತ್ರವಾಯಿತು. ಇನ್ನು ಅದು ಅಭಾವದ ಅಧೀನವಾಗಿದೆಯೆಂದರೂ ಅವರ ಸ್ವಾತಂತ್ರ್ಯಕ್ಕೆ ಬಾಧೆ ಬರುವುದಿಲ್ಲ. ಯಾಕಂದರೆ ಅಸ್ತಿತ್ವದಲ್ಲಿ ಇಲ್ಲದ ವಸ್ತುವಿನ ಅಧೀನವೆಂದರೆ ಸ್ವತಂತ್ರವೇ ಸರಿ. ಆದುದರಿಂದ ಅದು ಸ್ವತಂತ್ರವಾಗಿದೆ. ಸಾರಾಂಶ, ಭಾವವು ಅನಾದಿಯೂ, ಅವಿನಾಶಯೂ, ಅಚಲವೂ, ಸ್ವತಂತ್ರವೂ ಒಂದೇ ಒಂದು ಆಗಿದೆ.

ಝೀನೋನ ಇದೇ ಯುಕ್ತಿವಾದವನ್ನು ಸ್ವೀಕರಿಸಿ "ಇಸವಿಸನ್ನ ೧೪೯೭ ರಲ್ಲಿ ಹಿಂದುಸ್ಥಾನಕ್ಕೆ ಬರಹೊರಟ ವ್ಹಾಸ್ಕೋಡಿಗಾಮನು ಇಂದಿನವರೆಗೆ ಕಾಲಿಕತ್ತಿಗೆ ಬಂದಿರಲಿಕ್ಕಿಲ್ಲವೆಂದು " ಒಬ್ಬ ಇತಿಹಾಸ ಶಾಸ್ತ್ರದ ವಿದ್ಯಾರ್ಥಿಯು ಹಾಸ್ಯಮಾಡಬಹುದು. ಆದರೆ ಝೀನೋನು ಒಬ್ಬ ದೊಡ್ಡ ತತ್ವಜ್ಞಾನಿಯಾಗಿರುವನು. ಮತ್ತು ಆತನ ತರ್ಕಶಾಸ್ತ್ರದ ಶುದ್ಧಾಶುದ್ಧತೆಯ ವಿಷಯವನ್ನು ಚರ್ಚಿಸಲು ಇದು ಸಮಯವಲ್ಲ. ಅದ್ವೈತ ಪಂಥವನ್ನು ಸಿದ್ಧಮಾಡುವಕಾಲಕ್ಕೆ ಬರುವ ಕೆಲವು ಅಡಚಣೆಗಳ ಪೈಕಿ ಇದೊಂದಡಚಣೆಯೆಂದು ಹೇಳಿದರೆ, ತತ್ವಜ್ಞಾನೇತಿಹಾಸವನ್ನು ಬರಿಯುವಕಾಲಕ್ಕೆ ಈ ಪ್ರಕಾರದ ಅಭಿಪ್ರಾಯವು ಅಪ್ರಾಸಂಗಿಕವಿದ್ದರೂ ಅಯೋಗ್ಯವಾಗಲಾರದೆಂದು ನಮಗೆ ತೋರುತ್ತದೆ.

ಸಾರಾಂಶ, ಇಲಿಯಾಟಿಕ್ ಪಂಥದವರು, ತ್ರಿಕಾಲಾಬಾಧಿತವಾದ ಭಾವವೆಂಬ ಒಂದೇ ಒಂದು ವಸ್ತುತತ್ವವನ್ನು ಗೃಹೀತಹಿಡಿದುದಕ್ಕೆ, ಉತ್ಪತ್ತಿಯನ್ನು ನಿಷೇಧಿಸಬೇಕಾಯಿತು. ಉತ್ಪತ್ತಿಯನ್ನು ನಿಷೇಧಿಸಿದರೆ ಪ್ರತಿದಿನವು ನಮಗೆ ಅನುಭವಕ್ಕೆಬರುವ ಸೃಷ್ಟಿ-ಸ್ಥಿತಿ-ಲಯದ ಅರ್ಥವನ್ನು ಹೇಳಬೇಕಲ್ಲವೇ? ಆದುದರಿಂದ ವಸ್ತುಗಳ ಹುಟ್ಟು ಸಾವುಗಳ ವ್ಯವಹಾರಕ್ಕೆ ಆಭಾಸವೆಂತಲೂ, ಚಲನೆಯು ಅಸಂಭವವೆಂತಲೂ ಸಿದ್ಧಮಾಡಲಿಕ್ಕೆ ಈ ಯುಕ್ತಿವಾದವನ್ನು ಅವಲಂಬಿಸಿದರೆಂದು ವಾಚಕರಿಗೆ ಒಡೆದು ಹೇಳುವಕಾರಣವಿಲ್ಲ.

## (ಬ) ಉತ್ಪತ್ತಿವಾದಕ್ಕೆ ದೇವತಾಪದವಿಯು.

### ( Apotheosis of Becoming )

### ಹೆರೆಕ್ಲಿಟಿಸನು

ಇಲಿಯಾಟಿಕ ಪಂಥದವರು ಭಾವವೆಂಬ ಒಂದೇ ತತ್ವವನ್ನು ಮಾನ್ಯಮಾಡಿ ಉತ್ಪತ್ತಿ ಮತ್ತು ಅದರಿಂದ ಹುಟ್ಟುವ ಅಸ್ಥಿರತೆಗೆ ಆಭಾಸವೆಂದರೆ ಇದಕ್ಕೆ ವಿರುದ್ಧವಾಗಿ ಹೆರೆಕ್ಲಿಟಸನು 'ಜಗತ್ತಿನಲ್ಲಿ ಅಸ್ಥಿರತೆಯೇ ಅನಾದಿ ಮತ್ತು ನಿಜವಾದ ವಸ್ತು ತತ್ವವೆಂದು ಹೇಳಿ ಭಾವವೆಂದರೆ ಮಾಯೆ ಎಂದು ಪ್ರತಿಪಾದಿಸಿದನು. ಅಸ್ಥಿರತೆ ಎಂಬ ತಿಗರಿಯ ಮೇಲೆ ವಿಶ್ವವು ತಿರುಗುತ್ತಿದ್ದ ಕಾರಣ ಸೃಷ್ಟಿ-ಸ್ಥಿತಿ-ಲಯಗಳೆಂಬ ಭಿನ್ನಭಿನ್ನ ಸ್ಥಿತಿಗಳು ವಸ್ತುಗಳಿಗೆ ಪ್ರಾಪ್ತವಾಗುವುವು. ಈ ಚಕ್ರವು ಬಹುವೇಗವುಳ್ಳದ್ದಿದ್ದ ಕಾರಣ ಪದಾರ್ಥವು ಯಾವ ಸ್ಥಿತಿಯಲ್ಲಿಯೂ ಬಹಳ ಹೊತ್ತು ನಿಲ್ಲುವುದಲ್ಲ. ಗಿಡದ ಮೇಲಿನ ಹೂವನ್ನು ನೋಡಿ ಅವನ್ನು ನಾವು ಕೊಯ್ಯುತ್ತೇವಷ್ಟೆ? ಆದರೆ ಗಿಡದ ಮೇಲೆ ಇದ್ದಾಗಿನ ಸ್ಥಿತಿಯು ಕೊಯ್ಯುವ ಸಮಯದಲ್ಲಿ ಇರುವುದಿಲ್ಲ. ಮತ್ತು ಕೊಯ್ಯುವಾಗಿನ ಸ್ಥಿತಿಯು ಕೊಯ್ದ ಮೇಲೆ ಇರುವುದಿಲ್ಲ. ಇದೇ ರೀತಿಯಾಗಿ ಪ್ರಪಂಚದೊಳಗಿನ ಎಲ್ಲ ವಸ್ತುಗಳು ಕ್ಷಣಕ್ಷಣಕ್ಕೆ ಬದಲಾಯಿಸುತ್ತಿರುವುವು. ಹೆರೆಕ್ಲಿಟಸನು ಅನ್ನುವುದೇನಂದರೆ "ಒಂದು ಪ್ರವಾಹದಲ್ಲಿ ನಾವು ಎರಡು ಸಾರೆ ಸ್ನಾನವನ್ನು ಮಾಡಲಾರೆವು. ಅಷ್ಟೇಕೆ ? ಒಂದು ಸಾರೆ ಸ್ನಾನವನ್ನು ಮಾಡುವುದೂ ಕೂಡಾ ಅಶಕ್ಯವೇ ಸರಿ. ಯಾಕಂದರೆ ನಾವು ನೀರಿನಲ್ಲಿ ನಿಂತು ಮುಣುಗುಹಾಕುವದರೊಳಗೆ ಬದಲಾಯಿಸಿ ಆ ನೀರು ನಮ್ಮಿಂದ ದೂರ ಹೋಗುವುದು ! ಇದೇರೀತಿಯಾಗಿ ಕಾಲ ಪ್ರವಾಹದಲ್ಲಿ ಪದಾರ್ಥವು ಒಂದು ಕ್ಷಣದವರೆಗೆ ಸ್ಥಿರವಾಗಿ ನಿಲ್ಲುವುದಿಲ್ಲ. ಪದಾರ್ಥವು ಅಸ್ತಿತ್ವದಲ್ಲಿ ಬರಬರುವ ಕಾಲಕ್ಕೆ ಅಸ್ಥಿರತೆಯೆಂಬ ಸೆಳವು ಆ ಪದಾರ್ಥದ ಸ್ಥಿತ್ಯಂತರವನ್ನು ಮಾಡುತ್ತ ಮಾಡುತ್ತ ನಾಶದ ಸಮುದ್ರದ ಕಡೆಗೆ ಎಳಕೊಂಡು ನಡೆಯುತ್ತದೆ. ಸಾರಾಂಶ ಎಲ್ಲಿ ನೋಡಿದಲ್ಲಿ ಅಸ್ಥಿರತೆಯೇ ವ್ಯಾಪಿಸಿಕೊಂಡಿದ್ದ ಕಾರಣ ನಿತ್ಯ ಮತ್ತು ಸ್ಥಿರವಾದ ಭಾವವೆಂಬ ವಸ್ತುತತ್ವದ ಅಸ್ತಿತ್ವವು ಅಶಕ್ಯವೆಂದು ಆತನ ಮತವು.

ಆದರೆ ವಸ್ತುಗಳ ನಿರಂತರ ಪ್ರವಾಹವು ಉಸುಬಿನ ಮೇಲಿನ ನದಿಯು ಶಾಂತ ಪ್ರವಾಹದಂತೆ ಇರಬಹುದೆಂದು ಯಾರೂ ಕಲ್ಪಿಸಕೂಡದು. ಉತ್ಪತ್ತಿಯೆಂದರೆ ಎರಡು ವಿರುದ್ಧ ಶಕ್ತಿಗಳ ನಡುವೆ ನಡೆದ ಕಲಹದ ಪರಿಣಾಮವಾಗಿದೆ. ಒಂದು ಶಕ್ತಿಯು

ಸ್ವರ್ಗೀಯ ಅಗ್ನಿಯನ್ನು ಆರಿಸಿ ಪಂಚಭೂತಾತ್ಮಕ ಪದಾರ್ಥವನ್ನುಮಾಡಲು ಯತ್ನಿಸುತ್ತಿರುವುದು. ಇದಕ್ಕೆ ವಿರೋಧವಾಗಿ ಎರಡನೆಯ ಶಕ್ತಿಯು ಪ್ರಾಕೃತ ವಸ್ತುಗಳನ್ನು ನಾಶಮಾಡಿ, ಅನಾದಿ ಮತ್ತು ನಿತ್ಯವಾದ ಅಗ್ನಿಯನ್ನು ಕೂಡಲು ಹವಣಿಸುವುದು. ಇವೆರಡರ ಕಲಹದಿಂದ ವಸ್ತುಗಳ ಜನನಮರಣಗಳು ನಡದಿರುವುವೆಂದು ಹೇಳಿ ಹೆರೆಕ್ಲಿಟಸನು ಸೃಷ್ಟಿಯ ಉತ್ಪತ್ತಿ-ಸ್ಥಿತಿ-ಲಯಗಳ ಪದ್ಧತಿಯನ್ನು ತಾತ್ವಿಕದೃಷ್ಟಿಯಿಂದ ಚರ್ಚಿಸಿರುವನು.

ಹೆರೆಕ್ಲಿಟಸನು ಜಗತ್ತಿನ ಮೂಲ ಕಾರಣ ಅಗ್ನಿ ಅಥವಾ ಉಷ್ಣತೆ ಎಂದು ಹೇಳಿದನು. ಮತ್ತು ವಸ್ತುಗಳು ಆ ಮೂಲ ಕಾರಣದಿಂದ ಹುಟ್ಟಿ ಅದರಲ್ಲಿಯೇ ಲಯವಾಗುವುವೆಂದು ಮೇಲೆ ವರ್ಣಿಸಿದ ಆತನ ಸೃಷ್ಟಿಯ ಉತ್ಪತ್ತಿಯ ವರ್ಣನೆಯಿಂದ ಕಂಡು ಬರುವದು. ವಸ್ತುಗಳ ಚಂಚಲತೆಗೆ ಬಹಳ ಮಹತ್ವವನ್ನುಕೊಟ್ಟದುದರಿಂದ ಈ ಅಸ್ಥಿರಜಗತ್ತಿನಲ್ಲಿ ಆತನಿಗೆ ವಿಶೇಷ ಸುಖವು ಕಂಡುಬರಲಿಲ್ಲ. ಆದುದರಿಂದ ಡೆಮೊಕ್ರಿಟಸನ ಆಶಾವಾದಕ್ಕೆ ವಿರುದ್ಧವಾದ ಈತನ ಪಂಥವು ಔದಾಸೀನ್ಯವಾದವೆಂದೆನಿಸಿಕೊಂಡಿತು. ಭಾವದ ಅಸ್ತಿತ್ವವನ್ನು ನಿಷೇಧಿಸಿ ಎಲ್ಲ ವಸ್ತುಗಳು ಅಸ್ಥಿರವೆಂದು ಹೇಳಿದಕಾರಣ ಮನುಷ್ಯನಿಗೆ ಈ ವತ್ತು ಆದ ಜ್ಞಾನವು ನಾಳೆ ಹೇಗೆ ಉಳದೀತು? ಮತ್ತು ಸತ್ಯವು ತ್ರಿಕಾಲಾಬಾಧಿತವಾದುದರಿಂದ ಇಂದ್ರಿಯಜನ್ಯ ಜ್ಞಾನವು ನಿರಂತರ ಬದಲಾಯಿಸುತ್ತ ನಡದರೆ, ಮನುಷ್ಯನಿಗೆ ಸತ್ಯದ ಜ್ಞಾನವು ಧೃಡವಾಗಿ ಹೇಗೆ ಆದೀತು ? ಆದುದರಿಂದ ಹೆರೆಕ್ಲಿಟಸನ ಪಂಥದಲ್ಲಿ ಸಂಶಯವಾದದ ಕೆಲವು ಅಂಶಗಳು ಕಂಡು ಬರುವುವು. ಪ್ರಾಚೀನ ತತ್ವಜ್ಞಾನಿಗಳ ಪೀಳಿಗೆಯಲ್ಲಿ ಈ ವಿಲಕ್ಷಣ ಮತವನ್ನು ಸಾರಿದ ಹೆರೆಕ್ಲೆಟಸನು ಒಬ್ಬ ದೊಡ್ಡ ತತ್ವಜ್ಞಾನಿಯೆಂದು ಅನಿಸಿಕೊಂಡನು.

---

## ದೇವರಾಡುವ ಚಂಡೊ ?

ಎನಗೆ ಬೇಸರಕೊಡುವ ಬಿಸಿಲು ಪೋದೊಡನೆ ।
ದಿನಮಣಿಯು ಪಡುವಣದಿ ತಾ ಮುಳುಗಿದೊಡನೆ ॥
ಮೂಡಣದಿ ರಾಜಿಸುತ ಬರುವವನದಾರು ?।
ಮಾಡುತಲಿ ತಂಪ ಸೊಂಪನು ಕೊಡುವನಾರು ?
ಹೀಗೇಕೆ ದುಂಡಾಗಿ ಇರುತಿಹನು ಪೇಳಮ್ಮ ।
ಸಾಗುತಿಹನೇಕಿವನು ಮುಗಿಲಲ್ಲಿ ನೋಡಮ್ಮ ॥
ಕುಂದುತ್ತ ನಡೆಯುವನು ಕೆಲವು ದಿನಗಳಿಗೆ ।
ಇಂದೇಕೆ ದುಂಡಿಹನು ಪೇಳಮ್ಮ ನನಗೆ ॥
ಅಮ್ಮ ಕಬ್ಬಿಗರೇಕೆ ಬಣ್ಣಿಸುವರಿದನು ।
ತಮ್ಮ ಕಬ್ಬಗಳಲ್ಲಿ ಮುಖಕೆ ಸಮವಿದನು ॥
ಇದುಏನು ಇರುಳಲ್ಲಿ ಮೆರೆವ ಬೆಳ್ಳಿಯಗುಂಡೊ ।
ಅದು ಇರದೆ ಮತ್ತೇನು ದೇವರಾಡುವ ಚಂಡೊ ॥
ಇರುಳಿನೊಳಗಿದು ಏಕೆ ಇಷ್ಟು ನಗುತಿಹುದು ।
ಅರಿತೆ ತಾರೆಗಳೊಡನೆ ಸರಸವಾಡುವುದು ॥
ಎನ್ನಕೈಗೊಂದದಿದು ಬಹಳ ಮೇಲಿಹುದು ।
ನಿನ್ನ ಕೈಯುದ್ದಿಹುದು ನಿನಗೊಂದಬಹುದು ॥
ಅಮ್ಮನೀ ಪೋಗಿ ಗಡ ತಕ್ಕೊಂಡು ಬಾರೆ! ।
ಸುಮ್ಮನೇ ಇರಲಾರೆ ನನಗದನು ತಾರೆ! ॥
ಅಣ ನನು ಕೂಡಿಯಾಡುವೆನಾನು ಮುದದಿಂದೆ ।
ಚನ್ನಾಗಿ ಚಂಡನಾಡುವೆನುಬ್ಬಿನಿಂದೆ ॥

—ಬಾಲಕವಿ, ಎಚ್, ಆರ್, ಪಿ,

# ಕನ್ನಡನುಡಿಜೇನು.

( ೨ ನೆಯ ಬಿಬ್ಬಿ )

* ಲೇ:—ಶ್ರೀ. ಶ. ಬಾ. ಜೋಶಿ.

## ಹೊಸ ನುಡಿಗಳನ್ನು ಹುಟ್ಟಿಸುವ ಪ್ರತ್ಯಯುಗಳನ್ನು ಕುರಿತು.

೧. ಕನ್ನಡದಲ್ಲಿ ಧಾತುಗಳನ್ನುಂಟುಮಾಡಿಕೊಳ್ಳಲಿಕ್ಕೆ ಬಳಿಸಿದ ಪ್ರತ್ಯಯಗಳನ್ನೇ ನಾಮ, ವಿಶೇಷಣ, ಅವ್ಯಯುಗಳನ್ನು ಮಾಡಿಕೊಳ್ಳಲಿಕ್ಕೂ ಉಪಯೋಗಿಸಿದ್ದಾರೆ. ಈ ಪ್ರತ್ಯಯುಗಳಲ್ಲಿಯೇ ಕೇವು ಪ್ರತ್ಯಗಳು ಸರ್ವನಾಮುಗಳ ಕೊನೆಯಲ್ಲಿಯೂ ಕಂಡು ಬರುತ್ತವೆ.

ಉದಾ:— ಈಗ ದು ಪ್ರತ್ಯಯುವನ್ನೇ ಇಲ್ಲಿ ತಕ್ಕೊಳ್ಳುವ.

ಧಾತುವಿಗೆ: ಒರ್+ದು=ಒಂದು; ಕಂದು;
ನಾಮಕ್ಕೆ:—ಹರಿ+ದು=ಹದ್ದು (ಪರ್ದು); ಕೈದು;
ವಿಶೇಷಣಕ್ಕೆ:—ಕರಿದು; ಹಳದು;
ಅವ್ಯಯಕ್ಕೆ:—ಅದು+ದು=ಅಂದು; ಎಂದು;
ಸರ್ವನಾಮದ ಕೊನೆಗೆ:— ಅದು; ಇದು;

೨. ಕನ್ನಡದ ಧಾತುಗಳನ್ನುಂಟು ಮಾಡುವ ಪ್ರತ್ಯಯಗಳಲ್ಲಿಯೇ ವಸ್ತು ಹಾಗು ಭಾವ ಹೇಳುವಷ್ಟು ಹಿಗ್ಗು ( elasticity ) ಅದರಲ್ಲಿ ಇರುವುದರಿಂದ ಅಲ್ಪಾಕ್ಷರ-ರಮಣೀಯ ಶಬ್ದಗಳನ್ನು ಕಿರಿದರಲ್ಲಿ ಹಿರಿಯರ್ಥವುಳ್ಳ ನುಡಿಗಳನ್ನು ಮಾಡಿಕೊಳ್ಳಲು ಬಹಳ ಹಗುರಾಗಿದೆ.

ಉದಾ:— ಹಿಗ್ಗು (ಹಿರಿ+ಗು) ಈ ಶಬ್ದವು ಧಾತುವಾಗಿರುವಂತೆ ಭಾವ ನಾಮವೂ ಆಗಿದೆ. ಹಿಗ್ಗು ಅಂದರೆ ಆನಂದವೆಂದು ಅರ್ಥವಿರುವಂತೆ ಹಿಗ್ಗುವ ಗುಣವೆಂಬ ಅರ್ಥವೂ ಅದರಲ್ಲಿದೆ.

ಅರಸು ಶಬ್ದವು ಧಾತುವಾದಾಗ ಹುಡುಕು ಎಂಬರ್ಥವು. ಅರಸು ವಸ್ತುವಾಚಕನಾಮವಿದ್ದಾಗ ರಾಜನೆಂಬರ್ಥವು. ಅರಸು ಶಬ್ದವು ಭಾವವಾಚಕನಾಮುವಾದಾಗ ರಾಜ್ಯವಾಳುವಿಕೆ, ಆಡಳಿತ, ಎಂಬರ್ಥವು; ಈ ಅರ್ಥದಲ್ಲಿ ಪಂಪನು ಬಹಳ ಸಲ ಉಪಯೋಗಿಸಿದ್ದಾನೆ. ಅರಸುಗೈದಂ ಅಂದರೆ ರಾಜ್ಯಕಾರಭಾರ ಮಾಡಿದನು ಎಂದು ಅರ್ಥವು. ಹೀಗಿರುವಾಗ ಮತ್ತೆ ಅರಸುತನ ಗೈದನು ಎಂಬುದು ತಪ್ಪು. ಆದಕಾರಣ ಹಿಗ್ಗುತನ. ಅರಸುತನ, ಮುಳಿಸುತನ, ಇಂಥ ರೂಪಗಳು ಹೊಲ್ಲ.

೩. ಧಾತು ಪ್ರತ್ಯಯುಗಳೇ ವಸ್ತುವಾಚಕ ಹಾಗು ಭಾವ ವಾಚಕ ನಾಮುಗಳನ್ನೂ ಉಂಟುಮಾಡಲು ಹೇಗೆ ಸಮರ್ಥವಾಗಿವೆ ಎಂಬುವನ್ನು ತೋರಿಸಲು ಮುಂದೆ ಕೊಟ್ಟ ಮೊದಲನೆಯ ಪಟ್ಟಿಯನ್ನು ದಿಟ್ಟಿಸುವುದು ಅವಶ್ಯವು.

೪. ಕು, ಗು; ಚು, ಜು; ಟು, ಡು, ಣು, ತು, ದು, ನು, ಪು, ಬು, ಮು; ಎಂಬ ಧಾತುಪ್ರತ್ಯಯುಗಳಿಗೆ ಅ, ಎ ಕಾರಗಳು ಸೇರಿಸಿ ಆದಂಥ ಕ, ಕೆ ಮುಂತಾದ ಹೊಸ ಸಂಯುಕ್ತ ಪ್ರತ್ಯಯುಗಳನ್ನು ಮಾಡಿಕೊಂಡು ಅವುಗಳಿಂದಲೂ ಹಲವು ವಸ್ತುವಾಚಕ, ಭಾವವಾಚಕ ನಾಮುಗಳನ್ನು ಮಾಡಿ-ಕೊಂಡುದು ಕಂಡುಬರುತ್ತದೆ. ಅಲ್ಲದೆ ಈ ಪ್ರತ್ಯಯುಗಳಿಂದಲೇ ಶೀಲಗುಣ-ಉದ್ಯೋಗಾದಿಗಳನ್ನು ಹೇಳುವ ಕೆಲವು ನಾಮುಗಳನ್ನು ಸಿದ್ಧಪಡಿಸಿಕೊಂಡುದೂ ಅನುಭವಕ್ಕೆ ಬರುತ್ತದೆ. ಇದಕ್ಕಾಗಿ ಎರಡನೆಯ ಪಟ್ಟಿಯನ್ನು ನೋಡಬಹುದು.

೫. ಇಲ್ಲಿ ಇನ್ನೊಂದು ವಿಚಾರ. ಕು, ಗು ಮೊದುಲಾದವುಗಳಿಗೆ ಅ, ಎ ಕಾರಗಳು ಸೇರಿ ಕ, ಕೆ ಮುಂತಾದ ಹಲವು ಹೊಸ ಪ್ರತ್ಯಯುಗಳು ಆದುವೆಂನ್ನುವುದಕ್ಕಿಂತ ಕು, ಗು, ಮೊದಲಾದ ಪ್ರತ್ಯಯುಗಳಿಂದ ಆದ ಶಬ್ದಗಳಿಗೇ ಅ, ಎ, ಕಾರಗಳು ಸೇರಿ, ವಸ್ತು, ಭಾವ ಹಾಗೂ ಶೀಲ ಗುಣವಾಚಕ ಹೊಸ ನುಡಿಗಳು ಹುಟ್ಟುವುವೆಂಬುದು ಲೇಸೆಂದು ಕಾಣುತ್ತದೆ. ಆದರೆ ಹೀಗೆನ್ನುವುದರಿಂದ ಒಂದು ತೊಡಕು ಉಂಟಾಗುವುದು.

ಉದಾ:—ಹರಟು ಇದಕ್ಕೆ ಎ ಪ್ರತ್ಯಯು ಸೇರಿಸಿ ಹರಟೆ ಎಂದು ಮಾಡಿದರಾಯಿತು..ಇಲ್ಲಿ 'ಟೆ' ಎಂಬ ಪ್ರತ್ಯಯುವು ಸೇರಿತೆಂದು ಹೇಳುವ ಕಾರಣವಿಲ್ಲ. ಆದರೆ ಒನಿಕೆ, ಒಂಟೆ; ಕೋಡಗ ಈ ಮುಂತಾದ ಶಬ್ದಗಳ ಹುಟ್ಟನ್ನು ಹೇಳುವಾಗ ಒನೆ+ಕೆ, ಒಂದು+ಟೆ, ಕೋಡು+ಗ ಎಂದು ಸ್ವತಂತ್ರವಾಗಿ ಕೆ, ಟೆ, ಗ ಪ್ರತ್ಯಯುಗಳನ್ನೇ ಹೇಳದೆ ಗತಿಯಿಲ್ಲ. ಯಾಕಂ

* ಇದರ ಪುನರ್ಮುದ್ರಣಾದಿ ಸರ್ವಾಧಿಕಾರಗಳು ಲೇಖಕನ ಕೈಯಲ್ಲಿವೆ.

ವರೆ ಒನೆಕು, ಒಂಟು, ಅಥವಾ ಕೊಡಗು ಎಂಬ ನುಡಿಗಳಿದ್ದರೆ ಅನಕ್ಕೆ ಎ ಇಲ್ಲನೆ ಅ ಪ್ರತ್ಯಯವು ಸೇರಿತೆಂದು ಹೇಳುವುದು ಸರಿಯಾಗುತ್ತಿತ್ತು. ಈಗಂತೂ ಬಳಕೆಯಲ್ಲಿ ಅಂತಹ ರೂಪಗಳು ಇಲ್ಲ. ಇನ್ನು ಅವು ಗುಪ್ತ, ಸುಪ್ತಸ್ಥಿತಿಯಲ್ಲಿದ್ದುವೆಂದು ಕಲ್ಪಿಸುವಂತಿದ್ದರೆ, ಅ, ಎಕಾರಗಳೆಂಬೆರಡೇ ಪ್ರತ್ಯಯಗಳನ್ನು ಹೇಳುವುದು ಸರಿಹೋಗುವುದು. ಇಲ್ಲವಾದರೆ ಕ, ಕೆ, ಗ, ಗೆ ಮುಂತಾದ ಎಲ್ಲ ಪ್ರತ್ಯಯಗಳೂ ಸ್ವತಂತ್ರವಾಗಿ ಇರುವುವೆಂದು ತಿಳಿವುದೇ ತಕ್ಕುದು. ಮನವರಿಕೆಗಾಗಿ ಎರಡನೆಯ ಪಟ್ಟಿಯನ್ನು ಪರೀಕ್ಷಿಸಬೇಕು.

೬. ಅಸ್ಪಷ್ಟೋಚ್ಚಾರಗಳ ಮೂಲಕ ಕೆಲವು ತೊಂದರೆಗಳುಂಟಾಗಿವೆ. ಕೊನೆಗೆ ಇ, ಎಕಾರಗಳು ಬಂದ ಶಬ್ದದ ಅಂತ್ಯಾಕ್ಷರವು ಹಲವೆಡೆಗೆ ಸುಸ್ಪಷ್ಟವಿಲ್ಲ. ಉದಾ:—ಬಡೆ, ಬಡಿ; ಗುಂಡೆ, ಗುಂಡಿ; ಒಂಟೆ, ಒಂಟಿ; ಜನರ ಬಾಯಲ್ಲಿ ಈ ಎರಡೂ ರೂಪಗಳಿದ್ದರೂ ಮೊದಲನೆಯದನ್ನು ಇಲ್ಲಿ ಸ್ವೀಕರಿಸಿದೆ. ಕೆ, ಗೆ ಮುಂತಾದ ಕೆಲ ಪ್ರತ್ಯಯಗಳನ್ನು ಇಕೆ, ಇಗೆ ಮೊದಲಾದ ರೀತಿಯಲ್ಲಿ ಹೇಳುವ ಪರಿಪಾಠವಿದೆ. ಕೆ, ಗೆ ಮೊದಲಾದುವುಗಳ ಹಿಂದೆ ಅ, ಇ ಅಥವಾ ಉಕಾರಗಳಲ್ಲಿ ಯಾವುದೊಂದು ಸ್ವರವು ಆಯಾ ಸ್ಥಳದ ಸಂಧಿಕಾರ್ಯಕ್ಕನುಸರಿ ಆಗಮವಾಗಿ ಬರುವುದೆಂದು ತಿಳಿವುದು ನೆಟ್ಟಗೆಂದು ತೋರಿದ್ದರಿಂದ ಇಲ್ಲಿ ಬರಿ ಕೆ, ಗೆ, ಲು, ಳು ಎಂದು ಮುಂತಾಗಿ ನಿಶ್ಚಿತ ಪ್ರತ್ಯಯಗಳನ್ನಷ್ಟೇ ಕೊಟ್ಟಿದೆ.

೭. ಶೀಲ—ಗುಣ—ಉದ್ಯೋಗವಾಚಕ ಪ್ರತ್ಯಯಗಳನ್ನು ಮಾಡಿಕೊಳ್ಳುವುದರಲ್ಲಿ ಮೊದಲಿಗರು ಜಾಣತನವನ್ನು ತೋರಿಸಿದ್ದಾರೆ. ಉಳ್ಳ, ಉಳ್ಳಂಥ ಎಂಬರ್ಥದ ಅಕಾರವನ್ನು ಕೆಲವು ಅಕ್ಷರಗಳಿಗೆ ಸೇರಿಸಿ ಮಾಡಿಕೊಂಡ ಕ, ಗ ಎಂಬ ಪ್ರತ್ಯಯಗಳಿಂದ ಎಲ್ಲ ಅರ್ಥವೂ ವ್ಯಕ್ತವಾಗುವುದು ಅಸಂಭವವಾದಕಾರಣ ಅ, ಇಕಾರಗಳನ್ನಾಗಲಿ, ಮೊದಲು ಸಿದ್ಧಪಡಿಸಿಕೊಂಡ ಕ, ಗ ಗಳನ್ನಾಗಲಿ ಕೆಲವು ಶಬ್ದಗಳಿಗೆ ಸೇರಿ ಅವಶ್ಯಕವಾದ ಹೆಚ್ಚಿನ ಹೊಸ ಪ್ರತ್ಯಯಗಳನ್ನು ಮಾಡಿಕೊಂಡಿರುವರು.

ಉದಾ:—ಇಲ್ಲ+ಇ=ಇಲಿ, ಇಲ್ಲದವ ವಿಹೀನ ಎಂಬರ್ಥದಲಿ. ಹಲ್ಲಿಲಿ; ನಾಣಿಲಿ;

ಆಡು+ಇ=ಆಡಿ, ಉಂಡಾಡಿ; ನಾಡಾಡಿ;

ಉಣ್ಣು+ಇ=ಉಣಿ ಅಲರುಣಿ; ಬಂಡುಣಿ;

ಇಲ್+ಅ=ಇಲ. ಉಳ್ಳವ ಎಂಬರ್ಥದಲ್ಲಿ, ಗಾವಿಲ (ಹಳ್ಳಿಯವನು);

ಕುಟ್ಟ್+ಗ=ಕುಟಿಗ, ಆಸಕ್ತನಾದವನೆಂಬರ್ಥಲ್ಲಿ. ನೀರ್ಕುಟಿಗ; ಮಾತುಕುಟಿಗ;

ಬಡೆ+ಕ=ಬಡಕ ಬಡಕೊಂಡವ, ಆಸಕ್ತ, ಎಂಬಲ್ಲಿ ಮಾತುಬಡಕ; ತಿನಸಬಡಕ;

೮. ಶೀಲಗುಣವಾಚಕ ಕನ್ನಡ ಪ್ರತ್ಯಯಗಳಿಂದಲೇ ಕೆಲಸವು ಸಾಗದೆಂದು ತೋರಿದಲ್ಲಿ ಸಂಸ್ಕೃತದ ಕೆಲವು ಪ್ರತ್ಯಯಗಳನ್ನೂ ಕೈಗಡ ತಕ್ಕೊಂಡದ್ದು ಕಾಣಬರುತ್ತದೆ. ಆದರೆ ಅವನ್ನು ಕನ್ನಡಸೊಲ್ಲಿಗೆ ಸರಿಹೋಗುವಂತೆ ಮಾಡಿಕೊಂಡಿರುವರು. ಬರಬರುತ್ತ ಕೆಲ ಪರಭಾಷೆಯ ಪ್ರತ್ಯಯಗಳೂ ಇಣಿಕಿ ಹಾಕಿವೆ.

ಸಂಸ್ಕೃತಕ್ಕೆ ಉದಾ:—

ಕಾರ, ಅಂಗಡಿಕಾರ; ಕೂಲಿಕಾರ;

ಆಳಿ (ಆಲ) ಮಾತಾಳಿ; ಓದಾಳಿ; ಮುಂತಾದುವು.

ಪರಭಾಷೆಗೆ;- ದಾರ ಪೈರುದಾರ; ವತನದಾರ; ಮುಂತಾದುವು.

೯. ಹೊಸನುಡಿಗಳನ್ನು ಹುಟ್ಟಿಸುವ ಪ್ರತ್ಯಯಗಳಲ್ಲಿ ನಾಲ್ಕು ಬಗೆಯುವುಗಳನ್ನು ಮಾತ್ರ ಹೇಳುವ ವಿಚಾರವಿದೆ. ೧. ಧಾತುವಾಚಕ, ೨. ವಸ್ತುವಾಚಕ, ೩. ಭಾವವಾಚಕ, ಹಾಗು, ೪ ಶೀಲಗುಣ ಉದ್ಯೋಗವಾಚಕ ಇವುಗಳ ಕೊರ್ತು ಕ್ರಿಯಾನಾಮ, ಕ್ರಿಯಾವಿಶೇಷಣ ಮೊದಲಾದುವುಗಳನ್ನು ಸಿದ್ಧಪಡಿಸಿಕೊಳ್ಳುವ ಪ್ರತ್ಯಯಗಳುಂಟು. ಆದರೆ ಹಿಂದಿನ ವ್ಯಾಕರಣಕಾರರಿಗಿಂತ ಹೊಸದಾಗಿ ಹೆಚ್ಚಿಗೆ ಏನೂ ಹೇಳುವುದು ಇಲ್ಲವಾದ್ದರಿಂದ ಅವುಗಳ ಮಾತನ್ನಿಲ್ಲಿ ಎತ್ತಿಲ್ಲ. ಮೇಲ್ಕಾಣಿಸಿದ ನಾಲ್ಕೂ ಬಗೆಯ ಪ್ರತ್ಯಯಗಳು ಹಲವು ಉದಾಹರಣೆಗಳೊಂದಿಗೆ ಪರಿವಿಡಿಯಿಂದ ಬರುವುವು.

೧೦. ಆದರೆ ಅಲ್ಲಿ ಪ್ರಕೃತಿಪ್ರತ್ಯಯಗಳು ಸೇರುವಾಗ ಆಗುವ ಸಂಧಿಕಾರ್ಯದ ನಿಯಮಗಳನ್ನು ಎರಡು ಕಾರಣಗಳ ಸಲುವಾಗಿ ಹೇಳಿಲ್ಲ. ೧. ಶಬ್ದಮಣಿದರ್ಪಣಾದಿಗಳಲ್ಲಿ ಆ ನಿಯಮಗಳು ಈ ಮೊದಲೇ ಬಂದಿವೆ. ೨. ಇನ್ನು ಕೆಲವು ಹೊಸ ಸಂಧಿಕಾರ್ಯಗಳು ಕಂಡು ಬಂದಲ್ಲಿ ಅವನ್ನು ತಿಳಕೊಳ್ಳುವುದು ಬಿಗಿಯಿಲ್ಲ. ಇದರಲ್ಲಿ ಕೈಕೊಂಡ ದಾರಿಯು ಬಲ್ಲವರಿಗೆ ಒಪ್ಪಿದರೆ ಆ ಹೊಸ ನಿಯಮಗಳನ್ನು ತಯಾರಿಸಿಕೊಳ್ಳುವುದೂ ಕಷ್ಟಕರವಿಲ್ಲ.

## ೧ನೆಯ ಪಟ್ಟಿ
## ಧಾತುವಾಚಕ ವಸ್ತುವಾಚಕ ಹಾಗು ಭಾವವಾಚಕ ಸಾಮಾನ್ಯ ಪ್ರತ್ಯಯಗಳು.



ಸ್ವರಗಳಲ್ಲಿ ಇ, ಎಕಾರಗಳನ್ನು ಬಿಟ್ಟರೆ ಮುಂದಿನ ವರ್ಗೀಯವ್ಯಂಜನಗಳಲ್ಲಿ ಪ್ರತಿಯೊಂದು ವರ್ಗದ ಮೊದಲನೆಯ ಹಾಗು ಮೂರನೆಯ ಅಕ್ಷರವೂ ಅವರ್ಗೀಯಗಳಲ್ಲಿ ರ, ಲ, ವ, ಸ, ಳ, ಕಾರಗಳೂ ಉಕಾರಸೇರಿ ಧಾತು, ವಸ್ತು ಹಾಗು ಭಾವವಾಚಕ ಪ್ರತ್ಯಯಗಳು ಸಿದ್ಧವಾಗಿರುವುದನ್ನು ಕಾಣಬಹುದು. ಉದಾ:—ಕು, ಗು; ಚು, ಜು; ಟು, ಡು; ತು, ದು; ಪು, ಬು; ಹಾಗೂ ರು, ಲು, ವು, ಸು, ಳು, ಕನ್ನಡದಲ್ಲಿ ಜ; ಇಗಳಿಲ್ಲ ಆದರೆ ಣು, ನು, ಮು ಎಂಬ ಪ್ರತ್ಯಯಗಳಿವೆ.

| ಪ್ರತ್ಯಯಗಳು. | ಧಾತು ವಾಚಕಕ್ಕೆ. | ವಸ್ತು ವಾಚಕಕ್ಕೆ. | ಭಾವ ವಾಚಕಕ್ಕೆ. |
|---|---|---|---|
| ಇ | ನುರ್+ಇ=ನುರಿ; ಬಲ್+ಇ=ಬಲಿ | ಬೆಳ್+ಇ=ಬೆಳ್ಳಿ; ಚಿಣ್+ಇ=ಚಿಣಿ ಕೀಲ್+ಇ=ಕೀಲಿ; | ಜೋಲ್+ಇ=ಜೋಲಿ; ಸುರಳ್+ಇ=ಸುರಳಿ; |
| ಎ | ಬಗಿ+ಎ=ಬಗೆ; ತೊಡು+ಎ=ತೊಡೆ; | ಬಗೆ; ತೊಡೆ; ಅರಳ್+ಎ=ಅರಳೆ; ಕೆನ್ನೆ; ಇಕ್ಕೆ; | ಬೇನ್+ಎ=ಬೇನೆ; ಕೊಲೆ; ಸಲಹೆ; |
| ಕು, ಂಕು, | ತುರುಕು; ಸೊರ್ಕು, ಸೊಕ್ಕು; ಕಲೆ+ಕು=ಕಲಕು; ಮೆಲ್+ಕು=ಮೆಲಕು; ಚೆಲಂಕು; | ಮೆಲಕು; ಉಸಕು; | ಕೆಡಕು; ಬೆಳಕು; ತೊಡಂಕು; |
| ಗು, ಂಗು, | ಅರಿ+ಗು=ಅರಗು; ತಿರುಗು; ಅಡುಗು | ಅರಗು; ಹಡೆ+ಗು=ಹಡಗು; ಅಲೆ+ಗು=ಅಲಗು; | ಹಿಗ್ಗು; ಕುಗ್ಗು |
| ಚು | ಪೆರ್ಚು; ಹೆಚ್ಚು; ಕಚ್ಚು; ಕುದಿ+ಚು=ಕುಚ್ಚು; ಕೊಯ್+ಚು=ಕೊಚ್ಚು; | ಅಡೆ+ಚು=ಅಚ್ಚು; ಅಣ್+ಚು=ಅಂಚು; ನುರಿ+ಚು=ನುಚ್ಚು; | ಬರಿದು+ಚು=ಬಚ್ಚು; ಕಿಳ್+ಚು=ಕಿಚ್ಚು (ಸಿಟ್ಟು); |
| ಜು | ಅಗಿ+ಜು=ಅಂಜು; ಹಿರಿ+ಜು=ಹಿಂಜು | ಗುನಿ+ಜು=ಗುಂಜು; ಮಸಕು+ಜು=ಮಂಜು; | ಬರಿದು+ಜು=ಬಂಜು; |
| ಟು | ಹರಿ+ಟು=ಹರಟು; ಉಳ್+ಟು=ಉಂಟು. | ತೊಡು+ಟು = ತೊಟ್ಟು; ತರೆ+ಟು=ತರಟು, ತಟ್ಟು; ಕಡೆ+ಟು ಕಟ್ಟು (Frame) | ಉರಿ+ಟು=ಉರಟು; ಒರೆ+ಟು=ಒರಟು; |
| ಡು | ಹರಿ+ಡು=ಹರಡು; ಮುದಿ+ಡು=ಮುದಡು; ಹೊರ+ಡು=ಹೊರಡು; | ತವಿ+ಡು=ತವಡು; ಕೊರೆ+ಡು=ಕೊರಡು; | ಕುರಿ+ಡು=ಕುರಡು; ಬರಿ+ಡು=ಬರಡು; |
| ಣು | ಉಳ್+ಣು=ಉಣ್ಣು; | ಹುಳಿ+ಣು=ಹುಣ್ಣು; | ಹುಣ್ಣು |
| ತು | ಬರಿದು+ತು=ಬತ್ತು; ಕುಳ್+ತು=ಕುತ್ತು; ಹರಿ+ತು=ಹತ್ತು; ಪಡೆ+ತು=ಪತ್ತು; | ತೊಳ್ (ತುಳಿ)+ತು=ತೊತ್ತು; ಎಳ್+ತು=ಎತ್ತು; ಬಿಳ್+ತು=ಬಿತ್ತು (ಬೀಜ) | ಬಿಗಿ+ತು=ಬಿಗತು (ಬಿಗುರ್ತು) ಕುತ್ತು; |

| ಪ್ರತ್ಯಯಗಳು. | ಧಾತುವಾಚಕಕ್ಕೆ. | ವಸ್ತುವಾಚಕಕ್ಕೆ. | ಭಾವವಾಚಕಕ್ಕೆ. |
|---|---|---|---|
| ದು | ಗುಮ್ಮು+ದು=ಗುದ್ದು; ಒರ್+ದು=ಒಂದು; ಕರ್+ದು=ಕಂದು; | ಹರಿ+ದು=ಹರದು (ಸರಕು); ಕೈದು; ಹರಿ+ದು=ಹರ್ದು=ಹದ್ದು; ಮಲೆ+ದು=ಮದ್ದು (ಔಷಧ) | ಬರಿದು; ಹೊಸದು; ಹಳದು; |
| ನು | ಎನ್ನು | ತನ್ನು (ಬಿಳಿಪು; | ಚೆನ್ನು; |
| ಪು | ಒಳ್+ಪು=ಒಪ್ಪು; ಅಳಿ+ಪು=ಅಳಿಪು; ಅಡೆ+ಪು=ಅಪ್ಪು; | ಚಿಕ್ಕ+ಪು=ಚಿಪ್ಪು; ಚಿಣ್+ಪು=ಚಿಂಪು; ಸಿಂಪು; | ಇಂಪು; ಕಂಪು; ಕಾಯ್ಪು; ಪಡೆಪು; |
| ಬು, ಂಬು | ತುದಿ+ಬು=ತುಂಬು; ಹಲಬು; ಹರಿ+ಬು=ಹಬ್ಬು; | ತುರುಬು; ತುಂಬು; ಕೊಂಬು; ಕಿರಬು; ಉಸುಬು; | ಕಸಬು; ತಲಬು; (ಸಂಬಳ); ಹರಿಬು (ಹಾನಿ); ಇಂಬು; ಮದ+ಬು=ಮಬ್ಬು; |
| ಮು | ಹರಿ+ಮು=ಹಮ್ಮು; ಗುದ್ದು+ಮು=ಗುಮ್ಮು; ಚಿಮ್ಮು; | | ದಣಿ+ಮು=ದಮ್ಮು; ಬಿಗಿ+ಮು=ಬಿಮ್ಮು; |
| ರು | ಬೆನ್=ರು=ಬೆಮರು, ಬೆವರು; ಸವರು; ಉಸರು; ತೊಡರು; | ಕಸರು; ಹೊದರು; ಜಿವರು; ಉಗುರು; | ಹಸರು; ಒಗರು; ತೊಡರು |
| ಲು | ಕನಿ+ಲು=ಕನಲು; ಅಳು+ಲು=ಅಳಲು; ತೊಳಲು; | ಹೆಣೆ+ಲು=ಹೆಳಲು, ಹೆರಳು; ಮಣ್+ಲು=ಮಳಲು; ಬಾಗಿಲು; ಗಂಟಲು; | ಅಳಲು; ಸಿಡಿಲು; ಬಿಸಿಲು; |
| ವು | ನೆಗೆ+ವು=ನೆಗವು; ಕೆಡವು; | ನೆಲವು; ತೊಡವು; ಮೇವು; | ಬಾವು; ಇರವು; |
| ಸು | ಹರಸು; ಕಲೆ+ಸು=ಕಲಸು; ಎಳಸು; ಈಸು; | ಹೊರಸು; ಉಣಿಸು (Food) | ಹೊಲಸು; ಮುಳಿಸು; |
| ಳು | ನೆಗೆ+ಳು=ನೆಗಳು (ಮಾಡು); ಮರಳು (ತಿರುಗು); ತಡೆ+ಳು=ತಾಳು; | ಮುಗುಳು; ಒಳಗು+ಳು=ಒಳ್ಳು; ಹರಳು; ಕರುಳು; | ಕರುಳು; ಬಾಸಳು; |

## ೨ನೆಯ ಪಟ್ಟಿ.

## ವಸ್ತುವಾಚಕ, ಭಾವವಾಚಕ, ಹಾಗೂ ಶೀಲ-ಗುಣ ಉದ್ಯೋಗವಾಚಕ ಸಾಮಾನ್ಯ ಪ್ರತ್ಯಯಗಳು.

೧ನೆಯ ಪಟ್ಟಿಯಲ್ಲಿ ಕೊಟ್ಟ ಧಾತುವಾಚಕ ಪ್ರತ್ಯಯಗಳಿಂದಲ್ಲದೆ ಅವುಗಳಿಗೇ ಅ ಇಲ್ಲವೆ ಎ ಕಾರವನ್ನುಸೇರಿಸಿ ತಯಾರಿಸಿಕೊಂಡ ಕ, ಕೆ, ಗ, ಗೆ, ಮುಂತಾದ ಹೊಸ ಪ್ರತ್ಯಯಗಳಿಂದಲೂ ವಸ್ತು ಹಾಗೂ ಭಾವವಾಚಕ ಶಬ್ದಗಳನ್ನುಂಟು ಮಾಡಿಕೊಳ್ಳುವ ಮೊದಲಿಗರ ಜಾಣ್ಮೆಯು ಕೆಳಗಿನ ಪಟ್ಟಿಯಿಂದ ಕಂಡುಬರುವುದು. ಆ ಪ್ರತ್ಯಯಗಳಲ್ಲಿ ಕೆಲವು ಶೀಲಗುಣವಾಚಕ ಶಬ್ದಗಳನ್ನೂ ಹುಟ್ಟಿಸಬಲ್ಲವೆಂಬುದು ತೋರದಿರದು.

| ಪ್ರತ್ಯಯ. | ವಸ್ತುವಾಚಕ. | ಭಾವವಾಚಕ. | ಶೀಲಗುಣ ಉದ್ಯೋಗವಾಚಕ. |
|---|---|---|---|
| ಅ | ತೋಡು+ಅ=ತೋಟ; ಪಡು+ಅ=ಪಟ್ಟ; | ಮಾಡು+ಅ=ಮಾಟ; ತೂಗು+ಅ=ತೂಕ; ಮೂಡ; ತೆಂಕ; | ಬೀಗು+ಅ=ಬೀಗ; ಹರದು+ಅ=ಹರದ; ಬಂಡು+ಅ=ಬಂಟ; |
| ಣ | ಪಟ್ಟ+ಅಣ=ಪಟ್ಟಣ; ಕುಟ್ಟು+ಅಣ=ಕೊಟ್ಟಣ ( ಭತ್ತದ ಸಿಪ್ಪೆ ); | ಮೂಡು+ಅಣ=ಮೂಡಣ; ಪಡುವಣ; ತೆಂಕಣ; ಪಿಸುಣ; ತಲ್ಲಣ | |
| ಇ | ಬೆಳ್ಳಿ; ಕಳ್ಳಿ; ಚಿಣಿ; | ಜೋಲಿ; ಮುದುಡಿ; | ಹೋರಿ; ಕೆಲಸಿ; |
| ಎ | ಅರಳೆ; ಹೊರೆ; ತೆರೆ; (ಅಲೆ); | ಬೇನೆ; ಕೊಲೆ; | ಜಾಣೆ; ಚದುರೆ; |
| ಕು | ಮೆಲಕು; ಉಸಕು; | ಕೆಡಕು; ಬೆಳಕು; ತೊಡಂಕು; | |
| ಕ | ಬಾಳ್ಕ (ಬಾಳುಕ); ಸುಂಕ; | ತಲ್ಲಂಕ | ಬಡಕ; ಹರಕ; ತಿರುಕ; |
| ಕೆ | ಆನಿಕೆ; ಒನಕೆ; ಚಂಡಿಕೆ; ಮೇಕೆ; | ಬಾಳಿಕೆ; ತಾಳಿಕೆ; ಹರಕೆ; ನಾಚಿಕೆ | |
| ಗ | ಕಡಗ; ಕೋಡಗ; | | ಕತೆಗ; ಮಾತುಗ |
| ಗೆ | ಬಡಿಗೆ; ಹೊಲಿಗೆ; | ಸಲಿಗೆ; ಸುಲಿಗೆ; | |
| ಚು | ಅಚ್ಚು; ಅಂಚು; ನುಚ್ಚು; | ಹುಚ್ಚು; ಮುಚ್ಚು; | |
| ಚೆ | ಕಚ್ಚೆ; ಉಚ್ಚೆ; | | |
| ಜು | ಗುಂಜು; ಹುಂಜು (ಗಂಡುಕೋಳಿ); | ಬಂಜು; | |
| ಜೆ | ಬಂಜೆ; ಹಂಜೆ; | | ಬಂಜೆ; |
| ಟು | ತರಟು; ಚರಟು; ಕಟ್ಟು; ಮೆಟ್ಟು; | ಉರಟು; ಒರಟು | |
| ಟೆ | ಒಂಟೆ; ಕುಂಟೆ; | ಹೋರಟೆ; ಉರ್ಬಟೆ; | |
| ಡು | ಗುಂಡು; ಚಂಡು; | ಕುರುಡು; ಮುದಡು; | ಹುಚ್ಚಡು; |
| ಡ | | | ಕುರುಡ; ಮುದಡ; ಕಿವುಡ; |

| ಪ್ರತ್ಯಯ. | ವಸ್ತುವಾಚಕ. | ಭಾವವಾಚಕ. | ಶೀಲಗುಣ ಉದ್ಯೋಗವಾಚಕ. |
|---|---|---|---|
| ಡೆ | ಗುಡೆ; ಗೊಂಡೆ; ಉಂಡೆ; | | ಎಬಡೆ; ಕುರುಡೆ; |
| ಣು | ಹುಣ್ಣು | ಹುಣ್ಣು; | |
| ಣೆ | ಬೆಣೆ; ಹಣೆ; ಎಣ್ಣೆ; | ಹೊರು+ಣೆ=ಹೊಣೆ; | |
| ತು | ತೊತ್ತು; ಎತ್ತು; | ಬಿಗತು; ಕುತ್ತು; | |
| ತ | ಕೊಯ್ತ; | ಹರತ; ಮೆರತ, | |
| ತೆ | ಕತ್ತೆ; ಒರ್ತೆ; | ಬಾಳ್ತೆ; ಅಳತೆ; ಕೊರತೆ. | |
| ದು | ಗುದ್ದು; ಮುದ್ದು; | ಕೆಂದು; ಕಂದು; ಚೆಂದು | |
| ನು | ತನ್ನು | ಚೆನ್ನು; | |
| ನೆ | ಕೆನ್ನೆ | | |
| ಪು | ಚಿಪ್ಪು; ಚಿಂಪು; | ಹೊಳಪು; ತಂಪು; ಇಂಪು; | |
| ಪ | | | ಓಪ; ಮುದುಪ; ಅಪ್ಪ |
| ಪೆ | ಕುಪ್ಪೆ; ಗುಂಪೆ; ಕಪ್ಪೆ | | |
| ಬು | ತುರುಬು; ಕೊಂಬು; | ಹರಿಬು; ಇಂಬು | |
| ಬ | | | ಕುರುಬ; ಹುಂಬ; |
| ಬೆ | ಕೊಂಬೆ; ಸಿಂಬೆ; ಬಣಂಬೆ (ಬಣವೆ) | | |
| ಮು | ಚಿಮ್ಮು; ಹಮ್ಮು; | ದಮ್ಮು; | |
| ಮ | | ಜಾಣ್ಮೆ; ಬಲ್ಮೆ; | |
| ರು | ತಳಿರು; ಉಗುರು; | ಒಗರು; ತೊಡರು; | |
| ಲು | ಹೆಳಲು; ಗಂಟಲು; | ಅಳಲು; ಹೊಯ್ಲು; | |
| ವು | ನೆಲವು; ತೊಡವು; | ಇರುವು; ಕಾವು; | |
| ವೆ | ಇರುವೆ; ಕೊಳವೆ (ಕೊಳಾಯಿ) | | |
| ಸು | ಹೊರಸು; ಉಣಿಸು | ಹೊಲಸು; ಮುಳಿಸು; | ಬರಸು; |
| ಸೆ | ತೊನಸೆ | | |
| ಳು | ಮುಗುಳು; ಹರಳು; ಕುರುಳು; | ಕರುಳು (ಪ್ರೀತಿ); | |

# ಹೈದರಾಬಾದ ರಾಜ್ಯಕ್ರಮದ ಸಂಕ್ಷಿಪ್ತ ವಿವರಣೆಯು.

ಲೇ:—ಶ್ರೀ. ರಾಘವೇಂದ್ರರಾವ ಚಾಕಲಬ್ಬಿ ವಕೀಲ, ಕೊಪ್ಪಳ.

ಯಾವದಾದರೊಂದು ವಿಷಯವನ್ನೆತ್ತಿ ನಿಬಂಧಗಳನ್ನೋ ಕಟ್ಟುಕಥೆಗಳನ್ನೋ ಸರಳವಾಗಿ ಬರೆಯುವದು ಸುಲಭವೆಂಬ ಮಾತು ಅನುಭವದ್ದಾಗಿದೆ. ಆದರೆ ಐತಿಹಾಸಿಕ ವಿಷಯಗಳನ್ನೆತ್ತಿ ಬರೆಯುವದು ಅತ್ಯಂತ ಕಠಿಣವು. ಇಷ್ಟೇ ಅಲ್ಲ. ಅದಕ್ಕೆ ಶ್ರಮವೂ ವೇಳೆಯೂ ಅದರ ಜೊತೆಗೆ ಹಣದ ಅನುಕೂಲವೂ ಬೇಕು. ಒಂದು ವೇಳೆ ಇಷ್ಟೆಲ್ಲ ಸಾಧಿಸಿದರೂ ಗೊತ್ತಾದ ಟಿಪ್ಪಣಿಗಳನ್ನು ಹೊಂದಿಸಿ ಬರೆಯಲು ಪ್ರಶಾಂತವಾದ ಮನಸ್ಸೂ ಚಂಚಲತೆಯಿಲ್ಲದ ಸ್ಥೈರ್ಯದ ಚಟುವಟಿಕೆಯೂ ಅತ್ಯಂತ ಅವಶ್ಯವು. ಇವೆಲ್ಲವುಗಳೂ ಸಾಧಿಸಿದರೆ ಮಾತ್ರ ಒಂದು ಐತಿಹಾಸಿಕ ಲೇಖನವು ಸಿದ್ಧವಾಗುವುದು.

ಪ್ರಸ್ತುತ ಲೇಖನಕ್ಕೆ ಕೈಹಾಕಿ ಬರೆಯುವ ಸಾಹಸವಾಡಿದ್ದು ಮೊದಲು, ಎಲ್ಲಿ ಅದು ಹಾಸ್ಯಕ್ಕೆ ಗುರಿಯಾಗುವುದೋ ಎಂಬ ಹೆದರಿಕೆಯು ಬಹಳವಾಗಿದೆ. ಇಡೀ ನಿಜಾಮರಾಷ್ಟ್ರದ ಇತಿಹಾಸವನ್ನೆತ್ತಿ ಬರೆಯಲು ಎಷ್ಟು ಕಠಿಣಹರಿಯುವದೋ ಅಷ್ಟೇ ಕಠಿಣವು ಇದೊಂದೇ ಲೇಖನವು ಆಗಿರುವುದೆಂದು ನನಗೆನಿಸುತ್ತದೆ. ಇತರ ಐತಿಹಾಸಿಕ ವಿಷಯಗಳನ್ನು ಬರೆಯುವ ಅಥವಾ ಶೋಧಮಾಡುವ ಸಾಧನಗಳು ಎರಡನೆಯ ಪ್ರಾಂತಗಳಲ್ಲಿ ಸುಲಭವಾಗಿ ದೊರೆತಷ್ಟು ಈ ನಿಜಾಮರ ನಾಡಿನಲ್ಲಿಲ್ಲ. ರಾಜ್ಯಪದ್ಧತಿಯ ನಿಜವಾದ ಕ್ರಮವು ಈಗೀಗ ಮಾರ್ಗವನ್ನು ಹಿಡಿಯಬೇಕೆಂದಿರುವಾಗ ಇತಿಹಾಸಕ್ಕೆ ತಕ್ಕ ಅನುಕೂಲತೆಯನ್ನೊದಗಿಸಿಕೊಡುವ ಸಾಧನ ಸಾಮುಗ್ರಿಗಳು ನಮಗೆ ಸುಲಭವಾಗಿ ಹೇಗೆ ದೊರೆತಾವು?

ನಿಜಾಮರ ರಾಜ್ಯವು ಇತರ ರಾಜ್ಯಗಳಂತಿಲ್ಲ. ಇಲ್ಲಿಯ ವಿಷಯವೇ ಬೇರೆ, ಭಾಷೆಯೇ ಬೇರೆ, ನಡೆನುಡಿಯೇ ಬೇರೆ, ಪರಿಸ್ಥಿತಿಯೇ ಬೇರೆ. ಪ್ರತಿಯೊಂದರಲ್ಲಿಯೂ ಮುಸಲ್ಮಾನೀ ವೈಶಿಷ್ಟ್ಯವು ಒಡೆದು ಕಾಣುತ್ತದೆ. ಆದರೆ ಮುಸಲ್ಮಾನರ ಸಂಖ್ಯೆಯು ತೀರ ಚಿಕ್ಕದು, ಅಂದರೆ ೧೦೦ಕ್ಕೆ ೧೩ರಂತೆ ಮಾತ್ರವಿರುವುದು. ಈ ಸಂಸ್ಥಾನವು ಇಡೀ ಹಿಂದುಸ್ಥಾನದಲ್ಲಿ ವಿಸ್ತಾರದಿಂದಲೂ ವೈಭವದಿಂದಲೂ ಘನತೆಯಿಂದಲೂ ದೊಡ್ಡದು. ಪ್ರಸ್ತುತ ವಿಷಯಕ್ಕೆ ಸಹಾಯುಭೂತವಾಗಿ ಸ್ವಲ್ಪ ಪೂರ್ವಚರಿತ್ರೆಯ ವಿವರಣೆಯನ್ನು ಮಾಡುವದವಶ್ಯವಾಗಿದೆ.

ಮುಸಲ್ಮಾನ ಜನಾಂಗವು ಹಿಂದೂ ದೇಶಕ್ಕೆ ಎಷ್ಟೇ ಪರಧರ್ಮಿಯವಾದರೂ ಹಿಂದೂದೇಶವನ್ನೂ ಹಿಂದೂಜನರನ್ನೂ ನೆಲಕ್ಕೊತ್ತಿ ನಿರ್ಮೂಲಮಾಡಿದ ಅಥವಾ ಅವರ ಸತ್ವಹರಣ ಮಾಡಿದಜ ನಾಂಗವಲ್ಲ. ಮುಸಲ್ಮಾನಧರ್ಮವು ಪರದೇಶದಿಂದ ಬಂದರೂ ಮುಸಲ್ಮಾನರಲ್ಲಿಯ ಸುಮಾರು ೧೦೦ಕ್ಕೆ ೮೦ರವರೆಗೆ ಹಿಂದುಗಳೇ ಇದ್ದು ವಂಶಪರಂಪರವಾಗಿ ಮುಸಲ್ಮಾನರಾಗಿರುವರು. ಆದುದರಿಂದ ಅವರಲ್ಲಿ ಹಿಂದುತ್ವವನ್ನು ನಾಶಮಾಡಿ ಹಿಂದುಸ್ತಾನವನ್ನು ಕೇವಲ ಸಾಮ್ರಾಜ್ಯ ಭೋಗ್ಯಾಗಾರಕ್ಕೆಂದು ಸಂಕುಚಿತಮಾಡುವ ಸ್ವಭಾವವು ಮುಸಲ್ಮಾನ ಷಾಹರಿಗಿದ್ದಿಲ್ಲ. ಅವರು ಹಿಂದುಸ್ತಾನದಲ್ಲಿದ್ದು ಸಾಮ್ರಾಜ್ಯವನ್ನು ಬೆಳಸಿ ತಮ್ಮ ಕೀರ್ತಿಯನ್ನು ಹೆಚ್ಚಿಸಿ ಧರ್ಮವನ್ನು ಪ್ರಬಲಗೊಳಿಸಿದರೇ ವಿನಾ ಹಿಂದುಸ್ತಾನದ ಶಕ್ತಿಯನ್ನು ಹರಣಮಾಡಲಿಲ್ಲ.

ಪ್ರತಾಪಶಾಲಿಯಾದ ಔರಂಗಜೇಬ ಬಾದಶಹನು ಗತಿಸಿದ ಮೇಲೆ ಮೊಗಲರ ಸರದಾರಲ್ಲೊಬ್ಬನಾದ ಮೀರಕಮರುದ್ದೀನ್ ಆಸಫಜಾಹ ನಿಜಾಮುಲ್ಮುಲ್ಕನೆಂಬವನು ಈಗಿನ ನಿಜಾಮರಾಜ್ಯದ ತಳಹದಿಯನ್ನು ಇ. ಸ. ೧೭೧೩ರಲ್ಲಿ ಹಾಕಿದರೂ ನಿಜವಾದ ಅರಸನಾಗಿ ೧೭೨೪ರಲ್ಲಿ ಮಾತ್ರ ಸ್ವತಂತ್ರತೆಯನ್ನು ಜಾಹೀರು ಮಾಡಿದನು. ಆ ಸ್ವತಂತ್ರತೆಯ ಸ್ಥಾಪನದ ದಿವಸವನ್ನು ಈಗಿನ ನಿಜಾಮರು ವಿಶೇಷ ಮಹತ್ವದ್ದೆಂದು ತಿಳಿದು, ಇ. ಸ. ೧೯೨೪ಕ್ಕೆ ೨೦೦ ವರುಷಗಳಾದವೆಂದು ಅಂದಿನಿಂದ ಪ್ರತಿವರುಷವೂ ಈ ದಿವಸವನ್ನು ಸರಕಾರೀ ರಜೆಯ ದಿವಸವನ್ನಾಗಿ ಮಾಡಿದ್ದಾರೆ. ಪ್ರತಿಯೊಬ್ಬರಲ್ಲಿಯೂ ಆ ದಿವಸದ ಐತಿಹಾಸಿಕ ಮಹತ್ವವು ಪುನಃಸ್ಮರಣೆಗೆ ತರಬೇಕೆಂಬುದು ಈಗಿನ ನಿಜಾಮರ ಉದ್ದೇಶವು. 'ಹಿಂದುಸ್ಥಾನಿ'ಗಳಾದ ನಾವು ಈರಾಜ್ಯ ಸಂಸ್ಥಾಪನದ ದಿವಸವನ್ನು ಈ ರೀತಿ ಎಣಿಸುತ್ತಿರಲು ಯುರೋಪಿಯನ್‌ರು ಅರ್ಥಾತ್ ವಿಲಾಯತಿಯವರು ಬೇರೆ ವಿಧವಾಗಿ ಬಣ್ಣಿಸುತ್ತಾರೆ. ನಿಜಾಮರ ರಾಜ್ಯಸಂಸ್ಥಾಪನೆಯ ಕಾಲವನ್ನು 'Indian Princes and The Crown' ಎಂಬ ಪುಸ್ತಕದಲ್ಲಿ ಟೈಮ್ಸ್‌ಕಾರರು ಹೀಗೆ ಬಣ್ಣಿಸಿದ್ದಾರೆ:—

" The foundations of His Highness' s princely house were being laid at the same time

as discerning Englishmen began to see that the only true way for them to exist in India was to become one of the ruling powers. When later on, it was realised that even this position without paramountcy was an impossible one and efforts began to be made to give effect to this view, the first Indian ruler to discover and take advantage of the trend of political events was his Highness's present ancestor' the Nizam of the day, and he became a partner in the Imperial understanding."

ಬ್ರಿಟಿಶರು ಸಾಮ್ರಾಜ್ಯಾಧಿಪತಿಗಳಾಗುವ ಪೂರ್ವದಲ್ಲಿ ಆಳಿಕೆಯ ಅಧಿಕಾರ ಸಂಪಾದಿಸಬೇಕೆಂಬ ವಿಚಾರವು ಬ್ರಿಟಿಶರ ತಲೆಯಲ್ಲಿ ಬಂದಾಗ ಈ ವಿಚಾರಕ್ಕೆ ಪುಷ್ಟಿಯನ್ನು ಮೊತ್ತ ಮೊದಲು ಕೊಟ್ಟವರೆಂದರೆ 'ನಿಜಾಮ'ರೇ ಎಂದು ಮೇಲಿನ ಅವತರಣಿಕೆಯಿಂದ ಗೊತ್ತಾಗುತ್ತದೆ. ಇದರಲ್ಲಿ ಇಬ್ಬರೂ ಸ್ವಾರ್ಥಿಗಳೇ ! ಬ್ರಿಟಿಶರು ಕೇವಲ ವ್ಯಾಪಾರಿಗಳ ಸೋಗಿನಿಂದ ಬಂದು ಹಿಂದುಸ್ತಾನದಲ್ಲಿಯ ಆಂತರಂಗಿಕ ಪರಿಸ್ಥಿತಿಗಳ ಸಡಿಲು ಕಂಡು ಹಿಡಿದು ರಾಜ್ಯದ ಹವ್ಯಾಸಕ್ಕೆ ಬಿದ್ದರು. ನಿಜಾಮರು, ಮುಸಲ್ಮಾನ ಸಾಮ್ರಾಜ್ಯವು ನೆಲಕ್ಕುರುಳಿ ಮೇಲಕ್ಕೆ ತಲೆಯೆತ್ತದಂತಾಗಿರಲು ದೇಶವು ಅಖಂಡ ಹಿಂದುಮಯವಾಗಿ ಮುಸಲ್ಮಾನರು ನಾಮಶೇಷವಾಗಬಾರದಾಗಿ ಸಮಯ ಬಂದರೆ ಪುನಃ ವೈಭವ ಶಿಖರವನ್ನೇರಬೇಕೆಂದು ಬಗೆದರು. ಮುಂದಿನ ಧೋರಣದಿಂದ ಉಭಯತರೂ ಒಬ್ಬರಿಂದೊಬ್ಬರು ಉಪಕೃತರಾಗಿ ಆಗ ಸರಿ ಸಮಾನಸ್ಕಂದರಾದರು. ಇದರಲ್ಲಿ ಯಾರ ಸ್ವಾರ್ಥವು ಹೆಚ್ಚಿಗೆ ಫಲಕಾರಿಯಾಯಿತೆಂಬುದು ಜನರ ನಿದರ್ಶನಕ್ಕೆ ಬಂದೇ ಇದೆ. ಹಿಂದುಸ್ಥಾನಿಗಳೇ ಆದ ಹಿಂದೂ ಮುಸಲ್ಮಾನರ ಜಗಳಗಳಿಂದ ಇಬ್ಬರ ನ್ಯಾಯ ಮೂರನೆಯವನಿಗೆ ಆದಾಯವಾದದ್ದೇನೂ ಹೊಸಮಾತಲ್ಲ. ಇರಲಿ. ಮೇಲೆ ಹೇಳಿದಂತೆ ಇ. ಸ. ೧೭೨೪ ರಲ್ಲಿ ನಿಜಾಮರ ರಾಜ್ಯ ಸ್ಥಾಪನೆಯಾಯಿತು. ಅಂದಿನಿಂದ ಇಂದಿನವರೆಗೆ ೯ ನಿಜಾಮರು ಈ ರಾಜ್ಯವನ್ನಾಳಿದರು. ಈಗಿನ ನಿಜಾಮರು ಮೂಲಪುರುಷನಿಂದ ೧೦ನೆ ಯವರು. ಅವರೆಲ್ಲರ ಕಾಲದ ರಾಜ್ಯಪದ್ಧತಿಯನ್ನು ಕೊಡುವುದು ಇಲ್ಲಿ ಸಾಧ್ಯವಿಲ್ಲ. ಅವರ ಹೆಸರು ಅವರಾಳಿದ ದಿವಸಗಳನ್ನು ಮುಂದಿನ ಲೇಖನಗಳನ್ನೋದುವದಕ್ಕೆ ಸುಲಭವಾಗಿರಬೇಕೆಂದು ಕೊಡುತ್ತೇನೆ. ಮತ್ತು ರಾಜ್ಯಪದ್ಧತಿಯ ವಿವರಣೆಯನ್ನು ಸುಮಾರು ಒಂದು ನೂರುವರುಷದಿಂದೀಚೆಯಿಂದ ಕೊಡುತ್ತೇನೆ. ಯಾಕಂದರೆ ಆಗಿನ ಸ್ಥಿತಿಯಿಂದ ಈಗಿನ ಸ್ಥಿತಿಗೆ ಹೋಲಿಸಿ ನೋಡಿದರೆ ನಿಜವಾಗಿಯೂ ನಾವು ಬ್ರಿಟಿಶ್ ಹಾಗೂ ಇತರ ಸಂಸ್ಥಾನಗಳಿಗಿಂತ ಏಕೆ ಹಿಂದುಳಿದಿರುವೆವೆಂಬುದು ಗೊತ್ತಾಗುವದು.

ಆಳಿದ ನಿಜಾಮರ ವಿವರವು ಹೀಗೆ: —

೧ ಮೀರಕಮರುದ್ದೀನ್ ಆಸಫಜಾಹ ನಿಜಾಮುಲ್ಮುಲ್ಕ ಇ. ಸ. ೧೭೧೩ರಿಂದ ೧೭೪೮

೨ ನಾಸಿರಜಂಗ ಆಸಫಜಾಹನಿಜಾಮುಲ್ಮುಲ್ಕರ ಹಿರಿಯ ಮಗನನ್ನು ಪಠಾಣರು ಕೊಂದರು. ಆಳಿದ ದಿವಸಗಳು ತಿಳಿದಿಲ್ಲ.

೩ ಮುಜಫ್ಫರಜಂಗ—ನಿಜಾಮುಲ್ಮುಲ್ಕನ ಮೊಮ್ಮಗನು. ಅಂದರೆ ನಾಸಿರಜಂಗನ ತಮ್ಮನಮಗನು—ಇವನನ್ನು ಸೈನಿಕರು ಬಂಡಾಯದಲ್ಲಿ ಕೊಂದರು. ಆಳಿದ ದಿವಸಗಳು ತಿಳಿದಿಲ್ಲ.

೪ ಸಲಾಬತಜಂಗ— ನಿಜಾಮುಲ್ಮುಲ್ಕಿನ ಮೂರನೆಯ ಮಗನು. ಇವನನ್ನು ಇ. ಸ. ೧೭೬೧ ರಲ್ಲಿ ಇವನ ತಮ್ಮನು ಸಿಂಹಾಸನದಿಂದ ತಳ್ಳಿ ಕೈದುಮಾಡಲು ಎರಡು ವರುಷನಂತರ ಮೃತಪಟ್ಟನು.

೫. ನಿಜಾಮಅಲ್ಲಿ—ನಿಜಾಮುಲ್ಮುಲ್ಕನ ಕಡೆಯ ಮಗನು. ಇ. ಸ. ೧೭೬೧ರಿಂದ ೧೮೦೩.

೬. ಸಿಕಂದರಜಾಹ- ನಿಜಾಮಅಲ್ಲಿಯ ಮಗನು ಇ. ಸ. ೧೮೦೩ರಿಂದ ೧೮೨೯.

೭. ನಾಸಿರುದ್ದೌಲಾ—ಸಿಕಂದರ ಜಾಹನಮಗನು ಇ. ಸ. ೧೮೨೯ರಿಂದ ೧೮೫೭.

೮. ಅಫಜಲುದ್ದೌಲಾ—ನಾಸಿರುದ್ದೌಲಾನ ಮಗನು ಇ. ಸ. ೧೮೫೭ರಿಂದ ೧೮೬೯ರ ವರೆಗೆ.

೯. ಮೀರ ಮಹಬೂಬಅಲ್ಲೀಖಾನ ಅಫಜಲುದ್ದೌಲನ ಮಗನು ಇ. ಸ. ೧೮೬೯ ರಿಂದ- ೧೯೧೧ರ ವರೆಗೆ.

೧೦. ಮೀರ ಉಸ್ಮಾನಅಲ್ಲಿಖಾನ ಬಹಾದ್ದೂರರವರು. ಇ. ಸ. ೧೯೧೧ರಲ್ಲಿ ಪಟ್ಟಕ್ಕೆ ಬಂದರು.

ಈಗಿನ ನಿಜಾಮರು ಮೂಲಪುರುಷನ ಮರಿಮಗನ ಮರಿಮಕ್ಕಳು.

ಮೇಲೆವಿವರಿಸಿದಂತೆ ಈ ರಾಜ್ಯಸ್ಥಾಪನವಾದ ಮೇಲೆ ಮೊದಲಿನ ನೂರುವರುಷಗಳು ಕೇವಲ ಸ್ವಾರ್ಥಹಿತವನ್ನು ಸಾಧಿಸಿಕೊಳ್ಳಲು ಒಬ್ಬರ ಕುತ್ತಿಗೆಯನ್ನು ಮತ್ತೊಬ್ಬರು ಕತ್ತರಿಸಲು ಪ್ರಯತ್ನಪಟ್ಟ ಕಾಲವೇ ಆಗಿರುವದು. ಆಗಿನ ಕಾ

ಲದ ರಾಜ್ಯಪದ್ಧತಿಯಲ್ಲಿ ವಿಶೇಷ ಹುರುಳಿಲ್ಲ. ಅದರಿಂದ ಓದುಗರಿಗೆ ಉತ್ಸಾಹದ ಬದಲು ಬೇಸರಾಗುವುದು. ಬ್ರಿಟಿಶರ ಸುಧಾರಿಸಿದ ರಾಜ್ಯಪದ್ಧತಿಯೂ ಸಹ, ಇ. ಸ. ೧೮೫೭ರ ಬಂಡಾಯವು ಸಂಪೂರ್ಣವಾಗಿ ಮುರಿಯಲ್ಪಟ್ಟು ದೇಶವೆಲ್ಲೆಲ್ಲ ಶಾಂತತೆಯಾಗಿ ಬ್ರಿಟಿಶರರಿಗೆ ತಮ್ಮ ಕಾಲು ಹಿಂದುಸ್ಥಾನದಲ್ಲಿ ಕದಲದಂತೆ ಗಟ್ಟಿಯಾಗಿ ನಿಂತವೆಂಬ ಸಂಪೂರ್ಣ ನಂಬಿಗೆಯು ಹುಟ್ಟಿದಮೇಲೆಯೇ ಪ್ರಾರಂಭವಾಯಿತು. ಅಂದಮೇಲೆ ನಮ್ಮ ಸಂಸ್ಥಾನದಲ್ಲಿ ಸುಧಾರಿಸಿದ ರಾಜ್ಯಪದ್ಧತಿಯು ಬರಬೇಕಾದರೆ ಎಷ್ಟು ದಿವಸಗಳು ಬೇಕೆಂಬುದರ ಲೆಕ್ಕವನ್ನು ಓದುಗರೇ ಹಾಕಲಿ ಇರಲಿ.

ನಿಜಾಮರ ರಾಜ್ಯವು ಬಂಡಾಯದಲ್ಲಿ ಕೇವಲ ಬ್ರಿಟಿಶರ ಬೆನ್ನುಕಟ್ಟಿದ್ದರಿಂದಲೇ ಬ್ರಿಟಿಶರು ಹಿಂದುಸ್ತಾನದಲ್ಲಿ ಉಳಿದರು.ಅಂತೇ ನಿಜಾಮರೇ ದೊಡ್ಡ ಮಾಂಡಲಿಕರೂ ಆದರು. ಆದರೂ ಬ್ರಿಟಿಶರು ಆಗ್ಗೆ ನಿಜಾಮರು ತಮ್ಮ ಸಮಾನರೆಂದೇ ತಿಳಿಯುತ್ತಿದ್ದರು. ಯಾಕಂದರೆ ಇ. ಸ. ೧೮೬೮ನೇ ಅಕ್ಟೋಬರ ಒನೇ ತಾರೀಖಿನ ಪತ್ರದಲ್ಲಿ ಹಿಂದುಸ್ತಾನದ ಗವ್ಹರ್ನರ ಜನರಲ್ಲರು ಹೈದರಾಬಾದಿನ ರೆಸಿಡೆಂಟರಿಗೆ ನಿಜಾಮರ ದಿವಾಣರು ಯಾರಿರಬೇಕೆಂಬ ವಿಷಯದಲ್ಲಿ ತಮ್ಮ ಅಭಿಪ್ರಾಯವನ್ನು ತಿಳಿಸುವ ಪತ್ರದಲ್ಲಿ ಹೀಗೆ ಬರೆಯುತ್ತಾರೆ.

" The Governor General does not desire to dictate to H. H. the person whom he shall employ in his service as Dewan. H. H. the Nizam is an independant Sovereign. The British Government desire that he should continue to be so and will rejoice to see his country made happy and his people prosperous "

ಸಾರಾಂಶ—"ನಿಜಾಮರು ತಮಗೆ ಬೇಕಾದವರನ್ನು ದಿವಾನರನ್ನಾಗಿ ನೇಮಿಸಿಕೊಳ್ಳಲು ಸ್ವತಂತ್ರರಿರುವರು. ಇಂಥವರನ್ನೇ ನೇಮಿಸಿಕೊಳ್ಳಬೇಕೆಂದು ಗವರ್ನರ ಜನರಲ್ಲರು ಅವರಿಗೆ ಹೇಳಲಿಚ್ಛಿಸುವುದಿಲ್ಲ." ಆದರೆ ಈ ಅಕ್ಷರಗಳು ನಿಷ್ಕಾರಣವಾಗಿ ಲಾರ್ಡ ರೀಡಿಂಗರಿಂದ ಅಳಿಸಲ್ಪಟ್ಟವೆಂಬುದು ವಿಷಾದಕರವು.

ಇಪ್ಪತ್ತನೆಯ ಶತಮಾನದ ಈ ನವಯುಗದಲ್ಲಿ ರಾಜನಿಗೆ ನಿರಂಕುಶ ಪ್ರಭುತ್ವವು ಇರಕೂಡದೆಂಬ ತತ್ವವು ಬಹುಶಃ ಸರ್ವಮಾನ್ಯವಾಗಿದೆ. ರಾಜಕೀಯ ಪರಿಸ್ಥಿತಿಯು ಇಷ್ಟು ಸೂಕ್ಷ್ಮವಾಗಿದ್ದರೂ ಈ ರಾಜ್ಯದಲ್ಲಿ ಇನ್ನೂ ನಿರಂಕುಶ ಪ್ರಭುತ್ವವೇ ಸಂಪೂರ್ಣವಾಗಿ ಏಕೆ ಉಳಿದಿರುವವೆಂಬುದು ಇತರರಿಗೆ ಕೇವ[ಲ] ಸೋಜಿಗದ್ದಾಗಿಯೇ ಕಂಡು ಬಂದರೂ ಹೈದರಾಬಾದಿನ ರಾಜ್ಯದ ಪರಿಸ್ಥಿತಿಯ ಅವಲೋಕನವನ್ನು ನಿಃಪಕ್ಷಪಾತ ಬುದ್ಧಿಯಿಂದ ಯಾವನೊಬ್ಬ ಪ್ರಾಮಾಣಿಕ ಮನುಷ್ಯನು ಮಾಡಿದ[ರೆ] ಇಲ್ಲಿಯ ರಾಜರು ತಮ್ಮ ಮನಸ್ಸಿಗೆ ಬಂದಂತೆ ನಿರಂಕುಶರಾ[ಗಿ] ರಾಜ್ಯವನ್ನು ನಡಿಸಿ ಇನ್ನೂ ತೃಪ್ತಿ ಹೊಂದಿಲ್ಲವೆಂಬುದು ಸ್ಪ[ಷ್ಟ]ವಾಗಿ ಕಾಣದಿರದು. ಯಾಕಂದರೆ ಮೇಲೆ ಬರೆದಂತೆ ೯ ಜ[ನ] ನಿಜಾಮರು ಈ ರಾಜ್ಯವನ್ನಾಳಿ ಹೋಗಿದ್ದರೂ ವಿಶೇಷವಾ[ಗಿ] ರಾಜ್ಯವನ್ನು ಸರಿಪಡಿಸುವ ಕ್ರಮವನ್ನು ಅನುಸರಿಸಲು ಯಾ[ರಿ]ಗೂ ಸಮಯ ಸಿಕ್ಕಲಿಲ್ಲ. ಮೊದಲಿನ ಐದುಜನ ನಿಜಾಮರು ತಮ್ಮ ಆಯುಷ್ಯವನ್ನೆಲ್ಲ ಬಡಿದಾಟದಲ್ಲಿ ಕಳೆದರು. ಆರನೆ[ಯ] ನಿಜಾಮರ ಕಾಲಕ್ಕೂ ಮಹಾರಾಷ್ಟ್ರರು ಇಂಗ್ಲಿಷರು ಇವರ[ೇ] ಮೊದಲಾದವರ ಬಡಿದಾಟಗಳೇ ವಿಶೇಷವಾಗಿದ್ದುವು ಏಳನೆ[ಯ] ನಿಜಾಮರ ಕಾಲದಿಂದ ಸುಧಾರಣಾಕ್ರಮವು ಹಾದಿಯನ್ನು ಹಿಡಿಯಬೇಕಾಗಿತ್ತು. ಯಾಕಂದರೆ ಆಗ ವಿಶೇಷವಾಗಿ ಯು[ದ್ಧ]ದ ಪ್ರಸಂಗಗಳಿದ್ದಿಲ್ಲ. ಈ ಸಂಸ್ಥಾನದಲ್ಲಿ ಒಂದು ದೊಡ್ಡ ಕುತ್ತೆಂದರೆ ಸಂಸ್ಥಾನದ ½ ದಷ್ಟು ಭಾಗವೂ ಉತ್ಪನ್ನವೂ ಇಲ್ಲಿಯ ಜಹಗೀರು, ಸಂಸ್ಥಾನ, ಕಾಗೂ ಪಾಯಗಾದ[ರ] ವಶದಲ್ಲಿರುವದು. ಅವುಗಳಲ್ಲಿ ಮುಸಲ್ಮಾನ, ರಡ್ಡಿ, ಬೇಡರು ಮಹಾರಾಷ್ಟ್ರ, ರಜಪೂತ, ಮೊದಲಾದ ಪಂಗಡಗಳ ಜನರಿರು[ವ]ರು. ಎಲ್ಲರೂ ಒಂದಿಲ್ಲೊಂದುರೀತಿಯಿಂದ ತಮ್ಮ ಹೆಚ್ಚಳವ[ನ್ನು] ಬೆಳಿಸಿಕೊಳ್ಳಬೇಕೆಂಬುವವರೇ. ದೇಶ ಹಾಗೂ ಪ್ರಜಾಹಿ[ತ] ದಕ್ಷತೆಯ ಕಡೆಗೆ ಲಕ್ಷ್ಯವು ಬಹು ಕಡಿಮೆ. ಇಲ್ಲವೆಂದರೂ ಸಲ್ಲ[ು]ವದು. ಮುಸಲ್ಮಾನರಲ್ಲಿಯೂ ಷಿಯ್ಯಾ ಸುನ್ನೀ ಜಗಳವು. ಹೀ[ಗಾ]ಗಿ ವಿಶೇಷವಾದ ಜಗಳವು ಮೊದಲು ಮುಸಲ್ಮಾನ ಜ[ಹ]ಗೀರುದಾರರಲ್ಲಿಯೇ ಹುಟ್ಟುತ್ತಿತ್ತು. ನಿಜಾಮರು ಸುನ್ನೀ ಪ[ಂ]ಥದವರು. ನಿಜಾಮರ ಪಟ್ಟವು ಹೇಗೆ ವಂಶಪರಂಪರಾಗ[ತ]ವಾಗಿ ಬಂದದ್ದೋ ಹಾಗೆಯೇ ಮೊದಲು ಮಂತ್ರಿ ಪದವ[ಿಯು] ಕೂಡ ಮೊದಲಿನ ನಿಜಾಮರಿಂದ ವಂಶಪರಂಪರಾಗತವಾಗಿಯೆ ಬಂದದ್ದು. ಇದರ ಬಾಧ್ಯತೆಯು ನವಾಬ ಸಾಲಾರ್ಜಂಗ ಬಹದ್ದೂರರೆಂಬ ಕೊಪ್ಪಳದ ಜಹಗೀರದಾರರದು. ಇವ[ರ] ಜಹಗೀರಿಯು ಹದಿನಾಲ್ಕು ಲಕ್ಷದ್ದಿರುತ್ತದೆ. ನಿಜಾಮರ ಮೂ[ಲ] ಪುರುಷರಿಂದ ಇವರ ಮನೆತನದವರೇ ಮಂತ್ರಿಗಳು. ಈ[ಗ] ನವಾಬ ಸಾಲಾರ್ಜಂಗರಾದ ಮೀರ ಯುಸುಫ ಅಲ್ಲೀಖಾ[ನ] ಬಾಹಾದ್ದೂರರವರು ನಾಲ್ಕು ವರುಷಗಳವರೆಗೆ ದಿವಾನರಾ[ಗಿ]

ದ್ದರು. ನಿಜಾಮರಿಗೂ ಇವರಿಗೂ ಭಿನ್ನಮತವಾದುದರಿಂದ ರಾಜೀನಾಮೆಯನ್ನು ಕೊಟ್ಟರು. ಇವರು ಷಿಯ್ಯಾಪಂಗಡದವರು.

ಇ. ಸ. ೧೮೨೯ರಿಂದ ೧೮೫೭ರ ವರೆಗೆ ೪ನೆಯ ನಿಜಾಮರಾದ ನಾಸಿರುದ್ದೌಲಾ ಇವರು ರಾಜ್ಯವಾಳುವಾಗ ಮೂರನೆಯ ಮುನೀರುಲ್ಮುಲ್ಕರಾದ ನವಾಬ ಮಹಮ್ಮದ ಅಲ್ಲೀಖಾನರು ಮೊದಲು ದಿವಾಣರಿದ್ದರು. ಆದರೆ ಇವರ ದಿವಾನಗಿರಿಯು ಹೆಸರಿಗೆ ಮಾತ್ರವಿದ್ದು ನಿಜವಾದ ಅಧಿಕಾರಸೂತ್ರಗಳು ಆಗಿನ ಪೇಷ್ಕಾರರಾದ ರಾಜಾಚಂಡೂಲಾಲರ ಕೈಯಲ್ಲಿದ್ದವು. ಮೂರನೆಯ ಮುನೀರುಲ್ಮುಲ್ಕರು ನಿಜಾಮರ ಪ್ರಖ್ಯಾತ ದಿವಾಣರಾದ ಸರ್ ಸಾಲಾರ್ಜಂಗರ ತಂದೆಗಳು. ಸರ್. ಸಾಲಾರ್ಜಂಗರು ನಾಲ್ಕು ವರುಷದವರಿದ್ದಾಗ ಭಯಂಕರ ಜ್ವರ ಬಂದು ಉಳಿಯುವ ಸಂಭವ ಕಾಣದಾಗಲು ಮುನೀರುಲ್ಮುಲ್ಕರು ದೇವರಿಗೆ ಪ್ರಾರ್ಥಿಸಿ ಮಗನ ಬದಲು ತಮ್ಮ ಪ್ರಾಣವನ್ನು ಒಯ್ಯಬೇಕೆಂದು ಬೇಡಿಕೊಂಡರು. ಇವರು ಮಹಾ ಸತ್ವಧೀರರೂ ಧರ್ಮಶೀಲರೂ ಆಗಿದ್ದರು. ಇವರ ಪ್ರಾರ್ಥನೆಯನ್ನು ಮನ್ನಿಸಿ ದೇವರು ಸರ್ ಸಾಲಾರ್ಜಂಗರಿಗೆ ಗುಣಮುಖವನ್ನಿತ್ತು ಮುನೀರುಲ್ಮುಲ್ಕರನ್ನು ತನ್ನ ಸ್ಥಾನಕ್ಕೆ ಕರೆದೊಯ್ದನು. ಇದನ್ನು ಓದಿದರೆ ಬಾಬರ ಹೂಮಾಯೂನರ ಕಥೆಯು ನೆನಪಿಗೆ ಬರುವದು ಸಹಜವದೆ. ಮುನೀರುಲ್ಮುಲ್ಕರ ನಿಧನದ ನಂತರ ರಾಜಾ ಚಂದೂಲಾಲನು ಸರ್ವತಂತ್ರಸ್ವತಂತ್ರ ಮಂತ್ರಿಯಾದನು. ಈತನ ಕಾಲದಲ್ಲಿ ದೇಶವು ಬಹಳಹಾಳಾಯಿತು. ದುಂದುಗಾರಿಕೆಗೆ ಲೆಕ್ಕವಿಲ್ಲದಂತಾಗಿ ಸಂಸ್ಥಾನವುಸಾಲವಲ್ಲಿ ಮುಳುಗಿತು. ಸಂಸ್ಥಾನದ ದಂಡಿನ ಸಾಲಕ್ಕಾಗಿ ನಿಜಾಮರ ಮನೆಯ ವಜ್ರದ ಸಾಮಾನುಗಳು ಕೂಡ ಒತ್ತೆ ಬಿದ್ದವು. ಆಗಿನ ಕಾಲದಲ್ಲಿ (೧೮೨೯ – ರಿಂದ ೧೮೫೩) ಪಠಾಣ, ಆರಬ, ಹಾಗೂ ರೋಹಿಲೆಯರ ವಾಸವು ಈ ರಾಜ್ಯದಲ್ಲಿ ವಿಶೇಷವಾಗಿತ್ತು. ಇದೇ ಜನರೇ ರೈತರನ್ನು ಗೋಳಿಕ್ಕಿ ನಾನಾರೀತಿಯಿಂದ ಸುಲಿದು ಅದೇ ದುಡ್ಡನಿಂದ ಬಡ್ಡಿಯಿಂದ ನಿಜಾಮರಿಗೆ ಸಾಲ ಕೊಡುತ್ತಿದ್ದರು. ಈ ಸಾಲವನ್ನು ತೀರಿಸಿಕೊಳ್ಳುವದಕ್ಕಾಗಿ ತಾಲೂಕುಗಳನ್ನೂ ಜಿಲ್ಹೆಗಳನ್ನೂ ರೋಹಿಲಾ ಪಠಾಣ ಅರಬರಿಗೆ ಒತ್ತೆ ಹಾಕಿದ್ದರು. ಇ. ಸ. ೧೮೫೩ ರಲ್ಲಿ ಸುಮಾರು ಒಂದು ಕೋಟಿ ರೂಪಾಯಿ ಉತ್ಪನ್ನ ಬರುವಷ್ಟು ದೇಶವು ಈ ಜನರಿಗೆ ಒತ್ತೆ ಬಿದ್ದಿತು. ಸಂಸ್ಥಾನದ ದೇಶೀ ಸಾಹುಕಾರರು ನಿಜಾಮರಿಗೆ ಸಾಲಕೊಡುತ್ತಿದ್ದಿಲ್ಲ. ನಿಜಾಮ ಸರಕಾರದ ವಿಶ್ವಾಸವು ಅವರ ಪ್ರಜೆಗಳಾದ ಸಾಹುಕಾರರಿಗೆ ಇದ್ದಿಲ್ಲ. ಆದರೆ ರೋಹಿಲಾ ಪಠಾಣ ಆರಬರು ನಿಜಾಮರಿಗೆ ಸಾಲ ಕೊಟ್ಟ ಹಣವನ್ನು ಬಡ್ಡಿ ಸಹಿತವಾಗಿ ನಿರ್ದಾಕ್ಷಿಣ್ಯದಿಂದ ಜಿಲ್ಹೆಗಳನ್ನು ಒತ್ತೇ ಹಾಕಿಸಿಕೊಂಡು ವಸೂಲು ಮಾಡಿಕೊಳ್ಳುತ್ತಿದ್ದರು. ಇ. ಸ. ೧೮೫೩ರ ಪೂರ್ವದಲ್ಲಿ ಕ್ರಮವಾದ ರಾಜ್ಯಪದ್ಧತಿಯೇ ಇರಲಿಲ್ಲ ಶಾಲೆಮೂಲೆಗಳೂ ಇರಲಿಲ್ಲ. ತಾವು ಸಾರ್ವಭೌಮರೆಂದೂ ಮಾಂಡಲಿಕರು ಅನ್ಯಾಯ ಅಪರಾಧಮಾಡಿದರೆ ಅದರ ಅಪವಾದವು ತಮ್ಮ ಮೇಲೆ ಬರುವದೆಂದು ನೆವ ಹೇಳಿ ಸಂಸ್ಥಾನಿಕರ ಮೇಲೆ ಮನಬಂದಂತೆ ಈಗ ಅಧಿಕಾರ ನಡಿಸುವ ಬ್ರಿಟಿಶ ಸರಕಾರವು ಆಗಿನ ನಿಜಾಮರಿಗೆ ಏನೂ ಹೇಳುವಂತಿದ್ದಿಲ್ಲ. ಯಾಕಂದರೆ ಆಗ ನಿಜಾಮರು ಬ್ರಿಟಿಶರ ಸರಿಸಮಾನಸ್ಕಂದರು. ಕೊನೆಗೆ ಪಠಾಣರ ಕಾಟದಿಂದ ಸಂಸ್ಥಾನವು ಉಳಿಯದಂತಾಗಲು ನಿಜಾಮರು ಚಂದೂಲಾಲನಿಂದ ರಾಜೀನಾಮೆಯನ್ನು ತಕೊಂಡರು. ಹಾಗೂ ಆತನ ಸ್ಥಳದಲ್ಲಿ ಯಾರನ್ನು ದಿವಾಣರನ್ನಾಗಿ ನಿಯಮಿಸಬೇಕೆಂಬ ವಿಚಾರವು ನೆನೆಗುದಿಗೆ ಬಿದ್ದರೂ ಸರ್ ಸಾಲಾರ್ಜಂಗರ ಕಕ್ಕಂದಿರಾದ ಸಿರಾಜುಲ್ಮುಲ್ಕರು ಆ ಕೆಲಸವನ್ನು ನೋಡಿಕೊಳ್ಳುತ್ತಿದ್ದರು. ಹಾಗೆಯೇ ೧೮೫೩ರ ವರೆಗೂ ಅವರೇ ನೋಡಿಕೊಂಡರು. ಇ. ಸ. ೧೮೫೩ರ ಮೇ ೩೧ನೇ ತಾರೀಖಿನ ದಿವಸ ಸರ ಸಾಲಾರ್ಜಂಗರು ಕಾಯಂ ದಿವಾಣರಾಗಿ ನಿಯಮಿಸಲ್ಪಟ್ಟರು. ಆಗ್ಗೆ ಇವರ ವಯಸ್ಸು ತೀರ ಚಿಕ್ಕದು. ಕೇವಲ ೨೪ ವರುಷ ಮಾತ್ರ. ನಿಜಾಮರ ದಿವಾಣರಲ್ಲಿ ಇವರೇ ಅತ್ಯಂತ ಶ್ರೇಷ್ಠರೆಂದೆಣಿಸಲ್ಪಡುವರು. ಇಷ್ಟೇಅಲ್ಲ. ಇವರು ಹಿಂದುಸ್ಥಾನದ ರಾಷ್ಟ್ರಕರ್ತರಲ್ಲಿ ಒಬ್ಬ ಶ್ರೇಷ್ಠಪುರುಷರೆಂದೆಣಿಸಲ್ಪಡುವರು.

ನಿಜಾಮರ ರಾಷ್ಟ್ರವನ್ನು ಒಂದು ರಾಜ್ಯವನ್ನಾಗಿ ಉಳಿಸಿದವರು ಇವರೇ. ಇವರು ರಾಜ್ಯವನ್ನು ಹೇಗೆ ಉಳಿಸಿದರು ಮತ್ತು ಹೇಗೆ ಬೆಳಸಿದರು ಎಂಬ ಬಗ್ಗೆ ಸ್ವತಂತ್ರ ಲೇಖನಗಳೇ ಬೇಕು. ಆದರೂ ಸಮಯೋಚಿತವಾಗಿ ನಾಲ್ಕಾರು ಸಂಗತಿಗಳ ಸಂಸ್ಮರಣೆಯನ್ನು ಓದುಗರಿಗೆ ಮಾಡಿ ಕೊಡುವೆನು. ಸಾಲಾರ್ಜಂಗರು ದಿವಾನಗಿರಿಗೆ ಬಂದ ಮೊದಲನೆಯ ದಿವಸವೇ ದೇಶವನ್ನು ಸಾಲದಿಂದ ಮುಕ್ತಮಾಡಬೇಕೆಂದು ಸಂಕಲ್ಪ ಮಾಡಿದರು. ಮತ್ತು ಅದರಂತೆಯೇ ಒಂದು ಅಕ್ಷರವನ್ನೂ ಬಿಡದೆ ಪಾಲಿಸಿದರು. ಇವರ ಪ್ರಾಮಾಣಿಕತನವನ್ನೂ ಸರಳತನವನ್ನೂ ನೋಡಿ ಬ್ರಿಟಿಶರು ಅಗಾಧಪಡುತ್ತಿದ್ದರು. ಆದರೆ ಇವರು ಚಿಕ್ಕ ವಯಸ್ಸಿನಲ್ಲಿ ದಿವಾಣರಾಗಿರುವರೆಂಬ ಒಂದು ಮಾತಿನಿಂದಲೇ ಲಂಚಗೂಳಿಗಳೂ ರಾಷ್ಟ್ರವಿಘಾತಿಗಳೂ ಆದ ಎಷ್ಟೋ ಜನ ಅಧಿಕಾರಿಗಳು ಸ್ವಾರ್ಥಲೋಲುಪರಾಗಿ ಇವ

ರನ್ನು ತಮ್ಮ ಕಂಕುಳಲ್ಲಿಟ್ಟುಕೊಂಡು ನಿಜಾಮರನ್ನು ಹಾಳು ಮಾಡಬೇಕೆಂದು ಬಯಸಿದರು. ಆದರೆ ಸಾಲಾರ್ಜಂಗರ ಅಮೌಲ್ಯಗುಣಗಳ ನಿದರ್ಶನವು ಈ ಲಂಚಗೂಳಿಗಳಿಗೆ ತಿಳಿದುಬಂದುದರಿಂದ ತಮ್ಮ ಸ್ವಾರ್ಥಸಾಧನಕ್ಕೆ ಇವರು ಒಂದು ದೊಡ್ಡ ಕಂಟಕವೆಂದೇ ಭಾವಿಸಿ ಇವರನ್ನು ಮುರಿಯುವ ಹಂಚಿಕೆಯನ್ನು ಹುಡುಕಹತ್ತಿದರು. ಆದರೆ ಸಾಲಾರ್ಜಂಗರು ಇವಕ್ಕೆ ಸೊಪ್ಪು ಹಾಕಲಿಲ್ಲ. ಇವರು ದಿವಾನಗಿರಿಗೆ ಬಂದ ಕೂಡಲೆ ಸಾಹುಕಾರರ ಎಲ್ಲ ಸಾಲವನ್ನೂ ಸಾಹಸದಿಂದ ತೀರಿಸಿ ಅವರ ವಿಶ್ವಾಸವನ್ನು ಮೊದಲು ಸಂಪಾದಿಸಿದರು. ಆ ಮೇಲೆ ರೋಹಿಲಾ ಪಠಾಣ ಅರಬರ ಸಾಲವನ್ನು ತೀರಿಸಿ ಅವರನ್ನು ಹೊರಗೆ ಹಾಕಬೇಕೆಂದು ಜಿಲ್ಹೆಯ ಅಧಿಕಾರಿಗಳಿಗೆ ಹುಕುಮು ಮಾಡಿದರು. ಜಿಲ್ಹೆಯ ಅಧಿಕಾರಿಗಳಿಗೆ ಮೊದ ಮೊದಲು ಈ ಹುಕುಮನ್ನು ಕಾರ್ಯದಲ್ಲಿ ತರಲು ಬಹಳ ಶ್ರಮವಾಯಿತು. ಯಾಕಂದರೆ ಅರಬರು ಸರಕಾರಕ್ಕೆ ಸಾಲಕೊಟ್ಟವರಾದುದರಿಂದ ಯಾರಿಗೂ ಹೆದರುತ್ತಿರಲಿಲ್ಲ. ಇಂಥನರನ್ನು ವಿಚಾರಿಸಿ ಶಿಕ್ಷಿಸಲು ಬೇರೆ ಕೋರ್ಟನ್ನು ಮಾಡಿ ತಾವೇ ವಿಚಾರಿಸಿ ದಂಡಿಸುತ್ತಿದ್ದರು. ಈ ಕಾರ್ಯದಲ್ಲಿ ಇಬ್ಬರು ಅರಬ ಜಮಾದಾರರಿಂದ ಇವರಿಗೆ ಒಳ್ಳೇ ಸಹಾಯವಾಯಿತು. ಆದರೂ ಅತ್ಯಂತ ಕಠಿಣ ಪ್ರಸಂಗಗಳು ಇವರ ಮೈಮೇಲೆ ಬಂದವು. ಜೀವದಿಂದುಳಿಯುವ ಸಂಭವವೂ ಇದ್ದಿಲ್ಲ. ಇವರು ಮೂರು ತತ್ವಗಳನ್ನವಲಂಬಿಸಿದ್ದರು. (೧) ಸರಳ ಜೀವನ ಹಾಗೂ ಉಚ್ಚಭಾವನೆ. (೨) ಬೇಕಾದುದ್ದು ಬಂದರೂ ಸದಸದ್ವಿವೇಕಬುದ್ಧಿಯಿಂದ ವಿಮುಖರಾಗದಿರುವದು. (೩) ದೇವರಲ್ಲಿ ನಂಬಿಗೆ. ಇವೇ ಮೂರು ತತ್ವಗಳ ಬಲದಿಂದ ೧೮೫೮ರ ಕೊನೆಯೊಳಗಾಗಿ ದೇಶವನ್ನು ಸಾಲದಿಂದ ಮುಕ್ತನಾಡಿದರು. ಅರಬ ಪಠಾಣ ಜನರನ್ನು ಬಗ್ಗು ಬಡಿದರು. ಸೈನ್ಯದೊಳಗಿದ್ದ ಅವರ ಜನರನ್ನು ಕೂಡ ತೆಗೆದರು. ಇವರ ಕರ್ತೃತ್ವಶಕ್ತಿಗೆ ಮೆಚ್ಚಿ ಬ್ರಿಟಿಶ್ ಸರಕಾರದವರು ಇವರ ಪ್ರತಿಯೊಂದು ಕಾರ್ಯದಲ್ಲಿ ಇವರಿಗೆ ನೆರವಾಗುತ್ತಿದ್ದರು.

(ಮುಂದೆ ಸಾಗುವುದು)

---

## ಸಂಗೀತ.

ಮುಗಿಲಿಂದಮವಿರತಂ ಸುರಿವ ಪಾಲ್ಸರಿಯಿದೆನೆ ।
ಬಗೆಗೊಳಿಪ ಬೆಳದಿಂಗಳುಜ್ವಳಿಕೆಯೊಳ್ ಪುದಿದು ।
ಮುಗುಮುಗಿಪ ಪೊಸಗಂಪಿನೊಳ್ ಬೆರೆದು ಮೆಲ್ಲೆಲರಲಂಪಿ-
ನೊಳಗೊಂದು ಗೂಡಿ ।
ಸೊಗಯಿಸುವ ಸಂಗೀತದಿಂಪಿನಿಂ ಮನದಳಲ ।
ಬಿಗಿಬಿಗುಹು ಸಡಿಲಾಗಿಯೋಸರಿಸೆ ನಲ್ಸೊಗಂ ।
ಚಿಗುರೊಡೆದು ರಯ್ಯದಿಂ ಪರ್ವಿದತ್ತುಮದು! –
ಪೆಂಪೆಂತುಟೋ ಸಂಗೀತದಾ ! ॥ ೧ ॥

—ಸಾಲಿ ರಾಮಚಂದ್ರರಾಯ.

---

# ವಾದ ಭೂಮಿ.

### ಚೆನ್ನ ಬಸವ ಪುರಾಣ.

ಲೇ:---ಶ್ರೀ ವೀರಪ್ಪಾ ವೀರಭದ್ರಪ್ಪಾ ನಾಗಸೆಟ್ಟಿ ಕನ್ನಡ ಶಾಲಾಮಾಸ್ತರ ಸಂಗೊಳ್ಳಿ.

ಒಮ್ಮೆ ನಾನು ಚನ್ನಬಸವ ಪುರಾಣದ ಕೊನೆಯ ಭಾಗದಲ್ಲಿರುವ ಕಾಲಜ್ಞಾನವನ್ನು ಓದುವಾಗ ಅದರಲ್ಲಿಯ ಶಕವರ್ಷಗಳ ಲೆಕ್ಕಹಾಕಿ ನೋಡಿದೆನು. ಶಾಲಿವಾಹನ ಶಕವರ್ಷ ೮೦೦ ನೆಯ ವಿಲಂಬಿ ಸಂವತ್ಸರದಲ್ಲಿ ಹೊಯ್ಸಳನಿಗೆ ಪಟ್ಟವಾಗುವುದು ಎಂದು ಹೇಳಿದ್ದೂ, ಶಕವರ್ಷ ೧೨೫೮ನೆಯ ಧಾತು ಸಂವತ್ಸರದಲ್ಲಿ ಹರಿಹರರಾಜನಿಗೆ ಪಟ್ಟವಾಗುವುದು ಎಂದು ಹೇಳಿದ್ದು ಸರಿಯಾಗಿರುವುವೆಂದು ಕಂಡುಬಂದಿತು. ಆದರೆ ಆ ಪುರಾಣವು ಶಕವರ್ಷ ೧೫೦೦ನೆಯ ತಾರಣಸಂವತ್ಸರದಲ್ಲಿ ಮುಗಿಯಿತೆಂದು ಹೇಳಿರುವದರಲ್ಲಿ ತುಸು ತಪ್ಪಾಗಿದೆ. ಲೆಕ್ಕದಿಂದ ನೋಡಿದರೆ ೧೫೦೬ನೆಯ ಶಕವರ್ಷವೇ ತಾರಣಸಂವತ್ಸರವು. ೧೫೦೦ನೆಯದು ಪಾರ್ಥಿವಸಂವತ್ಸರವು. ಈ ತಪ್ಪು ಬರೆದವರಿಂದ ಆಗಿರಬಹುದೆಂದೂ ಅಲ್ಲಿ "ಶಾಲಿವಾಹನಶಕದ ಸಾಹಸ್ರದೈನೂರ। ಮೇಲದಾರನೆಯ ತಾರಣ ಸುಸಂವತ್ಸರದ" ಎಂದು ತಿದ್ದಿಕೊಳ್ಳಬಹುದೆಂದೂ ಭಾವಿಸಿದೆನು. ಬಳಿಕ ಮತ್ತೆ ೪-೫ ಕಾವ್ಯಗಳು ರಚಿಸಲ್ಪಟ್ಟ ಶಕವರ್ಷಗಳ ಗಣನೆ ಮಾಡಿ ನೋಡಿದೆನು. ಉದ್ಭಟಕಾವ್ಯ (೧೧೪೪ನೆಯ ಚಿತ್ರಭಾನು), ಗದಾಯುದ್ಧ (೧೨೬೪ನೆಯ ಚಿತ್ರಭಾನು), ಬಸವಪುರಾಣ (೧೪೯೧ನೆಯ ಸೌಮ್ಯ), ಇವು ರಚನೆಯಾದ ಶಕವರ್ಷಗಳು ಆಯಾ ಸಂವತ್ಸರಗಳಿಗೆ ಹೊಂದಿಕೆಯಾಗಿವೆ. ಆದರೆ ರಾಜಶೇಖರವಿಳಾಸ, ವೃಷಭೇಂದ್ರವಿಜಯ ಎರಡು ಕಾವ್ಯಗಳು ರಚಿಸಲ್ಪಟ್ಟ ಶಕವರ್ಷಗಳನ್ನು ಬರೆಯುವದರಲ್ಲಿಯೂ ತುಸು ತಪ್ಪಾಗಿದೆ.

ರಾಜಶೇಖರವಿಳಾಸವು "ಸುರುಚಿರಶಾಲಿವಾಹನ ಶಕಾನ್ವಿರತ್ನ ಸಮುದ್ರಬಾಣ ಭೂ। ಪರಿಗಣನಾಂಕ ಬಂಧುರ ಜಯಾಬ್ದದಲ್ಲಿ ಪರಿಪೂರ್ಣವಾಯ್ತು" ಎಂದು ಆ ಕಾವ್ಯದ ಕೊನೆಯ ಪದ್ಯದಲ್ಲಿ ಹೇಳಿದೆ. "ರತ್ನ" ಎಂದು ೯ಕ್ಕೆ ಪರ್ಯಾಯ ಶಬ್ದವಾಗಿರುವುದರಿಂದ ಶಕವರ್ಷ ೧೫೪೯ನೆಯದು ಜಯಸಂವತ್ಸರವೆಂದು ಹೇಳಿದಂತಾಯಿತು. ಆದರೆ ನಿಜವಾಗಿ ೧೫೭೬ನೆಯ ಶಕವರ್ಷವೇ ಜಯಸಂವತ್ಸರವು

ಕೈ. ವಾ. ಎನ್. ಆರ್. ಕರಿಬಸವಶಾಸ್ತ್ರಿಗಳು ಲೇಖಕ ದೋಷಾದಿಗಳನ್ನು ಶೋಧಿಸಿ ಅಚ್ಚುಗೊಳಿಸಿದ ರಾಜಶೇಖರ ವಿಳಾಸದ ಪ್ರತಿಯ ಪ್ರಸ್ತಾವನೆಯಲ್ಲಿ ಎಳಂದೂರಿನ ಗೌರೀಶ್ವರ ದೇವಾಲಯದಲ್ಲಿದ್ದ ಶಾಸನದ ಕೆಲ ಭಾಗವನ್ನು ಬರೆದಿದ್ದಾರೆ. ಅದರಲ್ಲಿ ಶಾಲಿವಾಹನ ಶಕವರ್ಷ ೧೫೭೬ನೆಯ ಜಯ ಸಂವತ್ಸರದಲ್ಲಿ ಹದಿನಾಡಿನ ಮುದ್ದುರಾಜನು ತೋಟಗರ್ದೆ, ಕೊಂಡಂಗೆರೆ ಎಂಬ ಗ್ರಾಮುಗಳನ್ನು ಗೌರೀಶ್ವರ ದೇವರಿಗೆ ಕಾಣಿಕೆಯಾಗಿ ಸಮರ್ಪಿಸಿದನೆಂದು ಹೇಳಿದೆ. ಒಟ್ಟಿಗೆ೧೫೭೬ ನೆಯ ಶಕವರ್ಷವೇ ಜಯಸಂವತ್ಸರವು.

"ರತ್ನ" ಶಬ್ದಕ್ಕೆ ೬ ಎಂದು ಅರ್ಥಮಾಡಲಿಕ್ಕೆ ಬರುವುದೇ ಹೇಗೆ? ಇಲ್ಲದಿದ್ದರೆ ಅಲ್ಲಿ "ಸುರುಚಿರ ಶಾಲಿವಾಹನ ಶಕಾನ್ವಿತ ಕರ್ಮಸಮುದ್ರಬಾಣ ಭೂಪರಿಗಣನಾಂಕ" ಎಂಬುದಾಗಿ ತಿದ್ದುವುದು ಒಳ್ಳೆಯದೋ ಹೇಗೆ? ಇದನ್ನು ಪ್ರಾಜ್ಞರು ಪರ್ಯಾಲೋಚಿಸತಕ್ಕದ್ದು.

ಇನ್ನು 'ಭೂಧರ' ಎಂಬದು ೭ಕ್ಕೆ ಪರ್ಯಾಯಶಬ್ದವಾಗಿರುವುದರಿಂದ ವೃಷಭೇಂದ್ರವಿಜಯವು ೧೪೫೦ನೆಯ ಶಕಾಬ್ದದ ನಳಸಂವತ್ಸರದಲ್ಲಿ ರಚಿಸಲ್ಪಟ್ಟಿತೆಂದು ಹೇಳಿದ್ದು ತಪ್ಪಾಗಿದೆಯೆಂದು ಕಂಡುಬರುತ್ತದೆ. ನಿಜವಾಗಿ ಶಾಲಿವಾಹನ ಶಕವರ್ಷ ೧೪೫೮ನೆಯದು ನಳಸಂವತ್ಸರವು. 'ಭೂಧರ' ಶಬ್ದಕ್ಕೆ ೮ ಎಂದು ಅರ್ಥ ಮಾಡಲಿಕ್ಕೆ ಬರುವುದೋ ಹೇಗೆ? ಇಲ್ಲದಿದ್ದರೆ ವೃಷಭೇಂದ್ರ ವಿಜಯದ ೪೨ನೆಯ ಆಶ್ವಾಸದ ೧೧೦ ನೆಯ ಪದ್ಯದಲ್ಲಿ 'ಒದವಿದ ಚಂದ್ರಬಾಣಸಿಧ್ಧಿಭೂಧರ ಸಂಖ್ಯೆಯನಾಳ್ದ' ಎಂದು ಇರುವುದರ ಬದಲಾಗಿ 'ಒದವಿದ ಚಂದ್ರಬಾಣ ನಿಧಿ ದಿಗ್ಗಜಸಂಖ್ಯೆಯನಾಳ್ದ' ಎಂದು ತಿದ್ದುವುದು ವಿಹಿತವೋ ಹೇಗೆ? ಇದನ್ನು ವಿದ್ವಾಂಸರು ವಿಚಾರಮಾಡತಕ್ಕದ್ದು.




## ಬೆಂಗಳೂರಿಗೆ "ಬೆಂಗಳೂರು" ಎಂಬ ಹೆಸರು ಹೇಗೆ ಬಂದಿತು ?

ಒಂದು ದಿನ ವೀರ ಬಲ್ಲಾಳರಾಯನು ಬೇಟೆಗಾಗಿ ಇತ್ತ ಕಡೆಗೆ ಬಂದನು. ಸಂಗಡ ಬಂದವರು ಅರಸನ ಕುದುರೆಯ ಜತೆಯಲ್ಲಿ ಬರಲಾರದೆ ಹಿಂದೆ ಬಿದ್ದರು. ದೊರೆಯು ದಾರಿತಪ್ಪಿ, ಕಾಡೆಲ್ಲಾ ತಿರುಗಿ ಸಂಜೆಯ ವೇಳೆಗೆ ಒಂದು ಹಳ್ಳಿಯನ್ನು ಸೇರಿದನು. ಅಲ್ಲಿ ಒಂದು ಗುಡಿಸಲು ಅದರಲ್ಲಿ ಒಬ್ಬ ಮುದುಕಿ ಬೆಳಗಿಂದ ಅಲೆದಲೆದು ಸಾಕಾಗಿದ್ದ ದೊರೆಯು ಹಸಿವಿನಿಂದ ಬೆಂಡಾಗಿದ್ದನು. ಮುದುಕಿಯ ಬಳಿ ಒಂದಿಷ್ಟು ಕಾಳು ಅಲ್ಲದೆ ಬೇರಿನ್ನೇನೂ ಇರಲಿಲ್ಲ. ಆಕೆಯೂ ಅದನ್ನೇ ಬೇಯಿಸಿ ಕೊಟ್ಟಳು. ದೊರೆಗೆ ಆ ಬೆಂಗಾಳೇ ಪರಮಾನ್ನಕ್ಕಿಂತಲೂ ಪ್ರಿಯವಾಗಿತ್ತು. ಅರಸನು ಆ ಮುದುಕಿಯು ತನಗಿತ್ತ ಕಾಳಿನ ನೆನಪಿಗೆ ಆ ಊರನ್ನು ಬೆಂಗಾಳೂರು ಎಂದು ಕರೆದನು. ಬರು ಬರುತ್ತ ಅದೇ ಬೆಂಗಳೂರು ಎಂದು ಆಯಿತು. ಅನಂತರ ಮಾಗಡಿ ಕೆಂಪೇಗೌಡನು ಇಲ್ಲಿ ಕೋಟೆ, ಪೇಟೆಗಳನ್ನು ಕಟ್ಟಿಸಿ ಊರನ್ನು ಬೆಳೆಸಿದನು. ಹಲಸೂರಿನಲ್ಲಿರುವ ಸೋಮೇಶ್ವರ ದೇವಾಲಯ, ಗರಿಪುರದ ಗಂಗಾಧರೇಶ್ವರನ ಗುಡಿ, ಬಸವನ ಗುಡಿಯ ಬಸವ, ವಿನಾಯಕ, ಕೆಂಪಾಂಬುಧಿ ಸಂಪಂಗಿ ಕೆರೆಗಳೂ ಆತನೇ ಕಟ್ಟಿಸಿದುವು.

— ಮಕ್ಕಳ ಪುಸ್ತಕ.

---

## ಅನುಭವ ವೈದ್ಯ.

ಮೂಲವ್ಯಾಧಿಗೆ ಔಷಧವು:—ಒಂದು ತೊಲೆ ಬಿಳಿ ಎಳ್ಳನ್ನು ಜಜ್ಜಿ ಒಂದು ತೊಲೆ ಬೆಣ್ಣೆಯಲ್ಲಿ ಬೆರಸಿ ಪ್ರತಿದಿನ ಬೆಳಗ್ಗೆ ಸೇವಿಸಬೇಕು. ಅಥವಾ

| | | | |
|---|---|---|---|
| ಬಾಲಮೆಣಸು | ೨ | ತೊಲೆ | ಚೂರ್ಣ |
| ಮೆಣಸು | ೧/೪ | ತೊಲೆ | ,, |
| ಸಬ್ಬಸಿಗಿ | ೧ | ತೊಲೆ | ,, |

ಈ ಚೂರ್ಣವನ್ನು ಎರಡು ತೊಲೆ ಜೇನುತುಪ್ಪದಲ್ಲಿ ಕೂಡಿಸಿಟ್ಟು ಪ್ರಾತಃಕಾಲ ಸಾಯಂಕಾಲದಲ್ಲಿ ೧/೨ ತೊಲೆ ತೂಕದಷ್ಟು ಸೇವಿಸಬೇಕು. **ಮೊಳಕೆಗಳಿದ್ದರೆ**

| | | |
|---|---|---|
| ಮಾಪಳದ ಕಾಯಿಪುಡಿ | ೧ | ತೊಲೆ |
| ಅಫೀಮು | ೧/೨ | ತೊಲೆ |
| ಬೆಣ್ಣೆ | ೩ | ತೊಲೆ |

ಕೂಡಿಸಿ ಮೇಲೆ ಹಚ್ಚಿದರೆ ಗುಣವಾಗುತ್ತದೆ.

— ಧನ್ವಂತರಿ.

---

## ಹಾವುಕಡಿತಕ್ಕೆ ಉಪಾಯಗಳು.

ಸಿಂಹಲದ್ವೀಪದಲ್ಲಿ ಯಾರಿಗಾದರೂ ಹಾವು ಕಚ್ಚಿದರೆ ಒಃದೆರಡು ಬಟ್ಟಲ ಬಾಳೇದಿಂಡಿನ ರಸವನ್ನು ಕುಡಿಸಿ ಹಾವುಕಚ್ಚಿದವನನ್ನು ಬದುಕಿಸಿಕೊಳ್ಳುವುದುಂಟು. ಬಾಳೇದಿಂಡಿನ ರಸವು ಕಹಿಯಿರುವುದೇನೋ ನಿಜ. ಆದರೆ ಹಾವು ಕಚ್ಚಿದನಂತರ ಬಹಳ ಕಾಲವು ಹೋಗಗೊಡದೆ ಬೇಗನೆ ಈ ರಸವನ್ನು ಕುಡಿಸಿದರೆ ೧೦೦ಕ್ಕೆ ೯೪ ಜನರಾದರೂ ಉಳಿಯುವರೆಂಬುದರಲ್ಲಿ ಸಂದೇಹವಿಲ್ಲ. ಹಾವುಗಳು ಬಾಳೇಗಿಡವನ್ನು ಕಚ್ಚುವುದಿಲ್ಲೆಂಬುದೂ ಹಸರು ಹಾವೊಂದಲ್ಲದೆ ಬೇರೆ ಮತ್ತಾವ ಹಾವೂ ಬಾಳೇಬನದಲ್ಲಿ ಸುಳಿದಾಡುವುದಿಲ್ಲೆಂಬುವೂ ವಿಶೇಷ ಸಂಗತಿಯು. ಇನ್ನೊಂದು ಉಪಾಯುವೇನಂದರೆ ಗಾಂಜೇ ಸೇದುವವರ ಚಿಲಿಮೆಯೊಳಗೆ ಕೂತಿರುವ ಕಿಟ್ಟವು. ಈ ಕಿಟ್ಟವನ್ನು

ಕಲ್ಲಿನಮೇಲೆ ಸ್ವಲ್ಪ ನೀರಿನಲ್ಲಿ ತಿಕ್ಕಿ ರಾಡಿಯನ್ನು ಮಾಡಬೇಕು. ಆಮೇಲೆ ಹಾವು ಕಚ್ಚಿದ ಸ್ಥಳದಿಂದ್ಮೇಗಡೆಗೆ ಚಾಕುವಿನಿಂದ ಕೆಂಪು ರಕ್ತವು ಬರುವವರೆಗೆ ಒಂದು ಗಾಯವನ್ನು ಮಾಡಿ ಆ ರಾಡಿಯನ್ನು ತಿಕ್ಕಬೇಕು. ಹಾವು ಕಚ್ಚಿ ಬಹಳ ಹೊತ್ತು ಆಗಿದ್ದರೆ ಮತ್ತೆ ಮೇಗಡೆಗೆ ಕೆಂಪುರಕ್ತವು ಬರುವವರೆಗೆ ಮೂರು ನಾಲ್ಕು ಗಾಯಗಳನ್ನು ಮಾಡಿ ಅವುಗಳಲ್ಲಿ ಕಿಟ್ಟದ ರಾಡಿಯನ್ನು ತಿಕ್ಕಬೇಕು. ಹಾವು ಕಚ್ಚಿದ ನಂತರ ಈ ಉಪಾಯವನ್ನು ಕೈಕೊಳ್ಳುವ ಮುಂಚೆ ಹೆಚ್ಚು ಹೊತ್ತು ಆದಹಾಗೆ ಕೆಂಪು ರಕ್ತವು ಕಚ್ಚಿದ ಸ್ಥಳದಿಂದ ಸಮೀಪದಲ್ಲಿ ದೊರೆಯದೆ ಮೇಲು ಮೇಲಿನ ಭಾಗದಲ್ಲಿ ದೊರೆಯುವುದು.

—ದಿ. ಹಿಂದುಸ್ಥಾನ ಟಾಯಿಮ್ಸ.

---

## ಪೇರಲಗಿಡಗಳಿಗೆ ಬಹಳ ಹಣ್ಣುಗಳಾಗುವಂತೆ ಮಾಡಬೇಕಾದ ಉಪಾಯವು.

ಪೇರಲಗಿಡಗಳಿಗೆ ವರ್ಷದಲ್ಲಿ ಮೂರುಸಾರೆ ಹಣ್ಣುಗಳಾಗುವುವು. ಮೊದಲನೆಯು ಹಂಗಾಮು ಮಾವಿನಹಣ್ಣು ಆಗುವ ಕಾಲವು. ಇದಕ್ಕೆ ಅಂಬೇಬಹಾರವೆನ್ನುವರು. ಎರಡನೆಯದು ಮೃಗದ ಮಳೆಯ ವೇಳೆಯು. ಇದಕ್ಕೆ ಮೃಗಬಹಾರವೆನ್ನುವರು. ಮೂರನೆಯದು ಹಸ್ತಾಮಳೆಯ ಕಾಲವು. ಇದಕ್ಕೆ ಹಸ್ತಾಬಹಾರವೆನ್ನುವರು. ಈ ಮೂರು ಬಹಾರಗಳಲ್ಲಿ ಅಂಬೇಬಹಾರದ ಹಣ್ಣುಗಳೇ ಹೆಚ್ಚು ರುಚಿಯುಳ್ಳವಾಗಿರುವುವು. ಇವುಗಳಿಗೆ ಮಾಗಣಿ ಬಹಳ. ಈ ಹಂಗಾಮಿನಲ್ಲಿ ಬಹಳ ಹಣ್ಣುಗಳಾಗುವಂತೆ ಮಾಡಬೇಕಾದ ಉಪಾಯವು ಕೆಳಗಿನಂತಿದೆ—

ಕಾಯಿಯಾಗುವ ಮೂರು ತಿಂಗಳ ಮೊದಲು ನೀರು ಹಾಯಿಸುವುದನ್ನು ನಿಲ್ಲಿಸಬೇಕು. ನಂತರ ೧೦–೧೫ ದಿವಸಗಳಾದ ಬಳಿಕ ಪ್ರತಿಯೊಂದು ಟೊಂಗೆಯನ್ನು ಮೂರು ಬಣ್ಣು ಬಿಟ್ಟು ಕತ್ತರಿಸಬೇಕು. ಗಿಡದ ಬೊಡ್ಡಿಯ ಸುತ್ತಲೂ ಅಗಲು ಒಂದು ತಗ್ಗು ಆಗುವಂತೆ ತಗ್ಗು ತೆಗೆಯಬೇಕು. ದೊಡ್ಡ ದೊಡ್ಡ ಬೇರುಗಳಿಗೆ ಧಕ್ಕಿ ತಗಲಗೊಡದೆ ಸಣ್ಣಸಣ್ಣ ಬೇರುಗಳನ್ನು ಕತ್ತರಿಸಿ ತೆಗೆಯಬೇಕು. ಆ ಮೇಲೆ ಒಂದು ತಿಂಗಳವರೆಗೆ ಹಾಗೇ ಆರಬಿಡಬೇಕು. ನಂತರ ಬೊಡ್ಡೆಯ ಕಡೆಗೆ ಆರು ಬೊಟ್ಟು, ತಗ್ಗಿನಲ್ಲಿ ಉತ್ತಮ ಕೊಳೆತ ಐದಾರು ಬುಟ್ಟಿ ಶಗಣಿ ಗೊಬ್ಬರವನ್ನು ಹಾಕಿ ಅದರ ಮೇಲೆ ಮಣ್ಣು ಹಾಕಬೇಕು. ಇಲ್ಲವೆ ಮಣ್ಣಿನಲ್ಲಿಯೇ ಗೊಬ್ಬರವನ್ನು ಕೂಡಿಸಿ ಹಾಕಬೇಕು. ಬೊಡ್ಡಿಗೆ ಮಣ್ಣು ಹೆಚ್ಚು ಏರಿಸಬೇಕು. ಬೊಡ್ಡಿಯಸುತ್ತಲೂ ನೀರು ನಿಲ್ಲುವಂತೆ ತಗ್ಗುಮಾಡಬೇಕು. ಹೀಗೆ ಮಾಡಿದರೆ ಬೇರುಗಳಿಗೆ ನೀರಿನ ಪೂರೈಕೆಯು ಚೆನ್ನಾಗಿ ಆಗುವುದು. ಮಣ್ಣು ತೆಗೆದು ಆರಬಿಟ್ಟಾಗ್ಗೆ, ಆಹಾರ ಸಿಗುವುದನ್ನು ಬಂದು ಮಾಡಿದ್ದರಿಂದ ಎಲೆಗಳು ಉದುರುವುವು. ಮುಂದೆ ಗೊಬ್ಬರ ಹಾಕಿ ನೀರು ಹಾಯಿಸಿದರೆ ಗಿಡವು ಚಿಗಿಯಹತ್ತಿ ಒಂದು ತಿಂಗಳಿಗೆ ಸಂಪೂರ್ಣ ಚಿಗಿಯುವುದು. ಆ ಮೇಲೆ ಒಂದು ತಿಂಗಳಲ್ಲಿ ಹೂವುಬಿಟ್ಟು ಕಾಯಿಯಾಗುವುವು. ಅದರಿಂದ ಹಣ್ಣುಗಳು ಬಹಳಾಗುವುವು.

—ಒಕ್ಕಲಿಗನೂ ಒಕ್ಕಲತನವೂ.

---

## ಕರ್ಣಾಟ ಕುಲಭೂಷಣ ನಾನ್ಯಭೂಪಾಲನ ಸಂಗೀತ ಗ್ರಂಥವು.

ಆಂಧ್ರ ಹಿಸ್ಟಾರಿಕಲ್ ಜರ್ನಲಿನ ಮೊನ್ನೆ ಮೊನ್ನಿನ ಸಂಚಿಕೆಯಲ್ಲಿ ಹೀಗೆ ಬರೆದಿದೆ—

ನಾನ್ಯ ಭೂಪಾಲನೆಂಬವನು ಭರತನ ನಾಟ್ಯಶಾಸ್ತ್ರದ ೧೮ ರಿಂದ ೨೮ಅಧ್ಯಾಯಗಳ ಮೇಲೆ ಸಂಸ್ಕೃತದಲ್ಲಿ ಒಂದು ವಾರ್ತಕವನ್ನು ಬರೆದಿರುವನು. ಆತನು ತನ್ನ ಗ್ರಂಥಕ್ಕೆ "ಸರಸ್ವತೀ ಹೃದಯಾಲಂಕಾರ"ವೆಂದು ಹೆಸರು ಕೊಟ್ಟಿರುವರು. ಈ ಪುಸ್ತಕದ ಹಸ್ತಲಿಖಿತಪ್ರತಿಯು ಈಗೀಗ ಸಿಕ್ಕಿರುತ್ತದೆ. ನಾನ್ಯ ಭೂಪಾಲನು ತಾನು ಮಿಥಿಲೇಶ್ವರನೆಂದು ಹೇಳಿಕೊಂಡಿರುವನು. ಇದರಿಂದ ಆತನು ಅಲ್ಲಿ ಆಳುತ್ತಿದ್ದನೆಂದು ತೋರುತ್ತದೆ. ಆದರೆ ಆತನು ತನಗೆ "**ಕರ್ಣಾಟ ಕುಲಭೂಷಣ**" ಎಂದು ಹೇಳಿಕೊಂಡಿರುವುದರಿಂದ ಆತನು ಮೂಲತಃ ಕರ್ನಾಟಕ ದೇಶದವನೆಂಬುದೂ ಆತನಿಗೆ ಕರ್ನಾಟಕದ ಅಭಿಮಾನವಿತ್ತೆಂಬುದೂ ಸ್ಪಷ್ಟವಾಗುತ್ತದೆ. ಆತನು ಕೀರ್ತಿರಾಜನೆಂಬವನ ತಮ್ಮನು. ಸೌವೀರ, ಮಾಳವ, ಗೌಡ, ಬಂಗಾಲ ಅರಸರನ್ನು ಸೋಲಿಸಿದನು. ಗುರ್ಜರ ರಾಜಪುತ್ರಿಯನ್ನು ಮದುವೆ ಮಾಡಿಕೊಂಡನು. ಆತನಿಗೆ ರಾಜನಾರಾಯಣ, ನೃಪಮಲ್ಲ, ಮುಂತಾದ ಬಿರುದುಗಳಿದ್ದುವು. ಈತನು ೧೦೯೭ ರಿಂದ ೧೧೩೩ ರ ವರೆಗೆ ಆಳಿದನೆಂತು. ಶ್ರೀ. ಕೆ. ಪು. ಜಯಸ್ವಾಲ ಇವರು ಹೇಳುತ್ತಾರೆ. ಬುದ್ಧಗಯೆಯಲ್ಲಿಯ ಒಂದು ಶಿಲಾಲಿಪಿಯಲ್ಲಿ, ನಾನ್ಯ-ಗುಣಾವಲೋಕನೆಂಬ ರಾಷ್ಟ್ರಕೂಟ ಅರಸನ ಉಲ್ಲೇಖವು ಬಂದಿದೆ. ರಾಷ್ಟ್ರಕೂಟರು ಮಳಖೇಡದಲ್ಲಿ ಆಳುತ್ತಿದ್ದ ಕರ್ನಾಟ ಅರಸರು ಅವರ ಅರಸರಲ್ಲಿ ಅನೇಕರಿಗೆ ಸಮ

ರಾವಲೋಕ, ವೀರಾವಲೋಕ, ಪುಣ್ಯಾವಲೋಕ ಎಂಬ ಬಿರುದುಗಳಿರುತ್ತವೆ. ಅವಲೋಕ ಎಂಬ ಶಬ್ದವು ರಾಷ್ಟ್ರಕೂಟವ ವೈಶಿಷ್ಟ್ಯವಿರುತ್ತದೆ. ಆದಕಾರಣ ಈ ನಾನ್ಯ ಭೂಪಾಲನೂ ರಾಷ್ಟ್ರಕೂಟ ಅರಸನಾಗಿರಬೇಕು. ೯೭೦ನೇ ಇಸ್ವಿಯಲ್ಲಿ ಮಳಖೇಡದಲ್ಲಿ ರಾಷ್ಟ್ರಕೂಟಮನೆತನವು ಮುಳುಗಿದ ಬಳಿಕ, ಆ ಅರಸರು ಉತ್ತರಕ್ಕೆಹೋಗಿ ರಾಜ್ಯಗಳನ್ನುಸ್ಥಾಪಿಸಿ ಆಳಿದಂತೆ ತೋರುತ್ತದೆ.ನಾನ್ಯ ದೇವನ ಗ್ರಂಥವು ಪ್ರಸಿದ್ಧ ಗ್ರಂಥವಾದ ಅಭಿನವಗುಪ್ತನ ಗ್ರಂಥದಂತೆಯೇ ಇದು ಇರುತ್ತದೆ. ಅಭಿನವ ಗುಪ್ತನ ಗ್ರಂಥವು ಭೋಜದೇವ ಮತ್ತು ಚಾಲುಕ್ಯ ವಿಕ್ರಮಾಂಕನ ಮಗನಾದ ಸೋಮೇಶ್ವರನ ಗ್ರಂಥಗಳನ್ನು ಹಿಂದಕ್ಕೆ ಹಾಕಿತು. ಶಾಂರ್ಗದೇವನುಬರೆದ ಸಂಗೀತ ರತ್ನಾಕರದಲ್ಲಿ ಈ ನಾನ್ಯ ಭೂಪಾಲನ ಉಲ್ಲೇಖವಿದೆ. ನಾನ್ಯದೇವನು ಅನೇಕ ಹೊಸಸಂಗತಿಗಳನ್ನು ಕಾಣಿಸಿರುವನು. ಆತನು ಒಟ್ಟು ೧೬೦ ರಾಗಗಳನ್ನು ವರ್ಣಿಸಿರುವನು. ಈ ಪುಸ್ತಕದ ೧೧ನೇ ಅಧ್ಯಾಯದಲ್ಲಿ ದೇಶೀಯ ರಾಗಗಳನ್ನು ಅಂದರೆ ಕರ್ನಾಟಕ ರಾಗಗಳನ್ನು ಕುರಿತು ವಿವೇಚನೆ ಇರುವದು. ಇದರ ಮೇಲಿಂದ ಆತನು **ಕರ್ನಾಟಕ**ನೆಂಬುದು ಸ್ಪಷ್ಟವಾಗುತ್ತದೆ.

–Quarterty jurual of the Andhra Historical Research Society,"

---

## ಮಾನವ ಜಾತಿಯ ಬಗ್ಗೆ ಗ್ರೀಕರದೊಂದು ದಂತಕಥೆ.

ಪೌರಾಣಿಕ ಗ್ರೀಕರಲ್ಲಿ ಜಗದೀಶ್ವರನಿಗೆ 'ಝೂಸ' ಎಂದು ಹೆಸರು. ದೇವತೆಗಳೆಲ್ಲರೂ ಅವನಿಗೆ ಅಧೀನರು. ಸೃಷ್ಟಿಯ ಆದಿಯಲ್ಲಿ ಸೂರ್ಯನಿಂದ ಪುರುಷರೂ, ಪೃಥ್ವಿಯಿಂದ ಸ್ತ್ರೀಯರೂ, ಚಂದ್ರನಿಂದ ಸ್ತ್ರೀಪುರುಷ ಲಕ್ಷಣಗಳುಳ್ಳ ಪ್ರಾಣಿಗಳೂ ಹುಟ್ಟಿದರು. ಹೀಗೆ ಹುಟ್ಟಿದವರಿಗೆಲ್ಲರಿಗೆ ನಾಲ್ಕು ಕೈಗಳೂ, ನಾಲ್ಕು ಕಾಲುಗಳೂ ಎರಡು ಮುಖಗಳೂ ಇದ್ದವು. ಇವರು ವರ್ತುಲಾಕಾರವಾಗಿದ್ದರು, ಮತ್ತು ಗಾಲಿಗಳಂತೆ ತೀವ್ರ ಗತಿಯಿಂದ ಗರಗರನೆ ತಿರುಗುತ್ತಿದ್ದರು. ಇವರು ಉಗ್ರರೂ, ಬಲಿಷ್ಠರೂ, ದುರಭಿಮಾನಿಗಳೂ ಆದುದರಿಂದ ಸ್ವರ್ಗಲೋಕವನ್ನು ಮುತ್ತಿ ದೇವತೆಗಳನ್ನು ಮುರಿಬಡೆಯಬೇಕೆಂದು ಒಮ್ಮೆ ಯತ್ನಿಸಿದರು. ಝೂಸನು ಅವರನ್ನು ನಾಶಗೊಳಿಸಲಿಚ್ಛಿಸಲಿಲ್ಲ. ಅವರೆಲ್ಲರು ಕೊಲ್ಲಲ್ಪಟ್ಟರೆ ತನಗೋಸ್ಕರ ಯಜ್ಞಯಾಗಾದಿಗಳನ್ನು ಮಾಡುವವರಾರೆಂಬ ಯೋಚನೆಯು ಝೂಸನಿಗಿದ್ದಿತು. ಆದುದರಿಂದ ಕೇವಲ ಅವರಿಗಿದ್ದ ಬಲವನ್ನು ಬಹ್ವಂಶದಿಂದ ಕಡಿಮೆಮಾಡಲಿಳಸಿ ಅಪೋಲೊ ಎಂಬ ದೇವತೆಗೆ ಅವರೆಲ್ಲರನ್ನು ಇಬ್ಭಾಗವಾಗಿ ಮಾಡಲು ಅವನು ಆಜ್ಞೆಮಾಡಿದನು. ಆಪೋಲೋನು ಹಾಗೆ ಮಾಡಲು ಮಾನವರ ಸಂಖ್ಯೆಯು ಇಮ್ಮಡಿಯಾಯಿತು.

—ಮಿಥಿಕಲ್ ಸೊಸೈಟೀಜ ಜರ್ನಲ್.

---

## ಸ್ತ್ರೀಸುಧಾರಣೆಯ ಗಾಳಿ.

ಪಶ್ಚಿಮದಲ್ಲಿಯ ಹೆಂಗಸರ ಸ್ಥಿತಿಯ ವಿಷವಾಗಿ ರೋಝಿವಾ ಫೋರ್ಬ್ಸ್ ಎಂಬವಳ ಒಂದು ಲೇಖವು ಮುಂಬಯಿ ಕ್ರಾನಿಕಲ್ ಪತ್ರಿಕೆಯ ನವ್ಹಂಬರ ೨೧ನೆಯ ತಾರೀಖಿನ ಸಂಚಿಕೆಯಲ್ಲಿ ಅವತರಿಸಲ್ಪಟ್ಟದೆ. ಆದರ ಸಾರಾಂಶವೇನೆಂದರೆ—

ಹಿಂದಕ್ಕೆ ಗಂಡಸು ಒಬ್ಬ ಹೆಂಗಸನ್ನು ಮದುವೆಮಾಡಿಕೊಂಡರೆ ಅವಳಿಗೆ ಆನಂದವಾಗುತ್ತಿತ್ತು. ಆದರೆಈಗ ಆ ದಿವಸಗಳು ಹೋದವು. ಈಗಿನ ದಿವಸಗಳಲ್ಲಿ ಹೆಂಗಸರಿಗೆ ಒಬ್ಬ ಗಂಡಸನನ್ನು ಮದುವೆ ಮಾಡಿಕೊಂಡು ಇರುವದು ಬೇಡ. ಅವಳಿಗೆ ಪೂರ್ಣ ಸ್ವಾತಂತ್ರ್ಯವು ಬೇಕು. ಇದು ಅವಳಿಗೆ ಸಿಗುವ ಬಹುವಿಧ ವಿದ್ಯೆಯ ಪರಿಣಾಮವು.

ಈಗಿನ ಗಂಡಸರು ಮದುವೆಮಾಡಿಕೊಳ್ಳುವದೆಂದರೆ ದೊಡ್ಡ ಕುತ್ತೆಂದು ಭಾವಿಸುತ್ತಾರೆ. ಆದುದರಿಂದ ಹೆಂಗಸರೂ ಗಂಡಸರ ಮೇಲೆ ಆದಷ್ಟು ಕಡಿಮೆ ಅವಲಂಬಿಸಬೇಕೆನ್ನುತ್ತಾರೆ. ಸ್ತ್ರೀಯರ ಆಕಾಂಕ್ಷೆಗಳು ಬೆಳೆದಿವೆ. ಅವುಗಳನ್ನು ಪೂರೈಸುವ ಸಾಮರ್ಥ್ಯವು ಗಂಡಸರಲ್ಲಿ ಇರುವದಿಲ್ಲ. ಒಮ್ಮೆ ಒಬ್ಬ ತರುಣನು ಅಂದದ್ದೇನೆಂದರೆ— ಅವರೆಲ್ಲರನ್ನೂ ಪ್ರೀತಿಸಬೇಕೆಂದೇನೋ ನನಗೆ ಇಚ್ಛೆ ಆದರೆ ಮಾಡಲೇನು ? ಅವರು ಟಾಚಣಿಗಗಳಂತಿರುತ್ತಾರೆ. ತಮ್ಮಷ್ಟೇ ವಯಸ್ಸುಳ್ಳವರನ್ನು ಮಾಡಿಕೊಳ್ಳಬೇಕೆಂಬುದು ಈಗಿನ ತರುಣಿಯರ ಬಯಕೆ, ಇಷ್ಟು ದಿವಸಗಳ ವರೆಗೆ ಹೆಂಗಸಿಗೆ ಗಂಡಸಿನ ಅಗತ್ಯವಿತ್ತು. ಗಂಡಸಿಗೆ ಹೆಂಗಸಿನ ಅಗತ್ಯವು ಅಷ್ಟೊಂದಿರಲಿಲ್ಲ. ಅಮೇರಿಕೆಯಲ್ಲಿ ಗಂಡಸಿಗೂ ಹೆಂಗಸಿಗೂ ಸಂಬಂಧವೇ ಕಡಿದುಹೋದಂತಾಗಿದೆ, ಆ ದೇಶದಲ್ಲಿ ಗಂಡಸರು ಮುಂಜಾವಿನಿಂದ ಸಂಜೆಯವರೆಗೆ ತಮ್ಮ ವ್ಯಾಪಾರೋದ್ಯೋಗಗಳಲ್ಲಿ ದುಡಿದು ದುಡಿದು ಹಣ್ಣಾಗಿ ಹೋಗುತ್ತಾರೆ. ಆದ ಕಾರಣ, ಹೆಂಗಸರು

ಅರ್ಧವೈಧವ್ಯ ಸ್ಥಿತಿಯಲ್ಲಿರುತ್ತಾರೆಂದರೂ ಸಲ್ಲುವದು. ಹೆಂಗಸರಿಗೂ ಗಂಡಸರಿಗೂ ಭೆಟ್ಟಿ ಇಲ್ಲವೆಂದರೂ ಅಡ್ಡಿ ಇಲ್ಲ. ಇದರಿಂದ ಅಲ್ಲಿಯ ಹೆಂಗಸರಲ್ಲಿ ಅಸಂತೋಷವು ಹಬ್ಬಿದೆ. ಈ ಅಸಂತೋಷದ ಕಾರಣವನ್ನು ಗೊತ್ತುಹಚ್ಚುವದಕ್ಕೆ ಸರಕಾರದವರು ಒಂದು ಕಮಿಶನ ನೇಮಿಸಿದ್ದಾರೆ.

—The Bombay chronical.

## ವಿಜಯನಗರವೂ ಪೋರ್ತುಗೀಜರ ಚಿತ್ರಗಳೂ.

'ಮಿಥಿಕ್ ಸೊಸಾಯಟಿ ಜರ್ನಲಿ' ನಲ್ಲಿ ರೆ. ಎಚ್. ಹೆರಾಸ್ ಎಂಬವರು ಬರೆದಿರುವದೇನೆಂದರೆ—

ವಿಜಯನಗರದಲ್ಲಿರು ವಿಠ್ಠಲ ಸ್ವಾಮಿ ಗುಡಿಯಲ್ಲಿ ಪೋರ್ತುಗೀಜ ಜನರ ಚಿತ್ರಗಳು ನನ್ನ ಕಣ್ಣಿಗೆ ಬಿದ್ದವು. ಅವರ ಉಡಿಗೆತೊಡಿಗೆಗಳು ೧೬ನೇ ಶತಮಾನದ ಪೋರ್ತುಗೀಜರ ಉಡಿಗೆಗಳನ್ನು ಹೋಲುತ್ತವೆ ಆದುದರಿಂದ ಪೋರ್ತುಗೀಜರಿಗೂ ವಿಜಯನಗರದವರಿಗೂ ವಿಶೇಷ ಸಂಬಂಧವಿತ್ತೆಂಬ ಮಾತು ದೃಢವಾಗುತ್ತದೆ.

೧೫೧೨ರಲ್ಲಿ ಕೃಷ್ಣದೇವರಾಯನು ಆಲ್ಬುಕರ್ಕಗೆ ಅರೆಬಿಯಾದಿಂದ ಬರುವ ಯಾವತ್ತು ಕುದುರೆಗಳನ್ನು ತನ್ನ ಕಡೆಗೆ ಕಳುಹಲಿಕ್ಕೆತಿಳಿಸಿದ್ದನು, ಆ ಪ್ರಕಾರ ಆಲ್ಬುಕರ್ಕನು ಅನೇಕ ಕುದುರೆಗಳನ್ನು ಕಾಣಿಕೆಯಾಗಿ ಆ ಅರಸನ ಕಡೆಗೆ ಕೊಟ್ಟು ಕಳುಹಿದನು. ಬಹುಶ ಈ ಮಾತಿನಸ್ಮಾರಕಕ್ಕೋಸ್ಕರವೇ ವಿಠ್ಠಲ ಸ್ವಾಮಿಯ ಗುಡಿಯಲ್ಲಿ ಕುದುರೆಗಳ ಚಿತ್ರಗಳು ಕೊರೆಯಲ್ಪಟ್ಟಿರಬೇಕು. ಈ ಅನೇಕ ಚಿತ್ರಗಳಲ್ಲೊಂದರಲ್ಲಿ ಒಬ್ಬ ಪಾದ್ರಿ ಮನುಷ್ಯನ ಚಿತ್ರವೂ ಕಂಡುಬರುತ್ತದೆ. ಇದು ಫ್ರೆಲುಇಝು ಎಂಬ ಪಾದ್ರಿಯ ಚಿತ್ರವಾಗಿರಬೇಕು. ಆಲ್ಬುಕರ್ಕ ಇವನು ೧೫೧೦ ರಲ್ಲಿ ಫ್ರೆಲುಇಝು ಇವನನ್ನು ವಿಜಯನಗರಕ್ಕೆ ಕಳುಹಿದನು. ಈ ಪಾದ್ರಿಯು ವಿಜಯನಗರದಲ್ಲಿ ಒಂದು ವರ್ಷವಾಸವಾಗಿದ್ದನು. ಆದರೆ ಆತನು ವಿಜಾಪುರದ ಸುಲ್ತಾನನ ಹಸ್ತಕನಿಂದ ಕೊಲಲ್ಪಟ್ಟನು.

--The Mythee Society Journal.

## ಈ ದೇಶದ ಕಾಜಿನ ವ್ಯಾಪಾರ.

' ವಿದ್ಯಾಸೇವಕ ' ಎಂಬ ಮರಾಠೀಮಾಸಪತ್ರಿಕೆಯ ನವಂಬರ ಸಂಚಿಕೆಯಲ್ಲಿ ಬಂದಿರುವದೇನೆಂದರೆ—

ಮಹಾಯುದ್ಧದ ಪೂರ್ವದಲ್ಲಿ ಜರ್ಮನದೇಶದಿಂದ ೧೦೦ ಕ್ಕೆ ೨೮ ರಂತೆ, ಆಸ್ಟ್ರಿಯಾ ಹಂಗರಿಯಿಂದ ೨೮ ರಂತೆ ಬೆಲ್ಜಮದಿಂದ ೧೧ ರಂತೆ ಇಂಗ್ಲಂಡದಿಂದ ೮ ರಂತೆ ಹೀಗೆ ಕಾಜು ಈ ದೇಶಕ್ಕೆ ಬರುತ್ತಿತ್ತು. ಯುದ್ಧದ ಕಾಲಕ್ಕೆ ಜಪಾನದೇಶದಿಂದಲೇ ಬಹುಶಃ ಯಾವತ್ತು ಕಾಜು ಬಂದಿತು. ಅನಂತರ ಈಗ ಜಪಾನದೇಶದಿಂದ ೧೦೦ ಕ್ಕೆ ೪೦ ರಂತೆಯೂ ಇಂಗ್ಲಂಡದಿಂದ ೫೦ ರಂತೆಯೂ ಈ ದೇಶಕ್ಕೆ ಕಾಜು ಬರುತ್ತಿದೆ. ಈ ಮುಂದೆ ಕೆಲವು ವರ್ಷಗಳ ಅಂಕಿಗಳನ್ನು ಕೊಟ್ಟಿರುವೆವು.

| | ೧೯೨೧—೨೨ ರಲ್ಲಿ |
|---|---|
| ಗ್ರೇಟಬ್ರಿಟನ್ | ೪೪,೩೫,೧೧೪ |
| ಜರ್ಮನಿ | ೩೧,೪೪,೮೦೧ |
| ಬೆಲ್ಜಮ್ | ೨೩,೮೬,೭೦೨ |
| ಆಸ್ಟ್ರಿಯಾ—ಹಂಗರಿ | ೫,೫೯,೪೮೮ |
| ಝೆಕೋಸ್ಲೋವಾಕಿಯ | ೧೪,೮೫,೮೦೧ |
| ಜಪಾನ | ೮೫,೬೮,೫೯೪ |

ಮಿಕ್ಕೆಲ್ಲ ಕಡೆಯ ಕಾಜೂಕೂಡಿ ಒಟ್ಟು ೨,೨೨,೪೯,೪೩೨ ರೂಪಾಯಿಗಳ ಮಾಲು ಬಂದಿತು.

ಈಗ ಈದೇಶದಲ್ಲಿ ಕಾಜಿನ ಸಣ ಸಣ ಕಾರಖಾನೆಗಳಿರುತ್ತವೆ. ಬಳೆಗಳು ಈ ಕಾರಖಾನೆಗಳಲ್ಲಿ ಹುಟ್ಟುತ್ತವೆ. ಒಟ್ಟು ಬಳೆಗಳಲ್ಲಿ ೧೦೦ಕ್ಕೆ ೩೦ರಷ್ಟು ಬಳೆಗಳು ಈ ದೇಶದಲ್ಲಿ ಹುಟ್ಟುತ್ತವೆ. ಈ ಕಾರಖಾನೆಗಳು ಸಂಯುಕ್ತಪ್ರಾಂತ ಮತ್ತು ಮುಂಬಯಿ ಇಲಾಖೆಯ ದಕ್ಷಿಣಭಾಗದಲ್ಲಿ ವಿಶೇಷ ಇರುತ್ತವೆ, ೧೯೨೧ ರಲ್ಲಿ ಸುಮಾರು ೨೦ ಲಕ್ಷ ರೂಪಾಯಿಗಳ ಬಳೆಗಳು ಈ ದೇಶದಲ್ಲಿ ಹುಟ್ಟಿದವೆಂದು ಅಂದಾಜು ಮಾಡಲ್ಪಟ್ಟಿರುತ್ತದೆ. ಆದರೆ ಈಗ ಜಪಾನದೇಶದಿಂದ ಚಂದ ಚಂದದ ಬಳೆಗಳು ಅತಿಶಯ ಬರಹತ್ತಿವೆ. ಆದ ಕಾರಣ ಈ ಚಿಕ್ಕ ಕಾರಖಾನೆಗಳಿಗೆ ಗಂಡಾಂತರ ಒದಗುವ ಸಂಭವವದೆ.

ಇಲ್ಲಿಯ ಕಾಜಿನ ಉದ್ಯೋಗಕ್ಕೆ ಮತ್ತೂ ಒಂದು ದೊಡ್ಡ ಅಂಜಿಕೆಯುಂಟು. ಅದೇನೆಂದರೆ— ಕಾಜು ತಯಾರ ಮಾಡಲಿಕ್ಕೆ ಕಾರ್ಬೊನೆಟ್ ಆಫಾ ಸೋಡಾ ಎಂಬ ಪದಾರ್ಥವು ಅವಶ್ಯವಾಗಿ ಬೇಕಾಗುತ್ತದೆ. ಅದು ಬಹುಶಃ ಯಾವತ್ತೂ, ಇಂಗ್ಲಂಡದಿಂದಲೇ ಬರುತ್ತದೆ. ಹಿಂದಕ್ಕೆ ನಮ್ಮ ದೇಶದಲ್ಲಿ ಉಪಯೋಗಿಸುವ ಹಪ್ಪಳಕಾರವು ಅಷ್ಟು ಶುದ್ಧ ಇರುವದಿಲ್ಲ. ಆದಕಾರಣ ಈಗ ಅದನ್ನು ಉಪಯೋಗಿಸುವದನ್ನು ಕಾರಖಾನೆಗಳು ಅಪೂಟ ಬಿಟ್ಟವೆ. ಆದಕಾರಣ, ನಾವು ಕಾಜಿನ ಕಾರಖಾನೆಗಾಗಿ ಯಾವಾಗಲೂ ಇಂಗ್ಲಂಡದ ಮೇಲೆ ಅವಲಂಬಿಸಬೇಕಾಗಿದೆ.

—ವಿದ್ಯಾಸೇವಕ.

# ಬಿಡಿನುಡಿಗಳು.

**नाहं कर्ता हरिः कर्ता तत्पूजा कर्मचाखिलम् ॥**

## ಆರಿಸುವಿಕೆಯ ಅಬ್ಬರವು ಅಡಗಿತು.

ಕಾನೂನು ಮಂಡಳಗಳಿಗೆ ಸದಸ್ಯರನ್ನಾರಿಸಿ ಕಳುಹುವಾಗ ದೇಶದಲ್ಲೆಲ್ಲ ಒಂದು ಪ್ರಕಾರದ ಗದ್ದಲವು ಎದ್ದಿತ್ತು. ಎಲ್ಲರ ಮೈಯಲ್ಲಿಯೂ ರಾಜಕಾರಣದ ಗಾಳಿ ಹೊಕ್ಕಿತ್ತು. ಕುಸ್ತಿಯ ಕಣದಲ್ಲಿಯ ಹುರುಪನ್ನು ನೀವು ಕಂಡಿರುವಿರಲ್ಲವೇ ? ಅದೇ ಬಗೆಯ ಹುರುಪು ಎಲ್ಲೆಲ್ಲಿಯೂ ಕಂಡುಬರುತ್ತಿತ್ತು. ಜನರು ತಮ್ಮ ತಮ್ಮ ಗರಡಿಗಳ ಜಟ್ಟಿಗಳನ್ನು ಹುರಿದುಂಬಿಸಿ ಕಣಕ್ಕೆ ಅಟ್ಟುತ್ತಿದ್ದರು. ಜಟ್ಟಿಗಳು ಕುಸ್ತೀ ಆಡಿ, ಈಗ ದಣ್ಣನೆ ದಣಿದು ಮಲಗಿರುವರು. ಈಗ ಎಲ್ಲವೂ ಶಾಂತವಾಗಿದೆ. ಬಹುಶಃ ಎಲ್ಲಕಡೆಗೂ ಆರಿಸುವಿಕೆಯ ಪರಿಣಾಮಗಳು ತಿಳಿದಿವೆ. ಅದರ ಮೇಲಿಂದ ನೋಡಲು **ಮುಂಬಯಿ ಇಲಾಖೆಯಲ್ಲಿ** ಯಾವುದೊಂದು ಪಕ್ಷವೂ 'ನಾನೇ ಮೇಲು' ಎಂದು ಹೇಳುವಂತಿಲ್ಲ. ಕಾಂಗ್ರೆಸ ಪಕ್ಷದವರೂ ಬ್ರಾಹ್ಮಣೇತರ ಪಕ್ಷದವರೂ ಪ್ರತಿಸಹಕಾರ ಪಕ್ಷದವರೂ ಸಮಸಮನಾಗಿಯೇ ಇರುವರೆಂದು ಹೇಳಬಹುದು. ಈ ಇಲಾಖೆಯಲ್ಲಿ ೮೬ ಜನರನ್ನು ಆರಿಸತಕ್ಕದ್ದಿತ್ತು. ಇವರಲ್ಲಿ ಈ ಸಾರೆ ೧೧ಜನ ಸ್ವರಾಜ್ಯ ಪಕ್ಷದವರೂ ೧೬ ಜನ ಪ್ರತಿಸಹಕಾರ ಪಕ್ಷ ಮುಂತಾದ ಪಕ್ಷದವರೂ ೧೪ ಜನ ಬ್ರಾಹ್ಮಣೇತರ ಪಕ್ಷದವರೂ ೨೬ ಜನ ಮುಸಲ್ಮಾನರೂ ಆರಿಸಿ ಬಂದಿರುವರು. ಹೋದ ಸಲ, ಸ್ವರಾಜ್ಯಪಕ್ಷದವರು ೩೯ ಜನರಿದ್ದರು. ಆಗ ಎರಡೇ ಪಕ್ಷಗಳಿದ್ದವು. ಈ ಸಲ ಮೂರು ಪಕ್ಷಗಳಾಗಿವೆ. ಆದುದರಿಂದ ಈ ಇಲಾಖೆಯಲ್ಲಿ ಆಳರಸರ ಆಳಿಕೆಯು ನಿರ್ಬಾಧವಾಗಿ ನಡೆಯುವುದೆಂದು ಹೇಳಲು ಯಾವ ಅಭ್ಯಂತರವೂ ಇಲ್ಲ. ಮಂತ್ರಿಪದದ ಮಾಲೆಯನ್ನು ಹಾಕಿಕೊಳ್ಳುವುದಕ್ಕೆ ಅನೇಕರು ಒಂಟೆಯಂತೆ ಗೋಣು ಚಾಚಿರುವರು. ಆದರೆ ಸರಕಾರದ ಪ್ರಸಾದದೇವಿಯು ಒಳ್ಳೇ ಧೂರ್ತಳು. ಅವಳು ಸ್ತ್ರೀಸ್ವಾತಂತ್ರ್ಯದ ಭೂಮಿಯಲ್ಲಿ ಬೆಳೆದವಳು. ಅವಳು ತಾನು ಹೇಳಿದಂತೆ ಕೇಳುವ ಪತಿಯನ್ನು ಆರಿಸುವಳೇ ವಿನಾ ಗೋಣು ಚಾಚಿರುವರೆಂಬ ಕಾರಣದಿಂದ ಒಮ್ಮೆಲೆ ಯಾರನ್ನೂ ಒರಿಸಳು. ಇತ್ತ 'ನಮ್ಮ ಜಾತಿಗೆ ಮಂತ್ರಿಪದವನ್ನು ಕೊಡಿರಿ' 'ನಮ್ಮ ಪ್ರಾಂತಕ್ಕೆ ಮಂತ್ರಿಪದವನ್ನು ಕೊಡಿರಿ' ಎಂಬ ಗಲಾಟೆ. ಮುಸಲ್ಮಾನರು ಈ ಇಲಾಖೆಯಲ್ಲಿ ೧೦೦ ಕ್ಕೆ ೧೯ ಮಾತ್ರವೇ ಇದ್ದರೂ ಮುಸಲ್ಮಾನ ಸದಸ್ಯರು ಮತ್ತು ಮಂತ್ರಿಗಳು ಮಿತಿಮೀರಿ ಇರುವರು. ಆದುದರಿಂದ ಅಹಮ್ಮದಾಬಾದ ಪುಣೆಗಳ ಹಿಂದೂ ಸಭೆಯವರು ಹಿಂದೂ ಜನರ ಹಿತ ರಕ್ಷಣೆಗೋಸ್ಕರ ಇಬ್ಬರು ಹಿಂದೂ ಮಂತ್ರಿಗಳಿರಬೇಕೆಂದು ಕೇಳಿಕೊಂಡಿರುವರು.

ಕರ್ನಾಟಕವು ಅಲಕ್ಷ್ಯಸಲ್ಪಡುತ್ತಿರುವುದರಿಂದ, ಕರ್ನಾಟಕದಿಂದೊಬ್ಬರನ್ನು ಮಂತ್ರಿಪದಕ್ಕೆ ಆರಿಸಬೇಕೆಂದು ಕೆಲವರ ಬಿನ್ನಹ. ವೀರಶೈವರು ರಾವ. ಕಂಬಳಿಯವರಿಗೇ ಮಂತ್ರಿಪದವನ್ನು ಕೊಡಬೇಕೆಂದು ಕೇಳುತ್ತಿರುವರು. ಈಗಿನ ಕೈಗೊಂಬಿಗಳಂತಿರುವ ಮಂತ್ರಿಗಳಿಂದ ದೇಶದ ನಿಜವಾದ ಹಿತವಾಗುವುದೆಂದಾಶಿಸುವುದು ಮಂಜಿನ ನೀರಿಗೆ ಕೈಯೊಡ್ಡಿದಂತೆಯೇ ಸರಿ. ಆದರೂ ಕರ್ನಾಟಕಕ್ಕೆ ಮಂತ್ರಿಪದವು ದೊರೆತರೆ ನಮಗೆ ಸಂತೋಷವೇ ಅದೆ. ಆದರೆ ಯೋಗ್ಯ ಪುರುಷರಿಗೆ ಮಾತ್ರ ಅದು ದೊರೆಯಬೇಕು. ಆಳರಸರ ಅಪ್ರೀತಿಗೆ ಹೆದರುವವರು ಕರ್ನಾಟಕರಾದರೇನು ಮತ್ತಾರಾದರೇನು? ಇರಲಿ, ಈ ಇಲಾಖೆಯಲ್ಲಿ ಮೂರೂ ಪಕ್ಷಗಳು ತುಲ್ಯಬಲವಾಗಿರುವುದರಿಂದ ಪ್ರಸಾದದೇವಿಯು ಇನ್ನೂ ವಿವಂಚನೆಯಲ್ಲಿ ಬಿದ್ದಿರುವಳು. **ಮದ್ರಾಸ ಇಲಾಖೆಯಲ್ಲಿ** ರಾಷ್ಟ್ರೀಯ ಪಕ್ಷಕ್ಕೆ ಸಂಪೂರ್ಣ ವಿಜಯ. ಬ್ರಾಹ್ಮಣೇತರ ಪಕ್ಷವು ಸೋತಿತು. ಸ್ವರಾಜ್ಯ ಪಕ್ಷದವರು ೪೬ ಜನರಿರುವರು, ಜಸ್ಟಿಸ ಪಕ್ಷದವರು ೧೩ ಜನರಿರುವರು. ಹೀಗೆ ಈ ಇಲಾಖೆಯಲ್ಲಿ ಸ್ವರಾಜ್ಯಪಕ್ಷದ ನಿರ್ವಿವಾದವಾದ ಬಹುಮತವಿರುವುದರಿಂದ ಇವರಿಗೇ ಮಂತ್ರಿಪದಗಳನ್ನರ್ಪಿಸಲೇಬೇಕಾಯಿತು. ಆದರೆ, ಅಲ್ಲಿಯ ಸ್ವರಾಜ್ಯಪಕ್ಷದವರು ತಮ್ಮ ಪ್ರತಿಜ್ಞೆಯಂತೆ ಅವುಗಳನ್ನು ಸ್ವೀಕರಿಸಲಿಲ್ಲ. ಜಸ್ಟಿಸ ಪಕ್ಷಕ್ಕೆ ಜನಮತದ ಬೆಂಬಲವೇ ಇಲ್ಲದ್ದರಿಂದ ಕೊನೆಗೆ ಸರಕಾರದವರು ಸ್ವತಂತ್ರ ಪಕ್ಷದವರನ್ನು ಕೇಳಿದರು. ಅದಕ್ಕೆ ಅವರು ಒಪ್ಪಿಕೊಂಡರು. ಆ ಮೇರೆಗೆ ಮೂವರು ಮಂತ್ರಿಗಳು ನೇಮಿಸಲ್ಪಟ್ಟರುವರು. ಅವರಲ್ಲಿ ಬಳ್ಳಾರಿಯ ದೇ. ರಂಗನಾಥ ಮುದಲಿಯಾರರೆಂಬ ಕನ್ನಡಿಗರೊಬ್ಬರು. ಕಾನೂನುಮಂಡಳದ ಅಧ್ಯಕ್ಷರನ್ನು ಸದಸ್ಯರೇ ಆರಿಸತಕ್ಕದ್ದಿರುತ್ತದೆ. ಮದ್ರಾಸಿನ ಕಾಯದೆ ಮಂಡಳಕ್ಕೆ ನರಸಿಂಹರಾಜು ಇವರು ಇದುರಾಳಿಗ

ಳಿಲ್ಲದೆ ಆರಿಸಲ್ಪಟ್ಟಿರುವರು. ಮದ್ರಾಸಿನಲ್ಲಿ ಈಗ ಆರುವರ್ಷ ಜಸ್ಟಿಸ ಪಕ್ಷದ ಆಳಿಕೆಯಿತ್ತು. ಈಗ ಅದು ಕೊನೆಗಂಡಿತು.

ಬ್ರಾಹ್ಮಣೇತರಪಕ್ಷದ ಗಂಡುಮೆಟ್ಟಾದ ಮದ್ರಾಸ ಇಲಾಖೆಯುಲ್ಲಿ ಅದು ಬೊಕ್ಕಬೋರಲು ಬೀಳಲು ಕಾರಣವೇನು ? ಬ್ರಾಹ್ಮಣೇತರ ಪಕ್ಷದವರ ಆಳಿಕೆಯಿಂದ ದೇಶಕ್ಕೆ ಕಲ್ಯಾಣವಾಗಲಿಲ್ಲವೆಂದು ಜನಸಾಮಾನ್ಯಕ್ಕೆ ಅರಿವು ಉಂಟಾಯಿತೆಂಬುದೇ ಇದಕ್ಕೆ ಮುಖ್ಯಕಾರಣ. ನಿಜವಾಗಿ ನೋಡಿದರೆ ಇದರ ತಪ್ಪನ್ನು ಸರ್ವಸ್ವೀ ಜಸ್ಟಿಸ ಪಕ್ಷದಮೇಲೆ ಹೊರಿಸುವುದು ಉಚಿತವಲ್ಲ. ಏಕೆಂದರೆ, ಸ್ವತಂತ್ರವಾದ ಅಧಿಕಾರವೇ ಮಂತ್ರಿಗಳಲ್ಲಿಲ್ಲದ ಬಳಿಕ ಯಾರು ಇದ್ದರೇನು ? ಆದುದರಿಂದಲೇ ಸ್ವರಾಜ್ಯಪಕ್ಷದವರು ಮಂತ್ರಿಪದಗಳನ್ನು ಸ್ವೀಕರಿಸಿರುವುದಿಲ್ಲ. ಮದ್ರಾಸ ಇಲಾಖೆಯ ಅಪಜಯದಿಂದ ಬ್ರಾಹ್ಮಣೇತರ ಪಕ್ಷವು ಎಚ್ಚರಾಗತಕ್ಕದ್ದು. ತಮ್ಮ ತಮ್ಮ ಜಾತಿಗಳ ಹಿತವನ್ನು ಸಂರಕ್ಷಿಸುವ ಮಟ್ಟಿಗೆ ಜಾತಿ ಪ್ರಾತಿನಿಧ್ಯದ ಪ್ರಶ್ನೆಯನ್ನು ಸದ್ಯಕ್ಕೆ ಮುಂದೆ ತರಬಹುದು. ಆದರೆ, ಮಿಕ್ಕ ವಿಷಯಗಳಲ್ಲಿ ಅವರು ಆಳರಸರೊಡನೆ ಹೆಣಗಾಡಲು ಸಿದ್ಧರಾಗಲೇಬೇಕು. ಇಲ್ಲದಿದ್ದರೆ ಅವರಿಂದಾವ ಕಾರ್ಯವೂ ಆಗುವುದಿಲ್ಲ. **ಬಂಗಾಲ ಪ್ರಾಂತ**ದಲ್ಲಿಯೂ ಸ್ವರಾಜ್ಯಪಕ್ಷದವರಿಗೆ ಜಯಸಿಕ್ಕಿರುತ್ತದೆ. ಅಲ್ಲಿ ಸ್ವರಾಜ್ಯಪಕ್ಷದವರು ೪೩ ಜನರು ಆರಿಸಿ ಬಂದಿರುತ್ತಾರೆ. ಮುಸಲ್ಮಾನರು ೩೫ ಜನರು ಆರಿಸಿ ಬಂದಿರುತ್ತಾರೆ. ೧೫ ಮಂದಿ ಸ್ವತಂತ್ರಪಕ್ಷದವರು ೨ ಪ್ರತಿಸಹಕಾರ ಪಕ್ಷದವರು. ಹೋದ ಆರಿಸುವಿಕೆಯಲ್ಲಿಯೂ ಹೆಚ್ಚುಕಡಿಮೆ ಹೀಗೆ ಆಗಿತ್ತು. ಬಂಗಾಲಪ್ರಾಂತದಲ್ಲಿ ಮುಸಲ್ಮಾನರ ಪ್ರಾಬಲ್ಯ ಬಹಳ. ಆದರೆ ಈಗ ಅಲ್ಲಿಯ ಮುಸಲ್ಮಾನರಲ್ಲಿ ಎರಡು ಪಂಗಡಗಳಾಗಿವೆ. ಒಂದು ಸರ್ ಅಬ್ದುಲ್‌ರಹೀಮ ಇವರದು, ಮತ್ತೊಂದು ಡಾ| ಸುರವರ್ದಿಯವರದು. ಹೀಗಿರುವುದರಿಂದ ಅಲ್ಲಿ ಆಳರಸರೊಡನೆ ಸ್ವರಾಜ್ಯಪಕ್ಷದವರ ಕಾಳಗಕ್ಕೆ ಕಳೆಯೇರಬಹುದೆಂದು ತೋರುತ್ತದೆ. ನಿಷ್ಕಾರಣವಾಗಿ ಬಂಧನದಲ್ಲಿಟ್ಟ ರಾಜಕೀಯ ಕೈದಿಗಳನ್ನು ಇನ್ನೂ ಬಿಟ್ಟಿಲ್ಲವಾದುದರಿಂದ, ಬಂಗಾಲೀಯರ ಹೃದಯದಲ್ಲಿ ಅಲ್ಲೋಲಕಲ್ಲೋಲವುಂಟಾಗಿದೆ. ಬಂಗಾಲದಲ್ಲಿಯ ಜಯಕ್ಕೆ ಇದು ಕಾರಣವೆಂದು ದೇ. ಲಾಲಾಜೀಯವರು ಅದರ ಯೋಗ್ಯತೆಯನ್ನು ಕಡಿಮೆ ಮಾಡಿರುವರು. ಆದರೆ ಇದು ಸರಿಯಲ್ಲ. ಎಲ್ಲೆಲ್ಲಿಯೂ ಆಳರಸರ ಅನ್ಯಾಯಗಳೇ ನಮ್ಮ ಅಸಂತೋಷಕ್ಕೆ ಮೂಲ ಬೀಜವಲ್ಲವೆ ?

**ಬಿಹಾರ ಓಡಿಸಾ ಪ್ರಾಂತ**ಕ್ಕೆ ಒಟ್ಟು ೧೦೩ ಸ್ಥಳಗಳಿದ್ದು ಅವುಗಳಲ್ಲಿ ೭೬ ಸ್ಥಳಗಳನ್ನು ಜನರು ತುಂಬತಕ್ಕದ್ದಿರುತ್ತದೆ. ಇವುಗಳಲ್ಲಿ ೭೬ ಸ್ಥಳಗಳನ್ನು ಸ್ವರಾಜ್ಯಪಕ್ಷದವರು ಆಕ್ರಮಿಸಿರುವರು. ಸ್ವತಂತ್ರಪಕ್ಷದವರ ಪಾಲಿಗೆ ೫ ಬಂದಿರುವವು. ಮಿಕ್ಕವರಿಗೆ ೩೦ ಬಂದಿರುವವು. ಈ ಪ್ರಾಂತದಲ್ಲಿ ಅನೇಕ ಪ್ರತಿಸಹಕಾರ ಪಕ್ಷದವರು ತಾವು ಸುಳ್ಳು ಸುಳ್ಳೇ ರಾಷ್ಟ್ರೀಯ ಸಭೆಯ ಪಕ್ಷದವರೆಂದು ಹೇಳಿ ನಿಂತಿರುವರೆಂದೂ ಅದುಕಾರಣ, ಅದು ರಾಷ್ಟ್ರೀಯ ಸಭೆಯ ನಿಜವಾದ ವಿಜಯವಲ್ಲವೆಂದೂ ಲಾಲಾಜಿಯವರ ಆಕ್ಷೇಪ. ತಾವು ರಾಷ್ಟ್ರೀಯ ಸಭೆಯವರೆಂದು ಲೇಖದಲ್ಲಿ ಒಪ್ಪಿಯೂ ಮುಂದೆ ಮೋಸಮಾಡಿದರೆ ಆರೇನು ಮಾಡತಕ್ಕದ್ದು ? ಹಾಗೆ ಮಾಡಿದರೆ ಅದು ಆ ಜನರ ನೀಚಬುದ್ಧಿಯನ್ನು ಮಾತ್ರ ವ್ಯಕ್ತಪಡಿಸುತ್ತದಲ್ಲದೆ ಮತ್ತೇನೂ ಇಲ್ಲ. **ಮಧ್ಯಪ್ರಾಂತ**ದಲ್ಲಿ ಒಟ್ಟು ಇರುವ ೫೫ ಸ್ಥಳಗಳಲ್ಲಿ ಸ್ವರಾಜ್ಯಪಕ್ಷದವರಿಗೆ ೧೮ ಸಿಕ್ಕಿರುವವು. ಪ್ರತಿಸಹಕಾರ ಪಕ್ಷಕ್ಕೆ ೧೩ ಸ್ವತಂತ್ರಪಕ್ಷಕ್ಕೆ ೧೧ ಬ್ರಾಹ್ಮಣೇತರರಿಗೆ ೩ ಮುಸಲ್ಮಾನರಿಗೆ ೭ ಹೀಗೆ ಸ್ಥಳಗಳು ಹಂಚಲ್ಪಟ್ಟಿರುವವು. ಇದರ ಮೇಲಿಂದ ಇಲ್ಲಿ ಸ್ವರಾಜ್ಯಪಕ್ಷದ ಕಸುವು ಕಡಿಮೆ ಇರುತ್ತದೆಂಬುದು ಸ್ಪಷ್ಟವಾಗುತ್ತದೆ. ಹೋದ ಆರಿಸುವಿಕೆಯಲ್ಲಿ ಇಲ್ಲಿ ೪೪ ಜನರು ಸ್ವರಾಜ್ಯಪಕ್ಷದವರಿದ್ದರು. ಆದಕಾರಣ ಈ ಪ್ರಾಂತಕ್ಕೆ ವಿಶೇಷ ಮಹತ್ವವು ಪ್ರಾಪ್ತವಾಗಿತ್ತು. ಅದು ದ್ವಿದಳ ರಾಜ್ಯಪದ್ಧತಿಯನ್ನು ಅಶಕ್ಯವಾಗಿ ಮಾಡಿತ್ತು. ಆದರೆ, ಅದೆಲ್ಲ ಈ ಸಾರೆ ಹೋಯಿತು. ಇದಕ್ಕೆ ಸ್ವರಾಜ್ಯಪಕ್ಷದೊಳಗಿನ ಒಡಕೇ ಕಾರಣವೆಂಬುದನ್ನು ಬೇರೆ ಹೇಳುವ ಕಾರಣವಿಲ್ಲ. **ಸಂಯುಕ್ತಪ್ರಾಂತ**ದಲ್ಲಿಯೂ ಸ್ವರಾಜ್ಯಪಕ್ಷವು ನೆಲಕ್ಕೆ ಬಿದ್ದಿರುವುದು. ೩೬ ಹಿಂದೂ ಜನರಿಗಿರುವ ಸ್ಥಳಗಳಲ್ಲಿ ೮ ಜನರುಮಾತ್ರ ಸ್ವರಾಜ್ಯಪಕ್ಷದವರು. ಒಟ್ಟು ಆರಿಸತಕ್ಕ ಸ್ಥಳಗಳು ೯೬ ಇರುವುದರಿಂದಲೂ ಮುಸಲ್ಮಾನರ ಪ್ರಾಬಲ್ಯವಿರುವುದರಿಂದಲೂ ಈ ಪ್ರಾಂತದಲ್ಲಿಯೂ ಸ್ವರಾಜ್ಯಪಕ್ಷದ ವರ್ಚಸ್ಸವು ಏನೂ ಇರುವುದಿಲ್ಲ. ಈ ಪ್ರಾಂತದಲ್ಲಿ ಹಿಂದೂ ಜನರಿಗೆ ಅನೇಕ ಸಂಕಟಗಳಿವೆ. ಆದುದರಿಂದ ಹಿಂದೂ ಸಭೆಗೆ ಜನರ ಸಹಾನುಭೂತಿಯು ಹೆಚ್ಚಿಗಿರುವುದು.

**ಪಂಜಾಬಪ್ರಾಂತ**ದಲ್ಲಿಯು ಸ್ವರಾಜ್ಯಪಕ್ಷಕ್ಕೆ ಸಂಪೂರ್ಣ ಅಪಜಯವು ದೊರೆತಿದೆ. ಇಬ್ಬರೇ ಸ್ವರಾಜ್ಯಪಕ್ಷದವರಿರುವರು. ಕೆಲವರು ಶೀಖ ಜನರು ಸ್ವರಾಜ್ಯಪಕ್ಷದ ಹೆಸರಿನಿಂದ ಆರಿಸಿ ಬಂದಿರುವರೇನೋ ನಿಜ. ಆದರೆ ಅವರು ಶೀಖಜಾತಿಯ ಪ್ರತಿಜ್ಞೆಗೆ ಸಹಿಮಾಡಿರುವುದರಿಂದ ಅವರು ನಿಜವಾದ ಸ್ವರಾಜ್ಯಸಕ್ಷೇಯರಲ್ಲವೆಂದು ದೇ. ಲಾಲಾಜೀಯವರ ಅಂಬೋ

ಣವು. ಅವರ ಅಂಬೋಣದರಲ್ಲಿ ತಥ್ಯಾಂಶವಿರುತ್ತದೆ. ಒಟ್ಟಿನ ಮೇಲಿಂದ ಮದ್ರಾಸ ಬಂಗಾಲ ಮತ್ತು ಬಿಹಾರ ಪ್ರಾಂತಗಳಲ್ಲಿ ಸ್ವರಾಜ್ಯಪಕ್ಷಕ್ಕೆ ಉತ್ಕೃಷ್ಟವಾದ ಜಯವು ದೊರಿತಿರುವುದು. ಮುಂಬಯಿ ಪಂಜಾಬ ಸಂಯುಕ್ತಪ್ರಾಂತ ಮತ್ತು ಮಧ್ಯ ಪ್ರಾಂತಗಳಲ್ಲಿ ಅವರಿಗೆ ಸಿಗತಕ್ಕಷ್ಟು ಜಯವು ಸಿಕ್ಕಿರುವುದಿಲ್ಲ. ಇದಾಯಿತು ಪ್ರಾಂತಿಕ ಕಾನೂನು ಮಂಡಳದ ಸ್ಥಿತಿ. ಇನ್ನು ಲೆಜಿಸ್ಲೆಟಿವ್ಹ ಅಸೆಂಬ್ಲಿಯಲ್ಲಿ ಸ್ವರಾಜ್ಯ ಪಕ್ಷದ ಪ್ರಾಬಲ್ಯವು ಮತ್ತಿಷ್ಟು ಕಡಿಮೆ ಇರುವುದೆಂದು ನಿರ್ವಿವಾದವಾಗಿ ಹೇಳಬಹುದು. ಈ ಮಂಡಳದಲ್ಲಿ ಮದ್ರಾಸಿನವರು ೧೧, ಬಂಗಾಲದವರು ೪; ಮುಂಬಯಿ ೨ ಸಂಯುಕ್ತಪ್ರಾಂತ ೨ ಹಿಂದೂ ೩ ಮುಸಲ್ಮಾನ ಪಂಜಾಬ ಇಲ್ಲವೇ ಇಲ್ಲ; ಶೀಖರು ಮಾತ್ರ ಇಬ್ಬರಿರುವರು; ಮಧ್ಯಪ್ರಾಂತ ೧ ಅಸಾಮ ೨ ಬಿಹಾರ ೨ ಹೀಗೆ ಮಾತ್ರವೇ ಸ್ವರಾಜ್ಯಪಕ್ಷದವರಿರುವರು. ಕಿರುಕುಳ ಹಿಡಿದು ಒಟ್ಟು ೩೮ ಜನರು ಇಲ್ಲಿಯುವರೆಗೆ ಆರಿಸಿ ಬಂದಿರುವರು. ಇದರಿಂದ ಮುಖ್ಯಸಭೆಯಲ್ಲಿ ಸ್ವರಾಜ್ಯಪಕ್ಷದ ಕೈಯು ಮೊಂಡಗೈಯಾಗುವುದೆಂಬುದು ಸ್ಪಷ್ಟವಾಗುತ್ತದೆ.

---

## ಆರಿಸುವಿಕೆಯ ಬಗ್ಗೆ ಸಾಮಾನ್ಯ ವಿಚಾರಗಳು

ಇಷ್ಟೆಲ್ಲ ಜಂಜಡದಿಂದ ದೇಶಕ್ಕೇನಾದರೂ ಪ್ರಯೋಜನವಿದೆಯೆ ? ಎಂದು ಈಗಿನ ಕಾಲಕ್ಕೆ ಸಾಮಾನ್ಯ ಜನರ ಮನದಲ್ಲಿ ಪ್ರಶ್ನೆಯುದ್ಭವಿಸುವುದು ಸಹಜವಿದೆ. ಹೊಸ ಸುಧಾರಣೆಗಳಿಂದ ದೇಶಕ್ಕೆ ಹಿತವಾಗಿಲ್ಲವೆಂದು ಒಂದು ಬಾಯಿಯಿಂದ ಹೇಳುವುದು, ಅದೇ ಬಾಯಿಯಿಂದ ನಾವು ರಾಷ್ಟ್ರಕ್ಕೆ ಹಿತಮಾಡುವುದಕ್ಕೋಸ್ಕರ ಕಾನೂನು ಮಂಡಳಿಗಳಿಗೆ ಹೋಗುತ್ತೇವೆಂದು ಸಾರುವುದು—ಇವೆರಡು ಪರಸ್ಪರ ವಿರುದ್ಧ ಭಾವನೆಗಳ ಮೇಲನವನ್ನು ಯಾವ ಬಗೆಯಾಗಿ ಮಾಡಬೇಕೆಂಬುದು ಸಾಮಾನ್ಯರಿಗೆ ತಿಳಿಯುವ ಮಾತು. ಈ ಸುಧಾರಣೆಗಳು ಪೂರಾ ಕೆಟ್ಟವಲ್ಲ ! ಅವುಗಳಲ್ಲಿ ಕೆಟ್ಟ ಮತ್ತು ಚಲೋ ಇವುಗಳ ಸರಿಬೆರಿಕೆಯಿರುವುದರಿಂದ, ಕೆಟ್ಟುದನ್ನು ಬಿಟ್ಟು ಚಲೋ ಇದ್ದುದನ್ನು ಸ್ವೀಕರಿಸುವ-ಎಂದುದು ಒಂದು ಬಗೆಯ ಮೇಲನದ ರೀತಿ. ಆದರೆ, ಈ ಮೇಲನದ ರೀತಿಯಲ್ಲಿ ಒಂದು ದೋಷವಿದೆ. ಅದೇನೆಂದರೆ ಕೆಟ್ಟುದನ್ನು ಬಿಡುವುದು ನಿಮ್ಮ ಕೈಯಲ್ಲಿ ಇಲ್ಲ. ಅವನ್ನಂತೂ ನೀವು ಸ್ವೀಕರಿಸಲೇಬೇಕು. ಅಂದಬಳಿಕ ಕೆಟ್ಟದರ ಪ್ರಮಾಣವು ಚಲೋ ಇದ್ದುದರ ಪ್ರಮಾಣಕ್ಕಿಂತ ಹೆಚ್ಚಿಗೆ ಇದ್ದದ್ದೇ ಆದರೆ ರಾಜಕೀಯ ಸುಧಾರಣೆಗಳಿಂದ ದೇಶಕ್ಕೆ ಒಟ್ಟಿನ ಮೇಲೆ ಹಿತವೇ ಹೆಚ್ಚಿಗೆ ಆಗಿದೆಯೆಂದು ಹೇಳಿದಂತಾಯಿತು. ಅದರ ಪ್ರಮಾಣವು ಕಡಿಮೆ ಇದ್ದರೆ ಇಂಥ ರಾಜಕೀಯ ಸುಧಾರಣೆಗಳಿಂದ ಒಬ್ಬನ ಮೇಲೆ ದೇಶಕ್ಕೆ ಅಹಿತವೇ ಹೆಚ್ಚಿಗಾಗುವುದರಿಂದ ಅವೆಲ್ಲವೂ ತ್ಯಾಜ್ಯವೇ ಸರಿ. ದ್ವಿದಳಪದ್ಧತಿ ಜಾತಿಪ್ರಾತಿನಿಧ್ಯದ ಪ್ರಸರಣ ಇವೇ ಮುಂತಾದವುಗಳಿಂದಾಗುವ ಅಹಿತವು ಹಲಕೆಲವು ಹಕ್ಕುಗಳನ್ನು ಜನರಿಗೆ ಕೊಟ್ಟುದರಿಂದಾಗುವ ಹಿತಕ್ಕಿಂತ ಹೆಚ್ಚಿಗಿರುತ್ತದೆಂದೇ ಬಹುಜನರ ಅಭಿಪ್ರಾಯ. ಹೀಗಿದ್ದ ಬಳಿಕ ಈ ರಾಜಕೀಯ ಸುಧಾರಣೆಗಳನ್ನು ಸ್ವೀಕರಿಸದಿರುವುದೇ ಒಳ್ಳೆಯದಲ್ಲವೆ ! ಇವುಗಳನ್ನು ಸ್ವೀಕರಿಸದೆ ಹೊರಗೆ: ನಿಂತು ಕೋಲಾಹಲವನ್ನೆಬ್ಬಿಸಿ, ಈ ಜೊಳ್ಳು ಹಕ್ಕುಗಳ ಬದಲು ನಿಜವಾದ ಹಕ್ಕುಗಳನ್ನು ಕೊಡುವುದಕ್ಕೆ ಸರಕಾರಕ್ಕೆ ಒತ್ತಾಯ ಪಡಿಸುವುದು, ಅಥವಾ ಕಾನೂನು ಮಂಡಳಗಳಲ್ಲಿ ಒಳಹೊಕ್ಕು ಆಳರಸರ ಆಳಿಕೆಯನ್ನು ಅಶಕ್ಯವಾಗಿ ಮಾಡಿತೋರಿಸುವುದು—ಹೀಗೆ ಎರಡು ಮಾರ್ಗಗಳಿದ್ದವು. ಮೊದಲನೆಯ ಮಾರ್ಗವೇ ಉತ್ತಮವಾದುದೆಂದು ಸಾಮಾನ್ಯ ಜನರಿಗೂ ಗೊತ್ತಾಗುವ ಮಾತು. ಮಹಾತ್ಮಾಗಾಂಧಿಯವರೂ ಆ ಮಾರ್ಗವನ್ನೇ ಸೂಚಿಸಿದ್ದರು. ಆದರೆ ಹೊರಗೆ ನಿಂತುಕೊಂಡು ಕೋಲಾಹಲವನ್ನೆಬ್ಬಿಸುವಷ್ಟು ಸಾಮರ್ಥ್ಯವು ಜನಲ್ಲಿ ಇನ್ನೂ ಬಂದಿಲ್ಲವೆಂದು ಹಿಂದಿನ ನಾಲ್ಕೈದು ವರ್ಷಗಳ ಅನುಭವದಿಂದ ಗೊತ್ತಾಯಿತು. ಆದುದರಿಂದ. ಒಳಹೊಕ್ಕು ಮುರಿಯುವ ಪ್ರಯತ್ನ ಮಾಡುವುದೇ ಈಗಿನ ಸ್ವರಾಜ್ಯ ಪಕ್ಷದ ರಾಜಕೀಯ ಧೋರಣವಾಗಿದೆ. ಒಳಹೊಕ್ಕು ಮುರಿಯುವುದು ಅಸಾಧ್ಯವೆಂದೂ ನಮ್ಮ ಚಾತುರ್ಯವನ್ನೆಲ್ಲ ಬೂದಿಗೈಯುವ ಜಾಣತನವು ಆಳರಸರಲ್ಲಿ ಉಂಟೆಂದೂ, ಹಲವರು ನಂಬುತ್ತಾರೆ. ಅದಕ್ಕೋಸ್ಕರ ಹೊರಗಿನ ಕೋಲಾಹಲವನ್ನು ಬೆಳಿಸುವ ಸಾಮರ್ಥ್ಯವನ್ನು ಪಡೆಯುವ ಉದ್ಯೋಗಕ್ಕೆ ರಾಷ್ಟ್ರವು ಹತ್ತಬೇಕೆಂದು ಇವರ ಅಂಬೋಣ. ಒಳಹೊಕ್ಕು ಪ್ರಯತ್ನಮಾಡಿ ನೋಡಲೆಂದು ಈಗ ರಾಷ್ಟ್ರೀಯ ಸಭೆಯು ಪರವಾನಿಗೆಯನ್ನು ಕೊಟ್ಟಿರುವುದು. ಹೊರಗಿನ ಕೋಲಾಹಲವನ್ನು ಬೆಳಿಸುವ ಉತ್ಸಾಹದಲ್ಲಿ ಭಂಗ ಬರದಂತೆ ಈ ಕೆಲಸವನ್ನು ರಾಷ್ಟ್ರವು ಕೈಕೊಂಡಿದ್ದರೆ ಒಳಿತಾಗುತ್ತಿತ್ತು. ಆದರೆ, ಹಾಗೆ ಆಗಿರುವುದಿಲ್ಲವೆಂಬುದು ದುಃಖದ ಸಂಗತಿಯು ಆದುದರಿಂದ ಈಗಿನ ನಮ್ಮ ರಾಜಕೀಯ ಧೋರಣವೂ ತಪ್ಪಿರುವುದೆಂದೇ ಸಾಮಾನ್ಯ ಅಭಿಪ್ರಾಯವು.

ಮತ್ತೂ ಒಂದು ರೀತಿಯಿಂದ ಈ ಆರಿಸುವಿಕೆಯಿಂದ ದೇಶಕ್ಕೆ ಅಹಿತವಾಗಿದೆ. ಇವರಲ್ಲಿ ರಾಷ್ಟ್ರದ ನೀತಿಗೆ ಧಕ್ಕೆ ಬರಹತ್ತಿದೆ. 'ದುಡ್ಡಿದ್ದವ ದೊಡ್ಡಪ್ಪ' ಎಂಬಂತೆ ಸ್ಥಿತಿಯಾಗಿದೆ. ಈ ದೊಡ್ಡಪ್ಪಗಳಿಂದ ದೇಶಕ್ಕೆ ಯಾವ ಹಿತವಾಬೇಕು? ಒಬ್ಬೊಬ್ಬರು ಐವತ್ತುಸಾವಿರದವರೆಗೆ ರೂಪಾಯಿಗಳನ್ನು ವೆಚ್ಚ-ಅಲ್ಲ. ಹಾಳು ಮಾಡಿಕೊಂಡಿರುವರೆಂದು ಹೇಳುತ್ತಾರೆ. ಇದೇನು ರಾಷ್ಟ್ರದ ಪ್ರಗತಿಯ ಲಕ್ಷಣವೋ ಅಧೋಗತಿಯ ಲಕ್ಷಣವೋ? ಇಷ್ಟಾಗಿಯೂ ಇವರು ದೇಶದ ನಿಜವಾದ ಪ್ರತಿನಿಧಿಗಳೆನ್ನಬೇಕೆ? ಹಾಗೂ ಇಲ್ಲ. ಮತ ಕೊಡುವವರ ಸಂಖ್ಯೆಯು ೧೦೦ಕ್ಕೆ ೨ರಂತೆ ಮಾತ್ರವೇ ಇರುವುದು ಅಂದಬಳಿಕ ಇವರು ನಿಜವಾದ ಪ್ರತಿನಿಧಿಗಳು ಹೇಗೆ? ಸಾರಾಂಶ ಯಾವ ದೃಷ್ಟಿಯಿಂದ ನೋಡಿದರೂ ಈ ರಾಜಕೀಯ ಸುಧಾರಣೆಗಳು ನಮಗೆ ಹಿತವನ್ನು ಮಾಡಿಲ್ಲವೆಂದು ಹೇಳಬೇಕಾಗುವುದು.

---

## ಬರುವ ರಾಷ್ಟ್ರೀಯ ಸಭೆಯು.

ಅಸಾಮು ಪ್ರಾಂತದಲ್ಲಿ ಕೂಡುವ ನಾಳಿನ ರಾಷ್ಟ್ರೀಯ ಸಭೆಯು ಮುಂದೆ ರಾಷ್ಟ್ರಕ್ಕೆ ಯಾವ ಸಂದೇಶವನ್ನು ಕೊಡುವುದೆಂಬುದರ ವಿಷಯವಾಗಿ ಚರ್ಚೆನಡೆದಿದೆ. ಈಗಿನ ಪರಿಸ್ಥಿತಿಯನ್ನು ಯೋಚಿಸಿ ನೋಡಿದರೆ, ಸ್ವರಾಜ್ಯ ಪಕ್ಷಕ್ಕೆ ಆರಿಸುವಿಕೆಯಲ್ಲಿ ಮೇಲುಗೈದೊರೆತಾಗ್ಯೂ ಮಿಕ್ಕ ಪಕ್ಷಗಳ ನೆರವಿಲ್ಲದೆ ಅದರಿಂದ ವಿಶೇಷ ಕಾರ್ಯವೇನೂ ಆಗುವಂತಿಲ್ಲ. ದಿಲ್ಲಿಯ ಅಸೆಂಬ್ಲಿಯಲ್ಲಿ ಅವರ ಜನರು ಬಹಳ ಕಡಿಮೆ. ಇಂಥ ಪ್ರಸಂಗದಲ್ಲಿ ಮಾಡುವುದೇನು ? ಸ್ವತಂತ್ರ ಪಕ್ಷ ಪ್ರತಿ ಸಹಕಾರ ಪಕ್ಷ ಮುಂತಾದ ಪಕ್ಷಗಳೊಡನೆ ಸಂಧಿಯನ್ನು ಮಾಡಿಕೊಳ್ಳುವದೊಂದೇ ಮಾರ್ಗವಲ್ಲವೆ? ಈ ಸಮಯವನ್ನು ಸಾಧಿಸಿ, ಮಿಕ್ಕ ಪಕ್ಷಗಳು ಸ್ವರಾಜ್ಯ ಪಕ್ಷವನ್ನು ಕೆಳಗೆ ಜಗ್ಗುವುದು ಸ್ವಾಭಾವಿಕ. ಹೀಗೆ ಅವು ಮಾಡುವದುಚಿತವೋ ಎಂಬುದು ಬೇರೆ ವಿಷಯ. ಹೀಗೆ ಅವು ಜಗ್ಗಿದಾಗ, ಸ್ವರಾಜ್ಯ ಪಕ್ಷವು ಕೆಳಗಿಳಿಯ ಬೇಕೋ ಬೇಡವೋ, ಕೆಳಗಿಳಿಯುವದಾದಲ್ಲಿ ಎಲ್ಲಿಯವರೆಗೆ ಕೆಳಗಿಳಿಯಬೇಕೆಂಬುದೇ ಮುಂದಿನ ಪ್ರಶ್ನೆ. ಕೆಳಗಿಳಿಯಲೇ ಕೂಡದೆಂದೂ ಒಡಕುಬಿಕ್ಕಟ್ಟಿಗಿಂತ ಸಿಡಿದು ನಿಲ್ಲುವುದೇ ಲೇಸೆಂದೂ ಮುಂಬಯಿ ಹೆರಾಲ್ಡರವರ ಉಪದೇಶ ಆದರೆ ಇಲ್ಲಿ ಒಂದು ಮಾತನ್ನು ಮಿ॥ ಹಾರ್ನಿಮನ್ನರು ಮರೆಯುತ್ತಾರೆ. ಅದೇನೆಂದರೆ ಸ್ವರಾಜ್ಯ ಪಕ್ಷಕ್ಕೆ ಕಾನೂನು ಮಂಡಳಗಳ ಒಳಗೆ ಹೋಗಿ ಕೆಲಸ ಮಾಡಕ್ಕದ್ದಿರುವುದೆಂಬುದು. ಒಳಗೆ ಹೋದಬಳಿಕ, ಅಲ್ಲಿಯ ಬಲಾಬಲಗಳನ್ನು ನೋಡಿಯೇ ಕೆಲಸ ಮಾಡಬೇಕಾಗುತ್ತದಲ್ಲವೆ ? ಹಾಗೆ ಮಾಡದಿದ್ದರೆ, ಪ್ರತಿಸಲ ಸರಕಾರಕ್ಕೆ ವಿರೋಧಿಸುವುದಕ್ಕೆಂದು ಎದ್ದು ಬರುವ ಫಾರ್ಸುಗಳನ್ನೇ ಮಾಡುತ್ತ ಕುಳಿತುಕೊಳ್ಳಬೇಕಾದೀತು. ಸ್ವರಾಜ್ಯ ಪಕ್ಷದ ಕಾರ್ಯಕ್ರಮದಲ್ಲಿ ರಾಷ್ಟ್ರೀಯ ಸಭೆಯು ಮಾಡತಕ್ಕ ಕೆಲಸವು ವಿಶೇಷ ಉಳಿದಿರುವುದಿಲ್ಲ. ಆರಿಸುವಿಕೆಗೆ ಬೆಂಬಲಕೊಡುವುದೊಂದೇ ರಾಷ್ಟ್ರೀಯ ಸಭೆಯ ಮುಖ್ಯ ಕೆಲಸವಾಗಿತ್ತು. ಹಾಗೆ ಮಾಡಿ , ಕಾನೂನುಮಂಡಳಕ್ಕೆ ಕಳಿಸಿದ ಬಳಿಕ ರಾಷ್ಟ್ರೀಯ ಸಭೆಯು ಮಾಡುವುದೇನುಳಿಯಿತು ? ಮುಂದಿನ ಕಾರ್ಯವೆಲ್ಲವೂ ಅಲ್ಲಿಯ ಸದಸ್ಯರ ಸಹಾಯದಿಂದಲೇ ನೆರವೇರಿಸಬೇಕಾಗಿರುತ್ತದೆ. ಈ ದೃಷ್ಟಿಯಿಂದ ಅಸಾಮು ಪ್ರಾಂತದ ರಾಷ್ಟ್ರೀಯ ಸಭೆಗೆ ಏನೂ ಕೆಲಸವುಳಿದಿರುವುದಿಲ್ಲ. ಅದು ಪಕ್ಷ ಪರ ಪಕ್ಷಗಳೊಳಗೆ ಸಂಧಿಯನ್ನು ಮಾಡಲು ಪ್ರಯತ್ನಿಸಬಹುದು, ನಾಲ್ಕು ಉಪದೇಶದ ಮಾತುಗಳನ್ನು ಹೇಳಬಹುದು. ಹೆಚ್ಚಿನದೇನು ಮಾಡಬಲ್ಲದು ? ಆದರೆ ಇದಕ್ಕೆ ಇಡೀ ರಾಷ್ಟ್ರೀಯ ಸಭೆಯ ಪ್ರಯೋಜನವೇನು ? ಸಾವಿರಾರು ಮೈಲುಗಳ ಪ್ರವಾಸ ಮಾಡಿ, ಸಾವಿರಾರು ಜನರು ಇಷ್ಟರ ದೆಸೆಯಿಂದಲೇ ಕೂಡಬೇಕೆ? ಅಲ್ಲದೆ ಇಂಥ ಕಾರ್ಯಗಳು ದೊಡ್ಡ ಜನಸಮೂಹಕ್ಕಿಂತ ಸಣ್ಣ ಸಣ್ಣ ಸಣ್ಣ ಸಭೆಗಳಿಂದಲೇ ಹೆಚ್ಚು ಚೆನ್ನಾಗಿ ಜರುಗುತ್ತವೆ. ಆದುದರಿಂದ, ಈ ಕೆಲಸವನ್ನು ಮುಖಂತರಗೊಪ್ಪಿಸುವದೇ ಲೇಸು. ಸಂಧಿಯನ್ನು ಮಾಡುವ ಒಂದು ಮಾರ್ಗವೆಂದರೆ ಸ್ಪಷ್ಟವಾಗಿ ರಾಷ್ಟ್ರಹಿತ ವಿಘಾತಕವಾದ ಸಂದರ್ಭಗಳಲ್ಲಿ ಎಲ್ಲರೂ ಕೂಡಿ ಸರಕಾರವನ್ನಡ್ಡಗಟ್ಟುವುದು, ಸತತವಾಗಿ ಅಡ್ಡಗಟ್ಟುವ ಈಗಿನ ಧೋರಣವನ್ನು ಬಿಡುವುದು.

ಇನ್ನು ರಾಷ್ಟ್ರೀಯ ಸಭೆಯು ನೂಣ ಜಾಡಿಸುತ್ತ ಕುಳ್ಳಿರಬೇಕೆ ? ಖಾದಿಯ ಸಲುವಾಗಿ ಬೇರೊಂದು ಸಂಸ್ಥೆಯೇ ನಿರ್ಮಾಣವಾಗಿರುವುದರಿಂದ ಖಾದಿಯು ಕಾಂಗ್ರೆಸಿನಿಂದ ಹೊರಗೆ ಹೋದಂತಾಗಿದೆ. ಕಾಯದೆಭಂಗದ ಮಾತಂತೂ ದೂರೇ ಉಳಿದಿದೆ. ಆದುದರಿಂದ ರಾಷ್ಟ್ರೀಯ ಸಭೆಯು ಯಾವ ಕಾರ್ಯವನ್ನು ಕೈಕೊಳ್ಳಬೇಕೆಂಬುದೊಂದು ದೊಡ್ಡ ಪ್ರಶ್ನೆಯೇ ಉದ್ಭವಿಸಿದೆ. ಪುನಃ ಮೊದಲಿನಂತೆ ಕೇವಲ ನಿರ್ಣಯಗಳನ್ನು ಮಾಡುತ್ತ ಕುಳ್ಳಿರಬೇಕಾಗುವದೋ ಏನೊ ? ಈ ಸಂದರ್ಭದಲ್ಲಿ ಅನೇಕರು ನಿಷ್ಕಾರಣವಾಗಿ ಅಡ್ಡಪ್ರಶ್ನೆಗಳನ್ನು ತೆಗೆಯುತ್ತಿರುವರು. ಖಾದೀ ಉಡುಪನ್ನು ಧರಿಸದವರು

ಕಾರ್ಯಕಾರೀ ಮಂಡಳದಲ್ಲಿ ಇರಲೇಕೂಡದೆಂದು ನಿರ್ಣಯ ಮಾಡುವದಕ್ಕೆ ಅಲ್ಲಾಹಾಬಾದ ಪ್ರಾಂತಿಕ ಕಾನ್ಫರನ್ಸಿನವರು ರಾಷ್ಟ್ರೀಯ ಸಭೆಗೆ ಸೂಚಿಸಿರುವರು. ರಾಷ್ಟ್ರೀಯ ಸಭೆಯನ್ನು ಆದಷ್ಟು ಹೆಚ್ಚಿಗೆ ವ್ಯಾಪಕವಾಗಿಡಬೇಕೆಂದು ನಮಗೆ ತೋರುತ್ತದೆ. ಇಲ್ಲದಿದ್ದರೆ ಅದು ಒಂದು ಮತ ಅಥವಾ ಸಂಪ್ರದಾಯುವ ಅವಸ್ಥೆಗೆ ಮುಟ್ಟುವುದು. ಈಗಾಗಲೆ ಕೆಲ ಮಟ್ಟಿಗೆ ಹಾಗೆ ಸ್ಥಿತಿಯಾಗಿರುವುದು. ರಾಷ್ಟ್ರೀಯ ಸಭೆಯ ನಿರ್ಣಯಗಳು ವೇದವಾಕ್ಯಗಳೆಂದು ತಿಳಿಯದಿದ್ದವನು ರಾಷ್ಟ್ರೀಯ ಸಭೆಯ ಮೆಂಬರನಾಗಲು ಅರ್ಹನಲ್ಲವೆಂದು ಕೆಲವರು ಪ್ರತಿ ಸ [illegible] ವಲ್ಲೆಂಬುದನ್ನು ನಾವು ಹಿಂದೊಮ್ಮೆ ಪ್ರತಿಪಾದಿಸಿದ್ದೇವೆ. ರಾಷ್ಟ್ರೀಯ ಸಭೆಯ ಘಟನೆ ಉದ್ದೇಶ ಮುಂತಾದವುಗಳ ವಿಷಯವಾಗಿ ಈ ಸಲ ಚರ್ಚಿಸಿ ನಿರ್ಣಯಿಸಬೇಕೆಂದು ನಮ್ಮ ಸೂಚನೆ. ವೆಲ್ಲೂರಿನಲ್ಲಿ ಹೋದ ತಿಂಗಳಿನಲ್ಲಿ ಕೂಡಿದ ಆಂಧ್ರ ಪ್ರಾಂತಿಕ ಪರಿಷತ್ತಿನಲ್ಲಿ ರಾಷ್ಟ್ರೀಯ ಸಭೆಯು ಸಂಪೂರ್ಣ ಸ್ವಾತಂತ್ರ್ಯವನ್ನು ತನ್ನ ಗುರಿಯಾಗಿ ಇಟ್ಟುಕೊಳ್ಳಬೇಕೆಂದು ಶ್ರೀ. ಸಾಂಬಮೂರ್ತಿಗಳು ಸೂಚನೆಯನ್ನು ತಂದಿದ್ದರು. ಅದು ಬಹುಮತದಿಂದ ಮಂಜೂರಾಗಿರುವುದು. ನಾಲ್ಕನೇ ಡಿಸೆಂಬರ ದಿವಸ ಕೂಡಿದ ೩೨ನೆಯ ಮದ್ರಾಸಿನಲ್ಲಿ ಕೂಡಿದ ತಮಿಳು ಪ್ರಾಂತಿಕ ಪರಿಷತ್ತಿನಲ್ಲಿಯೂ ಇದೇ ಬಗೆಯ ಗೊತ್ತುವಳಿಯು ಮಂಜೂರಾಗಿರುತ್ತದೆ. ಸಂಪೂರ್ಣ ಸ್ವಾತಂತ್ರ್ಯವು ನಮಗೂ ಬೇಕಾಗಿದೆ, ಬೇಡವೆಂತಿಲ್ಲ. ಆದರೆ, ಈಗ ಮೂರು ನಾಲ್ಕು ವರ್ಷಗಳಿಂದ ದೇಶವು ಹಿಮ್ಮೊಗವಾಗಿ ನಡೆಯಹತ್ತಿದೆ. ಇಂಥ ಸ್ಥಿತಿಯಲ್ಲಿ ಇಂಥ ಗೊತ್ತುವಳಿಯನ್ನು ಮಾಡುವುದಕ್ಕೆ ನಮಗೆ ನಾಚಿಕೆ ಬರುತ್ತದೆ. ನಮ್ಮ ಗೊತ್ತುವಳಿಗಳು ನಮ್ಮ ಪೌರುಷಕ್ಕೆ ತಕ್ಕಂತೆ ಇರಬೇಡವೆ?

ರಾಷ್ಟ್ರೀಯ ಸಭೆಯಲ್ಲಿ ಇತ್ತೀಚೆಗೆ ಒಡಕು ಹುಟ್ಟುವದಕ್ಕೆ ಇನ್ನೂ ಒಂದು ಕಾರಣ. ರಾಷ್ಟ್ರೀಯ ಸಭೆಯು ಮುಸಲ್ಮಾನರಿಗೆ ಮಿತಿಮೀರಿ ಬಗ್ಗಿ ನಡೆಯುತ್ತದೆಂದು ಹಲವರ ತಿಳವಳಿಕೆ. ರಾಷ್ಟ್ರೀಯ ಸಭೆಯ ಉದ್ದೇಶವೇನೋ ಮುಸಲ್ಮಾನರು ಸ್ವರಾಜ್ಯ ದೊರಕಿಸುವುದಕ್ಕೆ ನೆರವಾಗಲೆಂಬುದು. ಆದರೆ, ಪರಿಣಾಮವು ಮಾತ್ರ ವಿಪರೀತವಾಗಿ ಕಂಡುಬರುತ್ತದೆ. ಲಖನೌ ಒಡಂಬಡಿಕೆ, ಖಿಲಾಫತ ಮತ್ತು ಬಂಗಾಲ ಒಡಂಬಡಿಕೆ ಇವುಗಳಲ್ಲಿ ಹಿಂದೂ ಜನರು ಮುಸಲ್ಮಾನರಿಗೆ ಸೋತು ನಡೆದರು. ಆದರೂ ಅವರ ಹಸಿವು ಹಿಂಗುವುದಿಲ್ಲ. ಆದುದರಿಂದ ಇನ್ನು ಮುಂದೆ ಸಾವಧಾನವಾಗಿರಬೇಕೆಂದು ಹಿಂದೂ ಸಭೆಯ ಸೂಚನೆ. ಈ ಸೂಚನೆಯಲ್ಲಿ ತಥ್ಯಾಂಶವಿರುವುದೆಂಬುದನ್ನು ರಾಷ್ಟ್ರೀಯ ಸಭೆಯು ಲಕ್ಷ್ಯಕ್ಕೆ ತರತಕ್ಕದ್ದು. ಮತ್ತು ಮುಸಲ್ಮಾನರಿಗೆ ಇಂತಿಷ್ಟು ಮರ್ಯಾದೆಯ ವರೆಗೆ ಮಣಿಯಬೇಕೆಂಬುದನ್ನು ನಿರ್ಣಯಿಸಬೇಕು.

ಮೇಲ್ಕಾಣಿಸಿದ ದಿಶೆಯಿಂದ ರಾಷ್ಟ್ರೀಯ ಸಭೆಯಲ್ಲಿ ಸುಧಾರಣೆಯಾಗದಿದ್ದರೆ ಅದು ದಿನದಿನಕ್ಕೆ ಕೊರಗುತ್ತ ಹೋಗುವುದೆಂದು ನಮಗೆ ಅಂಜಿಕೆಯಿದೆ.

---

## ಕರ್ನಾಟಕವೂ ರಾಷ್ಟ್ರೀಯ ಚಳವಳವೂ.

ಕರ್ನಾಟಕವು ಕಾಂಗ್ರೆಸ್ಸಿನ ವತಿಯಿಂದ ೭ಜನ ಉಮೇದವಾರರನ್ನು ನಿಲ್ಲಿಸಿತ್ತು, ಅವರಲ್ಲಿ ೫ ಜನ ಆರಿಸಿ ಬಂದಿರುವರು. ದಿಲ್ಲಿಯ ಅಸೆಂಬ್ಲಿಗೆ ಕಾಂಗ್ರೆಸಿನ ಪಕ್ಷದವರಾದ ದೇ. ಬೆಳವಿಯವರು ಆರಿಸಿ ಬಂದರು. ಕರ್ನಾಟಕ ಪ್ರಾಂತಿಕ ಕಾಂಗ್ರೆಸಿನ ಅಧ್ಯಕ್ಷರಾದ ದೇ. ಶ್ರೀನಿವಾಸರಾವ ಕವಜಲಗಿ ಇವರು ಆರಿಸಿ ಬಾರದಿರುವುದು ದುಃಖದ ಸಂಗತಿಯು. ಅವರು ಆರಿಸಿ ಬಂದಿದ್ದರೆ, ಕಾನುನು ಮಂಡಳದಲ್ಲಿ ಕರ್ನಾಟಕದ ಹುಲಿಯ ಗರ್ಜನೆಯು ಕೇಳಿ ಬರುತ್ತಿತ್ತು. ಉಪಾಯವಿಲ್ಲ. ಕರ್ನಾಟಕ ಪ್ರಾಂತಿಕ ಕಾಂಗ್ರೆಸ ಕಮಿಟಿಯ ಸಾಮಾನ್ಯ ಸಭೆಯು ಗದಗಿನಲ್ಲಿ ೫-೧೨-೨೬ನೆಯ ದಿವಸ ಕೂಡಿ, ಹೊಸ ಅಧಿಕಾರಿಗಳನ್ನಾರಿಸುವುದೇ ಮುಂತಾದ ಸಾಮಾನ್ಯ ಕಾರ್ಯಗಳು ನೆರವೇರಿಸಲ್ಪಟ್ಟವು. ಶ್ರೀನಿವಾಸರಾಯರೇ ಪುನಃ ಅಧ್ಯಕ್ಷರಾಗಿ ಆರಿಸಲ್ಪಟ್ಟಿರುವರು. ಅಸಾಮಿನಲ್ಲಿ ನೆರೆಯುವ ರಾಷ್ಟ್ರೀಯ ಸಭೆಗೆ ಪ್ರತಿನಿಧಿಗಳು ಆರಿಸಲ್ಪಟ್ಟಿರುವರು. ಕರ್ನಾಟಕ ಸ್ವಯಂಸೇವಕ ದಳದವರು ಮಹಾತ್ಮಾಜೀಯವರು ಕರ್ನಾಟಕಕ್ಕೆ ಬಂದುಹೋಗಬೇಕೆಂದು ಕೇಳಿಕೊಂಡಿದ್ದರು. ಕರ್ನಾಟಕವು ಖಾದೀ ಪ್ರಸಾರವನ್ನು ಮಿತಿಮೀರಿ ಮಾಡುವುದಾದರೆ ತಾವು ಬರುವೆವೆಂದು ಹೇಳಿರುವರು. ಆಚಾರ್ಯ ಪ್ರಫುಲ್ಲಚಂದ್ರ ರೇ ಇವರು ಮೈಸೂರ ವಿಶ್ವವಿದ್ಯಾಲಯದ ಪದವೀದಾನ ಸಮಾರಂಭಕ್ಕೋಸ್ಕರ ಬಂದಾಗ, ಬೆಂಗಳೂರ ಮೈಸೂರುಗಳಲ್ಲಿ ಭಾಷಣಮಾಡಿ ಖಾದಿಯ ಮಹತ್ವವನ್ನು ಕನ್ನಡಿಗರ ಹೃದಯದಲ್ಲಿ ಬಿಂಬಿಸಿಕೊಟ್ಟರು. ಹುಬ್ಬಳ್ಳಿಯಲ್ಲಿ ಜನವರಿಯ ಪ್ರಾರಂಭಕ್ಕೆ ಕೂಡಲಿಕ್ಕಿರುವ ವೀರಶೈವ ಮಹಾಸಭೆಯವರು ಖಾದಿ ವಿಷಯವನ್ನು ಕೈಕೊಳ್ಳತಕ್ಕವರಿರುವರೆಂಬುದು ಆನಂದದ ಮಾತು. ಅವರು ಅದರ ಪ್ರಸಾರವನ್ನು ಮಾಡುವುದನ್ನು

ನಿಶ್ಚಯಿಸಿದರೆ, ಕರ್ನಾಟಕವು ಖಾದಿಯ ವಿಷಯದಲ್ಲಿ ಬೇಗನೆ ಅಗ್ರಸ್ಥಾನವನ್ನು ಪಡೆಯಬಹುದೆಂದು ಆಶಿಸಲು ಅಡ್ಡಿ ಇಲ್ಲ. ಕರ್ನಾಟಕದ ಸಂಪೂರ್ಣ ಅಭಿಮಾನಿಗಳಾದ ಬಳ್ಳಾರಿಯ ದೇ. ರಂಗನಾಥ ಮುದಲಿಯಾರ ಇವರು ಮದ್ರಾಸ ಇಲಾಖೆಯಲ್ಲಿ ಮಂತ್ರಿಗಳಾಗಿ ನೇಮಿಸಲ್ಪಟ್ಟಿರುವರೆಂಬುದನ್ನು ಕೇಳಿ ಯಾವ ಕನ್ನಡಿಗರಿಗೆ ಆನಂದವಾಗಲಿಕ್ಕಿಲ್ಲ? ಶ್ರೀ ರಂಗನಾಥ ಮುದಲಿಯಾರ ಇವರು ಬ್ರಾಹ್ಮಣೇತರರು; ೪೬-೪೭ ವಯಸ್ಸಿನವರು. ಅವರು ೧೯೧೩ನೆಯ ಇಸ್ವಿಯಲ್ಲಿ ಡೆಪ್ಯೂಟಿ ಕಲೆಕ್ಟರರಾಗಿ ದ್ದರು. ಆದರೆ ೧೯೧೫ರಲ್ಲಿ ಸರಕಾರದ ನವಕರಿಗೆ ರಾಜಿನಾಮೆಯನ್ನು ಕೊಟ್ಟು ದೇಶಸೇವೆಗೆ ಬದ್ಧಕಂಕಣರಾದರು. ಮೂರು ಸಲ ಬಳ್ಳಾರಿಯ ಜಿಲ್ಲೆಯ ಪರವಾಗಿ ಕಾಯದೆಮಂಡಳದಲ್ಲಿ ಕೆಲಸ ಮಾಡಿರುವರು. ಅವರು ಸ್ವತಂತ್ರ ಪಕ್ಷಕ್ಕೆ ಹೊಂದಿದವರು. ಥಿಯಾಸಾಫಿಸ್ಟರು. ಡಾ. ಆ್ಯನಿಬೆಸೆಂಟರವರಲ್ಲಿ ಪೂರ್ಣ ಭಕ್ತಿಯುಳ್ಳವರು. ಕರ್ನಾಟಕದ ಏಕೀಕರಣವನ್ನು ಪುರಸ್ಕರಿಸುವವರು. ಇವರು ರಾಷ್ಟ್ರಕ್ಕೂ ಕರ್ನಾಟಕಕ್ಕೂ ಹಿತವನ್ನು ಮಾಡಿ ನಮ್ಮ ಪ್ರಾಂತಕ್ಕೆ ಅಲಂಕಾರಪ್ರಾಯರಾಗುವರೆಂದು ಬಯಸುತ್ತೇವೆ. ಮುಂಬಯಿ ಕರ್ನಾಟಕದ ಪರವಾಗಿ ಮಂತ್ರಿಮಂಡಳದಲ್ಲಿ ಧುರೀಣರು ಸೇರಿದರೆ ನಮಗೆ ಮತ್ತಷ್ಟು ಆನಂದವಾಗುತ್ತದೆ. ಕರ್ನಾಟಕವನ್ನು ಈಗ ಎಲ್ಲೆಲ್ಲಿಯೂ ಕೇಳುವವರೇ ಇಲ್ಲ. ವಿಶ್ವ ವಿದ್ಯಾಲಯಗಳಲ್ಲಿಯೇ ಆಗಲಿ ಕಾಯದೆಮಂಡಳಗಳಲ್ಲಿಯೇ ಆಗಲಿ, ಒಳಗೆ ಸೇರಿದ ಅಲ್ಪಸ್ವಲ್ಪ ಕನ್ನಡಿಗರು ಈ ವಿಷಯವಾಗಿ ಅಲ್ಲಿ ಜಾಗ್ರತಿಯನ್ನುಂಟುಮಾಡುವುದು ಅವರ ಕೆಲಸ. ಇಲ್ಲಿಂದ ಕಾಯದೆಮಂಡಳಗಳಿಗೆ ಹೋದ ಕರ್ನಾಟಕಸ್ಥರು ತಮ್ಮದೊಂದು ಸಂಸ್ಥೆಯನ್ನು ಏರ್ಪಡಿಸಿಕೊಂಡು, ತಮಗೆ ಅವಶ್ಯವಿರುವ ಮಾಹಿತಿಯನ್ನು ದೊರಕಿಸಿ, ಸಭೆಯ ಮುಂದಿಟ್ಟರೆ ಅವರ ಸೂಚನೆಗಳಿಗೆ ಮಹತ್ವವು ಬರುವುದು.



ಶ್ರೀ ದತ್ತಾತ್ರಯ ವೆಂಕಟೇಶ ಬೆಳವಿ.

## ಶ್ರೀಮತಿ ಕಮಲಾದೇವಿಯವರೂ ಜಯಕರ್ನಾಟಕವೂ.

ನಾವು ಶ್ರೀಮತಿ ಕಮಲಾದೇವಿ ಚಟ್ಟೋಪಾಧ್ಯಾಯ ಇವರ ಉಮೇದವಾರಿಯನ್ನು ಕುರಿತು ಹೋದ ಸಂಚಿಕೆಯಲ್ಲಿ ಬರೆಯುವಾಗ, ಅದನ್ನು ಮೂರುಕಾರಣಗಳಿಗೋಸ್ಕರ ವಿರೋಧಿಸಿದ್ದೆವು. (೧) ಸಾಮಾನ್ಯತಃ ಸ್ತ್ರೀಯರು ಆರಿಸುವಿಕೆಯ ಗೊಂದಲದಲ್ಲಿ ಬೀಳಲೇಬಾರದೆಂದು. (೨) ಶ್ರೀಮತಿ ಕಮಲಾದೇವಿಯವರಿಗೆ ಅವರು ಕೇವಲ ಸ್ತ್ರೀಯರಿರುವರೆಂದು ಮತವನ್ನು ಕೊಡುವುದು ತಪ್ಪೆಂದು. (೩) ಅವರು ಸ್ವರಾಜ್ಯಪಕ್ಷದವರಲ್ಲವೆಂದು. ಮೊದಲಿನನಮ್ಮ ವಿಧಾನದಿಂದ ಹಲವರಿಗೆ ಕೋಪವುಂಟಾಗಿವೆ. ಹಾ-ಸ್ತ್ರೀ ಸ್ವಾತಂತ್ರ್ಯದ ಈಗಿನದಿನಗಳಲ್ಲಿ ಹೀಗೆ ಅಭಿಪ್ರಾಯಪಡುವುದೆಂಥವರೇನು? ಮಹತ್ಪಾಪ! ಮಹತ್ಪಾಪ! ಅಹುದು, ನಮ್ಮ ಮೊದಲನೆಯ ವಿಧಾನವು ಈಗಿನ ಸಾಮಾನ್ಯ ಮತಪ್ರವಾಹಕ್ಕೆ ವಿರುದ್ಧವಿರುವುದೆಂಬುದನ್ನು ನಾವು ಒಪ್ಪುವೆವು. ಸ್ತ್ರೀಯರ ಉಮೇದವಾರಿಗೆ ನಮ್ಮ ಸಮ್ಮತಿಯಿಲ್ಲವೆಂದು ಸೂಚಿಸುವುದು ನಮಗೆ ಅವಶ್ಯವಾಗಿತ್ತು. ಜನಮತ ಪ್ರವಾಹಕ್ಕೆ ನಮ್ಮ ಮತವು ಹೊಂದದಿದ್ದಾಗ, ವಿಶೇಷ ಚರ್ಚೆಯನ್ನು ಬೆಳೆಸದೆ, ಸ್ವಂತ ಅಭಿಪ್ರಾಯವನ್ನು ಮಾತ್ರವೇ ಹೇಳಿಡುವುದು ನಮ್ಮ ಸಾಮಾನ್ಯ ಪದ್ಧತಿ. ಆ ಪ್ರಕಾರ ನಾವು ಮಾಡಿರುವೆವು. ನಮ್ಮ ವಿಧಾನದಲ್ಲಿ ನಮಗೆ ಶ್ರದ್ಧೆಯುಂಟು. ಸ್ತ್ರೀಯರು ಹೀಗೆ ಕಾನೂನು ಮಂಡಳದಲ್ಲಿ ಪ್ರವೇಶಿಸಿ ಕಾರ್ಯಮಾಡುವುದಕ್ಕಿಂತ ಅವರು ಬೇರೆ ರೀತಿಯಿಂದ ತಮ್ಮ ಗುಣಗಳ ಪರಿಪೋಷಣೆಯನ್ನು ಮಾಡಿಕೊಳ್ಳುವುದರಿಂದಲೇ ಲೋಕಕ್ಕೆ ಹೆಚ್ಚಿಗೆ ಕಲ್ಯಾಣವಾಗುತ್ತದೆಂದು ನಮ್ಮ ಅಭಿಪ್ರಾಯವು. ತಾವು ಸ್ತ್ರೀಯರ ಅಹಿತವನ್ನು ಮಾಡುವೆವೆಂದು ಪುರುಷರಿಗೆ ಏಕೆ ಅಭಯವಸೆಯಿರಬೇಕು? ಇನ್ನು ಇವಕ್ಕೆ ಬಾದರಾಯಣ ಮತವೆಂದು ನಮ್ಮನ್ನು ಬದಿಗಿಟ್ಟರೆ ಇಡಲಿ.

ಈ ವಿಷಯದಲ್ಲಿ ಟೀಕಾಕಾರರು ನಮ್ಮ ಮೇಲೆ ವಿಷಯಾಂತರ ಮಾಡಿ ಟೀಕೆಮಾಡಿರುವರು. ಸ್ತ್ರೀಯರು ಆರಿಸುವಿಕೆಯ ಗೊಂದಲದಲ್ಲಿ ಬಿದ್ದು ಕಾನೂನುಮಂಡಳಗಳಿಗೆ ಹೋಗುವುದು ಉಚಿತವೋ ಅಲ್ಲವೋ ಎಂಬುದು ಈಗಿನ ಪ್ರಶ್ನೆ, ಸ್ತ್ರೀಯರು ಹೀಗೆ ಕಾನುನು ಮಂಡಳಗಳಿಗೆ ಹೋಗುವುದು ಉಚಿತವಲ್ಲವೆಂದೂ ಪುರುಷರು ತಮ್ಮ ಅಹಿತವನ್ನು ಮಾಡುವರೆಂದು ತಿಳಿಯದೆ ಅವರಲ್ಲಿ ವಿಶ್ವಾಸವಿಡಬೇಕೆಂದೂ ನಾವು ಹೇಳಿದರೆ ಅವರು ಕೇವಲ ಅಡಿಗೆಯನ್ನಷ್ಟೇ ಮಾಡಬೇಕೆಂದು ಹೇಳಿದಂತಾಯಿತೆ ? ಹೀಗೆ 'ಸತ್ಯಾಗ್ರಹಿ'ಯು ವಿಷಯಾಂತರ ಮಾಡಿ ಮಾಡಿದ ಟೀಕೆಗೆ ಜಯಕರ್ನಾಟಕವು ಉತ್ತರಕೊಟ್ಟು ಚರ್ಚೆಬೆಳೆಸಲಿಚ್ಛಿಸುವುದಿಲ್ಲ. ಆದರೆ ಟೀಕಾಕಾರರು ಈ ವಿಷಯವನ್ನೆತ್ತಿರುವದರಿಂದ ಈ ವಿಷಯದಲ್ಲಿಯೂ ನಮ್ಮ ಅಭಿಪ್ರಾಯವನ್ನು ಮಾತ್ರವೇ ನಾವು ಹೇಳಿಡುತ್ತೇವೆ. ಅಹುದು. ಹೆಂಗಸರು ಅಡಿಗೆಯನ್ನಂತೂ ಮಾಡಲೇಬೇಕು. ಹಾಗೆ ಮಾಡದ ಸ್ತ್ರೀಯು ಸ್ತ್ರೀಯಳೇ ಅಲ್ಲ. ರಾಜಕಾರಣದಲ್ಲಿ ಪ್ರತ್ಯಕ್ಷವಾಗಿ ಭಾಗತೆಗೆದುಕೊಳ್ಳುವದನ್ನು ಹೊರ್ತುಪಡಿಸಿ, ಆತ್ಮೋನ್ನತಿಯನ್ನೂ, ಧರ್ಮಸೇವೆಯನ್ನೂ, ಸಮಾಜಸೇವೆಯನ್ನೂ, ರಾಷ್ಟ್ರಸೇವೆಯನ್ನೂ, ಮಾಡುವುದಕ್ಕೆ ಸ್ತ್ರೀಯರಿಗೆ ಅನೇಕ ಮಾರ್ಗಗಳುಂಟು. ಆರ್ಯಪರಂಪರೆಯಲ್ಲಿ ಕೃತಯುಗ ಮೊದಲ್ಗೊಂಡು ಇಲ್ಲಿಯವರೆಗೆ ಸಾಮಾನ್ಯವಾಗಿ ಸ್ತ್ರೀಯರು ರಾಜಕಾರಣದಲ್ಲಿ ಪ್ರತ್ಯಕ್ಷವಾಗಿ ಭಾಗ ತೆಗೆದುಕೊಂಡಕಾಲವು ಒಮ್ಮೆಯೂ ಒದಗಿಲ್ಲ. ದ್ರೌಪದಿಯು ರಾಜಕಾರಣಪಟುವಾಗಿದ್ದಳು ಆದರೆ, ರಂಗಭೂಮಿಯ ಮೇಲೆ ಪ್ರತ್ಯಕ್ಷವಾಗಿ ಕುಣಿಯಲಿಕ್ಕೆ ಮುಂದೆ ಬರಲಿಲ್ಲ. ಇದು ನಮ್ಮ ಆರ್ಯ ಸ್ತ್ರೀಯರ ಪರಂಪರೆ, ಇನ್ನು ಮುಂದೆ ಬರುವ ಕೃತಕಯುಗದಲ್ಲಿ ಏನಾಗುವುದೆಂಬುದನ್ನು ನಾವು ಹೇಳಲಾರೆವು. ಇರಲಿ. ವಿಶ್ವಕರ್ನಾಟಕವು ಉಸುರಿದಂತೆ ಸ್ತ್ರೀಯರು ಹೊಸ್ತಿಲನ್ನು ದಾಟಕೂಡದೆಂದು ಪುರುಷರು ಶಾಸನ ಸಭೆಯಲ್ಲಿ ಕಾನೂನು ಮಾಡಬೇಕೆಂದು ನಾವು ಹೇಳಬಹುದಾಗಿತ್ತು! ಆದರೆ, ನಮಗೆ ಶಾಸನ ಸಭೆಯ ಮೂಲಕವಾದ ಸಮಾಜ ಸುಧಾರಣೆಯಲ್ಲಿ ವಿಶ್ವಾಸವಿಲ್ಲವಲ್ಲ! ಸ್ತ್ರೀಯರಲ್ಲಿ **पदन्यासो गेहाद्बहिरहिफणारोपणसमो** (ಹೊಸ್ತಿಲ ಹೊರಗೆ ಕಾಲಿಡುವದೆಂದರೆ ಹಾವಿನ ಹೆಡಿಯಮೇಲೆ ಕಾಲಿಟ್ಟಂತೆ) ಎಂಬಷ್ಟು ಕೋಮಲವೂ ತೀಕ್ಷ್ಣವೂ ಆದ ಭಾವನೆಯು ಸ್ತ್ರೀಯರಲ್ಲಿ ತಾನಾಗಿಯೇ ಉದಯವಾಗಬೇಕೆಂದು ಮಾತ್ರ ನಮ್ಮ ಇಚ್ಛೆ. ಸಾಕು. ಕೊನೆಗೆ ನಾವು ನಮ್ಮ ಬಂಧುವ್ರಯಗಳಿಗೆ ಗುಜರಾಥೀ ನವಜೀವನದಲ್ಲಿ ಬಂದಿರುವ ಅವರ ಗುರುಭಗಿನಿಯರ ವಚನದ ಉಡುಗರೆಯನ್ನು ಕೊಟ್ಟು, ಅವರು ಅದರ ವಾಚನ, ಮನನ ನಿದಿಧ್ಯಾಸವನ್ನು ಮಾಡಬೇಕೆಂದು ಸೂಚಿಸುತ್ತೇವೆ.

ಅಹಮ್ಮದಾಬಾದಿನಲ್ಲಿ ಹೋದ ತಿಂಗಳಿನಲ್ಲಿ ಜರುಗಿದ ಸಪ್ತಾಹದಲ್ಲಿ ಮಿಸ್‌ಸ್ಲೇಡ್ ಎಂಬ ಇಂಗ್ಲಿಷ್ ಯುವತಿಯು (ಇವರು ಮಹಾತ್ಮಾಜೀಯವರ ಶಿಷ್ಯರಾಗಿ ಸತ್ಯಾಗ್ರಹಾಶ್ರಮದಲ್ಲಿಯೇ ಇರುತ್ತಿರುವರು) ಹೇಳಿದ್ದೇನೆಂದರೆ;-

"ಸೇವೆಯು ಮತ್ತು ನಮ್ರತೆಯು ಸ್ತ್ರೀಯರಿಗೆ ಸಹಜ ಪ್ರಾಪ್ತವಾದ ಅಧಿಕಾರಗಳಾಗಿರುತ್ತವೆ. ಹಿಂದುಸ್ಥಾನದಲ್ಲಿ ಈ ಎರಡೂ ಆದರ್ಶಗಳು ಸ್ತ್ರೀಯರ ಜೀವನವನ್ನು ಉನ್ನತ ಗೊಳಿಸಿರುವುವು. ಪಾಶ್ಚಿಮಾತ್ಯರು, ವಿಶೇಷತಃ ಸುಶಿಕ್ಷಿತ ವರ್ಗದವರು, ಈ ಆದರ್ಶಗಳಿಗೆ ತಿಲಾಂಜಲಿಯನ್ನಿತ್ತಿರುವರು. ಅಲ್ಲಿಯವರಿಗೆ ಸ್ವಾತಂತ್ರ್ಯವು ಮತ್ತು ಸಮಾನತೆಯು ಆದರ್ಶಗಳಾಗಿರುವುವು. ನಿಜವಾದ ಸೇವೆಯು ದಾಸ್ಯವಲ್ಲ, ಅದು ಸ್ವತಂತ್ರತೆಯೇ ಆಗಿರುವುದು. ನಿಜವಾದ ನಮ್ರತೆಯು ಅಸಮತೆಯಿರದೆ ಸಮಾನತೆಯೇ ಇರುವುದು. ಎಷ್ಟೋಸಲ ಸೇವೆಯು ದಾಸ್ಯವಾಗುವುದೆಂದೂ ನಮ್ರತೆಯು ದೈನ್ಯವಾಗುವುದೆಂದೂ ನಾನು ಒಪ್ಪಿಕೊಳ್ಳುವೆನು. ಆದರೆ ಹೀಗಾಗುವುದೆಂದು ತಮ್ಮ ಸಂಸ್ಕೃತಿಯ ಉದಾತ್ತವಾದ ಆದರ್ಶಗಳನ್ನು ಬಿಟ್ಟುಕೊಟ್ಟು ಪಾಶ್ಚಾತ್ಯ ಆದರ್ಶಗಳನ್ನು ಸ್ವೀಕರಿಸುವುದು ಯೋಗ್ಯವಲ್ಲ. ನಮ್ಮ ಆದರ್ಶಗಳಿಗೆ ಯೋಗ್ಯರಾಗಲು ನಾವು ಯತ್ನಿಸುವುದು ನಮ್ಮ ಕರ್ತವ್ಯವು. ಈ ದಿಶೆಯಲ್ಲಿ ನಮ್ಮ ಪ್ರಯತ್ನವು ಬಲವತ್ತರವಾದಂತೆ ನಮ್ಮ ಜೀವನವು ಪವಿತ್ರವೂ ಸ್ವಾರ್ಥರಹಿತವೂ ಆಗುವದು; ಪಶ್ಚಿಮದಲ್ಲಿ ಸ್ವಾತಂತ್ರ್ಯವು ಅನೇಕಸಲ ಸ್ವಚ್ಛಂದವೂ ಸ್ವಾರ್ಥಮಯವೂ ಆಗುತ್ತಿರುವುದು, ಮತ್ತು ಸಮಾನತೆಯು ಭಯಂಕರವಾದ ಸ್ಪರ್ಧೆಯಲ್ಲಿ ಪರಿಣಮಿಸುತ್ತಿರುವುದು. ಪಶ್ಚಿಮದಲ್ಲಿ ಈಗ ಎಲ್ಲೆಲ್ಲಿಯೂ ಕಂಡುಬರುವ ಅಶಾಂತಿ–ಅಸಂತೋಷಗಳಿಗೆ ಅಲ್ಲಿಯ ಸ್ತ್ರೀಯರೂ ಪುರುಷರೂ ತಮ್ಮ ತಮ್ಮ ಧರ್ಮವನ್ನು ಬಿಟ್ಟು ಸ್ಪರ್ಧೆಯಲ್ಲಿಳಿದಿರುವ ಸಂಗತಿಯು ಕಾರಣವಾಗಿದೆ. ಸ್ತ್ರೀಯರು ಸ್ವಧರ್ಮವನ್ನು ಬಿಟ್ಟು ಪುರುಷರ ಧರ್ಮವನ್ನು ಸ್ವೀಕರಿಸಿದರೆ ಅವರಿಗೆ ಆತ್ಮದರ್ಶನವಾಗಲರಿಯದು, ಕೇವಲ ಸೇವೆ ಮತ್ತು ನಮ್ರತೆ ಈ ಸ್ವಾಭಾವಿಕ ಅಧಿಕಾರಗಳ ಅವಲಂಬನದಿಂದಲೇ ಅವರು ಆತ್ಮೋನ್ನತಿಯನ್ನು ಮಾಡಿಕೊಳ್ಳಬಲ್ಲರು.

ಸಾಂಪ್ರತದಲ್ಲಿ ಸ್ತ್ರೀಯರಿಗೆ ಪುರುಷರಂತೆಯೇ ಶಿಕ್ಷಣವು ಕೊಡಲ್ಪಡುತ್ತಿರುವುದು. ಈ ಪದ್ಧತಿಯು ದೋಷಮಯವೂ ಅಶಾಸ್ತ್ರೀಯವೂ ಆಗಿರುವುದೆಂದು ನನಗೆ ತೋರುತ್ತದೆ. ಅವರಿಗೆ ಅವರ ಸ್ವಭಾವಕ್ಕೂ ಸ್ವಧರ್ಮಕ್ಕೂ ಅನುಕೂಲವಾದ ಶಿಕ್ಷಣವನ್ನು ಕೊಡತಕ್ಕದ್ದು. ಅವರನ್ನು ಪುರುಷರ ಪ್ರತಿಸ್ಪರ್ಧಿಯರನ್ನಾಗಿ ಮಾಡಿದರೆ ಪಾಶ್ಚಾತ್ಯದೇಶಗಳಲ್ಲಿ ಹೇಗೋ ಹಾಗೆಯೇ ಇಲ್ಲಿಯಾದರೂ ಸಮಾಜದ ಅಡಿಗಲ್ಲು ಸಡಿಲವಾಗುವುದು."

(ಗುಜರಾಥೀ ನವಜೀವನ)

## ಕರ್ನಾಟಕದ ಪ್ರಗತಿಯು.

ಹೋದ ತಿಂಗಳಿನಲ್ಲಿ ಮೈಸೂರು ಮತ್ತು ಹೈದ್ರಾಬಾದ ವಿಶ್ವವಿದ್ಯಾಲಯಗಳ ಪದವೀದಾನ ಸಮಾರಂಭಗಳು ಜರುಗಿದವು. ಆಚಾರ್ಯ ಪ್ರಫುಲ್ಲಚಂದ್ರ ರೇ ಇವರು ಮೈಸೂರ ವಿಶ್ವವಿದ್ಯಾಲಯದ ಸಮಾರಂಭದಲ್ಲಿ ಮುಖ್ಯ ಭಾಷಣ ಮಾಡಿದರು. ಉಸ್ಮಾನಿಯಾ ವಿಶ್ವವಿದ್ಯಾಲಯದ ಮುಖ್ಯ ಭಾಷಣವನ್ನು ನವಾಬ ಸರದಾರ ಯಾರಜಂಗ ಬಾಹದ್ದೂರರವರು ಮಾಡಿದರು. ಆಚಾರ್ಯರವರು ತಮ್ಮ ಭಾಷಣದಲ್ಲಿ ಈಗಿನ ಶಿಕ್ಷಣದ ವ್ಯಂಗಗಳನ್ನು ವರ್ಣಿಸಿದರು. ನಬಾಬ ಬಾಹದ್ದೂರರವರು ತಮ್ಮ ಭಾಷಣದಲ್ಲಿ ೨೮-೮-೧೯೧೯ನೇ ಇಸ್ವಿಯಲ್ಲಿ ಆ ವಿಶ್ವವಿದ್ಯಾಲಯವು ಸ್ಥಾಪನವಾದಾಗಿನಿಂದ ಅದು ಯಾವ ಧ್ಯೇಯವನ್ನಿಟ್ಟುಕೊಂಡಿರುತ್ತದೆಂಬುದನ್ನು ಹೇಳಿದರು. ಇಂಗ್ಲಿಷ ಭಾಷೆಗೆ ಅಲ್ಲಿ ಪ್ರಾಬಲ್ಯವಿಲ್ಲ. ಆದರೆ ಇಂಗ್ಲಿಷ ಭಾಷೆಯ ಜ್ಞಾನವನ್ನು ಹೊರಗೆ ಹಾಕಿಲ್ಲವೆಂದು ಅವರು ಹೇಳಿದರು. ಆದರೆ ಉರ್ದು ಭಾಷೆಯು ಹೈದ್ರಾಬಾದ ಸಂಸ್ಥಾನದ ಪ್ರಜೆಗಳ ಭಾಷೆಯಾಗಿರದಿದ್ದರೂ ಒತ್ತಾಯದಿಂದ ಅದನ್ನು ಕಲಿಯಲಿಕ್ಕೆ ಏಕೆ ಹಚ್ಚಬೇಕೆಂಬುದಕ್ಕೆ ಅವರ ಬಾಯಿಯಿಂದ ಏನೂ ಉತ್ತರ ದೊರೆಯಲಿಲ್ಲ. ಆ ವಿಶ್ವವಿದ್ಯಾಲಯದ ಭಾಷಾಂತರ ಕಮೀಟಿಯವರು ೩೦೦ಕ್ಕಿಂತ ಹೆಚ್ಚು ಪುಸ್ತಕಗಳನ್ನು ತಯಾರಿಸಿರುವರು. ಮೈಸೂರ ವಿಶ್ವವಿದ್ಯಾಲಯದವರು ಇದರಿಂದ ಬುದ್ಧಿ ಕಲಿಯಬೇಡವೆ? ಮೈಸೂರ ವಿಶ್ವವಿದ್ಯಾಲಯದಲ್ಲಿ ಕನ್ನಡ ಸಂಸ್ಕೃತಿ ಪೀಠವನ್ನಿಡುವ ಶ್ರೀ. ಎಸ್. ಜಿ. ಶಾಸ್ತ್ರಿಯವರ ಸೂಚನೆಯು ಮಂಜೂರಾಗಿರುವುದು ನಮ್ಮ ಕನ್ನಡಿಗರ ಭಾಗ್ಯವು. ನಿರ್ಣಯವಾಗುವುದೊಂದೇ ತಡ; ಮೈಸೂರಿನವರು ರಾವಬಾಹದ್ದೂರ ಆರ್. ನರಸಿಂಹಾಚಾರ್ಯರಿಂದ ಕನ್ನಡ ಸಂಸ್ಕೃತಿಯ ವಿಷಯವಾಗಿ ಕೆಲವು ಉಪನ್ಯಾಸವನ್ನು ಕೊಡಿಸಿ ಆ ಮಾರ್ಗದಲ್ಲಿ ಮುಂದಡಿಯನ್ನಿಟ್ಟಿರುವರು. ಕರ್ನಾಟಕ ಏಕೀಕರಣ ಸಭೆಯು ೨೮-೧೧-೨೬ ರಲ್ಲಿ ಧಾರವಾಡದಲ್ಲಿ ಕೂಡಿ, ಏಕೀಕರಣವ ಪತ್ರಿಕೆಗೆ ಒಂದು ಲಕ್ಷ ಸಹಿಗಳನ್ನು ಕೂಡಿಸುವುದೇ ಮುಂತಾದ ಠರಾವುಗಳನ್ನು ಮಾಡಿತು. ಕರ್ನಾಟಕ ವಿಶ್ವವಿದ್ಯಾಲಯ ಮಂಡಳದವರು ಯಾವತ್ತು ಹಾಯಸ್ಕೂಲ ಕಾಲೇಜುಗಳಲ್ಲಿ ಕನ್ನಡಿಗರ ಸಂಖ್ಯೆ ಎಷ್ಟಿರುತ್ತವೆಂಬಿವೇ ಮುಂತಾದ ಸಂಗತಿಗಳನ್ನು ಕಲೆಹಾಕುತ್ತಿರುವರು. ಕೆಲವು ಹಾಯಸ್ಕೂಲುಗಳು, ಮಂಡಳವು ಬೇಡಿದ ವಿವರಗಳನ್ನು ಕೊಡಲಿಕ್ಕೆ ಮೇಲಧಿಕಾರಿಗಳ ಪರವಾನಿಗೆಬೇಕೆಂದು,

ಹೇಳಿ ವಿವರಗಳನ್ನು ಕೊಡಲಿಲ್ಲವಾದುದರಿಂದ ಮಂಡಳದವರು ಡಾಯರೆಕ್ಟರ ಕಡೆಗೆ ಅರ್ಜಿ ಮಾಡಿದ ಪ್ರಕಾರ ಅವರಿಂದ ಈಗ ಪರವಾನಿಗೆಯು ದೊರೆತಿರುವುದು. ಕರ್ನಾಟಕ ಇತಿಹಾಸ ಮಂಡಳದ ಕಾರ್ಯವು ದಿನದಿನಕ್ಕೆ ಮುಂದುವರಿಯಹತ್ತಿದೆ. ಅಲ್ಹಾಬಾದಿನಲ್ಲಿ ೫ನೇ ನವ್ಹಂಬರ ದಿವಸ ಕೂಡಿದ ನಾಲ್ಕನೆಯ ಓರಿಯೆಂಟಲ್ ಕಾನ್ಫರನ್ಸಿಗೆ ಈ ಮಂಡಳದ ಪರವಾಗಿ ಶ್ರೀ. ವಿಷ್ಣು ಹರಿ ಒಡೇರ, ಬಿ. ಎ, ಎಲ್‌ಎಲ್., ಬಿ. ಎಮ್. ಆರ್. ಎ. ಎಸ್. ಇವರು ಪ್ರತಿನಿಧಿಗಳಾಗಿ ಹೋಗಿ ಪ್ರಬಂಧವನ್ನೋದಿದರು. ಮಂಡಳದವರು ಕರ್ನಾಟಕದಲ್ಲಿ ಸಂಶೋಧನದ ಶಾಖೆಯೊಂದನ್ನು ಸರಕಾರದವರಿಂದ ಸ್ಥಾಪಿಸಿಕೊಳ್ಳಲಿಕ್ಕೆ ಈಗ ಕೆಲವು ವರ್ಷಗಳಿಂದ ಪ್ರಯತ್ನಪಡುತ್ತಿರುವರು. ಸಂಶೋಧನ ಶಾಖೆಯು ಇನ್ನೂ ಸಿಕ್ಕಿರದಿದ್ದರೂ ಕರ್ನಾಟಕ ಕಾಲೇಜದಲ್ಲಿ ಆರ್ಕಿಯಾಲಾಜಿಕಲ್ ಮ್ಯುಝಿಯಮ್ (ಪುರಾತನ ವಸ್ತುಮಂದಿರ) ವನ್ನು ಇಡುವ ಆನಂದದ ಸುದಿ ಬಂದಿದೆ. ಇದರಿಂದ ಕರ್ನಾಟಕದ ಇತಿಹಾಸದ ಅಭ್ಯಾಸಕ್ಕೆ ಅನುಕೂಲವಾಗುವದು. ಮುಂಬಯಿ ವಿಶ್ವವಿದ್ಯಾಲಯದವರು ಈ ಮಂಡಳದ ಕಾರ್ಯಕ್ಕೆ ೫೦೦ ರೂಪಾಯಿ ಗ್ರಾಂಟನ್ನು ಕೊಡಬೇಕೆಂದು ಮಂಡಲವು ಕೇಳಿಕೊಂಡಿತ್ತು. ಆದರೆ, ಅದು ದೊರೆಯಲಿಲ್ಲ. ಮುಂಬಯಿ ವಿಶ್ವವಿದ್ಯಾಲಯದಲ್ಲಿ ಕರ್ನಾಟಕವನ್ನು ಕೇಳುವವರೇ ಇಲ್ಲ. ಬೆಂಗಳೂರಿನ ನ್ಯಾಶನಲ್ ಹಾಯಸ್ಕೂಲಿನ ಉತ್ಸಾಹಿಗಳಾದ ಚಾಲಕರ ಪರಿಶ್ರಮದಿಂದ ಅದರ ಹೊಸ ಕಟ್ಟಡವು ಮುಗಿದುದರಿಂದ ೧೮-೧೨-೨೬ ನೆಯ ದಿವಸ ದಿವಾಣರವರಿಂದ ಆ ಕಟ್ಟಡದ ಪ್ರಾರಂಭೋತ್ಸವವು ಜರುಗಿಸಲ್ಪಡುವುದು. ಕೊಡಗಿನಲ್ಲಿ ವೈದ್ಯಶಾಲೆಯೊಂದನ್ನೇರ್ಪಡಿಸುವುದು ಗೊತ್ತಾಗಿರುವುದ. ಪುಣೆಯಲ್ಲಿ ಕರ್ನಾಟಕದ ವಿದ್ಯಾರ್ಥಿಗಳು ೧೨-೧೨-೨೬ರಕ್ಕೆ ಡಾ. ನಾಡಗೇರ ಇವರ ಅಧ್ಯಕ್ಷತೆಯಲ್ಲಿ ತಮ್ಮ ಸಂಘದ ಉತ್ಸವವನ್ನು ಜರುಗಿಸಿದರು. ವೀರಶೈವ ಮಹಾಸಭೆಯು ಹುಬ್ಬಳ್ಳಿಯಲ್ಲಿ ಜನವರಿ ೧-೨-೩ ನೆಯ ತಾರೀಖುಗಳಲ್ಲಿ ರಾವಸಾಹೇಬ ಫಕೀರಪ್ಪಾ ಹಳಕಟ್ಟಿ, ಬಿ. ಎ. ಎಲ್‌ಎಲ್. ಬಿ., ಇವರ ಅಧ್ಯಕ್ಷತೆಯಲ್ಲಿ ಕೂಡುವುದು ಗೊತ್ತಾಗಿರುವುದು. ಹೈದ್ರಾಬಾದಿನ ಪ್ರಜೆಗಳು ಮುಂಬಯಿಯಲ್ಲಿ ೨೮-೧೧-೨೬ ನೆಯ ದಿವಸ ಸಭೆ ಕೂಡಿಸಿ, ಹೈದ್ರಾಬಾದಿನ ನವಾಬರು ಸಂಸ್ಥಾನದಲ್ಲಿ ಪ್ರಜೆಗಳಿಗೆ ರಾಜಕೀಯ ಹಕ್ಕುಗಳನ್ನು ಕೊಡಬೇಕೆಂದು ಕೇಳಿಕೊಂಡಿರುವರು. ಧಾರವಾಡ ಶಿವಮೊಗ್ಗೆ ಮುಂತಾದ ಸ್ಥಳಗಳಲ್ಲಿ ೩-೧೨-೨೬ನೆಯ ದಿವಸ ಧನ್ವಂತರೀ ಉತ್ಸವವು ಜರುಗಿಸಲ್ಪಟ್ಟು ಆಯುರ್ವೇದಕ್ಕೆ ಚಾಲನವು ದೊರೆತಿದೆ. ಅಮೇರಿಕೆಗೆ ವಿದ್ಯಾಭ್ಯಾಸಕ್ಕೆ ಹೋಗಿದ್ದ ಶ್ರೀ. ತುಮ್ಮಿನಕಟ್ಟಿಯವರು ಪಿ. ಎಚ್. ಡಿ. ಪದವಿಯನ್ನು ಪಡೆದು ತಿರುಗಿ ಬಂದಿರುವರು. ಅದೇ ಮೇರೆಗೆ ಮೈಸೂರಿನವರಾದ ಶ್ರೀ. ಎಚ್. ವ್ಹಿ. ವರದರಾಜ ಅಯ್ಯಂಗಾರ ಇವರು ಅಲ್ಹಾಬಾದಿನಲ್ಲಿ ನಡೆದ ಆಯ್. ಸಿ. ಎಸ್. ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ, ಇಂಗ್ಲಂಡಕ್ಕೆ ಹೋಗಿ ಈಗ ಅಲ್ಲಿಂದ ತಿರುಗಿ ಬಂದಿರುವರು. ಅವರು ಅಹಮ್ಮದಾಬಾದಿಗೆ ಅಸಿಸ್ಟಂಟ ಕಲೆಕ್ಟರರಾಗಿ ನೇಮಿಸಲ್ಪಟ್ಟಿರುವರು. ಕಾರವಾರದಲ್ಲಿ ಕೂಡಿದ ಕರ್ನಾಟಕ ಸಹಕಾರ ಕಾನ್ಫರನ್ಸದಲ್ಲಿ, ಸಹಕಾರ ಸಂಬಂಧದ ಹಲವು ಗೊತ್ತುವಳಿಗಳು ಮಂಜೂರು ಮಾಡಲ್ಪಟ್ಟವು. ಈ ಸಂಘಗಳು ದಿನದಿನಕ್ಕೆ ಉರ್ಜಿತಾವಸ್ಥೆಯನ್ನು ಹೊಂದುತ್ತಿರುವವು.



ಶ್ರೀ ವರದರಾಜ ಅಯ್ಯಂಗಾರರವರು. ಆಯ್. ಸಿ. ಎಸ್

ಉಡುಪಿಯಲ್ಲಿ ೨ ನೆಯ ಡಿಶೆಂಬರ ದಿವಸ ಶ್ರೀ. ವೆಂಕಟಾಚಲಮ್ ಚೆಟ್ಟಿಯವರ ಅಧ್ಯಕ್ಷತೆಯಲ್ಲಿ ಸಭೆಸೇರಿ ಹಿಂದೂಧರ್ಮಾದಾಯ ಕಾಯದೆಯನ್ನು ನಿಷೇಧಿಸುವ ಗೊತ್ತುವಳಿಗಳು ಮಾಡಲ್ಪಟ್ಟವು. ಹೀಗೆ ಹೋದ ತಿಂಗಳಲ್ಲಿಯ ಕರ್ನಾಟಕದ ಪ್ರಗತಿಯ ಇತಿಹಾಸವಿದೆ.

## ಜಗತ್ತಿನ ಸುದ್ದಿಗಳು.

ಇಂಗ್ಲಂಡದಲ್ಲಿ ಕೂಡಿದ ಸಾಮ್ರಾಜ್ಯ ಪರಿಷತ್ತಿನಲ್ಲಿ ಈಸಲ ಒಂದು ಮಹತ್ವದ ನಿರ್ಣಯವು ಮಾಡಲ್ಪಟ್ಟಿರುವುದು. ಅದೇನೆಂದರೆ ಕಾನಡಾ, ಸಾವುಥ ಆಫ್ರಿಕಾ ಆಸ್ಟ್ರೇಲಿಯಾ ಮುಂತಾದ ಬ್ರಿಟಿಶ್ ಸಾಮ್ರಾಜ್ಯದ ಶಾಖೆಗಳು ಇಂಗ್ಲಂಡದಷ್ಟೆ ಸ್ವತಂತ್ರವುಳ್ಳವು ಎಂಬುದು. ಅವು ತಮ್ಮ ಮನಸ್ಸಿಗೆ ಬಂದಂತೆ ಬ್ರಿಟಿಶರನ್ನು ಕೇಳದೆ ಯಾರೊಬ್ಬರ ಕೂಡ ಸಂಧಿವಿಗ್ರಹಗಳನ್ನು ಮಾಡಬಹುದು. ಇಂಗ್ಲಂಡಕ್ಕೆ ಹೇಗೆ ಜಾರ್ಜಬಾದಶಹರೋ ಹಾಗೆ ಆಯಾ ದೇಶಗಳಿಗೆ ಆಯಾ ಗವ್ಹರ್ನರರು ಸ್ವತಂತ್ರ ಅಧಿಕಾರಿಗಳು. ಕಾನಡಾದೇಶದವರು ಈ ಮುಂಚೆಯೇ ಬ್ರಿಟಿಶರನ್ನು ಕೇಳದೆ ಸಂಯುಕ್ತ ಸಂಸ್ಥಾನದಲ್ಲಿ ತಮ್ಮ ರಾಯಭಾರಿಗಳನ್ನು ಇಟ್ಟುಬಿಟ್ಟಿದ್ದರು. ಇದರಿಂದ ಇನ್ನು ಬ್ರಿಟಿಶ ಸಾಮ್ರಾಜ್ಯವೆಂಬುದು ನಾಮ-ಶೇಷಮಾತ್ರವಿರುತ್ತದೆಂದು ಹೇಳಲಿಕ್ಕೆ ಅಡ್ಡಿ ಇಲ್ಲ. ಆದರೆ ಇದರಿಂದ ಹಿಂದುಸ್ಥಾನಕ್ಕೆ ಮತ್ತಿಷ್ಟು ಹಾನಿಯಾಗಿದೆ. ಏಕೆಂದರೆ ಇನ್ನು ಮುಂದೆ ಸಾವುಥ ಆಫ್ರಿಕೆಯಲ್ಲಿ ಬ್ರಿಟಿಶರ ಆಟವೇನೂ ನಡಿಯುವಂತಿಲ್ಲ. ಅಂದಬಳಿಕ, ಇಲ್ಲಿಂದ ಆ ದೇಶಕ್ಕೆ ಹೋದ ಶಿಷ್ಯಮಂಡಳವು ಏನು ಉದ್ದು ಹುರಿಯಬೇಕು ? ಬ್ರಿಟಿಶರ ವರ್ಚಸ್ಸು ಹೀಗೆ ಯುರೋಪ ಅಮೇರಿಕಾ ಖಂಡದಲ್ಲಿ ಮಾತ್ರವೇ ಕಡಿಮೆಯಾಗಿರುವುದಿಲ್ಲ. ಚೀನದೇಶದವರು ಇಂಗ್ಲಂಡದ ಸರಕುಗಳಿಗೆ ಬಹಿಷ್ಕಾರ ಹಾಕಿರುತ್ತಾರೆ. ಚೀನ ದೇಶದಲ್ಲಿ ಯುರೋಪದ ಜನಾಂಗಗಳು ನಡೆಯಿಸಿರುವ ಅತ್ಯಾಚಾರಕ್ಕೆ ಎದೆಗೊಡುವುದನ್ನು ಚೀನದ ತರುಣರು ನಿಶ್ಚಯಿಸಿರುವರು. ಆದರೆ ಅಲ್ಲಿಯೂ ಯುರೋಪಿಯನ್ನರು ಒಡಕು ಹುಟ್ಟಿಸುವದಕ್ಕೆ ಪ್ರಯತ್ನಿಸಿರುವರು. ಆ ಮೂಲಕ ಚೀನದಲ್ಲಿ ಪಂಗಡಗಳಾಗಿ ಅವು ತಮ್ಮ ತಮ್ಮೊಳಗೆ ಯುದ್ಧಕ್ಕೆ ಪ್ರವರ್ತವಾಗಬಹುದೆಂದು ತೋರುತ್ತದೆ. ಬ್ರಿಟಿಶ ಅಧಿಕಾರಿಗಳು ಇಲ್ಲಿ ಅಮೃತಸರದಲ್ಲಿ ಹಿಂದಕ್ಕೆ ಅತ್ಯಾಚಾರವನ್ನು ನಡಿಸಿದಂತೆ ಅಲ್ಲಿಯೂ ನಡೆಯಿಸಿದರು. ವಾಸಿಸೆನ್ ಎಂಬಲ್ಲಿ ಚೀನ ಜನರ ಮೇಲೆ ಗುಂಡಿನ ಮಳೆಗರೆದು ಸಾವಿರಾರು ಜನರನ್ನು ಕೊಂದರು. ಅಮೇರಿಕೆಯವರು ಮಾತ್ರ ಚೀನ ದೇಶವನ್ನು ಆಕ್ರಮಿಸುವುದು ತಮ್ಮ ಉದ್ದೇಶವಿಲ್ಲವೆಂದು ಜಾಹೀರು ಮಾಡಿರುವುದರಿಂದ, ಅವರ ವಿಷಯಕ್ಕೆ ಚೀನ ಜನರಲ್ಲಿ ದ್ವೇಷ ಬುದ್ಧಿ ಇಲ್ಲ.

'ಕುಮಿನ್‌ಟಂಗ' ಎಂಬ ಚೀನದೇಶದ ತರುಣರ ರಾಷ್ಟ್ರೀಯ ಪಕ್ಷವು ಚೀನ ದೇಶವನ್ನು ಪರಕೀಯರ ದಬ್ಬಾಳಿಕೆಯಿಂದ ಮುಕ್ತಮಾಡುವ ಪ್ರತಿಜ್ಞೆಮಾಡಿರುವದು. ಚೀನಕ್ಕೆ ಜಪಾನದ ಸಹಾಯವು ಇಲ್ಲ. ರಶಿಯಾದವರು ಮಾತ್ರ ಅಲ್ಲಿ ವರ್ಚಸ್ವವುಳ್ಳವರಾಗಿರುವರು. ಅಮೇರಿಕೆಯಲ್ಲಿ ಈ ಸಾರೆ ಹತ್ತಿಯ ಬೆಳೆಯು ಬಹಳ ಚೆನ್ನಾಗಿ ಬರುವುದೆಂದು ಅನ್ನುತ್ತಾರೆ. ಈ ವರ್ಷ ೧೮೬೧೮೦೦೦ ಅಂಡಿಗೆ ಹತ್ತಿ ಹೊರಡುವುದೆಂದು ಅಂದಾಜು ಮಾಡಲ್ಪಟ್ಟಿದೆ. ಅಮೇರಿಕೆಯಲ್ಲಿ ಡಾ॰ ಆ್ಯನಿಬೆಝಂಟರು ತಾವು ಸಾಕಿದ ಕೃಷ್ಣಮೂರ್ತಿಯನ್ನು ಕರೆದುಕೊಂಡು ಹೋಗಿ ಈತನೇ ಈ ಕಾಲದ ಅವತಾರ ಪುರುಷನೆಂದು ಜಾಹೀರ ಮಾಡಿದರು. ಜಪಾನದವರು ಹಿಂದುಸ್ಥಾನದಲ್ಲಿ ತಮ್ಮ ಸರಕುಗಳನ್ನು ತುಂಬುತ್ತಿರುವರು. ಆ ದೇಶದ ಅರಸನಿಗೆ ಜಡ್ಡಾಗಿದ್ದು ಆತನು ಅತ್ಯಾವಸ್ಥೆಯಲ್ಲಿರುವನು.



# ಸಾಹಿತ್ಯಲೋಕ.

**ಸ್ವರಾಜ್ಯಡೈರಿ (೧೯೨೭):** —ಬೆಲೆ ೦–೧೨–೦ ಪ್ರತಿ ವರ್ಷದಂತೆ ಈ ವರ್ಷವೂ ಪಿ. ಎ. ಪೈ. ಬ್ರದರ್ಸ ಉಡುಪಿ ಇವರು ಇದನ್ನು ಪ್ರಕಾಶಿಸಿರುತ್ತಾರೆ. ಸಂಪಾದಕರಾದ ಶ್ರೀ. ದ. ಕೃ. ಭಾರದ್ವಾಜ ಇವರು ಉಪಯುಕ್ತ ರಾಜಕೀಯ ವಿಷಯಗಳನ್ನು ಸಂಗ್ರಹಿಸಿ ಕೊಟ್ಟಿರುತ್ತಾರೆ. ಈ ವರ್ಷ ಕರ್ನಾಟಕಕ್ಕೆ ಸಂಬಂಧಪಟ್ಟ ವಿಷಯಗಳು ಹೆಚ್ಚಿಗೆ ಬಂದಿವೆ.

**ಜಗತ್ಪಾವನ** ( ಮಾಸಪತ್ರಿಕೆ: — ವಾರ್ಷಿಕ ಚಂದಾ ೨–೦–೦ ಅಂಚೆವೆಚ್ಚ ಸಹಿತ ). ಇದು ಕುರುಬರ ಉನ್ನತಿ ಗೋಸ್ಕರ ಹೊರಟ ಪತ್ರಿಕೆ. ಶ್ರೀ. ಎಂ. ಎನ್. ಲಿಂಗಪ್ಪ ಎಂಬವರು ಇದಕ್ಕೆ ಸಂಪಾದಕರು. ಅವರು ಈಗ ಅನೇಕ ವರ್ಷಗಳಿಂದ ತಮ್ಮ ಸಮಾಜದ ಏಳ್ಗೆಗಾಗಿ ಹೆಣಗಾಡುತ್ತಿರುವರು. 'ಕುರುಬರ ಕೈಪಿಡಿ' 'ಆಚಾರ ಕಲಾನಿಧಿ' ಎಂಬಿವೇ ಮುಂತಾದ ಪುಸ್ತಕಗಳನ್ನು ಪ್ರಕಟಿಸಿರುವರು. ಇವರು ಕುರುಬರ ವಿಷಯದಲ್ಲಿಯೂ ಮಿಕ್ಕ ಅನೇಕ ಜಾತಿಗಳ ವಿಷಯದಲ್ಲಿಯೂ ಅನೇಕ ಐತಿಹಾಸಿಕ ಸಂಗತಿಗಳನ್ನು ಸಂಗ್ರಹಿಸಿರುವರಂತೆ. ಅವನ್ನು ಪ್ರಸಿದ್ಧಿಸುವವರಿದ್ದಾರೆ. ಕರ್ನಾಟಕದಲ್ಲಿ ಕುರುಬರ ಸಮಾಜವು ದೊಡ ಸಮಾಜವು. ಇದರಲ್ಲಿ ಚೈತನ್ಯವುಂಟಾಗುವುದು ಅವಶ್ಯವಿದೆ. ಈ ಜಗತ್ಪಾವನ ಪತ್ರಿಕೆಯು ಆ ಕಾರ್ಯವನ್ನು ಚೆನ್ನಾಗಿ ಮಾಡಬಹುದೆಂದು ನಂಬಿಗೆಯುಂಟು.

**ಶ್ರೀ. ವಿವೇಕಾನಂದರ ಚರಿತ್ರೆ** ( ಪದ್ಯಪುಸ್ತಕ: — ಪಾಂಡೇಶ್ವರ ಗಣಪತಿರಾವ್ ಕೃತ. ಬೆಲೆ ೦–೪–೦ ) ಕನ್ನಡದಲ್ಲಿ ಪದ್ಯದಲ್ಲಿ ಬರೆದ ಜೀವನಚರಿತ್ರೆಗಳು ಬಹಳ ಕಡಿಮೆ. ಈ ಪುಸ್ತಕದಲ್ಲಿ ಗ್ರಂಥಕರ್ತರು ಶ್ರೀ ವಿವೇಕಾನಂದರ ಚರಿತ್ರೆಯನ್ನು ಸುಲಭವಾದ ಭಾಮಿನಿಷಟ್ಪದಿಯಲ್ಲಿ ಕೊಟ್ಟಿರುವರು. ಅವರೂ ಇದರಂತೆಯೇ ಇನ್ನೂ ಅನೇಕ ಮಹನೀಯರ ಚರಿತ್ರೆಗಳನ್ನು ಬರೆದಿರುವರು. ಕನ್ನಡಿಗರು ಅವರಿಗೆ ಪ್ರೋತ್ಸಾಹನ ಕೊಡಬೇಕು. ಲೇಖಕರು ಮುಂದಿನ ಚರಿತ್ರಗಳಲ್ಲಿ ತಮ್ಮ ಕವಿತ್ವ ಪ್ರತಿಭೆಯನ್ನೂ ಚೆನ್ನಾಗಿ ತೋರ್ಪಡಿಸಬೇಕು.

**ಮನಬೋಧೆಯು**(ಲೇ. ಶ್ರೀ ನಾರಾಯಣ ಕಾಶೀನಾಥ ಕುಲಕರ್ಣಿ. ಚಿಲಕವಾಡ, ಬೆ. ೦–೪–೦)ಇದರಲ್ಲಿ ಮಹಾರಾಷ್ಟ್ರದಲ್ಲಿ ಪ್ರಸಿದ್ಧರಾದ ಶ್ರೀ ರಾಮದಾಸರ ಉಕ್ತಿಗಳು ಕನ್ನಡಿಸಲ್ಪಟ್ಟಿವೆ. ಭಾಷೆಯು ಸುಲಭವಾಗಿದೆ. 'ಮನಬೋಧೆ' ಎಂದು ಹೆಸರಿಡದೆ 'ಮನಸ್ಸಿಗೆ ಬೋಧೆ' ಎಂದು ಈ ಪುಸ್ತಕಕ್ಕೆ ಹೆಸರಿಟ್ಟಿದ್ದರೆ ಶುದ್ಧವೂ ಸ್ಪಷ್ಟವೂ ಆಗುತ್ತಿತ್ತು. ಪುಸ್ತಕಕ್ಕೆ ಪ್ರಸ್ತಾವನೆ ಬೇಕಾಗಿತ್ತು.

**विविध पद्यावल्याम् प्रथमो भाग:** —( ಗ್ರಂಥಕರ್ತರು: ಶ್ರೀ. ಶ್ಯಾಮಸುಂದರ ಪುಣೇಕರ ಬಿ. ಎಜಿ. ಧಾರವಾಡ) ಇದೊಂದು ಹೊಸ ಮಾದರಿಯ ಸಂಸ್ಕೃತ ಪದ್ಯಾವಳಿ ಪುಸ್ತಕವು. ಇದರಲ್ಲಿ, ಪವನಚಕ್ರ ಘಂಟೀಯಂತ್ರ, ವಕೀಲಿ, ಸೋಡಾಕಾರ್ಖಾನೆ, ಗೃಹೋದ್ಯಮ ಮುಂತಾದ ಅನೇಕ ವಿವಿಧ ವಿಷಯಗಳ ಮೇಲೆ ಗ್ರಂಥಕರ್ತರು ರಚಿಸಿದ ಬಿಡಿ ಕವಿತೆಗಳು ಮುದ್ರಿತವಾಗಿವೆ. ಸಂಸ್ಕೃತವು ನಮ್ಮ ಆರ್ಯ ಸಂಸ್ಕೃತಿಯ ಪ್ರಾಣವು. ಆರ್ಯ ಸಂಸ್ಕೃತಿಯು ಜೀವದಿಂದುಳಿಯಬೇಕಾದರೆ ಸಂಸ್ಕೃತ ಭಾಷೆಯು ಜೀವದಿಂದುಳಿಯಬೇಕು. ಅದು ಹಾಗೆ ಉಳದಿರುತ್ತದೆಂಬುದು, ಇಂದಿನವರೆಗೂ ಆ ಭಾಷೆಯಲ್ಲಿ ಹೊಸ ಹೊಸ ಗ್ರಂಥಗಳು ನಿರ್ಮಾಣವಾಗುತ್ತಲೇ ಇವೆ ಎಂಬುದರಿಂದ ಗೊತ್ತಾಗುವದು. ಗ್ರಂಥಕರ್ತರ ಸಂಸ್ಕೃತ ಶೈಲಿಯು ಮನೋಹರವೂ ಸರಳವೂ ಇದೆ. ವಿನೋದವು ಇವರ ಪಿತ್ರಾರ್ಜಿತ ಆಸ್ತಿಯೆಂದು ತೋರುತ್ತದೆ. ಗ್ರಂಥಕರ್ತರ ತಂದೆಯವರಾದ ಶ್ರೀ. ನರಸಿಂಹಾಚಾರ್ಯರು ವಿನೋದಪ್ರಿಯರಾಗಿದ್ದರೆಂಬುದು ಪ್ರಸಿದ್ಧವೇ ಇದೆ. ವಿನೋದವು ಈ ಪದ್ಯಾವಳಿಯಲ್ಲಿ ಚೆನ್ನಾಗಿ ಗೋಚರವಾಗುತ್ತಿದೆ. ವಿವೇಚನ ಪದ್ಧತಿ ಹೊಸ ಬಗೆಯದು. ಓದುವವರಿಗೆ ಬೇಸರವಾಗುವದಿಲ್ಲ. ಟಿಪ್ಪಣಿಗಳನ್ನು ಕೊಟ್ಟಿರುವದರಿಂದ ಬಾಲಕರಿಗೆ ಓದಲಿಕ್ಕೆ ಅನುಕೂಲ.

**ಶ್ರೀ. ಶಂಕರಾಚಾರ್ಯರ ಆಖ್ಯಾನ:** —(ಗ್ರ. ಹೊಸಕೆರಿ ಚಿದಂಬರಯ್ಯ ಪ್ರಕಾಶಕ. ಎನ್. ರಾಮರಾವ. ಬಸವನಗುಡಿ ಬೆಂಗಳೂರು. ಬೆ. ೦–೮–೦ ). ಈ ಪುಸ್ತಕದಲ್ಲಿ ಕನ್ನಡದಲ್ಲಿ ಉದ್ದಾಮ ಲೇಖಕರೂ ಕವಿಗಳೂ ಎಂದು ಕೀರ್ತಿ ಪಡೆದ ಶ್ರೀ. ಹೊಸಕೆರಿ ಚಿದಂಬರಯ್ಯನವರು ಶ್ರೀ. ಶಂಕರಾಚಾರ್ಯರ ಚರಿತ್ರೆಯನ್ನು ಕೀರ್ತನರೂಪವಾಗಿ ಬಣ್ಣಿಸಿರುವರು. ನಡನಡುವೆ ಭಕ್ತಿಗೀತಾವಳಿ, ವಿಜಯದಾಸರ ಪದ, ಅನುಭವಾಮೃತ, ಮಾಧವೀಯ ಶಂಕರ ವಿಜಯಮುಂತಾದವುಗಳಲ್ಲಿಯ ಅವತರಣಿಕೆಗಳನ್ನು ಹೊಂದಿಸಿ ಕೀರ್ತನವನ್ನು ರುಚಿಕಟ್ಟಾಗಿ ಮಾಡಿರುವರು. ಕೀರ್ತನಕಾರರು ಇಂಥ ಕೀರ್ತನ

ಳನ್ನು ಮಾಡಿದರೆ ಜನರಲ್ಲಿ ಭಕ್ತಿ ಹೆಚ್ಚುವುದೆಂಬುದಕ್ಕೆ ಸಂದೇಹವಿಲ್ಲ.

**ಸತ್ಯನಾರಾಯಣ ಕಥೆ:**—ಶ್ರೀ. ನರಸಿಂಹಾಚಾರ್ಯ ಪುಣೇಕರ (ಕಾವ್ಯಾನಂದ) ಇವರು ಸತ್ಯನಾರಾಯಣ ಕಥೆಯನ್ನು ಸುಲಭವಾದ ಕನ್ನಡ ಪದ್ಯಗಳಲ್ಲಿ ಹೇಳಿರುವರು. ಸಂಸ್ಕೃತವನ್ನರಿಯದವರು ಕೂಡ ಇದನ್ನಿಟ್ಟುಕೊಂಡು ಸತ್ಯನಾರಾಯಣ ಪೂಜೆಯನ್ನು ಸಾಗಿಸಬಹುದು. ಬೆ. ೦-೨-೦

**ಮಕ್ಕಳ ಪುಸ್ತಕ:**—(ಮಕ್ಕಳಿಗಾಗಿಯೇ ಹೊರಡುವ ಮಾಸಪತ್ರಿಕೆ. ಸ. ದ. ಕೃ. ಭಾರದ್ವಾಜ. ಪ್ರಕಾಶಕರು, ಕೃಷ್ಣ ಮತ್ರೂಕ. ಬಳೇಪೇಟೆ ಬೆಂಗಳೂರ ಸಿಟಿ. ವಾರ್ಷಿಕ ಚಂದಾ ೩-೦-೮). ಶ್ರೀ. ದ. ಕೃ. ಭಾರದ್ವಾಜರು ಸಾಹಸಿಗರು. ರಂಗಭೂಮಿಯೆಂಬ ಉತ್ಕೃಷ್ಟವಾದ ಮಾಸಪತ್ರಿಕೆಯನ್ನು ಅವರು ಈಗ ನಡಿಸುತ್ತಿರುವುದು ಎಲ್ಲರಿಗೂ ಗೊತ್ತೇ ಇದೆ. ಆದರೆ ಕನ್ನಡದಲ್ಲಿ ಚಿಕ್ಕಮಕ್ಕಳಿಗೋಸ್ಕರ ಮಾಸಪತ್ರಿಕೆಗಳಿದ್ದಿಲ್ಲ. ಮಕ್ಕಳಿಗೆ ವಿವಿಧ ವಿಷಯಗಳನ್ನು ಸುಲಭವಾಗಿ ಕಲಿಸುವುದಕ್ಕೆ ವಿಧವಿಧವಾದ ಚಿತ್ರಗಳನ್ನು ಕೊಟ್ಟಿರುವ ಇಂಥ ಪತ್ರಿಕೆಗಳು ಸಹಕಾರಿಯಾಗುತ್ತವೆ. ಈ ಮಾಸಪತ್ರಿಕೆಯಲ್ಲಿ ಮನೋಹರವಾದ ಚಿತ್ರಗಳು ಇವೆ; ಕಥೆಗಳು ಸುಲಭ ಭಾಷೆಯಲ್ಲಿ ಹೇಳಲ್ಪಟ್ಟಿವೆ. ನಗೆ ಮಾತುಗಳು ಬಂದಿವೆ. ಸಾರಾಂಶ ಎಲ್ಲ ರೀತಿಯಿಂದಲೂ ಈ ಪತ್ರಿಕೆಯು ವಾಚನೀಯವಾಗಿದೆ. ಭಿನ್ನ ಭಿನ್ನ ವಯಸ್ಸಿನ ಬಾಲಕರಿಗೆ ಸರಿಬೀಳುವಂತೆ ಈ ಪತ್ರಿಕೆಯಲ್ಲಿ ವಿಷಯಗಳನ್ನು ಕೊಡುವುದಕ್ಕೆ ಕನ್ನಡ ನಾಡಿನ ಲೇಖಕರು ಸಂಪಾದಕರಿಗೆ ಸಹಾಯ ಮಾಡಬೇಕು. ಗಹನ ಲೇಖಗಳನ್ನು ಬರೆಯುವುದಕ್ಕಿಂತಲೂ ಸುಲಭ ಲೇಖಗಳನ್ನು ಬರೆವುದು ಒಂದು ರೀತಿಯಲ್ಲಿ ಹೆಚ್ಚು ಕಠಿಣ. ಈ ಪತ್ರಿಕೆಗೆ ಕನ್ನಡಿಗರು ಅವಶ್ಯ ಪ್ರೋತ್ಸಾಹನವನ್ನು ಕೊಡುವರೆಂದು ನಂಬಿದ್ದೇವೆ.

**ಇಂಗ್ಲಿಷ್ ಗೀತಗಳು:**—(ಗ್ರ—ಬಿ. ಎಂ. ಶ್ರೀಕಂಠಯ್ಯ. ಪ್ರಕಾಶಕರು. ಕರ್ಣಾಟಕ ಸಂಘ ಬೆಂಗಳೂರು). ಇದೊಂದು ಅಪೂರ್ವವಾದ ಗ್ರಂಥ. ಕನ್ನಡದಲ್ಲಿ ಅಸಾಮಾನ್ಯ ಪಂಡಿತರಾದ ಶ್ರೀ. ಬಿ. ಎಂ. ಶ್ರೀಕಂಠಯ್ಯನವರು ಶೇಕ್ಸಪೀಯರ್, ವರ್ಡವರ್ಥ, ಶೆಲೀ ಸ್ಕಾಟ, ಟೆನಿಸನ್ ಮುಂತಾದ ಇಂಗ್ಲಿಷ್ ಕವಿಗಳ ಉತ್ಕೃಷ್ಟವಾದ ಕವಿತೆಗಳನ್ನು ರಸಾಳವಾದ ಕನ್ನಡದಲ್ಲಿ ಭಾಷಾಂತರಿಸಿರುವರು. ಅಲ್ಲದೆ ಭರತಭೂಮಿ ಮತ್ತು ಮೈಸೂರು ಇವುಗಳ ವಿಷಯವಾಗಿ ತಾವೇ ರಚಿಸಿದ ಪದಗಳನ್ನೂ ಕೊಟ್ಟಿರುವರು. ಕರ್ನಾಟಕದ ವಿಷಯವಾಗಿಯೂ ಗ್ರಂಥಕರ್ತರು ಒಂದು ಪದವನ್ನು ಬರಿದಿದ್ದರೆ ಲೇಸಾಗುತ್ತಿತ್ತು. ಏಕೆಂದರೆ, ಭಾವೀ ಸ್ವರಾಜ್ಯದಲ್ಲಿ, ಇಡೀ ಕರ್ನಾಟಕವು ಒಂದು ದೇಶವು. ಆಡಳಿತದ ದೃಷ್ಟಿಯಿಂದ ಈಗ ಮೈಸೂರ ದೇಶವು ಭಿನ್ನವಾಗಿದ್ದರೂ ಸಂಸ್ಕೃತ ದೃಷ್ಟಿಯಿಂದ ಇಡೀ ಕನ್ನಡ ನಾಡು ಒಂದೇ ಎಂಬ ಭಾವನೆಯು ಮೈಸೂರಿನ ತರುಣರಲ್ಲಿಯೂ ಈಗ ಉದಯವಾಗಿದೆ. ಈ ಗ್ರಂಥದ ಕವಿತೆಗಳನ್ನೋದಿದರೆ, ಕನ್ನಡ ಭಾಷೆಯು ಬಿರುಸಾದ ಭಾಷೆಯೆಂಬ ತಪ್ಪುತಿಳವಳಿಕೆಯು ಸಹಜವಾಗಿ ಮಾಯವಾಗುವುದು. ಇಂಗ್ಲಂಡ ನಾವಿಕರು, ಆಳೌ ಬ್ರಿಟಾನಿಯಾ. ಇಂಗ್ಲೆಂಡ್ ಬ್ಲೆನ್‌ಹೀವ್‌ಕದನ ಮುಂತಾದ ಕೆಲವು ಕವಿತೆಗಳ ಭಾವವು ಆ ಇತಿಹಾಸದ ಜ್ಞಾನವಿಲ್ಲದ ಮತ್ತು ಇಂಗ್ಲಿಷ್ ಬಾರದಿದ್ದ ಜನರಿಗೆ ಚೆನ್ನಾಗಿ ತಿಳಿಯಲಾರದು. ಆದರೆ ಇಂಥ ಕವಿತೆಗಳು ತೀರ ಸ್ವಲ್ಪ; ಮಿಕ್ಕವುಗಳು ಇಂಗ್ಲಿಷ ಬಾರದಿದ್ದವರಿಗೂ ತಿಳಿಯುವಂತಿವೆ. ಕನ್ನಡಿಗರೆಲ್ಲರೂ ಈ ಪುಸ್ತಕವನ್ನು ಅವಶ್ಯವಾಗಿ ಸಂಗ್ರಹಿಸಬೇಕೆಂದೂ ಅದನ್ನು ಮೇಲೆ ಮೇಲೆ ಪಾರಾಯಣಬೇಕೆಂದೂ ನಾವು ಒತ್ತಿ ಒತ್ತಿ ಹೇಳುತ್ತೇವೆ.

**ಉಪನಿಷತ್—ಪ್ರಕಾಶವು:**—(ಭಾಗ ೨ ಗ್ರ. ರಂಗನಾಥ ರಾಮಚಂದ್ರ ದಿವಾಕರ ಧಾರವಾಡ ಬೆ- ೦-೧೨-೦) ದೇ. ರಂಗನಾಥ ದಿವಾಕರ ಇವರು ಬರೆದ ಉಪನಿಷತ್—ಪ್ರಕಾಶದ ೧ನೇ ಭಾಗವು ಈ ಮುಂಚೆ ಪ್ರಸಿದ್ಧವಾಗಿ ಕನ್ನಡಿಗರ ಕೈಯಲ್ಲಿ ಬಂದಿರುವುದು. ಇದು ಎರಡನೇ ಭಾಗವು. ಇದರಲ್ಲಿ ಮುಂಡಕ ಐತರೇಯ, ತೈತ್ತರೀಯ ಉಪನಿಷತ್ತುಗಳು ಭಾಷಾಂತರ ಸಹಿತವಾಗಿ ಪ್ರಕಟಿಸಲ್ಪಟ್ಟಿರುವವು. ಶ್ರೀ. ರಂಗನಾಥರಾಯರು ಈ ಭಾಗದಲ್ಲಿ ೬೪ ಪುಟಗಳದೊಂದು ದೊಡ್ಡ ಪ್ರಸ್ತಾವನೆಯನ್ನು ಬರೆದು ಅದರಲ್ಲಿ ಆರ್ಯ ಸಂಸ್ಕೃತಿಯೂ ಮಿಕ್ಕ ಸಂಸ್ಕೃತಿಗಳೂ, ವೇದಾಂತದ ದುರುಪಯೋಗ, ವೇದಾಂತ ಮತ್ತು ವ್ಯವಹಾರ, ಮುಕ್ತಿಯ ಕಲ್ಪನೆ, ಆತ್ಮಸುಖ ಮುಂತಾದ ವಿಷಯಗಳನ್ನು ಸಾಮಾನ್ಯರಿಗೂ ಕೂಡ ವಿಶದವಾಗಿ ತಿಳಿಯುವಂತೆ ಚರ್ಚಿಸಿರುವರು. ವೇದಗಳ ವಿಷಯಕ್ಕೆ ಪಾಶ್ಚಾತ್ಯರ ತಪ್ಪುತಿಳವಳಿಕೆಯನ್ನು ಖಂಡಿಸಿರುವರು; ಮುಂದೆ ಉಪನಿಷತ್ತುಗಳ ಬಗ್ಗೆ ತಮಗೆ ತೋರಿದ ಸಿದ್ಧಾಂತಗಳಾವುವೆಂಬುದನ್ನು ಹೇಳಿರುವರು. ಶ್ರೀ. ರಂಗನಾಥರಾಯರ ಮುಖ್ಯ ಸಿದ್ಧಾಂತವೇನೆಂದರೆ—ಮೂಲ ವಸ್ತುವು ಒಂದೇ ಒಂದು. ಏನಿದ್ದದ್ದೆಲ್ಲ, ಆದದ್ದೆಲ್ಲ, ಹೋದದ್ದೆಲ್ಲ ಚಿನ್ಮಯ ಆತ್ಮನು. ಅವನು ಅನಂತ ಗುಣನೂ ಅನಂತ ಶಕ್ತಿಯೂ ಇರುವನು. ಸ್ವಸಂಕಲ್ಪದಿಂದ ತನ್ನ ಚಿತ್ಶಕ್ತಿಯ ಪ್ರಸರಣದಿಂದ ಈ ವಿಶ್ವವನ್ನು

ತನ್ನ ಲೀಲೆಗಾಗಿ ನಿರ್ಮಿಸಿದನು. ತಾನು ಚೈತನ್ಯಾಂಶನಾಗಿ ಭೋಕ್ತೃರ್ವೆಂದು ಜೀವರೂಪದಿಂದ ಪ್ರಾಣಿ ಶರೀರಗಳಲ್ಲಿ ಪ್ರವೇಶಿಸಿ ಇಂದ್ರಿಯಗಳ ದ್ವಾರಾ ವಿಷಯ ವಿಶ್ವವನ್ನು ಭೋಗಿಸಿರುವನು. ಇದು ಉಪನಿಷತ್ತಿನ ಸಾರವೆಂದು ಅವರ ಸಿದ್ಧಾಂತ. ಇದು ಈಗಿನ ಯಾವ ಮತಕ್ಕೂ ಸಂಪೂರ್ಣ ಹೊಂದುವುದಿಲ್ಲ. ಆದರೆ ಇದು ಅವರವರ ವಿಶ್ವಾಸದ ಮತ್ತು ಅನುಭವದ ಪ್ರಶ್ನೆ. ಇರಲಿ.

ಇತ್ತೀಚಿನ ತರುಣರಲ್ಲಿ ವೇದಾಂತಶಾಸ್ತ್ರದ ವಿಷಯಕ್ಕೆ ೧ ತಿರಸ್ಕಾರವು ಇರುತ್ತದೆ. ಆ ತಿರಸ್ಕಾರವನ್ನು ತೆಗೆಯುವುದಕ್ಕೆಶ್ರೀ. ರಂಗನಾಥರಾಯರಂಥವರು ಸ್ವತಃ ಕೈಲಾದಮಟ್ಟಿಗೆ ಅಧ್ಯಾತ್ಮಶಾಸ್ತ್ರದ ಅನುಭವವನ್ನು ತೆಗೆದುಕೊಂಡು ಉತ್ತರವನ್ನು ಕೊಟ್ಟಿರುವದು ವಿಹಿತವಾಯಿತು. ಅವರು ಅಂತಸ್ಫೂರ್ತಿಯಿಂದ ಈ ಪುಸ್ತಕವನ್ನು ಬರೆದಿರುವುದರಿಂದ, ಭಾಷೆಯು ಧಾರಾಳವಾಗಿ ಇಳಿದಿದೆ. ಉಪನಿಷತ್ತಿನ ಭಾಷಾಂತರದ ಪುಸ್ತಕಗಳು ಕನ್ನಡದಲ್ಲಿ ಇದ್ದಿಲ್ಲ. ಆ ಕೊರತೆಯನ್ನು ಈ ಪುಸ್ತಕಗಳು ದೂರಮಾಡಿವೆ. ಮೊದಲನೇ ಭಾಗದ ಪುಸ್ತಕಗಳು ಈಗಾಗಲೇ ಬಹುಶ, ತೀರಿಹೋಗಿರುವವೆಂಬ ಒಂದು ಮಾತಿನಿಂದ ಕನ್ನಡಿಗರು ಇವರ ಪುಸ್ತಕವನ್ನು ಹೇಗೆ ಸತ್ಕರಿಸಿರುವರೆಂಬುದು ಗೊತ್ತಾಗುತ್ತದೆ. ಈ ಭಾಗಕ್ಕೂ ಅವರು ಆಶ್ರಯವನ್ನು ಕೊಟ್ಟೇ ಕೊಡುವರೆಂದು ನಂಬಿಗೆಯುಂಟು.

**ಭಾರತೀಯರ ಇತಿಹಾಸ:**– (ಲೇ. ಶ್ರೀ. ನಾರಾಯಣ ಶರ್ಮಾ ಕರ್ನಾಟಕ ರಾಷ್ಟ್ರೀಯ ಶಿಕ್ಷಣ ಸಮಿತಿಯಿಂದ ಪ್ರಕಟಿತವಾದುದು. ಬೆಲೆ. ೨–೮–೦ ) ಈ ಪುಸ್ತಕದಲ್ಲಿ ವೇದಕಾಲದಿಂದ ಕಿ. ಶ. ೮೦೦ರ ವರೆಗಿನ ಇತಿಹಾಸವು ಕೊಡಲ್ಪಟ್ಟಿದೆ. ಗ್ರಂಥಕರ್ತರು ಮೊದಲು ಭರತಭೂಮಿಯ ಪ್ರಾಕೃತಿಕ ಸ್ವರೂಪವನ್ನು ಕೊಟ್ಟು ಮಾನವನ ಜನ್ಮಭೂಮಿ ಯಾವುದು, ಬ್ರಾಹ್ಮಣಗಳೂ ಉಪನಿಷತ್ತುಗಳೂ, ರಾಮಾಯಣ ಕಾವ್ಯ, ಶ್ರೀ ಮಹಾಭಾರತ, ಬೌದ್ಧಕಾಲ ಮೌರ್ಯರ ಆಳಿಕೆ; ಹಿಂದೂ ದೇಶಕ್ಕೆ ಅರಬರ ದಾಳಿ ಮುಂತಾದ ವಿಷಯಗಳನ್ನು ವಿಸ್ತಾರವಾಗಿ ಕೊಟ್ಟಿರುವರು. ಶ್ರೀ. ನಾರಾಯಣ ಶರ್ಮಾ ಇವರು ನುರಿತ ಲೇಖಕರು. ಆದಕಾರಣ, ಇವರ ಭಾಷೆಯಲ್ಲಿ ಓಜಸ್ವಿತೆಯಿರುವುದು. ಸ್ಫೂರ್ತಿಯಿಂದ ತುಂಬಿದ ಇವರ ಲೆಕ್ಕಣಿಕೆಯು ತಡೆಯಿಲ್ಲದೆ ಓಡಿರುವುದು. ಈಗಿನ ಇಂಗ್ಲಿಷ ಶಾಲೆಗಳಲ್ಲಿ ಹಚ್ಚುವ ಇತಿಹಾಸವು ಸ್ವತ್ವವನ್ನು ಕೊಲ್ಲುವದು, ನಮ್ಮ ದೇಶದ ವಿಷಯುವಾಗಿ ತಿರಸ್ಕಾರ ಬುದ್ಧಿಯನ್ನು ಮಾತ್ರ ಹುಟ್ಟಿಸುವುದು. ಆದರೆ ಇದು ಹಾಗಲ್ಲ. ತದ್ವಿರುದ್ಧ ಭಾವನೆಗಳನ್ನು ಹುಟ್ಟಿಸುವುದು. ರಾ|| ಶರ್ಮಾ ಇವರು ಐತಿಹಾಸಿಕ ಪಾಂಡಿತ್ಯವನ್ನು ಇದರಲ್ಲಿ ತೋರಿಸಿಲ್ಲವೆಂಬುದು ನಿಜ. ಅಥವಾ ಅನೇಕ ಭಿನ್ನ ಭಿನ್ನ ಸಿದ್ಧಾಂತಗಳನ್ನು ತುಲನಾತ್ಮಕವಾಗಿ ಚರ್ಚಿಸಿಯೂ ಇಲ್ಲ. ಆದರೂ ಇವರ ಪುಸ್ತಕದಿಂದ ಬಾಲಕರಲ್ಲಿ ನಮ್ಮ ಜನರ ವಿಷಯುವಾಗಿ ತಿರಸ್ಕಾರ ಬುದ್ಧಿಯು ಹುಟ್ಟುವುದಿಲ್ಲವೆಂಬುದೇನೂ ಕಡಿಮೆಯಲ್ಲ. ವಿರುದ್ಧ ಸಂಸ್ಕಾರಗಳಿಂದ ಆಹತವಾಗಿರುವ ಈಗಿನ ಬಾಲಕರಿಗಂತೂ ಇಂಥ ಪುಸ್ತಕಗಳ ಆವಶ್ಯಕತೆಯು ಬಹಳೇ ಇರುತ್ತದೆ. ಉತ್ತಮವಾದ ಮುದ್ರಣ ಮತ್ತು ಚಿತ್ರಗಳಿಂದೊಡಗೂಡಿದ ಈ ಪುಸ್ತಕಕ್ಕೆ ಎಲ್ಲರೂ ಆಶ್ರಯಕೊಡಬೇಕು. ಬೆಲೆ ಮಾತ್ರ ಸ್ವಲ್ಪಹೆಚ್ಚು.

**The Yekantin Part I.** (ಇದು ಶ್ರೀ. ಕೃಷ್ಣರಾವ ಬೆಳಗಾಂವಕರ ಇವರು ರಾಣೆಬೆನ್ನೂರಿನ ಏಕಾಂತಮತದ ಪರವಾಗಿ ಪ್ರಕಾಶಿಸಿದ ಪುಸ್ತಕವು. ಇದರಲ್ಲಿ ಶ್ರೀ ಮಧ್ವಾಚಾರ್ಯರ ಬ್ರಹ್ಮಸೂತ್ರ ಭಾಷ್ಯವು ತತ್ವಪ್ರಕಾಶ ಮುಂತಾದ ಟೀಕೆಗಳ ಸಹಿತವಾಗಿ ಇಂಗ್ಲಿಷಿನಲ್ಲಿ ಏಕಾಂತಪಾದ ವೈಷ್ಣವ ಎಂಬವರಿಂದ ಭಾಷಾಂತರಿಸಲ್ಪಟ್ಟಿವೆ. ಮೊದಲನೆಯ ಬಾಗದಲ್ಲಿ ೧೨ ಅಧಿಕಾರಣಗಳು ಬಂದಿವೆ. ಶ್ರೀ ಮಧ್ವಾಚಾರ್ಯರ ಮತ ತತ್ವಗಳನ್ನು ಜಗತ್ತಿಗೆ ಅರುಹುದೇ ಈ ಮಠದ ಮುಖ್ಯ ಉದ್ದೇಶ. ಇಂಗ್ಲಿಷ ಭಾಷೆಯಲ್ಲಿ ನಮ್ಮ ಮತ ತತ್ವಗಳನ್ನರುಹುದು ಬಹಳ ಕಠಿಣ ಕೆಲಸ. ವೇದಾಂತ ವಿಚಾರಗಳನ್ನು ಸರಿಯಾಗಿ ತಿಳಿಪಡಿಸುವದಕ್ಕೆ ಇಂಗ್ಲಿಷ ಭಾಷೆಯಲ್ಲಿ ಶಬ್ದಗಳು ಸಿಗುವುದಿಲ್ಲ. ಅಲ್ಲದೆ, ನಮ್ಮ ವಿಷಯ ವಿವೇಚನ ಪದ ತಿಯೂ ಭಿನ್ನವಾಗಿದೆ. ಆದುದರಿಂದ ಇಂಗ್ಲಿಷಿನಲ್ಲಿ ಪಾಂಡಿತ್ಯವನ್ನು ಪಡೆದವರಿಗೆ ಕೂಡ ಈ ವಿಷಯವನ್ನು ಸರಿಯಾಗಿ ತಿಳಿಸುವದು ಚೆನ್ನಾಗಿ ಸಾಧಿಸುವುದಿಲ್ಲ. ಶ್ರೀ. ಏಕಾಂತಪಾದ ವೈಷ್ಣವರು ಮಧ್ವಾಚಾರ್ಯರಲ್ಲಿ ತುಂಬಾ ಭಕ್ತಿಯುಳ್ಳವರು, ತರುಣರಾದರೂ ಬ್ರಹ್ಮಚರ್ಯದಿಂದಿದ್ದು ಶ್ರೀ ಮಧ್ವಾಚಾರ್ಯರ ಗ್ರಂಥಗಳನ್ನು ಅಭ್ಯಾಸಮಾಡುವುದರಲ್ಲಿಯೇ ಕಾಲಕಳೆಯತಕ್ಕವರು. ಈ ಪುಸ್ತಕದಲ್ಲಿ ವಿಷಯವನ್ನು ಸುಲಭವಾಗಿ ತಿಳಿಸುವದಕ್ಕೆ ಅವರು ಶ್ರಮಪಟ್ಟಿದ್ದಾರೆ. ಪರಮತೀಯರು ಶ್ರೀ, ಮಧ್ವಾಚಾರ್ಯರ ಗ್ರಂಥಗಳನ್ನು ಅಭ್ಯಾಸಮಾಡುವುದಕ್ಕೆ ಈ ಪುಸ್ತಕದಿಂದ ಸಹಾಯವಾಗುತ್ತದೆ. ಆದರೆ, ಇಂಥ ಗ್ರಂಥಗಳನ್ನು ಕೇವಲ ಭಾಷಾಂತರ ರೂಪವಾಗಿ ಮುದ್ರಿಸದೆ, ಸ್ವತಂತ್ರ ಪ್ರಬಂಧರೂಪವಾಗಿ ಬರೆದರೆ ಸಾಮಾನ್ಯತ, ಓದುವವರಿಗೆ ಹೆಚ್ಚಿಗೆ ಅನುಕೂಲವಾಗುವುದೆಂದು ನಮಗೆ ತೋರುತ್ತಿದೆ.

ವೈಷ್ಣವರೂ ವೇದಾಂತದ ಅಭಿರುಚಿಯುಳ್ಳ ಅನ್ಯಮತೀಯರೂ ಇವರಿಗೆ ಉತ್ತೇಜನಕೊಟ್ಟು ಅವರಿಂದ ಶ್ರೀ. ಮಧ್ವಾಚಾರ್ಯರ ವಿಚಾರಗಳನ್ನು ಜಗತ್ತಿನ ಮುಂದಿಡುವ ಕಾರ್ಯವನ್ನು ಮಾಡಿಸಿಕೊಳ್ಳಬೇಕಾಗಿ ಸೂಚನೆ.

**Indian Huminitarian**(ಮುಂಬಯಿ ಹ್ಯುಮೆನಿಟೇರಿಯನ್ ಲೀಗದಿಂದ ಹೊರಡುವ ಮಾಸಪತ್ರಿಕೆ. ವಾರ್ಷಿಕ ಚಂದಾ ಮೆಂಬರ ಜನರಿಗೆ ೧-೦-೦ ಇತರರಿಗೆ ೨-೦-೦) ಪ್ರಾಣಿ ಹಿಂಸೆಯನ್ನು ನಿಲ್ಲಿಸುವದೇ ಈ ಸಂಸ್ಥೆಯ ಉದ್ದೇಶ. ಮೈಲೀ ತೆಗೆಯುವುದು ಅನಿಷ್ಟಕಾರಕವಾದುದೆಂದು ಈ ಸಂಸ್ಥೆಯವರ ಅಭಿಪ್ರಾಯ. ಪ್ರಾಣಿ ಹಿಂಸೆಯು ಮಿತಿಮೀರಿ ನಡೆದಿರುವ ಈಗಿನ ದಿವಸಗಳಲ್ಲಿ ಇಂಥ ಮಾಸಪತ್ರಿಕೆಗಳ ಅವಶ್ಯಕತೆಯು ಬಹಳವಿದೆ.

**ಸಂಸಾರವೆಂಬರೆ ಸೂಜಿಗಲ್ಲು**
**ಕಾಣದ ಕೈ**
**ಮದುವೆಯಲ್ಲ ಮಾರಿಗೆಬಲಿ** } ಇವು ಮೂರೂ ಗೆಳೆಯರ ಗುಂಪಿನಿಂದ ಹೊರಡುವ ಸ್ವಧರ್ಮ ಕಥಾಮಾಲೆಯ ೨-೩-೪ ನೆಯ ಅರಳುಗಳು. ಈ ಕಥೆಗಳು ಆನಂದ ಕಂದನಿಂದ ಬರೆಯಲ್ಪಟ್ಟಿರುವವು. ಮೊದಲನೇ ಕಥೆಯಲ್ಲಿ ಗೋಪಾಳನೆಂಬವನು ಮೊದಲು ಲಗ್ನಮಾಡಿಕೊಳ್ಳಲಿಕ್ಕೆ ಒಲ್ಲೆನೆನ್ನುವನು, ಆದರೆ ಸಂಸಾರವೆಂಬುದು ಸೂಜಿಗಲ್ಲಿನಂತೆ ಆತನನ್ನೆಳೆದು ಲಗ್ನಮಾಡಿಸುವುದು. ಕಾಣದಕೈ, ಎಂಬ ಕಥೆಯಲ್ಲಿ ಗಂಡನು ತನ್ನ ಹೆಂಡತಿಯ ವಿಷಯವಾಗಿ ಸಂದೇಹಗೊಳ್ಳುವನು. ಮುಂದೆ ದೈವವು ಅದನ್ನು ದೂರಮಾಡಿಸುವುದು. 'ಅನಾಥಬಂಧು'ವಿನಲ್ಲಿ ಒಬ್ಬ ಬಡವಳಿಗೆ ತನ್ನ ಮಗಳಿಗೆ ವರದಕ್ಷಿಣೆ ಕೊಡಲಿಕ್ಕೆ ಸಹ ಹಣವಿದ್ದಿಲ್ಲ. ಆಗ ಚಿಕ್ಕವಳಿರುವಾಗ ಅವಳೊಡನೆ ಆಡಿದ ಒಬ್ಬ ಗೆಳೆಯನು ಅವಳಿಗೆ ಹಣದ ಸಹಾಯಮಾಡುತ್ತಾನೆ. ಆನಂದಕಂದನ ಕನ್ನಡ ಭಾಷೆಯು ಸರಳವೂ ಮನೋಹರವೂ ಆಗಿದೆ. ವರ್ಣನಾಶೈಲಿಯು ಚೆನ್ನಾಗಿದೆ. ನಡು ನಡುವೆ ಸಮಾಜದ ದೋಷಗಳ ಮೇಲೆಯೂ ಉತ್ತರ ರಾಮಚರಿತ್ರೆ ಮುಂತಾದ ಕನ್ನಡ ಗ್ರಂಥಗಳ ಮೇಲೆಯೂ ಟೀಕೆಯು ಬಂದಿರುವುದು. ಆನಂದ ಕಂದನು ಇದಕ್ಕೂ ಹೆಚ್ಚು ಸ್ವಾರಸ್ಯವುಳ್ಳ ಸಂದರ್ಭಗಳನ್ನಾರಿಸಿಕೊಂಡು ಅವುಗಳಿಗೆ ತನ್ನ ಕವಿತ್ವದ ಬಣ್ಣಕೊಟ್ಟು ಕನ್ನಡಿಗರನ್ನು ಆನಂದಗೊಳಿಸಲಿ.

**ಗುರುಧರ್ಮನಿರೂಪಣೆ:—** ಗ್ರಂಥಕರ್ತ ವೀರಪ್ಪ ಬಸನಪ್ಪ ಬಿಳಿಅಂಗಡಿ ಬಿ. ಎ., ಎಲ್‌ಎಲ್. ಬಿ. ಹುಬ್ಬಳ್ಳಿ. ಬೆ. ೧-೦-೦) ಇದರಲ್ಲಿ ಗ್ರಂಥಕರ್ತರು ನಿಜವಾದ ಗುರುಗಳು ಯಾರು? ಅವರ ಧರ್ಮವೇನು? ಇವೇ ಮುಂತಾದ ವಿಷಯಗಳನ್ನು ಸ್ಪಷ್ಟವಾಗಿಯೂ ಹೃದಯಂಗಮವಾಗಿಯೂ ವರ್ಣಿಸಿರುವರು. ಈಪುಸ್ತಕವು ಮುಖ್ಯತಃ ವೀರಶೈವ ಗುರುಗಳ ಸಂಬಂಧವಾಗಿಯೇ ಬರೆಯಲ್ಪಟ್ಟಿದ್ದರೂ ಇದರೊಳಗಿನ ಅನೇಕ ವಿಷಯಗಳು ಮಿಕ್ಕ ಮತಗಳ ಗುರುಗಳಿಗೂ ಅನ್ವಯಿಸುತ್ತಿರುವುದರಿಂದ ವೀರಶೈವರು ಮಾತ್ರವೇ ಅಲ್ಲ, ಎಲ್ಲ ಜಾತಿಯವರೂ ಈ ಪುಸ್ತಕವನ್ನೋದಿ, ಇದರೊಳಗಿನ ವಿಷಯಗಳನ್ನು ಮನನಮಾಡತಕ್ಕದ್ದು. ವೀರಶೈವಗುರುಗಳಿಗೆ ಆರಾಧ್ಯರೆಂತಲೂ ಆಚಾರ್ಯರೆಂತಲೂ ಪರ್ಯಾಯನಾಮಗಳುಂಟು. ಗುರುಪೀಠಕ್ಕೆ ಯೋಗ್ಯರಾದವರನ್ನೇ ಆರಿಸಬೇಕೆಂದೂ ವೀರಶೈವರಲ್ಲಿ ಜಾತಿಭೇದವಿಲ್ಲವಾದುದರಿಂದ ವೀರಶೈವರಲ್ಲಿ ಒಳಜಾತಿಗಳನ್ನು ಕಲ್ಪಿಸುವದು ಅಯೋಗ್ಯವೆಂತಲೂ ಪ್ರತಿಯೊಬ್ಬ ವೀರಶೈವನು ಗುರುಸ್ಥಲಕ್ಕೆ ಅರ್ಹನೆಂತಲೂ ಪ್ರತಿಪಾದಿಸಿದ್ದಾರೆ. ಮತ್ತು ತಮ್ಮ ಅಭಿಪ್ರಾಯಗಳಿಗೆ ವಚನಗಳ ಆಧಾರವನ್ನು ಕೊಟ್ಟಿರುವರು. ಶ್ರೀ. ಬಿಳಿಅಂಗಡಿಯವರು ಸದ್ಯದ ಗುರುಗಳ ದೋಷಗಳನ್ನು ಮುಚ್ಚುಮರೆಯಿಲ್ಲದೆ ಹೊರಗೆಡವಿರುವರು. ಆದರೆ ಇದು ಕಾಲಮಹಿಮೆಯು. ಕೇವಲ ಗುರುಗಳ ದೋಷವಲ್ಲ. ಭಕ್ತರೂ ಕೆಟ್ಟು ಹೋಗಿರುವರು. ಗುರುಗಳಾದುದರಿಂದ ಹೆಚ್ಚು ದೋಷಾರ್ಹರೆಂಬುದೇನೋ ನಿಜ. ಆದರೆ ಇಡೀ ಸಮಾಜದಲ್ಲಿ ಒಂದು ವಿಧದ ಹೊಸ ಚೈತನ್ಯವುಂಟಾದರೆ ಮಾತ್ರ ಇಬ್ಬರಲ್ಲಿಯ ದೋಷಗಳು ಇಲ್ಲದಾಗುವವು ಇಲ್ಲದಿದ್ದರೆ ಇಲ್ಲ. ಇರಲಿ, ವೀರಶೈವರೆಲ್ಲರೂ ಈ ಗ್ರಂಥವನ್ನೋದಿ ಮನನಮಾಡಬೇಕು.

**ತರುಣ ಕರ್ನಾಟಕ:–** ಸಂಪಾದಕರು ಶ್ರೀ. ಬಿ. ಎಸ್. ಪಾಟೀಲ (ಬೈಲಹೊಂಗಲದಲ್ಲಿ ಹೊರಡುವ ಪತ್ರಿಕೆ. ಕರ್ನಾಟಕದ ಹೊಸ ಸ್ಫೂರ್ತಿಯಿಂದ ತುಂಬಿರುವುದು. ಬೆಳಗಾಂವಿಯಲ್ಲಿ ಕರ್ನಾಟಕದ ಅಭಿಮಾನವನ್ನು ಹುಟ್ಟಿಸುವ ಪತ್ರಿಕೆಗಳು ಅವಶ್ಯವಾಗಿ ಬೇಕಾಗಿವೆ.

**ಗೋಮಾತಾ:—** ಶ್ರೀ. ಬಿ. ಎಸ್. ಪಾಟೀಲ ಇವರು ಇದರಲ್ಲಿ ಗೋ ಸಂರಕ್ಷಣೆಯ ವಿಷಯವನ್ನು ಸುಲಭವಾಗಿ ತಿಳಿಸಿ ಹೇಳಿರುವರು. ಅವರು ಅದನ್ನು ಪುಕ್ಕಟವಾಗಿ ಕಳುಹಿಸುವರು.

**ಜೈನ ಎಜ್ಯುಕೇಶನಲ್ ಫಂಡ ಅಸೋಸಿಯೆಶನ್ನದ ವರದಿ:–** ಈ ಸಂಸ್ಥೆಯ ಏಳನೆಯ ವರ್ಷದ ವರದಿಯು

ನಮ್ಮ ಕಡೆಗೆ ಬಂದಿದೆ. ಜೈನಸಮಾಜದ ಉನ್ನತಿಗೋಸ್ಕರ ಹೊರಟ ಈ ಸಂಸ್ಥೆಯು ೨೪-೨೫ ಮತ್ತು ೨೫-೨೬ನೆಯ ವರ್ಷಗಳಲ್ಲಿ ನಡೆದ ಕಾರ್ಯಗಳ ವರದಿಯು ಇದರಲ್ಲಿ ಕೊಡಲ್ಪಟ್ಟಿದೆ. ಶ್ರವಣಬೆಳ್ಗೊಳಕ್ಕೆ ಹೋಗುವ ದಾರಿಯಲ್ಲಿ ಸೇತುವೆಯನ್ನು ಕಟ್ಟಿಸುವದಕ್ಕೆ ಸರಕಾರಕ್ಕೆ ಬಿನ್ನಹ, ಪ್ರಾಣಿವಧೆಯನ್ನು ನಿಲ್ಲಿಸುವ ಪ್ರಯತ್ನ, ವಿಶ್ವಬಂಧು ಪತ್ರಿಕೆಯನ್ನು ನಡಿಸುವುದು ಇವೇ ಮುಂತಾದ ಕಾರ್ಯಗಳು ಈ ಸಂಸ್ಥೆಯ ಮೂಲಕವಾಗಿ ನಡೆದಿವೆ. ಹಿಂದುಸ್ಥಾನದಲ್ಲಿ ಒಟ್ಟು ೧೧ಳು ಲಕ್ಷ ಜೈನರಿದ್ದು ಅವರ ಸಂಖ್ಯೆಯು ದಿನದಿನಕ್ಕೆ ಕಡಿಮೆಯಾಗುತ್ತಿರುವುದೆಂಬುದು ವಿಚಾರಣೀಯವಾದ ಸಂಗತಿಯು. ಶ್ರೀ ವರ್ಧಮಾನಯ್ಯನವರ ಮರಣದಿಂದ ಈ ಸಂಸ್ಥೆಯವರು ಎದೆಗುಂದದೆ, ತಮ್ಮ ಕೆಲಸವನ್ನು ಇಮ್ಮಡಿ ಧೈರ್ಯದಿಂದ ನಡೆಯಿಸುವರೆಂದು ನಂಬಿದ್ದೇವೆ.

**ವಿಶ್ವಬಂಧು** (ಶ್ರೀ ವರ್ಧಮಾನಯ್ಯನವರ ಸ್ಮಾರಕ ಸಂಚಿಕೆ):—ಇದರಲ್ಲಿ ಶ್ರೀ ವರ್ಧಮಾನಯ್ಯನವರ ಚರಿತ್ರೆಯು ವಿಶದವಾಗಿಬರೆಯಲ್ಪಟ್ಟಿವೆ. ಸ್ಮಾರಕ ಪದ್ಯಗಳು ಬಂದಿವೆ. ಶ್ರೀ ಆರ್. ನರಸಿಂಹಾಚಾರ್ಯ, ಶ್ರೀ ಎಚ್. ಚನ್ನಕೇಶವಯ್ಯಂಗಾರ, ಶ್ರೀ ರಾಮರಾವ ಸಾಲಿ, ಬಿ. ಎಂ. ಸಿದ್ದಲಿಂಗಯ್ಯಾ ಶ್ರೀ. ಡಿ. ವ್ಹಿ. ಗುಂಡಪ್ಪಾ ಡಾ. ಶ್ಯಾಮಶ್ಯಾಸ್ತ್ರಿ ಶ್ರೀ ಶೇಷ ಪಾರ್ಶವಾಡ ಮುಂತಾದ ಪರಮತೀಯರು ಕೂಡ ವರ್ಧಮಾನಯ್ಯನವರ ವಿಷಯವಾಗಿ ತಮ್ಮ ಮನಸ್ಸಿನಲ್ಲಿ ಎಷ್ಟು ಗೌರವವಿರುವುದೆಂಬದನ್ನು ಈ ಪುಸ್ತಕದಲ್ಲಿ ತೋರ್ಪಡಿಸಿರುವರು. ಪುಸ್ತಕವು ವರ್ಧಮಾನಯ್ಯನವರ ಜೀವನ ಚರಿತ್ರೆಗೆ ಸಂಬಂಧಿಸಿದ ಅನೇಕ ಚಿತ್ರಗಳಿಂದೊಡಗೂಡಿ ಸುಂದರವಾಗಿ ಮುದ್ರಿಸಲ್ಪಟ್ಟಿದೆ.

**ಗದಗಿನ ಶ್ರೀ ತೋಂಟದಾರ್ಯ ವೀರಶೈವ ಬೋರ್ಡಿಂಗಿನ ವರದಿ:**— ಈ ಬೋರ್ಡಿಂಗು ಸ್ಥಾಪನೆಯಾಗಿ ೫ ವರ್ಷಗಳಾದವು. ವೀರಶೈವ ವಿದ್ಯಾರ್ಥಿಗಳಿಗೆ ಸಹಾಯ ಮಾಡುವುದೇ ಇದರ ಉದ್ದೇಶ. ಹೋದವರ್ಷ ಬೋರ್ಡಿಂಗಿನಲ್ಲಿ ೩೧ ವಿದ್ಯಾರ್ಥಿಗಳಿದ್ದರು. ಧರ್ಮಾದಾಯ ಫಂಡಿನ ಉಪಯೋಗವು ಈ ಸಂಸ್ಥೆಗೆ ಚೆನ್ನಾಗಿಯೇ ಆಗುತ್ತದೆ. ಡಾ. ಕೊಲೊಳಗಿಯವರು ವಿದ್ಯಾರ್ಥಿಗಳಿಗೆ ಪುಕ್ಕಟೆಯಾಗಿ ಔಷಧವನ್ನು ಕೊಟ್ಟು ಉಪಚರಿಸುತ್ತಿರುವರು. ಇದೇ ಮೇರೆಗೆ ಅನೇಕ ಮಹಸೀಯರು ಹಣದಿಂದ ಸಹಾಯ ಮಾಡುತ್ತಿರುವರು. ಇತ್ತಿತ್ತಲಾಗಿ ಈ ಸಂಸೆಯ ಸೊರಗುತ್ತ ನಡೆದಿದೆಯೆಂದು ಶ್ರೀ. ಎಸ್. ಬಿ. ಹುಬ್ಬಳ್ಳಿಯವರು ಈ ವರದಿಯಲ್ಲಿ ಹೇಳಿರುವರು. ಇತ್ತ ಕಡೆಗೆ ವೀರಶೈವ ಧನಿಕರು ಲಕ್ಷ ಕೊಡಬೇಕು. ಇಂಥ ಬೋರ್ಡಿಂಗಿನಲ್ಲಿ ವಿದ್ಯಾರ್ಥಿಗಳನ್ನಿಡುವುದರಿಂದ ಅವರ ಶೀಲವು ಚೆನ್ನಾಗಿ ಉಳಿಯುವದೆಂಬುದನ್ನು ಮರಿಯಬಾರದು.

**ಸ್ತ್ರೀವಿಷಪ್ರತಾಪ**— (ಲೇ. ಸ್ವಾಮೀ ಚಂದ್ರ ಶೇಖರ ಶಾಸ್ತ್ರಿ ಇಲಕಲ್ಲ ಬೆಲೆ ೦-೫-೦) ಈ ಪುಸ್ತಕದಲ್ಲಿ ಜಾರತ್ವದ ಪರಿಣಾಮ, ಉಪದಂಶ ಅಥವಾ ಗರ್ಮಿ, ಪ್ರಮೇಹ ಮುಂತಾದ ರೋಗಗಳ ಉತ್ಪತ್ತಿ, ನಿದಾನಲಕ್ಷಣ, ಮುಂತಾದವುಗಳನ್ನು ಕೊಟ್ಟು ಈ ರೋಗಗಳಿಗೆ ಇಂಗ್ಲಿಷ ಜರ್ಮನ್ ಔಷಧಗಳೂ ಕೊಡಲ್ಪಟ್ಟಿವೆ. ಅಲ್ಲದೆ ಆಯುರ್ವೇದದ ಔಷಧಗಳೂ ಹೇಳಲ್ಪಟ್ಟಿವೆ. ಈ ರೋಗವು ಈ ದೇಶದಲ್ಲಿ ಬೆಳೆಯಹತ್ತಿದೆ. ಅದನ್ನು ಪ್ರತಿಬಂಧ ಮಾಡಲಿಕ್ಕೆ ಪ್ರಬಲವಾದ ಉಪಾಯಗಳನ್ನು ಯೋಚಿಸಬೇಕಾಗಿದೆ. ತರುಣರ ಶೀಲವನ್ನು ಸುಧಾರಿಸುವದೇ ಮುಖ್ಯ ಔಷಧ. ಈ ಪುಸ್ತಕವಾಚನದಿಂದ ತರುಣರು ಎಚ್ಚರರಾಗಬೇಕು. ಮುಂದಿನ ಆವೃತ್ತಿಯಲ್ಲಿ ಗ್ರಂಥಕರ್ತರು ಭಾಷಾಶುದ್ಧತೆಯ ಕಡೆಗೆ ಹೆಚ್ಚು ಲಕ್ಷ ಕೊಡಬೇಕು. ಮತ್ತು ಈ ರೋಗಕ್ಕೆ ಪಥ್ಯಪಾನಾದಿಗಳನ್ನು ವಿವರಿಸಬೇಕು.

**ರಾಜಭಕ್ತಿ ಕಾವ್ಯಂ** —(ಗ. ಬೆಳ್ಳಾವೆ ನರಹರಿ ಶಾಸ್ತ್ರಿ ಬೆಂಗಳೂರು ಬೆಲೆ ೦-೬-೦) ರಕ್ತಾಕ್ಷಿ ಸಂವತ್ಸರದ ದೀಪಾವಳೀ ಮಹೋತ್ಸವದಲ್ಲಿ ಮೈಸೂರ ಮಹಾರಾಜರು ಕವಿತಾ ಪರೀಕ್ಷೆಯೊಂದನ್ನೇರ್ಪಡಿಸಿ 'ರಾಜಭಕ್ತಿ' ಯೆಂಬ ವಿಷಯವಾಗಿ ಕವಿತೆಗಳನ್ನು ಬರೆದು ಕಳುಹಲಿಕ್ಕೆ ಕವಿಗಳಿಗೆ ಆಜ್ಞಾಪಿಸಿದ್ದರು. ಆಗ ಬಂದ ಕಾವ್ಯಗಳಲ್ಲಿ ಶ್ರೀ. ಬಳ್ಳಾರಿ ನರಹರಿ ಶಾಸ್ತ್ರಿಗಳು ಬರೆದ ಈ ಕಾವ್ಯಕ್ಕೆ ಪ್ರಥಮ ಬಹುಮಾನವು ಕೊಡಲ್ಪಟ್ಟಿದೆ. ಇದು ಚಂಪೂ ಕಾವ್ಯವು. ಇದರಲ್ಲಿ ಒಂದು ಕಥೆಯ ನೆವದಿಂದ ರಾಜಭಕ್ತಿಯು ಮನೋಹರವಾಗಿ ವರ್ಣಿಸಲ್ಪಟ್ಟಿರುವುದು. ಭಾಷೆಯು ಶುದ್ಧವೂ ಸುಲಭವೂ ಆಗಿದೆ. ವಿಶೇಷ ಅಲಂಕಾರಗಳಿಂದ ಯುಕ್ತವಾಗಿಲ್ಲ. ಆದರೆ ರಾಜಭಕ್ತಿಯನ್ನು ವರ್ಣಿಸುವಾಗ ಅತಿಶಯೋಕ್ತಿಯು ಮಾತ್ರ ನಮಗೆ ಕಂಡು ಬರುತ್ತಿದೆ. ಈಗಿನ ಮೈಸೂರ ಮಹಾರಾಜರವರು ಅಪ್ರತಿಮರೆಂಬುದನ್ನು ನಾವು ಬಲ್ಲೆವು. ಆದರೆ ಬ್ರಿಟಿಶರ ಬಂಧನದಿಂದ ಅವರ ಕೈಗಳು ಕಟ್ಟಿವೆಂಬುದನ್ನು ನಾವು ಮರೆಯತಕ್ಕುದಲ್ಲ. ಇರಲಿ. ಶ್ರೀ ನರಹರಿ ಶಾಸ್ತ್ರಿಗಳು ಮತ್ತೆ ಕಾವ್ಯಗಳನ್ನು ರಚಿಸಿ ಕನ್ನಡಸೇವೆಯನ್ನು ಮಾಡುವರೆಂದು ನಂಬಿದ್ದೇವೆ.

**ಅಶೋಕ ವಿಜಯ ನಾಟಕ:—**(ಗ್ರ. ಪರಮ ಪದ್ಮನಾಭಯ್ಯ ಸೂಲಿಕುಂಟೆ, ಮಾದಮಂಗಳ ಬೆಲೆ ೧-೦-೦) ಇದು ಧಾರವಾಡದ ಶ್ರೀ ಪೂಜಾರ ಇವರು ಬರೆವ ಅಶೋಕ ಚರಿತ್ರೆಯ ಆಧಾರದಿಂದ ಬರೆದ ನಾಟಕವು. ಈ ನಾಟಕವಲ್ಲಿಯ ಕಾವ್ಯವು ಉಚ್ಚತರಗತಿಯದಾಗಿದೆ. ಭಾಷೆಯಲ್ಲಿ ಓಜಸ್ವಿತೆಯು ತುಂಬಿದೆ. ಹಿಂಸೆಯ ಭಯಂಕರ ಸ್ವರೂಪವು ಕಣ್ಣಿಗೆ ಕಟ್ಟುವಂತೆ ವರ್ಣಿತವಾಗಿರುವದು. ಯುದ್ಧದಿಂದಾಗುವ ಅನರ್ಥಗಳು ಕಾವ್ಯಮಯವಾಗಿ ಹೇಳಲ್ಪಟ್ಟಿರುವವು. ಇಂಥ ಉಚ್ಚತರವಾದ ನಾಟಕವನ್ನು ಬರೆದು ಗ್ರಂಥಕರ್ತರು ಕನ್ನಡ ಭಾಷೆಗೆ ಮಾಡಿದ ಸೇವೆಯು ಹೊಗಳತಕ್ಕುದಾಗಿದೆ.

**ನವನೀತ**(ಮಾಸಪತ್ರಿಕೆ:— ವಾರ್ಷಿಕಚಂದಾ೩-೦-೦) ಶ್ರೀ. ಪಂಡಿತ ಚೆನ್ನಬಸಪ್ಪಾ ಕವಲಿ ಇವರ ಪರಿಶ್ರಮದಿಂದ ಬ್ಯಾಡಿಗಿಯಲ್ಲಿ ಹೊರಟ ಹೊಸಮಾಸಪತ್ರಿಕೆ. ಪಂಡಿತ ಚೆನ್ನಬಸಪ್ಪನವರು ಕನ್ನಡ ಸೇವೆಗೋಸ್ಕರ ಕಂಕಣಬದ್ಧರಾದುದು ಆನಂದದ ಸಂಗತಿಯು. ಅವರು ಶಾಲಾ ಮಾಸ್ತರರಿರುವುದರಿಂದ ಮಾಸಪತ್ರಿಕೆ ತೆಗೆಯಲಿಕ್ಕೆ ಅಧಿಕಾರಿಗಳಿಗೆ ಪರವಾನಿಗೆ ಬೇಡಿದ್ದರು ಸಿಗಲಿಲ್ಲ. ಆದರೂ ಅವರು ಬರೆದ ಲೇಖಗಳು ಮೊದಲನೇ ಸಂಚಿಕೆಯಲ್ಲಿ ಪ್ರಸಿದ್ಧಿಸಲ್ಪಟ್ಟವೆ. ಕಥೆಯನ್ನು ಬರೆಯುವ ಶೈಲಿಯು ಚೆನ್ನಾಗಿದ್ದರೂ ನಿಷ್ಕಾರಣವಾಗಿ ಅತಿಶಯೋಕ್ತಿಯು ಅದರಲ್ಲಿ ಕಂಡುಬರುತ್ತಿದೆ. ಮಾಸಪತ್ರಿಕೆಯು ಅಖಂಡವಾಗಿ ಭಾಷಾಸೇವೆಯನ್ನು ಮಾಡಲಿ.

**ಸರಸ್ವತೀ—**(ಸ. ಶ್ರೀ. ಆರ್. ಕಲ್ಯಾಣಮ್ಮ ಬೆಂಗಳೂರು) ಈ ಪತ್ರಿಕೆಯಲ್ಲಿ ಹೊಸ ಸುಧಾರಣೆಗಳಾಗಿವೆ. ಲೇಖಗಳಲ್ಲಿ ಪಾವಿತ್ರತೆಯು ಕಂಡುಬರುತ್ತದೆ. ಸ್ತ್ರೀಯರಿಗೆ ಉಪಯುಕ್ತವಾಗುವ ವಿಷಯಗಳು ಸೇರಿಸಲ್ಪಟ್ಟವೆ. ಶ್ರೀಮತಿ ಆರ್ ಕಲ್ಯಾಣಮ್ಮನವರಿಗೆ ಪ್ರೋತ್ಸಾಹನ ಕೊಟ್ಟು ಅವರಿಂದ ಭಾಷಾಸೇವೆಯನ್ನು ಮಾಡಿಸಿಕೊಳ್ಳುವದು ಕನ್ನಡಿಗರ ಕರ್ತವ್ಯವು.

**ಶಿಕ್ಷಣ ಪ್ರಕಾಶ:**—ಇದು ಲಾತೂರಲ್ಲಿ ಶ್ರೀವಿರೂಪಾಕ್ಷಸ್ವಾಮಿ ದೇಶಿಕೇಂದ್ರ ಮಹಾರಾಜರ ಸಂಪಾದಕತ್ವದಲ್ಲಿ ಹೊರಡುವ ಮರಾಠೀ ಮಾಸಪತ್ರಿಕೆ. ಇದರಲ್ಲಿ ವೀರಶೈವರ ಲಿಂಗಾಂಗಿ ಧರ್ಮವು ತಿಳಿಸಲ್ಪಡುತ್ತದೆ. ವಸ್ತ್ರೋಚಿತ ಲಿಂಗಬಂಧನ,ರಾಜಯೋಗ ಇವುಗಳ ಬಗ್ಗೆ ಕವಿತೆಗಳಿವೆ. ಮಹಾರಾಷ್ಟ್ರದಲ್ಲಿಯ ವೀರಶೈವರು ತಮ್ಮ ಧರ್ಮವನ್ನು ಮರೆಯಹತ್ತಿರುವರು ಇಂಥ ಸ್ಥಿತಿಯಲ್ಲಿ ಈ ಮಾಸಪತ್ರಿಕೆಯು ಹೊರಟದ್ದು ಸಮಯೋಚಿತವಾಯಿತು. ಇಲ್ಲಿಯ ವೀರಶೈವರೂ ಇದನ್ನು ತರಿಸಿ ಓದಿ ತಮ್ಮ ಸಮಾಜದ ಏಳ್ಗೆಯು ಹೇಗೆ ನಡೆದಿದೆಂಬುದನ್ನು ಅರಿತು ಕೊಳ್ಳಬೇಕು.

**The Lotus:**—ಇದು ಹಾಸನ ಹಾಯಸ್ಕೂಲಿನ ಪರವಾಗಿ ಹೊರಡುವ ತ್ರೈಮಾಸಿಕವು. ಇದರಲ್ಲಿಯ ಲೇಖಗಳು ವಿದ್ಯಾರ್ಥಿಗಳಿಗೆ ಬಹಳ ಉಪಯೋಗವುಳ್ಳವಾಗಿವೆ. ಮುದ್ರಣವು ಬಹಳ ಮುದ್ದಾಗಿದೆ. ಇಂಥ ಪತ್ರಿಕೆಗಳೆಂದರೆ ಲೇಖಗಳನ್ನು ಬರೆಯುವದಕ್ಕೆ ಹಾಕಲ್ಪಟ್ಟಿರುವ ಶಾಲೆಗಳೇ ಸರಿ;

**ಮುಲ್ಕಿ ಯುನಿಯನ ಕ್ಲಬ್ಬಿನ ವರದಿ:—** ಇದರಲ್ಲಿ ಜೂನ ೧೬ನೇ ತಾರೀಖಿನ ದಿವಸ ಜರುಗಿದ ವರ್ಧಂತ್ಯುತ್ಸವದ ಸಂಕ್ಷಿಪ್ತ ವರದಿ ಬಂದಿದೆ. ವರ್ಷವರ್ಷಕ್ಕೆ ಈ ಸಂಸ್ಥೆಯು ಪ್ರಗತಿಯನ್ನು ಹೊಂದುತ್ತಿದೆ. ಪುಸ್ತಕಾಲಯವು ಬೆಳೆಯುತ್ತಿದೆ. ಈ ಸಲ ಡಾ. ಬೋಳಶ್ಯಾಮರಾವ ಇವರ ಸ್ಮಾರಕ ದಿನವೂ ಅಂದಿನ ದಿವಸ ಜರುಗಿಸಲ್ಪಟ್ಟಿತು. ಕನ್ನಡಿಗರೆಲ್ಲರಿಗೂ ಪರಿಚಿತರಾಗಿರುವ ಶ್ರೀ ಉಳ್ಳಾಲ್ ಮಂಗೇಶರಾಯರು ಅಧ್ಯಕ್ಷರಾಗಿದ್ದರು.

**ಮಧ್ವಾಚಾರ್ಯರು:** – (ಸುಬೋಧ ಕುಸುಮಾಂಜಲಿ ಗ್ರಂಥಮಾಲೆಯ ೪೫ ನೆಯ ಕುಸುಮವು ಬೆಲೆ ೦-೨-೦) ಈ ಮಾಲೆಯ ಸಂಪಾದಕರು ಈಗ ಹೆಸರುವಾಸಿಗಳಾಗಿರುವರು. ಇವರು ಕನ್ನಡಿಗರಲ್ಲಿ ಓದುವ ಅಭಿರುಚಿಯನ್ನು ಚೆನ್ನಾಗಿ ಹುಟ್ಟಿಸಿರುವರು. ಕನ್ನಡಿಗರು ಇವರಿಂದ ಇನ್ನೂ ಹೆಚ್ಚಿಗೆ ಸೇವೆಯನ್ನು ಕೈಕೊಳ್ಳಲಿ.

**ಅರುಣ:—** (ಶಿವಮೊಗ್ಗಾ ಕಾಲೇಜಿಯೇಟಹಾಯಸ್ಕೂಲಿನ ತ್ರೈಮಾಸಿಕವು ಚಂದಾ ೧-೮-೦) ಸುಂದರವಾದ ಮುದ್ರಣದಿಂದೊಡಗೂಡಿದ ಈ ತ್ರೈಮಾಸಿಕದಲ್ಲಿ ಇಂಗ್ಲಿಷಭಾಗ ಕನ್ನಡಭಾಗ ಹೀಗೆ ಎರಡುಭಾಗಗಳಿರುತ್ತವೆ. ಬ್ರಹ್ಮ ಶ್ರೀ. ಕುಕ್ಕಿ ಸುಬ್ರಹ್ಮಣ್ಯ ಶಾಸ್ತ್ರಿಗಳ ಶಿಷ್ಯವರ್ಗದಲ್ಲಿ ಕನ್ನಡಭಾಷಾಭಿಮಾನವು ಹೇಗೆ ಬೆಳೆದಿರುವದೆಂಬುವು ಇದರಲ್ಲಿ ಚನ್ನಾಗಿಯೇ ವ್ಯಕ್ತವಾಗಿದೆ. ಈ 'ಅರುಣನ' ಕಿರಣಗಳಿಂದ ತೀವ್ರವೇ ಕನ್ನಡ ವಿದ್ಯಾರ್ಥಿಗಳು ಎಚ್ಚರಗೊಳ್ಳಲಿ.

**ಶಾರದಾ ಸ್ತ್ರೀಸಮಾಜ, ಬೆಂಗಳೂರ:—**ಶ್ರೀಮತಿ ಆರ್. ಕಲ್ಯಾಣಮ್ಮನವರ ಪರಿಶ್ರಮದಿಂದ ಈ ಸಮಾಜವು ದಿನದಿನಕ್ಕೆ ಅಭಿವೃದ್ಧಿ ಹೊಂದುತ್ತಿದೆ. ಬಾಲಕಿಯರಿಗೆ ಚಿತ್ರದ ಕೈಗಾರಿಕೆ, ಹೊಲಿಗೆ ಮುಂತಾದ ಉದ್ಯೋಗಗಳೂ ಸಂಗೀತ ಮುಂತಾದ ಕಲೆಗಳೂ ಕಲಿಸಲ್ಪಡುತ್ತವೆ. ಪಂಡಿತರುಗಳಿಂದ ಉಪನ್ಯಾಸಗಳು ಕೊಡಲ್ಪಡುತ್ತವೆ.

**ಸನ್ಮಾರ್ಗದರ್ಶಿ:**—ಎಂದಿನಂತೆ ಈ ಮಾಸಪತ್ರಿಕೆಯು ವಾಚನೀಯವಾಗಿದೆ. ಶ್ರೀಮತಿ ತಿರುಮಲಾಂಬಾ ಇವರು ಕನ್ನಡ ಭಾಷೆ ಮತ್ತು ದೇಶದ ವಿಷಯವಾಗಿ ತೋರಿಸುತ್ತಿರುವ ಪ್ರೇಮವನ್ನು ನಮ್ಮ ತರುಣರು ತೋರಿಸಿದರೆ ಕರ್ನಾಟಕದ ಉದ್ಧಾರವಾಗಲಿಕ್ಕೆ ತಡವಾಗಲಾರದು.

**ಸಹ್ಯಾದ್ರಿಚೀ ಧ್ವನಿ:**—(ಸರಸ್ವತೀ ವಿದ್ಯಾರಣ್ಯ ವಾಚನಾಲಯ ಹುಬ್ಬಳ್ಳಿ) ಮರಾಠೀ ಪದಗಳು ನಿರಸವಾಗಿವೆ. ಕರ್ನಾಟಕತ್ವವು ಈಗ ಜನರ ಮನದಲ್ಲಿ ಸ್ಥಾಪಿತವಾಗಿದೆ. ಆದಕಾರಣ ನಿಷ್ಕಾರಣವಾಗಿ ಕನ್ನಡಿಗರ ವಿಷಯವಾಗಿ ತಿರಸ್ಕಾರವನ್ನು ಹುಟ್ಟಿಸುವ ಈ ಪುಸ್ತಕವಲ್ಲಿಯು ಪ್ರಯತ್ನವು ನಿರರ್ಥಕವು.

**Homege to Throne**–ಬಿ. ಶ್ರೀಕಂಠಯ್ಯನವರು ಬರೆದದ್ದೊಂದು ಚಿಕ್ಕ ಇಂಗ್ಲಿಷ ಪದ್ಯಾವಳಿ. ರಾಜಭಕ್ತಿಯು ಒಡಮೂಡಿದೆ.

**ತಾರಾಪ್ಯಾರೀ:**—ಶ್ರೀ ನರಸೀಪುರದ ಶೇಷಗಿರಿರಾಯರು ಬರೆದ ಈ ಕಥೆಯಲ್ಲಿ ಪಾಶ್ಚಾತ್ಯ ಸುಧಾರಣೆಯು ದುಷ್ಪರಿಣಾಮಗಳು ಮನದಟ್ಟಾಗುವಂತೆ ಬಣ್ಣಿಸಲ್ಪಟ್ಟಿವೆ. ಮತಗಳನ್ನು ಒಂದಕ್ಕೊಂದು ಹೋಲಿಸಿ, ಉತ್ಕೃಷ್ಟವಾದ ಮತವನ್ನವಲಂಬಿಸಬೇಕಲ್ಲದೆ ಹೊಟ್ಟೆ ಪಾಡಿಗಾಗಿ ಅಥವಾ ಇಂದ್ರಿಯ ಸುಖಕ್ಕಾಗಿ ಮತವನ್ನು ಬದಲಾಯಿಸಬಾರದೆಂತಲೂ ನಮ್ಮ ಆಚಾರ ಆಹಾರ, ನಡತೆ, ಉಡುಪು ಮುಂತಾದವುಗಳನ್ನು ಬದಲಾಯಿಸಬಾರದೆಂತಲೂ ಉಪದೇಶಿಸುವುದೇ ಲೇಖಕರ ಉದ್ದೇಶ. ಲೇಖಕರ ವರ್ಣನಾಶೈಲಿಯು ಚೆನ್ನಾಗಿದೆ. ಕಥೆಯಲ್ಲಿ ಸ್ವಾರಸ್ಯವಿದೆ. ಎಲ್ಲರೂ ಅವಶ್ಯ ಓದಬೇಕು

**ಬುದ್ಧಿಯ ಕಥೆಗಳು ಕಂದನ ಕಥೆಗಳು.** } ಬೆಂಗಳೂರಿನ ಶ್ರೀ ದೇವುಡು ನರಸಿಂಹಶಾಸ್ತ್ರಿ ಎಂ. ಎ. ಇವರಮುಖ್ಯ ಸಂಪಾದಕತ್ವದಲ್ಲಿ ಪ್ರಕಟವಾಗುತ್ತಿರುವ ಈ ಕಥೆಗಳು ಕನ್ನಡ ನಾಡಿನ ಬಾಲಕರ ಮನೋಭೂಮಿಕೆಯನ್ನು ಹಸನಗೊಳಿಸಲು ಒಳ್ಳೇ ಬಲವಾದ ಸಾಧನಗಳಾಗಿವೆ. ದೊಡ್ಡ ಅಕ್ಷರಗಳು,ಸುಂದರವಾದ ಚಿತ್ರಗಳು ಇವುಗಳಿಂದೊಡಗೂಡಿದ ಈ ಪುಸ್ತಕಗಳನ್ನು ತಾಯಿತಂದೆಗಳು ತರಿಸಿಕೊಂಡು ತಮ್ಮ ಮಕ್ಕಳ ಕೈಯಲ್ಲಿ ಅವಶ್ಯ ಕೊಡಬೇಕು. ಇದು ತೀರ ಹೊಸ ಪ್ರಯತ್ನ, ಕಂದನ ಕಥೆಗಳು ವರ್ಷದಲ್ಲಿ ೧೨ ಬರುವವು. ಪೋಷಕರಿಗೆ ೨-೦-೦, ಸಾಮಾನ್ಯರಿಗೆ ೧-೦-೦.

**The karnatak College misscellany**-ಕರ್ನಾಟಕ ಕಾಲೇಜದಿಂದ ಹೊರಡುವ ಈ ಪತ್ರಿಕೆಯು ದಿನದಿನಕ್ಕೆ ಹೆಚ್ಚು ವಾಚನೀಯವಾಗುತ್ತಿರುವದು. ಕಾಲೇಜದ ವಿದ್ಯಾರ್ಥಿಗಳಲ್ಲಿ ಕನ್ನಡದ ಅಭಿಮಾನವೂ ಜ್ಞಾನವೂ ಬೆಳೆಯುತ್ತಿರುವುದೆಂಬುದಕ್ಕೆ ಇದು ಸಾಕ್ಷಿ.

**ಚಡಚಣ ವಾಗ್ವಿಲಾಸ ಭವನದ ವರದಿ:**—ವಿಜಾಪುರ ಜಿಲ್ಹೆಯ ಒಂದು ಮೂಲೆಯ ಹಳ್ಳಿಯಲ್ಲಿ ಹಲಕೆಲವು ಕನ್ನಡ ಭಕ್ತರು ನಡೆಯಿಸಿದ ಈ ಭವನವು ವೃದ್ಧಿಹೊಂದಿದೆ. ಇದು ಅದರ ಚಾಲಕರಿಗೆ ಭೂಷಣವು. ಹಳ್ಳಿಗಳ ಪುನರ್ಘಟನೆ ಮಾಡಬೇಕೆನ್ನುವವರಿಗೆ ಇದೊಂದು ಸ್ತುತ್ಯವಾದ ಮಾರ್ಗವು.

**ಸತ್ಯಶರಣಸಾಮ್ರಾಜ್ಯದ ಮೂರನೆಯ ಪುಷ್ಪವು** ಲೇ. ಎಚ್. ಬಿ. ಕಲಬುರ್ಗಿ ಧಾರವಾಡ:— ಇದು ಧಾರವಾಡದ ಕೆಲ ವೀರಶೈವರು ಕೈಕೊಂಡ ಹೊಸಪ್ರಯತ್ನದ ಫಲವು. ಈ ಮೂರನೇ ಪುಷ್ಪದಲ್ಲಿ ಪ್ರಸಾದವು ವರ್ಣಿಸಲ್ಪಟ್ಟಿದೆ. ಆಚಾರದ ನೆವದಿಂದ ಒಳಸೇರಿ ತುಂಬಾ ವ್ಯಾಪಿಸಿ ಬಲಿತು ನಿಂತ ಈ ನರಪೂಜೆಯ ಅನಾಚಾರವನ್ನು ತಪ್ಪಿಸಿ ನಿಜ-ಗುರು-ಪೂಜೆಯ ಸದಾಚಾರವನ್ನುಂಟುಮಾಡುವದಕ್ಕಾಗಿಯೇ ಈ ಪುಷ್ಪದ ಅರಳುವಿಕೆಯಿರುವದೆಂದು ಇವರು ಬರೆದಿರುವರು. ಇವರಿಗೆ ಕಾಲಜ್ಞಾನದಲ್ಲಿ ನಂಬಿಗೆ. ಚೆನ್ನಬಸವ ಬರುವನೆಂದರೆ ಅವನು ಪ್ರತ್ಯಕ್ಷವಾಗಿ ಬರುವನೆಂದರ್ಥವಲ್ಲವೆಂದು ಇವರ ಅಭಿಪ್ರಾಯ. ಈಗಿನ ಅವತಾರವು ವ್ಯಕ್ತಿಶಃ ಇರದೆ ಸಾಮೂಹಿಕವಾಗಿರುವದು.– ಎಂದು ಇವರು ಹೇಳಿರುವರು. ವೀರಶೈವ ಸಮಾಜವು ಈಗ ಪತಿತವಾಗಿರುವ ಬಗೆಯನ್ನೂ ಜಂಗಮರ ಹೀನಸ್ಥಿತಿಯನ್ನೂ ಹೃದಯಂಗಮವಾಗಿ ವರ್ಣಿಸಿರುವರು. ತಮ್ಮ ಅಭಿಪ್ರಾಯಗಳಿಗೆ ಅನೇಕ ಶರಣರ ವಚನಗಳನ್ನು ಆಧಾರವಾಗಿ ಕೊಟ್ಟಿರುವರು. ಒಟ್ಟಿಗೆ ಇದು ವೀರಶೈವರನ್ನು ವಿಚಾರಕ್ಕೆ ಹಚ್ಚುವ ಪುಸ್ತಕವು. ಮಿಕ್ಕವರೂ ಇದರಿಂದ ಅನೇಕ ಬೋಧೆಗಳನ್ನು ಕಲಿಯಬಹುದಾಗಿದೆ. 'ಕಾಯಮುಕ್ತಿ' ಮುಂತಾದ ಶಬ್ದದೋಷಗಳನ್ನು ಇವರು ತಿದ್ದಬೇಕು.

---

ಧಾರವಾಡ ೬-೩-೨೮ ಫಾಲ್ಗುಣ ಶು. ೧೫ ಶಕ, ೧೮೪೯.



# ಜಯಕರ್ನಾಟಕ

॥ ಶ್ರೀ ॥

ಜಯಕರ್ನಾಟಕವೆಂಬೀ ಮಂತ್ರದ ।
ಜಯಘೋಷವು ದೆಸೆದೆಸೆಗಳೊಳಿಡಿಕಿರೆ ।
ಜಯಪಥದೊಳು ಕನ್ನಡನಾಡನುಗೊಂಡಿರುತಿರೆ
ನಲವೆರ್ಚಿ ॥
ಜಯ ಜಯ ಜಯ ಕರ್ನಾಟಕ ಜಯ ಜಯ ।
ಜಯವೆಂದಮರರು ವಿಜಯಧ್ವನಿಗುಡೆ ।
ಜಯರವಿ ಕನ್ನಡಬಾನೊಳಗುದಯಿಸೆ ಪೆಂಪೇ-
_ನೊದವಿದುದೊ ! ॥ ೧ ॥

—ಸಾ. ಬಾ

ವರ್ಷ ೬

ಸಂಪಾದಕರು
ಆಲೂರ ವೆಂಕಟರಾಯರು.
ಬಿ.ಎ. ಎಲ್.ಎಲ್.ಬಿ.

ಸಂಚಿಕೆ ೫

ವಾರ್ಷಿಕ ಚಂದಾ ೫-೮-೦.

ಹೋಳೀ ಹುಣ್ಣಿವೆ.

# ವಿ ಷ ಯಾ ನು ಕ್ರ ಮ ಣಿ ಕೆ







# ಜಯ ಕರ್ನಾಟಕ

## ೬ನೆಯ ವರ್ಷ

ಶಕೆ ೧೮೪೯-೧೮೫೦, ಇಸವಿ ೧೯೨೭-೧೯೨೮

ಸಂಪಾದಕರು:—

ಆಲೂರ ವೆಂಕಟರಾಯರು,

ಬಿ. ಎ, ಎಲ್ ಎಲ್. ಬಿ.

ಧಾರವಾಡ

ಈ ಮಾಸಪತ್ರಿಕೆಯನ್ನು, ಮಾಧವ ಕೃಷ್ಣ ಜೋಶಿಯುವರು,
**ಕರ್ನಾಟಕ ಪ್ರಿಂಟಿಂಗ ವರ್ಕ್ಸ, ಧಾರವಾಡ ಮುದ್ರಣಾಲಯದಲ್ಲಿ**
ಮುದ್ರಿಸಿದರು. ಮತ್ತು ವೆಂಕಟೇಶ ಭೀಮರಾವ ಆಲೂರವರು ಧಾರವಾಡ
ಮು. ನ. ೧೦೮೦ನೆಯ ಮನೆಯಲ್ಲಿ ಪ್ರಕಟಿಸಿದರು.

## ೬ನೆಯ ವರ್ಷದ ಅನುಕ್ರಮಣಿಕೆ.

# ಲೇಖಕರ ಹೆಸರುಗಳು

# ಲೇಖಗಳು



---

# ಕವಿತೆಗಳು



# ಪ್ರಪಂಚ ಪರಿಚಯ

# ಬಿಡಿನುಡಿಗಳು

### ಸ



### ಹ



---

# ಚಿತ್ರಗಳು

## ಮುಖ್ಯ ಚಿತ್ರಗಳು



## ಇತರ ಚಿತ್ರಗಳು



ನೆಲೆಮಾವಿನಮಠದ

**ಶ್ರೀ ನರಸಿಂಹ ಭಾರತೀ ಸ್ವಾಮಿಗಳು**




ॐ सह नाववतु ॥ सह नौ भुनक्तु ॥ सह वीर्यं करवावहै ॥
तेजस्विनावधीतमस्तु मा विद्विषावहै ॥ ॐ शान्तिः ॥३॥

—श्रुतिः


| ಸಂಪುಟ ೬ | ಪ್ರಭವನಾಮ ಸಂವತ್ಸರ ಹೋಳೀಹುಣ್ಣಿವೆ<br>ಶಕ ೧೮೪೯, ೬ನೆಯ ಮಾರ್ಚ ೧೯೨೮ | ಸಂಚಿಕೆ ೫ |
|---|---|---|


# ವೈದಿಕ ಧರ್ಮಗ್ಲಾನಿಯೂ ಕ್ರಮೋನ್ನತಿಯೂ

ಅನುವಾದಕ: — ಶ್ರೀ. ಮಹಾಬಲೇಶ್ವರಭಟ್ಟ ಹೋಬಳಿ.

(ಶ್ರೀಮುನ್ನೆಲೀಮಾವಿನ ಮಠದ ಶ್ರೀ. ನರಸಿಂಹ ಭಾರತೀ ಸ್ವಾಮಿಗಳವರ ವ್ಯಾಖ್ಯಾನಗಳ ಸಾರ)

**ಸುಖವೇ ಪ್ರಾಣಿಧ್ಯೇಯ:** — "ಲೋಕದಲ್ಲಿ ಎಲ್ಲ ಪ್ರಾಣಿಗಳಿಗೂ, ಮುಖ್ಯವಾಗಿ ಬೇಕಾದದ್ದೇ ಸುಖ. ಅವುಗಳ ಪ್ರಯತ್ನಗಳೆಲ್ಲವೂ, ಸುಖಕ್ಕಾಗಿಯೇ ಇರುವವು. ಶ್ರೀಮದ್ಭಗವತ್ಪೂಜ್ಯಪಾದರು ತಮ್ಮ ಶತಶ್ಲೋಕಿಯಲ್ಲಿ "ಯಃಕಶ್ಚಿತ್ ಸೌಖ್ಯಹೇತೋಸ್ತ್ರಿಜಗತಿ ಯತತೆ ನೈವ ದುಃಖಸ್ಯ ಹೇತೋಃ" (ಅರ್ಥ:—ಮೂರು ಲೋಕಗಳಲ್ಲಿ ಯಾವ ಪ್ರಾಣಿಯೇ ಆಗಲಿ ಸೌಖ್ಯಕ್ಕಾಗಿ ಯತ್ನಿಸುತ್ತದಲ್ಲದೆ ದುಃಖಕ್ಕಾಗಿ ಪ್ರಯತ್ನಿಸುವದಿಲ್ಲ.)" ಎಂದು ಉಪದೇಶಿಸಿರುತ್ತಾರೆ. ಮತ್ತು "ದುಃಖಾದು ದ್ವಿಜತೆ ಸರ್ವಃ ಸರ್ವಸ್ಯ ಸುಖಮೀಪ್ಸಿತಂ" ಎಂಬ ವಾಕ್ಯವೂ, ಅದನ್ನೇ ಅನುಮೋದಿಸುತ್ತದೆ. ಏವಂಚ ಪ್ರಾಣಿವರ್ಗದ ಧ್ಯೇಯವೇ ಸುಖವೆಂಬುದು ಈ ಮೇಲಿನ ಪ್ರಮಾಣಗಳಿಂದಲೂ, ನಮಗೆ ಆಗಾಗ ಒದಗುತ್ತಿರುವ ಅನುಭವಗಳಿಂದಲೂ, ಸಿದ್ಧವಾಗುತ್ತದೆ.

**ಪೂರ್ಣಸುಖವೇ ಪುರುಷಾರ್ಥವು:** — ಸುಖಪಡುವದಕ್ಕಾಗಿಯೇ ಪ್ರಾಣಿವರ್ಗವು ಹಲವು ಸಾಧನ (ಧನ-ಧಾನ್ಯ-ಭೂಮಿ-ಪಶು-ಕಳತ್ರ-ಭೌತಿಕ-ಪದಾರ್ಥ) ಗಳನ್ನು ಸಂಗ್ರಹಿಸಿಕೊಳ್ಳುತ್ತದೆ. ಆ ಸಾಧನಗಳಿಂದ ಅದು ಸುಖವನ್ನು ಒಂದೇಸಾರಿಯಾಗಲಿ, ಅಥವಾ, ಹಲವು ಸಾರಿ ಆಗಲಿ, ಅನು

ಭವಿಸಿದರೂ, ಸುಖೇಚ್ಛೆಯು ಪ್ರಬಲವಾಗುತ್ತಲೇ ಇರುವದು. ಸಂಗ್ರಹಿಸಿಕೊಂಡ ಸಾಧನಗಳ ಅನುಭವದಿಂದ ತೃಪ್ತಿ ಉಂಟಾಗದೆ ಪುನಃ ಪುನಃ ಸುಖಸಾಧನಗಳನ್ನು ಸಂಗ್ರಹಿಸಬೇಕೆಂದು ದೇಹತ್ಯಾಗವಾಗುವವರೆಗೂ ಪ್ರಯತ್ನವನ್ನು ಒಂದೇಸವನೆ ಅದು ನಡಿಸುತ್ತಿರುತ್ತದೆ. ಕಡೆಗೂ ಅದರ ಅವಿವೇಕ ಪ್ರಾಬಲ್ಯದಿಂದ ಸುಖೇಚ್ಛೆಯು ಅಪೂರ್ಣವಾಗಿಯೇ ಜನ್ಮಾಂತರಕ್ಕೂ ಹೋಗುವದು. ಆದುದರಿಂದ ಭೌತಿಕ ಸಾಧನಗಳು ಪೂರ್ಣ ಸುಖಕ್ಕೆ ಹೇತುವಲ್ಲ. ಪೂರ್ಣ ಸುಖವೇ ಸುಖೇಚ್ಛಾಪೂರ್ತಿಗೆ ಸ್ಥಾನವು. ಈ ಪೂರ್ಣ ಸುಖಕ್ಕೆ ಆತ್ಯಂತಿಕ ಸುಖವೆಂತಲೂ, ಮೋಕ್ಷವೆಂತಲೂ, ತತ್ವಜ್ಞರು ಅನ್ನುತ್ತಾರೆ. ಪರಮಪುರುಷಾರ್ಥವೆಂದು ಇದಕ್ಕೆ ಅಭಿಧಾನಾಂತರವೂ ಇರುವದು

**ಧರ್ಮವೇ ಸುಖಸಾಧನ:** — ಈ ಆತ್ಯಂತಿಕ(ಪೂರ್ಣ) ಸುಖಸ್ವರೂಪವೇ ನಿರ್ಗುಣೇಶ್ವರ ಸ್ವರೂಪ. ಇದೇ ನಮ್ಮ ಆತ್ಮಸ್ವರೂಪ, ಇದೇ ಪರಬ್ರಹ್ಮ, ಇದೇ ಸಚ್ಚಿದಾನಂದ ಸ್ವರೂಪ, ಇದನ್ನು ನಮಗೆ ತಿಳುಹಿಸುವದಕ್ಕಾಗಿಯೇ, ವೇದಗಳೂ, ಉಪನಿಷತ್ತುಗಳೂ, ತಾತ್ವಿಕ ನಿಬಂಧಗಳೂ, ಇರುವವು. ಎಷ್ಟು ಲೌಕಿಕ ಸಾಧನಗಳನ್ನು ಸಂಗ್ರಹಿಸಿ ಅನುಭವಿಸಿದರೂ, ಅವಿವೇಕಿಯಾಗಿ ಎಷ್ಟು ಜನ್ಮಗಳನ್ನೆತ್ತಿದರೂ, ಈ ಪೂರ್ಣ ಸುಖವನ್ನು ಪಡೆಯುವದಕ್ಕಾಗುವದಿಲ್ಲ. ಹಾಗಾದರೆ ಪೂರ್ಣ ಸುಖಪ್ರಾಪ್ತಿಗೆ ಸಾಧನವಾವುದು ? ಎಂಬ ಪ್ರಶ್ನೆಯು ಉಪಸ್ಥಿತವಾಗುತ್ತದೆ. ಆದರೆ "ಸುಖಂತು ನವಿನಾಧರ್ಮಂ" ಎಂಬ ವಾಕ್ಯಾನುಸಾರವಾಗಿ ಧರ್ಮವೇ ಅದಕ್ಕೆ ಮುಖ್ಯ ಸಾಧನವೆಂದು ತಿಳಿಯಬೇಕು.

**ಮನುಷ್ಯತ್ವದ ತತ್ವ:** — 'ಪ್ರಾಣಿ' ಎಂಬ ಪದವು ಜೀವವರ್ಗವನ್ನೇ ಬೋಧಿಸುತ್ತದೆ. ಇದರಿಂದ ಮನುಷ್ಯನು ಪ್ರಾಣಿಪದದಲ್ಲಿ ಸಮಾವಿಷ್ಟನಾಗುತ್ತಾನೆ. ಅಧ್ಯಾಸ ಸೃಷ್ಟಿಯಿಂದ ಎಲ್ಲ ಪ್ರಾಣಿಗಳ ಅಭಿನಿವೇಶವೂ, ಒಂದೆ ಪ್ರಕಾರವಾಗಿದ್ದರೂ, ಪುರುಷಪ್ರಾಣಿಗೆ ಮಾತ್ರ ಮನುಷ್ಯತ್ವವನ್ನು ಸಂಪಾದಿಸುವ ವಿಚಿತ್ರಶಕ್ತಿಯು ಇರುತ್ತದೆ. ಇದು ಇತರ ಪ್ರಾಣಿಗಳಿಗಿಲ್ಲ. ವಿಚಾರಪೂರ್ವಕ ಧರ್ಮವನ್ನಾಚರಿಸುವದೇ ಆಶಕ್ತಿಯ ಮರ್ಮವು. ಹಾಗೆ ಆಚರಿಸುತ್ತಿದ್ದರೆ ಅದರಿಂದ ಮನುಷ್ಯನಿಗೆ ಮನುಷ್ಯತ್ವವು ಬರುತ್ತದೆ. ಹಾಗಿಲ್ಲದೆ ಅವಿಚಾರಿ ಶಿಖಾಮಣಿಯಾಗಿ ಧರ್ಮದಿಂದ ದೂರವಿದ್ದರೆ ದ್ವಿಪಾದ ಪಶುವೆನಿಸುವನೆಂಬುದನ್ನು ಹೇಳಬೇಕಾದುದಿಲ್ಲ. ಸರಿಯಾಗಿ ಧರ್ಮಾಚರಣೆಯುಳ್ಳವನಾಗಿ ಮನುಷ್ಯತ್ವವನ್ನು ಸಂಪಾದಿಸಿಕೊಳ್ಳದವನ ಜನ್ಮವು ವ್ಯರ್ಥವು..

**ವೈದಿಕ ಮನಸ್ತಾಪ:**— ಸುಖಸಾಧನವಾದ ಧರ್ಮದ ಪ್ರಯೋಜನವು ಸುಖವೆಂಬುದೊಂದೇ. ಅದು ವೈದಿಕವಾಗಿದ್ದರೂ, ಅದನ್ನು ಪಡೆಯಲಿಕ್ಕೆ, ಒಂದೇ ಊರನ್ನು ಸೇರಲಿಕ್ಕೆ ಹಲವು ಮಾರ್ಗಗಳಂತೆ ಲೋಕದಲ್ಲಿ ಅನೇಕ ಧರ್ಮಪಂಥಗಳಿರುವವು. ಶಾಸ್ತ್ರೀಯಧರ್ಮಪಂಥಗಳಿಗೆ ಪುಷ್ಟಿಯನ್ನು ಕೊಡುವದಕ್ಕಾಗಿ, ಸೌರ, ಶಾಕ್ತ, ಶೈವ, ವೈಷ್ಣವ, ಬೌದ್ಧ, ಕಾಪಾಲಿಕ, ಖ್ರೈಸ್ತ, ಮಹಮ್ಮದೀಯ ಮುಂತಾದ ಸಿದ್ಧಾಂತ ಗ್ರಂಥಗಳಿವೆ. ಈ ಸಿದ್ಧಾಂತಾನುಯಾಯಿಗಳಲ್ಲಿ ಧರ್ಮಸಂಬಂಧವಾಗಿ ಪರಸ್ಪರ ವಿವಾದವಿದ್ದಾಗ್ಯೂ ಸದ್ಯಕ್ಕೆ ಅನೇಕ ಕಾರಣಗಳಿಂದ ನೂತನ ಮಾನವ ಧರ್ಮದ ಜ್ಞಾನಕ್ಕೆ ಮುಖ್ಯ ಹೇತುವಾದ ವೈದಿಕ ಸಿದ್ಧಾಂತಕ್ಕೆ ಕ್ರಾಂತಿಯುಂಟಾಗಿ ವೈದಿಕಗಳ ಮನಸಸ್ಸು ತಾಪ ಪಡಹತ್ತಿದೆ. ಈ ತಾಪವು ಸಾಮಾಜಿಕರ ವ್ಯವಸಾಯದಿಂದಲೇ ಶಾಂತವಾಗಬೇಕಲ್ಲದೆ ಉಪಾಯಾಂತರವಿಲ್ಲ.

**ಶೋಚನೀಯ ಅಂತರ್ದೃಷ್ಟಿ:** — ಈ ಕಾಲದಲ್ಲಿ ಯಾವ ಧರ್ಮದವರೇ ಆಗಲಿ ಅವರಲ್ಲಿ ಶಾಸ್ತ್ರೀಯೋಪದೇಶದಂತೆ ಇರಬೇಕಾದಷ್ಟು ಧರ್ಮಾಚರಣಬುದ್ಧಿಯು ಭದ್ರವಾಗಿರದೆ ಶಿಥಿಲವಾಗುತ್ತಲಿದೆ, ಎಂದು ಧಾರಾಳವಾಗಿ ಹೇಳಬಹುದು ಒಂದು ಸಾರಿ ಹಿಂದುವು ಮಹಮದೀಯನಾದರೆ ಅವನೇ ಇನ್ನೊಂದು ಸಾರಿ ಹಿಂದುವಾಗಿ ಬರುತ್ತಾನೆ. ಒಬ್ಬ ಖ್ರಿಸ್ತಿಯನ್ನನು ಹಿಂದುವಾಗಿ ಬಂದರೆ ಪುನಃ ಖ್ರಿಸ್ತಿಯನ್ನನೇ ಆಗಿಬರುವನು. ಒಂದು ಕಡೆಗೆ ಹಿಂದೂ ಸ್ತ್ರೀಯರನ್ನು ಮತಾಂತರದವರು ಲಗ್ನಮಾಡಿಕೊಂಡರೆ ಇನ್ನೊಂದು ಕಡೆಗೆ ಅವರ ಕನ್ಯೆಯನ್ನು ಹಿಂದುಗಳು ವಿವಾಹ ಮಾಡಿಕೊಳ್ಳುತ್ತಿರುವರು. ಒಂದು ನವೀನ ಮನುಷ್ಯ ಸಮಾಜವು, ಮನುಷ್ಯ ಜಾತಿಯೇ ಒಂದು; ಇನ್ನಾವ ಭೇದವೂ ಇಲ್ಲವೆಂದು ಉಪದೇಶಿಸಿದರೆ ಮತ್ತೊಂದು ಆಧುನಿಕ ಸಮಾಜವು ಎಲ್ಲರೂ 'ನಮ್ಮ ಧರ್ಮಕ್ಕೆ ಬನ್ನಿರಿ, ನಮ್ಮ ದೇವರನ್ನೇ ನಂಬಿರಿ, ನಿಮ್ಮ ದೇವರು ಕಲ್ಲು, ನಿಮ್ಮ ರಾಮಕೃಷ್ಣ ಮೊದಲಾದ ಅವತಾರಿಕ ಪುರುಷರು ಶುದ್ಧ ಮೋಸಗಾರರು' ಎಂದು ಉಪನ್ಯಾಸ ಮಾಡುತ್ತಿರುವದು. ತಿಳಿಗೇಡಿಗಳಿಗೆ ಬುದ್ಧಿಗಲಿಸಿ ಜಾತಿಭ್ರಷ್ಟರನ್ನಾಗಿ ಮಾಡುವ ನವೀನ ಪಂಥಗಳೆಷ್ಟೋ ಇವೆ. ಅವು

ಅವು ಎಷ್ಟಾದರೂ ಪರಕೀಯ ಸಂಘಗಳು. ಮತ್ತು ಆಂಗಿಕ ಬಲಾತ್ಕಾರವನ್ನು ತೋರಿಸದೆ ವಾಗ್ಜ್ವಾಲವನ್ನೇ ತೋರಿಸುವಂತಹವುಗಳು. ಅವುಗಳಿಂದ ವೈದಿಕ ಧರ್ಮವು ನಾಮಶೇಷವಾದೀತೆಂಬ ಭಯವು ವೈದಿಕ ಧರ್ಮದವರಿಗೆ ಇದುವರೆಗೂ ಬಲವಾಗಿ ತಟ್ಟಿರಲಿಲ್ಲ.

ಇತ್ತೀಚಿಗೆ ವೈದಿಕ ಧರ್ಮದವರ ಅನುಯಾಯಿಗಳಾಗಿ, ವೈದಿಕ ಧರ್ಮದ ಮರ್ಯಾದೆಯನ್ನೇ ಪೂರ್ವದಿಂದಲೂ, ಅಲ್ಪಸ್ವಲ್ಪ ಪರಿಪಾಲಿಸುತ್ತ ಬರುತ್ತಿದ್ದ ಚತುರ್ಥ ಮತ್ತು ಪಂಚಮ ಜನಾಂಗವೂ ಪೂರ್ವ ಪದ್ಧತಿಯನ್ನೂ, ಜಾತಿಕಟ್ಟಳೆಗಳನ್ನೂ, ಮುರಿದು ವಾಗ್ಜ್ವಾಲವನ್ನೂ, ಆಂಗಿಕಸಾಹಸವನ್ನೂ ತೋರಿಸುವದು, ಅಲ್ಲಲ್ಲಿ ನಡೆಯುತ್ತಿರುವ ಕಾರ್ಯಕ್ರಮಗಳ ಕೇಳುವಿಕೆಯಿಂದ ತಿಳಿದುಬರುತ್ತದೆ ಅಸ್ಪೃಶ್ಯತಾನಿವಾರಣೆ ಮತ್ತು ವಿದ್ಯಾಭಿವೃದ್ಧಿ ಇವುಗಳು ತಮ್ಮ ಜನಾಂಗದಲ್ಲಿ ಉಂಟಾಗಿ ಮೇಲುವರ್ಣದವರಂತೆ ತಾವೂ ಇರಬೇಕೆಂಬುದೇ ಇವರ ಉದ್ದೇಶವೆಂದು ತೋರುತ್ತದೆ. ಇದಕ್ಕೆ ಉತ್ತೇಜಕರೂ ಇರುವಂತೆ ತೋರುತ್ತದೆ. ವೈದಿಕ ಧರ್ಮದ ಅನುಯಾಯಿಗಳಾಗಿ ಅದರ ಪದ್ಧತಿಗಳ ಮೇಲೆಯೇ ಬಂದುದರಿಂದ ಅದಕ್ಕೆ ಅಳಿಗಾಲವೂ ಬಂದಂತಾಯಿತೆಂಬ ಮಹಾಭಯವು ವೈದಿಕ ಧರ್ಮದ ಕೆಲವರಿಗೆ ಪ್ರಾಪ್ತವಾಗಿದೆ. 'ಇಂಥ ವಿಪತ್ತನ್ನು ಪರಿಹರಿಸಿ ವೈದಿಕ ಧರ್ಮವನ್ನು ಕಾಪಾಡುವ ಭಾರವೂ ನಿನ್ನದಾಗಿದೆ' ಎಂದು ಜಗದೀಶನನ್ನು ಪ್ರಾರ್ಥಿಸುವದೊಂದೇ ಉಪಾಯವು. ವೈದಿಕರ ವಶದಲ್ಲಿದೆ. ಹೊರತಾಗಿ ಬೇರೆ ಇಲ್ಲ. ತ್ರೈವರ್ಣಿಕ ಸಮಾಜದ ನವನಾಗರಿಕರ ಅಂತರ್ದೃಷ್ಟಿಯು ತತ್ವಾಂತರಗಳಲ್ಲಿಯೇ ಅಧಿಕವಾಗಿ ಸ್ವಧರ್ಮದ ತತ್ವದ ಕಡೆಗೆ ಕಡಿಮೆಯಾಗುತ್ತ ಬಂದದ್ದು ತುಂಬ ಶೋಚನೀಯವು.

**ಖಡ್ಗಪ್ರಹಾರ:—** ಕಲಿಯುಗದ ಆರಂಭದಿಂದ ಬೌದ್ಧಮತದ ಸ್ಥಾಪನೆಯವರೆಗೂ, ವೈದಿಕ ಸಾಮ್ರಾಜ್ಯದ ಸ್ಥಿತಿಯು ಚನ್ನಾಗಿಯೇ ಇದ್ದಿತು. ಪೂರ್ವಯುಗೀನ ತಪಸ್ವಿಗಳು ಆಗ ಉಪಲಬ್ಧರಾಗುತ್ತಿದ್ದರು. ಆಗಿನ ರಾಜರಾದರೂ ಕೇವಲ ವೈದಿಕ ಧರ್ಮವನ್ನೇ ಅಭಿಮಾನಿಸುತ್ತಿದ್ದರಿಂದ ಬೇಕಾದ ರಾಜಕೀಯ ಸಲಹೆಗಳು ದೊರೆಯುತ್ತಿದ್ದವು. ಬೌದ್ಧ ಮತವುಪ್ರಚಾರಕ್ಕೆ ಬಂದನಂತರ ವೈದಿಕಮತವು ಲುಪ್ತಪ್ರಾಯವಾಗುತ್ತಬಂದಿತು. ಈ ಬೌದ್ಧಮತವ್ಯಾಪ್ತಿಯೇ ಕಲಿಯುಗದಲ್ಲಿ ವೈದಿಕ ಧರ್ಮದ ಮೇಲೆ ಬಿದ್ದ ಪ್ರಬಲವಾದ ಮೊದಲನೇ ಆಘಾತವು. ಬೌದ್ಧಧರ್ಮದಿಂದಲೇ ಶಾಖಾಂತರವಾಗಿ ಹೊರಟ ಜೈನಧರ್ಮದ ಪ್ರಸಾರವು ಎರಡನೇ ಪೆಟ್ಟು. ಮಹಮುದೀಯಧರ್ಮದ ಭಯಂಕರ ವ್ಯಾಪ್ತಿಯು ಮೂರನೇ ಪೆಟ್ಟು. ಖ್ರಿಸ್ತಧರ್ಮವ್ಯಾಪ್ತಿಯ ಕಾರ್ಯಕ್ರಮವು ನಾಲ್ಕನೇ ಆಹತಿ. ಆಧುನಿಕ ಸಮಾಜಗಳ ಹೊಸತತ್ವಪ್ರಚಾರವು ಐದನೇ ಸಂಘಟನ. ನವನಾಗರಿಕರ ಸ್ವಚ್ಛಂದವೃತ್ತಿಯು ಆರನೇ ಆಘಾತ. ಇಷ್ಟು ವ್ಯಾಹತಿಗಳನ್ನು ಸಹಿಸಿರುವದು ಸಾಲದುದಕ್ಕೆ ಈ ಹತ್ತೊಂಬತ್ತನೇ ಶತಮಾನದ ತೃತೀಯ ದಶಕದಲ್ಲಿ 'ಅಸ್ಪೃಶ್ಯತಾನಿವಾರಣೆ ಅಥವಾ ಅಂತ್ಯಜೋದ್ಧಾರ'ವೆಂಬ ಖಡ್ಗಪ್ರಹಾರವಾಗಿರುವದು. ಇದನ್ನು ಳಿದ ಯಾವ ಆಸ್ತಿಕನು ದುಃಖಾರ್ಣವದಲ್ಲಿ ಮಗ್ನನಾಗಲಾರನು?

**ಅತ್ಯಾಚಾರದ ಕೃತ್ಯ:—** ಹಿಂದೂಸಮಾಜದಲ್ಲಿ ಶೂದ್ರಜಾತಿಯೂ ಪಂಚಮವರ್ಗವೂ, ವಿದ್ಯೆ, ಬುದ್ಧಿ, ಲೌಕಿಕವ್ಯವಹಾರ ಇವುಗಳ ಅಭಾವದಿಂದ ಬಹಳಹಿಂದುಳಿದಿರುವದೆಂಬುದೂ ಇದನ್ನು ಮುಂದೆ ತರುವದಕ್ಕಾಗಿ ಸಾರ್ವಭೌಮ ಸರ್ಕಾರದವರೂ, ದೇಶೀಯ ಪ್ರಮುಖರೂ, ಪ್ರಯತ್ನಪಡುತ್ತಿರುವರೆಂಬುದೂ ಎಲ್ಲರೂ ತಿಳಿದ ಅಂಶವೇ ಆಗಿದೆ. ವಿದ್ಯೆ-ಬುದ್ಧಿ ಲೌಕಿಕ ವ್ಯವಹಾರಗಳಿಂದ ಅವರು ಸುಸಂಪನ್ನರಾಗಬೇಕಾದದ್ದು ಯುಕ್ತವಾದದ್ದೇ ಆಗಿದೆ. ಆದರೆ ಧರ್ಮದ ವಿಷಯದಲ್ಲಿ ಬಲಾತ್ಕಾರದಿಂದ ನಡಿಸುವ ಅತ್ಯಾಚಾರವು ಮಾತ್ರ ಯೋಗ್ಯವಾದುದಲ್ಲ (೧) ಬಲಾತ್ಕಾರದಿಂದ ದೇವಾಲಯವನ್ನು ಪ್ರವೇಶಿಸಿ ಹೋಗಬಾರದ ಜಾಗಾದವರೆಗೂ ಹೋಗುವದು. (೨) ಬ್ರಹ್ಮಸಭೆಯನ್ನು ಹಟದಿಂದ ನುಗ್ಗುವದು. (೩) ಯಜ್ಞ-ಯಾಗಾದಿ ಕರ್ಮಗಳನ್ನು ಕೆಡಿಸಿಬಿಡಬೇಕೆಂಬುವು. ಇವೇ ಮೊದಲಾದ ಕೃತ್ಯಗಳು ಅತ್ಯಾಚಾರದ ಲಕ್ಷಣಗಳಾಗಿವೆ. ಅತ್ಯಾಚಾರಗಳನ್ನು ಯುಗಾಂತರಗಳಲ್ಲಿ ರಾಕ್ಷಸರು ನಡಿಸುತ್ತಿದ್ದರೆಂದು ರಾಮಾಯಣಾದಿ ಗ್ರಂಥಗಳಿಂದ ಎಲ್ಲರೂ ತಿಳಿದದ್ದಾಗಿದೆ.

**ಅಕ್ರಮವು ಸರ್ವಾನರ್ಥಗಳಿಗೂ ಮೂಲ :—** ಹಿಂದೂಧರ್ಮಶಾಸ್ತ್ರದ ಆಧಾರದಂತೆ ಮಾಡಬಾರದ ಕಾರ್ಯವನ್ನು ಮಾಡಿದರೂ, ತಪ್ಪು ಮಾಡಬೇಕಾದ ಕಾರ್ಯವನ್ನು ಬಿಟ್ಟರೂ ಅಪರಾಧ. ಹಾಗೆಯೇ ಯಾವ ಕಾರ್ಯಗಳನ್ನೇ ಆಗಲಿ ಕ್ರಮವಾಗಿ ನಡಿಸುವದು ಯುಕ್ತವಲ್ಲದೆ, ಅಕ್ರಮದಿಂದ ನಡಿಸುವದು ಅಯೋಗ್ಯವೆನಿಸುವದು. ಮಾಡಬಾರದ ಕಾರ್ಯಗಳನ್ನು ಮಾಡಿದವರು ನರಕಭಾಗಿಗಳಾಗುತ್ತಾರೆ. ಕರ್ತವ್ಯ ಕರ್ಮಗಳನ್ನು ಕ್ರಮವಾಗಿ ನಡಿಸಿದವನಿಗೆ ಸ್ವರ್ಗಾದಿಲೋಕ

ಪ್ರಾಪ್ತಿಯಾಗುವದೆಂದೂ, ನಮ್ಮ ಶಾಸ್ತ್ರದಲ್ಲಿ ಪ್ರತಿಪಾದಿತವಾಗಿದೆ. ಅಕ್ರಮದಿಂದ ಕಾರ್ಯನಡಿಸಿದವನು ಕಾಯದೆ ಪ್ರಕಾರ ಅಪರಾಧಿಯಾಗುತ್ತಿದ್ದು ರಾಜಶಿಕ್ಷೆಗೆ ಅರ್ಹನಾಗುತ್ತಾನೆ. ಕ್ರಮದಿಂದ ಕಾರ್ಯ ನಡಿಸುವವನು ರಾಜಪ್ರಸಾದಕ್ಕೆ ಪಾತ್ರನಾಗುವನಲ್ಲದೆ, ಸಮಾಜದಲ್ಲಿ ಕೀರ್ತಿವಂತನೂ ಆಗುವನು. ಇದರಂತೆ ಕರ್ತವ್ಯಕರ್ಮಗಳನ್ನು ನಡಿಸುವದರಿಂದ ಈಶ ಪ್ರಸಾದವು ಲಭಿಸಿ ಕ್ರಮದಿಂದ ಆತ್ಮೋನ್ನತಿಯಾಗುವದು. ಇಂಥ ಉದಾತ್ತ ತತ್ವವನ್ನು ಬಿಟ್ಟು ಬಲಾತ್ಕಾರದಿಂದ ಅಕ್ರಮ ಕಾರ್ಯ ನಡಿಸುವದು ಸರ್ವಾನರ್ಥಕ್ಕೂ ಮೂಲವಾಗುವದು. ವೈದಿಕಧರ್ಮವೂ ಗತಪ್ರಾಣವಾಗುವದೆಂಬದರಲ್ಲಿ ಸಂದೇಹವೇ ಇಲ್ಲ.

**ಕ್ರಮೋನ್ನತಿಯ ಮರ್ಮ:—** ಭಗವಂತನ ಸೃಷ್ಟಿಯನ್ನು ಕ್ರಮದಿಂದಲೇ ಸೃಷ್ಟಿಸಿದನು. ಕ್ರಮವಾಗಿಯೇ ವರ್ಣಗಳನ್ನು ಸ್ಥಾಪಿಸಿದನು. ಕ್ರಮದಿಂದಲೇ ಧರ್ಮವನ್ನು ವಿಭಾಗಿಸಿಕೊಟ್ಟನು. ಕ್ರಮವಾಗಿಯೇ ಅವತಾರವನ್ನೆತ್ತಿದನು. ಕ್ರಮವಾಗಿಯೇ ದುಷ್ಟರನ್ನು ಸಂಹರಿಸಿದನು. ಕ್ರಮವಾಗಿಯೇ ಧರ್ಮೋಪದೇಶವನ್ನು ಮಾಡಿದನು. ಕ್ರಮದಿಂದಲೇ ಜನರಿಗೆ ಪುಣ್ಯಪಾಪಾನುಸಾರವಾಗಿ ಸದ್ಗತಿದುರ್ಗತಿಗಳನ್ನು ಕೊಡುವನು. ಕ್ರಮವಾಗಿಯೇ ಪ್ರಾಣಿಗಳನ್ನು ಉದ್ಧರಿಸುವನು. ಕ್ರಮದಿಂದಲೇ ಸೃಷ್ಟಿಯನ್ನು ಪರಿಪಾಲಿಸುವನು. ಕ್ರಮವಾಗಿಯೇ ಸೃಷ್ಟಿಯನ್ನು ಉಪಸಂಹರಿಸುತ್ತಾನೆ.

ಹಾಗೆಯೇ ಸೃಷ್ಟಿಗತವಾಗಿದ್ದ ಸಚೇತನ ಮತ್ತು ಅಚೇತನ ಪದಾರ್ಥಗಳಲ್ಲಿಯೂ, ಕ್ರಮವೇ ತೋರಿಬರುತ್ತದೆ. ಹಾಗೂ ಕ್ರಮದಿಂದಲೇ ಅವುಗಳ ಉನ್ನತಿಯು, ಆಗುತ್ತದೆ. ಒಂದು ಪ್ರಾಣಿಯ ವಿಚಾರವನ್ನು ಗರ್ಭವಾಸಾದಿ ದೇಹಪಾತದವರೆಗೂ ಮಾಡಿದರೆ ಆ ಮಧ್ಯಕಾಲವು ಕ್ರಮದಿಂದ ಹೇಗೆ ಸಾಗುವದೆಂಬುದು ತಿಳಿಯ ಬರುತ್ತದೆ. ಒಂದು ಬೀಜವು ಅಂಕುರಾವಸ್ಥೆಯಿಂದ ಲತೆ ಅಥವಾ ವೃಕ್ಷವಾಗಿ ಅದಕ್ಕೆ ಅನುರೂಪವಾದ ಪುಷ್ಪಫಲಗಳನ್ನು ಪಡೆಯುವವರೆಗೂ, ಅನಂತರವೂ, ಕ್ರಮದ ನಿಯಮವೇ ಅದಕ್ಕೆ ಸಂಬಂಧಿಸಿರುವದೆಂಬುದು ತಿಳಿಯುತ್ತದೆ. ಒಂದು ಸಣ್ಣ ಕಲ್ಲು ನೆಲಕ್ಕೆ ತಳವೂರಿಕೊಂಡು ಇದ್ದ ಜಾಗಾದಲ್ಲಿಯೇ ಇದ್ದರೆ ಕ್ರಮವಾಗಿ ಅದು ದೊಡ್ಡ ಪರ್ವತಾಕಾರ ಹೊಂದಲಿಕ್ಕು ಸಾಧ್ಯವಿದೆ. ಬೆಲ್ಲದ ಮೂಲವು ಕಬ್ಬು. ಅದು ಬೆಲ್ಲದ ಸ್ಥಿತಿಗೆ ಇಳಿಯುವ ವರೆಗೆ ಕಬ್ಬಿನ ವ್ಯವಸಾಯವೂ ಹೇಗೆ ಸಾಗುವದೆಂದು ವಿಚಾರಿಸಿದರೆ ಕ್ರಮದ ಮಹತ್ವವು ಚನ್ನಾಗಿ ತಿಳಿಯುತ್ತದೆ. ಹುಟ್ಟಿದೊಡನೆಯೇ ಮನುಷ್ಯನು ಮುದುಕನಾಗುವನೇ? ಬೀಜವು ನೆಲವನ್ನು ಕಂಡೊಡನೆಯೇ ಅಥವಾ ಅಂಕುರಿಸಿದೊಡನೇ ಪುಷ್ಪ–ಫಲಗಳಿಂದ ಭರಿತವಾದ ಲತೆ ಅಥವಾ ವೃಕ್ಷವಾಗುವದೇ ? ನೆಲದ ಮೇಲಿದ್ದ ಸಣ್ಣ ಕಲ್ಲು ಒಮ್ಮೆಗೆ ಪರ್ವತಾಕಾರವನ್ನು ಪಡೆಯುವದೇ? ಕಬ್ಬು ಹಲವು ಸಂಸ್ಕಾರದ ಹೊರತು ಬೆಲ್ಲವಾದೀತೇ ? ನೂರಾರು ಮೈಲು ದೂರದಲ್ಲಿರುವ ಒಂದು ಪಟ್ಟಣಕ್ಕೆ ಕಾಲುನಡುಗೆಯಿಂದ ಯೋಗಸಾಧ್ಯರ ಹೊರತು ಸಾಮಾನ್ಯ ಮನುಷ್ಯರಿಂದ ಒಂದೇ ದಿವಸದಲ್ಲಿ ಹೋಗಿ ಸೇರಲು ಸಾಧ್ಯವೇ ? ಪಾಠಶಾಲೆಗೆ ಸೇರಿದೊಡನೆಯೇ ವಿದ್ಯಾರ್ಥಿಯು ಸಂಸ್ಕೃತಜ್ಞನಾಗುವನೇ? ಅನೇಕ ಸೋಪಾನಗಳನ್ನು ಒಂದೇ ಸಾರಿ ಏರಲು ಶಕ್ಯವೇ? ಹೇರಳವಾದ ಸಾಲವು ಒಂದೇ ಕಾಲಕ್ಕೆ ತೀರುವದೇ ? ಅನಂತವಾದ ಐಶ್ವರ್ಯವು ಒಂದೇ ದಿವಸದಲ್ಲಿ ಉಪಭೋಗದಿಂದ ಮುಗಿದು ಹೋಗುವದೇ ? ಎಲ್ಲವೂ ಕ್ರಮದಿಂದಲೇ ಸಾಧ್ಯವಿರುವವಷ್ಟೇ? ಆದುದರಿಂದ ಜಗತ್ತಿನ ಚೇತನಾಚೇತನ ಪದಾರ್ಥಗಳ ಉನ್ನತಿಯು ಕ್ರಮದಿಂದಲೇ ಆಗುವದೆಂಬುದು ಸಿದ್ಧವಾಯಿತು.

**ಮಹತ್ವದ ಪ್ರಶ್ನೆಗಳು :—** ಸೃಷ್ಟಿಯ ತತ್ವವು ಅವಿವರ್ಣ್ಯ ಮತ್ತು ಅಗಣ್ಯವಾಗಿದೆ. ಇದ್ದರೂ ಈ ಸೃಷ್ಟಿಯನ್ನು ದೇವರು ಯಾವಾಗ ಏತಕ್ಕಾಗಿ ಮಾಡಿದನು ? ಹಿಂದೆ ಸೃಷ್ಟಿಯನ್ನು ಸೃಷ್ಟಿಸಿದ್ದನೋ ಇಲ್ಲವೋ ? ಸೃಷ್ಟಿಸಿದ್ದರೆ ಎಷ್ಟು ಸಾರಿ ಸೃಷ್ಟಿಸಿದ್ದನು ? ಮುಂದೆ ಎಷ್ಟು ಸಾರಿ ಸೃಷ್ಟಿಸುವನು ಹಿಂದೆ ಸೃಷ್ಟಿಸಿದ್ದಲ್ಲಿ ಆ ಸೃಷ್ಟಿಗೂ, ಈ ಸೃಷ್ಟಿಗೂ ಮುಂದೆ ಸೃಷ್ಟಿಸಬಹುದಾದ ಸೃಷ್ಟಿಗೂ ಸಂಬಂಧ ಮತ್ತು ಅಂತರವೇನಿದೆ, ಪ್ರತಿಸೃಷ್ಟಿಯಲ್ಲಿಯೂ ಪ್ರಾಣಿಗಳನ್ನು ಸ್ವತಂತ್ರವಾಗಿಯೇ ಸೃಷ್ಟಿಸುವನೋ ? ಹಿಂದಿನ ಸೃಷ್ಟಿಯ ಸಂಬಂಧವು ಪ್ರಾಣಿಗಳಿಗೆ ಉಂಟೋ ಇಲ್ಲವೋ ? ವರ್ಣವಿಭಾಗಗಳು ಆಶ್ರಮ ವಿಭಾಗಗಳು ಪೂರ್ವ ಸೃಷ್ಟಿಗಳಲ್ಲಿ ಆಗಿದ್ದವೋ ? ಇಲ್ಲವೆ ಇದೇ ಸೃಷ್ಟಿಯಲ್ಲಿ ಉಂಟಾದವುಗಳೋ ? ನಾಲ್ಕನೇ ವರ್ಣದವರ ಅಸ್ಪೃಶ್ಯತೆಗೆ ಮೂಲ ತತ್ವವಾವುದು ? ಮೇಲಿನ ಮೂರು ವರ್ಣದವರಲ್ಲಿ ಪರಸ್ಪರ ಸ್ಪೃಶ್ಯತೆಗೆ ಹೇತುವೇನು ? ಹೇಗೆ ನಡೆದರೆ ಕ್ರಮೋನ್ನತಿಯಾಗುವದು. ಇತ್ಯಾದಿ ಸಂದೇಹ ಪ್ರಶ್ನೆಗಳು ಮಹತ್ವದವುಗಳಾದುದರಿಂದ ಯಥಾಮತಿಯಾಗಿ ಇಲ್ಲಿ ಹೇಳೋಣ.

**ಸೃಷ್ಟಿವಿಮೀಮಾಂಸೆ:**–ಸೃಷ್ಟಿಯನ್ನು ದೇವರು ಲೀಲಾರ್ಥವಾಗಿ ಸೃಷ್ಟಿಸಿರುವನೆಂದು ಹೇಳಬೇಕು. ಹಿಂದೆ ಎಷ್ಟು ಸೃಷ್ಟಿಗಳಾಗಿ ಹೋದವು ? ಯಾವ ಸೃಷ್ಟಿಯು ಮೊದಲನೆಯದು ಎಂಬದನ್ನು ನಿರ್ಣಯಿಸಲಿಕ್ಕೆ ಹೊರಟರೆ ಅದು ಬೀಜವೃಕ್ಷ ನ್ಯಾಯದಂತೆ ಕೊನೆಗಾಣುವಂತೆ ಇಲ್ಲ. ಹೀಗೆಯೇ ಮೊಟ್ಟೆಯಿಂದ ಪಕ್ಷಿಯು ಹೊರಗೆ ಬರುತ್ತದೆ. ಮೊಟ್ಟೆಯನ್ನು ಪಕ್ಷಿಯು ಇಡುತ್ತದೆ. ಈ ವಿಷಯದಲ್ಲಿ ಯಾವ ಬೀಜವು ಮೊದಲನೆಯದೆಂಬುದನ್ನೂ ಯಾವ ಮೊಟ್ಟೆಯು ಮೊದಲನೆಯದೆಂಬದನ್ನು ನಿಶ್ಚಯಿಸಲಿಕ್ಕಾಗುವದೇ ಇಲ್ಲ. ಒಂದಕ್ಕೆ ಇನ್ನೊಂದು ಮೊದಲನೆಯದೆಂಬುದನ್ನೆಣಿಸುತ್ತ ಗಣಿತ ಮರ್ಯಾದೆಯನ್ನು ಮೀರಿದರೂ, ನಿಲುಕುವದಿಲ್ಲ. ಇದಕ್ಕೆ ತರ್ಕ ಶಾಸ್ತ್ರಕಾರರು ಅನವಸ್ಥಾಪ್ರಸಂಗವೆಂದು ಅಂದಿರುತ್ತಾರೆ. ಆದುದರಿಂದ ಮೊದಲನೆಯ ಸೃಷ್ಟಿಯ ನಿಶ್ಚಯಕ್ಕೆ ಹೋಗುವದು ವ್ಯರ್ಥ. ಸೃಷ್ಟಿಗೆ ಉಪಕ್ರಮೋಪಸಂಹಾರಗಳ ಸಂಬಂಧವಿರುವದೆಂದು ಶಾಸ್ತ್ರ ಪ್ರಮಾಣವಿದ್ದುದರಿಂದ ಅನೇಕ ಸೃಷ್ಟಿಗಳಾಗುತ್ತಿರುವದೆಂದು ತಿಳಿಯಬೇಕು.

ಮೊದಲನೆಯ ಸೃಷ್ಟಿಯು ಇದೇ ಸರಿ ಎಂದು ನಿರ್ಣಯಿಸಲಿಕ್ಕಾಗದಿದ್ದರೂ, ಅದರ ಸಂಬಂಧವು ಉತ್ತರೋತ್ತರ ಸೃಷ್ಟಿಗಳಿಗೆ ಇದ್ದೇ ಇರುವದು. ಪೂರ್ವಸೃಷ್ಟಿಗಿಂತಲೂ, ಉತ್ತರ ಸೃಷ್ಟಿಯ ಕೆಲವು ಅಂಶಗಳಲ್ಲಿ ಮಾತ್ರ ಸ್ವಲ್ಪ ಮಟ್ಟಿಗೆ ವ್ಯತ್ಯಾಸವು ತೋರಿಬಂದರೂ, ಪ್ರಾಯಃ ಪೂರ್ವ ಸೃಷ್ಟಿಯ ಹೋಲುವಿಕೆಯೇ ಅಧಿಕವಾಗಿರುತ್ತದೆ. ಪ್ರಾಥಮಿಕ ಸೃಷ್ಟಿಯನ್ನು ಮಾಡಿದಾಗ ಈಶ್ವರನು ಸೃಷ್ಟಿಯ ಉದ್ಧಾರಕ್ಕಾಗಿಯೂ ಧರ್ಮವನ್ನು ಸ್ಥಾಪಿಸುವ ದೆಸೆಯಿಂದಲೂ, ಅದನ್ನು ಪರಿಪಾಲಿಸಲಿಕ್ಕೂ ಮನುಷ್ಯ ವರ್ಗವು ಸಮರ್ಥವಾದದ್ದೆಂದು ತಿಳಿದು ಧರ್ಮದ ಭಾರವನ್ನು ವಹಿಸುವ ದೆಸೆಯಿಂದಲೂ, ವಹಿಸಿದ ಧರ್ಮವನ್ನು ನಡಿಸದಿದ್ದವರ ಶಿಕ್ಷಣೆಯ ದೆಸೆಯಿಂದಲೂ, ಯಾವಾವ ವರ್ಣವು ಎಷ್ಟೆಷ್ಟು ಧರ್ಮ ಮತ್ತು ಆಚಾರಗಳನ್ನು ನಡಿಸಲು ಯೋಗ್ಯವಿರುವದೆಂಬುದರ ದೆಸೆಯಿಂದಲೂ ಆವಾವ ವರ್ಣಕ್ಕೆ ಸರಿಯಾಗಿ ಧರ್ಮವನ್ನು ವಿಭಾಗಿಸಿಕೊಡುವ ದೆಸೆಯಿಂದಲೂ, ಹೆಚ್ಚು ಕಾಲ ಯೋಚಿಸಿ ವ್ಯವಸ್ಥೆಗೊಳಿಸಿದನು. ಉತ್ತರ ಸೃಷ್ಟಿಯನ್ನು ಮಾಡುವಾಗ ಅಷ್ಟು ಯೋಚಿಸದೆ ಪೂರ್ವ ಸೃಷ್ಟಿಯ ಸಂವಿಧಾನವನ್ನೇ ಸ್ಮರಿಸುವದರಿಂದ ಪೂರ್ವ ಸೃಷ್ಟಿಯ ಆನುಪೂರ್ವಿಗೆ ವ್ಯತ್ಯಾಸವಿಲ್ಲದೆ, ಸೃಷ್ಟಿಯಾಗುವದು. ಇಷ್ಟೇ ಪ್ರಾಥಮಿಕ ಸೃಷ್ಟಿಗೂ ಉತ್ತರ ಸೃಷ್ಟಿಗೂ ಇರುವ ಅಂತರ.

**ಅಸ್ಪೃಶ್ಯತೆ:—** ಉತ್ತರಸೃಷ್ಟಿಯಲ್ಲಿ ಪ್ರಾಣಿಗಳು ಪೂರ್ವ ಸೃಷ್ಟಿಯಲ್ಲಿ ತಾವು ನಡಿಸಿದ ಕರ್ಮಶೇಷದಿಂದ ಜನಿಸುತ್ತಾರೆ. ಅಂದರೆ ಆ ಕರ್ಮತತ್ವಾನುಸಾರವಾಗಿಯೇ ಪ್ರಾಣಿಗಳನ್ನು ಸ್ವಾಮಿಯು ಸೃಷ್ಟಿಸುವನು. ಮತ್ತು ಹಿಂದಿನ ಸೃಷ್ಟಿಯಲ್ಲಿ ಪ್ರಾಣಿಗಳ ಚರಿತ್ರೆಗಳು ಎಲ್ಲಿಯ ವರೆಗೆ ಸಾಗಿದ್ದವೋ ಅಲ್ಲಿಂದಲೇ ಉತ್ತರ ಸೃಷ್ಟಿಯಲ್ಲಿ ಮುಂದಕ್ಕೆ ಸಾಗುವಂತೆ ಮಾಡುವನು. ಆದಿ ಸೃಷ್ಟಿಯಲ್ಲಿ ಈಶ್ವರನ ಆಜ್ಞೆಯಂತೆ ವಿಭಾಗಾನುಸಾರ ಧರ್ಮವನ್ನು ನಡಿಸಲಿಕ್ಕೆ ಸಿದ್ಧರಾದ ಚಾತುರ್ವರ್ಣ್ಯದವರಲ್ಲಿ ಚತುರ್ಥ ವರ್ಣದ ಕೆಲವರು ಅತಿಶಯ ಹಿಂದುಳಿದುದರಿಂದಲೂ, ಇನ್ನೂ ಕೆಲವು ಸಂಕರ ಕಾರಣಗಳಿಂದಲೂ, ಪಂಚಮತ್ವವನ್ನು ಹೊಂದಿದರು. ಮೇಲಿನ ಮೂರು ವರ್ಣಗಳು ಅವಿವೇಕದಿಂದ ಪತಿತರಾದರೆ ಶೂದ್ರವರ್ಣಕ್ಕೆ ಸೇರಲಿಕ್ಕೆ ಬರುತ್ತದೆ. ಶೂದ್ರರಲ್ಲಿ ಪತಿತರಾದರೆ ಪಂಚಮರಲ್ಲಿ ಸೇರಬೇಕೇ ಹೊರತು ಉಪಾಯಾಂತರವಿಲ್ಲ. ಶೂದ್ರರಲ್ಲಿ ಸಚ್ಛೂದ್ರರೆಂತಲೂ, ಅತಿಶೂದ್ರರೆಂತಲೂ, ಎರಡು ವರ್ಗಗಳನ್ನು ಮಾಡಬಹುದು. ಇದನ್ನು ಸ್ಮೃತಿಯು ಪ್ರತಿಪಾದಿಸುತ್ತದೆ. ಕೆಲವು ಅಂತರಗಳಿಂದ ಮೇಲುವರ್ಣದವರು ಸಚ್ಛೂದ್ರರ ಸ್ಪೃಶ್ಯತೆಯನ್ನು ಗ್ರಾಹ್ಯಮಾಡಿ ಆಚರಣೆಯಲ್ಲಿಟ್ಟುಕೊಂಡರು. ಅತಿಶೂದ್ರರ ಅಸ್ಪೃಶ್ಯತೆಯನ್ನು ಪರಿಪಾಲಿಸುತ್ತಲೇ ಬಂದಿರುತ್ತಾರೆ. ಅಂದಮೇಲೆ ಪಂಚಮರದೇನು ಹೇಳತಕ್ಕದ್ದು?

**ಪಾಪಿಗೆ ಪ್ರಾಯಶ್ಚಿತ್ತ:—**ಮೇಲುವರ್ಣದವರು ತಮ್ಮ ಕರ್ತವ್ಯಕರ್ಮಗಳನ್ನು ಬಿಟ್ಟು ಸ್ವಚ್ಛಂದವೃತ್ತಿಯಿಂದ ನಡೆದರೆ ಮತ್ತು ಘೋರ ಪಾಪಕೃತ್ಯಗಳನ್ನು ಮಾಡಿದರೆ ಲೋಪದ ತಾರತಮ್ಯದಿಂದ ( ಯೋಗ್ಯತಾನುಸಾರ ) ಶೂದ್ರತ್ವವನ್ನೂ ಶೂದ್ರಜನ್ಮವನ್ನೂ, ಚಾಂಡಾಲಜನ್ಮವನ್ನೂ, ಪಡೆಯುವರೆಂದು ಮನ್ವಾದಿ ಸ್ಮೃತಿಗ್ರಂಥಗಳು ವಿಧಿಸುತ್ತವೆ. ಪುರಾಣಗಳಲ್ಲಿಯಾದರೂ ಇದಕ್ಕೆ ಬೇಕಷ್ಟು ಉದಾಹರಣೆಗಳು ದೊರೆಯುತ್ತವೆ. ಮಾಂಡವ್ಯಶಾಪದಿಂದ ಯಮನು ಶೂದ್ರಸ್ತ್ರೀಯಲ್ಲಿ ಜನಿಸಿ ವಿದುರನೆಂಬ ಹೆಸರಿನಿಂದ ಪ್ರಸಿದ್ಧನಾಗಿ ಹೋದನು. ಒಬ್ಬ ಋಷಿ ಪುತ್ರನು ಪಿತೃ ಶಾಪದಿಂದ ರಾಮಾಯಣದಲ್ಲಿ ಹೇಳಿದ ಗುಹನಾಗಿದ್ದನು. ಒಬ್ಬ ಮಹಾತಪಸ್ವಿಯು ಆಕಸ್ಮಿಕವಾಗಿ ಸಂಘಟಿಸಿದ ಒಂದು ಪ್ರಮಾದದ ನಿಮಿತ್ತದಿಂದ ಜನ್ಮಾಂತರ

ವನ್ನು ಪಡೆದು ಅಕಬರಬಾದಶಹನೆಂದು ಪ್ರಸಿದ್ಧನಾದ ಸಂಗತಿಯು ಭವಿಷ್ಯ ಪುರಾಣದಿಂದ ತಿಳಿದು ಬರುತ್ತದೆ. ಏವಂಚ ಪಾಪ ಪರಿಹಾರಕ್ಕೆ ಚತುರ್ಥ ಪಂಚಮ ಜನ್ಮಗಳು ಸಾಧನಗಳೆಂಬುದೂ, ತ್ರಿಕರಣಗಳಿಂದಲೂ, ಮೇಲುವರ್ಣದವರಂತೆ ಈ ಸಮಾಜದವರೂ, ಹೆದರಿ ನಡೆಯಬೇಕೆಂಬುದೂ ಇದರಿಂದ ಸಿದ್ಧವಾಗುವದು. ಹಾಗೆ ಅವರು ನಡಿಯದಿದ್ದರೆ, ಜೀವವರ್ಗಕ್ಕೆ ಶ್ರೇಷ್ಠವೆಂದೆನಿಸಿದ ಅಮೂಲ್ಯ ಮತ್ತು ದುರ್ಲಭವಾದ ಮನುಷ್ಯಜನ್ಮದ ಭವಿಷ್ಯ ಸಂಕೇತಗಳನ್ನು ನಷ್ಟಪಡಿಸಿಕೊಂಡಂತಾಗಿ, ಜನ್ಮಾಂತರದಲ್ಲಿ ತಿರ್ಯಗ್ಯೋನಿ (ಪಶು ಪಕ್ಷಿ ಮೃಗ ಮೊದಲಾದ ಜನ್ಮ)ಗಳನ್ನು ಪಡೆದು ಅನರ್ಥ ಪರಂಪರೆಗೆ ಗುರಿಯಾಗುವರೆಂದು ಧರ್ಮಶಾಸ್ತ್ರಗಳು ಪ್ರತಿಪಾದಿಸುತ್ತವೆ.

**ಬ್ರಹ್ಮ ಜನ್ಮದ ಮಹತ್ವ:—** ಜೀವನ ಅವನತಿಯಾಗಲಿ, ಉನ್ನತಿಯಾಗಲಿ, ಮನುಷ್ಯ ಜನ್ಮದಿಂದಲೇ ಆರಂಭವಾಗುವುದು. ಮನುಷ್ಯನು "ಸ್ವಕರ್ಮಸೂತ್ರಗ್ರಥಿತೋಹಿ ಲೋಕಃ" ಎಂಬಂತೆ ಕರ್ಮಸೂತ್ರದಿಂದ ಬದ್ಧನಾದವನಿರುತ್ತಾನೆ. ತನ್ನ ಕರ್ಮಾನುಸಾರ ಫಲವನ್ನು ಉಪಭೋಗಿಸುತ್ತಿರುತ್ತಾನೆ. ಧರ್ಮಾಧರ್ಮ ನಿಯಮಗಳ ಸಂಬಂಧವೂ, ಅವುಗಳ ಪರಿಣಾಮಗಳ ಸಂಘಟನೆಯೂ, ಮನುಷ್ಯನಿಗಲ್ಲದೆ ಇತರ ಜೀವಿಗಳಿಗಿರುವದಿಲ್ಲ. ಜೀವನ ಚರಿತಾರ್ಥವನ್ನಷ್ಟೇ ಸಾಗಿಸಿಕೊಳ್ಳಲಿಕ್ಕೆ ಅವುಗಳಿಗೆ ಗೊತ್ತಿದ್ದುದು. ಸುಖ ಪಡಬೇಕೆಂಬ ಇಚ್ಛೆಯು ಮಾತ್ರ ಮನುಷ್ಯನಲ್ಲಿದ್ದಂತೆ ಅವುಗಳಲ್ಲಿಯೂ ಅದೆ. ಈಜಲಿಕ್ಕೆ ಬರುವ ಒಬ್ಬನು ನೀರಿನ ಮಡುವಿನಲ್ಲಿ ಹಾರಿಕೊಂಡನೆಂದರೆ ಅವನು ಮುಳುಗುವಷ್ಟು ಮುಳುಗಿ ತಿರುಗಿ ಮೇಲಕ್ಕೇರುವನು. ಹಾಗೆಯೇ ಮೇಲಕ್ಕೊಂದು ಕಲ್ಲನ್ನು ಹಾರಿಸಿದರೆ ಅದು ಹೋಗುವಷ್ಟು ಮೇಲಕ್ಕೆ ಹೋಗಿ ಪುನಃ ತಳಕ್ಕಿಳಿಯುವದು. ಇದರಂತೆ ಮನುಷ್ಯನ ಅಧೋಗತಿ ಮತ್ತು ಊರ್ಧ್ವಗತಿಯ ನಿಯಮ ಎಂದು ಪಾಪ ಪುಣ್ಯ ತತ್ವಾನುಸಾರ ಹೇಳಬಹುದು. ಅಧೋಗತಿ ಹೊಂದಿದವನು ಎಷ್ಟೆಷ್ಟೋ ಪ್ರಾಣಿವರ್ಗಗಳಲ್ಲಿ ಎಷ್ಟೆಷ್ಟೋ ಜನ್ಮಗಳನ್ನೆತ್ತಿ ಬಳಿಕ ಮನುಷ್ಯ ಜನ್ಮಕ್ಕೆ ಬರುವನು. ಅದರಲ್ಲಿಯೂ ಪಂಚಮಾದಿ ವಿಲೋಮ ವರ್ಣಗಳಲ್ಲಿ ಎಷ್ಟೆಷ್ಟೋ ಜನ್ಮಗಳನ್ನೆತ್ತಿದನಂತರ ಬ್ರಾಹ್ಮಣನಾಗಿ ಜನಿಸುವನೆಂದು ಶಾಸ್ತ್ರಗಳಿಂದ ತಿಳಿದುಬರುತ್ತದೆ.

**ಸಿದ್ಧಾಂತಭಂಗ:—** ಈ ಮೊದಲು ಹೇಳಿದಂತೆ ಸೃಷ್ಟಿತತ್ವವನ್ನೊಪ್ಪದಿದ್ದರೆ ಪರಿಣಾಮವೇನಾಗುವುದು ನೋಡಿರಿ. ಮನುಷ್ಯರು ಸೃಷ್ಟ್ಯಾದಿಯಿಂದಲೂ, ಕರ್ಮಗಳನ್ನು ಮಾಡುತ್ತಲೇ ಬಂದಿರುವವರಿಂದ ಅವುಗಳ ಚಕ್ರಕ್ಕೆ ಸಿಕ್ಕಿ ಈ ವರೆಗೆ ಎಷ್ಟೋ ಜನ್ಮಗಳನ್ನೆತ್ತಿರುವರು. ಮುಂದೆ ಪ್ರಳಯದವರೆಗೂ ಎತ್ತುತ್ತಿರುವರು. ಇದರಿಂದ ಪ್ರಳಯಕಾಲದಲ್ಲಿಯೂ, ಪ್ರಾಣಿಗಳ ಕರ್ಮಸಂಚಯವೂ ವಾಸನಾರೂಪದಿಂದ ಅವಶಿಷ್ಟವಾಗಿ ಪುನಃ ಸೃಷ್ಟಿಯಲ್ಲಿಯೂ, ವರ್ಣಭೇದ ಜಾತಿಭೇದ ಕರ್ಮಚಕ್ರದ ಚಾಲನೆ ಇತ್ಯಾದಿಗಳಿಗೆ ಅದು ಹೇತುವಾಗುವುದರಿಂದ ಅವರ ಸಿದ್ಧಾಂತಕ್ಕೆ ಭಂಗಬರುವದೆಂದೆಣಿಸಬೇಕು. ಹಿಂದಿನ ಸೃಷ್ಟಿಯನ್ನೊಪ್ಪದಿದ್ದರೆ ಮುಂದಿನ ಸೃಷ್ಟಿಯನ್ನಾದರೂ ಅವರು ಅಂಗೀಕರಿಸಲೇ ಬೇಕು.

**ಗುಣಕರ್ಮಗಳ ರಹಸ್ಯ:—** ಕೆಲವರು ಸೃಷ್ಟಿಯು ಸ್ಥಿರವಾಗಿಯೇ ಇರುವದು. ಇದು ನಷ್ಟವಾಗುವದಿಲ್ಲ. ಪ್ರಳಯವಾಗುವದು ಸುಳ್ಳು. ದೇವರು ಮನುಷ್ಯರನ್ನು ಸೃಷ್ಟಿಸಿರುವನೇ ಹೊರತು ವರ್ಣಭೇದಗಳನ್ನು ಮಾಡಲಿಲ್ಲ. ವರ್ಣಭೇದ, ಜಾತಿಭೇದ, ಅಸ್ಪೃಶ್ಯತಾನಿಯಮ, ಇತ್ಯಾದಿ ಭೇದಗಳು ಜನರ ಪರಸ್ಪರವೈಷಮ್ಯದಿಂದಲೇ ಉಂಟಾಗಿರುವವು; ದೇವರು ಒಬ್ಬನಿಗೆ ಹೆಚ್ಚು, ಇನ್ನೊಬ್ಬನಿಗೆ ಕಡಿಮೆ ಎಂಬ ಬೆಂಣೆ ಸುಣ್ಣಗಳಷ್ಟು ಅಂತರವನ್ನು ಎಂದೂ ಮಾಡಲಾರನು. ಹಾಗೆ ಮಾಡಿದರೆ ದೇವರು ಪಕ್ಷಪಾತಿ ಎಂಬ ಮಹದಾಕ್ಷೇಪಕ್ಕೆ ಗುರಿಯಾಗಬೇಕಾಗಿದ್ದಿತು. ಅಂಥ ಆಕ್ಷೇಪವಿಲ್ಲದೆ ಎಲ್ಲರೂ ದೇವರನ್ನೇ ಪ್ರೀತಿಸುತ್ತೇವೆ. ಎಲ್ಲರಿಗೂ ದೇವರು ಬೇಕು. ದೇವರಿಗೆ ಎಲ್ಲರೂ ಒಂದೇ. ಜನರಿಂದ ಉಂಟಾದ ಭೇದವೈಷಮ್ಯಗಳು ಜನರಿಂದಲೇ ದೂರವಾಗಬೇಕು. ಮನುಷ್ಯ ಜಾತಿಯು ಒಂದೇ ಆಗಬೇಕು. ಯಾಕೆ ಆಗಬಾರದು? ಎಂದು ತರ್ಕಿಸುತ್ತಿರುವರು. ಇದು ಯುಕ್ತವಾದದ್ದಲ್ಲ. ವೇದದಲ್ಲಿಯೂ ಭಾರತಗ್ರಂಥದಲ್ಲಿಯೂ, ವರ್ಣಗಳನ್ನು ದೇವರೇ ಸೃಷ್ಟಿಸಿವನೆಂದೂ, ವರ್ಣಭೇದಗಳು ಗುಣಕರ್ಮಗಳನ್ನೇ ಅವಲಂಬಿಸಿರುವವೆಂದೂ, ಹೇಳಿದೆ, ಪುರುಷಸೂಕ್ತವನ್ನೂ, ಭಾರತದ ಭೀಷ್ಮಪರ್ವವನ್ನೂ, ಇನ್ನೂ ಕೆಲವು ಉಪಪರ್ವಗಳನ್ನೂ, ಕಥೆಗಳನ್ನೂ, ನೋಡಿದರೆ ಈ ಮಾತು ಸ್ಪಷ್ಟವಾಗುವದು. ಈ ಸಿದ್ಧಾಂತವನ್ನು ತಿಳಿದುಕೊಳ್ಳಲಿಕ್ಕೆ ಭಗವದ್ಗೀತೆಯ "ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮವಿಭಾಗಶಃ" ಎಂಬ ಭಗವದುಕ್ತಿಯೊಂದೇ ಸಾಕು. ಇದು ಚಾತುರ್ವರ್ಣ್ಯ ಮತ್ತು ಗುಣಕರ್ಮಗಳ ವ್ಯಾಖ್ಯಾನಕ್ಕೆ ಮಹಾಸೂತ್ರದಂತೆ ಇದೆ.

ಹುಟ್ಟಿದ ಮನುಷ್ಯನು ಆಯುಷ್ಯ ತೀರಿದೊಡನೆ ಮರಣ ಹೊಂದುವಂತೆ ಸೃಷ್ಟಿಯು ಜಗತ್ಕರ್ತನ ಸಂಕೇತವು ಮುಗಿಯಿತೆಂದರೆ ನಷ್ಟವಾಗುವುದು. ಮರಣಹೊಂದಿದವನು ಪೂರ್ವ ವಾಸನೆಯಿಂದ ಬದ್ಧನಾಗಿ ತಿರುಗಿ ಜನ್ಮವನ್ನು ಪಡೆಯುವಂತೆ ಪುನಃ ಸೃಷ್ಟಿಯಾಗುವದು. ಪ್ರಳಯವಾದ ತರುವಾಯ ಪುನಃ ಸೃಷ್ಟಿಯವರೆಗೆ ಕರ್ಮಗಳ ಅದೃಷ್ಟತತ್ವವು ಬೀಜದಲ್ಲಿ ವಾಸನಾಮಯವಾಗಿ ವೃಕ್ಷವು ಇರುವಂತೆಯೂ, ಕಲ್ಲು ಮತ್ತು ಅರಣಿ ಇವುಗಳಲ್ಲಿ ಬೆಂಕಿ ಇರುವಂತೆಯೂ, ಈಶ್ವರನ ಪ್ರಜ್ಞಾಶಕ್ತಿಯಲ್ಲಿ ಬೆರತಿರುವದು. ಪ್ರಸಂಗಾನುಸಾರ ಬೀಜದಿಂದ ವೃಕ್ಷವೂ, ಕಲ್ಲು ಮರಗಳಿಂದ ಬೆಂಕಿಯೂ, ಉಂಟಾಗುವಂತೆ ಪೂರ್ವಗುಣಕರ್ಮವಿಭಾಗಾನುಸಾರವಾಗಿ ಸೃಷ್ಟಿಯಲ್ಲಿ ಚಾತುರ್ವರ್ಣ್ಯವು ದೇವರಿಂದ ಸೃಷ್ಟಿಸಲ್ಪಡುತ್ತದೆ. ಆದುದರಿಂದಲೇ ಗುಣಕರ್ಮಗಳ ವಿಭಾಗಾನುಸಾರವಾಗಿ ಚಾತುರ್ವರ್ಣ್ಯವನ್ನು ಸೃಷ್ಟಿಸಿರುವೆನು." ಎಂಬರ್ಥದ ಮೇಲಿನ ಶ್ಲೋಕದ ತತ್ವವನ್ನು ಅರ್ಜುನನಿಗೆ ಶ್ರೀಕೃಷ್ಣನು ಉಪದೇಶಿಸಿರುತ್ತಾನೆ.

**ಭಗವದಭಿಪ್ರಾಯಃ**—ಗೀತೆಯ ೧೮ನೇ ಅಧ್ಯಾಯದಲ್ಲಿ ಸ್ವಾಮಿಯು ಅರ್ಜುನನ್ನು ಕುರಿತು "ಬ್ರಾಹ್ಮಣ ಕ್ಷತ್ರಿಯ ವಿಶಾಂಶೂದ್ರಾಣಾಂಚ ಪರಂತಪ । ಕರ್ಮಾಣಿ ಪ್ರವಿಭಕ್ತಾನಿ ಸ್ವಭಾವ ಪ್ರಭವೈರ್ಗುಣೈಃ ॥ (ಅರ್ಥ—ಎಲೈ ಶತ್ರುವನ್ನು ದಹಿಸುವ ಅರ್ಜುನನೇ ? ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು ಮತ್ತು ಶೂದ್ರರು. ಇವರ ವಿಷಯದಲ್ಲಿ ಸ್ವಭಾವ ಸಿದ್ಧವಾದ ಗುಣಗಳ ತತ್ವನನ್ನವಲಂಬಿಸಿ ಕರ್ಮಗಳು ಚನ್ನಾಗಿ ವಿಭಾಗಿಸಲ್ಪಟ್ಟಿವೆ.) ಎಂತಲೂ ಉಪದೇಶಿಸಿರುತ್ತಾನೆ. ಈ ಶ್ಲೋಕವು ಮತ್ತು ಮೇಲೆ ಹೇಳಿದ ಶ್ಲೋಕವು ಅತಿ ಮಹತ್ವದ ಅರ್ಥವನ್ನು ಒಳಗೊಂಡಿರುವುದರಿಂದ ಶಾಸ್ತ್ರೀಯಪದ್ಧತಿಯನ್ನು ಅನುಸರಿಸಿ ಇವುಗಳ ವಿವರಣವನ್ನು ಸ್ವಲ್ಪ ಇಲ್ಲಿ ಮಾಡುವಾ.

**ವ್ಯಾಖ್ಯಾನಃ**—"ಚಾತುರ್ವರ್ಣ್ಯಂ ಮಯಾಸೃಷ್ಟಂ ಗುಣಕರ್ಮವಿಭಾಗಶಃ ಎಂಬಿದರ ಶಬ್ದಾರ್ಥವು. ಚಾತುರ್ವರ್ಣ್ಯಂ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರವರ್ಣಗಳು. ಮಯಾ ಈಶ್ವರನಾದ ನನ್ನಿಂದ ಗುಣಕರ್ಮ ವಿಭಾಗಶಃ,—ಗುಣಕರ್ಮಗಳ ವಿಭಾಗಾನುಸಾರವಾಗಿ ಸೃಷ್ಟಂ—ಸೃಷ್ಟಿಸ (ಉಂಟು ಮಾಡ) ಲ್ಪಟ್ಟಿತು ಎಂದು ಆಗುತ್ತದೆ. ಕೇವಲ ಮನುಷ್ಯ ವರ್ಗದ ಮತ್ತು ಇತರ ತಿರ್ಯಕ್ಪ್ರಾಣಿಗಳ ಬೋಧವಾಗದೆ ನಾಲ್ಕು ವರ್ಣಗಳ ಬೋಧವು ಸ್ಪಷ್ಟವಾಗಬೇಕೆಂದು ಹೇತುವಿನಿಂದಲೇ 'ಚಾತುರ್ವರ್ಣ್ಯಂ' ಎಂಬ ಪದವು ಉಪಯೋಗಿಸಲ್ಪಟ್ಟಿದೆ. ಅಂದರೆ ಇತರ ಬೋಧನಿರಾಸಾರ್ಥವಾಗಿ ಎಂದು ತಿಳಿಯಬೇಕು. ಕತೃಪದವನ್ನು ಪ್ರಯೋಗಿಸದಿದ್ದರೆ ಕರ್ತೃತ್ವಂತರ ಬೋಧವು ಬಂದು ಬಿಡುವದು. ಆದುದರಿಂದ ಅದರ ನಿರಾಸಾರ್ಥವಾಗಿ 'ಮಯಾ' ಎಂದು ಹೇಳಲ್ಪಟ್ಟಿದೆ. ಚಾತುರ್ವರ್ಣ್ಯವು ಯಾವ ತತ್ವದ ಆಧಾರದಿಂದ ಸ್ಪಷ್ಟವಾಯಿತು ? ಎಂಬ ಆ ಶಂಕೆಯ ಪರಿಹಾರಕ್ಕಾಗಿ ಗುಣಕರ್ಮ ವಿಭಾಗಶಃ ಎಂದು ಉಕ್ತವಾಗಿದೆ. ಗುಣಕರ್ಮಾನುಸಾರವಾಗಿ ಚಾತುರ್ವರ್ಣ್ಯವು ಸೃಷ್ಟಿಸಲ್ಪಟ್ಟಿತು. ಎಂಬ ವಾಕ್ಯದಲ್ಲಿ ಗುಣಕರ್ಮಗಳ ವಿಭಾಗತತ್ವವು ಮೊದಲು, ಚಾತುರ್ವರ್ಣ್ಯದ ಸೃಷ್ಟಿಯು ನಂತರ, ಎಂದು ಕ್ರಮಾರ್ಥದ ಬೋಧವಾಗುತ್ತದೆ. ಚಾತುರ್ವರ್ಣ್ಯವು ಸೃಷ್ಟಿಸಲ್ಪಟ್ಟಿತು. ಎಂಬ ಅನಂತರ ವಾಕ್ಯಕ್ಕೆ 'ಗುಣಕರ್ಮಗಳ ವಿಭಾಗನುಸಾರವಾಗಿ, ಎಂಬ ಪೂರ್ವವಾಕ್ಯವು ವ್ಯವಸ್ಥಾಪಕ ವಾಕ್ಯವೆನಿಸುವದು. ಈ ವ್ಯವಸ್ಥಾಪಕ ವಾಕ್ಯವನ್ನು ಪ್ರಯೋಗಿಸದೆ ಇದ್ದರೆ ಈ ಸೃಷ್ಟಿಯೇ ಮೊದಲನೇ ಸೃಷ್ಟಿ ಎಂದೂ, ಚಾತುರ್ವರ್ಣ್ಯಕ್ಕೆ ಗುಣಕರ್ಮ ವಿಭಾಗಗಳೇನೂ, ಇಲ್ಲವೆಂದೂ, ಆಪತ್ತಿಯು ಬರುತ್ತಿತ್ತು. ಆದುದರಿಂದ ಸ್ವಾಮಿಯು, ಪೂರ್ವಸೃಷ್ಟಿಯ ಗುಣಕರ್ಮಗಳ ತತ್ವವನ್ನೇ ಕಾರಣವಾಗಿಟ್ಟುಕೊಂಡು ಚಾತುರ್ವರ್ಣ್ಯವನ್ನು ಸೃಷ್ಟಿಸಿದರೆಂಬುದು ಸ್ಪಷ್ಟವಾಗುತ್ತದೆ. ಗುಣಕರ್ಮ ತತ್ವಾನುಸಾರ ಸೃಷ್ಟರಾದ ಚಾತುರ್ವರ್ಣ್ಯದವರು ತಮ್ಮ ತಮ್ಮ ವಾಸನಾನುರೂಪವಾಗಿ ಕರ್ಮಗಳನ್ನು ನಡಿಸುತ್ತಿರುವರೆಂಬುದು ಸಿದ್ಧವಾಗುತ್ತದೆ.

" ಬ್ರಾಹ್ಮಣ ಕ್ಷತ್ರಿಯ ವಿಶಾಂಶೂದ್ರಾಣಾಂಚ ಪರಂತಪ । ಕರ್ಮಾಣಿ ಪ್ರವಿಭಕ್ತಾನಿ ಸ್ವಭಾವಪ್ರಭವೈರ್ಗುಣೈಃ । ಎಂಬ ಈ ಶ್ಲೋಕದ ಶಬ್ದಾರ್ಥವು ಬ್ರಾಹ್ಮಣ ಕ್ಷತ್ರಿಯವಿಶಾಂ, ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು, ಇವರ, 'ಚ, ಮತ್ತು 'ಶೂದ್ರಣಾಂ, ಶೂದ್ರರುಗಳ ವಿಷಯದಲ್ಲಿ 'ಸ್ವಭಾವಪ್ರಭವೈಃ, ಸ್ವಭಾವ ಸಿದ್ಧಾವಾದ 'ಗುಣೈಃ, ಗುಣಗಳಿಂದ, ಕರ್ಮಾಣಿ, ಕರ್ಮಗಳು, ಪ್ರವಿಭಕ್ತಾನಿ, ಚನ್ನಾಗಿ ಹಂಚಲ್ಪಟ್ಟಿವೆ. ಎಂದು ಆಗುತ್ತದೆ. ಮೇಲಿನ ಮೂರೂ ವರ್ಣದವರ ಕರ್ಮಗಳೂ, ನಿಯಮಗಳೂ, ಕೆಲವು ವಿಷಯಗಳಲ್ಲಿ ಅಲ್ಪಸ್ವಲ್ಪ ವ್ಯತ್ಯಾಸ

ವಿದ್ದರೂ, ಹೆಚ್ಚು ಪ್ರಮಾಣದಿಂದ ಒಂದೇರೀತಿಯಾಗಿರುವ ಕಾರಣ, ಸಮುಚ್ಚಾಯಬೋಧಾರ್ಥವಾಗಿ, 'ಬ್ರಾಹ್ಮಣ ಕ್ಷತ್ರಿಯವಿಶಾಂ, ಎಂಬ ವಾಕ್ಯವು ಪ್ರಯೋಗಿಸಲ್ಪಟ್ಟಿದೆ. ಮೇಲೆ ವಿವರಿಸಿದಂದೆ ತ್ರೈವರ್ಣಿಕ ಸಮಾಜದಿಂದ ಶೂದ್ರನ ವರ್ಣವು ಬೇರೆಯಾಗಿದೆ. ಎಂಬುದನ್ನು ಸೂಚಿಸುವದಕ್ಕಾಗಿಯೇ ಪ್ರತ್ಯೇಕವಾಗಿ 'ಶೂದ್ರಾಣಾಂ ಎಂದು ಉಕ್ತವಾಗಿದೆ. ಅನುಕರಣದಿಂದಲೂ, ಬೇರೇ ಕಾರಣಗಳಿಂದಲೂ, ಕರ್ಮಗಳು ಹಂಚಲ್ಪಟ್ಟವೆಂಬ ಆಕ್ಷೇಪನಿರಾಸಾರ್ಥವಾಗಿ ' ಸ್ವಭಾವಪ್ರಭವೈರ್ಗುಣೈಃ, ಎಂಬ ವಾಕ್ಯವು ನಿವಿಷ್ಟವಾಗಿದೆ. ಸಾಮಾನ್ಯರೀತಿಯಿಂದ ಕರ್ಮಗಳನ್ನು ವಿಭಾಗಿಸಲಿಲ್ಲ. ಚನ್ನಾಗಿಯೇ ವಿಭಾಗಿಸಿದ್ದೇನೆ. ಎಂಬ ಉತ್ಕೃಷ್ಟಾರ್ಥವನ್ನು ಬೋಧಿಸುವದಕ್ಕಾಗಿಯೇ ಆದಿಯಲ್ಲಿ 'ಪ್ರ' ಎಂಬ ಉತ್ಕರ್ಷಾರ್ಥಬೋಧಕವಾದ ಉಪಸರ್ಗವನ್ನು ಸೇರಿಸಿ ಪ್ರವಿಭಕ್ತಾನಿ ಎಂದು ಹೇಳಲ್ಪಟ್ಟಿದೆ.

**ಸಂಸ್ಕಾರಃ**—'ಕರ್ಮಾಣಿಪ್ರವಿಭಕ್ತಾನಿ ಸ್ವಭಾವ ಪ್ರಭವೈರ್ಗುಣೈಃ, ಎಂಬ ವಾಕ್ಯಗಳ ಗೂಡಾರ್ಥವು ಅತಿ ಮಹತ್ವದ್ದಿರುತ್ತದೆ. ' ಸ್ವಭಾವ, ಅಂದರೆ ಸಂಸ್ಕಾರವೆಂದು ಶಾಸ್ತ್ರಕಾರರ ಮತವಿದೆ. ಸಂಸ್ಕಾರದಿಂದಲೇ ಗುಣಗಳು ಹುಟ್ಟುವವು. ಈ ಗುಣಗಳ ಅನುಸಾರವಾಗಿಯೇ ಮನುಷ್ಯನ ಕರ್ಮಗಳು ಸಾಗುತ್ತವೆ. ಚಾತುರ್ವರ್ಣ್ಯದ ಸೃಷ್ಟಿಯಾದೊಡನೆಯೇ ಆ ವಾವ ವರ್ಣದವರ ಹಿಂದಿನ ಸಂಸ್ಕಾರಗಳ ಜ್ಞಾನವು ಸರ್ವಜ್ಞನಾದ ತನಗೆ ಉಂಟಾಗಿ ಅವುಗಳಿಗನುಸಾರವಾಗಿ ಕರ್ಮಗಳನ್ನು ತಾನು ಚನ್ನಾಗಿ ವಿಭಾಗಿಸಿ ಕೊಟ್ಟಿರುತ್ತೇನೆ. ಅವರವರ ಸಂಸ್ಕಾರಗಳಿಗೆ ಅವರವರೇ ಕಾರಣಭೂತರಲ್ಲದೆ, ತಾನಲ್ಲ. ವೈಷಮ್ಯ-ನೈರ್ಘೃಣ್ಯವೆಂಬ ಪಕ್ಷಪಾತ ಲಕ್ಷಣದ ಆಕ್ಷೇಪಕ್ಕೆ ತಾನು ಲಕ್ಷ್ಯನಲ್ಲ. ಸರ್ವಜ್ಞನೂ, ಈಶ್ವರನೂ ಆದ ತಾನೇ ಚನ್ನಾಗಿ ಕರ್ಮಗಳನ್ನು ಅವರವರ ಸಂಸ್ಕಾರಾನುಸಾರವಾಗಿ ವಿಭಾಗಿಸಿರುವುದರಿಂದ ಅವುಗಳಲ್ಲಿ ಬೇರೆಯವರು ತಿದ್ದುಪಾಟು ಮಾಡವದಕ್ಕೆ ಅವಕಾಶವೇ ಇಲ್ಲ. ಅವರವರ ಸಂಸ್ಕಾರಾನುಸಾರವಾಗಿ ಅವರವರ ಉನ್ನತಿಗೂ, ಅವನತಿಗೂ, ಅವರವರೇ ಹೇತುಭೂತರು. ಎಂಬ ಶ್ರೀ ಕೃಷ್ಣಪರಮಾತ್ಮನ ಮಹತ್ವದ ಅಭಿಪ್ರಾಯಗಳು ಮೇಲಿನ ಗಂಭೀರ ಪದಗಳಿಂದ ಧ್ವನಿತವಾಗುತ್ತವೆ. (ಅಪೂರ್ಣ)

---

## ನಿನಗೆ-? ನನಗೆ-?



ನಿನಗಿರಲಿ ಗಂಧವನು ಬೀರಬಹ ಕುಸುಮತತಿ ।
ನನಗವರ ಮಧುಮಧುರಗಂಧವೊಂದೇ ಸಾಕು ।
ನಿನಗಿರಲಿ ಕಂಠದಲಿ ಕಲರವವು; ನನಗಿರಲಿ ಕರ್ಣಗಳು ಕೇಳಲದನು ॥
ನುಣುಪಾದ ಕೆನ್ನೆಯಲಿ ' ತಾವರೆಯು ಹೊಸಕೆಂಪು ' ।
ಕುಣಿವ ತಾರೆಗಳಂತೆ ಹೊಳೆವೆಸಳುಗಣ್ಣುಗಳು ।
ನಿನಗಿರಲಿ; ನಿನ್ನ ಮುದ್ದಿನ ಮೊಗವ ಮುದ್ದಿಡುವ ತುಟಿಗಳಿವು ಸಾಕು ನನಗೆ ॥ ೧ ॥
ಕುಣಿಯುತಲಿ ನಟಿಸುತಲಿ ನಾಟ್ಯರಂಗಕೆ ಬಂದು ।
ಜನಮನವ ರಂಜಿಸುವ ಯುಕುತಿಯದು ನಿನಗಿರಲಿ ।
ಕುಣಿವ ನಟರನು ನೋಡಿ ನಲಿವ ನಯನಗಳೆರಡು ನನಗಿರಲಿ ! ತೃಪ್ತಿ ! ತೃಪ್ತಿ ! ॥
ನಿನಗಿರಲಿ ನವರಸದ ಕಾವ್ಯರಚನೆಯ ಶಕ್ತಿ ।
ನನಗದನು ಓದಿಯಾನಂದಪಡೆಯುವ ರೀತಿ ।
ನಿನಗಿರಲಿ ಕ್ಷಮೆಯ ಗುಣ ನನಗಿರಲಿ ತುಂಟತನ ವರವಿಂತು ನೀಡು ದೇವಾ ! ॥ ೨ ॥

—ದಿನಕರ ದೇಸಾಯಿ, ಅಂಕೋಲಾ.

---

# ಶಿರ್ಸಿ ತಾಲೂಕಿನಲ್ಲಿ ಪ್ರಚಲಿತವಾದ ಕೆಲವು ದಂತ ಕಥೆಗಳು

ಸಂಗ್ರಹಕಾರ:—ಪ್ರೊಫೆಸರ ಕೆ. ಜಿ. ಕುಂದಣಗಾರ ಎಮ್. ಎ., ಕೊಲ್ಹಾಪೂರ.

[ ಈ ಕಥೆಗಳು ಶಿರ್ಸಿ ತಾಲೂಕಿನಲ್ಲಿ ನನಗೆ ಭೆಟ್ಟಿಯಾದ ಕೆಲವು ಸದ್ಗೃಹಸ್ಥರಿಂದ ಸಂಗ್ರಹಿಸಿದವುಗಳು. ಇವುಗಳಲ್ಲಿ ಐತಿಹಾಸಿಕ ಸತ್ಯವು ಎಷ್ಟರ ಮಟ್ಟಿಗೆ ಇದೆ ಎಂಬುದನ್ನು ಹೇಳಲಿಕ್ಕಾಗದು. ಆದ್ದರಿಂದ ಇವು ದಂತಕಥೆಗಳೆಂದೇ ತಿಳಿಯಬೇಕೇ ಹೊರ್ತು ಇವುಗಳ ಮೇಲೆ ಪೂರ್ಣವಿಶ್ವಾಸವಿಡಬಾರದೆಂದು ವಾಚಕರಿಗೆ ಬಿನ್ನಹ. ]

## ಸ್ವಾದಿಯ ತೇರಬೀದಿಮಠ.

ಸ್ವಾದಿಯ ತೇರಬೀದಿಯ ಮಠವು ( ಮಾಧ್ವಮಠವು ) ವೈಷ್ಣವರಿಗೆ ಪೂಜ್ಯವಾಗಿರುವದು. ಈ ಮಠವು ಸುಮಾರು ೧೫೮೦ ರಲ್ಲಿ ಸ್ಥಾಪಿಸಲ್ಪಟ್ಟಿತೆಂದು ತಿಳಿಯುತ್ತದೆ. ಇದನ್ನು ಸ್ಥಾಪಿಸಿದವರು **ವಾದಿರಾಜ** ಸ್ವಾಮಿಗಳು. ಇವರು ಮಾಧ್ವಮತ ಪ್ರಚಾರಕನ್ನಾಗಿ ಇಡೀ ಹಿಂದುಸ್ಥಾನದಲ್ಲಿ ಪ್ರವಾಸ ಮಾಡಿದರು. ಈ ವಿಷಯದಲ್ಲಿ ಗುಜರಾಥದಲ್ಲಿ ಮಾತ್ರ ಅವರಿಗೆ ಎಲ್ಲಕ್ಕೂ ಹೆಚ್ಚಿನ ಯಶವು ದೊರೆಯಿತೆಂದು ತಿಳಿಯುತ್ತದೆ. ಆದರೂ ಕರ್ನಾಟಕದಲ್ಲಿ ಇದ್ದಷ್ಟು ಮಾಧ್ವರು ಮತ್ತೆಲ್ಲಿಯೂ ಇಲ್ಲೆಂದು ಹೇಳಬಹುದು.

ಇವರು ತಮ್ಮ ವಿಜಯ ಯಾತ್ರೆಯಿಂದ ತಿರುಗಿ ಬಂದ ಮೇಲೆ ಸ್ವಾದಿಯ ಅರಸಪ್ಪನಾಯಕನು ಇವರನ್ನು ಕರೆಯಿಸಿಕೊಂಡು ಮಠವನ್ನು ಸ್ಥಾಪಿಸಲಿಕ್ಕೆ ಅನುಕೂಲತೆಯನ್ನು ಮಾಡಿಕೊಟ್ಟನು. ಇವರ ವೃಂದಾವನವು ಈ ಮಠದಲ್ಲಿಯೇ ಇರುವದು. ಇವರ ಮಹತ್ಕಾರ್ಯಗಳು ಎಲ್ಲ ಕಡೆಯಲ್ಲಿಯೂ ಪ್ರಸಿದ್ಧವಿರುತ್ತವೆ. ಅವುಗಳಲ್ಲಿ ರೋಗಗಳನ್ನು ದೂರ ಮಾಡುವದು, ಮಕ್ಕಳಿಲ್ಲದವರಿಗೆ ಮಕ್ಕಳನ್ನು ಕೊಡುವದು ಇವೇ ಮುಖ್ಯವಾಗಿವೆ. ಎಲ್ಲಕ್ಕೂ ಹೆಚ್ಚಿನ ಮಹತ್ಕಾರ್ಯವು ಒಂದಿರುವದು. ಇವರ ಹತ್ತರ ನಾರಣನೆಂಬ ಭೂತವಿದ್ದು ಇವರು ಹೇಳಿದ ಕಾರ್ಯವನ್ನು ಮಾಡಲು ಅದು ಯಾವಾಗಲೂ ಸಿದ್ಧವಿರುತ್ತಿತ್ತು. ಇವರ ಪಲ್ಲಕ್ಕಿಯನ್ನು ಭೋಯಿಗಳು ಒಂದೇ ಬದಿಗೆ ಹೊರುತ್ತಿದ್ದರಂತೆ, ಮತ್ತೊಂದುಬದಿಗೆ ಒಂದು ಹೂವಿನ ಮಾಲೆಯನ್ನು ಹಾಕಲು ಆ ಭೂತವು ಅದೃಶ್ಯವಾಗಿ ಅದನ್ನು ಹೊತ್ತುಕೊಂಡು ಹೋಗುತ್ತಿತ್ತಂತೆ. ಅವರು ತ್ರಿವಿಕ್ರಮದೇವಾಲಯವನ್ನು ಕಟ್ಟಿಸಿರುವರು. ತ್ರಿವಿಕ್ರಮ ಮೂರ್ತಿಯು ಉಡಪಿಯಿಂದ ಅಲ್ಲಿಗೆ ಕಲ್ಲಿನ ತೇರಿನಲ್ಲಿ ಬಂತೆಂದು ಹೇಳುತ್ತಾರೆ. ಇದನ್ನು ಸತ್ಯಗೊಳಿಸುವದಕ್ಕೆಯೋ ಏನೋ ಎಂಬುವಂತೆ ಆ ಗುಡಿಯ ಸಭಾಮಂಟಪದ ಎರಡೂ ಬದಿಯಲ್ಲಿ ಕಲ್ಲಿನ ಅಚ್ಚಿನ ಮೇಲೆ ಎರಡೆರಡು ಗಾಲಿಗಳಿರುವವು. ಈ ಗುಡಿಯ ಎದುರಿಗೆ ಒಂದು ಧ್ವಜಸ್ತಂಭವಿರುವದು. ಇದನ್ನು ನಿಲ್ಲಿಸಲು ಹದಿನೆಂಟು ಸಾರೆ ಮಾಡಿದ ಪ್ರಯತ್ನಗಳು ನಿಷ್ಫಲವಾಗಲು ಆ ಭೂತವು ಅದನ್ನು ನಿಲ್ಲಿಸಿತೆಂದು ಆಖ್ಯಾಯಿಕೆಯಿದೆ. ಈ ಸ್ತಂಭದ ಮೇಲೆ ಕೆಳಗೆಕೊಟ್ಟ ಶಾಸನವು ಕೊರೆಯಲ್ಪಟ್ಟಿದೆ.

" ಸ್ವಸ್ತಿ ಶ್ರೀಜಯಾಭ್ಯುದಯ ಶಾಲಿವಾಹನ ಶಕ ವರುಷ ೧೫೬೨ ನೆಯ ವಿಕ್ರಮಸಂವತ್ಸರದ ಜೇಷ್ಠ ಶುದ್ಧ ೫ ಸೋಮವಾರದಲ್ಲೂ ವಾದಿರಾಜ ಶಿದ್ಧ ( ಸಿದ್ಧ ) ಶ್ರೀಪಾದಂಗಳ ಪ್ರಶಿಷ್ಯರು ವೇದನಿಧಿತೀರ್ಥರು ಪ್ರತಿಷ್ಠೆ ಮಾಡಿದ ಧ್ವಜಸ್ತಂಭಕ್ಕೆ ಶುಭಮಸ್ತು"

ಈ ಭೂತದ ಗುಡಿಯು ವಾದಿರಾಜರ ವೃಂದಾವನದ ಸಮೀಪದಲ್ಲಿಯೇ ಇರುವದು. ಗದ್ದುಗೆಯ ಮೇಲಿನ ಹಿತ್ತಾಳಿಯ ಕೆಂಪು ನಾಲಿಗೆಯನ್ನು ಹೊರಗೆ ಜೋಲುಬಿಟ್ಟ ಗಂಭೀರವಾದ ನಾರಣನ ಮುಖವನ್ನು ಈಗಲೂ ನೋಡಿ ಆಶ್ಚರ್ಯವಾಗುವದು. ಫಾಲ್ಗುನ ಶುದ್ಧ ಪೂರ್ಣಿಮೆಯ ದಿನ ನಡೆಯುವ ರಥೋತ್ಸವದ ಕಾಲಕ್ಕೆ ನಾಲ್ಕುಫೂಟು ಚಚ್ಚೌಕಾದ ಕಲ್ಲಿನ ಗದ್ದುಗೆಯ ಮೇಲೆ ಈ ಪಿಶಾಚಿಯು ದೆಶೆಯಿಂದ ಈಗಲೂ ಒಂದು ಖಂಡುಗ ಅನ್ನದ ಬಲಿಯು ಕೊಡಲಾಗುವುದು.

## ಸ್ವಾದಿಯ ಮಹಂತಮಠವು.

ಈ ಮಠವು ಬಹು ದೊಡ್ಡದೂ ಊರ್ಜಿತಾವಸ್ಥೆಯನ್ನು ಕಂಡದ್ದೂ ಇರಬಹುದೆಂದು ಇದರ ಅವಶೇಷಗಳ ಮೇಲಿಂದ ತಿಳಿಯುತ್ತದೆ. ಈ ಮಠವನ್ನು ಸ್ಥಾಪಿಸಿದ ಮಹಂತರು ಕುಮ

ಕೆಯ ತಾಲೂಕಿನವರೆಂದು ತಿಳಿಯುತ್ತದೆ. ಇದರ ಹತ್ತರ ಎರಡು ಚವಡಿಗಳಿದ್ದವಂತೆ. ಈ ಮತಕ್ಕೆ ಎಷ್ಟೇ ಜನರು ಯಾವಕಾಲಕ್ಕೇ ಹೋದರೂ ಆ ಚವಡಿಗಳ ಸಹಾಯದಿಂದ ಆ ಸ್ವಾಮಿಗಳು ಅವರಿಗೆ ಊಟಮಾಡಿಸುತ್ತಿದ್ದರಂತೆ. ಮತದಲ್ಲಿ ಮಾತ್ರ ಯಾವ ಸಾಮಗ್ರಿಯೂ ಇರುತ್ತಿದ್ದಿಲ್ಲ. ಹೀಗಿರಲು ಒಂದಾನೊಂದು ದಿನ ಒಂದು ಚವಡಿಯು ಅಂತ್ಯಜರ ಮನೆಯೊಳಗಿಂದ ಕೆಲವು ಆಹಾರದ ಪದಾರ್ಥಗಳನ್ನು ತಂದದ್ದು ಮಹಂತರಿಗೆ ತಿಳಿಯಲು ಅವರು ಅದನ್ನು ಮತದೊಳಗೆ ಬರಗೊಡದೆ ಮತದ ಹೊರಗೆ ಒಂದು ಹಲಸಿನ ಗಿಡದಲ್ಲಿ ಇರಿಸಿಬಿಟ್ಟರು. ಅದನ್ನು ಅಂತ್ಯಜರು ಈಗಲಾದರೂ ಪೂಜಿಸುವರು. ಮತ್ತೊಂದು ಚವಡಿಯನ್ನು ಮತದಲ್ಲಿಯೇ ಇಟ್ಟುಕೊಂಡರು. ಮತದೊಳಗಿನ ಒಂದು ಕಂಬಕ್ಕೆ ಅರಿಷಿಣ ಮುಂತಾದ ದ್ರವ್ಯಗಳನ್ನು ಕಟ್ಟಿದ್ದು ಆ ಚವಡಿಯ ಅಸ್ತಿತ್ವದರ್ಶಕವೆಂದು ಈಗಲಾದರೂ ಹೇಳುವರು. ಅಂತೂ ಸ್ವಾದಿಯಲ್ಲಿ ಪೂರ್ವಕಾಲದಲ್ಲಿ ಭೂತಗಳ ಸುಳುವು ಹೆಚ್ಚಿತ್ತೆಂದು ತಿಳಿಯಬಹುದು.

ಈ ಮತವು ಸ್ವಾದಿಯ ಕೊನೆಯಭಾಗವೆಂದು ಹೇಳುತ್ತಾರೆ. ಅಲ್ಲಿಯ ಜೈನ ಅರಸನು ತನ್ನ ಅರಮನೆಗೆ ಭಿಕ್ಷೆಗೆ ಬಂದ ಜಂಗಮರನ್ನು ಈ ಮತದ ಸಮೀಪದಲ್ಲಿಯೇ ಶೂಲಕ್ಕೇರಿಸುತ್ತಿದ್ದನು. ಈ ಮಹಂತರು ದೇಶಾಟನ ಮಾಡುತ್ತ ಮಾಡುತ್ತ ಇಲ್ಲಿಗೆ ಬಂದು ನಿಂತುಕೊಂಡರು. ಅಲ್ಲಿ ಬಿದ್ದಿದ್ದ ಅಸ್ಥಿಗಳೆಲ್ಲ ಜಂಗಮರವೇ ಎಂದು ವಿಚಾರಿಸಿ ತಿಳಿದುಕೊಂಡರು. ಇವರು ಬಂದು ಇಲ್ಲಿ ನಿಂತ ತರುವಾಯ ತುಸು ದಿವಸಗಳಲ್ಲಿಯೇ ಒಬ್ಬ ಜಂಗಮನನ್ನು ಶೂಲಕ್ಕೇರಿಸಿದರು. ಎಲ್ಲರೂ ಹೋದ ಮೇಲೆ ಸ್ವಾಮಿಗಳು ಆ ಜಂಗಮನನ್ನು ಶೂಲದಿಂದ ಕೆಳಗಿಳಿಸಿಕೊಂಡು ಜೀವತುಂಬಿಸಿ ಮರುದಿವಸ ಅರಮನೆಗೆ ಭಿಕ್ಷೆಗೆ ಕಳುಹಿದರು. ಮುನ್ನಾದಿನ ಶೂಲಕ್ಕೇರಿಸಿದ ಜಂಗಮನು ಮತ್ತೆ ಬಂದದ್ದನ್ನು ಕಂಡು ಹಿಡಿದು ದಿಗಿಲು ಬಿದ್ದು ಅರಸನು ಅವನನ್ನು ಶೂಲಕ್ಕೇರಿಸಿರಿ ಎಂದು ಮತ್ತೆ ಆಜ್ಞಾಪಿಸಿದನು. ಸ್ವಾಮಿಗಳು ಅವನನ್ನು ಮತ್ತೆ ಸಜೀವನನ್ನಾಗಿ ಮಾಡಿ ಅರಮನೆಗೆ ಭಿಕ್ಷೆಗೆ ಕಳುಹಿದರು. ಅರಸನು ಅವನನ್ನು ಗುರ್ತಿಸಿ ಈ ಸಾರೆ ಮರಣದಂಡನೆಯನ್ನು ವಿಧಿಸದೆ ಶರೆಯಲ್ಲಿಡಿಸಿದನು. ಜಂಗಮನು ತಿರುಗಿಬಾರದ್ದರಿಂದ ಮಹಂತರು ಒಂದು ಎಲುವಿನ ಹಂದರವನ್ನು ಹುಡುಕಿಕೊಂಡು, ಜೀವಪಡೆದು, ಅವನನ್ನು ಅರಮನೆಗೆ ಭಿಕ್ಷೆಗೆ ಕಳುಹಿದರು. ಅರಸನು ಅವನನ್ನು ಶರೆಯಲ್ಲಿಟ್ಟನು. ಹೀಗೆ ಅನೇಕ ಜಂಗಮರು ಶರೆಯಾಳಾದರು ಶರೆಮನೆಯು ತುಂಬಿಹೋಯಿತು. ಜಂಗಮರು ಬರುವದು ತಪ್ಪದಾಯಿತು. ಅರಸನು ಭ್ರಮೆಗೊಂಡನು. ಕೊನೆಗೆ ಮಹಂತರು ಒಬ್ಬ ಜಂಗಮನ ಜೀವಪಡೆದು ಅರಸನಿಗೆ ಶರಣ ಬರ ಹೇಳು ಎಂದು ಹೇಳಿಕಳುಹಲು ಅವನು ಹಾಗೇ ಮಾಡಿದನು. ನಿಜವಾದ ಸಂಗತಿಯನ್ನು ತಿಳಿದುಕೊಳ್ಳಲು ಅರಸನು ಮಂತ್ರಿಯನ್ನು ಕಳುಹಿದನು. ಅವನು ತಿರುಗಿ ಹೋಗಿ ಈ ಎಲ್ಲ ಸಂಗತಿಯನ್ನು ಅರಸನಿಗೆ ಹೇಳಲು ಅವರನ್ನು ಇನ್ನೂ ಪರೀಕ್ಷಿಸಬೇಕೆಂದು ಅರಸನು, ನೋವಿನಿಂದ ನೆರಳುತ್ತ ಬಿದ್ದ, ಮತ್ತು ಎಂಥ ರಾಜವೈದ್ಯರಿಂದಲೂ ವಾಸಿಯಾಗದ ರೋಗದಿಂದ ಪೀಡಿತನಾದ ತನ್ನ ಮಗನನ್ನು ನೆಟ್ಟಗೆ ಮಾಡಿದರೆ, ತಾನು ಶರಣು ಬರುವದಲ್ಲದೆ ವೀರಶೈವನಾಗುತ್ತೇನೆಂದು ಹೇಳಿಕಳುಹಿದನು. ಅದರಂತೆಯೇ ಅವರ ಉಪಾಯದಿಂದ ಅರಮಗನು ನಿರೋಗಿಯಾದನು. ಅಂದಿನಿಂದ ಮಹಂತರ ಮತವು ಪ್ರಸಿದ್ಧವಾಯಿತು. ಈ ಅರಸನು ಜೈನನಿದ್ದದ್ದರಿಂದ ತನ್ನ ಮಗನಿಗೆ ಔಷಧ ಕೊಡಿಸುವಕಾಲಕ್ಕೆ ವೈದ್ಯರು ಪ್ರಾಣಿಜ ಔಷಧವನ್ನು ಕೊಟ್ಟಿದ್ದರಿಂದ ಹಿಂಸಾದೋಷದಿಂದ ಬಂದ ಪಾಪಕ್ಕೆ ಪ್ರಾಯಶ್ಚಿತ್ತವನ್ನು ಕೊಡಬೇಕೆಂದು ಅಲ್ಲಿನ ಭಟ್ಟಾಕಳಂಕಾಚಾರ್ಯರನ್ನು ಕೇಳಿಕೊಳ್ಳಲು ಅವರು ಧರ್ಮಮೂಢತೆಯಿಂದ ಅದನ್ನು ಕೊಡದೇಹೋದರು. ಇದೂ ಒಂದು ಕಾರಣವಾಗಲು ಅರಸನು ಲಿಂಗಾಯತನಾಗಿ ಮಹಂತರ ಮತವನ್ನು ಕಟ್ಟಿಸಿ ಅಲ್ಲಿಯೇ ನ್ಯಾಯಾಸನವನ್ನು ಸ್ಥಾಪಿಸಿ ತೀರ್ಪುಕೊಡುತ್ತಿದ್ದನು. ಜೈನಾಚಾರ್ಯರು ಪ್ರಾಯಶ್ಚಿತ್ತವನ್ನು ಕೊಡಲೊಪ್ಪದ ಕಾರಣ ಜೈನರ ಕೊಲೆ ಮಾಡಿಸಿದ್ದರಿಂದಲೂ ಅವರಿಗೆ ಲಿಂಗಾಯಿತ ದೀಕ್ಷೆಯನ್ನು ಕೊಡಹತ್ತಿದ್ದರಿಂದಲೂ ಅಲ್ಲಿಯ ಜೈನವಸ್ತಿಯು ಕಡಿಮೆಯಾಯಿತೆಂದು ಹೇಳುತ್ತಾರೆ. ತರುವಾಯ ಅರಸನು ಶರೆಯಲ್ಲಿದ್ದ ಜಂಗಮರನ್ನು ಬಂಧಮುಕ್ತಮಾಡಿ ಈ ಮತಕ್ಕೆ ದತ್ತಿಯನ್ನು ಬಿಟ್ಟುಕೊಟ್ಟನು. ಈಗ ಈ ಮತವು ಕೀಳುಸ್ಥಿತಿಯಲ್ಲಿದೆ. ಈ ಮತಕ್ಕೆ ದತ್ತಿಯಾಗಿ ಬಿಟ್ಟ ಭೂಮಿಯು ವಿಶೇಷ ಭಾಗವು ಮೂಲಗೇಣಿಯಾಗಿ ರೈತರ ವಶವಾಗಿದೆ.

ಹುಬ್ಬಳ್ಳಿಯ ಮೂರುಸಾವಿರ ಮತೋತ್ಪತ್ತಿಯೂ ಹದಿಮೂರನೆಯ ಶತಮಾನದ ಸುಮಾರಿಗೆ ಸಿರಸಿಯ ಹತ್ತರಿರುವ ಇಸಲೂರಿನ ವಿರಕ್ತ ಮತವು ಉಚ್ಛ್ರಾಯ ಸ್ಥಿತಿಯಲ್ಲಿದ್ದಿತು.

ಇದೇ ಮಠದಿಂದಲೇ ಸ್ವಾದಿಯ ಗದ್ದಿಗೆಯ ಮಠೋತ್ಪತ್ತಿಯಾಗಿದೆ. ಆ ಶತಮಾನದಲ್ಲಿ ಅಲ್ಲಿ ಪ್ರಬಲರಾದ ವಿರಕ್ತ ಸ್ವಾಮಿಗಳ ಹೆಸರನ್ನು ಕೇಳಿ ವಿದ್ಯಾಭ್ಯಾಸಕ್ಕೆಂದು ದೇಶ ದೇಶಗಳಿಂದ ಅನೇಕ ಶಿಷ್ಯರು ಬಂದು ಅವರ ಹತ್ತರ ನಿಂತಿದ್ದರು. ಅವರೊಳಗೆ ಗುರುಸಿದ್ಧಯ್ಯನವರು ಪಟ್ಟಶಿಷ್ಯರು. ಇವರು ಸಮೀಪದಲ್ಲಿರದಿದ್ದರೆ ಸ್ವಾಮಿಗಳು ಭ್ರಮೆಗೊಳ್ಳುತ್ತಿದ್ದರು. ಒಮ್ಮೆ ಸ್ವಾಮಿಗಳು ಚರಾರ್ಥವಾಗಿ ಎಲ್ಲ ಶಿಷ್ಯರನ್ನೊಡಗೊಂಡು ಹುಬ್ಬಳ್ಳಿಗೆ ಹೋಗಿದ್ದರು. ಬರಗಾಲವಾದ್ದರಿಂದ ಅವರ ಪರಿವಾರಕ್ಕೆ ಸಾಕಷ್ಟು ಆತಿಥ್ಯವು ದೊರೆಯದ್ದರಿಂದ ಅವರು ಓಡಿಹೋದರು. ಸ್ವಾಮಿಗಳೊಬ್ಬರೇ ಅಲ್ಪಪರಿವಾರ ಸಮೇತರಾಗಿ ಗುರುಸಿದ್ಧಯ್ಯನವರನ್ನು ಹಿಂದಿನಿಂದ ಕಳುಹಬಹುದೆಂದು ಕಷ್ಟದಿಂದ ಹೇಳಿ ಹೊರಟು ಹೋಗುವದು ಕಠಿಣವಾಯಿತು. ಗುರುಸಿದ್ಧಯ್ಯನವರು ಹುಬ್ಬಳ್ಳಿಯಲ್ಲಿ ಕಲ್ಯಾಣಶೆಟ್ಟಿಯವರ ಮನೆಯಲ್ಲಿ ಬಹಳ ದಿವಸಗಳವರೆಗೆ ನಿಂತರೂ ತಿರುಗಿ ಇಸಲೂರಿಗೆ ಹೋಗುವದು ಅಸಂಭವವಾಯಿತು. ಹೀಗೆ ಅಸಹಾಯರಾದ ಶಿಷ್ಯವರ್ಯರು ಮುಂದು ಗಾಣದೆ ಮುಂದೆನುಗತಿಯೆಂದು ಕಲ್ಯಾಣಶೆಟ್ಟಿಯವರನ್ನು ಕೇಳಿಕೊಳ್ಳಲು ಅವರು "ತಮಗೆ ನಾನೇಗತಿ ನನಗೆ ತಾವೇಗತಿ" ಎಂದು ಹೇಳಿ ಮೂರುಸಾವಿರ ಮಠವನ್ನು ಕಟ್ಟಿಸಿಕೊಟ್ಟು ಶಿಷ್ಯವರ್ಯರನ್ನು ಪಟ್ಟದ ಮೇಲೆ ಕುಳ್ಳಿರಿಸಿದರು. ಈ ಸಂಗತಿಯು ಇಸಲೂರ ವಿರಕ್ತ ಸ್ವಾಮಿಗಳಿಗೆ ತಿಳಿಯಲು ಅವರು ಸಿಟ್ಟಾಗಿ "ನಿನ್ನ ಮನೆಯು ಅಲ್ಲದ ಬೀದಿಯಲ್ಲಿ ಕಟ್ಟಲಿ" ಎಂದು ಕಲ್ಯಾಣಶೆಟ್ಟಿಯವರಿಗೆ ಶಾಪವನ್ನು ಕೊಟ್ಟರು. ಶೆಟ್ಟರು ಉಶ್ಶಾಪವನ್ನು ಬೇಡಿಕೊಳ್ಳದೆ ಪ್ರತಿಯಾಗಿ "ನಿಮ್ಮ ಶರೀರವು ಲಿಂಗವಿಲ್ಲದ ಭವಿಗಳ ವಶವಾಗಲಿ" ಎಂದು ಶಾಪ ಕೊಟ್ಟರು. ತುಸು ದಿವಸಗಳಲ್ಲಿಯೇ ಕಲ್ಯಾಣ ಶೆಟ್ಟಿಯವರ ಮನೆಯು ಆ ಸ್ಥಳದಲ್ಲಿ ಕಟ್ಟಲಾಯಿತು. ವಿರಕ್ತ ಸ್ವಾಮಿಗಳ ಪಲ್ಲಕ್ಕಿಯನ್ನು ಲಿಂಗಾಯತೇತರ ಭೋಯಿಗಳು ಹೊರಹತ್ತಿದರಂತೆ. ಇಸಲೂರ ವಿರಕ್ತ ಮಠವು ಬಹು ಉತ್ಕರ್ಷವನ್ನು ಹೊಂದಿ ಎರಡು ದೊಡ್ಡ ವಿರಕ್ತ ಮಠಗಳಿಗೆ ಜನಕವಾಗಿದ್ದರೂ ಈಗ ಹಾಳಾಗಿದೆ.

## ಧರ್ಮಾನದಿಯ ಉಗಮವು

ಪಾಂಡವರು ಅಜ್ಞಾತವಾಸಕ್ಕೆಂದು ವಿರಾಟನಗರಕ್ಕೆ ಹೋದದ್ದು ಎಲ್ಲರಿಗೂ ಗೊತ್ತಿದ್ದ ಸಂಗತಿಯು. ಈ ವಿರಾಟನಗರವು ಹಾನಗಲ್ಲ ಪಟ್ಟಣವಾಗಿರಬಹುದೆಂದು ದಂತಕಥೆಗಳಿಂದಲೂ ಐತಿಹಾಸಿಕ ಸಂಗತಿಗಳಿಂದಲೂ ತಿಳಿಯುತ್ತದೆ. ಅಲ್ಲಿ ವಿರಾಟನ ಕೋಟೆ, ಕೀಚಕನ ಗರಡೀಮನೆ ಮುಂತಾದವುಗಳನ್ನು ಜನರು ಈಗಲಾದರೂ ತೋರಿಸುತ್ತಾರೆ. ಅದರ ಸಮೀಪದಲ್ಲಿದ್ದ ಬನವಾಸಿಯು ಪಾಂಡವರು ವನವಾಸಮಾಡಿದ ಸ್ಥಳವಾಗಿರಬಹುದು. ಆದ್ದರಿಂದಲೇ ಅದಕ್ಕೆ ಬನವಾಸಿಯೆಂಬ ಹೆಸರು ಬಂದಿದೆ. ಸ್ವಾದಿಯ ನದಿಯಲ್ಲಿ ಪಾಂಡವರು ಮಾಡಿಸಿದ ಹನ್ನೆರಡುನೂರು ಲಿಂಗಳೂ ಈ ಸಂಗತಿಗೆ ಪುಷ್ಟಿಯನು ಕೊಡುತ್ತವೆ. ಇದಲ್ಲದೆ ಧರ್ಮಾನದಿಯ ಉಗಮವು ಈಸಂಗತಿಗೆ ಸಹಾಯ ಮಾಡುತ್ತದೆ.

ಭೀಮನು ವಿರಾಟನ ಹತ್ತರ ಬಾಣಸಿಗನ ಕೆಲಸಮಾಡುತ್ತಿದ್ದಾಗ್ಗೆ ಮಳೆಯಾಗದೆ ನೀರಿನ ಕೊರತೆಯುಂಟಾದ್ದರಿಂದ ಇಸಲೂರಿನಿಂದ ಸೂರ್ಯೋದಯಕ್ಕಿಂತ ಮೊದಲು ನೀರುತರಬೇಕಾಗುತ್ತಿತ್ತು. ಈ ಕಾರ್ಯವು ಭೀಮನಿಗೆ ಸಾಹಸದ್ದಲ್ಲ. ಇಸಲೂರಿಗೂ ಹಾನಗಲ್ಲಿಗೂ ಅಂತರವು ಸುಮಾರು ಹನ್ನೊಂದು ಮೈಲು. ಒಂದು ದಿನ ಆತನು ಪ್ರತಿದಿನಕ್ಕಿಂತಲೂ ತುಸು ಅವಕಾಶವಾಗಿ ನೀರಿಗೆ ಹೋದ್ದರಿಂದ ಜನರೆಲ್ಲರೂ ನೀರನ್ನು ಬಳೆದೊಯ್ದಿದ್ದರು. ಭೀಮನಿಗೆ ನೀರಿಲ್ಲದೆ ಹೋಗುವ ಹೊತ್ತು ಬಂದಿದ್ದಿತು. ಹೀಗೆ ಮಾಡಲು ಕಾರ್ಯಹಾನಿಯಾಗುವ ಸಂಭವವು. ನೀರುಸಿಗುವ ಉಪಾಯವು ತೋಚಲೊಲ್ಲದು. ಸಿಟ್ಟಿನಿಂದ ಕಣ್ಣುಗಳು ಕೆಂಪಾದುವು. ತುಟಿಗಳು ಅದುರಹತ್ತಿದುವು. ಬಾಹುಗಳು ಸ್ಫುರಿಸಹತ್ತಿದವು. ನೀರಿಲ್ಲದೆ ಹೋಗಕೂಡದೆಂದು ನಿಶ್ಚಯಿಸಿ ಕೊನೆಗೆ ಆತನು ಗಂಗೆಯನ್ನು ಸ್ತುತಿಸಿ ಆರ್ಭಟಿಸಿ ಮುಷ್ಟಿಯಿಂದ ಭೂಮಿಯನ್ನು ತಿವಿಯಲು ಅವನ ಆಘಾತದಿಂದುಂಟಾದ ತಗ್ಗಿನಲ್ಲಿ ಗಂಗೆಯ ಬಹುದೊಡ್ಡ ಪ್ರವಾಹವು ಆರ್ಭಟಿಸುತ್ತ ಹೊರಹೊರಟಿತು. ಸಮೀಪದಲ್ಲಿದ್ದ ಜನರು ಭಯಭೀತರಾಗಿ ಓಡಿಹೋದರು. ಆ ಪ್ರವಾಹವನ್ನು ನೋಡಿ ಈ ಪ್ರವಾಹದಿಂದ ಅನೇಕ ಜನರೂ, ಪ್ರಾಣಿಗಳೂ, ಪಟ್ಟಣಗಳೂ ನಾಶವಾಗಬಹುದೆಂದು ಚಿಂತಿಸಿ ಸಮೀಪದಲ್ಲಿಯೇ ಬಿದ್ದ ಒಂದು ನೀರಲಮರದ ಬಹುದೊಡ್ಡ ಬೊಡ್ಡೆಯನ್ನು ಎತ್ತಿ ತಂದು ಅವನು ಅದನ್ನು ಪ್ರವಾಹ ಮುಖಕ್ಕೆ ಚಾಚಿ ಗಟ್ಟಿಯಾಗಿ ಕೂಡ್ರಿಸಿ ತನಗೆ ಬೇಕಾದಷ್ಟು ನೀರು ಬರುವಂತೆ ಮಾಡಿಕೊಂಡನು. ಆದರೂ ಹೆಚ್ಚಾಗಿ ಹರಿದು ಹೋಗುವ ನೀರು ಹೊಳೆಯಾಯಿತು. ಅದರ ಉಗ

ಮದ ಮೇಲೆ ಒಂದು ಲಿಂಗವನ್ನು ಸ್ಥಾಪಿಸಿ ಅವಕ್ಕೆ ರಾಮಲಿಂಗವೆಂಬ ಹೆಸರನ್ನಿಟ್ಟನು. ತನ್ನ ಅಣ್ಣನ ಮೇಲಿನ ಭಕ್ತಿಪ್ರೀತಿಗಳಿಗಾಗಿ ನದಿಗೆ ಧರ್ಮನದಿಯೆಂಬ ಹೆಸರು ಕೊಟ್ಟನು. ಈಗಲೂ ಅಲ್ಲಿ ರಾಮಲಿಂಗನ ಗುಡಿಯೂ ನದಿಯುಗಮದ ಗೊಂಡವೂ ಅವೆ. ನೀರು ಹೊಂಡದಿಂದ ಯಾವಾಗಲೂ ಹರಿಯುತ್ತಿರುತ್ತದೆ. ಹೊಂಡದ ಬದಿಯಲ್ಲಿಯೇ ಅದರೊಳಗಿಂದ ಹರಿದು ಹೋದ ನೀರು ಸಂಚಯವಾಗಿ ಮನೋಹರವಾದ ಒಂದು ಸರೋವರವಾಗಿದೆ. ಏಳು ವರ್ಷಕ್ಕೊಮ್ಮೆ ಈ ಹೊಂಡದೊಳಗಿನ ಪ್ರವಾಹ ಮುಖದಲ್ಲಿದ್ದ ಕಟ್ಟೆಗೆಯ ಬೊಡ್ಡೆಯನ್ನು ಕಿತ್ತುಹಾಕಿ ಹೊಸದನ್ನು ಕೂಡ್ರಿಸುತ್ತಾರೆಂದೂ, ಆ ಕಾಲಕ್ಕೆ ನೀರಿನ ದೊಡ್ಡ ಪ್ರವಾಹವನ್ನು ನೋಡಬಹುದೆಂದೂ ಇಸಲೂರೊಳಗಿನ ಜನರು ಹೇಳುತ್ತಾರೆ.

---

## ಅರಿಕೆ

ರಾಗ ಧನ್ಯಾಸಿ; ತಾಳ ಝಂಪೆ.

ಮರಣವೊದಗಲು ನನಗೆ, ನೆನೆಯಲಿವನು ।
ಮರುಗದಲೆ ಮಿಡುಕದಲೆ ಮರುಕವುಳ್ಳವರು ॥ ಪಲ್ಲ ॥
ಚೆಲುವ ಹೂಬಳ್ಳಿಗಳು ನಸುಕಿನೊಳು ಪರಿಮಳವ- ।
ನೊಲುಮೆಯಲಿ ತಾಯ್ನೆಲವ ಪೂಜೆಗಿತ್ತು ॥
ನಲಿನಲಿದು ಕುಣಿಯುತಿರಲೊಬ್ಬನದ ಕಂಡು ಬಲು ।
ಹಲುಬುತಿದ್ದನು ತಾನು ಬಡವನೆಂದು ! ॥ ೧ ॥

ಇನಿಗೊರಲ ಕೋಗಿಲವು ತಾಯ್ನಾಡ ಹಾಡನಿನಿ- ।
ದನಿಯಿಂದೆ ಮೆಯ್ಮರೆತು ಹಾಡುವುದನು ॥
ಮನವಿತ್ತು ಕೇಳಿ ನುಡಿಗೊರಲಿಲ್ಲ ತನಗೆನುತೆ ।
ಅನುದಿನದೊಳಳುತಿದ್ದನೊಬ್ಬನೆಂದು ! ॥ ೨ ॥

ಕೊಡಲಿನಿತು ಹಣವಿಲ್ಲ! ಮೆಚ್ಚಿಸಲು ಗುಣವಿಲ್ಲ ।
ದುಡಿವೆನೆಂದರೆ ದೇಹಬಲವಿಲ್ಲವು ! ॥
ಅಡಿಗಡಿಗೆ ತನಗೆ ಕಂಬನಿಗರೆವುದಾಯ್ತೆಂದು ।
ಮಿಡುಕುತಲಿ ನಿಡುಸುಯ್ವನೊಬ್ಬನೆಂದು ! ॥ ೩ ॥

—ಸಾ. ರಾ.

---

# ಹೈದರಾಬಾದು ರಾಜ್ಯಕ್ರಮದ ಸಂಕ್ಷಿಪ್ತ ವಿವರಣೆ

ಲೇಖಕ:— ಶ್ರೀ ರಾಘವೇಂದ್ರರಾವ ಚಾಕಲಬ್ಬಿ ವಕೀಲ, ಕೊಪ್ಪಳ

(೨ನೆಯ ಸಂಚಿಕೆಯಿಂದ ಮುಂದುವರಿದುದು.)

ಹಿಂದಿನ ಕಾಲದಲ್ಲಿ ಈಗಿನಂತೆ ಭೂಮಿಯೊಳಗೆ ಹಣವನ್ನು ನಿಯಮಿಸಿದ್ದಿಲ್ಲ. ನಿಜಾಮ ರಾಷ್ಟ್ರದಲ್ಲಿ ವಿಚಿತ್ರಪದ್ಧತಿಯಿದ್ದಿತು. ಅದನ್ನು ಓದುಗರು ತಿಳಿಯಲೇಬೇಕು. "ಮುರಕ್ಕೆ ಇಬರತ" ದಲ್ಲಿ ಹೀಗೆ ಬರೆದಿದೆ.

"ಆಗಿನ ಕಾಲದಲ್ಲಿ ಜಿಲ್ಹೆಗಳ ಹಣದ ವಸೂಲಿಯವ್ಯವಸ್ಥೆಯು ತಾಲೂಕದಾರರ (ಕಲೆಕ್ಟರರು) ಹಾಗೂ ಶೇಕಾದಾರರ (ಗುತ್ತೇದಾರ) ಕಡೆಗಿತ್ತು. ಇವರು ಶಿರಸ್ತೇದಾರ ಮತ್ತು ಅವರ ಸಹಾಯಕರಿಂದ ವಸೂಲಿಯ ಕೆಲಸ ನಡಿಸುತ್ತಿದ್ದರು. ಶಿರಸ್ತೇದಾರರು ದೇಸಾಯಿ ದೇಶಪಾಂಡೆ ಜನರ ದ್ವಾರದಿಂದ ವಸೂಲ ಮಾಡುತ್ತಿದ್ದರು. ಈ ಕಾರ್ಯದಲ್ಲಿ ಹೇರಳವಾದ ಲಂಚವನ್ನು ಕೊಡುತ್ತಿದ್ದರು. ರೈತರ ಗೋಳನ್ನು ಕೇಳುವವರೇ ಇದ್ದಿಲ್ಲ. ವಸೂಲಿಯ ಸಂಬಂಧವಾಗಿ ಕೆಲವು ನಿಯಮಗಳು ಹೆಸರಿಗೆ ಮಾತ್ರವಿದ್ದವು. ಆಗಿನ ಕಾಲದಲ್ಲಿ ಹಣವನ್ನು ವಸೂಲು ಮಾಡುತ್ತಿದ್ದಿಲ್ಲ. ಬೆಳೆಯು ಒಣಗಿ ಕಾಳಾಗುವ ಸಮಯವೊದಗಲು ಶಿರಸ್ತೇದಾರ ಮೊದಲಾದವರು ಹಳ್ಳಿಗಳಿಗೆ ಹೋಗಿ ಬೆಳೆಯನ್ನು ತಮ್ಮ ವಶಕ್ಕೆ ತೆಗೆದುಕೊಂಡು ಜಪ್ತ ಇಡುತ್ತಿದ್ದರು. ಗಳೇದ ಮೇಲೆ ವಸೂಲು ಮಾಡುತ್ತಿದ್ದರು. ಒಂದೊಂದು ಗಳೇಕ್ಕೆ ಐದರಿಂದ ಹತ್ತು ರೂಪಾಯಿ ಬೀಳುತ್ತಿತ್ತು. ಎರಡು ಗಳೇಕ್ಕೆ ಹತ್ತರಿಂದ ೨೫ರ ವರೆಗೆ ಬೀಳುತ್ತಿತ್ತು. ಈ ಹಣವನ್ನು ಠರಾವು ಮಾಡುವದರ ಸಲುವಾಗಿಯೇ ಮೊದಲು ಎಷ್ಟೋ ಲಂಚವನ್ನು ಹೊಡೆಯುತ್ತಿದ್ದರು. ಆದರೂ ವಸೂಲು ಆದ ಹಣದಲ್ಲಿ ಸರಕಾರಕ್ಕೆ ೧/೪ ದಿಂದ ೧/೩ ದ ವರೆಗೆ ತಾವೇ ಹೊಡೆದು ಉಳಿದದ್ದನ್ನು ಸರಕಾರಕ್ಕೆ ಮುಟ್ಟಿಸುತ್ತಿದ್ದರು. ಈ ಹಣವನ್ನು ಕೊಡುವವರೆಗೂ ಬೆಳೆಯು ಜಪ್ತ ಇರುತ್ತಿತ್ತು. ಎಷ್ಟೋ ಜಮೀನುಗಳು ಸಾಗ ಇರುತ್ತಿದ್ದರೂ ನಕಾಶದಲ್ಲಿ ಬಂಜರ ಎಂದು ಬರೆಯುತ್ತಿದ್ದರು. ಇ. ಸ. ೧೮೫೩ರಲ್ಲಿ ವರ್‍ಹಾಡವನ್ನು ಇಂಗ್ಲಿಷರಿಗೆ ಕೊಡುವಾಗ ಸರಕಾರದ ಲೆಕ್ಕದಲ್ಲಿ ನಾಲ್ಕುಲಕ್ಷ ೪೫ ಸಾವಿರ ಬಿಘೆ ಸಾಗಜಮೀನ ಎಂದು ಇತ್ತು. ಇಂಗ್ಲಿಷ ಸರಕಾರದ ತಪಾಸಣೆಯಲ್ಲಿ ೧೭ಲಕ್ಷ ಬಿಘೆ ಜಮೀನು ಸಾಗು ಹೊರಟಿತು. ಇದರಿಂದ ಲಕ್ಷಾಂತರ ರೂಪಾಯಿಗಳ ಲಂಚವನ್ನು ಪ್ರತಿವರುಷವೂ ಅಧಿಕಾರಿಗಳು ಹೊಡೆಯುತ್ತಿದ್ದರೆಂದು ಹೇಳಬಹುದು. ಈ ಅಧಿಕಾರಿಗಳು ಆಯಾ ಜಿಲ್ಹೆಯ ಸ್ವತಂತ್ರ ಒಡೆಯರಂತಿದ್ದರು. ಇವರಲ್ಲಿಯೂ ಸೈನ್ಯವಿರುತ್ತಿತ್ತು."

ಈ ಎಲ್ಲ ಕುಂದುಕೊರತೆಗಳನ್ನು ಸಾಲಾರ್ಜಂಗರು ಮೊದಲೇ ಕಂಡುಹಿಡಿದು ದಿವಾನಗಿರಿಗೆ ಬಂದ ಮರುದಿವಸವೇ ನಿಜಾಮರಿಗೆ ಒಂದು ವಿನಂತಿಯನ್ನು ಬರಕೊಂಡರು. ಅದರಲ್ಲಿ ತಮಗೆ ರಾಜ್ಯವ್ಯವಸ್ಥೆಯಲ್ಲಿ ಬೇಕಾದವರನ್ನು ಇಡಲು ಬೇಡಾದವರನ್ನು ತೆಗೆಯಲು ಸಂಪೂರ್ಣ ಅಧಿಕಾರವಿರಬೇಕೆಂತಲೂ ತಮ್ಮ ವಿರುದ್ಧ ಯಾರಾದರೂ ದೂರು ಹೇಳಿದರೆ ಅದನ್ನು ತಮ್ಮನ್ನು ವಿಚಾರಿಸದೆ ನಿರ್ಣಯಿಸಬಾರದೆಂತಲೂ ಖಂಡಿತವಾಗಿ ಬರೆದರು. ಇದನ್ನು ತತ್ಕ್ಷಣವೇ ನಿಜಾಮರು ಮಂಜೂರು ಮಾಡಿದರು. ಕೂಡಲೆ ಸಾಲಾರ್ಜಂಗರು ಎಲ್ಲ ತಾಲೂಕುದಾರರನ್ನು ಕರಿಸಿ ಅವರಿಗೆ ಮಂತ್ರಾಕ್ಷತೆಗಳನ್ನು ಕೊಟ್ಟು ಮನೆಗೆ ಕಳುಹಿಸಿದರು. ಆಗ ತಾಲೂಕದಾರರು ಸಾಲಾರ್ಜಂಗರ ವಿರುದ್ಧ ಬಂಡುಮಾಡಿದರೂ ಸಾಧಿಸಲಿಲ್ಲ. ಈ ವ್ಯವಸ್ಥೆಯಿಂದ ೧೮೫೬ರ ವರೆಗೆ ಎಲ್ಲ ಜಿಲ್ಹೆಗಳ ಸಂಪೂರ್ಣ ವ್ಯವಸ್ಥೆಯಾಗಿ ಸರಕಾರದ ಸಾಲವೆಲ್ಲವೂ ತೀರಿ ತೀವ್ರವೇ ಸರಕಾರದ ಖಜಾನೆಯು ಸ್ಥಾಪಿತವಾಯಿತು. ಮತ್ತು ಜಿಲ್ಹೆಯ ಎಲ್ಲ ಹಣವೂ ಈ ಖಜಾನೆಯಲ್ಲಿ ಬಂದು ಸೇರಹತ್ತಿತು. ಇದನ್ನು ನೋಡಿ ಸ್ವಾರ್ಥಸಾಧನದಲ್ಲಿ ಮುಳುಗಿ ತೇಲುವ ಅಧಿಕಾರಿಗಳ ಸೊಕ್ಕು ಮುರಿಯಿತು. ಅವರು ಮನಸಾ ಸಾಲಾರ್ಜಂಗರನ್ನು ವಿರೋಧಿಸಹತ್ತಿದರು. ಇದೇ ಸುಮಾರಿಗೆ ದೇಶದಲ್ಲಿ ಭಯಂಕರ ದುರ್ಭಿಕ್ಷವು ಬಿದ್ದಿತು. ಆದರೂ ಸಾಲಾರ್ಜಂಗರು ತಮ್ಮ ಬುದ್ಧಿಶಕ್ತಿಯಿಂದ ಪ್ರಜೆಗಳನ್ನು ರಕ್ಷಿಸಿದರು. ಇನ್ನುಮುಂದೆ ರಾಜ್ಯಪದ್ಧತಿಯ ಸರಳವಾದ ಯೋಜನಾಕ್ರಮವನ್ನು ಹಾಕಿ ಕ್ರಮದಲ್ಲಿ ತರಬೇಕೆನ್ನುವದರೊಳಗಾಗಿ ೧೮೫೭ನೇ ಇಸವಿಯ ಭಯಂಕರ ಬಂಡಾಯವೆದ್ದಿತು. ಇದೇ ಸಮಯಕ್ಕೆ ನಿಜಾಮ ನಾಸಿರುದ್ದೌಲಾ

ಇವರು ಮೃತರಾದರು. ಇವರ ತರುವಾಯ ಇವರ ಮಕ್ಕಳಾದ ವೀರ ಅಫಜಉದ್ದೌಲಾ ಇವರು ಪಟ್ಟಕ್ಕೆ ಬಂದರು. ಆಗಿನ ಕಾಲದ ಇಂಗ್ಲಿಷರ ದುಸ್ಥಿತಿಯು ಅವರ್ಣನೀಯವು. ನಿಜಾಮರೊಬ್ಬರು ಬಂಡುಗಾರರನ್ನು ಕೂಡಿದ್ದರೆ ಇಂಗ್ಲಿಷರು ಹಿಂದುಸ್ತಾನದಲ್ಲಿ ನಾಮಶೇಷವಾಗಿ ಹೋಗುತ್ತಿದ್ದರು. ಆದರೆ ನಿಜಾಮರು ಏಕೆ ಕೂಡಲಿಲ್ಲ ? ಎಂಬುವ ಪ್ರಶ್ನೆಗೆ ಕೇವಲ ಸಾಲಾರ್ಜಂಗರ ಧೂರ್ತತನವೇ ಕಾರಣವುಎಂಬುದೇ ಉತ್ತರ. ಕೊನೆಗೆ ಬ್ರಿಟಿಶರಿಗೆ ಜಯವಾಯಿತು. ಅದರಲ್ಲಿ ನಿಜಾಮರಿಗೆ ಕೆಲವು ಪ್ರಾಂತಗಳೂ ತಿರುಗಿ ಬಂದವಲ್ಲದೆ ಮಾನಮರ್ಯಾದೆಯೂ ವಿಶೇಷವಾಯಿತು. ಈ ಎಲ್ಲ ಉಪಕಾರವು ಸಾಲಾರ್ಜಂಗರದಿದ್ದು ಬ್ರಿಟಿಶರ ರಾಜ್ಯವಿರುವವರೆಗೂ ಬ್ರಿಟಿಶರು ಸಾಲಾರ್ಜಂಗರ ಉಪಕಾರವನ್ನು ಮರೆಯುವಂತಿಲ್ಲ. ಈ ಎಲ್ಲ ವ್ಯವಸ್ಥೆಯು ಸರಿಯಾಗಿ ಸಂಪೂರ್ಣ ಶಾಂತತೆಯು ಇ. ಸ. ೧೮೬೭ರಲ್ಲಿ ನೆಲೆಗೊಂಡಿತು. ಹೈದರಾಬಾದಿನಂಥ ನವಾಬರ ಮಯವಾದ ರಾಜ್ಯದಲ್ಲಿಯ ತೊಂದರೆಗಳು ಅಲ್ಲಿರುವವರಿಗೇ ಗೊತ್ತು. ಈ ನವಾಬರು ಇವರ ಒಸ್ತಾದಿಯಗಳು ಇವೆಲ್ಲವೂ ಇಲ್ಲಿ ಅನುಭವಿಸುವವರಿಗೇ ಗೊತ್ತು. ಆಗಿನ ಕಾಲದಲ್ಲಿ ಸಾಲಾರ್ಜಂಗರು ಅವರಿಂದ ಪಾಲಾದುದಕ್ಕೆ ಅವರ ಅದ್ವಿತೀಯ ಹಾಗೂ ಅಲೌಕಿಕ ಗುಣಗಳೇ ಮೂಲ ಕಾರಣಗಳು. ಅದಿರಲಿ. ಇ. ಸ. ೧೮೬೭ರಲ್ಲಿ ಜಿಲ್ಹೆಗಳು ಸಂಪೂರ್ಣವಾಗಿ ವಿಂಗಡಿಸಲ್ಪಟ್ಟು ತಾಲೂಕುಗಳೇ ಮೊದಲಾದ ವ್ಯವಸ್ಥೆಗಳು ಆಗಿ ಪ್ರಾಮಾಣಿಕ ಹಾಗೂ ಯೋಗ್ಯ ಅಧಿಕಾರಿಗಳು ನಿಯಮಿಸಲ್ಪಟ್ಟರು. ಪಶುಗಳಂತೆ ನೀಚತನದಿಂದ ವರ್ತಿಸುತ್ತಿದ್ದ ರೋಹಿಲಾ ಪಠಾಣ ಅರಬರನ್ನು ಸೈನ್ಯದಿಂದ ಕಿತ್ತಿಹಾಕಿದರು. ಇವರ ಉಪದ್ರವದಿಂದ ಇಡೀ ಸಂಸ್ಥಾನವೇ 'ಬೇಚರಾಖ್' ಆಗುವ ಪ್ರಸಂಗವಿತ್ತು. ಇಂಥ ಸಂಧಿಯಲ್ಲಿ ವಿದ್ಯಾಪ್ರಸಾರವೂ ಇಲ್ಲ. ಪೋಲೀಸ ಮುಂತಾದ ಖಾತೆಗಳಿಲ್ಲ. ಆಗ ಸಾಲಾರ್ಜಂಗರು ಮಾಡಿದ ರಾಜ್ಯವ್ಯವಸ್ಥೆಯ ಬಗ್ಗೆ ಸೈಕ್ಲೋಪೀಡಿಯಾ ಆಫ್ ಇಂಡಿಯಾದಲ್ಲಿ ಹೀಗೆ ಬರೆದಿದೆ.

" The Dewan Sir Salar Jung made changes in 1868 in the administrative machinary. Five Sudder Talukadars or Divisionel commissioners were appointed for Aurangabad (2) Bir (3) & Parabhani; for (1) Nanded (2) Naldurg & Bedar; for (1) Nalgonda (2) Khummam; for Lingasgore & Raichoor; Indore, Medak, Yelgandal & Surapur. The first three cammissioners on Rs 1500 & the last two on Rs 1000 (per month).

"The people in the first two divisions speak Marathi. The next two the Telugu & the last are the Kanarese districts of the Nizam's territories. Each of the above fourteen district is presided over by a talukdar on Rs 400 to 600 a month, assisted by Dy. Talukdars who control & superitend the work of Naibs or Tahsildars of Taluks"

ಆಗಿನ ಕಾಲದ ಶಿಕ್ಷಣದ ವಿಷಯವಾಗಿ ಹೀಗೆ ಬರೆಯುತ್ತಾರೆ.

" Except in the city of Haiderabad itself no effort or attempt had been made to educate the people of Hyderabad territories, though education is making enormous strides in Berar & British Maharashtra. There was no proper School met with in all the Editors journeys in 1866 to 1870 amounting to about 7000 miles and only occasionally a few lads, children of foreigners were to be seen learning the elements of Hindi or Marathi. "

ಇಷ್ಟೆಲ್ಲವಾದರೂ ಆಗಿನ ಕಾಲದ ನಿಜವಾದ ಪದ್ಧತಿಯ ವಿಷಯವಾಗಿ ಬೇರೆ ಬೇರೆ ಭಾಗಗಳ ಚರಿತ್ರೆಯು ಚನ್ನಾಗಿ ತಿಳಿಯುವದಿಲ್ಲ. ಆದರೂ ರೆಸಿಡೆಂಟ ಮೊದಲಾದವರ ಮುದ್ರಣದ ರಿಪೋರ್ಟನಿಂದ ಹೀಗೆ ತಿಳಿಯುತ್ತದೆ. ಇ. ಸ. ೧೮೬೭ರಲ್ಲಿ ಹೈದರಾಬಾದಿನ ರೆಸಿಡೆಂಟರಾದ ಸರ್ ರಿಚರ್ಡ ಟೆಂಪಲ್‌ರವರು ೧೬ನೇ ಅಗಸ್ಟ ೧೮೬೭ನೇ ಇಸವಿಯ ಪತ್ರದಲ್ಲಿ ಹೀಗೆ ಬರೆಯುತ್ತಾರೆ:—

"In the Deccan, of late years, the constitutional system & principles of the Nizam's civil Government are really excellent; this much is certain, that the result must be more

or less beneficial to the country is hardly to be doubted. Whether full effect is given to the instruction of H. H's Government, throughout the Deccan, I cannot yet say, but independant testimony is constantly reaching me to the effect of great improvement being perceptible."

ಇದಾದ ಮೇಲೆ ಇ. ಸ. ೧೮೭೮ರ Report of Moral & material Progress ದಲ್ಲಿ ಹೀಗೆ ಬರೆಯುತ್ತಾರೆ.

"The vigorous efforts made towards reform have now placed the financial credit of the Nizams Government on a satisfactory footing; it enjoys the confidence of the moneyed class & it can now raise money, at very moderate rates of interest, instead of usurious charges of former days."

ಆ ಮೇಲೆ ಇ. ಸ. ೧೮೭೯ರ Report of Moral & Matirial progressದಲ್ಲಿ ಮ್ಯಾಜಿಸ್ಟ್ರೇಟ ಮತ್ತುಜಡ್ಜ ಜನರ ವಿಷಯುವಾಗಿ ಹೀಗೆ ಬರೆಯುತ್ತಾರೆ:—

"All these officers are well educated, though all have not done well; several had received a training in one or other of the British Provinces. Many discharged their duties with more or less efficiency; and some have by their firmness and uprightness brought credit to their department." ಕೊನೆಗೆ ಹೈದರಾಬಾದಿನ ರೆಸಿಡಿಂಟರಾದ ಮಿ. ಸಿ. ಬಿ. ಸಾಂಡರ್ಸರವರು ಇ. ಸ. ೧೮೭೦ರಲ್ಲಿಯ ರಿಪೋರ್ಟಿನಲ್ಲಿ ಒಟ್ಟಿನ ಮೇಲಿನ ದೇಶದ ಸ್ಥಿತಿಯು ಬಗ್ಗೆ ಹೀಗೆ ಬರೆಯುತ್ತಾರೆ. ಅದರಲ್ಲಿ ಅವರು ಒಟ್ಟಿನ ಮೇಲೆ ೧೮೫೩ರಿಂದ ೧೮೭೦ರ ವರೆಗೆ ಸುಮಾರು ೨೦ವರುಷಗಳ ಸಮಾರೋಪ ಮಾಡಿದ್ದಾರೆ:—

"It is hardly too much to say that the Hyderabad with which I first became acquainted in 1860, was to the Hyderabad which was described, for example, in the dispatches of my predecessor of 1820, Sir Charles (afterwards Lord) Metcalfe, as the England of the present day is to the England copy of Stuarts,—a result essentially due, as Government is aware, to the beneficial administration and sound policy of the present minister, Sir Salar Jung, and to the support afforded to him by my predecessors in office. Not only was the treasury full, but the annual income of the State exceeded the annual expenditure by about eight lakhs of rupees, while the Credit of the Government stood proportionately high. Owing chiefly to the abolition of the baneful system of the former times, by which the collection of the revenue was framed out to contractors, disturbances in the interior of the Country became rare The Hyderabad contingent had not fired a single shot, except on its own parade grounds, since the suppression of the mutinies.

"In no respect does the recent administration of H. H.'s country contrast more favourably with the state of things prevailing twenty years ago than in revenue matters.

"The police has been put on a satisfactory footing; and life & property are only slightly more insecure in H. H.'s territory than in many parts of the country subject to our administration."

ಈ ತರದ ಮೇಲಿನ ಎಲ್ಲ ವಿಷಯಗಳನ್ನು ಅವಲೋಕಿಸಲಾಗಿ ಸಾಲಾರ್ಜಂಗರ ದಿವಾನಗಿರಿಯ ಮೊದಲಿನ ಮೂರು ವರ್ಷಗಳು ದೇಶವನ್ನು ಸಾಲದಿಂದ ಮುಕ್ತಮಾಡುವದರಲ್ಲಿ ಕಳೆದುಹೋದವು. ಆ ಮೇಲೆ ಮೂರು ವರ್ಷಗಳು ಬಂಡಾಯದ ಬಗ್ಗುಬಡಿಯುವಿಕೆ ಹಾಗೂ ನಂತರದ ಶಾಂತತೆಯಲ್ಲಿ

ಕಳೆದವು. ಅದರ ನಂತರ ದೇಶದ ಸ್ಥಿರವಾದ ಸುವ್ಯವಸ್ಥೆಯ ಕಡೆಗೆ ಅವರು ಲಕ್ಷ್ಯಕೊಟ್ಟರು. ದೇಶದ ಹಿತದ ಸಾಧನಗಳಾದ ರೇಲ್ವೆ ಪೋಸ್ಟ ಮೊದಲಾದ ಖಾತೆಗಳ ವ್ಯವಸ್ಥೆಯನ್ನು ಮಾಡಿದರು. ಕೇವಲ ಬ್ರಿಟಿಶ್ ಸರಕಾರದ ವ್ಯವಸ್ಥೆಯನ್ನೇ ಇಲ್ಲಿ ಇಡಬೇಕೆಂದು ಸಾಲಾರ್ಜಂಗರ ಮನೋಗತವಿತ್ತು. ಆದರೆ ಅನೇಕ ತೊಂದರೆಗಳು ಅವರಿಗೊದಗಿದವು. ಇ. ಸ. ೧೮೬೯ ನಿಜಾಮರಾದ ಅಫಜಲುದ್ದೌಲಾ ಇವರು ತೀರಿಕೊಂಡರು. ಮುಂದಿನ ನಿಜಾಮರಾದ ಮೀರಮಹಬೂಬ ಅಲೀಖಾನರವರು ತೀರ ಚಿಕ್ಕವಯಸ್ಸಿನವರು ಎಂದರೆ ೨॥ ವರುಷದವರು ಮಾತ್ರವಿದ್ದರು. ಇವರ ಅಲ್ಪವಯಸ್ಸಿನಲ್ಲಿ ಸಾಲಾರ್ಜಂಗರೂ ನವಾಬ ಷಮ್ಸುಲ್‌ಉಮರಾ ಅಮೀರ ಕಬೀರರೆಂಬವರೂ ರೀಜಂಟರಾಗಿ ರಾಜ್ಯಕಾರಭಾರ ನಡಿಸಿದರು. ಇವರ ಮೇಲ್ವಿಚಾರಕ್ಕೆ ಬ್ರಿಟಿಶ ರೆಸಿಡೆಂಟರು ನಡುವೆ ಕೈಹಾಕುತ್ತಿದ್ದರು. ನಿಜಾಮರ ಬಾಲ್ಯಾವಸ್ಥೆಯ ಮೂಲಕ ಸಾಲಾರ್ಜಂಗರು ಮುಂದಿನ ಜವಾಬುದಾರಿಯ ಕೆಲಸಗಳನ್ನು ವಹಿಸಲೂ ದೇಶದಲ್ಲಿ ಸುಧಾರಣೆಗಳನ್ನು ಮಾಡಲೂ ಹೆದರಿದರು. ಯಾಕಂದರೆ ಅಮೀರ ಕಬೀರರಿಗೂ ಸಾಲಾರ್ಜಂಗರಿಗೂ ಷಿಯ್ಯಾ ಸುನ್ನೀ ಮತಭೇದಗಳ ಪ್ರಯುಕ್ತ ಭಯಂಕರ ದ್ವೇಷಹುಟ್ಟಿತು. ಅದರಿಂದ ಅಮೀರ ಕಬೀರನು ಆಗಿನ ಕಾಲದ ರೆಸಿಡೆಂಟನಾದ ಕರ್ನಲ ಮೀಡ ಹಾಗು ಸಾಲಾರ್ಜಂಗರಲ್ಲಿ ದ್ವೇಷ ಹುಟ್ಟಿಸಿದನು. ಆದರೆ ಮುಂದೆ ಸಾಲಾರ್ಜಂಗರು, ಆಗ ರೆಸಿಡೆಂಟಸಾಹೇಬರು ಕೃತ ಕರ್ಮದ ಬಗ್ಗೆ ತೀರ ಪಶ್ಚಾತ್ತಾಪ ಯೋಗ್ಯತೆಯು ಅವರಿಗೂ ಗೊತ್ತಾಯಿತು. ಸಾಲಾರ್ಜಂಗರು ತೋರಿಸಿದ ಮುತ್ಸದ್ದಿತನ ಹಾಗೂ ಅವರು ಬ್ರಿಟಿಶರಿಗೆ ಮಾಡಿದ ಉಪಕಾರಗಳ ಬಗ್ಗೆ ಬ್ರಿಟಿಶರು ಸಾಲಾರ್ಜಂಗರ ಸಲುವಾಗಿ ವರ್ಹಾಡವನ್ನು ನಿಜಾಮರಿಗೆ ಬಿಡಬೇಕೆಂದು ಅವರು ಬರೆದರು. ಯಾಕಂದರೆ ಸಾಲಾರ್ಜಂಗರ ಕಕ್ಷಂದಿರಾದ ಸಿರಾಜುಲ್ಮುಲ್ಕರಿಂದ ವರ್ಹಾಡವು ಬ್ರಿಟಿಶರಿಗೆ ಕೊಡಲ್ಪಟ್ಟದ್ದರಿಂದ ಈ ಅಪಕೀರ್ತಿಯು ಸಾಲಾರ್ಜಂಗರಿಗೆ ಬಾಧಿಸಬಾರದೆಂದು ಸ್ಪಷ್ಟವಾಗಿ ಬರೆದರು. ಇ. ಸ. ೧೮೮೪ನೇ ಇಸವಿಯ ಐದನೆಯ ತಾರೀಖಿನ ದಿವಸ ನಿಜಾಮ ಮೀರಮಹಬೂಬ ಅಲ್ಲಿಖಾನರವರು ಪಟ್ಟಕ್ಕೆ ಬಂದು ಅಧಿಕಾರ ಸೂತ್ರಗಳನ್ನು ಕೈಯಲ್ಲಿ ತಕ್ಕೊಂಡರು. ಆಗ ವ್ಹೈಸರಾಯರು ಬಂದಿದ್ದರು. ಆದರೆ ಇದಕ್ಕೆ ಮೂರುವರುಷ ಪೂರ್ವದಲ್ಲಿಯೇ ಶ್ರೇಷ್ಠಮುತ್ಸದ್ದಿಗಳಾದ ಸಾಲಾರ್ಜಂಗರು ತೀರಿಕೊಂಡದ್ದರಿಂದ ವ್ಹಾಯಿಸರಾಯರೂ ನಿಜಾಮರೂ ಕೂಡಿಯೇ ವಿಷಾದಪಟ್ಟರು. ಇನ್ನು ಇಲ್ಲಿನಿಂದ ರಾಜ್ಯಪದ್ಧತಿಯ ವಿವರಣೆಯನ್ನು ಓದುಗರು ನಿರೀಕ್ಷಿಸುತ್ತ ಹೋಗಬೇಕು.

---

## ಅಪಜಯದ ಸುಖ

ಅಪಜಯದ ಸುಖವನನುಭವಿಪುದನು ನಾನು
ವಿಪರೀತವಾಗಿರಿತೆ ನಿನ್ನೊಡನೆಯಾಡಿ ॥ ಪಲ್ಲ ॥
ಸುಮವು ತರುರಾಜಿಗಳನಣಕಿಪುದ ಕಂಡಿಹೆನು;
ಹಿಮಮಣಿಯು ನವರತ್ನಭೂಷಣಗಳ!
ಹಿಮಕರನ ಮಿಂಚುಹುಳವಲ್ಲಗಳೆವುದ ಕಂಡು
'ಅಮಮ! ಅಪಜಯದ ಸುಖವಿರಲಿ' ಎಂದೆ ॥ ೧ ॥

ಹನಿಯ ಮಹಿಮೆಯು ಸಾಗರವ ನುಂಗುವುದ ಕಂಡೆ
ದಿನದ ಸಿರಿ ಯುಗಯುಗವ ಮೀರುವುದನು!
ಅನುದಿನವು ನಿನಗಾಗುವಪಜಯವ ಕಂಡು ನಾ
ನೆನಗಾಗುವಪಜಯವ ಚುಂಬಿಸುವೆನು! ॥ ೨ ॥

—"ಕಿಶೋರಚಂದ್ರವಾಣಿ."

---

# ೧೬ನೆಯ ಶತಮಾನದಲ್ಲಿದ್ದ ವೈಕುಂಠದಾಸರು

ಲೇಖಕ: — ಹರಿಕಥಾವಿದ್ವಾನ್ ಬೇಲೂರ ಕೇಶವದಾಸರು

ಕರ್ನಾಟಕದ ಹರಿದಾಸರ ಚರಿತ್ರೆಯನ್ನು ಕನ್ನಡಿಗರ ಜ್ಞಾಪಕಕ್ಕೆ ತಂದುಕೊಡಬೇಕೆಂದು "ಜಯಕರ್ನಾಟಕ"ದಲ್ಲಿ ಇದುವರಿಗೆ ಮೂರು ಲೇಖಗಳನ್ನು ಕೊಟ್ಟೆನು.

ಮೊದಲನೆಯ "ಕೀರ್ತನ ಪದ್ಧತಿ ಮತ್ತು ಹರಿದಾಸರು" ಎಂಬುದರಲ್ಲಿ ಕೀರ್ತನ ಪದ್ಧತಿಯ ಪುನರುದ್ಧಾರ ಹೇಗೆ ಕನ್ನಡಿಗರಿಂದಲೇ ಆಯಿತೋ, ವೈದಿಕ ಧರ್ಮಪೀಠಗಳಂತೆ, ಕೀರ್ತನ ಪೀಠವೂ ಕನ್ನಡಿಗರ ಸುದೈವದಿಂದ ಹೇಗೆ ಕನ್ನಡಿಗರಿಗೇ ದೊರೆಯಿತೋ, ಆ ವಿವರಣೆಯನ್ನು ಸಂಗ್ರಹವಾಗಿ ತಿಳಿಸಿದೆನು.

ಎರಡನೆಯ "ದಾಸಕೂಟ ಶಬ್ದದ ಜಾತಕ"ದಲ್ಲಿ ಹರಿದಾಸರು ತಮ್ಮ ಮುಂಡಲಿಗೆ "ದಾಸಕೂಟ"ವೆಂಬ ಸಮಸ್ತಪದವು ಯಾರಿಂದ, ಯಾವಾಗ, ಏನುಕಾರಣ ಬಂದಿತೋ ಅದನ್ನರಿಯದೆ, ತಾವು ದಾಸಕೂಟದವರೆಂದು ಕರೆದುಕೊಳ್ಳುತ್ತಿರುವದರ ವಿವರವನ್ನು ಕೊಟ್ಟೆನು.

ಮೂರನೆಯ "೯ನೇ ಶತಮಾನದಲ್ಲಿದ್ದ ಅಚಲಾನಂದ ದಾಸರು" ಎಂಬ ಲೇಖನದಲ್ಲಿ, ಐತಿಹಾಸಿಕ ದೃಷ್ಟಿಯಿಂದ ೯ನೇ ಶತಮಾನದಲ್ಲೂ ಕನ್ನಡ ಹರಿದಾಸರೂ ಮತ್ತು ಕನ್ನಡ ಕೀರ್ತನವಿದ್ದುದನ್ನು ತೋರಿಸಿ, ಅವರ ಅತ್ಯದ್ಭುತ ಅತಿ ಮಾನುಷ ಮಹಿಮೆಯನ್ನೂ, ರಾಷ್ಟ್ರಕೂಟದರಸರು ಅವರ ಶಿಷ್ಯರಾಗಿ ಜಹಗೀರು ಮೊದಲಾದವುಗಳನ್ನು ಕೊಟ್ಟು ತಮ್ಮ ರಾಷ್ಟ್ರದಲ್ಲೇ ದಾಸರನ್ನು ಸನ್ಮಾನಿಸಿ ಇಟ್ಟುಕೊಂಡಿದ್ದ ಸಂಕ್ಷೇಪ ಚರಿತ್ರೆಯನ್ನೂ ತಿಳಿಸಿದೆನು.

ಪ್ರಕೃತ ಲೇಖನದಲ್ಲಾದರೂ —ಪುರಂದರದಾಸರ ಸಮಕಾಲಿಕರಾಗಿದ್ದ ವೈಕುಂಠದಾಸರ ಚರಿತ್ರೆಯನ್ನು ಕೊಡುವೆನು.

**ವೈಕುಂಠದಾಸರ ಜನ್ಮಸ್ಥಳ:—** ವೈಕುಂಠದಾಸರ ಜನ್ಮ ಸ್ಥಳವಾವುದೆಂದರೆ—ಪ್ರಪಂಚದ ಅತ್ಯಾಶ್ಚರ್ಯ ವಸ್ತುಗಳಲ್ಲೊಂದೆನಿಸಿ—ಕನ್ನಡಿಗರ ಶಿಲ್ಪಿ ಚಾತುರ್ಯವೆಂಥಾದ್ದೋ ನೋಡಿರೆಂದು ದೇಶ ವಿದೇಶಗಳ ಜನರನ್ನಾಕರ್ಷಿಸಿ, ಬಂದವರ ಕಣ್ಣನಗಳಿಗಾನಂದವಿತ್ತು ವಿಸ್ಮಯಗೊಳಿಸುತ್ತಿರುವ—ಕನ್ನಡಿಗರ ಮುಕುಟಮಣಿಯೆನಿಸಿದ ವಿಷ್ಣುವರ್ಧನರಾಯನ ಮುಖ್ಯ ರಾಜಧಾನಿಯಾಗಿ, ಶ್ರೀರಾಮನುಜಾಚಾರ್ಯರಂಥಾ ಧರ್ಮೋದ್ಧಾರಕರಿಂದ ಪ್ರತಿಷ್ಠಿತವಾದ ಅರ್ಧನಾರೀ ಸ್ವರೂಪದ ಶ್ರೀ ಚನ್ನಕೇಶವನ ಸುಂದರಮೂರ್ತಿಯುಳ್ಳ, ಅತ್ಯಂತ ದಿವ್ಯವೂ ಭವ್ಯವೂ ಆದ ದೇವಸ್ಥಾನವನ್ನೊಳಗೊಂಡಿರುವ— ಪತಿತರೆನಿಸಿದ ಪಂಚಮರಿಗೂ ರಥೋತ್ಸವಕಾಲದಲ್ಲಿ ದೇವಸ್ಥಾನ ಪ್ರವೇಶಕ್ಕೂ ದರ್ಶನಕ್ಕೂ ಅವಕಾಶಮಾಡಿಕೊಟ್ಟು ಪತಿತಪಾವನ ಕ್ಷೇತ್ರವೆನಿಸಿ, ಭೂವೈಕುಂಠವೆಂಬ ಪ್ರತಿನಾಮದಿಂದ ಕರೆಸಿಕೊಳ್ಳುತ್ತಿರುವ ವೇಲಾಪುರೀ ಕ್ಷೇತ್ರವೆಂದೇ (ಬೇಲೂರು) ಆನಂದದಿಂದ ಹೇಳುವೆನು.

**ಜಾತಿ ಮತ್ತು ಮತ:—** ವೈಕುಂಠದಾಸರು ಜಾತ್ಯಾ ಹೆಬ್ಬಾರ ಪಂಗಡದ ಬ್ರಾಹ್ಮಣರು; ಮತದಿಂದ ಶ್ರೀ ರಾಮನುಜಾಚಾರ್ಯರ ವಿಶಿಷ್ಟಾದ್ವೈತಮತಕ್ಕೊಪ್ಪಿದ ಶ್ರೀ ವೈಷ್ಣವರು.

**ದಾಸರಿದ್ದ ಕಾಲ:—** ಕರ್ನಾಟಕ ಕವಿಚರಿತೆಯನ್ನು ಬರೆದಿರುವ ಮ॥ ನರಸಿಂಹಾಚಾರ್ಯರು ವೈಕುಂಠದಾಸರು ಕ್ರಿ. ೧೬೮೦ರ ಸುಮಾರಿನಲ್ಲಿದ್ದಿರಬಹುದೆಂದು ಸಂದೇಹದಿಂದ ಬರೆದಿರುವರು. ತುಲಸೀ ಮಾಹಾತ್ಮ್ಯ ಗ್ರಂಥಕರ್ತ ಅಚ್ಯುತ ದಾಸರಿಗೆ ೧೬೫೦ ಎಂಬ ಸಂಖ್ಯೆಯನ್ನು ಕೊಟ್ಟಿರುವರು. ವಾದಿರಾಜ ವ್ಯಾಸರಾಯ ಯತಿಗಳ ಕಾಲ ನಿರ್ಣಯದಲ್ಲೂ ಆಚಾರ್ಯರಿಗೆ ಹೀಗೆಯೇ ಸಂದೇಹ. ಆದರೆ ವ್ಯಾಸರಾಯ, ವಾದಿರಾಜ ಯತಿಗಳೂ, ಪುರಂದರ ಕನಕ ಅಚ್ಯುತದಾಸರೂ ವೈಕುಂಠದಾಸರಿದ್ದ ಬೇಲೂರಿಗೆ ಬಂದು ಅವರೊಡನೆ ಕೆಲವು ಕಾಲವಾಸಮಾಡಿ ತಮ್ಮ ಅನುಭವಗಳನ್ನು ಪರಸ್ಪರ ದೇವರ ನಾಮಗಳಲ್ಲಿ ಅವರವರೇ ಹೇಳಿರುವದರಿಂದ ವೈಕುಂಠದಾಸರ ಕಾಲವನ್ನು ಆಚಾರ್ಯರು ೧೬೮೦ರಷ್ಟು ಮುಂದಕ್ಕೆ ನೂಕುವ ಕಾರಣವಿಲ್ಲ. ಆ ದೇವರ ನಾಮಗಳು ಕಿವಿಗೆ ಬೀಳದಿರುವದರಿಂದಲೇ ಆಚಾರ್ಯರು ಅವರುಗಳ ಕಾಲನಿರ್ಣಯದಲ್ಲಿ ಅನುಮಾನಾಸ್ಪದವಾಗಿ ಬರೆದಿದ್ದಾರೆ.

ಪುರಂದರದಾಸರು ೮೦ ವರ್ಷಕಾಲ ಜೀವಿಸಿ ವಿಜಯ ನಗರದಲ್ಲಿ ೧೫೬೪ರಲ್ಲಿ ಮುಕ್ತರಾದರೆಂಬು ನಿಸ್ಸಂಶಯವಾಗಿ ಗೊತ್ತಾಗಿರುವದರಿಂದ ಪುರಂದರದಾಸರು ೧೪೮೪ರ ಸುಮಾರಿನಲ್ಲಿ ಅವತರಿಸಿದರೆನ್ನುವದಕ್ಕೇನೂ ಅನುಮಾನವಿಲ್ಲ. ವೈಕುಂಠದಾಸರು ವಾದಿರಾಜರಿಗಿಂತ ವಯೋವೃದ್ಧರೆಂಬುದು ವಾದಿರಾಜರ ದೇವರ ನಾಮದಿಂದ ಸ್ಪಷ್ಟವಾಗುತ್ತದೆ. ಆದ್ದರಿಂದ ವೈಕುಂಠದಾಸರು ೧೫೬೪ಕ್ಕಿಂತ ಎಷ್ಟೋ ಹಿಂದೆಯೇ ಇರಬೇಕು. ಸ್ಥೂಲ ದೃಷ್ಟಿಯಿಂದ ಸರಿಯಾದೊಂದು ಸಂಖ್ಯೆಯನ್ನು ಕೊಡಬೇಕೆಂದರೆ ಮೇಲ್ಕಂಡವರೆಲ್ಲರೂ ೧೫೫೦ರ ಸುಮಾರಿನಲ್ಲಿ ಬೇಲೂರಿಗೆ ಬಂದಿರಬಹುದೆಂಬು ಯೋಗ್ಯರೀತಿಯಿಂದ ಭಾವಿಸಿ, ವೈಕುಂಠದಾಸರು ೧೫೫೦ರಲ್ಲಿದ್ದರೆಂದು ವಿಚಾರದಿಂದ ನಿಶ್ಚಯಮಾಡಿದೆ.

**ವೈಕುಂಠ ದಾಸರ ಪೂರ್ವ ವೃತ್ತಾಂತ:–** ಇವರು ಜನ್ಮತಾಳಿದಾರಭ್ಯ ಒಂದು ವಿಧವಾದ ವಿರಕ್ತಿ ಮಾರ್ಗದಲ್ಲಿದ್ದು, ಧರ್ಮಗ್ರಂಥಗಳ ವ್ಯಾಸಂಗದಿಂದ ಚನ್ನಕೇಶವ ದೇವಾಲಯದಲ್ಲೇ ಕಾಲಯಾಪನೆ ಮಾಡುತ್ತಾ ಕ್ರಮೇಣ ಭಗವತ್ಸಾಕ್ಷಾತ್ಕಾರವನ್ನು ಪಡೆದರು. ಪುರಂದರದಾಸರು ಹೇಗೆ ತಮ್ಮ ಕೃತಿಗಳನ್ನು ವಿಠಲನಿಗಂಕಿತಮಾಡಿದರೋ, ಹಾಗೆ ವೈಕುಂಠದಾಸರು ಭೂವೈಕುಂಠವೆನಿಸಿದ ಬೇಲೂರ ಕೇಶವನಿಗಂಕಿತಮಾಡಿದರು. ಆದ್ದರಿಂದ ಇವರಿಗೆ ವೈಕುಂಠ ದಾಸರೆಂಬುದು ಪ್ರಸಿದ್ಧ ನಾಮವಾಯಿತು. ನಿಜನಾಮವಾವುದೋ ಇನ್ನೂ ಗೂಢವಾಗಿಯೇ ಇದೆ. ಇವರ ವಂಶದ ಒಂದು ಮನೆತನದವರು ಮಾತ್ರ ಈಗಲೂ ಬೇಲೂರಿನಲ್ಲಿದ್ದಾರೆ. ಬೇಲೂರಲ್ಲಿದ್ದ ಈಗಿರುವ ವೇ|| ಕೇಶವದಾಸ್ಯಂಗಾರ್ಯರ ತಂದೆಯು ಕಾಲದವರಿಗೂ ವಂಶದವರೆಲ್ಲಾ ಹರಿದಾಸರಾಗಿದ್ದರಂತೆ.

**ದಾಸರ ದಿನಚರ್ಯ:—** ದಾಸರು ದಿನವೂ ಎರಡು ವೇಳೆಯಲ್ಲೂ ಆಹ್ನಿಕಮುಗಿಸಿಕೊಂಡು ಶ್ರೀ ಕೇಶವ ದೇವಾಲಯದಲ್ಲಿ ಆರಾಧನೆಯ ಕಾಲಕ್ಕೆ ತಪ್ಪದೆ ಬಂದು ಸೇವೆಯನ್ನು ಮಾಡಿ ರಾತ್ರಿ ಮನೆಯಲ್ಲಿ ಭಜನೆ ( ಕೀರ್ತನ ) ಮಾಡುತ್ತಿದ್ದರು. ಭಾವಿಕ ಜನರನೇಕರು ದಾಸರ ಶಿಷ್ಯರಾಗಿ ನಡೆದು ಕೊಳ್ಳುತ್ತಿದ್ದರು.

**ದಾಸರಿಗೆ ಬಂದ ಲೋಕಾಪವಾದ:—** ಮಾದಮ್ಮ ನೆಂಬ ಸ್ಫುರದ್ರೂಪಿಯೂ ಸಚ್ಚರಿತ್ರಳೂ ಆಗಿದ್ದ ಲಿಂಗಾಯತ ಸ್ತ್ರೀಯು ತನಗೆ ಬಾಲ್ಯದಲ್ಲೇ ವೈಧವ್ಯ ಪ್ರಾಪ್ತವಾಗಲು, ವಿರಕ್ತಳಾಗಿ ದಾಸರ ಶಿಷ್ಯಳಾಗಿ ಇವರ ಮನೆಗೆ ಹೋಗಿ ಬರುತ್ತಾ, ಅವರ ಮುಖದಿಂದ ಭಗವಂತನ ಸಚ್ಚರಿತ್ರ ಶ್ರವಣಮಾಡಿಕೊಂಡು ಕಾಲಯಾಪನೆ ಮಾಡುತ್ತಿದ್ದಳು. ಅದೇ ಊರಿನ ವೈಶ್ಯ ಸಾವುಕಾರನೊಬ್ಬನು ಸಂತತಿಯಿಲ್ಲದೆ ದಾಸರ ಬಳಿಗೆ ಬಂದು, ಸಂತಾನ ಫಲವಾಗುವಂತೆ ಅನುಗ್ರಹಿಸಬೇಕೆಂದು ಸೇವಿಸುತ್ತಿದ್ದನು. ದಾಸರು ಎಂದು ಸಾಹುಕಾರನಿಗೆ ಫಲಮಂತ್ರಾಕ್ಷತೆ ಕೊಡಬೇಕೆಂದು ನಿಶ್ಚಯಿಸಿದರೋ ಅಂದೇ ಅವನು ದಾಸರ ಮನೆಗೆ ಬರಲಿಲ್ಲ. ದಾಸರು ಮಾದಮ್ಮನನ್ನು ಕರೆದು ಈ ಫಲವನ್ನು ಸಾಹುಕಾರನಿಗೆ ಕೊಟ್ಟುಬಾರೆಂದು ಕಳುಹಿಸಿದರು. ಆಕೆಯು ಈ ಫಲವನ್ನು ಏತಕ್ಕಾಗಿ ಕೊಡೋಣವಾಗುತ್ತದೆಂದು ದಾಸರನ್ನು ಕೇಳಿದಳು. ಆ ಸಾಹುಕಾರನಿಗೆ ಸಂತಾನವಾಗಲೆಂದು ಅಭಿಮಂತ್ರಿಸಿಕೊಟ್ಟಿರುವೆನೆಂದು ದಾಸರು ಹೇಳಿದರು. ಆಕೆಯು ಈ ಫಲವನ್ನು ತಿಂದರೇ ಮಕ್ಕಳಾಗುವದೇ! ಎಂದು ಕೇಳಿದಳು. ದಾಸರು—ಅಹುದು, ಹಾಗೆ ಕೇಶವನನ್ನು ಪ್ರಾರ್ಥಿಸಿರುವೆನೆಂದರು.

ಮಾದಮ್ಮನು ಫಲವನ್ನು ತೆಗೆದುಕೊಂಡು ಸಾಹುಕಾರನ ಮನೆಗೆ ಹೊರಟಳು. ಈ ಫಲವನ್ನು ತಿಂದ ಮಾತ್ರಕ್ಕೇ ಮಕ್ಕಳಾಗುವದಿದ್ದರೆ ನಾನೇ ಏಕೆ ಆ ಫಲವನ್ನು ಪಡೆಯಬಾರದೆಂದು ಯೋಚಿಸಿದಳು. ನನಗಂತೂ ಪತಿಯಿಲ್ಲ, ಪುತ್ರನೂ ಇಲ್ಲ, ಅವಸಾನ ಕಾಲಕ್ಕೆ ಯಾರಾದರೂ ದಿಕ್ಕು ಬೇಕೇಬೇಕು, ದಾಸರ ಅನುಗ್ರಹದಿಂದ ನನಗೇ ಮಗನಾದರಾಗಲಿ, ಸಾಹುಕಾರನಿಗೆ ಬೇಕಾದರೆ ದಯಾಳುಗಳಾದ ದಾಸರು ಮತ್ತೆ ಫಲವನ್ನು ಮಂತ್ರಿಸಿಕೊಡಲಿ, ಎಂದಂದುಕೊಂಡು ಆ ಫಲವನ್ನು ತಾನೇ ತಿಂದುಬಿಟ್ಟಳು.

ಮರುದಿನ ಸಾಹುಕಾರನು ಬಂದು,— ಸ್ವಾಮಿ, ನನ್ನ ಕೋರಿಕೆಯನ್ನು ದಯಪಾಲಿಸಬೇಕು, ಬಹುದಿನದಿಂದ ಆಶ್ರಯಿಸಿಕೊಂಡಿದ್ದೇನೆಂದು ಬೇಡಿಕೊಂಡನು. ದಾಸರು ಏನಯ್ಯಾ! ನಿನ್ನೆ ಮಾದಮ್ಮ ಫಲವನ್ನು ತಂದುಕೊಡಲಿಲ್ಲವೇ ? ಎಂದರು. ಸಾಹುಕಾರನು ಗಾಬರಿಯಿಂದ ಇಲ್ಲ ! ಮಾದಮ್ಮನ ಮುಖವೇ ಕಾಣೆನೆಂದು ಹೇಳಿದನು. ಆಗ ಮಾದಮ್ಮನೂ ದಾಸರ ಮನೆಯಲ್ಲಿಯೇ ಇದ್ದಳು. ಪ್ರಶ್ನೆ ಮಾಡಲು, ಮಾದಮ್ಮ ತನ್ನ ಮನಸ್ಸಿನಲ್ಲಿ ಹುಟ್ಟಿದ ವಿಚಾರವನ್ನೂ, ತಾನೇ ಫಲವನ್ನು ಸೇವನೆಮಾಡಿದುದನ್ನೂ ಇದ್ದಂತೆ ಹೇಳಿಬಿಟ್ಟಳು. ದಾಸರು–

ಸಾಹುಕಾರನನ್ನು ಕುರಿತು, ನಿನಗೆ ಪ್ರಾಪ್ತಿಯಿಲ್ಲವಪ್ಪಾ ಎಂದು ಬಿಟ್ಟರು.

ಕೆಲವು ದಿವಸವಾಗುತ್ತಲೆ ಮಾದಮ್ಮನ ಗರ್ಭ ಚಿಹ್ನಗಳು ಕಂಡುಬಂದವು. ಜನರಿಗೆ ಸಂಶಯವಾಯಿತು. ಲಿಂಗಾಯತರು ಆಕೆಗೆ ದೂಷಿತಳೆಂದು ಬಹಿಷ್ಕಾರ ಹಾಕಿದರು. ಬ್ರಾಹ್ಮಣರು ದಾಸರಿಂದ ಮಾದಮ್ಮನಿಗೆ ಸಂತಾನ ಮಂತ್ರೋಪದೇಶವಾಯಿತೆಂದು ಪರಿಹಾಸ್ಯ ಮಾಡಿದರು. ಬ್ರಾಹ್ಮಣರ್ಯಾರೂ ದಾಸರ ಮನೆಗೆ ಹೋಗಕೂಡದೆಂದು ಕಟ್ಟು ಮಾಡಿದರು. ಮಾದಮ್ಮನಿಗೆ ಪುತ್ರೋತ್ಸವವಾಯಿತು. ತನ್ನ ಮತ ಪದ್ಧತಿಯಂತೆ ಆಕೆಯು ಮಗನನ್ನು ನಂಜುಂಡನೆಂದು ಕರೆದಳು. ಬಾಲಕನು ದಾಸರ ಮನೆಯಲ್ಲೇ ಬೆಳೆದನು.

**ಪಿತೃಶ್ರಾದ್ಧ:** – ದಾಸರು ಮನೆಯಲ್ಲಿ ಪಿತೃಶ್ರಾದ್ಧ ಬರಲು ಶ್ರೀ ವೈಷ್ಣವರು ದಾಸರ ಮನೆಗೆ ಬರುವದಿಲ್ಲವೆಂದು ಹಟ ಹಿಡಿದರು. ಬೇಲೂರಿಗೆ ೧೨ ಮೈಲ ದೂರದಲ್ಲಿರುವ ಮಾದೀಹಳ್ಳಿಯ ಬ್ರಾಹ್ಮಣರು ಬರುವಂತೆ ದಾಸರು ಹೇಳಿ ಕಳುಹಿಸಿದರು. ಮಳೆಗಾಲವಾಗಿದ್ದುದರಿಂದ ಒಂದು ದಿನ ಮುಂಚೆ ಬಂದ ಬ್ರಾಹ್ಮಣರು ಬೇಲೂರಿಗೆ ಬರಲು ಯಗಚೀ ನದಿಯು ಪೂರ್ಣ ಪ್ರವಾಹವಾಗಿ ಹರಿಯುತ್ತಿದ್ದುದರಿಂದ ತೆಪ್ಪದಲ್ಲಿ ಬರುವದಕ್ಕಾಗದೆ ಪ್ರವಾಹವಿಳಿಯುವದನ್ನೇ ಎದುರು ನೋಡಿ ಸಾಕಾಗಿ ಇನ್ನೂ ಪ್ರವಾಹ ಹೆಚ್ಚುತ್ತಿದ್ದುದನ್ನು ಕಂಡು ಹಿಂತಿರುಗಿ ಹೊರಟುಹೋದರು. ದಾಸರು ಶ್ರಾದ್ಧದ ದಿನ ಪ್ರಾತಃಕಾಲ ನದಿಯ ಬಳಿಗೆ ಬರುವ ಬ್ರಾಹ್ಮಣರನ್ನು ಕರೆದುಕೊಂಡು ಬರುವಂತೆ ಶಿಷ್ಯರನ್ನು ಕಳುಹಿಸಿಕೊಟ್ಟರು. ಆದಿನ ಮಧ್ಯಾಹ್ನದವರಿಗೂ ಬ್ರಾಹ್ಮಣರು ಬಾರದಿರುವದನ್ನು ಕಂಡು ಶಿಷ್ಯರು ನಿರಾಶರಾಗಿ ದಾಸರ ಮನೆಗೆ ಬಂದರು. ಅಷ್ಟರಲ್ಲೇ ಕೇಶವನು ಆಮಂತ್ರಿತರಾಗಿದ್ದ ಬ್ರಾಹ್ಮಣರ ವೇಷ ತಾಳಿ ದಾಸರ ಮನೆಗೆ ಬಂದು ಶ್ರಾದ್ಧಕರ್ಮ ಪೂರೈಸಿ ದೇವಸ್ಥಾನಕ್ಕೆ ಹೋಗುವವರಂತೆ ನಟಿಸಿ, ದಾಸರು ಕೊಟ್ಟಿದ್ದ ಧೋತ್ರವನ್ನೂ ದಕ್ಷಿಣೆಯನ್ನೂ ತನ್ನ ಪಾದಪೀಠದ ಬಳಿಯಲ್ಲಿಟ್ಟಿದ್ದನು. ರಾತ್ರಿ ಮಹಾ ಮಂಗಳಾರತಿಯ ಕಾಲಕ್ಕೆ ಸರಿಯಾಗಿ ಅಧಿಕಾರಿಗಳು ಬಂದು ದೇವಸ್ಥಾನದ ಮೊಹರನ್ನೊಡೆದು ಗರ್ಭಗುಡಿಯ ಬಾಗಿಲು ತೆರೆಯಲು ದಾಸರು ಕೊಟ್ಟಿದ್ದ ಧೋತ್ರ ದಕ್ಷಿಣೆಗಳು ಪಾದದ ಬಳಿಯಲ್ಲಿದ್ದವು. ಇದನ್ನು ಮೊದಲು ಕಂಡ ಅರ್ಚಕನು ಆಶ್ಚರ್ಯದಿಂದ ಮಿಕ್ಕವರಿಗೆ ತಿಳಿಸಿದನು. ದರ್ಶನಕ್ಕೆ ಬಂದ ಜನರೆಲ್ಲರೂ ಇದೇನೆಂದು ವಿಸ್ಮಿತರಾಗಿರಲು ದಾಸರು ದೇವರ ದರ್ಶನಕ್ಕೆ ಬಂದರು. ಅವರಿಗೂ ಈ ಸಂಗತಿ ತಿಳಿಯಿತು. ತಾವು ಕೊಟ್ಟ ಧೋತ್ರವನ್ನು ನೋಡಿ, ಆನಂದ ಬಾಷ್ಪದಿಂದ ದೇವಾ ! ನನ್ನ ಕುಲಪಾವನವಮಾಡಬೇಕೆಂದು ಬ್ರಾಹ್ಮಣರೂಪ ತಾಳಿ, ಶ್ರಾದ್ಧಕರ್ಮ ನೆರವೇರಿಸಿ ಕೃತಾರ್ಥನನ್ನು ಮಾಡಿದೆಯಾ! ಎಂದು ದೇವರ ನಾಮ ಹಾಡಿ ಭಗವಂತನನ್ನು ಕೊಂಡಾಡಿದರು. ದಾಸರು ಅರ್ಚಕರೂ ಸೇರಿ ಚಮತ್ಕಾರ ಮಾಡಿರುವರೆಂದು ಕುವಾದಮಾಡಿ ಕ್ಷುಲ್ಲಕ ಜನರು ಮತ್ತೂ ನಿಂದಿಸಿದರು. ಇಷ್ಟರಿಂದಲೇ ತೃಪ್ತರಾಗದೆ ದಾಸರನ್ನು ದೇವಸ್ಥಾನಕ್ಕೆ ಸೇರಿಸಬಾರದೆಂದು ದುರಾಲೋಚನೆ ಮಾಡಿದರು. ಅರ್ಚಕನಿಗೆ ದಾಸರಲ್ಲಿ ಭಕ್ತಿಯಿದ್ದರೂ ಕುತ್ಸಿತರ ಮುಂದೆ ಅವನ ಮಾತು ನಡೆಯಲಿಲ್ಲ. ಒಂದು ರಾತ್ರಿ ದಾಸರು ದೇವಾಲಯಕ್ಕೆ ಬರುವದಕ್ಕೆ ಮುಂಚಿತವಾಗಿ ಬೇಕೆಂದು ಆರಾಧನೆಯನ್ನು ಮುಗಿಸಿ ಬಾಗಿಲ ಬೀಗ ಮೊಹರು ಮಾಡಿಕೊಂಡು ಹೊರಟು ಹೋದರು. ದಾಸರು ದೇವಾಲಯದ ಮಹಾದ್ವಾರಕ್ಕೆ ಬಂದು ಬಾಗಿಲು ಹಾಕಿರುವದು ನೋಡಿ ತಮಗೆ ದರ್ಶನವಾಗಲಿಲ್ಲವೆಂಬ ವ್ಯಸನದಿಂದ "ಬಾಗಿಲನ್ನು ತೆಗೆದು ಸೇವೆಯನ್ನು ಕೊಡು ಹರಿಯೇ" ಎಂಬ ನಾಮದಿಂದ ಸ್ತೋತ್ರಮಾಡಿದರು. ಆಗ ಬಾಗಿಲು ತನ್ನಷ್ಟಕ್ಕೆ ತಾನೇ ತೆರೆದು ದಾಸರಿಗೆ ದೇವರ ದರ್ಶನವಾಯಿತು. ಈ ವಿವರ ತಿಳಿದ ದೇವಸ್ಥಾನದ ಅಧಿಕಾರಿಗಳು ದಾಸರು ದೇವಸ್ಥಾನಕ್ಕೆ ಬರುವವರಿಗೂ ಮಹಾಮಂಗಳಾರತಿ ಮಾಡಕೂಡದೆಂದು ಅಪ್ಪಣೆ ಮಾಡಿದರು. ಇದರಿಂದಲೂ ಕುಹಕಿಗಳಿಗೆ ದಾಸರಲ್ಲಿ ಪೂಜ್ಯಬುದ್ಧಿ ಬರಲಿಲ್ಲ.

**ನಂಜುಂಡನ ಸರ್ಪದಂಶ:**— ಮಾದಮ್ಮನ ಮಗ ನಂಜುಂಡನು ೮-೧೦ ವರ್ಷದ ಬಾಲಕನಾದನು. ದಾಸರ ಮನೆಗೆ ಪೂಜಾಸಾಧನಗಳನ್ನು ತರುವದಕ್ಕೆ ಒಂದು ದಿನ ಜೊತೆಯ ಬಾಲಕರೊಡನೆ ತಾಳೆಯ ವನಕ್ಕೆ ಹೋದನು. ದಟ್ಟವಾಗಿ ಬೆಳೆದಿದ್ದ ಆ ವನಮಧ್ಯದ ಮರವೊಂದರಲ್ಲಿ ಮೇಲ್ಗಡೆ ಅರಳಿದ ಒಳ್ಳೇ ಹೂವಿನ ಮೋರೆ ಕಾಣಿಸಿತು. ಅದನ್ನು ತಾನೇ ಮುರಿದು ತರುವೆನೆಂದು ನಂಜುಂಡನು ಮೆಳೆಯಲ್ಲಿ ನುಗ್ಗಿ ಹೂವನ್ನು ಮುರಿದನು. ಅಲ್ಲಿ ಸೇರಿಕೊಂಡಿದ್ದ ಸರ್ಪವೊಂದು ತಟ್ಟನೆ ಇವನನ್ನು ಕಡಿಯಿತು. ಬಾಲಕನು ಚಿಟ್ಟನೆ ಚೀರಿ ಮೂರ್ಛಿತನಾಗಿ ಸ್ವಲ್ಪ ಹೊತ್ತಿನಲ್ಲೇ ಮೃತನಾದನು. ಜೊತೆಯ ಬಾಲಕರು ಹೆದರಿ ಅಳುತ್ತಾ ಬಂದು

ಮಾದಮ್ಮನಿಗೆ ತಿಳಿಸಿದರು. ಮಾದಮ್ಮನು ಈ ಮಾತು ಕೇಳಿ ದೊಡನೆ ಎದೆಯೊಡೆದಳು. ಪುತ್ರಶೋಕದಿಂದ ಗಟ್ಟಿಯಾಗಿ ರೋದನಮಾಡುತ್ತಾ ದಾಸರ ಮನೆಯ ಬಾಗಿಲಲ್ಲಿ ಕುಳಿತಳು ಈ ಸಂಗತಿಯನ್ನು ತಿಳಿದ ಕುಹಕಿ ಜನರು ಆ ನಿರಪರಾಧಿ ಯಲ್ಲಿ ಶೋಕಕಾಲವೆಂದು ಸಹ ಕನಿಕರವಿಡದೆ, ಮನಬಂದಂತೆ ದೂಷಿಸಿದರು. ಜಾರಿಣಿ! ಮಗ ಸತ್ತನೆಂದೇಕೆ ಅಳುವೆ? ನಾಚಿ ಕೆಯಿಲ್ಲವೇ? ದಾಸರು ಫಲ ಮಂತ್ರಿಸಿ ನಿನಗೆ ಮಗನನ್ನು ಮಾಡಿಕೊಟ್ಟರೋ ? ಎಲ್ಲಿ! ಈಗಲೂ ಮಂತ್ರಿಸಿ ಮಗನನ್ನು ಬದುಕಿಸಿಕೋ, ನೋಡೋಣ, ಎಂದು ಮೂದಲಿಸಿದರು. ಮಾದಮ್ಮನಿಗೆ ಪುತ್ರಶೋಕಕ್ಕಿಂತ ಮಹಾನುಭಾವರಾದ ದಾಸ ರನ್ನು ದೂಷಿಸುವರೆಂಬುವರ ಶೋಕ ಹೆಚ್ಚಾಯಿತು. ದಾಸ ರಿಗೆ ನಮಸ್ಕರಿಸಿ ಗುರುವೇ, ಬೇಕಾದವರು ನನ್ನನ್ನು ನಿಂದಿ ಸಲಿ, ನಾನಂಜುವದಿಲ್ಲ, ತಮ್ಮ ನಿಂದೆಯನ್ನು ಕೇಳಿ ಸೈರಿಸೆನು; ಹೇಗಾದರೂ ಮಾಡಿ ಜನಾಪವಾದದಿಂದ ತಾವು ಮುಕ್ತರಾಗ ಬೇಕು; ಎಂದು ಬೇಡಿಕೊಂಡಳು. ದಾಸರು—ಒಳ್ಳೇದು, ನಮ್ಮ ಪ್ರಾಣಪರೀಕ್ಷೆ ಮಾಡಬೇಕೆಂದು ಕೇಶವನ ಚಿತ್ತದಲ್ಲಿದೆ; ಮೃತ ಶರೀರವನ್ನು ಬಲಿಕಲ್ಲಿನ ಬಳಿಗೆ ತೆಗೆದುಕೊಂಡು ಬಾರೆಂದು ದೇವಾಲಯವನ್ನು ಪ್ರವೇಶಿಸಿದರು. ದೇವಾ! ನಂಜುಂಡನನ್ನು ಬದುಕಿಸದಿದ್ದರೆ ನನ್ನ ತಲೆ ಒಡೆದುಕೊಂಡು. ಪ್ರಾಣಬಿಡುವೆನೆಂದು ಭಕ್ತಿಭಲದಿಂದ "ಏಳಿಸು ನಂಜನನ— ನೀ ಬೇಗದೊಳೆಬ್ಬಿಸು ನಂಜನನ " ಎಂಬ ಪದದಿಂದ ಸ್ವಾಮಿ ಯನ್ನು ಸ್ತೋತ್ರಮಾಡಿದರು. ದಾಸರ ಮೇಲೆ ಸ್ವಾಮಿಯ ಕರುಣವಾಯಿತು. ತೀರ್ಥ ಪ್ರೋಕ್ಷಣೆಮಾಡು, ನಂಜುಂಡನು ಬದುಕುವನೆಂದು ಆಜ್ಞೆಯಾಯಿತು. ಅದರಂತೆ ದಾಸರು ತೀರ್ಥವನ್ನು ನಂಜುಂಡನ ಶರೀರ ಮೇಲೆ ಪ್ರೋಕ್ಷಿಸಿದರು. ನಿದ್ರೆಯಿಂದೆಚ್ಚೆತ್ತವನಂತೆ ನಂಜುಂಡನು ಎದ್ದು ಕುಳಿತನು. ಆಗ ನಂಜುಂಡನಿಗೆ ದಾಸರು ಆಶೀರ್ವಾದ ಮಾಡುತ್ತಾರೆ.

ಪೂರ್ವಿ— ಅಟ್ಟತಾಳ

ಬದುಕು ಬದುಕು ನಂಜುಂಡ—ನೀನೊದಗಿ ಮತ್ತೆ ನೂರು ವರುಷ ಪರ್ಯಂತರ ॥ಪ॥ ಜನನಿಯ ಮಾತನು ವಿೂರದೆ । ಪರ । ವನಿತೆಯರಿಗೆ ಮನಸೋಲವೆ । ಬಿನುಗು ದೈವಂಗಳಿ ಗೆರಗದೆ । ದು । ರ್ಜನರ ಸಂಗವ ನೀ ಮಾಡದೆ ನಂಜ ॥೧॥ ತಪ್ಪುದಾರಿಯಲಿ ನೀ ಪೋಗದೆ । ಆರು । ಒಪ್ಪದ ಕರ್ಮವ ನೆಸಗದೆ । ತಪ್ಪು ಕಥೆಗಳನ್ನು ಕೇಳದೆ । ಬಲು । ಸಪ್ಪೆ ವಾಕ್ಯಂ ಗಳ ನಾಡದೆನಂಜ ॥೨॥ ಹರಿಗೆರಗುತ ಹರಿ । ಶರಣರಿಗೆ ನಮಿ ಸುತ್ತ । ಹರಿಕಥೆಗಳ ನಿತ್ಯ ಹೇಳುತ್ತ ಕೇಳುತ್ತ । ಹರಿ ಸರ್ವೋ ತ್ತಮನೆಂದು ನೀನಿರು ಕಂಡ್ಯ । ವರವೈಕುಂಠ ಕೇಶವ ರಕ್ಷಿಸುವ ನಂಜ ॥೩॥

ಇಂದಿಗೆ ಜನನಿಂದೆ ಪರಿಹಾರವಾಯಿತು. ನಿಂದಕರೆಲ್ಲರೂ ದಾಸರಿಗೆ ಶರಣಾಗತರಾಗಿ ಶಿಷ್ಯರಾದರು.

**ವಾದಿರಾಜರು:**— ಉಡುಪಿಯ ಅಷ್ಟಮಠಗಳ ಪೈಕಿ ಸ್ವಾದೀ ಮಠಾಧಿಪತಿಗಳಾದ ವಾದಿರಾಜಸ್ವಾಮಿಗಳು ವಾದಿ ನಿಗ್ರಹಮಾಡಿ ದ್ವೈತ ಸಿದ್ಧಾಂತ ಸ್ಥಾಪಿಸುತ್ತಾ, ವೈಕುಂಠ ದಾಸರ ಖ್ಯಾತಿಯನ್ನು ಕೇಳಿ ಬೇಲೂರಿಗೆ ಬಂದರು. ಹಯ ಗ್ರೀವೋಪಾಸಕರಾದ ರಾಜರೂ ಕೇಶವನ ಭಕ್ತರಾದ ದಾಸರೂ ಸೇರಿದರೆಂದಮೇಲೆ ಕೇಳುವದೇನು ? ಉಭಯರೂ ತಮ್ಮ ಅನುಭವಗಳನ್ನು ಮಾತನಾಡಿಕೊಂಡು ಭಗವದ್ವಿಷಯ ದಲ್ಲಿ ಮಗ್ನರಾಗಿರುತ್ತಿದ್ದರು. ಅರ್ಜುನಾಂಶರೆಂದು ಖ್ಯಾತಿ ಪಡೆದ ವೈಕುಂಠ ದಾಸರೊಡನೆ ಪೂರ್ವಾವತಾರದ ಸಖ್ಯದಿಂ ದಲೇ ಕೇಶವನು ವಿಚಿತ್ರ ಲೀಲೆಗಳನ್ನು ತೋರಿಸುತ್ತಿದ್ದನು. ಸ್ವಾಮಿಯ ಕೃಷ್ಣಾವತಾರದ ಬಾಲಲೀಲೆ ನೋಡಬೇಕೆಂದು ದಾಸರಪೇಕ್ಷಿಸಲು, ಅವರ ತೊಡೆಯ ಮೇಲೆ ಮಲಗಿ ಕೇಶ ವನು ಮಗುವಾಗಿ ಆಡುತ್ತಿದ್ದನು. ಭಕ್ತಪರಾಧೀನನಾದ ಸ್ವಾಮಿಯ ವೈಭವ ನೋಡಿ ಆಶ್ಚರ್ಯಗೊಂಡ ರಾಜರು ದಾಸರ ಮುಖದಿಂದಲೇ ಕೇಳಿ ಹೆಚ್ಚಿನ ಭಕ್ತ್ಯನುಭವಪಡ ಬೇಕೆಂದು—ದಾಸರೇ, ಈ ಮಾಯಾವಿಯಾರ ಕನ್ಯಾರೆಂದು ಪ್ರಶ್ನೆಮಾಡಿದರು. ದಾಸರು:—

ಪಂತುವರಾಳಿ— ಆದಿ

ಮಗುವು ಕಾಣಯ್ಯ—ಮಾಯದ ಮಗುವು ಕಾಣಯ್ಯ ಸುಗುಣವಾದಿರಾಜನೆ ಮಾ । ಜಗವ ತನ್ನ ಉದುರದೊ ಳಿಟ್ಟ ॥ಪ॥

ಎಂಬ ಪದದಿಂದ ಸ್ವಾಮಿಯ ಮಹಿಮೆಯನ್ನು ಕೊಂಡಾ ಡಿದರು.

ಮತ್ತೊಂದು ಸಮಯದಲ್ಲಿ ದಾಸರೂ ರಾಜರೂ ಭಗವದ್ವಿ ಷಯ ಮಾತನಾಡುತ್ತಿರಲು ವೃದ್ಧರಾದ ದಾಸರ ಮುಖದಿಂದ ಉಚ್ಛಿಷ್ಟ ಕಣಗಳು ಸ್ವಾಮಿಗಳ ಮೇಲೆ ಹಾರುತ್ತಿದ್ದವು. ಮಠದ ಶಿಷ್ಯರು, ಸ್ವಾಮಿಗಳ ಮೇಲೆ ಎಂಜಲು ಹಾರುತ್ತದೆ, ವಸ್ತ್ರವಡ್ಡವಿಟ್ಟುಕೊಂಡು ಮಾತನಾಡಬೇಕೆಂದು ದಾಸರಿಗೆ

ಹೇಳಿದರು. ರಾಜರು—"ಎಂಜಲೆನ್ನಲಿಬಹುದೆ ಮನುಜರಿರ ಸೀವು+ಅಘುವನಥ। ನಂಜಯು ಸುವೈಕುಂಠದಾಸನ ವದನ ಕಣವ ॥ಪ॥

ಎಂಬ ಪದವನ್ನು ಹಾಡಿ ಆ ಜನರಿಗೆ ಜ್ಞಾನೋಪದೇಶ ಮಾಡಿದರು. ಈ ಉಭಯರೂ ಒಬ್ಬರನ್ನೊಬ್ಬರು ಸ್ತೋತ್ರ ಮಾಡಿದ ಪದಗಳು ವಿಶೇಷವಾಗಿವೆ.

**ಪುರಂದರದಾಸರು ಮತ್ತು ಕನಕದಾಸರು:**— ಪುರಂದರದಾಸರೂ ಕನಕದಾಸರೂ ಬೇಲೂರು ಕೇಶವನ ಮೇಲೆ ಮಾಡಿರುವ ದೇವರ ನಾಮಗಳಿಂದಲೇ ಬೇಲೂರಿಗೆ ಬಂದಿದ್ದರೆಂಬುದಕ್ಕೆ ಆಧಾರಸಾಕಾಗಿವೆ. "ಅಳುವದ್ಯಾತಕೊ ರಂಗ–ಅತ್ತ ರಂಜಿಸುವ ಗುಮ್ಮ" ಎಂಬ ದೇವರ ನಾಮ ವನ್ನು ಪುರಂದರದಾಸರು–ವೈಕುಂಠದಾಸರ ತೊಡೆಯ ಮೇಲಾ ಡುತ್ತಿದ್ದ ಚನ್ನಕೇಶವನು ಪುರಂದರದಾಸರನ್ನು ಕಂಡೊಡನೆ ಹೊಸ ಮನುಷ್ಯರನ್ನು ಕಂಡು ಅಳುವ ಲೋಕದ ಮಕ್ಕಳಂತೆ ಅಳಲು ಆದನ್ನು ನೋಡಿ, ದೇವರನ್ನು ಹಾಸ್ಯ ಮಾಡಿದಂತೆ ಹಾಡಿದ್ದಾರೆ.

**ಅಚ್ಯುತದಾಸರು:**— ಅಚ್ಯುತದಾಸರೆಂಬುವರು ಅನೇಕ ಬಿರಿದುಗಳನ್ನು ಹಿಡಿಸಿಕೊಂಡು ಪ್ರತಿವಾದಿ ಭಯಂಕರನೆಂದು ಹೊಗಳಿಸಿಕೊಳ್ಳುತ್ತಾ ಕಂಡ ಕಂಡ ವಿದ್ವಾಂಸರನ್ನು ವಾದ ದಲ್ಲಿ ಸೋಲಿಸಿ ಜಯಪಡೆದು ಹೊಯ್ಸಳ ರಾಜ್ಯಕ್ಕೆ ಬಂದರು. ಹೊಯ್ಸಳ ಪಂಡಿತರು ವೈಕುಂಠದಾಸರಿಂದ ಜಯಪತ್ರತಂ ದರೆ ಅದಕ್ಕೆ ನಾವೆಲ್ಲರೂ ರುಜುಮಾಡುವೆವೆಂದು ಹೇಳಿದರು. ಅದರಂತೆ ಅಚ್ಯುತದಾಸರು ಬೇಲೂರಿಗೆ ಬಂದು ತಮ್ಮೊಡನೆ ವ್ಯಾಕ್ಯಾರ್ಥಮಾಡಬೇಕೆಂದು ವೈಕುಂಠದಾಸರಿಗೆ ಹೇಳಿಕಳು ಹಿಸಿದರು. ವೈಕುಂಠದಾಸರು-ನಮ್ಮ ಸಂಗಡ ವಾದಮಾಡು ವದಕ್ಕೆ ನನಗೇನು ಪಾಂಡಿತ್ಯವಿದೆ ? "ನಾನು ದಡ್ಡ ! ಮಾತಾ ಡುವ ನಾಲಿಗೆಯಿಲ್ಲ, ವೃದ್ಧ ! ಬಂದು ಕಾಣುವ ಕಣ್ಣಿಲ್ಲ" ವೆಂದು ಉತ್ತರ ಕಳುಹಿಸಿದರು.

ಆ ರಾತ್ರಿಯೇ ಅಚ್ಯುತದಾಸರಿಗೆ ಕಣ್ಣು ಹೋಯಿತು. ಮಾತಾಡುವದು ನಿಂತಿತು. ಮರುದಿನ ಅಚ್ಯುತದಾಸರು ಭಾಗವತಾಪಚಾರದಿಂ ತಮ್ಮ ಗತಿ ಹೀಗಾಯಿತೆಂದು ವೈಕುಂಠ ದಾಸರಿಗೆ ಶರಣಾಗತರಾಗಿ ಕಾಪಾಡಬೇಕೆಂದು ಬೇಡಿಕೊಂ ಡರು. ವೈಕುಂಠದಾಸರು ಅಚ್ಯುತದಾಸರನ್ನು ಕ್ಷಮಿಸಿ "ಪಾಲಿಪುದು ನಯನಗಳ ನಾಲಿಗೆಯ ನೀಗ ಶ್ರೀ ಲೋಲ ಸಾರ್ವ ಭೌಮನೆ......ಶೀಲನಚ್ಯುತದಾಸಗೆ ॥ಪ॥

ಎಂಬ ಪದದಿಂದ ಸ್ವಾಮಿಯನ್ನು ಸ್ತೋತ್ರಮಾಡಿ ಕಣ್ಣು ನಾಲಿಗೆಗಳನ್ನು ಕೊಟ್ಟಿದ್ದಾರೆ.

ಇಂಥಾ ಚರಿತ್ರೆಗಳು ವೈಕುಂಠದಾಸರ ವಿಷಯದಲ್ಲಿ ಹೇರಳ ವಾಗಿವೆ. ಸಪ್ರಮಾಣವಾಗಿರುವ ಒಂದೆರಡು ಮಾತುಗ ಳನ್ನು ಮಾತ್ರ ವ್ಯಕ್ತಿಪರಿಚಯರ್ಕಕ್ಕಾಗಿ ಬರೆದಿರುವೆನು.

———

# ಪದ್ಮಿನಿ

ಲೇ:—ಪಕ್ರಿವ್ವಾ ಕಿತ್ತೂರ.

ಹಣಗುಣದಿ ಬಲವುಳ್ಳ ರಣಧೀರ ರಾವಣನ ।
ತೃಣವೆಂದು ಬಗೆದ ಪತಿವ್ರತೆ ಸೀತೆಗೆ ।
ಎಣೆಯಾರು ಹೇಳು? ಸರ್ವಜ್ಞ ॥

ಅಳಿವುದು ಕಾಯವು ಉಳಿಯುವವಲ್ಲದೆ ಕೀರ್ತಿ ಇಳಿಯೊಳು ಎಚ್ಚರಿಕೆ ॥

ಈ ಕವಿಯು ಕನನದಂತೆ ಅತ್ಯಂತ ಪ್ರಾಚೀನಕಾಲದಿಂದ ನಮ್ಮಾ ಭರತಭೂಮಿಯಲ್ಲಿ ಅವತಾರಗೊಂಡ ರಾಮ-ಕೃಷ್ಣರೂ, ಅಹಿಲ್ಯಾ-ಅರುಂಧತಿ-ಪಾಂಚಾಲಿ-ಮಂಡೋದರಿ ಮುಂತಾದ ದೇವಮನುಜರು ಅಳಿದುಹೋದರೂ ಅವರ ಕೀರ್ತಿಯು ಮಾತ್ರ ಉಳಿದಿರುವದು. ಐತಿಹಾಸಿಕ ಕಾಲದಲ್ಲಿಯೂ ಕೂಡ ಇಂಥ ಕೀರ್ತಿರತ್ನಗಳೆಷ್ಟೋ ಇದ್ದವೆಂದು ಶೋಧಕಾರರಿಗೆ ಈಗೀಗ ಗೊತ್ತಾಗಹತ್ತಿದೆ. ಅಂಥ ನರರತ್ನಗಳೊಳಗೆ ಈ ಕಥಾನಾಯಿಕೆಯಾದ ಪದ್ಮಿನಿಯು ! ಇವಳು "ಜಗನ್ನಾಥಪುರಿ" ಎಂಬ ಪಟ್ಟಣದೊಳಗಿನ ಒಬ್ಬ ಅಗ್ನಿಹೋತ್ರಿ ಬ್ರಾಹ್ಮಣನ ಮಗಳು. ಅತಿ ಸೌಂದರ್ಯಶಾಲಿನಿಯೂ, ಸದ್ಗುಣ ಮಾಲಿನಿಯೂ ಆಗಿದ್ದಳು. ಇವಳನ್ನು "ಜಯದೇವಕವಿ" ಎಂಬ ಜಗತ್ಪ್ರಸಿದ್ಧ ಕವಿಗೆ ಲಗ್ನಮಾಡಿಕೊಟ್ಟಿದ್ದರು. ಈ ಕವಿಯು ಕಲಿಂಗದೇಶದಲ್ಲಿರುವ ಕಿಂದುಬಿಲ್ವನಗರದ ಸಾತ್ವಿಕರಾಜನ ಆಶ್ರಿತನಾಗಿರುತ್ತಿದ್ದನು. ಜಯದೇವಕವಿಯು ಯಾವಾಗಲೂ ಆಸ್ಥಾನದಲ್ಲಿರುತ್ತಿದ್ದುದರಿಂದ ಪದ್ಮಿನಿಗಾದರೂ ರಾಣೀವಾಸದಲ್ಲಿಯೇ ಇರಬೇಕಾಗುತ್ತಿತ್ತು. "ಅರಸೊಲಿದು ನಡೆದರೆ ಸಿರಿಯುಕ್ಕುದೆಸೆಯುಕ್ಕು, ಕರಿ-ತುರಗ ಬಲವು ಪಿರಿದಕ್ಕು" ಎಂಬಂತೆ ಯಾವದಕ್ಕೂ ಕೊರತೆಯಿದ್ದಿಲ್ಲ.

ಒಂದಾನೊಂದು ದಿವಸ ರಾಣೀವಾಸದಲ್ಲಿ ಪದ್ಮಿನಿಯೂ, ಎಲ್ಲ ಅರಸುಮನೆತನದ ಸ್ತ್ರೀಯರೂ ಕುಳಿತಿರಲು, ಮಹಾರಾಣಿಯ ತಮ್ಮನು ಮೃತಪಟ್ಟನೆಂದೂ, ಅವನ ಹೆಂಡತಿಯು ಸತಿ ಹೋದಳೆಂದೂ ಸುದ್ದಿ ತಲ್ಪಿತು. ನಂತರ ಸ್ವಲ್ಪಹೊತ್ತಿನ ಮೇಲೆ ಆ ಪತಿ-ಪತ್ನಿಗಳ ಗುಣಗಾನವು ನಡೆದು, ಮಹಾರಾಣಿಯು:—"ಈಗಿನ ಕಾಲದಲ್ಲಿ ಹೀಗೆ ಪತಿಯ ಸಂಗಡ ಸತಿಹೋಗುವವರನ್ನು ಕಾಣುವದು ಬಲು ದುರ್ಲಭವು. ಅಂತೇ ಈಂಥ ಪತಿವ್ರತೆಯರು ಈಗ ಅನ್ಯರಾರೂ ದೊರೆಯರೆಂದು" ನುಡಿದಳು. ಮಹಾರಾಣಿಯ ನುಡಿಕೇಳಿ ಎಲ್ಲರೂ ತಲೆದೂಗಿದರು. ಪದ್ಮಿನಿಯು ಮಾತ್ರ ಏನೊಂದೂ ನುಡಿಯದೆ ಸುಮ್ಮನಿದ್ದಳು. ಇದನ್ನು ಕಂಡು ರಾಣಿಯು—"ಯಾಕೆ ಪದ್ಮಿನಿ" ನೀನು ಸುಮ್ಮನಿರುವಿ ? ಈ ಬಗ್ಗೆ ನಿನ್ನ ಅಭಿಪ್ರಾಯವೇನಿದೆ ಭಯಗೊಳ್ಳದೆ ಹೇಳು, ಎಂದು ಆಗ್ರಹ ಮಾಡಿದಳು. ಆಗ ಪದ್ಮಿನಿಯು:—"ಅವ್ವನವರೇ ! ಪತಿಪತ್ನಿಯರ ನಿಜವಾದ ಐಕ್ಯವಿದ್ದರೆ, ಪತಿಯ ಮರಣದ ವಾರ್ತೆಯು ಮುಟ್ಟಿದೊಡನೆಯೇ ಪತ್ನಿಯ ಪ್ರಾಣವು ಸಹಜವಾಗಿ ಹೋಗಬೇಕು. ಇದು ಒಳ್ಳೆಯದು. ಇದಕ್ಕೇ ಪಾತಿವ್ರತ್ಯವೆನ್ನುವರು. ಪತಿಯ ಸಂಗಡ ತನ್ನ ದೇಹವನ್ನು ಸುಟ್ಟುಕೊಂಡು ಪ್ರಾಣತ್ಯಾಗ ಮಾಡುವದು ಒಳ್ಳೆಯದಲ್ಲ." ಪದ್ಮಿನಿಯ ಈ ಉತ್ತರದಿಂದ ರಾಣಿಗೆ ಸಮಾಧಾನವೆನಿಸಲಿಲ್ಲ. ತಿರಸ್ಕಾರದೃಷ್ಟಿಯಿಂದ ಪದ್ಮಿನಿಯನ್ನವಲೋಕಿಸಿ, ಪ್ರಸಂಗವಶಾತ್ ಇವಳ ಪರೀಕ್ಷೆ ಮಾಡುವೆನೆಂದು ನಿಶ್ಚಯಿಸಿಕೊಂಡಳು.

ಕರ್ಮ-ಧರ್ಮಸಂಯೋಗದಿಂದ ಅಂಥ ಸಮಯವೂ ಪ್ರಾಪ್ತವಾಯಿತು. ಸಾತ್ವಿಕರಾಜನು ಬೇಟೆಯಾಡುವ ನಿಮಿತ್ತವಾಗಿ ಹೊರಟನು. ಅವನೊಂದಿಗೆ ಪರಿವಾರವೂ ಹೊರಟಿತು. ಜಯದೇವಕವಿಯೂ ಹೋದನು. ಒಂದೆರಡು ದಿವಸಗಳು ಕಳೆದು ಹೋಗಲು, ಈ ಸಂಧಿಯನ್ನು ಸಾಧಿಸಿ ಮಹಾರಾಣಿಯು ತನ್ನ ಪರಿಚಾರಕರ ಕಡೆಯಿಂದ "ಅರಸನ ಸಂಗಡ ಬೇಟೆಗೆ ಹೋಗಿದ್ದ ಜಯದೇವಕವಿಯನ್ನು ಹುಲಿಯು ಮುರಿದು ತಿಂದು ಬಿಟ್ಟಿತು" ಎಂದು ಹೂಲೀ ಎಬ್ಬಿಸಿದಳು. ಪಟ್ಟಣದೊಳಗೆಲ್ಲ ಹಾ-ಹಾಕಾರವುಂಟಾಯಿತು. ನಿತ್ಯನಿಯಮದಂತೆ ಪ್ರಾತರ್ವಿಧಿಗಳನ್ನು ನೆರವೇರಿಸಿಕೊಂಡು, ದೇವತಾರ್ಚನೆಗಾಗಿ ಕೂತಿದ್ದ ಪದ್ಮಿನಿಗೂ ಈ ಸಂಗತಿಯು ತಿಳಿಯಿತು. ಕೂಡಲೆ ಅವಳು ಭೂಮಿಗೊರಗಿದಳು, ದೇಹದೊಳಗಿಂದ

ಪ್ರಾಣವೆಂಬ ಪಕ್ಷಿಯು ಹಾರಿಹೋಯಿತು. ಈ ಸಂಗತಿಯು ರಾಣಿಗೆ ತಿಳಿಯಲು ಅತ್ಯಂತ ಗಾಬರಿಯಾದಳು. ರಾಜವೈದ್ಯರನ್ನು ಉಪಚಾರಕ್ಕಾಗಿ ಕಳುಹಿದಳು. ಆದರೆ ಮಾಡುವದೇನು? ಪಂಚರಿತ್ವಪಂಜರದಲ್ಲಿ ಪಕ್ಷಿಯೇ ಇದ್ದಿಲ್ಲ. ರಾಣಿಯು ಕೃತಕರ್ಮಕ್ಕೆ ಖತಿಗೊಂಡಳು. ನಿಜವಾದ ಸಂಗತಿಯು ರಾಜನಿಗೆ ತಿಳಿದರೆ ಪ್ರಾಣಕ್ಕೆ ಎರವಾಗುವೆನೆಂದು ಭಯಗೊಂಡಳು. ಆದರೆ ಮಾಡುವದೇನು ?

ಇಷ್ಟರಲ್ಲಿ ಬೇಟೆಗೆ ಹೋದ ರಾಜನು ಪರಿವಾರದೊಂದಿಗೆ ನಗರ ಪ್ರವೇಶಮಾಡಿದನು. ದುಃಖಸಾಗರದಲ್ಲಿ ಮುಳುಗಿದ ನಗರವಾಸಿಗಳನ್ನು ಕಂಡು ಕನಿಕರಪಟ್ಟನು. ರಾಣಿಯು ದುಷ್ಟಕರ್ತವ್ಯವನ್ನು ಕೇಳಿ ರೌದ್ರಾವತಾರವನ್ನು ತಾಳಿ, ಅವಳ ಶಿರಚ್ಛೇದ ಮಾಡಬೇಕೆಂದು ಅಪ್ಪಣೆ ಮಾಡಿದನು. ಜಯದೇವ ಕವಿಯು ತನ್ನ ಬುದ್ಧಿಚಾತುರ್ಯವನ್ನೆಲ್ಲ ವೆಚ್ಚಮಾಡಿ, ರಾಜನನ್ನು ಸಮಾಧಾನಪಡಿಸಿ ಮನೆಗೆ ಬಂದನು. ಪತಿವಿರಹಾಘಾತದಿಂದ ಪ್ರಾಣಘಾತವಾಗಿ ಬಿದ್ದಿರುವ ಸತಿಯ ( ಪದ್ಮಿನಿಯ ) ಶವವನ್ನು ತೊಡೆಯಮೇಲಿಟ್ಟುಕೊಂಡು ಅವಿರತ ಚಿತ್ತದಿಂದ ಅಷ್ಟಪದಿ ( ಗೀತಗೋವಿಂದ ) ಅನ್ನುತ್ತ ಈಶಸ್ತೋತ್ರವನ್ನು ಪ್ರಾರಂಭಿಸಿದನು. ಕಡೆಯಲ್ಲಿ ಅಂದರೆ ಎಂಟನೇ ಅಡಿಯು ಮುಗಿಯುತ್ತಲೆ ಪದ್ಮಿನಿಯು ನಿದ್ರೆಯಿಂದ ಎಚ್ಚತ್ತವಳಂತೆ ಚೇತರಿಸಿಕೊಂಡೆದ್ದು ಪತಿಯ ಪಾದಪದ್ಮಂಗಳಿಗೆ ವಂದಿಸಿದಳು. ಈ ಸಂಗತಿಯು ಅರಮನೆಗೆ ಮುಟ್ಟಿತು. ರಾಜನೂ, ರಾಣಿಯೂ ಬಂದು ಪದ್ಮಿನಿ-ಜಯದೇವ ಕವಿಗಳ ದರ್ಶನ ತಕ್ಕೊಂಡರು. ಪಟ್ಟಣವನ್ನು ಶೃಂಗರಿಸಿ ಮಹೋತ್ಸವ ಮಾಡಬೇಕೆಂದು ರಾಜಾಜ್ಞೆಯಾಗಲು, ಮಂಗಲಕರವಾದ ಉತ್ಸವಗಳು ಜರಗಿದವು. ಮಂಗಲವಾದ್ಯಗಳು ಮೊಳಗಿದವು. ದುಂದುಭಿನಿನಾದವು ಆಕಾಶವನ್ನೆಲ್ಲ ತುಂಬಿಕೊಂಡಿತು. ರಾಜಭಂಡಾರವನ್ನೇ ದಾನಧರ್ಮಕ್ಕಾಗಿ "ಲೂಟಿ" ಮಾಡಬೇಕೆಂದು ರಾಜಾಜ್ಞೆಯಾಯಿತು. ಆಮೇಲೆ ಕೇಳುವದೇನು ?

ಹೀಗೆಲ್ಲ ಸಂಭ್ರಮಗಳು ಸಾಗಿದ್ದರೂ ಮಹಾರಾಣಿಯ ಅಂತಃಕರಣದಲ್ಲಿ ಮಾತ್ರ, ಸಮಾಧಾನವಿದ್ದಿಲ್ಲ. ಅವಳು ಕೃತಕರ್ಮಕ್ಕಾಗಿ ತಕ್ಕ ಪ್ರಾಯಶ್ಚಿತ್ ಪಡೆಯಬೇಕೆಂದು ಆಲೋಚಿಸುತ್ತ ಚಿಂತಾಮಗ್ನಳಾಗಿದ್ದಳು. ಈ ಭಾವವನ್ನರಿತು ಪದ್ಮಿನಿಯು–"ಅವ್ವನವರೇ ! ತಾವು ತಿಲಮಾತ್ರ ಚಿಂತಿಸಬಾರದು. ನೀವು ಮಾಡಿದ್ದು ನಮ್ಮ ಹಿತಕ್ಕಾಗಿಯೇ ಆಗಿರುವದು. ಅಂತೇ ಇಂಮ ಕವಿಗಳ ಮುಖದಿಂದ "ಗೀತಗೋವಿಂದ" ದಂತಹ ಅಪ್ರತಿಮವಾದ ಸ್ತೋತ್ರವು ಹೊರಬಿತ್ತು. ನಿಮ್ಮ ದಯದಿಂದಲೆ ನನ್ನಂಥವಳೊಬ್ಬ ಸಾಧ್ವಿಯು ನಿಮ್ಮ ಆಶ್ರಯದಲ್ಲಿದ್ದದ್ದು ಜಗತ್ತಿಗೆ ಗೊತ್ತಾಯಿತು. ಇದರಿಂದ ಮಾತೃಭೂಮಿಯ ಕೀರ್ತಿಧ್ವಜವು ಇಡೀ ಪ್ರಪಂಚದಲ್ಲಿಯೇ ಮೆರೆಯುವಂತಾಯಿತು. ಅವ್ವನವರೇ ! ಪತಿವ್ರತಾಧರ್ಮವನ್ನು ಕೇಳಿರಿ. ಈ ಜಗತ್ತಿನಲ್ಲಿ ಸ್ತ್ರೀಯರಿಗೆ ಅತ್ಯವಶ್ಯವಾದ ಧರ್ಮವೆಂದರೆ ಇದೇ ಸ್ತ್ರೀಯರಿಗೆ ಪತಿಯಹೊರ್ತು ಅನ್ಯದೈವತವಿಲ್ಲ. ಪತಿಯಹೊರ್ತು ಅನ್ಯಗತಿಯಿಲ್ಲ. ಪತಿಗಿಂತ ಹೆಚ್ಚಿನ ಧನವಿಲ್ಲ. ಪತಿಸೇವೆಗೆ ಮಿಗಿಲಾದ ಸೇವೆಯಿಲ್ಲ. ಪತಿಯಾಜ್ಞೆಯಂತೆ ನಡೆಯುವದೇ ಮೋಕ್ಷಸಾಧನವು. ಪತಿವ್ರತಾಧರ್ಮಚಿಂತನವೇ ಬ್ರಹ್ಮಾನಂದವು. ಪತಿಯ ಸದ್ಗುಣ ಸ್ಮರಣವೇ ಬ್ರಹ್ಮಧ್ಯಾನವು. ಪತಿಯು ಮೃತವಾದ ಕೂಡಲೆ ದೇಹವಿಡುವದೇ ಮೋಕ್ಷವು ! ಈ ಸಂಗತಿಯನ್ನು ಯಾವ ಸಾಧ್ವಿಯು ಮನದಟ್ಟಾಗಿ ಅರಿತುಕೊಂಡಿರುವಳೋ ಅವಳಿಗೆ ಸತಿಯ ಸುಖ-ಸಾಧನಗಳು ತಾವೇ ಪ್ರಾಪ್ತವಾಗುವವು. ಪತಿವ್ರತಕ್ಕಿಂತ ಹೆಚ್ಚಿನ ವ್ರತವಿಲ್ಲ. ಜಪ-ತಪ-ಹೋಮ-ಹವನಗಳು ಈ ವ್ರತವನ್ನು ಸರಿಗಟ್ಟಲಾರವು. ಅಖಂಡವಾದ ಈ ಮೋಹಪಾಶದೊಳಗೆ ಮಹಾ ಧೈರ್ಯದಿಂದ ಪಾತಿವ್ರತ್ಯವನ್ನು ಕಾಯ್ದುಕೊಳ್ಳುವವಳಿಗೆ ಸತಿ, ಎನ್ನುವರು. ಪತಿವ್ರತಾಸ್ತ್ರೀಯಳಿಗೆ ಪರಮ ಪದವು ಕರತಲಾಮಲಕವಾಗಿರುವದೆಂದು ವಿದ್ವಾಂಸರು ಅನ್ನುವರು. ಪ್ರಾಣಕ್ಕಿಂತಲೂ ಅಧಿಕ ಪ್ರೀತಿಯಿಂದ ಪಾತಿವ್ರತ್ಯವನ್ನು ಕಾಯ್ದುಕೊಳ್ಳಬೇಕು. ಸರ್ವಭೂಷಣಗಳಲ್ಲಿ ಅತ್ಯಂತ ಸುಂದರವಾದ ಹಾಗು ಬೆಲೆಯುಳ್ಳ ಭೂಷಣವೆಂದರೆ ಪಾತಿವ್ರತ್ಯವು! ಪತಿವ್ರತಾಸ್ತ್ರೀಯರ ಆಧಾರದಿಂದಲೇ ನಿರಾಧಾರವಾದ ಈ ಪೃಥ್ವಿಯು ಆಕಾಶದಲ್ಲಿ ನಿಶ್ಚಲವಾಗಿ ಗಮನ ಮಾಡುತ್ತಿರುವದು. !!

ಪತಿವ್ರತಾಸ್ತ್ರೀಯರಿಗೆ ಬ್ರಹ್ಮಾದಿ ದೇವತೆಗಳು ಭಯಗೊಳ್ಳುವರೆಂಬ ಸಂಗತಿಯು ಪುರಾಣ ಪ್ರಸಿದ್ಧವಾಗಿರುವದು. ಸ್ವ ಪತಿವ್ರತಾ ಪ್ರಭಾವದಿಂದ ಸತಿ ಸಾವಿತ್ರಿಯು ತನ್ನ ಮೃತಪಟ್ಟ ಪತಿಗೆ ಜೀವದಾನಮಾಡಿದಳು. ಪತಿವ್ರತಕ್ಕೆ ಹಾನಿ ತರಲಿಚ್ಛಿಸಿದ ಕಿರಾತನನ್ನು ದಮಯಂತಿಯು ಕ್ಷಣಾರ್ಧದಲ್ಲಿ ಸುಟ್ಟು ಬೂದಿಮಾಡಿದಳು. ರೇಣುಕಾದೇವಿಯು ಮಳಲ್ಲಿನಿಂದ ಎಣ್ಣೆತೆಗೆದಳು. ನಾರದನು ಕೊಟ್ಟ ಉಕ್ಕಿನ ಕಡಿ

ಯನ್ನು ಅನುಸೂಯೆಯು ಮನಗಡ್ಲೆಯಂತೆ ತಿಂದು ತನ್ನ ಸಾಮರ್ಥ್ಯವನ್ನು ತೋರಿಸಿರುವಳು. ಇದೇ ಪತಿವ್ರತೆಯು ತನ್ನ ಪರೀಕ್ಷೆಗಾಗಿ ಬಂದ ಬ್ರಹ್ಮ-ವಿಷ್ಣು-ಮಹೇಶ್ವರರನ್ನು ಮಕ್ಕಳನ್ನಾಗಿ ಮಾಡಿದಳು! ನಿಮಿಷಾರ್ಧದಲ್ಲಿ ಅರುಂಧತಿಯು ಉಸುಬಿನಿಂದ ಅನ್ನ ತಯಾರಿಸಿದಳು. ಇವರೆಲ್ಲರೂ ತಮ್ಮ ಪತಿವ್ರತಾ ಪ್ರಭಾವದಿಂದಲೇ ಅಲೌಕಿಕ ಸಾಮರ್ಥ್ಯವನ್ನು ಸಂಪಾದಿಸಿದರೆಂಬುದಕ್ಕೆ ಸಂದೇಹವೇನು ?

ಪ್ರಿಯವಾಚಕವೃಂದ ! ಕನ್ಯೆಯು ಸದ್ಗುಣೆಯಾದರೆ ಉಭಯಕುಲ ಪಾವನಮಾಡುವಳೆಂದು ನಾಣ್ಣುಡಿಯುಂಟು. ಅದರಂತೆ ಆರ್ಯಭೂಮಿಯ ಈ ಅಲೌಕಿಕ ಕನ್ಯಾರತ್ನವು ತನ್ನ ಕೀರ್ತಿಯನ್ನು ಸಪ್ತಸಮುದ್ರದಾಚೆಗೆ ಒಯ್ದು ಮುಟ್ಟಿಸಿರುವಳು. ಹಾಗು ಇವಳ ಪತಿನಿಷ್ಠೆಯ ಪ್ರಭಾವದಿಂದ "ಗೀತಗೋವಿಂದ" ದಂತಹ ಭಕ್ತಿರಸ ಪರಿಪೂರ್ಣ ಗ್ರಂಥವು ಉದಯವಾಗಿ, ಅದು ಈಗೀಗ ಜಗತ್ತಿನಲ್ಲಿರುವ ಪ್ರಮುಖವಾದಯಲ್ಲ ಭಾಷೆಗಳಲ್ಲಿ ಬರೆಯಲ್ಪಟ್ಟಿರುವದು. ಸರ ವಿಲ್ಯಂ ಜೋನ್ಸರೆಂಬ ಆಂಗ್ಲ ಕವಿಗಳು ಇವನ್ನು ಇಂಗ್ಲಿಷಿನಲ್ಲಿ ಭಾಷಾಂತರಿಸಿರುವರು. ಅದು ಆ ಜನಾಂಗದಲ್ಲಿ ಅತ್ಯಂತ ಪ್ರಿಯವಾಗಿರುವದು.

---

## ಹೇವವಿರಲಿ !

ಆಗಸದ ಹಂದರದಿ ಇಳಿಬಿದ್ದ ಹಣ್ಣನ್ನು ಸಾಗಿ ನೀ ಹರಿಯುತಿರಲು ॥
ಭೋಗದಾಶೆಯು ಬೇಡ; ಕೈಗೆ ಬಂದಾ ಹಣ್ಣು ಬಾಯಿಯಲಿ ಬೀಳದಿರಲು ॥ ೧ ॥

ಭೋಗಪುರದಾಲಯದ ಬಾಗಿಲಕೆ ಬೀಗವಿದೆ; ಕೂಗು; ಕದ ತೆರೆಯದಿರಲು ॥
ಯೋಗಪದಗಳ ಹಾಡು; ಬೀಗ ಬಿಚ್ಚುವದು ನೀ ಬಾಯಾರಿ ಬಿದ್ದು ಬಿಡಲು ॥ ೨ ॥

ನಿನಗೆಂದೆ ಬಗೆಯದಿರು; ಮಿಡಿಯು ಹಣ್ಣಾಗುವದು ಮೊಗ್ಗೆ ಹೂವಾಗುತಿಹುದು ॥
ತನಗೆ ಆ! ತುಂಬಿತುಳುಕುವ ರಸವು ಹಿಡಿಸದಿರೆ, ಒಡೆದಿಂತು ಚಿತ್ರಿಸುವದು ॥ ೩ ॥

ಹಕ್ಕಿಪಕ್ಕಿಗಳೆಲ್ಲ ಇಂಚರಕೆ ಮನಸೋತು ನಿನ್ನ ಬೆನ್ನಟ್ಟುತಿರಲು ॥
ಉಕ್ಕಿಬರುತಿಹ ನಿನ್ನ ಭಾವಗೀತೆಯು ಹಾಡು; ನಿನ್ನವರೆ ಕೇಳದಿರಲು ॥ ೪ ॥

ನಡುಹಗಲಿನಲ್ಲಡರಿ ಬರುವ ಮೋಡಗಳಾಚೆ ನಲಿಯುತಿಹ ನೇಸರಿರಲು ॥
ಕುಡಿಯ ಕತ್ತರಿಸೇಳು ನಿನ್ನ ನಡುವನೆ ಸೊಡರು ಕಳೆಗುಂದಿ ಕೊರಗುತಿರಲು ॥ ೫ ॥

ಜೀವ ಧ್ಯಾನಿಸಿನೋಡು; ಒಡಹುಟ್ಟಿದವರೆಲ್ಲ ಹೊಡೆದು ಹೊರಗಟ್ಟುತಿರಲು ॥
ಜೀವನದ ಜೋಗಳವ ಹೇವದಿಂದಲೆ ಹಾಡು. ಕಾವ ಕಾಪಾಡುತಿರಲು ॥ ೬ ॥

—ಬಿಂದು ಮಾಧವ.

---

# ಫಲಜ್ಯೋತಿಷದ ರಹಸ್ಯ

ಲೇಖಿಕೆ :— ಪ್ರಲ್ಹಾದ.

ಫಲಜ್ಯೋತಿಷವು ನಿಷ್ಫಲವೆಂದು ಹೇಳುವವರು ಕೆಲವರಿರುವರು. ಆದರ ಮೇಲೆ ವಿಶ್ವಾಸವಿಟ್ಟವರೂ ಕಡಿಮೆಯೇನಿಲ್ಲ. ಜ್ಯೋತಿಷಿಗಳೆಂದುಕೊಳ್ಳುವವರು ದುಡ್ಡಿಗೋಸ್ಕರ ಮಾತನಾಡುವದನ್ನೇ ಒಲ್ಲರೇ ಅಲ್ಲದೆ ಅದರಲ್ಲಿನ ತಥ್ಯಾಂಶ ಸತ್ಯಾಂಶಗಳನ್ನು ನೋಡುವುದಕ್ಕೆ ಹೋಗುವುದೇ ಇಲ್ಲ. ಹೀಗಿರಲು ಧರ್ಮಲಂಡ ಪಿತೃಲಂಡ ಎಂದು ಕರೆಯಿಸಿಕೊಳ್ಳುವ ಈಗಿನ ಜನರಲ್ಲಿ ಜೋಯಿಸರ—ಜ್ಯೋತಿಷದ—ಬೇಳೆಯು ಬೇಯುವದೆಂತು ? ಕಿವಿ ಚುಚ್ಚಲಿಕ್ಕೆ ಪತ್ತಾರನೇ ಬೇಕು. ಪಾಶ್ಚಾತ್ಯಶಾಸ್ತ್ರಜ್ಞರು ಫಲಜ್ಯೋತಿಷವು ಸರಿಯೆಂದು ಸಿದ್ಧಮಾಡಿ ಹೇಳಿದರಾದರೆ ಅಂಥ ಶ್ರದ್ಧೆಯನ್ನಿಡುವವರಲ್ಲವೆಂದು ಜಗಿಜಗಿದು ಹೇಳುವ ಜನಗಳೇ ಆ ಪಾಶ್ಚಾತ್ಯರು ಹೇಳಿದುದರ ಹುರುಳು ತಿರುಳು ತಿಳಿಯದಿದ್ದರೂ ಅಂಥ ಶ್ರದ್ಧೆಯಿಂದ ಸರಿಯೆಂದು ಒಪ್ಪೇ ಬಿಡುತ್ತಿದ್ದರು. ಆದರೆ ಪಾಶ್ಚಾತ್ಯರ ಒಲವೂ ಈ ಫಲಜ್ಯೋತಿಷದ ಕಡೆಗೆ ಕಡಿಮೆ ಇರುವುದರಿಂದ—ಇಲ್ಲದೇ ಇರುವುದರಿಂದ ಕಿವಿ ಚುಚ್ಚುವುದೂ ಸಾಧ್ಯವಿಲ್ಲವಾಗಿದೆ.

ಫಲಜ್ಯೋತಿಷವು ಸಂಪೂರ್ಣವಾಗಿ ಸತ್ಯವೆಂದಾಗಲಿ ಸಂಪೂರ್ಣವಾಗಿ ಅಸತ್ಯವೆಂದಾಗಲಿ ಶಾಸ್ತ್ರೀಯ ದೃಷ್ಟಿಯಿಂದ ಸಿದ್ಧಮಾಡಿ ತೋರಿಸಲಿಕ್ಕೆ ಸದ್ಯಕ್ಕಂತೂ ಬರುವಹಾಗಿಲ್ಲ. ಆದರೆ ಅದರ ಮೂಲದಲ್ಲಿರುವ ಒಂದು ತತ್ವದ ವಿಷಯದಲ್ಲಿ ಸಂಶಯ ತೆಗೆದುಕೊಳ್ಳಲಿಕ್ಕೆ ಯಾರಿಗೂ ಸಾಧ್ಯವಿಲ್ಲವಾಗಿದೆ. ಕಲ್ಲು ಕಲ್ಲಿಗೂ ಕಲ್ಲು ಮಣ್ಣಿಗೂ ಗ್ರಹ ಗ್ರಹಗಳಿಗೂ ಹೆಚ್ಚೇನು? ಈ ಬ್ರಹ್ಮಾಂಡದಲ್ಲಿರುವ ಪ್ರತಿಯೊಂದು ಪದಾರ್ಥಗಳಲ್ಲಿ ಒಂದು ತರದ ಸಂಬಂಧವಿರುವುದೆಂಬುದು ನಿರ್ವಿವಾದವಾಗಿರುವಾಗ ಪ್ರಾಣಿಗಳಿಗೂ ಗ್ರಹಗಳಿಗೂ ಸಂಬಂಧವಿರುವುದಿಲ್ಲ, ಎಂದು ಹೇಳಲಿಕ್ಕೆ ಬರುವುದಿಲ್ಲವಲ್ಲವೇ ? ನ್ಯೂಟನನ ಹೆಸರಿನ ಮೇಲಿಂದಾದರೂ ಸಂಬಂಧವಿದೆಯೆಂಬುದನ್ನು ಒಪ್ಪಲೇ ಬೇಕು.

ನಮ್ಮ ಪೂರ್ವಿಕರು ಕಾರ್ಯಕಾರಣಭಾವವನ್ನು ಅರಿತಾಗಲಿ ಇಲ್ಲವೆ ಅನೇಕ ಉದಾಹರಣೆಗಳನ್ನು ನೋಡಿಯಾಗಲಿ, ಯಾವದೇ ಕಾರಣದಿಂದಾಗಲೊಲ್ಲದೇಕೆ, ಗ್ರಹಗಳಿಗೂ ಮನುಷ್ಯನಿಗೂ; ಅದೇಕೆ ಗ್ರಹಗಳಿಗೂ ಪ್ರತಿಯೊಂದು ಜೀವಿಗೂ ಸಂಬಂಧವಿರುವುದೆಂಬುವನ್ನು ಒಪ್ಪಿ, ಅದರ ಮೇಲಿಂದ ಫಲಜ್ಯೋತಿಷದ ಸಿದ್ಧಾಂತಗಳನ್ನು ಸ್ಥಾಪಿಸಿರುವರು. ಮಾಘದಲ್ಲಿ ಎಮ್ಮೆಯೂ ಸಿಂಹಸಂಕ್ರಮಣದಲ್ಲಿ ಆಕಳು ಕುದುರೆಗಳೂ ಈಯಬಾರದೆಂಬುದು—ಈಯುವುದು ಕೆಡಕೆಂಬುದು ಹಳ್ಳಿಯ ಹುಂಬನಿಗೂ ಗೊತ್ತಿರುತ್ತದೆ. ಅಶ್ವಪರೀಕ್ಷಣ ಗಜ ಪರೀಕ್ಷಣದ ರೀತಿಯನ್ನು ನೋಡಿದರೆ ಪ್ರಾಣಿಗಳ ಸಂಬಂಧವಾದ ಫಲಜ್ಯೋತಿಷವನ್ನು ಎಷ್ಟು ಆಸ್ಥೆಯಿಂದ ಅಭ್ಯಾಸ ಮಾಡಿದ್ದರೆಂಬುದು ತಿಳಿದು ಬರುವಂತಿದೆ. ಇಲ್ಲಿ ಮೇಲೆ ಮೇಲೆ ವಿಚಾರಿಸುವವರಿಗೆ ಅಶ್ವಗಜಪರೀಕ್ಷಣಕ್ಕೂ ಫಲಜ್ಯೋತಿಷಕ್ಕೂ ಸಂಬಂಧವೇನೆಂಬುದು ಗೂಢವೆನಿಸಬಹುದು. ಫಲಜ್ಯೋತಿಷವೂ ಸಾಮುದ್ರಿಕವೂ ಒಂದನ್ನೊಂದು ಬಿಟ್ಟಿಲ್ಲ. ಸಾಮುದ್ರಿಕದ ಮೇಲಿಂದ ಜನ್ಮಕುಂಡಲಿಯನ್ನು ಹಾಕುವುದನ್ನೂ ಭವಿತವ್ಯ ಹೇಳುವುದನ್ನೂ ಅನೇಕರು ನೋಡಿರಬಹುದು. ನೋಡಿರದಿದ್ದರೂ ಕೇಳಿರಬಹುದು. ಫಲಜ್ಯೋತಿಷಕ್ಕೂ ಮೈಮೇಲಿನ ಚಿಹ್ನಗಳಿಗೂ ಸಂಬಂಧವಿರುವುದೆಂಬುದೇ ಇದರ ಒಳಗು. ಇಷ್ಟೆಲ್ಲವನ್ನು ಗೊತ್ತುಹಚ್ಚಲಿಕ್ಕೆ ಶ್ರಮಬಟ್ಟ ಪೂರ್ವಿಕರು ಹುಚ್ಚರೋ? ಅದರಲ್ಲೇ ನಡೆಯೆಂದು ಅಲ್ಲಗಳೆಯುವ ನಾವು ಹುಚ್ಚರೋ ದೇವರೊಬ್ಬ ಬಲ್ಲ. ಮುಂದಿನ ಪೀಳಿಗೆಯಲ್ಲಿ ಫಲಜ್ಯೋತಿಷವನ್ನು ಸಶಾಸ್ತ್ರವಾಗಿ ಅಭ್ಯಾಸಿಸುವವನೊಬ್ಬ ಬಲ್ಲ.

ಫಲಜ್ಯೋತಿಷಕ್ಕೆ ಜನ್ಮಕುಂಡಲಿಯೇ ಆಧಾರ ಸ್ತಂಭವು. ಜನ್ಮಕುಂಡಲಿಯೆಂದರೇನು ? ಜನ್ಮವಾದ ವೇಳೆಯಲ್ಲಿನ ಗ್ರಹಗಳ ಸ್ಥಿತಿಗತಿಗಳ ನಕ್ಷೆ ಅಥವಾ ಆಕಾಶದ ನಕ್ಷೆ. ಎಂದ ಮೇಲೆ ಗ್ರಹಗಳಿಗೂ ಮನುಷ್ಯನಿಗೂ ಇರುವ ಸಂಬಂಧವೇ ಜ್ಯೋತಿಷಶಾಸ್ತ್ರದ ಮೂಲದಲ್ಲಿದೆಯೆಂದಂತಾಗುವುದಿಲ್ಲವೇ ? ಮನುಷ್ಯನಿಗೂ ಗ್ರಹಗಳಿಗೂ ಏನೊಂದು ಸಂಬಂಧವಿರುವುದೆಂಬುದು ನಿಶ್ಚಯ. ಆ ಸಂಬಂಧವು ಆವುದೆಂಬುದನ್ನು ಕಂಡು ಹಿಡಿಯಲಿಕ್ಕೆ ಪ್ರಯತ್ನಿಸುವದೇ ಫಲಜ್ಯೋತಿಷವನ್ನು ಸತ್ಯಾಸತ್ಯತೆಯ ಒರೆಗಲ್ಲಿಗೆ ಹಚ್ಚುವುದಾಗಿರುವುದು. ಆ ಮಾತು ಈಗಲೇ ಸಾಧ್ಯವಿಲ್ಲವಾಗಿದೆ. ಇದರಲ್ಲಿ ಅನೇಕ ಶಾಸ್ತ್ರಜ್ಞರ ಆಯುಷ್ಯವು ಹೋಗಬೇಕಾಗಿದೆ. ಇನ್ನೂ ಶಾಸ್ತ್ರಜ್ಞರ ತಲೆಯಲ್ಲಿ ಈ ವಿಚಾರವು ಸಂಪೂರ್ಣವಾಗಿ ಬಾರದ ಈ ಕಾಲದಲ್ಲಿ, ಫಲ

ಜ್ಯೋತಿಷವು ಸತ್ಯವಾಗಿಯೇ ಇದೆಯೆಂದು ಎದೆ ತಟ್ಟಿ ಹೇಳುವುದು ಹೇಗೆ ? ಆದರೂ ಫಲಜ್ಯೋತಿಷದಲ್ಲಿ ತಥ್ಯವಿದೆಯೆಂಬುದನ್ನು ಹೇಳಲಿಕ್ಕೆ ಎದೆ ಮುಂದೆ ಮಾಡಿರುವೆನು. ಬೇಕಾದರೆ ಅಂಥ ಶ್ರದ್ಧೆಯೆನ್ನಿರಿ, ಮೂಢನೆನ್ನಿರಿ, ಹುಚ್ಚು ಹಿಡಿದದೆಯೆನ್ನಿರಿ. ಮನಸ್ಸಿಗೆ ಬಂದಂತೆ.

ಈಗಿದೊಂದು ವಿಷಯವನ್ನೇ ವಿಚಾರಿಸಿರಿ. ಮನುಷ್ಯನ ಅಥವಾ ಪ್ರಾಣಿಯ ಶರೀರ ಲಕ್ಷಣಗಳ ಮೇಲಿಂದ ಜನ್ಮಕುಂಡಲಿಯನ್ನೂ ಜನ್ಮ ಕುಂಡಲಿಯ ಮೇಲಿಂದ ಶರೀರಲಕ್ಷಣವನ್ನೂ ಹೇಳುವರಷ್ಟೆ ? ಇದರಲ್ಲಿ ತಥ್ಯಾಂಶವು ಬಹಳಮಟ್ಟಿಗಿದೆ. ಸಮುದ್ರದ ನೀರಿನ ಮೇಲೆ ಸೂರ್ಯಚಂದ್ರರ ಪರಿಣಾಮವಾಗುವಂತೆ ಗರ್ಭಾಶಯದಲ್ಲಿರುವ ಶುಕ್ಲಶೋಣಿತಗಳ ಮೇಲೆಯೂ ಗ್ರಹಗಳ ಪರಿಣಾಮವು ಆಗುತ್ತಿರಲಿಕ್ಕೆಬೇಕೆಂಬುದು ಮೇಲೆಮೇಲೆ ನೋಡಿದರೂ ತಿಳಿದುಬರುವಂತಿದೆ. ಇದರಿಂದ ಗ್ರಹಗಳಿಗೂ ಶರೀರ ಲಕ್ಷಣಕ್ಕೂ ಸಂಬಂಧವಿರುವುದೆಂಬುದು ಸ್ಪಷ್ಟವಾಗುತ್ತದೆ. ನಮ್ಮ ಫಲ ಜ್ಯೋತಿಷದಲ್ಲಿಯೂ ಅದನ್ನೇ ಹೇಳಿದೆ. ಇಂತಹ ಲಗ್ನದಲ್ಲಿ ಹುಟ್ಟಿದರೆ ಇಂತಹ ಗ್ರಹವು ಲಗ್ನದಲ್ಲಿದ್ದರೆ ಇಂತಹ ಶರೀರ ಲಕ್ಷಣಗಳಿರುವುವೆಂದು. ಹಾಗೆಯೇ ಏಕೆ ಇರಬೇಕೆಂಬ ಪ್ರಶ್ನೆಯನ್ನು ಶಾಸ್ತ್ರದ ವರೆಗಲ್ಲಿಗೆ ಹಚ್ಚಲಿಕ್ಕೂ ಬರುವಂತಿದೆ. ಆದರೆ ಅದು ಈಗ್ಗೆ ಗೊತ್ತಿದ್ದಷ್ಟು ಜ್ಞಾನದ ಮೇಲಿಂದ ಮಾತ್ರ ಬರಲಿಕ್ಕಿಲ್ಲ. ಪ್ರತಿಯೊಂದು ಗ್ರಹದಲ್ಲಿಯೂ ಬೇರೆ ಬೇರೆ ತರದ ಅನೇಕ ದ್ರವ್ಯಗಳಿರುವುವೆಂಬುದು ಈಗ ಶಾಸ್ತ್ರಜ್ಞರಿಂದ ನಿರ್ಣಯಿಸಲ್ಪಟ್ಟಿದೆ. ಪ್ರತಿಯೊಂದು ಗ್ರಹದಲ್ಲಿರುವ ದ್ರವ್ಯಗಳ ಗುಣಧರ್ಮಗಳಲ್ಲಿ ಅವುಗಳಿಂದ ಬೇರೆ ಬೇರೆ ಪದಾರ್ಥಗಳ ಮೇಲಾಗುವ ಪರಿಣಾಮವೂ ತಿಳಿದಲ್ಲಿ, ಗರ್ಭಾಶಯದಲ್ಲಿರುವ ಪ್ರಾಣಿಯ ಆಕಾರದಲ್ಲಿ ಏಕೆ ಹೆಚ್ಚುಕಡಿಮೆಯಾಗುವುದೆಂಬ ವಿಷಯವು ತಾನೇ ಗೊತ್ತಾಗುವುದು. ಗೊತ್ತಾದಲ್ಲಿ ಫಲಜ್ಯೋತಿಷದಲ್ಲಿ ಹೇಳಿರುವ ಸಿದ್ಧಾಂತಗಳ ಸತ್ಯಾಸತ್ಯತೆಯೂ ಕಂಡುಬರುವುದು.

ಇಲ್ಲಿ ಇನ್ನೊಂದು ಆಕ್ಷೇಪಕ್ಕೆ ಅವಕಾಶವಿದೆ. "ಗ್ರಹತಿಯ ಮೇಲಿಂದ ಪ್ರಾಣಿಯ ಶರೀರರಚನೆಯಾಗುತ್ತಿರುತ್ತದೆಂದು ತಿಳಿವರೂ ಇದಕ್ಕೆ ಜನ್ಮಕಾಲದಲ್ಲಿನ, ಎಂದರೆ ಸಂಪೂರ್ಣವಾಗಿ ಆಕಾರವಾದ ಮೇಲಿನ ಗ್ರಹಗಳ ಸ್ಥಿತಿಯನ್ನು ತೆಗೆದುಕೊಂಡು ಮಾಡುವುದೇನು ? ಎಂದು ಗರ್ಭಧಾರಣೆಯ ಕಾಲದ ಕುಂಡಲಿಯೇ ನಿಜವಾದ ಕುಂಡಲಿಯೆಂದೂ ಅದೇ ಫಲಜ್ಯೋತಿಷಕ್ಕೆ ತಳಹದಿಯಾಗಿರಬೇಕೆಂದೂ ನಾನು ನೆನಿಸುತ್ತೇನೆ. ಆದರೆ ಸರಿಯಾದ ಜನ್ಮಕುಂಡಲಿಯು ದೊರೆಯುವದು ಸಹ ಎಲ್ಲಿ ಅಪರೂಪವೋ ಅಂತಹ ಪ್ರಸಂಗದಲ್ಲಿ ಆ ಕುಂಡಲಿಯು ದೊರೆಯುವುದೆಂತು ? ಅದು ಅಶಕ್ಯವೆನಿಸುವುದರಿಂದಲೇ ಈ ಜನ್ಮಕುಂಡಲಿಯನ್ನು ತೆಗೆಯುವ ರೂಢಿಯಾಗಿರಬೇಕು. ಜನ್ಮಕುಂಡಲಿಯ ಮೇಲಿಂದ ತೆಗೆದಿರುವ ಫಲಜ್ಯೋತಿಷವು ಸ್ಥೂಲಮಾನದ್ದಾಗಿರುವುದೆಂದು ಹೇಳಬಹುದು.

ಫಲಜ್ಯೋತಿಷದಿಂದ ನಿರ್ಣಯಿಸಿದ ಸಿದ್ಧಾಂತಗಳು ಕೆಲವು ವೇಳೆ ತಪ್ಪಿದರೂ ತಪ್ಪಬಹುದು. ಈ ಮಾತನ್ನು ಹೇಳುವದರಿಂದ ಜ್ಯೋತಿಷಿಗಳೂ ಜ್ಯೋತಿಷಭಕ್ತರೂ ನನ್ನ ಮೇಲೆ ಸಿಟ್ಟಾಗಬಹುದು. ಅವರು ಏನೇ ಎನ್ನಲೊಲ್ಲರೇಕೆ. ನನಗೆ ಸರಿಕಂಡದ್ದನ್ನು ನಾನು ಆಡಿಬಿಟ್ಟಿದ್ದೇನೆ. ಅವರಲ್ಲಿ ಫಲಜ್ಯೋತಿಷದ ತಪ್ಪೆಂದು ನಾನು ಹೇಳುವುದಿಲ್ಲ. ಅವರಲ್ಲಿನ ತಥ್ಯಾಂಶವನ್ನು ತಿಳಿಯದ ನಮ್ಮದೇ ತಪ್ಪು. ಹೋಕಾಯಂತ್ರದಲ್ಲಿನ ಸೂಜಿಯು ಯಾವಾಗಲೂ ದಕ್ಷಿಣೋತ್ತರವಾಗಿ ನಿಲ್ಲುವುದೆಂಬುದು ಸಿದ್ಧಾಂತ. ಭೂಮಿಯಲ್ಲಿ ಧ್ರುವಗಳ ಕಡೆಗೆ ಲೋಹಚುಂಬಕದ ಅಂಶವು ಹೆಚ್ಚಾಗಿರುವುದೇ ಇದಕ್ಕೆ ಕಾರಣವೆಂದು ಶಾಸ್ತ್ರಜ್ಞರು ಹೇಳುವರು. ಆದರೆ ನಾವು ಮತ್ತೊಂದು ಲೋಹಚುಂಬಕದ ಸಹಾಯದಿಂದ ಆ ಸೂಜಿಯು ದಿಕ್ಕನ್ನು ಬದಲುಮಾಡಬಹುದು. ಈಗ ಹೀಗೇಕಾಯಿತೆಂದು ಕೇಳಿದರೆ ಭೂಮಿಯಲ್ಲಿನ ಲೋಹಚುಂಬಕದ ಶಕ್ತಿಗಿಂತಲೂ ನಾವು ಹತ್ತರ ಒಯ್ದ ಲೋಹಚುಂಬಕದ ಶಕ್ತಿಯು ಸೂಜಿಯಮೇಲೆ ಹೆಚ್ಚಾಗಿ ನಡೆಯಿತೆಂದು ಹೇಳಲಿಕ್ಕೆ ಶಾಸ್ತ್ರಜ್ಞರು ಸಿದ್ಧರಾಗಿ ನಿಂತೇ ಇರುವರು. ಸಮುದ್ರವು ಉಕ್ಕೇರಲಿಕ್ಕೆ ಕಾರಣವೇನು ? ಸಮುದ್ರದ ನೀರಿನ ಮೇಲಾಗುವ ಚಂದ್ರನ ಆಕರ್ಷಣಶಕ್ತಿಯು. ಚಂದ್ರನ ಆಕರ್ಷಣವೇ ಏಕೆ? ಸೂರ್ಯನು ಚಂದ್ರನಿಗಿಂತ ಎಷ್ಟೋಪಾಲು ದೊಡ್ಡವನಲ್ಲವೇ ? ಅವನ ಆಕರ್ಷಣವೆಂದೇಕೆನ್ನಬಾರದು ? ಎಂದರೆ ಸೂರ್ಯನಿಗಿಂತಲೂ ಚಂದ್ರನು ಪೃಥ್ವಿಗೆ ಸಮೀಪವಾಗಿರುವುರಿಂದ ಅವನ ಆಕರ್ಷಣಶಕ್ತಿಯೇ ಹೆಚ್ಚಾಗಿ ನಡೆಯುವುದೆಂದುತ್ತರ. ಅಮಾವಾಸ್ಯೆಪೌರ್ಣಿಮೆಯ ದಿವಸಗಳಲ್ಲಿ ಎಲ್ಲಕ್ಕೂ ಹೆಚ್ಚಾಗಿಯೂ ಅಷ್ಟಮಿಯ ದಿವಸ ಕಡಿಮೆಯಾಗಿಯೂ ಏರಿಳಿತಗಳಾಗುವ ಕಾರಣವೇನು? ಎಂದರೆ ಅಮಾವಾಸ್ಯೆ ಪೌರ್ಣಿಮೆಗಳ ದಿವಸ ಸೂರ್ಯಚಂದ್ರರು ಒಂದೇ ಕಡೆಯಿದ್ದು ಅವ

ರಿಬ್ಬರ ಆಕರ್ಷಣವು ಕೂಡಿಯೇ ನಡೆಯುವುದರಿಂದ ಆ ದಿವಸ ದೊಡ್ಡವಾದ ಏರಿಳಿತಗಳೂ ಅಷ್ಟಮಿಯದಿವಸಗಳಲ್ಲಿ ಸೂರ್ಯ ಚಂದ್ರರಿಬ್ಬರು ವಿರುದ್ಧ ದಿಕ್ಕಿನಲ್ಲಿರುವುದರಿಂದ ಅವರಿಬ್ಬರ ಆಕರ್ಷಣಶಕ್ತಿಯು ಪರಸ್ಪರ ವಿರುದ್ಧವಾಗಿ ನಡೆಯುವುದರಿಂದ ಆ ದಿವಸ ಸಣ್ಣವಾದ ಏರಿಳಿತಗಳೂ ಆಗುವುವೆಂದು ಬಲ್ಲವರು ಹೇಳುತ್ತಾರೆ. ಇವೇ ತತ್ವವು ಫಲಜ್ಯೋತಿಷಕ್ಕೂ ಹತ್ತುವುದು. ಈಗ ಶರೀರಲಕ್ಷಣವನ್ನೇ ತೆಗೆದುಕೊಳ್ಳುವಾ. ಮಗುವು ತಂದೆಯನ್ನೋ ತಾಯಿಯನ್ನೋ ಅವರಿಬ್ಬರ ಮಿಶ್ರ ಸ್ವರೂಪವನ್ನೋ ಕೆಲವು ವೇಳೆ ಎರಡನೇ ಸಂಬಂಧಿಕರನ್ನೋ ಹೋಲುತ್ತದೆಂಬುದು ಬಹುದಿವಸದಿಂದ ನಡೆದು ಬಂದು ಗೊತ್ತಾದ ವಿಷಯು. ಇತಿಹಾಸ ಪುರಾಣಗಳೂ ಈ ಮಾತನ್ನು ಹೇಳುತ್ತವೆ. ಇವರಿಂದ ಗರ್ಭಾಶಯವು ಒಂದು ಪ್ರತಿಬಿಂಬ ಪೇಟಿಕೆಯಂತೆ ( ಕೆಮರಾ ) ಇರುತ್ತದೆಂಬುದು ಸಿದ್ಧವಾಗುತ್ತದೆ. ಈ ಪ್ರತಿಬಿಂಬ ಪೀಟಿಕೆಯ ಮೇಲೆ ಗ್ರಹಗಳ ಪರಿಣಾಮವೂ ಸ್ತ್ರೀಯ ಮಾನಸಚಿತ್ರಗಳ ಪರಿಣಾಮವೂ ಎಡೆಬಿಡದೆ ನಡೆದಿರುತ್ತವೆ. ಅದರಲ್ಲಿ ಆವುದರ ಶಕ್ತಿಯು ಹೆಚ್ಚಾಗುವುದೋ ಅದರಂತೆ ಆಕಾರವಾಗುವುದು ಸಹಜವೇ ಇದೆ. ಒಮ್ಮೊಮ್ಮೆ ಇವೆಲ್ಲವುಗಳ ಪರಿಣಾಮವೂ ಅಲ್ಪಸ್ವಲ್ಪಾಗಿ ಮಿಶ್ರ ಆಕಾರವೂ ಸಿದ್ಧವಾಗಬಹುದು. ಇದರಂತೆಯು ಉಳಿದ ಸಿದ್ಧಾಂತಗಳನ್ನು ಒರೆಗಲ್ಲಿಗೆ ಹಚ್ಚಬಹುವೆಂದೂ (ಬಲ್ಲವರು) ಬೇಕೆಂದೂ ನನ್ನಿಚ್ಛೆ. ಅಂತು ಫಲಜ್ಯೋತಿಷದಲ್ಲಿರುವ ತತ್ವವು ಅಬಾಧಿತವಾಗಿರುವುದೆಂದು ಮತ್ತೊಮ್ಮೆ ಹೇಳಿಬಿಡುವೆನು.

ಫಲಜ್ಯೋತಿಷವು ನಿಷ್ಫಲವಾಗಿರುವುದಿಲ್ಲ. ಅದರ ಸಿದ್ಧಾಂತಗಳಿಂದ ಅನೇಕ ಗಡುಚು ಪ್ರಶ್ನೆಗಳಿಗೂ ಉತ್ತರ ಕೊಡಲಿಕ್ಕೆ ಬರುವುದು. ಅನೇಕ ವಿಷಯಗಳೂ ತಿಳಿದು ಬರುವುವು. ಇದೇ ನೋಡಿರಿ. ತನ್ನಂತಿರುವ ಜೀವಿಯನ್ನುತ್ಪನ್ನಮಾಡುವುದು ಪ್ರಕೃತಿಯ ಸಾಮಾನ್ಯವೂ ಸಾಧಾರವೂ ಆದ ನಿಯಮ. ಆದರೆ ಇದರ ವಿರುದ್ಧವಾದ ‘ ತನ್ನಿಂಪ ವಿಸದೃಶವಾದ ಜೀವಿಯನ್ನುತ್ಪನ್ನಮಾಡುವುದೂ ಪ್ರಕೃತಿಯ ಸಾಮಾನ್ಯ ನಿಯಮವೆಂಬುದು ಡಾರ್ವಿನ್ ಮಹಾಶಯನ ವಿಕಾಸ (ಉತ್ಕ್ರಾಂತಿ) ವಾದದಲ್ಲಿದೆ. ಅದೇಕೆ? ಆ ವಿಕಾಸವಾದವು ಈ ನಿಯಮದ ಆಧಾರದ ಮೇಲೆಯೇ ನಿಂತಿದೆ. ಈ ನಿಯಮವು ಎಲ್ಲಿಂದ ಬಂದಿತು, ಯಾವ ಆಧಾರದ ಮೇಲಾಯಿತು, ಎಂದು ಕೇಳಿದರೆ ‘ಪ್ರಕೃತಿಸಿದ್ಧಂ ಧರ್ಮವಾಗಿರ್ಪುದು’ ಎಂಬುದಲ್ಲದೆ ಎರಡನೆ ಉತ್ತರವೇ ಇಲ್ಲ. ನಮ್ಮ ಫಲಜ್ಯೋತಿಷದ ಸಿದ್ಧಾಂತಗಳಿಂದ ಇದಕ್ಕೆ ಉತ್ತರ ಕೊಡಬಹುದೆಂದೆನಿಸುತ್ತದೆ. ಅದು ಆವದೆಂದರೆ ಗ್ರಹಗಳ ವಿಶಿಷ್ಟ ಯೋಗಗಳ ಮೂಲಕ ಪ್ರಾಣಿಯ ಶರೀರರಚನೆಯಲ್ಲಿ ವ್ಯತ್ಯಾಸವಾಯಿತೆಂದು. ಇದೊಂದರಲ್ಲಿ ಇನ್ನೆಷ್ಟು ಚಮತ್ಕೃತಿ ಇರುವುದೋ ನೋಡಿ. ಇಂತಹ ವಿಶಿಷ್ಟ ಗ್ರಹಯೋಗದಿಂದ ಇಂತಹ ಪರಿಣಾಮವಾಗುತ್ತದೆಂದು ತಿಳಿದರೆ ಮನುಷ್ಯಪ್ರಾಣಿಯು ಈ ಭೂಮಿಯಲ್ಲಿ ವಾಸಿಸಲಿಕ್ಕೆ ಹತ್ತಿ ಎಷ್ಟು ದಿವಸ ಆಯಿತು, ಎಂಬುದನ್ನು, ಅಷ್ಟೇ ಏಕೆ ಪ್ರತಿಯೊಂದು ಪ್ರಾಣಿಯು ಉತ್ಪನ್ನವಾದ ಕಾಲವನ್ನು ಕಂಡುಹಿಡಿಯಬಹುದು. ಪಾಶ್ಚಾತ್ಯರು ಈ ಫಲಜ್ಯೋತಿಷದ ತತ್ವವನ್ನು ನಂಬಿ ಅದರಲ್ಲಿ ತಲೆಹಾಕಿದರೆ ಮಹಾಶಯ ಡಾರ್ವಿನ್ನನ ಮೇಲೆಯೂ ಜಗತ್ತಿನ ಮೇಲೆಯೂ ಉಪಕಾರವಮಾಡಿದಂತಾಗುವುದು. ನಾವೇನು ಮಾಡಬೇಕು ? ಅವರ ಮೋರೆಯನ್ನು ನೋಡುತ್ತ ಅವರು ಹೇಳಿದ್ದಕ್ಕೆ ಗೌಳಿತ್ತಿನಂತೆ ಗೋಣು ಹಾಕುತ್ತ ನಮ್ಮ ಶಾಸ್ತ್ರ ಖರೆ ನಮ್ಮ ಶಾಸ್ತ್ರ ಖರೆ ಎಂದು ಕೂಡಬೇಕು. ಮತ್ತೇನದೆ !

---

# "ಶ್ರೀವೆಂಕಟೇಶವಿಜಯ"

ಲೇ: —ನಾರಾಯಣ ವ್ಯಾಸರಾವ ಕುಲಕರ್ಣಿ ಬೀ. ಏ.

ಕರ್ನಾಟಕದಲ್ಲಿಯ ಆಧುನಿಕ ಕಾವ್ಯಗಳೆಷ್ಟೋ ಇನ್ನೂ ಮುಂದುವರಿಯದೇ ಮೂಲೆಯಲ್ಲಿಯೇ ಉಳಿದಿರುವವು. ಇಂಥ ವುಗಳಲ್ಲೊಂದಾದ ಶ್ರೀವೆಂಕಟೇಶವಿಜಯವು ಪ್ರೌಢಕಾವ್ಯಗ ಳಲ್ಲೊಂದಾಗಿದೆಯೆಂದು ನಿಸ್ಸಂದೇಹವಾಗಿ ಹೇಳಬಹುದು. ಇದನ್ನು ರಚಿಸಿದವರು ಹರ್ಲಾಪುರದ ಶಾನುಭೋಗರಾದ ವೆಂಕಟೇಶ ರಾಮಚಂದ್ರ ಕುಲಕರ್ಣಿಯವರು. ಇವರೇನು ಉಚ್ಚಶಿಕ್ಷಣವನ್ನು ಪಡೆದ ಪದವೀಧರರಾಗಿರಲಿಲ್ಲ. ಇವರ ಲ್ಲಿಯ ವಿಶೇಷಗುಣವೆಂದರೆ ಪುರಾಣಪ್ರವಚನವು. ಸಂಸ್ಕೃತ ದಲ್ಲಿಯೂ ಕನ್ನಡದಲ್ಲಿಯೂ ಬಹುಮನೋಹರವಾಗಿ ಪುರಾಣ ವನ್ನು ಹೇಳುತ್ತಿದ್ದರಂತೆ.

ಇವರು ತಮ್ಮ ಕಾವ್ಯಕ್ಕೆ ಮುರವೈರಿಯಾದ ಶ್ರೀಮನ್ನಾರಾ ಯಣನೇ ಕಾರಣನೆಂದು ಪ್ರಸ್ತಾವನೆಯ ಪ್ರಾರಂಭದಲ್ಲಿದ್ದ ಈ ವಾಕ್ಯದಿಂದ ಸ್ಪಷ್ಟಪಡಿಸಿರುವರು :—"ಒಂದಾನೊಂದು ದಿವಸದೊಳ್ಮುರವೈರಿಯುನ್ನಯ ಸ್ವಪ್ನಗತನಾಗಿ, ನಿಜಮುರಲಿ ಮೃದುಮಧುರಾಲಾಪಮಂ ಗೈದೆಚ್ಚರಿಸಿ ಸ್ವಕಲ್ಯಾಣಚಾರಿ ತ್ರ್ಯಮಂ ಜಗತ್ಕಲ್ಯಾಣಕ್ಕೋಸುಗಂ ಮಂದಜ್ಞರಿಗೆ ಪೇಳ್ವ ಕೇಳ್ವುದಕ್ಕೆ ಸೌಲಭ್ಯಮಪ್ಪಂತೆಯುಂ ರಸಿಕರ್ಗೆ ಚಿತ್ತರಂಜನ ಮಪ್ಪಂತೆಯುಂ ಕವಿತಾಬದ್ಧಮಾಗಿ ರಚಿಸೆಂದಾಜ್ಞಾಪಿ ಸಲ್ತಾಂ"

ಈ ಕಾವ್ಯವು ಒಟ್ಟು ಹದಿಮೂರು ಸಂಧಿಗಳಾಗಿ ವಿಭಾಗಿ ಸಲ್ಪಟ್ಟಿದೆ. ಮೊದಲನೆಯ ಸಂಧಿಯಲ್ಲಿ ದೇವತಾಸ್ತೋತ್ರವನ್ನು ಮಾಡಿ, ತಮ್ಮ ಕುಲದೇವತೆಯಾದ ಗದುಗಿನ ವೀರನಾರಾಯ ಣನನ್ನು ಪ್ರಾರ್ಥಿಸಿ, ತಮ್ಮ ವಂಶವನ್ನೂ ಹೆಸರನ್ನೂ ಈ ರೀತಿಯಾಗಿ ಹೇಳಿರುವರು:—

" ಈ ವೇಂಕಟೇಶವಿಜಯೋತ್ಸವದ ಸದ್ವರ್ಣ ।
ನಾವಿಶೇಷಂಗಳಂ ಕನ್ನಡಿಸಿ ನುಡಿದ ಕವಿ ।
ಯಾವನೆನೆ ವರಗದುಗು ವೀರನಾರಾಯಣಾಂಕಿತದಿ
ಹರಲಾಪುರದೊಳು ॥
ದೇವವಿಪ್ರನ್ಮುಕುಟಮಣಿ ಸಣ್ಣರಾಮಾಖ್ಯ ।
ನಾವಸುಧಿವಿಸ್ತರಿತಕೀರ್ತಿಯಾಶನ ಸುತಂ ।
ಭಾವಿನಂದಾದಾಂಕನಾತನ ಸತೀಮಣಿಯು ಯಮುನಾಂಬೆ
ಯೆನಿಸಿಪ್ಪಳು ॥
ವರಗರ್ಭಕಮಲಾಕರೋಬ್ಜಾತ ರಾಜೀವ ।
ನರವಿಂದನಾಭಪ್ರಿಯಂ ಕುಂಭಸಂಜಾತ ।
ನುರುಗೋತ್ರಜಂ ವಿನುತ ದೊಡ್ಡರಾಮಾಖ್ಯಂಗೆ ಪಾಲಕಂ
ತಾನೆನಿಸುವ ॥
ಸರಸಕವಿತಾಸಾರ್ವಭೌಮನಹ ಕೋವಿದಂ ।
ಕರಣಿಕಂ ವೆಂಕಟೇಶಾಖ್ಯನೀಕೃತಿಯನುರೆ ।
ಹರಿಪುರದಭವತೀಶನ ಕೃಪಾವಲೋಕನದಿ ಪೇಳಿದಂ
ಬುಧರೊಪ್ಪಲು" ॥

ಈ ಪದ್ಯಗಳಿಂದ ಕವಿಯು ತನ್ನ ತಂದೆತಾಯಿಗಳ ಹೆಸ ರನ್ನೂ ತನ್ನ ಹೆಸರನ್ನೂ ಗೋತ್ರವನ್ನೂ ಸ್ಪಷ್ಟವಾಗಿ ತಿಳಿಸಿ ಹೇಳಿರುವನು. ಈ ಪದ್ಯಗಳ ಮೇಲಿಂದಲೇ ಈ ಕವಿಯ ಯೋಗ್ಯತೆಯನ್ನು ಸಹಜವಾಗಿ ಕಂಡುಹಿಡಿಯಬಹುದು.

ಎರಡನೆಯ ಸಂಧಿಯಲ್ಲಿ ವೆಂಕಟೇಶದೇವರ ಗಿರಿಗೆ ನಾಲ್ಕು ಯುಗಗಳಲ್ಲಿ ನಾಲ್ಕು ಹೆಸರು ಬಂದ ಇತಿಹಾಸವು ವರ್ಣಿತ ವಾಗಿದೆ. ಈ ಸಂಧಿಯಲ್ಲಿ ವರ್ಣಿತವಾದ ಸರೋವರದ ವರ್ಣ ನೆಯನ್ನು ಓದಿದರೆ ಜೈಮಿನಿಭಾರತದಲ್ಲಿಯ ಹತ್ತೊಂಬತ್ತನೆಯ ಸಂಧಿಯಲ್ಲಿಯ ಅಡವಿಯ ವರ್ಣನೆಯು ನೆನಪಾಗದಿರದು. ಮಾದರಿಗಾಗಿ ಒಂದು ಪದ್ಯವನ್ನಿಲ್ಲಿ ಕೊಡುವೆವು:—

"ಇರುಳಂತೆ ಪಗಲಂತೆ ದಿವದಂತೆ ಪರಿಕಿಸಲ್ ।
ವರಸುರಸಭಾನುರಮ್ಯಂ ಸದಾನಿಧಿಯಂತೆ ।
ಹರಿಯಂತೆ ವಿಮಲಭಾರತಿಯಂತೆ ಪದ್ಮಜಾತಾತಿಶೋಭಿಯು
ಮೆನಿಸಿರೆ ॥
ನರಪಾಲನಂತೆ ವನದಂತೆ ರಘುರಾಮನಂ ।
ತಿರೆ ಭುವನಜಾಮಲಶ್ರೀಧರಂ ಮಿಂಚಿನೊ ।
ಲ್ಸುರರ ಡಾಂಭಿಕರ ತೆರದಿಂ ಸಂಸರ್ವದಾನಿಮಿಷರಾಜಿತ
ಮಾದುದು" ॥

ಕಲಿಯುಗದಲ್ಲಿ ಈ ಗಿರಿಗೆ ವೆಂಕಟಾಚಲವೆಂಬ ಹೆಸರು ಹೇಗೆ ಬಂದಿತೆಂಬುದನ್ನು ಮಾಧವನ ಕಥೆಯಿಂದ ಕವಿಯು ವಿಸ್ತರಿಸಿರುವನು. ಒಂದಾನೊಂದು ದಿವಸ ಬ್ರಾಹ್ಮಣೋತ್ತಮ

ನಾವ ಮಾಧವನು ಓರ್ವ ಚಾಂಡಾಲಕನ್ನಿಕೆಗೆ ಮನಸೋತು, ಅವಳ ಸಂಗಡ ಸಂಭೋಗವನ್ನಪೇಕ್ಷಿಸಿದನು. ಇದೇ ಮುಂದೆ ವೆಂಕಟಾಚಲವೆಂಬ ನಾಮಧೇಯವು ಬರಲು ಕಾರಣವಾಯಿತು. ಕವಿಯು ಆ ಚಾಂಡಾಲಕನ್ನಿಕೆಯನ್ನು ಈ ರೀತಿಯಾಗಿ ವರ್ಣಿಸಿ, ತನ್ನಲ್ಲಿಯ ಕಲ್ಪನಾಚಾತುರ್ಯವನ್ನು ಹೊರಗೆಡವಿರುವನು:—

"ಸರಸಿಜಚರಣೆ ಸಾರಸಾಕ್ಷಿ ತನಸನಧರೆ ।
ವರಸೀತಕರವದನೆ ಸುಂದರಚುಬುಕೆ ಸೂಕ್ಷ್ಮ ।
ತರಮಧ್ಯನೋಲ್ಲಸಿತೆ ಪಾವಸೇವಿತಹಂಸೆ ಸೈಕತಸಿತಂಬೆ ತಾನು ॥
ಉರಸೋಗೆದುರುವಿನೊಯ್ಯಾರಿ ಸೌಭಾಗ್ಯರಸ ।
ಭರಿತ ಗುರುಕುಚಭಾರೆ ಸಂಭೋಗ ಸಂಪ್ರೌಢೆ ।
ಯರವಿಂದಶರನ ಮದಿಯಾನೆಯುಂದದಿ ಮಾಧವನ ಕಣ್ಗೆ ಕಾಣಿಸಿದಳು ॥
ಅರರೆ ಮನ್ಮಥಮೂಲಮಂತ್ರಾಧಿದೇವತೆಯೊ ।
ವಿರಹಿಗಳ ಕೊಲೆಗೆಂದು ಮನಸಿಜನು ಮಸೆದಲಗೊ ।
ಕರದಿ ಕಂದರ್ಪ ದರ್ಪದಿ ಪಿಡಿದ ಘನತರೋದ್ದಂಡನೋ ಮಾರಪಿತನು ॥
ಧರಿಸಿರ್ದ ಮೋಹಿನಿಯ ರೂಪವೋ ಶಂಬರಾ ।
ಸುರಶತ್ರುವಿನ ಜಯಧ್ವಜವೊ ಮದನಂ ಮುನೀ ।
ಶ್ವರರ ಮೃಗಬ್ಯಾಂಟಗೆಂದೊಡ್ಡಿರ್ದ ಬಲೆಯೊ ವನಿತೆಯೋಯೆನಲ್ರಾಜಿಸಿದಳು" ॥

ಮುಂದೆ ಇದೇ ಮಾಧವನೇ ವೆಂಕಟಾಚಲವೆಂದು ನಾಮಧ್ಯೇಯ ಬರಲು ಕಾರಣನಾದನೆಂಬುದನ್ನು ಹೇಳಿ, ಈ ಸಂಧಿಯನ್ನು ಮುಗಿಸಿರುವನು.

ಮೂರನೆಯ ಸಂಧಿಯಲ್ಲಿ ಶ್ರೀವಿಷ್ಣುವು ವೈಕುಂಠವನ್ನು ಬಿಟ್ಟು ಭೂಲೋಕಕ್ಕೆ ಬಂದ ಕಥೆಯಿರುವದು. ಈ ಸಂಧಿಯಲ್ಲಿ ಸ್ವಾಮಿಪುಷ್ಕರಣಿಯನ್ನು ಕವಿಯು ಹೀಗೆ ವರ್ಣಿಸಿರುವನು:—

"ಗಿರಿನಿಕಟದೊಳ್ಸ್ವಾಮಿಪುಷ್ಕರಣಿಯೆಂದೆನಿಪ ।
ವರಸರಸಿಜಾಕರಂ ರಮಣೀಯಮೆಂದೆನಿಪು ।
ದರರೆ ಮನಸಿಜಪಿತೃಪ್ರೀತಮಾಗಿಯು ಮನೋಹರವು ನೈರಂತರದೊಳು ॥
ಸರಸಾಂತರಂಗ ಮಾಗಿಯು ಭಾವಿಸಲ್ ಮಹಾ ।
ಸುರಸೇವಿತಂ ಮಧುಪರಾಗ ಸಂಯುತನಾಗಿ ।
ಕರಮಿರ್ದೊಡಂ ಶುಕಾದಿದ್ವಿಜ ಪ್ರೀತ್ಯಾನುಕೂಲ ಮಾಗಿರ್ಪುದಲ್ತೆ ॥
ಹರನಂತೆ ವಿಷಧಾರಿ ವಿಷಧಾರಿಯೋಲ್ಪರಂ ।
ವರಸನಬ್ಜಾಸ್ಪದಂ ವರಸದಬ್ಜಾಸ್ಪದನ ।
ತೆರದಿಂದ ಹರಿಸಖಂ ಹರಿಸಖನವೋಲ್ಶಿವಾನಂದಿಯು ಶಿವಾನಂದಿಯಾ ॥
ತೆರದಿ ಹಂಸಪ್ರಿಯಂ ಹಂಸಪ್ರಿಯನವೋಲ್ಬ ।
ಚುರವೆನಿಪಪಾಂಗಶಿಖಿ ಮಿತ್ರಸೇವ್ಯಾಕ್ಷಿಸುರು ।
ಚಿರತರವೆನಲಪಾಂಗಶಿಖಿ ಮಿತ್ರಸೇವ್ಯಾಕ್ಷಿಸುರುಚಿರನ ನೆರೆಪೋಲ್ತುದು" ॥

ಚೋಳರಾಜನ ಪಟ್ಟದರಸಿಯು ಗೋಪಾಲಕರನ್ನು ಬೆದರಿಸಿದಳೆಂಬಲ್ಲಿಗೆ ಈ ಸಂಧಿಯ ಸಮಾಪ್ತಿಯಾಗಿರುವದು.

ನಾಲ್ಕನೇ ಸಂಧಿಯಲ್ಲಿ ಚೋಳರಾಜನ ಕಥೆಯು ಸವಿಸ್ತಾರವಾಗಿ ವರ್ಣಿತವಾಗಿರುವದು. ಗೋಪಾಲಕನ ಮಾತನ್ನು ನಂಬದೇ ಚೋಳರಾಜನು ಸ್ವತಃ ಅರಣ್ಯಕ್ಕೆ ಬಂದು ಗೋವನ್ನು ಹೊಡೆಯ ಹೋಗಲು, ಶ್ರೀಹರಿಯು ಆ ಹೊಡತವನ್ನು ತಾನೇ ಸ್ವೀಕರಿಸಿ, ಹೇಗೆ ಮರುಗಿದನೆಂಬುದನ್ನು ಕವಿಯು ಬಹಳೇ ಸರಸವಾಗಿ ವರ್ಣಿಸಿರುವನು:—

"ತಪ್ಪಿರ್ದಕೊಡಲಿಯಕಿಘಾತನುಂ ಹುತ್ತಿನೊಳ ।
ಗಿಪ್ಪಹರಿತನ್ನುತ್ತಮಾಂಗದೋಳ್ ಧರಿಸಲ್ಕೆ ।
ಬಪ್ಪರುಧಿರಂ ಸಪ್ತತಾಲಪ್ರಮಾಣದಿಂದುಚ್ಚಳಿಸೆಗೋಪಾಲನು ॥
ಒಪ್ಪಿದಂ ಕಾಲಂಗೆತಾನಿದಂ ನೋಡುತ್ತ ।
ಹೆಪ್ಪಾಯ್ತುರಕುತಮುರಿ ಹರಿಹರಿದು ಶ್ರೀಧರಗೆ ।
ತಪ್ಪಮಾಡಿದ ಖಳರ್ಗಿಹಪರದಿ ಸೌಖ್ಯಂಗಳಿರ್ದಪವೆ ಮೂಲೋಕದಿ ॥
ಶಿರಿಯು ಯನ್ನಗಲಿರ್ದಬಳಲಿಕೆಯದೊಂದು ಸಲೆ !
ವರಮಿತ್ರತಾಪ ಸಮ್ಮೇಲನದೊಳುದಿಸಿದಾ ।
ಸರದಬಳಲಿಕೆಯೊಂದು ದನಗಾವಿ ಕೈಯಿಂದನಾಂಬಡಿಸಿಕೊಂಡ ಬಳಿಕಾ ॥
ಧರಿಯೊಳಗೆ ಮಾನವೆಲ್ಲಿಹುದುದಾರ್ಗುಸುರುವೆನು ।
ಪರತರದ ದುಃಖತಾಂ ರಕ್ತಸಂಬಂಧಮಿದು ।
ನೆರೆಬಿಡದದೆಂದು ಬಡತನವಡಸಿದನ ಕೆರದಿ ಹರಿಹಲುಬಿದಂಬಿಲಿದೊಳು" ॥

ಪಶುಪಕ್ಷಿಗಳು ಸಹ ಇದನ್ನು ಕಂಡು ಹೇಗೆ ಹಲುಬಿದು ವೆಂಬುದನ್ನು ಕವಿಯು ಈ ರೀತಿಯಾಗಿ ವರ್ಣಿಸಿರುವನು:—

"ಮೂರುಲೋಕದ ತಂದೆಗಿಂತಾದುದೇ. ಯೆಂದು |
ಪಾರುತಿಹ ಪಕ್ಷಿಗಳ್ರೋದನದ ನೆವದಿಂದ ।
ಚೀರಿದುವು ಘೋರಿಂದು ಮಾರಮಣನಾಯಾಸಮುಂಕಂಡು ಮರುಗಿಮರುಗಿ ॥
ತೋರುವೀಭುವನದೊಳ್ಪದರಕಾಹಾರಮಂ ।
ಬಾರಿಬಾರಿಗೆ ಕೊಡದೆ ಬಳಲಿಸಿದರವಯವಂ ।
ಭಾರಿದುಃಖಿಪ ರೀತಿಯಿಂದಲಾಕಾಲದೊಳ್ವೇಳಲೇನಧ್ಭುತ ವನು ॥
ಧರೆಯು ದುರ್ಜನನವೋಲ್ಗಿರಿವರಂ ಸುಮ್ಮಾನಿರೆ ।
ಹರಿಗಾಗುತಿಹ ದುಃಖಮಂ ಕಂಡು ನೀನೀಗ ।
ಪರಮಕಲುಕೃದಯನಲ್ಲವೆ ತನ್ನನೇ ಪೊಂದಿ ಬರುತಿರುವ ಮಾನದಂಗೆ ॥
ನಿರುಪಮದ ಸಂತಾಪ ಮಾದರುಂಹಾಯೆಂದು ।
ಕರಗದಿರ್ದಪರಿಪೇಳೆಂದು ಪಳಿಯುತಲಳುವ ।
ಸರಣಿಯಿಂ ವಿಹಗತಲೆ ಚೀರಿದವು ಮುರಹರನ ಘಾಯ ಮಂ ಕಂಡು ಮರುಗಿ ॥"

ಇದೇ ಸಂಧಿಯಲ್ಲಿಯೇ ವೆಂಕಟೇಶನು ಬಕುಲಾ ದೇವಿ ಯನ್ನು ಪಡೆದ ಕಥೆಯು ವರ್ಣಿತವಾಗಿದೆ.

ಐದನೆಯ ಸಂಧಿಯಲ್ಲಿ ವಸಂತ ಋತುವಿನ ವರ್ಣನೆಯನ್ನು ಮಾಡಿ, ಕವಿಯು ರಾಜಕನ್ನೆಯಾದ ಪದ್ಮಾವತಿಯು ಕುಸು ಮದುಪಚಯದನೆವದಿಂದ ಉಪವನಕ್ಕೆ ಬಂದ ವೃತ್ತಾಂತ ವನ್ನು ವರ್ಣಿಸಿರುವನು. ಈ ಸಂಧಿಯಲ್ಲಿಯ ವಸಂತ ಋತು ವರ್ಣನೆಯು ಬಹಳೇ ಹೃದಯಂಗಮವಾಗಿರುವದು. ವಸಂತ ಋತುವು ಹೇಗೆ ಬಂತೆಂಬುದನ್ನು ಕವಿಯು ಈ ರೀತಿಯಾಗಿ ಹೇಳಿರುವನು:—

"ರತಿಕಲಹಮಂ ಮಾಡುತಿಹ ಸಾಪರಾಧರಂ ।
ಜತಿಯಾಗಿ ಪಿಡಿದೆಳೆಸಲೋಸುಗಂ ಮಂದಮಾ ।
ರುತನೆಂಬ ಚಾರಂಗೆ ಮಲ್ಲಿಕಾಪಾರಿಜಾತಾದಿ ಮಕರಂದ ಮೆನಿಪಾ ॥
ಅತಿಭಯದ ನಿಜಲಾಂಛನವಕಟ್ಟಿತಾನಟ್ಟಿ ।
ವಿತತಕೇಳೀಗೃಹದ ಚಾವಡಿಗೆ ತರಿಸಿ ಭೂ ।
ಪತಿವಸಂತಂ ಪರಸ್ಪರರಂಗಬಂಧನವ ವಿಧಿಸುತಂ ತಾಂ ಬಂದನು ॥"

ಆಕಾಶರಾಜನು ತನ್ನ ಮಗಳಿಗೆ ಪದ್ಮಾವತಿಯೆಂಬ ನಾಮ ಕರಣಮಾಡಿದ ರೀತಿಯನ್ನು ಕವಿಯು ಈ ಪ್ರಕಾರವಾಗಿ ವರ್ಣಿಸಿರುವನು:—

"ಪದ್ಮಜಾತೆಗೆ ಪದ್ಮನಯನೆ ಪದ್ಮಾನನೆಗೆ ।
ಪದ್ಮಪಾದೆಗೆ ಪದ್ಮಪಾಣಿ ಪದ್ಮೋದರಿಗೆ ।
ಪದ್ಮಜಾಂಬೆಗೆ ಪದ್ಮವಾಶಿಗೆ ಸುಪದ್ಮಗಂಧಿಗೆ ಪದ್ಮಶರ ಮಾತೆಗೆ ॥
ಪದ್ಮಾವತಿಯು ಯೆಂದು ನಾಮಧೇಯುವ ರಚಿಸೆ ।
ಸದ್ಮದಿ ರಮಾಹಂಪ್ರಮುರ ತೆರದಿ ಬೆಳೆದರು ಕ ।
ಕುದ್ಮತೀವಲ್ಲಭಂ ನೋಡುತ ಮುದಂದಳೆಯೆ ಗಲಿತಶೈಶ ವರಾದರು ॥"

ಈ ಸಂಧಿಯಲ್ಲಿ ಪದ್ಮಾವತಿಯು ತನ್ನ ಸಖಿಯರೊಂದಿಗೆ ಕುಸುಮದುಪಚಯದ ನೆವದಿಂದ ಉದ್ಯಾನಕ್ಕೆ ಬಂದಳೆಂದು ಹೇಳಿದ ಕಥೆಯನ್ನು ಮುಗಿಸಿರುವನು.

ಆರನೇ ಸಂಧಿಯಲ್ಲಿ ನಾರದನು ಅಕಸ್ಮಾತ್ತಾಗಿ ಆ ಉದ್ಯಾ ನಕ್ಕೆ ಬಂದು ಪದ್ಮಾವತಿಗೆ ಸಾಮುದ್ರಿಕೆಯನ್ನು ಹೇಳಿದ ಕಥೆಯು ವರ್ಣಿತವಾಗಿದೆ. ಕುಸುಮಗಳನ್ನಾರಿಸುವದಕ್ಕಾಗಿ ಬಂದ ಯುವತಿಯರು ಹೇಗೆ ತೋರಿದರೆಂಬುದನ್ನು ಕವಿಯು ಹೀಗೆ ವರ್ಣಿಸಿರುವನು:—

"ಅಮರಾಂಗನೆಯರಂತೆ ಸಾರಭವನಾಶ್ರಿತೆಯ ।
ರಮಲಶಿವೆಯಂತೆ ಕೃತಪಾದಪಾವನತೆಯರ ।
ಮಮಲಂಕೆಯರಸನಂದದಿ ಸುಮನಸೇಷ್ಟಾಪಹಾರಿಯರು ಪೇಂದ್ರನಂತೆ ॥
ಕಮಲಾಮಲಕರಾವನಂಬಸುಶೋಭೆಯರ್ ।
ಸುಮನಸ್ತರಂಗಿಣಿಯ ತೆರದಿ ಪರಿಯುವದರಿಂ ।
ಸಮುದಂಚಿತೆಯರಾಗಿ ವಿಧವಿಧದಲಗ್ರೋಯ್ದು ಸಮಯ ದೊಳು ರಾಜಿಸಿದರು ॥"

ಇದೇ ಸಂಧಿಯಲ್ಲಿಯೇ ವೆಂಕಟೇಶನಿಗೂ ಪದ್ಮಾವತಿಗೂ ಆದ ಸಮಾಗಮವೂ ವರ್ಣಿತವಾಗಿದೆ.

ಏಳನೇ ಸಂಧಿಯಲ್ಲಿ ಪದ್ಮಾವತಿಯ ವಿರಹ ವರ್ಣನೆಯೂ, ದೇವರು ಕೊರವಿಯ ರೂಪದಿಂದ ನೋಟವನ್ನು ಹೇಳಿದ ವಿಸ್ತಾ ರವೂ ವರ್ಣಿತವಾಗಿವೆ. ವೆಂಕಟೇಶನು ಕಲ್ಲಿನ ಹೊಡತಕ್ಕೆ ಓಡಿ ಹೋಗಲು, ಇತ್ತಲಾಪದ್ಮಾವತಿಯು ವಿರಹತಾಪದಿಂದ ಕನಸಿನಲ್ಲಿ ಕೂಡ ವೆಂಕಟೇಶನನ್ನೇ ಧ್ಯಾನಿಸುತ್ತ ಅವನಿಗೆ

ಮಾನಸಪೂಜೆಯನ್ನೀಯುತ್ತಿದ್ದಳೆಂಬುದನ್ನು ಕವಿಯು ಈ ರೀತಿಯಾಗಿ ವರ್ಣಿಸಿರುವನು:—

"ತರುಣಿಮಣಿ ಮೂರ್ಛೆಯಲಿ ಕಾಂತನನು ಕಾಣುತಲೆ ।
ಕರುಣರಸದಲಿ ಸ್ನಾನಮಾಡಿಸುತ ತನುಶಾಂತಿ ।
ಯುರುವಸನ ಮುಡಿಸುತ್ತ ತೊಡೆಯೆಂಬ ಪೀಠದಲಿ ಕುಳ್ಳಿರಿಸಿ ಕುಚಗಳಿಂದ ॥
ಶಿರಿಕಂಡಮಂ ಮುಗುದರಿಸಿಳು ನಗೆ ಮಲ್ಲಿಗೆಯ ।
ಸರಹಾಕಿ ಭೋಜನಕೆ ಮುಖತಳಿಗೆಯಂ ರಚಿಸಿ
ಸುರತಸುಖಸಾರನುಣಿಸುತಲಿವಳು ಪತಿಗೆ ಮಾನಸ ದಕ್ಷಿಣೆ ಯನಿತ್ತಳು ॥"

ಕಾಮ ಪೀಡಿತಳಾದ ಪದ್ಮಾವತಿಯು ವಿರಹತಾಪದಿಂದ ಕೃಶಳಾಗಿದ್ದಳೆಂಬುದನ್ನು ಕವಿಯು ಬಹಳೇ ಮನೋಹರವಾಗಿ ವರ್ಣಿಸಿರುವನು:—

"ಬೆರಳೊಳಿಹ ಭಂಗಾಗದುಂಗುರಂ ಕಂಕಣಕೆ ।
ಸರಿಯಾಯ್ತು ಕಾಲೊಳಗೆ ಶೋಭಿಸುವ ಪೈಜಣಂ ।
ಸುರುಚಿರದ ವಡ್ಯಾಣದಂತಾದವಾಗಳುಂ ಕುಪ್ಪುಸಂ ಚಲ್ಲಣಕ್ಕೆ ॥
ಪರಿಸಮತೆಯಂ ಪೊಂದೆ ಕುಚಗಳಿರುಬಿನೊಳಿಪ್ಪ ।
ಶಿರಿಕಂಡ ಕಾಡಿಗೆಯವೋಲಾಗೆ ಸಖಿಯುಳಿಗೆ ।
ವಿರಹಾಗ್ನಿ ವಹಿಸುತಿರೆ ಮನುಮಥಂ ಕಾಮಿಗಳನೇನಾದರುಂ ಮಾಳ್ಪನು ॥
ಹಾಸಿಕೆಯೊಳೊರಗುವಳು ಮಲಗುವಳು ಗಾಳಿಯಂ ।
ಬೀಸುತಿರೆ ಸೂಸುತಿರೆ ಪರಿಮಳವ ಸಖಿಯುವಕೆ ।
ಗಾಸಿಯಾದಳು ಮತ್ತೆ ವಿರಹಾಗ್ನಿಯಿಂದೇಳುವಳು ಬೀಳುವಳು ತಾಪದೀ ॥
ಆ ಸುದತಿಯಾಟಮಂ ಬೇಟಮಂ ನೋಡದಿರೆ ।
ಪೂಶರನ ಕಗ್ಗೊಲೆಗೆ ಸುಗ್ಗಾಗದವರಾರು ।
ಕಾಶಿಗೆಯು ಸರಿಯಲ್ಲ ಪುರುಷನಿಲ್ಲದ ಬಾಳು ಹರಿಯದಲಿ ನೀರೆಯರ್ಗೆ ॥"

ವೆಂಕಟೇಶನ ಕೊರವಿಯು ರೂಪವು ಹೇಗೆ ಕಾಣಿಸಿತೆಂಬುದನ್ನು ಈ ಪದ್ಯದಲ್ಲಿ ವರ್ಣಿಸಿರುವನು :—

"ಹರಿದಿರ್ದ ಕಂಚುಕಂ ಛಿದ್ರವಸನವುಮದಿರ್ದ ।
ಶಿರ ಜೋಲ್ವ ಮೊಲೆ ಮಾಸಿದಂಬರದಿ ಬೆನ್ನೆ ಕ ।
ಟ್ಟಿರುವ ಶಿಶು ಬೆರಳೊಳಗೆ ತಳೆದಿರ್ದ ತಾಮ್ರಮಯದುಂಗುರುಗಳಿಂದಲವಳು ॥
ಪರಿಲಸಿತೆಯಾಗಿಯುಮಜಾಂಡಮಂ ಗುಲ್ಮಮಂ ।
ವಿರಚಿಸಿ ಸರೋಜಜಾತನ ಬಾಲನೆಂದೆನಿಸಿ ।
ಕೊರವಿಯುಳು ನಾಶಾಯ್ಣಪುರದೊಳಿಹ ಮನೆಮನೆಗೆ ಬಂದಳತಿವೇಗದಿಂದಾ ॥"

ಎಂಟನೆಯ ಸಂಧಿಯಲ್ಲಿ ಶ್ರೀವೆಂಕಟೇಶನಿಗೆ ಪದ್ಮಾವತಿಯನ್ನು ಕೊಡುವದಕ್ಕೆ ಆಕಾಶರಾಜನು ಪತ್ರವನ್ನು ಬರೆದ ವೃತ್ತಾಂತವು ವರ್ಣಿತವಾಗಿದೆ. ಈ ಸಂಧಿಯಲ್ಲಿ ಕವಿಯು ತನ್ನ ಕವಿತಾಶಕ್ತಿಯ ಹೆಚ್ಚಳದ ಪ್ರತಿಭೆಯನ್ನು ತೋರಿಸಿರುವನು. ಇಡೀ ಸಂಧಿಯಲ್ಲಿ ತುಟಿಗೆ ತುಟಿಯು ಕೂಡುವ ಅಕ್ಷರಗಳನ್ನು ಉಪಯೋಗಿಸಿಲ್ಲವೆಂದು ಕವಿಯು ಈ ರೀತಿಯಾಗಿ ಒಳ್ಳೇ ಅಭಿಮಾನದಿಂದ ಸಾರಿ ಹೇಳಿರುವನು:—

"ಈ ಸಂಧಿ ವೃತ್ತದೊಳು ತುಟಿಗೆ ತುಟಿಯೊಂದುವದು ।
ದೂಸರವು ತಾನೆಂದು ಹರಿನಗರದಧಿನಾಥ ।
ಶ್ರೀಸತೀಕಾಂತನತಿದಯದೋರಿ ಕವಿಹೃದಯಸುಕುಟೀರವಾಸಿಯಾಗಿ ॥
ಸೋಸಿರ್ದ ಕನಕಕ್ಕೆ ಕುಂದನವನಿಟ್ಟಂತೆ ।
ಲೇಶವಾದರು ಕಂದುತಾರದಲೆ ನುಡಿಸಿದನು ।
ಸೂಸುವಾನಂದದಲಿ ಗ್ರಹಿಸುವದು ಸಜ್ಜನರು ಹೀಯಾಳಿಸದೆ ಜಗದೊಳು ॥"

ಒಂಬತ್ತನೆಯ ಸಂಧಿಯಲ್ಲಿ ವೆಂಕಟೇಶನು ತನ್ನ ಲಗ್ನಕ್ಕಾಗಿ ಬಂಧುಬಾಂಧವರನ್ನೆಲ್ಲ ಕರೆಯಿಸಿಕೊಂಡ ವೃತ್ತಾಂತವು ವರ್ಣಿತವಾಗಿದೆ. ಶುಕಮುನಿಯು ಆಕಾಶರಾಜನ ಪತ್ರವನ್ನು ತೆಗೆದುಕೊಂಡು ವೆಂಕಟೇಶನಲ್ಲಿಗೆ ಬರುತ್ತಿರಲು, ಆವನು ವಾಸಿಸುವ ಗಿರಿಯು ಶುಕನಿಗೆ ಹೇಗೆ ಕಾಣಿಸಿತೆಂಬುದನ್ನು ಕವಿಯು ಈ ರೀತಿಯಾಗಿ ವರ್ಣಿಸಿರುವನು:—

"ಶಿವನಂತೆ ದುರ್ಗಾಮಿತಾನಂದಿನಭದಂತೆ ।
ಕುವಲಯಸಖೋಪಲಸಿತಮುಮೆನಿಸಿ ಮತ್ತದುವೆ ।
ಭುವನ ಸುಂದರಿಯಾದ ದೇವಕಿಯ ಗರ್ಭದೋಲ್ಲಸಿತರುಚಿರತರ ಶೋಭೆಯು ॥
ದಿವದಂತೆಯಪ್ಸರೋರಾಜಿತಂ ತಾನೆಸಿಸಿ ।
ಭವನರಸಿಯಂತೆ ಗುಹಗಣಪಾವನಸ್ಥಿತಿಯು ।
ನವಕಾಂತಿವೆತ್ತಾಗ ಶುಕತಾಪಸೋತ್ತಮಗೆ ಗಿರಿವರಂ ಕಾಣಿಸಿದುದು ॥"

ವೆಂಕಟೇಶನ ವಿವಾಹಕ್ಕಾಗಿ ಬ್ರಹ್ಮರುದ್ರರೂ, ಉಳಿದ ದೇವಾಧಿದೇವತೆಗಳೂ ಆನಂದಭರಿತರಾಗಿ ಹೇಗೆ ಬರುತ್ತಿ

ದ್ದರೆಂಬುದನ್ನು ಕವಿಯು ಬಹಳೇ ಹೃದಯಂಗಮವಾಗಿ ವರ್ಣಿಸಿರುವನು.

ಹತ್ತನೆಯ ಸಂಧಿಯಲ್ಲಿ ಕೊಲ್ಹಾಪುರದಿಂದ ಶ್ರೀಲಕ್ಷ್ಮಿಯನ್ನು ಕರೆಯುವದಕ್ಕೆ ಶತಪತ್ರ ಮಿತ್ರನನ್ನು ಕಳುಹಿಸಿದ ವೃತ್ತಾಂತವು ವರ್ಣಿತವಾಗಿದೆ. ಈ ಸಂಧಿಯಲ್ಲಿ ಸಾಯಂಕಾಲದ ವರ್ಣನೆಯನ್ನು ಕವಿಯು ಬಹು ಸುಂದರವಾಗಿ ಚಿತ್ರಿಸಿರುವನು. ಅದು ಹೇಗೆಂದರೆ:—

"ಸಾಗರದಿ ಬೀಳ್ವ ರವಿ ತನ್ನ ಪೂರ್ವಸ್ಥಿತಿಯು ।
ನೀಗಿ ಹರಿಪದದೊಳ್ವಿರಕ್ತತೆಯನಾಂತು ಮ ।
ತ್ತೀಗ ಪರರತ್ನನಿಧಿಯಂ ಬಯಸಿ ದುರ್ವೃತ್ತನಾಗುತ್ತ ಮುಳುಗುತಿರಲು ॥
ತಾಗುವದು ಪತಿತತ್ವಮೆಂಬುದಂ ಜಗಕೆ ನಿಜ ।
ವಾಗಿ ಸಲೆ ತೋರಿಸಿದನೆನೆ ಪೆತೆಯೆ ಸಂಗಡಿಸಿ ।
ಬೇಗದಿಂ ಕತ್ತಲೆಯ ಪೊತ್ತಮದು ಪರ್ಬಿದುದು ಕುತ್ಸಿತರ ಸೊಕ್ಕಿನಂತೆ ॥
ಆ ತವೋಸಾಗರಂ ಮೇರೆವರಿದಾಳುತಿರೆ ।
ಭೂತಳಂ ಕಪ್ಪಿಡುದೋಯನಲು ನಗರವಧು ।
ನೂತನದ ನೀಲಾಂಬರಾವೃತೆಯಳಾದಳೆನೆ ಶೋಭಿಸಲ್ಸಜ್ಜನ ಜಾತದಾ॥
ಮಾತುಗಳ್ಪಿಂಗಿದವು ಬಾಗಿಲುಗಳಿಕ್ಕಿದವು ।
ಕಾತುರೆಯರಂಗದೊಳ್ವಿರಹಲತೆಯಂಕುರಿಸೆ ।
ಸೀತಾಂಶುವದನೆಯರ್ವನರನ್ನರಂ ಬಯಸಿ ಪರ್ಯಂಕಮಂ ಸಾರ್ದರು "॥

ಇದರ ಮುಂದಿನ ರಾತ್ರಿಯ ವರ್ಣನೆಯು ಬಹಳೇ ವಾಚನೀಯವಾಗಿರುವದು. ಅದರಲ್ಲಿಯ ಒಂದೆರಡು ಪದ್ಯಗಳನ್ನು ಮಾದರಿಗಾಗಿಲ್ಲಿ ಕೊಡುವೆವು:—

"ವಿರಹಾತಿರೇಕದಿಂ ಮತ್ತೊರ್ವ ಮಿಂಡೆಯಳ್ ।
ಭರದಿಂದಲುಪಪತಿಯ ಕೂಡಲ್ಕೆ ನಿಲಯದಿಂ ।
ಪೊರಮಡಲ್ಪವಕದೊಳು ಕಂಚುಕವನೊತ್ತೋಳಿಗಳವಡಿಸಿ ಯುಳಿದುದಂ ಜೋಲಿಸುತ್ತ ॥
ಬರುತಿರಲ್ಪೇರೊಬ್ಬ ಕಾತುರಿಗನದ ಕಂಡು ।
ತ್ವರಿತದಲಿ ಸರಿಜೋಡನಿಕ್ಕದಲೆ ಕಾಲೊಳಗೆ ।
ಪರೆಗೆಳೆದುಕೊಂಡವಳ ರಮಿಸುತಿರಲಯ್ಯಂದು ನಾಣ್ಕೆತ್ತೆ ಪೋಗುತಿಹಳು ॥
ಪೆರತೊಂದು ತಾಣದೊಳ್ಕಂಡು ಮನದನ್ನನಂ ।
ಸರಸದಿಂ ಬೀಸುತಿಹ ಕಲ್ಲನೆವಮಾಡಿ ಮಿಗೆ ।
ಧರಿಸಿದರು ಸಂದೆಗವ ಗುರಿಗುರಿಯ ತಗ್ಗಿಸುವೆ ಸುಮ್ಮಸಿರು ಭ್ರಮಿಸಬೇಡ ॥
ತಿರುಗುವರು ನಿನ್ನಂತೆ ವಿಟರೆನ್ನ ಕಂಡವರ್ ।
ಪರಿಸರಿದು ನಿನಗಿದೇಂ ಬೆಡಗು ಸಲೆಕಲ್ಲಾಗು ।
ಕರವಿಡಿದೆಯೆದೆಯೊಡೆದು ಪೊಳ್ಳಾದೆ ತಡೆಯಾಯ್ತು ನೀನೆಂದು ಸುರ್ದಳವಳು ॥
ಬೆದರಿದ ಕುರಂಗಾಕ್ಷಿ ಸಿಂಗರಿಸಿಕೊಂಡು ರತಿ ।
ಸದನದೋಳೋಪನಂ ಬಯಸುತ್ತ ನಿಂದಿರಲ್ ।
ಮುದದಿ ಬರಲವನನಂಗಮಂ ಸುತ್ತಿ ತೋಳಿಂದ ಮಿಸುಕಲೀಯದೆ ಭರದೊಳು॥
ಎದೆಯ ಮೇಲ್ಮುಂಬರಿವ ಕುಚಕಲಶವೊಡೆದೊಸರೆ ।
ಮುದರಾಗಮದು ಪತ್ತಿತೆಂಬಂತೆ ತನ್ಮಧ್ಯ ।
ಮದ ಕುಂಕುಮಂ ಮೂಡೆ ನೋಡಿದೇನೆಂದೆನಲ್ಪಿಂನೊಳಿಹ ರಾಗಮುಲ್ಲೇ "॥

ಇಂತಿರಲೊನ್ನೆ ಬೆಳಗಾಗಲು ಅದನ್ನು ಕವಿಯು ಈ ರೀತಿಯಾಗಿ ವರ್ಣಿಸಿರುವನು:—

"ಇನ್ನು ಬಿಡಿ ಪಾಪದಾಚಾರಮಂ ಕಾಮುಕರೆ ।
ಸನ್ನುತಂ ರವಿರಾಜನೈತಹಂ ಮೀರಿ೯ರೆ ।
ತನ್ನ ಕರದಿಂದಲೆಬ್ಬಟ್ಟುವಂ ಮಾನಮಲ್ಲವು ಬಳಿಕ ಲೇಸಾಗದು ॥
ಯನ್ನನುಡಿ ಗೇಳಿರೆಂಪೊದರಿದವು ಕೋಳಿಗಳ್ ।
ಮುನ್ನಹೆಯ ಕಹಳೆಗಳ ರವದಂತೆ ತನ್ಮಹಿಪ ।
ನುನ್ನತದ ಧ್ವಜದರುಣಕಿರಣಮೆನೆ ಮೂಡಲುಂ ಕೆಂಪೊತ್ತಿ ರಾಜಿಸಿದುದು ॥
ಕುಹಕಿಗಳ ಧರ್ಮವಾಸನೆಯಂತೆ ತಾರೆಗಳ್ ।
ವಿಹಿತಮೆನೆ ವಿರಳದಿಂ ತೋರಿದವು ಕಳೆಗುಂದಿ ।
ಬಹುಕರಪ್ರಭೆಯಿಂದ ಬೆಳ್ಪುದು ನಭೋಂಗಣಂ ಸಜ್ಜನರ ಚಿತ್ತದಂತೆ ॥
ಸಹಜದಿಂ ಕತ್ತಲುಂ ಜಾರಿದುದು ಸಲೆ ವಾರ ।
ಮಹಿಳೆಯರ್ಧನರಹಿತರಾದರಂ ಬಿಡುವಂತೆ ।
ಮಿಹಿರನುರೆ ತೋರಿದಂ ದೇಶಾಂತರದಿ ಪೋದ ಪಂಡಿತರ ಕೀರ್ತಿಯಂತೆ ॥"

ಲಗ್ನದ ಸಿದ್ಧತೆಗಾಗಿ ಶ್ರೀ ವೆಂಕಟೇಶನು ಯಾವ ಯಾವ ಕಾರ್ಯಕ್ಕೆ ಯಾರಾರನ್ನು ನಿಯಮಿಸಿದನೆಂಬುದನ್ನು ಕವಿಯು ಈ ಪದ್ಯಗಳಲ್ಲಿ ಹೇಳಿದ್ದಾನೆ:—

"ದೇವತಾಹ್ವಾನಕ್ಕೆ ಷಣ್ಮುಖನ ಪರುತವಿಸಿ ।
ಭಾವಜನನುಥ್ಥಾನದೋಳಗ್ನಿಯಂ ಪಾಕ ।
ಕಾವಿಗಡ ವರುಣನಂ ನೀರಿಂಗೆ ದುಷ್ಟಸಂಡನಶಿಷ್ಟ
ಪರಿಪಾಲನದೊಳು ॥
ಕೋವಿದಂ ರವಿಸುತನ ಪರಿಮಳಕೆ ವಾಯುವಂ ।
ದೀವಟಗೆವಿಡಿಯಲ್ಕೆ ಚಂದ್ರನಂ ಧನದನಂ ।
ಭೂವಿಪ್ರಸಂತತಿಗೆ ವಸುವಸನವೀಯಲುಂ ಶ್ರೀವರಂ
ನಿಯಮಿಸಿದನು ॥
ಪಾತ್ರೆಗಳ ಮಂಡಿಸಲು ಗರುಡನಂ ಸಲೆ ಪಾಕ ।
ಪಾತ್ರೆಗಳ ಶುದ್ಧಿಸಲ್ವಸುಗಳಂ ನೆಲೆಗೊಳಿಸಿ ।
ಧಾತ್ರಿಯೋಳ್ನಿರವಧಿಕ ಕಲ್ಯಾಣದುತ್ಸವದಿ
ಮಿಕ್ಕಾವ ಗೀರ್ವಾಣರಾ ॥
ಸೂತ್ರಿಸಿದನುಳಿದಿರ್ದ ಕೆಲಸಕ್ಕೆ ಮುನಿವರರ ।
ಗೋತ್ರದೋಳ್ಬೆಳಗುತಿಹ ಸುನಸಿಷ್ಟನಂ ಕಮಲ ।
ನೇತ್ರನತಿಮುದದಿ ಪೌರೋಹಿತ್ಯಕಳವಡಿಸಿ ಬ್ರಹ್ಮಂಗೆ
ಬಳಿಕೆಂದನು ॥"

ಇಷ್ಟಾದ ಬಳಿಕ ವೆಂಕಟೇಶನು ಮುಂದೇನು ಮಾಡಬೇಕೆಂದು ಬ್ರಹ್ಮನನ್ನು ಕೇಳಲು, ಮಂಗಲಸ್ನಾನವನ್ನು ಮಾಡಬೇಕೆಂದವನು ಹೇಳಿದನು. ಆಗ ವೆಂಕಟೇಶನು ಲಕ್ಷ್ಮಿಯನ್ನು ಬಿಟ್ಟು, ಮಂಗಲಸ್ನಾನಮಾಡುವ ಬಗೆಯೆಂತೆಂದು ಈ ರೀತಿಯಾಗಿ ರೋದಿಸಿದನು:—

"ವನಜವಿಲ್ಲದ ಕೊಳಂ ಮದರಹಿತವಾದಿಭಂ ।
ತನುಜನಿಲ್ಲದ ಮಾತೆ ಪಕ್ಕವಿಲ್ಲದ ಖಗಂ ।
ವಿನಯವಿಲ್ಲದ ಚರಂ ತೃಣವಿಲ್ಲದಿಹ ವನಂ
ವನಿತೆಯರ ತಾರುಣ್ಯವು ॥
ಮಿನಯನಿಲ್ಲದೆ ಮೆರೆಯಲರಿಯದು ವಿಧಿಯಿ ಕೇ ।
ಳನುನಯದಿ ಸಿರಿಯಗಲ್ದರ ಬಾಳ್ಕೆ ನಗೆಗೆಡಿಯು ।
ಜನಪದದಿ ಗತಿಯೇನು ಪೇಳೆನುತ ಶ್ರೀರಮಣಿಯಂ ನೆನೆದು
ಬಿಸುಸುಯ್ವನು ॥

ಆಮೇಲೆ ವೆಂಕಟೇಶನು ಸೂರ್ಯನನ್ನು ಕೊಲ್ಹಾಪುರಕ್ಕೆ ಕಳುಹಿಸಿದನೆಂಬಲ್ಲಿಗೆ ಈ ಸಂಧಿಯು ಮುಗಿಯುವದು.

ಹನ್ನೊಂದನೆಯ ಸಂಧಿಯಲ್ಲಿ ಸಿರಿರಮಣನು ಕುಬೇರನಲ್ಲಿ ಸಾಲತೆಗೆದುಕೊಂಡು, ಊಟಮಾಡಿದ ವೃತ್ತಾಂತವು ವರ್ಣಿತವಾಗಿದೆ.

ಹನ್ನೆರಡನೆಯ ಸಂಧಿಯಲ್ಲಿ ಶ್ರೀವೆಂಕಟೇಶನು ಶುಕಮುನಿಯ ಕುಟೀರದಲ್ಲಿ ಉಂಡು, ನಿಬ್ಬಣಸಹಿತ ಆಕಾಶರಾಜನ ಪಟ್ಟಣದಲ್ಲಿ ಬಂದಿಳಿದುಕೊಂಡ ಕಥೆಯು ವರ್ಣಿತವಾಗಿದೆ. ಇವೆರಡು ಸಂಧಿಗಳಲ್ಲಿಯೂ ಕವಿಯ ಕವಿತಾಚಾತುರ್ಯವು ನೋಡುವಂತಿದೆ.

ಕಡೆಯ ಸಂಧಿಯಲ್ಲಿ ವೆಂಕಟೇಶನು ಲಗ್ನಮಾಡಿಕೊಂಡು ಬಂದು, ಗಿರಿಯಲ್ಲಿ ವಾಸಮಾಡಿದ ಕಥೆಯನ್ನು ಮುಗಿಸಿ, ಕವಿಯು ಈ ಕಾವ್ಯವನ್ನು ಬರೆದ ಕಾಲವನ್ನು ಕೊಟ್ಟು, ಕಾವ್ಯವನ್ನು ಮುಗಿಯಿಸಿರುವನು. ಈ ಕೆಳಗಿನ ಪದ್ಯದಿಂದ ಈ ಕಾವ್ಯವನ್ನು ಬರೆದ ವರುಷವು ನಿರ್ಣಯವಾಗುವದು:—

"ಕೀಲಕಾಬ್ದಾದಿದಿನ ದೇವಗುರುವಾಸರದಿ ।
ಶಾಲಿವಾಹನಶಕದ ಭೂಮೀಶನಯನವಸು ।
ಭೂಲಸಿತದೊಳ್ಪೂರ್ಣಮಾಯ್ತೀ ಕೃತಿಯು ಭಗವತೀಸತಿ
ಯಾಳ್ದನಾ ॥
ಸ್ಥೂಲತರಕೃಪೆಯಿಂದ ಕವಿವರಂ ಸರಸಮೆನೆ ।
ಕೇಳುವರ ಕಿವಿಗಿಂಪನೊದಗಿಸುವ ತೆರದಿಂದ ।
ಲೀಲೆಯಿಂದುಸುರಿರ್ದ ವಾಣಿಯಂ ದೂಷರವ ನೆಲೆಗೊಳಿಸ
ದಾಲಿಸುವದು ॥

ಒಟ್ಟಿನ ಮೇಲೆ ಇದೊಂದು ಪ್ರೌಢಕಾವ್ಯವಾಗಿರುವದೆಂದು ಧಾರಾಳವಾಗಿ ಹೇಳಬಹುದು. ಎಷ್ಟೋ ಜನರು ಆಧುನಿಕ ಕಾಲದಲ್ಲಿ ಕನ್ನಡಕವಿತೆಯು ನಿಶ್ಶೇಷಿತವಾಗಿರುವದೆಂದು ಅಭಿಪ್ರಾಯಪಡುವರು. ಅಂಥ ಜನರು ಈ ಕಾವ್ಯವನ್ನು ಓದಿ ತಮ್ಮ ಸಂಶಯವನ್ನು ದೂರಮಾಡಿಕೊಂಡು, ಕನ್ನಡ ಕವಿತಾದೇವಿಗೆ ಸಾಷ್ಟಾಂಗ ಪ್ರಣಿಪಾತವನ್ನು ಹಾಕಬೇಕು. ಈ ಕಾವ್ಯವು ಜೈಮಿನಿಭಾರತ ಮೊದಲಾದ ಕಾವ್ಯಗಳನ್ನು ಕೂಡ ಮರೆಯಿಸುವಂತಿರುವದೆಂದರೆ ಅತಿಶಯೋಕ್ತಿಯಾಗದು.

# ವಾದಭೂಮಿ

## " ಒಂದು ಐತಿಹಾಸಿಕ ಸ್ಥಳ "

ಲೇಖಕ: —ಶೇಷೋ ವೆಂಕಟೇಶ ಕಡಕೋಳ ಹೆ. ಮಾಸ್ತರ ಷಡಿಗ್ಗೊಂ (ಕೋಡ)

ಧಾರವಾಡ ಜಿಲ್ಲೆಯ ದಕ್ಷಿಣ ತುದಿಯಲ್ಲಿರುವ ಕೋಡ ತಾಲೂಕು ಚಿಕ್ಕ ಚಿಕ್ಕ ಗುಡ್ಡಗಳ ಸಾಲುಗಳಿಂದ ಶೋಭಿಸುತ್ತದೆ. ಇದೇ ತಾಲೂಕ ಪೈಕಿ " ಸಿಡೇನೂರು " ಎಂಬ ಊರು ಎಮ್. ಎಸ್. ಎಮ್. ರೇಲ್ವೆಯ ಬ್ಯಾಡಗಿ ಸ್ಟೇಶನದಿಂದ ನೈಋತ್ಯಕ್ಕೆ ಆರು ಮೈಲುಗಳ ಅಂತರದಲ್ಲಿ ಸಮುದ್ರ ಸಪಾಟಿಗಿಂತ ಸುಮಾರು ೨॥–೩ ಸಾವಿರ ಅಡಿ ಎತ್ತರದಲ್ಲಿರುತ್ತದೆ. ಈ ಊರು ಕ್ಷೇತ್ರ ಜನಸಂಖ್ಯೆಯ ಮಾನದಿಂದ ಸಣ್ಣದಿದ್ದರೂ ಇತಿಹಾಸಸಂಶೋಧನದೃಷ್ಟಿಯಿಂದ ಬಹಳ ಮಹತ್ವದ್ದಿದೆಯೆಂದು ಕಾಣಬರುವದು.

ಈ. ಊರಿಂದ ವಾಯುವ್ಯಕ್ಕೆ ಆರು ಮೈಲುಗಳ ಮೇಲೆ ಇರುವ, ( ಕನಕದಾಸನಿಂದ ಪ್ರಸಿದ್ಧಿವಡೆದ ಆದಿಕೇಶವ ದೇವಾಲಯಗಳ ) " ಕಾಗಿನೆಲ್ಲಿ" ಎಂಬ ಗ್ರಾಮವೂ, ಪೂರ್ವದಲ್ಲಿ ೩—೪ ಮೈಲು ದೂರವಾಗಿರುವ, ಜನಮೇಜಯನಿಂದ ಸ್ಥಾಪಿಸಲ್ಪಟ್ಟ, ಕಾಂತನೆಂದು ಹೊಗಳಿಸಿಕೊಳ್ಳುವ ಹನುಮಂತ ದೇವಾಲಯವುಳ್ಳ, " ಕದರಮಂಡಲಗಿ " ಎಂಬ ಊರೂ ದಕ್ಷಿಣಕ್ಕೆ ೧೫—೧೬ ಮೈಲುಗಳಾಚೆಯಲ್ಲಿ ಕಾಣುವ, ಪೂರ್ವದ ಒಬ್ಬ ಸಿದ್ಧ ( ಸಿದ್ಧನಾಗಾರ್ಜುನ ) ನ ನೆನಪುಕೊಡುವ, " ನಾಗವಂದ" ( ನಾಗವಂಗ ) ಎಂಬ ಹಳ್ಳಿಯೂ, ಈ ನಾಗವಂಡದ ನೆರೆಯ ಗುಡ್ಡದ ಓರೆಯಲ್ಲಿ ಆತನ ಶಿಲಾ ಪ್ರತಿಮೆಯುಳ್ಳ ಸಣ್ಣ ಗುಡಿಯೂ, ಈಗಲೂ ನೋಡಲಿಕ್ಕೆ ಸಿಗುವವು.

ಹಿಂದೆ ಒಂದು ಕಾಲದಲ್ಲಿ "ರಟ್ಟ" ರಾಜರಾಳಿದ, ಕಟ್ಟಡದಲ್ಲಿ ಒಂದೇ ಮಾದರಿಯವಾದ ( ಕದಂಬೇಶ್ವರ ವೀರಭದ್ರ) ದೇವಾಲಯವುಳ್ಳದ್ದೂ (ಕದಂಬೇಶ್ವರಗುಡಿಯ ಹೊರಬದಿಯ ಗೋಡೆಯ ಕಲ್ಲಿನಲ್ಲಿ ಬರೆದ ಅಕ್ಷರಗಳು ಮಸಮಸಕಾಗಿ ಕಾಣುತ್ತದೆ. ಮತ್ತು ಸುತ್ತುಕೋಟೆ, ನೂಲಗೇರಿ ( ನೂಲುವ ಕೇರಿ ) ಎಂಬ ಶಾಖಾನಗರಗಳಿಂದ ಮೆರೆಯುವದೂ ಅಜ್ಞಾತ ಕಾಲದ ರಟ್ಟ, ಕದಂಬರಾಜರ ರಾಜಧಾನಿಯಿತ್ತೆಂದು ಈಗಲೂ ಅಲ್ಲಿಯ ಜನರಿಂದ ಹೇಳಿಸಿಕೊಳ್ಳುವ " ರಟ್ಟೇಹಳ್ಳಿ " ಎಂಬದು ಇದೇ ತಾಲೂಕಿನಲ್ಲಿಯೇ ಈ ರಟ್ಟೆಹಳ್ಳಿಯಿಂದ ಸ್ವಲ್ಪದೂರದಲ್ಲಿ ಕಣಿವೆಯ ಸಿದ್ಧಪ್ಪನ ಗುಡ್ಡವೆಂಬವೊಂದು ಗುಡ್ಡವದೆ. ಇದರ ಸುತ್ತು ಕಲ್ಲುಕೋಟೆಯ ಆವಾರದಂತೆ ಕಾಣುತ್ತಿದ್ದು ಒಂದು ಬಂಡೆಯ ಮೇಲ್ಗಡೆಯಲ್ಲಿ ಸುಮಾರು ೧ ಅಡಿಯಷ್ಟು ಉದ್ದಗಲುಳ್ಳ ಮಾಡದಂತಿರುವಲ್ಲಿ ನೀರು ಯಾವಾಗಲೂ ಕಾಣಬರುವವು. ನೀರು ಎಲ್ಲಿಂದ ಬರುವವೆಂಬದು ತಿಳಿದಿಲ್ಲ. ಇದಕ್ಕೆ ಅಂತರಗಂಗೆಯೆಂದೂ ತೀರ್ಥವೆಂದೂ ಅನ್ನುವರು. ಭಾವಿಕರು ಆಗಾಗ ಅಲ್ಲಿಗೆ ಹೋಗುವರು. ಇದಲ್ಲದೆ ಈ ನಿಟ್ಟಿನಲ್ಲಿ ಇಂಥವನ್ನು ಇನ್ನೂ ಕೆಲವೆಡೆಯಲ್ಲಿ ಕಾಣಬಹುದು.

ಸರ್ವಜ್ಞ ಕವಿಯ ಜನ್ಮಸ್ಥಳವೂ, ಆನೆಗುಂದಿ ಅರಸರು ಕಟ್ಟಿಸಿದ ಮದಗ ಸರೋವರದ ಒದಿಯಲ್ಲಿಯ ಊರೂ ಆದ "ಮಾಸೂರು" ಇದೇ (ಕೋಡ) ತಾಲೂಕಿನವರ ಅಧಿಕಾರಕ್ಕೆ ಒಳಪಟ್ಟಿದು.

ಡೆಕ್ಕಣಾಚಾರ್ಯ, ಜಕಣಾಚಾರ್ಯನ ಸಮಕಾಲೀನನೆಂದು ಕಾಣುವ "ಸಿದ್ಧನಾಗಾರ್ಜುನ"ನೆಂಬ ಸಿದ್ಧಪುರುಷನು ಲಕ್ಷ್ಮಿಯ ಸೊಕ್ಕನ್ನು ಇಳಿಸುವದಕ್ಕೆ ಇಡೀ ಗುಡ್ಡವನ್ನೇ ಬಂಗಾರ ಮಾಡಲಾಶೆಯಿಂದ, ನಾಗವಂದ ( ನಾಗವಂಗ) ವೆಂಬಲ್ಲಿಯ ಗುಡ್ಡಕ್ಕೆ ಮುಸಿಕಟ್ಟಿ ಬಂಗಾರ ಮಾಡಲೆಸಗಿದನು. ಬಂಗಾರವು ಆಗುವ ಒಳ್ಳೇ ಹೊತ್ತಿಗೆ ಮುಸಿಯೊಡೆಯಿತು. ಅಲ್ಲದೆ ಆತನ ತಲೆಯು ಕತ್ತರಿಸಿ ಆಕಾಶದಲ್ಲಿ ಹಾರಿ ಹೋಯಿತೆಂದೂ ಜನರಲ್ಲಿ ಪ್ರವಾದವಿದೆ. ಈ ಸಿದ್ಧವಾದ ಸಿದ್ಧರಸವು ಸುತ್ತಲಿನ ಗುಡ್ಡಗಳಲ್ಲೆಲ್ಲ ಹರಿಯಿತೆಂದೂ, ಈಗ ಅಣೂರು ಎಂದು ಕರೆಯಿಸಿಕೊಳ್ಳುವ, ಶಿಡೇನೂರಿಂದ ಆಗ್ನೇಯಕ್ಕೆ ೨ ಮೈಲು ದೂರವಿರುವ " ಅಣೂರ " ವರೆವಿಗೂ ಬಂದು ಮುಟ್ಟಿತೆಂದೂ ಹೇಳುವರು. ಈ ಊರ ಗುಡ ದಲ್ಲಿ ಅಣುರೂಪವಾಗಿ ಬಂಗಾರವು ಸಿಗುವದರಿಂದಲೇ ಈ ಊರಿಗೆ "ಅಣೂರು" ಎಂದು ಹೆಸರು ಬಂದಿದೆಯೆಂಬು ಕೆಲವರ ಮತವದೆ.

ಸಿಡೇನೂರಲ್ಲಿರುವ ಸಿದ್ಧಪ್ಪನ ಗುಡ ಮತ್ತು ಬೇರೆ ಕಾರಣಗಳಿಂದ "ಸಿದ್ಧನೂರು" ಎಂಬದರ ಬದಲಾಗಿ 'ಸಿಡೇನೂರು' ಎಂದು ರೂಢವಾಗಿದೆ, ಎಂದು ಅನುಮಾನವಾಗುತ್ತದೆ. ಈ ಸಿಡೇನೂರ ನೈಋತ್ಯಕ್ಕೆ ೧॥-೨ ಮೈಲಿನ ಮೇಲಿನ ಸಿದ್ಧಪ್ಪನ ಗುಡ್ಡದಲ್ಲಿ ಇದೇ ಹೆಸರಿನ ಗುಡಿಯೂ ಒಳಭಾಗದ ಗೋಡೆಯ ಮೇಲೆ ಕಲ್ಲಿನಲ್ಲಿ ಬರೆದ ಬರಹವೂ ಇರುವವು. ಗುಡಿಯ ಒಳಭಾಗದ ಉತ್ತರ ಪಾರ್ಶ್ವದಲ್ಲಿ ಒಂದು ಗವಿಯಿದ್ದು ಬಾಯಿ ಮುಚ್ಚಿನ ಗುರ್ತು ಇರುವದು. ಇದರಲ್ಲಿಯೇ ಇಳಿದು ಮುಂದೆ 'ಅಣೂರು' ಚಿನ್ನಮುಳಗುಂದಗಳವರೆಗೆ ಹೋಗಲಿಕ್ಕೆ ನೆಲಮಾರ್ಗವಿತ್ತೆಂದು ಹೇಳುವರು. ಇದೇ ಗುಡಿಯಲ್ಲಿ ಬಹುಕಾಲದ ಹಿಂದೆ ಸಿದ್ಧರು ಇರುತ್ತಿದ್ದರೆಂತಲೂ ಹೇಳುವರು. ಊರಲ್ಲಿ ಹನುಮಂತ ದೇವಸ್ಥಾನದ ಹೊರಗಡೆಯಲ್ಲಿ ೨ ಶಿಲಾಲಿಪಿಗಳಿದ್ದು ಅದರಲ್ಲಿಯ ಒಂದು ದೊಡ್ಡದು ಸುಮಾರು ೬-೭ ಮೊಳ ಎತ್ತರವಿದ್ದು ೨ ಮೊಳ ಅಗಲವಾಗಿರುವದು. ಮತ್ತೊಂದು ಸಣ್ಣದದೆ.

ಸಿದ್ಧಪ್ಪನ ಗುಡ್ಡ ಹಾಗೂ ಊರು ಇವುಗಳ ನಡುವಿಗೆ ಹತ್ತುವ ಮರಡಿಯ ಓರಿಯಲ್ಲಿ "ಪಾಂಡವರ ಕಟ್ಟಿ" ಗಳೆಂಬ ೫೦-೬೦ ಕಟ್ಟಿಗಳು ಇದ್ದು ಕೆಲವು ಚೌಕಾಗಿಯೂ, ಕೆಲವು ದುಂಡಾಗಿಯೂ ಇರುವವು. ಇವುಗಳ ಮೇಲೆ ಹಾಸುಗಲ್ಲಿನ ಮುಚ್ಚಳವಿದ್ದು ಮೇಲೆಯೂ, ಅಂಚಿಗೂ ಸಂದುಬಿಡದಂತೆ ಮಣ್ಣು ಎರಚಿದ್ದಾರೆ. ನೆಲಕ್ಕಿಂತ ಸ್ವಲ್ಪ ಎತ್ತರವಿರುವದರಿಂದ ಒಮ್ಮೆಲೇ ಕಾಣುವವು. ಕೆಲವು ಸಾಲಾಗಿಯೂ ಕೆಲವು ಹಿಂದೆ ಮುಂದೆಯೂ ಇರುವವು. ಇದೇ ಮಾದರಿಯವು ರಾಣೆಬೆನ್ನೂರ ತಾಲೂಕ ಉದಗಟ್ಟಿಯಲ್ಲಿಯೂ ಕಾಣಲಿಕ್ಕೆ ಸಿಗುವವು.

ಹಿಂದಕ್ಕೆ ವಿಕಾರೀ ಸಂವತ್ಸರದ ಬರಗಾಲದಲ್ಲಿ ಈ ಶಿಡೇನೂರ ಜನರು ಈ ಕಟ್ಟಿಗಳಲ್ಲಿ ದುಡ್ಡು ಇರುವದೆಂದು ಭಾವಿಸಿ ೨ ಕಟ್ಟಿಗಳನ್ನು ಅಗೆದರು. ಒಳಗೆ ಪ್ರಾಚೀನಕಾಲದ ಹೂಜೆಗಳಂಥ ಮಣ್ಣಿನ ಪಾತ್ರೆಗಳನ್ನು ಅಡಕಲದಂತೆ ಏರಿಸಿ ಚಂದಕಾಣುವಂತೆ ನಾನಾ ವಿಧವಾಗಿ ಇರಿಸಿದ್ದನ್ನು ನೋಡಿ ಕೈಯ್ಯಲ್ಲಿ ತಕ್ಕೊಂಡರು. ಅವುಗಳಲ್ಲಿ ದುಡ್ಡು ಇರದೆ ಮಣ್ಣು, ಬೂದಿಗಳಂತಹ ಪದಾರ್ಥಗಳಿಂದ ತುಂಬಿದ್ದವೆಂದು ತೋರಿದ್ದರಿಂದ ಹತಾಶರಾದರು. ಆದ್ದರಿಂದ ಆ ಪಾತ್ರೆಗಳನ್ನು ದುರ್ಲಕ್ಷಿಸಿದರು. ಉಳಿದ ಕಟ್ಟಿಗಳ ಗೋಜಿಗೆ ಹೋಗುವದನ್ನು ಪೂರ್ಣವಾಗಿ ಬಿಟ್ಟುಕೊಟ್ಟರು. ಬಹಳ ದಿನಗಳಿಂದ ಒಳಗಿದ್ದ ಮಡಿಕೆಗಳು ಹಸಿಯು ತಾಗಿದೊಡನೆಯೇ ಬಿಚ್ಚಿಬಿದ್ದವು.

ಬಂಗಾರ ಮಾಡುವವರು (ಸಿದ್ಧಪುರುಷರು) ಮೊದಲು ಇದೇ ಭಾಗದಲ್ಲಿರುತ್ತಿದ್ದರೆಂದೂ, ಈ ಪ್ರದೇಶದ ಮಧ್ಯದಲ್ಲಿರುವ "ಚಿನ್ನಮುಳಗುಂದ"ವೆಂಬ ಸಾರ್ಥಕ ನಾಮವುಳ್ಳ ಊರಲ್ಲಿಯೂ ಇವರದೊಂದು ಶಾಖೆಯು ಇತ್ತೆಂದೂ, ಈ ಪ್ರದೇಶವು ಇಂಥವುಗಳ ನೆಲೆವೀಡಾಗಿತ್ತೆಂತಲೂ ಅಭಿಪ್ರಾಯಪಟ್ಟಿದ್ದಾರೆ.

ಸಂಗತಿಗಳ ಪರಿಚಯವು ಆದೊಡನೆ "ಸಿಡೇನೂರ"ಸುತ್ತಲು ಕೂಡಿದಾಗಲೆಲ್ಲ ನಿರೀಕ್ಷಿಸುತ್ತಿದ್ದೆನು. ಸಿದ್ಧನಾಗಾರ್ಜುನನ ಐತಿಹ್ಯವನ್ನು ಹುಡುಕಲೆತ್ನಿಸಿದೆನು. ಇವನು ಕಿಮಿಯಾವಿದ್ಯೆಯನ್ನು ಪೂರ್ಣಬಲ್ಲಂಥ, ಯಂತ್ರ, ಮಂತ್ರ, ತಂತ್ರಗಳನ್ನು ಅರಿತ, ವೈದ್ಯಶಾಸ್ತ್ರವಿಶಾರದನೆಂದು ಗೊತ್ತಾಯಿತು. ಮತ್ತು ರಾಸಾಯನಿಕಔಷಧಿಯ ಸಂಗ್ರಹವು ಬಹಳವಾಗಿತ್ತೆಂತಲೂ, ಇದೇ ನೆರೆಯಲ್ಲಿಯೇ ಇರುತ್ತಿದ್ದನೆಂದೂ, ನಮ್ಮ ಔಷಧಿಯನ್ನು ಇಂತಹ ನೆಲಮನೆಯಲ್ಲಿ ಆಗಿನವರು ಇಡುತ್ತಿದ್ದರೆಂದೂ ಗೊತ್ತಾಯಿತು. (ರಾಸಾಯನಿಕ ಔಷಧಗಳನ್ನು ನೆಲದಲ್ಲಿ ಹೆಚ್ಚುಕಾಲ ಇಟ್ಟರೆ ಹೆಚ್ಚು ಗುಣಕೊಡುವವೆಂದು ಆರ್ಯವೈದ್ಯರ ಅಭಿಪ್ರಾಯವು.)

ಈ ಎಲ್ಲ ಸಂಗತಿಗಳ ಮೇಲಿಂದ ನೋಡಲಾಗಿ ಈ ಮೊದಲು ಅಲ್ಲಿಯ (ಸಿಡೇನೂರ) ಜನರು ಆ ಕಟ್ಟಿಗಳನ್ನು (ಪಾಂಡವರ ಕಟ್ಟಿ)ಗಳನ್ನು ಅಗೆದು ತೆಗೆದು ಪಾತ್ರೆಗಳನ್ನು ತೆರೆದು ನೋಡಿದಾಗ ಕಂಡುಬಂದ ಪದಾರ್ಥವು ಅವರು ಅನ್ನುವಂತೆ ಮಣ್ಣು-ಬೂದಿಗಳಾಗಿರದೆ ಉತ್ತಮ ಔಷಧವಿರಬಹುದೆಂದು ದೃಢವಾದ ನಂಬಿಕೆಯದೆ. ಅಲ್ಲದಿದ್ದರೆ ಅವು ಇರಬಹುದಾದರೂ ಏನಾಗಿದ್ದೀತು.

# ಭಾಗವತ ಶಿರೋಮಣಿ
## ಬೇಲೂರ ಕೇಶವದಾಸರಿಂದ

### ಶ್ರೀ. ಹೆಚ್. ಜಿ. ಬೆಂಗೇರಿ ಬಿ. ಎ., ಆನರ್ಸರವರ ಲೇಖನಕ್ಕೆ ಸಮಾಧಾನ.

ಜಯಕರ್ನಾಟಕದ ಭಾದ್ರಪದ ಶು. ೧೫ರ ಸಂಚಿಕೆ, ಪುಟ ೭೦೬, ಪ್ಲ್ಯವ (೧೧) ರಲ್ಲಿ "ದಾಸಕೂಟದ ಸಂಕ್ಷಿಪ್ತ ಇತಿಹಾಸ ಲೇಖಕ" ಶ್ರೀ. ಹುಚ್ಚರಾವ್ ಗುರುರಾವ್ ಬೆಂಗೇರಿಯವರು ಎರಡು ವರ್ಷಗಳ ಹಿಂದೆ ಇದೇ ಜಯಕರ್ನಾಟಕದಲ್ಲಿ ಪ್ರಕಟವಾದ "೯ನೇ ಶತಮಾನದಲ್ಲಿದ್ದ ಅಚಲಾನಂದದಾಸರು" ಎಂಬ ಲೇಖನವನ್ನು ಕಟ್ಟುಕಥೆಯೆಂದೂ, ಐತಿಹಾಸಿಕ ಸಂಗತಿಯಲ್ಲವೆಂದೂ ಸಂಶಯಪಟ್ಟು ಎರಡು ಕಾರಣಗಳನ್ನು ಬರೆದಿದ್ದಾರೆ. ಅವರ ಕಾರಣಗಳು ತೃಪ್ತಿಕರವಾಗಿಲ್ಲ. ಇವರು ಹೇಳುವಂತೆ ದ್ವೈತಮತವೇ ದಾಸಕೂಟದ ಉದಯಕ್ಕೆ ಕಾರಣವಾಗಿಲ್ಲ. ಹಾಗಿದ್ದರೆ ಭರತಖಂಡದಲ್ಲಿ ಜನ್ಮತಾಳಿದ ದಾಸರೆಲ್ಲರೂ ದ್ವೈತಿಗಳೇ (ಮಧ್ವಮತದವರೇ) ಆಗಿರಬೇಕಾಗಿತ್ತು. ಭಕ್ತಿ ಪಂಥವು ಸರ್ವಮತಗಳಿಗೂ ಸಮ್ಮತ. ಪ್ರಾಕೃತ ಭಾಷೆಗಳಲ್ಲಿ ಭಕ್ತಿಮಾರ್ಗವನ್ನು ಪ್ರಚಾರ ಮಾಡಿದವರು ದಾಸರುಗಳು. ಇವರು ಮತತ್ರಯದಲ್ಲೂ ಜನ್ಮತಾಳಿದ್ದಾರೆ. ಜೀವೇಶ್ವರೈಕ್ಯವನ್ನು ಸಾಧಿಸಿದ ಶಂಕರಾಚಾರ್ಯರೂ, ದಾಸ ಈಶಭಾವಯುಕ್ತವಾದ ಭಕ್ತಿಯನ್ನೇ ಮೇಲೆತ್ತಿ ಹಿಡಿದಿದ್ದಾರೆ. "ದಾಸಸ್ತೇಹಂದೇಹದೃಷ್ಟ್ಯಾಸ್ಮಿ ಶಂಭೋ"— "ಮೋಕ್ಷಸಾಧನಸಾಮಗ್ರ್ಯಾಂ ಭಕ್ತಿರೇವ ಗರೀಯಸೀ" ಎಂದು ಉದ್ಘೋಷಿಸಿದ್ದಾರೆ. ಐಕ್ಯಭಾವವು ಕುರೀಯದಶೆಯ ಅನುಭವ ಮಾತ್ರವಾಗಿರುವದರಿಂದ, ವ್ಯವಹಾರದಲ್ಲಿ ಭಕ್ತಿವಿನಾ ಗತ್ಯಂತರವಿಲ್ಲೆಂದು ಸಾರಿದ್ದಾರೆ. ಮಹಾರಾಷ್ಟ್ರದಲ್ಲವತರಿಸಿದ ದಾಸರೆಲ್ಲರೂ ಅದ್ವೈತರು. ಅವರ ಗ್ರಂಥಗಳು ಕನ್ನಡದ ಮಧ್ವಮತದ ದಾಸರ ಗ್ರಂಥಗಳಂತೆಯೇ ಶ್ರೋತೃಗಳಿಗೆ ಭಕ್ತ್ಯುದ್ರೇಕವನ್ನೂ ಪಾರವಶ್ಯವನ್ನೂ ಉಂಟುಮಾಡುತ್ತವೆ.

ಅಚಲಾನಂದದಾಸರೂ ಅದ್ವೈತರು. ಅವರ ಪದಗಳಲ್ಲಿ ಸರ್ವಸಮ್ಮತವಾದ ಭಕ್ತಿಯೇ ತುಂಬಿದೆ. ಅಚಲಾನಂದರ ಸಂಕ್ಷಿಪ್ತ ಚರಿತ್ರೆಯು ಆ ವಂಶೀಕರಲ್ಲಿ ದೊರೆತ ಗ್ರಂಥಾಧಾರದಿಂದಲೂ, ರಾಷ್ಟ್ರಕೂಟರಾಜರ ಶಾಸನಾಧಾರದಿಂದಲೂ ಬರೆಯಲ್ಪಟ್ಟಿದೆ. ಕ್ರಿ. ೮೦೧ಕ್ಕೆ ಸಲ್ಲುವ ಶಾಲಿವಾಹನ ಶಕೆಯ ಸಂವತ್ಸರವನ್ನು ಹೇಳಿರುವ ಮತ್ತು ಆ ವಂಶೀಕರು ನಿತ್ಯ ಪಾರಾಯಣದಲ್ಲುಪಯೋಗಿಸುವ ಶ್ಲೋಕವನ್ನೇ ಪ್ರಮಾಣಕ್ಕಾಗಿ ಆ ಲೇಖನದಲ್ಲಿ ಕೊಟ್ಟಿದೆ. ಆ ಶ್ಲೋಕವನ್ನು ಕಲ್ಪಿತವೆನ್ನುವುದಕ್ಕೆ ಕಾರಣವಿರುವದಿಲ್ಲ. ಅಂಥಾ ಕಾರಣದಿಂದ ಕಾರ್ಯಸಾಧನೆ ಏನಾಗಬೇಕು ? ಅದು ಯಾರಿಗೆ ?

ಅಚಲಾನಂದರು ನರಹರಿತೀರ್ಥರ ಮತ್ತು ಶ್ರೀಪಾದರಾಯರ ನಡುವೆ ಇದ್ದವರಲ್ಲ. ಪುರಂದರ ದಾಸರ ಸಮಕಾಲಿಕರೂ ಅಲ್ಲ. ಅವರು ಮಧ್ವಾಚಾರ್ಯರ ಸ್ತೋತ್ರಪದ ಮಾಡಿರುವರೆಂದರೆ ಆ ಪದವು ಅವರದೆಂದೇ ನಿರ್ಧರಿಸಲಾಗುವುದಿಲ್ಲ. ಕನ್ನಡಿಗರ ದುರ್ದೈವದಿಂದ ದಾಸರ ಪದಗಳ ಮುದ್ರಿಕೆಗಳು ಅಚ್ಚುಪುಸ್ತಕಗಳಲ್ಲೂ ಪರಿಶೀಲನೆಯಿಲ್ಲದ ಕಾರಣ ವ್ಯತ್ಯಾಸಗಳಾಗಿವೆ.

ಈಚಿಗೆ ಅನೇಕರು ತಮ್ಮ ಕವಿತ್ವಕ್ಕೆ ಪ್ರಾಶಸ್ತ್ಯಬರಲೆಂದು ದೊಡ್ಡವರ ಅಂಕಿತವನ್ನೇ ಹಾಕಿ ಹಾಡುಗಳನ್ನು ಮಾಡಿದ್ದಾರೆ. ಜಯವಿಠಲ ವಿಜಯವಿಠಲ ಮುದ್ರಿಕೆಯ ನಾಮುಗಳಲ್ಲಿ ಬಹಳ ಗಲಾಟೆ ನಡೆದಿದೆ. ಪುರಂದರ, ಗುರುಪುರಂದರ, ವರದಪುರಂದರ, ತಂದೆಪುರಂದರ, ಶ್ರೀಪುರಂದರವಿಠಲ ಮುದ್ರಿಕೆಗಳ ನಾಮುಗಳಲ್ಲಿ ಪಾಠ ಭೇದವುಂಟಾಗಿ ಪುರಂದರದಾಸರ ನಾಮುಗಳನ್ನು ಕಂಡುಹಿಡಿಯುವದಕ್ಕಾಗುವುದಿಲ್ಲ. ವಾಸುದೇವ ವಿಠಲ ಪ್ರಾಣೇಶವಿಠಲ ಮುದ್ರಿಕೆಗಳ ಪುರಾತನ ನಾಮುಗಳನ್ನು ಕಂಡುಹಿಡಿಯುವದಂತೂ ಅಸಾಧ್ಯ. ಏಕೆಂದರೆ ಈ ಮುದ್ರಿಕೆಗಳನ್ನೇ ಹಾಕಿ ಈಚಿನವರು ಬಹಳ ದೇವರ ನಾಮುಗಳನ್ನು ಬರೆದಿದ್ದಾರೆ. ಅಚಲಾನಂದರ ಪದಗಳು ಬಹುಕಾಲವಾದ್ದರಿಂದ ಖಿಲವಾಗಿವೆ. ಎಲ್ಲೋ ಅವರ ಕೆಲವು ನಾಮುಗಳೂ ಉಗಾಭೋಗಗಳೂ ಕಿವಿಗೆ ಬೀಳುತ್ತವೆ.

ಅಚಲಾನಂದರ ಚರಿತ್ರಲೇಖಕನು ಸ್ವಯಂ ವಿಜಯದಾಸರ ಶಿಷ್ಯಪೀಳಿಗೆಯಲ್ಲಿ ಬಂದ ಹರಿದಾಸ. ಆಂಗ್ಲಭಾಷಾಪಾಂಡಿತ್ಯ ಧೋರಣೆಯಿಂದ ದಾಸರ ಚರಿತ್ರೆಗೆಲ್ಲಾ ಶಕೆಯ ತಲೆಚೀಟಿಯನ್ನು ಮನಸ್ಸಿಗೆ ಕಟ್ಟಿ ಬರೆಯುವವನಲ್ಲ.

# ವಾದಭೂಮಿ

ಲೇಖಕ:—ಸಂಗನಗವಡಾ ಮಲ್ಲನಗವಡಾ ಮಲ್ಲನಗವಡರ ಸಾ॥ ಆಲದಕಟ್ಟಿ.

ಜಯಕರ್ನಾಟಕವ ತಾ॥ ೧೯—೧೨—೨೬ನೆಯ ಸಂಚಿಕೆಯಲ್ಲಿ ವೀ॥ಪ್ಪಾ ವೀರಭದ್ರಪ್ಪಾ ನಾಗಶೆಟ್ಟಿ ಕನ್ನಡ ಶಾಳಾ ಮಾಸ್ತರ ಸಂಗೊಳ, ಇವರ "ವಾದಭೂಮಿ" ಅನ್ನುವ ಲೇಖದಲ್ಲಿ ಚನ್ನಬಸವಪುರಾಣವು "ಶಕವರುಷ ೧೫೦೭ನೆಯ ತಾರಣಸಂವತ್ಸರದಲ್ಲಿ ಮುಗಿಯಿತೆಂದು ಹೇಳಿದುದರಲ್ಲಿ ತುಸು ತಪ್ಪಾಗಿದೆ, ಲೆಖ್ಖದಿಂದ ನೋಡಿದರೆ ೧೫೦೬ ನೆಯ ಶಕವರುಷವೇ ತಾರಣ ಸಂವತ್ಸರವು. ಈ ತಪ್ಪು ಬರೆದವರಿಂದ ಆಗಿರಬಹುದೆಂದು ಅಲ್ಲಿ "ಶಾಲಿವಾಹನ ಶಕದ ಸಹಸ್ರದ್ವೈನೂರ ಮೇಲದಾರನೆಯ ತಾರಣ ಸಂ॥ ಯಂದು ತಿದ್ದಿಕೊಳ್ಳಬಹುದೆ"ಂದು ಭಾವಿಸಿ ಇದರಂತೆ "ರಾಜಶೇಖರವಿಳಾಸ ವೃಷಭೇಂದ್ರವಿಜಯ ಎರಡೂ ಕಾವ್ಯಗಳು ರಚಿಸಲ್ಪಟ್ಟ ಶಕವರುಷಗಳನ್ನು ಬರೆಯುವದರಲ್ಲಿಯೂ ತುಸು ತಪ್ಪಾಗಿದೆ" ಯೆಂದು, ಹೇಳಿದೆ. ಈಲೇಖಕರ ಅಭಿಪ್ರಾಯದಂತೆ ಚನ್ನಬಸವ ಪುರಾಣದ ಪಂಡಿತಾಗ್ರಣಿ ವಿರೂಪಾಕ್ಷ ಪಂಡಿತರು ಶಬ್ದಗಳ ಗಣಿತಸಂಜ್ಞೆಯನ್ನು ಕೊಡದೆ ಬರೇ ಕನ್ನಡ ಭಾಷಾ ಅಂಕೆಗಳ ಸಂಜ್ಞೆಯನ್ನು ಕೊಟ್ಟಿರುವುದರಿಂದ ೧೫೦೬ ನೆಯ ಶಕವರುಷವು ತಾರಣಸಂವತ್ಸರವು ಇದ್ದರೆ ಒಂದುವೇಳೆ ಶಾಲಿವಾಹನ ಶಕದ ಸಹಸ್ರದ್ವೈನೂರ ಮೇಲದಾರನೆಯ ತಾರಣಸಂವತ್ಸರದ ಎಂದು ತಿದ್ದಿಕೊಂಡರೆ ಎಂದೂ ತಪ್ಪಾಗಲಾರದು. ಇದು ಮುದ್ರಕರ ದೋಷವಲ್ಲದೇ ಕವಿಗಳ ದೋಷವಲ್ಲ.

೨. "ವಿ॥ ನಾಗಶೆಟ್ಟಿಯವರು ರಾಜಶೇಖರವಿಳಾಸವು ಸುರಚಿರ ಶಾಲಿವಾಹನ ಶಕಾನ್ವಿತ ರತ್ನ ಸಮುದ್ರ ಬಾಣ ಭೂ ಪರಿಗಣಗಾಂಕ ಬಂಧುರ ಜಯನಾಬ್ಧದಲ್ಲಿಪೂರ್ಣವಾಯ್ತು, ಎಂದು ಆ ಕಾವ್ಯದ ಕೊನೆಯ ಪದ್ಯದಲ್ಲಿ ಹೇಳಿದೆ. "ರತ್ನ" ಯಂದು ೯ಕ್ಕೆ ಪರ್ಯಾಯ ಶಬ್ದವಾಗಿರುವುದರಿಂದ ಶಕವರುಷ ೧೫೪೯ ನೆಯ ಶಕವರುಷವೇ ಜಯ ಸಂವತ್ಸರವು ಎಂದು ಹೇಳಿದಂತಾಯಿತು. ಆದರೆ ನಿಜವಾಗಿ ೧೫೭೬ ನೆಯ ಶಕವರುಷವೇ ಜಯ ಸಂವತ್ಸರವು. "ರತ್ನ" ಶಬ್ದಕ್ಕೆ ೬ ಎಂದು ಅರ್ಥಮಾಡಲಿಕ್ಕೆ ಬರುವದೋ ಹೇಗೆ? ಇಲ್ಲದಿದ್ದರೆ ಅಲ್ಲಿ ಸುರಚಿರ ಶಾಲಿವಾಹನ ಶಕಾನ್ವಿತ ಕರ್ಮಸಮುದ್ರ ಬಾಣ ಭೂಪರಿಗಣಗಾಂಕ ಎಂಬುದಾಗಿ ತಿದ್ದುವದು ಒಳ್ಳೇವೋ ಹೇಗೆ? ಇವನ್ನು ಪ್ರಾಜ್ಞರು ಪರ್ಯಾಲೋಚಿಸತಕ್ಕದ್ದು."

೩. "ಇನ್ನು ಭೂಧರ ಎಂದು ೭ಕ್ಕೆ ಪರ್ಯಾಯ ಶಬ್ದವಾಗಿರುವುದರಿಂದ ವೃಷಭೇಂದ್ರ ವಿಜಯವು ೧೫೫೭ನೆಯ ಶಕಾಬ್ದದ ನಳ ಸಂವತ್ಸರದಲ್ಲಿ ರಚಿಸಲ್ಪಟ್ಟಿತೆಂದು ಹೇಳಿದ್ದು ತಪ್ಪಾಗಿದೆ ಎಂದು ಕಂಡುಬರುತ್ತದೆ. ನಿಜವಾಗಿ ೧೫೯೮ನೆಯ ಶಾಲಿವಾಹನ ಶಕವೇ ನಳಸಂವತ್ಸರವು. ಭೂಧರ ಶಬ್ದಕ್ಕೆ ೮ ಎಂದು ಅರ್ಥ ಮಾಡಲಿಕ್ಕೆ ಬರುವದೊ ಹೇಗೆ? ಇಲ್ಲದಿದ್ದರೆ ವೃಷಭೇಂದ್ರ ವಿಜಯದ ೪೨ನೆಯ ೧೧೦ನೆಯ ಪದ್ಯದಲ್ಲಿ "ನವವಿದಚಂದ್ರ ಬಾಣನಿಧಿ ಭೂಧರ ಸಂಖ್ಯೆಯ ನಾಳ್ದ"ಯೆಂದು ತಿದ್ದುವದುವಿಹಿತವೋ ಹೇಗೆ? ಇದನ್ನು ವಿದ್ವಾಂಸರು ವಿಚಾರಮಾಡತಕ್ಕದ್ದು" ಅನ್ನುವ ಈ ಲೇಖಕರ ಲೇಖನಕ್ಕೆ ವಾದಭೂಮಿ ಬಂಜೆರಿನ ಲೇಖನವೆಂದರೆ ಅತಿಶಯೋಕ್ತಿಯಾಗಲಾರದು.

೪. ಯಾಕಂದರೆ ಶ್ರೀ ಲಕ್ಷ್ಮೀಶ ಕವಿಯು ವಿರಚಿಸಿದ ಜೈಮಿನಿಯ ೧೮ನೆಯ ಸಂಧಿ ಸೂಚನೆಯಲ್ಲಿ ಸೀಮಂತಮಣಿ ಸೀತಾರಮಣಿ ಗರ್ಭಮಂ ತಾಳ್ದಳುಯಂತಲೂ ಶ್ರೀ ಸರ್ಪಭೂಷಣ ಕವಿ ವಿರಚಿತ ಕೈವಲ್ಲ್ಯಕಲ್ಪವಲ್ಲರಿಯಲ್ಲಿ ಗುಣಗಳೇ ಭೂಷವಲ್ಲದೇ ಸರ್ಪಕ್ಕೂ ಮಣಿ ಹೇವಾದಿಗಳು ಭೂಷಣವಲ್ಲವು ಯಂತಲೂ ಸುಭಾಷಿತಕಾರರು "ಷಡ್ಗುಣ್ಯಭಾರ್ಯಾಕುಲ ವೃದ್ಧ ಚರಿತಿ" ಯೆಂದು ತಮ್ಮ ಗ್ರಂಥಗಳಲ್ಲಿ ಚನ್ನಾಗಿವಿವೇಚನ ಮಾಡಿ ಉಲ್ಲೇಖಿಸಿರುವದರಿಂದ "ರತ್ನ" ಶಬ್ದವು ನವರತ್ನ ನವನಿಧಿಗಳ ಪರ್ಯಾಯವಾಗಿದ್ದರೂ ಸ್ತ್ರಿ-ಪುತ್ರ-ಗುಣಗಳ ಪರವಾಗಿ ಈ ಕವಿವರ್ಯರು ವಿಮರ್ಶದಿಂದ ಉಪಮೆಯನ್ನು ಕೊಟ್ಟಿರುವುದರಿಂದ ರತ್ನ ಈ ಶಬ್ದಕ್ಕೆ ಆರುಯೆಂದು ಸಹಜ ಅರ್ಥವಾಗುತ್ತದೆ.

೫. ಮಹಿ ಅಂದರೆ ಭೂವಸು ಅಂದರೆ ಭೂ "ಸತ್ವಾತ್ಮಕವಾದ ಭೂಧಾತುವು ಅಷ್ಟಾಭಿಧಾರಣನವನ್ನು ಮಾಡುತ್ತದೆಂದು

ಶ್ರೀಮನ್ನಿಜಗುಣಶಿವಯೋಗಿ ವಿರಚಿತ ವಿವೇಕಚಿಂತಾಮಣಿಯಲ್ಲಿ ಅಷ್ಟಾಭಿದಾನವೆಂಬ ಪ್ರಕರಣದಲ್ಲಿ ಭೂಧಾತುವನ್ನು ವರ್ಣಿಸಿರುತ್ತಾರೆ. ಮತ್ತು ಭೂಧರ-ಮಹಿತರ-ವಸುಧಾರಾ ಈ ಶಬ್ದಗಳು ಪರ್ವತಪರವಾಗಿ ಅರ್ಥಮಾಡಿಕೊಂಡರೂ ವಸುಧಾರಾ ಪರ್ವತವು ೮ ಪುರಗಳಿಂದ ಶೋಭಿಸುವದೆಂದು ಅದೇ ಗ್ರಂಥದ ಇಳಾವೃತನಗರಂಗಳು ಅನ್ನುವ ಪ್ರಕರಣದಲ್ಲಿ ವಿಶದವಾಗಿರುತ್ತದೆ. ಮತ್ತು ಭೂದರ ಅನ್ನುವ ಶಬ್ದವು ಸರ್ಪ-ಶೇಷ.ಪರವಾಗಿ ಅರ್ಥಮಾಡಿಕೊಂಡರೂ ಅದೇ ಗ್ರಂಥದ ಅಷ್ಟಕುಲ ಫಣಿಗಳಿಗೆ ತೆಗೆದುಕೊಳ್ಳಬೇಕಲ್ಲದೇ "ವಸು" ಶಬ್ದವು ಅದೇ ಗ್ರಂಥದ ಗಣಿತ ಸಂಜ್ಞೆ ಅನ್ನುವ ಪ್ರಕರಣದಲ್ಲಿ ಅಕ್ಕೆ ಸಹಜ ಅರ್ಥವಾಗುವುದರಿಂದ ರಾಜಶೇಖರ ವಿಳಾಸ ಮತ್ತು ವೃಷಭೇಂದ್ರವಿಜಯ ಈಯರಡೂ ಗ್ರಂಥಗಳಲ್ಲಿ ತಿದ್ದಲಿಕ್ಕೆ ಬರಲಾರದು. ಅನೇಕ ಅರ್ಥದ ಉಪಮೆಯನ್ನು ಕೊಡಬಹುದು ತಥಾಸ್ತು.

೬ ವಿವಾದದಿಂದ ವಿಖ್ಯಾತನಾಗಿ ಮಾಸಿತೋಭಯ ಉಭಯಕವಿ ವಿಶಾರದವೆಂಬ ಜಗತ್ಪ್ರಸಿದ್ಧವಾದ ಬಿರುದುಳ್ಳ ರಾಜಶೇಖರವಿಳಾಸ ವೃಷಭೇಂದ್ರವಿಜಯ ಶಬರಶಂಕರವಿಳಾಸಗಳೆಂಬ ಈ ಭೂಮಿಕೆಗಳಲ್ಲಿ ಸದಾ ಕಲ್ಪದ್ರುಮ ಕಲ್ಪಲತೆಗಳೆಂಬ ಸುಧಾರಸ ಫಲಭರಿತದಿಂದ ಶೋಭಿಸುತ್ತಿರುವ ಈ ಫಲಗಳನ್ನು ಸದಾವಕಾಲದಲ್ಲಿಯೂ ಸ್ವೀಕರಿಸಬೇಕು.

---

## ಮೊರೆ

ಒಳಗೊಂಪು ಹೊರಗೊಂದು ಸುತ್ತಲಿನ ಜನವೆಲ್ಲ ।
ಕಳವಿನಿಂದಲಿ ಕರುಳ ಕತ್ತರಿಸಿ ಕೊಲ್ಲುವದು ।
ತಿಳಿಯೆನಾಂ ಸೋಗುಗಳ ನಿಜವಾದ ಬಣ್ಣವನು, ರಕ್ಕಸರ ವೇಷವನ್ನು ॥

ಬಿಳುವು ಕಂಡುದುದೆಲ್ಲ ಹಾಲೆಂದು ನಂಬಿದೆನು ।
ಒಳಿತೆಂದು ನಾನೀಂಪೆ, ಬಹುವಿಧದಿ ಬಳಲಿದೆನು ।
ಬೆಳಗಿತೆನ್ನಯ ಬಗೆಯು ತಿಳಿಯಲದು ಸುಣ್ಣದೊಳು ಬೆರೆತ ನೀರೆಂದು ಕೊನೆಗೆ ॥೧॥

ಸಾಧಿಸಲು ಸ್ವಾರ್ಥವನು ಬಾಧಿಪರು ಪರರನ್ನು ।
ಬೋಧಿಸುತ ಜನಕೆಲ್ಲ ಯತಿವೇಷಂ ತಳೆದು ।
ವ್ಯಾಧನೋಳ್ ಹರಿಣಿಯನು ಹಿಡಿಯುತಿಹ ಬಲೆಯನ್ನು ಚಲ್ಲರಿದು ಬೀಸುತಿಹರು ॥

ಬಾಧಿಪರು ಬೇಂಟೆಯನು ಬೀಳಲ್ಕೆ ಬಲೆಯಲ್ಲಿ ।
ಕಾದುವರು ಕಿತ್ತೊಗೆದು ಕರುಣೆಯನ್ನೆದೆಯಿಂದ ।
ಬಾಧೆಯಿಲ್ಲದೆ ಬೇಗ ಹಿಗ್ಗುತ್ತ, ಕೆಲಕಾಲ, ಸಟೆಯನ್ನೆ ದಿಟಮಾಡ್ಪರು ॥೨॥

ಬಾಡುತಿರೆ ಚಿಗೆಹೂವು ನೋಡುತೀ ನೋಟವನು ।
ಕಾಡುತಿದೆ ಜಗದಲ್ಲಿ ತುಂಬಿರ್ದ ತೋರಿಕೆಯು ।
ದೂಡುತ್ತ ಮನದಲ್ಲಿ ಮೂಡುತಿಹ ಭಾಸ್ಕರನ ಬೆಳಗುತಿಹ ತೇಜವನ್ನು ॥

ನೋಡ ನೋಡಲು ಮಿಂಚು ಮಿಂಚಿ ಮರೆಯಾಗುವದು ।
ಮೂಡುವದು ಕತ್ತಲೆಯು ಮೊದಲಿಗಿಮ್ಮಡಿಯಾಗಿ ।
ಮಾಡುವದು ನನ್ನನ್ನು ಕಾಡಿನೊಳು ಕಣ್ಕಟ್ಟಿ ಬಿಟ್ಟಿರ್ಪ ಕುರುಡನಂತೆ ॥೩॥

ಯಾರಿಗುಸುರಲಿದೇವ ಬಗೆಯದಿನ್ನವನೆನ್ನ ।
ಭಾರವಾಗಿಹ ನನ್ನ ಬಗೆಯು ಭಾರವಸೆಲ್ಲ ।
ಭಾರವನು ಹೊರುವವನು ಬನ್ನವನು ಕಳೆವವನು ಬಂಧನವ ಹರಿವವನು ಮೇಣ್ ॥

ಯಾರಿಹರು ಧರಣಿಯಲಿ ? ನಿನ್ನನುಳಿಯಲು ಮತ್ತೆ ।
ದೂರ ಪೋಗಲು ಬೇಡ; ಓರೆಯಾಗಲು ಬೇಡ ।
ಕಾರುಣ್ಯದಿಂದೆನ್ನ ಕಂಗೆಟ್ಟ ಬಾಲಕನ, ಕರವಿಡಿವು ಕರುಣಾಸಯ್ಯಾ ॥೪॥

— ಸೋಮಾನುಜ

# ದಾಸರ ಮುದ್ರಿಕೆಗಳು

ಲೇಖಕ: —ಗುರುಣಾವ ಬೆಂಗೇರಿ, ಹುಬ್ಬಳ್ಳಿ.

**'ವಿಠ್ಠಲ' ಶಬ್ದಾಂಕಿತವಾದವುಗಳು:—**

೧. ಪುರಂದರ ವಿಠಲ ೨. ವರದಪುರಂದರ ವಿಠ್ಠಲ ೩. ಗುರುಪುರಂದರ ವಿಠ್ಠಲ ೪. ಅಭಿನವಪುರಂದರ ವಿಠ್ಠಲ ೫. ಗುರುಮಧ್ವಪತಿ ವಿಠ್ಠಲ ೬. ವಿಜಯ ವಿಠ್ಠಲ ೭. ಗೋ—ಪಾಲ ವಿಠ್ಠಲ ೮. ಹಯುವದನ ವಿಠ್ಠಲ ೯. ಮುದ್ದು ವಿಠ್ಠಲ ೧೦. ವೇಣೀಗೋಪಾಲ ವಿಠ್ಠಲ ೧೧. ಮಧ್ವೇಶ ವಿಠ್ಠಲ ೧೨. ವ್ಯಾಸ ವಿಠ್ಠಲ ೧೩. ಗುರುವಿಜಯ ವಿಠ್ಠಲ ೧೪. ಮೋ-ಹನ ವಿಠ್ಠಲ ೧೫. ವಾಸುದೇವ ವಿಠ್ಠಲ ೧೬. ಕೇಶವ ವಿಠ್ಠಲ ೧೭. ಗುರುಗೋಪಾಲ ವಿಠ್ಠಲ ೧೮. ವರದಗೋಪಾಲ ವಿಠ್ಠಲ ೧೯. ತಂದೆಗೋಪಾಲ ವಿಠ್ಠಲ ೨೦. ಜಗನ್ನಾಥ ವಿಠ್ಠಲ ೨೧. ನರಸಿಂಹ ವಿಠಲ ೨೨. ಜನಾರ್ದನ ವಿಠಲ ೨೩. ಕಮಲೇಶ ವಿಠ್ಠಲ ೨೪. ಕಮಲಾಪತಿ ವಿಠ್ಠಲ ೨೫. ಮಧ್ವೇಶ ವಿಠ್ಠಲ ೨೬. ಶ್ರೀಕರ ವಿಠ್ಠಲ ೨೭. ಇಭವರದ ವಿಠ್ಠಲ ೨೮. ಭೀಮೇಶ ವಿಠಲ ೨೯. ಶ್ರೀದ ವಿಠ್ಠಲ ೩೦. ಪ್ರಾಣೇಶ ವಿಠ್ಠಲ ೩೧. ಶ್ರೀಶ ವಿಠ್ಠಲ ೩೨. ಅಭಿನವ ಜನಾರ್ದನ ವಿಠಲ ೩೩. ವೆಂಕಟ ವಿಠ್ಠಲ ೩೪. ಗೋಪತಿ ವಿಠಲ ೩೫. ಆನಂದ ಮಯ ವಿಠಲ ೩೬. ಜ್ಞಾನಮಯ ವಿಠಲ ೩೭. ಲಕ್ಷ್ಮೀಶ ವಿಠಲ ೩೮. ಗುರುಪ್ರಾಣೇಶ ವಿಠಲ ೩೯. ಯೋಗೇಂದ್ರ ವಿಠಲ ೪೦. ಶ್ರೀನಿವಾಸ ವಿಠಲ ೪೧. ಶ್ರೀ ಪ್ರಾಣೇಶ ವಿಠಲ ೪೨. ಗುರು ಶ್ರೀಶವಿಠಲ ೪೩. ಸುಂದರ ವಿಠಲ ೪೪. ಸುಖ ಸುಂದರ ವಿಠಲ ೪೫. ವೆಂಕಟೇಶ ವಿಠಲ ೪೬. ಮನೋಹರ ವಿಠಲ ೪೭. ಪ್ರಸನ್ನ ವಿಠಲ ೪೮. ಮನೋಹರ ವಿಠಲ ೪೯. ಶ್ರೀಶಪ್ರಾಣೇಶ ವಿಠಲ ೫೦. ಸುಖನಿಧಿ ವಿಠಲ ೫೧. ವಿಠಲ ೫೨. ರಘುಪತಿ ವಿಠಲ ೫೩. ಭೂವರಹ ರಘುಪತಿ ವಿಠಲ ೫೪. ಶ್ರೀಪತಿ ವಿಠಲ ೫೫. ತಂದೆ ಶ್ರೀಪತಿ ವಿಠಲ ೫೬. ಶ್ರೀನಿಧಿ ವಿಠಲ ೫೭. ಶ್ರೀವರ ವಿಠಲ ೫೮. ಶ್ರೀಪಾದ ವಿಠಲ ೫೯. ತಂದೆ ಶ್ರೀನಿಧಿ ವಿಠಲ ೬೦. ಶ್ರೀತೀರ್ಥ ವಿಠಲ ೬೧. ಮುದ್ದು ಮೋಹನ ವಿಠಲ ೬೨. ಸಿರಿವಿಜಯ ವಿಠಲ ೬೩. ರಂಗ ವಿಠಲ ೬೪. ಮಧ್ವಪತಿ ವಿಠಲ ೬೫. ಸಿರಿಮೋಹನ ವಿಠಲ ೬೬. ಬಾದರಾಯಣ ವಿಠಲ ೬೭. ಅಚಲಾನಂದ ವಿಠಲ ೬೮. ವ್ಯಾಸಪತಿ ವಿಠಲ ೬೯. ಮೇದಿನೀಪತಿ ವಿಠಲ ೭೦. ಚತುರ್ಭುಜ ವಿಠಲ ೭೧. ಶ್ರೀಶಕೇಶವ ವಿಠಲ ೭೨. ರಾಮಚಂದ್ರ ವಿಠಲ ೭೩. ವೈಕುಂಠ ವಿಠಲ ೭೪. ಶ್ರೀ ಪಾದತೀರ್ಥ ವಿಠಲ ೭೫. ಶ್ರೀ ತೀರ್ಥಪಾದ ವಿಠಲ ೭೬. ವರದೇಂದ್ರ ವಿಠಲ ೭೭. ರಮಾಪತಿ ವಿಠ್ಠಲ ೭೮. ಗುರುಮಧ್ವೇಶ ವಿಠಲ ೭೯. ರಮಾಸುಂದರ ವಿಠಲ ೮೦. ಶ್ರೀವಿಭವರದ ವಿಠಲ ೮೧. ಸಿರಿರಘುಪತಿ ವಿಠಲ ೮೨. ದೇವೇಂದ್ರ ವಿಠಲ ೮೩. ಪಾಂಡುರಂಗ ವಿಠಲ ೮೪. ವೆಂಕಟಪತಿ ವಿಠಲ ೮೫. ಲಕ್ಷ್ಮೀಪತಿ ವಿಠಲ ೮೬. ಲಕ್ಷ್ಮೀಕಾಂತ ವಿಠಲ ೮೭. ಕುಧರಧರ ವಿಠಲ ೮೮. ರಾಜಗೋಪಾಲ ವಿಠಲ ೮೯. ಶ್ರೀ ನಾರಾಯಣ ವಿಠಲ ೯೦. ಅಚ್ಯು ವಿಠಲ (ಇವುಗಳಲ್ಲಿ ಮೊದಲಿನ ೬೧ ಹೆಸರುಗಳು ಹಿಂದಕ್ಕೆ ಜಯಕರ್ನಾಟಕದಲ್ಲಿ ಮುದ್ರಿತವಾದ ಪೀಳಿಗೆಯಲ್ಲಿ ಬಂದಿವೆ. ಮಿಕ್ಕವುಗಳು ಬಂದಿಲ್ಲ. ಮಧ್ವೇಶ ವಿಠ—ಶ್ರೀಮಧ್ವೇಶ ವಿಠಲ; ಇಭವರದ ವಿಠಲ-ಶ್ರೀವಿಭವರದ ವಿಠಲ ಶ್ರೀಪಾದ ವಿಠಲ-ಶ್ರೀಪಾದತೀರ್ಥ ವಿಠಲ-ಇವು ಬೇರೆ ಬೇರೆ ದಾಸರ ಮುದ್ರಿಕೆಗಳೋ ಹೇಗೆ ಶೋಧಿಸಬೇಕು. ಮನೋಹರ ವಿಠಲ ಎಂಬ ಹೆಸರಿನ ಇಬ್ಬರು ಬೇರೆ ಬೇರೆ ದಾಸರು ಇದ್ದರೋ ಹೇಗೆ ? ಎಂಬುದನ್ನು ಶೋಧಿಸಬೇಕು. ಮತ್ತು ಹೆಚ್ಚಿನ ಹೆಸರುಗಳು ಸಿಕ್ಕರೆ ತಿಳುಹಬೇಕು.)

**ವಿಠಲಾಂಕಿತವಲ್ಲದೆ ಬೇರೆ ಅಂಕಿತವುಳ್ಳ ಹೆಸರುಗಳು—**

ವಿಠ್ಠಲ ಮುದ್ರಿಕೆಯಲ್ಲದೆ ಬೇರೆ ಮುದ್ರಿಕೆಯಿಂದ ಪದ ಮಾಡಿದವರ ಅಂಕಿತ ಕೆಳಗೆ ಬರೆದಂತೆ.

೧. ರಘುಕುಲತಿಲಕ ೨. ಶ್ರೀಕೃಷ್ಣ ೩. ಹಯವದನ ೪. ಆದಿಕೇಶವ ೫. ಪ್ರಸಂನ ವೆಂಕಟೇಶ ೬. ಬೇಲೂರ ಚನ್ನಿಗರಾಯ ೭. ವಿಜಯ ಹಯಗ್ರೀವ ೮. ಶಿರಿವತ್ಸಾಂಕಿತ ೯. ರಾಮಕೃಷ್ಣ ೧೦. ವ್ಯಾಸಾ ೧೧. ವರದ ವೆಂಕಟಾ ೧೨. ಶ್ರೀ ನಾರಸಿಂಹಾ ೧೩. ವೇಣುಗೋಪಾಲ ೧೪. ರಾಜಗೋಪಾಲ ೧೫. ಇಂದಿರೇಶ್ಯಾ ೧೬. ಗುರು ಇಂದಿರೇಶ್ಯಾ ೧೭. ಅನಂತಾದ್ರೀಶ್ಯಾ ೧೮. ಗೋಪಾಲ ೧೯. ಕದರುಂಡಲಗಿ ಹನುಮಯ್ಯಾ ೨೦. ಕದರುಂಡಲಗೀಶ್ಯಾ ೨೧. ವೆಂಕಟ ಗೋಪಾಲ




## ಕೊಲ್ಲಾಪುರ ಮತ್ತು ಮಿರಜದ ಕನ್ನಡ ಶಿಲಾಲಿಪಿಗಳು

ಕೊಲ್ಲಾಪುರದಲ್ಲಿ ಸಿಕ್ಕದ್ದೊಂದು ೧೦೫೮ನೆಯ ಶಕದ ಶಿಲಾಲಿಪಿಯೂ ಮಿರಜದಲ್ಲಿ ಸಿಕ್ಕದ್ದೊಂದು ೧೦೬೬ ನೆಯ ಶಕದ ಶಿಲಾಲಿಪಿಯೂ ಎಪಿಗ್ರಾಫಿಯಾ ಇಂಡಿಕಾದಲ್ಲಿ ಮುದ್ರಿತವಾಗಿದೆ. ಇವೆರಡೂ ಶಿಲಾಲಿಪಿಗಳ ಅಕ್ಷರಗಳು ಕನ್ನಡ, ಭಾಷೆ ಬನ್ನಡ. ಕೊಲ್ಲಾಪುರದಲ್ಲಿಯ ಶಿಲಾಲಿಪಿಯು ಪಾರ್ಶ್ವನಾಥ ಗುಡಿಯ ಹತ್ತರದ ಕಲ್ಲಿನಲ್ಲಿ ಇರುತ್ತದೆ. ಶಿಲಾಹಾರ ಅರಸನಾದ ಗಂಡರಾದಿತ್ಯನ ಕಾಲದ್ದು. ಈ ಶಿಲಾಹಾರರು ಗರುಡಧ್ವಜವುಳ್ಳವರು. ನಿಂಬದೇವೇಶ್ವರನೆಂಬವನು ಈ ಗಂಡರಾದಿತ್ಯನ ಮಹಾಸಾಮಂತನು. ಆತನು ಕವಡೆಗೊಳ್ಳದಲ್ಲಿ ಒಂದು ಜೈನದೇವಾಲಯುವನ್ನು ಕಟ್ಟಿಸಿದನು. ಆ ಐಹೊಳಿಯ ೫೦೦ ವೀರ ಬಣಜಿಗರು ಶ್ರುತಕೀರ್ತಿಗೆ ಈ ಕವಡೆಗೊಳ್ಳದ ದೇವಾಲಯುವ ಉಪಯೋಗಕ್ಕೋಸ್ಕರ ಭೂಮಿದಾನಮಾಡದ ಉಲ್ಲೇಖವು ಈ ಶಿಲಾಲಿಪಿಯಲ್ಲಿ ಉಂಟು. ಈ ಶಿಲಾಲಿಪಿಯಲ್ಲಿ ತಗರ, ಮುಳವಾಡ, ಕವಡೆಗೊಳ್ಳ, ಐಹೊಳೆ ಅಥವಾ ಅಹಿಚ್ಛತ್ರ, ಕೊಲ್ಲಾಪುರ, ಮಿರಂಜೆ, ಕೂಂಡೀ ಪಟ್ಟಣ, ತೊರಂಬಗ, ಮೈಸಿಗೆ, ಬಲಿಯವಟ್ಟಣ ಮುಂತಾದ ಹೆಸರುಗಳು ಬಂದಿವೆ. ಬಲಿಯ ಪಟ್ಟಣವೆಂಬುದು ಮಲಬಾರ ಜಿಲ್ಲೆಯಲ್ಲಿರುವ ಚಿರಕಲ್ಲ ತಾಲೂಕಿನಲ್ಲಿರುವ ಬಲಾಪಟ್ಟಣವೆಂದೂ ಅದು ಟೊಲೋಮಿಯು ಬರೆದ ಭೂಗೋಲದಲ್ಲಿ ಉಲ್ಲೇಖಿಸಲ್ಪಟ್ಟಿರುವುದೆಂದೂ ತಿಳವಳಿಕೆಯುಂಟು.

ಮಿರಜಿಯ ಶಿಲಾಲಿಪಿಯು ಆಪಟ್ಟಣದ ಕಿಲ್ಲೆಯ ಗೋಡೆಯಲ್ಲಿ ಉಂಟು. ಇದೂ ಕನ್ನಡ ಅಕ್ಷರ ಮತ್ತು ಭಾಷೆಯ ಶಿಲಾಲಿಪಿಯು. ವೀರಬಣಜಿಗರ ಸಭೆಯೊಂದು ಶೇಡಂಬಾಳದಲ್ಲಿ ಕೂಡಿತ್ತೆಂದೂ ಆ ಶೇಡಬಾಳದಲ್ಲಿರುವ ಮಹಾದೇವೇಶ್ವರ ದೇವಾಲಯಕ್ಕೆ ಅವರು ದಾನಗಳನ್ನು ಕೊಟ್ಟರೆಂದೂ ಉಲ್ಲೇಖವಿದೆ. ಆ ದೇವಾಲಯವನ್ನು ಆ ಪಟ್ಟಣದ ಮಹಾಪ್ರಭುವಾದ ಮಾದಿರಾಜನೆಂಬವನು ಕಟ್ಟಿಸಿದನು. ಭಾಯಿಪ್ಪಯ್ಯ ನಾಯಕ ಮತ್ತು ಮಲ್ಲಪ್ಪಯ್ಯ ನಾಯಕ ಎಂಬಿಬ್ಬರು ದಂಡನಾಯಕರು ಅದೇ ಗುಡಿಗೆ ಕೆಲವು ಸುಂಕಗಳನ್ನು ಕೊಟ್ಟರು. ಅಲ್ಲದೆ ಶೇಡಬಾಳ ಊರಿನ ಜನರು ಆ ದೇವಾಲಯಕ್ಕೆ ಅನೇಕ ದಾನಗಳನ್ನು ಕೊಟ್ಟರು. ಅವುಗಳ ಉಲ್ಲೇಖವು ಈ ಶಿಲಾಲಿಪಿಯಲ್ಲಿ ಇರುತ್ತದೆ. ಐಹೊಳೆ, ಮಿರಂಜೆ, ಬಾಗೆ, ಡೋಣಿಕೋಡು, ಶೇಡಂಬಾಳ ಮುಂತಾದ ಊರ ಹೆಸರುಗಳು ಬಂದಿವೆ. ಪಿರಿಯಗುವರ, ಸಿರಿಗುಪ್ಪ, ಜುಗುಳಕೊಪ್ಪ, ವಳವಾಡ ಮುಂತಾದ ಹೆಸರುಗಳೂ ಉಂಟು.

—Epigraphia Indica.

## ಮನುಷ್ಯನ ಮೂಲವು

ದಿ ಇಂಡಿಯನ್ ನೇಶನಲ್ ಹೆರಾಲ್ಡದಲ್ಲಿಯ ಒಂದು ಸುದ್ದಿಯ ಸಾರವು:—

ಮನುಷ್ಯನ ಮೂಲವು ಯಾವುದೆಂಬುದನ್ನು ಶೋಧಿಸುವುದರಲ್ಲಿ ಅನೇಕರು ತೊಡಗಿರುವರು. ೧೯೩೮ನೆಯ ಇಸ್ವಿಯಲ್ಲಿ ಈ ತರಹದ ಶೋಧವನ್ನು ಮಾಡುವದಕ್ಕೆ ವಿಮಾನಗಳು ಸಹಾಯಕವಾಗುವವು.

ಆಫ್ರಿಕಾಖಂಡದಲ್ಲಿರುವ ಶಹಾರಾಬೈಲು ಪ್ರದೇಶವು ನಿರ್ಜನ ಪ್ರದೇಶವೆಂದು ಇಷ್ಟು ದಿವಸ ತಿಳವಳಿಕೆಯಾಗಿತ್ತು. ಆದರೆ ಅಲ್ಲಿ ಶೋಧಮಾಡಿದರೆ ಮನುಷ್ಯನ ಮೂಲವು ತಿಳಿಯಲಿಕ್ಕೆ ಸಹಾಯವಾಗಬಹುದೆಂದು ಈಗ ತಿಳಿದುಬಂದಿದೆ. ಮೊಂಗೋಲಿಯಾದಲ್ಲಿಯೂ ಎಷ್ಟೋ ಗೊತ್ತಿಲ್ಲದ ಪ್ರದೇಶವುಂಟು. ಅಲ್ಲಿಯೂ ಶೋಧಗಳು ನಡೆಯುಬಹುದು. ದಕ್ಷಿಣಆಫ್ರಿಕೆಯ ಬುಶ್‌ಮೆನ್‌ರಲ್ಲಿ ಕಂಡುಬರುವ ಅವಶೇಷಗಳಿಂದಲೂ ಮನುಷ್ಯನ ಮೂಲದ ಬಗ್ಗೆ ಹೊಸ ಜ್ಞಾನವು ಪ್ರಾಪ್ತವಾಗಬಹುದು. ಮತ್ತು ಈ ವರ್ಷ ಅಬಿಸೀನಿಯ, ಇರಾಣ, ಪಾಲಿಸ್ತಾಯಿನ್, ಇಜಿಪ್ತ, ಅಸೀರಿಯಾ ಮತ್ತು ಉತ್ತರಧ್ರುವ ಮುಂತಾದ ಪ್ರದೇಶಗಳಿಗೆ ವಿಮಾನಗಳು ಹೊಸ ಶೋಧಕ್ಕೋಸ್ಕರ ಹೋಗುವವು. ಈಗ ನಿರ್ಜನವಾದ ಶಹಾರಾಬೈಲಿನಲ್ಲಿ ಒಂದು ಕಾಲಕ್ಕೆ ದೊಡ್ಡ ದೊಡ್ಡ ಪಟ್ಟಣಗಳಿದ್ದವೆಂದು ತಿಳಿದುಬಂದಿದೆ. ಲೇಕ್‌ಚಾಡ್ ಮತ್ತು ತ್ಯುನಿಸ ಸಮುದ್ರಧುನಿಯ ನಡುವಿನ ಪ್ರದೇಶದಲ್ಲಿ ಬಂಡೆಗಲ್ಲುಗಳ ಮೇಲೆ ಬಣ್ಣಗಳ ಚಿತ್ರಗಳು ದೊರೆಯುವವೆಂದು ಶೋಧವಾಗಿದೆ. ಬ್ರಿಟಿಶ್ ಆರ್ಕಿಯಾಲಜಿಕಲ್ ಖಾತೆಯವರು ಜೇರೂಸೇಲಮ್‌ದಲ್ಲಿ ಶೋಧನಡಿಸುವವರಿದ್ದಾರೆ. ಆ ಪ್ರದೇಶದಲ್ಲಿ ಒಬ್ಬ ಹೆಣ್ಣುಮಗಳದೊಂದು ತಲೆಬುರುಡಿ ಸಿಕ್ಕಿರುವುದು. ಅದರಿಂದ ಕ್ರಿಶ್ಚಿಯನ್ನ ಧರ್ಮವು ಹುಟ್ಟಿದ ಸ್ಥಳದಲ್ಲಿಯೇ ಮನುಷ್ಯರ ಮೂಲ ವಸತಿಸ್ಥಾನವಿರಬೇಕೆಂದು ತರ್ಕಮಾಡಹತ್ತಿರುವರು. ವಿಮಾನಗಳ ಮೂಲಕ ಸೀರಿಯಾದೇಶದಲ್ಲಿ ಹಿಂದಿನ ಕಾಲದ ರೋಮ ಸೈನ್ಯದ ಮೂರು ಛಾವಣಿಗಳ ಶೋಧವಾಗಿದೆ. ಜನರಲ್ ನೋಬಿಲಿ ಎಂಬ ಇಟಲಿ ಮನುಷ್ಯನು ಉತ್ತರಧ್ರುವಕ್ಕೆ ವಿಮಾನದಿಂದ ಹಾರುವವನಿದ್ದಾನೆ.

—Indian National Herald.

---

## ಜಪಾನದಲ್ಲಿ ಅಸ್ಪೃಶ್ಯರು

ದಿ ಇಂಡಿಯನ್ ನೇಶನಲ್ ಹೆರಾಲ್ಡ ಪತ್ರಿಕೆಯ ೨೪-೧-೨೮ ನೆಯ ಸಂಚಿಕೆಯಲ್ಲಿ ಹೀಗೆ ಬರೆದಿದೆ –

ಜಪಾನ ದೇಶದಲ್ಲಿ ಪುರಾತನದಿಂದ ಅಸ್ಪೃಶ್ಯತೆಯು ರೂಢಿಯಲ್ಲಿ ಉಂಟು. ಈ ಅಸ್ಪೃಶ್ಯರ ಜನಸಂಖ್ಯೆಯು ಸುಮಾರು ೨೦–೩೦ ಲಕ್ಷವಿರುತ್ತದೆ. 'ಇಟಾ' ಎಂದರೆ ಅಸ್ವಚ್ಛರೆಂದು ಕರೆಯುತ್ತಾರೆ. ಅವರು ಮಾಡುವ ಉದ್ಯೋಗಗಳಿಂದ ಅವರಿಗೆ ಆ ಹೆಸರು ಪ್ರಾಪ್ತವಾಗಿರುತ್ತದೆ. ದನ ಕಡಿಯುವದು ತೊಗಲು ಮಾರುವದು ಇವೇ ಮುಂತಾದವುಗಳು ಅವರು ಮಾಡುವ ಉದ್ಯೋಗಗಳು. ಅಪರಾಧಿಗಳನ್ನು ಶೂಲಕ್ಕೇರಿಸುವುದು ಅವರ ಕೆಲಸ. ಅಹಿಂಸಾತತ್ವವು ಪ್ರಚಾರದಲ್ಲಿದ್ದ ಆ ದೇಶದಲ್ಲಿ ಈ ತರಹದ ಪ್ರಾಣಹಿಂಸೆಯಾಗುವ ಉದ್ಯೋಗಗಳಿಗೆ ಮನ್ನಣೆಯಿಲ್ಲದ್ದು ಆಶ್ಚರ್ಯವಲ್ಲ. ಈಗ ಕೂಡ, ಅಸ್ಪೃಶ್ಯನೊಬ್ಬನು ಹಾಯ್ದುಹೋಗುತ್ತಿದ್ದರೆ, ಜನರು ತಮ್ಮ ನಾಲ್ಕು ಬೆರಳುಗಳನ್ನೆತ್ತಿ, ಆತನ ಬಗ್ಗೆ ತಮಗಿರುವ ತಿರಸ್ಕಾರವನ್ನು ವ್ಯಕ್ತಗೊಳಿಸುವರು. ಅದರಿಂದ ಆತನು ಪಶುವೆಂದು ಅವರ ತಿಳವಳಿಕೆ. ಬುದ್ಧಧರ್ಮವು ಜಪಾನ ದೇಶಕ್ಕೆ ೫೫೨ ನೆಯ ಇಸ್ವಿಯಲ್ಲಿ ಹೋಯಿತು. ಅದಕ್ಕಿಂತ ಮುಂಚೆ, ಜಪಾನದಲ್ಲಿ ಶಿಂಟೋ ಧರ್ಮವಿತ್ತು. ಆ ಧರ್ಮದಲ್ಲಿಯೂ ಅಶುದ್ಧತೆಯು ದೊಡ್ಡ ಪಾಪವೆಂದು ಗಣಿಸಲ್ಪಡುತ್ತಿತ್ತು. ಆದರೆ ಮರಣ ಹೊಂದಿದವರ ದೇಹಗಳ ವ್ಯವಸ್ಥೆಯನ್ನು ಯಾರಾದರೂ ಮಾಡಬೇಕಲ್ಲವೇ? ಹಾಗೆ ಮಾಡುವುದಕ್ಕೋಸ್ಕರ ಒಂದು ವರ್ಗವು ಹೊರಟಿತು. ಅವರಿಗೆ 'ಕೋಗಾರ್ಬೆ' (Kogarbe) ಎಂದೆನ್ನುತ್ತಿದ್ದರು. ೧೮೭೧ ನೆಯ ಇಸ್ವಿಯ ವರೆಗೆ ಈ ವರ್ಗವು ಅಸ್ತಿತ್ವದಲ್ಲಿ ಇತ್ತು. ಆ ವರ್ಷ ಸರಕಾರದವರು ಕಾಯದೆ ಮಾಡಿ, ಆ ವರ್ಗವನ್ನು ತೆಗೆದುಬಿಟ್ಟರು. ಆದರೂ ಜನರಲ್ಲಿ ಇನ್ನೂ ತಿರಸ್ಕಾರಬುದ್ಧಿಯು ಉಳಿದೇ ಉಳಿದಿತ್ತು. ಅವರು ೫೯೨೪ ಜಿಲ್ಹೆಗಳಲ್ಲಿ ವಾಸಮಾಡುತ್ತಾರೆ. ಅವರಿಗೂ ಮಿಕ್ಕ ಸಮಾಜಕ್ಕೂ ವಿಶೇಷ ಬಳಕೆ ಇಲ್ಲ. ೧೯೨೨ ನೆಯ ಇಸ್ವಿಯಲ್ಲಿ ಅವರು ಸಭೆಗೂಡಿಸಿ ತಾವು ತಮ್ಮ ಸಮಾನತ್ವದ ಹಕ್ಕನ್ನು ಸ್ಥಾಪಿಸುವುದಕ್ಕೆ ಟೊಂಕಕಟ್ಟಿದರು. ಇದರಿಂದ, ಸದ್ಯಕ್ಕೆ ಅಲ್ಲಿಯ ಜಗಳಕ್ಕೆ ಉಗ್ರಸ್ವರೂಪ ಬಂದಿದೆ. ಅಸ್ಪೃಶ್ಯರ ಸಭೆಗೆ 'ಸುಹೀಸ' (Suiheisha) ಎಂದೆನ್ನುತ್ತಾರೆ. ಸರಕಾರದವರು ಅಸ್ಪೃಶ್ಯರಿಗೆ ಸಹಾನುಭೂತಿಯನ್ನು ತೋರಿಸುತ್ತಿರುವರು.

—The Indian National Herald.

---

## ಮೈಸೂರ ಸಂಸ್ಥಾನದ ದೇವಸ್ಥಾನ ಖಾತೆ

ಮೈಸೂರು ಸಂಸ್ಥಾನದ ದೇವಸ್ಥಾನ ಅಥವಾ ಮುಜರಾಯಿ ಖಾತೆಯ ೧೯೨೬–೨೭ನೆಯ ಇಸ್ವಿಯ ವರದಿಯಿಂದ ಕಂಡುಬರುವದೇನಂದರೆ—

೧೯೧೩ ನೆಯ ಇಸ್ವಿಯ ಮುಜರಾಯಿ ರೆಗ್ಯುಲೇಶನ್ ರದ್ದು ಆಗಿ, ಅದರ ಬದಲು ೧೯೨೭ ನೆಯ ಇಸ್ವಿಯ ೭ ನೆಯ ರೆಗ್ಯುಲೇಶನ್ ಎಂಬುದು ೧೯೨೭ ನೆಯ ಇಸ್ವಿಯ ಎಪ್ರೈಲ ೧ ನೆಯ ತಾರೀಖಿನಿಂದ ಅಮಲಿನಲ್ಲಿ ಬಂದಿದೆ. ಈ ಖಾತೆಯ ಉತ್ಪನ್ನವು ೭೫೬೧೩೯ ರೂಪಾಯಿ, ವೆಚ್ಚವು ೫೭೨೬೭೪ ಹೀಗೆ ಇರುತ್ತದೆ. ಮುಳಬಾಗಲದ ಶ್ರೀಪಾದರಾಯಸ್ವಾಮಿ ಮಠಕ್ಕೆ ವೇದಮೂರ್ತಿ ದೈಪಾಯನಾಚಾರ್ಯರು ಸ್ವಾಮಿಗಳಾದುದಕ್ಕೆ ಸರಕಾರದವರು ಸಮ್ಮತಿಕೊಟ್ಟರು. ಈ ಖಾತೆಯ ವಶದಲ್ಲಿ ಕೆಳಗಿನ ಮಠಗಳ ಆಸ್ತಿಯು ಇರುತ್ತದೆ. ಅವು ಯಾವವೆಂದರೆ—

(೧) ಸೋಸಲೆವ್ಯಾಸರಾಯರ ಮಠ (೨) ನೆಲಮಂಗಲ ತಾಲೂಕನಲ್ಲಿಯ ಸಿವಗಂಗಾ ಮಠ (೩) ಕೊಪ್ಪಳ ತಾಲೂಕನಲ್ಲಿಯ ಹರಿಹರಪುರ ಮಠ (೪) ಅದೇ ತಾಲೂಕಿನಲ್ಲಿಯ ಸಂಪಿಗೆ ಮಠ (೫) ಚನ್ನರಾಯ ಪಟ್ಟಣದ ತಾಲೂಕಿನ ಶ್ರವಣಬೆಳಗುಲ ಮಠ (೬) ಮುಳಬಾಗಲ ತಾಲೂಕಿನ ಅವನಿ ಮಠ (೭) ಚಿಕ್ಕಮಗಳೂರ ತಾಲೂಕಿನ ಪಲಹರಸ್ವಾಮಿ ಮಠ (೮) ನಾಗಮಂಗಲ ತಾಲೂಕಿನ ಆದಿಚುಂಚಿವಗಿರಿ ಮಠ (೯) ತೀರ್ಥನಹಳ್ಳಿ ತಾಲೂಕಿನ ಭೀಮನಕಟ್ಟೆ ಮಠ. ಶ್ರವಣಬೆಳಗುಳ ಮಠಕ್ಕೆ ಯಾರು ಕೂಡಬೇಕೆಂಬುದು ಇನ್ನೂ ನಿರ್ಣಯವಾಗಿಲ್ಲ. ಭೀಮನಕಟ್ಟೆ ಮಠದ ಕೆಲಸವು ಆಸ್ತಿಯು ಉಡಪಿ ಕುಂದಾಪುರ ತಾಲೂಕಗಳಲ್ಲಿ ಇರುತ್ತದೆ. ಅದನ್ನು ಮೈಸೂರ ಸರಕಾರದವರು ತಮ್ಮ ವಶಕ್ಕೆತೆಗೆದುಕೊಂಡಿರುವರು. ಮೈಸೂರ ಸರಕಾರದವರು ತಿರುಪತಿ ಶ್ರೀವೆಂಕಟೇಶ ದೇವಾಲಯ, ತಿರಚಾನೂರಿನ ಶ್ರೀಮಹಾಲಕ್ಷ್ಮೀ ದೇವಾಲಯ, ತಿರುಪತಿಯಲ್ಲಿಯ ಛತ್ರ ಮುಂತಾದವುಗಳ ಸಲುವಾಗಿ ಪ್ರತಿವರ್ಷ ೨೦ ಸಾವಿರ ರೂಪಾಯಿ ವೆಚ್ಚಮಾಡುತ್ತಾರೆ. ೫-೬ ಸಾವಿರ ರೂಪಾಯಿ ವೆಚ್ಚಮಾಡಿ ತಿರುಪತಿಯ ಛತ್ರದ ದುರಸ್ತಿಮಾಡುವವರಿದ್ದಾರೆ. ಬಹುಶಃ ಮೈಸೂರ ಸಂಸ್ಥಾನದೊಳಗಿನ ಛತ್ರಗಳನ್ನೆಲ್ಲ ಈಗ ತೆಗೆದುಬಿಟ್ಟಿರುವರು. ಇವರಿಂದ ಸರಕಾರಕ್ಕೆ ಪ್ರತಿವರ್ಷ ೩೨ ಸಾವಿರ ರೂಪಾಯಿಗಳ ಉಳಿತಾಯವಾಗಿರುತ್ತದೆ. ಇದರಲ್ಲಿ ಅರ್ಧ ಅಂದರೆ ೧೬ ಸಾವಿರ ರೂಪಾಯಿಗಳನ್ನು ಆಯುರ್ವೇದ ಮತ್ತು ಯುನಾನಿ ವೈದ್ಯಕಗಳಿಗೆ ಉತ್ತೇಜನಾರ್ಥವಾಗಿ ವೆಚ್ಚ ಮಾಡಬೇಕೆಂದೂ ಮಿಕ್ಕದ್ದನ್ನು ಕುರುಡರು ಕುಂಟರ ಶಾಲೆ ಮುಂತಾದವುಗಳಿಗೋಸ್ಕರ ಉಪಯೋಗಿಸಬೇಕೆಂದೂ ಸರಕಾರದವರ ವಿಚಾರವಿದೆ.

—Report of the Muzrai Department.

## ಮಮದಾಪುರದ ಸಿಲಾಲಿಪಿ

ಬೆಳಗಾಂವ ಜಿಲ್ಹೆಯ ಗೋಕಾಕ ತಾಲೂಕಿನಲ್ಲಿ ಮಮದಾಪೂರವೆಂಬುದೊಂದು ಗ್ರಾಮದಲ್ಲಿ ಒಂದು ಶಿಲಾಲಿಪಿ ಉಂಟು. ಅದು ಎಪಿಗ್ರಾಫಿಯಾ ಇಂಡಿಕಾ ಎಂಬ ತ್ರೈಮಾಸಿಕದಲ್ಲಿ ಮುದ್ರಿತವಾಗಿದೆ. ಅದರೊಳಗಿನ ಮಹತ್ವದ ಸಂಗತಿಗಳು ಹೀಗೆ ಇರುತ್ತವೆ.

ಈ ಶಿಲಾಲಿಪಿಯು ಬಸವೇಶ್ವರ ಗುಡಿಯೊಳಗಿನದು. ೧೧೭೨ ನೆಯ ಶಕದ ಶಿಲಾಲಿಪಿಯಿದು. ಕುಂತಳದೇಶವಲ್ಲಿ ಕೊಂಚ ವಿಷಯದಲ್ಲಿ ಕುರುಂಬೆಟ್ಟವೆಂಬ ದೊಡ್ಡ ಪಟ್ಟಣವಿರುವದು. ಅದು ದೇವಗಿರಿ ಯಾದವ ಅರಸರ ವಶದಲ್ಲಿ ಇತ್ತು. ಈ ಶಿಲಾಲಿಪಿಯು ಬರೆಯಲ್ಪಟ್ಟ ಕಾಲಕ್ಕೆ ಅಲ್ಲಿ ಕನ್ನರನೆಂಬ ಅರಸನು ಆಳುತ್ತಿದ್ದನು. ಆತನು ಮಾಳವ, ಗುರ್ಜರ ತೈಲಂಗಣೆ ಅರಸರನ್ನು ಸೋಲಿಸಿದ್ದನು. ಈ ಅರಸನ ಕೈಕೆಳಗೆ ಬಿಚ್ಚನೆಂಬವ ಮಾಂಡಲಿಕನಿದ್ದನು. ಮಲ್ಲನೆಂಬವನು ಈ ಬಿಚ್ಚನ ಮಗನು. ಚಾಮುಂಡನೆಂಬವನು ಈ ಮಲ್ಲನ ಮಗನು. ಈ ಚಾಮುಂಡನು ಅರಸನಿಗೆ ಅತಿಶಯ ಬೇಕಾದವನು. ಬಲು ಶೂರನು. ಚಾಮುಂಡರಾಯನ ಗುರವು ವಾಗೀಶರರೆಂಬವರು. ಸೋಮನಾಥನು ಈತನ ಕುಲದೇವರು. ಲಕ್ಮ್ಯಾದೇವಿಯು ಆತನ ಹೆಂಡತಿ. ಚಾಮುಂಡರಾಯನು ಅನೇಕ ದೇವಾಲಯಗಳನ್ನು ಕಟ್ಟಿಸಿದನು. ಆತನು ಈ ಕುರುಂಬೆಟ್ಟದಲ್ಲಿಯೂ ಈಶ್ವರದೇವಾಲಯವನ್ನು ಕಟ್ಟಿಸಿದನು. ಆತನು ಹುಲಗೇರಿಯಲ್ಲಿ ವಾಸ ಮಾಡುತ್ತಿದ್ದನು.

ಶೈವರಲ್ಲಿ ವಿಮಲಶಿವರೆಂಬ ಪಂಡಿತ ಗುರುಗಳಿದ್ದರು. ಅವರಿಗೆ ಚಾಮುಂಡರಾಯನು ದಾನಕೊಟ್ಟನು.

ಕುರುಂಬೆಟ್ಟವು ಆಗಿನ ಕಾಲಕ್ಕೆ ಅತಿಶಯ ಗುಂಜರವಾದ ಪಟ್ಟಣವಾಗಿತ್ತೆಂದು ಈ ಶಿಲಾಲಿಪಿಯಲ್ಲಿ ಅದರ ವರ್ಣನೆಯುಂಟು. ಕಾಕತಿಯೆಂಬಲ್ಲಿ ಈ ದೇವಾಲಯಕ್ಕೆ ಭೂಮಿಯು ಕೊಡಲ್ಪಟ್ಟಿತು. ಈ ಶಿಲಾಲಿಪಿಯ ಮೇಲಿಂದ ಆಗಿನಕಾಲಕ್ಕೆ ಈ ಸ್ಥಳದಲ್ಲಿ ಹಸ್ತಿದಂತ ಮಾಣಿಕ್ಯಗಳ ವ್ಯಾಪಾರವು ಬಹಳ ಇತ್ತೆಂದು ಗೊತ್ತಾಗುತ್ತದೆ. ಅದು ಅಲ್ಲಿಗೆ ಸಮುದ್ರದ ಕಡೆಯಿಂದ ಬರುತ್ತಿತ್ತು.

—Epigrepha Indica

## ಸಿನೆಮಾ ಮತ್ತು ಆರೋಗ್ಯ

ಪ್ರ್ಯಾಕ್ಟಿಕಲ್ ಮೆಡಿಸಿನ ಎಂಬ ಪುಸ್ತಕದಲ್ಲಿ ಹೀಗೆ ಲೇಖ ಬಂದಿದೆ—

ಜನತೆಯ ಆರೋಗ್ಯದ ಪ್ರಶ್ನೆಯು ವ್ಯಕ್ತಿಯ ಆರೋಗ್ಯದ ಪ್ರಶ್ನೆಗಿಂತ ಮಹತ್ವವಾದದ್ದು. ಈಗಿನ ಕಾಲದಲ್ಲಿ ಆರೋಗ್ಯವು ಹಣದ ಮೇಲೆ ಹೆಚ್ಚಿಗೆ ಅವಲಂಬಿಸಿರುತ್ತದೆ. ಏಕೆಂದರೆ, ದೊಡ್ಡ ದೊಡ್ಡ ಪಟ್ಟಣಗಳಲ್ಲಿದ್ದ ಬಡವರಿಗೆ ಆರೋಗ್ಯ ರಕ್ಷಣೆಗೆ ಸಾಕಷ್ಟು ಸಾಧನಗಳೇ ಇರುವುದಿಲ್ಲ. ಆದುದರಿಂದ, ನಾವು ಸಂಘಶಕ್ತಿಯಿಂದಲೇ ಸಾರ್ವಜನಿಕ ಆರೋಗ್ಯವನ್ನು ಕಾಯ್ದುಕೊಳ್ಳಬೇಕಾಗುತ್ತದೆ. ಹಿಂದಿನ ಕಾಲದಲ್ಲಿ, ಸ್ವಚ್ಛ ನೀರು, ಸ್ವಚ್ಛಹವೆ, ಸ್ವಚ್ಛದೀವಿಗೆ, ಸ್ವಚ್ಛಮನೆ ಮುಂತಾದವುಗಳನ್ನು ಪೂರೈಸಿದರೆ ತಮ್ಮ ಕೆಲಸವಾಯಿತೆಂದು ಮ್ಯುನಿಸಿಪಾಲಿಟಿಗಳು ತಿಳಿಯುತ್ತಿದ್ದವು. ಆದರೆ ಈಗಿನ ದಿವಸಗಳಲ್ಲಿ ಇವಿಷ್ಟೇ ಸಾಲದು. ಜನರಿಗೆ ತಮ್ಮ ಆರೋಗ್ಯವನ್ನು ಹೇಗೆ ಕಾಯ್ದುಕೊಳ್ಳಬೇಕೆಂಬ ಜ್ಞಾನವಿರದಿದ್ದರೆ ಸ್ವಚ್ಛಹವೆ ಮುಂತಾದವುಗಳಿದ್ದೂ ವ್ಯರ್ಥ. ಜನರಿಗೆ ಈ ಪ್ರಕಾರದ ಶಿಕ್ಷಣ ಕೊಡುವುದಕ್ಕೆ ಉತ್ಕೃಷ್ಟವಾದ ಸಾಧನಗಳೆಂದರೆ ಸಿನೆಮಾಗಳು. ಈ ಚಿತ್ರಪಟಗಳ ದ್ವಾರದಿಂದ ನಾವು ಸುಲಭವಾಗಿ ಆರೋಗ್ಯಶಿಕ್ಷಣವನ್ನು ಕೊಡಬಹುದು. ಲಂಡನ್ನದಲ್ಲಿ ದಿನ ದಿನದ ಸುದ್ದಿಗಳನ್ನು ಜನರಿಗೆ ತಿಳಿಸುವುದಕ್ಕೆ ಸಹ ಈ ತರಹದ ಚಿತ್ರಪಟಗಳಿರುತ್ತವೆ. ಆ ಚಿತ್ರಗಳನ್ನು ನೋಡಿದೊಡನೆಯೇ ಯಾವತ್ತು ಸುದ್ದಿಗಳು ತಟ್ಟನೆ ಗೊತ್ತಾಗುತ್ತವೆ. ಅದೇ ಪ್ರಕಾರ ನಾವು ಆರೋಗ್ಯಶಿಕ್ಷಣವನ್ನು ಕೊಡುವುದಕ್ಕೆ ಚಿತ್ರಪಟಗಳನ್ನು ಏಕೆ ಕಲ್ಪಿಸಬಾರದು ?

—Practical Medcine

---

## ತುರ್ಕಸ್ಥಾನದ ಪ್ರಗತಿ

'ಕರಂಟ ಹಿಸ್ಟರಿ' ಎಂಬ ಪತ್ರಿಕೆಯಲ್ಲಿ ಬರೆದುದರ ಸಾರಾಂಶ—

ಗಾಜಿಮುಸ್ತಫಾ ಕಮಾಲ ಪಾಶನು ತುರ್ಕಸ್ಥಾನದ ಪ್ರಾಣನು. ಆತನು ಆ ದೇಶದಲ್ಲಿ ಬಹಳ ಸುಧಾರಣೆಗಳನ್ನು ಮಾಡಿರುವನು. ಒಕ್ಕಲತನದ ಸುಧಾರಣೆಯ ಬಗ್ಗೆ ಅಲ್ಲಿಯ ಸರಕಾರದವರು ರೈತರಿಗೆ, ಯಂತ್ರ, ಬೀಜ ಮುಂತಾದವುಗಳನ್ನು ಕೊಳ್ಳುವುದಕ್ಕೋಸ್ಕರ ಮೂರುವರ್ಷದವರೆಗೆ ಬಡ್ಡಿಯಿಲ್ಲದೆ ಸಾಲಕೊಡುತ್ತಾರೆ. ೧೨ ಒಕ್ಕಲತನದ ಹೊಸ ಶಾಲೆಗಳು ಹೊರಟಿವೆ. ಸ್ಯಾನ ಸ್ಟೆಫಿನೋ (San Stefano) ಎಂಬಲ್ಲಿ ಒಂದು ಉಚ್ಚತರಗತಿಯ ಒಕ್ಕಲತನದ ಕಾಲೇಜು ಹೊರಟರೆ, ಅಂಗೋರಾದಲ್ಲಿ ಹೊರಡತಕ್ಕದ್ದಿದೆ. ೧೯೨೦ರಲ್ಲಿ ಸಾರ್ವಜನಿಕ ಆರೋಗ್ಯದ ಖಾತೆಯು ಹೊರಟಿದೆ. ಆ ಖಾತೆಯವರು ೧೫೦ ಹೊಸ ಆಸ್ಪತ್ರಿಗಳನ್ನು ತೆಗೆದಿರುವರು. ಅಂಗೋರಾ, ಸಿವಾಸ್, ಯಿರೋಝುವ್ ಮತ್ತು ಡಾಯರ್ಬಕೇರ ಹೀಗೆ ನಾಲ್ಕು ಮಾದರಿಯ ದೊಡ್ಡ ಆಸ್ಪತ್ರಿಗಳು ಹೊರಟಿವೆ. ಈಗಿನ ಶಿಕ್ಷಣಕ್ರಮದಲ್ಲಿ ಧರ್ಮಕ್ಕೆ ಅವಕಾಶಕೊಟ್ಟಿಲ್ಲ; ಅದಕ್ಕೆ ರಾಷ್ಟ್ರೀಯ ಸ್ವರೂಪವು ಪ್ರಾಪ್ತವಾಗಿದೆ. ಪ್ರಾಥಮಿಕ ಶಿಕ್ಷಣವು ೫ ವರ್ಷಗಳವರೆಗೆ ಧರ್ಮಾರ್ಥವಾಗಿ ಕೊಡಲ್ಪಡುತ್ತದೆ. ಮತ್ತು ಅದು ಕಡ್ಡಾಯವಾಗಿ ಕೊಡಲ್ಪಡುತ್ತದೆ. ಅಲ್ಲಿ ಈಗ ೫೮೮೩ ಪ್ರಾಥಮಿಕ ಶಾಲೆಗಳುಂಟು. ಅದೇ, ೧೯೧೪ರಲ್ಲಿ ೨೬೩೨ ಶಾಲೆಗಳು ಮಾತ್ರವಿದ್ದವು, ಆಗ ೮೧೬೫ ಶಿಕ್ಷಕರು ಇದ್ದರು. ಈಗ ೧೧೭೭೦ ಶಿಕ್ಷಕರಿರುವರು, ಆಗ ೨೫೦,೨೦೦ ವಿದ್ಯಾರ್ಥಿಗಳಿದ್ದರು. ಈಗ ೩೮೫,೪೫೫ ವಿದ್ಯಾರ್ಥಿಗಳಿರುವರು. ಗಂಡು ಮತ್ತು ಹೆಣ್ಣುಮಕ್ಕಳಿಗೆ ಕೂಡಿ ಶಿಕ್ಷಣಕೊಡುವ ಪ್ರಯೋಗವು ಕೆಲವು ಶಾಲೆಗಳಲ್ಲಿ ನಡೆದಿದೆ. ಕಾನಸ್ಟಾಂಟಿನೋಪಲದಲ್ಲಿ ಒಂದೇ ವಿಶ್ವವಿದ್ಯಾಲಯವಿರುತ್ತದೆ. ಅಲ್ಲಿ (೫೦) ಪ್ರೊಫೆಸರರಿರುವರು. ಮತ್ತು ೨೮೩೭ ವಿದ್ಯಾರ್ಥಿಗಳಿರುವರು. ಅಂಗೋರಾದಲ್ಲಿ ಹೊಸದೊಂದು ವಿಶ್ವವಿದ್ಯಾಲಯವು ಆಗತಕ್ಕದಿದೆ.

—Current History

---

## ಭಾವೀ ಹೆಣ್ಣುಮಕ್ಕಳ ಸ್ಥಿತಿ

ಟಾಯಿಮ್ಸ ಆಫ್ ಇಂಡಿಯಾದಲ್ಲಿ ಬಂದ ಒಂದು ಲೇಖದ ಸಾರ—

ಸಾವಿರಾರು ವರ್ಷಗಳಿಂದ ಬಂಧನದಲ್ಲಿದ್ದ ಸ್ತ್ರೀವರ್ಗವು ಈಗ ಅದರಿಂದ ಮುಕ್ತವಾಗಹತ್ತಿದೆ. ಇದರಿಂದ ಹೆಂಗಸರಿಗೆ ಅನೇಕ ವಿಷಯಗಳಲ್ಲಿ ಕಲ್ಯಾಣವಾಗಬಹುದು. ಆದರೆ, ಆಳವಾಗಿ ವಿಚಾರಮಾಡಿ ನೋಡಿದರೆ, ಇನ್ನುಮುಂದೆ ಸ್ತ್ರೀಯರು ಈಗ ತಮ್ಮಲ್ಲಿದ್ದ ಅಮೂಲ್ಯವಾದ ಒಂದು ಗುಣವನ್ನು ಕಳ

ಕೊಳ್ಳುವರೆಂದು ತೋರುತ್ತದೆ. ಅದಾವುದೆಂದರೆ ‘ ಸಹಜ ಗುಣ ’ (Intutive perception) ಇದನ್ನು ಒಮ್ಮೆಲೆ ಕಳೆದುಕೊಳ್ಳುವರೆಂದು ಹೇಳಲಾಗುವುದಿಲ್ಲ. ಬಹಳ ದಿವಸ ಅವಳು ಗಂಡಸಿನ ಅಂಕಿತದಲ್ಲಿದ್ದುದರಿಂದ, ಈ ಗುಣವು ಬೆಳೆದಿತ್ತು. ಇನ್ನು ಮುಂದೆ, ಈ ಗುಣವು ಲೋಪವಾಗಿ ಅದರ ಸ್ಥಳದಲ್ಲಿ ಗಂಡಸರಲ್ಲಿ ಇರುವ ತಾರ್ಕಿಕ ಬುದ್ಧಿಯು ಉದಯವಾಗಿ ಬೆಳೆಯುವುದು. ಹೆಂಗಸರಲ್ಲಿರುವ ಪ್ರೇಮವೆಂಬುವಕ್ಕೆ ಸ್ತ್ರೀಯರ ಹೊಸ ಆಯುಷ್ಯಕ್ರಮಣದಿಂದ ಧಕ್ಕೆ ತಗಲಬಹುದೋ ಹೇಗೆ ಎಂಬುದನ್ನು ನಾನು ಹೇಳಲಾರೆ. ಆದರೆ ಒಂದು ಮಾತು ಮಾತ್ರ ನಿಜ. ಅದೇನೆಂದರೆ ಸ್ತ್ರೀಯರ ಅದ್ಭುತ ರಸಕ್ಕೆ ಹಾನಿಬರುವುದು. ಸ್ತ್ರೀಯರ ಚರಿತ್ರೆಗಳಲ್ಲಿ ವಿಚಿತ್ರವಾದ ಮತ್ತೂ ಅದ್ಭುತವಾದ ಸಂಗತಿಗಳು ಕಂಡುಬರುತ್ತಿದ್ದವು. ಇನ್ನುಮುಂದೆ ಆ ಪ್ರಕಾರದ ಸಂಗತಿಗಳನ್ನು ನಾವು ಕಾಣಲಾರೆವು. ಪ್ರೇಮವು ನೀರಸವಾಗುವುದು. ಪ್ರಾಣಿಗಳಲ್ಲಿ ಬೆಕ್ಕುಗಳಿಗೂ ಸ್ತ್ರೀಯರಿಗೂ ಹೆಚ್ಚು ಹೋಲಿಕೆಯಿರುತ್ತದೆ. ಮನುಷ್ಯನ ಅಧೀನದಲ್ಲಿದ್ದರೂ ತಮ್ಮ ಸ್ವಾತಂತ್ರ್ಯವನ್ನು ಕಾಯ್ದುಕೊಂಡಿರುತ್ತವೆ. ಸ್ತ್ರೀಯರಾದರೂ ಈ ಬೆಕ್ಕುಗಳ ಅನುಕರಣಮಾಡಬೇಕು. ಅವಳು ಪುರುಷನಿಗೆ ಹೆಚ್ಚು ಹೆಚ್ಚು ಮಿತ್ರಳಾಗುತ್ತ ನಡೆದಿರುವಳು. ಅದರಿಂದ ಅವಳಲ್ಲಿದ್ದ ಆಕರ್ಷಣಶಕ್ತಿಯು ಕಡಿಮೆಯಾಗುತ್ತ ನಡೆದಿದೆ. ಹಿಂದಿನ ಕಾಲವೇ ಹೆಚ್ಚಿನದೆಂದು ನನ್ನ ಅಂಬೋಣವಿಲ್ಲ. ಆದರೆ ಆಗಿನ ಕಾಲದಲ್ಲಿ ಚಲೋ ಸಂಗತಿಗಳು ಬೇರೆ ಈಗಿನ ಕಾಲದ ಚಲೋ ಸಂಗತಿಗಳು ಬೇರೆ. ದೇವರ ಸಂಕಲ್ಪವು ಯಾವಾಗಲೂ ಒಳ್ಳೆಯದೇ ಇರುತ್ತದೆ.

—Times of India.

---




॥ नाहं कर्ता हरिः कर्ता तत्पूजा कर्मचाखिलम् ॥

## ಸಾಯಮನ್ ಕಮಿಶನ್ನದ ಬಹಿಷ್ಕಾರವು

'ಬೇಡ' 'ಬೇಡ'ವೆಂದು ಇಡೀ ಹಿಂದುಸ್ಥಾನವೇ ಬೊಬ್ಬೆ ಹುಟ್ಟಿದರೂ ಕೇಳದೆ, ಸಾಯಮನ ಸಾಹೇಬರೇ ಮುಂತಾದವರಿಂದ ಕೂಡಿದ ಏಳು ಮಂದಿಗಳ ಮಂಡಳವು ೩ನೆಯ ಫೆಬ್ರುವರಿಯ ದಿವಸ ಹಿಂದುಸ್ಥಾನಕ್ಕೆ ಬಂದೇಬಿಟ್ಟಿತು! ಈ ಏಳು ಮಂದಿ ನಮ್ಮ ಹಿಂದುಸ್ಥಾನದ ಹಣೆಯುಬರಹವನ್ನು ಬರೆಯುವ ಸಪ್ತಬ್ರಹ್ಮರಂತೆ! ಹಿಂದುಸ್ಥಾನಕ್ಕೆ ಸ್ವರಾಜ್ಯವನ್ನು ಕೊಡಬೇಕೋ ಬೇಡವೋ, ಕೊಟ್ಟರೆ, ಎಷ್ಟು ಪ್ರಮಾಣದಲ್ಲಿ ಕೊಡಬೇಕು. ಇವೇ ಮುಂತಾದವುಗಳನ್ನು ನಿಶ್ಚಯಿಸಲು ಹಿಂದೀ ಜನರನ್ನು ಕೇಳಲಿಕ್ಕೆಂದು ಇವರು ಬಂದಿರುವರು. ಆದರೆ, ಇವರ ಮುಂದೆ ನಾವು ಏನೂ ಹೇಳುವವರಲ್ಲವೆಂಬದಾಗಿ ಹಿಂದೀ ರಾಷ್ಟ್ರವು ನಿರ್ಧಾರಮಾಡಿರಲು ಇವರು ಇಲ್ಲಿಗೆ ಬಂದು ಮಾಡುವುದೇನು? ಏನೋ, ವಿಲಾಯತಿಯಲ್ಲಿದ್ದಾಗ, ಹಿಂದುಸ್ಥಾನ ಚಳವಳವು ಸುಳ್ಳೆಂದು ಕಲ್ಪಿಸಬಹುದಾಗಿತ್ತು. ಆದರೆ, ಅವರು ಹಿಂದುಸ್ಥಾನದಲ್ಲಿ ಕಾಲಿಟ್ಟಕೂಡಲೆ, ಇಡೀ ಹಿಂದುಸ್ಥಾನವು ಹರತಾಳವನ್ನು ಮಾಡಿದ್ದನ್ನು ನೋಡಿಯಾದರೂ ಇವರಿಗೆ ಬುದ್ಧಿಬರಬೇಕಿತ್ತಲ್ಲವೆ? ಆದರೆ, ಅಧಿಕಾರಿಗಳು ಯಾವಾಗಲೂ ಕಣ್ಣಿದ್ದೂ ಕುರುಡರಂತೆ ನಟಿಸುತ್ತಾರೆ. ಹಿಂದುಸ್ಥಾನವು ತಮ್ಮನ್ನು ಹೀಯಾಳಿಸುತ್ತಿದೆಂಬುದು ಇವರಿಗೆ ಗೊತ್ತಿದ್ದರೂ, ಈ ಅತಿಥಿಗಳು ನಮಗೆ ಬೇಡ, ಇವರಿಗೆ ನಾವು ಊಟಹಾಕುವದಿಲ್ಲವೆಂದು ಸಾರಿ ಸಾರಿ ಹೇಳಿದರೂ ಎಲೆಯಮೇಲೆ ಕುಳಿತು, ನಿಮ್ಮ ಎಲೆಯೊಳಗಿನ ನಾಲ್ಕು ತುತ್ತು ಕಸಕೊಂಡುತಿಂದು, ಹೊಟ್ಟೆತುಂಬದಿದ್ದರೂ ತೇಗುತ್ತ ಹೋಗುವವರೇ—ಎಂದು ಇವರು ಹೇಳುತ್ತಿರುವರು. ಸಾಯಮನ್ ಸಾಹೇಬರು ಧೈರ್ಯಸ್ಥರು, ಆದರೂ ಇಲ್ಲಿಗೆ ಬಂದೊಡನೆಯೆ, ಇಡೀ ಹಿಂದುಸ್ಥಾನವು ತಮ್ಮನ್ನು ಧಿಕ್ಕರಿಸುತ್ತದೆಂಬುದನ್ನು ಪ್ರತ್ಯಕ್ಷ ಕಂಡಕೂಡಲೆ ತುಸು ಬೆದರಿದರು. ಆಗ, ಜನರನ್ನು ಕುಯುಕ್ತಿಯಿಂದ ವಶಮಾಡಿಕೊಳ್ಳಬೇಕೆಂದು ಯೋಚಿಸಿ, 'ನಾವೇನೂ ನಿಮ್ಮ ಅಹಿತಮಾಡಲಿಕ್ಕೆ ಬಂದಿಲ್ಲ, ಗಾಬರಿಯಾಗಬೇಡಿರಿ, ನಮ್ಮ ಮೇಲೆ ವಿಶ್ವಾಸವಿಟ್ಟು ನೋಡಿರಿ, ಅಂದರೆ ನಾವು ನಿಮಗೆ ಎಷ್ಟು ಹಿತಮಾಡುವೆವೆಂಬುದು ನಿಮಗೆ ತಿಳಿದೀತು." ಎಂಬುದಾಗಿ ಆಶೆತೋರಿಸಿ, ನಮ್ಮ ಜನರನ್ನು ಒಡೆದುಕೊಳ್ಳಲಿಕ್ಕೆ ಪ್ರಯತ್ನಿಸಿದರೂ ಅದು ಸಾಧ್ಯವಾಗಲಿಲ್ಲ. ನೀವೂ ನಿಮ್ಮ ಕಾಯದೆಮಂಡಳಗಳಲ್ಲಿ ಪ್ರತಿನಿಧಿಗಳನ್ನು ನೇಮಿಸಿಕೊಡಿರಿ, ಅವರೂ ನಮ್ಮಂತೆಯೇ ನಿಮ್ಮ ಹಕ್ಕುಗಳನ್ನು ಚವಕಶಿಮಾಡಲಿ, ಅವರ ಅಭಿಪ್ರಾಯವನ್ನು ನಮ್ಮ ಅಭಿಪ್ರಾಯಕ್ಕೆ ಬಾಲಾಗಸಿಯಾಗಿ ಜೋಡಿಸಿ ಕಳುಹಿಸುತ್ತೇವೆ" ಎಂದುದಾಗಿ ಆಶೆ ಹಚ್ಚಿದರು. ಆದರೆ, ಹೀಗೆ ಮೂಗಿಗೆ ತುಪ್ಪ ಸವರುವದರಿಂದ ಮೋಸಹೋಗುವಷ್ಟು ನಮ್ಮ ಜನರು ಈಗ ಮರುಳರಿಲ್ಲ. ಆದಕಾರಣ ಈಗ ಸಾಯಮನ್ ಮಂಡಳವು ಹೋದ ಹೋದಲ್ಲಿ ಬಹಿಷ್ಕಾರವು ಕಂಡುಬರುತ್ತದೆ. ಮಧ್ಯಪ್ರಾಂತ, ಮದ್ರಾಸ, ಸಂಯುಕ್ತಪ್ರಾಂತದ ಕಾಯದೆ ಕೌನ್ಸಿಲಗಳು ಸಾಯಮನ್ನ ಕಮಿಶನಕ್ಕೆ ಬಹಿಷ್ಕಾರ ಹಾಕಬೇಕೆಂದು ನಿಶ್ಚಯಿಸಿರುತ್ತವೆ. ದಿಲ್ಲಿಯಲ್ಲಿಯ ಮುಖ್ಯ ಕಾಯದೆ ಮಂಡಳವು ಕೂಡ ಸಾಯಮನ್ನ ಕಮಿಶನ್ನಕ್ಕೆ ಬಹಿಷ್ಕಾರ ಹಾಕಬೇಕೆಂಬ ನಿರ್ಣಯವನ್ನು ಮಾಡಿದೆ. ದಿಲ್ಲಿಯ ಕಾಯದೆ ಮಂಡಳವೆಂದರೆ ಇಡೀ ರಾಷ್ಟ್ರದ ಪ್ರತಿನಿಧಿಮಂಡಳವಲ್ಲವೆ? ಅಂದಬಳಿಕ, ಸಾಯಮನ್ ಸಾಹೇಬರಿಗೆ ಹಿಂದುಸ್ಥಾನದ ಹೃದ್ಗತವೇನೆಂಬುದು ಇನ್ನೂ ತಿಳಿಯಬಾರದೊ? ಆಹುದು ಅವರಿಗೆ ತಿಳಿದಿದೆ. ಆದರೆ ವಿಲಾಯತಿಯಲ್ಲಿಯ ಜನರಿಗೆ ಮಂಕು

ಬೂದಿಯನ್ನು ಹೇಗೆ ಬಡೆಯಬೇಕೆಂಬ ಯೋಚನೆಯಲ್ಲಿ ಈಗ ಅವರು ತೊಡಗಿರುವರು. ಹಿಂದುಸ್ಥಾನವು ವಿಶಾಲ ದೇಶ, ಇದರಲ್ಲಿ ಅಸೃಶ್ಯರೇ ಮುಂತಾದ ಹಿಂದುಳಿದ ಜಾತಿಯವರಿರುವರು, ಅವರಿಗೆ ಆಶೆತೋರಿಸಿ ಅವರಿಂದ ಮನ್ನಣೆ ಪಡೆದರೆ ತೀರಿತು; ಮುಸಲ್ಮಾನರಲ್ಲಿ ಕೆಲವರು ಮರುಳರಿರಬಹುದು, ಅವರನ್ನು ಒಡೆದುಕೊಂಡರೆ ತೀರಿತು; ಊರಲ್ಲೂರಿಗೆ, ಅಧಿಕಾರಿಗಳ ಮುಂದೆ ಬಾಲಅಲ್ಲಾಡಿಸುವವರು ಗುಂಪುಗಳಿರುವವು, ಅವರನ್ನು ಏರಿಸಿ ಕುಳಿಸಿದರೆ ತೀರಿತು— ಎಲ್ಲಿಯಾದರೂ ಹತ್ತೆಂಟು ಸಾಕ್ಷಿಗಳು ಹುಟ್ಟುವವು. ಅವರೇ ಹಿಂದುಸ್ಥಾನದ ನಿಜವಾದ ಪ್ರತಿನಿಧಿಗಳೆಂದು ವಿಶಾಯುತಿಯ ಜನರಿಗೆ ಹೇಳಿದರೆ ತೀರಿತು" ಎಂಬ ಕುಯುಕ್ತಿಯಲ್ಲಿ ಈಗ ಸಾಯಮನ್ ಸಾಹೇಬರು ಮಗ್ನರಾಗಿರುವಂತೆ ತೋರುತ್ತದೆ. ಆದುದರಿಂದಲೇ ಅವರು ಈಗ ತಮ್ಮ ಪ್ರವಾಸವನ್ನು ಪ್ರಾರಂಭಿಸಿರುವರು. ಬನಾರಸ, ಕಲಕತ್ತಾ, ಮದ್ರಾಸ ಮುಂತಾದ ಕಡೆಗೆ ಅವರು ಹೋದಾಗ ಅವರಿಗೆ ಬಹಿಷ್ಕಾರದ ಹೊರ್ತಾಗಿ ಏನೂ ಕಾಣಲಿಲ್ಲ. ಆದರೂ ಕೆಲವು ದಿವಸಗಳಲ್ಲಿ ಹಿಂದೀ ಜನರು ಬಹಿಷ್ಕಾರವನ್ನು ಬಿಟ್ಟುಕೊಟ್ಟು ತಮ್ಮೊಡನೆ ಸಹಕಾರ ಮಾಡಬಹುದೆಂದು ಸಾಯಮನ್ ಸಾಹೇಬರಿಗೆ ಆಶೆಯುಂಟಂತೆ. ನೋಡಬೇಕು, ಮತ್ತಾವ ಮೋಹನಾಸ್ತ್ರಗಳನ್ನು ಚಲ್ಲುತ್ತಾರೋ?

---

## ಅಖಿಲರಾಜಕೀಯ ಪಕ್ಷಗಳ ಸಭೆ

ಹಿಂದುಸ್ಥಾನದ ಯಾವತ್ತು ಪ್ರಮುಖ ರಾಜಕೀಯ ಪಕ್ಷಗಳು ಸೇರಿ ಸ್ವರಾಜ್ಯದ ಯೋಜನೆಯನ್ನು ಸಿದ್ಧಪಡಿಸಬೇಕೆಂಬ ಉದ್ದೇಶದಿಂದ ಫೆಬ್ರುವರಿ ೧೨ನೆಯ ತಾರೀಖಿನಿಂದ ೨೨ನೆಯ ತಾರೀಖಿನ ವರೆಗೆ ದಿಲ್ಲಿಯಲ್ಲಿ ಯಾವತ್ತೂ ಪಕ್ಷಗಳ ಸಭೆಯು ಕೂಡಿ ಚರ್ಚೆ ನಡೆಯಿತು. ಈ ಚರ್ಚೆಯಲ್ಲಿ ಕೊನೆಗೆ ಐದು ತೀರ್ಪುಗಳು ಮಂಜೂರು ಮಾಡಲ್ಪಟ್ಟವೆ. ಅವುಗಳ ಸಾರವೇನೆಂದರೆ (೧) ಹಿಂದೀ ರಾಜ್ಯಘಟನೆಯಲ್ಲಿ ಸಮ್ಮಿಶ್ರ ಮತದಾರ ಸಂಘಗಳಿರಬೇಕು. ಸದ್ಯಕ್ಕೆ ಆಯಾ ಕಾಯದೆ ಮಂಡಳಗಳಲ್ಲಿಯ ಹಿಂದೂ ಮುಸಲ್ಮಾನರ ಸಂಖ್ಯೆಯ ಪ್ರಮಾಣದಿಂದ ಆಯಾ ಸಮಾಜಗಳಿಗೆ ಸ್ಥಳಗಳು ದೊರೆಯಬೇಕು (೨) ಆಂಧ್ರ, ಉತ್ಕಲ, ಸಿಂಧ, ಕರ್ನಾಟಕ, ಮಧ್ಯಪ್ರಾಂತ ಮುಂತಾದವುಗಳನ್ನು ಭಾಷಾನ್ವಯವಾಗಿ ಪ್ರತ್ಯೇಕ ಪ್ರಾಂತಗಳನ್ನಾಗಿ ಮಾಡಬೇಕು. ಆದರೆ (ಅ) ಆರ್ಥಿಕದೃಷ್ಟಿಯಿಂದ ಆ ಪ್ರಾಂತಗಳು ಸ್ವಾವಲಂಬಿಗಳಾಗಿರಬೇಕು. ಮತ್ತು (ಆ) ಆ ಪ್ರಾಂತಗಳಲ್ಲಿಯ ಬಹುಸಂಖ್ಯಾಕ ಜನರು ಹೀಗೆ ಪ್ರತ್ಯೇಕ ಪ್ರಾಂತವಾಗುವದಕ್ಕೆ ಸಮ್ಮತಿಸಬೇಕು. (೩) ವಾಯುವ್ಯ ಸರಹದ್ದಿನಪ್ರಾಂತ, ಬಲೂಚಿಸ್ಥಾನ ಮತ್ತು ಸಿಂಧ ಇವು ಪ್ರತ್ಯೇಕ ಪ್ರಾಂತಗಳಾಗಿ ನಿರ್ಮಿಸಲ್ಪಡುವವರೆಗೆ ಅಲ್ಲಿ ಪ್ರತ್ಯೇಕ ಮತದಾರ ಸಂಘಗಳೇ ಇರಬೇಕು. (೪) ಪರಸ್ಪರರ ಅನುಮತಿಯಿಂದ ಹಿಂದೂ ಮುಸಲ್ಮಾನರು ಅಲ್ಪಸಂಖ್ಯಾಕರಿಗೆ ಪ್ರಮಾಣಕ್ಕಿಂತ ಹೆಚ್ಚಿನ ಪ್ರಾತಿನಿಧ್ಯದ ಹಕ್ಕುಗಳನ್ನು ಕೊಡಬಹುದು. (೫) ಈ ವಿಷಯಗಳನ್ನು ವಿಚಾರಮಾಡಿ ಮುಂದಿನ ತಿಂಗಳ ೮ನೇ ತಾರೀಖಿನ ಒಳಗಾಗಿ ವರದಿಯನ್ನು ತಯಾರಿಸುವದಕ್ಕೆ ೨೦ ಜನರದೊಂದು ಉಪಮಂಡಲವು ನೇಮಿಸಲ್ಪಟ್ಟಿತು

---

## ಮುಂಬಯಿ ಇಲಾಖೆಯ ಜಮಾಖರ್ಚು

ಮುಂಬಯಿ ಸರಕಾರದವರು ಮಿತಿಮೀರಿ ವೆಚ್ಚಮಾಡುವದರಲ್ಲಿ ಬಲು ಹಿರಿದಿನವರು. ಅವರಿಗೆ ಕೈಬಿಗಿಹಿಡಿದು ಗೊತ್ತೇ ಇಲ್ಲ. ಅಹುದು. ಏಕೆ ಕೈ ಬಿಗಿಹಿಡಿಯಬೇಕು. ದುಡ್ಡು ರೈತರದು, ಖರ್ಚುಮಾಡುವವರು ತಾವು. ಅಂದಬಳಿಕ ಅವರಿಗೆ ಚಿಂತೆಯೇನು ? ಇಂದು ಮುಂಬಯಿಯಲ್ಲಿಯ ಸಮುದ್ರವನ್ನು ಹುಗಿಯಲಿಕ್ಕೆ ಕೋಟಿಗಟ್ಟಲೆ ರೂಪಾಯಿಗಳನ್ನು ವೆಚ್ಚಮಾಡಬೇಕೆಂದರೆ ನಾಳೆ ಸಕ್ಕರದ ಹತ್ತರ ಒಡ್ಡು ಕಟ್ಟಲಿಕ್ಕೆ ಒಕೋಟಿ ಹಣ ಹಾಕುವರು. ಇಷ್ಟೆಲ್ಲ ಶ್ರೀಮಂತತನವನ್ನು ನಡೆಯಿಸಲಿಕ್ಕೆ ನಮ್ಮಹತ್ತರ ಹಣವಿಲ್ಲವೆಂದು ಕಾಯದೆ ಮಂಡಳದಲ್ಲಿಯ ನಮ್ಮ ಪ್ರತಿನಿಧಿಗಳು ಹೇಳಿದರೆ, "ಹೇರಿ ಪ್ರಜೆಗಳ ಮೇಲೆ ಹೊಸ ಕರವನ್ನು, ಮತ್ತು ತಂದುಕೊಡಿರಿ ನಮಗೆ ಹಣವನ್ನು ಎಂದು ಹೇಳುತ್ತಿರುವರು. ಮುಂಬಯಿ ಸರಕಾರದವರ ಉತ್ಪನ್ನ ಸುಮಾರು ೧೫ ಕೋಟಿ, ವೆಚ್ಚವನ್ನು ಆ ಗೆರೆಯೊಳಗೆ ಇಟ್ಟರೆ ಸಾಲಮಾಡಿ ಸಂಸಾರಮಾಡಲು ಕಾರಣವಿಲ್ಲ. ಆದರೆ, ಸಾಲಮಾಡುವವರು ಒಬ್ಬರು, ತೀರಿಸುವವರು ಮತ್ತೊಬ್ಬರು. ಹೀಗೆ ಸ್ಥಿತಿಯಿದ್ದಮೇಲೆ ಸಾಲಮಾಡದೆ ಏಕೆ ಬಿಡಬೇಕು ? ಮುಂಬಯಿ ಸರಕಾರದಲ್ಲಿ ಈಗ ಸಿಲಕಂತೂ ಇಲ್ಲವೇ ಇಲ್ಲ, ಮೇಲೆ ೪೫ಕೋಟಿ ಸಾಲ. ಇದು ಇವರು ಸಂಸಾರಮಾಡುವ ರೀತಿ. ಹೊಸ ಸ್ಟಾಂಪ ಆಕ್ಟ ಹೊಸ ಕೋರ್ಟ ಫಿ ಆಕ್ಟಗಳು ಎಂದು ರದ್ದು ಆಗ್ಯ

ವೆಂದು ಜನರು ಹಾದಿನೋಡುತ್ತಿದ್ದಾರೆ. ಆದರೆ ಪುನಃ ಈ ವರ್ಷ ಅವು ರದ್ದಾಗುವ ಆಶೆಯಿಲ್ಲ. ೧೯೨೮-೧೯೨೯ನೆಯ ವರ್ಷ ಅಂದರೆ ಬರುವ ವರ್ಷ ೧೩ಕೋಟಿ ೯೯ಲಕ್ಷ ರೂಪಾಯಿ ಉತ್ಪನ್ನವಾಗುವುದೆಂದು ಅಂದಾಜು ; ೧೪ಕೋಟಿ ೩೩ ಲಕ್ಷ ರೂಪಾಯಿಗಳ ವೆಚ್ಚವಾಗುವುದೆಂದು ಅಂದಾಜು. ೩೪ ಲಕ್ಷ ರೂಪಾಯಿಗಳ ಖರ್ಚು ಹೆಚ್ಚಿಗೆ. ಇದನ್ನು ಎಲ್ಲಿಂದ ತರುತ್ತೀರಿ ಎಂದು ಕೇಳಿದರೆ ಹಿಂದುಸ್ಥಾನ ಸರಕಾರಕ್ಕೆ ನಾವು ಕೊಡಬೇಕಾಗಿರುವ ೩೭ ಲಕ್ಷ ರೂಪಾಯಿಗಳನ್ನು ಅವರು ಬಿಟ್ಟುಕೊಡಬಹುದೆಂಬ ಆಶೆಯಿದೆಯೆಂಬ ಉತ್ತರ. ಒಂದು ವೇಳೆ ಆವರು ಬಿಟ್ಟುಕೊಟ್ಟರೆಂದು ತಿಳಿಯಿರಿ. ಆದರೇನಾಯಿತು? ನಮ್ಮ ಇಲಾಖೆಯವರು ಮಿತಿಮೀರಿ ವೆಚ್ಚಮಾಡುತ್ತಿರುವರೆಂಬುದೇನಾದರೂ ಸುಳ್ಳಾಯಿತೋ ? ನಿಷ್ಕಾರಣವಾಗಿ ನೀವು ಹೆಚ್ಚಿಗೆ ವೆಚ್ಚಮಾಡುವ ಕಾರಣವೇನು, ವೆಚ್ಚ ಕಡಿಮೆ ಮಾಡಿ, ಜನರ ಮೇಲೆ ಹೇರಿದ ಕಂದಾಯದ ಭಾರವನ್ನು ಹಗುರು ಮಾಡಬಾರದೇ-ಎಂಬದಾಗಿ ನಮ್ಮ ಪ್ರಶ್ನೆ. ೧೯೨೦-೨೧ ರಲ್ಲಿ ಈ ಇಲಾಖೆಯ ಉತ್ಪನ್ನವು ೧೨ ಕೋಟಿ ೭೮ ಲಕ್ಷವಿತ್ತು. ಆದರೆ ವೆಚ್ಚವು ಮಾತ್ರ ೧೪ ಕೋಟಿ ೮೪ ಲಕ್ಷವಾಯಿತು; ಆದುದರಿಂದಲೇ ಸ್ಟಾಂಪ ಫೀ ಕೋರ್ಟ ಫೀ ಏರಿದವು. ಜನರು ತಕರಾರು ಮಾಡಿದ್ದರಿಂದ ನಡುವೆ ೨-೩ ವರ್ಷ ಕೈಬಿಗಿಹಿಡಿದಿದ್ದರು. ಆದರೆ ೧೯೨೬ ರಲ್ಲಿ ಕೈಸಡಿಲು ಬಿಟ್ಟು ವೆಚ್ಚಮಾಡಲಿಕ್ಕೆ ಆರಂಭಿಸಿದರು. ೧೯೨೬–೨೭ ರಲ್ಲಿ ವಾರ್ಷಿಕ ಉತ್ಪನ್ನವು ೧೩ ಕೋಟಿ ೧೨ ಲಕ್ಷ; ವೆಚ್ಚವು ೧೪ ಕೋಟಿ ೨೦ ಲಕ್ಷ. ೧೯೨೭–೨೮ ರಲ್ಲಿ ಉತ್ಪನ್ನ ೧೩ ಕೋಟಿ ೯೩ ಲಕ್ಷ; ವೆಚ್ಚ ೧೩ ಕೋಟಿ ೯೭ ಲಕ್ಷ. ಹಿಂದಿನ ಆರು ವರ್ಷಗಳ ಸರಾಸರಿ ಉತ್ಪನ್ನವನ್ನು ನೋಡಿದರೆ, ಅದು ೧೩ ಕೋಟಿ ೮೩ ಲಕ್ಷ ರೂಪಾಯಿ ಇರುತ್ತದೆಂದು ಕಂಡುಬರುವುದು. ಆದಕಾರಣ, ಸರಕಾರದವರು ಆ ಗೆರೆಯನ್ನು ದಾಟಿ ಹೆಚ್ಚಿನ ವೆಚ್ಚವನ್ನು ಮಾಡುವುದು ಅನ್ಯಾಯವಲ್ಲವೆ ? ವೆಚ್ಚವನ್ನು ಎಷ್ಟೇ ಬೆಳಸಲಿ, ಆದರ ಸದ್ವಿನಿಯೋಗವಾಗುತ್ತದೆನ್ನಬೇಕೋ ಅದೂ ಇಲ್ಲ, ಶಿಕ್ಷಣ ಖಾತೆಗೆ ವೆಚ್ಚಮಾಡುವುದೆಂದರೆ ಸರಕಾರದ ಜೀವದಸುತ್ತ ಬರುತ್ತದೆ. ಎಲ್ಲಿ ಹಾಯಸ್ಕೂಲ ಕಾಲೇಜುಗಳ ಫೀಹೆಚ್ಚು ಮಾಡಿರಿ ಎಲ್ಲಿ ಟ್ರೇನಿಂಗ ಕಾಲೇಜ ಬಂದ ಮಾಡಿರಿ, ಬಡ ಮಾಸ್ತರ ಜನರ ಸಂಬಳ ಮುಳುಗಿಸಿರಿ, ಎಂಬದಾಗಿ ಶಿಕ್ಷಣಮಂತ್ರಿಗಳ ಉಪದೇಶ. ಇದಕ್ಕೆನ್ನಬೇಕು ಒಳ್ಳೇ ರಾಜ್ಯಕಾರಭಾರ !

---

## ಜಗಜಟ್ಟಿಯಾದ ಗಾಮಾ

ಪಂಜಾಬದ ಪ್ರಖ್ಯಾತ ಮುಸಲ್ಮಾನ ಮಲ್ಲನಾದ ಗಾಮಾ ಎಂಬವನಿಗೂ, ಜಗತ್ತಿನಲ್ಲಿಯೇ ಹೆಚ್ಚಿನವನೆಂದು ಪ್ರಸಿದ್ಧಿ ಹೊಂದಿದ ಪೋಲಂಡದ ಝೋಸ್ಕೊ ಎಂಬವನಿಗೂ ಕೆಲವು ವರ್ಷಗಳ ಹಿಂದೆ ಒಮ್ಮೆ ಕುಸ್ತಿಯಾಗಿತ್ತು. ಅವರಲ್ಲಿ ಇಬ್ಬರೂ ಬೀಳದೆ ಸಮಕುಸ್ತಿಯಾಗಿತ್ತು. ಆದರೆ, ಹೋದತಿಂಗಳಿನಲ್ಲಿ ಪುನಃ ಪೋಲಂಡದ ಝೋಸ್ಕೋನು ಗಾಮಾನನ್ನು ಗೆಲ್ಲುವೆ



ನೆಂದು ಪಣತೊಟ್ಟು, ಗರ್ವದಿಂದ ಹಿಂದುಸ್ಥಾನಕ್ಕೆ ಬಂದನು. ಪತಿಯಾಳದಲ್ಲಿ ಆತನಿಗೂ ಗಾಮಾನಿಗೂ ಕುಸ್ತಿಯಾಯಿತು. ಅದರಲ್ಲಿ ಗಾಮಾನು ಕ್ಷಣಾರ್ಧದಲ್ಲಿ ಝೋಸ್ಕೋನನ್ನು ಸಂಪೂರ್ಣವಾಗಿ ಕೆಡವಿ, ಜಗತ್ತಿಗೆಲ್ಲ ಶ್ರೇಷ್ಠನಾದ ಜಟ್ಟಿಯಾದನು. ಕುಸ್ತಿಯ ಕಣದೊಳಗೆ ಝೋಸ್ಕೋನು ಇಳಿದೊಡನೆಯೆ ಆತನ ಅಂಗರಚನೆಯನ್ನು ನೋಡಿ ಜನರು ಬೆರಗಾದರು. ಆ ಕುಸ್ತಿಯನ್ನು ನೋಡಲಿಕ್ಕೆ ಬಂದಿದ್ದ ೪೦ಸಾವಿರ ಜನರು ಗಾಮಾನು ಸೋಲುವನೆಂದು ಗುಣಗುಟ್ಟಹತ್ತಿದರು. ಆದರೆ ಕೈಗೆ ಕೈ

ಹತ್ತಿದ ಒಂದೆರಡು ನಿಮಿಷದಲ್ಲಿಯೇ ಗಾಮಾನು ಝೋಸ್ಕೋನ ಕಾಲುಹಿಡಿದು ಕೆಡುಹಿದನು. ಅಲ್ಲಿಂದ ೪೦ ನಿಮಿಷಗಳ ವರೆಗೆ ಕುಸ್ತಿ ನಡೆದು ಕೊನೆಗೆ ಝೋಸ್ಕೋನನ್ನು ಬೆನ್ನು ನೆಲಕ್ಕೆ ಹಚ್ಚಿ ಮಲಗಿಸಿದನು. ಆಗ, ಜಯುಜಯುಕಾರ ಧ್ವನಿಯಿಂದ ಜನರು ಆತನ ಸ್ವಾಗತವನ್ನು ಮಾಡಿದರು. ಗಾಮಾನು ಪತಿಯಾಳಾ ಮಹಾರಾಜರ ಆಶ್ರಯದಲ್ಲಿ ಇರುವನು. ಅವರು ಆತನಿಗೆ ತಿಂಗಳೊಂದಕ್ಕೆ ೨೫೦ ರೂಪಾಯಿ ವೇತನವನ್ನು ಕೊಡುತ್ತಿರುವರು.

---

## ಕರ್ನಾಟಕದ ಪ್ರಗತಿ

ಹೋದ ತಿಂಗಳಿನಲ್ಲಿ ಮಹಾಶಿವರಾತ್ರಿಯಿದ್ದುದರಿಂದ, ಕರ್ನಾಟಕದಲ್ಲಿ ಎಲ್ಲೆಡೆಗೂ ಆ ಉತ್ಸವವು ವಿಜೃಂಭಣೆಯಿಂದ ಜರುಗಿತು. ವಿಶೇಷತಃ ವೀರಶೈವ ಸಮಾಜದವರು ಈ ಉತ್ಸವದ ದಿನಗಳಲ್ಲಿ ಅನೇಕ ಸಾರ್ವಜನಿಕ ಚಳವಳಿಗಳನ್ನು ನಡೆಯಿಸುತ್ತಿರುವರು. ಬಾದಾಮಿಯ ಹತ್ತರ ಶಿವಯೋಗ ಮಂದಿರವೆಂಬ ಪ್ರಖ್ಯಾತವಾದ ಗುರುಕುಲವಿರುವದಷ್ಟೆ. ಅಲ್ಲಿ ಈ ಉತ್ಸವಕಾಲದಲ್ಲಿ, ಅನೇಕ ಸಭೆಗಳೂ ಪುರಾಣ ಪ್ರವಚನಗಳೂ ಆದವು. ಮಹಿಳಾ ಪರಿಷತ್ತು ನಡೆಯಿತು. ಕಾಶಿಯಲ್ಲಿ ವೀರಶೈವರದೊಂದು ಶ್ರೀಮತ್‌ಜಗದ್ಗುರು ವಿಶ್ವಾರಾಧ್ಯ ಶಿವಾಚಾರ್ಯರ ಮಹಾಸಂಸ್ಥಾನ (ಜಂಗಮವಾಡಿ) ಎಂಬ ಹೆಸರಿನಿಂದ ಪ್ರಖ್ಯಾತವಿರುವ ಮಠವುಂಟು. ಅಲ್ಲಿಯೂ ಈ ಶಿವರಾತ್ರಿ ಉತ್ಸವವು ಈ ಸಲ ವಿಶೇಷ ವೈಭವದಿಂದ ಜರುಗಿತು. ಈ ಮಠದ ಇತಿಹಾಸವು ಬಹಳ ಪ್ರಾಚೀನವಾಗಿದೆ. ಸುಮಾರು ೧೫೦೦ ವರ್ಷಗಳ ಹಿಂದೆಯೇ ಕಾಶಿಯ ಅರಸನಾದ ಜಯುನಂದನೆಂಬವನು ಈ ಮಠಕ್ಕೆ ಜಂಗಮಪುರವೆಂಬ ಗ್ರಾಮವನ್ನು ಉಂಬಳಿಯಾಗಿ ಕೊಟ್ಟಿರುವನು. ಮುಂದೆ ಔರಂಗಜೇಬ ಬಾದಶಹನೂ ಅನೇಕ ಗ್ರಾಮಗಳನ್ನು ಉಂಬಳಿಯಾಗಿ ಕೊಟ್ಟಿರುವನು. ಈಗ ಆ ಮಠದಲ್ಲಿ ೨೫-೩೦ ವಿದ್ಯಾರ್ಥಿಗಳು ಧಾರ್ಮಿಕ ಶಿಕ್ಷಣವನ್ನು ಪಡೆಯುತ್ತಿರುವರು. ಈ ಮಠವನ್ನು ಸಂದರ್ಶಿಸುವುದಕ್ಕೆ ರಾವ. ಕಂಬಳಿಯವರು ಮೊನ್ನೆ ಹೋಗಿ ಅಲ್ಲಿಯ ವ್ಯವಸ್ಥೆಯನ್ನು ನೋಡಿ ಆನಂದಪಟ್ಟರು. ಶಿವರಾತ್ರಿಯ ದಿವಸ ಶ್ರೀ ಜಗದ್ಗುರು ವಿಶ್ವಾರಾಧ್ಯ ಮಹಾಸ್ವಾಮಿಗಳ ರಥೋತ್ಸವವಾಯಿತು. ನಮ್ಮ ಕರ್ನಾಟಕದಲ್ಲಿ ಮತ್ತೊಂದು ಮುಖ್ಯ ಸಮಾಜವೆಂದರೆ ವೈಷ್ಣವರದು. ಮಾಧ್ವಮಠದ ಉತ್ತರಾದಿಮಠದ ಶ್ರೀಗಳವರು ಈ ಸಲ ಮಹಾಸಮಾರಾಧನೆಯನ್ನು ಕರ್ಜಗಿಯಲ್ಲಿ ನೆರವೇರಿಸಿದರು. ಆಗಿನ ಕಾಲಕ್ಕೆ ವೈಷ್ಣವ ವೃಂದವು ವಿಶೇಷವಾಗಿ ಕೂಡಿತ್ತು. ಮಳೆಬಂದು ಉತ್ಸವವು ತುಸು ನೀರಸವಾದರೂ ಊಟ-ಉಡಿಗೆಗಳ ವ್ಯವಸ್ಥೆಯು ಚೆನ್ನಾಗಿ ಇಡಲ್ಪಟ್ಟಿತ್ತು. ಆದರೆ ಇದು ಊಟದ ಸತ್ರವಾಗದೆ ಜ್ಞಾನಸತ್ರವಾಗಿದ್ದರೆ, ಶ್ರೀಗಳವರಿಗೆ ಭೂಷಣವಾಗುತ್ತಿತ್ತು. ಬಹಿಷ್ಕೃತ ಸಮಾಜದಪರವಾಗಿ ಶ್ರೀ. ಇಂಗಳೆ ದೇವರಾಯರು ವ್ಯಾಖ್ಯಾನಗಳ ದ್ವಾರದಿಂದ ತಮ್ಮ ಸಮಾಜದಲ್ಲಿ ಜಾಗ್ರತಿಯನ್ನುಂಟುಮಾಡುತ್ತಿರುವರು. ಧಾರ್ಮಿಕ ಚಳವಳಿಗಳಂತೆ ಹೋದ ತಿಂಗಳಿನಲ್ಲಿ ನಮ್ಮ ಕರ್ನಾಟಕದಲ್ಲಿ ರಾಜಕೀಯ ಚಳವಳಿಗಳಾದರೂ ಹೆಚ್ಚಿಗೆ ನಡೆಯಿತು. ಸಾಯಮನ್ ಸಾಹೇಬರು ಹಿಂದುಸ್ಥಾನಕ್ಕೆ ಕಾಲಿಟ್ಟದಿವಸವೆಂದರೆ ಇಡೀ ಹಿಂದುಸ್ಥಾನದಲ್ಲಿ ಜಾಗ್ರತಿಯ ದಿವಸವು. ಈ ಚಳವಳಿಯಲ್ಲಿ ಕರ್ನಾಟಕವು ತನ್ನ ಭಾಗವನ್ನು ಯೋಗ್ಯರೀತಿಯಿಂದಲೇ ಜರುಗಿಸಿತು. ಫೆಬ್ರುವರಿ ೩ ನೆಯ ತಾರೀಖಿನ ದಿವಸ, ಕರ್ನಾಟಕದಲ್ಲಿ ಅನೇಕ ಕಡೆಗೆ ಹರತಾಳವು ಪಾಲಿಸಲ್ಪಟ್ಟಿತು. ಕೊಡಗಿನಲ್ಲಿ ನಮ್ಮ ಕೊಡಗ ಬಂಧುಗಳು ಜಮೀನದಾರ ಸಂಘದ ದ್ವಾರದಿಂದ ಚಳವಳವನ್ನು ನಡೆಯಿಸಿರುವರು. ೨ನೆಯ ಫೆಬ್ರುವರಿ ದಿವಸ, ಆ ಸಂಘದ ವಿಶೇಷ ಸಭೆಯು ನೆರೆದಿತ್ತು. ಆ ಸಭೆಯಲ್ಲಿ ಚರ್ಚೆಯಾಗಿ ಸಾಯಮನ್ನ ಕಮಿಶನ್ನನನ್ನು ಬಹಿಷ್ಕರಿಸುವದಕ್ಕೋಸ್ಕರ ಶ್ರೀ. ಕುರುಂಬೈಯ್ಯನವರು ತಂದ ನಿರ್ಣಯವು ಮಂಜೂರಾಯಿತು. ಹೀಗೆ ಕೊಡಗು ಪ್ರಾಂತವೂ ಕಮಿಶನ್ನಕ್ಕೆ ಬಹಿಷ್ಕಾರ ಹಾಕಿತು, ಮೈಸೂರು ಸಂಸ್ಥಾನವೂ ಬೆಂಗಳೂರ ಮುಂತಾದವುಗಳಲ್ಲಿ ಸಭೆಮಾಡಿ ತನ್ನ ನಿಷೇಧವನ್ನು ವ್ಯಕ್ತಪಡಿಸಿತು. ಕೊಡಗಿನ ಕೌನ್ಸಿಲ ಸಭೆಗೆ ೧೩ ಜನರು ಲೋಕನಿಯುಕ್ತ ಸದಸ್ಯರಿರುವರು. ಅವರಲ್ಲಿ ೧೦ ಜನರು ಕಾಂಗ್ರೆಸಿನ ನಿರ್ಣಯಕ್ಕನುಸಾರವಾಗಿ ಕೌನ್ಸಿಲಿಗೆ ಹೋಗದೆ ಬಹಿಷ್ಕಾರ ಹಾಕಿರುವರು. ಈ ರೀತಿಯಾಗಿ, ಬ್ರಿಟಿಶ ಆಳರಸರ ದಬ್ಬಾಳಿಕೆಗೆ ದೇಶವು ಉತ್ತರಕೊಡುತ್ತಿರಲು ಮೈಸೂರಿನ ಆಳರಸರ ದಬ್ಬಾಳಿಕೆಗೆ 'ಕಣಿಯರ ಪತ್ರಿಕೆ'ಯ ಸಂಪಾದಕರಾದ ಶ್ರೀ. ತಗಡೂರು ರಾಮಚಂದ್ರರಾಯರು ಎದೆಕೊಟ್ಟಿರುವರು. ಇವರಿಗೆ ಸರಕಾರದವರು ಪತ್ರಿಕೆಯನ್ನು ತೆಗೆಯಲಿಕ್ಕೆ ಪರವಾನಿಗೆಯನ್ನು ಕೊಡಲಿಲ್ಲ. ಅದನ್ನು ಮೀರಿ ಇವರು

ಪತ್ರಿಕೆ ಹೊರಡಿಸಿದರು. ಸರಕಾರದವರು ಈಗ ಅವರ ಪ್ರೆಸ್ಸನ್ನು ಜಪ್ತುಮಾಡಿರುವರು. ಶ್ರೀ. ತಗಡೂರ ರಾಮಚಂದ್ರ ರಾಯರು ಮತ್ತೊಂದು ಪ್ರೆಸ್ಸಿನಿಂದ ಪತ್ರಿಕೆ ಹೊರಡಿಸಿರುವರು. ಹೀಗೆ ಮೈಸೂರ ಸರಕಾರದವರೊಡನೆ ಒಬ್ಬಂಟಿಗರಾಗಿ ಯುದ್ಧಮಾಡುತ್ತಿರುವ ಶ್ರೀ. ತಗಡೂರು ರಾಮಚಂದ್ರರಾಯರ ಧೈರ್ಯದ ಬಗ್ಗೆ ಯಾರಿಗೆ ಕೌತುಕವಾಗದೆ ಇರದು? ಹಿಂದುಸ್ಥಾನೀ ಸೇವಾದಳದವರು ಲೋಕಜಾಗ್ರುತಿಯ ಕಾರ್ಯವನ್ನು ಎಡೆಬಿಡದೆ ನಡಿಸಿಯೇ ಇರುವರು. ಉಡುಪಿಯಲ್ಲಿ ಅವರು ಜಾಗ್ರುತಿಯನ್ನುಂಟುಮಾಡಿದ ಬಳಿಕ ಈಗ ಅವರು ಚಿಕ್ಕಮಗಳೂರು ತಾಲೂಕಿನಲ್ಲಿ ತಮ್ಮ ಚಳವಳವನ್ನು ನಡೆಯಿಸಿರುವರು. ಕಲಬುರ್ಗಿಯಲ್ಲಿ ನಮ್ಮ ಮೊಗಲಾಯಿ ಬಾಂಧವರು ಹೋದ ತಿಂಗಳಿನಲ್ಲಿ ಹೆಚ್ಚು ಜಾಗ್ರುತಿಯನ್ನು ತೋರಿಸಿದರು. ಕಲುಬುರ್ಗಿಗೆ ಮ್ಯುನಿಸಿಪಾಲಟಿಯ ಹಕ್ಕು ಕೊಡಬೇಕೆಂದೂ ಲೋಕಲಬೊರ್ಡುಗಳಲ್ಲಿ ಲೋಕನಿಯುಕ್ತ ಸಭಾಸದರಿರಬೇಕೆಂದೂ, ಮಾತೃಭಾಷೆಯಲ್ಲಿ ಶಿಕ್ಷಣ ಕೊಡಬೇಕೆಂದೂ, ಹಿಂದೀ ಜನರಿಗೆ ಧಾರ್ಮಿಕ ಸ್ವಾತಂತ್ರ್ಯವನ್ನು ಕೊಡಬೇಕೆಂದೂ ಶಾಲೆಗಳನ್ನು ತೆಗೆಯುವುದಕ್ಕೆ ಸರಕಾರದವರ ಅಪ್ಪಣೆ ಬೇಕೆಂಬ ಕಾಯಿದೆಯನ್ನು ರದ್ದುಮಾಡಬೇಕೆಂದೂ ಅವರು, ಕಲಬುರ್ಗಿಗೆ ಬಂದ ಹೈದ್ರಾಬಾದಿನ ಮಂತ್ರಿಗಳಾದ ರಾಜಾಕಿಸನ ಪ್ರಸಾದ ಇವರಿಗೆ ಕೇಳಿಕೊಂಡರು. ಕೈಲಾದಮಟ್ಟಿಗೆ ನಿಮಗೆ ನೆರವಾಗುವೆನೆಂದು ಅವರು ಆಶ್ವಾಸನಕೊಟ್ಟರು. ಮಾನಪತ್ರಗಳ ಮೂಲಕ ತಮ್ಮ ಬೇಡಿಕೆಗಳನ್ನು ಅಧಿಕಾರಸ್ಥರೆದುರಿಗೆ ಇಡುವ ಕಲಬುರ್ಗಿಯವರ ಈ ಪದ್ಧತಿಯನ್ನು ಮೊಗಲಾಯಿಯ ಮಿಕ್ಕಪಟ್ಟಣಿಗರೂ ನಡೆಯಿಸಿ, ಆ ಮಾರ್ಗದಿಂದಲಾದರೂ ರಾಜಕೀಯ ಚಳವಳವನ್ನು ಮುಂದಕ್ಕೊಯ್ಯಬೇಕು. ಪ್ರಜೆಗಳ ಪರಿಷತ್ತೊಂದನ್ನು ಕೂಡಿಸುವ ಕಾಲವು ಪ್ರಾಪ್ತವಾಗಿದೆಂಬುದನ್ನು ಲಕ್ಷ್ಯದಲ್ಲಿ ತಂದು, ಆ ಕಾರ್ಯಕ್ಕೆ ನಮ್ಮ ಬಂಧುಗಳು ಪ್ರವೃತ್ತರಾಗಬೇಕೆಂದು ನಮ್ಮ ಸೂಚನೆ. ರಾಯಚೂರು ಕೊಪ್ಪಳ ಮುಂತಾದ ಊರುಗಳಲ್ಲಿಯ ಕನ್ನಡಿಗರೂ ತೀವ್ರ ಜಾಗ್ರುತರಾಗಬಹುದೆಂದು ಆಶೆಯುಂಟು. ದಿಲ್ಲಿಯಲ್ಲಿ ಕೂಡಿದ ಸರ್ವ ರಾಜಕೀಯ ಪಕ್ಷದ ಸಭೆಯವರು, ಮಿಕ್ಕಪ್ರಾಂತಗಳಂತೆ ಕರ್ನಾಟಕವನ್ನು ಬೇರೆ ಪ್ರಾಂತವನ್ನಾಗಿ ಮಾಡಬೇಕೆಂಬುದನ್ನು ತಮ್ಮ ಸ್ವರಾಜ್ಯದ ಯೋಜನೆಯಲ್ಲಿ ಸೇರಿಸಬೇಕೆಂದು ಗೊತ್ತುಪಡಿಸಿರುವುದರಿಂದ, ಕರ್ನಾಟಕದ ಏಕೀಕರಣದ ಒಂದು ಹೆಜ್ಜೆ ಮುಂದೆ ಬಿಟ್ಟಿದೆ. ರಾಜಕಾರಣದಂತೆ ಶಿಕ್ಷಣ ವಿಷಯದಲ್ಲಿಯೂ ಹೋದ ತಿಂಗಳಿನಲ್ಲಿ ಪ್ರಗತಿಯಾಗಿದೆ. ಸರಕಾರದವರು ಸಾಠೆ-ಪರಾಂಜಪೆ ಸ್ಕೀಮನ್ನು ಅಮಲಿನಲ್ಲಿ ತರಬೇಕೆಂದು ಪ್ರಾಥಮಿಕ ಶಿಕ್ಷಕ ಸಂಘಗಳು ನಿರ್ಣಯಗಳನ್ನು ಮಾಡಿರುವವು. ಲೋಕಲಬೋರ್ಡಿನ ಕೆಲವು ಶಿಕ್ಷಕರು ಅಧಿಕಾರಸ್ಥರ ದಬ್ಬಾಳಿಕೆಗೆ ಧೈರ್ಯದಿಂದ ಇದಿರು ನಿಂತು, ಕಷ್ಟ ಸಹಿಸಿ ತಮ್ಮ ಹಕ್ಕನ್ನು ಪ್ರಸ್ಥಾಪಿಸುತ್ತಿರುವರು. ಬೆಂಗಳೂರಿನ ಸೆಂಟ್ರಲ್ ಕಾಲೇಜದ ಕರ್ನಾಟಕ ಸಂಘದವರು ತಮ್ಮ ವಾರ್ಷಿಕ ಮಹೋತ್ಸವವನ್ನು ೧೨-೨-೨೮ನೆಯ ದಿವಸ ಶ್ರೀ. ಎನ್. ಎಸ್. ಸುಬ್ಬರಾಯರ ಅಧ್ಯಕ್ಷತೆಯಲ್ಲಿ ಉತ್ಸಾಹದಿಂದ ಜರುಗಿಸಿದರು. ಆಗ ಶ್ರೀ. ಸುಬ್ಬರಾಯರು ಕನ್ನಡ ಭಾಷೆಯ ದ್ವಾರದಿಂದಲೇ ಶಿಕ್ಷಣವು ಕೊಡಲ್ಪಡಬೇಕೆಂಬ ತತ್ವವನ್ನು ತಮ್ಮ ಅಧಿಕಾರಯುಕ್ತ ವಾಣಿಯಿಂದ ಪುಷ್ಟೀಕರಿಸಿದರು. ಮೈಸೂರಿನ ಮಹಾರಾಜಾ ಕಾಲೇಜಿನ ಕರ್ನಾಟಕ ಸಂಘದ ವಾರ್ಷಿಕೋತ್ಸವವು. ೨೨-೨-೨೮ನೆಯ ದಿವಸ ದೇ. ಡಿ. ವ್ಹಿ. ಗುಂಡಪ್ಪನವರ ಅಧ್ಯಕ್ಷತೆಯಲ್ಲಿ ಹುರುಪಿನಿಂದ ನೆರವೇರಿಸಲ್ಪಟ್ಟಿತು. ಈ ಸಂಘದ ವಿದ್ಯಾರ್ಥಿಗಳು ೫೦೦ ರೂಪಾಯಿಗಳನ್ನು ಶೇಖರಿಸಿ 'ಕಿರಿಯಕಾಣಿಕೆ' ಎಂಬ ಉತ್ಕೃಷ್ಟವಾದ ಪುಸ್ತಕವನ್ನು ಮುದ್ರಿಸಿ ಅದನ್ನು ತಮ್ಮ ಗುರುಗಳಾದ ಪ್ರೊ. ಬಿ. ಎಂ. ಶ್ರೀಕಂಠಯ್ಯನವರಿಗೆ ಅರ್ಪಿಸಿದರು. ಉತ್ಕೃಷ್ಟವಾದ ಕಥೆಗಳನ್ನು ಬರೆಯುವವರಿಗೆ ಇನಾಮು ಕೊಡಲ್ಪಟ್ಟವು. ಇತ್ತೀಚಿಗೆ ಮೈಸೂರ ಪ್ರಾಂತದ ವಿದ್ಯಾರ್ಥಿಗಳಲ್ಲಿ ಕಥೆ ಬರೆಯುವ ಅಭಿರುಚಿಯು ವಿಶೇಷವಾಗಿ ಕಂಡುಬರುತ್ತದೆ. ಹೀಗೆ ಉತ್ಕೃಷ್ಟವಾದ ಕಥೆಗಳನ್ನು ಬರೆಯಲು ಯತ್ನಿಸುವುದು ಸ್ತುತ್ಯವೇ ಸರಿ. ಆದರೆ ಇದರೊಂದಿಗೆ ಅವರು ಮತ್ತೂ ಒಂದು ಮಾತನ್ನು ಮರೆಯಕೂಡದು. ಅದಾವುದೆಂದರೆ ಮಿಕ್ಕ ಅನೇಕ ವಿಷಯಗಳಲ್ಲಿ ತಮ್ಮ ಜ್ಞಾನವನ್ನು ಪ್ರಕಟಿಸುವುದು. ಕಥೆ ಮತ್ತು ಪದ್ಯಗಳಲ್ಲದ ಮಿಕ್ಕ ಅನೇಕವಿಷಯಗಳನ್ನು ಅಭ್ಯಾಸ ಮಾಡುವುದಕ್ಕೆ ಅವರಿಗೆ ಅವಕಾಶವುಂಟು. ವಾಙ್ಮಯದಲ್ಲಿ ಸಂಶೋಧಕಬುದ್ಧಿಯನ್ನು ಜಾಗ್ರತಗೊಳಿಸುವುದು ಅವಶ್ಯವಿದೆ, ತತ್ವಜ್ಞಾನ, ಇತಿಹಾಸ, ಸಂಗೀತ, ವಿಜ್ಞಾನಶಾಸ್ತ್ರ ಇವೇ ಮುಂತಾದ, ಜ್ಞಾನದ ಅನೇಕ ಅಂಗಗಳಲ್ಲಿಯೂ ಪ್ರಾವೀಣ್ಯತೆಯನ್ನು ಪಡೆಯುವುದು ಅವಶ್ಯವಿದೆ. ಹಿಂದುಸ್ಥಾನದ ಅರ್ಥಶಾಸ್ತ್ರವನ್ನು ಅಧಿಕಾರಯುಕ್ತವಾಣಿಯಿಂದ ಚರ್ಚಿಸುವವರು.

ಬಹಳ ಸ್ವಲ್ಪ ಜನರಿದ್ದಾರೆ. ರಾಜಕೀಯ ವಿಷಯಗಳನ್ನು ಬರೆಯಬಲ್ಲವರು ತೀರಕಡಿಮೆ. ಆದುದರಿಂದ ಅನೆಲ್ಲ ವಿಷಯ ಗಳ ಕಡೆಗೆ ನಮ್ಮ ಕರ್ನಾಟಕದ ತರುಣ ಬಂಧುಗಳು ಗಮನ ಕೊಡಬೇಕೆಂಬ ನಮ್ಮ ಸೂಚನೆ. ಇತಿ.

## ರಾ. ಬ. ಹೊಸಕೋಟಿ ಕೃಷ್ಣಶಾಸ್ತ್ರಿಯವರ ಅತ್ಯಂತ ಶೋಚನೀಯ ಮೃತ್ಯು

ರಾವಬಹಾದ್ದೂರ ಹೊಸಕೋಟಿ ಕೃಷ್ಣಶಾಸ್ತ್ರಿಗಳು ಇಡೀ ಹಿಂದುಸ್ಥಾನದ ಶಿಲಾಲಿಪಿ ಖಾತೆಗೆ ಮುಖ್ಯ ಅಧಿಕಾರಿಗಳಾಗಿ ಕೆಲಸ ಮಾಡಿ ಮೊನ್ನೆ ಮೊನ್ನೆ ಅಂದರೆ ೧೯೨೪ನೆಯ ಇಸ್ವಿಯ ಸಪ್ಟಂಬರ ೧೬ನೆಯ ತಾರೀಖಿನ ದಿನಸ ಅವರು ಆ ಕೆಲಸ



ದಿಂದ ನಿವೃತ್ತರಾಗಿದ್ದರು. ದುರ್ದೈವದಿಂದ ಅವರು ೮-೨-೨೮ ನೆಯ ದಿವಸ ಕಾಲವಶವಾದರು. ಇವರು ಬೆಂಗಳೂರಿನ ಹತ್ತ ರಿರುವ ಹೊಸಕೋಟೆಯವರು; ಕನ್ನಡಿಗರು; ಆದರೂ ಇವ ರಿಗೆ ತೆಲಗು ತಮಿಳು ಇಂಗ್ಲಿಷ ಸಂಸ್ಕೃತ ಮುಂತಾದ ಅನೇಕ ಭಾಷೆಗಳಲ್ಲಿ ಒಳ್ಳೇ ಪಾಂಡಿತ್ಯವಿತ್ತು. ಇವರು ಬಿ. ಎ. ಪರೀಕ್ಷೆ ಪಾಸಾದೊಡನೆಯೆ ೧೮೯೧ನೆಯ ಇಸ್ವಿಯಲ್ಲಿ ಮದ್ರಾಸಿನಲ್ಲಿ ಶಿಲಾಲಿಪಿ ಖಾತೆಯಲ್ಲಿ ೪೦ ರೂಪಾಯಿ ಸಂಬಳದ ಮೇಲೆ ಸೇರಿದರು. ಇವರಿಗೆ ಮುಂಚಿನಿಂದಲೂ ಶಿಲಾಲಿಪಿಗಳ ಮೇಲೆ ಅತ್ಯಂತ ಪ್ರೇಮ, ಅಲ್ಲದೆ ಸಂಸ್ಕೃತದಲ್ಲಿಯೂ ಅದ್ವಿತೀಯ ಪಂಡಿತರು. ಇವರು ತಮ್ಮ ಕೇವಲ ಪಾಂಡಿತ್ಯದ ಬಲ ದಿಂದ ಆ ಖಾತೆಯಲ್ಲಿ ಏರುತ್ತ ಏರುತ್ತ ಕೊನೆಗೆ ಅದರ ತುದಿಗೆ ಹೋಗಿ ಮುಟ್ಟಿ, ಇಡೀ ಹಿಂದುಸ್ಥಾನದ ಶಿಲಾಲಿಪಿ ಖಾತೆಗೆ ಮುಖ್ಯ ಅಧಿಕಾರಸ್ಥರಾದರು. ಇವರ ಸ್ವಭಾವವು ಆಕಳ ಸ್ವಭಾವದಂತೆ ಅತ್ಯಂತ ಮೃದುವಾದುದು, ಗರ್ವವೆಂಬುದು ಎಂಥದೆಂಬುದೂ ಅವರಿಗೆ ಗೊತ್ತಿರಲಿಲ್ಲ. ದೇಹದಿಂದ ಸುದೃಢರು. ೧೯೦೬-೭ ನೆಯ ಇಸ್ವಿಯಲ್ಲಿ ಇವರು ಶಿಲಾಲಿಪಿ ಖಾತೆಯ ಅಸಿಸ್ಟಂಟ ಸುಪರಿಂಟೆಂಡೆಂಟರಾಗಿ ನೇಮಿಸಲ್ಪಟ್ಟರು. ೧೯೨೦ನೆಯ ಇಸ್ವಿಯಿಂದ ಇವರು ಎಪಿಗ್ರಾಫಿಯಾ ಇಂಡಿಕಾ ಎಂಬ ಶಿಲಾಲಿಪಿಯ ಪತ್ರಿಕೆಗೆ ಕಾರ್ಯತಃ ಸಂಪಾದಕರಾಗಿದ್ದರು. ವಿಲಾಯತಿಯಲ್ಲಿಯ ಥಾಮಸ್ ಸ್ಟೆನ್ ಕೊನೋ ಎಂಬವರು ಹೆಸರಿಗೆ ಮಾತ್ರ ಸಂಪಾದಕರಾಗಿದ್ದರು. ೧೯೦೬-೧೯೨೦ ರ ವರೆಗೆ ಇವರಿಂದ ಬರೆಯಲ್ಪಟ್ಟ ಶಿಲಾ ಲಿಪಿ ಖಾತೆಯ ವರದಿಗಳೆಂದರೆ ಆ ಜ್ಞಾನದ ಭಾಂಡಾಗಳೇ ಆಗಿರುವವು. ೧೯೨೦ನೆಯ ಇಸ್ವಿಯಲ್ಲಿ ಇವರು ಶಿಲಾಲಿಪಿ ಖಾತೆಯ ಮುಖ್ಯಸ್ಥರಾಗಿ ನೇಮಿಸಲ್ಪಟ್ಟ ಕೂಡಲೆ ಇವರಿಗೆ ರಾವಬಹದ್ದೂರ ಪದವಿಯು ದೊರೆಯಿತು. ನೀಲಗಿರಿಯಲ್ಲಿ ಊಟಕಾಮಂಡದ ಹತ್ತರಿರುವ ಫರ್ನಹಿಲ್ ಎಂಬಲ್ಲಿ ಇವ ರದೊಂದು ಬಂಗ್ಲೆಯಿರುತ್ತದೆ. ಇವರ ಆ ಬಂಗ್ಲೆಯಲ್ಲಿಯೇ ಇವರ ಶಿಲಾಲಿಪಿ ಖಾತೆಯ ಮುಖ್ಯ ಕಚೇರಿಯು ಇರುತ್ತದೆ. ಇವರು ಕೆಲಸದಿಂದ ನಿವೃತ್ತರಾದ ಬಳಿಕ ಬೆಂಗಳೂರಿನಲ್ಲಿರುವ ತಮ್ಮ ಮನೆಯಲ್ಲಿ ವಾಸಮಾಡುತ್ತಿದ್ದರು. ಸಾರ್ವಜನಿಕ ಕಾರ್ಯ ಮಾಡಬೇಕೆಂದು ಇವರಿಗೆ ಅತ್ಯಂತ ಲವಲಿಕೆಯಿತ್ತು. ಇವರು ಕರ್ನಾಟಕಕ್ಕೆ ಮಾಡಿದ ಉಪಕಾರವನ್ನು ಕರ್ನಾಟವು ಎಂದೆಂದಿಗೂ ಮರೆಯುವಂತಿಲ್ಲ. ಇವರು ತಾವು ಮುಖ್ಯ ಅಧಿಕಾರಾರೂಢರಾದೊಡನೆಯೆ, ಇಲ್ಲಿಯ ಕರ್ನಾಟಕ ಇತಿಹಾಸಮಂಡಳದ ಸೂಚನೆಯ ಮೇರೆಗೆ ಉತ್ತರ ಕರ್ನಾಟಕಕ್ಕೆ ಸ್ವತಃ ತಾವೇ ಬಂದು ಬಾದಾಮಿ ಐಹೊಳೆ ಪಟ್ಟದಕಲ್ಲು ವಿಜಾಪುರ, ಧಾರವಾಡ ಮುಂತಾದ ಸ್ಥಳಗಳನ್ನು ಸಂದರ್ಶಿಸಿ

ಇಲ್ಲಿಯ ಶಿಲಾಲಿಪಿಗಳು ಈ ವರೆಗೆ ಅಚ್ಚಾಗದಿದ್ದ ಬಗ್ಗೆ ಅತ್ಯಂತ ಆಶ್ಚರ್ಯಚಕಿತರಾಗಿ, ಉತ್ತರಕರ್ನಾಟಕದ ಪ್ರತಿಯೊಂದು ಗ್ರಾಮದ ಯಾವತ್ತು ಶಿಲಾಲಿಪಿಗಳ ಅಚ್ಚನ್ನು ತೆಗೆದುಕೊಳ್ಳಲೇಬೇಕೆಂದು ನಿರ್ಧರಿಸಿ ಆ ಮೇರೆಗೆ ೧೯೨೫ ನೆಯ ಜೂನ ತಿಂಗಳಲ್ಲಿ ಪ್ರಾರಂಭಮಾಡಿಯೇ ಬಿಟ್ಟರು. ಅವರು ಈ ಯೋಜನೆಯನ್ನು ತಯಾರಿಸದಿದ್ದರೆ, ಈಗ ೪೦ – ೫೦ ವರ್ಷ ಹೇಳಕೇಳುವವರಿಲ್ಲದೆ ಬಿದ್ದಂತೆ ಅವು ಇನ್ನೂ ಎಷ್ಟು ವರ್ಷ ಬೀಳುತ್ತಿದ್ದವೋ ದೇವರೇ ಬಲ್ಲ. ಅವರು ಡಾಯರೆಕ್ಟರ ಜನರಲ್ಲರ ವಾರ್ಷಿಕ ವರದಿಯಲ್ಲಿ ವಿಜನಗರದ ಮನೆತನಗಳ ಮೇಲೆ ಮೂರು ಲೇಖಗಳನ್ನು ಪ್ರಸಿದ್ಧಮಾಡಿದರು. ಇವರು ಬರೆದ South Indian Gods and Goddesses ಎಂಬ ಪುಸ್ತಕದಲ್ಲಿ ಮೂರ್ತಿರಚನೆ ಮತ್ತು ಪ್ರತಿಷ್ಠಾಪನೆ (Iconography) ಗಳ ವಿಷಯವಾಗಿ ವೇದ, ಆಗಮ ಪ್ರಾಚೀನ ಗ್ರಂಥಗಳಿಂದ ಅವತರಣಿಕೆಗಳನ್ನು ಕೊಟ್ಟು ದಕ್ಷಿಣ ಹಿಂದುಸ್ಥಾನದಲ್ಲಿಯ ಮೂರ್ತಿಗಳ ವಿಷಯವನ್ನು ವಿವೇಚಿಸಿರುವರು. ಅಲ್ಲದೆ ಅನೇಕ ಚಿಕ್ಕ ಚಿಕ್ಕ ಪುಸ್ತಕಗಳನ್ನು ಬರೆದಿರುವರು. ೧೯೨೪ನೆಯ ಇಸ್ವಿಯಲ್ಲಿ ಕೋಲಾರದಲ್ಲಿ ನೆರೆದ ಸಾಹಿತ್ಯಸಮ್ಮೇಲನಕ್ಕೆ ಇವರು ಅಧ್ಯಕ್ಷರಾಗಿ ಮಾಡಿದ ಭಾಷಣವು ಮನನೀಯವಾಗಿದೆ. ರಾವಬಾಹದ್ದೂರರವರು ಧರ್ಮನಿಷ್ಠರು, ಅತ್ಯಂತ ಸಾತ್ವಿಕರು. ಕರ್ನಾಟಕ ಇತಿಹಾಸಮಂಡಳದವರು ಅವರ ನೇತೃತ್ವದಲ್ಲಿ ಕೆಲಸಮಾಡುವದನ್ನು ನಿಶ್ಚಯಿಸಿದ್ದರು. ಆದರೆ, ಕರ್ನಾಟಕದ ಕಡುತರವಾದ ದುರ್ದೈವವು. ಅವರ ಪೂರ್ಣಲಾಭವು ಕರ್ನಾಟಕಕ್ಕೆ ಆಗ ಆಗುವದರೊಳಗಾಗಿ ಕಾಲನು ಅವರನ್ನು ಎಳೆದುಕೊಂಡು ಹೋದನು ! ಕರ್ನಾಟಕಸ್ಥರು ಅವರ ಅನುಕರಣಮಾಡಿ ಅವರ ಪ್ರೀತಿಯ ವಿಷಯವಾದ ಕರ್ನಾಟಕ ಇತಿಹಾಸವನ್ನು ಹೊರಗೆ ತರುವದೇ ಅವರ ನಿಜವಾದ ಸ್ಮಾರಕ.

## ಶ್ರೀ. ಬಿ. ಕೃಷ್ಣಪ್ಪನವರ ಶೋಚನೀಯ ಮೃತ್ಯು

ಕರ್ನಾಟಕ ಸಾಹಿತ್ಯ ಪರಿಷತ್ತಿನ ಆದ್ಯ ಸೆಕ್ರೆಟರಿಗಳೂ ಕರ್ನಾಟಕದ ಉಜ್ವಲ ಭಕ್ತರೂ ಆದ ಶ್ರೀ. ಬಿ. ಕೃಷ್ಣಪ್ಪನವರು ಎಂ. ಎ., ೭-೬-೨೮ನೆಯ ದಿವಸ ಕೈಲಾಸವಾಸಿಗಳಾದರೆಂದು ತಿಳುಹುವುದಕ್ಕೆ ಅತ್ಯಂತ ವಿಷಾದವೆನಿಸುತ್ತದೆ. ೧೯೧೫ನೆಯ ಇಸ್ವಿಯಲ್ಲಿ ಕರ್ನಾಟಕ ಸಾಹಿತ್ಯಸಮ್ಮೇಲನವು ಬೆಂಗಳೂರಿನಲ್ಲಿ ಕೂಡಿಸಲಿಕ್ಕೆ ಇವರು ಅತ್ಯಂತ ಪರಿಶ್ರಮಪಟ್ಟರು. ವೀರಶೈವರ ವಾಙ್ಮಯದಲ್ಲಿ ಇವರು ಬಹಳ ನಿಷ್ಣಾತರಾಗಿದ್ದರು. ಮಹಾರಾಜಾ ಕಾಲೇಜಿನಲ್ಲಿ ಕನ್ನಡ ಪ್ರೊಫೇಸರರಾಗಿ ಕೆಲಸ ಮಾಡುವಾಗ ಇವರು ವಿದ್ಯಾರ್ಥಿಗಳಿಗೆ ಅತ್ಯಂತ ಪ್ರಿಯರಾಗಿದ್ದರು. ವಿದ್ಯಾದಾಯಿನಿ ಪತ್ರಿಕೆಗೆ ಅನೇಕ ವರ್ಷ ಸಂಪಾದಕರಾಗಿದ್ದರು. ಕೆಲವು ವರ್ಷಗಳ ಹಿಂದೆ, ಇವರಿಗೆ ಪ್ರಾರಬ್ಧವಶದಿಂದ ಕಣ್ಣು ಹೋದವು. ಆದರೂ ಇವರು ಕನ್ನಡ ಭಾಷೆಯ ಸೇವೆಯನ್ನು ಬಿಟ್ಟಿರಲಿಲ್ಲ. ಇಂಥವರು ಅಕಾಲದಲ್ಲಿ ಮರಣಹೊಂದಿದ್ದರಿಂದ ಕರ್ನಾಟಕಕ್ಕೆ ಬಹಳ ಹಾನಿಯಾಗಿದೆ. ಈಶ ಇಚ್ಛೆಗೆ ಉಪಾಯವಿಲ್ಲ.




हिंदी प्रचारक (राष्ट्रभाषांक) ಇದು ಮದ್ರಾಸದಲ್ಲಿ ಹೊರಡುವ ಪತ್ರಿಕೆ:— ಹಿಂದೀ ಭಾಷೆಯು ರಾಷ್ಟ್ರಭಾಷೆಯಾಗಬೇಕೆಂಬುದು ನಿರ್ಧಾರವಾಗಿ ಹೋಗಿದೆ. ವ್ಯವಹಾರದ ಮಟ್ಟಿಗಾದರೂ ಅದನ್ನು ಎಲ್ಲರೂ ಕಲಿಯಬೇಕು. ಈ ಪತ್ರಿಕೆಯು ಸುಲಭವಾದ ಭಾಷೆಯಲ್ಲಿ ಬರೆಯಲ್ಪಡುವುದರಿಂದ ಎಲ್ಲರಿಗೂ ಓದಲಿಕ್ಕೆ ಅನುಕೂಲ.

**ಕಣಿಯರ ಪತ್ರಿಕೆ:**— ಮೈಸೂರ ಸರಕಾರದವರ ದಬ್ಬಾಳಿಕೆಯ ಮೂಲಕ ಈ ಪತ್ರಿಕೆಗೆ ಮಹತ್ವಬಂದಿದೆ. ಸಂಪಾದಕರ ಹಕ್ಕನ್ನು ಪ್ರಸ್ಥಾಪಿಸುವುದಕ್ಕೋಸ್ಕರ ಶ್ರೀ. ತಗಡೂರ ರಾಮಚಂದ್ರರಾಯರು ನಡುತ್ತಿರುವ ಪ್ರಯತ್ನಗಳಿಗೆ ಸಂಪಾದಕರ ಸಹಾನುಭೂತಿಯಿರುವುದು ಸಹಜ. ಶ್ರೀ. ತಗಡೂರ ರಾಮಚಂದ್ರರಾಯರಿಗೆ ಪತ್ರ ತೆಗೆಯಲಿಕ್ಕೆ ಪರವಾನಿಗೆ ಏಕೆ ಕೊಡಬಾರದೆಂಬುದು ಆಶ್ಚರ್ಯ.

**ಮನಮೋಹಿನಿ:**— (ಮನೋಹರ ಗ್ರಂಥಮಾಲೆಯ ಪುಸ್ತಕ. ಸಂಪಾದಕ ಕೇಶವತನಯ.) ಇದು ಒಂದು ಪುಟ್ಟ ಕಥೆ. ವರ್ಣನೆಯು ಸರಸವಾಗಿದೆ. ಹಳೆಯಕಾಲಕ್ಕೂ ಸೌಂದರ್ಯಕ್ಕೂ ಇಷ್ಟು ವಿರೋಧ ತೋರಿಸುವುದು ಅಸ್ವಾಭಾವಿಕ.

**ವೇಣೂರಿನ ಶಿಲಾಶಾಸನಗಳು:**— (ಲೇ. ಮಂಜೇಶ್ವರ ಗೋವಿಂದ ಪೈ. ಬೆ. ೦-೯-೦) ಇದು ಚಿಕ್ಕ ಪುಸ್ತಕವಾದರೂ ಐತಿಹಾಸಿಕ ಚರ್ಚೆಯನ್ನೊಳಕೊಂಡ ಪುಸ್ತಕ. ಇದರಲ್ಲಿ ಲೇಖಕರು ವೇಣೂರಿನ ಶಿಲಾಶಾಸನಗಳ ಬಗ್ಗೆ ಚೆನ್ನಾಗಿ ಚರ್ಚೆಮಾಡಿರುವರು. ಶ್ರವಣಬೆಳಗುಳ, ಕಾರ್ಕಳ ಮತ್ತು ವೇಣೂರ ಈ ಮೂರು ಸ್ಥಳಗಳಲ್ಲಿ ಶ್ರೀ. ಗೋಮಟೇಶ್ವರನ ಭವ್ಯವಾದ ಮೂರ್ತಿಗಳುಂಟು. ಅವುಗಳನ್ನು ಶ್ರೀ. ಪೈಯವರು ತುಲನಾತ್ಮಕ ದೃಷ್ಟಿಯಿಂದ ಅಭ್ಯಾಸಮಾಡಿರುವರು. ಅಲ್ಲದೆ, ವೇಣೂರಿನಲ್ಲಿ ಆಳಿದ ಅರಸರ ಇತಿಹಾಸವನ್ನೂ ಕೊಟ್ಟಿರುವರು. ಈ ಪುಸ್ತಕದಲ್ಲಿ ಶ್ರೀ. ಪೈಯವರ ಶೋಧಕ ಬುದ್ಧಿಯು ಚೆನ್ನಾಗಿ ಮೂಡಿದೆ. ಕರ್ನಾಟಕದ ಇತಿಹಾಸಾಭಿಮಾನಿಗಳು ಶಿಲಾಲಿಪಿಗಳನ್ನು ಹೀಗೆ ಶೋಧಕಬುದ್ಧಿಯಿಂದ ಅಭ್ಯಾಸ ಮಾಡಿದರೆ ನಿಜವಾದ ಇತಿಹಾಸವು ಗೊತ್ತಾಗಲಿಕ್ಕೆ ಅವಕಾಶವುಂಟಾಗದು.

**ಹನುಮದಾಸರ ಚರಿತ್ರ:**— (ಲೇ. ಭೀಮಾಚಾರ್ಯ ವಡವಿ, ಶಿಡೇನೂರ ಬೆ. ೦-೮-೦) ಇದರಲ್ಲಿ ಶ್ರೀ. ಹಿರೇ ಆಚಾರ್ಯರು, ಶ್ರೀ ರಾಮದಾಸರು, ಶ್ರೀ ಶ್ರೀನಿವಾಸದಾಸರು ಹೀಗೆ ಮೂವರು ದಾಸರ ಚರಿತ್ರೆ ಬಂದಿದೆ. ಇದರಲ್ಲಿ ಅನೇಕ ದಂತಕಥೆಗಳು ಅಡಕವಾಗಿವೆ. ನಮ್ಮ ಸತ್ಪುರುಷರ ವಿಷಯಕ್ಕಿರುವ ದಂತಕಥೆಗಳೆಲ್ಲವೂ ಒಮ್ಮೆ ಕಲೆಹಾಕಲ್ಪಟ್ಟರೆ, ಅವರಿಂದ ಕರ್ನಾಟಕದ ಇತಿಹಾಸದ ಮೇಲೆ ಬೆಳಕುಬೀಳುವದು. ಈ ಪುಸ್ತಕದಲ್ಲಿ ಬರೆದ ಚರಿತ್ರೆಗಳು ವಾಚನೀಯವಾಗಿ, ಭಕ್ತಿರಸಕ್ಕೆ ಪುಷ್ಟಿಗೊಡುತ್ತಿವೆ.

**ಸ್ವಾಮಿ ಶ್ರದ್ಧಾನಂದರು:**— (ಸುಬೋಧ ಕುಸುಮಾಂಜಲಿಯ ೭೫ನೆಯ ಕುಸುಮ. ಮಿಕ್ಕವುಗಳಂತೆ ಇದಾದರೂ ಸುವಾಸನೆಯುಳ್ಳದ್ದಾಗಿದೆ.

**ಭಾರತಿ:**— ವಿದ್ಯಾನಿಧಿ ಕಾರುಪಲ್ಲಿ ಶಿವರಾಮದಾಸರು ಶೇಲಂ ಜಿಲ್ಹಾ ಹೊಸೂರಿನಲ್ಲಿ ಹೊರಡಿಸುತ್ತಿರುವರು. ಚಂದಾ ವರ್ಷಕ್ಕೆ ೩-೦-೦. ಈಗ ೧೩ನೇ ಸಂಪುಟವು ಪ್ರಾರಂಭವಾಗಿದೆ. ಶೇಲಂ ಜಿಲ್ಹೆಯು ತಮಿಳಿನಿಂದ ಸುತ್ತುಗಟ್ಟಲ್ಪಟ್ಟಿದ್ದರೂ ಅಲ್ಲಿಯ ಕನ್ನಡಿಗರು ತಮ್ಮ ಅಭಿಮಾನವನ್ನು ಬಿಡದಿರುವುದು ಒಳ್ಳೇ ಸಂತೋಷದ ಸಂಗತಿ. ಈ ಮಾಸಪತ್ರಿಕೆಯು ಪ್ರೌಢ

ವಿಷಯಗಳನ್ನು ಒಳಕೊಂಡಿದೆ. ಇದಕ್ಕೆ ಉತ್ತೇಜನ ಕೊಡುವುದು ನಮ್ಮಗಳ ಕರ್ತವ್ಯ.

**ಸತ್ಯಶೋಧನೆ:—** ( ಗಾಂಧೀಜಿಯವರ ಆತ್ಮಕಥೆಯು ಪೂರ್ವಾರ್ಧವು ವಿಶ್ವಕರ್ಣಾಟಕದಿಂದ ಪ್ರಕಾಶಿತವಾಗಿದೆ. ಮಹಾತ್ಮಾ ಗಾಂಧಿಯವರ ಆತ್ಮಚರಿತ್ರೆಯು ಇದರಲ್ಲಿ ಲಲಿತವಾದ ಕನ್ನಡ ಭಾಷೆಯಲ್ಲಿ ಪರಿವರ್ತಿಸಲ್ಪಟ್ಟಿರುವುದು. ಮುದ್ರಣವು ಮನೋಹರವಾಗಿದೆ. ಕ್ರಯ. ೦-೧೨-೦.

**ಹೆಳವನಕಟ್ಟೆ ಗಿರಿಯಮ್ಮನ ಚರಿತ್ರ:—** ( ಲೇ. ಭೀ. ಹ. ವಡವಿ, ಹುಮ್ಮಿನಕಟ್ಟಿ. ಕ್ರಯ ೦-೮-೦ ) ವೇ॥ ಭೀಮಾಚಾರ್ಯರು ಅನೇಕ ಭಗವದ್ಭಕ್ತರ ಚರಿತ್ರೆಗಳನ್ನು ಸದ್ಬೋಧ ಚಂದ್ರಿಕೆಯಲ್ಲಿ ಮುದ್ರಿಸಿ ಅವುಗಳನ್ನು ಪ್ರತ್ಯೇಕವಾಗಿ ಪುಸ್ತಕರೂಪದಿಂದ ಪ್ರಕಟಿಸಿರುವರು. ಇದೂ ಅದೇ ಪ್ರಕಾರದ ಒಂದು ಚರಿತ್ರೆ. ಹೆಳವನಕಟ್ಟೆ ಗಿರಿಯಮ್ಮ ಎಂಬವರ ಪದಗಳು ಇಲ್ಲಿಯ ಹೆಂಗಸರ ಬಾಯಲ್ಲಿ ಇವೆ. ಆದರೆ ಅನೇಕರಿಗೆ ಚರಿತ್ರೆ ಗೊತ್ತಿದ್ದಿಲ್ಲ. ಆ ಕೊರತೆಯು ಇದರಿಂದ ದೂರಾಗಿರುವುದು.

**ಕನಕಮಹಿಮಾದರ್ಶ:—** ( ಲೇ. ಭೀಮಾಚಾರ್ಯ ವಡವಿ, ಬೆ. ೦-೮-೦ ) ಇದರಲ್ಲಿ ಕನಕದಾಸರ ಚರಿತ್ರೆಯು ದಂತಕಥೆಗಳೊಂದಿಗೆ ಪ್ರಕಟಿಸಲ್ಪಟ್ಟಿದೆ.

**ಪ್ರಸನ್ನವೆಂಕಟರ ಕೀರ್ತನೆಗಳು:—** ( ಸಂಪಾದಕರು, ಶ್ರೀ. ಕೌಜಲಗಿ ಬಂಡೇರಾಯರು, ಧಾರವಾಡ. ಬೆ. ೦-೮-೦). ಬಾಗಲಕೋಟೆಯಲ್ಲಿ ಸುಮಾರು ೩೦೦ ವರ್ಷಗಳ ಹಿಂದೆ ಆಗಿ ಹೋದ ಪ್ರಸನ್ನವೆಂಕಟ ಮುದ್ರಿಕೆಯನ್ನಿಟ್ಟುಕೊಂಡ ಈ ದಾಸವರ್ಯರ ಪದಗಳು ಈ ದೇಶದಲ್ಲಿ ಅನೇಕ ಹೆಂಗಸರ ಬಾಯಿಯಲ್ಲಿ ಇದ್ದರೂ ಅವುಗಳನ್ನು ಯಾರೂ ಸಂಗ್ರಹಿಸಿ ಮುದ್ರಿಸಿದ್ದಿಲ್ಲ ಶ್ರೀ ಬಂಡೇರಾಯರಿಂದ ಈ ಪುಸ್ತಕದಲ್ಲಿ ಅವರ ೮೦ ಪದಗಳು ಮುದ್ರಿತವಾಗಿವೆ. ಪ್ರಸನ್ನವೆಂಕಟರಾಯರ ಪ್ರಾಸಾದಿಕ ವಾಣಿಯಿಂದ ಹೊರಟ ಪದಗಳನ್ನೋದಿ ಕನ್ನಡಿಗರು ಭಕ್ತಿರಸದಲ್ಲಿ ಓಲಾಡಬೇಕು. ಈ ಪುಸ್ತಕಕ್ಕೆ ಕನ್ನಡಿಗರು ಉತ್ತೇಜನ ಕೊಟ್ಟರೆ, ಶ್ರೀ. ಕೌಜಲಗಿಯವರು ಬೇಗನೆ ಅವರ ಯಾವತ್ತೂ ಪದಗಳನ್ನು ಮುದ್ರಿಸುವವರಿರುವರು.

**ಪ್ರಸನ್ನವೆಂಕಟರ ಭಾಗವತ:—**(ಸಂ. ಕವಿಭೂಷಣ ಬಿಟಗೇರಿ ಕೃಷ್ಣರಾಯರು, ಮತ್ತು ಶ್ರೀ. ಕೌಜಲಗಿ ಬಂಡೇರಾಯರು. ಧಾರವಾಡ. ಬೆ. ೧-೦-೦ ) ಇದು ಭಾಗವತ ದಶಮಸ್ಕಂದದ ಅನುವಾದವು. ಕನ್ನಡದಲ್ಲಿ ಭಾಗವತವನ್ನು ಇಷ್ಟು ಸರಸವಾಗಿಯೂ ಪ್ರೌಢವಾಗಿಯೂ ವರ್ಣಿಸಿದ ಕವಿಗಳೆಂದರೆ ಇವರೊಬ್ಬರೇ ಎಂದು ಹೇಳಬಹುದು. ದಶಮಸ್ಕಂದದಲ್ಲಿ ಶ್ರೀಕೃಷ್ಣನ ಲೀಲೆಯು ವರ್ಣಿತವಾಗಿದೆ. ವಿಷಯವು ಕೃಷ್ಣನ ಕಥೆ, ಹಾಡುವವರು ಪ್ರಸನ್ನವೆಂಕಟರಂಥ ಕೃಷ್ಣಭಕ್ತಿಯಿಂದ ತುಂಬಿ ತುಳಕುವಂಥ ದಾಸವರ್ಯರು. ಅಂದಮೇಲೆ ಕೇಳುವುದೇನು ? ಇದರೊಳಗಿನ ಕವಿತಾ ಪ್ರೌಢಿಮೆಯೂ ಶಬ್ದಚಾತುರ್ಯವೂ ಅವರ್ಣನೀಯವಾಗಿದೆ. ಈ ಪುಸ್ತಕದಲ್ಲಿ ಟೀಕೆ ಟಿಪ್ಪಣಿಗಳನ್ನು ಕೊಟ್ಟಿರುವುದರಿಂದ, ಎಲ್ಲರಿಗೂ ತಿಳಿದುಕೊಳ್ಳಲಿಕ್ಕೆ ಅನುಕೂಲವಾಗಿದೆ. ಭಕ್ತಿರಸದ ರುಚಿಯು ಗೊತ್ತಿಲ್ಲದ ಈಗಿನ ಹೆಂಗಸರು ಇದನ್ನು ಅವಶ್ಯವಾಗಿ ಓದಿ ಹಾಡಬೇಕು.

**ಶ್ರೀ ರಾಘವೇಂದ್ರಗುರು ಕಥಾಮೃತ:—** (ಲೇ. ವೇ. ಭೀಮಾಚಾರ್ಯ ವಡವಿ, ಬೆ. ೦-೬-೦ ) ಶ್ರೀ. ರಾಘವೇಂದ್ರಸ್ವಾಮಿಗಳ ಚರಿತೆಯು. ಇದರಲ್ಲಿ ಭಕ್ತಿಪೂರಿತವಾಗಿ ಬರೆಯಲ್ಪಟ್ಟಿದೆ. ಭಾಷೆಯು ಸ್ಫೂರ್ತಿದಾಯಕವಾಗಿದೆ. ಇತಿಹಾಸದೃಷ್ಟಿಯಿಂದಲೂ ಇವರ ಚರಿತ್ರೆಯನ್ನು ಸಂಶೋಧಿಸುವುದು ಅವಶ್ಯ.

**ಕರ್ಣಾಟಕ ಗಂಗಾಲಹರಿ:—** ( ಲೇ. ವೇ. ಭೀಮಾಚಾರ್ಯ ವಡವಿ, (ಕಾವ್ಯರತ್ನ) ಬೆ. ೦-೧-೬). ಜಗನ್ನಾಥ ಪಂಡಿತರ ಗಂಗಾಲಹರಿಯ ಮಾದರಿಯಮೇಲೆ ಕನ್ನಡದಲ್ಲಿ ರಚಿಸಿದ ಪದ್ಯಗಳ ಪುಸ್ತಕವಿದು. ಭಾಷೆಯು ಮನೋಹರವಾಗಿದೆ. ಶೈಲಿಯು ಸರಳವಾಗಿದೆ. ಕಠಿಣ ಪದಗಳ ಅರ್ಥವೂ ಕೊಡಲ್ಪಟ್ಟಿದೆ.

**ಗೀತೆಯ ಗುಟ್ಟು:—**(ಗ್ರ:- ರಂಗನಾಥ ರಾಮಚಂದ್ರ ದಿವಾಕರ, ಧಾರವಾಡ. ಬೆಲೆ, ೧-೨-೦, ವ್ಹಿ. ಪಿ. ಯಿಂದ ೧-೫-೦. ) ಶ್ರೀ. ರಂಗರಾವ ದಿವಾಕರ ಇವರು ಉಪನಿಷತ್ಪ್ರಕಾಶವನ್ನು ಬರೆದ ಧೋರಣದ ಮೇಲೆಯೇ ಈಗ ಈ ಪುಸ್ತಕವನ್ನು ಬರೆದಿರುವರು. ಗೀತೆಗೊಂದು ವಿವೇಚನಾರೂಪ ಪ್ರಸ್ತಾವನೆಯನ್ನು ಬರೆದು ಸುಲಭಕನ್ನಡದಲ್ಲಿ ಅವತರಿಸುವುದನ್ನು ಗ್ರಂಥಕರ್ತರು ಈ ಪುಸ್ತಕವನ್ನು ಬರೆಯುವುದರಲ್ಲಿ ಮುಖ್ಯ ಉದ್ದೇಶವನ್ನಿಟ್ಟುಕೊಂಡಿರುವರು. ಗೀತಾವಿವೇಚನೆಯಲ್ಲಿ ಗೀತೆಯ ಮಹತ್ವವೂ ಮಾಹಾತ್ಮ್ಯವೂ, ಗೀತೆಯ ಸದ್ಯ

ಸ್ಥಿತಿಯೂ, ಗೀತೆಯೂ ಕರ್ನಾಟಕವೂ, ಗೀತೆಯ ಭೂಮಿಕೆಯು, ಗೀತೆಯಲ್ಲಿಯ ಸನಾತನಧರ್ಮವು, ಗೀತೆಯಲ್ಲಿಯ ಯುಗಧರ್ಮವು, ಯೋಗಪಂಚಕವು – ಇವೇ ಮುಂತಾದ ವಿಷಯಗಳನ್ನು ಹೊಸ ಚಿಕಿತ್ಸಕಬುದ್ಧಿಯಿಂದ ಜನರಿಗೆ ಸುಲಭವಾಗಿ ತಿಳಿಯುವಂತೆ ವಿವರಿಸಿರುವರು. ಅಲ್ಲದೆ ಗೀತೆಯ ಸರಳಭಾಷಾಂತರ, ಟಿಪ್ಪಣೆ ಮೊದಲಾದವುಗಳನ್ನು ಕೊಟ್ಟಿರುವರು. ಕರ್ನಾಟಕದಲ್ಲಿ ೭ನೆಯ ಶತಮಾನದಲ್ಲಿ ಕೂಡ ಗೀತೆಯು ನಿತ್ಯಪಾಠದ ಗ್ರಂಥವಾಗಿತ್ತೆಂದೂ ಕರ್ನಾಟಕದಲ್ಲಿ ಗೀತೆಯ ಪ್ರಚಾರವು ಹಿಂದಕ್ಕೆ ವಿಶೇಷವಾಗಿದ್ದರೂ ಈಗ ಅದು ಲುಪ್ತವಾಗಿರುವುದರಿಂದ ಅದನ್ನು ಪುನರುಜ್ಜೀವನಗೊಳಿಸುವುದು ಅವಶ್ಯವೆಂದೂ ಅವರು ಕರ್ನಾಟಕಸ್ಥರಿಗೆ ಎಚ್ಚರಿಕೆ ಕೊಟ್ಟಿರುವರು. "ಗೀತೆಯು ಆಧ್ಯಾತ್ಮಿಕ ಅನುಭವದ ಗ್ರಂಥವು. ಆದರೆ ಒಳ್ಳೆ ಕಲಾಕೋವಿದರು, ನೇಯ್ದ ಒಂದು ಜರದ ಶುಭ್ರ ಬಟ್ಟೆಯು ಅಲ್ಲಲ್ಲಿ ಹೊಂಬಣ್ಣದ ಗೆರೆಗಳಿಂದ ಹೊಳೆಯುವಂತೆ ಗೀತೆಯು ಕಾವ್ಯದ ಮಿಂಚಿನಿಂದ ಅಲ್ಲಲ್ಲಿ ನಮ್ಮನ್ನು ನಿಲ್ಲಿಸಿ ಮನಸೋಲಿಸುವುದು' ಎಂಬುದಾಗಿ ಬರೆದಿರುವುದು ಅಕ್ಷರಶಃ ನಿಜವಿರುತ್ತದೆ. ಗ್ರಂಥಕರ್ತರು ಗೀತೆಯೊಳಗಿನ ವಾಕ್ಯಗಳಿಗೆ ಸಮಾನ ಅರ್ಥವುಳ್ಳ ಕನ್ನಡ ಹಳೆಯ ವಚನಗಳನ್ನು ಕೊಟ್ಟು ಕರ್ನಾಟಕದ ಜನರಲ್ಲಿ ಗೀತೆಯ ವಿಚಾರಗಳು ಎಷ್ಟು ಆಳವಾಗಿ ನೆಟ್ಟಿದ್ದವೆಂಬುದನ್ನು ತೋರಿಸಿರುವರು. ಗೀತೆಯ ತತ್ವಜ್ಞಾನವೂ ವೀರಶೈವರ ಮತ್ತು ಜೈನರ ತತ್ವಜ್ಞಾನವೂ ಗೀತೆಯ ತತ್ವಜ್ಞಾನಕ್ಕೆ ಹೇಗೆ ಹೋಲುತ್ತದೆಂಬುದರ ವಿವೇಚನೆಯು ಈ ಗ್ರಂಥದಲ್ಲಿ ಬಂದಿರುವುದು. ಸಾರಾಂಶ, ೧೦೪ ಪುಟಗಳುಳ್ಳ ಗೀತಾವಿವೇಚನೆಯಲ್ಲಿ ಅನೇಕ ವಿಷಯಗಳು ಮಾರ್ಮಿಕವಾಗಿ ಚರ್ಚಿಸಲ್ಪಟ್ಟಿರುತ್ತವೆ. ವಿಚಾರಶಕ್ತಿಯೇ ಕುಂದಿ ಹೋಗಿರುವ ಈಗಿನ ದಿವಸಗಳಲ್ಲಿ ಈ ತರಹದ ವಿವೇಚನೆಯ ಅವಶ್ಯಕತೆಯು ಬಹಳವಾಗಿದೆ. ವಿಶೇಷತಃ ಜನರಲ್ಲಿ ಗೀತೆಯ ವಿಷಯವಾಗಿ ಅಭಿರುಚಿಯನ್ನು ಹುಟ್ಟಿಸುವುದಕ್ಕೆ ಈ ಪುಸ್ತಕದ ಉಪಯೋಗವು ಚೆನ್ನಾಗಿಯೇ ಆಗುತ್ತದೆ.

ಗ್ರಂಥಕರ್ತರು ಯಾವುದೊಂದು ಸಾಂಪ್ರದಾಯಕ್ಕನುಸರಿಸಿ ಈ ಪುಸ್ತಕವನ್ನು ಬರೆದಿರದೆ, ತಮಗೆ ತಿಳಿದಂತೆ ಗೀತೆಯ ಅರ್ಥವನ್ನು ಮಾಡಿರುವರು. ಅದರಿಂದ ಇದು ದ್ವೈತ ಅದ್ವೈತ ಮುಂತಾದ ಯಾವ ಅರ್ಥಕ್ಕೂ ಹೊಂದುವುದಿಲ್ಲ. ಗೀತೆಯು ಆಧ್ಯಾತ್ಮಿಕ ಗ್ರಂಥವಾಗಿದ್ದರೆ ಅದರೊಳಗಿನ ತತ್ವಜ್ಞಾನವು ಏನು ಹೇಳುತ್ತಿದೆ ಎಂಬುದನ್ನಂತೂ ನಾವು ತಿಳಿದುಕೊಳ್ಳಲೇ ಬೇಕಲ್ಲವೇ ? ಮತ್ತು ಅದನ್ನು ಪ್ರತಿಯೊಬ್ಬನು ತನ್ನ ಬುದ್ಧಿಯಿಂದ ವಿಚಾರಮಾಡಿ ; ತನ್ನ ಶಂಕೆಗಳ ಪರಿಹಾರವನ್ನು ಮಾಡಿಕೊಂಡ ಬಳಿಕವೇ ನಿಶ್ಚಯಿಸಬೇಕಲ್ಲವೆ ? ಹೀಗೆ ವಿಚಾರಮಾಡುವಾಗ ನಾವು ಪುನಃ ಸಾಂಪ್ರದಾಯಕರು ಎತ್ತಿದ ಅನೇಕ ಪ್ರಶ್ನೆಗಳನ್ನು ಎತ್ತಲೇಬೇಕಾಗುತ್ತದೆ. ಆ ಪ್ರಶ್ನೆಗಳಿಗೆ ಈ ಪುಸ್ತಕದಲ್ಲಿ ಉತ್ತರವಿಲ್ಲ. ಮತ್ತು ಗ್ರಂಥಕರ್ತರು ಹಾಗೆ ಮಾಡುವುದನ್ನು ಉದ್ದೇಶವಾಗಿಯೂ ಇಟ್ಟುಕೊಂಡಿಲ್ಲ. ಗೀತೆಯಲ್ಲಿ ಅರ್ಜುನರು ಸಂನ್ಯಾಸವನ್ನು ಸ್ವೀಕರಿಸಬೇಕೆಂದಿದ್ದಾಗ ಆತನಿಗೆ ಶ್ರೀಕೃಷ್ಣನು ಯುದ್ಧಮಾಡಲಿಕ್ಕೆ ಬೋಧಿಸಿದನೆಂಬುದು ಚಿಕ್ಕಹುಡುಗರಿಗೂ ತಿಳಿಯುವ ಮಾತು. ಆದರೆ ಆ ಪ್ರಶ್ನೆಯ ಹೊಟ್ಟೆಯಲ್ಲಿ ಹುಗಿದಿರುವ ನೂರಾರು ಪ್ರಶ್ನೆಗಳು ಸುಲಭ ಪ್ರಶ್ನೆಗಳಲ್ಲ ಅವುಗಳನ್ನು ಬಿಡಿಸುವುದೇ ಗೀತೆಯ ಗುರಿ. ಆ ಗುರಿಯನ್ನು ನಾವು ಅರಿತುಕೊಳ್ಳಬೇಕು. ೩ನೆಯ ಪುಟದಲ್ಲಿ 'ನಾಹಂ ಕರ್ತಾ ಹರಿಃಕರ್ತಾ ತತ್ಪೂಜಾ ಕರ್ಮಚಾಖಿಲಂ ' ಎಂಬ ವಾಕ್ಯವು ಶ್ರೀಮಧ್ವಾಚಾರ್ಯರ ವಾಕ್ಯವೆಂದು ಗ್ರಂಥಕರ್ತರು ಬರೆದಿರುವರು. ಅದು ಶ್ರೀಮಧ್ವಾಚಾರ್ಯರ ಉಪದೇಶದ ತಿರುಳಾಗಿದ್ದರೂ ಅದು ಅವರ ವಾಕ್ಯವಲ್ಲ, ಬ್ರಹ್ಮತರ್ಕದೊಳಗಿನ ವಾಕ್ಯವು. ಅದೇ ಮೇರೆಗೆ ಟೀಕಾರಾಯರು ಸಮರ್ಥಿಸಿದ 'ಸ್ವವಿಹಿತ ವೃತ್ತ್ಯಾಭಕ್ತ್ಯಾ ಭಗವದಾರಾಧನಂ ' ಎಂಬ ವಾಕ್ಯವು ಟೀಕಾರಾಯರ ವಾಕ್ಯವಾಗಿರದೆ ಶ್ರೀಮಧ್ವಾಚಾರ್ಯರ ವಾಕ್ಯವಾಗಿರುತ್ತದೆ. ಅದನ್ನೇ ಟೀಕಾರಾಯರು ವಿಸ್ತರಿಸಿರುವರು.

---

ಕರವೀರಮಠದ

## ಶ್ರೀಮಜ್ಜಗದ್ಗುರು ಶಂಕರಾಚಾರ್ಯರು



( ಕುರ್ತಕೋಟಿಯ ಡಾ. ಭಾಗವತರು )




ॐ स॒ह ना॑ववतु ॥ स॒ह नौ॑ भुनक्तु ॥ स॒ह वी॒र्यं॑ करवावहै ॥
ते॒ज॒स्वि॒ना॒वधी॑तमस्तु मा वि॑द्वि॒षा॒वहै ॥ ॐ शान्तिः ॥३॥

—श्रुतिः


| | | |
|---|---|---|
| ಸಂಪುಟ ೬ | ವಿಭವನಾಮ ಸಂವತ್ಸರ ಬನದ ಹುಣ್ಣಿವೆ<br>ಶಕ ೧೮೫೦, ೫ನೆಯ ಎಪ್ರಿಲ, ೧೯೨೮ | ಸಂಚಿಕೆ ೬ |


# ವೈದಿಕಧರ್ಮಗ್ಲಾನಿಯೂ ಕ್ರಮೋನ್ನತಿಯೂ

ಅನುವಾದಕ:—ಶ್ರೀ. ಮಹಾಬಲೇಶ್ವರಭಟ್ಟ ಹೋಬಳಿ.

( ೫ನೇ ಸಂಚಿಕೆಯಿಂದ ಮುಂದೆ ಸಾಗಿದ್ದು. )

**ಸಂದೇಹಗಳು:**—ಸ್ವಭಾವ ಮತ್ತು ಗುಣಗಳ ರಹಸ್ಯವೇನು ? ಕರ್ಮಗಳ ವಿಭಾಗಗಳು ಹೇಗೆಮಾಡಲ್ಪಟ್ಟಿವೆ ? ಪರಸ್ಪರ ವರ್ಣಗಳ ಮತ್ತು ಕರ್ಮಗಳಲ್ಲಿ ಪರಸ್ಪರ ಸಹಕಾರಿತ್ವದ ತತ್ವವು ಹೇಗಿದೆ ? ಜಗಚ್ಚಕ್ರದ ಪ್ರಗತಿಗೆ ವರ್ಣ ಗುಣ ಕರ್ಮಗಳು ಎಷ್ಟು ಉಪಕಾರಕಗಳಾಗಿವೆ? ಅವರವರ ಕರ್ಮಗಳೇ ಅವರವರ ಆತ್ಮೋದ್ಧಾರಕ್ಕೆ ಹೇಗೆ ಸಾಧನಗಳಾಗಿವೆ ? ಮಡಿಮೈಲಿಗೆಗಳ ನಿಯಮಗಳು ಹೇಗೆ ಪರಿಪಾಲಿಸಲ್ಪಡುತ್ತವೆ? ಯಾರಾರಿಗೆ ಎಷ್ಟೆಷ್ಟು ಅಧಿಕಾರಗಳಿವೆ ? ಎಂಬ ಸಂದೇಹಗಳಿಗೂ, ತಕ್ಕ ಪರಿಹಾರವನ್ನು ಹೇಳುವದು ಅವಶ್ಯವಿರುವದರಿಂದ ಸ್ವಲ್ಪ ಹೇಳೋಣ.

**ಗುಣಪರಿಣಾಮ:**—ಸ್ವಭಾವ ಅಥವಾ ಸಂಸ್ಕಾರವು ಮನುಷ್ಯನಲ್ಲಿ ಆನುವಂಶಿಕವಾಗಿಯೂ, ಜನ್ಮಾಂತರೀಯವಾಗಿಯೂ, ಸಂಚಿತವಾಗುದು. ಆಹಾರವೂ ಸ್ವಭಾವಕ್ಕೆ ಒಂದೇ ಕಾರಣವೆಂದು ಛಾಂದೋಗ್ಯೋಪನಿಷತ್ತಿನಲ್ಲಿ ಹೇಳಿದೆ. ಈ ಸ್ವಭಾವಾನುಸಾರವಾಗಿ ಕರ್ಮವನ್ನು ಮಾಡಬೇಕೆಂಬ ಪ್ರವೃತ್ತಿಗೆ 'ಗುಣ'ಎಂಬ ಹೆಸರು. ಗುಣಗಳಿಂದಲೇ ಮನುಷ್ಯನ ಸಂಸ್ಕಾರಸಂಚಯುವ ಲಕ್ಷಣವನ್ನು ಪರೀಕ್ಷಿಸಲಿಕ್ಕೆ ಬರುತ್ತದೆ. ಸ್ವಭಾವದಲ್ಲಿಯೂ, ಗುಣದಲ್ಲಿಯೂ, ಸಾತ್ವಿಕ, ರಾಜಸ, ತಾಮಸಗಳೆಂಬ ಮೂರು ಪ್ರಕಾರದ ಪರಿಣತಾವಸ್ಥೆಗಳಿರುವವೆಂದು ತೋರುತ್ತದೆ.

ಜಗನ್ನಿಯಾಮಕನಾದ ಈಶ್ವರನಿಗೆ ಉಪಾಧಿರೂಪವಾಗಿರುವ ಮಾಯೆಯು ಸತ್ವರಜಸ್ತಮೋಗುಣಾತ್ಮಕವಾಗಿದ್ದು ಈಶಾಜ್ಞೆಯಂತೆ ಸೃಷ್ಟಿಯನ್ನು ಪರಿಣಾಮಪಡಿಸುವಾಗ ತನ್ನ ಗುಣತ್ರಯುವ (ಮೂರುಗುಣಗಳ) ನ್ನು ಜಗತ್ತಿನ ಎಲ್ಲ ಪದಾರ್ಥಗಳಲ್ಲಿಯೂ, ಅಂಶರೂಪದಿಂದ ಇಟ್ಟಿರುವದಾಗಿ ಸೃಷ್ಟಿತತ್ವದ ಪಂಚೀಕರಣವಿಧಾನದಿಂದ ತಿಳಿದು ಬರುತ್ತದೆ. ಗೀತಾಶಾಸ್ತ್ರದಲ್ಲಿಯೂ, ಅಲ್ಲಲ್ಲಿ ಈ ಗುಣತತ್ವದ ರಹಸ್ಯವು ವ್ಯಕ್ತವಾಗಿದೆ. ಬುದ್ಧಿ, ಮನಸ್ಸು, ಅಹಂಕಾರ, ಚಿತ್ತ, ಸ್ವಭಾವ ಕರ್ಮ, ಆಚಾರ ಇತ್ಯಾದಿಗಳಲ್ಲಿ, ಗುಣಪರಿಣಾಮವು ಕಂಡು ಬರುತ್ತದೆ.

ಬುದ್ಧಿಯು ವಿಚಾರಶಕ್ತಿಯ ಸ್ಥಾನವು. ಈ ಬುದ್ಧಿಯಿಂದ ಸತ್ಪುರುಷರು ಜಗತ್ತಿನ ಕಲ್ಯಾಣವನ್ನೂ, ಆತ್ಮೋನ್ನತಿಯನ್ನೂ ಯೋಚಿಸಿ ನಿಶ್ಚೈಸುವರು. ಗೃಹಸ್ಥರು ಇಂಥ ಕರ್ಮವನ್ನು ಮಾಡಬೇಕು, ಇಂಥ ಫಲವನ್ನು ಪಡೆಯಬೇಕು ಎಂದು ನಿರ್ಣಯಿಸಿ ಹಾಗೆಯೇ ಮಾಡುವರು. ದುಷ್ಟರು ಇನ್ನೊಬ್ಬನ ಸೊತ್ತನ್ನು ಅಪಹರಿಸಬೇಕು. ವಿರೋಧಿಗಳನ್ನು ಕೊಲ್ಲಬೇಕು ಇಲ್ಲವೆ ಅವರ ಮೇಲೆ ಇಲ್ಲದ ಸುಳ್ಳು ವ್ಯವಹಾರವನ್ನೆಬ್ಬಿಸಬೇಕು. ಉತ್ತಮ ಕಾರ್ಯಗಳನ್ನು ನಡಿಯಗೊಡಬಾರದು. ಎಂದು ಯೋಚಿಸಿ ಅದರಂತೆ ಮಾಡಲು ಹಾತೊರೆಯುವರು. ಹೀಗೆ ಯೋಚಿಸಲಿಕ್ಕೆ ಸತ್ಪುರುಷರ ಸಾತ್ವಿಕ ಬುದ್ಧಿಯೂ, ಗೃಹಸ್ಥರ ರಾಜಸಬುದ್ಧಿಯೂ, ದುಷ್ಟರ ತಾಮಸ ಬುದ್ಧಿಯೂ, ಕಾರಣವಾಗಿರುವದೆಂದು ತಿಳಿಯಬೇಕು. ಹೀಗೆಯೇ ಮನಸ್ಸು ಮೊದಲಾದವುಗಳ ರೀತಿಯೂ ಇರುತ್ತದೆ. ಇದು ಆಂತರಸೃಷ್ಟಿಯ ವಿಚಾರವಾಯಿತು. ಹೀಗೆಯೇ ಬಾಹ್ಯಸೃಷ್ಟಿಯಲ್ಲಿಯೂ, ಗುಣಲಕ್ಷಣವು ಹೇಗೆ ತೋರುವದೆಂಬದನ್ನು ಹೇಳುವಾ.

ಸಾತ್ವಿಕಗುಣದ ವರ್ಣವು ಬಿಳುಪು. ರಾಜಸಗುಣದ ಬಣ್ಣವು ಕೆಂಪು, ತಾಮಸಗುಣದ ಕಲೆಯು ಕಪ್ಪು. ಇದರಿಂದಲೇ ಬಾಹ್ಯಸೃಷ್ಟಿಗೆ ವೈಚಿತ್ರ್ಯವು ಕಾರಣವಾಗಿದೆ. ದೇಹ, ಕಲ್ಲು, ಮಣ್ಣು, ಹೂವು, ಲೋಹ, ರಸ, ಫಲ, ಇವುಗಳಲ್ಲಿ ಆ ಬಣ್ಣಗಳನ್ನು ಸಹಜವಾಗಿ ನೋಡಬಹುದು. ಪ್ರಾಣಿಗಳ ದೇಹಗಳು ಮೂರೂ ಬಣ್ಣಗಳಲ್ಲಿಯೂ, ಇರುತ್ತವೆ. ಕಲ್ಲುಗಳೂ ಮಣ್ಣುಗಳೂ, ನಾನಾಬಣ್ಣಗಳಲ್ಲಿ ದೊರೆಯುತ್ತವೆ. ಹೂವುಗಳೂ, ಲೋಹಗಳೂ, ಹಾಗೆಯೇ ಸಿಕ್ಕುತ್ತವೆ. ಬೆಳ್ಳಿ ಬಂಗಾರ, ಕಬ್ಬಿಣ ಇವುಗಳ ವರ್ಣಗಳನ್ನು ನೋಡಿದರೆ ಸ್ಪಷ್ಟವಾಗುವದು. ರಸಪದಾರ್ಥಗಳಲ್ಲಿ ನೋಡಿದರೆ ಕ್ಷೀರ, ಬೆಲ್ಲ, ಮಧು, ಅರಗು, ಮೇಣ, ಮೊದಲಾದವುಗಳಿಂದ ಸ್ಪಷ್ಟವಾಗುವದು. ಫಲಗಳಲ್ಲಿಯೂ, ಇನ್ನೂ ಅನೇಕ ಭೌತಿಕ ಪದಾರ್ಥಗಳಲ್ಲಿಯೂ, ವರ್ಣವೈಚಿತ್ರ್ಯವು ತೋರುತ್ತಿರುವದೆಂಬದು ಎಲ್ಲರ ಅನುಭವದಿಂದಲೂ, ಸಿದ ವಾದ ಸಂಗತಿಯಾಗಿದೆ.

ಆಂತರ ಸೃಷ್ಟಿಯಲ್ಲಿ ಗುಣಪರಿಣಾಮವು ವಾಸನಾರೂಪವಾಗಿ ಆಗುತ್ತಿಪ್ಪ ಅದು ಪ್ರಸಂಗಾನುಸಾರ ಪರಿಹಾರ್ಯವೂ, ಸಂಗ್ರಾಹ್ಯವೂ, ಇರುತ್ತದೆ. ಬಾಹ್ಯಸೃಷ್ಟಿಯಲ್ಲಿ ಗುಣಪರಿಣಾಮಗಳು ಪದಾರ್ಥಗಳಲ್ಲಿ ವ್ಯಕ್ತವಾಗಿ ಸ್ವಾಭಾವಿಕವೆನಿಸಿರುವದರಿಂದ ಅವು ಅಪರಿಹಾರ್ಯಗಳಿರುತ್ತವೆ. ಇದರಿಂದಲೇ ತಾಮಸ ಪುರುಷನು ಒಂದು ಕಾಲದಲ್ಲಿ ರಾಜಸನಾಗುವನು. ಇನ್ನೊಂದು ಕಾಲದಲ್ಲಿ ರಾಜಸಪುರುಷನಾಗಲಿಕ್ಕೂ ಬರುತ್ತದೆ. ಮತ್ತೊಂದು ವೇಳೆಯಲ್ಲಿ ಸ್ವಾತ್ವಿಕನೂ ಆಗಬಹುದು. ಹೀಗೆಯೇ ಸಾತ್ವಿಕನು ಮೋಹವಶದಿಂದ ರಾಜಸನಾಗಬಹುದು. ರಾಜಸನು ತಾಮಸನಾಗಲೂ, ಬಹುದು.

**ಮಾಯಾ ಮುಕ್ತತೆ:**—ಮಾಯೆಯ ನಿರ್ಬಂಧದಿಂದ ಹೊರಬೀಳುವವರೆಗೂ, ಈ ಗುಣ ಸಂಬಂಧವು ಮನುಷ್ಯನಿಗೆ ತಪ್ಪುವದಿಲ್ಲ. ವರ್ಣಭೇದ, ಜಾತಿಭೇದ, ಕರ್ಮಭೇದ, ದೇಹಭೇದ, ಸ್ಥಾನಭೇದ, ಪಂಗ್ತಿಭೇದ, ಆಹಾರಭೇದ, ಆಚಾರಭೇದ, ಅಧಿಕಾರಭೇದ, ಸಂಸ್ಕಾರಭೇದ, ಪ್ರವೃತ್ತಿಭೇದ, ಸಂಕಲ್ಪಭೇದ, ಇತ್ಯಾದಿ ಭೇದಜ್ಞಾನಗಳನ್ನು ಮಾಯಾತೀತನಾಗುವವರೆಗೆ ಪರಿಪಾಲಿಸಲೇಬೇಕಾಗುವನು. ಇನ್ನು ಒಬ್ಬನನ್ನು ಹಿಂಸಿಸಿ ತಾನು ದೊಡ್ಡವನಾಗಬೇಕು ! ಲೋಕದಲ್ಲಿ ಎಲ್ಲರಿಗಿಂತಲೂ, ಸುಖಸಾಧನಗಳನ್ನು ತಾನು ಹೆಚ್ಚು ಗಳಿಸಬೇಕು !! ಉಚ್ಚಗುಣಗಳನ್ನು ಸಂಪಾದಿಸಿಕೊಂಡು ಮಹಾಸಾಧು ಎಂಬ ಹೆಸರನ್ನು ಪಡದು ಲೋಕಪೂಜ್ಯನಾಗಬೇಕು!!! ಎಂಬಿತ್ಯಾದಿ ಲೌಕಿಕ ವಾಸನೆಯು ಎಲ್ಲಿಯವರೆಗೆ ಇರುವದೋ ಅದುವರೆಗೆ, ತ್ರಿಗುಣಾತೀತನೆನಿಸನು. ಮತ್ತು ಶಾಸ್ತ್ರೋಕ್ತವಾದ ಸಾಮಾಜಿಕ ನಿಬಂಧನೆಗಳು ಅವನನ್ನು ಬಿಡಲಾರವು. "ಸರ್ವಂ ವಸ್ತುಭಯಾನ್ವಿತಂಭುವಿನೃಣಾಂ ವೈರಾಗ್ಯಮೇವಾಭಯಮ್" ಎಂಬ ಭರ್ತೃಹರಿಯ ಸುಭಾಷಿತದಂತೆ ಯಾವ ದಿವಸದಲ್ಲಿ ಸರ್ವವಿಷಯಗಳಲ್ಲಿಯೂ, ದೃಢವೈರಾಗ್ಯವು ಬಂದು ನಿರ್ಭಯನಾಗುವನೋ ಆಹೊತ್ತೇ ಅವನು ಧರ್ಮಾಧರ್ಮ ನಿಯಮ

ಳಿಂದ ಬಾಹ್ಯನಾದನೆಂದು ಅದೇಕೆ, ಸಾಕ್ಷಾತ್ ಈಶ್ವರನೇ ಆದನೆಂದು ಹೇಳಿದರೆ ಅದೇನೂ ಅಯೋಗ್ಯವೆನಿಸದು, "ನರೋ ನಾರಾಯಣೋಭವೇತ್" ಎಂಬ ವಾಕ್ಯವು ಇದಕ್ಕೆ ಆಧಾರ ಭೂತವಾಗಿಯೂ, ಇರುವದು.

**ಸ್ವಕರ್ಮಗಳಿಂದಲೇ ಸ್ವರೂಪಜ್ಞಾನ:—** ಯಾವನು ಸಂಸ್ಕಾರಬಲದಿಂದ ಲೌಕಿಕ ಉನ್ನತಿಗಾಗಿಯೇ ಯತ್ನಿಸುತ್ತಿದ್ದು ಆತ್ಮತತ್ವವನ್ನು ಮರೆಯುವನೋ, ಅವನು ಮೂಢನು. ವಿಷಯಾಭಿಮಾನವನ್ನು ಬಿಟ್ಟು ಶುದ್ಧಮನಸ್ಸಿನಿಂದ ಬ್ರಹ್ಮವಸ್ತುವನ್ನೊಂದನ್ನೇ ಚಿಂತಿಸುತ್ತಿರುವವನು ಅಮೂಢನೆನಿಸಿ ಸ್ವರೂಪದಲ್ಲಿ ಲೀನನಾಗುವನೆಂಬ ಅರ್ಥವನ್ನು ಎಲ್ಲ ಉಪನಿಷತ್ತುಗಳೂ, ಪ್ರತಿಪಾದಿಸುತ್ತವೆ. ಆ ಎಲ್ಲ ಅಭಿಪ್ರಾಯಗಳ ಸಾರವನ್ನು ಸುಲಭವಾಗಿ ಅರ್ಜುನನಿಗೆ ತಿಳಿಯುವಹಾಗೆ ಗೀತೆಯಲ್ಲಿ ಪರಮಾತ್ಮನು "ನಿರ್ಮಾನಮೋಹಾ, ಜಿತಸಂಗದೋಷಾ ಅಧ್ಯಾತ್ಮನಿತ್ಯಾ ವಿನಿವೃತ್ತಕಾಮಾಃ। ದ್ವಂದ್ವೈರ್ವಿಮುಕ್ತಾಃ ಸುಖದುಃಖಸಂಜ್ಞೈರ್ಗಚ್ಛಂತ್ಯಮೂಢಾಃಪದಮವ್ಯಯಂತತ್॥" ( ಅರ್ಥ—ನಾನು ನನ್ನದು ಎಂಬ ಅಭಿಮಾನವನ್ನೂ ಮೋಹವನ್ನೂ ಪರಿತ್ಯಜಿಸಿ, ಸರ್ವ ಸಂಗಗಂಗಳನ್ನೂ ಬಿಟ್ಟು ನಿತ್ಯವಾದ ಆತ್ಮವಸ್ತುವನ್ನು ಚಿಂತಿಸುವವರಾಗಿಯೂ, ಕಾಮರಹಿತರಾಗಿಯೂ ಸುಖದುಃಖಾತ್ಮಕವಾದ ಶೀತೋಷ್ಣ, ಮಾನಾಪಮಾನ, ರುಚ್ಯಾರುಚ್ಯ, ಮೊದಲಾದ ದ್ವಂದ್ವಗಳಿಂದ ಪರಿಮುಕ್ತರಾಗಿಯೂ, ಜ್ಞಾನಿಗಳು ಪುನರಾವೃತ್ತಿರಹಿತವಾದ ಸ್ಥಾನವನ್ನು ಅಂದರೆ ಮೋಕ್ಷವನ್ನು ಪಡೆಯುತ್ತಾರೆ.) ಎಂದು ಪ್ರತಿಪಾದಿಸಿರುತ್ತಾರೆ. ಇಂಥ ಸ್ಥಿತಿಯನ್ನು ಪಡೆಯಲಿಕ್ಕೆ ಮಾನಸಿಕ ವ್ಯವಸಾಯವು ಹೆಚ್ಚುನಡೆಯಬೇಕಾಗುವದು. ಮನಸ್ಸನ್ನು ವಿಷಯಗಳ ಕಡೆಗಿಂತಲೂ, ಸ್ವರೂಪದ ಕಡೆಗೆ ಮೊದಮೊದಲು ಅಧಿಕ ಪ್ರಮಾಣದಿಂದ ತಿರುಗಿಸುತ್ತಿರಬೇಕಾಗುವದು. ತಾನು ಎಂದೊಡನೇ ದೇಹವೆಂದು ತಿಳಿಯುವ ಅಭಿಮಾನವನ್ನು ಪರಿತ್ಯಾಗಮಾಡಿದಲ್ಲಿ ತಾನೆಂಬ ವಸ್ತುವೇ ದೇಹಕ್ಕೂ ಸಾಕ್ಷಿಯಾಗಿರುವ ಪರಬ್ರಹ್ಮವೆಂದು ಪ್ರತಿಪಾದಿತವಾದ ನಮ್ಮ ನಮ್ಮ ನಿಜರೂಪವೆಂಬುದು ತಾನಾಗಿಯೇ ತಿಳಿದುಬರುವುದು. ಇಂಥ ಜ್ಞಾನವು "ಸ್ವೇ ಸ್ವೇ ಕರ್ಮಣ್ಯಭಿರತಃ ಸಂಸಿದ್ಧಿಂ ಲಭತೇನರಃ" ಎಂಬ ಗೀತಾವಾಕ್ಯದಂತೆ ತಮ್ಮ ತಮ್ಮ ಕರ್ಮಗಳಿಂದಲೇ ಆತ್ಮಜ್ಞಾನವು ಬರಬೇಕು.

**ಸ್ವಾಭಾವಿಕ ಕರ್ಮವಿಭಾಗ:—** "ಶಮೋದಮಸ್ತಪಶ್ಶೌಚ, ಕ್ಷಾಂತಿರಾರ್ಜವಮೇವಚ। ಜ್ಞಾನಂ ವಿಜ್ಞಾನಮಾಸ್ತಿಕ್ಯಂ ಬ್ರಹ್ಮಕರ್ಮ ಸ್ವಭಾವಜಂ॥ ( ಅರ್ಥ—ಶಮಃ (ಅಂತಃಕರಣವನ್ನು ನಿಗ್ರಹಿಸುವಿಕೆ), ದಮಃ (ಬಾಹ್ಯವಿಷಯಗಳ ಆಸಕ್ತಿಯನ್ನು ಪರಿತ್ಯಜಿಸುವಿಕೆ ಅಥವಾ ಬಾಹ್ಯೇಂದ್ರಿಯ ನಿಗ್ರಹ) ತಪಃ (ಕಾಯಿಕ ವಾಚಕ ಮಾನಸಿಕ ಸದಾಚರಣೆ), ಶೌಚಂ ( ಬಾಹ್ಯಾಡಂಬರಶುದ್ಧಿ ) ಕ್ಷಾಂತಿಃ ( ಕ್ಷಮೆ ಅಥವಾ ಸಹನಪೂರ್ವಕವಾದ ಪ್ರಸನ್ನತೆ ), ಆರ್ಜವಂ (ಸರಳತನ), ಜ್ಞಾನಂ ( ವಿವೇಕ ಅಥವಾ ಶಾಸ್ತ್ರೀಯವಾದ ತಿಳುವಳಿಕೆ ), ವಿಜ್ಞಾನಂ (ಅನುಭವ), ಆಸ್ತಿಕ್ಯಂ (ಆಗಮಾರ್ಥಗಳೂ, ಗುರುಸಾಂಪ್ರದಾಯಗಳೂ, ಪ್ರಾಚೀನ ಶಿಷ್ಟಾಚಾರಗಳೂ, ಸತ್ಯವೆಂದು ನಿಶ್ಚಯಿಸುವಿಕೆ) ಇತ್ಯಾದಿ ಕರ್ಮಗಳು, ಬ್ರಾಹ್ಮಣರಿಗೆ ಸ್ವಭಾವ ಮತ್ತು ಗುಣ ಇವುಗಳಿಂದ ಉಂಟಾಗಿ ವಿಹಿತವಾದವುಗಳು.) ಎಂಬ ಗೀತಾವಾಕ್ಯದಿಂದ ಬ್ರಹ್ಮಜಾತಿಯ ಸ್ವಭಾವ ಗುಣಜನ್ಯವಾದ ಕರ್ಮಗಳು ವ್ಯಕ್ತವಾಗುತ್ತವೆ.

ಈ ಶಮದಮಾದಿಗಳು ಬ್ರಾಹ್ಮಣರಿಗೆ ವಿಹಿತವಾದವುಗಳಾಗಿದ್ದರೂ, ಸಾತ್ವಿಕಾವಸ್ಥೆಯಲ್ಲಿ ನಾಲ್ಕೂ ವರ್ಣದವರಲ್ಲಿಯೂ, ಉಂಟಾಗುತ್ತವೆ. ಆದರೆ ಸತ್ವಸ್ವಭಾವದ ಬ್ರಾಹ್ಮಣರಲ್ಲಿ ಅತಿಶಯವಾಗಿ ತೋರುತ್ತವೆ. ವರ್ಣಾಂತರದವರಲ್ಲಿ ಕದಾಚಿತ್ ಸಾತ್ವಿಕಾವಸ್ಥೆಯು ಮುಂದೆ ಬಂದಾಗ ಇವು ಉಂಟಾಗುತ್ತವೆ. ಈ ಅಭಿಪ್ರಾಯದಿಂದಲೇ ಸ್ಮೃತಿ-ಪುರಾಣ ಮೊದಲಾದ ಗ್ರಂಥಗಳಲ್ಲಿ ಶಮದಮಾದಿಗಳು ಎಲ್ಲ ವರ್ಣಗಳಿಗೂ, ಸಮವಾದ ಧರ್ಮಗಳೆಂದು ಉಕ್ತವಾಗಿವೆ. ರಾಜಸ, ತಾಮಸ ದೆಶೆಗಳ ಉತ್ಕೃಷ್ಟಸ್ಥಿತಿಯಲ್ಲಿ ಅವುಗಳ ಲಕ್ಷ್ಯವೂ ಜನರಿಗೆ ಉಂಟಾಗುವದು ಅಪರೂಪ. ಒಂದೊಂದು ವರ್ಣದವರು ವರ್ಣೋತ್ಪತ್ತಿಯ ಕ್ರಮತತ್ವಾನುಸಾರವಾಗಿ ಒಂದೊಂದು ಗುಣದಿಂದ ಪ್ರಸಿದ್ಧರಾದಾಗ್ಯೂ ಗುಣ ತತ್ವಾನುಸಾರವಾಗಿ ಆಗಾಗ, ಸಾತ್ವಿಕ, ರಾಜಸ, ತಾಮಸಾವಸ್ಥಾ ಭೇದಗಳು ಅವರಲ್ಲಿ ಉಂಟಾಗುತ್ತಲೇ ಇರುತ್ತವೆ.

"ಶೌರ್ಯಂತೇಜೋಧೃತಿರ್ದಾಕ್ಷ್ಯಂ ಯುದ್ಧೇಚಾಪ್ಯಪಲಾಯನಮ್। ದಾನಮೀಶ್ವರಭಾವಶ್ಚ ಕ್ಷಾತ್ರಕರ್ಮಸ್ವಭಾವಜಂ" ( ಅರ್ಥ ಶೌರ್ಯಂ ) ( ಯುದ್ಧದಲ್ಲಿ ನಿರ್ಭಯವಾದ ಪ್ರವೃತ್ತಿಯು ), ತೇಜಃ ( ಪರರಿಂದ ತಿರಸ್ಕರಿಸಲ್ಪಡದವನಾಗಿರುವದು. ) ಧೃತಿಃ (ಎಂಥ ವಿಪತ್ತು ಬಂದರೂ ಅಂಜದಿರುವದು.)

ದಾಕ್ಷ್ಯಂ ( ಪ್ರತಿಕಾರ್ಯದಲ್ಲಿಯೂ, ಅಪ್ರಮಾದದಿಂದಿದ್ದು ಅದನ್ನು ಜರಗಿಸುವಿಕೆ. ) ಯುದ್ಧೇಚಾಪ್ಯ ಪಲಾಯನಮ್ (ಯುದ್ಧ ಸಮಯದಲ್ಲಿ ತನಗೆ ಮರಣವಾಗುವದೆಂಬ ನಿಶ್ಚಯ ವಿದ್ದರೂ ಯುದ್ಧರಂಗದಿಂದ ಹಿಂದಕ್ಕೆ ತಿರುಗದಿರುವದು. ) ದಾನಂ ( ಹೇಯವಸ್ತುಗಳಲ್ಲಿ ಮುಕ್ತಹಸ್ತನಾಗಿರುವದು. ) ಈಶ್ವರಭಾವ ( ಲೋಕವನ್ನು ನಿಯಮಿಸುವ ಸಾಮರ್ಥ್ಯ ) ಇವುಗಳು ಕ್ಷತ್ರಿಯರ ಸ್ವಭಾವ ಗುಣಗಳಿಂದುಂಟಾದ ಕರ್ಮಗಳಾಗಿದ್ದು ಅವರಿಗೆ ವಿಹಿತವಾಗಿವೆ. ) ಸಾತ್ವಿಕ ಗುಣದಿಂದ ಯುಕ್ತವಾದ ರಜೋಗುಣವೇ ಕ್ಷತ್ರಿಯರಿಗೆ ಪ್ರಧಾನವಾದುದರಿಂದ ವಿಭಕ್ತಕರ್ಮಗಳು ಅವರಿಗೆ ಅನುರೂಪಗಳಾಗಿಯೇ ಇರುವವು.

"ಕೃಷಿಗೋರಕ್ಷ್ಯವಾಣಿಜ್ಯಂ ವೈಶ್ಯಕರ್ಮ ಸ್ವಭಾವಜಮ್" (ಅರ್ಥ—ಕೃಷಿಃ) (ಸಸ್ಯೋತ್ಪತ್ತಿಗಾಗಿ ನೆಲವನ್ನು ಹಸಮಾಡುವದು. ) ಗೋರಕ್ಷ್ಯಂ (ದನಗಳನ್ನು ಸಂರಕ್ಷಿಸುವ ಶೀಲತೆ ) ವಾಣಿಜ್ಯಂ (ಕ್ರಯ ವಿಕ್ರಯ ರೂಪದಿಂದ ವ್ಯಾಪಾರ) ಇವುಗಳು ತಮೋಗುಣದ ಅಂಶದಿಂದ ಯುಕ್ತವಾದ ರಜೋಗುಣದಿಂದ ಉಂಟಾದ ಕರ್ಮಗಳಾಗಿದ್ದು ವೈಶ್ಯಜಾತಿಗೆ ಇವೂ ವಿಹಿತವಾಗಿವೆ.

"ಪರಿಚರ್ಯಾತ್ಮಕಂ ಕರ್ಮಶೂದ್ರ ಸ್ಯಾಪಿಸ್ವಭಾವಜಮ್ (ಅರ್ಥ-ಬ್ರಾಹ್ಮಣಾದಿ ತ್ರೈವರ್ಣಿಕರ ಶುಶ್ರೂಷೆಗಳನ್ನು ಮಾಡುವದು ಶೂದ್ರನಿಗೆ ಸ್ವಾಭಾವಿಕ ಕರ್ಮವು. ) ಶುಶ್ರೂಷೆಯು ೧ ಅಂಗಶುಶ್ರೂಷಾ; ೨ ಸ್ಥಾನಶುಶ್ರೂಷಾ, ೩ ಭಾವಶುಶ್ರೂಷಾ, ಎಂದು ಮೂರುವಿಧವಾಗಿರುತ್ತವೆ. ೧ ಶರೀರಕ್ಕೆ ತೈಲಾದಿಗಳನ್ನು ಹಚ್ಚುವದು ಮುಂತಾದ ಶರೀರವನ್ನೇ ಶುಶ್ರೂಷೆಮಾಡುವದಕ್ಕೆ ಅಂಗಶುಶ್ರೂಷೆ ಎಂಬ ಹೆಸರು. ೨ ನೆಲಪಾತ್ರ ಮುಂತಾದ ಹಸನಮಾಡುವದು ವಸ್ತ್ರಗಳನ್ನು ತೊಳೆಯುವದು ಮುಂತಾದವಕ್ಕೆ ಸ್ಥಾನಶುಶ್ರೂಷೆಯೆಂಬ ಹೆಸರು. ೩ ಮಸ್ತಕ ಸಂಜ್ಞೆ, ನೇತ್ರಸಂಜ್ಞೆ, ಹಸ್ತಸಂಜ್ಞೆ, ವಕ್ತ್ರಮುಂದ್ರೆ ಮೊದಲಾದ ಸಂಕೇತಗಳನ್ನು ತಿಳಿದು ಅದರಂತೆ ಜರಗಿಸುವ ಕಾರ್ಯಗಳು ಭಾವಶುಶ್ರೂಷೆಯಲ್ಲಿ ಸಮಾವೇಶವಾಗುತ್ತವೆ. ಮಾತನಾಡಲಿಕ್ಕೆ ಅವಕಾಶವಿಲ್ಲದ ಸಂದರ್ಭದಲ್ಲಿ ತನ್ನ ಅಭಿಪ್ರಾಯವನ್ನು ಇನ್ನೊಬ್ಬನಿಗೆ ತಿಳಿಹಿಸುವದಕ್ಕೆ ಅಂಗ ಸಂಕೇತಗಳ ಹೊರ್ತು ಬೇರೆ ಉಪಾಯವಿಲ್ಲ. ಆದುದರಿಂದ ಭಾವಶುಶ್ರೂಷೆಯೆಂದು ಇದಕ್ಕೆ ಹೆಸರು ಬಂದಿದೆ.

**ಪರಸ್ಪರ ಸಹಕಾರಿತ್ವ:**— ಈ ಮೇಲೆ ಗೀತಾ ಶಾಸ್ತ್ರಾನುಸಾರವಾಗಿ ವಿವರಿಸಿದ ವರ್ಣಕರ್ಮಗಳಲ್ಲಿ ಆಯಾವ ವರ್ಣದವರು ಆಯಾವ ಕರ್ಮಗಳನ್ನು ನಡಿಸುವದರಿಂದ ಜಗತ್ತಿನ ಚರಿತಾರ್ಥವು ಸುರಕ್ಷಿತವಾಗಿ ಸಾಗುತ್ತ ಅವರವರ ಆತ್ಮೋದ್ಧಾರವಾಗುವದೆಂಬದರಲ್ಲಿ ಸಂದೇಹವಿಲ್ಲ. ಆವರಿ ಪರಸ್ಪರ ವರ್ಣಕರ್ಮಗಳ ಪರಸ್ಪರ ಸಹಕಾರಿತ್ವದ ವಿಚಾರ ಮಾಡುವದು ಆವಶ್ಯವಾಗಿದೆ.

**ಸಮಾಜಕ್ಕೆ ಶರೀರದೃಷ್ಟಾಂತ:**— ಮಾನುಷ ಸಮಾಜದ ವಿಗ್ರಹಕ್ಕೆ ಬ್ರಾಹ್ಮಣವರ್ಣವೇ ಶಿರಸ್ಸು ಕ್ಷತ್ರಿಯ ವರ್ಣವೇ ಭುಜ. ವೈಶ್ಯವರ್ಣವು ಉದರ ಶೂದ್ರವರ್ಣವು ಪಾದ ಶರೀರಕ್ಕೆ ಶಿರಸ್ಸು ಪ್ರಧಾನವೆನಿಸಿರುತ್ತಿದ್ದು ಜ್ಞಾನ ಸಂಚಯದ ಸ್ಥಾನವಾಗಿರುತ್ತದೆ. ಭುಜಗಳು ಆತ್ಮರಕ್ಷಣ ಕಾರ್ಯವನ್ನು ಜರುಗಿಸುವದಕ್ಕೆ ಸಮರ್ಥವಾದ ಅವಯವಗಳೆಂದು ಅನ್ನುತ್ತಾರೆ. ಉದರವು ಶರೀರಕ್ಕೆ ಬೇಕಾಗುವ ಆಹಾರ ಪದಾರ್ಥಗಳನ್ನು ಸಂಗ್ರಹಿಸಿ ಚನ್ನಾಗಿ ಅವುಗಳನ್ನು ಪರಿಣಾಮಪಡಿಸಿ ಆ ಪರಿಣತ ಪದಾರ್ಥಗಳನ್ನು ಶರೀರದ ಎಲ್ಲ ಭಾಗಗಳಲ್ಲಿಯೂ, ಸೇರಿಸಿ ಶರೀರವನ್ನು ಪೋಷಿಸುವದೆಂದು ಆರೋಗ್ಯಶಾಸ್ತ್ರಕಾರರು ಪ್ರತಿಪಾದಿಸುತ್ತಾರೆ. ಚಕ್ರವಿಲ್ಲದೆ ಬಂಡಿ ಅಥವಾ ರಥವು ಹೇಗೆ ನಡೆಯಲಾರದೋ ಹಾಗೆ ಕಾಲು ಇಲ್ಲದೆ ಪ್ರಾಣಿಯು ನಡಿಯಲಾಗದೆಂಬದಾದರೂ ತಿಳಿದ ಸಂಗತಿಯೇ ಸರಿ. ಶರೀರಕ್ಕೆ ಅವಯವಗಳ ಸಂಬಂಧವಿರುವಂತೆ ಮನುಷ್ಯ ಸಮಾಜಕ್ಕೂ ಇರುವದೆಂದು ಶರೀರ ದೃಷ್ಟಾಂತದಿಂದ ತಿಳಿಯುವದು.

**ಗೃಹದೃಷ್ಟಾಂತ:**—ಇನ್ನು ಗೃಹದೃಷ್ಟಾಂತದಿಂದ ಹೇಳುವದಾದರೆ ಚಾತುರ್ವರ್ಣ್ಯ ಸಮಾಜವೇ ಗೃಹ ಅದಕ್ಕೆ ತಳಹದಿಯೇ ಬ್ರಾಹ್ಮಣ ವರ್ಣವು ಗೋಡೆಯೇ ಕ್ಷತ್ರಿಯ ವರ್ಣವು. ವೈಶ್ಯ ವರ್ಣವು ಸ್ಥಂಭವೇ ಮೊದಲಾದ ಸಾಹಿತ್ಯ ಸಮೂಹವು. ಶೂದ್ರವರ್ಣವು ಅದರ ಮೇಲುಮುಚ್ಚಿಗೆಯು. ಶರೀರಕ್ಕೆ ಎಲ್ಲ ಅವಯವಗಳೂ, ಉಪಕಾರಕಗಳಾಗುವಂತೆ ಸಮಾಜ ಶರೀರಕ್ಕೆ ಅವಯವಗಳೆನಿಸಿದ ನಾಲ್ಕೂ ವರ್ಣದವರ ಕರ್ಮಗಳು ಮತ್ತು ಗೃಹಕ್ಕೆ ತಳಹದಿಯೇ ಮೊದಲಾದವುಗಳು ಪರಸ್ಪರ ಉಪಕಾರಕಗಳಾಗುವಂತೆ ಸಮಾಜ ಗೃಹಕ್ಕೂ ಅವಯವಗಳೆನಿಸುತ್ತಿದ್ದು, ಪರಸ್ಪರ ಉಪಕಾರಕಗಳಾಗಿವೆ.

ಆರೋಹಣಾವರೋಹಣ ಕ್ರಮದಿಂದ ಗೃಹಸಾಧನಗಳ ಸಂಬಂಧವನ್ನು ವಿಚಾರಿಸಿದರೆ ತಳಹದಿಯ ಸಂಬಂಧವು

ಗೋಡೆಗೂ, ಗೋಡೆಯ ಸಂಬಂಧವು ನಾಟಗೂ, ನಾಟಿನ ಸಂಬಂಧವು ಮುಚ್ಚಿಗೆ (ಹಂಚುಗಳಿ)ಗೂ, ಹಾಗೆಯೇ ಮುಚ್ಚಿಗೆಯ ಸಂಬಂಧವು ನಾಟಗೂ, ಅದರ ಸಂಬಂದವು ಗೋಡೆ ತಳಹದಿಗಳಿಗೂ, ಗೋಡೆಯ ಸಂಬಂಧವು ತಳಹದಿಗೂ, ಇರುವದೆಂಬದು ಸ್ಪಷ್ಟವಾಗಿ ತಿಳಿದು ಬರುತ್ತದೆ. ಈ ಸಾಧನಗಳಲ್ಲಿ ಯಾವ ವಸ್ತುವಿಗೆ ಅಭದ್ರತೆಯು ಪ್ರಾಪ್ತವಾದರೂ ಆಗ್ರಹವು ಭದ್ರವಾಗುವದಿಲ್ಲ. ಶಿಥಿಲತೆಯಿಂದ ಅನರ್ಥಕ್ಕೆ ಗುರಿಯಾಗಿ ಶೋಚನೀಯ ಸ್ಥಿತಿಗೆ ಇಳಿಯುವದೆಂಬದು ಸ್ಪಷ್ಟವಾದ ಮಾತು!

ಮೇಲುಮುಚ್ಚಿಗೆಯು ಶಿಥಿಲವಾದರೆ ಬಿಸಿಲು ಮಳೆಗಳ ಬಾಧೆಯು ಕೆಳಗಿನ ಮೂರೂ ಸ್ಥಾನಗಳಿಗೂ ತಗಲುವದು. ತಳಹದಿಯು ಕೆಟ್ಟುಹೋದರೆ ಅದರ ಮೇಲಿನ ಮೂರೂ ಸ್ಥಳಗಳಿಗೂ, ಅದರ ಬಾಧೆಯುಂಟಾಗಿ ತಳಹದಿಯಮೇಲೆ ಬೀಳುವ ಸ್ಥಿತಿಗೆ ಬಂದರೂ ಬರಬಹುದು. ಗೋಡೆಗಳು ಮತ್ತು ನಾಟುಗಳು ಕೆಟ್ಟುಹೋದರೆ ಕೆಳಗಿನ ತಳಹದಿಗೂ, ಮೇಲಿನ ಮುಚ್ಚಿಗೆಗೂ, ಹಾನಿಯು ತಪ್ಪಲಾರದು. ಮಂದಿರದ ಇತರ ಸಾಧನಗಳು ತಕ್ಕಮಟ್ಟಿಗೆ ಭದ್ರವಾಗಿದ್ದು ತಳಹದಿಯು ಅಭದ್ರವಾದ ಪಕ್ಷದಲ್ಲಿ ಇತರ ಸಾಧನಗಳು ತಳಹದಿಯಿಂದ ಬೇರೆಯಾಗಬೇಕಾಗುವದೆಂಬ ಮಾತು ನಿಜ. ಆದರೆ ಮಂದಿರದ ಆಕೃತಿಯು ಹೋಗಿ ಎಲ್ಲವೂ ವಿಲಕ್ಷಣ ಸ್ಥಿತಿಯನ್ನು ಹೊಂದುವವು. ಹೀಗೆ ಮಂದಿರದ ಆಕೃತಿಯು ನಷ್ಟವಾದರೂ, ಪುನಃ ಅದರ ಜೀರ್ಣೋದ್ಧಾರ ಮಾಡುವಾಗ ಆ ಎಲ್ಲ ಸಾಧನಗಳ ಪರಸ್ಪರ ಆವಶ್ಯಕತೆಯು ಇದ್ದೇ ಇರುವದು. ಪರಸ್ಪರ ಆವಶ್ಯಕತೆಯಿಂದ ಆ ಎಲ್ಲ ಪದಾರ್ಥಗಳು ಒಂದೆಡೆಯಲ್ಲಿ ಸೇರಿ ಪೂರ್ವದಂತೆ ಸಂಬಂಧವನ್ನು ಬೆಳಿಸಿಕೊಂಡು ಭವ್ಯವಾದ ಮಂದಿರವೆಂಬ ಸಮಷ್ಟಿ ವ್ಯವಹಾರವನ್ನು ಪಡೆಯುವವು.

**ವೃಕ್ಷಸಾಮ್ಯ:**— ವೃಕ್ಷದೃಷ್ಟಾಂತದಿಂದಲೂ, ಸಂಬಂಧವನ್ನು ಉದಾಹರಿಸಬಹುದು. ವೃಕ್ಷಕ್ಕೆ ಮೂಲ, ಸ್ಕಂಧ, ಶಾಖೆ, ಎಲೆ, ಎಂದು ನಿಯತವಾಗಿ ನಾಲ್ಕು ಸ್ಥಾನಗಳಿರುತ್ತವೆ. ಬೀಜದಿಂದ ಅಂಕುರೋತ್ಪತ್ತಿಯಾಗುವಾಗ ಮೂಲವು ತಾಯಿ (ಬೇರು) ಮೊದಲು ಉಂಟಾಗಿ ಭೂಮಿಯ ಆಶ್ರಯವನ್ನು ಪಡೆಯುತ್ತದೆ. ಬಳಿಕ ಸ್ಕಂಧವು ಉದ್ಭವಿಸುವದು. ಅನಂತರ ಶಾಖೆಗಳು ಹುಟ್ಟುವವು. ಆ ಮೇಲೆ ಎಲೆಗಳು ಉಂಟಾಗುವವು. ವೃಕ್ಷದ ಸರ್ವಸ್ವವೂ ಮೂಲವೇ ಎಂಬದನ್ನು ಎಲ್ಲರೂ ಸಮ್ಮತಿಸಬಹುದು. ವೃಕ್ಷದ ಅವಯವಗಳ ಸಂಬಂಧವು ಅವಿಚ್ಛಿನ್ನವಾಗಿರುತ್ತದೆ. ವೃಕ್ಷದ ಪೋಷಕ ಪದಾರ್ಥಗಳನು ಮೂಲವೇ ಸಂಗ್ರಹಿಸಿ ಅವುಗಳ ಸಾರದಿಂದ ವೃಕ್ಷವನ್ನು ಕಾಪಾಡುತ್ತದೆ. ಮೂಲವು ಪೋಷಕ ಪದಾರ್ಥಗಳ ಸಾರವನ್ನು ಗ್ರಹಿಸದಿದ್ದರೆ ಅಥವಾ ಗ್ರಹಿಸುವ ಸಾರವು ವಿರುದ್ಧ ದ್ರವ್ಯದ್ದಾದರೆ ವೃಕ್ಷದ ಏಳಿಗೆಯು ಕಡಿಮೆಯಾಗಿ ಹೀನಸ್ಥಿತಿಗೆ ಬರುವದು. ಇಲ್ಲವೆ ಮೂಲವು ಕೆಟ್ಟು ವೃಕ್ಷದ ಜೀವವೇ ನಷ್ಟವಾಗುವದುಂಟು. ಈ ವೃಕ್ಷಸಾಮ್ಯವನ್ನು ಸಮಾಜಕ್ಕೆ ಕೊಡಬಹುದು. ಆಗ ಚಾತುರ್ವರ್ಣ್ಯ ಸಮಾಜವೇ ಒಂದು ವೃಕ್ಷವೆಂದು ಭಾವಿಸಬೇಕಾಗುತ್ತದೆ. ಸಮಾಜ ವೃಕ್ಷಕ್ಕೆ ಬ್ರಾಹ್ಮಣ್ಯವೇ ಮೂಲ. ಸ್ಕಂಧವು ಕ್ಷತ್ರಿಯ ವರ್ಣವಾಗಿರುತ್ತದೆ. ವೈಶ್ಯವರ್ಣವೇ ಶಾಖೆಯು. ಶೂದ್ರರು ಅದರ ಎಲೆಗಳು. ಅವರವರ ಕರ್ಮಗಳೇ ಪುಷ್ಪಗಳು. ಸುಖವೇ ಫಲ. ಹೀಗೆ ಸಮಾಜ ವೃಕ್ಷದ ಲಕ್ಷಣವಿರುತ್ತದೆ.

**ಮೇಲಿನ ದೃಷ್ಟಾಂತಗಳ ವಿಸ್ತಾರ ವಿವರಣ**— ಮೊದಲು ಹೇಳಿದ ಶರೀರ ದೃಷ್ಟಾಂತಾನುಸಾರವಾಗಿ ಸಮಾಜ ಶರೀರಕ್ಕೆ ಅವಯವಗಳೆನಿಸಿದ ನಾಲ್ಕು ವರ್ಣಗಳಲ್ಲಿ ಜ್ಞಾನ ಸಂಚಯಸ್ಥಾನವೂ, ಶರೀರಕ್ಕೆ ಶ್ರೇಷ್ಠಾಂಗವೂ ಬ್ರಾಹ್ಮಣ್ಯವೆಂದು ತಿಳಿಯಬೇಕು. ಸಮಾಜಶರೀರದ ಬಾಹುಗಳು ಕ್ಷತ್ರಿಯರಾಗಿದ್ದು ಸಮಾಜದ ಎಲ್ಲ ತರದ ರಕ್ಷಣೆಗಳೂ ಅವರಿಂದ ಮಾಡಲ್ಪಡುವವು. ಉದರ ಸ್ಥಾನೀಯರಾದ ವೈಶ್ಯರು ಹಲವು ಧಾನ್ಯಗಳನ್ನೂ, ರಸಪದಾರ್ಥಗಳನ್ನೂ, ಸಂಗ್ರಹಿಸಿ, ಪ್ರಪಂಚದ ಎಲ್ಲ ಭಾಗಗಳಿಗೂ ಸೇರಿಸಿ ಲೋಕದ ಸಾಂಪತ್ತಿಕ ಸ್ಥಿತಿಯನ್ನು ಸರ್ವವಿಧದಿಂದಲೂ, ಹೆಚ್ಚಿಸುತ್ತಿರುವದು. ಪಾದಭೂತರಾದ ಶೂದ್ರರು ತ್ರೈವರ್ಣಿಕರ ಸೇವೆ, ವ್ಯವಸಾಯ ಕೈಗಾರಿಕೆ ಇತ್ಯಾದಿಗಳಿಂದ ಪ್ರಪಂಚನಿರ್ವಾಹವನ್ನು ಮಾಡಿಸುತ್ತಿರುವರು. ಶರೀರಕ್ಕೆ ಎಲ್ಲ ಅಂಗಳೂ ಸರಿಯಾಗಿದ್ದರೆ ಅದರ ಚರಿತಾರ್ಥಕ್ಕೆ ಹೆಚ್ಚು ಕೊರತೆಯು ಹೇಗೆ ಏರ್ಪಡಲಾರದೋ ಹಾಗೆ ಸಮಾಜದ ಅವಯವಗಳೆನಿಸಿದ ನಾಲ್ಕೂ ವರ್ಣದವರು ಪರಸ್ಪರ ಸಹಕಾರಿತತ್ವದ ಸಂಬಂಧವನ್ನೂ, ಪ್ರೇಮಬಾಂಧವ್ಯವನ್ನೂ ಪರಿಪಾಲಿಸುತ್ತ ಸ್ವಧರ್ಮವನ್ನು ನಡಿಸುತ್ತಿದ್ದರೆ ಪ್ರಪಂಚವು ಸುಸಂಪನ್ನವಾಗಿರುವದೆಂಬದರಲ್ಲಿ ಸಂದೇಹವಿಲ್ಲ. ಶಿರಸ್ಸು ಇಲ್ಲದೆ ಶರೀರವು ನಿಲ್ಲುವದೇ? ಬಾಹುಗಳಿಲ್ಲದಿದ್ದರೆ ಬಲವೂ ಭದ್ರತೆಯೂ ಶರೀರಕ್ಕಿರುವದೋ?

ಉದರವಿಲ್ಲದಂತಾದರೆ ಆಹಾರವನ್ನು ತಿನ್ನುವ ಹಾಗೂ ಇಲ್ಲ. ತಿಂದರೆ ಅದನ್ನು ಪರಿಣಾಮಪಡಿಸುವ ಸಾಧನವೂ ಇಲ್ಲ. ಎಂಬ ಸ್ಥಿತಿಗೆ ಬರುವದರಿಂದ ಶರೀರವು ನಿಸ್ಸಾರವಾಗಿ ಬಿಡುವ ದಿಲ್ಲವೋ ? ಪಾದಗಳಿಲ್ಲದಿದ್ದರೆ ಕೂತಲ್ಲಿಯೇ ಕಣ್ಣು ಕಣ್ಣು ಬಿಡುವ ಸ್ಥಿತಿಯು ಬರದೆ ಹೇಗೆ ಬಿಟ್ಟೀತು ? ಆದುದರಿಂದ ಶರೀರನಿರ್ವಾಹಕ್ಕೆ ಎಲ್ಲ ಅವಯವಗಳೂ ಬೇಕಾಗುವಂತೆ ಸಮಾಜದ ನಿರ್ವಾಹಕ್ಕೆ ಚಾತುರ್ವರ್ಣ್ಯದವರು ಬೇಕು.

ಲೋಕದಲ್ಲಿ ಒಂದು ಸಾಮಾನ್ಯವಾದ ಮಂದಿರದವನ್ನು ಒಬ್ಬನು ಕಟ್ಟಬೇಕೆಂದು ನಿಶ್ಚಯಿಸಿದರೆ ತಳಹದಿಯ ವಿಚಾರವೇ ಅವನಿಗೆ ಮೊದಲು ಉಂಟಾಗುತ್ತದೆ. ಬಳಿಕ ನೆಲದ ಕೆಲವು ಭಾಗಗಳನ್ನು ಶೋಧಿಸಿಯೇ ತಳಹದಿಯನ್ನು ಭದ್ರಪಡಿಸುವನು. ಆ ಮೇಲೆ ಒಂದೊಂದು ಸಾಧನವನ್ನು ಸಜ್ಜುಗೊಳಿಸುತ್ತ ಮಂದಿರದ ಆಕಾರವನ್ನು ಬೆಳಿಸಿ ಮಂದಿರವನ್ನು ಸಿದ್ಧಪಡಿಸುತ್ತಾನೆ. ಅಂದ ಮೇಲೆ ಜಗತ್ಕರ್ತನಾದ ದೇವರು ಸಾಮಾಜಿಕ ಮಂದಿರವನ್ನು ಕಟ್ಟುವಾಗ ಈ ಯೋಜನೆಯನ್ನು ಮಾಡಿ ಕಟ್ಟಿರಲಾರನೇ? ಕಟ್ಟುವಾಗ ಬ್ರಾಹ್ಮಣ್ಯ ವರ್ಣರೂಪವಾದ ತಳಹದಿಯನ್ನು ಮೊದಲು ಭದ್ರವಾಗಿಮಾಡಿದನು. ಆ ಮೇಲೆ ಕ್ಷತ್ರಿಯ ವರ್ಣಕರ್ಮರೂಪವಾದ ಗೋಡೆಯನ್ನು ನಿರ್ಮಿಸಿದನು. ಬಳಿಕ ವೈಶ್ಯ ವರ್ಣಕರ್ಮರೂಪವಾದ ಬಾಹುಗಳ ವ್ಯವಸ್ಥೆಯನ್ನು ಮಾಡಿದನು. ಇಷ್ಟಾದನಂತರ ಶೂದ್ರ ವರ್ಣಕರ್ಮರೂಪವಾದ ಮುಚ್ಚುಗೆಯನ್ನು ಸಿದ್ಧಪಡಿಸಿ ಸಾಮಾಜಿಕ ಮಂದಿರವನ್ನು ಮುಗಿಸಿದನು.

ಲೋಕದಲ್ಲಿ ಸಾಮಾನ್ಯ ಮಂದಿರವನ್ನು ಸಿದ್ಧಗೊಳಿಸಿದ ಯಜಮಾನನು ತಾನು ನಿರ್ಮಿಸಿದ ಈ ಮಂದಿರವು ಭದ್ರವಾಗಿರುವದರಿಂದ ಇತರ ಬಾಧೆ (ಭೂಕಂಪ, ಮೂಷಿಕ; ಗೆದ್ದಲು, ಮಹಾವಾತ ಸಿಡಿಲು ಅತಿವೃಷ್ಟಿ, ಅಗ್ನಿ ಇತ್ಯಾದಿ) ಗಳು ತಟ್ಟದಿದ್ದರೆ ಇಂತಿಷ್ಟು ವರ್ಷ ಇದು ಬಾಳುವದೆಂಬ ಗಣಿತವನ್ನು ಮಾಡುತ್ತಾನೆ. ಇದರಂತೆ ದೇವರು ತನ್ನಿಂದ ಸಿದ್ಧವಾದ ಸಾಮಾಜಿಕ ಮಂದಿರವನ್ನು ನೋಡಿ ಈ ಮಂದಿರವನ್ನು ಭದ್ರವಾಗಿಯೇ ನಿರ್ಮಿಸಿರುತ್ತಾನೆ. ಆದುದರಿಂದ ಇದು ಅಜ್ಞಾನ ದಂತಲೆ ಕಾಮ, ಕ್ರೋಧ, ಲೋಭ, ಅವಿವೇಕ ಅಥವಾ ಮೋಹ, ಮದ ಅಥವಾ ಅಹಂಕಾರ, ಮಾತ್ಸರ್ಯ ಅಥವಾ ದ್ವೇಷ, ರಾಗ ಮತ್ತು ವೈಷಮ್ಯ ಇತ್ಯಾದಿ ಗಳ ಬಾಧೆಗಳು ಆಕ್ರಮಿಸದಿದ್ದರೆ ಬಾಳುವಷ್ಟು ಕಾಲ ಉಳಿದು ಉತ್ತಮ ಗತಿಯನ್ನು ಪಡೆಯುವದೆಂದು ಭಾವಿಸದೆ ಇರಲಿಕ್ಕಿಲ್ಲ. ಏವಂಚ ವರ್ಣಕರ್ಮಗಳಲ್ಲಿ ಪರಸ್ಪರ ಇರಬಹುದಾದ ಸಹಕಾರಿತ್ವದ ಸಂಬಂಧವೂ, ಪರಸ್ಪರ ಪ್ರೇಮದ ತತ್ವವೂ, ಐಕಮತ್ಯದ ರಹಸ್ಯವೂ, ಮಂದಿರ ದೃಷ್ಟಾಂತದಿಂದ ವಿದಿತವಾಗುತ್ತದೆ.

ಇನ್ನು ವೃಕ್ಷ ದೃಷ್ಟಾಂತವನ್ನು ವಿವರಿಸಿ ನೋಡೋಣ. ಲೋಕದಲ್ಲಿ ಒಂದು ಸಾಮಾನ್ಯ ವೃಕ್ಷವೂ ಬೀಜವಿಲ್ಲದೆ ಉಂಟಾಗಲಾರದಷ್ಟೇ? ಬೀಜವು ವೃಕ್ಷ ಸ್ಥಿತಿಗೆ ಬರುವಾಗ ಕ್ರಮವಾಗಿ ಮೂಲ, ಸ್ಕಂಧ, ಶಾಖೆ, ಎಲೆ, ಹೂವು, ಫಲ ಈ ವಿಕಾರಗಳನ್ನು ಒಳಗೊಂಡು ವೃಕ್ಷವೆಂಬ ಹೆಸರಿಗೆ ಪಾತ್ರವಾಗುವದು. ಹಾಗೆ ಒಳಗಾಗದಿದ್ದರೆ ವೃಕ್ಷವೆಂಬ ಸಮಷ್ಟಿ ವ್ಯವಹಾರವು ವ್ಯರ್ಥವೆಂದನ್ನಬೇಕಾಗುವದು. ಮೂಲದ ಹೆಸರೆತ್ತಿದರೆ ವೃಕ್ಷದ ಬೋಧವಾಗುತ್ತದೆ. ಇದರಂತೆ ಸ್ಕಂಧ ಶಾಖೆ, ಪುಷ್ಪ, ಫಲ ಇವುಗಳ ನೆನಪು ಬಂದರೂ, ವೃಕ್ಷ ಬೋಧವು ಬಂದೇ ಬರುವದು ಹಾಗೆಯೇ ವೃಕ್ಷದ ಸ್ಮರಣೆಯು ಬಂದರೆ ಅದಕ್ಕೆ ಮೂಲ ಮುಂತಾದ ಎಲ್ಲ ವಿಕಾರಗಳಿರುವವೆಂಬ ಬೋಧವು ಬಂದೇ ಬರುತ್ತದೆ. ಸುಮ್ಮನೆ ಮೂಲಕ್ಕೆ ಅಥವಾ ಸ್ಕಂಧಾದಿಗಳಿಗೆ ವೃಕ್ಷವೆಂಬ ಸಂಜ್ಞೆಯು ಬರುವದಿಲ್ಲ. ಮತ್ತು ಈ ವಿಕಾರಗಳಿಲ್ಲದ ವೃಕ್ಷವೇ ಸೃಷ್ಟಿಯಲ್ಲಿ ತೋರುವದಿಲ್ಲ. ಆದುದರಿಂದ ವೃಕ್ಷಕ್ಕೆ ವಿಕಾರಗಳೂ ಬೇಕೇ ಬೇಕು. ಇವುಗಳಲ್ಲಿ ಯಾವ ವಿಕಾರವನ್ನು ಅಲ್ಲಗಳೆಯುವಹಾಗಿಲ್ಲ.

ಈ ವೃಕ್ಷತತ್ವಾನುಸಾರವಾಗಿಯೇ ದೇವರು ಮಾನವ ಸಮಾಜ ರೂಪವಾದ ವೃಕ್ಷವನ್ನು ಬೆಳೆಸಿರುವನು. ಚಾತುರ್ವರ್ಣ್ಯವನ್ನು ಸೃಷ್ಟಿಸಬೇಕು, ಎಂಬ ಸ್ವೇಚ್ಛಾರೂಪವಾದ ಚಾತುರ್ವರ್ಣ್ಯದ ಬೀಜವನ್ನು ಉಪಾಧಿ ಎನಿಸಿರುವ ಮಾಯಾರೂಪವಾದ ಕ್ಷೇತ್ರದಲ್ಲಿ ಬಿತ್ತಿದನು. ಮೊದಲು ಬ್ರಾಹ್ಮಣ ವರ್ಣರೂಪವಾದ ಮೂಲದ ಉತ್ಪತ್ತಿಯಾಯಿತು. ತರುವಾಯ ಕ್ಷತ್ರಿಯ ವರ್ಣರೂಪವಾದ ಸ್ಕಂಧಾಂಕುರವು ತೋರಿತು. ಅನಂತರ ವೈಶ್ಯ ವರ್ಣರೂಪವಾದ ಶಾಖೆಯು ಉಂಟಾಯಿತು. ಬಳಿಕ ಶೂದ್ರ ವರ್ಣರೂಪವಾದ ಎಲೆಯ ಉದ್ಭವವಾಯಿತು. ಸ್ವಾಭಾವಿಕ ಕರ್ಮರೂಪವಾದ ಪುಷ್ಪಗಳೂ ಅವರಲ್ಲಿ ಬಿಟ್ಟವು. ಆ ಪುಷ್ಪಗಳ ಪರಿಪಾಕದಿಂದ ಸುಖರೂಪವಾದ ಫಲಗಳೂ ಆದವು. ಮತ್ತು ಆಗುತ್ತಿರುವವು.

ಬ್ರಾಹ್ಮಣ ವರ್ಣವೆಂಬ ಮೂಲದ ಆಧಾರದ ಮೇಲೆ ಇತರ ವರ್ಣ ರೂಪಗಳಿಂದ ಸ್ಕಂಧಾದಿಗಳು ನಿಂತಿರುವವು. ಮೂಲವು

ಜ್ಞಾನ, ತಾತ್ವಿಕ ಗ್ರಂಥರಚನೆ, ಸಾತ್ವಿಕ ಗುಣಪ್ರಚಾರ, ಮಂತ್ರೋಪಾಸನಾ, ತತ್ವೋಪದೇಶ ಇತ್ಯಾದಿ ರೂಪದ ಪೋಷಕ ಪದಾರ್ಥಗಳನ್ನು ಸಂಗ್ರಹಿಸಿ, ಅವುಗಳಿಂದ ತನ್ನನ್ನು ಇತರ ವರ್ಣರೂಪದ ಸ್ಕಂಧಾದಿಗಳನ್ನೂ, ಪೋಷಿಸುತ್ತದೆ. ಸಾಮಾನ್ಯ ವೃಕ್ಷವು ತನ್ನ ಮೂಲವನ್ನು ನೆಲದೊಳಗಿಟ್ಟು ಕೊಂಡು ಇತರ ಅವಯವಗಳ ಮೂಲಕ ಅದನ್ನು ರಕ್ಷಿಸುವಂತೆ ಮಾನುಷ ಸಮಾಜ ವೃಕ್ಷದ ಕ್ಷತ್ರಿಯಾದಿ ವರ್ಣರೂಪವಾದ ಸ್ಕಂಧಾದಿಗಳು ತಮ್ಮ ಮುಖ್ಯ ಪೋಷಕತ್ವವನ್ನು ವಹಿಸಿದ ಬ್ರಾಹ್ಮಣ್ಯರೂಪವಾದ ಮೂಲವನ್ನು ಭದ್ರವಾಗಿಟ್ಟು ಕೊಂಡು ಸಾಮಾನ್ಯ ವೃಕ್ಷವು ಬಿಸಿಲು, ಮಳೆ, ಗಾಳಿ ಇತ್ಯಾದಿಗಳನ್ನು ಸಹಿಸುತ್ತ ಮೂಲವನ್ನು ರಕ್ಷಿಸುವಂತೆ ಮನುಷ್ಯ ಸಮಾಜ ವೃಕ್ಷದ ಕ್ಷತ್ರಿಯಾದಿ ವರ್ಣರೂಪವಾದ ಸ್ಕಂಧಾದಿಗಳು ಪರಚಕ್ರಗಳ ಭಯ ಅವಿವೇಕಿಗಳ ಅಧರ್ಮ ಪ್ರಚಾರ, ದುರ್ಭಿಕ್ಷ ದ್ವೇಷ ಅಸೂಯೆ, ಅಹಂಕಾರ, ಕ್ರೋಧ, ಮೊದಲಾದ ಪ್ರತಿಬಂಧಕಗಳನ್ನು ಸಹಿಸುತ್ತ ತಮ್ಮ ಬ್ರಾಹ್ಮಣ ರೂಪವಾದ ಮೂಲವನ್ನು ಭದ್ರವಾಗಿಟ್ಟು ಕಾಪಾಡುವವು. ವನಸ್ಪತಿಗಳಲ್ಲಿ ಹವೆಯೊಳಗಿನ ಜಲವನ್ನು ಹೀರುವ ಶಕ್ತಿಯುಂಟೆಂದು ಸಸ್ಯಗುಣಗಳ ವಿಮರ್ಶಕರು ಪ್ರತಿಪಾದಿಸುತ್ತಾರೆ. ಈ ತತ್ವಾನುಸಾರವಾಗಿ ಸಮಾಜವೃಕ್ಷದ ಸ್ಕಂಧಾದಿಗಳೆನಿಸಿರುವ ಕ್ಷತ್ರಿಯಾದಿ ವರ್ಣಗಳಲ್ಲಿ ಧನಧಾನ್ಯಾದಿಗಳನ್ನು ಸಂಗ್ರಹಿಸಿ ತಮ್ಮನ್ನೂ ಮೂಲವೆನಿಸಿದ ಬ್ರಾಹ್ಮಣವನ್ನೂ ರಕ್ಷಿಸಿಕೊಳ್ಳುವ ಶಕ್ತಿಯುಂಟೆಂಬದು ಸಿದ್ಧವಾಗುತ್ತಿದ್ದರೂ, ಇದು ಎಲ್ಲರ ಅನುಭವದಲ್ಲಿರುವ ಸಂಗತಿಯಾಗಿದೆ. ಏವಂಚ ಈ ವೃಕ್ಷದೃಷ್ಟಾಂತದಿಂದಲೂ, ಚಾತುರ್ವರ್ಣ್ಯಗಳಲ್ಲಿರುವ ಪರಸ್ಪರ ಉಪಕಾರಕತ್ವವೂ ವರ್ಣಭೇದದ ರಹಸ್ಯವೂ ತಿಳಿದು ಬರುತ್ತದೆ. ಶರೀರಕ್ಕಾಗಿ ಶಿರಸ್ಸು ಮುಂತಾದ ಅವಯವಗಳೂ, ಮಂದಿರಕ್ಕೆ ತಳಹದಿಯೇ ಮೊದಲಾದವುಗಳೂ, ವೃಕ್ಷಕ್ಕೆ ಮೂಲವೇ ಮೊದಲಾದವುಗಳೂ, ಪರಸ್ಪರ ಉಪಕಾರಕಗಳಾಗಿರುವವಲ್ಲದೆ ಸಹಜ ಪ್ರೇಮಸಂಬಂಧಗಳುಳ್ಳವುಗಳಾಗಿಯೂ, ಇದ್ದು ಅವಯವಗಳು ಶರೀರವನ್ನೂ, ತಳಹದಿ ಮುಂತಾದ ಗೃಹಸಾಧನಗಳು ಮಂದಿರವನ್ನೂ, ಮೂಲಾದಿಗಳು ವೃಕ್ಷ ಜಾತಿಯನ್ನೂ; ರೂಢಿಸುವಂತೆ ಮನುಷ್ಯಸಮಾಜವನ್ನು ಚಾತುರ್ವರ್ಣ್ಯವು ರೂಢಿಸುತ್ತದೆ.

**ವರ್ಣಭೇದ**—ಲೋಕದಲ್ಲಿ ಎಲ್ಲ ಪದಾರ್ಥಗಳಲ್ಲಿಯೂ, ಭೇದಗಳು ಇದ್ದೇ ಇರುವವು. ಮತ್ತು ಕೆಲವು ವಸ್ತುಗಳು ಚಾತುರ್ವರ್ಣ್ಯದ ಸಾಮ್ಯವನ್ನೇ ಪಡೆದಿರುವವು. ಶಾಸ್ತ್ರತಃ ೧ ಸಜಾತೀಯ ಭೇದ, ೨ ವಿಜಾತೀಯ ಭೇದ, ೩ ಸ್ವಗತ ಭೇದ ಎಂದು ೩ ವಿಧ ಭೇದಗಳಿರುತ್ತವೆ. (೧) ಮನುಷ್ಯನಂತೆ ಮನುಷ್ಯನು, ವೃಕ್ಷದಂತೆ ಇನ್ನೊಂದು ವೃಕ್ಷ, ಕಲ್ಲಿನಂತೆ ಮತ್ತೊಂದು ಕಲ್ಲು, ಹೀಗಿರುವದಕ್ಕೆ ಸಜಾತೀಯ ಭೇದವೆಂದನ್ನುತ್ತಾರೆ. (೨) ಮನುಷ್ಯನಿಗೂ, ವೃಕ್ಷಕ್ಕೂ, ವೃಕ್ಷಕ್ಕೂ ಕಲ್ಲಿಗೂ, ಇರುವ ವ್ಯತ್ಯಾಸವು ವಿಜಾತೀಯ ಭೇದವೆನಿಸುತ್ತದೆ. (೩) ವೃಕ್ಷದಲ್ಲಿ ತೋರಬರುವ ಮೂಲ, ಸ್ಕಂಧ, ಶಾಖೆ, ಕಾಯೆಲೆ, ಹಣ್ಣೆಲೆಗಳು, ಚಿಗುರು, ಮೊಗ್ಗೆಗಳು, ಪುಷ್ಪ ಫಲಗಳು, ಇವುಗಳ ಭೇದವು ಸ್ವಗತ ಭೇದವೆಂದು ನಿರ್ದಿಷ್ಟವಾಗಿರುವದು. ಮನುಷ್ಯನು ಸಮಾಜದ ಚಾತುರ್ವರ್ಣ್ಯ ಭೇದವು. ಸ್ವಗತ ಭೇದವೆನಿಸುತ್ತದೆ. ಪ್ರಕೃತಿಯ ಸಂಬಂಧವಿರುವವರಿಗೆ ಈ ವರ್ಣಭೇದಗಳು ಅಳಿಯುವದಿಲ್ಲ. ವರ್ಣಭೇದಗಳು ಕೇವಲ ಮನಷ್ಯನಲ್ಲಿಯೇ ಅಲ್ಲ. ಇತರ ಸ್ಥಾನಗಳಲ್ಲಿಯೂ, ಉಂಟೆಂಬದು ಗ್ರಂಥಾಂತರದಿಂದ ತಿಳಿದು ಬರುತ್ತದೆ. ದೇವಲೋಕದವರಲ್ಲಿಯೂ, ಪಶ್ವಾದಿಗಳಲ್ಲಿಯೂ, ವೃಕ್ಷಗಳಲ್ಲಿಯೂ, ಧಾತುಗಳಲ್ಲಿಯೂ ರತ್ನಗಳಲ್ಲಿಯೂ ವರ್ಣಭೇದಗಳು ಉಂಟೆಂಬುವನ್ನು ತತ್ವಜ್ಞರು ನಿರ್ಣಯಿಸಿರುತ್ತಾರೆ. ಆದುದರಿಂದ ವರ್ಣಭೇದಗಳು ಅವಶ್ಯವಾಗಿ ಗ್ರಾಹ್ಯವಾದವುಗಳಾಗಿವೆ.

**ಅಸಂಬದ್ಧತೆ:**— ಹೀಗಿದ್ದು ವರ್ಣಭೇದಗಳು ಕಲ್ಪಿತವಾದವುಗಳು. ಈ ಭೇದಗಳನ್ನು ಮುರಿದು ಮಾನವ ಸಮಾಜವು ಒಂದೇವಿಧವಾಗಿರುವಂತೆ ಮಾಡಬೇಕು, ಹೆಚ್ಚುಕಡಿಮೆ ಏನೂ ಇರಕೂಡದು. ಎಂದು ಶಂಕಿಸುವದು, ಶರೀರದ ಅವಯವಗಳನ್ನು ಮುರಿದು ಒಂದು ಮಾಡಬೇಕು. ಅಥವಾ ತಲೆಯು ಕಾಲಾಗಬೇಕು. ಕಾಲು ತಲೆಯಾಗಬೇಕು. ಕಣ್ಣು ಕೇಳುವ ಸಾಧನವಾಗಿ, ಕಿವಿಯು ನೋಡುವಂತಾಗಬೇಕು. ಎಂದಂತೆಯೂ, ವೃಕ್ಷದ ಮೂಲವನ್ನು ಕಿತ್ತು ಆಕಾಶದಲ್ಲಿ ನೆಡಬೇಕು. ತುದಿಯನ್ನು ಮೂಲಕ್ಕೆ ತಿರುಗಿಸಬೇಕು, ಅಥವಾ ಅದರ ಅವಯವಗಳನ್ನೆಲ್ಲ ಮುರಿದು ಒಂದು ಮಾಡಬೇಕು. ಎಂದಂತೆಯೂ, ಮತ್ತು ಮಂದಿರದ ತಳಹದಿಯನ್ನು ಆಕಾಶದಲ್ಲಿ ಕಟ್ಟಿ ಮುಚ್ಚುಗೆಯನ್ನುನೆಲಕ್ಕೆ ಮುಚ್ಚಿಸಬೇಕು. ಎಂದಂತೆಯೂ ಅಸಂಭವ ಮತ್ತು ಅಸಂಬದ್ಧವಿರುತ್ತದೆ.

ಈ ವರ್ಣಭೇದಗಳ ಭಾವನೆಯು ಶಾಸ್ತ್ರೀಯ ಪ್ರಯತ್ನದಿಂದ ದೂರಾಗಬೇಕಲ್ಲದೆ ಸುಮ್ಮನೆ ಬಾಯಿಗೆಬಂದಂತೆ

ಮನಸ್ಸಿ ನುಡಿದರೆ ಅಥವಾ ಹಟದಿಂದ ಕೈಯ್ಯಲ್ಲಾದದ್ದು ಮಾಡಿದರೆ ದೂರವಾಗಲಾರದು. ಮತ್ತು ಇಂಥ ಭಾವನೆಯು ನೀತಿ ತತ್ವಕ್ಕೆ ವಿರೋಧವಾದದ್ದು.

**ಅನಾದಿ ಶಬ್ದಾರ್ಥ:**— "ಪ್ರಕೃತಿಂ ಪುರುಷಂ ಚೈವ ವಿಧ್ಯನಾದೀ ಉಭಾವಪಿ" ಎಂಬ ಗೀತಾವಾಕ್ಯಾನುಸಾರವಾಗಿ ಪುರುಷ ಮತ್ತು ಪ್ರಕೃತಿ, ಧರ್ಮಾಧರ್ಮ, ಪುಣ್ಯಾಪುಣ್ಯ ಜ್ಞಾನಾಜ್ಞಾನ ಸದಸತ್ ಇತ್ಯಾದಿ ವಸ್ತುಗಳು ಅನಾದಿಗ ಳೆಂದೂ, ನಿರ್ಣಯಿಸಲಿಕ್ಕೆ ಬರುವಂಥಹವುಗಳಿಲ್ಲವೆಂದೂ ಅಭಿಪ್ರಾಯವು ಬರುವಂತೆ ಹಿಂದೊಮ್ಮೆ ಶಕ್ಯಮಟ್ಟಿಗೆ ಹೇಳಿದೆ. ಆದರೂ ಇಲ್ಲಿ ಮತ್ತೊಮ್ಮೆ ಹೇಳೋಣ. ಪ್ರತ್ಯಕ್ಷ, ಅನುಮಾನ ವೇದ ಶಾಸ್ತ್ರಗಳ ಪ್ರಮಾಣ, ಇವುಗಳಿಂದ ನಿರ್ಣಯಿಸಲಿಕ್ಕೆ ಆಗದೇ ಇರುವ ವಿಷಯುಗಳನ್ನು ಅನಾದಿ ಎಂದು ಶಾಸ್ತ್ರ ಜ್ಞರು ಹೇಳುತ್ತಾರೆ. ಅನಾದಿಯ ಸ್ವರೂಪವು ಹೇಗೆ ಇರುವ ದೆಂಬದನ್ನು ತಿಳಿಸುವದು ಆವಶ್ಯಕವಾಗಿದೆ. ಕುಂಬಾರನು ಒಂದು ಘಟವನ್ನು ಸಿದ್ಧಪಡಿಸುತ್ತಾನೆ. ಅಥವಾ ವಸ್ತ್ರವನ್ನು ನೇಯುವವನು ಒಂದು ವಸ್ತ್ರವನ್ನು ತಯಾರಿಸುತ್ತಾನೆ. ಎಂದು ಭಾವಿಸಿದರೆ ಘಟವಾದರೂ ಸರಿ. ವಸ್ತ್ರವಾದರೂ ಸರಿ. ಸಿಧ್ಧ ವಾಗುವ ಪೂರ್ವದಲ್ಲಿ ಅದರ ಅಭಾವವನ್ನು ಅಂದರೆ ಇಲ್ಲ ದಿರುವಿಕೆಯನ್ನು ಎಲ್ಲರೂ ಒಪ್ಪಿಕೊಳ್ಳಬೇಕಾಗಿದೆ. ಆ ಇಲ್ಲ ದಿರುವಿಕೆಯು ಎಂಥಹದು. ಯಾವಾಗಿನಿಂದ ಆರಂಭವಾಗಿದೆ. ಎಂಬದನ್ನು ತೀರ್ಮಾನಿಸಲಿಕ್ಕೆ ಆಗುವದೇ ಇಲ್ಲ. ಇದೇ ಅನಾದಿಯ ಸ್ವರೂಪವೆಂದು ತಿಳಿಯಬೇಕು. ಈ ಅನಾದಿತತ್ವವೇ ಪುರುಷ (ಈಶ್ವರ) ಮತ್ತು ಪ್ರಕೃತಿ (ಮಾಯೆ) ಈ ಸಂಬಂಧದ ಎಲ್ಲ ನಿಯಮಗಳಲ್ಲಿಯೂ, ಇರುವದಾಗಿ ತಿಳಿದುಬರುತ್ತದೆ. ಆದುದರಿಂದ ಚಾತುರ್ವರ್ಣ್ಯದ ವಿಭಾಗಗಳೂ, ಕರ್ಮ ವಿಭಾ ಗಗಳೂ, ಅನಾದಿತತ್ವಾನುಸಾರ ಸಿದ್ಧವಾದವುಗಳೆಂದು ಎಲ್ಲ ವರ್ಣದವರೂ, ನಿರ್ವಿವಾದವಾಗಿ ಅಂಗೀಕರಿಸುವಂಥಹವು ಗಳಾಗಿವೆ.

**ಆನುವಂಶಿಕ ಸಂಸ್ಕಾರ:**—ಕೃಷಿಮಾಡುವವನು ಜಮೀ ನುಗಳ ಯೋಗ್ಯತೆಗೆ ತಕ್ಕಂತೆ ಅಲ್ಲಲ್ಲಿ ಆಯಾವ ಬೀಜಗಳನ್ನು ಹಾಕುತ್ತಾರೆ. ಹೀಗೆ ಮಾಡುವದರಿಂದ ಆಯಾವ ಬೀಜಗಳಿಗೆ ತಕ್ಕಂತೆ ಯೋಗ್ಯಬೆಳೆಯು ಉಂಟಾಗುವದು. ಈ ನಿಯಮ ವನ್ನು ಬಿಟ್ಟು ಒಂದು ಬೀಜವು ಬೆಳೆಯುವ ಭೂಮಿಯಲ್ಲಿ ಇನ್ನೊಂದು ಬೀಜವನ್ನು ಹಾಕಿದರೆ ಅದು ಸರಿಯಾಗಿ ಫಲಿಸದೆ ಹಾಕಿದ ಬೀಜವೂ, ಸಿಗದಂತಾಗಿ ಪುನಃ ಅದೇ ಜಾತಿಯ ಬೀಜವನ್ನು ಅದಕ್ಕೆ ತಕ್ಕ ಜಮೀನಿಯಲ್ಲಿಯೇ ಬಿತ್ತಿಬೆಳಿಸುವ ಪ್ರಸಂಗವು ಬರುವದೆಂಬ ಜ್ಞಾನವು ಹೊಲಮನೆಗಳನ್ನು ಮಾಡಿ ಕೊಂಡಿದ್ದ ಎಲ್ಲರಿಗೂ ವಿದಿತವಾದದ್ದೇ ಆಗಿದೆ. ಜನಸಂಘ ದಲ್ಲಿಯೂ, ನೋಡಿರಿ ವೇದವಿದ್ಯೆ, ವೈದ್ಯವಿದ್ಯೆ, ಸಂಗೀತವಿದ್ಯೆ, ಮಂತ್ರವಿದ್ಯೆ, ವ್ಯಾಪಾರ ಕೌಶಲ್ಯ, ಕೈಗಾರಿಕೆ, ಇವುಗಳಿಗೆ ಯೋಗ್ಯವಾದ ಸ್ಥಾನಗಳು ದೊರೆಯುವವು. ಯಾವಾವ ವಿದ್ಯೆಯನ್ನು ಯಾರಾರು ನಡಿಸಿಕೊಂಡು ಬರುವರೋ? ಅವರ ಸಂತತಿಯವರು ಆಯಾವ ವಿದ್ಯೆಗಳನ್ನು ಸಂಸರ್ಗ ವ್ಯವಹಾರದ ಬಲದಿಂದ ಸುಲಭವಾಗಿ ಗ್ರಹಿಸುವರು. ಆನುವಂಶಿಕ ಸಂಸ್ಕಾ ರದ ವಿದ್ಯೆಯನ್ನು ಬಿಟ್ಟು ಇತರ ವಿದ್ಯೆಯನ್ನು ಗ್ರಹಿಸ ಹೋದರೆ ಅದು ಸುಲಭ ಸಾಧ್ಯವಾಗಲಾರದು. ಆನುವಂಶಿಕ ಸಂಸ್ಕಾರದ ವಿದ್ಯೆಯು ಸುಲಭ ಗ್ರಾಹ್ಯವಿದ್ದು ಅದರ ಪ್ರಯೋ ಜನವಾದರೂ, ಶೀಘ್ರವಾಗಿಯೇ ಸಿಗುವದು. ಇದರಂತೆ ಆಯಾವ ವರ್ಣಗಳ ಆನುವಂಶಿಕ ಸಂಸ್ಕಾರದಿಂದ ಬಂದ ಕರ್ಮಗಳನ್ನು ಆಯಾವ ವರ್ಣದವರು, ನಡಿಸುತ್ತ ಬಂದಲ್ಲಿ ಅವರಿಗೆ ಉತ್ತಮ ಗತಿ ಪ್ರಾಪ್ತವಾಗುವದೆಂಬದೂ, ವರ್ಣಭೇದಗಳನ್ನು ಅಳಿದು ಬಿಡಬೇಕು. ಅಸ್ಪೃಶ್ಯತೆಯನ್ನು ಒಮ್ಮಿಂದೊಮ್ಮೆ ತೆಗದು ಹಾಕಬೇಕೆಂದು ಹೇಳುವುದು ಸುಲಭವಾದರೂ ಹಾಗೆ ಮಾಡು ವುದು ನೈತಿಕ ದೃಷ್ಟಿಯಿಂದ ಸುಲಭಸಾಧ್ಯವಲ್ಲೆಂಬುದೂ ಸಿದ್ಧ ವಾಗುತ್ತದೆ.

(ಅಪೂರ್ಣ.)

---

# ಬಸಂತ

## ಅಚ್ಚಗನ್ನಡದ ಚಿಕ್ಕನಾಟಕ

ಲೇಖಕ:— ಬಾಲಕವಿ. ಎಚ್. ಆರ್. ಪಿ. ಚಿಕ್ಕಲಕೋಟಿ.

ಕಂ॥ ನುಡಿಗಡಲುಂಗಂನಂಬ !
ಲ್ಕೈಡೆವಿಡದಲೆಪೊರೆವ ಪೊಡವಿಯೊಡೆಯುಂಗಂತ ॥
ನ್ನಡಿದಾವರೆಯುಂ ತೋರಲು ।
ಪೊಡಮಡುವೆಂನೆನೆದು ಶಂಕರಾನಂದಂಹಂ ॥

( ಪಾರುಪತ್ಯಗಾರನು ಬಂದು )

ಪಾರು— ( ಕೈಮುಗಿದು ) ಹಿರಿಯರೇ! ಈಗ ಬಸಂತವೆಂಬ ಚಿಕ್ಕಕತೆಯನ್ನು ಆಡಿತೋರಿಸುನೆವು. ತಾವು ಕೇಳಿ ತಪ್ಪುಗಳಿದ್ದಲ್ಲಿ ಮನ್ನಿಸಬೇಕೆಂಬು ಬಿನ್ನಹ. ( ಹೋಗುವನು )

## ಒಂದನೆಯ ಗುಂಪು

### ಮೊದಲನೆಯ ನೋಟ

ಠಾವು ಬನ, ಕೋಕಿಲೆ—ಕೀರಿ

ಕೀರಿ— ಕೋಕಿಲೇ! ನಾನಾಗಲೇ ಬೇಡವೆನ್ನಲಿಲ್ಲವೇ ? ಇಂತಹ ನಸುಕಿನಲ್ಲಿಯೇ ಬಲುಮೆಯಿಂದ ಕರೆದುಕೊಂಡು ಬಂದೆ. ನಾನು ಬಂದದ್ದೇ ಅಲ್ಲ.

ಕೋಕಿಲೆ— ಏನಾಯಿತು? ಯಾರಾದರೂ, ಹಿಡಿಯಲಿಕ್ಕೆ ಬಂದಿರುವರೇ ?

ಕೀರಿ— ಈಗ ಮಾಡುವದೇನು ? ಸುಮ್ಮನೆ ಕಣ್ಣು ಬಡಿಯುತ್ತ ಕೂಡೋಣವೇ ?

ಕೋಕಿಲೆ— ಅಷ್ಟು ಬೇಸರವೇಕೆ ? ಮಡಿಗಳಿಗೆ ನೀರು ಹಾಕೋಣ ಬಾ! (ಮಲ್ಲಿಗೆಯ ಹೂವನ್ನು ತೋರಿ) ಈ ಮಲ್ಲಿಗೆಯ ಅಲರು ನೋಡು! ಹೇಗೆ ಕುಲುಕುಲು ನಗುತ್ತಿರುವದು !!

ಕೀರಿ—ಹೌದು ನಿನ್ನ ಈ ವಯ್ಯಾರದ ವನಪನ್ನು ನೋಡಿ ನಗುವದು !

ಕೋಕಿಲೆ— ಈ ಗುಲಾಬಿಯ ಮೇಲೆ, ಆ ಸಂಪಗಿಯು ಬಾಗಿರುವದರಿಂದ ಹೇಗೆ ಕಾಣುವದು ?

ಕೀರಿ— ನೀನೇ ಹೇಳು. ನೋಡುವಾ.

ಕೋಕಿಲೆ— ಯೇನನ್ನೋ ಹೇಳುವಂತಿವೆ!

ಕೀರಿ— ಹೊ ಹಾಗೆಯೇ ಕಾಣುವದು! ಅದು ಗುಲಾಬಿಗೆ "ನಿನ್ನ ಮೈಸಿರಿಯು ನುಣ್ಪಾದರೂ ಸೊಬಗು ಸೊಂಪಾದರೂ ಅರಳು ಕಂಪಾದರೂ ನೀನು ಕಟ್ಟುನಿಟ್ಟಾದ ಕೆಟ್ಟ ಬಗೆಯವಳು" ಎಂದು ಹೇಳುವದು !

ಕೋಕಿಲೆ— ಹಾಗೇಕೆ ಹೇಳಬೇಕು ?

ಕೀರಿ— ಅದರಸುತ್ತಲೂ ಮುಳ್ಳುಕಂಟಿಗಳು ಬೆಳಸಿರುವದಿಲ್ಲವೇ ? ಕೋಕಿಲೇ! ಅದನ್ನು ನೋಡುತ್ತಲೇ, ನಿನಗಿರುವ ತೊಡಕುಗಳು ನೆನಪಾಗಿ, ಅವು ಬಡಬಡ ಮುಂದಡಿ ಇಡುವಂತೆ ನನ್ನ ಕಣ್ಣಿಗೆ ಕಟ್ಟುವವು.

ಕೋಕಿಲೆ— ಕೀರಿ! ಸಾಕುಬಿಡು! ನನ್ನ ಬಗೆದಾವರಿಯು, ಆ ತೊಡಕುಗಳಿಂದ ಅಳಲಿ-ತೊಳಲಿ-ಕಳವಳದಿಂದ-ಬಳಲಿ-ಬೆಂಡಾಗಿರುವದು! ಅಲ್ಲಿರುವ ಏರಿಗಾದರೂ ಹೋಗೋಣ ಬಾ! ( ಏರಿಕಡೆಗೆ ಬಂದು ) ನೋಡೇ ಈ ತಾವರೆಯು ಇದೇ ಈಗ ಏರುತ್ತಿರುವ ಪೊಬಿಸಲನ್ನು ನೋಡಿ ಅರಳುತ್ತಿರುವದು ! ಈಗೇಕೆ ಅರಳಬೇಕು ?

ಕೀರಿ— ಇಲ್ಲ. ಅರಳಿರುವದಿಲ್ಲ.

ಕೋಕಿಲೆ— ಅದು ಹೇಗೆ ?

ಕೀರಿ— ಅದು ನಿನ್ನನ್ನು ನೋಡಿ ಕಕ್ಕಸಬಡುತ್ತಿರುವದು. ನಾನು ಹೇಳುವದಕ್ಕೆ ಸಿಟ್ಟಾಗುವೆಯಾ ?

ಕೋಕಿಲೆ— ಇಲ್ಲ ಹೇಳು.

ಕೀರಿ— (ನಕ್ಕು) ಕೇಳು.

ಕಂ॥ ಬಟ್ಟನ ಬಿಣ್ಮೊಲೆಗಳ್ ನಿ-।
ನ್ನಿಟ್ಟಣಿಸಿದನರಿತು ಮೊಗ್ಗು ನಾಣ್ಬುತೆ ಪಿಂತ-॥
ಕ್ಕಟ್ಟಿದವೆನುತಂ ಬಾಯಂ ।
ಬಿಟ್ಟುಂ ಮಳಿಸುವದು ತಾವರೆಯು ಕೇಳ್ ಗೆಳತೀ ॥

ಕೋಕಿಲೇ ನಿನ್ನ ಬಟ್ಟ ಬಿಣ್ಮೊಲೆಗಳ ಸೊಬಗಿಗೆ......

ಕೋ— (ಮೆಲ್ಲಗೆ ಹೊಡೆದು) ಇರಲಿಬಿಡು ! ಈ ಬನಸಿರಿಯ ಸೊಬಗಿನ ಕುಣಿತವನ್ನು ನೋಡು !

ಕೀರಿ-- ನೋಡುವದೇ ಬೇಡ ! ನಿನ್ನ ಮೈಸಿರಿಯನ್ನು ನೋಡಿದರೆ ಬನಸಿರಿಯನ್ನು ಕಂಡಂತೆಯೇ !

ಕೋ— ನಾನೂ ಬನಸಿರಿಯೂ ಒಂದಾಗಲಿಕ್ಕೆ ( ಸುತ್ತ ಮುತ್ತ ನೋಡಿ ) ನನ್ನಲ್ಲಿ ಈ ತಾವರೆಯ ತಳಿರೂ-ಜೊನ್ನವಕ್ಕಿಗಳೂ ಸವಿನುಡಿಯ ಗಿಣಿಗಳೂ-ಹಾವುಗಳೂ ನೆಲೆಸಿರುವವೇ?

ಕೀರಿ— ಬಗೆಗೊಟ್ಟು ನೋಡಿದರೆ ನೆಲಿಸಿರುವದು ಕಂಡು ಬರುವದು.

ಕೋ— ಹಾಗಿದ್ದಲ್ಲಿ ನಾನು ಕೇಳಬಹುದೇ ?

ಕೀರಿ— ಹೇಳುವೆನು ಕೇಳು.

ಉ॥ ರನ್ನೆಯೆ ಕೇಳ್ನೆಗಳ್ದ ಮೊಗದಾವರೆಯಾಗಲು
ಜೊನ್ನವಕ್ಕಿಗಳ್ ।
ನಿನ್ನಯ ಯುಬ್ಬಿನಾಬಳುಕಬಣ್ಮೊಲೆಗಳ್
ಗೆಳತೀಯವಾಗಲಾ ॥
ಕನ್ನಡವಕ್ಕಿಗಳ್ ಸೊಗಸ ಬೀರುವ ಕತ್ತಿನ
ಕೂಡೆ ಪಾಮುಗಳ್ ।
ಚೆನ್ನಿಕೆ ಕರ್ಪುಗೊಂಡ ಜಡೆಯಾಗಲು ವೊಪ್ಪದೆ?
ನಿನ್ನೊಡಲ್ಲನೇ ! ॥

ಕೋ— ( ಕೀರಿಯ ಬಾಯಿಮುಚ್ಚಿ ) ಸಾಕು. ಈ ಹಾಡನ್ನು ಕೇಳಲಾರೆ.

ಕೀರಿ—( ತಿರುಗಿ ನೋಡಿ ) ಕೋಕಿಲೇ ! ಅತ್ತ ನೋಡು ಬಸಂತರಾಯರು ಬರುತ್ತಿರುವರು !

ಕೋ—( ಕಂಬನಿದಳೆದು ) ಗೆಳತೀ- ನನ್ನ ಪಾಡು ನನಗೇ ಗೊತ್ತು ! ನಿನಗೆ ನಗೆಚಾಟಿಕೆಯಾಗಿದೆ ! ನನ್ನ ಬಗೆಯೊಳಗೆ ದೊಡ್ಡ ಗೊಂದಲವೆದ್ದಿದೆ ! ಒಡಲು ಬೆಂಡಾಗಿದೆ ! ಕಣ್ಣುಗಳು ಕತ್ತಲೆಗೂಡಿಸುತ್ತಿವೆ ! ಕೈಕಾಲ್ಗಳು ಸೋತಿವೆ !! ನೀನೇ ಹೇಳು. ಕೆಂದಳಿರನ್ನರಸುವ ಅಲರ್ವಕ್ಕಿಯಂತೆ ನನ್ನ ಪಾಡಾಗಿದೆ ! ಅವರ ವೊಗದಾವರೆಯನ್ನೆಂದು ಕಂಡೆನೋ— ಅಂದಿನಿಂದ ಈ ತುಂಬಿಗೆ ಕಂಬನಿಯೇ ನೆಲೆಯಾಗಿದೆ !! ಇನಿಯನ— ವನಪಿನ— ನಸುನಗೆಯ — ವಯ್ಯಾರದ — ಸೊಂಪು ಬೀರುವ-ವೊಗವೆಂಬ-ತಿಳಿಲೊಡೆಯನನ್ನು (ಚಂದ್ರ?) ನೋಡಲು, ಈ ಬಡವಿಯ ಕಂಗಳೆಂಬ ಜೊನ್ನವಕ್ಕಿಗಳು ತತ್ತರಿಸುತ್ತಿವೆ ! ಆವಾಗಲೂ, ಈ ಬಡವಿಯು—ಬಸಂತನ— ಬರುವಿಕೆಯನ್ನೆ ಬಯಸುವಳು. ಒವ್ಮೆ ಅವರನ್ನು ನೋಡಿದಕೂಡಲೇ—ಅಲರ್ಗಣೆಯನಿಗೆ ಹಟ ತೀರಿಸಲಿಂಬುದೊರೆಯಿತು ! ನೋಡು. ಆ ಮುಗುಳ್ನಗೆಯಿಂದಿರುವ ಚೆಂದುಟಿಯ ಅಂದ ! ಹೊಂಬಣ್ಣದ ಒಡಲಚೆಂದ !! ಮುಂದಲೆಯ ಮೇಲೆ ನಿಂತ ಮುಂಗುರುಳ ಚೆಂದ! ಇನ್ನೊಬ್ಬರಲ್ಲಿ ಕಾಣಬಹುದೇ ?

ಕೀರಿ—ಹೌದು. ಯಾರಲ್ಲವೆನ್ನುತ್ತಾರೆ ? ಅವರು ಬರುತ್ತಾರೆ ನೋಡು. ಏನು ಹೇಳುವಿಯೋ ಹೇಳು.

ಕೋ—( ನೋಡಿ ) ಹೌದು. ಅವರ ಸಂಗಡ ಮದನರಾಯರೂ—ಬರುವಂತಿದೆ ! ನಸುಕಿನಲ್ಲಿ ನಡೆದಾಡಬರುವದು ಅವರದೊಂದು ವಾಡಿಕೆ. ಕೀರೀ-ನಾವು ಮರೆಯಲ್ಲಿರೋಣ ಬಾ.

( ಹೋಗುವರು. )

## ೨ನೆಯ ನೋಟ

( ಬಸಂತ—ಮದನ )

ಮದನ—ಬಸಂತಾ ! ಮೂರು ನಾಲ್ಕು ದಿನಗಳಿಂದ ಇತ್ತ ಕಡೆಗೇ ನಡೆದಾಡ ಬರಲಿಕ್ಕೆ ಬಲುಮನಮಾಡುತ್ತಿರುವೆ ! ಆ ನಿನ್ನ ಗುಟ್ಟೇನೋ ತಿಳಿಯಲಿಲ್ಲ !

ಬಸಂತ—ಗುಟ್ಟೇನಿದೆ ? ಇತ್ತ ಕಡೆಗೆ ಸೊಬಗಿನ ನೆಲೆಯಾದ—ಬೆಡಗಿನ ಸೆಲೆಯಾದ ಬನಗಳುಂಟು! ಈ ಬನಗಳಿಂದ ಅರಳಿದ ಅಲರ್ಗಂಪನ್ನು, ತಂಗಾಳಿಯು ತಂದು ಬೀಸುವದು. ಅದರಿಂದ ತಣ್ಣಗೆ ತುಸು ನೆಮ್ಮದಿಯಾಗುವದು.

ಮದನ—ಆ ದಾರಿಯಲ್ಲಿ ಬನಗಳಿಲ್ಲವೇ ?

ಬಸಂತ— ಇವೆ. ಇದ್ದರೂ, ಇವುಗಳನ್ನು ಅವು ಹೋಲಲಾರವು.

ಮದನ—ಇಲ್ಲದ ನೆವವನ್ನು ಹೇಳಿ ದಿಟವನ್ನು ಮರೆಯಿಸಬೇಡ. ನೀನು ಹೇಳದಿದ್ದರೂ ತುಸು ವೇಳೆಯಲ್ಲಿ ಬಯಲಿಗೆ ಬೀಳುವದು.

ಬಸಂತ—ಅಂದಬಳಿಕ ಕೇಳುವದೇನು ?

ಮದನ—ನಿನ್ನ ಬಾಯಿಂದ ಏನು ಹೊರಡುವದೋ ನೋಡೋಣವೆಂದು ಕೇಳಿದೆನು. ನೀನು ಮಾಡುವ ಕೆಲಸವೆಲ್ಲವೂ ತಿಳಿದಿರುವದು ! ನಿನ್ನ ಹಣೆಯಬರಹವೆಲ್ಲಾ ಗೊತ್ತು !

ಬಸಂತ—ಹಾಗೆ ಗೊತ್ತಿದ್ದರೆ ಕೇಳಬೇಕೆಂದು ಲವಲವಿಕೆ.

ಮದನ—ನೀನು ಆ ಸುಂದರ ಸಾಹುಕಾರನ ಮಗಳಾದ ಕೋಕಿಲೆಯ ಹಂಬಲ ಹಿಡಿದವನಲ್ಲವೇ ? ಅಂತೇ ಅಕೆಯು ಬನದ ಸುತ್ತಮುತ್ತ ಕತ್ತೆಯಂತೆ ಸುತ್ತಿ ಬಳಲುತ್ತೀ ! ನಾಳಿನಿಂದ ನಾನಂತೂ ಬರುವದಿಲ್ಲ. ಬೇಡ. ಹೆಣ್ಬಲೆಗೆ ಒಳಗಾಗ

ಬೇಡ. ಇಲ್ಲಿಯವರೆಗೆ ಸೈ, ಅನಿಸಿಕೊಂಡ ನೀನು ಈಗ ಹೀಗೆ ಮಾಡುವದು ಹಿರಿಯರು ಒಪ್ಪದ ಮಾತು.

ಬಸಂತ—ಮದನಾ, ನೀನಂದದ್ದೆಲ್ಲವೂ ದಿಟ. ಆದರೆ ಮಾಡುವದೇನು ? ನಿನ್ನಂತೆ ನನಗೆ ಅಲರ್ಗಣೆಗಳು ತಾಕದಿದ್ದರೆ ನಿನಗೇ ನೂರುನಡತೆಯ ನುಡಿಗಳನ್ನು ಹೇಳುತ್ತಿದ್ದೆನು! ಹೆಣ್ಣಿನೊಡನೆ ಬೆರೆತು–ಸಾಕಾಗಿ ಬೇಸತ್ತ ನೀನು, ಈಗ ದಾರಿತೋರ ಬರುವೆ! ಆಹಾ! ಆ ಸವಿನುಡಿ ! ಆಸೆಯು ಅಡಿ ! ಅರಸಂಚೆಯು ನಡೆ! ಇನ್ನೊಬ್ಬಳಲ್ಲಿರಬಹುವೇ ? ಆ ಕೈಕಾಲು ನಡುವುಗಳ ಮಾಟ! ಮೆಲ್ಲನೆ ನಡೆದಾಡುವ ನಡೆದಾಟ ! ಬಗೆಕೊಳ್ವ ಓರೆನೋಟ ! ಇನ್ನೊಬ್ಬ ಹೆಂಗಳೆಯುಲ್ಲಿರಬಹುದೇ ? ಅಲರ್ಗಣೆಯನ ಕೈಪಿಡಿಯ ಬಿಲ್ಲಿನಂತಿರುವ ಹುಬ್ಬೊ–ಪೇರಾನೆಯ ತನೆಯಂತಿರುವ ಮೊಲೆಗಳ ಮುಬ್ಬೊ–ಮಿಕ್ಕಿ ಮೀರಿದ ಸೊಕ್ಕಿನ ಜವ್ವನದ ಉಬ್ಬೊ–ಇನ್ನೊಬ್ಬ ಇನಿಯಳಲ್ಲಿ ಬರಬಹುದೇ !

ಮದನ—ಅಂದರೆ ನಿನ್ನ ಹಿಂದಿನ ಚಲೋ ನಡತೆಯನ್ನು ಬಿಡುವೆಯಾ ?

ಬಸಂತ—ಖಂಡಿತ ! ನಾನು ಅವಳನ್ನು ನೋಡಿದ ತಟ್ಟಿ ಬಗೆಯ ಬಯಕೆಯು ಬೇರೆಯಾಗಿದೆ ! ಆ ಕಿರುನಗೆಯುನನ್ನು ನೆನಿಸಿದರೆ ಮೈ ಮುಳ್ಳುಬರುತ್ತಿದೆ.

ಕಂ॥ ಕೆಳದಿಯ ಸೊಬಗಿನ ಚೆಂದುಟ ।
ದಳಿರೆಯುನಾನೆಂದು ಕಂಡೆನಂದಿನದಿನದೆನ್ನೊಳ್ ॥
ಮುಳಿದಿಹ ನಾಲರ್ಗಣೆಯಂ ।
ತಳೆದಿಹನಿಂಗೋಲಎಲ್ಲನಾಲಿಸು ಗೆಳೆಯಾ ॥

ಮದನ—(ತನ್ನೊಳ್) ನನಗಾದರೂ ಇಷ್ಟೇ ಬೇಕಾಗಿತ್ತು.- ಬಸಂತಾ ಆಕೆಯು ಒಪ್ಪಿದರೆ ಲಗ್ನವಾಗಬಲ್ಲೆಯಾ ?

ಬಸಂತ—ಹಾಗೆಂದು ಮಾಡಿರುವೆನು !

ಮದನ—ಈ ಹೊತ್ತು ಸಾಕು ಬಿಸಿಲೇರುತ್ತಾ ಬಂತು. ಮನೆಗೆ ಹೋಗೋಣ ಬಾ !

ಬಸಂತ—(ಬೇಸರದಿಂದ) ಆಗಲಿ ನಡೆ. (ಹೋಗುವರು)

## ೩ನೆಯ ನೋಟ

ಕೀ–ಕೋಕಿಲೆ

ಕೋಕಿಲೆ—( ಸಣ್ಣಮೋರೆಯಿಂದ ) ಅವರೇನಂದುಕೊಂಡಿರಬಹುದು ?

ಕೀರಿ—ಅಂದುಕೊಳ್ಳುವರೇನು ? ಸುಮ್ಮನೇ ಹೋಗಿರಬಹುದು.

ಕೋ—ಕೆಲಸವನ್ನು ತಪ್ಪಿಸಿದೆವು. ಮೊದಲೇ ಕತೆಯನ್ನು ಹೇಳಿದ್ದರೆ ತೀರುತ್ತಿತ್ತು.

ಕೀ—ಮತ್ತೇನು ಕತೆ ?

( ಕೋಕಿಲೆಯು ಕಂಬನಿತುಂಬಿ ಕಿವಿಯಲ್ಲಿ ಏನೋ ಹೇಳುವಳು )

ಕೀ—ಅದಕ್ಕಾಗಲೇ ಒಬ್ಬನನ್ನು ನೋಡಿರುವೆನು ?

ಕೋ—ಆರನ್ನು ?

ಕೀ—ಬಸಂತರಾಯರು ಉಬ್ಬಿನಿಂದ ಸಾಕಿದ ಹಕ್ಕಿಯನ್ನು ( ತೋರಿಸುವಳು ).

ಕೋ—ಏನು ಪಾರಿವಾಳವೇ ? ಈ ಪುಟ್ಟ ಹಕ್ಕಿಯಿಂದ ಏನಾಗಬಲ್ಲುದು ? ಇದೇನು ಮಾತನಾಡುವದೆ ?

ಕೀ—ಇಲ್ಲ. ಅದರ ರೆಕ್ಕೆಗೆ ಚೀಟೀ ಕಟ್ಟಿದರೆ ತೀರಿತು ! ಕೋಕಿಲೆ–ಕೀರೆಯರ ಕೆಲಸವು ಪಾರಿವಾಳದಿಂದಲೇ ಪೂರೈಸಬೇಕಾಗಿದೆ !

ಕೋ—ಹಾಗಿದ್ದಲ್ಲಿ ನಾನು ಚೀಟೀ ಬರೆದು ಕೊಡುವೆನು. ನೀನು ಬೇಕಾದಲ್ಲಿ ಕಟ್ಟು.

( ಓಲೆಯನ್ನು ಬರೆದು ಕೊಡುವಳು. )

ಕೀ—(ತೆಗೆದುಕೊಂಡು ಕಟ್ಟಿ ) ಇನ್ನು ಹಾರ ಬಿಡಲೇ ?

ಕೋ—ಆ ಸೈಪಿಗನ ಕೈಯಲ್ಲಿ ಸೊಂಪಿನಿಂದ ಬೆಳೆದ ಈ ಹಕ್ಕಿಯು ಎಂತಹ ಮುದ್ದುಮುದ್ದಾಗಿರುವದು ! ಈ ಬೆಳ್ಳನ್ನ ಬಣ್ಣದ ಹಕ್ಕಿಯ ಕಾಲು ಕಣ್ಣು ಬಾಯಿಗಳು ಕೆಂಪಗೆ ಹೊಳೆಯುತ್ತಿರುವವು. ಇದಕ್ಕೆ ಒಂದು ಮುದ್ದಿಕ್ಕಿ ಕಳುಹುತ್ತೇನೆ. (ಮುದ್ದಿಟ್ಟು)

ಕಂ॥ ಕೂರ್ಪಿನ ಚೆಂದಳಿರೆಳೆಯಂ.।
ಬರ್ಪುದನಾಂ ನೋಡುತಿರ್ಪೆ ಚೆಂದುಟಸವಿಯಂ॥
ಪೀರ್ಪನ ನಸುನಗೆಯುವನಂ ।
ತರ್ಪದೆ ನೆನೆಯುತ್ತಲಿರ್ಪೆ ಬಳಲುತೆ ಬಗೆಯೊಳ್ ॥

( ಮತ್ತೊಮ್ಮೆ ಮುದ್ದಿಕ್ಕಿ ಬಿಡುವಳು )

# ಎರಡನೆಯ ಗುಂಪು

## ಮೊದಲನೆಯ ನೋಟ

( ಠಾವು ಬಸವಂತನ ಮನೆ-ಬಸಂತ )

ಬಸಂತ—(ತನ್ನೊಳ್) ಜಾಣೆ! ನಾನು ನಿನ್ನೆಮಾಡಿದ ಹುಚ್ಚು ತನಕ್ಕೆ ನೀನು ನೊಂದುಕೊಂಡಿರಬಹುದು! ಅದರಿಂದ ಈ ಹೊತ್ತು, ನಿನ್ನ ಬನದ ಸುತ್ತುಮುತ್ತು ಸುತ್ತಿ ಬಳಲಿದರೂ—ನಿನ್ನ ಬೆಡಗಿನ ಅಡಿಗಳೇ ಕಾಣಲಿಲ್ಲ! ಗೆಳತೀ ನಾನು ಆ ನಿನ್ನ ಮುಗುಳ್ನಗೆಯ ಮೊಗದಾವರೆಯ ಸೊಗಸಿಗೆ ಬಗೆ ಸೋತೆನು! ಆ ಸೊಗಸಿನ ಮೊಗವನ್ನು ನೋಡದೆ ನನಗೆ ಎಂಥಾ ಕಳವಳ ವಾಗಿದೆ! ಮೊದಲೇ ಸೊಬಗಿನವಳು. ಮೇಲೆ ಓದುಬರಹ ಕಲಿತ ವಳು! ಬೆಡಗಿನ ಒಡಲಿನವಳು. ಅಲ್ಲದೇ ಚೆಲೋ ನಡತೆ ಯವಳು! ನನಗೆ—ನೀನು ಕೈಪಿಡಿಯುವದೂ ಬೇಡ! ನಿನ್ನೊಡ ಲನ್ನು ತಬ್ಬುವದೂ ಬೇಡ. ಕಾಮದೇವನ ಕಾಳಗದಲ್ಲಿ ಗೆಲ್ಲುವದೂ ಬೇಡ! ಕೆಳದೀ! ಇವೆಲ್ಲ; ಆ ನಿನ್ನ ಮುದ್ದು ಮುದ್ದಾದ, ನಸುನಗೆಯು ಪಸರಿಸಲು ಮಿಸುಗಿ- ತಿಳಿಗಲ್ಲ ಗಳಿಂದ ಪೊಳೆದು—ಮುಂಗುರುಳಿನಿಂದ ಕಂಗೊಳಿಸುವ ಮೋರೆ ಯ ವಾರೆ ನೋಟದಲ್ಲಿ ಅಡಿಯಾಗುವವು!! ನನ್ನನ್ನು ನೀನು ಯಾವ ತೆರದಿಂದ ಕಾಣುತ್ತೀಯೆಂಬುವದು ನನಗೆ ತಿಳಿಯದು; ಆದರೆ ನಿನ್ನೆ ನಾನು ಕಾಣುತ್ತಲೇ ಕಂದಿದ ಮೋರೆಯಿಂದ ಕಂಬನಿ ತುಂಬಿದೆ. ಅದರಿಂದ ನಾನೇನೂ, ತಿಳಿಯದವನಾಗಿ, ಹೊಟ್ಟೆಯಲ್ಲಿ ಗುಟ್ಟಾಗಿ ತಲ್ಲಣಗೊಳ್ಳುತ್ತಿರುವೆನು. ಕಿರುನಗೆ ಯವಳೆ! ನಿನ್ನೆ ನಿನಗೆ ಕಡೆತೀರದ ಕಳವಳವಾಗಿರಬಹುದು! ಒಳಗೇ ನೊಂದುಕೊಂಡಿರಬಹುದು! ಬಗೆಯೆಂಬ ಬನಕ್ಕೆ ಕಾಡ್ಗಿಚ್ಚು ಬಳಸಿರಬಹುದು!! ಕೆಟ್ಟ ನಡತೆಗೆ ಗಡಗಡ ನಡು ಗುವ ಕಡು ಬಡವಾದ ನಿನ್ನೊಡಲು, ಕಂದಿ, ಕುಂದಿ—ಬೆಂದಿರ ಬಹುದು! ಇಂತಾದರೂ ನನಗೆ ನಸುನಗೆಯ ನೆನಹು ಮರೆಯ ಲೊಲ್ಲದು. ಚೆಲ್ವಿಕೆಯ ಗಲ್ಲಗಳನ್ನು ಹಿಡಿದು, ಬಲ್ಮೆಯಿಂದ ಮುದ್ದಿಡಬೇಕೆಂಬ ಲವಲವಿಕೆಯು ಬಿಡದೆ ನನ್ನನ್ನು ಕೊರೆಯು ತ್ತಿರುವದು! ಏನು ಹೆಣಗಿದರೂ, ಈ ಕೆಟ್ಟ ಲವಲವಿಕೆಯು ಹೊರ ಹೋಗಲೊಲ್ಲದು! ಚೆಲ್ವಿಕೆಯ ಚೆಂದುಟಿಯ ಬೆಡಗಿನಲ್ಲಿ, ಕೆಸರಿನಲ್ಲಿ ಕಾಲ್ಮುರಿದ ಪೇರಾನೆಯಂತೆ ಸಿಕ್ಕು ಬಿದ್ದಿರುವೆನು !

ಕಂ॥ ಸೊಗಸಂ ಮೀರುವ ಚೆಲ್ವಿನ ।
ನಗೆಮೊಗಮಂ ಮಿರುಪ ಗಲ್ಲಮಂ ನೋಡಿದೊಡಾಂ ॥
ಮಿಗುವೆಂ! ಪಿರಿಯರ ನುಡಿಯಂ ।
ಪುರುವದು ನಸುಗಗೆಯೊಳೆನ್ನ ಬಗೆ ಮಿಂಚಿನವೊಲ್ ॥

( ಪಾರಿವಾಳವು ಬಂದು ಅವನ ಮುಂಗೈಮೇಲೆ ಕೂಡುವದು. )

ಬಸಂತ— ( ಅಚ್ಚರಿಯಿಂದ ) ಮುದ್ದಿನ ಹಕ್ಕಿಯೇ(ಮುದ್ದಿಕ್ಕಿ) ನಿನ್ನೆ ಎಲ್ಲಿ ಕುಳಿತುಕೊಂಡಿದ್ದೆ? ನಾನು ಗಿಡಗನಿಗೆ (ಲಗಡಿಗೆ?) ತುತ್ತಾಗಿರಬಹುದೆಂದು ನಂಬಿದ್ದೆನು! (ಮೈದಡವುತ್ತ ಪಕ್ಕಕ್ಕಿರುವ ಚೀಟಿಯನ್ನು ನೋಡಿ ). ಅದಾರು ನಿನಗೆ ಈ ಕಾಗದವನ್ನು ಕಟ್ಟಿ ದವರು? ನಿನಗೆ ಹಾರುವಾಗ ಬಹಳ ದಣಿವಾಗಿದ್ದೀತು. (ಮೆಲ್ಲಗೆ ಬಿಚ್ಚಿ ) ಏನೋಬರದಂತೆ ಕಂಡು ಬರುವದು. ಕುರುಹಿನಬರಹ ( ವಿಳಾಸ ) ವೇನಿರುವದೋ ನೋಡೋಣ! ( ಓದುವನು )

ಬಗೆಯಾಣ್ಮರಾದ,
ಬಸಂತರಾಯರ ಅಡಿದಾವರೆಗಳೆಡೆಗೆ—

ನಾನಾರ ಬಗೆಯಾಣ್ಮನಾಗಿರುವೆನು? ಸೋಜಿಗವಿದೆ! ಇದಾರ ಕಡೆಯಿಂದ ಕಳುಹಲ್ಪಟ್ಟದ್ದು? ಕೆಳಗೆ ಬರೆದು ಇದೆಯೇ? ಬರೆದಿದೆ! ಏನೆಂದು? ( ಮೈನಡುಗಿ ) ಕೋಕಿಲೆಯ ಕಡೆಯಿಂದ ಕಳುಹಲ್ಪಟ್ಟುದು. ಕೋಕಿಲೆಯ ಕಡೆಯಿಂದ! ಕೋಕಿಲೆಯ ಕಡೆಯಿಂದ!! ಕೋಗಿಲೇ! ಕೋಗಿಲೇ!! ಆಹಾ ಕೋಗಿಲೇ ನಿನ್ನಂತೆ ನಿನ್ನ ಹೆಸರೂ, ಸವಿಮುಸೂರಿ! ನಿನ್ನ ನುಡಿಯಂತೆ ನಿನ್ನ ಹೆಸರೂ ಸವಿನುಡಿಯಾಗಿರುವದು!! ಅಂತೇ ಓದಿದ ಹಾಗೆಲ್ಲ ಓದಬೇಕೆನಿಸುತ್ತಿದೆ. ಒಳಗೇನು ಬರೆದಿರು ವಳೋ ನೋಡಬಹುದೇ? ಆರಾದರೂ ಕೇಳಿದರೆ? ದೇವರಿ ದ್ದಾನೆ! ಮೆಲ್ಲಗೆ ಓದಿದರಾಯಿತು. ( ಓದತೊಡಗುವನು )

## ನಲ್ಮೆಣ್ಗೆಲ್ಗೆ

ಬನದೊಡೆಯಾ! ( ಹೀಗೆಂದು ಕರೆಯುವಾಗ ಮೈನಡುಗುತ್ತಿದೆ! )

ನಿಮ್ಮೊಡಲ ಕಡುಬೆಡಗನ್ನು ನೋಡಿದೊಡನೇ ಬಗೆಯ ಬಿಗಿಹು ಬಯಲಾಯಿತು! ನಾನೀಗ ತಮಗೆ ಮಾರಲ್ಪಟ್ಟ ತೊತ್ತಾಗಿರುವೆನು. ಕೈಹಿಡಿಯುವದೂ ಬಿಡುವದೂ ತಮ್ಮ ಮಾತು! ನಿಮ್ಮ ಆ ಸೊಂಪಿನ ಸಂಪಿಗೆಯಲರ್ಗಂಪಿನ ತಿಳಿ ಗಲ್ಲಗಳಿಗೆ ಮುದ್ದಿಕ್ಕಬೇಕೆಂಬ ಲವಲವಿಕೆಯು ಬಿಡದೆ ಒಡ ಲನ್ನು ಕೊರೆಯುತ್ತಿರುವದು! ಆದರೆ, ಆ ಕೆಲಸಕ್ಕೆ ಕಡು ತೊಡಕುಗಳಿರುವವು. ನಮ್ಮ ಈಗಿನ ತಾಯಿಯು ಮಲ ತಾಯಿಯೆಂಬುವದು ತಮಗೆ ತಿಳಿದುದೇ! ಅವಳಿಗೊಬ್ಬ ತಮ್ಮ ನಿರುವನು. ಅವನಿಗೂ ನನಗೂ ಗಂಟುಹಾಕಬೇಕೆಂಬು

ನದೇ ಅವಳ ಬಯಕೆ. ಅವನನ್ನು ಮದುವೆಯಾಗುವದು ನನ್ನಿಂದಾಗದು. ನಾನು ನಿಮ್ಮನ್ನು ಈ ನಾಲ್ಕೆಂಟು ದಿನಗಳಿಂದ ನೋಡಿದ್ದೆನೆಂದಲ್ಲ. ಅದಕ್ಕೂ ಮೊದಲೇ ನೋಡಿದ್ದೆನು. ನಿಮ್ಮ ಓದುಗಾರಿಕೆಗೂ ಸೊಬಗಿಗೂ ಮೆಚ್ಚಿ ಆರೇಳು ತಿಂಗಳಾಯಿತು. ತಾವು ಬಿತ್ತಿಗರೆಂಬುವದನ್ನು "ಸಿರಿಗನ್ನಡಂಗೆಲ್ಗೆ" ಯೆಂಬ ತಿಂಗಳೋಲೆ ( ಮಾಸಪತ್ರಿಕೆ? ) ಎಲ್ಲಿ ಕಂಡುಕೊಂಡಿರುವೆನು. ನಮ್ಮ ಕೂರ್ಪಿಗೆ ಮಲತಾಯಿಯು ದೊಡ್ಡ ತೊಡಕಾಗಿರುವಳು. ಅದಕೇ ನಿನ್ನೆ ನಿಮ್ಮನ್ನು ಕಂಡು, ಕಂಬನಿಯು ದುರಿಸಿದುದು. ನಾಳೆ ನೀವು ಊರಹೊರಗಿರುವ, ಸೋಮೇಶನ ಗುಡಿಗೇ ( ದೇಗುಲ? ) ಬಂದರೆ ಒಳಿತಾಗುವದು. ಅಲ್ಲಿ ಎಲ್ಲವೂ, ತಿಳಿಯಬರುವದು.

ಕಂ॥ ಆರೈವೆಂ ಬರುವಿಕೆಯ ।
ನ್ನಾರಿದುರೋಳುಸುರಬೇರ್ಡಿರೀ ಬರಹವ ಮೇಣ್ ॥
ತೋರಿರಿ ಮೊಗದಾವರೆಯಂ ।
ಆರಡಿಯೋಲ್ಪಲುಬಿ ಸುಳಿವ ಬಡಕೋಗಿಲೆಗಂ ॥

ಇದನ್ನು ನೋಡಿ ನಾಳೆ ಬರಬಹುದೆಂಬ ನಂಬಿಕೆಯಿಂದ ನಂಬಿ ಬರೆದ ಓಲೆ.

ತಮ್ಮ

**ಬಾಳಿಯ ಬನ** / ಮಾ॥ ಬ॥ ೮—೧೮೯೯ } ಬರುವಿಕೆಯನ್ನು ಬಯಸುವ ಬಡವಳಾದ **ಕೋಕಿಲೆ.**

ಎಂಥಾ ಬರಹ! ಈ ನುಡಿಜೋಡಣೆಯು ಮಿಕ್ಕಿದುದು! ನಾನು ನಾಳೆ ಹೋಗಬಹುದೇ? ಮದನನೇನೆಂಬುವನೋ? (ಆಳುಮಗನು ಬಂದು)—ಧಣಿಯರೇ ತಂದೆಯವರು ಊಟಕ್ಕೆ ಕರೆಯುತ್ತಾರೆ. ಎಲೆ ಬಡಿಸಿದೆ ಎಂತೆ.

ಬಸಂ—(ಪಾರಿವಾಳವನ್ನ ಹಿಡಿದುಕೊಂಡು, ಚೀಟಿಯನ್ನು ಕಿಸೆಯಲ್ಲಿಟ್ಟು) ನಡೆ ಬರುವೆನು. ( ಹೋಗುವನು )

## ಎರಡನೆಯ ನೋಟ

( ತಾವು ಸೋಮೇಶನ ಗುಡಿ. ಕೋಕಿಲೆ-ಕೀರಿ—ಪ್ರಮದೆ ( ಕೋಕಿಲೆಯ ಮಲತಾಯಿ ) ಮಾಧವ ( ಪ್ರಮದೆಯ ತಮ್ಮ ) ಸುಂದರಸಾಹುಕಾರ—ಬಸಂತ-ಮದನ-ಪೂಜಾರಿ ( ಪೂಜಾರಿಯು ಆರತಿಯೆತ್ತುವನು )

ಪ್ರಮದೆ—ಕೋಕಿಲೇ ಒಂದು ಹಾಡನ್ನು ಹಾಡು.

( ಕೋಕಿಲೆಯು ನಾಚಿ ಸುಮ್ಮನಿರುವಳು )

ಕೀರಿ—ಹಾಡಬಾರದೇನೇ, ಏನುಬಡಿವಾರ ?

ಕೋ—( ಕೈಮುಗಿದು ತಲೆವಾಗಿ )

ಚಂ॥ ಬಗೆಯೊಳಗಿಂಬುಗೊಂಡು ಬಗೆಗಾಣದರಂ
ಸಲಹುತ್ತಲಿರ್ಪೆ ಮೇಣ್ ।
ಬಗೆಯುತೆ ಕಾಯ್ವೆಯಾಣ್ಮ ಮಿಗೆ ನಂಬಿದರಂ
ಬಿಡದಂತೆಯಾವಗಂ ।
ಬಗೆಯೊಳು ಡಂಬಬಿಟ್ಟು ನೆನೆಯಲ್ ಬಗೆದೋರುವೆ
ಯಾಗ ಬೇಗದಿಂ ।
ಬಗೆಯನು ಕಂಡು ಕಾಯೊ ಮಣಿವೆಂ ನಿಮಗಾಂ
ತಲೆವಾಗಿ ಶಂಕರಾ ॥

ಬಸಂತ—(ತನ್ನೊಳ್) ಆಹಾ! ದನಿಯು ಸವಿಯುಸೆಲೆಯಾಗಿರುವದು ! ಈ ಸವಿಯನ್ನು ಸವಿಯಲಿಕ್ಕೆ ಬರುತ್ತಿದ್ದರೆ ಸವಿದೇ ಬಿಡುತ್ತಿದ್ದೆನು !

ಸುಂದರ—ಕೋಕಿಲೇ ಈ ಹಾಡು ಹೊಸದಿದ್ದಂತೆ ತೋರುತ್ತಿದೆ. ಬಸಂತರಾಯರು ಏನೋ ಅಪ್ಪಿ ತಪ್ಪಿ ಬಂದಿರುವರು. ಅವರಿಗೆ ಮಣಿ.

ಕೋಕಿಲೆ—( ತನ್ನೊಳ್ ) ಅವರಿಗೆ ಮಣಿಯುವ ಸಿರಿಯು ಬರಬೇಕೇ ? ಇನ್ನೊಬ್ಬಳು, ಈ ಮೆಲ್ಲಡಿಗಳನ್ನು ಕನಸಿನಲ್ಲಿಯೂ, ಕಾಣಲಾರಳು ! ( ಬಸಂತನಿಗೆ ಕೆಂಪಕ್ಕೀಕಾಳುಕೊಟ್ಟು ಮಣಿಯುವಳು )

ಬಸಂತ—(ತನ್ನೊಳ್) ಇವಳ ಕೈಗಳು ಕೈಗಳೇ ಅಲ್ಲ! ತಾವರೆಯ ಎಸಳಗಳು !!

ಮದನ—(ಮೆಲ್ಲಗೆ) ಬಸಂತಾ ಇನ್ನು ಹೋಗೋಣ ಬಾ !

ಬಸಂತ—ಹೋಗೋಣ ತಡೆ, ಅಷ್ಟೇಕೆ ತುರುತು ?

ಮದನ—ನೋಡಿದೆವಲ್ಲ. ಆಯಿತು ಇನ್ನೇನು ಕೆಲಸ ?

ಬಸಂತ—ಹಾಗೇನು? ದೇವರ ಎದುರಿಗೆ ನಿಂತರೆ ಉಬ್ಬಿನ ಸೆಲೆಗಳು ಉಕ್ಕುಕ್ಕಿ ಬರುವವು ! ನರಗಳಲ್ಲಿ ಹೊಸ ನೆತ್ತರವು ಹರಿದಂತಾಗುವದು !

ಮದನ—ನೀನು ದೇವರಿಗಾಗಿಯೇ ಬಂದಿರುವೆಯಾ ?

ಬಸಂತ—ಕಾಣುವದಿಲ್ಲವೇ ? ಬಂದಿರುವದು.

ಮದನ—ಹೀಗೆಂದು ಕೋಕಿಲೆಯನ್ನು ಕೇಳಲೋ ?

ಬಸಂತ—(ಕಣ್ಸನ್ನೆಯಿಂದ) ಬೇಡ ಕೈಮುಗಿಯುವೆನು.

ಮದನ—ಇಲ್ಲ ಗಾಬರಿಯಾಗಬೇಡ. ಸಾಹುಕಾರರೇ ಇನ್ನು ಹೊರಡೋಣವೇ ?

ಸುಂದರ—ಆಗಬಹುದು. ಇನ್ನೇನು ಹೋಗುವದೇ.

ಕೋಕಿಲೆ—ಅಮ್ಮಾ ನಾನೂ ಕೀರೆಯೂ ತುಸು ತಡೆದು ಬರುವೆವು.

ಪ್ರಮದೆ—ಹಾಗೇ ಮಾಡಿರಿ. ಯಾರು ಬೇಡವೆನ್ನುವರು.

( ಕೀರೆ ಕೋಕಿಲೆಯರಿಬ್ಬರುಳಿದು ಎಲ್ಲರೂ ಹೋಗುವರು )

ಬಸಂತ—( ದಾರಿಯಲ್ಲಿ ) ನನಗೆ ತುಸು ಕೆಲಸವಿದೆ ನೀವು ನಡೆಯಿರಿ ( ಬದಲುದಾರಿ ಹತ್ತುವನು )

## ಮೂರನೆಯ ನೋಟ

( ಠಾವು ಅಡವಿ-ಬಸಂತ-ಕೀರೆ-ಕೋಕಿಲೆ )

ಕೀರೆ—ನೋಡಿರಿ. ನಿಮ್ಮ ಕೆಲಸ. ನಿಮ್ಮ ಕೈಯಲ್ಲಿದೆ.

ಕೋಕಿಲೆ—(ಕಂಬನಿದಳೆದು) ನಾನಂತೂ ಆ ಭಂಗಿಗುಡುಕನ ಕೈ ಹಿಡಿಯಲಾರೆ.

ಬಸಂತ—(ತನ್ನೊಳ್) ಈ ಕಂಬನಿತುಂಬಿದ ಇಂಪಾದ ಗಲ್ಲಗಳೆಂಥಾ ಸೊಂಪು ಬೀರುತ್ತಿವೆ ! ( ಮುದ್ದಿಟ್ಟು ) ಏಸುಸಲ ಮುದ್ದಿಸಿದರೂ ಸಾಕಾಗಲೊಲ್ಲದು ! ಕರಕರನ ಮಲಿ ನುಂಗಿದರೆ ತಣಿಯುವದೋ ಏನೋ!—ಇಲ್ಲ ಕೋಕಿಲೇ ಗಾಬರಿಯಾಗಬೇಡ. ನಿನ್ನನ್ನೆಂದಿಗೂ ಬಿಡುವದಿಲ್ಲ.

ಕೋಕಿಲೆ—ನಿಮ್ಮ ಕೆಲಸ. ನಾಳೆ ವೈಶಾಖದಲ್ಲಿ ಮದುವೆಗಾಗಿ ಗೊತ್ತುಮಾಡಿರುವರು. ಅವನೊಡನೆ ಮದುವೆಯಾಗುವದು ತಂದೆಯವರಿಗೂ ಬೇಕಾಗಿಲ್ಲ.

ಬಸಂತ—ಅಂದಬಳಿಕ ಕೇಳುವದೇನು ? ನಿನ್ನಾಣೆಯಾಗಿ ನಿನ್ನನ್ನೇ ಮದುವೆಯಾಗುತ್ತೇನೆ. ಕೋಕಿಲೇ ಹೋಗಿಬರುತ್ತೇನೆ. ಯಾರಾದರೂ ಕಂಡರೆ ಕೆಲಸ ಕೆಟ್ಟೀತು. ಯಾವಾಗಲೂ ನಿನ್ನ ಸೊಬಗಿನ ರೂಪನ್ನೇ ನೆನೆಯುತ್ತಿರುವೆನು ! ( ಮತ್ತೊಮ್ಮೆ ಮುದಿಟ್ಟು ಹೊರಡುವನು )

ಕೋಕಿಲೆ—(ಕುಗ್ಗಿದದನಿಯಿಂದ) ಹೋಗಿಬರ್ರಿ ಮರೆಯಬೇಡಿರಿ. ಹೋಗುವಿರಾ ? ಹೋಗಿರಿ. ( ಕೀರೆಯೊಡನೆ ಮನೆಗೆ ಹೋಗುವಳು )

# ಮೂರನೆಯ ಗುಂಪು

---

## ಮೊದಲನೆಯ ನೋಟ

(ಠಾವು ಮದನನ ಮನೆ—ಕೀರೆ, ಮದನ.)

ಮದನ—ಅದಕ್ಕಾಗಿಯೇ ನಾನು ಹೇಳಿದ್ದು.

ಕೀರೆ—ತಾವು ಹೇಳುವದರಿಂದಲೂ, ನಾನು ಕೇಳುವದರಿಂದಲೂ ಕೆಲಸವು ಕೈಗೂಡುವಹಾಗಿದ್ದರೆ, ಇಂದೇ ಆ ಕೆಲಸಕ್ಕೆ ತೊಡಗುತ್ತಿದ್ದೆನು.

ಮದನ—ಛೀ, ಹುಚ್ಚೀ ಬರಿ ಹೇಳುಕೇಳುವದರಿಂದ ಕೆಲಸವಾಗುವದೇ ?

ಕೀರೆ—ಹಾಗಂದರೆ ಏನನ್ನುವಿರೋ ಅಪ್ಪಣೆಯಾಗಲಿ.

ಮದನ—ಅನ್ನುವದೇನು? ಬಸಂತನಂತೂ ಬಗೆಸೋತಿರುವನು !

ಕೀರೆ - ಇದೇನು ! ಕೋಕಿಲೆಯೂ, ಬಗೆಸೋತಿರುವಳು !

ಮದನ—ತೀರಿತು ಉಳಿದುದೇನು ?

ಕೀರೆ—ಬಸಂತರಾಯರು ಬಿಚ್ಚುಗರು. ಹೆಂಗಳಿಗೆ ಬಗೆಗೊಡುವರಲ್ಲ !

ಮದನ—ಧಿಟಮದುವೆಯಾಗುವದಿಲ್ಲವೆನ್ನುತ್ತಿದ್ದನು. ಅವನಿಗೆ, ನಿನ್ನ ಮೂಲಕ ಆ, ನಿನ್ನ ಗೆಳತಿಯ ಗುರುತನ್ನು ಮಾಡಿಕೊಟ್ಟೆನು. ಅಂದಿನಿಂದವನು ತತ್ತರಿಸುತ್ತಿರುವನು. ನಿಮ್ಮ ಗೆಳತಿಯು ಹೇಗೆ ?

ಕೀರೆ—ಅವಳೂ ಹೀಗೆಯೇ ! ಈಗ ಏಳೆಂಟು ತಿಂಗಳಿಂದ ಬಸಂತರಾಯರನ್ನೇ ಮದುವೆಯಾಗಬೇಕೆಂದಿರುವಳು. ಮಾಧವನನ್ನು ಭಂಗಿಗುಡುಕನೆಂದು ಸೇರುವದಿಲ್ಲ.

ಮದನ—ಸಾಹುಕಾರರೇನನ್ನುವರು ?

ಕೀರೆ—ಅವರೂ ಮಾಧವನನ್ನು ಸೇರುವದಿಲ್ಲ. ನಿನಗೆ ಬೇಕಾದವರನ್ನು ಮಾಡಿಕೋ ಯೆಂದು ಹೇಳುವರು. ಪ್ರಮದಾಬಾಯಿಯು ಈ ಮಾತಿಗೆ ಮೋರೆ ಮುರುಕಿಸುವಳು.

ಮದನ—ನಿನಗೆ ಹೇಗೆ ತಿಳಿಯುವದು ?

ಕೀರೆ—ಕೋಕಿಲೆಯು ಬಸಂತನನ್ನು ಕೂಡಬೇಕೆಂದು !

ಕಂ॥ ಕುಸಿಯದೆ ಬಿಸಿಲೇರದಿರಲ್ ।
ನಸುಗಿಸೆ ದಾವರೆಯುಮತ್ತನೂರಡಿಮಿದರಂ-॥
ತೆಸೆವುದೆ? ಪೂಗಂಪಿಲ್ಲದೆ ।
ಒಸೆವುದೆ? ಕೆಂಗಂಣನಾಬಸಂತಂತೊರೆಯಲ್ ॥

ಮದನ—ಆದರೆ ಇದರಂತೆ ಬಸಂತನಿಗಿಲ್ಲವೆಂದು ತಿಳಿದೆಯಾ ?

ಕೀರೆ—ಗಂಡಸರಿಗೇನು? ಇವಳೊಲ್ಲದಿದ್ದರೆ ಇನ್ನೊಬ್ಬಳು!

ಮದನ—ಹಾಗಲ್ಲ.

ಕಂ॥ ತಂಪಿನ ಬೆಳ್ದಿಂಗಳ ಸವಿ ।
ಯಂಪೀರುತೆ ಪಾರ್ವಜೊನ್ನನಕ್ಕಿಯು ಬಿಸಿಲಾ ॥
ಬೆಣ್ಣೆಗೆ ಬಗೆ ಸೋಲುವದೇಂ ?
ಸೊಂಪಿನಯರ ಸಂಜೆ ಪೋಪುದೇಂ? ಕಡಲೆಡೆಗೇ ॥

ಇನ್ನೊಬ್ಬಳು ಕೋಕಿಲೆಗಿಂತ ಮಿಗಿಲಾಗಿದ್ದರೂ, ಅವನು ಕಣ್ಣೆತ್ತಿ ಸಹ ನೋಡನು.

ಕೀರಿ— ನಾವು ಹೀಗೆ ಮಾತಾಡುತ್ತ ಕುಳಿತರೆ ಆಗುವದೇನು ?

ಮದನ— ನೀನೇನನ್ನುವೆಯೋ ಕೇಳಬೇಕೆಂದು ಕೇಳಿದೆನು. ಕೀರೀ, ಇಲ್ಲಿಯೇ ಕುಳಿತಿರು. ಸ್ವಲ್ಪ ಕೆಲಸವಿರುವದು ಹೋಗಿ ಬರುವೆನು.

ಕೀರಿ— ಆಗಬಹುದು.

( ಮದನನು ಹೋಗುವನು )

## ಎರಡನೆಯ ನೋಟ

(ಮದನ, ಸುಂದರ ಸಾಹುಕಾರರು ಮಾತಾಡುತ್ತಾ, ಬರುವರು)

ಸುಂದರ— ಈ ಸುದ್ದಿಯನ್ನು ಇಲ್ಲಿಯವರೆಗೆ ಕೇಳಿದ್ದಿಲ್ಲ.

ಮದನ— ಅಂತೇ, ಇಂದು ತಮ್ಮನ್ನು ಕರೆದುಕೊಂಡು ಬಂದದ್ದು !

ಸುಂದರ— ನನಗೆ ತಿಳಿದಿದ್ದಿಲ್ಲ. ಅವನನ್ನು ಇಲ್ಲಿಯವರೆಗೆ ಒಳ್ಳೆವನೆಂದು ತಿಳಿದಿದ್ದೆನು.

ಮದನ—ರಾಯರೇ ಬರಿಯ ತಿಳಿಯುವದರಿಂದಾಗುವದಿಲ್ಲ.

ಸುಂದರ—ಅದಕೇ ಕೋಗಿಲೆಯು ಅವನನ್ನು ಕಂಡರೆ ಹೇಸುವಳು. ಅಂಥವಳಿಗೆ ಮಗಳನ್ನು ಕೊಟ್ಟೇನು ಅಳುವದೇ?

ಮದನ— (ತನ್ನೊಳಗೆ) ನನಗೂ ಅದೇ ಬೇಕು— ನಾನೂ ಅದನ್ನೇ ಕೇಳುತ್ತೇನಿ. ಓದುಗಲಿತವಳೂ, ಬೆಡಗಿನವಳೂ, ಆದ ಕೋಕಿಲೆಯು ಅವನನ್ನು ಕನಸ್ಸಿನಲ್ಲಿಯೂ ಕೋರಳು.

ಸುಂದರ— ಹೌದು ಯಾವಾಗಲೂ ವಲ್ಲೆನೆಂದೇ ಹೇಳುವಳು. ಇವಳದೊಂದು ಕಟಕಟೆ. ಇನ್ನೊಮ್ಮೆ ನನ್ನ ಹೆಂಡತಿಯ ಮಾತೂ ಕೇಳುವದಿಲ್ಲ.

( ಹೋಗುವರು. )

## ಮೂರನೆಯ ನೋಟ.

(ಕಾವು ಶಂಬ, ಜುಂಜ, ಶಿದ್ಧ, ಮಾಧವ— ಸುಂದರ ಪತಿದನರು)
ಪ:ರೆಹುಲ್ಲಿಗಿರುವರು.

ಶಂಬ— ಅಣ್ಣಾ, ಏಟೋತ್ತಾಯ್ತು. ಬತ್ತೀ ತಗೊಳ್ಳೊ.

ಜುಂಜ—ಹೂ ನೋ. ಅದ್ಕೆ ಮಾದಪ್ನೋರೂ ಬಂದವ್ರೆ. ಸಿದ್ದಾ ಸೀನದರ್ನ ಅದಾ ಮಾಡು. (ಸಿದ್ದನು ಹಸಿಯ ಹೊಗೆಸೊಪ್ಪನ್ನು ಹದಮಾಡಿ ಕೊಡುವನು)

ಜುಂಜ— ( ಕೊಳವಿಯಲ್ಲಿ ತುಂಬಿ ) ತಗೋ. ಎಳೆ ಒಂದು ಝುರಿ ! ( ಶಂಬನಿಗೆ ಕೊಡುವನು ).

ಶಂಬ—ಬ್ಯಾಡ ಮಾದಪ್ನೋರೆಳಿಲಿ. (ಮಾಧವನಿಗೆ ಕೊಡುವನು)

ಮಾಧವ— ( ನಾಲ್ಕೈದುಸಲ ಸೇದಿ ) ಆ. ಏನಪ್ಪ ! ಎಂತಾ ಚೆಂದಪ್ಪ ! ( ಕಣ್ಣು ಕೆಂಪಗೆ ಮಾಡಿ ಆಕಳಿಸುತ್ತ ಕೊಡುವನು. )

( ತೆರೆ ಬೀಳುವದು )

ಮದನ— ನೋಡಿದಿರಾ?

ಸುಂದರ— ದೇವರೇ, ಇಂಥಾ ಹೇಸಿಕೆಯರಿದವನಿಗೆ ಮಗಳನ್ನು ಕೊಡುವದೇ ?

ಕಂದ॥ ಬೆಡಗಿನವ ಯೊಡಲವಳಂ ಸವಿ ।
ನುಡಿಯವಳಂ ಸಂದ ಸೊಬಗಿಗೆಡೆ ಯಾದವಳಂ ॥
ಬಡನಡುವಿಂ ಬಳಕುವಳಂ ।
ಕಡುಕುಡುಕನಿಗೆಂತು ಕೊಡಲಿ ಪೊಡವಿಯೊಳಿನ್ನಾಂ ॥

ಮದನ— ಕೋಕಿಲೆಗೆ ಈ ಸುದ್ದಿಯು ಗೊತ್ತಾಗಿದೆ. ನಿಮ್ಮಂಜಿಕೆಯಿಂದ ಒಳಗೊಳಗೇ ಕೊರಗುವಳು. ನೀವನ್ನುವದೇನು ?

ಸುಂದರ— ( ತುಸು ತಡೆದು ) ನಿಮ್ಮ ಬಸವಂತರಾಯರು ಒಪ್ಪಬಹುದೇ ?

ಮದನ— ಏತಕ್ಕೆ ?

ಸುಂದರ— ಕೋಕಿಲೆಯನ್ನು ಮದುವೆಯಾಗಲಿಕ್ಕೆ.

ಮದನ— ತಡೆಯಿರಿ. ಅವನಿಲ್ಲೇ ಇರುವನು. ಕೇಳಿ ಬರುವೆನು. ( ಮರೆಗೆ ಬಂದು ) ಕೇಳುವದೇನು? ಆ ಹೊತ್ತೇ ತಿಳಿದಿರುವದು. ( ಮತ್ತೆ ಬಂದು ) ಒಪ್ಪಿದ ಹಾಗೆ ಕಾಣುತ್ತದೆ.

ಸುಂದರ— ದೇವರೇ ಮೆಚ್ಚಿದನು ! ಇನ್ನೇನು ಕೋಕಿಲೆಯ ಒಪ್ಪಿತ. ಅವಳನ್ನು ಕೇಳುವೆನು.

( ಹೋಗುವರು. )

## ನಾಲ್ಕನೆಯ ನೋಟ.

(ಮದನನ ಮನೆ—ಕೀರಿ, ಮದನರು.)

ಕೀರಿ— ಎಲ್ಲಿಗೆ ಹೋಗಿದ್ದಿ ?

ಮದನ— ಆ ಮಾಳನ ಮನೆಯ ಹತ್ತರ !

ಕೀರಿ— ಅಲ್ಲೇನು ಕೆಲಸವಿತ್ತು ?

ಮದನ— ಸಾಹುಕಾರರನ್ನು ಕರೆದುಕೊಂಡು ಹೋಗಿದ್ದೆನು !

ಕೀರಿ— ಅದೇತಕ್ಕೆ ?

( ಮದನನೇನೊ ಕಿವಿಯಲ್ಲಿ ಹೇಳುವನು. ಬಸಂತನು ಬಂದು ನಿಲ್ಲುವನು. )

ಮದನ— ( ಅಚ್ಚರಿಯಿಂದ ) ಬಾ! ಬಸಂತಾ, ನೆನೆಸಿದಾಗಳೇ ಬಂದು ನಿಂತಿ ! ಗದ್ದುಗೆಯ ಮೇಲೆ ಕುಳಿತುಕೋ. (ಗದ್ದುಗೆಯ ಮೇಲೆ ಕೂಡಿಸುವನು. ಕೀರಿಯು ಹೋಗುವಳು).

ಬಸಂತ— ಮತ್ತೇಕೆ ನೆನಿಸಿದಿರಿ ನನ್ನನ್ನು ?

ಮದನ— ನಿನ್ನ ಕೆಲಸವು ಕೈಗೂಡಿತೆಂದು !

ಬಸಂತ— ( ಕಳವಳದಿಂದ ) ನಗೆಚಾಟಿಕೆಯಾಗಿದೆ. ನನ್ನ ಕೆಲಸವು ಕೈಗೂಡಬೇಕಾದರೆ, ಮೂರುಲಾಗಾ ಹೊಡೆಯಬೇಕು. ಮೂಗು ಹಿಡಿದು ಮೂರು ವೇಳೆ ಮುಣುಗಬೇಕು. ಹುಡುಗಾಟಿಕೆಯೆ ?

ಮದನ— ಇಲ್ಲ. ಬಸಂತಾ ಸುಳ್ಳಲ್ಲ ! ಖಂಡಿತವಾಗಿ ಕೈಗೂಡುವ ಹೊತ್ತು ಬಂದಿದೆ.

ಬಸಂತ— (ಪೇಚಾಸಿಯಿಂದ) ಅದು ಹೇಗೆ?

ಮದನ— ಸುಂದರರಾಯರು ನಿನ್ನ ಒಪ್ಪಿತವನ್ನು ಕೇಳಿದರು. ನಿನಗೇ ಅವಳನ್ನು ಕೊಡಬೇಕೆಂದಿರುವರು. ನೀನು ಅಂದು ಹೇಳಿದ ಮಾತನ್ನು ತಿಳಿಸಿಬಿಟ್ಟೆ. ಆಗ ಹಿಗ್ಗಿನಿಂದ ನಿಮ್ಮ ತಂದೆಯವರೊಡನೆ ಕೇಳುವದಾಗಿ ಹೇಳಿದರು.

ಬಸಂತ— ಹೀಗಿದ್ದರೆ ಗೆದ್ದೆನು !

ಕ॥ ಬಡನಡು ಬಳುಕಿನ ಒಡಲಿನ ।
ಕಡುಚೆಲ್ವಿಕೆಯವಳ ಮಿರುಪ ಕಿರುನಗೆಮೊಗಮಂ ॥
ಪಿಡಿಯುತೆ ತಡೆಯದೆ ಗಡ ಮು- ।
ರ್ದಿಡುವೆಂ ! ಪೊಡವಿಯೊಳು ಪೊಡವಿಯೊಡೆಯನ ಕರುಳಿಂ ॥

( ತೆರೆ ಬೀಳುವದು. )

## ನಾಲ್ಕನೆಯ ಗುಂಪು

---

### ಮೊದಲನೆಯ ನೋಟ

(ಠಾವು, ಸುಂದರನ ಹಿತ್ತಲು— ಸುಂದರ, ಪ್ರಮದೆ.)

ಪ್ರಮದೆ— ಇರಲಿ ಬಿಡಿ. ನನಗೆ ತಲೆನೋವು. ನಿಮ್ಮದೇನು ಕಾಟ ?

ಸುಂದರ— ನಿನಗಾದರೂ ಹೇಗೆ ತಿಳಿಯುತ್ತದೆ ? ಭಂಗಿ ಗುಡುಕನನ್ನವಳೆಂದಿಗೂ ಒಪ್ಪುವದಿಲ್ಲ.

ಪ್ರಮದೆ—ಒಪ್ಪದೇನು? ಎಲ್ಲವೂ ನಿಮ್ಮದೇ ಮಾಟ. ಅವಳಿಗೇನು ಗೊತ್ತು ಚಿಕ್ಕ ಹುಡಿಗೆ.

ಸುಂದರ—ಈಗಿನ ಹುಡಿಗೆಯರು ಹುಡಿಗೆಯರೇ ಅಲ್ಲ!

ಪ್ರಮದೆ—ನಿಮಗೆ ಬೇಕಾದವರಿಗೆ ಕೊಟ್ಟುಕೊಳ್ಳಿ, ಹಾಗಿದ್ದರೆ, ನನ್ನನ್ನು ಮಾತನಾಡಿಸಬೇಡಿರಿ.

ಸುಂದರ— ( ಸಿಟ್ಟಿನಿಂದ ) ಕತ್ತೇ, ಬರಿ ಮಾತೇಕೆ ? ಮನೆ ಬಿಡಿಸುತ್ತೇನೆ.

ಪ್ರಮದೆ— ( ಸೋಗ ಮಾಡುತ್ತ ) ಹಾಗೆ ಮಾಡಿದರೆ ಹ್ಯಾಗೆ? ಆಗುವದು ಆಗೇ ಆಗುತ್ತದೆ. ಮೇಲೆ ನಮ್ಮ-ನಿಮ್ಮ ಮುನಿಸು.

ಸುಂದರ— ನಾನು ನಿನ್ನ ಸೋಗಿಗೆ ಒಳಗಾಗುವನಲ್ಲ ! ನಾನಂತೂ, ಬಸಂತರಾಯರಿಗೆ ಕೊಡುವದೇ ಖಂಡಿತ.

ಪ್ರಮದೆ— ಅವಳೊಪ್ಪಬೇಕಲ್ಲ ? ಮಾಧವನಿಗೂ ಕೋಕಿಲೆಗೂ ಮೊದಲಿನಿಂದ ಜೊತೆ.

( ಕೋಕಿಲೆಯು ಹೂಸರವನ್ನು ಹಿಡಕೊಂಡು ಬರುವಳು. )

ಸುಂದರ — ಕೋಕಿಲೇ, ಕೋಗಿಲೆಗೂ ಬಸಂತನಿಗೂ ಹೇಗಿರುವದು ?

ಕೋಕಿಲೆ— ಅಪ್ಪಾ, ಕೋಕಿಲೆಗೆ ಬಸಂತನು ಬಂದರೆ! ಬಲು ಹಿಗ್ಗು.

ಸುಂದರ— ಹಾಗೆಂದರೆ ಒಪ್ಪಿತವೇ ?

ಕೋಕಿಲೆ— ಅದೇತಕ್ಕಪ್ಪ ಒಪ್ಪಿತ ?

ಸುಂದರ— ಬಸಂತರಾಯರನ್ನು ಮದುವೆಯಾಗಲಿಕ್ಕೆ.

( ಕೋಕಿಲೆಯು ನಾಚಿಕೆಯಿಂದ ನಗುತ್ತ ಬರುವಳು. )

( ತೆರೆ ಬೀಳುವದು. )

ಕೋಕಿಲೆ—( ತನ್ನೊಳಗೆ ) ಇದೆಲ್ಲ ಕೀರಿ-ಮದನರು ಮಾಡಿದ ಹಂಚಿಕೆ. ಇಲ್ಲದಿದ್ದರೆ ಒಮ್ಮೆಲೇ ಯಾಕೆ ಕೇಳುವರು ! ಕೀರೀ, ನಿನಗೆ ಎಷ್ಟು ಮಣಿದರೂ ಸಾಲದು... ...

ಮಾಧವ— ( ಬಂದು ) ಏನೇ ಇನ್ನೆಂದು ಮದುವೆ ?

ಕೋಕಿಲೆ— ಯಾರಿಗೆ ?

ಮಾಧವ— ನನಗೆ-ನಿನಗೆ.

ಕೋಕಿಲೆ— ನನಗೆ-ನಿನಗೆ ? ನನ್ನನ್ನು ಕನಸಿನಲ್ಲಿಯೂ ಕಾಣಲಾರೆ!

ಮಾಧವ— ಹಾಗಾದರೆ ನೋಡು. ಈಗ ನೋಡು ಹಿಡಿಯುವೆನು. (ಹಿಡಿಯಬಟುವನು. ಕೋಕಿಲೆಯು ಚೀರುತ್ತ ಓಡುವಳು. ಓದಿಸಿದ ಸುಂದರ ಸಾಹುಕಾರನು ಬಂದು ಮಾಧವನನ್ನು ಒದೆಯುವನು.)

ಮಾಧವ—(ಗಾಬರಿಯಿಂದ) ಯಾಕೆ ಮಾವಾ, ನನಗೆ ಅವಳ್ನ ಕೊಡೋದಿಲ್ಲೇ?

ಸುಂದರ— ಕತ್ತೇ, ಮತ್ತೆ ಮೆತ್ತಬೇಕೇ? (ಹೊಡೆಯುವನು.)

ಮಾಧವ— ಸತ್ತೆ ಸತ್ತೆ. ಅಯ್ಯೋ ಕೆಟ್ಟೆ! (ಓಡುವನು.)

## ಎರಡನೆಯ ನೋಟ

ಊವ, ಬಸಂತನ ಮನೆ— ರಾಜೀವ (ಬಸಂತನ ತಂದೆ)
ಲಕ್ಷ್ಮಿ (ಬಸಂತನ ತಾಯಿ)

ಲಕ್ಷ್ಮಿ— ಜೋಯಿಸರನ್ನು ಕೇಳಿದಿರಾ?

ರಾಜೀವ— ಕೇಳಿದೆನು. ನಾಳಿನ ಸೋಮವಾರ ನೆಟ್ಟಗಿದೆಯೆಂದು ಹೇಳಿದರು.

ಲಕ್ಷ್ಮಿ— ನಮ್ಮ ಹಿಗ್ಗಿಗೆ ಮೇರೆ ಇಲ್ಲ. ಬಸಂತನು ಮದುವೆಯನ್ನೇ ಒಲ್ಲೆನೆಂದು ಕುಳಿತಿದ್ದನು.

ರಾಜೀವ— ಹೌದು. ಇದ್ದೊಬ್ಬ ಮಗನು ಒಲ್ಲೆನೆಂದರೆ ಮಾಡುವದೇನಿತ್ತು?

ಲಕ್ಷ್ಮಿ—ಸುಂದರರಾಯರು ಅಳಿಯನಿಗೇನು ಕೊಡುವರಂತೆ?

ರಾಜೀವ— ಮಗಳನ್ನು ಕೊಟ್ಟ ಮೇಲೆ ತಾವೇ ಅಡಿಯಾಳೆಂದೂ ಅಲ್ಲದೆ, ಹಣ, ಹೊಲ, ಮನೆ ಮುಂತಾದವುಗಳನ್ನು ಬಸಂತನಿಗೆ ಕೊಡುವದಾಗಿ ಹೇಳಿದರು.

ಬಸಂತ— (ಬಂದು) ಅಮ್ಮಾ, ಹಸಿವೆಯಾಗಿರುವದು. ಊಟಕ್ಕೆ ಹಾಕು ಬಾ.

ಲಕ್ಷ್ಮಿ—ಇನ್ನೇನಪ್ಪ ನಾಲ್ಕೈದು ದಿನಗಳ ತನಕ ಕೇಳುತ್ತೀ. (ನಗುವಳು)

ಬಸಂತ— ಅದೇಕಮ್ಮ? ಅಲ್ಲಿಂದ!

ಲಕ್ಷ್ಮಿ— ಅಲ್ಲಿಂದೇನು? ಹೆಂಡತಿಯು ಬರುತ್ತಾಳೆ!

ಬಸಂತ— ಬೇಗ ಬಾ. (ನಗುತ್ತ ಹೊರಟುಹೋಗುವನು.)

## ಮೂರನೆಯ ನೋಟ

ಮದನನ ಮನೆ— ಕೀರಿಯು ಕೋಕಿಲೆಗೆ ಜಡೆಹಾಕುತ್ತಿರುವಳು.

ಕೋಕಿಲೆ— ಹೌರಗೇ! ಎಷ್ಟು ಪೀಕಿಸುತ್ತೀ?

ಕೀರಿ— ಪೀಕಿದರೆ ಏನಾಗುವದು?

ಕೋಕಿಲೆ— ನೋವು.

ಕೀರಿ— ತಟಗಕ್ಕೇ ನೋವಾದರೆ ನಾಳೆ ಹೇಗೆ?

ಕೋಕಿಲೆ— ಎಲ್ಲಿ?

ಕೀರಿ— ಗಂಡನ ಮನೆಯಲ್ಲಿ!

ಕೋಕಿಲೆ— ಸಾಕು ಬಿಡು. ಕಿಡಿಗೇಡಿತನವನ್ನು ಇನ್ನೂ ಬಿಡಲಿಲ್ಲ. ನೀನು ಹೆಳಲುಹಾಕದಿದ್ದರೂ ಅಷ್ಟೇ ಹೋಯಿತು.

ಕೀರಿ— ಇಲ್ಲ. ಸಿಟ್ಟಾಗಬೇಡ. ಈ ಸಲ ನೆಟ್ಟಗಾಗಲಿಲ್ಲ. (ಬಿಚ್ಚುವಳು.)

ಕೋಕಿಲೆ— ನೆಟ್ಟಗೋ ಸೊಟ್ಟಗೋ. ಹಾಕಬಾರದೇ ಸುಮ್ಮನೆ.

(ಬಸಂತನು ಬರುವನು.)

ಬಸಂತ— ಬಾಯಿಯವರೇ, ಮದನನೆಲ್ಲಿರುವನು?

ಕೀರಿ— (ಎದ್ದು ನಿಂತು) ಕೋಕಿಲೆಯ ಮೈಸಿರಿಯಲ್ಲಿ ಅಡಗಿರುವನು.

(ಕೋಕಿಲೆಯು ಮರೆಯಾಗುವಳು.)

ಬಸಂತ— ಆ ಮದನನಲ್ಲ. ನಿಮ್ಮ ರಾಯರು. (ನಕ್ಕು) ಆ ಮದನನು ನನ್ನಲ್ಲಿಯೂ ಇರುವನು!

ಕೀರಿ— ಹಾಗೋ. ನಿಮ್ಮ ಮನೆಯ ಕಡೆಗೇ ಹೋಗುವದಾಗಿ ಹೇಳಿದರು.

(ಬಸಂತನು ನಗುತ್ತ ಕೋಕಿಲೆಯ ಕಡೆಗೆ ನೋಡಿ ಹೋಗುವನು)

## ನಾಲ್ಕನೆಯ ನೋಟ

ಬಸಂತನೂ ಕೋಕಿಲೆಯೂ ಹಸೆಯಮಣೆಯ ಮೇಲೆ ಕುಳಿತಿರುವರು.
ಊಳಿದವರು ಕೆಳಗೆ ಕುಳಿತಿರುವರು.

(ಮದನನು ಎಲ್ಲರ ಕೈಯಲ್ಲಿ ಅಕ್ಕೀಕಾಳು ಕೊಡುವನು.)

ಮದನ— ಸುಂದರರಾಯರೇ ಮಾಧವನೆಲ್ಲಿ?

ಸುಂದರ— ಬಂದಿರುವದಿಲ್ಲ. ಬಿಡಲಿ. ಅವನಿಗೇನೋ ತಲೆ ನೋವಂತೆ!

ಮದನ— ಇರಬಹುದು.

ಸುಂದರ— ಕೋಕಿಲೇ ಇನ್ನು ಏಳು.

(ಕೋಕಿಲೆಯು ಹೂ ಸರವನ್ನು ಹಿಡಿದುಕೊಂಡು ಎದ್ದುನಿಲ್ಲುವಳು)

ಕೀರಿ— ಕೋಕಿಲೆ ಒಗಟು ಹಾಕಿ ಹೆಸರು ಹೇಳು.

ಕೋಕಿಲೆ— (ನಾಚಿಕೆಯಿಂದ) ಆರಡಿಗೆ ತಾವರೆಯೇ ಅಂದ; ಕೋಕಿಲೆಗೆ ಬಸಂತನೇ ಚಂದ.

ಮದನ—ಬಸಂತಾ, ನಿನ್ನ ಬಾಯಿಂದ ಹೆಸರು ಕೇಳಬೇಕು.

ಬಸಂತ— ಗಿಳಿಗೆ ಮಾಮರವೇ ತಂಪು; ಬಸಂತನಿಗೆ ಕೋಕಿಲೆಯೇ ಸೊಂಪು.

ಕೋಕಿಲೆ— (ತನ್ನೊಳ್)

ಕಂ॥ ಪಿಡಿವೆನು ಮುಂಗುರುಳಲುಗುವ।
ಬೆಡಗಿನ ನಸುನಗೆಯ ಮೊಗವ ಪಡೆದೆಂ ಒಡಲಂ॥
ಪಿಡಿಯುತೆ ಚೆಂಮುಟ ಪೀರ್ವೆಂ।
ಪೊಡವಿಯೊಳಾಂ ಗೆಲ್ದೆನಿಂದು ಸಡಗರದಿಂದಂ॥

(ಕೋಕಿಲೆಯು ಹೂಹಾರವನ್ನು ಬಸಂತನಿಗೆ ಹಾಕುವಳು. ಎಲ್ಲರೂ, ಅಕ್ಷೀತಾಳು ಹಾಕಿ ಚಪ್ಪಳಿಕ್ಕುವರು.)

## ಆಯ್ದನೆಯ ನೋಟ.

ಕೋಕಿಲೆ, ಬಸಂತ—ಮಲಗುವ ಮನೆ

ಬಸಂತ— ಕೋಕಿಲೇ ಹೀಗೆ ಬಾ! ಸಿಟ್ಟೇಕೆ?

ಕೋಕಿಲೆ— (ತನ್ನೊಳ್) ಎಂದಿಲ್ಲದ ನಾಚಿಕೆಯು ಇಂದು ಬಂದಿರುವದು.

ಬಸಂತ— ಕೋಕಿಲೇ ಮೊದಲು ಮದುವೆಯಾಗಬಾರದೆಂದು ಮಾಡಿದ್ದೆನು. ನಿನ್ನ ನಗೆಮೊಗವನ್ನು ನೋಡಿದೊಡನೆ ಆ ಬಗೆಯು ಬಯಲಾಯಿತು. (ಕೈಹಿಡಿದು ಮುಂಗುರುಳನ್ನು ತೀಡುತ್ತಾ) ಗೆಳತೀ ನಿನ್ನ ನಸುನಗೆಯು ಮಿಸುಪ ಮೊಗಕ್ಕೆ ಬಗೆಗೊಟ್ಟೆನು. ಅದೇ ನನ್ನನ್ನೆಳೆಯಿತು.

ವೃ॥ ಮುಂಗುರುಳಿಂ ನೆಗಳ್ದ ಬಗೆಗೊಳ್ಳುವ
ಗಲ್ಲಗಳಿಂದ ಜಿಂಕೆಯಾ।
ಕಂಗಳ ಪೋಲ್ವ ಕಂಗಳಿರೆ ಚೆಂದುಟಿಯಿಂ-
ದೆಸೆವಾ ಬೆಡಂಗಿಗಿ॥
...ಮಾಮುಗುಳ್ನಗೆಯು ಕೂಡಿರೆ ಸೊಂಪಿನ
ಚೆಲ್ವುವೆತ್ತಿಹಾ॥
ಪೆಂಗಳ ಇಂಪಿನಾ ಮೊಗಕೆ ತಾಗುತೆ
ಸೋಲರೆ ಜಾಣೆ ಗಂಡಸರ್॥

(ಮುದ್ದಿಕ್ಕುವನು.)

(ತೆರೆಬೀಳುವದು.)

ಎಲ್ಲರೂ ಉಂಡುಟ್ಟು ಹಿಗ್ಗಿರಲಿ!

## ಮುಗಿದುದು.

---

## ಮನಸ್ಸಿಗೆ

॥ ವಾರ್ಧಿಕ ಷಟ್ಪದಿ ॥

ನಂದಿಸುವೆ ಕುಂದಿಸುವೆ ಭೂಷಿಸುವೆ ದೂಷಿಸುವೆ।
ಬಂಧಿಸುವೆ ಹೊಂದಿಸುವೆ ವಂಚಿಸುವೆ ಸಂಚಿಸುವೆ।
ವಂದಿಸುವೆ ನಿಂದಿಸುವೆ ತಿರುಗಿಸುವೆ ಮರುಗಿಸುವೆ ತೊಳಲಿಸುವೆ ಬಳಲುತಿರುವೆ॥

ಮುಂದಿನಲಿ ಹಿಂದಿನಲಿ ಗುಟ್ಟಿನಲಿ ರಟ್ಟಿನಲಿ।
ಮಂದಿರದಿ ಮಂದಿಯಲಿ ಕನಸಿನಲಿ ಮನಸಿನಲಿ।
ನೊಂದಿರುವೆ ತಿಳಿಯದಿಹೆ ನಿನ್ನಿರವಿನೇಳಿಗೆಯುನಾನೆಂತು ತಿಳಿವೆ ಮನವೆ? ॥೧॥

— ಸರೋಜಕನಯ.

---

# ಯೋಗಕ್ಷೇಮ

ಲೇಖಕ:— ಕವೀಶ್ವರ ಎಸ್. ಕೃಷ್ಣಪ್ಪಾ.

ಪ್ರಾಪಂಚಿಕರೀತಿಯಾಗಿ ವಿಚಾರಿಸಿ ನೋಡಿದಲ್ಲಿ ಯೋಗಕ್ಷೇಮವೆಂದರೆ ಪ್ರಪಂಚಸಂಬಂಧವಾದ ಸುಖಸಂಪದಗಳಿಂದ ಕೂಡಿರುವದು. ಮತ್ತು ಯಾವ ಕೋರಿಕೆಯು ಇಲ್ಲದೆ ಸಕಲಸಂಪತ್ತುಗಳಿಂದ ಕೂಡಿರುವದು. ಪಾರಮಾರ್ಥಿಕ ದೃಷ್ಟಿಯಿಂದ ವಿಚಾರಿಸಲು ಯೋಗದಲ್ಲಿ ಕ್ಷೇಮ, ಜೀವಾತ್ಮನನ್ನು ಪರಮಾತ್ಮನಲ್ಲಿ ಐಕ್ಯಗೊಳಿಸುವಿಕೆ ಎಂಬ ಯೋಗದಲ್ಲಿ ಕ್ಷೇಮ; ಜೀವ ಪರ ಐಕ್ಯಸ್ಥಿತಿ ಈ ಅರ್ಥಗಳನ್ನು ಕೊಡುತ್ತದೆ.

ಪ್ರಾಪಂಚಿಕ ರೀತಿಯಿಂದಲಾದರೂ ಪಾರಮಾರ್ಥಿಕ ರೀತಿಯಿಂದಲಾದರೂ ಉಭ್ರೇಯಸ್ಥಿತಿಯುಲ್ಲಿರುವದು ಸಕಲರಿಗೂ ಸಾಧ್ಯವಲ್ಲ. ಇವುಗಳು ಅನೇಕ ಅತಿ ಗೋಪ್ಯವಾದ ವಿಚಾರಗಳನ್ನೊಡಗೊಂಡಿವೆ. ಯಾರು ಆ ಗೂಢವಿಚಾರಗಳನ್ನು ಅರಿತು ಅವುಗಳನ್ನು ಆಚರಣೆಯಲ್ಲಿ ತಂದುಕೊಳ್ಳುತ್ತಾರೋ ಅಂಥವರು ಮಾತ್ರವೇ ಯೋಗಕ್ಷೇಮವೆಂಬ ಸಂಪದವನ್ನು ಸೂರಿಗೊಳ್ಳುವಂಥವರು.

ಈ ಗೂಢ ವಿಚಾರಗಳೇ ಈ ಲೇಖನದಲ್ಲಿ ವಿವರಿಸಲ್ಪಡುತ್ತವೆ.

## ಕಷ್ಟಗಳ ವಿಚಾರ

ತೊಂದರೆ, ಕಷ್ಟ, ದುಃಖ, ವ್ಯಸನ, ಚಿಂತೆ ಇವುಗಳಿಲ್ಲದ ಮನುಷ್ಯನು ಪ್ರಪಂಚದಲ್ಲಿಯೇ ಇಲ್ಲ. ಇವು ಮನುಷ್ಯನನ್ನು ನೆರಳಿನೋಪಾದಿ ಹಿಂಬಾಲಿಸುತ್ತಿರುವವು. ವ್ಯಾಧಿಗಳಿಂದ ಪೀಡಿತರಾಗದಿರುವ ಜನರೇ ಇಲ್ಲ; ಮರಣಕ್ಕೆ ತುತ್ತಾಗದ ಪ್ರಾಣಿಯೇ ಇಲ್ಲ. ಆದುದರಿಂದ ಪ್ರಪಂಚವೆಲ್ಲವೂ ಹಾಹಾಕಾರಮಯವಾಗಿರುತ್ತದೆ.

ಈ ಕಷ್ಟಪರಂಪರೆಗಳಿಂದ ದೂರರಾಗಲು, ಇವುಗಳ ಹಾವಳಿಯನ್ನು ಸ್ವಲ್ಪಮಟ್ಟಿಗಾದರೂ ಉಪಶಮನಗೊಳಿಸಲು ಜನರು ಅನೇಕಾನೇಕ ಪ್ರಯತ್ನಗಳನ್ನು ಮಾಡುತ್ತಿರುತ್ತಾರೆ. ಹೇಗೆಂದರೆ ಕುಡಕನು ಕುಡಿದು ಮತ್ತಿನಿಂದ ಬಿದ್ದಿರುತ್ತಾನೆ. ಸೂಳೆಯು ಸದಾ ವಿಷಯಸಂಬಂಧ ಸುಖದಲ್ಲಿ ಮಗ್ನಳಾಗಿರುತ್ತಾಳೆ. ಅದಕ್ಕಾಗಿಯೇ ಕೆಲವರು ಭಂಗಿಯನ್ನು ಸೇದುತ್ತಾರೆ. ಕೆಲವರು ಅಫೀಮನ್ನು ತಿನ್ನುತ್ತಾರೆ; ಕೆಲವರು ಬೀಡೀ ಚುಟ್ಟಾ ಸಿಗರೇಟುಗಳನ್ನು ಉಪಯೋಗಿಸುತ್ತಿರುತ್ತಾರೆ; ಕೆಲವರು ಅನೇಕಾನೇಕ ಮತಸಂಬಂಧವಾದ ವ್ರತಾಚರಣೆಗಳಲ್ಲಿ ಮಗ್ನರಾಗಿರುತ್ತಾರೆ. ಕೆಲವರು ಕಾಫಿ, ಟೀ, ಮುಂತಾದವನ್ನೂ ಕುಡಿಯುತ್ತಿರುತ್ತಾರೆ. ಹೀಗೆ ಮಾಡಿದರೂ ಈ ವಿಷಯಗಳೆಲ್ಲವೂ ಅವರ ಮನಸುಗಳಿಗೆ ತಾತ್ಕಾಲಿಕ ಸಮಾಧಾನವನ್ನು ಕೊಟ್ಟಿರುವ ಹಾಗೆ ಕಾಣಬಂದರೂ ಅವು ವಿಶ್ರಾಂತಿದಾಯಕಗಳಲ್ಲವು; ಪುನಃ ಪುನಃ ಅವರು ದುಃಖಗಳ ಸಂಕೋಲೆಗಳಲ್ಲಿ ಬೀಳುತ್ತಲೇ ಇರುವರು. ಈ ಪ್ರಾಪಂಚಿಕ ವಿಚಾರಗಳಲ್ಲಿ ದ್ವಂದ್ವಗಳ ಭ್ರಮವು ಇದ್ದೇ ಇರುವದು; ಹೇಗೆಂದರೆ ಸುಖವು ಎಲ್ಲಿದೆಯೋ ಅಲ್ಲಿ ದುಃಖವಿದ್ದೇ ಇರಬೇಕು; ಜನನವಿರುವ ಕಡೆ ಮರಣವಿರಬೇಕು, ಲಾಭವಿರುವ ಕಡೆ ನಷ್ಟವಿದ್ದೇ ಇರಬೇಕು, ಶೋಕವಿರುವ ಕಡೆ ಮೋಹವಿರಬೇಕು ಇತ್ಯಾದಿ.

ಮಗುವಿಗೆ ತಾನು ದೊಡ್ಡದಾಗಲಿಲ್ಲವೆಂಬ ಚಿಂತೆ, ದೊಡ್ಡವರಿಗೆ ತಮ್ಮ ಚಿಕ್ಕಂದಿನ ಸುಖಸಂತೋಷಗಳು ನಷ್ಟವಾಯಿತೆಂಬ ಚಿಂತೆ, ಬಡವನಿಗೆ ಬಡತನದ ಚಿಂತೆ, ಧನಿಕನಿಗೆ ಬಡತನವು ಎಲ್ಲಿ ಬರುವದೋ ಎಂಬ ಚಿಂತೆ. ಶಾಸ್ತ್ರಿಗಳಿಗೆ ಶಾಸ್ತ್ರವಾಸನೆ, ಜನರಿಗೆ ಲೋಕವಾಸನೆ ಮತ್ತು ದೇಹವಾಸನೆ. ಈ ಪರಿಯಾಗಿ ಜನಗಳು ಪರಿ ಪರಿ ಚಿಂತೆಗಳಿಂದ ಕೂಡಿರುವರು.

ಆದರೆ ಈ ಚಿಂತಾಸಾಗರವನ್ನು ದಾಟಲು ದಾರಿಯಿಲ್ಲವೆ? ಈ ಕಷ್ಟಪರಂಪರೆಗಳಿಂದ ನಿವೃತ್ತರಾಗಲು ಮಾರ್ಗವಿಲ್ಲವೆ? ಅಖಂಡ ಸುಖ, ಅಖಂಡ ಆನಂದ, ಅಖಂಡ ಶಾಂತಿ ಇವುಗಳು ಗಗನಕುಸುಮಗಳೇ? ಸೋದರರೇ! ಬೇಸರಪಡಬೇಡಿ ಭಗ್ನಮನೋರಥರಾಗಬೇಡಿ. ಈ ಕಷ್ಟಗಳಿಂದ ದೂರರಾಗಲು ಉಪಾಯವಿದೆ, ತೊಂದರೆಗಳ ಮತ್ತು ಕಷ್ಟಗಳ ಸರಿಯಾದ ಸ್ವಭಾವವನ್ನು ಅರಿಯುವಿಕೆಯೇ ಇವುಗಳಿಂದ ಪಾರಾಗಲು ಸುಪಥವೆಂದು ತಿಳಿಯುವರಾಗಿ.

ಕಷ್ಟಗಳು ಇಂಥಾವೆಂದು ತಿಳಿಯದಿರುವಿಕೆಯು ಉಚಿತವಾದುದಲ್ಲ. ದೇವರೇ! ಈ ಕಷ್ಟಗಳಿಂದ ನಮ್ಮನ್ನು ಪಾರು

ಮಾಡೆಂದು ಸೂಚಿಸುವದು ಯೋಗ್ಯವಲ್ಲ. ಅವುಗಳು ಏಕೆ ಪ್ರಾಪ್ತವಾದವು ? ಅವುಗಳಿಂದ ನಿವೃತ್ತರಾಗುವದೆಂತು ಎಂಬ ವಿಚಾರವನ್ನು ಕಂಡು ಹಿಡಿಯಬೇಕು. ಶ್ರೀ ಸ್ವಾಮಿ ವಿವೇಕಾನಂದರೂ ಕೂಡ ತಮ್ಮ ಕರ್ಮಯೋಗವೆಂಬ ಗ್ರಂಥದಲ್ಲಿ ಏನು ಹೇಳಿರುತ್ತಾರೆಂದರೆ: ನಿನಗೆ ಸುಳ್ಳು ಅಂದರೆ ಏನು ಎಂಬುದು ತಿಳಿಯದ ಪಕ್ಷದಲ್ಲಿ ಸುಳ್ಳನ್ನು ನುಡಿಯುವದನ್ನು ಕಲಿ ಎಂದು. ಕಷ್ಟವೆಂಬುದು ಇಂಥಾದ್ದೆಂದು ತಿಳಿದಿದ್ದರೆ ಯಲ್ಲವೆ ಮಿಕ್ಕವರು ಕಷ್ಟಪಡುತ್ತಿರುವಾಗ ಅವರ ಕಷ್ಟವೂ ಅಧಿಕ ದುಃಖಪ್ರದವೆಂದು ತಿಳಿಯಬರುವದು. ಈ ಪ್ರಪಂಚವೇ ಒಂದು ಪಾಠಶಾಲೆ. ಈ ಪಾಠಶಾಲೆಯಲ್ಲಿ ಕಷ್ಟಗಳು ಯಾವವು? ಅವುಗಳ ನಿವಾರಣೆ ಹೇಗೆ ಎಂಬುದನ್ನು ಸ್ವಾನುಭವದಿಂದಲೂ ವಿಚಾರದಿಂದಲೂ ಅರಿಯಬೇಕು. ಕಷ್ಟಗಳಿಂದಲೇ ಸುಖವುಂಟಾಗುವಿಕೆಯು, ಕಷ್ಟಗಳೇ ನಮಗೆ ಸದ್ವಿಚಾರಗಳನ್ನು ಬೋಧಿಸುವಂಥವು. ಕಷ್ಟಗಳಿಂದಲೇ ಸಹನ ಗುಣ ಉತ್ಪನ್ನವಾಗುವಿಕೆಯು; ಕಷ್ಟಗಳಿಂದಲೇ ಮಾನಸವು ಮೋಕ್ಷಪಥದಲ್ಲಿ ನಡೆಯಲು ಆರಂಭಿಸುವದು, ಕಷ್ಟಗಳನ್ನೇ ಸುಖಕಾರಿಗಳೆಂದು ತಿಳಿದಲ್ಲಿ ಯಾವತರದ ದುಃಖವೂ ಪ್ರಾಪ್ತವಾಗುವದಿಲ್ಲ; ಕಷ್ಟ, ದುಃಖಗಳು ಪ್ರಪಂಚದಲ್ಲಿರುವಿಕೆಯೇ ತಿಳಿಯಬರುವದಿಲ್ಲ.

ಪ್ರತಿ ಕಷ್ಟಕ್ಕೂ ಒಂದು ನಿವಾರಣೆಮಾಡಿಕೊಳ್ಳಬಹುದಾದ ದಾರಿ ಇದ್ದೇ ಇರುವದು. ಪ್ರತಿ ರೋಗಕ್ಕೂ ಔಷಧಿ ಇದ್ದೇ ಇರುವದು. ಆದುದರಿಂದ ಕಷ್ಟವೆಂಬುದು ಶಾಶ್ವತವಾದುದಲ್ಲ. ಅದು ಅಜ್ಞಾನದಲ್ಲಿ ಸೇರಿಕೊಂಡಿರುತ್ತದೆ. ಅಜ್ಞಾನವು ತೊಲಗಿದಲ್ಲಿ, ಜ್ಞಾನೋದಯವಾದಲ್ಲಿ ನಮಗೆ ಕಷ್ಟವೆಂಬುದೇ ಇರುವದಿಲ್ಲ. ಉದಾಹರಣೆಗಾಗಿ ಮಕ್ಕಳಿಗೆ ದೀಪದೊಂದಿಗೆ ಆಡಬೇಕೆಂಬುವ ಇಷ್ಟ. ಯಾರಾದರೂ ದೊಡ್ಡವರಿದ್ದರೆ ಅವರು ದೀಪದ ಹತ್ತರ ಹೋಗದ ಹಾಗೆ ಜಾಗ್ರತೆಯಿಂದ ನೋಡಿಕೊಂಡಿರುತ್ತಾರೆ, ಆದರೆ ಯಾರೂ ಇಲ್ಲದಿರುವ ಕಾಲದಲ್ಲಿ ಮಗುವು ದೀಪವನ್ನು ಸಮೀಪಿಸಿ ಅದರ ಅನುಭವವನ್ನು ಹೊಂದಿದಲ್ಲಿ ಪುನಃ ಎಂದಿಗಾದರೂ ದೀಪದ ಹತ್ತಿರಕ್ಕೆ ಹೋದೀತೆ? ಹೀಗೆಯೇ ದೊಡ್ಡವರ ವಿಚಾರದಲ್ಲಿಯೂ ಅರಿಯತಕ್ಕದ್ದು.

ಅಜ್ಞಾನವೇ ಅಂಧಕಾರ, ಜ್ಞಾನವೇ ಜ್ಯೋತಿ. ಮೋಡಗಳು ಸೂರ್ಯನನ್ನು ಮರೆಮಾಡುವ ಹಾಗೆ ಅಜ್ಞಾನಾಂಧಕಾರವು ಜ್ಞಾನಜ್ಯೋತಿಯನ್ನು ಮರೆಮಾಡುತ್ತದೆ. ಅಂಧಃಕಾರವು ಅಥವಾ ಅಜ್ಞಾನವು ನೆರಳಿನೋಪಾದಿ ಅಶಾಶ್ವತವಾದದ್ದು. ಆದುದರಿಂದ ಕಷ್ಟಗಳು ಶಾಶ್ವತಗಳಲ್ಲ. ನಮಗೆ ಜ್ಞಾನೋದಯವನ್ನುಂಟುಮಾಡಲು ಅವು ಬಂದೊದಗುವಿಕೆ. ಅವು ಹಿತಕಾರಿಗಳೇ ಅನ್ಯಥಾ ಅಲ್ಲ.

## ಮನಸ್ಸೇ ಬಂಧಮೋಕ್ಷಗಳಿಗೆ ಕಾರಣ

ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ।
ಬಂಧಾಯ ವಿಷಯಾಸಕ್ತಂ ಮುಕ್ತ್ಯೈ ನಿರ್ವಿಷಯಂ ಸ್ಮೃತಂ॥

—ಅಮೃತಬಿಂದು

ಮನಸ್ಸೇ ಪ್ರಪಂಚ, ಮನಸ್ಸೇ ಯಮಪುರಿ, ಮನಸ್ಸೇ ಪರಲೋಕ, ಮನಸ್ಸೇ ಮಾಯೆ, ಮನಸ್ಸೇ ಬಂಧ, ಮನಸ್ಸೇ ಮೋಕ್ಷ, ಮನಸ್ಸೇ ಸಂಕಲ್ಪ, ಮನಸ್ಸೇ ವಿಕಲ್ಪ; ಅಖಿಲ ಜಗವೂ ಮನಸ್ಸೇ; ಮನಸ್ಸನ್ನು ಬಿಟ್ಟು ಮಾಯೆಯಿಲ್ಲ; ಮಾಯೆಯನ್ನು ಬಿಟ್ಟು ಮನಸ್ಸೆಂಬುದಿಲ್ಲ. ಮನಸ್ಸೇ ಸಂಕಲ್ಪ, ಸಂಕಲ್ಪವೇ ಪ್ರಪಂಚ, ಸಂಕಲ್ಪಸಾಹಿತ್ಯವೇ ಪರಮಾರ್ಥ, ಪರಮಾರ್ಥವೇ ಮೋಕ್ಷ ಇದೇ ಇಲ್ಲಿ ಗಮನಿಸಬೇಕಾದ ಮುಖ್ಯ ಸೂತ್ರ.

ಮನಸ್ಸು ಹೇಗೆಯೋ ಮೋರೆಯೂ ಹಾಗೆಯೇ ಇರುತ್ತದೆ. ಆದುದರಿಂದಲೇ ಮುಖವೈಖರೀವಿದ್ಯೆ, ಸಾಮುದ್ರಿಕ ಶಾಸ್ತ್ರಗಳನ್ನು ಕಲಿತವರು ಒಬ್ಬ ಮನುಷ್ಯನ ಮೋರೆಯನ್ನು ನೋಡಿದೊಡನೆಯೇ ಇವನು ಇಂಥವನೆಂದು ಹೇಳುವರು. ಒಬ್ಬನ ಕಳ್ಳನೋ, ಸಾಧುವೋ, ಸಭ್ಯನೋ, ಅಸಭ್ಯನೋ, ಆಚಾರನೋ, ಅನಾಚಾರನೋ ಈ ವಿಷಯಗಳನ್ನೆಲ್ಲಾ ಮುಖವೈಖರೀವಿದ್ಯೆಯಿಂದ ಅರಿಯಬಹುದು. ಈ ಮೋರೆಯ ಲಕ್ಷಣವು ಮನೋಲಕ್ಷಣವನ್ನೂ ಅನುಸರಿಸಿ ಇರುತ್ತದೆ. ಸಾಧಾರಣವಾಗಿ ನಮಗೆ ಯಾವಶಾಸ್ತ್ರದಲ್ಲಿ ಪಾಂಡಿತ್ಯವಿಲ್ಲದಿದ್ದರೂ ಒಬ್ಬನ ಮೋರೆಯನ್ನು ನೋಡಿದೊಡನೆಯೇ ಇವನು ಬಲಾಢ್ಯನು, ಇವನು ಬಲಹೀನನು, ಇವನು ಶೋಕಿ ಎಂಬುದಾಗಿ ಹೇಳಬಲ್ಲವಲ್ಲವೆ? ಹಾಗೆಯೇ ಬಾಹ್ಯದಲ್ಲಿರುವ ಪ್ರಪಂಚದ ರೀತಿಯೂ ನಮ್ಮ ಮನಸ್ಸನ್ನನುಸರಿಸಿ ಇರುತ್ತದೆ. ತಾನು ಸುಖವಾಗಿದ್ದಲ್ಲಿ ಪ್ರಪಂಚವು ಎಷ್ಟು ಕಷ್ಟಗಳಿಗೆ ಒಳಗಾಗಿದ್ದರೂ ಅವುಗಳ ವಿಚಾರವೇ ಮನಸ್ಸಿಗೆ ಹತ್ತುವದಿಲ್ಲ. ತನ್ನ ಸುಖದಲ್ಲಿ ಮಗ್ನನಾಗಿರುತ್ತಾನೆ. ತಾನು ದುಃಖಸಾಗರದಲ್ಲಿ ಬಿದ್ದಿದ್ದಲ್ಲಿ ಪ್ರಪಂಚವು ಸುಖಸಂಪತ್ತಿನಲ್ಲಿ ಓಲಾಡುತ್ತಿದ್ದರೂ ಅವುಗಳ ವಿಚಾರವೇ ಮನಸ್ಸಿಗೆ ಹತ್ತುವದಿಲ್ಲ. ತಾನು ಸಾಧುವಾದರೆ ಪ್ರಪಂಚದಲ್ಲಿ

ರುವರೆಲ್ಲರೂ ಸಾಧುಗಳೇ. ತಾನು ದುಷ್ಟನಾಗಿದ್ದರೆ ಪ್ರಪಂಚದ ಜನರೆಲ್ಲರೂ ದುರ್ಮಾರ್ಗಿಗಳೇ ಆಗಿರುವ ಹಾಗೆ ಕಾಣಬರುತ್ತಾರೆ. ಒಂದು ಕನ್ನಡಿಯಲ್ಲಿನ ಪ್ರತಿಬಿಂಬವು ಹೇಗೆ ತನ್ನ ಅಧಿಷ್ಠಾನ ಪದಾರ್ಥವನ್ನು ಹೋಲುತ್ತಿರುವದೋ ನಮ್ಮ ಪ್ರಪಂಚವೂ ನಮ್ಮ ಮನಸ್ಸನ್ನು ಹೋಲಿರುತ್ತದೆ.

ನಮ್ಮ ಅಜ್ಞಾನದಿಂದಲೇ ದುಃಖಗಳಿಗೆ ಪಾಲಾಗುವಿಕೆ ನಮ್ಮ ದುರಾಲೋಚನೆಗಳಿಂದಲೇ, ನಮ್ಮ ಪ್ರಪಂಚವನ್ನೂ ದುಃಖಮಯವಾಗಿ ಮಾಡುವಿಕೆ. ಒಂದು ಬಾಣವನ್ನು ಕೈಯಿಂದ ಬಿಟ್ಟನಂತರ ಅದು ಗಮ್ಯಸ್ಥಾನವನ್ನು ಸೇರದೆ ಹಿಂದಕ್ಕೆ ಹೇಗೆ ಬರಲಾರದೋ ಹಾಗೆ ನಮ್ಮ ಸಂಕಲ್ಪವು ಸಾಧುವಾದುದಾಗಲಿ, ಅಸಾಧುವಾದುದಾಗಲಿ ಅದರ ಕರ್ತವ್ಯವನ್ನೂ ಮಾಡಿಯೇ ಮುಗಿಸುವದು ಅಂದರೆ ಅದರ ಫಲವನ್ನು ಕೊಡಲಿ ಕೊಡುವದು. ಆದುದರಿಂದ ಸುಖವಂತರಾಗಿ ಜೀವಿಸಲೆಳಸುವವರು ಸದಾಸತ್ಯ ಸಂಕಲ್ಪಗಳಾಗಿರಬೇಕು.

ನೀರು ನೀರಿನಲ್ಲಿ ಬೆರೆಯುವದು ಸಹಜ, ತೈಲವು ತೈಲದಲ್ಲಿ ಬೆರೆಯುವದು ಸಹಜ, ಅದೇ ರೀತಿಯಾಗಿ ಮಾನಸವು ತನಗೆ ಸಮಾನಶಕ್ತಿಯುಳ್ಳ ಬಾಹ್ಯಾಚಾರ ವ್ಯವಹಾರಗಳಲ್ಲಿ ಮಗ್ನವಾಗುತ್ತದೆ; ತನ್ನಂತೆ ಸಮಾನಮಾನಸವುಳ್ಳವರಲ್ಲಿ ಸ್ನೇಹವನ್ನೂ ಬಯಸುತ್ತದೆ. ಆದುದರಿಂದ ಸುಖೇಚ್ಛೆಗಳುಳ್ಳವರಿಗೆ ಸುಖೇಚ್ಛೆಯುಳ್ಳವರ ಸಹವಾಸವೂ, ದುರ್ಮಾರ್ಗಿಗಳಿಗೆ ದುರ್ಮಾರ್ಗಿಗಳ ಸಹವಾಸವೂ ಸುಲಭವಾಗಿ ಸಿಕ್ಕುವಿಕೆ. ಇದೇ ಮನಸ್ಸಿನಂತೆ ಪ್ರಪಂಚವಿರುವದೆಂಬ ಮಾತಿಗೆ ಅರ್ಥ.

ಬುದ್ಧದೇವನು ಏನು ಹೇಳಿರುವನು ನೋಡಿ. ಒಬ್ಬ ಮನುಷ್ಯನು ಸಂತೋಷಿಯಾಗಿರುತ್ತಾನೆ. ಏಕೆನ್ನುವಿರಾ? ಅವನು ಸದಾಸಂತೋಷಕಾರಕಗಳಿಂದ ಯೋಚನೆಗಳನ್ನು ಮಾಡುತ್ತಿರುತ್ತಾನೆ. ದುಃಖಿಯು ಯಾವಾಗಲೂ ತಾಪತ್ರಯಗಳ ಸಂಕೋಲೆಗೆ ಸಿಕ್ಕುಬಿದ್ದಿರುವದು ತನ್ನ ಮನಸ್ಸಿನ ದುಃಖಮಯಗಳಾದ ಸಂಕಲ್ಪಗಳಿಂದಲೇ. ಆದುದರಿಂದ ಸುಖಕ್ಕಾಗಲಿ ದುಃಖಕ್ಕಾಗಲಿ ಕಾರಣವು ನಮ್ಮಲ್ಲಿದೆ, ನಮ್ಮ ಅಂತರದಲ್ಲಿದೆ, ಬಾಹ್ಯದಲ್ಲಿರುವದಿಲ್ಲ. ಆದರೆ ಬಾಹ್ಯದಲ್ಲಿ ಶಬ್ದವನ್ನು ಕೇಳಿದಾಗ ಘಾಬರಿಯಾಗುವದಿಲ್ಲವೆ ಎಂದಲ್ಲ ಆಗುತ್ತದೆ ನಿಶ್ಚಯ. ಯುಕ್ತಾಯುಕ್ತ ವಿವೇಚನೆಯಿಲ್ಲದಿರುವಿಕೆಯಿಂದಲೇ ಸಕಲ ಸಂತಾಪಗಳಿಗೂ ವಾಸವಾಗುವಿಕೆ; ಬಾಹ್ಯಪ್ರಪಂಚದಲ್ಲಿಯೇ ಸಕಲ ಸುಖದುಃಖಗಳೂ ಇರುವವೆಂಬ ತಪ್ಪು ಭಾವನೆಯಿಂದಲೇ ಸಕಲ ದುಃಖಗಳ ಪಾಲಾಗುವಿಕೆ,

ಅನುಮಾನಪ್ರಕೃತಿಯುಳ್ಳವರಿಗೆ ಎಲ್ಲರಲ್ಲಿಯೂ ಅನುಮಾನವೇ. ಸುಳ್ಳುಗಾರರಿಗೆ ಎಲ್ಲರೂ ಸುಳ್ಳುಗಾರರೇ, ವ್ಯಭಿಚಾರಿಗಳಿಗೆ ಎಲ್ಲರೂ ವ್ಯಭಿಚಾರಿಗಳೇ; ಲೋಭಿಗೆ ಎಲ್ಲರೂ ಲೋಭಿಗಳೇ, ಡಾಂಭಿಕನಿಗೆ ಋಷೀಶ್ವರರೆಲ್ಲರೂ ಭಿಕ್ಷುಕರೇ ಹೀಗೆಯೇ! ನಮ್ಮ ಮನೋಭಾವವನ್ನು ಅನುಸರಿಸಿ ಪ್ರಪಂಚದ ಸ್ಥಿತಿಯನ್ನೂ ನಾವು ಅರಿಯುವಿಕೆಯು. ಆದರೆ ಈ ವಿಚಾರವನ್ನು ತಿಳಿದು ತಮ್ಮ ಮಾನಸಗಳನ್ನೂ ಸತ್ಯಸಂಕಲ್ಪಗಳಿಂದ ಮಾತ್ರವೇ ಕೂಡಿದವುಗಳನ್ನಾಗಿಮಾಡಿ ಸತ್ಯಪಥದಲ್ಲಿ ನಡೆಯುತ್ತಿದ್ದಲ್ಲಿ ಪ್ರಪಂಚವೇ ಸ್ವರ್ಗವಾಗಿ ಕಂಡುಬರುವದರಲ್ಲಿ ಸಂದೇಹವಿಲ್ಲ. ನಮ್ಮ ಮಾನಸವೆಂಬ ಕನ್ನಡಿಯು ಎಷ್ಟು ಶುಭ್ರವಾಗಿರುತ್ತದೆಯೋ ಅದರಲ್ಲಿ ಪ್ರತಿಫಲಿಸುವ ಬಿಂಬವೂ ಅಂದರೆ ಪ್ರಪಂಚವು ಅಷ್ಟು ಶುಭ್ರವಾಗಿ ನಮಗೆ ಕಾಣಬರುತ್ತದೆ. ಆದುದರಿಂದಲೇ ಮಾನಸವನ್ನೂ ಸತ್ಯಸಂಕಲ್ಪಗಳಿಂದ ಕೂಡಿದುದನ್ನಾಗಿಯೂ, ವೃತ್ತಿರಹಿತವಾಗಿಯೂ ಮಾಡಬೇಕೆಂದು ವಿದ್ಯಾರಣ್ಯರೇ ಮೊದಲಾದ ಮಹನೀಯರು ಪಂಚದಶಿ ಆದಿಯಾದ ಪ್ರಬಲಶಾಸ್ತ್ರಗಳಲ್ಲಿ ಹೇಳಿರುವರು. ನಮ್ಮ ಮನಸ್ಸು ಎಷ್ಟು ಸುಸಂಕಲ್ಪಗಳಿಂದ ಕೂಡಿರುವದೋ ಅಷ್ಟು ಮಾತ್ರ ಮುಕ್ತಿ ಸೋಪಾನವನ್ನು ಆರೋಹಣಮಾಡಿರುವೆವು. ಮತ್ತು ಅಷ್ಟುಮಾತ್ರ ದುಃಖಗಳು ದೂರವಾಗುವವು.

## ಸಿಕ್ಕುಗಳಿಂದ ಉಪಾಯವಾಗಿ ಬಿಡಿಸಿಕೊಳ್ಳುವಿಕೆ.

### ಅಥವಾ

### ಸಂತಾಪ ಶಮನ ಮಾರ್ಗ

ದುಃಖವು ನಮ್ಮ ನೈಜಸ್ವಭಾವವಲ್ಲ. ಅದು ಕಂಡು ಕಾಣಿಸದೆ ಹೋಗುವ ನೆರಳಿನೋಪಾದಿ. ನಾವು ಸ್ವಭಾವತಃ ಸುಖಸ್ವರೂಪರು. ಪ್ರಾರಬ್ಧಾನುಸಾರವಾಗಿ ಸಕಲ ಸುಖದುಃಖಗಳೂ ಪ್ರಾಪ್ತವಾಗುವಿಕೆ, ದೈವಿಕ ಆಜ್ಞೆಗೆ ವಿರುದ್ಧವಾಗಿ ನಡೆಯುವದು ಯಾರಿಗೂ ಸಾಧ್ಯವಲ್ಲ. ಹಿಂದೆ ಮಾಡಿದ ಕರ್ಮಗಳನ್ನು ಮಾಡಲಿಲ್ಲವೆನ್ನುವದಕ್ಕಾಗುವದಿಲ್ಲ. ಯಾರನ್ನೂ ಮೋಸಗೊಳಿಸಿ ಸಾಧಿಸಲಾಗುವದಿಲ್ಲ. ಅವುಗಳ ಫಲಗಳಿಂದ ತಪ್ಪಿಸಿಕೊಳ್ಳಲಾಗುವದಿಲ್ಲ. ಬೆಂಕಿಯಲ್ಲಿ ಕೈಯಿಟ್ಟಲ್ಲಿ ಸುಡುತ್ತದೆ. ಏನು ಮಾಡಿದರೂ ಕೈಯಿಟ್ಟ ನಂತರ ಸುಡಿಸಿಕೊಳ್ಳದಿರಲಾಗುವದಿಲ್ಲ. ಹಾಗೆಯೇ ದ್ವೇಷ, ಕೋಪ, ಅಸೂಯೆ, ಮದ,

ಮಾತ್ಸರ್ಯ ಇತ್ಯಾದಿ ಮನೋವಿಕಾರಗಳು. ಇವೂ ಬೆಂಕಿಯೋಪಾದಿಯೇ. ಇವುಗಳಿಗೆ ವಶನಾದ ಮೇಲೆ ಅವುಗಳಿಂದ ಲಭಿಸಬಹುದಾದ ದುಷ್ಟಫಲಗಳನ್ನೂ ಅನುಭವಿಸಿಯೇ ತೀರಬೇಕಾಗುವದು. ಆದರೆ ತತ್ಪ್ರತಿಯಾಗಿ, ಪ್ರೀತಿ, ಶಾಂತಿ, ಸದ್ಭಾವನೆ, ಶುಚಿತ್ವ ಇತ್ಯಾದಿಗಳನ್ನು ಮಾನಸದಲ್ಲಿ ನೆಲೆಪಡಿಸಿದಲ್ಲಿ ಅವುಗಳ ಪರಿಣಾಮವು ಶಾಂತಯುಕ್ತವಾಗಿಯೂ, ಸಂತೋಷಜನಕವಾಗಿಯೂ ಇರುತ್ತವೆ.

ಸಕಲ ದುಃಖಗಳ, ಸಕಲಸಂತಾಪಗಳ ಕಾರಣವು ನಮ್ಮಲ್ಲಿಯೇ ಇರುತ್ತದೆ. ಈ ಆಂತರಂಗಿಕ ವಿಚಾರವನ್ನು ಅರಿತು ಸುಖಸಂಬಂಧವಾದ ಕಾರಣದಲ್ಲಿಯೇ ಮನವನ್ನಿಟ್ಟಲ್ಲಿ ಶಾಂತಿ ಸುಖವು ದುಃಖವಿಲ್ಲದ ಅಖಂಡ ಸುಖವು ಲಭಿಸುವದರಲ್ಲಿ ಸಂದೇಹವಿಲ್ಲ.

ಪ್ರಾರಬ್ಧವನ್ನು ಎಂದಿಗೂ ದೂರಬೇಡ. ಜ್ಞಾನಿಗಳಿಗೆ ಪ್ರಾರಬ್ಧವೂ ಕೂಡ ತೊಂದರೆಪಡಿಸಲಾರದೆಂದು ಕೇಳಿರುವಿಯಲ್ಲವೆ. ಅಖಂಡ ಆನಂದವನ್ನು ಪಡೆದಾಗ ಪ್ರಾರಬ್ಧ ವಿಚಾರವಾದ ಯೋಚನೆಯೇ ಬಾರದು; ಅದರ ಸುಖಾಸುಖ ಫಲಗಳು ಅಜ್ಞಾನಿಗಳಿರುವ ಹಾಗೆ ಅಷ್ಟು ಬಂಧನೀಯಗಳಾಗಿರುವದಿಲ್ಲವು. ಪ್ರಾರಂಭದಲ್ಲಿ ಈ ಜ್ಞಾನಮಾರ್ಗವನ್ನು ಅವಲಂಬಿಸುವದು ಅತಿ ಕಷ್ಟಕರವಾಗಿ ಕಾಣಬರುವದು. ಆದರೆ ಕ್ರಮೇಣ ಅದರ ಸುಖವು ಗೋಚರವಾಗದೆ ಇರಲಾರದು. ಆ ಸುಪಥವಲ್ಲಿ ನಡೆಯ ಹತ್ತಿದಾಗ ನಿನ್ನಲ್ಲಿಯೇ ಪರಮಾರ್ಥ ಶಕ್ತಿಯು ಅಧಿಕವಾಗಲಿಕ್ಕೆ ಹತ್ತುವದು. ಮಹನೀಯರು ನಿನಗೆ ತಿಳಿಯದೆಯೇ ನಿನ್ನಲ್ಲಿಗೇ ಬರುವರು. ಪುಸ್ತಕಗಳು ಮೊದಲಾದ ಸಾಧನಗಳು ನೀನು ತೊರದೆಯೇ ನಿನ್ನಲ್ಲಿಗೆ ಬರುವವು.

ನಿನ್ನ ಅಂತರಾತ್ಮನ ಬೋಧೆಯಂತೆ ಕೆಲಸಗಳನ್ನು ಮಾಡುವನಾಗು. ದೈವದಲ್ಲಿ ದೃಷ್ಟಿಯಿಟ್ಟು ಕರ್ಮಾಚರಣೆಗಳಲ್ಲಿ ಪ್ರವೃತ್ತನಾಗು. ಅಸ್ವಾರ್ಥಪರತೆಯು ಸಂಪೂರ್ಣವಾಗಿರಲಿ. ಪರರು ನಮ್ಮನ್ನು ಯಾವ ಬಗೆಯಿಂದ ನೋಡಬೇಕೆಂದು ಇಚ್ಛಿಸುವೆವೋ ಆ ಬಗೆಯಿಂದ ನಾವು ಅವರನ್ನು ನೋಡುವರಾಗೋಣ. ಆಗ ಯಾವ ಸಿಕ್ಕುಗಳೂ ಬಂದೊದಗಲಾರವು. ಹಾಗೆ ಬಂದೊದಗಿದರೂ ಅವುಗಳಿಂದ ಸುಲಭವಾಗಿ ತಪ್ಪಿಸಿಕೊಳ್ಳುವೆವು ಮತ್ತು ಯಾವ ವಿಧವಾದ ಬಾಧೆಯೂ ನಮಗೆ ಸಂಭವಿಸಲಾರದು.

## ಮನೋಜಯ

ಮನೋಬಲವೇ ಬಲ, ಮನೋಶಕ್ತಿಯೇ ಶಕ್ತಿ, ಇವನ್ನು ಸರಿಯಾದ ಮಾರ್ಗದಲ್ಲಿ ಉಪಯೋಗಿಸಿದಲ್ಲಿ ಸಕಲ ಸುಖಗಳೂ ಪ್ರಾಪ್ತವಾಗುವವು; ದುರ್ಮಾರ್ಗದಲ್ಲಿ ಉಪಯೋಗಿಸಿದಲ್ಲಿ ಅನೇಕ ಅನರ್ಥಗಳು ಪ್ರಾಪ್ತವಾಗುವವು. ಮನಸ್ಸನ್ನು ವಿಷಯಗಳ ಕಡೆ ನೆಲೆಗೊಳಿಸಿದಲ್ಲಿ ಬಂಧನಗಳಿಗೆ ಕಾರಣವಾಗುವದು. ನಿರ್ವಿಷಯವಾಗಿ ಮಾಡಿದಲ್ಲಿ ಮೋಕ್ಷವು ಲಭಿಸುವದು. ಮನೋಬಲದಿಂದಲೇ ಭೂತಜಯವಾಗುವದು, ಮನೋಬಲದಿಂದಲೇ ದೇಹಬಲ, ಇಂದ್ರಿಯಬಲಗಳುಂಟಾಗುವಿಕೆ. ಮನೋಬಲದಿಂದಲೇ ಆತ್ಮಾರಾಮ ದರ್ಶನವಾಗುವಿಕೆ. ಆದುದರಿಂದಲೇ ಮನಸ್ಸು ಜಯಿಸಿದವನೇ ಮನುಷ್ಯನು; ಅವನೇ ಪುರುಷಾರ್ಥಗಳನ್ನೂ ಪಡೆಯುವನೆಂದು ಹಿರಿಯರು ಹೇಳುವರು. ಮನಸ್ಸನ್ನು ಏಕಾಗ್ರತೆಯಲ್ಲಿ ನಿಲ್ಲಿಸಿದಲ್ಲಿ ಎಷ್ಟು ಆನಂದವಾಗಿರುವದೆಂಬ ವಿಚಾರವನ್ನು ಒತ್ತಿ ಹೇಳಬೇಕಾಗಿಲ್ಲ. ಪ್ರಾಪಂಚಿಕ ಕಾರ್ಯವನ್ನು ಯಾವದನ್ನಾಗಲಿ ಮಾಡಬೇಕಾಗಿದ್ದಲ್ಲಿ ಸಂಪೂರ್ಣ ಮನಸ್ಸಿನಿಂದ ಮಾಡಿದಲ್ಲಿ ಆ ಕಾರ್ಯವು ಎಷ್ಟು ಸಂಪೂರ್ಣವಾಗಿರುವದು. ಸೂರ್ಯ ಕಿರಣಗಳನ್ನು ಭೂತಕನ್ನಡಿಯ ಸಹಾಯದಿಂದ ಒಂದೇ ಕಡೆ ನೆಲೆಗೊಳ್ಳುವ ಹಾಗೆ ಮಾಡಿದಲ್ಲಿ ಶಕ್ತಿಯನ್ನು ಸುಟ್ಟು ಹಾಕುವಷ್ಟು ಶಕ್ತಿಯನ್ನು ಪಡೆಯುತ್ತದೆ. ಹಾಗೆಯೇ ಮಾನಸವನ್ನು ಅದರ ಸ್ವಾಭಾವಿಕ ಚಂಚಲ ಸ್ವಭಾವದಿಂದ ತಪ್ಪಿಸಿ ಏಕ ಮುಖವಾಗಿ ಮಾಡಿದಲ್ಲಿ ಅದರ ಬಲವು ಅತ್ಯಧಿಕವಾಗಿ ಅತ್ಯಂತ ಕಠಿಣ ಕಾರ್ಯಗಳನ್ನು ಕೂಡ ಮಾಡಲು ಶಕ್ತಿಯುಳ್ಳದ್ದಾಗುವದು. ಈ ಗುಟ್ಟನ್ನು ತಿಳಿಯದೆ, ಈ ಮನೋಬಲದ ವಿಚಾರವನ್ನು ತಿಳಿಯದೆ, ಅದನ್ನು ಏಕ ಮುಖವಾಗಿ ಮಾಡದೆ ಮಿಕ್ಕ ಯಾವ ಪ್ರಯತ್ನ ಮಾಡಿದರೂ ಅದರಿಂದ ಲೇಶವೂ ಸೌಖ್ಯವಿಲ್ಲ.

ಮನಸ್ಸನ್ನು ಏಕಮುಖವಾಗಿ ಮಾಡುವದು ಸುಲಭಕಾರ್ಯವಲ್ಲ. ಮನೋನಿಗ್ರಹ—ಮಾರ್ಗದರ್ಶನಿಯಲ್ಲಿ ಹೇಳಿರುವ ಸಾಧನಗಳನ್ನು ಸಾಧಿಸಿದಲ್ಲಿ ಮಾತ್ರವೇ ಸಾಧ್ಯವು. ಮನಸ್ಸಿನ ಶಕ್ತಿಯಲ್ಲಿ ನಂಬುಗೆಯಿರಬೇಕು. ಪಾರಮಾರ್ಥದ ಪಥದಲ್ಲಿ ಮುಂದೆ ಮುಂದೆ ನಡೆಯಬೇಕೆಂಬ ಕುತೂಹಲವಿರಬೇಕು. ಡಂಭ, ದರ್ಪ, ಅಹಂಕಾರಾದಿಗಳಿಗೆ ಮನಸ್ಸಿನಲ್ಲಿ ಸ್ಥಳವನ್ನು ಕೊಡಕೂಡದು. ಭಯವೆಂಬುದೇನೋ ಇರಲೇಕೂಡದು.

ಆಶಾವರ್ಜಿತನಾಗಿರಬೇಕು. ನಿಷ್ಕಾಮಬುದ್ಧಿಯು ಸಂಪೂರ್ಣವಾಗಿರಬೇಕು. ಶಾಂತಸ್ವಭಾವವಿರಬೇಕು. ಆಗಲೇ ಮನೋಜಯವು ಸಾಧ್ಯವು.

ಸಂಧ್ಯಾಕಾಲಗಳಲ್ಲಿ ದೇವತೋಪಾಸನೆಯನ್ನು ಮಾಡಬೇಕೆಂದು ಹಿರಿಯರು ವಿಧಿಸಿರುವರಷ್ಟೇ. ಇದರ ಉದ್ದೇಶವೇನು ಕಂಡಿರುವಿರಾ ? ಆ ಸಮಯದಲ್ಲಿ ಅಷ್ಟು ಉಷ್ಣವೂ ಅಷ್ಟು ಸೀತವೂ ಇಲ್ಲದೆ ಸಮಶಾಖವುಳ, ಹಿತಕರವಾದ ತಂಗಾಳಿಯು ಬೀಸುತ್ತಿರುವದರಿಂದ ಅಂಥ ಸಮಯದಲ್ಲಿ ಮಾನಸವನ್ನು ಅಂತರ್ಮುಖವಾಗಿ ಮಾಡಿ ಧ್ಯಾನಮಾಡಲಾರಂಭಿಸಿದಲ್ಲಿ ಅದು ಸುಲಭಕಾಲದಲ್ಲಿ ಏಕಾಗ್ರತೆಯನ್ನು ಹೊಂದುವದೆಂದು.

ಅಭ್ಯಾಸಿಗಳು ಸಕಾಲದಲ್ಲಿ, ಸದ್ಭಾವದಿಂದ, ಏಕಾಂತಸ್ಥಳದಲ್ಲಿ ಧ್ಯಾನಮಾಡಲುಪಕ್ರಮಿಸಬೇಕು. ಅನ್ಯಥಾ ಮನೋಜಯವು ಅಸಾಧ್ಯವು. ಹಠಯೋಗಪ್ರದೀಪಿಕೆಯಲ್ಲಿಯೂ ಅಭ್ಯಾಸಿಗಳು ಆಹಾರನಿಯಮ, ಆಸನನಿಯಮಗಳುಳ್ಳವರಾಗಿರಬೇಕೆಂದೂ, ಅವರು ಮೌನತ್ರಯಗಳನ್ನು ಕ್ರಮವಾಗಿ ಅಭ್ಯಾಸಮಾಡಬೇಕೆಂದೂ ಹೇಳಿರುತ್ತದೆ.

ಈ ಅಭ್ಯಾಸವನ್ನು ಮಾಡುತ್ತ ಬಂದಲ್ಲಿ ತನಗೆ ಪ್ರಾಪಂಚಿಕ ಸಂಬಂಧವಾದ ಎಷ್ಟು ಕಷ್ಟಗಳಿದ್ದರೂ ನಿಧಿಧ್ಯಾಸಸ್ಥಿತಿಯಲ್ಲಿ ಆ ಕಷ್ಟಗಳು ಯಾವವೂ ಗೋಚರವಾಗುವದಿಲ್ಲ. ಧ್ಯಾನದಿಂದ ಬಹಿರ್ಮುಖರಾದರೂ, ಆ ಅಂತರಂಗಸುಖವನ್ನೇ ಹೊಂದುವ ಮನಸ್ಸು ಬರುವದೇ ವಿನಾ ಪ್ರಾಪಂಚಿಕ ವ್ಯವಹಾರಗಳಲ್ಲಿ ಮಗ್ನರಾಗಲು ಮನಸ್ಸು ಒಗ್ಗುವದಿಲ್ಲ. ಈ ಸ್ಥಿತಿ ಸಂಪ್ರಾಪ್ತವಾದಾಗ ಮನಸ್ಸನ್ನು ಸುಪಥದಲ್ಲಿ ತಂದಿರುವೆವೆಂದು ಅರಿಯಬಹುದು. ಆ ಮನಸ್ಸನ್ನು ಸದಾ ಅದೇ ಹಾದಿಯಲ್ಲಿ ಬಿಟ್ಟದ್ದಲ್ಲಿ ಮೋಕ್ಷವು ಆ ಜನ್ಮದಲ್ಲಿಯೇ ಲಭಿಸುವದು. ಇದೇ ಮನೋಬಲ. ಮನೋಬಲವನ್ನು ಸರಿಯಾಗಿ ವಿನಿಯೋಗಮಾಡುವದರಿಂದ ಮೋಕ್ಷವು ಸಿದ್ಧವು; ದುರ್ವಿನಿಯೋಗಮಾಡಿದಲ್ಲಿ ನರಕವು ಸತ್ಯವು.

ಶತ್ರುಗಳಿದ್ದರೆ ದುಃಖ. ನಮ್ಮಲ್ಲಿ ಕಾಮಾದಿ ಶತ್ರುಗಳಿದ್ದರೆ ನಮಗೆ ದುಃಖವು ಸಿದ್ಧವು. ಈ ಕಾಮಾದಿಗಳನ್ನು ಸನ್ಮಾರ್ಗದಲ್ಲಿ ಎಳೆದಲ್ಲಿ ಅವು ನಮ್ಮ ವಶದಲ್ಲಿರುವಾಗ ನಮ್ಮ ಆಜ್ಞೆಗೆ ವಿರುದ್ಧವಾಗಿ ಯಾವ ಕಾರ್ಯವನ್ನೂ ಮಾಡಲಾರವು; ಅಂದರೆ ಸೇವಕರೋಪಾದಿ ನಮ್ಮ ಅಧೀನದಲ್ಲಿರುವವು. ನಾವೇ ಯಜಮಾನರಾಗಿರುವ ಕಾಲದಲ್ಲಿ ನಮಗೆ ಸುಖವೇ ಲಭಿಸುವದು ಸತ್ಯವು.

## ಶ್ರೇಯಸ್ಸಿನ ಗುಟ್ಟು

ಸಕಲಸುಖದುಃಖಗಳಿಗೂ ಮನೋಧರ್ಮವೇ ಮೂಲವು. ನಾವು ದೃಢಕಾಯರೆಂದೂ, ನಿರೋಗಿಗಳೆಂದೂ, ನಾವು ಕೈಕೊಂಡ ಕಾರ್ಯವು ಸಫಲವಾಗುವದೆಂದೂ, ನಾವು ಶಕ್ತಿವಂತರೆಂದೂ, ನಾವು ಯಾವಕಾರ್ಯವನ್ನಾದರೂ ಮಾಡಬಲ್ಲೆವೆಂದೂ ಮನೋನಿಶ್ಚಯವುಳ್ಳವರಾಗಿದ್ದಲ್ಲಿ, ತದ್ರೀತಿಯಾಗಿ ನಾವು ಧೃಢಕಾಯರಾಗಿಯೂ ನಿರೋಗಿಗಳಾಗಿಯೂ ಶಕ್ತಿವಂತರಾಗಿಯೂ ಇರುವೆವು. ಹಾಗಲ್ಲದೆ ಮಾನಸವಲ್ಲಿ ಅಲ್ಲಸಲ್ಲದ ಸಂದೇಹಗಳನ್ನಿಟ್ಟುಕೊಂಡು ಸದಾ ಯೋಚನಾಪರಂಪರೆಗಳಲ್ಲಿ ಮುಳುಗಿದ್ದಲ್ಲಿ ನಮಗೆ ದುಃಖಸಾಗರವೇ ಗತಿ. ಮನಸ್ಸನ್ನು ಜಯಿಸಿದವನೇ ಪ್ರಪಂಚವನ್ನೆಲ್ಲಾ ಜಯಿಸಿದವನೆಂದು ಹೇಳುವರು. ಇಂದ್ರಿಯಗಳನ್ನು ಜಯಿಸಿದವನೇ ಶೂರನೆನ್ನುವರು. ಕಂಡಿರಾ ! ಮನಸ್ಸನ್ನು ಶುಭೇಚ್ಛೆಗಳಲ್ಲಿಯೂ ದೈವಿಕಚಿಂತನೆಯಲ್ಲಿಯೂ ನಿಲ್ಲಿಸಿದ್ದಲ್ಲಿ ಅದು ಸಕಲ ಶ್ರೇಯಗಳನ್ನುಂಟುಮಾಡುವದಲ್ಲದೆ ಮೋಕ್ಷವನ್ನೂ ಕೊಡುವದು. ಇಲ್ಲದಿದ್ದರೆ ಅಂಧಃಕೂಪದಲ್ಲಿಯೇ ಬಿದ್ದು ನರಳುತ್ತಿರಬೇಕಾಗುವದು.

ಸಕಲ ಅನರ್ಥಗಳಿಗೂ ಮನವೇ ಮೂಲವು. ರಾಮನು ರಾಜ್ಯವಾಳುತ್ತಿದ್ದ ಕಾಲದಲ್ಲಿ ಯಾರೂ ಚಿಕ್ಕಂದಿನಲ್ಲಿ ಪಂಚತ್ವವನ್ನು ಹೊಂದುತ್ತಿದ್ದಿಲ್ಲವೆಂದೂ ಎಲ್ಲರೂ ಸುಖಸಂಪದಗಳಿಂದ ಕೂಡಿರುತ್ತಿದ್ದರೆಂದೂ ರಾಮಾಯಣದಲ್ಲಿ ಬರೆದಿರುವದಲ್ಲವೇ. ಇದರ ಅರ್ಥವೇನು ? ಆಗಿನ ಕಾಲದ ಜನಗಳು ಸದಾ ದೇವಧ್ಯಾನಪರಾಯಣರಾಗಿರುತ್ತಿದ್ದದ್ದರಿಂದಲೂ, ಪ್ರಾಪಂಚಿಕವಿಷಯಗಳಲ್ಲಿ ಮಾನಸವನ್ನು ಈಗಿನವರ ಹಾಗೆ ನೆಲೆಗೊಳಿಸದೆ ಇರುತ್ತಿದ್ದದ್ದರಿಂದಲೂ ಅವರ ಮಾನಸವು ಅನರ್ಥಪರಂಪರೆಗಳ ಕಡೆ ಹೋಗಲು ಅವಕಾಶವಿರುತ್ತಿದ್ದಿಲ್ಲ; ಆದುದರಿಂದ ಆಗಿನ ಕಾಲದವರು ಯಾವ ಕಷ್ಟಗಳಿಗೂ ಸಿಕ್ಕದೆ ಸುಖಸಾಮ್ರಾಜ್ಯದಲ್ಲಿ ಮುಳುಗಿದ್ದರು.

ದೇಹದ ಆರೋಗ್ಯವೇ ಮನಸ್ಸಿನ ಆರೋಗ್ಯವು; ಮನಸ್ಸಿನ ಆರೋಗ್ಯವೇ ದೇಹದ ಆರೋಗ್ಯವು. ಆದುದರಿಂದ ನಾವು ಮಾನಸವನ್ನು ಸದ್ಭಾವನೆಯಲ್ಲಿ ನಿಲ್ಲಿಸಿರಬೇಕು; ದ್ವೇಷ, ಅಸೂಯ, ಡಂಭ, ದರ್ಪ, ಅಹಂಕಾರಗಳಿಗೆ ಅವಕಾಶವನ್ನು ಕೊಡಕೂಡದು. ದೈವಿಕಚಿಂತನೆಯಲ್ಲಿಯೋ, ಪರೋಪಕಾರ ವಿಚಾರದಲ್ಲಿಯೇ ಮಾನಸವನ್ನು ನಿಲ್ಲಿಸಬೇಕು, ಅನುಮಾನ

ವೆಂಬುದನ್ನು ದೂರವಾಗಿ ತಳ್ಳಿಬಿಡಬೇಕು. ಆಗಲೇ ಮಾನಸವು ಸ್ವಸ್ಥತೆಯಲ್ಲಿರಲು ಅವಕಾಶವಾಗುವದು. ಮಾನಸವು ಯಾವಾಗ ರೋಗರಹಿತವಾಗಿರುವದೋ ದೇಹವೂ ಆರೋಗ್ಯವಂತವಾಗಿರಲು ಅವಕಾಶವಾಗುವದು.

ಮನಸ್ಸಿಗೂ ದೇಹಕ್ಕೂ ಇರುವ ಸಂಬಂಧವು ಈ ಸಣ್ಣ ಕಥೆಯಿಂದ ವ್ಯಕ್ತವಾಗುವದು. ಒಂದೂರಿನಲ್ಲಿ ಒಬ್ಬನಿದ್ದನು. ಅವನು ಅಗಾಧವಾದ ವ್ಯಾಧಿಯಿಂದ ತಪಿಸುತ್ತಿದ್ದನು. ಅನೇಕ ಔಷಧಗಳನ್ನು ಸೇವಿಸಿದ್ದಾಯಿತು; ತೀರ್ಥ ಯಾತ್ರೆಗಳನ್ನು ಮಾಡಿದ್ದಾಯಿತು; ದೇವರಿಗೆ ಹರಿಕೆಯನ್ನು ಮಾಡಿಕೊಂಡಿದ್ದಾಯಿತು; ಆದರೆ ಏನು? ಅಣುಮಾತ್ರವೂ ಸುಖವು ಕಾಣಬರಲಿಲ್ಲ, ವ್ಯಾಧಿಯು ಉಲ್ಬಣ ಸ್ಥಿತಿಗೆ ಬರಲಿಕ್ಕೆ ಹತ್ತಿತು. ಇವನ ಯೋಚನೆಗಂತೂ ಪಾರವಿಲ್ಲದೆ ಹೋಯಿತು. ಹೀಗಿರುವ ಕಾಲದಲ್ಲಿ ಒಂದುದಿನ ಇವನಿಗೆ ಸ್ವಪ್ನದಲ್ಲಿ ದೇವದೂತರಲ್ಲೊಬ್ಬನು ಪ್ರತ್ಯಕ್ಷನಾಗಿ "ಅಯ್ಯಾ, ನನ್ನ ಜತೆಯಲ್ಲಿ ಬಾ; ಇಲ್ಲಿಗೆ ಸಮೀಪದಲ್ಲಿ ಒಂದು ಪುಣ್ಯ ಕ್ಷೇತ್ರವಿದೆ. ಅಲ್ಲಿರುವ ಪುಷ್ಕರಣಿಯಲ್ಲಿ ಸ್ನಾನಮಾಡು; ನಿನ್ನ ವ್ಯಾಧಿಯು ಪಲಾಯನವಾಗುವದು" ಎಂದು ಹೇಳಿ, ಅವನನ್ನು ಜತೆಯಲ್ಲಿ ಕರೆದುಕೊಂಡು ಹೋಗಿ ಆ ಸ್ಥಾನವನ್ನು ನೋಡಿಸಿದನಂತೆ. ಆಗ ಅವನು ಅದರಲ್ಲಿ ಸ್ನಾನವನ್ನೂ ಮಾಡಿ ಮೇಲಕ್ಕೆ ಬರಲು ಆ ಸೋಪಾನಗಳ ಮೇಲೆ ಎಲ್ಲೆಲ್ಲಿಯೂ "ತ್ಯಾಗ" ಎಂಬುದಾಗಿ ಬರೆದು ಇದ್ದಿತಂತೆ. ಅನಂತರ ಅವನು ಎಚ್ಚೆತ್ತು, ತನ್ನ ಸ್ವಪ್ನ ವೃತ್ತಾಂತವನ್ನು ಮಾನಸದಲ್ಲಿ ಇಟ್ಟುಕೊಂಡವನಾಗಿ ಆ ದಿವಸದಿಂದ ರೋಗಸಂಬಂಧವಾದ ಯೋಚನೆಯನ್ನು ತನ್ನ ಮಾನಸದಿಂದ ದೂರಮಾಡಲು ಉಪಕ್ರಮಿಸಿದನಂತೆ. ಅದರಿಂದ ಕೆಲವು ದಿನದಲ್ಲಿಯೇ ಅವನು ನಿರೋಗಿಯಾದನಂತೆ. ಕಂಡಿರಾ ಸದ್ಭಾವನೆಯ ಪರಿಣಾಮ.

ಪ್ರಾಪಂಚಿಕ ವಿಚಾರವನ್ನೂ ಯಾವದನ್ನೂ ಅಷ್ಟಾಗಿ ಮನಸ್ಸಿಗೆ ಹಚ್ಚಿಕೊಳ್ಳಕೂಡದು. ಸೋಮಾರಿಯಾಗಿರಕೂಡದು. ಸದಾ ಯಾವದಾದರೂ ಸತ್ಕಾರ್ಯವನ್ನು ಮಾಡುತ್ತಿರಬೇಕು. ಮನೋಶಾಂತತ್ವದಿಂದ ದೇಹವೂ ಶಾಂತತೆಯನ್ನು ವಹಿಸುವದು; ನಮ್ಮ ಕಾರ್ಯಗಳೂ ಶಾಂತಸ್ವಭಾವವನ್ನೇ ವಹಿಸುವವು. ಶಾಂತಿಯು ಪರ್ವತಕ್ಕಿಂತ ದೊಡ್ಡದಾದುದರಿಂದ ಎಲ್ಲಾ ವಿಚಾರಗಳಲ್ಲಿಯೂ ನಮಗೆ ಶಾಂತಿಸುಖವೇ ಲಭಿಸುವದು. ಈ ಸುಖವನ್ನು ಪಡೆದವನೇ "ಶಾಂತಿಃ ಶಾಂತಿಃ ಶಾಂತಿಃ ಎಂಬ ಶಾಂತಿ ಮಂತ್ರವನ್ನು ಪಠಿಸಲು ಅಧಿಕಾರಿಯು. ಈ ಅಧಿಕಾರವನ್ನು ಪಡೆಯುವದರಿಂದಲೇ ಸಕಲ ಶ್ರೇಯಗಳೂ ಸ್ವತಃ ಸಿದ್ಧಿಸುವಿಕೆ ಇದೇ ಶ್ರೇಯಸ್ಸಿನ ಗುಟ್ಟು.

## ಅಖಂಡ ಸುಖ

ಎಲ್ಲರೂ ಸುಖವನ್ನು ಬಯಸುವರೇ; ಬಯಸಿದಷ್ಟೂ ದುಃಖವೇ ಪ್ರಾಪ್ತವಾಗುವದು. ಬಡವನಿಗೆ ಐಶ್ವರ್ಯದ ಚಿಂತೆ; ಐಶ್ವರ್ಯದಿಂದ ಸುಖವು ಪ್ರಾಪ್ತವಾಗುವದೆಂದು ಅವನ ಭಾವನೆ. ಹಣವಂತರಿಗೆ ಬಡತನವೆಲ್ಲಿ ಪ್ರಾಪ್ತವಾಗುವದೋ ಎಂಬ ಚಿಂತೆ; ಕೋರಿಕೆಗಳು ಅತಿಶಯವಾದ ಹಾಗೆಲ್ಲಾ ಅವುಗಳ ಸಂಕೋಲೆಗಳಲ್ಲಿ ಬಿದ್ದು ನರಳುತ್ತಿರುವಿಕೆ. ಅವರಿಗೂ ಸುಖವಿಲ್ಲ. ಇದರಿಂದ ಬಾಹ್ಯವಸ್ತುಗಳನ್ನು ಪಡೆದಿರುವಿಕೆಯಿಂದ ಸುಖವೂ ಅವುಗಳ ಸಾಹಿತ್ಯದಿಂದ ದುಃಖವೂ ಪ್ರಾಪ್ತವಾಗುವವೆಂಬ ಮಾತು ಅಸಮ್ಮತವು. ಹಾಗಿದ್ದ ಪಕ್ಷದಲ್ಲಿ ಬಡವರು ದುಃಖಿಗಳಾಗಿಯೂ, ಹಣವಂತರು ಸುಖಿಗಳಾಗಿಯೂ ಇರಬೇಕಾಗುವದು. ಆದರೆ ಪ್ರಪಂಚದಲ್ಲಿ ಹಾಗೆ ಕಾಣಬರುವದಿಲ್ಲ. ಅನೇಕರು ಬಡವರಾಗಿದ್ದರೂ ಸಂತೋಷದಿಂದ ಕೂಡಿರುವದನ್ನೂ, ಹಣವಂತರು ದುಃಖಿಗಳಾಗಿರುವದನ್ನೂ ನಾವು ಕಣ್ಣಾರೆ ನೋಡುತ್ತಿದ್ದೇವೆ. ಆದುದರಿಂದ ಸುಖವಂತರಾಗಲು ಏನು ಮಾಡಬೇಕು ?

(೧) ತೃಪ್ತಿಯೇ ಸುಖಕ್ಕೆ ಬೇರು, (೨) ಅಸ್ವಾರ್ಥಪರತೆ ಮತ್ತು ತ್ರಿಕರಣಶುದ್ಧಿಗಳೇ ಸುಖಸಾಧನಗಳು. ಆದುದರಿಂದಲೇ ಹಿರಿಯರು ಆಶಾ ಪರಮಂದುಃಖಂ ನಿರಾಶಾ ಪರಮಂಸುಖಂ ಎಂದು ಹೇಳಿರುವದು. (೩) ಸುಖೇಚ್ಛೆಗಳಲ್ಲಿ ಮಾನಸವನ್ನೂ ನಿಲ್ಲಿಸುವದೇ ಸುಖವು. (೪) ಪರೋಪಕಾರ ಬುದ್ಧಿಯೇ ಸುಖಹೇತುವು. (೫) ಮನೋನಿಗ್ರಹವೇ ಅನಂತ ಸುಖಕಾರಿಯು (೬) ಪ್ರಾಪಂಚಿಕ ವಿಷಯಗಳಿಂದ ಮಾನಸವನ್ನೂ ದೂರಮಾಡಿ ಪಾರಮಾರ್ಥದಲ್ಲಿ ಮನಸ್ಸನ್ನು ನೆಲೆಗೊಳಿಸುವದೇ ಅಖಂಡ ಸುಖವನ್ನು ದಯಪಾಲಿಸುವದು.

ಪ್ರಪಂಚ ಸುಖಗಳು ಖಂಡಗಳು; ಶಾಶ್ವತಗಳಲ್ಲ; ಕಂಡು ಬಂದು, ಕೆಲವುಕಾಲ ಇದ್ದಹಾಗೆ ಇದ್ದು ನಾಶವಾಗುವಂಥವು. ಅವುಗಳು ನೆಚ್ಚಲು ಅಯೋಗ್ಯಗಳು, ಪಾರಮಾರ್ಥ ಸುಖವು ಅಖಂಡವಾದದ್ದು, ಅದ್ವಿತೀಯವಾದದ್ದು; ಅನಿಂದ್ಯವಾದದ್ದು, ಅಪ್ರತಿಹತವಾದದ್ದು, ಶಾಶ್ವತವಾದದ್ದೂ; ಮನೋನಿಗ್ರಹದಿಂದ ಪರಮಾತ್ಮದರ್ಶನವನ್ನು ಗೈದ ಮಹನೀಯರೇ ಇಂಥ

ಅಖಂಡಸುಖವನ್ನು ಅನುಭವಿಸುತ್ತಿರುವದು. ವಿಷಯ ಲೋಲತ್ವವು ಇದಕ್ಕೆ ಶತ್ರುವು. ಸುಖಸ್ವರೂಪನಾದ ಪರಮಾತ್ಮನನ್ನು ಅರಿಯುವದರಿಂದಲೇ ಅಖಂಡ ಸುಖವನ್ನು ಅನುಭವಿಸಬಹುದಾಗಲಿ, ಇದಕ್ಕೆ ಮತ್ತೆ ಯಾವ ಮಾರ್ಗವೂ ಇಲ್ಲ. ಆದುದರಿಂದ ಆ ಸ್ಥಿತಿಯನ್ನು ಪಡೆಯುವದಕ್ಕೆ ಮಾತ್ರವೇ ಸಕಲರೂ ಪ್ರಯತ್ನಿಸಬೇಕಾದದ್ದು.

## ಐಶ್ವರ್ಯ ಸೋಪಾನ

ಸುಖವು ಬಾಹ್ಯಪದಾರ್ಥವಲ್ಲ; ಅಂತರಂಗಿಕವಾದದ್ದು. ಸತ್ಯ, ನ್ಯಾಯ, ಅಸ್ವಾರ್ಥಪರತೆ, ಮನೋವಾಕ್ಕಾಯಗಳಲ್ಲಿ ಮಾಲಿನ್ಯರಹಿತವಾಗಿರುವಣ, ಈ ಗುಣಗಳಿರುವವರಿಗೆ ಮಾತ್ರ ಇದು ಸಾಧ್ಯವು. ದುರಾಶವಂತನು ಕೋಟ್ಯಾಧೀಶ್ವರನಾಗಬಹುದು; ಆದರೂ ಅವನಿಗೆ ಸುಖಸಂತೋಷಗಳಿರುವದಿಲ್ಲ. ಬಾಹ್ಯದಲ್ಲಿ ಐಶ್ವರ್ಯವಂತನಾಗಿದ್ದರೂ ಅಂತರದಲ್ಲಿ ಅವನು ಹಿರಣ್ಯಾಕ್ಷನೇ ಅಂದರೆ ಬಡವನೇ ಹೌದು. ಅಲ್ಲದೆ ಪ್ರಪಂಚದಲ್ಲಿ ಅವನಿಗಿಂತ ಐಶ್ವರ್ಯವಂತರಿರುವಕಾರಣದಿಂದ ಅವನಿಗೆ ಕೊರತೆಯೇ ಇರುತ್ತದೆ. ಆದುದರಿಂದ ತೃಪ್ತಿಯೇ ಐಶ್ವರ್ಯವು, ಅಸಂತುಷ್ಟಿಯೇ ಬಡತನವು ಎಂಬ ಅಂಶವು ಸ್ಥಿರವಾಗುತ್ತದೆ.

ಪ್ರಪಂಚವು ಸಕಲವಿಧಗಳಾದ ಪದಾರ್ಥಗಳಿಂದ ತುಂಬಿರುತ್ತದೆ. ಇಲ್ಲಿ ಒಳ್ಳೇ ವಸ್ತುಗಳೂ ಇವೆ; ಕೆಟ್ಟ ವಸ್ತುಗಳೂ ಇವೆ. ಹೀಗಿದ್ದರೂ ಜನಗಳು ಸದಾ ಏನಕೇನ ಪ್ರಕಾರೇಣ ಧನ, ಗೃಹ, ಆರಾಮಾದಿಗಳನ್ನು ಸಂಪಾದಿಸಲು ತಮ್ಮ ಯಾವಚ್ಛಕ್ತಿಯನ್ನೂ ಉಪಯೋಗಿಸುತ್ತಿರುವದನ್ನೂ ನೋಡಿದಲ್ಲಿ ಮಹದಾಶ್ಚರ್ಯವಾಗುತ್ತದೆ. ಇದೇ ಸ್ವಾರ್ಥಪರತೆಯೆನ್ನುವದು. ಇದೇ ಸರ್ವನಾಶಕಾರಿಯಾದದ್ದು.

ದೇವರು ಇದು ಅದು ಎಂದು ಇಲ್ಲದೆ ಸಕಲ ಪದಾರ್ಥಗಳನ್ನೂ ನಮ್ಮ ಉಪಯೋಗಕ್ಕಾಗಿ ಕೊಟ್ಟಿದ್ದರೂ, ನಮ್ಮ ಅಸ್ವಾರ್ಥಪರತೆಯು ಎಷ್ಟುಮಟ್ಟಿಗಿರುವದೆಂದರೆ ನಾವು ದೈವಿಕ ನಿಯಮಗಳನ್ನುಲ್ಲಂಘಿಸಿ ಸ್ವಾರ್ಥಪರರಾಗುತ್ತಿದ್ದೇವೆ.

ಪ್ರಾಪಂಚಿಕ ಐಶ್ವರ್ಯವು ಕ್ಷಣಿಕವಾದದ್ದು. ಪಾರಮಾರ್ಥ ಐಶ್ವರ್ಯವು ಶಾಶ್ವತವಾದದ್ದು. ಶಾಶ್ವತವಾದ ಐಶ್ವರ್ಯವನ್ನು ಹೊಂದುವದು ಒಳ್ಳೇಯದಲ್ಲವೆ? ಆದುದರಿಂದ ಪಾರಮಾರ್ಥ ಐಶ್ವರ್ಯವನ್ನು ಪಡೆಯಲು ಮಾತ್ರವೇ ಸಕಲರೂ ಪ್ರಯತ್ನಿಸಬೇಕು. ಪಾರಮಾರ್ಥ ಸೋಪಾನಗಳನ್ನು ಆರೋಹಣ ಮಾಡುವದರಿಂದ ಈ ಐಶ್ವರ್ಯವನ್ನು ಸುಲಭವಾಗಿ ಪಡೆಯಬಹುದು.

## ತುಂಬಿಗೆ !

ಈ ಬನದ ಬಳಿಗೆ ಬರಬೇಡ ಬಲ್ಪಾಸೆಯಿಂ ।
ನೀ ಬರಿದೆ ಹೇ ತುಂಬಿ! ಹಂಬಲಿಸಬೇಡ ॥
" ತೋಟ ಶೃಂಗಾರ ತಿರುಳೊಳು ಗೋಣಿಸೊಪ್ಪು" ಹೊರ-!
ನೋಟದಿಂ ಮನಸೋತು ಮೈಮರೆಯಬೇಡ ॥
ಕೋಟೆಗೇತಕೆ ? ಕೊಳ್ಳೆಯಿಡುವೆ ಹಾಳಾದ, ಮರು- ।
ಳಾಟಿಗೆಯೆ! ವ್ಯರ್ಥ ನೀ ಭ್ರಮಿಸಬೇಡ ॥ ೧ ॥

ಬಳ್ಳಿಯಿದೆ; ಹೂವಿಲ್ಲ; ಹಳ್ಳವಿದೆ, ನೀರಿಲ್ಲ; ।
ಸಲ್ಲಲಿತಕಾಸಾರಕರನಿಂದವಿಲ್ಲ ॥
ಫುಲ್ಲಕುಸುಮಂಗಳಾವಳಿಗೆ ಪರಿಮಳವಿಲ್ಲ ।
ಚೆಲ್ವಾಗಿ ಬೆಳೆದ ದೇಹದೊಳಾತ್ಮವಿಲ್ಲ ॥ ೨ ॥

ಬಾಡಿದವು ಪೂಬಳ್ಳಿಗಳ್ ತಪನ ಕಿರಣದಿಂ- ।
ದೋಡಿದುವು ಪಕ್ಕಿಗಳ್ ಪರಿತಾಪದಿಂದ ॥
ನೋಡರಾರೀ ಕಡೆಗೆ ಕಣೆತ್ತಿ ಹಾಯ್! ಕರಿಯ ।
ಕಾಡಾಯ್ತು ನಾಡಿಗರ ನಂದನೋದ್ಯಾನಂ ॥ ೩ ॥

ಮಧುವ ಸವಿಯುವೆನೆಂದು ಮುದದಿ ನೀ ಬಂದೆಯಾ ? ।
ಮಧುಕರನೆ! ನಿನಗೆ ಮಧುವೆಲ್ಲಿಂದ ತರಲಿ ?॥
ಹೃದಯವನದೊಳ್ ಪ್ರೇಮಸುಮಗಳಿಂ ಸೇಖರಿಸಿ ।
ಮಧುರವಾಣಿಯ ಮಧುವಸದಿಗೊ ! ನೀಡುವೆನು ॥ ೪ ॥

೪—೪೮೬೯ —ನರಸಿಂಹತನಯ.

# ಕೈಗೆ ಬಂದದ್ದು ಬಾಯಿಗೆ ಇಲ್ಲ

ಲೇಖಕ:—ನಾ. ಶ್ರೀ. ಯು. ಬೆಂಗಳೂರು.

ರಘುನಾಥರಾವ್ ಸಾಹೇಬರ ಹೆಸರು ತಿಳಿಯದವರು ಚನ್ನ ಪುರಿಯಲ್ಲಿ ಯಾರೂ ಇರಲಿಲ್ಲ. ಅವರ ಮನೆತನವು ಬಹು ಪುರಾತನವಾದುದು. ಬಹು ಬಲಶಾಲಿಗಳೆಂದೂ, ಪರಾಕ್ರಮಿಗಳೆಂದೂ ಅವರನ್ನು ತಿಳಿದ ಜನರು ಹೇಳುತ್ತಿದ್ದರು.

ರಘುನಾಥರಾಯನ ವಿಷಯವಾಗಿ ಆ ಊರಿನಲ್ಲಿ ಎಲ್ಲರೂ ಮರುಕ ಗೊಳ್ಳುವರು. ಯಾತಕ್ಕೆಂದರೆ, ದೇವರು ಅವನಿಗೆ ಐಶ್ವರ್ಯದಲ್ಲಿ ಏನೂ ಕಮ್ಮಿ ಮಾಡಿಲ್ಲದೇ ಇದ್ದರೂ, ಅವರಿಗೆ ಆಪ್ತರು ಯಾರು ಇರಲಿಲ್ಲ. ಆಪ್ತರು ಯಾರೂ ಇಲ್ಲದಿದ್ದರೂ ಮನುಷ್ಯನಿಗೆ ಅಷ್ಟು ದುಃಖವಾಗಲಾರದು. ಜನಗಳು ಅವನ ವಿಷಯವಾಗಿ ಅಷ್ಟು ಮರುಗುವುದಿಲ್ಲ. ಆದರೆ ರಘುನಾಥರಾಯನಲ್ಲಿ ದೈವವು ಬಹು ದೊಡ್ಡ ಕ್ರೂರ ಕೃತ್ಯವನ್ನು ನಡಿಸಿದ್ದಿತು. ರಘುನಾಥರಾಯನು ಬಾಲ್ಯದಲ್ಲಿ ಸ್ಫುರದ್ರೂಪಿಯಾಗಿಯೇ ಇದ್ದನು. ಅವನಿಗೆ ೭–೮ ವರ್ಷ ವಯಸ್ಸಾಗಿದ್ದಾಗ, ತನ್ನ ಮನೆಗೆ ಅಕಸ್ಮಾತ್ತಾಗಿ ಬೆಂಕಿ ಬಿದ್ದು, ದೊಡ್ಡವರು ತಮ್ಮ ತಮ್ಮ ಪ್ರಾಣರಕ್ಷಣೆಗೆಂದು, ಇತರರ ಯೋಗಕ್ಷೇಮವನ್ನು ವಿಚಾರಿಸಿದೆ ಓಡಿಹೋಗುತ್ತಿದ್ದಾಗ, ಒಂದು ಮಗುವು ಅಳುವ ಶಬ್ದವನ್ನು ಕೇಳಿ, ಬಾಗಿಲಿನವರಿಗೂ ಬೆಂಕಿಯು ಆವರಿಸಿಕೊಂಡು ಬಂದಿದ್ದರೂ, ಲೆಕ್ಕಿಸದೆ, ತನ್ನ ಪ್ರಾಣವನ್ನು ತೃಣೀಕರಿಸಿ, ಅವನು ಆ ಮಗುವನ್ನು ಅಗ್ನಿಯ ಬಾಯಿಯಿಂದ ರಕ್ಷಿಸಿದನು. ಮಗುವೇನೋ ಬದುಕಿತು. ರಘುನಾಥರಾಯನ ಮುಖವು ಸೀದುಹೋಗಿ ಅದರ ಮೇಲೆ ಒಂದು ದೊಡ್ಡ ಕರೀಮಚ್ಚೆಯು ಪ್ರಾಪ್ತವಾಗಿ ಪೂರ್ವದ ಸೌಂದರ್ಯವೆಲ್ಲವನ್ನೂ ಹಾಳುಮಾಡುದಲ್ಲದೆ ಮುಖವನ್ನು ಬಹು ಕ್ರೂರವಾಗಿಯೂ, ಕುರುಪಿಯಾಗಿಯೂ ಮಾಡಿಬಿಟ್ಟಿತು.

ಪ್ರಾಣರಕ್ಷಣೆ ಮಾಡಿದುದಕ್ಕೆ ದೈವವು ಮಾಡಿದ ಪ್ರತ್ಯುಪಕಾರವು—ಅಲ್ಲ ಪ್ರತಿಕಾರವು ಇದೇ. ಅಂದಿನಿಂದ ರಘುನಾಥರಾಯನಿಗೆ ಜನರಲ್ಲಿ ಮುಖತೋರಲು ಅವಮಾನ.

ಹಿಂದಿನ ಜನ್ಮದಲ್ಲಿ ಮಾಡಿದ ಕರ್ಮಕ್ಕೆ ಈ ಜನ್ಮದಲ್ಲಿ ಈ ರೀತಿಯಾದ ಕಷ್ಟವನ್ನು ಅನುಭವಿಸಬೇಕಾಯಿತು.—ಎಂದು ಮನಸ್ಸಿನಲ್ಲಿ ಭಾವಿಸಿಕೊಂಡನು. ಜನರು ಅವನ ಮುಖವನ್ನು ನೋಡಿದೊಡನೆಯೇ ತೊನ್ನುರೋಗವುಳ್ಳ ಮನುಷ್ಯನನ್ನು ಕಂಡರೆ ದೂರಹೋಗುವಂತೆ ಹೋಗುವರು. ಚಿಕ್ಕಮಕ್ಕಳು ಮುಖವನ್ನು ನೋಡಿ ಹೆದರಿಕೊಳ್ಳುವರು.

ಈ ಸಂಕಟಗಳನ್ನು ತಡೆಯಲಾರದೆ ರಘುನಾಥರಾಯನು ಬಾಲ್ಯದಲ್ಲೇ ಊರು ಬಿಟ್ಟು ದೇಶಾಂತರ ತಿರುಗುತ್ತಿದ್ದನು. ಅವನಿಗೆ ಮುವ್ವತ್ತು ವರ್ಷಗಳಾದಮೇಲೆ, ತಂದೆಯು ಸತ್ತನೆಂದೂ, ಆ ತಂದೆಯ ಆಸ್ತಿಗೆಲ್ಲಾ ಇವನೇ ಏಕಮಾತ್ರ ಸತ್ವಾಧಿಕಾರಿಯೆಂದೂ ದೂರದೇಶದಲ್ಲಿದ್ದ ಇವನಿಗೆ ಸಮಾಚಾರ ಬಂದಿತು.

ಕೂಡಲೆ ತನ್ನೂರಿಗೆ ಬಂದು ತಂದೆಯ ಉತ್ತರಕ್ರಿಯಾದಿಗಳನ್ನೆಲ್ಲಾ ಸರಿಯಾಗಿ ಮಾಡಿ, ಆಸ್ತಿಯನ್ನು ನೋಡಿಕೊಳ್ಳುವುದಕ್ಕೆ ಯೋಗ್ಯನಾದ ಒಬ್ಬ ಮನುಷ್ಯನನ್ನು ಗೊತ್ತುಮಾಡಿ ಒಂದು ಹಳ್ಳಿಯಲ್ಲಿ ತನ್ನ ವಾಸಕ್ಕೆ ಒಂದು ಮನೆಯನ್ನು ಕಟ್ಟಿಸಿಕೊಂಡು, ವರ್ಷಕ್ಕೆ ಆರು ಏಳು ತಿಂಗಳು ಸಂಚಾರವೂ, ಉಳಿದ ಕಾಲದಲ್ಲಿ ತನ್ನ ಹಳ್ಳಿಯ ಮನೆಯಲ್ಲಿ ಒಬ್ಬರನ್ನೂ ನೋಡದೆ, ಒಬ್ಬರ ಸಂಗಡ ಮಾತನಾಡದೆ, ಏಕಾಂಗಿಯಾಗಿ ಇರುತ್ತಿದ್ದನು.

ಆಸ್ತಿಯು ಯಥೇಷ್ಟವಾಗಿದ್ದರೂ ರಘುನಾಥರಾಯನ ಮನಸ್ಸಿನಲ್ಲಿ ಒಂದು ದೊಡ್ಡ ಕೊರತೆಯಿದ್ದಿತು. ಅವನಿಗೆ ಜನಗಳ ಸಮೂಹವು ಬೇಕು. ಪವಿತ್ರವಾದ ಪತ್ನಿಯ ಪ್ರೇಮವು ಬೇಕು. ಅದು ಸಿಗುವುದು ಹೇಗೆ? ತನ್ನ ಮುಖವನ್ನು ನೋಡಿದರೆ ಎಲ್ಲರೂ ದೂರ ಸರಿಯುವರು. ಹೀಗಿರುವಲ್ಲಿ ತನ್ನ ಸೌಂದರ್ಯಕ್ಕೆ ಮೆಚ್ಚಿ ತನ್ನನ್ನು ಮದುವೆಯಾಗುವ ರಮಣಿಯು ಈ ಲೋಕದಲ್ಲಿರುವಳೇ? ಹಣವನ್ನು ಖರ್ಚುಮಾಡಿದರೆ ಧನ ಮೋಹಕ್ಕೊಳಗಾಗಿ ಯಾರಾದರೂ ಅವನನ್ನು ಮದುವೆಯಾಗಬಹುದು. ಆದರೆ ಆ ಪವಿತ್ರ ಪ್ರೇಮವು ದೊರಕುವದೇ! ಆ ದುಡ್ಡಿನ ಮೋಹದಿಂದ ಬಂದ ಹೆಣ್ಣು ದುಡ್ಡಿಗೆ ಆಶೆಪಡುವಳಲ್ಲದೇ ತನ್ನಲ್ಲಿ ಪ್ರೀತಿಯಿಡುವುದಿಲ್ಲ. ಪ್ರೀತಿಯನ್ನು ಕೊಳ್ಳಲು ಸಾಧ್ಯವೇ?

ತಾನು ಏನೋ ಪಾಪಮಾಡಿದುದರಿಂದಲೋ ತನಗೆ ಈ ರೀತಿ ಒಂಟಿಯಾಗಿ, ಜನಗಳ ಸಮೂಹದಿಂದ ಬಹಿಷ್ಕೃತನಾಗಿ ಕಾಲಕಳೆಯುವ ಶಿಕ್ಷೆಯು ಉಂಟಾಗಿರುವದು. ಅವಕ್ಕೆ ಯಾರನ್ನೂ ನಿಂದಿಸಿ ಫಲವಿಲ್ಲ.—ಎಂಬ ಈ ಯೋಚನೆಗಳಿಂದ ರಘುನಾಥರಾಯನು ಕುಗ್ಗಿ ಹೋಗಿ ಕೊರಗುತ್ತಿದ್ದನು. ತನ್ನ ತಂದೆಯು ಕಾಲಕ್ಕಿಂತಲೂ, ಸದ್ವಿನಿಯೋಗಕ್ಕಾಗಿ ಹಣವನ್ನು ಜಾಸ್ತಿಯಾಗಿ ಖರ್ಚು ಮಾಡುತ್ತಿದ್ದನು. ಅವನ ಔದಾರ್ಯವನ್ನು ಎಲ್ಲರೂ ಹೊಗಳುವರೇ, ಆದರೆ ಯಾರೂ ಅವನ ಸಂಗಡ ಸೇರರು.

ಈ ಮನೋವ್ಯಥೆಯಿಂದಲೇ ರಘುನಾಥರಾಯನು ಹಳ್ಳಿಯಲ್ಲಿ ಏಕಾಂಗಿಯಾಗಿ ವಾಸಿಸುತ್ತಿದ್ದನಲ್ಲದೆ ಆ ಹಳ್ಳಿಯಲ್ಲೂ ವರ್ಷಕ್ಕೆ ಐದು ಆರು ತಿಂಗಳಿಗಿಂತ ಹೆಚ್ಚುಕಾಲ ವಾಸಿಸುತ್ತಿರಲಿಲ್ಲ. ಮಿಕ್ಕ ವೇಳೆಯಲ್ಲಿ ಊರಬಿಟ್ಟು ಸಂಚರಿಸುತ್ತಿದ್ದನು.

ಒಂದು ಸಲ ತನ್ನ ಸಂಚಾರದಿಂದ ವಾಪಸು ಬಂದು, ತನ್ನ ಹಳ್ಳಿಯ ಮನೆಗೆ ಹೋದಾಗ ತನ್ನ ಮನೆಯ ಸಮೀಪದಲ್ಲಿದ್ದ ಒಬ್ಬ ಮುದುಕಿಯ ಮನೆಗೆ ಯಾರೋ ಒಬ್ಬರು ಅಪರಿಚಿತರು ಬಂದರೆಂದು ರಘುನಾಥರಾಯನಿಗೆ ತಿಳಿಯಿತು. ಈ ಅಪರಿಚಿತರು ಪುರುಷರೋ, ಸ್ತ್ರೀಯರೋ, ಆವನಿಗೆ ತಿಳಿಯಲಿಲ್ಲ. ಯಾರಾದರೂ ಆಗಲಿ, ಈ ಅಪರಿಚಿತರು ಬಂದು ತನ್ನ ಏಕಾಂತವನ್ನು ಭಂಗಮಾಡಿದರಲ್ಲಾ ಎಂಬುದೊಂದೇ ಅವನ ಕೋಪ. ಆದರೆ ಮಾಡುವದೇನು? ಊರಲ್ಲಿ ಹೇಳುವುದು? ಬಂದವರನ್ನು ಊರಿನಿಂದ ಆಚೆಗೆ ಓಡಿಸಿ ಬಿಡುವುದು ಯಾವ ಧರ್ಮ. ತನ್ನ ಪಾಲಿಗೆ ತಾನು ಎಚ್ಚರಿಕೆಯಿಂದ ಇದ್ದರೆ ಯಾರೂ ತನ್ನ ಏಕಾಂತವನ್ನು ಭಂಗಪಡಿಸರು, ಎಂದುಕೊಂಡು ಅಂದಿನಿಂದ ತನ್ನ ಮನೆಯ ಸುತ್ತಲೂ ವಿಶಾಲವಾಗಿದ್ದ ತೋಟದಲ್ಲಿ ಸಂಚರಿಸಲು ಪ್ರಾರಂಭಮಾಡಿದನು. ರಘುನಾಥರಾಯನು ಇಷ್ಟು ಪ್ರಯತ್ನಗಳ ಮಾಡಿದರೂ ದೈವವು ಅವನ ಪ್ರಯತ್ನಗಳನ್ನು ನಿಷ್ಫಲಮಾಡಿತು. ದೈವವು ಮೊದಲಿನಿಂದಲೂ ಅವನಿಗೆ ಪ್ರತಿಕೂಲ.

ಒಂದು ದಿನ ಸಾಯಂಕಾಲ ಐದು ಘಂಟೆಯಲ್ಲಿ, ರಘುನಾಥರಾಯನು ಎಂದಿನಂತೆ, ಯೋಚನಾಪರನಾಗಿ ತನ್ನ ತೋಟದಲ್ಲಿ ಸಂಚಾರಮಾಡುತ್ತ ಇದ್ದನು. . ಅವನು ಯೋಚನಾಪರನಾಗಿದ್ದುದರಿಂದ ತೋಟದಲ್ಲಿ ತಾನು ಎಲ್ಲಿ ಸಂಚಾರಮಾಡುತ್ತಾ ಇದ್ದನೋ ಎಂಬುದೂ ತೋಟದಲ್ಲಿ ಇನ್ನಾರಾದರೂ ಇದ್ದರೋ ಇಲ್ಲವೋ ಎಂಬುದೂ ಒಂದೂ ತಿಳಿಯಲಿಲ್ಲ.

ಅವನ ಯೋಚನೆಯೊಂದರೆ, ಒಂದೇ ಯೋಚನೆ. ತನಗೆ ಅನುಕೂಲಳಾದ ಒಬ್ಬ ಪತ್ನಿಯು ಲಭಿಸಿದರೆ, ತಾನು ಎಷ್ಟು ಸುಖಿಯಾಗಿರಬಹುದು. ಆ ಸುಖದ ಪ್ರಾಪ್ತಿಯು ತನಗುಂಟೇ? ಏನು ಶಿಕ್ಷೆಯನ್ನು ಅನುಭವಿಸಿದರೆ ತನಗೆ ಆ ಸುಖವು ಸಿಗುತ್ತದೆ? ಎಂಬೀ ಯೋಚನೆಗಳೇ ಅವನ ಮನಸ್ಸನ್ನು ಅಲ್ಲೋಲ ಕಲ್ಲೋಲ ಮಾಡಿಬಿಟ್ಟಿದ್ದವು.

“ಈಗ ಘಂಟೆ ಎಷ್ಟಿರಬಹುದು, ತಾವು ದಯಮಾಡಿ ತಿಳಿಸುವಿರಾ ?” ಎಂಬ ಮೃದುಮಧುರ ಮಾತುಗಳು ರಘುನಾಥರಾಯನ ಯೋಚನೆಗಳನ್ನು ಭಂಗಮಾಡಿ, ತಾನು ಎಲ್ಲಿರುವನೆಂಬ ವಿಷಯವನ್ನು ಅವನ ನೆನಪಿಗೆ ತಂದಿತು.

ಈ ಮಧುರವಾದ ಮಾತುಗಳನ್ನು ಕೇಳಿದೊಡನೆಯೇ ರಘುನಾಥರಾಯನು ಕಕ್ಕಬಿಕ್ಕಾದನು. ಸ್ಮೃತಿ ತಪ್ಪಿದಂತವನಾದನು. ಸುತ್ತಲೂ ನೋಡಿದನು. ನೋಡಿದರೆ, ಸಮೀಪದಲ್ಲೇ ಒಂದು ಕಲ್ಲಿನ ಮೇಲೆ ಒಬ್ಬ ಸೌಂದರ್ಯಶಾಲಿಯಾದ ಹದಿನಾರುವರ್ಷ ವಯಸ್ಸಿನ ಹೆಂಗಸೊಬ್ಬಳು ಕುಳಿತಿದ್ದಳು. ಆಕೆಯಲ್ಲದೇ ಇನ್ನಾರೂ ಇರಲಿಲ್ಲ. ತಾನು ನೊಡಿದುದು ಸ್ವಪ್ನವಿರಬಹುದೆಂದು ಊಹಿಸಿಕೊಂಡು, ಪುನಃ ಕಣ್ಣುಗಳನ್ನುಜ್ಜಿಕೊಂಡು ನೋಡಿದನು. ಆ ರಮಣಿಯು ಅಲ್ಲೇ ಕುಳಿತಿದ್ದಳು. ರಮಣಿಯನ್ನು ನೊಡಿದುದು ಸ್ವಪ್ನವಲ್ಲವೆಂದೂ, ನಿಜವೆಂದೂ ತಿಳಿದನು. ಅಷ್ಟುಹೊತ್ತಿಗೆ ಆಕೆಯು ಪುನಃ “ ಈಗ ಗಂಟೆ ಎಷ್ಟಿರಬಹುದು, ತಾವು ದಯೆಮಾಡಿ ತಿಳಿಸುವಿರಾ” ಎಂದಳು.

ಆಗ ರಘುನಾಥರಾಯನು ಆಕೆಯ ಕಡೆ ನೋಡದೆ,—ತನ್ನ ಮುಖವನ್ನು ನೋಡಿದರೆ ಆ ಸುಂದರಿಯು ಭಯಗ್ರಸ್ತಳಾಗಬಹುದೆಂಬ ಹೆದರಿಕೆಯಿಂದ—ತನ್ನ ಮುಖವನ್ನು ಬೇರೆ ಕಡೆ ತಿರುಗಿಸಿಕೊಂಡು “ ಈಗ ಆರುಗಂಟೆಯಾಗಿದೆ ” ಎಂದು ಗಾಬರಿ ಗಾಬರಿಯಾಗಿ ಉತ್ತರ ಕೊಟ್ಟನು.

ಆಗ ರಘುನಾಥರಾಯನಿಗೆ ಉಂಟಾದ ಸಂತೋಷವನ್ನು ವರ್ಣಿಸಲು, ನನ್ನ ಬಡಲೇಖಣಿಗೆ ಆಗದು. ಇಷ್ಟುದಿವಸಕ್ಕೆ ತನ್ನನ್ನು ನೋಡಿ ಅಸಹ್ಯಪಟ್ಟುಕೊಳ್ಳದೆ ಮಾತನಾಡಿಸಿದಂಥ ಈ ಹೆಂಗಸಿಗೆ ಎಷ್ಟು ಧನ್ಯವಾದಗಳನ್ನು ಅರ್ಪಿಸಿದರೂ ಸಾಲದು. ಕೊನೆಗೂ ತಾನು ಒಬ್ಬ ಮನುಷ್ಯನೆಂದು ಈಕೆಯು ಮಾತನಾಡಿಸಿದುದಕ್ಕಾಗಿ ದೇವರನ್ನು ಎಷ್ಟು ಸ್ತೋತ್ರಮಾಡಿದನೋ. ಇಷ್ಟು ದಿವಸ ಬದುಕಿದುದು ಇವತ್ತಿಗೆ ಸಾರ್ಥಕವಾ

ಯಿತು. ಇನ್ನು ನಾಳೆ ಸತ್ತರೂ ಸಂಕಟವಿಲ್ಲ. ಈ ಯೋಚನೆಗಳು ರಘುನಾಥರಾಯನನ್ನು ಬಹುಸುಖಿಯನ್ನಾಗಿ ಮಾಡಿದವು.

ಅಷ್ಟರಲ್ಲಿ, ಆಕೆಯು "ನನಿಗೆ ದಾರೀ ತಿಳಿಯದೆ ಇಲ್ಲಿಗೆ ಬಂದೆ. ನನ್ನನ್ನು ನಮ್ಮ ಅಪ್ಪನ ಮನೆಗೆ ತಲ್ಪಿಸಿದರೆ, ನಾನೂ ನಮ್ಮ ಅಪ್ಪನೂ ತಮಗೆ ಬಹು ಋಣಿಯಾಗಿರುತ್ತೇವೆ" ಎಂದಳು.

"ಹಾಗೆಯೇ ಆಗಲಿ" ಎಂದು ರಘುನಾಥರಾಯನು, "ಇದೇ ರಸ್ತೆ ಹೀಗಿ ಬನ್ನಿ" ಎಂದು ಹೇಳುತ್ತಾ ಮುಂದೆ ನಡೆದನು. ಆಗ ಆ ಹೆಂಗಸು ನಗುತ್ತಾ "ಅಯ್ಯೋ ನಾನು ಎಂತಹ ಪೆಚ್ಚಿ, ನನಿಗೆ ಕಣ್ಣು ಕಾಣುವುದಿಲ್ಲ. ನಾನು ಕುರುಡಿ, ನನ್ನನ್ನು ಕೈಹಿಡಿದುಕೊಂಡು ಕರೆದೊಯ್ಯಬೇಕು" ಎಂದಳು.

ರಘುನಾಥರಾಯನಿಗೆ ಈಗ ತಿಳಿಯಿತು. ಆಕೆಯು ತನ್ನನ್ನು ಯಾತಕ್ಕೆ ಮಾತನಾಡಿಸಿದಳೆಂದು. ಆಕೆಗೆ ಕಣ್ಣಿದ್ದರೆ ಈ ಕುರೂಪಿಯನ್ನು ಮುಖವೆತ್ತಿ ನೋಡುತ್ತಿರಲಿಲ್ಲ. ಅಂಧಳಾದುದರಿಂದಲೇ ತನ್ನನ್ನು ಮಾತನಾಡಿಸಿದ್ದು. ಅಯ್ಯೊ ದೈವವೇ ಆದರೂ ತನ್ನನ್ನು ಮಾತನಾಡಿಸಿದಳಲ್ಲಾ ಅಷ್ಟು ಸಾಕು. ಎಂದು ಆಕೆಯ ಮುಖವನ್ನು ಆಗ ನೋಡಿದನು. ಮುಖವು ಸೌಂದರ್ಯವಾಗಿದೆ. ಆಕೆಯು ಕಣ್ಣುಗಳು ಮುಚ್ಚಿಕೊಂಡಿದ್ದರೆ, ಆಕೆಯನ್ನು ಕುರುಡಿಯೆಂದು ಯಾರೂ ಹೇಳರು. ಕಣ್ಣಿನಲ್ಲಿ ಬಿಳೀ ಗುಡ್ಡೆಗಳು ಕಾಣುವುವು. ಕಣ್ಣು ಬಿಟ್ಟದ್ದರೆ ಕುರುಡಿಯೆಂದು ಕಾಣುವಳು. ಕಣ್ಣ ರೆಪ್ಪೆಗಳನ್ನು ಮುಚ್ಚಿಕೊಂಡಿದ್ದರೆ, ನಿದ್ದೆ ಮಾಡುವಂತಿರುವಳು. ಆಗ ಅವಳನ್ನು ಕುರುಡಿಯೆಂದು ಆರೂ ಹೇಳಲು ಸಾಧ್ಯವಿಲ್ಲ.

"ನಾನು ಇಲ್ಲಿಗೆ ಬಂದುದು ನಿಮಗೆ ಹೇಗೆ ತಿಳಿಯಿತು" ಎಂದು ಆಕೆಯನ್ನು ಕೇಳಿದನು. "ನಾನು ಹುಟ್ಟುಕುರುಡಿಯಲ್ಲ. ನನಿಗೆ ಕಣ್ಣುನೋವು ಬಂದಾಗ, ಸರಿಯಾದ ಔಷಧಗಳನ್ನು ಹಾಕದೇ ಇದ್ದುದರಿಂದ ಕಣ್ಣುನೋವು ಜಾಸ್ತಿಯಾಗಿ ಕಣ್ಣಿನ ಮೇಲೆ ಬಿಳೀ ಪೊರೆಯು ಬಂದಿರುವುದು. ಕಣ್ಣು ಸರಿಯಾಗಿ ಕಾಣಿಸದಿದ್ದರೂ ಸೂರ್ಯನ ಬೆಳಕು ಕಣ್ಣುಗುಡ್ಡಿನ ಮೇಲೆ ಬಿದ್ದರೆ ನನಿಗೆ ಗೊತ್ತಾಗುತ್ತದೆ. ನಾನು ಆ ಕಲ್ಲಿನ ಮೇಲೆ ಕೂತಿದ್ದಾಗ ಸೂರ್ಯನ ಕಿರಣಗಳು ನನ್ನ ಮುಖದಲ್ಲಿ ಬೀಳುತ್ತಿದ್ದವು. ಸ್ವಲ್ಪಹೊತ್ತು ಆ ಕಿರಣಗಳು ನನ್ನ ಮುಖದಮೇಲೆ ಬೀಳಲಿಲ್ಲ. ಪುನಃ ಮೊದಲಿನಂತೆಯೇ ಬೀಳುತ್ತಿತ್ತು. ಆಗ ಯಾರೋ ನನಿಗೆ ಅಡ್ಡಬಂದರೆಂದು ತಿಳಿದು ಆಗಲೇ ನಿಮ್ಮನ್ನು ಮಾತನಾಡಿಸಿದುದು. ನಿಮ್ಮ ಧ್ವನಿಯನ್ನು ಕೇಳಿ ನೀವೊಬ್ಬ ದೊಡ್ಡ ಮನುಷ್ಯರಿರಬಹುದೆಂದು ಗೊತ್ತಾಯಿತು. ಆದುದರಿಂದಲೇ ನಿಮ್ಮ ಸಹಾಯವನ್ನು ನಿರ್ಭಯವಾಗಿ ಬೇಡಲು ನನ್ನ ಮನವು ಒಡಂಬಟ್ಟಿತು" ಎಂದಳು.

ರಘುನಾಥರಾಯನು ವಿಧಿಯಿಲ್ಲದೆ ಆಕೆಯ ಕರಸ್ಪರ್ಶಮಾಡಬೇಕಾಯಿತು. ಆಕೆಯು ಕೈ ಬೆರಳಿನ ತುದಿಯನ್ನು ಹಿಡಿದುಕೊಂಡು, ಮುಂದೆ ಮಾತನಾಡಲು ಧೈರ್ಯವಿಲ್ಲದೆ ಮೌನದಿಂದ ನಡೆದನು. ಆಕೆಯ ಕೈಬೆರಳುಗಳು ತನ್ನ ಕೈಗೆ ಸೋಕಿದಕೂಡಲೇ ರಘುನಾಥರಾಯನ ಶರೀರದಲ್ಲಿ ಒಂದು ವಿದ್ಯುಚ್ಛಕ್ತಿ ಹರಿದಂತಾಯಿತು. ಮೈಯಲ್ಲಾ ರೋಮಾಂಚನವಾಯಿತು. ತುಟಿಗಳು ಒಣಗಿಹೋದವು. ಮೈ ಬೆವರಿತು. ಆದರಿಂದಲೇ ಪ್ರಾಯಶಃ ಅವನು ಮುಂದೆ ಸಂಭಾಷಣೆಯನ್ನು ಮಾಡಲಿಲ್ಲವೆಂದು ತೋರುತ್ತದೆ.

ಸ್ವಲ್ಪ ದೂರ ನಡೆದ ಮೇಲೆ ಆ ಮುದುಕಿಯ ಮನೆಯು ಸಿಕ್ಕಿತು. ಬಾಗಿಲಿನ ವರಿವಿಗೆ ಆಕೆಯನ್ನು ಬಿಟ್ಟು ಜಾಗ್ರತೆಯಾಗಿ ತನ್ನ ಮನೆಯನ್ನು ಸೇರಿದನು. ಅಂದು ರಘುನಾಥರಾಯನಿಗೆ ಮನಃಶಾಂತಿಯಿರಲಿಲ್ಲ. ಊಟಮಾಡಲು ಇಷ್ಟವಿರಲಿಲ್ಲ. ಒಂದು ಕಡೆ ಸುಮ್ಮನೆ ಕೂತನು. ಮನೆಯಲ್ಲಿ ಒಂದು ಕೊಠಡಿಯಿಂದ ಇನ್ನೊಂದು ಕೊಠಡಿಗೆ ಓಡಾಡುವುದರಲ್ಲಿ ಕಾಲಕಳೆಯುತ್ತಿದ್ದನು. ಇಲ್ಲದೇ ಇದ್ದರೆ ಸುಮ್ಮನೆ ಕುರ್ಚಿಯ ಮೇಲೆ ಕುಳಿತುಕೊಳ್ಳುವನು. ಅಡಿಗೆಯವನು ಅಡಿಗೆಯಾಗಿದೆಯೆಂದು ನಾಲ್ಕು ಬಾರಿ ಬಂದು ತಿಳಿಸಿದನು. ಅದಕ್ಕೆ ಉತ್ತರವೇ ಇಲ್ಲ. ಯಜಮಾನರ ಚಿತ್ತವೃತ್ತಿಯು ಈ ಪರಿಯಾದುದನ್ನು ಆ ಅಡಿಗೆಯವನು ಎಂದೂ ನೋಡಿರಲಿಲ್ಲ. ದೇಹಾಲಸ್ಯವಾಗಿರಬಹುದೆಂದು ಊಹಿಸಿದನು. ಐದನೆಯ ಸಲ, ಕೊಠಡಿಯೊಳಗೆ ಬಂದು ಗಟ್ಟಿಯಾಗಿ ಯಜಮಾನರನ್ನು ಕೂಗಿದನು. ಆಗ ರಘುನಾಥರಾಯನು ಉತ್ತರಕೊಡಬೇಕಾಯಿತು. "ನನಿಗೆ ಈದಿನ ಹಸಿವಿಲ್ಲ. ನೀನು ಊಟಮಾಡಿಬಿಡು. ಒಂದು ಬಟ್ಟಲು ಹಾಲು ತಂದುಕೊಡು." ಎಂದು ಅವನಿಗೆ ಹೇಳಿ ಕಳುಹಿಸಿದನು.

ಅಡಿಗೆಯವನು ಮರುಮಾತನಾಡದೆ, ಒಳಗಿನಿಂದ ಒಂದು ಬೆಳ್ಳಿಯ ಪಾತ್ರೆಯಲ್ಲಿ ಸೊಗಸಾಗಿ ಕಾಸಿರುವ ಹಸುವಿನ ಹಾಲನ್ನು, ಅದಕ್ಕೆ ಹಾಕತಕ್ಕ ಸಾಮಗ್ರಿಗಳನ್ನು ಹಾಕಿ, ಗಮಗಮಿಸುವಂತೆ ಮಾಡಿ ಯಜಮಾನನ ಹತ್ತಿರ ತಂದಿಟ್ಟು ತನ್ನ ಕೆಲಸಕ್ಕೆ ಹೊರಟುಹೋದನು.

ಅಡಿಗೆಯವನು ಹೋದ ಮೇಲೆ ರಘುನಾಥರಾಯನು ನಿರಾತಂಕವಾಗಿ ಯೋಚಿಸಲು ಅನುಕೂಲವಾಯಿತು. ಅವನ ಮನಸ್ಸಿನಲ್ಲಿ "ಆಕೆಯನ್ನು ನಾನು ಯಾತಕ್ಕೆ ಮದುವೆಯಾಗಬಾರದು? ಆಕೆಗೆ ಮದುವೆಯಿರಲಾರದೆಂದು ನನ್ನ ಭಾವನೆ. ಒಂದು ಮಾತು ಕೇಳಿದ್ದರೆ ಚೆನ್ನಾಗಿತ್ತು. ಮುಕ್ಕಾಲುಪಾಲು ಮದುವೆಯಾಗಿರಲಾರದು. ಆದರೆ ನನಗೆ ಆ ಹುಡುಗಿಯನ್ನು ಕೊಡಲು ಆ ಮುದುಕಿಯು ಸಮ್ಮತಿಸುವಳೇ? ನನ್ನ ಕುರೂಪವನ್ನು ನೋಡಲು ಆಕೆಗೆ ಕಣ್ಣುಗಳನ್ನು ಕೊಟ್ಟಿಲ್ಲವಾಗಿ ದೇವರನ್ನು ನಾನು ವಂದಿಸಬೇಕು. ಎಷ್ಟು ಹೊತ್ತಿಗೆ ಬೆಳಗಾಗುತ್ತದೆ?" ಎಂದು ಯೋಚನೆ ಮಾಡುತ್ತ ಹಾಗೆಯೇ ನಿದ್ದೆಹೋದನು. ಹಾಲಿನ ಪಾತ್ರೆಯ ಮೇಲೆ ದೃಷ್ಟಿಯೇ ಹೋಗಲಿಲ್ಲ.

ನಿದ್ದೆಯಲ್ಲಿ ಒಂದು ಸ್ವಪ್ನವಾಯಿತು. ಸ್ವಪ್ನದಲ್ಲಿ ತಾನೂ, ಆ ರಮಣಿಯೂ ಹಸೆಯ ಮೇಲೆ ಕುಳಿತಿದ್ದಂತೆಯೂ ಮದುವೆಯು ಅತಿವಿಜೃಂಭಣೆಯಿಂದ ನಡೆದ ಹಾಗೂ ಕಾಣಿಸಿತು. ಆ ಮದುವೆಯಾದ ಮೇಲೆ ಆಕೆಯೊಡನೆ ಸಂಸಾರಮಾಡುತ್ತಿರುವಾಗ, ಒಂದು ದಿನ ಒಬ್ಬ ಸಂನ್ಯಾಸಿಯು ಮನೆಗೆ ಬಂದಂತೆಯೂ ಆ ಸಂನ್ಯಾಸಿಗೆ ತಕ್ಕ ಆಚಾರ ಉಪಚಾರಗಳನ್ನು ಮಾಡಿದ ಮೇಲೆ "ನಿನ್ನ ಮನಸ್ಸಿನ ಇಷ್ಟಾರ್ಥಗಳನ್ನು ಸಲ್ಲಿಸುವೆನೆಂದು ಹೇಳಿ ಒಂದು ಭಸ್ಮವನ್ನು ಕೊಟ್ಟು ಇದನ್ನು ಹಾಲಿನಲ್ಲಿ ಕಲಿಸಿ ಕುಡಿದರೆ ನಿನ್ನ ಸೌಂದರ್ಯವು ಪುನಃ ಪ್ರಾಪ್ತವಾಗುವುದು. ನೀನು ಕುಡಿಯದೇ ನಿನ್ನ ಹೆಂಡತಿಗೆ ಕೊಟ್ಟರೆ ಅವಳಿಗೆ ಕಣ್ಣುಗಳು ಬರುವುವು. ನೀವಿಬ್ಬರೂ ಇದನ್ನು ಕುಡಿಯಲಾಗದು. ನಿಮ್ಮಲ್ಲಿ ಯಾರು ಇದನ್ನು ಕುಡಿಯಬೇಕೆಂದು ಮೊದಲು ನಿಶ್ಚೈಸಿಕೊಂಡು ಆ ಮೇಲೆ ತೆಗೆದುಕೊಳ್ಳಿ" ಎಂದು ಹೇಳಿ ಒಂದು ಭಸ್ಮವನ್ನು ಕೊಟ್ಟು ಹೊರಟು ಹೋದಂತೆಯೂ, ಆ ಮೇಲೆ ತಾನು ಕುಡಿದರೆ ತನ್ನ ಹೆಂಡತಿಯ ಕಣ್ಣುಗಳು ಬರುವದಿಲ್ಲವಾದ್ದುದರಿಂದಲೂ ಅವಳು ಕುಡಿದರೆ ತನ್ನ ಕುರೂಪಿ ಮುಖವನ್ನು ನೋಡಿ ಜಿಗುಪ್ಸೆ ಪಟ್ಟುಕೊಳ್ಳಬಹುದೆಂಬ ಯೋಚನೆಯಿಂದಲೂ ಮನಸ್ಸು ತಲ್ಲಣಿಸಿ ಹೋಗಿ, ಯಾರಿಗೂ ಬೇಡವೆಂದು ಆ ಭಸ್ಮವನ್ನು ಬಿಸುಟಂತೆಯೂ ಸ್ವಪ್ನವಾಯಿತು.

ಈ ಸ್ವಪ್ನವಾದ ಮೇಲೆ ಅವನಿಗೆ ಎಚ್ಚರವಾಯಿತು. ಈ ವಿಚಿತ್ರಸ್ವಪ್ನಕ್ಕೇನು ಕಾರಣವೋ ತಿಳಿಯದಾಯಿತು. ಮುಂದೆ ನಿದ್ದೆಯು ಬರಲಿಲ್ಲ. ಹಾಗೆ ಹೀಗೆ ನೋಡುವಲ್ಲಿ ತಾನು ಕುರ್ಚಿಯಮೇಲೆ ಕುಳಿತು ನಿದ್ರೆಮಾಡಿದುದು. ಪಕ್ಕದಲ್ಲಿ ಹಾಲಿನ ಪಾತ್ರೆಯಲ್ಲಿ ಹಾಲು ಹಾಗೆಯೇ ಇದೆ. ಈ ಸ್ವಪ್ನವು ಮೊದಲೇ ಅಸ್ಥಿರವಾಗಿದ್ದ ಮನಸ್ಸನ್ನು ಇನ್ನೂ ಅಸ್ಥಿರ ಮಾಡಿತು.

ಬೆಳಗಾಯಿತು. ಧೈರ್ಯಮಾಡಿಕೊಂಡು ಆ ಮುದುಕಿಯ ಸಂಗಡ ಮದುವೆಯ ವಿಷಯ ಪ್ರಸ್ತಾಪಮಾಡುವ ಉದ್ದಿಶ್ಯ ಆಕೆಯ ಮನೆಗೆ ಹೋದನು. ಆ ಮುದುಕಿಯು ಈತನು ತನ್ನ ಮನೆಗೆ ಬಂದ ಕಾರಣವನ್ನು ಅರಿತಳು. ಅವಳಿಗೂ ತನ್ನ ಕುರುಡಿ ಹುಡಿಗೆಗೆ ಲಗ್ನವಾಗಲಿಲ್ಲವೆಂಬ ಯೋಚನೆ ಇದ್ದೇ ಇದ್ದಿತು. ಅಂತಹ ವೇಳೆಯಲ್ಲಿ ಈ ಶ್ರೀಮಂತನು ತಾನಾಗಿ ಇಷ್ಟಪಟ್ಟು ಕೇಳಿದರೆ ಬೇಡವೆನ್ನುವಳೇ? ಎಂದಿಗೂ ಇಲ್ಲ. ಆ ಮುದುಕಿಗೆ ಮನಸ್ಸಿನಲ್ಲಿ ಬಹು ಆನಂದ ಉಂಟಾಯಿತು. ತನ್ನ ಹುಡುಗಿಗೆ ಈ ವಿಷಯವನ್ನು ತಿಳಿಸಿದಳು. ಆಕೆಗೂ ಮನಸ್ಸಿಗೆ ತುಂಬಾ ಸಂತೋಷವಾಯಿತು. ಹಿಂದಿನ ದಿನ ತನಗೆ ದಾರೀ ತೋರಿಸಿದ ಮಹನೀಯರೇ ತನ್ನ ಪತಿಯಾಗಲು ಬಂದಿರುವುದನ್ನು ಕೇಳಿ ದೇವರನ್ನು ಬಹಳವಾಗಿ ವಂದಿಸಿದಳು.

ಎರಡು ಪಕ್ಷದವರೂ ಒಪ್ಪಿರುವಲ್ಲಿ ಮದುವೆಯು ಸಾವಕಾಶವಾಗುವುದೇ? ಯಥಾಕಾಲದಲ್ಲಿ ರಘುನಾಥರಾಯನಿಗೆ ವಿವಾಹವಾಯಿತು. ದಂಪತಿಗಳು ಬಹುಸುಖದಲ್ಲಿರುತ್ತಿದ್ದರು. ಕುಸುಮಳಿಗೆ—(ರಘುನಾಥರಾಯನ ಹೆಂಡತಿಯ ಹೆಸರು ಕುಸುಮ) ಮನಸ್ಸಿನಲ್ಲಿ ಒಂದೇ ವ್ಯಥೆ. ತನ್ನ ಕಣ್ಣಿದ್ದಿದ್ದರೆ ಆ ಬಂಗಾರದಂಥ ತನ್ನ ಪತಿಯನ್ನು ಕಣ್ಣುತುಂಬ ಮನದಣಿಯ ನೋಡಬಹುದಾಗಿದ್ದಿತು. ಇಷ್ಟು ವಿನಯಸಂಪನ್ನನೂ, ಉದಾರಿಯೂ, ಐಶ್ವರ್ಯವಂತನೂ ಆದ ಪತಿಯು ತನಗೆ ದೊರೆದುದು ತನ್ನ ಪೂರ್ವಜನ್ಮದ ಪುಣ್ಯಪರಿಪಾಕವೇ ಅಲ್ಲದೆ ಬೇರೊಂದಲ್ಲ. ಇಂತಹ ಪತಿರಾಜನನ್ನು ನೋಡಲು ದೇವರು ತನಗೆ ಕಣ್ಣೇತಕ್ಕೆ ಕೊಡಲಿಲ್ಲವೋ ಎಂದು ಅವಳಿಗೆ ಯೋಚನೆ. ತನ್ನ ಹೆಂಡತಿಯು ಕುರುಡಿ ಎಂದು ಅವಳಿಗೆ ಕಣ್ಣು ಬರುವುದೋ ಎಂಬ ಯೋಚನೆಯಲ್ಲಿ ರಘುನಾಥರಾಯನು ಮಗ್ನನಾಗಿದ್ದನು.

ಹೀಗೆಯೇ ಕೆಲವು ವರ್ಷಗಳು ಕಳೆದವು. ಈಗ ರಘುನಾಥರಾಯನಿಗೆ ಎರಡು ಮಕ್ಕಳು. ಒಂದು ಗಂಡು. ಇನ್ನೊಂದು

ಹೆಣ್ಣು. ಕುಸುಮಳ ಆನಂದಕ್ಕೆ ಪಾರವೇ ಇಲ್ಲ. ಯಾವಾಗಲೂ ಮಕ್ಕಳ ಲಾಲನೆ ಪಾಲನೆಗಳಲ್ಲಿ ತೊಡಗಿರುವಳು. ಎಷ್ಟು ಹೊತ್ತು ಮಕ್ಕಳ ಲಾಲನೆ ಪಾಲನೆಗಳಲ್ಲಿ ಸುಖದಲ್ಲಿ ಕಾಲಕಳೆ ದರೂ, ಈ ಮುದ್ದಿನ ಮಕ್ಕಳನ್ನೂ ತನ್ನ ಪತಿಯನ್ನೂ ನೋಡಲು ದೇವರು ತನಗೆ ಒಂದು ಘಳಿಗೆ ಮಾತ್ರ ಕಣ್ಣು ಕೊಟ್ಟರೆ ಸಾಕೆಂದು ಮನಸ್ಸಿನಲ್ಲಿ ಅಂದುಕೊಳ್ಳುತ್ತಿದ್ದಳು.

ಸಾಯಂಕಾಲವಾದಾಗ ಗಂಡಹೆಂಡರಿಬ್ಬರಿಗೂ ಒಂದೇ ಚರ್ಚೆ; ಆ ಕೂಸು ಯಾರನ್ನು ಹೋಲುತ್ತದೆ. ಈ ಕೂಸು ಯಾರನ್ನು ಹೋಲುತ್ತದೆ? ಈ ಕೂಸಿನ ಬಣ್ಣ ಯಾವುದು ? ಆ ಕೂಸಿನ ಬಣ್ಣ ಯಾವುದು? ಆ ಕೂಸಿನ ಮೂಗು ಕಣ್ಣುಗಳು ಹ್ಯಾಗಿವೆ? ಈ ಕೂಸಿನ ಮೂಗು ಕಣ್ಣುಗಳು ಹೇಗಿವೆ ? ಇತ್ಯಾದಿ, ಇತ್ಯಾದಿ. ಈ ಚರ್ಚೆಗಳು ಕೊನೆಗಾಣುತ್ತಿರಲಿಲ್ಲ. ನಿನ್ನ ಮುಖದ ಹಾಗೆಂದು ರಘುನಾಥರಾಯನು ಹೇಳಿದರೆ "ಅಲ್ಲ ಖಂಡಿತವಾಗಿಯೂ ಅಲ್ಲ. ಹೋಲುವುದು ನನ್ನ ಮುಖವನ್ನಲ್ಲ. ನಿಮ್ಮ ಮುಖವನ್ನು." ಎಂದು ಕುಸುಮಳು ಹೇಳುವಳು. ಹೀಗೆಯೇ ಚರ್ಚೆ. ಯಾರೂ ಬಗ್ಗರು. ಪುನಃ ಚರ್ಚೆಯು ಮಾರನೆಯ ದಿನ ಪ್ರಾರಂಭವಾಗುವುದು. ಕೊನೆಗಾಣುತ್ತಲೇ ಇರಲಿಲ್ಲ. ಅಂತೂ ಗಂಡಹೆಂಡರು ಅನ್ಯೋನ್ಯವಾಗಿದ್ದರು.

ಒಂದು ದಿವಸ ರಘುನಾಥರಾಯನ ಸ್ನೇಹಿತ, ಕಲಕತ್ತೆಯ ಸುಪ್ರಸಿದ್ಧ ವೈದ್ಯನೊಬ್ಬನು, ರಘುನಾಥರಾಯನಿದ್ದ ಹಳ್ಳಿಯ ಮಾರ್ಗವಾಗಿ ತನ್ನ ಊರಿಗೆ ಒಂದು ಮೋಟಾರು ಗಾಡಿಯಲ್ಲಿ ಪ್ರಯಾಣಮಾಡುತ್ತಿದ್ದನು. ಈ ಹಳ್ಳಿಯ ಹತ್ತಿರಕ್ಕೆ ಬಂದಾಗ ಮೋಟಾರು ಕೆಟ್ಟುಹೋಗಿ ಆ ರಾತ್ರಿ ಈ ಹಳ್ಳಿಯಲ್ಲೇ ತಂಗಬೇಕಾಯಿತು. ಆಗ ರಘುನಾಥರಾಯನಿಗೆ ತನ್ನ ಹಳ್ಳಿಗೆ ಯಾರೋ ಅಪರಿಚಿತರು ಬಂದಿರುವರೆಂದು ತಿಳಿಯಿತು. ಆ ಊರಿನಲ್ಲಿ ಯಾರು ಹೊಸಬರು ಬಂದರೂ ಅವರಿಗೆ ರಘುನಾಥ ರಾಯನ ಮನೆಯಲ್ಲಿಯೇ ಆತಿಥ್ಯ. ಅದೇ ರೀತಿ ಈ ಅಪರಿಚಿತ ರನ್ನು ಉಪಚರಿಸಿ ಕರೆತರಲು ತನ್ನ ಸೇವಕರನ್ನು ಕಳುಹಿಸಿ ದನು. ಆಳಿನೊಡನೆ ಬಂದ ಅಪರಿಚಿತರನ್ನು ನೋಡಿದೊಡ ನೆಯೇ ರಘುನಾಥರಾಯನಿಗೆ ತನ್ನ ಪೂರ್ವಸ್ನೇಹವೆಲ್ಲವೂ ಜ್ಞಾಪಕಕ್ಕೆ ಬಂದಿತು. ಆ ವೈದ್ಯನೂ ರಘುನಾಥರಾಯನನ್ನು ಗುರ್ತಿಸಿದನು. ಸ್ನೇಹಿತರಿಬ್ಬರು ಎಷ್ಟೋ ವರ್ಷಗಳ ಮೇಲೆ ಆಕಸ್ಮಿಕವಾಗಿ ಈ ರೀತಿಯಾಗಿ ಭೆಟ್ಟಿಯಾದುದಕ್ಕೆ ಸಂತೋಷ ಪಟ್ಟರು.

ಆಗ ರಘುನಾಥರಾಯನ ಮನಸ್ಸಿನಲ್ಲಿ ಒಂದು ಯೋಚನೆ ಬಂತು. ಈ ಸ್ನೇಹಿತನು ಸುಪ್ರಸಿದ್ಧ ವೈದ್ಯನು. ಇವನಿಗೆ ತನ್ನ ಹೆಂಡತಿಯ ಕಣ್ಣುಗಳನ್ನು ತೋರಿಸಿ ಅವುಗಳನ್ನು ಚಿಕಿತ್ಸೆ ಮಾಡಲಾಗುವುದೇ ಎನ್ನುವುದನ್ನು ತಿಳಿಯಬೇಕೆಂದು, ಈ ವಿಷಯವನ್ನು ಅವನೊಡನೆ ಪ್ರಸ್ತಾಪಿಸಿದನು. ಆಗ ವೈದ್ಯನು ಬೆಳಗಾದ ಮೇಲೆ ತಾನು ಕುಸುಮಳ ಕಣ್ಣನ್ನು ನೋಡುವುದಾ ಗಿಯೂ ತನ್ನ ಕೈಲಾದ ಮಟ್ಟಿಗೂ ಅಂಧತ್ವವನ್ನು ಹೋಗ ಲಾಡಿಸುವ ಪ್ರಯತ್ನ ಮಾಡುವೆನೆಂದೂ ಹೇಳಿದನು. ರಘು ನಾಥರಾಯನು ಇದರ ವಿಷಯವಾಗಿ ಕುಸುಮಳಲ್ಲಿ ರಾತ್ರಿ ಪ್ರಸ್ತಾಪ ಮಾಡಲಿಲ್ಲ.

ಬೆಳಗಾಯಿತು. ಕುಸುಮಳನ್ನು ಕಾಫಿ ತರುವ ನೆವದಿಂದ ತನ್ನ ಚಿಕ್ಕಮನೆಗೆ ಕರೆಸಿದನು. ಕುಸುಮಳು ಬಂದಾಗ ವೈದ್ಯನು ಅವಳ ಕಣ್ಣುಗಳನ್ನು ದೂರದಿಂದ ದೃಷ್ಟಿಸಿ ನೋಡಿದನು. ಈ ವೈದ್ಯನು ಬಂದ ಸಮಾಚಾರವೇ ಕುಸುಮಳಿಗೆ ತಿಳಿಯದು. ಯಾರೋ ಅಪರಿಚಿತರು ಬಂದಿರುವರೆಂದು ಮಾತ್ರ ಅವಳಿಗೆ ಗೊತ್ತಿದ್ದಿತು.

ಕುಸುಮಳು ಚಿಕ್ಕ ಮನೆಯಿಂದ ಹೊರಗೆ ಹೊರಟಮೇಲೆ ರಘುನಾಥರಾಯನು ಬಹು ಆತುರದಿಂದ ಏನಾದರೂ "ಅನು ಕೂಲವಾಗುವ ಸಂಭವವುಂಟೆ ? ನಾನೇನಾದರೂ ಆ ರೀತಿ ಆಶೆಪಡಲು ನೀವು ಭರವಸೆ ಕೊಡುತ್ತೀರಾ" ಎಂದು ವೈದ್ಯ ನನ್ನು ಪ್ರಶ್ನಿಸಿದನು.

ಅದಕ್ಕೆ ಆತನು ನಸುನಗುತ್ತ 'ನಿಮಗೆ ಸಂಪೂರ್ಣ ಆಶೆ ಯನ್ನು ಕೊಡಲು ಆಗುವುದಿಲ್ಲ. ಶಸ್ತ್ರ ಚಿಕಿತ್ಸೆಯನ್ನು ಮಾಡಿ ದರೆ ಗುಣವಾಗಬಹುದು. ನಾನು ಕಲಕತ್ತೆಗೆ ಹೋದ ಮೇಲೆ ನಿಮಗೆ ಕಾಗದ ಬರೆಯುತ್ತೇನೆ. ಆವಾಗ ನೀವು ನಿಮ್ಮ ಹೆಂಡತಿಯೊಡನೆ ಬನ್ನಿ. ಅಲ್ಲಿ ಒಂದು ತಿಂಗಳು ಇರಬೇಕಾಗ ಬಹುದು. ನೀವು ಸಂಪೂರ್ಣ ನಿರಾಶರಾಗಬೇಕಾದುದಿಲ್ಲ." ಎಂದನು.

ರಘುನಾಥರಾಯನಿಗೆ ಆ ಉತ್ತರವನ್ನು ಕೇಳಿ ಬಹು ಆನಂದ ವಾಯಿತು. ಕೊನೆಗೂ ಕುಸುಮಳಿಗೆ ಕಣ್ಣುಬರುವ ಸಂಭವ ವಿರುವದು. ಈ ಸಂಗತಿಯನ್ನು ಕುಸುಮಳಿಗೆ ಆಗಲೇ ತಿಳಿ ಸಲು ಅವನ ಮನಸ್ಸು ಒಪ್ಪಲಿಲ್ಲ. ಈ ವೈದ್ಯನು ಕಲಕತ್ತೆಗೆ ಹೋದ ಮೇಲೆ ಕಾಗದ ಬಂದ ಮೇಲೆ ಆ ವಿಷಯವನ್ನು ಕುಸುಮಳಿಗೆ ತಿಳಿಸುವುದು ಸರಿ. ಈಗಿನಿಂದ ಆ ಬಡ ಹುಡು

ಗಿಗೆ ಇಲ್ಲದಸಲ್ಲದ ಆಶೆಗಳನ್ನು ಹುಟ್ಟಿಸಿ ಆತಂಕಪಡಿಸುವುದು ಸರಿಯಲ್ಲವೆಂದು ರಘುನಾಥರಾಯನು ಕುಸುಮಳಿಗೆ ಈ ವಿಷಯುವನ್ನು ತಿಳಿಸಲಿಲ್ಲ.

ತನ್ನ ಮೋಟಾರು ಸರಿಯಾದ ಮೇಲೆ, ಆ ವೈದ್ಯನು ತನ್ನ ಸ್ನೇಹಿತನ ಆತಿಥ್ಯಕ್ಕೆ ಬಹು ವಂದನೆಗಳನ್ನು ಕೊಟ್ಟು, ಕಲಕತ್ತೆಗೆ ತಾನು ತಲುಪಿದ ಕೂಡಲೇ ಕಾಗದ ಬರೆಯುವಂತೆಯೂ, ಆ ಕಾಗದ ತಲುಪಿದ ಕೂಡಲೇ ರಘುನಾಥನು ಕುಸುಮಳೊಡನೆ ಅಲ್ಲಿಗೆ ಬರಬೇಕೆಂದು ತಿಳಿಸಿ ತನ್ನ ಪ್ರಯಾಣವನ್ನು ಬೆಳೆಸಿದನು.

ಈ ವಿಷಯ ನಡೆದ ಒಂದು ತಿಂಗಳ ಮೇಲೆ ರಘುನಾಥರಾಯನಿಗೆ ಕಲಕತ್ತೆಯಿಂದ ಒಂದು ಕಾಗದ ಬಂತು. ಕಾಗದವು ನಮ್ಮ ಪೂರ್ವಪರಿಚಿತ ವೈದ್ಯನಿಂದ ಬಂದಿತ್ತು. ಅದರಲ್ಲಿ ಕಲಕತ್ತೆಗೆ ಕೂಡಲೆ ಬರಬೇಕೆಂದು ಬರೆದಿತ್ತು. ಆಗ ರಘುನಾಥರಾಯನಿಗೆ ಒಂದು ದೊಡ್ಡ ಯೋಚನೆ ಬಂತು.

“ಒಂದು ವೇಳೆ ಶಸ್ತ್ರಚಿಕಿತ್ಸೆಯು ಕುಸುಮಳ ಕಣ್ಣುಗಳನ್ನು ಗುಣಪಡಿಸಿದರೆ, ಮುಂದೆ ಕುಸುಮಳೊಡನೆ ಸಂಸಾರಮಾಡುವುದು ಹೇಗೆ?

ಇದುವರಿಗೂ ಕುಸುಮಳು ನನ್ನ ಮುಖವನ್ನು ನೋಡಿಲ್ಲ. ತನ್ನ ಮನಸ್ಸಿನಲ್ಲಿ ನನ್ನ ವಿಷಯವಾಗಿ ಒಂದು ಸುಂದರ ಮೂರ್ತಿಯನ್ನು ಕಲ್ಪಿಸಿಕೊಂಡು ಪೂಜಿಸುತ್ತಿರುವಳು. ಅವಳಿಗೆ ಕಣ್ಣು ಬಂದರೆ, ಅವಳ ಮನೋಭಾವದ ಸುಂದರ ಮೂರ್ತಿಗೂ, ಈ ನನ್ನ ವಿಕಾರವಾದ ಮುಖಕ್ಕೂ ಎಳ್ಳಷ್ಟು ಸಂಬಂಧವೂ ಇರುವದಿಲ್ಲ. ಆಗ ಅವಳು ನನ್ನನ್ನು ದ್ವೇಷಿಸಬಹುದಲ್ಲವೇ? ಇಂದಿನ ವರಿಗಿರುವ ಪವಿತ್ರವಾದ ನಿಷ್ಕಾಪಟ್ಯವಾದ ಪ್ರೇಮವು ಅಂದಿನಿಂದ ಇರುವದೇ? ಎಂದಿಗೂ ಇಲ್ಲ. ನನ್ನನ್ನು ನೋಡಿ ಅಸಹ್ಯಪಟ್ಟುಕೊಳ್ಳದೇ ಇರುವದಿಲ್ಲ. ಈಗ ಅವಳಿಗೆ ಕಣ್ಣುಗಳಿಲ್ಲದಿದ್ದರೆ ಏನು ಬಾಧಕ? ಅವಳೇನು ಕೆಲಸಗಳನ್ನು ಮಾಡಬೇಕೇ? ಇಲ್ಲ. ಮಕ್ಕಳ ಮುಖವನ್ನೂ ತನ್ನ ಮುಖವನ್ನೂ ನೋಡಲಾಗುವದಿಲ್ಲವೆಂಬುದೊಂದೇ ಕೊರತೆ ಈಗ ಇರುವುದು.

ಆಮೇಲಾದರೋ ಈ ಕುರೂಪಿಯ ಜತೆಗೆ ಸಂಸಾರ ಮಾಡಬೇಕೆಂದು ಜಿಗುಪ್ಸೆಪಟ್ಟುಕೊಂಡು ಇವತ್ತಿನವರಿಗಿರುವ ಸುಖವು ವಿಷವಾಗಿ ಪರಿಣಮಿಸಿದರೆ, ನಾನು ಜೀವವಂತನಾಗಿರುವುದು ಹೇಗೆ ? ಆತ್ಮಹತ್ಯೆಯನ್ನು ಮಾಡಿಕೊಳ್ಳುವುದು ಹೇಡಿಯ ಕೆಲಸ, ಛೇ! ಛೇ! ಏನು ಯೋಚಿಸಿದೆ ? ನನ್ನ ಸ್ವಾರ್ಥತೆಗೆ ಧಿಕ್ಕಾರವಿರಲಿ. ನನ್ನ ಮುದ್ದು ಗಿಣಿಗೆ ಕಣ್ಣು ಬರುವುದು ಮುಖ್ಯವೋ, ನನ್ನ ಮುಖವು ಹಾಳಾಗುವುದೆಂಬ ಈ ಸ್ವಾರ್ಥತೆಯು ಹೆಚ್ಚೋ. ಅವಳಿಗೆ ಕಣ್ಣು ಬರಲಿ ಕಣ್ಣು ಬಂದ ಮೇಲೆ ಅವಳು ಮನಬಂದಂತೆ ಮಾಡಲಿ. ನನ್ನ ಸೌಖ್ಯಕ್ಕೋಸ್ಕರವಾಗಿ ಅವಳಿಗೆ ಕಣ್ಣು ಬರುವ ಸಂಭವವನ್ನು ನಾನು ತಪ್ಪಿಸಬೇಕೆ ? ಪೂರ್ವಜನ್ಮದಲ್ಲಿ ಪಾಪಮಾಡಿದುದರಿಂದ ಈ ಕುರೂಪಿಯಾಗಿ ಈ ಜನ್ಮದಲ್ಲಿ ಬಾಳುತ್ತಾ ಇರುವೆನು. ಅದು ಸಾಲದೆ ಈ ಜನ್ಮದಲ್ಲಿ ಅಂಧಳಿಗೆ ಅಂಧತ್ವವು ಹೋಗುವದಕ್ಕೆ ಅಡ್ಡ ಬಂದು ಪಾಪವನ್ನು ಕಟ್ಟಿಕೊಂಡು ಮುಂದಿನ ಜನ್ಮದಲ್ಲಿ ಒದ್ದಾಡಲೇ? ಭಗವಂತ, ನನ್ನ ಈ ಯೋಚನೆಗಳನ್ನು ನಿರ್ಮೂಲಮಾಡಿ ಶುದ್ಧ ಮನಸ್ಸಿನಿಂದ ನಡೆಯುವಂತೆ ಮಾಡು. ಕಲಕತ್ತೆಗೆ ಹೋಗುವದು ಸರಿ. ಕುಸುಮಳಿಗೆ ಈ ವಿಷಯವನ್ನು ತಿಳಿಸುವುದಕ್ಕೆ ಈಗ ಸಮಯ” ಎಂದುಕೊಂಡು ಕುಸುಮಳನ್ನು ಕುರಿತು, “ಅಂದಿನ ದಿನ ನಮ ಮನೆಗೆ ಒಬ್ಬರು ಅಪರಿಚಿತರು ಬಂದಿದ್ದು ನಿನಗೆ ಜ್ಞಾಪಕವಿರಬೇಕು. ಅವರು ಕಲಕತ್ತೆಯ ಸುಪ್ರಸಿದ್ಧ ವೈದ್ಯರು. ಅವರಲ್ಲಿ ನಿನ್ನ ಕಣ್ಣುಗಳನ್ನು ತೋರಿಸಿ ಅವರ ಅಭಿಪ್ರಾಯುವನ್ನು ಕೇಳಬೇಕೆಂದಿರುವೆನು. ನಿನ್ನ ಇಷ್ಟವೇನು ?” ಎಂದನು.

ಆಗ ಕುಸುಮಳು “ನನಗೆ ಕಣ್ಣುಗಳು ಬರಲು ಅವಕಾಶವಾಗುವದಾದರೆ ನೀವು ಇಷ್ಟಪಟ್ಟರೆ, ಕಲಕತ್ತೆಗೆ ಹೋಗೋಣ” ಎಂದಳು.

ಇನ್ನೊಂದು ವಾರದಲ್ಲಿ ಕಲಕತ್ತೆಯ ಪ್ರಯಾಣವು ನಿಶ್ಚಯವಾಯಿತು. ಆ ವಾರದಲ್ಲಿ ರಘುನಾಥರಾಯನಿಗೆ ಸರಿಯಾಗಿ ನಿದ್ರೆಯಿಲ್ಲ. ಊಟವಿಲ್ಲ. ಹುಚ್ಚುಹಿಡಿದಂತವನಾದನು. ನಾಳೆಯ ದಿನ ಹೊರಡಬೇಕು. ಹಿಂದಿನ ರಾತ್ರಿ ಪುನಃ ರಘುನಾಥರಾಯನ ಮನಸ್ಸಿನಲ್ಲಿ ಒಂದು ದೊಡ್ಡ ಕಲಹವು ಆರಂಭವಾಯ್ತು. ವಾದವಿವಾದಗಳು ಬಹು ಚೆನ್ನಾಗಿ ನಡೆದವು. ಕೊನೆಗೆ ಹಿಂದೆ ಮಾಡಿದ್ದ ತೀರ್ಮಾನವು ತಲೆಕೆಳಗಾಯಿತು. ಕುಸುಮಳ ಕಣ್ಣುಗಳು ಗುಣವಾಗದಿದ್ದರೇ ಕ್ಷೇಮವು ಜಾಸ್ತಿಯೆಂದು ದುರ್ಬುದ್ಧಿಯು ಹೇಳಿತು. ಕಲಕತ್ತೆಗೆ ಹೊರಡುವುದು ನಿಲ್ಲಿಸಿಬಿಡಬೇಕೆಂದು ಅದರ ಆಜ್ಞೆಯಾಯಿತು.

ಬೆಳಗಾಯಿತು. ಕುಸುಮಳು ಆತುರದಿಂದ ಎಷ್ಟು ಹೊತ್ತಿಗೆ ಪ್ರಯಾಣಮಾಡುವುದು ಎಂದು ನಿರೀಕ್ಷಿಸುತ್ತಿರುವಲ್ಲಿ, ರಘುನಾಥರಾಯನು, “ಕುಸುಮಾ, ನನಗೆ ಮೈ ಸರಿಯಿಲ್ಲ.

ಪ್ರಯಾಣವನ್ನು ನಿಲ್ಲಿಸಿರುವೆನು. ಇನ್ನು ಹದಿನೈದು ದಿನಗಳಿಗೆ ಕಲಕತ್ತೆಗೆ ಹೋಗೋಣ" ಎಂದನು.

ಕುಸುಮಳಿಗೆ ಅತ್ಯಂತ ಆಶಾಭಂಗವಾಯಿತು. ಆ ಸಾಧ್ವಿಯು ಮಾತನಾಡಲಿಲ್ಲ. ಪತಿಗೆ ಆಲಸ್ಯವಿರುವಾಗ ಎದರು ಮಾತನಾಡುವಳೇ? ಮರೆಯಾಗಿ ಹೋಗಿ ಅತ್ತಳು. ವಿಧಿಯನ್ನು ನಿಂದಿಸಿದಳು. ತನ್ನ ಶೋಕವು ಕಮ್ಮಿಯಾದ ಮೇಲೆ ಬಂದು, ತನ್ನ ಹೃದಯದ ವೇದನೆಯನ್ನು ಪತಿಗೆ ತಿಳಿಸದೆ ಅವನ ಶುಶ್ರೂಷೆಯನ್ನು ಎಂದಿನಂತೆ ಮಾಡತೊಡಗಿದಳು. ಅವಳಿಗೆ ಈ ರೀತಿ ಪ್ರಯಾಣವನ್ನು ತಳ್ಳಿದ್ದಕ್ಕೆ ಕಾರಣವು ಸರಿಯಾಗಿ ತಿಳಿಯದು.

ಹದಿನೈದು ದಿವಸಗಳಾದವು. ಇಪ್ಪತ್ತು ದಿವಸಗಳಾದವು. ತಿಂಗಳಾಯಿತು. ಕಲಕತ್ತೆಯ ಪ್ರಯಾಣದ ವಿಷಯುವೇ ಇಲ್ಲ. ಕುಸುಮಳಿಗೆ ಒಂದು ಯೋಚನೆ ಬಂತು. ಕಣ್ಣುಗಳು ಗುಣವಾಗಲಾರದೆಂಬ ಭೀತಿಯಿಂದ ತನ್ನ ಪತಿಯು ಕಲಕತ್ತೆಯ ಪ್ರಯಾಣವನ್ನು ನಿಲ್ಲಿಸಿರುವೆನೆಂದು ತಿಳಿದಳು. ಪತಿಯ ಬಳಿ ಹೋಗಿ, ಕಣ್ಣೇನಾದರೂ ಆಗಲಿ ಈ ವೈದ್ಯರ ಶಸ್ತ್ರಚಿಕಿತ್ಸೆಯನ್ನು ಮಾಡಿಸಿ ನೋಡಿಯೇ ತೀರಬೇಕೆಂದು ಹೇಳಿದಳು. ರಘುನಾಥರಾಯನಿಗೆ ಕುಸುಮಳಿಗೆ ಸರಿಯಾಗಿ ಉತ್ತರಕೊಡಲು ಬಾಯಿಬರದು. ಅಷ್ಟುಹೊತ್ತಿಗೆ ಸರಿಯಾಗಿ ಕಲಕತ್ತೆಯ ವೈದ್ಯನಿಂದ ಒಂದು ತಂತೀ ವರ್ತಮಾನವು ಬಂತು. "ನೀವು ಇದುವರಿವಿಗೂ ಕಲಕತ್ತೆಗೆ ಬಾರದಿರುವುದಕ್ಕೆ ಕಾರಣ ತಿಳಿಯದು, ಈ ತಂತೀವರ್ತಮಾನ ತಟ್ಟಿದ ಕೂಡಲೇ ಹೊರಟುಬರಬೇಕು. ಇಲ್ಲವಾದರೆ ನಾನೇ ಬಂದು ನಿಮ್ಮನ್ನು ಕರೆತರಬೇಕಾಗುವುದು" ಎಂದು ಸಮಾಚಾರವು ಅದರಲ್ಲಿತ್ತು.

ದೈವವು ರಘುನಾಥರಾಯನಿಗೆ ಪ್ರತಿಕೂಲವೆಂದು ಮೊದಲೇ ಹೇಳಿರುವೆವಷ್ಟೆ. ಯತ್ನವಿಲ್ಲದೆ ರಘುನಾಥರಾಯನು ಕಲಕತ್ತೆಗೆ ಹೊರಟನು. ಆಗ ಒಂದು ಸಂತೋಷ. ಹೋಗಲಿ. ಕುಸುಮಳಿಗೆ ಕಣ್ಣುಬಂದರೆ ಆಗ ತಾನು ಮಾಡಿದ ತಪ್ಪಿಗೆ ಪ್ರಾಯಶ್ಚಿತ್ತವಾಗುವುದು. ಕೊನೆಗೂ ಸುಬುದ್ಧಿಯೇ ಜಯಶಾಲಿಯಾಯಿತು. ಇದರಿಂದಲೂ ರಘುನಾಥರಾಯನಿಗೆ ಸಂತೋಷ.

ಕಲಕತ್ತೆಯನ್ನು ಯಥಾಕಾಲದಲ್ಲಿ ತಲ್ಪಿದರು. ಅಲ್ಲಿ ರಘುನಾಥರಾಯನು ಒಂದು ದೊಡ್ಡ ಮನೆಯನ್ನು ಬಾಡಿಗೆಗೆ ಗೊತ್ತುಮಾಡಿಕೊಂಡನು. ಆ ಮನೆಯಲ್ಲಿ ವೈದ್ಯನು ಶಸ್ತ್ರಚಿಕಿತ್ಸೆಯ ಸಾಮಾನುಗಳನ್ನೆಲ್ಲಾ ತಂದಿಟ್ಟುಕೊಂಡು ಆಸ್ಪತ್ರೆಯ ದಾದಿಯರ ಸಹಾಯದಿಂದ ಕುಸುಮಳ ಕಣ್ಣುಗಳ ಶಸ್ತ್ರಚಿಕಿತ್ಸೆಯನ್ನು ಪ್ರಾರಂಭಿಸಿದನು.

ಶಸ್ತ್ರ ಚಿಕಿತ್ಸೆಯಾದ ಮೇಲೆ ಎರಡು ಕಣ್ಣುಗಳಿಗೂ ಬಟ್ಟೆಯಿಂದ ಚೆನ್ನಾಗಿ ಸುತ್ತನ್ನು ಕಟ್ಟಿ, ಹದಿನೈದು ದಿವಸಗಳವರೆಗೂ, ರೋಗಿಯು ಅದನ್ನು ತೆಗೆಯಲು ಪ್ರಯತ್ನಪಡಕೂಡದೆಂದೂ, ಹದಿನೈದು ದಿವಸಗಳಾದಮೇಲೆ ಇನ್ನು ಹದಿನೈದು ದಿವಸಗಳು ದಿವಸಕ್ಕೆ ಐದು ನಿಮಿಷಗಳಕಾಲ ಆ ಕಣ್ಣುಗಳಿಗೆ ಕಟ್ಟಿದ್ದ ಬಟ್ಟೆಯನ್ನು ಬಿಚ್ಚುವಂತೆಯೂ, ಈ ಮಧ್ಯೆ ತಾನು ಪ್ರತಿದಿನವೂ ಬೆಳಗ್ಗೆ ಬಂದು ಕಣ್ಣುಗಳ ಕಟ್ಟನ್ನು ಬಿಚ್ಚಿ ಔಷಧಿಯನ್ನು ಹಾಕುವಂತೆಯೂ, ಕುಸುಮಳನ್ನು ರಘುನಾಥರಾಯನಾಗಲೀ ಅವಳ ಮಕ್ಕಳುಗಳಾಗಲಿ ನೋಡಕೂಡದೆಂದೂ ಕಟ್ಟುಮಾಡಿದನು.

"ಕಣ್ಣುಗಳು ಬರುವುವೇ" ಎಂದು ರಘುನಾಥರಾಯನು ಕೇಳಿದ ಪ್ರಶ್ನೆಗೆ ವೈದ್ಯನು, "ಹದಿನೈದು ದಿವಸ ನೀವು ಸುಮ್ಮನಿರಿ. ಆ ಮೇಲೆ ಎಲ್ಲವನ್ನು ಹೇಳುತ್ತೇನೆ. ಮನುಷ್ಯ ಯತ್ನದಲ್ಲಿ ನೋಡಿವರೆ ಕಣ್ಣುಗಳು ಬರಬಹುದು" ಎಂದನು.

ರಘುನಾಥರಾಯನಿಗೆ ಈ ಶುಭಸಮಾಚಾರವನ್ನು ಕೇಳಿ ಸಂತೋಷವಾದರೂ, ತನ್ನನ್ನು ನೋಡಿದರೆ ಎಲ್ಲಿ ಅಸಹ್ಯಪಟ್ಟು ಕೊಳ್ಳುವಳೋ ಎಂಬ ಶಂಕೆಯು ಸಂಪೂರ್ಣವಾಗಿ ಅವನ ಮನಸ್ಸಿನಿಂದ ನಿವೃತ್ತಿಯಾಗಲಿಲ್ಲ.

ಹದಿನೈದು ದಿನಗಳೂ, ವೈದ್ಯನು ಸಕಾಲಕ್ಕೆ ಬಂದು ಕುಸುಮಳ ಕಣ್ಣುಗಳಿಗೆ ಔಷಧಿಯನ್ನು ಹಾಕಿ ಪುನಃ ಬಟ್ಟೆಯನ್ನು ಸುತ್ತಿ ಹೋಗುತ್ತಿದ್ದನು. ವೈದ್ಯನ ಮಾತುಕತೆಗಳನ್ನು ನೋಡಿದರೆ ಅವನಿಗೂ ಕುಸುಮಳ ಕಣ್ಣುಗಳು ಸರಿಹೋಗುವ ವಿಷಯದಲ್ಲಿ ಸಂಪೂರ್ಣ ನಂಬಿಕೆಯಿರುವುದೆಂದು ಭಾಸವಾಗುತ್ತಿತ್ತು.

ಹದಿನೈದು ದಿನಗಳಾದ ಮೇಲೆ ಕುಸುಮಳ ಕಣ್ಣುಗಳಿಗೆ ಕಟ್ಟಿದ್ದ ಬಟ್ಟೆಯನ್ನು ಬಿಚ್ಚಿದರು. ಆಗ ಅವಳು ಸ್ವಲ್ಪಕಾಲದ ಬೆಳಕನ್ನು ನೋಡಲು ಅನುಕೂಲವಾಯಿತು. ತನ್ನ ಕಣ್ಣು ಕಾಣುವ ಸ್ಥಿತಿಗೆ ಬಂದ ಕೂಡಲೆ ತನ್ನ ಮುದ್ದು ಮಕ್ಕಳನ್ನೂ ಪತಿಯನ್ನೂ ನೋಡಲು ಆತುರಪಟ್ಟಳು. ವೈದ್ಯನು ಅದಕ್ಕೆ ಅವಕಾಶ ಕೊಡಲಿಲ್ಲ. ಈಗಾಗಲೇ ಆ ರೀತಿ ಮಾಡಕೂಡದೆಂದು ಕಟ್ಟಪ್ಪಣೆ ಮಾಡಿದನು.

"ಇನ್ನು ಒಂದೆರಡು ವಾರ ಸುಮ್ಮನಿರಿ ಆ ಮೇಲೆ ನೀವು ನಿಮ್ಮ ಮಕ್ಕಳನ್ನೂ ನಿಮ್ಮ ಯಜಮಾನರನ್ನೂ ಮನದಣಿಯು ವಂತೆ ನೋಡಬಹುದು. ಅದುವರಿವಿಗೂ ಸುಮ್ಮನೆ ಇರ್ರಿ. ನೀವೇನಾದರೂ ನನ್ನ ಮಾತನ್ನು ಮೀರಿ ನಡೆದರೆ ಮುಂದೆ ನಿಮ್ಮ ಕಣ್ಣುಗಳು ಕಾಣದೆ ಹೋಗಬಹುದು. ಈ ಮಾತನ್ನು ಚೆನ್ನಾಗಿ ಜ್ಞಾಪಕದಲ್ಲಿಡಿ" ಎಂದು ವೈದ್ಯನು ಹೇಳಿದನು.

ಅದಕ್ಕೆ ಕುಸುಮಳು ಹಾಗೆಯೇ ಆಗಲೆಂದಳು.

ವೈದ್ಯನು ಹೊರಟು ಹೋದ ಮೇಲೆ ತನ್ನ ಶುಶ್ರೂಷೆಗೆ ಇದ್ದ ದಾದಿಯನ್ನು ಕುರಿತು ತನ್ನ ಮಕ್ಕಳನ್ನು ನೋಡಿ ಬಹು ದಿವಸಗಳಾಗಿದ್ದುದರಿಂದ, ಕೊಂಚ ಕಾಲ ಮಾತ್ರ ಅವುಗಳನ್ನು ಎತ್ತಿಕೊಂಡಿರಬೇಕೆಂದು ಅಪೇಕ್ಷೆಯಾಗಿದೆಯೆಂದು ಕುಸುಮಳು ಹೇಳಿದಳು.

ದಾದಿಯು ಈ ಮಾತನ್ನು ನೆರವೇರಿಸಿದುದರಿಂದ ಏನೂ ಬಾಧಕವಾಗಲಾರದೆಂದು ಎಣಿಸಿ, ಕುಸುಮಳ ಕೋರಿಕೆಯಂತೆ ಮಕ್ಕಳನ್ನು ತಂದುಬಿಟ್ಟಳು.

ಕುಸುಮಳು ಅತ್ಯಂತ ಪ್ರೀತಿಯಿಂದ ಅವುಗಳ ಮುಖಗಳನ್ನು ಮುದ್ದಾಡಿ ನನ್ನ ಕಂದಮ್ಮಗಳು, ನಿಮ್ಮ ಬಂಗಾರದಂತಿರುವ ಮುಖವನ್ನು ಎಷ್ಟು ಹೊತ್ತಿಗೆ ನೋಡುವೇನೊ" ಎಂದು ಹೇಳುತ್ತಾ ಮನಸ್ಸಿನಲ್ಲಿ ಈ ರೀತಿಯಾಗಿ ಯೋಚಿಸಿದಳು.

"ಪ್ರತಿದಿನವೂ ವೈದ್ಯರು ಐದು ನಿಮಿಷಗಳ ಕಾಲ ನನ್ನ ಕಣ್ಣುಗಳಿಗೆ ಕಟ್ಟಿದ್ದ ಬಟ್ಟೆಯನ್ನು ಬಿಚ್ಚುವರು. ಈಗ ನಾನು ಆ ಬಟ್ಟೆಯನ್ನು ಬಿಚ್ಚದೆ, ಓರೆ ಮಾಡಿ ಒಂದು ಕ್ಷಣ ಮಾತ್ರ ನನ್ನ ರತ್ನಗಳನ್ನು ನೋಡಿದರೆ ಏನೂ ಆಗಲಾರದು. ಕಣ್ಣುಗಳು ಬಂದ ಮೇಲೂ, ಇನ್ನು ಎಷ್ಟು ದಿವಸ ಮಕ್ಕಳನ್ನು ನೋಡದೆ ಇರಲು ಸಾಧ್ಯ. ವೈದ್ಯರು ಕೇಳಿದರೆ ನನ್ನ ಕೂಸು ಬಟ್ಟೆಯನ್ನು ಸಡಲಿಸಿವೆಂದು ಹೇಳುವೆನು" ಎಂದುಕೊಂಡು ದಾದಿಯನ್ನು ಕಾರಣಾಂತರದಿಂದ ಹೊರಗೆ ಕಳುಹಿಸಿ ಮೆತ್ತಗೆ ಕಣ್ಣುಗಳ ಕಟ್ಟನ್ನು ಸಡಲಿಸಿ ಮಕ್ಕಳನ್ನು ನೋಡಿದಳು. ಅವುಗಳ ಸೌಂದರ್ಯವನ್ನು ನೋಡಿ ಹಿಗ್ಗಿದಳು. ಇನ್ನು ಕೆಲವು ಕಾಲ ಚೆನ್ನಾಗಿ ನೋಡಿ ನಂತರ ಬಟ್ಟೆಯ ಕಟ್ಟನ್ನು ಕಟ್ಟಿಕೊಳ್ಳುವನೆಂದು ಮಕ್ಕಳನ್ನು ನೋಡುತ್ತಾ ಕುಳಿತಳು. ಕೂಡಲೇ ಕಣ್ಣುಗಳಲ್ಲಿ ಬೆಂಕಿ ಇಟ್ಟಂತೆ ಉರಿಯಾಯಿತು. ಅಂಧಕತ್ವವು ಪುನಃ ಪ್ರಾಪ್ತವಾಯಿತು. ಕೆಲವು ನಿಮಿಷಗಳ ತನಕ ಕಣ್ಣುಗಳ ಉರಿಯು ಒಂದೇ ಸಮನಾಗಿತ್ತು. ದೇವರು ತನಗೆ ಒಂದು ಕ್ಷಣಮಾತ್ರ, ಧೃತರಾಷ್ಟ್ರನಿಗೆ ಕೊಟ್ಟಂತೆ ದಿವ್ಯ ಚಕ್ಷುಸ್ಸನ್ನು ಕೊಟ್ಟನೆಂದು ತಿಳಿದಳು ಇನ್ನು ಚಿಂತಿಸಿ ಫಲವಿಲ್ಲ. ಪೂರ್ವಾರ್ಜಿತ ಕರ್ಮ. ತನಗೆ ಕಣ್ಣುಗಳು ಈ ಜನ್ಮದಲ್ಲಿ ದುರ್ಲಭವಾದವು. ತನ್ನ ಪತಿಯು ತನಗೋಸ್ಕರ ಇಷ್ಟು ಕಷ್ಟಪಟ್ಟರೂ ಅದು ಫಲವಾಗಲಿಲ್ಲ. ಮಕ್ಕಳ ಸುಂದರ ಮುಖಗಳನ್ನು ನೋಡಿದ್ದಾಯಿತು. ತನ್ನ ಪ್ರಾಣೇಶ್ವರನನ್ನು ಒಂದು ಗಳಿಗೆ ನೋಡಲು ಅವಕಾಶವಾಗಿದ್ದರೆ ಚೆನ್ನಾಗಿತ್ತು. ಮೊದಲೂ ಕಣ್ಣಿರಲಿಲ್ಲ. ಈಗಲೂ ಕಣ್ಣಿಲ್ಲದೇ ಹೋಯಿತು. ಮಧ್ಯದಲ್ಲಿ ಒಂದು ಕ್ಷಣ ಮಾತ್ರ ನೋಡಲು ಅವಕಾಶ ಸಿಕ್ಕಿದಾಗ ತನ್ನ ಮನೆಯನ್ನು ನೋಡಿ ಜನ್ಮ ಸಾರ್ಥಕ್ಯಮಾಡಿಕೊಳ್ಳಬಹುದಾಗಿತ್ತು. ದೇವರು ಅಷ್ಟರವ ಟ್ಟಿಗೆ ದಯತೋರಿದ್ದರೆ ಚೆನ್ನಾಗಿತ್ತಲ್ಲಾ! ಎಂತಹ ನಿಷ್ಕರುಣಿ ಆ ದೇವರು.

ಇವೇ ಮೊದಲಾದ ಯೋಚನೆಗಳಿಂದ ಕುಸುಮಳು ಚಿಂತಾಕ್ರಾಂತಳಾದಳು. ದಾದಿಯು ಪುನಃ ಬರುವುದರೊಳಗಾಗಿ ತನ್ನ ಕಣ್ಣುಗಳ ಕಟ್ಟನ್ನು ಮೊದಲಿನಂತೆಯೇ ಮಾಡಿಕೊಂಡಳು. ದಾದಿಗೆ ಗುಟ್ಟನ್ನು ಹೇಳುವುದಿಲ್ಲವೆಂದು ನಿರ್ಧರ ಮಾಡಿದಳು.

ದಾದಿಯು ಅಷ್ಟು ಹೊತ್ತಿಗೆ ಬಂದಳು. ಬಂದು ಮಕ್ಕಳನ್ನು ಆಚೆ ಕರೆದುಕೊಂಡು ಹೋಗಿಬಿಟ್ಟಳು. ಆವಳಿಗೆ ಕುಸುಮಳ ವಿಷಯದಲ್ಲಿ ಏನೂ ಅನುಮಾನಬರಲಿಲ್ಲ. ಪಾಪ, ರಘುನಾಥ ರಾಯನಿಗೂ ಈ ವಿಷಯ ತಿಳಿಯದು. ತನ್ನ ಪ್ರಿಯಳಿಗೆ ಕಣ್ಣುಗಳು ಬರುವವಲ್ಲಾ ಎಂಬ ಸಂತೋಷದಲ್ಲೇ ಇದ್ದನು.

ಮಾರನೆಯದಿನ ಬೆಳಿಗ್ಗೆ ವೈದ್ಯನು ಎಂದಿನಂತೆ ಬಂದು ಕುಸುಮಳ ಕಣ್ಣುಗಳಿಗೆ ಕಟ್ಟಿದ್ದ ಬಟ್ಟೆಯನ್ನು ಬಿಚ್ಚಿ ನೋಡಿದನು. ಕಣ್ಣುಗಳು ಊದಿಕೊಂಡಿದ್ದವು. ಅವುಗಳನ್ನು ನೋಡಿದ ಕೂಡಲೆ ಆ ವೈದ್ಯನಿಗೆ ಎಲ್ಲವೂ ತಿಳಿಯಿತು. ಮನದಲ್ಲಿ ಬಹಳವಾಗಿ ನೊಂದುಕೊಂಡನು. ಬಹು ಕಷ್ಟಪಟ್ಟು, ತನ್ನ ಶಸ್ತ್ರಚಿಕಿತ್ಸೆಯ ಕೌಶಲದಿಂದ ಕುಸುಮಳಿಗೆ ಕಣ್ಣುಗಳು ಕಾಣುವಂತೆ ಮಾಡಬೇಕೆಂದು ಆಶೆಪಟ್ಟು ಅದರಂತೆಯೆ ತನ್ನ ಆಶೆಗೆ ಸರಿಯಾಗಿ ದೈವವೂ ಸಹ ಅನುಕೂಲಮಾಡಿ ಕುಸುಮಳಿಗೆ ಕಣ್ಣುಗಳು ಬರುವ ಸಮಯದಲ್ಲಿ, ಈ ವಿಚಾರ ಶೂನ್ಯಳಾದ, ವಿವೇಕವಿಲ್ಲದ ಹುಡುಗಿ ಎಂತಹ ಕೆಲಸವನ್ನು

ಮಾಡಿಬಿಟ್ಟಳು. ತನ್ನ ಪ್ರಯತ್ನಗಳೆಲ್ಲವೂ ಉಪಯೋಗವಿಲ್ಲ ದುದಾಯಿತು. ಇನ್ನು ತಾನು ರಘುನಾಥರಾಯನಿಗೆ ಏನು ಹೇಳುವುದು ಎಂದು ಆ ವೈದ್ಯನು ಬಹು ಕೊರಗಿದನು.

"ಅಮ್ಮಾ ಏನು ಅನರ್ಥ ಮಾಡಿದೆ. ಒಂದುವಾರ ಸುಮ್ಮ ನಿದ್ದರೆ ಆಗಿತ್ತಲ್ಲಾ ನಿನ್ನ ತಲೆಯ ಮೇಲೆ ಎಂತಹ ಚಪ್ಪರಿ ಯನ್ನು ಎಳೆದುಕೊಂಡಿ. ನನ್ನ ಬುದ್ಧಿಶಕ್ತಿಯನ್ನೆಲ್ಲಾ ಖರ್ಚು ಮಾಡಿ ನಿನಗೆ ಕಣ್ಣುಗಳುಳಿಸಬೇಕೆಂದು ಪ್ರಯತ್ನವಷ್ಟೆ. ಅದೆ ಲ್ಲವೂ ಏನು ಪ್ರಯೋಜನಕಾರಿಯಾಯಿತು? ನಿನ್ನ ಹಣೇಬರಹ ಈ ರೀತಿ ಇದ್ದಿತೊ ಏನೊ? ದೈವದ ಮುಂದೆ ನಾವೇ?" ಎಂದು ಗೋಳಿಟ್ಟನು. ಆಗ ಕುಸುಮಳು, ಸ್ವಾಮಿ, ವೈದ್ಯರೆ ತಾವು ಮರುಗದಿರಿ. ಮಕ್ಕಳನ್ನು ನೋಡಬೇಕೆಂಬ ಆಶೆಯು ಬಹಳ ಬಲವತ್ತರವಾಗಿದ್ದಿತು. ಆ ಆಶೆಯನ್ನು ಪೂರ್ತಿ ಮಾಡಲು ನಾನು ನಿಮ್ಮ ಆಜ್ಞೆಗಳನ್ನು ಉಲ್ಲಂಘನೆ ಮಾಡಿದೆ. ಅದಕ್ಕೆ ತಕ್ಕ ಶಿಕ್ಷೆಯನ್ನು ಅನುಭವಿಸುತ್ತಿದ್ದೇನೆ. ನನ್ನ ಪತಿಯನ್ನು ಒಂದು ಬಾರಿ ನೋಡಲು ಅವಕಾಶವಾಗಿದ್ದರೆ ನನಗೆ ಪುನಃ ಅಂಧತ್ವವು ಬಂದಿದ್ದಕ್ಕೆ ಚಿಂತಿಸುವುದಿಲ್ಲ. ಅದು ಆಗದೆ ಹೋಯಿತು. ನನ್ನ ಮನಸ್ಸಿನಲ್ಲಿ ಅಷ್ಟೇವ್ಯಥೆ. ಎಲ್ಲವೂ ನಮ್ಮ ಕರ್ಮ. ನೀವು ನನ್ನ ತಪ್ಪಿಗೋಸ್ಕರ ಚಿಂತಿಸುವ ಕಾರಣ ವಿಲ್ಲ." ಎಂದಳು.

ವೈದ್ಯನು ಮರುಮಾತನಾಡದೆ ರಘುನಾಥರಾಯನಲ್ಲಿಗೆ ಬಂದು ನಡೆದ ವಿಷಯಗಳನ್ನೆಲ್ಲಾ ಆದ್ಯಂತವಾಗಿ ತಿಳಿಸಿದನು. ರಘುನಾಥರಾಯನು ವಿಷಯಗಳನ್ನು ಕೇಳಿ ಸ್ತಬ್ಧನಾದನು. ಬಾಯಿಯಲ್ಲಿ ಮಾತೇ ಹೊರಡಲಿಲ್ಲ. ಹಿಂದಿನ ಸ್ವಪ್ನವು ಜ್ಞಾಪಕಕ್ಕೆ ಬಂತು. ಎಲ್ಲವೂ ಅದರಂತೆಯೇ ನಡೆಯಿತು. ರಘು ನಾಥರಾಯನ ಮನಸ್ಸಿನಲ್ಲಿ ಒಂದು ಚಿಂತೆ ಬಲವಾಯಿತು. ತಾನು ಹಿಂದೆ ಕುಸುಮಳಿಗೆ ಕಣ್ಣುಬಾರದಿರಲೆಂದು ಅಭಿ ಪ್ರಾಯಪಟ್ಟಿದುದರಿಂದ ಕುಸುಮಳಿಗೆ ಈ ರೀತಿ ಅನರ್ಥವಾ ಗಿರಬಹುದು, ಎಂದುಕೊಂಡು ತನ್ನ ಬಹಳವಾಗಿ ನಿಂದಿಸಿ ಕೊಂಡನು. ಇನ್ನು ಕುಸುಮೆಯ ಬಳಿ ಹೋಗಿ ತನ್ನಹಿಂದಿನ ಮನೋಭಾವವನ್ನು ಅವಳಿಗೆ ತಿಳಿಸಿ ಅವಳ ಕ್ಷಮಾಪಣೆ ಯನ್ನು ಬೇಡಬೇಕೆಂದು ಅವಳ ಕಿರುಮನೆಗೆ ಹೋದನು.

"ಕುಸುಮಾ, ನನ್ನನ್ನು ಕ್ಷಮಿಸುವಿಯಾ, ನಾನು ಕುರೂಪಿ. ನಿನಗೆ ಕಣ್ಣುಗಳು ಬಂದರೆ ನೀನು ನನ್ನ ಕುರೂಪವನ್ನು ನೋಡಿ ಜಿಗುಪ್ಸೆಪಟ್ಟುಕೊಳ್ಳುವಿಯೆಂದು ಊಹಿಸಿ ನಾನು ನಿನ್ನನ್ನು ಕಲಕತ್ತೆಗೆ ಕರೆದುಕೊಂಡು ಬರಲು ಸಾವಕಾಶ ಮಾಡಿದೆ. ಆ ನನ್ನ ಹಾಳು ಯೋಚನೆಯೇ ನಿನಗೆ ಬಂದಿದ್ದ ಕಣ್ಣುಗಳನ್ನು ನಾಶಮಾಡಿರಬಹುದು. ನಾನೆಂಥಹ ಪಾಪಿ. ನನ್ನ ಸ್ವಾರ್ಥತೆಯು ನಿನ್ನ ಕಣ್ಣುಗಳನ್ನು ಕಿತ್ತುಕೊಂಡಿತೇ ನನ್ನನ್ನು ಕ್ಷಮಿಸು. ಈ ಪಾಪಿಯನ್ನು ಕ್ಷಮಿಸು. ನಿನ್ನ ಕಣ್ಣು ಗಳನ್ನು ನಾನೇ ಕಿತ್ತುಕೊಂಡಿರುವೆನು" ಎಂದು ಗದ್ಗದ ಸ್ವರ ದಿಂದ ಮಾತನಾಡಿದನು.

ಆಗ ಕುಸುಮಳು "ಪ್ರಾಣೇಶ್ವರ, ತಾವು ಚಿಂತಿಸದಿರಿ. ಇದೆಲ್ಲವೂ ನನ್ನ ಪೂರ್ವಾರ್ಜಿತಕರ್ಮದ ಫಲವು. ನಿಮ್ಮಂ ತಹ ಪತಿಯನ್ನು ಪಡೆದ ನಾನು ಯಾತಕ್ಕೂ ಚಿಂತಿಸಬೇಕಾ ಗಿಲ್ಲ. ಒಂದು ಬಾರಿ ನಿಮ್ಮನ್ನು ನೋಡಬೇಕೆಂದು ಅಪೇಕ್ಷೆಯಿ ದ್ದಿತು. ನೀವು ಕುರೂಪಿಯೆಂದು ಹೇಳಿಕೊಂಡರೂ, ನೀವು ನನಗೆ ಸೌಂದರ್ಯಮೂರ್ತಿಯೇ ಆಗಿರುವಿರಿ. ಇದು ನಿಮ್ಮ ತಪ್ಪಲ್ಲ. ನನ್ನದು. ನಾನು ಕುರುಡಿಯಾಗಿದ್ದರೆ ಏನು ಬಾಧಕ? ನೀವು ನನ್ನ ಸಂಗಡ ಬಹಳ ಹೊತ್ತು ಇರಲು ಅನುಕೂಲವಾ ಯಿತು. ಕಣ್ಣುಗಳಿಂದ ನನಗೇನೂ ಆಗಬೇಕಾಗಿಲ್ಲ. ನನ್ನ ಮನಸ್ಸಿನಲ್ಲಿ ನಿಮ್ಮ ಆಕೃತಿಯೊಂದನ್ನು ನಿರ್ಮಾಣಮಾಡಿರು ವೆನು. ಅದನ್ನೇ ಮೊದಲಿನಂತೆಯೇ ಪೂಜಿಸುವೆನು." ಎಂದು ಬಹಳವಾಗಿ ರಘುನಾಥರಾಯನನ್ನು ಸಂತೈಸಿದಳು.

ರಘುನಾಥರಾಯನು "ಕೈಗೆ ಬಂದದ್ದು ಬಾಯಿಗೆ ಇಲ್ಲ" ವಾಯಿತೆಂದುಕೊಂಡು ಕುಸುಮಳೊಡನೆ ತನ್ನೂರಿಗೆ ಬಂದನು.

× × × ×

ದಂಪತಿಗಳು ಎಂದಿನಂತೆ ಸುಖವಾಗಿದ್ದಾರೆ. ರಘುನಾಥ ರಾಯನ ಯೋಚನೆಗಳೆಲ್ಲಾ ದೂರವಾದವು. ಕುಸುಮಳ ಹೆಸ ರಿನಲ್ಲಿ ರಘುನಾಥರಾಯನು ಒಂದು ಕಣ್ಣಿನ ಆಸ್ಪತ್ರೆಯನ್ನು ಚೆನ್ನಪುರಿಯಲ್ಲಿ ಕಟ್ಟಿಸಿದನು. ಅಲ್ಲಿ ಗುಣವಾದ ರೋಗಿಗಳು ತಮ್ಮ ಊರಿಗೆ ಹೋಗುವ ಮುಂಚೆ ಕುಸುಮಳಲ್ಲಿಗೆ ಹೋಗಿ ತಮ್ಮ ಕೃತಜ್ಞತೆಯನ್ನು ಸೂಚಿಸಿ ಬರುತ್ತಾರೆ.

# ಬರುತ್ತದೆ ಬರುತ್ತದೆ

ಅಥವಾ

## ನಾಟಕಿ ನಾನು



ಲೇಖಕ— ಅನುಭವಿಕ

### ಮುನ್ನುಡಿ

ಈ ಕಥೆಯ ಕುರಿತು ಮುನ್ನುಡಿಯ ನಾಲ್ಕು ಮಾತುಗಳು ಬೇಕೇ ಬೇಕು. ಇದರಲ್ಲಿನ ವಿಷಯಗಳು ಅನೇಕ ಮಂಡಳಿಗಳಲ್ಲಿನ ನನ್ನ ಅನುಭವಗಳು. ಚಿತ್ರವನ್ನು ಚಿತ್ರಿಸುವುದರಲ್ಲಿ ವಸ್ತುಸ್ಥಿತಿಯನ್ನೇ ಹೇಳಿರುವೆ. ನಿಂದೆಯಿಂದ "ರಂಗಭೂಮಿ"ಯನ್ನು ನಾಶಮಾಡುವುದು ನನ್ನ ಉದ್ದೇಶವಿಲ್ಲ. ಇದ್ದ ಸ್ಥಿತಿಯನ್ನು ಚಿತ್ರಿಸಿ, ರಂಗಭೂಮಿಯನ್ನು ಮುತ್ತಿದ ಕಂದಕದ ಬೀಳಲುಗಳನ್ನು ಹರಿಯಬೇಕೆಂದು ಈ ತೀಕ್ಷ್ಣವಾದ ಕತ್ತಿಯನ್ನು ಹೊರತೆಗೆದಿರುವೆ. ಔಷಧದಂತೆ ರೋಗಿಯ ಪಾಲಿಗೆ ಕಹಿಯಾದರೂ ಇದು ಹಿತಕಾರಿಯೇ ಸರಿ.

ಇನ್ನು ನನ್ನ ಆಕ್ಷೇಪಗಳಿಗೆ ಗುರಿಯಾಗದವರೇ ನಾಟಕಮಂಡಳಗಳಲ್ಲಿಲ್ಲವೇ ಎಂದುಕೇಳಿದರೆ—ಇರುವರು ಎಂದೇ ಉತ್ತರಕೊಡುವೆ. ಆದರೆ ಅವರ ಸಂಖ್ಯೆಯು ಈ ವಿಷಮಯವಾತಾವರಣವನ್ನು ಭೇದಿಸುವಷ್ಟು ಪ್ರಬಲವಾಗಿಲ್ಲ. ಇಲ್ಲವೆ, ಇದಕ್ಕಿದ್ದ ಸ್ಥಿತಿಯಲ್ಲಿ, ಆ ರತ್ನಗಳ ಸ್ಥಿತಿಯೂ ಭದ್ರವಾಗಿಲ್ಲ.

ಈ ಲೇಖನವು ತನ್ನ ಸುಧಾರಣೆಯ ಉದ್ದೇಶವನ್ನು, ನಟರಲ್ಲಿಯೂ, ಪ್ರೇಕ್ಷಕರಲ್ಲಿಯೂ ಹುಟ್ಟಿಸಿತೆಂದರೆ ನಾನು ಧನ್ಯನು.

ಇತಿ

**ಅನುಭವಿಕ**

ವಿ. ಸೂ:— ಈ ಲೇಖನದಲ್ಲಿ ಶುದ್ಧಭಾಷೆಗೆ ಗಮನಕೊಡದೆ ಆದಷ್ಟು ನಾಟಕೀ ಜನರ ಪ್ರಯೋಗಗಳನ್ನೇ ಉಪಯೋಗಿಸಿರುವೆ.

"ಬರುತ್ತದೆ! ಬರುತ್ತದೆ!" ಇದೇ ನಮ್ಮ ಕಣ್ಣಿಗೆ ಬಿದ್ದ ಅಕ್ಷರಗಳು. ಇಂದಿಗೆ ಹತ್ತು ವರುಷಗಳ ಪೂರ್ವದ ಕಥೆಯನ್ನು ಹೇಳುತ್ತಿರುವೆ. ಹಳೆಯ ಸುದ್ದಿಯೆಂದು ಹಳಿಯದಿರಿ. ಕಥೆಯು ಆ ಹಳೆಯ ದಿನದಿಂದ ಇಂದಿನ ಹೊಸಗಳಿಗೆಯವರೆಗೆ ಹರಡಿ ಹಬ್ಬಿರುವ ಪ್ರವಾಹ, ನದಿಯಪ್ರವಾಹವಲ್ಲ. ಅದರಂತೆಯೇ ಇರುವ ನಡೆನುಡಿಗಳ ಪ್ರವಾಹ. ಹತ್ತುವರುಷ ಉದ್ದದ ಆ ನದಿಯೊಳಗೆ ನಾನೂ, ನನ್ನ ಗೆಳೆಯರೂ ಹೇಗೆ ಮಿಂದು ಮೀಸಿ ಮೆರೆದುವೆಂಬುದು ಹೇಳುವೆನು. ಆ ದಿನ ಪ್ರಾತಃಕಾಲ ನಮ್ಮ ಚಿಕ್ಕಪ್ಪನ ಮಗ ರಾಮು, ನಮ್ಮ ಊರ ಅಕ್ಕಸಾಲಿಗ ವೆಂಕಣ್ಣನ ಮಗ ಕಾಳಪ್ಪ ಮತ್ತು ನಾನು, ಇಷ್ಟು ಮಂದಿ ಸಾಲೆಯಕಡೆಗೆ ಹೊರಟಿದ್ದೆವು. ದಾರಿಯಲ್ಲಿ ಒಂದು ಅಶ್ವತ್ಥದ ಕಟ್ಟೆಯಿದೆ. ಅದರ ಬಳಿಗೆ ಬಂದು ನಾವು ಹರಟೆ ಹೊಡೆಯುತ್ತ ತುಸುಹೊತ್ತು ನಿಂತುಕೊಂಡೆವು. ಮಾತಿನ ಗೊಂದಲದಲ್ಲಿ ನಾವು ಎದುರಿಗಿದ್ದ ಮಹಡಿ ಮನೆಯ ಕಡೆಗೆ ನೋಡುವ ಪ್ರಸಂಗವೊಂದು ಬಂದಿತು. ನಿತ್ಯವೂ ಬೋಳಾಗಿ ಕಾಣಿಸುತ್ತಿದ್ದ ಅವರ ಗೋಡೆಯಲ್ಲಿ ನಮ್ಮ ಕಣ್ಣಿಗೆ "ಬರುತ್ತದೆ, ಬರುತ್ತದೆ" ಎಂಬ ಅಕ್ಷರಗಳು ಕಂಡುಬಂದುವು. ನಾವು ಮೂವರೂ ನಮ್ಮ ಹಳ್ಳಿಯನ್ನು ಬಿಟ್ಟು ಶಹರಿಗೆ ಬಂದುದು ಅದೇ ಮೊದಲಾದ್ದರಿಂದ ಈ "ಬರುತ್ತದೆ" ಯ ಅರ್ಥ ಒಮ್ಮೆಗೆ ಹೊಳೆಯಲಿಲ್ಲ. ಬಳಿಗೆ ಹೋಗಿ ಕಾಣಲು ಸ್ವಲ್ಪ ಚಿಕ್ಕ ಅಕ್ಷರಗಳಿಂದ "ಆಲೆಯೂರಿನ ಸುಪ್ರಸಿದ್ಧ ಶ್ರೀ ಕಾಳಿಕಾ ಪರಮೇಶ್ವರಿ ನಾಟಕ ಸಂಘದವರು" ಎಂದಿತ್ತು. ನಾಟಕವೆಂದರೆ ನಾವು ಇನ್ನೂ ಕಂಡವರಲ್ಲ. ಅದೇನೆಂದು ತಿಳಿಯುವ ಕುತೂಹಲವಾಯಿತು. ನಮ್ಮಿಂದ ಸ್ವಲ್ಪ ದೂರದಲ್ಲಿ ಒಬ್ಬ ಮನುಷ್ಯನು, ಇನ್ನೊಂದು ಮನೆಯ ಗೋಡೆಗೆ ಅಂತಹ ಜಾಹೀರಾತನ್ನು ಅಂಟಿಸುತ್ತಿದ್ದನು. ನಾವು ಮೂವರೂ ಅವನಿದ್ದಲ್ಲಿಗೆ ಓಡಿದೆವು. ಆ ಮನುಷ್ಯನು ಒಳ್ಳೇ ಸರದಾರನಂತೆ ಉಡಿಗೆತೊಡಿಗೆಯನ್ನು ಧರಿಸಿದ್ದರೂ ಸ್ವತಃ

ಈ ಕೆಲಸ ಮಾಡುವುದನ್ನು ಕಂಡು ನಮಗೆ ಆಶ್ಚರ್ಯವಾಯಿತು. ಆಗ ನನ್ನ ಮನಸ್ಸಿಗೆ "ಮೈದುಡಿದು ಮಾಡುವ ಕೆಲಸಗಳು ಹೀನವಲ್ಲ" ಎಂಬ ನಮ್ಮ ಪಠ್ಯಪುಸ್ತಕದಲ್ಲಿದ್ದ ಮಾತು ನೆನಪಿಗೆ ಬಂದು, ಈ ಮಹನೀಯನಲ್ಲಿ ಗೌರವವು ಹೆಚ್ಚಿ ಅವನನ್ನು ಹಿಂಬಾಲಿಸಿದೆನು. ಅಷ್ಟರಲ್ಲಿ ರಾಮಪ್ಪ ಕಾಳಪ್ಪರು ದೂರದಿಂದ ಸಾಲೆಯ ಘಂಟೆಯನ್ನು ಕೇಳಿ ಓಡಿ ಹೋದರು. ನನಗೆ ಇವನ ಕುರಿತು ಪೂರ್ಣ ವಿಷಯವನ್ನು ತಿಳಿಯದೆ .ಸಾಲೆಗೆ ಹೋಗಲು ಮನಸ್ಸುಬಾರದು. ಅತ್ತ, ಅವರು ಹೇಳದೆ ಹೋದುದರಿಂದ ನನ್ನ ಶಾಲೆಯ ಸಂಬಳವನ್ನು ಸಹ ಮುಂದಾಗಿ ಕಳುಹಿಸಿಕೊಡಲು ಅನುಕೂಲಿಸಲಿಲ್ಲ. "ಹೇಗೂ ವೇಳೆಯಾಯಿತು" ಇನ್ನು ಆದದ್ದಾಗಲಿ" ಎಂದು ನಾನು ಅವನನ್ನೇ ಹಿಂಬಾಲಿಸಿದೆ. ಅವನು ಹತ್ತೆಂಟು ಬೀದಿಗಳನ್ನು ಸುತ್ತಿ ತನ್ನ ಕೆಲಸವನ್ನು ಮುಗಿಸಿ, ಒಂದು ಅಂಗಡಿ ಜಗುಲಿಯ ಮೇಲೆ ಕುಳಿತನು. ನಾನು ಅಂಜಿ ಅಂಜಿ ಅವನಿಗೆ ಸ್ವಲ್ಪದೂರದಲ್ಲಿ ನಿಂತೆ. ಅವನ ದೃಷ್ಟಿಯು ಆಗ ನನ್ನ ಕಡೆಗೆ ಹರಿದು ಒಮ್ಮೆಗೇ, "ಕಡ್ಡೀ ಪೆಟ್ಟಿಗೆ ಇದೆಯೇ" ಎಂದು ಕೇಳಿದನು. ನನಗೆ ಆಶ್ಚರ್ಯವಾಯಿತು. ನಮ್ಮಂತಹ ಚಿಕ್ಕ ಬಾಲಕರು ಬೀಡಿ ಎಳೆಯುವುದಿಲ್ಲವೆಂದು ಅವನಿಗೆ ತಿಳಿಯದೆ ಹೋಯಿತಲ್ಲಾ ಎಂದು. ನಾನು "ಇಲ್ಲ"ವೆಂದು ಉತ್ತರ ಕೊಟ್ಟೆ. ಕೊನೆಗೆ "ನಿಮಗೆಲ್ಲಿ?" ಎಂದು ಕೇಳಿದೆ. ಅಷ್ಟೇ ತಡ. ಅವನು ಬಲು ದಯಾಳುವಿನಂತೆ, ತಿರುಗಿ ನನ್ನ ಪ್ರಶ್ನೆಗಳ ಆವಶ್ಯಕತೆಯೇ ಇಲ್ಲದಂತೆ ಅರ್ಧತಾಸಿನ ತನಕ "ತಾನು, ತನ್ನ ಅಶಿಸ್ಟಂಟ್ ಮೇನೇಜರಿಕೆ, ತನ್ನ ಕಂಪೆನಿ, ತಮ್ಮ ವೈಭವ" ಈ ಕುರಿತು ಮಾತನಾಡಿದನು. ಅವನಿಗೆ ಕಂಪೆನಿಯಲ್ಲಿ 'ಒಂದಾಣೆ ಪಾಲಂತೆ' ಅಂತು ಅವನು ಅತಿ ಒಳ್ಳೆಯವನೆಂದು ತಿಳಿದೆ. ಅವನ ಕಂಪೆನಿಯ ಕಥೆ ಕೇಳಿ ನನಗೆ, ಸಾಲೆ, ಮನೆ, ಊಟ ಎಲ್ಲಾ ಮರವೆಯಾಯಿತು.

ಅಷ್ಟಕ್ಕೆ ಸರಿಯಾಗಿ ಅವನು "ಚಾಹಾ ದುಕಾನವಿಲ್ಲವೇ" ಎಂದು ನನ್ನನ್ನು ಕೇಳಿದನು. ನಾನು ಅವನನ್ನು ಒಂದು ಕಾಫಿ ಅಂಗಡಿಗೆ ಒಯ್ದೆನು. ಮತ್ತು ವೇಳೆಯಾದುದರಿಂದ ಮನೆಗೆ ಹೋಗಲು ಹೊರಟೆ. ಅವನು ನನ್ನನ್ನು "ಅಣ್ಣ"ನಂತೆ ಅಂಗಡಿಗೆ ಬರಹೇಳಿದನು. ಇಬ್ಬರಿಗೂ ಕಾಫಿ ತಿಂಡಿಗಳಾದುವು. ಅಂಗಡಿಕಾರನು, 'ಇಬ್ಬರಿಂದ ೮ ಆಣೆಯಾಯಿತು' ಎಂದನು.ಕಂಪೆನಿಯವನು "ಒಂದು ಸೀಜರ್ಸ ಕೊಡಿರಿ"ಅಂದನು. 'ಕತ್ತರಿ' ಇವನಿಗೇಕೆಂದು 'ಮಿಟ ಮಿಟ' ಅವನನ್ನು ನೋಡುತ್ತಿದ್ದೆ. ಆಗ ಅಂಗಡಿಕಾರನು 'ಕತ್ತರಿಮಾರ್ಕಿ'ನ ಒಂದು ಸಿಗರೇಟ ಪೆಟ್ಟಿಗೆಯನ್ನು ಕೊಟ್ಟನು. ತಿರುಗಿ ಮೆನೇಜರನು 'ಮಾಚಿಸ್' ಎಂದನು. ಕಡ್ಡಿಪೆಟ್ಟಿಗೆಯು ಅವನ ಅಪ್ಪಣೆ ಮೇರೆಗೆ ಬಂದಿತು. ಅಲ್ಲಿಗೆ 'ಬಿಲ್ಲು' ೦-೧೨-೩ ಆಯಿತಂತೆ! ಮೇನೆಜರನು "ಅಷ್ಟೆಸರಿಯೇ" ಎಂದು ಕಿಸೆಗೆ ಕೈ ಹಾಕಿದನು. ಹಾಗಾದರೆ ಇವನು ಶ್ರೀಮಂತನಿರಬೇಕೆಂದು ನನಗೆ ಹೊಳೆಯಿತು; ಅದರಿಂದ ಅವನಲ್ಲಿ ಆಸಕ್ತಿಯು ಹೆಚ್ಚಿ ಅವನನ್ನು ಕಾಣುತ್ತ ನಿಂತೆನು. ಕಿಸೆಯೊಳಕ್ಕೆ ಹಾಕಿದ ಬೆರಳುಗಳು ಕೆಳಗಡೆಯಿಂದ ಕಾಣಿಸಿಕೊಂಡುವು. ದೊಡ್ಡ ಮನುಷ್ಯರ ಕಿಸೆಗಳಿಗೂ ಕಿಡಕಿ ಬಾಗಿಲುಗಳಿರಬಹುದೆಂದು ನಾನು ಯೋಚಿಸುವಲ್ಲಿ, ಅವನು "ಅಯ್ಯೋ ನನ್ನ ಮನಿಪರ್ಸ ಬಿದ್ದೇ ಹೋಯಿತೇ, ಟ್ವೆಂಟಿ ರುಪೀಸು ವ್ಯರ್ಥವಾಯಿತು" ಎಂದನು. ಆಗ ಅವನು ೨೦ ರೂಪಾಯಿಗಳನ್ನು ಕಳೆದುಕೊಂಡನೆಂದು ನನಗೆ ತಿಳಿದು ವ್ಯಸನವಾಯಿತು. ಆದರೆ ಅವನು "ಡೊಂಟ ಕೇರ" ಅಂದನು. "ಇನ್ನೆಷ್ಟು ಶ್ರೀಮಂತನಪ್ಪ" ಎಂದುಕೊಂಡೆ. ಅವನು "ನಾಳೆ ಕೊಡುವೆನು" ಎಂದನು. "ನಿಮ್ಮ ಗುರುತಿಲ್ಲದೆ ಸಾಲ ಸಿಗದು" ಎಂದು ಅಂಗಡಿಕಾರನು ಹೇಳಿದನು. "ನಾವು ನಾಟಕ ಕಂಪನಿಯ ಮೆನೇಜರರು" ಎಂದುತ್ತರ.

ಅಂಗಡಿಕಾರನು "ಯಾರಾದರೇನು? ನಮ್ಮಲ್ಲಿ, ಸಿಕ್ಕಿದವರಿಗೆ ಸಾಲ ಕೊಡುವುದಿಲ್ಲ" ಎಂದನು.

ಮೆನೇಜರನ ಮೋರೆಯು ಸ್ವಲ್ಪ ಬಾಡಿತು. ಆದರೂ ವ್ಯಸನಪಡದೆ "ತಮ್ಮಾ ನಿನ್ನಲ್ಲಿರುವುದೆ?" ಎಂದು ಪ್ರೀತಿಯಿಂದ ಕೇಳಿದನು. ಇಲ್ಲವೆನ್ನಲು ನನ್ನ ಬಳಿಯಲ್ಲಿ ಸಾಲೆಗೆ ಕೊಡಬೇಕಾಗಿದ್ದ ಒಂದು ರೂಪಾಯಿ ಇತ್ತು. ಅದು ಆಕಸ್ಮಿಕವಾಗಿ ಆತನ ಕಣ್ಣಿಗೂ ಬಿದ್ದಿತ್ತು. ಸುಳ್ಳು ಹೇಳುವುದಕ್ಕೆನೋ ಎಡೆಯಿದ್ದಿಲ್ಲ. ಆದರೆ ತಪ್ಪಿಸಿಕೊಳ್ಳಲು, ಸಾಧ್ಯವಿದ್ದರೂ ನಾನು ಅದಕ್ಕಾಗಿ ಯತ್ನಿಸಲಿಲ್ಲ. ಅವನು "ತಮ್ಮಾ ಇದ್ದರೆ ಕೊಡು. ಇನ್ನರ್ಧತಾಸಿನಲ್ಲಿ ನಮ್ಮ ಜನರು ಬರುವರು. ನಿನಗೆ ಮರಳಿ ಕೊಡುವೆನು" ಎಂದನು. ಯೋಚನೆಯಿಲ್ಲದೆ ನನ್ನ ಕೈಗಳೂ ಕೊಟ್ಟುವು. ಅಂಗಡಿಕಾರನು ೦-೩-೯ ನ್ನು ಹಿಂದಕ್ಕೆ ಅವನ ಕೈಮೇಲಿರಿಸಿದನು. ಅದನ್ನು ಅವನೇ ಇರಿಸಿಕೊಂಡುದನ್ನು ಕಂಡು, "ಬಳಿಕ ಒಟ್ಟಿಗೆ ೧ ರೂಪಾಯಿಯನ್ನು ಕೊಡುವನು" ಎಂದು ಊಹಿಸಿದ್ದೆ.

ಹೀಗೆ ನಮ್ಮ ವ್ಯವಹಾರವು ನಡೆಯುವ ವೇಳೆಯಲ್ಲಿ ಸಾಲೆಗೆ ಹೋದ ಗೆಳೆಯರು ಬಂದರು. ಮನೆಗೆ ಹೋಗುವ ವೇಳೆಯಾಯಿತು. ನಾನು ಹೊರಡಲಾಸಕ್ತನಾದುದನ್ನು ಕಂಡು ಅವನು "ಊಟಮಾಡಿ ಬಾ. ನಾನಿಲ್ಲೇ ಇರುವೆ ಎಂದನು. ನಾನು ಹೊರಟೆ.

ಊಟ ಮಾಡಿ ಬರುವಾಗ ಅವನು ಅಲ್ಲಿರಲಿಲ್ಲ. ಅವನನ್ನು ಹುಡುಕಲು ಸಾಧ್ಯವೇ? "ಮೆನೇಜರನು! ಎಷ್ಟೋ ಕೆಲಸಗಳಿರಬಹುದು" ಎಂದು ಹಾಗೆಯೇ ಸಾಲೆಗೆ ಹೋದೆ. ಸಾಲೆಯಲ್ಲಿ ವೇಳೆಗೆ ಬರದಿದ್ದುದಕ್ಕೂ, ಸಂಬಳ ಕೊಡದಿದ್ದುದಕ್ಕೂ ಮಂಗಳಾರತಿಯಾಯಿತು. ಸಾಲೆ ಬಿಟ್ಟ ಬಳಿಕ, ತಿರುಗಿ ಊರನ್ನು ಅವನಿಗಾಗಿ ಸುತ್ತಿದೆ. ಆಸಾಮಿ ಪತ್ತೆ ಇಲ್ಲದಾಯಿತು. ಮನೆಯಲ್ಲಿ "ರೂಪಾಯಿ ಕಳೆದುಹೋಯಿತು" ಎಂದು ಹೇಳಿದೆ. ನನ್ನ ರಕ್ಷಕರು ನನ್ನನ್ನು ಸ್ವಲ್ಪ ಬೈದು ತಿರುಗಿ ಒಂದು ರೂಪಾಯಿಯನ್ನು ಕೈಮೇಲಿರಿಸಿದರು. ನನಗೆ ನಾನು ಕೊಟ್ಟ ರೂಪಾಯಿಯ ಸ್ಮರಣೆಯೂ ಸಹ ಪೀಡಿಸುತ್ತಿದ್ದಿಲ್ಲ. "ಬದಲು ರೂಪಾಯಿ ಸಹ ಸಿಕ್ಕಿತು. ಮೇನೇಜರನಿಂದ ನನ್ನ ರೂಪಾಯಿಯು ಹೇಗೂ ಬರುತ್ತದೆ" ಎಂದುಕೊಂಡೆ. ಒಮ್ಮೆ "ಅವನು ಕೊಡಲು ಮರೆತರೂ ನಾನು ಕೇಳುವುದಿಲ್ಲ" ಎಂದುಕೊಂಡೆ, ನನಗೆ ಪ್ರಸಿದ್ಧ ಕಾ. ಪ. ನಾ. ಸಭೆಯ ಮೇನೇಜರ ಸ್ನೇಹವಾಗಲಿಲ್ಲವೇ? ಅಂತಹ ಶ್ರೀಮಂತನ ಆ ಮಂಡಳಿಯಾದರೂ ಬೇಗನೆ ನಮ್ಮ ಊರಿಗೆ ಬರುತ್ತದೆ! ಬರುತ್ತದೆ!"

## ೨. "ಈ ದಿನರಾತ್ರಿ"

"ಬರುತ್ತದೆ! ಬರುತ್ತದೆ!" ಎಂದಿದ್ದ ಅಲೆವೂರ ಮಂಡಳಿಯು ಎಷ್ಟೋ ಊರುಗಳನು ಅಲೆದಲೆದು ನಮ್ಮ ಊರಿಗೂ ಬಂದೇ ಬಿಟ್ಟಿತು. ೧೦-೨೦ ಗಾಡಿ ತುಂಬಾ ಏನೋ ಏನೋ ತುಂಬಿತಂದಿದ್ದರು. ಅದನ್ನು ಕಂಡು ನನಗೇನೊಂದೂ ತಿಳಿಯಲಿಲ್ಲ. ಅದಕ್ಕೆ ಕೆಲವು ದಿವಸದ ಪೂರ್ವದಿಂದ ನಮ್ಮೂರ ಮೈದಾನದಬಳಿ ಸಿದ್ಧವಾಗುತ್ತಿದ್ದ ಚಪ್ಪರಕ್ಕೆ ಒಯ್ಯಲ್ಪಟ್ಟವು. ನಾವು ಸಾಲೆಯಲ್ಲಿದ್ದರೂ ನಮ್ಮ ತಲೆಯೆಲ್ಲಾ ಚಪ್ಪರದಲ್ಲಿ! ಸಾಲೆ ಮುಗಿದೊಡನೆಯೇ ತಂಡತಂಡರಾಗಿ ಅಲ್ಲಿಗೋಡಿದೆವು. ನಮಗೂ ಪೂರ್ವದಲ್ಲಿ ಅನೇಕ ಊರ ಹಿರಿಯರು ಬಂದಿದ್ದರು. ಚಪ್ಪರದ ನಡುವಿನಲ್ಲಿ ಒಂದು ದೊಡ್ಡ ಕುಣಿಯನ್ನು ತೆಗೆದಿದ್ದರು. ಅದು ನಮ್ಮೂರ ಜನರ ಸಲುವಾಗಿ ಮಾಡಿದ್ದೆಂಬುದಾಗ ನನಗೆ ತಿಳಿದಿರಲಿಲ್ಲ. ಅಂತು ೨-೩ ದಿನಗಳಲ್ಲಿ ಅವರ ಸಿದ್ಧತೆಯೆಲ್ಲಾ ಮುಗಿದು ಒಂದು ದಿನ "ಈ ದಿನ ರಾತ್ರಿ" ಎಂಬ ಪ್ರಕಟನೆಗಳನ್ನು ವಾದ್ಯಸಮೇತ ಸಾರಿದರು. ನಾನು ಓಡಿ ಓಡಿ ಒಂದು ಕೆಂಪು ಕಾಗದ ತೆಗೆದುಕೊಂಡೆ. ಈ ದಿನ ರಾತ್ರಿ ೯-೩೦ ಕ್ಕೆ "ಶ್ರೀಕೃಷ್ಣಲೀಲಾ" ಎಂಬ ನಾಟಕವನ್ನು ಅಭಿನಯಿಸುವರು ಎಂದಿತ್ತು.

"ಈ ದಿನ ರಾತ್ರಿ" ಹೇಗಾದರೂ ನಾಟಕಶಾಲೆಗೆ ಹೋಗಲೇಬೇಕು ಎಂದು ನಿರ್ಧರಿಸಿದೆ. ಈ ಮಧ್ಯ ನಮ್ಮ ಮೇನೇಜರನ ಸುದ್ದಿ. ನಾಟಕಿ ಜನರು ನಮ್ಮೂರ ನಡುವೆ ಒಂದು ದೊಡ್ಡ ಮನೆಯಲ್ಲಿಳಿದುಕೊಂಡಿದ್ದರು. ನಾನು ಅಲ್ಲಿ ಅವರನ್ನು ಕಾಣಬಹುದೆಂದು ಹೋದೆ. ಯಾರೂ ನನ್ನನ್ನು ಮಾತನಾಡಿಸಲಿಲ್ಲ. ಧೈರ್ಯವಾಗಿ ಮನೆಯೊಳಕ್ಕೆ ನುಗ್ಗಿದೆ. ಆಗ ಯಾರೋ ಒಂದು ಕೋಣೆಯಲ್ಲಿ ಕುಳಿತುದು ನನ್ನ ಕಣ್ಣಿಗೆ ಕಂಡಿತು. ಅವರೂ ಸಾದಾ ಉಡಿಗೆಯಲ್ಲಿದ್ದರು. ನನ್ನನ್ನು ಕಂಡು "ಯಾರವರು?" ಎಂದರು. ನಾನು ಅವರ ಬಳಿಗೆ ಹೋಗಿ ನಿಮ್ಮ ಮೆನೇಜರರೆಲ್ಲಿ. ಎಂದು ಕೇಳಿದೆ. ಅದಕ್ಕವರು "ನಾನೇ ಏತಕ್ಕೆ ?" ಎಂದು ಕೇಳಿದರು. ನನಗೆ ಆಚ್ಚರಿಯಾಯಿತು. ಆಗ ನಾನು ನೀವಲ್ಲ,"ಆದಿನ ಗೋಡೆಗೆ 'ಬರುತ್ತದೆ' ಅಂಟಿಸಲು ಬಂದವರು" ಎಂದೆ. ಅದಕ್ಕವರು ನಕ್ಕರು. ನಾನು ನನ್ನ ಪುರಾಣ ಹೇಳಿದೆ, ಅವರು ತಿರುಗಿ ಹೊಟ್ಟೆ ತುಂಬಾ ನಕ್ಕರು. ಮತ್ತು "ಅವನಿಲ್ಲ ಅವನು ಕಂಪೆನಿ ಬಿಟ್ಟುಹೋದನು"ಎಂದರು. ಅಷ್ಟಕ್ಕೇ ನಾನು ಹೊರಡಬೇಕೆನ್ನದಿದ್ದರೂ, ಅವರು ನನ್ನನ್ನು ನಿಲ್ಲಿಸಿಕೊಂಡು, ನನಗೆ ತಮ್ಮ ಕೈಯಿಂದ ಒಂದು ರೂಪಾಯಿಯನ್ನು ಕೊಟ್ಟರು. ನಿರಾಶೆಯಲ್ಲಿ ಆಸೆ! ಮುಂದೆ "ನಿನಗೆ ಹಾಡಲು ಬರುವುದೇ ಎಂದು ಕೇಳಿದರು. ನಾನು ಅವರ ಪರಿಚಯದ ಆಸೆಯಿಂದ ಅಂಬುಜಾನನೆ ಕೇಳು ತಾಂಡವ ಎಂಬ ಭಾಮಿನಿ ಷಟ್ಪದಿಗಳನ್ನು ಹಾಡಿಬಿಟ್ಟೆ. ಅವರೂ ತಲೆದೂಗಿದರು. ಕೊನೆಗೆ ಹೇಳಿದರು "ಈದಿನ ನಾಟಕಕ್ಕೆ ಬಾ" ಎಂದು. ಒಂದು ಅರಶಿನ ಚೀಟಿಯನ್ನು ಕೊಟ್ಟರು. ನಾನು ಓಡೋಡಿ ಮನೆಗೆ ಬಂದೆ.

ರಾತ್ರಿ, ಮನೆಯವರನ್ನು ಕೇಳಿ, ನಾಟಕಶಾಲೆಗೆ ಓಡಿದೆ. ಆ ಫ್ರೀ ಪಾಸವನ್ನು ಹಿಡಿದು ನಾಟಕಶಾಲೆಯನ್ನು ನುಗ್ಗಿದೆ. ಆಗ ತಿಳಿಯಿತು-ಆ ಕುಣಿಯು ನನ್ನಂತೆ ನೋಟಕರ ಸಲುವಾಗಿ ತೆಗೆಸ್ಪಪೆಂದು. ಅಂತು ಆದಿನ ಬಹಳ ಜನ ಬಂದಿದ್ದರು. ಮುಂದಿನ ಎರಡು ಮೂರು ಸಾಲುಗಳ ತುಂಬ ನನ್ನಂತೆಯೇ ಅರಶಿನ ಚೀಟಿಯನ್ನು ತಂದ ದೊಡ್ಡ 'ಆಫೀಸರು' ಗಳೂ

ಸಾಹುಕಾರ ಮೊದಲಾದವರೂ ಕುಳಿತಿದ್ದರು. ನನ್ನಂತೆಯೇ ಅವರು "ಫ್ರೀ" ಅಂದರೆ ಬೆಲೆಯಿಲ್ಲದೆ ಬಂದವರು ಎಂದು ಊಹಿಸಿ ಅವರ ಜತೆಯಲ್ಲಿ ನಾನೂ ಗಂಭೀರವಾಗಿ ಕುಳಿತೆ. ಇಂಥವರಿಗೆ ನಾಟಕದ ಜನರು, ಒಳಗೊಳಗೆ "ಉದಾರಾಶ್ರಯದವರೆಂದು" ಕರೆಯುವರು.

ಒಂದರಗಳಿಗೆಯಲ್ಲಿ ಎರಡುಮೂರು ಬಾರಿ ಘಂಟೆ ಬಾರಿಸಿತು. ನಾನು ಉಪಾಧ್ಯರು ಪಾಠವನ್ನಾರಂಭಿಸುವರು ಎಂದು ಊಹಿಸಿದೆ. ಅದು ಸುಳ್ಳಾಯಿತು. ನನ್ನಮುಂದೆ, ರಂಗಸ್ಥಳದಲ್ಲಿ ನಾಲ್ಕಾರು ಬಾಲಕಿಯರು ಗಾನವನ್ನು ಹಾಡಿದರು. ಕೂಡಲೆ "ಢಂ" ಸದ್ದಾಯಿತು. ನಾನು ಕುರ್ಚಿಯಿಂದ ಜಿಗಿದು ಬಿದ್ದೆ. ಎದುರು ಶೇಷಶಾಯಿ ನಾರಾಯಣನ ಸಭೆ. ನಾರದರೆಂಬವರು ತಂಬೂರಿಹಿಡಿದು ಹಾಡುತ್ತಿದ್ದರು. ಅವರಿಗೆ ನನ್ನಂತೆಯೇ "ಗೋಲಿ" ಆಡುವ ಪ್ರಾಯ. ಮುಂದೆ ಅನೇಕ ದೃಶ್ಯಗಳು ಪ್ರದರ್ಶಿಸಲ್ಪಟ್ಟವು. ಕೊನೆಗೆ ಯಾರೋ ವಿಜಯನೆಂಬವನು ಬಂದನು. ಅವನ ಜತೆಯಲ್ಲಿ ಬಾಲಕೃಷ್ಣನು. ಕೃಷ್ಣನು ಚೆನ್ನಾಗಿ ನಟಿಸುತ್ತಿದ್ದನು. ಆದರೆ ಆತನು ಗೋಪಕನ್ನೆಯರೊಡನೆ, ಆಡಿದ, ಮಾಡಿದ, ಲೀಲೆಗಳನ್ನು ಕಂಡು ಏನೋ ಅನಿಸಿತು. ನನ್ನ ಸುತ್ತುಮುತ್ತು ಕುಳಿತಿದ್ದ ಹಿರಿಯ ಕಿರಿಯ ಜನರು, ಒಂದೇಸವನೆ ಆನಂದದಿಂದ, 'ವನ್ಸಮೋರ್' ಅನ್ನುತ್ತಿದ್ದರು ಮತ್ತು ಕೈ ಚಪ್ಪಾಳೆ ಹೊಡೆಯುತ್ತಿದ್ದರು. ಅಂತು ಅನೇಕ ಸೀನರಿಗಳನ್ನು ಕಂಡೆ. ಜರತಾರಿ ಉಡಿಗೆಗಳ ಹೊರೆಯನ್ನೂ ನೋಡಿದೆ. ಜನರಿಗೆ ಹಿಗ್ಗೋ ಹಿಗ್ಗು. ರಂಗಭೂಮಿಯ ಮೇಲೆ, ರಾಧೆ, ವಿಜಯ, ಕೃಷ್ಣ ಇವರು ಬಂದೊಡನೆಯೇ ಜನರಲ್ಲಿ ತುಂಬಾ ಉತ್ಸಹ. ನಾನು ಇದನ್ನು ಕಂಡು ನಾಟಕ ನೋಡುವುದರ ಬದಲು, ನನ್ನ ಬಳಿಯಲ್ಲಿದ್ದ ಇಬ್ಬರು ಗೃಹಸ್ಥರ ಮೋರೆಯನ್ನೇ ಕಾಣತೊಡಗಿದೆ. ಅಂತಹ ಪ್ರಸಂಗಗಳಲ್ಲಿ, ಅವರ ಕಪೋಲಗಳು ಕೆಂಪಾಗುತ್ತಿದ್ದವು. ಕಣ್ಣುಗಳ ಗತಿಯೇ ಬೇರೆ. ಅವರವರೊಳಗೆ ಏನೋ ಪಿಸುಮಾತನಾಡುತ್ತಿದ್ದರು. ಆ ಮಾತುಗಳನ್ನು ಕೇಳಿದೆ. ನನಗೆ ಆಶ್ಚರ್ಯವು ಹಿಡಿಯದಾಯಿತು. ಅಂತಹ ಮಾತುಗಳನ್ನು ನಾನು ಆಡಿದುದು ನಿಜವಾದರೆ, ನನ್ನ ಉಪಾಧ್ಯಾಯರಾಗಲಿ, ಮನೆಯವರಾಗಲಿ ಅನ್ನವನ್ನೇ ಹಾಕುತ್ತಿದ್ದಿಲ್ಲ.

ನಾಟಕವು, ಗೋಪಿಕಾವಸ್ತ್ರಾಪಹರಣ ಮತ್ತು ಕಾಳಿಂಗಮರ್ದನದೊಂದಿಗೆ ಸಮಾಪ್ತವಾಯಿತು. ಮೊದಲು ಹೇಳಿದ ದೃಶ್ಯವನ್ನು ಕಂಡು, ನನಗೆ ಶ್ರೀಕೃಷ್ಣನಲ್ಲಿದ್ದ ಅಭಿಮಾನವೇ ಹೋಯಿತು. ಆದರೂ ನಾಟಕಕ್ಕೆ ಬರುವ ಆಸೆಯು ತಗ್ಗಲಿಲ್ಲ. ನಾನು ಆದಿನ ನಾಟಕದಲ್ಲಿ ಕೇಳಿದ ಕೆಲವು ಅರ್ಥವಾಗದ ಮಾತುಗಳನ್ನು ಉರುಹಾಕುತ್ತ ಮನೆಗೆ ಹಿಂದಿರುಗಿದೆ.

ದಾರಿಯಲ್ಲಿ ಜನರು ಅಂದರೆ ನನ್ನಂತೆಯೇ ನಾಟಕದಿಂದ ಮರಳಿ ಬರುವವರು ಸಿಕ್ಕಿದರು. ಕೆಲವರು "ರಾಧೆಯ ರೂಪನ್ನು ನೋಡಬಾರದೇ–ಕೃಷ್ಣ, ಬೇಷಾಗಿರುವ ಥರದೆ ಸೀನೆಂದರೆ ಅದು.– ಇನ್ನೊಮ್ಮೆ ಬರಲೇ ಬೇಕು–ನಾಡಿದ್ದು ವಿಕ್ರಮ ಶಶಿಕಲೆಯಂತೆ. ತುಂಬಾ ಸೀನ್ ಇರಬೇಕು—ಹಾಗಾದರೆ ಖಂಡಿತ ಹೋಗಲೇಬೇಕು." ಎಂದಂದುಕೊಳ್ಳುತ್ತಿದ್ದರು. ಅಂತು ನಾನು ತಿರುಗಿ ಬರುವ ನಿರ್ಧಾರಮಾಡಿದೆ. ಅರಸಿನ ತಿಕೀಟಿಗೆ ಆ ನನ್ನೊಯ್ಯುವ ಶಕ್ತಿಯಿದ್ದಿತ್ತು. ಅವರ ಉಪಕಾರ ಸ್ಮರಣೆಮಾಡಲು ನಾನು ನಿತ್ಯವು ಮಂಡಳಿಯವರ ಮನೆಗೆ ಹೋಗಬೇಕೆಂದೂ ನಿರ್ಧರಿಸಿದೆ. ಆ ರಾತ್ರಿಯು ಹಾಗೆಯೇ ಕಳೆಯಿತು. ಆದರೆ ಆ ವಿಚಿತ್ರ ಚಿತ್ರಗಳು ಮಾತ್ರ ನನ್ನ ಕಣ್ಮುಂದಿನಿಂದ ಮಾಯವಾಗಲಿಲ್ಲ. ಇನ್ನೊಂದು "ಈ ರಾತ್ರಿ" ಯಾವಾಗ ಬಂದೀತೆಂದು ಹಾರೈಸತೊಡಗಿದೆ.

## ೩ ಅಲೆಯೂರವರ ಬಲೆ

ಪ್ರಕಟಿಸಿದಂತೆ ವಿಕ್ರಮಶಶಿಕಲಾ–ನಾಟಕವಾಯಿತು. ಅದು ಶೃಂಗಾರಮಯವಾಗಿತ್ತು. ಜನರಿಗೆ ಆ ನಾಟಕದಿಂದ ವಿಶೇಷ ಪರಿಣಾಮವಾದಂತೆ ಕಾಣುತ್ತದೆ. ಯಾವರೀತಿಯ ಪರಿಣಾಮವೋ ಕಾಣೆ ! ಅಂತು ಪ್ರತಿಯೊಬ್ಬನಲ್ಲಿಯು ಅವರ ವಿಕ್ರಮ ಶಶಿಕಲೆ–ಶ್ರೀಕೃಷ್ಣಲೀಲಾ ಪ್ರಮೀಳಾ ಮೊದಲಾದ ನಾಟಕಗಳನ್ನು ತಿರುಗಿ ಕಾಣಬೇಕೆಂಬ ಲವಲವಿಕೆ ಬಹಳವಾಗಿತ್ತು.

ಇನ್ನು ನನ್ನ ಕಥೆ. ನಾನು ಮರುದಿನ ನನ್ನ ಆಪ್ತ ಗೆಳೆಯ ರಾಮಪ್ಪ ಕಾಳಪ್ಪರಲ್ಲಿ–ನಾಟಕದ ಸುದ್ದಿ ಹೇಳಿದೆ. ಆ ದಿನ ವಿಚಿತ್ರನಾಗಿ ಕಂಡ ಕೆಲವು ಮಾತುಗಳ ಅರ್ಥಕ್ಕಾಗಿ ಅವರನ್ನು ಕೇಳಿದೆ. ಅವರಿಗೆ ತಿಳಿದಿರಲಿಲ್ಲ. ನಮ್ಮ ಮಾತುಗಳಿಂದ ಆಕರ್ಷಿತವಾದ ಇನ್ನೊಬ್ಬ ಬಾಲಕನು, ಅದನ್ನು ವಿವರಿಸಿದನು. ಮಾತುಗಳ ಅರ್ಥವು ನಮಗೆ ಅಶ್ಲೀಲವಾಗಿ ಕಾಣಿಸಿತಾದರೂ, ಅದನ್ನು ತಿಳಿಯುವ, ಮೇಲಿಂದಮೇಲೆ ಕೇಳುವ ಕುತೂಹಲವು ನಮ್ಮಲ್ಲಿ ಉಂಟಾಯಿತು. ಇನ್ನು ನಾಟಕದಲ್ಲಿ ತೋರಿಸಿದ ದೃಶ್ಯಗಳ ಚಿತ್ರವು ನನ್ನ ಮನಸ್ಸಿನಲ್ಲಿ ಅನೇಕ ಕಲ್ಪನೆಗಳನ್ನು

ತರತೊಡಗಿತು. ಅವುಗಳ ಜಾಲದಲ್ಲಿ ನಾನು ಸಿಲುಕಿದೆ. ಆಗ ನನಗೆ ೧೪ ವಯಸ್ಸಿರಬಹುದು. ಅಷ್ಟೊಂದು ಚಿಕ್ಕವನಾದರೂ ಈ ನಾಟಕಗಳ ಅನುಭವದಿಂದ ನನ್ನ ಮನಸ್ಸಿನಲ್ಲಿ ವಿಷಯದ ಸುಳಿಗಾಳಿಯು ಸುಳಿಯತೊಡಗಿತು. ಮೊದಲು ಅರ್ಥವಿಲ್ಲದ, ಬಳಿಕ ಅರ್ಥವಾಗಿ ಅನರ್ಥಕಾರಿಯೆಂದು ತೋರಿದ ಆ ಮಾತುಗಳೂ, ದೃಶ್ಯಗಳೂ ನನ್ನನ್ನು ಮೂಢನನ್ನಾಗಿ ಮಾಡಿದುವು.

ನಾನು ನಾಟಕಮಂಡಳಿಯ ಯಜಮಾನರ ಬಳಿಗೆ ನಿತ್ಯವೂ ಹೋಗುತ್ತ ಬಂದೆ. ಅವರು ನನ್ನನ್ನು ಬಲವಾಗಿ ಪ್ರೀತಿಸತೊಡಗಿದರು. ನಿತ್ಯವೂ ನನಗೆ ಕಾಫಿ ತಿಂಡಿ. ನನ್ನ ಮುದ್ದಾದ ರೂಪು ಮಂಡಳಿಯ ಇತರ ಜನರನ್ನು ಆಕರ್ಷಿಸಿದಂತೆ ತೋರಿತು. ಅವರೂ ನನ್ನ ಸ್ನೇಹವನ್ನು ಬೆಳೆಯಿಸಿದರು. ನನಗೆ ಒಂದೆರಡು ಹಾಡುಗಳನ್ನೂ ಹೇಳಿಕೊಟ್ಟರು. ಅವರ ಉಡಿಗೆ ತೊಡಿಗೆ, ಸಂತೋಷಮಯ ಜೀವನ, ಇವನ್ನು ಕಂಡು ನನಗೂ ಅವರಂತೆ ಹಾರಾಡುವ ಹಕ್ಕಿಯಂತೆ ಸ್ವತಂತ್ರನಾಗಬೇಕೆಂಬ ಆಸೆಯಾಯಿತು. ಅದರಲ್ಲಿ ನನಗೂ ಕೃಷ್ಣನ ಭೂಮಿಕೆಯನ್ನು ವಹಿಸುತ್ತಿದ್ದ 'ಚಿದಂಬರ' ಎಂಬ ಬಾಲಕನಿಗೂ ತುಂಬಾ ಗೆಳೆತನವಾಯಿತು. ಈ ಗೊಂದಲದಲ್ಲಿ ನನಗೆಲ್ಲಿ ಪಾಠಗಳು ರುಚಿಸಬೇಕು ?

ನನಗಂತು ಮಂಡಳಿಗೆ ಸೇರುವ ಲವಲವಿಕೆಯು ಬಹಳವಾಯಿತು. ಆದರೆ ಮನೆಯವರನ್ನಾಗಲಿ, ಮಂಡಳಿಯ ಯಜಮಾನರನ್ನಾಗಲಿ ಕೇಳುವ ಧೈರ್ಯವಿಲ್ಲ. ಒಂದುದಿನ ನಮ್ಮ ಮ್ಯಾನೇಜರು ಅವರ ಹೆಸರು, ಮನೋಹರ ರಾಯರೆಂದು. ಅವರು, ನನ್ನಿಂದ ತಿರುಗಿ ಒಂದು ಹಾಡು ಹಾಡಲು ಹೇಳಿದರು. ನಾನು ಅಲ್ಲಿ ಹಾಡಿದ ಮೊದಲನೆಯ ಹಾಡೆಂದರೆ "ಅಂಬು ಜಾನನೆ! ಇನ್ನು ಎರಡನೆಯದೇನೆನ್ನಲಿ ಎನ್ನುವಷ್ಟರಲ್ಲಿ, ಅವನು ನಮ್ಮ ರಾಜುವು ಹೇಳಿಕೊಟ್ಟ. "ಅಹ ಸುಖಕೊಳಗಾದೆ" ಎಂಬ ಹಾಡನ್ನು ಹಾಡು ಎಂದರು. ಆ ರಾಜು ಎಂದರೆ ವಿಜಯನ ಭೂಮಿಕೆಯನ್ನು ವಹಿಸುವ ಮಿತ್ರ. ನಾನು ಹಾಡನ್ನು ಹಾಡಿದೆ. ಅದನ್ನು ಕಲಿಯುವಾಗ ಅರ್ಥದ ಕಡೆಗೆ ಗಮನಕೊಟ್ಟರಲಿಲ್ಲ. ಈಗ ಒಮ್ಮೆಗೆ ಅದು ಹೊಳೆದು ನನಗೆ ಒಂದು ರೀತಿಯ ನಾಚಿಕೆಯಾಗಿ ಹಾಡನ್ನು ನಿಲ್ಲಿಸಿದೆ. ಅವರು "ಚಿಂತೆಯಿಲ್ಲ" ಎಂದು ಬೆನ್ನು ಚಪ್ಪರಿಸಿ "ಏನು? ನಮ್ಮಲ್ಲಿಗೆ ಬರುವೆಯಾ?" ಎಂದು ಕೇಳಿದರು. ನನ್ನ ಆಶಾಡಬ್ಬಿಯ ಮುಚ್ಚಳವನ್ನು ಅವರೇ ತೆಗೆದರು. ನಾನು "ಹೂಂ" ಎಂದು ಬಿಟ್ಟೆ. ಆದರೆ ನನ್ನ ಮನೆಯವರ ದೆಸೆಯಿಂದ ನನ್ನ ಆಸೆ ಪೂರ್ತಿಯಾಗುವ ಭರವಸೆಯು ನನಗೆ ತೋರಲಿಲ್ಲ. ಆದರೂ ಅವರ ಕೇಳಿಕೆಯಂತೆ ನನ್ನ ತಂದೆಯ ಸುದ್ದಿ ಹೇಳಿದೆ.

ಹೀಗೆಯೇ ನಾಲ್ಕಾರು ದಿವಸಗಳು ಕಳೆದವು. ಒಂದು ದಿನ ನಾನು ಸಾಲೆಗೆ ಹೋಗುವಾಗ ದಾರಿಯಲ್ಲಿ ಅಂಚೆಯವನು ನನಗೆ ಒಂದು ಲಕೋಟೆಯನ್ನು ತಂದುಕೊಟ್ಟನು. ಆತುರದಿಂದ ಒಡೆದು ನೋಡಿದೆ. ಅದು ನನ್ನ ತಂದೆಯ ಪತ್ರವಾಗಿತ್ತು. ನಮ್ಮ ಮನೋಹರರಾಯರು ನನ್ನ ಸಲುವಾಗಿ ( ನಾನು ಹಾಗೆಯೇ ತಿಳಿದೆ, ) ನನ್ನ ತಂದೆಯ ಬಳಿಗೆ ಹೋಗಿ ಅವರಿಗೆ ೩೦೦ ರೂಪಾಯಿಗಳನ್ನು ಮುಂಗಡಕೊಟ್ಟು ಅವರಿಂದ ನನ್ನ ಬಗ್ಗೆ ಮೂರು ವರಷಕ್ಕೆಂದು ನೈಪತ್ರಮಾಡಿಸಿಕೊಂಡು ಬಂದಿದ್ದರು. ತಂದೆಯವರು ನನಗೆ ನೀನು ಮಂಡಳಿಯನ್ನು ಸೇರಬಹುದು ಎಂದು ಬರೆದಿದ್ದರು. ಅವರಾಗಿ ಹೀಗೆ ಬರೆಯದಿದ್ದರೆ ನಾನು ಹೋಗುತ್ತಿದ್ದಿಲ್ಲ ಎನ್ನುವುದು ಕಠಿಣ. ಆ ಪ್ರಬಲ ಲೋಹಚುಂಬಕವು ನನ್ನನ್ನು 'ಪರಾರಿ' ಯಾಗುವುದಕ್ಕೆ ಉಪದೇಶ ಮಾಡುವಷ್ಟು ಬಲವಾಗಿತ್ತು. ಅಂತು ಸಮ್ಮತಿ ಬಂದಿತಷ್ಟೆ. ನನ್ನ ರಾಮು ಕಾಳಪ್ಪರಿಗೆ ತಿಳಿಸಿದೆ. ಅವರು ತಮಗೆ ಆ ಸುಯೋಗವು ದೊರೆಯದೆ ಹೋಯಿತಲ್ಲಾ ಎಂದು ದುಃಖಿಸಿದರು.

ನಾನು ಆ ಪತ್ರದಲ್ಲಿ ಸೂಚಿತವಾದಂತೆ ಅದೇ ದಿನವೇ ಊರಿಗೆ ಹೋದೆ. ನನ್ನ ತಂದೆಯು ಮನೆಯಲ್ಲಿ ತಂಬಾ ಆದರೋಪಚಾರಗಳಿಂದ ಕಂಡನು. ಆದಿನ ನನಗೆ ಭಾರೀ ಔತಣ. ಔತಣಕ್ಕೆ ಮನೋಹರರಾಯರ ಸವಾರಿಯೂ ಬಂದಿತ್ತು. ಸಂಜೆ ಹೊರಡುವ ವೇಳೆಯಾಗಲು ತಂದೆಯು ನನ್ನ ಕೈಯನ್ನು ರಾಯರ ಹಸ್ತದ ಮೇಲಿರಿಸಿ "ಮಗು ಮುಂದೆ ಇವರೇ ನಿನಗೆ ತಂದೆಯೆಂದು ತಿಳಿ. ಇವರು ಹೇಳಿದ್ದನ್ನು ಕೇಳುತ್ತ, ದುಸ್ಸಂಗಕ್ಕೆ ಹೋಗದೆ, ವಿದ್ಯಾವಂತನಾಗಿ ನಿನ್ನ ಮನೆಗೆ ಒಂದು ಹೆಸರನ್ನು ತಾ. ನಿನಗೆ ಶಾಲಾವಿದ್ಯಾಭ್ಯಾಸವನ್ನು ಮಾಡಿಸುವಷ್ಟು ಶಕ್ತಿಯು ನನಗಿಲ್ಲ. ನಾನು ಬಡವನಾದ್ದರಿಂದ, ಇವರಿಂದ ಉಪಕೃತಿಹೊಂದಿ ಅವರಲ್ಲಿಗೆ ನಿನ್ನನ್ನು ಕಳುಹಿಸುವೆ" ಎಂದರು. ಆ ತಂದೆಯ ಕಣ್ಣುಗಳಿಂದ ಧಾರಾಕಾರವಾಗಿ ನೀರು ಸುರಿಯಿತು. ವಿಯೋಗ ಸಮಯದಲ್ಲಿ ನಾನೂ ಅತ್ತೆ. ಮತ್ತು ತಂದೆಯ ಅಪೇಕ್ಷೆಯಂತೆ

ನಡೆಯುವೆನೆಂದೂ ಹೇಳಿದೆ. ಅಂತು ಅಂದಿಗೆ ನಾನು ತಂದೆಯ ವರದಿಂದ ದೂರಾದೆ.

## ೪ ನೆಲದಮೇಲಿನ ಸ್ವರ್ಗ

ಇಂದಿಗೆ ನಾನು ಊರನ್ನು ಬಿಟ್ಟು ಎರಡು ತಿಂಗಳಾಯಿತು. ಮನೆಯಿಂದ ನನಗೆ ಆಗಾಗ ಪತ್ರಗಳು ಬರುತ್ತಿದ್ದುವು. ನಾನೂ ಪ್ರತ್ಯುತ್ತರ ಕೊಡುತ್ತಿದ್ದೆ. ಆದರೆ ನಮ್ಮ ಮಂಡಳಿಯ ಸಂತೋಷದ ಸುಳಿವಿನಲ್ಲಿ ಸಿಕ್ಕಿದ ನಾನು ನನ್ನ ರಾಮುಕಾಳಪ್ಪರಿಗೆ ಒಂದೂ ಪತ್ರ ಬರೆಯಲಿಲ್ಲ. ಇಂದಿಗೆ ಅವರ ಕಿನೇ ಪತ್ರ ಬಂದಿದೆ. "ಅಣ್ಣಾ, ನೀನು ನಮ್ಮನ್ನಿಷ್ಟು ಬೇಗನೆ ಮರೆಯುವೆಯೆಂದು ತಿಳಿದಿರಲಿಲ್ಲ. ಅಹುದು– ಆ ಸ್ವರ್ಗಸುಖದಲ್ಲಿ ಈ ಬಡಸ್ನೇಹಿತರ ನೆನಪು ಹೇಗಾಗಬೇಕು? " ಎಂದು ಬರೆದಿದ್ದರು. ನನಗೆ ಅಳುಬಂದಿತು. ನನ್ನ ತಪ್ಪನ್ನು ತಿದ್ದಿಕೊಳ್ಳಲು ಲೇಖನಿಯನ್ನು ಒಂದು ಕಾಗದವನ್ನು ಹಿಡಿದು ಕುಳಿತೆ. "ಪ್ರಿಯ ಮಿತ್ರರೇ" ಎಂದು ಬರೆಯುವಷ್ಟರಲ್ಲಿ ಚಿದಂಬರ ಮತ್ತು ಭದ್ರಪ್ಪನು ಬಂದರು. ಭದ್ರಪ್ಪನು ನಮ್ಮ ಮಂಡಳಿಯ ಎರಡನೇ ರಾಜಾಪಾರ್ಟು. ಅವನಿಗೆ ಹತ್ತೆಂಟು ಪದಕಗಳು ಬಹುಮಾನ ದೊರತಿದ್ದುವಾದರೂ ಅವನು ಬರೇ ಒಂದನ್ನು ಮಾತ್ರ ಚಿನ್ನದ ಸರಪಣಿಯಿಂದ ಕೈಗೆ ತೂಗಿಸಿಕೊಂಡಿದ್ದನು. ಅವನು ಒಳ್ಳೇ 'ಫ್ರೋಜು ಆಕ್ಟರ'ನೆಂದು ಪ್ರಸಿದ್ಧಿ. ನನಗೆ ವಯಸ್ಸು ಚಿಕ್ಕದಾಗಿದ್ದರೂ ಕನ್ನಡ ಭಾಷೆಯ ಪರಿಚಯವೆನೋ ಚೆನ್ನಾಗಿತ್ತು. ಇಂಗ್ಲಿಷಿನಲ್ಲಿ ಇನ್ನೂ 'ಯಸ್ ನೋ" ಎನ್ನಲು ಪ್ರಾರಂಭ. ನಮ್ಮ ಮಂಡಳಿಯಲ್ಲ ಕನ್ನಡದ ಗಂಧವಿಲ್ಲದವರು, ಅಷ್ಟನ್ನು ನನಗೂ ಮುಂದಾಗಿಯೇ ಕಲಿತಿದ್ದರು. ಇರಲಿ ಈ ನನ್ನ ಭಾಷಾಜ್ಞಾನದಿಂದ ಹೇಳುವುದಾದರೆ ಭದ್ರಪ್ಪನು ಉತ್ತಮಗದ್ಯನಟ! ಅವನಿಗೆ ೧೦೦ ರೂಪಾಯಿ 'ಪಗಾರು' ದೊರೆಯುತ್ತಿತ್ತು. ವಾಕ್ಯಕ್ಕೊಂದೆರಡಾವೃತ್ತಿ ಆಗುವ ವ್ಯಾಕರಣ ದೋಷಗಳನ್ನು ಮನ್ನಿಸಿದರೆ ಅವನ ಭಾಷೆಯು ತಕ್ಕಷ್ಟು ಶುದ್ಧವಿದ್ದಿತ್ತು. ಅಭಿನಯದ ಕುರಿತು ಹೇಳಲು ನನಗೆ ಅನುಭವವಿದ್ದಿಲ್ಲ. ಆದರೂ, ದುಃಖ, ಸಂತಸ, ಕೋಪತಾಪಗಳಲ್ಲಿಯೂ ಒಂದೇಸವನೆ, ಕಣ್ಣನ್ನು ದೊಡ್ಡದು ಮಾಡಿಕೊಂಡು ಗಂಭೀರವಾದ ಮುಖಮುದ್ರೆಯಿಂದ ಒಂದೇ ರೀತಿಯಿಂದ ನಿಲ್ಲಬೇಕಾದರೆ ಸಾಧಾರಣ ಅಭ್ಯಾಸಿಗಳಿಗೆ ಸಾಧ್ಯವಿಲ್ಲ. ಅವನು ನಮ್ಮ "ಪ್ರಾಕ್ಟಿಸು ಮಾಸ್ತರನು 'ಪ್ರಾಕ್ಟಿ'ಸಿಗೆ ನಮ್ಮಲ್ಲಿ 'ತಾಲಿಂ' ಎಂಬ ಹೆಸರೂ ಉಂಟು.

ಓಹೋ ವಿಷಯವನ್ನು ಮರೆತಿದ್ದೆ ಅಹುದು. ನಾನು 'ಪ್ರಿಯರೇ' ಎಂದು ಬರೆಯುವಷ್ಟರಲ್ಲಿ ಭದ್ರಪ್ಪನು ನನ್ನನ್ನು ನೂಕಿದನು. ಬಂದೆ ಎನ್ನುವುದರಲ್ಲಿ ಅವನೇ ಬಂದನು.

ಭದ್ರ—ಏನು ಮಾಡುತ್ತಿರುವೆ? ಬಾಬಾ, ಚಾಹಾ ಅಂಗಡಿಗೆ ಹೋಗೋಣ.

ನಾನು—ಈ ಪತ್ರ ಬರೆದು ಬರುವೆ.

ಭದ್ರ— ಯಾರಿಗೆ ಅದು?

ನಾನು— ನನ್ನ ಬಾಲಮಿತ್ರರಿಬ್ಬರಿಗೆ.

ಭದ್ರ—ನಿನಗೆ ಹುಚ್ಚು. ಹಾಗೆ ನಾಟಕ ಕಂಪನಿಯವರು ತಮ್ಮ ಗೆಳೆಯರಿಗೆಲ್ಲಾ ಪತ್ರಬರೆಯುವದಾದರೆ ಅಂಚೆವೆಚ್ಚಕ್ಕೆ ನಮ್ಮ ಸಂಬಳವೇ ಸಾಲದು. ಆಯಾಯ ಊರನ್ನು ಬಿಟ್ಟೆವೆಂದರೆ ಅಲ್ಲಿಯ ಮಿತ್ರರ ಸ್ಮರಣೆಯನ್ನು ಬಿಡಬೇಕು. ತಿರುಗಿ, ಆ ಊರಿಗೆ ಹೋಗುವ ಮೊದಲನೆ ದಿನ ಮಾತ್ರ ಅವರ ನೆನಪು ತಂದುಕೊಳ್ಳಬೇಕು.

ನಿಜ. ಇದು ನಮ್ಮ ಜನರ ಪದ್ಧತಿ. ಪರಿಚಯಸ್ಥರಿಗೆಲ್ಲಾ ಕಾಗದ ಬರೆಯುವುದೆಂದರೆ ನಮ್ಮ ಆಯುಷ್ಯವೇ ಸಾಲದಾಗಬಹುದು. ನಾಟಕೀ ಮಂದಿಗೆ ಪ್ರತಿ ಊರಿನಲ್ಲಿ ಡಜನಿಗಿಂತ ಹೆಚ್ಚಿನ ಸ್ನೇಹಿತರು!

ಆ "ಪ್ರಿಯರೇ" ಯೇ ನನ್ನ ಗೆಳೆಯರಿಗೆ ಕೊನೆಯ ಪತ್ರ. ಅಂಚೆಯವನು ಮಾತ್ರ ಅದನ್ನು ಮುಟ್ಟಿಸಲಿಲ್ಲವೋ ಏನೋ. ಪ್ರಾಯಶಃ ನಾನದನ್ನು ಲಕೋಟೆಯಲ್ಲಿ ಹಾಕಿ ಅಂಚೆ ಡಬ್ಬಿಗೆ ಹಾಕಲಿಲ್ಲವೆಂಬ ಸಿಟ್ಟಿನಿಂದಿರಬಹುದು.

ಚಿದಂಬರನಿಗೂ ಮಿಗಿಲಾಗಿ ನಾನು ಎಲ್ಲರ ಪ್ರೇಮಕ್ಕೆ ಪಾತ್ರನಾದೆ. ಅವನಿಗೆ ನನ್ನ ಮೇಲೆ ಅಸೂಯೆಯೂಗುತ್ತಿತ್ತು; ಆದರೆ ನಾನೂ ಅವನೂ "ಇಂಟಿಮೆಟ್ ಫ್ರೆಂಡ್ಸ"

ಇನ್ನು ನಮ್ಮ ಮಾಲಕರಂತು ನನ್ನನ್ನು ತುಂಬಾ ಆದರಿಸುತ್ತಿದ್ದರು. ಒಂದು ದಿನ ಅವರು ನನ್ನನ್ನು ಕರೆದು "ಮಗೂ, ಇಂದು ನೀನು ನಾರದನ ಭೂಮಿಕೆಯನ್ನು ಮಾಡಬೇಕು." (ಕೃಷ್ಣಲೀಲೆಯಲ್ಲಿ) ಅಂದರು. ನನಗೆ ಆ ನಾಟಕದ ಮಾತುಗಳೂ ಹಾಡುಗಳೂ ಬರುತ್ತಿದ್ದುವು. ಆದರೆ ಅಭಿನಯವನ್ನು ಕಲಿತಿರಲಿಲ್ಲ. ಈ ವಿಷಯವನ್ನು ತಿಳಿಸಲು ಅವರು "ನಿನ್ನಂಥ ಚೆಲುವಿನ ಹುಡುಗನಿಗೆ ಬೇರೆ ಅಭಿನಯ ಬೇಕೇ?" ಎಂದರು. ನಾನು ಹಿಗ್ಗಿದೆ. ಆ ದಿನ ನನ್ನ ಅಭಿನಯ ನೋಡಲು ಕಾರಣ

# ಕನ್ನಡ ಕೈಪಿಡಿಯ ವಿಮರ್ಶೆ

ಲೇಖಕರು:— ಗೆಳೆಯರ ಗುಂಪು, ಧಾರವಾಡ.

**ಕನ್ನಡ ಕೈಪಿಡಿ (ಸಂಪುಟ ೧)**-ಮೈಸೂರ ವಿಶ್ವವಿದ್ಯಾನಿಲಯದಿಂದ ಪ್ರಕಟಿತವಾದುದು. ಬೆಲೆ ೧ರೂ. ಪುಟ೩೩೦+೧೦.

೧ನೆಯ ಭಾಗ-ಹಳಗನ್ನಡದ ವ್ಯಾಕರಣ; ಮತ್ತೆ ಎರಡು ಪರಿಶಿಷ್ಟಗಳು.

೨ನೆಯ ಭಾಗ-ಕರ್ನಾಟಕಛಂದಸ್ಸು; ೧ ಪರಿಶಿಷ್ಟ.

೩ನೆಯ ಭಾಗ-ಅಲಂಕಾರ.

೧ನೆಯ ಭಾಗವನ್ನು ಮೈಸೂರ ಮಹಾರಾಜಾ ಕಾಲೇಜಿನ ಕನ್ನಡ ಪಂಡಿತರಾದ ಟಿ. ಶ್ರೀನಿವಾಸರಾಘವಾಚಾರ್ಯರೂ ಮತ್ತು ದಿವಂಗತ ಪ್ರೊ. ಬಿ. ಕೃಷ್ಣಪ್ಪ ಎಂ. ಎ. ಯವರೂ ೨ನೆಯ ಭಾಗವನ್ನು — ಮ. ರಾ. ಶ್ರೀನಿವಾಸರಾಘವಾಚಾರ್ಯರು, ೩ನೆಯ ಭಾಗದಲ್ಲಿ ೧–೧೧ ಪ್ರೊ ಎ. ಆರ್. ಕೃಷ್ಣಶಾಸ್ತ್ರಿ ಎಂ. ಎ., ೧೨–೧೩ ಮೈಸೂರ ಮಹಾರಾಜ ಕಾಲೇಜಿನ ಶ್ರೀ. ಕೆ. ವರದಾಚಾರ್ಯರು, ಈ ಪ್ರಕಾರವಾಗಿ ಅಧಿಕಾರಸಂಪನ್ನರು ಪರಿಶ್ರಮಬಟ್ಟು ಬರೆದುದನ್ನು ವಿಶ್ವವಿದ್ಯಾಲಯದವರು ವಿದ್ಯಾರ್ಥಿಗಳ ಸೌಲಭ್ಯಸೌಕರ್ಯಕ್ಕಾಗಿ ಸ್ವಲ್ಪ ಬೆಲೆಗೆ ಒಳ್ಳೇ ರೀತಿಯಿಂದ ಅಚ್ಚುಹಾಕಿಸಿ ಪ್ರಕಟಿಸಿದ್ದುದು ವಿದ್ಯಾರ್ಥಿಗಳ ಹಾಗೂ ಎಲ್ಲ ಕನ್ನಡಿಗರ ಅಭಿನಂದನೆಗೆ ಪಾತ್ರವಾಗಿದೆ. ವಿಶೇಷವಾಗಿ ಈ ಸಭೆಯ ಅಧ್ಯಕ್ಷರಾದ ಮ. ರಾ. ಬಿ. ಎಂ. ಶ್ರೀಕಂಠಯ್ಯನವರ ಹೊಸ ಮಾರ್ಗದ ಉದ್ದೇಶವು ಪ್ರಶಂಸನೀಯವಾಗಿದೆ. ಇಲ್ಲಿ ಮಾಡಿದ ಗುಣದೋಷವಿಮರ್ಶೆಯು 'ಈ ಗ್ರಂಥದೊಳಗಿನ ನ್ಯೂನತೆಗಳು ಸರಿಪಟ್ಟು ಮುಂದಿನ ಮುದ್ರಣದಲ್ಲಿ ಈ ಗ್ರಂಥವು ಕನ್ನಡಿಗರ ವಿಶ್ವಾಸಕ್ಕೂ ವಿಶ್ವವಿದ್ಯಾಪೀಠದ ಗೌರವಕ್ಕೂ ಹೆಚ್ಚಿಗೆ ಅರ್ಹವಾದದ್ದಾಗಲೆಂದು ಮಾಡಿದ್ದಾಗಿದೆ.

**೧ನೆಯ ಭಾಗ ಹಳಗನ್ನಡದ ವ್ಯಾಕರಣ :—** ಇದರಲ್ಲಿ ೧. ಸಂಜ್ಞಾ ೨. ಸಂಧಿ ೩. ನಾಮಪದ ೪. ಕ್ರಿಯಾಪದ ೫. ಅವ್ಯಯ ೬. ತದ್ಧಿತ ೭. ಕೃದಂತ ೮. ಸಮಾಸ ೯. ತದ್ಭವ ೧೦. ಪ್ರಯೋಗಗಳು ಎಂಬ ಹತ್ತು ಪ್ರಕರಣಗಳೂ ಕರ್ನಾಟಕ ಧಾತುಗಳೂ, ತತ್ಸಮತದ್ಭವಗಳೂ ಎಂಬ ಎರಡು ಪರಿಶಿಷ್ಟಗಳೂ ಉಂಟು.

ಸ್ವಲ್ಪ ಹೆಚ್ಚುಕಡಿಮೆ ಇದೇ ವಿಷಯವೇ ಶಬ್ದಮಣಿದರ್ಪಣದಲ್ಲಿ ಎಂಟು ಸಂಧಿಗಳಲ್ಲಿ ವಿಭಾಗಿಸಲ್ಪಟ್ಟಿದೆ. ಆದರೆ ಕೈಪಿಡಿಯಲ್ಲಿ ೯೪ ಪುಟಗಳಲ್ಲಿ ಮುಗಿದ ಈ ವಿಷಯವು ಶ. ಮ. ದ. ದಲ್ಲಿ ಸುಮಾರು ೩೦೦ ಪುಟಗಳನ್ನೊಳಗೊಂಡಿದೆ. ಕೈಪಿಡಿಯ ವ್ಯಾಕರಣಭಾಗದ ಲೇಖಕರು ತಮಗೆ ಅನವಶ್ಯಕವೆನಿಸಿದ ೞ, ಳ. ಗಳ ವಿಚಾರವನ್ನು ವಿಸ್ತಾರವಾಗಿ ಕೊಟ್ಟಿಲ್ಲ; 'ಪ್ರಯೋಗಸಾರವೆಂಬ ಶಬ್ದಾರ್ಥ ನಿರ್ಣಯ.' ಎಂಬ ಶ. ಮ. ದ. ದೊಳಗಿನ ಕೋಶವನ್ನೂ ಬಿಟ್ಟಿರುವರು. ಇಂತಹ ಕೆಲವುಗಳನ್ನು ಬಿಟ್ಟಿದ್ದರೂ 'ಪ್ರಯೋಗ' ಪ್ರಕರಣವೆಂಬ ಉಪಯುಕ್ತ ಭಾಗವನ್ನು ಜೋಡಿಸಿರುವರು. ನಾಗವರ್ಮಕೇಶಿರಾಜರ ವ್ಯಾಕರಣಗ್ರಂಥಗಳ ಅಭ್ಯಾಸವು ಅನೇಕ ಕಾರಣಗಳ ಮೂಲಕ ಆಧುನಿಕರಿಗೆ ತಲೆಬೇಸರವನ್ನುಂಟುಮಾಡುತ್ತಿತ್ತು. ಹಳೆಗನ್ನಡ ವ್ಯಾಕರಣವನ್ನು ಅಲ್ಪಸ್ವಲ್ಪಾದರೂ ನೋಡಿಕೊಳ್ಳಬೇಕೆಂಬ ಅಪೇಕ್ಷೆಯಿದ್ದರೂ ಅವು ವ್ಯವಸ್ಥಿತಪದ್ಧತಿಯಿಂದ ಬರೆಯಲ್ಪಟ್ಟವುಗಳಲ್ಲ. ಇದಕ್ಕೆ ಶ. ಮ. ದ. ದೊಳಗಿನ ತದ್ಧಿತ ಪ್ರಕರಣವೆ ಒಂದು ದೃಷ್ಟಾಂತ. ಒಂದೊಂದು ಅರ್ಥದಲ್ಲಿರುವ ಪ್ರತ್ಯಯಗಳನ್ನು ಒತ್ತಟ್ಟಿಗೆ ಸಂಗ್ರಹಿಸಿ ಹೇಳಿಲ್ಲ. ಅಲ್ಲದೆ ಆ ಪ್ರತ್ಯಯಗಳ ಅರ್ಥನಿರ್ಣಯದ ವಿಚಾರವು ನಡೆದಾಗಲೆ ನಡುವೆ ಸಂಧಿಕಾರ್ಯದ ಮಾತನ್ನೂ ಎತ್ತಿಬಿಟ್ಟಿರುವುದರಿಂದ ಅರಿತುಕೊಳ್ಳಲಿಕ್ಕೆ ಬಹಳ ತೊಂದರೆಯುಂಟಾಗುತ್ತದೆ.

ಆದರೆ ಕೈಪಿಡಿಯ ವ್ಯಾಕರಣಭಾಗವನ್ನು ಈ ಬಗೆಯ ತೊಂದರೆಯುಂಟಾಗದಂತೆ ಸುವ್ಯವಸ್ಥಿತವಾಗಿ ಬರೆದಿರುವುದು ಬಹಳ ಚೆನ್ನಾಗಿದೆ. ಹೆಸರು ಹಳೆಗನ್ನಡ ವ್ಯಾಕರಣವಾದರೂ ಇದರ ನಿಯಮಾದಿಗಳನ್ನು ಬರೆದಿರುವುದು ಹೊಸಗನ್ನಡನುಡಿಯಲ್ಲಿ. ಇದರಿಂದಂತೂ ಹಳಗನ್ನಡ ವ್ಯಾಕರಣದಲ್ಲಿ ಯಾರಿಗೂ ಪ್ರವೇಶಮಾಡಲಿಕ್ಕೆ ಸುಲಭವಾಗಿದೆ. ಹೆರರ ವಿಶೇಷಸಹಾಯ ಕೇಳದೆ ಯಾರಿಗೂ ತಮ್ಮಷ್ಟಕ್ಕೆ ತಾವೆ ಅಭ್ಯಾಸಮಾಡಬಹುದಾದಷ್ಟು ಸೌಲಭ್ಯವನ್ನು ಲೇಖಕರು ಕಲ್ಪಿಸಿಕೊಟ್ಟದಕ್ಕಾಗಿ ಅಭಿನಂದನೆಗೆ ಪಾತ್ರರಿದ್ದಾರೆ.

ಮನುಷ್ಯನಿಗೆ ತನ್ನ ಬೆನ್ನು ತನಗೆ ಕಾಣುವುದಿಲ್ಲ. ಅವನು ಎಷ್ಟೇ ಎಚ್ಚರಬಟ್ಟರೂ ಅವನಿಗೆ ತಿಳಿಯದಲೆಯೆ ಎಷ್ಟೋ ಕುಂದುಕೊರತೆಗಳು ಉಳಿದುಬಿಡುತ್ತವೆ. ಅದಕ್ಕಾಗಿ ಪರರು ನಗುವುದು ತಪ್ಪಾಗಿದ್ದರೂ ನಮ್ರತನದಿಂದ ಅವನ್ನು ಸೂಚಿಸುವುದು ಅಗತ್ಯವಾಗಿದೆ. ನಮ್ಮ ಅಲ್ಪನಿರೀಕ್ಷಣೆಯಲ್ಲಿ ಕಂಡುಬಂದ ಒಂದೆರಡು ಮಾತುಗಳನ್ನಿಲ್ಲಿ ಸೂಚಿಸಿರುವೆವು.

ಇದರಲ್ಲಿ ಮೊಟ್ಟಮೊದಲಿಗೆ ಒಂದು ಪ್ರಸ್ತಾವನೆಯಿದ್ದರೆ ಲೇಸಿತ್ತು. ಏತಕ್ಕೆಂದರೆ ಲೇಖಕರು ಹಳಗನ್ನಡ ವ್ಯಾಕರಣದ ಹಿಂದಿನ ಆವಾವ ಗ್ರಂಥಗಳನ್ನು ಎಷ್ಟೆಷ್ಟು ಮಟ್ಟಿಗೆ ಆಧಾರವಾಗಿಟ್ಟುಕೊಂಡಿರುವರು? ಆವ ಭಾಗಗಳನ್ನು ಏಕೆ ಬಿಟ್ಟರು? ಎಂಬೀ ಮೊದಲಾದ ವಿಷಯಗಳು ಗೊತ್ತಾಗುವುದೇ ಇಲ್ಲ. ಕನ್ನಡದಲ್ಲಿ ವ್ಯಾಕರಣಶಾಸ್ತ್ರದ ವಿಸ್ತಾರವು ಯಾವ ಕ್ರಮದಿಂದಾಯ್ತು? ಯಾವ ಯಾವ ಕಾಲದಲ್ಲಿ ಯಾವ ಯಾವ ಮಾತುಗಳು ಅನವಶ್ಯಕಗಳೆಂದು ನಿರ್ಣಿತವಾದುವು? ಈಗಿನ ಕಾಲಕ್ಕೂ ಹಾಗೆ ಹಿಂದಿನ ಯಾವ ಮಾತುಗಳು ಅನವಶ್ಯಕ ಮತ್ತು ಇಂದೆ ಉಪಸ್ಥಿತವಾಗಿರುವ ಹೊಸತೊಡಕುಗಳಾವುವು? ಈ ವಿಚಾರಗಳನ್ನೂ ಪ್ರಸ್ತಾವನೆಯಲ್ಲಿ ಪ್ರಸ್ತಾಪಿಸಬಹುದಾಗಿತ್ತು.

ಇನ್ನು ಕನ್ನಡದ ವ್ಯಾಕರಣದಲ್ಲಿ ಹಿಂದಿನವರು ಸೇರಿಸಿದ ಕೃತ್ತದ್ಧಿತಪ್ರಕರಣದ ವಿಚಾರವನ್ನು ಕನ್ನಡನುಡಿಯ ವೈಶಿಷ್ಟ್ಯದ ದೃಷ್ಟಿಯಿಂದಲೂ ಹೊಸದೃಷ್ಟಿಯಿಂದಲೂ ಮಾಡಿದ್ದರೆ ನೆಟ್ಟಗಿತ್ತು. ಇದರ ಬಗ್ಗೆ ತಮ್ಮ ಅಭಿಪ್ರಾಯವನ್ನು, (ಪ್ರಸ್ತಾವನೆಯನ್ನು ಬರೆದುದಾಗಿದ್ದರೆ) ಅದರಲ್ಲಿಯೆ ಸೂಚಿಸಲಿಕ್ಕಾಗುತ್ತಿತ್ತು. ಹಿಂದಿನ ವ್ಯಾಕರಣಕಾರರು ಕನ್ನಡ ವ್ಯಾಕರಣವನ್ನೂ ಸಂಸ್ಕೃತದ ಮಾದರಿಯ ಮೇಲೆಯೆ ಕಟ್ಟಿರುವರೆಂದೂ ಕನ್ನಡದ ಸ್ವಭಾವಸ್ವಧರ್ಮಗಳು ಸಂಸ್ಕೃತದಿಂದ ಕೆಲ ಮಾತುಗಳಲ್ಲಿ ಭಿನ್ನವಾಗಿರುವುವೆಂದೂ ಕೆಲವರ ಅಭಿಪ್ರಾಯ. ಈ ಅಭಿಪ್ರಾಯದವರ ಹೇಳಿಕೆಯ ಮೇರೆಗೆ ಕನ್ನಡದಲ್ಲಿ ಕೃತ್ತದ್ಧಿತಗಳು ಸಂಸ್ಕೃತದಂತೆ ತೀರ ಭಿನ್ನವಿಲ್ಲ; ಕೃತ್ತದ್ಧಿತಗಳೆರಡಕ್ಕೂ ಸಾಮಾನ್ಯವಾದ ಹಲವು ಪ್ರತ್ಯಯಗಳುಂಟು; ಎಷ್ಟೊ ಧಾತುಗಳೆ ನಾಮಗಳಾಗಿವೆ; ಇಂತಹ ಶಬ್ದಗಳಿಂದ ಹುಟ್ಟಿದ ನುಡಿಗಳಿಗೆ ಕೃದಂತಗಳೆನಬೇಕೆ ತದ್ಧಿತಾಂತಗಳೆನಬೇಕೆ? ಆದುದರಿಂದ ಕೃತ್ತದ್ಧಿತಗಳೆಂಬ ಅನವಶ್ಯಕ ಹಾಗೂ ಕನ್ನಡಕ್ಕೆ ಅಸ್ವಾಭಾವಿಕವಾದ ನಿರ್ಬಂಧಗಳನ್ನುಂಟುಮಾಡಿಕೊಳ್ಳುವ ಅವಶ್ಯಕತೆಯಿಲ್ಲ; ಈ ಅಭಿಪ್ರಾಯಗಳ ವಿವೇಚನೆಗೂ ಪ್ರಸ್ತಾವನೆಯೆ ಯೋಗ್ಯಸ್ಥಳವಾಗಿತ್ತು.

ಸಮಾಸಪ್ರಕರಣದಲ್ಲಿ ಅರ್ಥಪ್ರಾಧಾನ್ಯದಿಂದ ನಾಲ್ಕು ವಿಧಗಳನ್ನು ಕಲ್ಪಿಸಿದ್ದಾರೆ. ಉತ್ತರಪದಾರ್ಥಪ್ರಧಾನ ಸಮಾಸಗಳಲ್ಲಿ ತತ್ಪುರುಷ, ಕ್ರಿಯಾ. ಕರ್ಮಧಾರಯ, ಗಮಕಗಳೆಂಬ ನಾಲ್ಕೇ ಸಮಾಸಗಳನ್ನು ಕೊಟ್ಟಿರುವರು; ಆದರೆ ಪ್ರಾಚೀನರು **ದ್ವಿಗುಸಮಾಸವನ್ನೂ ಹೇಳಿದ್ದು ಇದರಲ್ಲಿ ಏತಕ್ಕೆ ಬಂದಿಲ್ಲವೊ ತಿಳಿಯದು.** ಗಮಕಸಮಾಸದ ಲಕ್ಷಣವು ಶಬ್ದಮಣಿದರ್ಪಣದಿಂದ ಭಿನ್ನವಾಗಿದೆ. 'ಕೃತ್ಪದ'ಗಳೂ ಅದು, ಇದು, ಉದು ಗಳ ರೂಪಗಳಾದ ಅ, ಈ, ಊಗಳೂ 'ಕವೀಶ್ವರರ' ಮತದಿಂದ ಗಮಕಸಮಾಸದ ಪೂರ್ವಪದಗಳಲ್ಲಿರುವುವೆಂದು ಶ. ಮ. ದ. ದಲ್ಲಿ ಹೇಳಿದೆ. ಆದರೆ ಕೈಪಿಡಿಯಲ್ಲಿ 'ಪರಿವಪೊನಲ್' 'ಈನೆಲಂ' ಈ ಸಮಾಸಗಳನ್ನು ಪ್ರಾಚೀನ 'ಕವೀಶ್ವರರ' ಅಭಿಪ್ರಾಯಕ್ಕೆ ವಿರೋಧಿಯಾಗಿ ಕರ್ಮಧಾರಯದಲ್ಲಿ ಸೇರಿಸಿದ್ದಾರೆ! ಇಪ್ಪತ್ತೈದು, ಮೊದಲಾದ ಸಂಖ್ಯಾವಾಚಕಗಳನ್ನು ಗಮಕದಲ್ಲಿ ಸೇರಿಸಿವರೂ ಪೂರ್ವಪದವು ಸಂಖ್ಯಾವಾಚಕ ಪರಪದವು ನಾಮವಾಗಿರುವ ಸಮಾಸಕ್ಕೆ ದ್ವಿಗುವೆಂದು ಹೇಳಿ ಇದನ್ನು ಒಂದು ಸ್ವತಂತ್ರ ಸಮಾಸವೆಂದೇ ಕೇಶಿರಾಜನು ಕಲ್ಪಿಸಿದ್ದು ಕಂಡುಬರುತ್ತದೆ. ಆದರೆ ಇಲ್ಲಿ ದ್ವಿಗುವನ್ನು ಗಮಕದಲ್ಲಿ ಸೇರಿಸಿರುವರೇನೊ ತಿಳಿಯದು. ಒಂದು ವೇಳೆ ಗಮಕದಲ್ಲಿ ದ್ವಿಗುವು ಸಮಾವಿಷ್ಟವಾಗುತ್ತದೆಂದು ತಿಳಿದಿರುವರೆನ್ನಬೇಕೆ 'ಇರ್ಪಂಡಿರ್, ಇರ್ಬಾಳ್' ಇತ್ಯಾದಿ ಸಮಾಸಗಳಿಗೆ ಏನು ಹೆಸರು? ಏತಕ್ಕೆಂದರೆ ಕೈಪಿಡಿಯು ಗಮಕದ ವ್ಯಾಖ್ಯೆಯಲ್ಲಿ ಉತ್ತರಪದವನ್ನು 'ಸಂಸ್ಕೃತ' ಶಬ್ದವಿರಬೇಕೆಂದು ಹೇಳಿದೆ! ಇದರ ಗಮಕವೇನೊ ನಾವರಿಯೆವು. ಪೂರ್ವಪದವು ಪ್ರಧಾನವಾಗಿರುವ ಸಮಾಸಕ್ಕೆ ಅವ್ಯಯೀಭಾವವೆಂದು ಪೂರ್ವರೂಢವಾದ ಹೆಸರಿದ್ದೂ, ಅದಕ್ಕೆ 'ಅಂಶಿ' ಸಮಾಸವೆಂದು ಹೆಸರಿಡುವುದರಲ್ಲಿ ಏನೊ ಉದ್ದೇಶವಿದ್ದಂತೆ ತೋರುತ್ತದೆ. ಆದರೆ ಆ ಉದ್ದೇಶವನ್ನಷ್ಟು ಬಿಚ್ಚಿ ಹೇಳಿದ್ದರೆ ಒಳಿತಾಗುತ್ತಿತ್ತು.

ಇನ್ನು ತತ್ಸಮ ತದ್ಭವ ವಿಚಾರವು. ತತ್ಸಮ ಶಬ್ದವನ್ನು ಯಾವ ಅರ್ಥದಲ್ಲಿ ಉಪಯೋಗಿಸಬೇಕೆಂಬ ಬಗ್ಗೆ ವ್ಯಾಕರಣಕಾರರಲ್ಲಿಯೇ ಐಕಮತ್ಯವಿದ್ದಂತೆ ತೋರುವದಿಲ್ಲ. ಮಣಿ, ಮಂಚ, ಪಟ್ಟ ಮೊದಲಾದ ೨೧ ತತ್ಸಮಗಳು, ಎಂದು

ಹೇಳುವರು. ಇಲ್ಲಿ ತತ್ಸಮವೆಂದರೆ ಸಂಸ್ಕೃತ ಶಬ್ದವೆಂಬರ್ಥ ವಿಲ್ಲ. ಕನ್ನಡ ಮತ್ತು ಸಂಸ್ಕೃತಗಳೆರಡಕ್ಕೂ ಸಮಾನಶಬ್ದ ಗಳು; ಯಾವವುಗಳನ್ನು ಸಂಸ್ಕೃತಶಬ್ದಶಾಸ್ತ್ರಿಗಳು ತಮ್ಮವೇ ಎಂದು ಎದೆತಟ್ಟಿ ಹೇಳಲಾರರೊ ಅಂತಹ ಶಬ್ದಗಳು ಎಂಬರ್ಥ ಆದರೆ ಕೈಪಿಡಿಯಲ್ಲಿ ತತ್ಸಮಶಬ್ದವು ಸಂಸ್ಕೃತಶಬ್ದವೆಂಬ ರ್ಥದಲ್ಲಿ ಉಪಯೋಗಿಸಲ್ಪಟ್ಟಿದೆ. ಇದು ಹೇಗೆ? ಕನ್ನಡ ರೂಪುಗೊಂಡ ಸಂಸ್ಕೃತಶಬ್ದಗಳ ಪಟ್ಟಿಯೊಂದನ್ನು ತತ್ಸಮ–ತದ್ಭವಗಳು ಎಂದು ಕಟ್ಟಕಡೆಯ ಪರಿಶಿಷ್ಟದಲ್ಲಿ ಕೊಟ್ಟಿರುವರು. ಅದರ ಕೆಳಗೆ 'ಅಕ್ಕರ–ಅಕ್ಷರ' ಎಂದು ಮುಂತಾಗಿ ತಿರುವುಮುರುವು (ತದ್ಭವ ತತ್ಸಮ!) ಕೊಟ್ಟಿರು ವರು. ಇದೇನು ಮಹತ್ವದ ದೋಷವಲ್ಲ; ಆದರೂ ಮುಂದಿನ ಆವೃತ್ತಿಯಲ್ಲಿ ತಿದ್ದಲ್ಪಟ್ಟೀತೆಂದು ಆಶೆ. ಕನ್ನಡದಲ್ಲಿ ಅನೇಕಾ ನೇಕಶಬ್ದಗಳು ಸಂಸ್ಕೃತದಿಂದ ಬಂದಿರುವವೆಂಬುದು ನಿಜವಾ ದರೂ ಅಚ್ಚಗನ್ನಡವೆಂದು ಹೇಳಬಹುದಾದಂಥ ಹಾಗೂ ಸಂಶಯಸ್ಥಿತಿಯ ಲಾಭವನ್ನು ಕನ್ನಡಕ್ಕೆ ಕೊಡಲು ಸಾಧ್ಯ ವಿರುವಂಥ ಎಷ್ಟೋ ಶಬ್ದಗಳನ್ನು 'ಅಪಭ್ರಂಶಪ್ರಕರಣ'ದಲ್ಲಿ ಕೇಶಿರಾಜನು ಸೇರಿಸಿರುವನು. ಆದರೆ ಇತ್ತಲಾಗಿ ಕಿಟ್ಟೆಲ್ ಪ್ರಭೃತಿಗಳು ಕನ್ನಡ ಶಬ್ದಗಳೇ ಸಂಸ್ಕೃತದಲ್ಲಿ ಹೇಗೆ ಸೇರಿವೆ ಯೆಂಬುದನ್ನು ತೋರಿಸಲು ಯತ್ನಿಸಿದ್ದಾರೆ. ಇಂತಹ ಸಮಯ ದಲ್ಲಿ ತತ್ಸಮತದ್ಭವಗಳ ಪಟ್ಟಿಗೆ ಸ್ವಲ್ಪ ಸಂಕ್ಷೇಪಸ್ವರೂಪ ಕೊಟ್ಟಿದ್ದರೆ ಚೆನ್ನಾಗಿತ್ತು. ಕಾ, ಕಾ ಎಂದೊದರುವುದು ಕಾಗೆ; ಅದರಂತೆ ಕೋಕೋ ಎಂದು ಕೂಗುವುದು ಕೋಳಿ. ಹೀಗಿದ್ದು ಕುಕ್ಕುಟದಿಂದ ಕೋಳಿ ಎನ್ನುವ ಕಾರಣವೇನು ? ವೀಣು, ಇಟ್ಟಿಗೆ, ಸುರಿಗೆ, ಮಳಿಗೆ ಇತ್ಯಾದಿ ಶಬ್ದಗಳು ಕನ್ನಡದವೆಂದು ಊಹಿಸಬಹುದಾಗಿದೆ.

ಧಾತುಗಳಲ್ಲಿ ಸಹಜ ಧಾತುಗಳು ಪ್ರತ್ಯಯಾಂತಧಾತು ಗಳು ಸಂಯುಕ್ತಧಾತುಗಳು ಎಂದು ಮೂರುಬಗೆಗಳನ್ನು ಕಲ್ಪಿ ಸಿದ್ದಾಗಿದೆ. ಆದರೆ ಸಹಜಧಾತುಗಳು ಕನ್ನಡದಲ್ಲಿ ಯಾವ ಸ್ವರೂಪದಲ್ಲಿ ಕಂಡುಬರುತ್ತವೆ, ಅವುಗಳ ಸ್ಥೂಲಲಕ್ಷಣ ವಾದರೂ ಏನು ಎಂಬೀ ಮಾತುಗಳನ್ನು ಅಲ್ಪಸ್ವಲ್ಪವಾದರೂ ಸೂಚಿಸಿದ್ದರೆ ಸಹಜ ಧಾತುಗಳಾವವೆಂದು ಅರಿತುಕೊಳ್ಳಲಿಕ್ಕೆ ಸಹಾಯವಾಗುತ್ತಿತ್ತು. ಆದರೆ ಈಗ ಎಲ್ಲಿ ಸ್ಪಷ್ಟವಾಗಿ ಪ್ರತ್ಯ ಯಗಳನ್ನು ಬೇರ್ಪಡಿಸುವುದು ಸಾಧ್ಯವೊ, ಎಲ್ಲಿ ಎರಡು ಧಾತು ಗಳು ಸೇರಿರುವವೆಂದು ಸ್ಪಷ್ಟವೊ ಅವುಗಳನ್ನು ಬಿಟ್ಟುಳಿದು ವೆಲ್ಲ ಸಹಜಧಾತುಗಳೆಂದು ತರ್ಕಿಸಬೇಕಾಗಿದೆ. ಕೈಪಿಡಿಯ ವ್ಯಾಕರಣಭಾಗದ ಲೇಖಕರಾದರೂ ಹೀಗೆ ಗ್ರಹಿಸಿರುವಂತೆ ಕಾಣುತ್ತದೆ. ಆದರೆ ಇದಕ್ಕಿಂತ ಹೆಚ್ಚು ಸುಸ್ಪಷ್ಟಕಲ್ಪನೆಯು ಸಹಜಧಾತುಗಳ ಬಗ್ಗೆ ಆಗುವುದು ಅವಶ್ಯವಿದೆ. ನಮ್ಮ ಅಭಿಪ್ರಾಯದಂತೆ ಮೂಲತಃ ಕನ್ನಡದಲ್ಲಿ ಹೆಚ್ಚೆಂದರೆ ಎರಡ–ಕ್ಕರದುವೆ ಸಹಜಧಾತುಗಳು. ಎರಡಕ್ಕರದ ಧಾತುಗಳ ಕೊನೆಯಕ್ಷರವು ಹೆಚ್ಚಾಗಿ ವ್ಯಂಜನಾಂತ ಇಲ್ಲವೆ ಇ, ಉ, ಅಥವಾ ಎಕಾರಾಂತವಿರುತ್ತದೆ. ಆರಂಭಾಕ್ಷರವಾಗಲಿ ಕೊನೆಯದಾಗಲಿ ಎಂದೂ ಸಂಯುಕ್ತಾಕ್ಷರವಿರುವದಿಲ್ಲ. ಈ ದೃಷ್ಟಿಯಿಂದ ನೋಡಿದರೆ ೧೧ನೆಯ ಪರಿಶಿಷ್ಟದಲ್ಲಿ ಕೊಟ್ಟ ಸಹಜಧಾತುಗಳಲ್ಲಿ ಎರಡಕ್ಕಿಂತ ಹೆಚ್ಚು ಅಕ್ಷರದುವೆಲ್ಲ ಪ್ರತ್ಯ ಯಾಂತ ಇಲ್ಲವೆ ಸಂಯುಕ್ತ ಧಾತುಗಳೆನ್ನಬೇಕಾಗುತ್ತದೆ. ಪು, ರು, ಸು, ಚು, ಳು ಇಂತಹ ಎಷ್ಟೋ ಪ್ರತ್ಯಯಾಂತ ಧಾತುಗಳು ಸಹಜ (ಸಿದ್ಧ) ಧಾತುಗಳೆಂದು ಕೊಡಲ್ಪಟ್ಟಿವೆ. ಉದಾ:– ಅಗಿ+ಉಳ್; ಅಡೆ+ಪು; ಅರಿ+ಅಸು; ಅಲೆ+ಉಗು; ಅವಿ+ಅಲ್; ಎಳೆ+ಅಸು; ಒರೆ+ಅಲ್; ಒಸೆ+ಅರ್; ಕಲೆ+ ಅಸು; ಕೊರೆ+ಅಗು; ನಾಣ್+ಚು; ಮುರಿ+ಅಕು; ಸಲ್+ ಅಪು; ಈ ಮುಂತಾದವುಗಳೆಲ್ಲ ಸಹಜ ಅಂದರೆ ಸಿದ್ಧ ಧಾತುಗಳೆಂದು ಯಾರೂ ಹೇಳರು. ಆದುದರಿಂದ ಸಾಧಿತ ಧಾತುಗಳೆಂದ ಹೊರತು ಗತ್ಯಂತರವಿಲ್ಲ. ಕ್ರಿಯಾಪದಪ್ರಕರ ಣದ ಕೊನೆಗೆ ಇಸು ಪ್ರತ್ಯಯಾಂತ ೬ ಧಾತುಗಳನ್ನು ಕೊಟ್ಟು ಅವುಗಳನ್ನು ಸಹಜಧಾತುಗಳೆಂದು ತಿಳಿಯಬೇಕಾಗಿ ಸ್ವತಂತ್ರನಿಯಮ ಹೇಳಿರುವರು. ಆದರೆ ಅವುಗಳಲ್ಲಿ ದಳ್ಳಿಸು ಎಂಬುದು 'ದಳ್,' "ದಳ್," ಎಂಬ ಅನುಕರಣವಾಚಕ ಶಬ್ದಕ್ಕೆ ಇಸು ಪ್ರತ್ಯಯ ಸೇರಿ ಆದ ಹೊಸ ಧಾತುವು; ನಿಟ್ಟಿಸು ಎಂಬುದು ನಿಡು (ಸರಲ) ಎಂಬ ಶಬ್ದಕ್ಕೆ ಇಸು ಸೇರಿ ಆದ ನೆಟ್ಟಗೆ ಬಿಟ್ಟು ಬಿಡದೆ ನಿರೀಕ್ಷಿಸು ಎಂಬರ್ಥದ ಹೊಸ ಧಾತುವು; ಬಡಿಸು ಇದು ವರ್ಧಿಸು ಎಂಬ ಸಂಸ್ಕೃತ ಶಬ್ದದ ಕನ್ನಡ ರೂಪು. ಸಂಯುಕ್ತಾಕ್ಷರದಲ್ಲಿ ಬಂದ ರ್ ಕಾರವು ಹಲವೆಡೆಗಳಲ್ಲಿ ಕನ್ನಡದಲ್ಲಿ ದ್ವಿತ್ವವಾಗಿ ಪರಿಣಮಿಸು ವಂತೆ ವರ್ಧಿಸು ಶಬ್ದದ ಆರಂಭದ ರೂಪವು ಹಳೆಯ ಕಾವ್ಯಗ ಳಲ್ಲಿ 'ಬಡ್ಡಿಸು' ಎಂದು ದೊರೆಯುತ್ತದೆ; ಆ ಬಡ್ಡಿಸು ಧಾತುವೆ ಬಡಿಸು ಎಂದು ಇಂದು ಬಳಕೆಯಲ್ಲಿದೆ.

೨ನೆಯ ಭಾಗ (ಕರ್ಣಾಟಕಛಂದಸ್ಸು):–'ಪ್ರಾಸ' ಗಳ ವಿಚಾರದ ತರುವಾಯದಲ್ಲಿ ತೆಲಗುವಡಿಗಳ ವಿಚಾರವನ್ನು

ಸೇರಿಸುವದುಚಿತವೆಂದು ತೋರುತ್ತದೆ. ಈಶ್ವರಕವಿಯು ತನ್ನ 'ಕವಿಜಿಹ್ವಾಬಂಧನ'ದಲ್ಲಿ ಈ ವಿಚಾರವನ್ನು ಕುರಿತು ಹೇಳಿರುವನಂತೆ. ಮತ್ತು ಕನಕದಾಸರು 'ಮೋಹನತರಂಗಿಣಿ' ಯಲ್ಲಿ 'ವಡಿ'ಗಳನ್ನುಪಯೋಗಿಸಿರುವರಂತೆ. ಅಂದಮೇಲೆ ನಮ್ಮ ಶಾಸ್ತ್ರದಲ್ಲಿಯೂ ಸಾಹಿತ್ಯದಲ್ಲಿಯೂ ಸ್ಥಾನದೊರೆತ ಈ 'ವಡಿ'ಗಳ ವಿಷಯಕ್ಕೆ ಇಲ್ಲಿ ಸ್ಥಳ ದೊರೆಯಬೇಕು. 'ಯತಿ'ಯ ಉಲ್ಲಂಘನದಿಂದ "ಅರ್ಥಸ್ಫೂರ್ತಿ ಕೆಡುವುದು" (ಪುಟ ೧೦೪) ಎಂದು ಬರೆದು ಸೋದಾಹರಣವಾಗಿ ತೋರಿಸಿ ಮುಂದೆ ನೃಪತುಂಗ, ಕೇಶಿರಾಜ ಮೊದಲಾದವರ ಒಂದೆರಡು ವಚನಗಳನ್ನು 'ಯತಿವಿಲಂಘನದ ಆಧಾರಕ್ಕೆ ಕೊಟ್ಟು ಅಲ್ಲಿಯೆ ವಿಚಾರವನ್ನು ಮುಗಿಸಿಬಿಡುವುದು ಅಷ್ಟು ಯೋಗ್ಯವಾಗುವದಿಲ್ಲ. 'ಅರ್ಥಸ್ಫೂರ್ತಿ ಕೆಡಿಸುವ' ಈ 'ಐಚ್ಛಿಕ, ಸ್ವಚ್ಛಂದತೆಯ ವಿಮರ್ಶೆಯಾಗಲು ಬೇಕು. ಕನ್ನಡ ಕವಿಗಳು ಸಂಸ್ಕೃತದಿಂದ ಬಂದ ಪ್ರಾಚೀನಯತಿಯನ್ನು ಮೀರುತ್ತಿದ್ದರೂ 'ವರಯತಿ'ಗೆ ಭಂಗ ಬರದಂತೆ ತಾವು ಬರೆಯುತ್ತಿದ್ದಂತೆ ಅವರ ಶ್ರದ್ಧೆಯಿತ್ತು. ಹಾಗಾದರೆ ಇವರು ಸಾಧಿಸುವ 'ಯತಿ'ಯಾವುದೆಂಬದನ್ನು ಗಮಕಿಗಳಿಂದ ತಿಳಿದು ಬರೆಯುವದವಶ್ಯ. ಆಂಗ್ಲಸಾಹಿತ್ಯದಲ್ಲಿಯೂ ಏತತ್ಸದೃಶಸಂದರ್ಭವೊಂದುಂಟು. " The history of the iambic pentameter (or 'Heroic') couplet, from the Augustan to the Romantic age is familiar to every student of English Poetry. In its 'classic' form ............ the sense ended with almost absolute regularity at the end of every second line. The rise of the 'romantic' form ........in which the sense was allowed to flow on uninterrupted from one couplet to another indefinitely while the rhetorical pause could occur in any part of a line was simply one more in indication of that general quest for general freedom and more variety in the harmonies of versification." ಮೇಲಿನ ಅವತರಣಿಕೆಯೊಳಗಿನ 'rhetorical pause' ನಮ್ಮ ಲಕ್ಷ್ಮೀಶನ 'ವರಯತಿ'ಯು. ನಮ್ಮ 'ಯತಿ'ಯು ಪ್ರಾಣಾಯಾಮಪರನಾದ ವೃತ್ತಿಯಲ್ಲ; ಆದರೆ, 'ಶ್ರುತಿಸುಭಗಂ ಸ್ವಚ್ಛಂದಂ'.

ಕನ್ನಡ ಕವಿಗಳು ವಿಶೇಷವಾಗಿ ಶಾರ್ದೂಲ–ಮತ್ತೇಭವಿಕ್ರೀಡಿತಗಳನ್ನು, ಉತ್ಪಲಚಂಪಕಮಾಲೆಗಳನ್ನು ಲಘುಮಹಾಸ್ರಗ್ಧರೆಗಳನ್ನು ಉಪಯೋಗಿಸುವರೆಂದು ನಾಗವರ್ಮನೂ ಹೇಳಿರುವನು. ಇವುಗಳ ಬಗ್ಗೆಯೆ ನಮ್ಮ ಕವಿಗಳ ಸ್ವಾಭಾವಿಕವಾದ 'ಅಹೇತುಕ ಪಕ್ಷಪಾತ'ವೇಕೆ ಇದರ ವಿವೇಚನೆಯು ಅವಶ್ಯವೆಂದು ತೋರುತ್ತದೆ. ಅಂತೂ ಏನು ? ಛಂದಸ್ಸಿನ ತಾತ್ತ್ವಿಕವಿಚಾರವೂ ಕನ್ನಡಕವಿಗಳು ಅದರಲ್ಲಿ ಮಾಡಿದ ಮಾರ್ಪಾಟುಗಳಲ್ಲಿ ಕಂಡುಬರುವ ವಿಶೇಷವೂ ವಿವೇಚನೀಯವೂ ವಿಮರ್ಶನೀಯವೂ ಆಗಿದೆ.

ಇನ್ನು " ಕವಿಗಳು ಇಚ್ಛಾನುಸಾರವಾಗಿ ಹೊಸ ಹೊಸ ಮಾತ್ರಾವೃತ್ತಗಳನ್ನು ಕಲ್ಪಿಸಿರುವರು. ಹಾಗೆ ಇನ್ನೂ ಅನೇಕವಿಧವಾಗಿ ಕಲ್ಪಿಸಲೂ ಬಹುದು" (ಪುಟ ೧೬೩) ಈ ಮಾತೂ, " ಸಮಾನವಾದ ಮಾತ್ರಾಗಣಗಳುಳ್ಳ ಬಹುಪಾದಗಳಿಂದ ಕೂಡಿದ ವೃತ್ತವು ರಗಳೆಯೆನಿಸುವುದು. ಇದರಲ್ಲಿ ಪ್ರಾಸವು ಇತರ ವೃತ್ತಗಳಲ್ಲಿರುವಂತೆ ನಿಯತವಾಗಿರುವದಿಲ್ಲ. ಒಂದೇ ಪಾದದಲ್ಲಿಯಾಗಲಿ ಅನೇಕಪಾದಗಳಲ್ಲಿಯಾಗಲಿ, ಪಾದದ ಆದಿಮಧ್ಯಗಳಲ್ಲಿಯಾಗಲಿ ಮಧ್ಯಾಂತಗಳಲ್ಲಿಯಾಗಲಿ, ಆದ್ಯಂತಗಳಲ್ಲಿಯಾಗಲಿ, ಪ್ರಾಸಾಕ್ಷರವು ಒಂದೇಯಾಗಲಿ ಅನೇಕವಾಗಲಿ–ಈ ರೀತಿ ಯಥೇಷ್ಟವಾಗಿರುವದು " ಇಂತು ನಿರಾತಂಕಪ್ರಗತಿಗೆ ಅನುಕೂಲವಾದ, ಸಾಹಿತ್ಯದ ನವಜನ್ಮದ ಸ್ವಚ್ಛಂದತೆಗೆ ಯಥೇಷ್ಟವೇ ಆದ, ಇಷ್ಟಾಗಿ ರಗಳೆಯ ನಿಜವಾದ ಈ ವ್ಯಾಖ್ಯೆಯೂ ಛಂದಸ್ಸಿನಲ್ಲಿಯ ಹೊಸ ಮಾರ್ಗದ ದಿಗ್ದರ್ಶಕಸೂಚನೆಗಳಾಗಿವೆ. ಈ ಉದಾರತೆಯು ಅಭಿನಂದನೀಯವೇ ಸರಿ.

ಕಂದಷಟ್ಪದಿ ಮೊದಲಾದವುಗಳಲ್ಲಿ ಇಂಥಿಂಥ ಕೆಲವು ಗಣಗಳು ಬರಬಾರದೆಂದು ಹೇಳಿರುವುದಷ್ಟೆ. ಆದರೆ ತಾಲಶಾಸ್ತ್ರದ ದೃಷ್ಟಿಯಿಂದ ಇದರ ಕಾರಣವೇನೆಂಬುದನ್ನು ಸ್ಪಷ್ಟಮಾಡುವುದು ಅಗತ್ಯ. ಗಣವು ಮೂರು ಮಾತ್ರೆಯದಿರಲಿ ನಾಲ್ಕರದಿರಲಿ ಐವರದಿರಲಿ ಅವುಗಳಲ್ಲಿ ೭–೧, ೨–೨, ೨–೩ ಹೀಗೊಂದು ಅಂತರ್ವಿಭಾಗವಾಗುವುದೂ ನಿಯತವೋ ಏನೋ ? ಪ. ವಾ. ಶಾಂತಕವಿಗಳು ಈ ಬರಲಾಗದ ಗಣಗಳನ್ನುಪಯೋಗಿಸಿಯೇ ಕೆಲವು ಕುಸುಮಷಟ್ಪದಿಗಳನ್ನು ಬರೆದು

ಕಾಲದೋಷ ಬಾರದೆಂಬದನ್ನು ಉದಾಹರಿಸಿದ್ದರು. ಮಂದಾನಿಲರಗಳೆಯಲ್ಲಿ ಹೇಗೆ ಪಂಪನೊಂದು ಅಂತರ್ಜಾತಿಯನ್ನು ಕಲ್ಪಿಸಿರುವನೋ ಆ ತತ್ತ್ವಾನುಸಾರವಾಗಿಯೆ ಕಂದದಲ್ಲಿಯು ಮಾತ್ರಾರಚನೆಯಲ್ಲಿಯೂ ಕಲ್ಪಿಸಬಹುದೆಂಬದನ್ನು 'ಕೆಳದಿ ನೃಪವಿಜಯ'ದಲ್ಲಿ ಕಾಣಬಹುದು. ಆದರೆ ಈ ರಚನೆಯಲ್ಲಿಯೂ ಸಾಧುತ್ವ ಅಸಾಧುತ್ವದ ಎಡೆಗಳುಂಟು; ಅದರ ವಿಮರ್ಶೆಯಾಗಲು ಬೇಕು.

ಪಿರಿಯಕ್ಕ ಮೊದಲಾದ ಅಕ್ಕರ ಜಾತಿಯ ವೃತ್ತಗಳ ಲಕ್ಷಣವೇನೊ ಅವುಗಳನ್ನು ಅನ್ನುವುದು ಹೇಗೊ, ಅವು ಲುಪ್ತಪ್ರಾಯವಾಗಿ ಹೋದಕಾರಣವೇನೋ ಇದೊಂದು ಸಮಸ್ಯೆಯೇ ಆಗಿದೆ. ಆದಕಾರಣ ಅವುಗಳ ವಿಚಾರವು ವಿಸ್ತಾರವಾಗಿ ಬೇಕಾಗಿತ್ತು.

**೩ನೆಯ ಭಾಗ ಅಲಂಕಾರ:**—"ಕನ್ನಡ ಆಲಂಕಾರಿಕರು ಪ್ರಾಯಶಃ ತಮ್ಮ ಗ್ರಂಥಗಳಲ್ಲಿ ಯಾವ ಹೊಸ ಸಂಗತಿಯನ್ನು ಎತ್ತಿಯಾಗಲಿ ವಿಚಾರಮಾಡಿಯಾಗಲಿ ಹೇಳಿಲ್ಲ" (ಪುಟ ೧೪೮). 'ಪ್ರಾಯಶಃ' ಎಂಬುದೇನೋ ನಿಜ. ಆದರೆ ಇವರು ಮಾಡಿದ ಹೊಸ ವಿಚಾರವಾವುದು, ಅದು ಎಷ್ಟು ಮಟ್ಟಿಗೆ—ಇದನ್ನು ನಿರ್ಣಯಿಸುವದು ಬೇಡವೇ? ಕನ್ನಡ ಅಲಂಕಾರ ಗ್ರಂಥಗಳೆಲ್ಲ ಪ್ರಕಟವಾಗಿಲ್ಲ. ಕೆಲವು ಕನ್ನಡಿಗರು ಸಂಸ್ಕೃತದಲ್ಲಿಯೂ ಅಲಂಕಾರ ಗ್ರಂಥಗಳನ್ನು ಬರೆದದ್ದುಂಟು. ಇಷ್ಟಾಗಿ ಕಾವ್ಯಲಕ್ಷಣವನ್ನು ಬೋಧಿಸುವ ಕಾರ್ಯವನ್ನು ನಮ್ಮಲ್ಲಿ ಕವಿಗಳೂ ಮಾಡಿದ್ದುಂಟು. ಇದೊಂದು ವಿಶೇಷ. ಸಂಸ್ಕೃತಸಾಹಿತ್ಯದಲ್ಲಿ ಮಹಾಕವಿಗಳ ಕಾಲವು ತೀರಿತ್ತು, ಆನಂದವರ್ಧನಾಚಾರ್ಯ ಪ್ರಮುಖ ನವೀನಆಲಂಕಾರಿಕರ ಕಾಲವು ಆದೇ ಪ್ರಾರಂಭವಾಗಿತ್ತು; ಅಂಥ ಕಾಲಕ್ಕೆ ಉಭಯ ಭಾಷಾಚಕ್ರವರ್ತಿಗಳಾದ ನಮ್ಮ ಕವಿಗಳು ನವೋನವಕಾವ್ಯಗಳನ್ನು ಬರೆದರು, ಕಾವ್ಯಧರ್ಮವನ್ನು ಕುರಿತೂ ಬರೆದರು. ಆದಕಾರಣ ನಮ್ಮಲ್ಲಿ ಹೊಸ ವಿಚಾರವು ಎಷ್ಟೊ ಮಟ್ಟಿಗೆ ಆಗಿರಲು ಸಾಕು. ನಮ್ಮ ಕಾವ್ಯಾಲಂಕಾರಗಳಲ್ಲಿ 'ಶಾಂತ' ರಸಕ್ಕೆ ನಿರ್ವಿವಾದದ ಪ್ರತ್ಯೇಕ ಸ್ಥಾನವು ದೊರೆತುದು ಮಮ್ಮಟನ ಪರಿಶ್ರಮದ ಫಲವಲ್ಲ. ನಮ್ಮವರ ಶಾಸ್ತ್ರವಿಚಕ್ಷಣತೆಯೂ, ನಮ್ಮ ಜನಜೀವನವೂ ಅದಕ್ಕೆ ಕಾರಣ. ಕಾವ್ಯದಲ್ಲಿಯೂ ರಸವೇ ಜೀವವೆಂಬುದು ನಮಗೆ ಆನಂದವರ್ಧನಾಚಾರ್ಯರು ಹೇಳಿದಮೇಲೆಯೆ ಬಂದ ಮಾತಲ್ಲ. ರುದ್ರಟ-ರುದ್ರಭಟ್ಟರ ಸಂಶಯಿತನಾದವೊಂದಿದೆ. ಅದೇನೆ ಇರಲಿ! ಪಠ್ಯಪುಸ್ತಕವಾಗತಕ್ಕ ಈ ಕೈಪಿಡಿಯಲ್ಲಿ ಕನ್ನಡವೊಳಗಿನ ಕಾವ್ಯತತ್ತ್ವವಿಮರ್ಶೆಯು ಸಮಗ್ರವಾಗಿ ಬೇಕೆಯೆ ಬೇಕು. ಪುಟ ೧೫೪ರಲ್ಲಿ ಕನ್ನಡ ಆಲಂಕಾರಿಕರ ವ್ಯಾಖ್ಯೆಗಳು ನಾಲ್ಕೇ ಬಂದಿವೆ. ಉಳಿದ ಅಲಂಕಾರಗ್ರಂಥಗಳಿಂದಲೂ ವ್ಯಾಖ್ಯೆಗಳನ್ನು ಎತ್ತಿ ಬರೆಯಬೇಕಾಗಿತ್ತು. ಪುಟ ೧೫೫ರಲ್ಲಿ ಶ್ರೀ ಡಿ. ವ್ಹಿ. ಗುಂಡಪ್ಪನವರ ಮತ್ತು ಪ. ವಾ. ಬಸವಪ್ಪ ಶಾಸ್ತ್ರಿಗಳ ಪದ್ಯಗಳೆರಡು ಉದಾಹೃತವಾಗಿವೆ. ಅವರ ಹೆಸರನ್ನೂ ಅಲ್ಲಿ ಕಾಣಿಸಿದ್ದರೆ ತಪ್ಪೇನು? ಅರ್ವಾಚೀನರೆಂದು ಶಂಕೆಯೇ? ಪುಟ ೧೭೦-೧೭೩ ವರೆಗೆ 'ವಸ್ತುಕವರ್ಣಕ' ವಿಚಾರವು ಬಂದಿದೆ. "ಸಂಸ್ಕೃತ ಚಂಪೂಲಕ್ಷಣವನ್ನೂ ಸರಣಿಯನ್ನೂ ಅನುಸರಿಸಿ ಬರೆದಿರುವ ಗದ್ಯಪದ್ಯಾತ್ಮಕವಾದ ಕಾವ್ಯಕ್ಕೆವಸ್ತುಕವೆಂದೂ, ಯಾವುದೊಂದು ವಿಶೇಷ ಕಾವ್ಯ ಲಕ್ಷಣವನ್ನಾಗಲಿ ಸಂಸ್ಕೃತಕಾವ್ಯದ ಮಾದರಿಯನ್ನಾಗಲೀ ಇಟ್ಟುಕೊಳ್ಳದೆ ಬರೆದ ಪದ್ಯಕಾವ್ಯಕ್ಕೆ 'ವರ್ಣಕ'ವೆಂದೂ ಹೆಸರು ಸಲ್ಲುವಂತೆ ಹೇಳಬೇಕಾಗುತ್ತದೆ." ಎಂದು ಪುಟ ೧೭೦ರಲ್ಲಿ ಬರೆದದ್ದಾಗಿದೆ. ಸಿದ್ಧಾಂತವೇನೊ ಸರಿಯಾಗಿ ತೋರುತ್ತದೆ. ಆದರೆ ಅದರ ವಿವರಣೆಯೂ ಸ್ಥಾಪನೆಯೂ ಅಷ್ಟು ಸಮರ್ಪಕವೂ ಸಮಗ್ರವೂ ಆಗಿರುವಂತಿಲ್ಲ. 'ವಸ್ತುಕವಿತ್ವ ವರ್ಣಕವಿತ್ವ' ಎಂಬ ಪರಿಭಾಷೆಯು ಪಂಪನ ಕಾಲದಲ್ಲಿಯೂ ಇರುವಂತೆ ಆದಿಪುರಾಣ (ಪುಟ ೩೦೬) ದೊಳಗಿನ 'ಬೇಟಮನೆ ವಸ್ತುಮಾಡಿಯೆ ಕವಿತ್ವ ವರ್ಣಕವಿತ್ವ ಕಾಮತತ್ವವಿವನೆನಿಸಿದ ವಿದಗ್ಧನೊರ್ವನಿಂತೆಂದಂ' ಈ ವಾಕ್ಯದಿಂದ ಊಹಿಸಲು ಸಾಕು. ಆದರೆ ರಾಘವಾಂಕನು ಹರಿಹರನನ್ನು "ವರ್ಣಕಕವಿಕರ್ಣಾವತಂಸಂ" "ವಸ್ತುಕ ಕವಿಮಸ್ತಕನ್ಯಸ್ತಹಸ್ತಂ" ಎಂದು ಹೊಗಳುವವರೆಗೆ ಈ ಪರಿಭಾಷೆಯು ಕಾವ್ಯಗಳ ಬಳಕೆಯಲ್ಲಿ ಅಷ್ಟು ಕಂಡುಬರುವದೇ ಇಲ್ಲ ಎನ್ನಬಹುದು. ವಸ್ತುಕಕಾವ್ಯ, ವರ್ಣಕಕಾವ್ಯ, ಓದುಗಬ್ಬ ಹಾಡುಗಬ್ಬ ಈ ಪರಿಭಾಷೆಯೆಲ್ಲ ಷಟ್ಪದಿ ಕಾವ್ಯಗಳ ಯುಗದಲ್ಲಿ ಬಳಕೆಗೆ ಬಂತು. 'ಶಿವಗಣದ ರಗಳೆ'ಯನ್ನು ಬರೆದೆಯೆ ಹರೀಶ್ವರನು 'ವರ್ಣಕಕವಿಕರ್ಣಾವತಂಸ'ನಾದನು. ವಸ್ತುಕಕವಿಗಳು ಅವನನ್ನು 'ರಗಳೆಯ ಕವಿಯೆ'ಂದು ಹೀಯಾಳಿಸಿರಲಿ; ಆ ಮಾತೆ ಬೇರೆ. ಇದರಿಂದ ಒಂದು ಮಾತು ಸ್ಪಷ್ಟ; ರಗಳೆ ಷಟ್ಪದಿವೃತ್ತಗಳಿಗೂ ವರ್ಣಕಕಾವ್ಯಕ್ಕೂ ನಿಕಟವಾದ ಸಂಬಂಧವಿದೆ. ಆದಿಪಂಪನನ್ನು ಮೊದಲುಮಾಡಿಕೊಂಡು ಎಲ್ಲ ಚಂಪೂಕಾರರು ರಗಳೆಗಳನ್ನು ವರ್ಣನಾಪ್ರಸಂಗದಲ್ಲಿಯೇ ಉಪಯೋಗಿಸಿರುವರು. ಮೇಲಿನ ಮಾತಿಗೆ

ಇದೊಂದು ನಿರ್ಣಾಯಕಪ್ರಮಾಣವು. "ನೃಪತುಂಗ ನಾಗವರ್ಮರು ಹೇಳಿರುವ ಪಾಡು ಮೇಲ್ವಾಡು ಬೆದಂಡೆ ಗಬ್ಬ ಮುಂತಾದವುಗಳು ವರ್ಣಗಳೇ ಆಗಬಹುದು." (ಪುಟ ೧೭೨). ಬಹುವೇಕೆ? ತೀರ ಅಹುದು. ನೃಪತುಂಗನು ಹೇಳುವ "ಚತ್ತಾಣದ" ಲಕ್ಷಣದಿಂದ ವರ್ಣಕ ಕಾವ್ಯಗಳ ಒಂದು ವಿಶೇಷಗಮಕವು ಅವುಗಳಲ್ಲಿ ಉಪಯೋಗಿಸಲ್ಪಡುವ ವೃತ್ತಗಳು ಎಂದು ಮೇಲೆಯೆ ಕಾಣುವದು. ಮತ್ತು ಈ ವೃತ್ತಗಳೆಲ್ಲ ಕನ್ನಡ ವೃತ್ತಗಳು, ಆದಕಾರಣ ವರ್ಣಕ ಕಾವ್ಯಗಳ ಪರಂಪರೆಯು ಸಂಪೂರ್ಣವಾಗಿ ದೇಶೀಯವಾಗಿದೆ. ಅಂತೆಯೆ ವಚನಕಾರರ ಕಾಲಕ್ಕಾದ ಜಾನಪದ ಜಾಗೃತಿಯ ಕಾಲಕ್ಕೆ ವರ್ಣಕಕಾವ್ಯದ ಪರಂಪರೆಯು ಪ್ರತಿಷ್ಠೆಯನ್ನು ಹೊಂದಿದುದು ತೀರ ಯೋಗ್ಯವಾಗಿದೆ. ಹಾಗಾದರೆ ಮೂಲ ವರ್ಣಕವಸ್ತುಕಕಾವ್ಯಗಳ ಲಕ್ಷಣವೇನು? ವಸ್ತುಕ ಕಾವ್ಯವು ನಾಗವರ್ಮನು ಕಾವ್ಯಾವಲೋಕನದ ೨೪೬–೪೭ ಸೂತ್ರದಲ್ಲಿ ಹೇಳುವಂತೆ ಸಾಂಗೋಪಾಂಗವಾಗಿರುತ್ತದೆ. ವರ್ಣಕದ ಲಕ್ಷಣ ಅಸಮಗ್ರತೆ. ವರ್ಣಕಕಾವ್ಯವನ್ನು ಹಾಡಲೇಬೇಕು. ಅದು ಪಾಡುಗಬ್ಬ. ವಸ್ತುಕವು ಓದುಗಬ್ಬ. ವಸ್ತುಕವು ಮಾರ್ಗಾನುಸಾರಿ, Classical; ವರ್ಣಕವು ದೇಶೀಯ, Romantic. ವಸ್ತುಕವು ಸಂಸ್ಕೃತ ವೃತ್ತಗಳಲ್ಲಿರತಕ್ಕದ್ದು. ವರ್ಣಕವು ಕನ್ನಡ ವೃತ್ತಗಳಲ್ಲಿ. ಅನುಷಂಗದಿಂದ ಇಲ್ಲಿ ಹೇಳಬೇಕಾದ ಸಂಗತಿಯೆಂದರೆ ಈ ಚಂಪೂಪ್ರಬಂಧಪದ್ಧತಿಯೂ ನಮ್ಮಲ್ಲಿಯೇ ಮೊದಲು ಹುಟ್ಟಿತೇನೋ ಎಂದೆನಿಸುವದು. ಹರಿಚಂದ್ರನ 'ಜೀವಂಧರಚರಿತ್ರೆ'ಯೆ ಸಂಸ್ಕೃತಸಾಹಿತ್ಯದಲ್ಲಿ ಪ್ರಥಮಚಂಪೂಕಾವ್ಯವು. ಇವನು ೬ನೆಯ ಶತಮಾನದವನು, ಜೈನನು. ಜೈನರ ಗಡ್ಡೆಯು ಆಗ್ಗೆ ಕರ್ನಾಟಕದ ಹೊಟ್ಟೆಯಲ್ಲಿತ್ತು. ೬ನೆಯ ಶತಮಾನದಲ್ಲಿಯೇ ನಮ್ಮಲ್ಲಿ ಚಂಪೂಕಾವ್ಯಗಳೂ ಹುಟ್ಟಿರಬಹುದೆಂದು ಊಹಿಸಲು ಸಾಧ್ಯವಿದೆ. ಅದಿರಲಿ.

ಪುಟ ೧೭೪೨—೯೮೦ರ ವರೆಗೆ ರಸವಿಷಯಕವಾದ ತಾತ್ತ್ವಿಕ ವಿವೇಚನೆಯಿದೆ. ಕನ್ನಡ ಅಲಂಕಾರಗ್ರಂಥಗಳಲ್ಲಿ ಇದು ಇಷ್ಟು ಸವಿಸ್ತರವಾಗಿ ಇಲ್ಲದಿರುವದರಿಂದ ಕನ್ನಡಿಗರಿಗಾಗಿ ಸಂಸ್ಕೃತಲಕ್ಷಣಗ್ರಂಥಗಳಿಂದ ಸಂಗ್ರಹಿಸಿದುದು ಸ್ತುತ್ಯವಾಗಿದೆ. ಆದರೆ ಸಂಸ್ಕೃತ ಅಲಂಕಾರಶಾಸ್ತ್ರದಲ್ಲಿ ಈ ರಸೋತ್ಪತ್ತಿವಾದವು 'ಚರ್ವಿತ ಚರ್ವಣ'ದಂತೆ ಒಮ್ಮೊಮ್ಮೆ ತಲೆಬೇಸರವನ್ನುಂಟು ಮಾಡುವದು. ಚರ್ವಣದಿಂದ ರಸವುಂಟಾಗುವದೆಂದು ಹೇಳುವರು. ಆದರೆ ರಸೋತ್ಪತ್ತಿವಾದವು ಅದಕ್ಕೆ ಅಪವಾದವಾಗಿದೆ. ೧೯೧ನೆಯ ಪುಟದಲ್ಲಿ ಕೊಟ್ಟ ವಿಕಾಸವಿಸ್ತಾರದ ಉದಾಹರಣೆಗಳು ವಿನೋದಕರವಾಗಿ ಮಾತ್ರ ಇವೆ. 'ಪರಸ್ಪರ ಭೇದವು ಚೆನ್ನಾಗಿ' ಗೊತ್ತಾಗುವದು ಸಂಶಯಾಸ್ಪದ. 'ರಸಗಳು ಎಷ್ಟು' ಎಂಬ ಪ್ರಸ್ತಾಪವೆತ್ತಿದಲ್ಲಿ ಶಾಂತರಸದ ವಾದವು ಬಂದಿದೆ. ಇಲ್ಲಿ ಕನ್ನಡ ಲಕ್ಷಣಕಾರರ ವಿಶೇಷವನ್ನು ಹೇಳಬಹುದಾಗಿತ್ತು. ಚೈತನ್ಯಪಂಥೀಯನೊಬ್ಬನು ಬರೆದ 'ಉಜ್ವಲನೀಲಮಣಿ'ಯೊಳಗಿನ 'ಭಕ್ತಿ' ಮೊದಲಾದ ರಸಗಳ ವಿಚಾರವನ್ನು ಸೇರಿಸುವದೂ ಉಚಿತವಾಗಿದೆ. ಪುಟ ೨೧೮ ರಲ್ಲಿ "ನೃಪತುಂಗನು 'ದೇಸಿ' 'ಮಾರ್ಗ'ಗಳಿಗೆ ಭೇದವನ್ನು ಹೇಳಿದಂತಿದೆ. ಆದರೆ ಇದು ಸ್ಪಷ್ಟವಿಲ್ಲ" ಎಂದು ಬರೆದಿದೆ. ಅದೇನೋ ನಿಜ. ಆದರೂ 'ಮಾರ್ಗ'ವೆಂದರೆ of Classical usage ಪ್ರಾಚೀನ ಕವಿಸಂತತಿ—ಸಮ್ಮತವೆಂದೂ, 'ದೇಸಿ'ಯೆಂದರೆ of local usage ನಾಡಿನ ಬಳಕೆಯಲ್ಲಿಯದೆಂದೂ ಅರ್ಥಮಾಡಿಕೊಂಡರೆ ಸರಿಹೋಗಬಹುದೆಂದು ಸೂಚಿಸುತ್ತೇವೆ.

ಇನ್ನು 'ಕವಿಸಮಯ'ವನ್ನು ಕುರಿತು ಚರ್ಚಿಸುವಾಗ ಅದಕ್ಕೆ ವಿರೋಧಿಕವಾದ ಮತದ ಅವತರಣಿಕೆಯನ್ನು ಕೊಟ್ಟಂತೆ ಮಾ|| ರಾ|| ಮಾಸ್ತೀ ವೆಂಕಟೇಶ ಅಯ್ಯಂಗಾರರದಾಗಲಿ ಮ|| ರಾ|| ರಾಮಾನುಜ ಅಯ್ಯಂಗಾರರದಾಗಲಿ ಸಾಧಕವಾದ ಮತದ ಒಂದು ಒಳ್ಳೆ ಅವತರಣಿಕೆ ಇದ್ದರೆ ನ್ಯಾಯ್ಯವಾಗುತ್ತಿತ್ತು. 'ಅಲಂಕಾರ' ಪ್ರಕರಣದಲ್ಲಿ ಸಂಸ್ಕೃತ ಅಲಂಕಾರಶಾಸ್ತ್ರಗಳಲ್ಲಿಯೂ, ಕಾವ್ಯಟೀಕೆಗಳಲ್ಲಿಯೂ ಕಂಡು ಬರುತ್ತಿದ್ದ ಕಾವ್ಯ ಶಾಸ್ತ್ರದೊಳಗಿನ ಶುಷ್ಕಘಟಪಟನ್ಯಾಯದ ಒಂದು ಮಾದರಿಯು ಕನ್ನಡಿಸಿದೆ. ಕನ್ನಡದಲ್ಲಿ ಈ ತರ್ಕಾತರ್ಕಿಯ ತೊಡಕಿನ 'ಎಣ್ಣೆಗೆ ಬೆಣ್ಣೆ ಸಣ್ಣ' ವೆಂದರಿದಾಡುವ ಉದಾಹರಣೆಗಳು ದೊರೆಯುತ್ತಿದ್ದಿಲ್ಲ, ಇಲ್ಲಿ ದೊರೆಯುತ್ತಿವೆ. ಇದು ಹೊಸದು ಎಂದು ಬೇಕಾದರೆ ಅಭಿನಂದನೀಯವೆನ್ನಬೇಕಷ್ಟೆ. ಕಾವ್ಯರಸಾಸ್ವಾದನಕ್ಕೆ ಇದಕ್ಕೂ ನೀರಸವಾದ ಬೇರೊಂದು ಪದ್ಧತಿಯಿಲ್ಲ ಎಂದು ಹೇಳಬಹುದು. ಭಾವವನ್ನು ಅರ್ಥಚಮತ್ಕೃತಿಯಿಂದ ವ್ಯಕ್ತಪಡಿಸುವದೆ ಅಲಂಕಾರಗಳ ಧರ್ಮವಾಗಿರುವದರಿಂದ ಅಲಂಕಾರವಿಮರ್ಶೆಯಲ್ಲಿ, ಇಲ್ಲಿ ಚಮತ್ಕೃತಿ ಯಾವುದು? ಅದರ ಮೂಲಕ ಯಾವ ಭಾವವು ಸೂಚಿತ

ವಾಗುತ್ತಲಿದೆ ? ಇದೆ ನಿಜವಾದ ವಿಷಯವಾಗಬೇಕು. ಹಾಗಾಗದೆ—

ಆಸ್ಯವಿಂಬಿಲ್ಲ ಭಾ ।

ಸುರನೇತ್ರದ್ವಿತಯ ಪ್ರಚಾರತೆಗೆ ಬೆನ್ನಿಂಬಿಲ್ಲ ಧಮ್ಮಿಲ್ಲ ಬಂ ।

ಧುರಸೀಮಾವಳಯಕ್ಕೆ ನೋಡೆ... ।

ಗಿರಿಜಾಯೌವನಸಂಪದಕ್ಕೆ ತನುವೆಂತಿಂಬಪ್ಪುದೋ ರುದ್ರನಾ॥

ಇಲ್ಲಿ ನೇತ್ರಾದಿಗಳಿಗೆ ಆಸ್ಯಪ್ರಭೃತಿಗಳಲ್ಲಿ ಸಾಕಾದಷ್ಟು ಅವಕಾಶವಿದ್ದೇ ಇರುವದು ಆದರೂ ಸಾಕಾದಷ್ಟು ಮಟ್ಟಿನ ಅವಕಾಶವಿಲ್ಲವೆಂದು ವರ್ಣಿಸಿರುವದೇ ಅಸಂಬಂಧಾತಿಶಯೋಕ್ತಿಯೆನ್ನಿಸಿಕೊಳ್ಳುವದು.

ಹೀಗಾದರೆ ಚಮತ್ಕೃತಿ ಏನು ತಿಳಿದಂತಾಯಿತು, ಭಾವವನ್ನೇನು ವ್ಯಕ್ತೀಕರಿಸಿದಂತಾಯ್ತು ? 'ಹರವಾದ ಮುಖವನ್ನು ಕೂಡ ಮಿಕ್ಕಿ ಸೂಸುವ ತೇಜವುಳ್ಳ ದೊಡ್ಡ ಕಣ್ಣುಗಳು ಹರವಾದ ಬೆನ್ನಲ್ಲಿ ಹಿಡಿಸಲಾರದೆ ತುಂಬಿ ಹೊರಗೆ ಹರಡಿರುವ ವಿಪುಲವಾದ ಕೇಶಪಾಶ—ಈ ಪ್ರಕಾರದ ರೂಪು ಗಿರಿಜೆಯದು' ಎಂಬುದನ್ನು ಅತಿಶಯೋಕ್ತಿಯಾಗಿ 'ಹರವಾದ ಮೊಗದಲ್ಲಿ ಕಣ್ಣೇ ಹಿಡಿಸದಾದವು. ಹರವಾದ ಬೆನ್ನಿನಲ್ಲಿ ಕೇಶಕ್ಕೆ ಇಂಬಿಲ್ಲ' ಎಂದು ಚಮತ್ಕಾರವಾಗಿ ಹೇಳಿದ್ದಾಗಿದೆ. ಕಾವ್ಯಾಸ್ವಾದನದ ತರ್ಕಾತರ್ಕಗೆ ಇನ್ನೊಂದೇ ಉದಾಹರಣವನ್ನು ಕೊಡುವೆನು.

"ಇಲ್ಲಿ ಬಾದರಾಯಣನಿಕ್ಕಿದುರಿಲ ಕಣ್ಣಿಗೆ ಸಿಲ್ಕುವರೆ"ಎಂಬಲ್ಲಿ ಬಾದರಾಯಣನು ಹೇಳಿದ ಪ್ರಾಣಾಪಾಯಕರವಾದ ಮಾತಿಗೆ ನೀನು ವಶನಾಗಬಹುದೇ? ಎಂಬ ಪ್ರಶ್ನೆಯು ವ್ಯಂಗ್ಯವಾಗಿರುವದು. ಈ ವ್ಯಂಗ್ಯಾರ್ಥವಿಲ್ಲದಿದ್ದಲ್ಲಿ ಬಾದರಾಯಣನು ಧರ್ಮರಾಯನಿಗೆ ಯಾವ ಉರಿಲ ಕಣ್ಣಿಯನ್ನೂ ಇಕ್ಕಲಿಲ್ಲವಾದ ಕಾರಣ ಈ ವಾಕ್ಯವು ಅಸಂಬದ್ಧಪ್ರಲಾಪವಾಗಿ ಕಾಣುತ್ತಿತ್ತು. ಆದರೆ ಈ ವ್ಯಂಗ್ಯಾರ್ಥವಿರುವದರಿಂದ 'ಬಾದರಾಯಣನಿಕ್ಕಿದ' ಇತ್ಯಾದಿಯಾದ ವಾಕ್ಯಾರ್ಥವು ಪ್ರತಿಬಿಂಬಭಾವವನ್ನು ಕಡೆಗಾಣುತ್ತಿರುವದು. ಹೀಗೆ ವಾಚ್ಯಾರ್ಥದ ಸಿದ್ಧಿಗೆ ಈ ವ್ಯಂಗ್ಯವು ಸಾಧಕವಾಗಿರುವದರಿಂದ ವಾಚ್ಯಸಿದ್ಧ್ಯಂಗ ನಾಮಕವಾದ ಗುಣೀಭೂತವ್ಯಂಗವಾಗಿರುವದು. ಈ ಗುಣೀಭೂತವ್ಯಂಗ್ಯಾರ್ಥವು ತೋರುವಂತೆ ಪ್ರಸ್ತುತನಾದ ಧರ್ಮರಾಯನಲ್ಲಿ ಪ್ರತಿಬಿಂಬಭೂತವಾದ ವಾಕ್ಯಾರ್ಥದ ಸಂಬಂಧವಿರುವದರಿಂದ ಇಲ್ಲಿ ಲಲಿತಾಲಂಕಾರವೆಂದು ಹೇಳಬೇಕಾಗಿರುವದು. ಪ್ರತಿಬಿಂಬವೆಂದರೆ ಉಪಮಾನಧರ್ಮವಿಶಿಷ್ಟವೆಂದು ಗ್ರಹಿಸಿದರೆ ಸದ್ಯದಲ್ಲಿ ಸಾಕಾಗಿರುವದು."

ನಮಗೂ ಸಾಕಾಗಿರುವದು. ವಾಚಕರಿಗೂ ಸಾಕಾಗಿರಬಹುದು.

ಒಟ್ಟಿನಲ್ಲಿ ಅಲಂಕಾರವಿಭಾಗವು ಈಗಾಗಲೆ ಕನ್ನಡ ಅಲಂಕಾರಶಾಸ್ತ್ರಗಳಲ್ಲಿ ಸಿಗುವ ವಿಷಯುಗಳಿಗಿಂತ ಹೆಚ್ಚು ವಿಷಯಗಳನ್ನು ಒಳಕೊಂಡದ್ದಾಗಿದೆ. ಛಂದೋವಿಭಾಗವು ಸುಮಾರಾಗಿದೆ. ವ್ಯಾಕರಣ ವಿಭಾಗವು ಅಪೂರ್ಣವಾಗಿದೆ. ಆದರೂ ಎಲ್ಲರೂ ಸಂಗ್ರಹಿಸಬೇಕಾದ ಗ್ರಂಥವಾಗಿದೆ. ಮುಂದಿನ ೪-೫ನೇ ವಿಭಾಗಗಳೂ ಸುಸಂಪನ್ನ ವಿದ್ಯಾವಂತರಿಂದ ಬರೆಯಲಿರುವವಿರುವದರಿಂದ ಅವುಗಳನ್ನು ಎಲ್ಲರೂ ಓದಲು ಕುತೂಹಲಿಗಳಾಗಿರುವದು ಸ್ವಾಭಾವಿಕವಾಗಿದೆ.

---

## ಪರಮೇಶ !

ಹೊರಗಿನಿಂದೈತರುವ ನಲ್ಲನನು ಕಾಣುತ— ।
ಕ್ಕರದಲೆದ್ದಿದಿರು ಬಂದಿನಿನೋಟದಿಂ ತಣಿಸಿ ।
ಸರಸಸಲ್ಲಾಪದಿಂ ಮನವೊಲಿಸ ಸತಿಯು ಸಿರಿಮೊಗದೊಳಗೆ ಮಿನುಗುತಿರುವ ॥
ಕಿರುನಗೆಯೊಳಣುವಾಗಿ ಕಳೆಯರಾನಂದದೊಳು ।
ಹೊರಸೂಸಿ ಬರುವ ಹಿರಿನಗೆಯೊಳಗೆ ಮಹನಾಗಿ ।
ಪರಮೇಶ, ತೋರುವೈ ! ಅಣುವಿನೊಳಗಣು ನೀನು ಮಹದೊಳಗೆ ನೀನು ಮಹನೊ ! ॥ ೧ ॥

—ಸಾ. ರಾ.




॥ नाहं कर्ता हरिः कर्ता तत्पूजा कर्म चाखिलम् ॥

## ಬ್ರಿಟಿಶರ ಪದಾರ್ಥಗಳಿಗಷ್ಟೇ ಬಹಿಷ್ಕಾರವೇಕೆ?

ಹಿಂದುಸ್ಥಾನವು ಈಗ ಸುಮಾರು ೨೦ ವರ್ಷಗಳ ಹಿಂದೆ, ಈ ಬಹಿಷ್ಕಾರದ ಅಸ್ತ್ರವನ್ನು ಕೈಯಲ್ಲಿ ತೆಗೆದುಕೊಂಡಿದೆ. ಬಹಿಷ್ಕಾರದ ಮುಖ್ಯ ಉದ್ದೇಶಗಳು ಎರಡು. ಎಳಕವಾಗಿರುವ ನಮ್ಮ ಸ್ವದೇಶದ ಉದ್ಯೋಗವ್ಯವಸಾಯ ಊರ್ಜಿತಾವಸ್ಥೆಗೆ ಬರಲಿಕ್ಕೆ ಹಿಂದುಸ್ಥಾನಕ್ಕೆ ಅವಕಾಶ ದೊರೆಯಬೇಕೆಂಬುದು ಒಂದನೆಯದು. ನಮ್ಮ ಸ್ವಾತಂತ್ರ್ಯವನ್ನು ಹರಣ ಮಾಡಿದ ಬ್ರಿಟಿಶರು ಹಣ್ಣಿಗೆ ಬರಬೇಕೆಂಬುದು ಎರಡನೆಯದು. ಹಿಂದುಸ್ಥಾನವು ಪ್ರತಿಯೊಂದು ವಿಷಯದಲ್ಲಿಯೂ ಸಂಪೂರ್ಣವಾಗಿ ಸ್ವಾವಲಂಬಿಯಾಗುವುದು ಯಾರಿಗೆ ಬೇಡ ? ಆದರೆ, ಹಿಂದುಸ್ಥಾನದಂಥ ಪರತಂತ್ರವಾದ ದೇಶಕ್ಕೇ ಆಗಲಿ, ಅಥವಾ ಸ್ವರಾಜ್ಯವನ್ನನುಭವಿಸುವ ಮಿಕ್ಕ ಯಾವ ದೇಶಕ್ಕೇ ಆಗಲಿ, ಅದು ಸಂಪೂರ್ಣಸಾಧ್ಯವಿಲ್ಲ. ಉದ್ಯೋಗವ್ಯವಸಾಯಗಳ ವಿಷಯದಲ್ಲಿಯೂ ಅನ್ಯೋನ್ಯಾಶ್ರಯವು ಬೇಕೇಬೇಕು. ಆದರೆ, ಹಿಂದುಸ್ಥಾನದೇಶದಲ್ಲಿ ಇಂದಿಲ್ಲ ನಾಳೆ ಹುಟ್ಟಬಹುದಾದ ಯಾವತ್ತು ಪದಾರ್ಥಗಳನ್ನು ಇಲ್ಲಿಯೇ ಹುಟ್ಟಿಸುವುದಕ್ಕೆ ಪ್ರಯತ್ನಿಸುವುದೇ ಎಲ್ಲಕ್ಕೂ ಉತ್ತಮಪಕ್ಷ. ಹೀಗೆ ಹುಟ್ಟಿಸಲಿಕ್ಕೆ ಸಾಧ್ಯವಾದ ಪದಾರ್ಥಗಳಲ್ಲಿ ಅರಿವೆಯು ಮುಖ್ಯಪದಾರ್ಥವು. ಆದುದರಿಂದಲೇ ಖಾದಿಗೆ ನಾವು ಇಷ್ಟು ಮಹತ್ವವನ್ನು ಕೊಡುವುದು. ಹಿಂದುಸ್ಥಾನವು ಬಹಳ ದಿವಸಗಳಿಂದ ಪಾರತಂತ್ರ್ಯದಲ್ಲಿ ಬಳಲುತ್ತಿರುವುದರಿಂದ, ಇಲ್ಲಿ ಹುಟ್ಟಿಸಬಹುದಾದ ಪದಾರ್ಥಗಳೆಲ್ಲವನ್ನೂ ಹುಟ್ಟಿಸುವುದಕ್ಕೆ ಅದಕ್ಕೆ ಶಕ್ತಿ ಸಾಲದು. ಆದುದರಿಂದ, ಹಾಗೆ ನಮಗೆ ಶಕ್ತಿ ಪ್ರಾಪ್ತವಾಗುವವರೆಗೆ ನಾವು ಆ ತರಹದ ಯಾವತ್ತು ಪರದೇಶಗಳ ಪದಾರ್ಥಗಳ ಮೇಲೆ ಬಹಿಷ್ಕಾರ ಹಾಕಬೇಕು. ಹೀಗೆ ಮಾಡುವುದರಿಂದ, ನಮ್ಮ ಉದ್ಯೋಗವ್ಯವಸಾಯಗಳಿಗೆ ಉಸಿರಾಡಿಸುವುದಕ್ಕೆ ಅವಕಾಶ ದೊರೆಯುತ್ತದೆ. ಮತ್ತು ಅವು ಮುಂದೆ ಬಲಿಷ್ಠವಾಗುವವು. ಆದರೆ ಈಗಿನ ಪರಿಸ್ಥಿತಿಯಲ್ಲಿ, ನಾವು ಪರದೇಶಗಳ ಪದಾರ್ಥಗಳಿಗೆ ಈ ರೀತಿಯಾಗಿ ಬಹಿಷ್ಕಾರ ಹಾಕಿದರೂ ಸಾಲದು. ಏಕೆಂದರೆ, ಹೀಗೆ ಒಮ್ಮೆಲೆ ಬಹಿಷ್ಕಾರ ಹಾಕುವುದು ಸಾಧ್ಯವಿಲ್ಲ. ಅನೇಕ ಪದಾರ್ಥಗಳ ಸಲುವಾಗಿ ನಾವು ಪರದೇಶದ ಪದಾರ್ಥಗಳ ಮೇಲೆ ಎಷ್ಟೋ ವರುಷಗಳ ವರೆಗೆ ಅವಲಂಬಿಸಲೇ ಬೇಕಾಗುತ್ತದೆ. ಉದಾ—ಯಂತ್ರ ಸಾಮಗ್ರಿಯನ್ನು ತೆಗೆದುಕೊಳ್ಳಿರಿ. ನಮ್ಮ ದೇಶದಲ್ಲಿ ಸಾಕಷ್ಟು ಕಬ್ಬಿಣವು ದೊರೆತು, ಯಂತ್ರಸಾಮುಗ್ರಿಗಳು ಸಿದ್ಧವಾಗಬೇಕಾದರೆ ಎಷ್ಟೋ ಕಾಲ ಬೇಕಾಗುವುದು. ಅಲ್ಲಿಯವರೆಗೆ ಪರದೇಶದ ಪದಾರ್ಥಗಳ ಮೇಲೆ ಅವಲಂಬಿಸದೆ ನಿರ್ವಾಹವೇ ಇಲ್ಲ. ಇಂಥ ಸಂದರ್ಭದಲ್ಲಿ, ನಾವು ಯಾವ ಪರದೇಶದ ವಸ್ತುವನ್ನು ಕೊಳ್ಳಬೇಕೆಂಬ ಪ್ರಶ್ನೆಯು ನಮ್ಮ ಮುಂದೆ ಬಂದು ನಿಲ್ಲುತ್ತದೆ. ಅಮೇರಿಕಾ, ಜರ್ಮನಿ, ಜಪಾನ ಮುಂತಾದ ದೇಶಗಳ ವಸ್ತುಗಳನ್ನು ತೆಗೆದುಕೊಳ್ಳಬೇಕೋ ಅಥವಾ ಬ್ರಿಟಿಶರ ವಸ್ತುಗಳನ್ನು ತೆಗೆದುಕೊಳ್ಳಬೇಕೋ ಎಂಬುದನ್ನು ನಾವು ಯೋಚಿಸಬೇಕಾಗುತ್ತದೆ. ಆಗ ಬ್ರಿಟಿಶರ ಪದಾರ್ಥಗಳನ್ನು ಕೊಳ್ಳುವುದಕ್ಕಿಂತ ಮಿಕ್ಕ ದೇಶಗಳ ವಸ್ತುಗಳನ್ನು ಕೊಳ್ಳುವುದು ಲೇಸೆಂದು ನಮ್ಮ ಮನಸ್ಸಿಗೆ ಹೊಳೆಯುವುದು ಸಹಜವೇ ಇದೆ. ಏಕೆಂದರೆ ಬ್ರಿಟಿಶರು ನಮ್ಮನ್ನು ಪಾರತಂತ್ರ್ಯದ ಬಲೆಯಲ್ಲಿ ಹಿಡಿದಂತೆ ಮಿಕ್ಕವರು ನಮ್ಮನ್ನು ಹಿಡಿದಿರುವುದಿಲ್ಲ. ಅನಂಬ್ಬ

ರೊಳಗೆ ವಿವೇಕ ಮಾಡುವುದಾದರೆ ಬ್ರಿಟಿಶರನ್ನು ನಿರಾಕರಿಸ ಬೇಕಾಗುವುದು. ಆದರೆ, ಬ್ರಿಟಿಶರನ್ನು ಕೂಡ ಸರ್ವಥಾ ನಿರಾಕರಿಸುವುದು ಸಾಧ್ಯವಿಲ್ಲ. ಅವರು ನಮ್ಮನ್ನು ತಮ್ಮ ಮುಷ್ಟಿಯಲ್ಲಿ ಬಿಗಿಯಾಗಿ ಹಿಡಿದಿರುವರು. ಆದುದರಿಂದ ನಾವು ಸರ್ವಥಾ ಮುಕ್ತರಾಗುವುದು ಇನ್ನೂ ಶಕ್ಯವಿಲ್ಲ. ಇಂಥ ಸ್ಥಿತಿಯಲ್ಲಿ ಮಾಡುವುದೇನು ? ಬ್ರಿಟಿಶರ ಪದಾರ್ಥಗಳಲ್ಲಿ ಅರಿವೆಯೇ ಮುಖ್ಯವಾದುದು. ಅದೇ ನಮ್ಮ ದೇಶದ ಹಣವನ್ನು ಹೆಚ್ಚಿಗೆ ಸೆಳೆದುಕೊಳ್ಳುವುದು. ಬ್ರಿಟಿಶರು ಸೊಕ್ಕಿ ಉದ್ಧಾಮರಾದುದೂ ಈ ಮಾಂಚೆಸ್ಟರ ಅರಿವೆಯ ಬಲದ ಮೇಲೆ. ಆದ ಕಾರಣ, ನಾವು ಮೊಟ್ಟಮೊದಲು ಅವರ ಜೇಬುಗಳನ್ನು ಬರಿದಾಗಿ ಮಾಡಬೇಕು. ಇದೇ ಬಹಿಷ್ಕಾರ ಶಾಸ್ತ್ರದ ಮರ್ಮ. ಮದ್ರಾಸ್ ಕಾಂಗ್ರೆಸಿನವರು ವಿಶೇಷತಃ ಬ್ರಿಟಿಶ್ ಅರಿವೆಗೆ ಬಹಿಷ್ಕಾರ ಹಾಕಲಿಕ್ಕೆ ಹೇಳಿದ್ದೂ ಇದೇ ಉದ್ದೇಶದಿಂದ. ಈ ತಾರತಮ್ಯಜ್ಞಾನವನ್ನರಿತುಕೊಳ್ಳುವುದು ಅವಶ್ಯವು.

---

## ಶುದ್ಧಿಯೋ ಅದರ ನಗೆಚಾಟಿಕೆಯೋ ?

ಕಾಮಾತುರರಲ್ಲಿ ಅಗ್ರಗಣ್ಯರೆಂದು ಖ್ಯಾತಿಗೊಂಡ ಇಂದೂರಿನ ಮಹಾರಾಜರನ್ನು ಮಿಸ್. ಮಿಲ್ಲರ ಎಂಬವಳೊಬ್ಬ ಅಮೇರಿಕೆಯ ತರುಣಿಯು ಮೋಹಿಸಿದಳು. ಅದೇನು ಅವರ ರೂಪಕ್ಕೋ ಗುಣಕ್ಕೋ ಹಣಕ್ಕೋ ನಮಗೆ ಗೊತ್ತಿಲ್ಲ. ಮಹಾರಾಜರು ಅವಳನ್ನು ಮದುವೆಮಾಡಿಕೊಳ್ಳುವುದನ್ನು ನಿಶ್ಚಯಮಾಡಿದರು. ಅವಳು ಹಿಂದುವಾಗುವುದಕ್ಕೆ ಸಿದ್ಧಳಾದಳು. ಹಿಂದೂಧರ್ಮದಲ್ಲಿ ಅವಳನ್ನು ತೆಗೆದುಕೊಳ್ಳಬೇಕೆಂದು ಮಹಾರಾಜರು ಹಿಂದುಸ್ಥಾನದಲ್ಲೆಲ್ಲ ಅಲೆದರು. ಕರವೀರ ಪೀಠದ ಶ್ರೀ. ಶಂಕರಾಚಾರ್ಯರು ( ಕುರ್ತಕೋಟಿಯ ಡಾ. ಭಾಗವತರು ) ಕೇವಲ ಹಿಂದೂಧರ್ಮವನ್ನು ವ್ಯಾಪಕವಾಗಿ ಮಾಡುವ ಸದುದ್ದೇಶದಿಂದ (!) ಅವಳನ್ನು ಪಾವನಳನ್ನಾಗಿ ಮಾಡಲಿಕ್ಕೆ ಒಪ್ಪಿಕೊಂಡು ಆ ಮೇರೆಗೆ ನಾಶಿಕದಲ್ಲಿ ೧೩-೩-೨೮ ನೆಯ ದಿವಸ ಅದರ ವಿಧಿಯನ್ನು ತೀರಿಸಿದರು. ಆಯಿತು, ಅವಳು ಹಿಂದುವಾದಳು. ಸ್ವಲ್ಪ ಕಾಲದಲ್ಲಿಯೇ ಮದುವಣಿಗೆಯೂ ಆದಳು. ಮಹಾರಾಜರು ಮೊದಲಿನ ಇಬ್ಬರು ಹೆಂಡಂದಿರನ್ನು ಬಿಟ್ಟುಕೊಟ್ಟು ಇವಳೊಡನೆ ಸರಸಸಲ್ಲಾಪಗಳಲ್ಲಿ ಮಗ್ನರಾಗಿರುವರು ! ನಮ್ಮ ಹಿಂದೂಧರ್ಮಕ್ಕೆ ಒಬ್ಬ ಕ್ರಿಶ್ಚಿಯನ್ನಳು ಸೇರಿದಳಲ್ಲಾ, ಹಿಂದೂಧರ್ಮವು ಪುಷ್ಟವಾಯಿತಲ್ಲಾ- ಎಂದು ಹಲವರು ಆನಂದಸಾಗರದಲ್ಲಿ ಓಲಾಡುತ್ತಿರುವರು!! ಇದನ್ನೆಲ್ಲ ನೋಡಿ, ಇದೇನು ನಿಜವಾದ ಶುದ್ಧಿಯ ಚಳವಳವೋ ಅಥವಾ ಅವನ್ನು ಅಣಕಿಸುವುದೋ ? ಎಂಬುದು ನಮಗೆ ದಿಗಿಲುಬಿದ್ದಿದೆ ! ಈ ತರಹದ ಉದಾಹರಣೆಗಳು ಶುದ್ಧಿಯ ಚಳವಳದ ವಿಷಯವಾಗಿ ಜನರ ಮನದಲ್ಲಿ ತಿರಸ್ಕಾರವನ್ನು ಮಾತ್ರ ಹುಟ್ಟಿಸುವುವಲ್ಲದೆ, ಆದರವನ್ನು ಹೆಚ್ಚಿಸಲಾರವೆಂಬುವನ್ನು ಆ ಚಳವಳದ ಪುರಸ್ಕರ್ತರು ಮರೆಯಕೂಡದು. ವಿಧವಾವಿವಾಹದ ಸಂಬಂಧದಿಂದ ಜನರಲ್ಲಿ ತಿರಸ್ಕಾರಬುದ್ಧಿಯು ಹುಟ್ಟುವುದಕ್ಕೆ ಹಿಂದಕ್ಕೆ ಇದೇ ತರಹದ ಉದಾಹರಣೆಗಳು ಕಾರಣವಾದುವು. ಆದುದರಿಂದ ಶುದ್ಧಿ ಚಳವಳದ ಹಿತದ ದೃಷ್ಟಿಯಿಂದಲೂ ಇಂಥ ಉದಾಹರಣೆಗಳು ಸಂಭವಿಸದಿರುವುದು ಒಳ್ಳೆಯದೆಂದು ನಮಗೆ ತೋರುತ್ತದೆ. ಇನ್ನು, ಶಂಕರಾಚಾರ್ಯರ ವಿಷಯ. ಮಿತಿಮೀರಿ ಮಹತ್ವಾಕಾಂಕ್ಷಿಗಳಾದ ಕರ್ನಾಟಕದ ಈ ಮಹಾತ್ಮರು ಆ ಪೀಠಕ್ಕೆ ಸಲ್ಲದ ಇಂಥ ಕೃತ್ಯವನ್ನು ಮಾಡುವ ಮುಂಚೆ, ತುಸುವಾದರೂ ವಿವೇಕವನ್ನು ಅವಲಂಬಿಸಬೇಕಾಗಿತ್ತು. "ಮಹಾರಾಜರಿಗೆ ಇಬ್ಬರು ಹೆಂಡಂದಿರು ಇದ್ದಗೊಡವೆ ನಮಗೇನು ? ಒಬ್ಬ ಮುಮುಕ್ಷಳು ಮಹಾರಾಜರ ಕೈಹಿಡಿಯುವ ಮುಂಚೆ ಹಿಂದೂಧರ್ಮದ ಕೈಹಿಡಿಯಬೇಕೆಂದು ಹಾತೊರೆದಳು. ಇಷ್ಟು ನಮಗೆ ಸಾಕು" ಎಂಬದಾಗಿ ಆತ್ಮವಂಚನೆ ಮಾಡಿಕೊಳ್ಳುವುದು ಗರ್ಹಣೀಯವು. ಶುದ್ಧಿಯನ್ನೇ ಅವಲಂಬಿಸುವುದಾದಲ್ಲಿ ಇಷ್ಟೊಂದು ಶಾಸ್ತ್ರದ ಆಡಂಬರವೇಕೆ ? ವೈಕುಂಠಕ್ಕೆ ಹೋಗಲಿಕ್ಕೆ ಈ ಶಾಸ್ತ್ರದ ಕುಂಟದಾಸನು ಏಕೆ ಬೇಕೆಂದು ಹೇಳಿ, ಅನೇಕರು ಆ ನೊಗವನ್ನು ಚಿಮ್ಮಿ ಒಗೆದೇಬಿಟ್ಟಿರುವರು ! ಇವರಂತೆಯೇ ತಾವೂ ಒಗೆಯಬೇಕಾಗಿತ್ತು.

ಇನ್ನು, ಈ ಸಂದರ್ಭದಲ್ಲಿ ಪುರಾಣಮತವಾದಿಗಳಿಗೆ ನಾವು ಒಂದು ಎಚ್ಚರವನ್ನು ಕೊಡುತ್ತೇವೆ. ಅದೇನೆಂದರೆ- ಈ ಚಳವಳವು ಈಗ ಮಿತಿಮೀರಿ ಪ್ರಬಲವಾಯಿತು. ಇದು ಹೀಗೆ ಪ್ರಬಲವಾಗುವುದಕ್ಕೆ ಮುಖ್ಯವಾಗಿ ಎರಡು ಕಾರಣಗಳು. (೧) ಈಗಿನ ಪರಿಸ್ಥಿತಿ, (೨) ಪುರಾಣಮತವಾದಿಗಳ ಪ್ರಗತಿಶೂನ್ಯತೆ. ರಾಜಕಾರಣವು ಈಗಿನ ಯುಗಧರ್ಮವು. ಆದ ಕಾರಣ, ನಮ್ಮ ಧಾರ್ಮಿಕ ಸಾಮಾಜಿಕ ಮುಂತಾದ ವಿಚಾರಗಳೆಲ್ಲಕ್ಕೂ ಅದೇ ಒಂದು ವಿಧವಾದ ಬಣ್ಣಕೊಡು

ತ್ತಿವೆ. ಇದನ್ನು ತಪ್ಪಿಸುವುದು ಯಾರಿಗೂ ಶಕ್ಯವಿಲ್ಲ. ಅದು ಕಾಲಪುರುಷನ ಲೀಲೆ. ಅಸ್ಪೃಶ್ಯತೆ, ಶುದ್ಧೀಕರಣ ಮುಂತಾದ ವಿಚಾರಗಳೆಲ್ಲವೂ ಹೃದಯದಲ್ಲಿ ಒಡಮೂಡಲಿಕ್ಕೆ ನಮ್ಮ ರಾಜಕೀಯ ಪರಿಸ್ಥಿತಿಯೂ ಒಂದು ಬಲವಾದ ಕಾರಣ. ಅದನ್ನು ಅಲ್ಲಗಳೆವ ಉಪಯೋಗವಿಲ್ಲ. ಗೋವೆಯಲ್ಲಿ ೩-೪ ಸಾವಿರ ಕ್ರಿಶ್ಚಿಯನ್ನ ಜನರು ಹಿಂದುಗಳಾದರು, ಇದು ಏತರ ದ್ಯೋತಕ ? ಇದು ಜನಮನದಲ್ಲಿ ಮೂಡಿದ ಆ ವಿಚಾರದ ಮಹಿಮೆಯಲ್ಲವೆ ? ಇದೇನು ಅನ್ಯಾಯವೆ ? ಮುಂಬಯಿಯಲ್ಲಿ ಸಾವಿರಾರು ಅಸ್ಪೃಶ್ಯರು ಜನಿವಾರ ಹಾಕಿಕೊಂಡು ಬ್ರಾಹ್ಮಣರಾದರು ! ಇದು ಈ ಪ್ರವಾಹವು ಅಸ್ತವ್ಯಸ್ತವಾಗಿ ಹರಿಯುವದರ ದ್ಯೋತಕವಲ್ಲವೆ ? ಸಾಮಾನ್ಯವಾಗಿ ಹೃದಯದಲ್ಲಿ ಉದ್ಭವಿಸಿದ ಈ ವಿಚಾರಪ್ರವಾಹಕ್ಕೆ ದಾರಿ ತೋಡಿಕೊಡದಿದ್ದರೆ ಅದು ಅಸ್ತವ್ಯಸ್ತವಾಗಿ ಹರಿಯುವುದೇ ನಿಜ. ಹೀಗೆ ಅದು ಅಸ್ತವ್ಯಸ್ತವಾಗಿ ಹರಿಯದಂತೆ ಮಾಡಬೇಕಾದರೆ, ಪುರಾಣಮತವಾದಿಗಳು ಅದಕ್ಕೆ ಒಂದು ಕಾಲುವೆಯನ್ನು ತೋಡಿಕೊಡಲೇಬೇಕು. ನಮ್ಮ ಮಠಾಧಿಕಾರಿಗಳು ಪ್ರಗತಿಪರರಾಗಿ, ಹೀಗೆ ಕಾಲುವೆಯನ್ನು ತೋಡಿಕೊಡದಿದ್ದುದರಿಂದ ಈ ಪ್ರವಾಹವು ಮರ್ಯಾದೆ ಮೀರಿ ಹರಿಯತೊಡಗಿದೆ. ಈ ಕಾಲುವೆಯು ಯಾವುದಿರಬೇಕೆಂಬ ಬಗ್ಗೆ ನಮಗೂ ಅನೇಕರಿಗೂ ಮತಭೇದವಿದೆ. ಆ ವಿಷಯವಾಗಿ ಮತ್ತೊಮ್ಮೆ ಬರೆಯುವೆವು. ಈಗಿನ ಸಂದರ್ಭದಲ್ಲಿ ನಾವು ಹೇಳುವುದು ಇಷ್ಟೇ. ಅದು ಏನೆಂದರೆ ನಮ್ಮನ್ನು ಕೇಳುವವರಾರು ಎಂದು ಮಠಾಧಿಕಾರಿಗಳು ಹೇಡಿಗಳಂತೆ ಹೃದಯದೌರ್ಬಲ್ಯವನ್ನು ವ್ಯಕ್ತಪಡಿಸಿ ಪ್ರಯೋಜನವೇನು ? ಜನರು ಕೇಳಲಿ ಕೇಳದಿರಲಿ, ತಮ್ಮ ಕರ್ತವ್ಯವನ್ನು ತಾವು ಮಾಡಲೇಬೇಕು. ಸಾರಾಂಶ, ಈಗ ಅವರು ಮಾಡಬೇಕಾಗಿರುವುದು ಈ ಶುದ್ಧಿಯ ಚಳವಳಿಗೆ ಶಾಸ್ತ್ರಮರ್ಯಾದೆಯನ್ನು ಹಾಕಿಕೊಡುವುದು. ಇನ್ನು ಅವರು ಹಾಕಿಕೊಡದಿದ್ದರೆ ಜನರು ಹೀಗೆ ನಗ್ನನೃತ್ಯವನ್ನು ನಡಿಸಬೇಕೆ ? ವಿವೇಕಿಗಳಾದವರು ಇದಕ್ಕೆ ಶಾಸ್ತ್ರಮರ್ಯಾದೆಯಿಲ್ಲದಿದ್ದರೂ ನೀತಿಮರ್ಯಾದೆಯನ್ನಾದರೂ ಹಾಕಬೇಡವೆ ?

---

## ಡಾ॥ ಕೊಕಟನೂರ ಇವರ ಹೊಸಶೋಧ

ಡಾ॥ ವಾಮನರಾವ ಕೊಕಟನೂರ ಎಂಬವರು ಬೆಳಗಾಂವಿ ಜಿಲ್ಲೆಯಲ್ಲಿ ಅಥಣಿಯವರು, ಶುದ್ಧ ಕನ್ನಡಿಗರು. ಇವರು ಕೆಲವು ವರ್ಷಗಳ ಹಿಂದೆ ಅಮೇರಿಕೆಗೆ ವಿದ್ಯಾಭ್ಯಾಸಕ್ಕೆ ಹೋದರು. ವಿಜ್ಞಾನಶಾಸ್ತ್ರದಲ್ಲಿ ವಿಲಕ್ಷಣವಾದ ನೈಪುಣ್ಯವನ್ನು ಪಡೆದು ಜಗತ್ತಿನ ಮುಖ್ಯ ಶಾಸ್ತ್ರಜ್ಞರಲ್ಲಿ ಅವರೊಬ್ಬರು ಎಂಬುದಾಗಿ ಖ್ಯಾತಿ ಪಡೆದಿರುವರು. ಅವರು ಅಲ್ಲಿ ಮದುವೆಯಾಗಿ ಅಲ್ಲಿಯ ನಿವಾಸಿಗಳಾಗಿರುವರು. ಆದರೆ, ಹಿಂದುಸ್ಥಾನದ ಮೇಲಿನ ಅವರ ಅಭಿಮಾನವು ಕಡಿಮೆಯಾಗಿಲ್ಲ. ಅವರು ಹೊಸದಾಗಿ ಶೋಧಮಾಡಿ, ಶ್ರೀರಾಮನು ಪುಷ್ಪಕ ವಿಮಾನವನ್ನೇರಿದ್ದನೆಂಬುದು ಕಟ್ಟುಕಥೆಯಲ್ಲವೆಂದು ಹೇಳಿದ್ದಾರೆ. ಹೋದ ಸಪ್ಟಂಬರ ತಿಂಗಳಲ್ಲಿ ಅವರು ಡಿಟ್ರಾಯಿಟ್ ನಗರದಲ್ಲಿ ಸೇರಿದ ಅಮೇರಿಕನ್ ಕೆಮಿಕಲ್ ಸೊಸಾಯಟಿಯ ಮುಂದೆ ಒಂದು ನಿಬಂಧವನ್ನು ಓದಿದರು. ಅದರಲ್ಲಿ ಅವರು ವಿಮಾನದ ಕಲ್ಪನೆಯು ಮೊಟ್ಟಮೊದಲು ಹಿಂದುಸ್ಥಾನದಲ್ಲಿಯೇ ಹೇಗೆ ಹುಟ್ಟಿರುವುದೆಂಬುದನ್ನು

ಹೇಳಿರುವರು. ೧೯೨೨ರಲ್ಲಿ ಉಜ್ಜಯಿನಿಯಲ್ಲಿಯ ಒಬ್ಬ ಸಂಸ್ಥಾನಿಕರ ಹತ್ತರ 'ಅಗಸ್ತ್ಯಸಂಹಿತೆ'ಯೆಂಬ ಪುಸ್ತಕದ ಕೆಲವು ಭಾಗವು ಸಿಕ್ಕಿದೆ. ಅದರ ಮೇಲಿಂದ ಅಗಸ್ತ್ಯಋಷಿಗೆ (ಆತನು ಕ್ರಿಶಕದ ೨೦೦೦ ವರ್ಷಗಳ ಪೂರ್ವದಲ್ಲಿ ಇದ್ದನೆಂದು ಊಹೆ) ವಿಮಾನೋಡ್ಡಾನದ ಕಲೆಯೂ ಆಕ್ಸಿಜನ — ಹಾಯಡ್ರೋಜನ ಎಂಬ ವಾಯುಗಳೂ ಬ್ಯಾಟರಿ ತಯಾರ ಮಾಡಿ ಅದರ ಸಹಾಯದಿಂದ ವಿದ್ಯುತ್ತನ್ನು ಹುಟ್ಟಿಸುವದೂ ಗೊತ್ತಿದ್ದವೆಂದು ಡಾ। ಕೊಕಟನೂರ ಇವರು ಸಿದ್ಧಮಾಡಿ ತೋರಿಸಿರುವರು. ಈ ಶೋಧವನ್ನು ಮಾಡಿ ಹಿಂದುಸ್ಥಾನದ ಕೀರ್ತಿಯನ್ನು ಹಬ್ಬಿಸಿದ ಬಗ್ಗೆ ನಾವು ಅವರ ಅಭಿನಂದನವನ್ನು ಮಾಡುತ್ತೇವೆ.

---

## ಕನ್ನಡ ಶಿಲಾಲಿಪಿಗಳ ಉದ್ಧಾರ

ಕನ್ನಡ ಶಿಲಾಲಿಪಿಗಳ ಉದ್ಧಾರಕಾಲವು ಸಮೀಪ ಬಂದಿರುವುದೆಂದು ತಿಳಿಸಲಿಕ್ಕೆ ನಮಗೆ ಸಂತೋಷವಾಗುತ್ತದೆ. ಶಿಲಾಲಿಪಿಖಾತೆಯ ಮುಖ್ಯ ಅಧಿಕಾರಿಗಳಾದ ಶ್ರೀ. ಹಿರಾನಂದ ಶಾಸ್ತ್ರಿಗಳು ಈ ಪ್ರಾಂತಕ್ಕೆ ಬಂದಿದ್ದರು. ಧಾರವಾಡದಲ್ಲಿಯ ಕರ್ನಾಟಕ ಇತಿಹಾಸಮಂಡಳವನ್ನು ಸಂದರ್ಶಿಸಿದರು. ಇತಿಹಾಸ ಮಂಡಳದವರು ಬೇಡಿದ ಬೇಡಿಕೆಗಳು ಯೋಗ್ಯವಾಗಿರುವವೆಂದೂ ಅವುಗಳನ್ನು ಪೂರೈಸುವುದಕ್ಕೆ ತಾವು ಕೈಲಾದ ಮಟ್ಟಿಗೆ ಪ್ರಯತ್ನಿಸುವೆವೆಂದೂ ಅವರು ಅಭಿವಚನಕೊಟ್ಟರು. ಉತ್ತರ ಕರ್ನಾಟಕದ ಶಿಲಾಲಿಪಿಗಳೆಲ್ಲವೂ ಧೂಳತಿನ್ನುತ್ತ ಬಿದ್ದಿರುವುದರಿಂದ, ಅವೆಲ್ಲವುಗಳ ಅಚ್ಚನ್ನು ತೆಗೆದುಕೊಂಡು ತೀವ್ರವೇ ಸರಕಾರದವರು ಅವುಗಳನ್ನು ಮುದ್ರಿಸಬೇಕೆಂಬುದು ಇತಿಹಾಸ ಮಂಡಳದ ಬೇಡಿಕೆಗಳಲ್ಲೊಂದು. ಶ್ರೀ. ಹಿರಾನಂದ ಶಾಸ್ತ್ರಿಗಳೂ ಹಿಂದುಸ್ಥಾನ ಸರಕಾರದವರೂ ಅದಕ್ಕೆ ಒಪ್ಪಿಕೊಂಡಿರುವರು. ಈಗ ಸುಮಾರು ಎರಡುಸಾವಿರ ಶಿಲಾಲಿಪಿಗಳ ಅಚ್ಚನ್ನು ಸರಕಾರದವರು ತೆಗೆದುಕೊಂಡಿರುವರು. ಪ್ರತಿವರ್ಷ ಕನಿಷ್ಟ ೫೦೦ ಶಿಲಾಲಿಪಿಗಳನ್ನು ಪುಸ್ತಕರೂಪವಾಗಿ ಪ್ರಸಿದ್ಧಪಡಿಸಬೇಕೆಂದು ಶ್ರೀ. ಹಿರಾನಂದ ಶಾಸ್ತ್ರಿಗಳು ಗೊತ್ತುಪಡಿಸಿರುವರು. ಅಲ್ಲದೆ, ಈಗ ಪ್ರತಿವರ್ಷಶಿಲಾಲಿಪಿಗಳ ಅಚ್ಚನ್ನು ತೆಗೆದುಕೊಳ್ಳುವ ಕೆಲಸವಂತೂ ನಡೆದೇ ಇರುವುದು. ಹೀಗೆ ಪ್ರತಿವರ್ಷ, ಅಚ್ಚು ತೆಗೆದುಕೊಳ್ಳಲ್ಪಡುವ ಶಿಲಾಲಿಪಿಗಳೆಲ್ಲವೂ ಮುಂದೆ ಅದೇ ವರ್ಷದಲ್ಲಿಯೇ ಓದಲ್ಪಟ್ಟು ಪ್ರಸಿದ್ಧವಾಗುವವು. ಹೀಗಾಗುವದರಿಂದ, ಸ್ವಲ್ಪ ವರುಷಗಳಲ್ಲಿ, ಉತ್ತರ ಕರ್ನಾಟಕದ ಶಿಲಾಲಿಪಿಗಳೆಲ್ಲವೂ ಕನ್ನಡಿಗರ ಕಣ್ಣಮುಂದೆ ಬರಬಹುದೆಂದು ಆಶಿಸಬಹುದಾಗಿದೆ. ಕನ್ನಡಿಗರು ಮೂಲೆ ಸಂದಿಗಳಲ್ಲಿದ್ದ ಶಿಲಾಲಿಪಿಗಳೆಲ್ಲವನ್ನೂ ಹುಡಿಕಿ ತೆಗೆದು, ಅವುಗಳ ಮಾಹಿತಿಯನ್ನು ಶಿಲಾಲಿಪಿ ಖಾತೆಯ ಮುಖ್ಯಾಧಿಕಾರಿಗಳ ಕಡೆಗೆ ಕಳುಹಬೇಕು. ಅವರ ಕಚೇರಿಯು ನೀಲಗಿರಿಯಲ್ಲಿ ಉಟಕಮಂಡದ ಹತ್ತರಿರುವ ಫರ್ನಹಿಲ್ ಎಂಬಲ್ಲಿ ಇರುತ್ತದೆ, ಅಥವಾ ಆ ಮಾಹಿತಿಯನ್ನು ಕರ್ನಾಟಕ ಇತಿಹಾಸ ಮಂಡಳ ಧಾರವಾಡ ಇವರ ಕಡೆಗೆ ಕಳುಹಿಸಿದರೂ ಅವರು ಅದನ್ನು ಅತ್ತ ಕಡೆಗೆ ತಲ್ಪಿಸುವರು. ಉತ್ತರ ಕರ್ನಾಟಕದಲ್ಲಿ ಪುರಾತನ ವಸ್ತುಶಾಲೆ ( Museum ) ಆಗಬೇಕೆಂದು ಇತಿಹಾಸ ಮಂಡಳದ ಮತ್ತೊಂದು ಬೇಡಿಕೆ. ಅದರ ಸಲುವಾಗಿಯೂ ಶ್ರೀ. ಹಿರಾನಂದ ಶಾಸ್ತ್ರಿಗಳು ಅನುಕೂಲ ಅಭಿಪ್ರಾಯವುಳ್ಳವರಾಗಿರುವರು. ಅದರ ಸ್ಥಳವನ್ನು ಅವರು ತೀವ್ರವೇ ಗೊತ್ತುಪಡಿಸಬಹುದು. ಉತ್ತರ ಕರ್ನಾಟದಲ್ಲಿ ಯಾವ ಯೋಗ್ಯ ಸ್ಥಳದಲ್ಲಾದರೂ ಸರಿಯೇ. ಕರ್ನಾಟಕ ಇತಿಹಾಸ ಮಂಡಳಕ್ಕೆ ಅವಶ್ಯವಾದ ಪುಸ್ತಕಗಳನ್ನು ಕೊಡಲಿಕ್ಕೂ ಶ್ರೀ. ಹಿರಾನಂದಶಾಸ್ತ್ರಿಗಳು ಒಪ್ಪಿಕೊಂಡಿರುವರು. ಉತ್ತರಕರ್ನಾಟಕದಲ್ಲಿ ಪುರಾತನ ವಸ್ತುಸಂಶೋಧನ ಖಾತೆಯ ಶಾಖೆಯೊಂದು ಏರ್ಪಡಿಸಬೇಕೆಂಬುದೊಂದು ಇತಿಹಾಸ ಮಂಡಳದವರ ಮುಖ್ಯ ಬೇಡಿಕೆಯಿತ್ತು. ಅದಕ್ಕೆ ಮಾತ್ರ ಶ್ರೀ. ಹಿರಾನಂದಶಾಸ್ತ್ರಿಗಳು ಇನ್ನೂ ಒಪ್ಪಿರುವುದಿಲ್ಲ. ಅವರ ಅಂಬೋಣವೇನೆಂದರೆ ಇತಿಹಾಸ ಮಂಡಳದವರು ಸಾಕಷ್ಟು ಕೆಲಸ ಮಾಡಿ ತೋರಿಸಿ ಆ ಮೇಲೆ ಹೀಗೆ ಶಾಖೆಯನ್ನು ಬೇಡಬೇಕೆಂದು. ಇದು ಶುದ್ಧ ತಪ್ಪು. ಕರ್ನಾಟಕದಲ್ಲಿ ಈ ತರಹದ ಒಂದು ಕೇಂದ್ರಸ್ಥಾನವಿಲ್ಲದಿರುವುದರಿಂದಲೇ ಕರ್ನಾಟಕ ಇತಿಹಾಸದ ಅಭ್ಯಾಸವು ಚೆನ್ನಾಗಿ ಮುಂದೆ ಹೆಜ್ಜೆಯಿಡಲೊಲ್ಲದು. ಅಭ್ಯಾಸಮಾಡೇವೆಂದರೆ ಸಂಶೋಧನಕ್ಕೆ ಬೇಕಾದ ಒಂದು ದೊಡ್ಡ ಗ್ರಂಥಭಾಂಡಾರವಿಲ್ಲ, ವಸ್ತುಶಾಲೆಯಿಲ್ಲ, ಅಥವಾ ಅನ್ಯ ಉಪಕರಣಗಳಿಲ್ಲ. ಇಂಥ ಪರಿಸ್ಥಿತಿಯಲ್ಲಿ ಸಂಶೋಧನವಾಗುವುದು ಹೇಗೆ? ಇಂಥ ಪರಿಸ್ಥಿತಿಯಲ್ಲಿಯೂ ಜನರು ಪ್ರಯತ್ನಮಾಡಬೇಕೆಂಬುದೇನೂ ಸುಳ್ಳಲ್ಲ. ಮತ್ತು, ಆಪ್ರಕಾರವಾಗಿ ಜನರು ಕೈಲಾದ ಮಟ್ಟಿಗೆ ಮಾಡುತ್ತಲೇ ಇರುವರು. ಆದರೆ, ಈ ಉಪದೇಶವನ್ನು ಮಾಡುವುದಕ್ಕೆ ಶ್ರೀ.

ಹಿರಾನಂದ ಶಾಸ್ತ್ರಿಗಳು ಬೇಡ. ಶ್ರೀ. ಹಿರಾನಂದ ಶಾಸ್ತ್ರಿಗಳು ಸರಕಾರದ ಪ್ರತಿನಿಧಿಗಳು. ತಮ್ಮ ಕರ್ತವ್ಯವೇನೆಂಬುದರ ಕಡೆಗೆ ಅವರು ಮುಂಚೆ ಲಕ್ಷ್ಯಕೊಡಲಿ. ಕರ್ನಾಟಕದ ಇತಿಹಾಸವು ಕೈಫಿಯಿತು, ಹಳೆಯ ಚೀಟಿ ಚಪಾಟಿಗಳ ಮೇಲೆ ಅವಲಂಬಿಸಿದ್ದರೆ ಇತಿಹಾಸ ಮಂಡಳವು ಅದರದೊಂದು ದೊಡ್ಡ ಹೊರೆಯನ್ನೇ ಕೂಡಿ ಹಾಕಬಹುದಾಗಿತ್ತು. ಆದರೆ, ಅದು ವಿಶೇಷತಃ ಸರಕಾರದ ವಶದಲ್ಲಿರುವ ಶಿಲಾಲಿಪಿಗಳ ಮೇಲೆ ಅವಲಂಬಿಸಿರುವುದೆಂಬುದನ್ನು ಯಾರೂ ಮರೆಯಬಾರದು. ರಾವ್. ಆರ್. ನರಸಿಂಹಾಚಾರ್ಯರು ಕನ್ನಡ ಶಿಲಾಲಿಪಿಗಳ ಸಂಪಾದಕತ್ವವನ್ನು ಸ್ವೀಕರಿಸಲಿಕ್ಕೆ ಒಪ್ಪಿರುವರೆಂಬುದು ಆನಂದದ ಸುದ್ದಿ.

---

## ಕರ್ನಾಟಕದಲ್ಲಿ ಮತ್ತೊಂದು ಕಾಲೇಜು

ನಮ್ಮ ವೀರಶೈವಬಂಧುಗಳು ಬೆಳಗಾಂವಿಯಲ್ಲಿ ಹೊರಡಿಸಬೇಕೆಂದಿರುವ ಆರ್ಟ್ಸ ಕಾಲೇಜಿಗೆ ಶೀಘ್ರವೇ ಮೂರ್ತಸ್ವರೂಪ ಬರುವ ಸುಲಕ್ಷಣಗಳು ತೋರಹತ್ತಿವೆಯೆಂದು ತಿಳುಹಲು ಆನಂದವಾಗುತ್ತದೆ. ಮುಂಬಯಿ ವಿಶ್ವವಿದ್ಯಾಲಯದವರು ಇದರ ಸ್ಥಿತಿಗತಿಗಳನ್ನರಿತು ಅಭಿಪ್ರಾಯ ಕೊಡುವುದಕ್ಕೆ ಒಂದು ಉಪಮಂಡಳವನ್ನು ನೇಮಿಸಿದ್ದರು. ಅವರು ಬೆಳಗಾಂವಿಗೆ ಬಂದು, ಕಾಲೇಜಿನ ಮುಖಂಡರನ್ನು ಕಂಡು, ವಿಶ್ವವಿದ್ಯಾಲಯವು ಆ ಕಾಲೇಜನ್ನು ಹೊರಡಿಸುವುದಕ್ಕೆ ಪರವಾನಿಗೆಯನ್ನು ಕೊಡಲು ಅಡ್ಡಿ ಇಲ್ಲವೆಂದು ವರದಿಯನ್ನುಕೊಟ್ಟರು. ಆದರೆ ಅದರೊಂದಿಗೆ ಕೆಲವು ಬಿಗಿಯಾದ ಕರಾರುಗಳನ್ನು ಹಾಕಿದ್ದರು. ಅವುಗಳ ವಿಚಾರವಾಗಿ, ಅವುಗಳಲ್ಲಿ ಎರಡೇ ಕರಾರುಗಳನ್ನಿಟ್ಟು ಮಿಕ್ಕವುಗಳೆಲ್ಲವೂ ಬಿಡಲ್ಪಟ್ಟವು. ಈಗ ಹಾಕಿದ ಎರಡು ಕರಾರುಗಳೆಂದರೆ ಒಂದು ಲಕ್ಷ ಫಂಡುತೋರಿಸಬೇಕೆಂದು ಒಂದನೆಯದು. ಎರಡನೆಯದು ಕಾಲೇಜದ ಅಧ್ಯಾಪಕ ವರ್ಗದ ಯೋಗ್ಯತೆಯು ಸರಿಯಾಗಿ ಇರಬೇಕೆಂಬುದು. ಇದರಲ್ಲಿ ಮೊದಲನೆಯ ಕರಾರು ಹಾಕಲಿಕ್ಕೆ ಕಾರಣವಿದ್ದಿಲ್ಲ. ಏಕೆಂದರೆ ಈಗಾಗಲೆ ೫೦ ಸಾವಿರ ರೂಪಾಯಿಗಳು ಕೂಡಿವೆ! ಹೀಗಿದ್ದಬಳಿಕ ಹೆಚ್ಚಿನ ಕರಾರು ಹಾಕುವ ಕಾರಣವೇನು? ಕಾಲೇಜು ತೆಗೆಯುವವರಿಗೆ ಅದರ ಚಿಂತೆಯಿರಲಿಲ್ಲವೊ? ಎರಡನೆಯ ಕರಾರು ಹಾಕಿದ್ದು ಯುಕ್ತವೇ ಸರಿ. ಇದಲ್ಲದೆ, ಒಂದು ಕಟ್ಟಡವನ್ನೂ ಸಿದ್ಧಪಡಿಸಬೇಕೆಂದು ಅವರು ಹೇಳುತ್ತಾರೆ. ಆಧುನಿಕ ವಿದ್ಯಾಭ್ಯಾಸದಲ್ಲಿ ಕಟ್ಟಡಕ್ಕೆ ವಿಶೇಷ ಮಹತ್ವ! ಭವ್ಯವಾದ ಕಟ್ಟಡವಿಲ್ಲದಿದ್ದರೆ ವಿದ್ಯಾಭ್ಯಾಸವು ಚೆನ್ನಾಗಿ ಸಾಗದೆ? ನಮ್ಮ ಪ್ರಾಚೀನರಿಗೆ ಈ ಕಟ್ಟಡಗಳ ಹುಚ್ಚು ಇಷ್ಟು ಇರಲಿಲ್ಲ. ಆಗಲಿ, ನಮ್ಮ ವೀರಶೈವ ಬಂಧುಗಳು ಕಟ್ಟಡವನ್ನು ಹೇಗಾದರೂ ಕಟ್ಟಿಯೇ ಕಟ್ಟುವರು. ಇನ್ನು ಈ ಪ್ರಶ್ನೆಯು ವಿಶ್ವವಿದ್ಯಾಲಯದ ವ್ಯವಸ್ಥಾಪಕ ಸಭೆಯ ಮುಂದೆ ಬಂದು, ಅಲ್ಲಿ ಮಂಜೂರು ಮಾಡಲ್ಪಡಬೇಕು. ಅನಂತರ ಸರಕಾರದವರ ಮಂಜೂರಿಯು ದೊರೆತ ಬಳಿಕ ಕಾಲೇಜು ಹೊರಡುವುದು. ಇವೆರಡೂ ವಿಧಿಗಳು ಬರುವ ಜುಲೈ ತಿಂಗಳಿನಲ್ಲಿಯೇ ಆಗುವವೋ ಇಲ್ಲವೋ ಎಂಬ



ಅಂಜಿಕೆಯುಂಟು. ಈ ಹೊಸ ಕಾಲೇಜಿಗೆ ಪ್ರಿನ್ಸಿಪಾಲರಾಗುವ ಶ್ರೀ. ಪಾವಟೆಯವರು ಇಲ್ಲಿಯವರೆಗೆ ಅತ್ಯಂತ ಶ್ರಮಪಟ್ಟಂತೆ ಮುಂದೆಯೂ ಶ್ರಮತೆಗೆದುಕೊಂಡು, ವಿಶ್ವವಿದ್ಯಾಲಯದ ವಿಶೇಷ ಸಭೆಯನ್ನು ಸಹ ಕೂಡಿಸಲಿಕ್ಕೆ ಪ್ರಯತ್ನಪಟ್ಟು ಇದೇ ವರ್ಷವೇ ಕಾಲೇಜು ಹೊರಡುವಂತೆ ಪ್ರಯತ್ನಪಡ

ಬೇಕು. ಆದರೆ ಅದು ಸಾಧ್ಯವಾಗದಿದ್ದರೆ ಅವರು ಇದೇ ಹುರುಪಿನಿಂದ ಕೆಲಸಸಾಗಿಸಿ, ಮುಂದಿನ ವರುಷವಂತೂ ಅದನ್ನು ಹೊರಡಿಸಿಯೇ ತೀರುವರೆಂಬ ಬಗ್ಗೆ ನಮಗೆ ಭರವಸೆ ಯುಂಟು. ಕಾಲೇಜು ಹೊರಡಬಾರದೆಂಬ ಬಗ್ಗೆ ಕೆಲವು ವಿಘ್ನಸಂತೋಷಿಗಳು ಆಕ್ಷೇಪಗಳನ್ನೆತ್ತಿದ್ದರು. ಈ ಕಾಲೇಜು ಹೊರಟರೆ ಇಲ್ಲಿಯ ಕರ್ನಾಟಕ ಕಾಲೇಜು ಪತ್ರಿಕೆಯ ಮರಾಠಿ. ಸಂಪಾದಕರಿಗೆ ಏಕೆ ಹೊಟ್ಟೆಕಡಿಯಬೇಕು ? ಇಲ್ಲದ ಸಲ್ಲದ ಆಕ್ಷೇಪಗಳನ್ನೆತ್ತಿ ಇವರು ಈ ಕಾಲೇಜಿಗೆ ಕಲ್ಲುಹಾಕುವುದಕ್ಕೆ ಪ್ರಯತ್ನಿಸುತ್ತಾರೆ. ಕೆಲವರಿಗೆ ಇದು ಒಂದು ವಿಶಿಷ್ಟ ಮತ ದವರ ಕಾಲೇಜು ಆಗುವದು ಬೇಡ. ಈಗಿನ ದಿವಸಗಳಲ್ಲಿ ಅದಷ್ಟು ಮಟ್ಟಿಗೆ ಇಂಥ ಪ್ರಯತ್ನಗಳು ಮತ ವಿಶಿಷ್ಟಗಳಾಗಿರ ದಿದ್ದರೆ ಒಳ್ಳೆಯದೇನೋ ಸರಿ. ಆದರೆ ಒಂದು ವೇಳೆ ಹಾಗೆ ಆಗದಿದ್ದರೂ ತಪ್ಪೇನು ? ಇಷ್ಟೇ ಕಾರಣದಿಂದ ಕಾಲೇಜು ಹೊರಡಬಾರದೊ ? ಇರಲಿ, ವ್ಯವಸ್ಥಾಪಕ ವರ್ಗದಲ್ಲಿ ಕೆಲವು ಮಿಶ್ರ ಜಾತಿಯವರನ್ನು ಈಗ ಸೇರಿಸಿರುವುದರಿಂದ ಈ ಪ್ರಶ್ನೆಯ ಚರ್ಚೆಯು ಬೇಡ. ಹತ್ತಿರವೇ ಸಾಂಗಲಿ, ಕೊಲ್ಹಾಪುರಗಳಲ್ಲಿ ಕಾಲೇಜುಗಳಿರುತ್ತವೆಂಬ ಕಾರಣದಿಂದಲೂ ಇದು ಹೊರಡಬಾರದೆಂದು ಕೆಲವರ ಅಭಿಪ್ರಾಯ. ಮುಂಬಯಿ ಪುಣೆಗಳಲ್ಲಿ ಮಗ್ಗ ಮಗ್ಗಲಿಗೇ ಒಂದಕ್ಕಿಂತ ಹೆಚ್ಚಿಗೆ ಕಾಲೇಜುಗಳು ಇರುವವಲ್ಲವೆ ? ಅದಕ್ಕೇನೆನ್ನುವಿರಿ ? ಇರಲಿ, ವಿಶ್ವ ವಿದ್ಯಾಲಯದವರೂ ಸರಕಾರದವರೂ ತೀವ್ರವೇ ಈ ಕಾಲೇಜಿಗೆ ಮಂಜೂರಿಯನ್ನು ಕೊಡುವರೆಂದೂ ತೀವ್ರವೇ ಕಾಲೇಜು ಹೊರಡುವುದೆಂದೂ ನಾವು ಬಲವಾಗಿ ಆಶಿಸುತ್ತೇವೆ. ಇಷ್ಟೆಲ್ಲ ಯೋಗ್ಯ ಸಿದ್ಧತೆಯಾದ ಬಳಿಕ ವಿಶ್ವವಿದ್ಯಾಲಯದವರಿಗೆ ಪರ ವಾನಿಗೆಯನ್ನು ಕೊಡದಿರುವದಕ್ಕೆ ಅಧಿಕಾರವೇ ಇಲ್ಲವೆಂದೂ ಅದನ್ನು ಸರಕಾರದವರು ಮಂಜೂರು ಮಾಡದಿರುವುದಕ್ಕೆ ಏನೂ ಕಾರಣವೇ ಇಲ್ಲವೆಂದೂ ನಮ್ಮ ಅಭಿಪ್ರಾಯ.

## ಶ್ರೀ. ಹಮಜಾಹುಸೇನರ ಶ್ರೀ. ಮತ್ತು ಕೆರೋಡಿ ಸುಬ್ಬರಾಯರ ಮೃತ್ಯು

ಮೈಸೂರಿನ ಹಿಂದಿನ ಮಂತ್ರಿಗಳಲ್ಲೊಬ್ಬರಾದ ಶ್ರೀ. ಹಮ್‌ಜಾಹುಸೇನ ಇವರು ಮರಣಹೊಂದಿದ್ದರಿಂದ, ಕರ್ನಾಟಕವು ಒಬ್ಬ ಕತೃತ್ವಶಕ್ತಿಯುಳ್ಳ ಪುರುಷನನ್ನು ಕಳೆದು ಕೊಂಡಿತು. ಇವರು ಮೈಸೂರಿನ ಪ್ರಜೆಗಳಲ್ಲಿ ಲೋಕಪ್ರಿಯ ರಾಗಿದ್ದರು. ಶ್ರೀ. ಕೆರೋಡಿ ಸುಬ್ಬರಾಯರು ಬಿ. ಎ., ಗವಾನಂದರೆಂದು ಇತ್ತೀಚಿಗೆ ಕರ್ನಾಟಕಸ್ಥರಿಗೆ ಪರಿಚಿತ ರಾಗಿದ್ದರು. ಇವರು ಮಂಗಳೂರ ಜಿಲ್ಲೆಯವರು. ಅವರು ಕನ್ನಡಭಾಷೆಯ ಮೇಲಿನ ಪ್ರೇಮದಿಂದ ೧೫-೨೦ ವರ್ಷಗಳ ಹಿಂದೆಯೇ ಶ್ರೀ. ರಾಜಗೋಪಾಳ ಕೃಷ್ಣರಾಯರೊಂದಿಗೆ ಶ್ರೀ. ಕೃಷ್ಣಸೂಕ್ತಿ ಎಂಬ ಮಾಸಪತ್ರಿಕೆಯನ್ನು ಹೊರಡಿಸಿ ಅದರ ದ್ವಾರದಿಂದ ಭಾಷಾಸೇವೆಯನ್ನು ಮಾಡಿದರು. ಅನಂತರ ಅವರು ಮೇಲಿಂದಮೇಲೆ ಲೇಖಗಳನ್ನುಬರೆಯುತ್ತಲೇ ಇದ್ದರು. ಅವರ ಸ್ವಭಾವವು ಬಹಳ ವಿನೋದಮಯವಾದುದು. ಸದಾ ಆನಂದವೃತ್ತಿಯಲ್ಲಿ ಇರುತ್ತಿದ್ದರು. ಇವರ ಮರಣದಿಂದ ಕರ್ನಾಟಕದ ಭಾಷಾಸೇವಕನೊಬ್ಬನು ಇಲ್ಲದಾಯಿತು. ಉಪಾಯವಿಲ್ಲ. ದೇವರು ಇವರಿಬ್ಬರ ಆತ್ಮಗಳಿಗೂ ಶಾಂತಿಯನ್ನು ಕೊಡಲಿ.

## ಬೆಳಗಾಂವಿಯವರ ಅಭಿನಂದನ

ಬೆಳಗಾಂವಿ ಜಿಲ್ಹೆಯು ಮಹಾರಾಷ್ಟ್ರದ ಬಾಯಿಯೊಳಗೆ ಸಿಕ್ಕ ಜಿಲ್ಹೆಯು. ಅದನ್ನು ಹೇಗೆ ನುಂಗುವೆವೋ ಎಂಬ ಹಂಚಿಕೆಯಲ್ಲಿ ಮಹಾರಾಷ್ಟ್ರದಲ್ಲಿಯ ಹಲವು ಸ್ವಾರ್ಥಿಗಳು ತೊಡಗಿರುವರು. ಅದಕ್ಕೆ, ಕರ್ನಾಟಕವೊಳಗಿನ ಉಂಡಮನಿಯುಗಳ ಎಣಿಸುವ ಹಲವು ಮರಾಠಿಗರ ಬೆಂಬಲ. ಮತ್ತು ನಮ್ಮ ಕರ್ನಾಟಕದ ಸುಖಂಡರೆಂದು ಮೆರೆಯುವ ಕೆಲವರ ಸಹಾನುಭೂತಿ, ಇವೆಲ್ಲವುಗಳ ಪರಿಣಾಮದಿಂದ, ಮರಾಟಗರು ಹೋದತಿಂಗಳಿನಲ್ಲಿ ಬೆಳಗಾಂವಿಯ ಜಿಲ್ಹೆಯ ಮೇಲೆ ಎರಡು ದಾಳಿಗಳನ್ನು ಮಾಡಿರುವರು. ಒಂದನೆಯುದು ಮರಾಠಿಯ ವಕೀಲರದು. ಎರಡನೆಯದು ಮರಾಠಿಯ ಸಾಹಿತ್ಯಭಕ್ತರದು. ಮಹಾರಾಷ್ಟ್ರದ ವಕೀಲರು, ಪ್ರತಿವರ್ಷ ತಮ್ಮದೊಂದು ಪರಿಷತ್ತನ್ನು ನೆರಿಸುತ್ತಿರುವರು. ಆ ಸಮ್ಮೇಲನಕ್ಕೆ ಬೆಳಗಾಂವಿಯ ಜಿಲ್ಹೆಯೂ ಬೃಹನ್ಮಹಾರಾಷ್ಟ್ರ ಜಿಲ್ಹೆಯಾದುದರಿಂದ ಬೆಳಗಾಂವಿಯ ವಕೀಲರೂ ಅದಕ್ಕೆ ಬರಬೇಕಂತೆ! ನೋಡಿದಿರಾ ಇವರ ಸ್ವಾರ್ಥಪರತೆ! ಕರ್ನಾಟಕವು ಪರಿಸ್ಥಿತಿಯ ಮೂಲಕ ಬಹಳ ದಿವಸ ಎಚ್ಚರಾಗದ್ದರಿಂದಲೂ, ಕರ್ನಾಟಕದವರು ಸ್ವಭಾವತಃ ಸೌಜನ್ಯ ಸ್ವಭಾವವುಳ್ಳವರಿರುವದರಿಂದಲೂ ಇಷ್ಟು ದಿವಸ ಮರಾಟಗರ ಚಲ್ಲಾಟವು ಸಾಗುತ್ತಿತ್ತು. ಆದರೆ ನಿದ್ದೆಗೂ ಸೌಜನ್ಯಕ್ಕೂ ಕೂಡ ಮರ್ಯಾದೆಯುಂಟಲ್ಲವೆ? ಬೆಳಗಾಂವಿ ಜಿಲ್ಹೆಯಂತೂ ರಾಜಕಾರಣವಲ್ಲಿ ಮುಂದುವರಿದ ಜಿಲ್ಹೆಯಂದು ಲೋ. ಟಿಳಕರ ಕಾಲದಿಂದ ಅದರ ಪ್ರಸಿದ್ಧಿ. ಇಂಥಜಿಲ್ಹೆಯು ಮರಾಟಗರಿಂದಾದ ಈ ಅಪಮಾನವನ್ನು ಸಹಿಸುವದೆಂತು? ಸರ್ವಥಾ ಇದು ಶಕ್ಯವಿಲ್ಲವೆಂಬುದನ್ನು ಈ ಮರುಳ ಮರಾಟಗರು ಅರಿಯಬಾರದೊ? ಕುಟಿಲ ತಂತ್ರದಿಂದ ಬೆಳಗಾಂವಿಯ ಕೋರ್ಟುಗಳಲ್ಲಿ ಮರಾಠಿಯನ್ನು ಸೇರಿಸಿದೆವೆಂದು ತಿಳಿದು ಈ ಮರಾಟಗರು ಮತ್ತೆ ಮುಂದೆ ಮುಂದೆ ಹೆಜ್ಜೆಯಿಡಹತ್ತಿದರು. ಬೆಳಗಾಂವಿಯ ಕನ್ನಡಿಗರಿಗೆ ಇದು ಹೇಗೆ ಸಹನವಾದೀತು? ಅವರೇನು ಕನ್ನಡಿಗರಲ್ಲವೆ? ಕನ್ನಡನಾಡಿನ ರಕ್ತವು ಅವರ ನಾಡಿಗಳಲ್ಲಿ ಹರಿಯುವುದಿಲ್ಲವೇ? ಅರ್ಥಾತ್, ಈಗ ಅವರು ಬೆಳಗಾಂವಿ ಜಿಲ್ಹೆಗೂ ಮಹಾರಾಷ್ಟ್ರಕ್ಕೂ ಈ ವಿಷಯದಲ್ಲಿ ಸಂಬಂಧವಿಲ್ಲವೆಂಬುದನ್ನು ಸ್ಪಷ್ಟವಾಗಿ ತಿಳಿಸಿರುವರು. ಇದಕ್ಕೋಸ್ಕರ ನಾವು ಶ್ರೀ. ಬೆಳವಿ ಮುಂತಾದ ಬೆಳಗಾಂವಿಯ ಜಿಲ್ಹೆಯ ನಮ್ಮ ಬಂಧುಗಳನ್ನು ಅಂತಃಕರಣಪೂರ್ವಕವಾಗಿ ಅಭಿನಂದಿಸುತ್ತೇವೆ. ಅದೇ ಮೇರೆಗೆ ಮರಾಠಿ ಸಾಹಿತ್ಯ.ಪರಿಷತ್ತನ್ನು ಬೆಳಗಾಂವಿಯಲ್ಲಿ ಕೂಡಿಸಬೇಕೆಂದಿದ್ದ ಮರಾಠಿಗರ ಕುತಂತ್ರಕ್ಕೆ ಬೆಳಗಾಂವಿಯವರು ಸ್ವಾಭಿಮಾನಕ್ಕೆ ಸಲ್ಲುವಂಥ ಉತ್ತರವನ್ನು ಕೊಟ್ಟಿರುವರು. ಬೆಳಗಾಂವಿಯು ಕನ್ನಡ ಜಿಲೆಯು, ಇಲ್ಲಿ ಮಹಾರಾಷ್ಟ್ರ ಸಾಹಿತ್ಯಪರಿಷತ್ತನ್ನು ಕೂಡಿಸುವುದಕ್ಕೆ ಇಲ್ಲಿಯ ಜನತೆಯು ಒಪ್ಪಿಗೆ ಇಲ್ಲ. ಗ್ವಾಲ್ಹೇರಿಯಲ್ಲಿ ಕೂಡಿದ ಮಹಾರಾಷ್ಟ್ರ ಸಾಹಿತ್ಯಸಮ್ಮೇಲನದಲ್ಲಿ ಮುಂದಿನವರುಷದ ಮರಾಠೀ ಸಾಹಿತ್ಯಸಮ್ಮೇಲನವನ್ನು ಬೆಳಗಾಂವಿಗೆ ತರುವುದಕ್ಕೆ ಯಾರಾದರೂ ಆಮಂತ್ರಣ ಕೊಟ್ಟರೆ, ಅದು ಬೆಳಗಾಂವಿಯ ಜನತೆಯ ಆಮಂತ್ರಣವಲ್ಲನೆಂದೇ ತಿಳಿಯಬೇಕೆಂದು ಬೆಳಗಾಂವಿಯ ಮುಖಂಡರು ಮಹಾರಾಷ್ಟ್ರಕ್ಕೆ ಸ್ಪಷ್ಟವಾಗಿ ತಿಳುಹಿರುವರು. ಇನ್ನಾದರೂ ಮರಾಟಗರು ಸರಳದಾರಿಯನ್ನು ಹಿಡಿಯುವರೇನು? ನಮ್ಮ ಬಂಧುಗಳಾದ ಶ್ರೀ. ಕೃಷ್ಣರಾವ ಮುದವೇಡಕರ ಇವರು ಕೇವಲ ಕರ್ನಾಟಕತ್ವವನ್ನು ಬೆಳಿಸುವ ಉದ್ದೇಶದಿಂದಲೇ ಈಗ ತಮ್ಮ ಪತ್ರವನ್ನು ಬೆಳಗಾಂವಿಯಲ್ಲಿ ತೆಗೆಯಹತ್ತಿರುವರು. ಮುಪ್ಪಿನಕಾಲದ ಯೂ ಕೂಡ ಹೀಗೆ ವಿಲಕ್ಷಣ ಸಾಹಸದ ಕಾರ್ಯವನ್ನು ಕೈಕೊಂಡುದಕ್ಕಾಗಿ ಕರ್ನಾಟಕವು ಅವರ ಉಪಕಾರವನ್ನು ಎಷ್ಟು ಸ್ಮರಿಸಿದರೂ ತೀರದು. ಮರಾಟಗರು ಸರಳ ಹಾದಿ ಹಿಡಿಯದಿದ್ದರೆ, ಅವರನ್ನು ಹಾದಿಗೆ ತರುವುದಕ್ಕೆ ಬೆಳಗಾಂವಿಯವರೂ ಶ್ರೀ. ಕೃಷ್ಣರಾಯರೂ ಈಗ ಸಜ್ಜರಾಗಿರುವುದರಿಂದ ನಮ್ಮ ಚಿಂತೆಯು ಕಡಿಮೆಯಾಗಿದೆ.

---

## ಕರ್ನಾಟಕದ ಚಳವಳಗಳು

ಕೊಡಗು ಜಮೀನದಾರ ಸಂಘವು ಅಲ್ಲಿಯ ಪ್ರಮುಖ ರಾಜಕೀಯ ಸಂಸ್ಥೆಯು. ಈ ಸಂಸ್ಥೆಯವರು ಕರ್ನಾಟಕ ಏಕೀಕರಣದ ವಿಷಯವಾಗಿ ಅತ್ಯಂತ ಸಹಾನುಭೂತಿಯುಳ್ಳವರಾಗಿದ್ದಾರೆ. ಕೊಡಗುಪ್ರಾಂತಕ್ಕೆ ಈಗ ಪ್ರತ್ಯೇಕವಾದದ್ದೊಂದು ಕಾಯದೆ ಮಂಡಳವು ಉಂಟು, ಅಲ್ಲಿ ಹತ್ಯಾರದ ಕಾಯದೆಯು ಇಲ್ಲ. ಹೀಗೆ ನಮ್ಮ ಕೊಡಗು ಬಾಂಧವರಿಗೆ, ಹಿಂದುಸ್ಥಾನದಲ್ಲಿಯ ಮಿಕ್ಕ ಜನರಿಗಿಂತ ಕೆಲವು ವಿಶೇಷ ಹಕ್ಕುಗಳು ಇದ್ದರೂ, ಕೊಡಗು ಅತ್ಯಂತ ಚಿಕ್ಕ ಪ್ರಾಂತವಾಗಿರುವುದರಿಂದ, ಅದಕ್ಕೆ ತನ್ನ ಆಡಳಿತವನ್ನು ಪ್ರತ್ಯೇಕವಾಗಿ ನಡಿಸುವುದು ಶಕ್ಯವಿಲ್ಲ. ಬೇರೆ ಗವ್ಹರ್ನರ, ಬೇರೆ ಹಾಯ

ಕೋರ್ಟು, ಬೇರೆ ವಿಶ್ವವಿದ್ಯಾಲಯ ಇವೇ ಮುಂತಾದ ಆಡಳಿತದ ಮುಖ್ಯ ಸೌಕರ್ಯಗಳುಂಟಾಗಬೇಕಾದರೆ, ಅದು ತನ್ನ ಬಾಂಧವರಾದ ಮಿಕ್ಕ ಕನ್ನಡಿಗರನ್ನು ಕೂಡಿಕೊಳ್ಳಲೇಬೇಕು. ಈ ಭಾವನೆಯಿಂದಲೇ ಕೊಡಗುದೇಶವು ಮೊದಲಿನಿಂದಲೂ ಕರ್ನಾಟಕದ ಏಕೀಕರಣಕ್ಕೆ ಒಳ್ಳೇ ಅನುಕೂಲವಾಗಿರುವುದು. ಮೊನ್ನೆ ಮೊನ್ನೆ ಆ ದೇಶದಲ್ಲಿ ಪುನಃ ಈ ಪ್ರಶ್ನೆಯು ಚರ್ಚಿಸಲ್ಪಟ್ಟು, ಕರ್ನಾಟಕವು ಪ್ರತ್ಯೇಕ ಪ್ರಾಂತವಾದರೆ ಆ ಪ್ರಾಂತದಲ್ಲಿ ತಾವು ಬೆರೆತುಹೋಗುವೆವೆಂದೂ ಅಲ್ಲಿಯವರೆಗೆ ತಮ್ಮ ಪ್ರತ್ಯೇಕ ಅಸ್ತಿತ್ವವನ್ನು ಕಾಪಾಡಿಕೊಳ್ಳುವುದಕ್ಕೆ ಪ್ರಯತ್ನಿಸುವೆವೆಂದೂ ಅವರು ನಿರ್ಣಯವನ್ನು ಮಾಡಿರುವರು. ಇದಕ್ಕೋಸ್ಕರ ನಾವು ನಮ್ಮ ಕೊಡಗು ಬಾಂಧವರನ್ನು ಮನಃಪೂರ್ವಕವಾಗಿ ಅಭಿನಂದಿಸುತ್ತೇವೆ. ಮಂಗಳೂರಿನಲ್ಲಿ ತುಳುವು ಭಾಷೆಯನ್ನಾಡುವ ಜನರಲ್ಲಿ ಇತ್ತೀಚಿಗೆ ತುಳುವು ಭಾಷಾಭಿಮಾನವು ಬೆಳೆದಿರುವುದು. ಮತ್ತೂ, ಹಲಕೆಲವರಿಗೆ ತುಳುವು ದೇಶವನ್ನು ಕರ್ನಾಟಕದಿಂದ ಆದಷ್ಟು ಮಟ್ಟಿಗೆ ಪಿಂಗಡಿಸುವ ಸ್ವಪ್ನಗಳೂ ಬೀಳಹತ್ತಿದಂತೆ ತೋರುತ್ತದೆ. ತುಳುವು ಭಾಷೆಯ ಪುನರುಜ್ಜೀವನವಾಗುವುದರಿಂದ ಕರ್ನಾಟಕಕ್ಕೆ ಲಾಭವೇ ಅದೆ. ಆದರೆ, ಕರ್ನಾಟಕದಿಂದ ಒಡೆದು ಹೋಗುವ ವಿಚಾರಗಳು ಮಾತ್ರ ಸರಿಯಾದುವುಗಳಲ್ಲವೆಂದು ನಮ್ಮ ವಿನಯಪೂರ್ವಕವಾದ ಸೂಚನೆ. ಅವರೂ ಕೊಂಕಣಿಗರೂ ಮಿಕ್ಕುಳಿದ ಅಲ್ಪಸಂಖ್ಯಾಕ ಬಾಂಧವರೂ ಗಂಭೀರವಾಗಿ ಈ ವಿಷಯದ ವಿಚಾರವನ್ನು ಮಾಡಿ ತಮ್ಮ ಬಾಂಧವರಿಗೆ ಯೋಗ್ಯ ಉಪದೇಶ ಮಾಡುವರೆಂದು ನಾವು ನಂಬುತ್ತೇವೆ. ಇರಲಿ, ನಮ್ಮ ಕೊಡಗು ಬಾಂಧವರ ಅಭಿನಂದನ ಮಾಡುವ ಪ್ರಸಂಗ ಬಂದಂತೆ ಮೈಸೂರ ಬಾಂಧವರ ಅಭಿನಂದವನ್ನು ಮಾಡುವ ಪ್ರಸಂಗವೂ ಹೋದ ತಿಂಗಳಿನಲ್ಲಿ ಒದಗಿದೆ. ಇಷ್ಟು ದಿವಸ ಪ್ರೆಸ್ ಆಕ್ಟ ಎಂಬ ರಾಕ್ಷಸ ಕಾಯದೆಯು ಮೈಸೂರಪ್ರಾಂತದಲ್ಲಿ ಪ್ರಚಾರದಲ್ಲಿತ್ತು. ಅದನ್ನು ಆ ಸರಕಾರದವರು ಈಗ ತೆಗೆದುಹಾಕಿರುವರು. ಇದು ಅವರಿಗೂ ಮಹಾರಾಜರವರಿಗೂ ಬಹಳೇ ಭೂಷಣವಾದ ಸಂಗತಿಯು. ಈ ಕಾಯದೆಯನ್ನು ರದ್ದುಪಡಿಸುವುದಕ್ಕೆ ಶ್ರೀ. ತಗಡೂರು ರಾಮಚಂದ್ರರಾಯರ ಧೈರ್ಯವೂ ಅಪ್ರತ್ಯಕ್ಷವಾಗಿ ಕಾರಣವಾಗಿರುವುದರಿಂದ ಅವರೂ ಸ್ತುತಿಗೆ ಪಾತ್ರರು.

ಪ್ರಾಂತಿಕ ಕಾಂಗ್ರೆಸಿನ ಕಾರ್ಯಕಾರೀ ಮಂಡಳದ ಸಭೆಯು ಗದಗಿನಲ್ಲಿ ಮಾರ್ಚ ೧೧-೧೨ ರಲ್ಲಿ ಕೂಡಿ ರಾಜಕಾರಣದ ಚಳವಳಗಳು ಕೈಕೊಳ್ಳಲ್ಪಟ್ಟವೆ. ಖಾದಿಯನ್ನು ಧರಿಸುವೆವೆಂದು ಪ್ರತಿಜ್ಞೆಮಾಡುವ ಐದು ಸಾವಿರ ಜನರ ಸಹಿಗಳನ್ನು ದೊರಕಿಸಬೇಕೆಂದು ಗೊತ್ತಾಗಿದೆ. ಅಲ್ಲದೆ, ಸ್ವದೇಶದ ಬಟ್ಟೆಗಳನ್ನು ಉಪಯೋಗಿಸುವೆವೆಂದು ಪ್ರತಿಜ್ಞೆ ತೆಗೆದುಕೊಳ್ಳುವವರ ಸಹಿಗಳನ್ನೂ ದೊರಕಿಸುವುದು ನಿಶ್ಚಿತವಾಗಿದೆ. ಪರದೇಶದವರ ವಸ್ತುಗಳಿಗೆ ಬಹಿಷ್ಕಾರ, ವಿಶೇಷತಃ ಇಂಗ್ಲಿಷರ ಅರಿವೆಗೆ ಬಹಿಷ್ಕಾರ ಹಾಕುವುದನ್ನು ಜನರು ತೀವ್ರ ಜ್ಯಾರಿಯಲ್ಲಿ ತರಬೇಕೆಂದು ಕಾಂಗ್ರೆಸಿನವರ ಅಭಿಪ್ರಾಯವುಂಟು.

ಹೋದತಿಂಗಳಿನಲ್ಲಿ, ಕರ್ನಾಟಕದ ನೆರೆಯಲ್ಲಿರುವ ಗೋವೆಯಲ್ಲಿ ಮೂರು ನಾಲ್ಕು ಸಾವಿರ ಕ್ರಿಶ್ಚಿಯನ್ನ ಜನರು ಹಿಂದೂ ಧರ್ಮವನ್ನು ಸ್ವೀಕರಿಸಿದರು. ಇವರನ್ನು ಹಿಂದಿನ ಕಾಲದಲ್ಲಿ ಪೋರ್ತುಗೀಜರು ಜುಲುಮೆಯಿಂದ ಕ್ರಿಶ್ಚಿಯನ್ನರನ್ನಾಗಿ ಮಾಡಿದ್ದರು ಆದರೂ ಅವರ ರೀತಿ ನಡವಳಿಕೆಗಳೆಲ್ಲ ಹಿಂದೂವಾಗಿಯೇ ಇದ್ದವು. ಮುಂಬಯಿಯಲ್ಲಿ ಸುಮಾರು ಸಾವಿರ ಪಂಚಮರು ಜನಿವಾರವನ್ನು ಧರಿಸಿ ಬ್ರಾಹ್ಮಣರೇ ಆದರಂತೆ ! ಅಂದಬಳಿಕ ಈ ಕ್ರಿಶ್ಚಿಯನ್ನರೇನು ಪಾಪಮಾಡಿರುವರು ? ಧಾರ್ಮಿಕ ಸಾಮ್ರಾಜ್ಯದಲ್ಲಿ ಹೀಗೆ ಕ್ರಾಂತಿಯು ನಡೆದಿರಲು ಇತ್ತ, ರಾಜಕಾರಣದಲ್ಲಿ ಕರ್ನಾಟಕದ ಮೋರೆಗೆ ಮಸಿ ಹತ್ತುವಂಥ ಒಂದು ಸಂಗತಿಯು ಸಂಭವಿಸಿದೆ. ಅದಾವುದೆಂದರೆ.

ಬ್ರಿಟಿಶ್ ಸರಕಾರದವರೊಡನೆ ಸಹಕಾರಮಾಡುವುದಕ್ಕೋಸ್ಕರ ಕರ್ನಾಟಕ ಅಸೋಸಿಯೇಶನ್ನ ಎಂಬ ಸಂಸ್ಥೆಯು ಸ್ಥಾಪನವಾದದ್ದು. ಸಾಯಮನ ಕಮಿಶನ್ನದ ಮುಂದೆ ಸಾಕ್ಷಿಗೆ ಹೋಗುವದೇ ಇದರ ಕೆಲಸ. ಕರ್ನಾಟಕ ವಿದ್ಯಾವರ್ಧಕ ಸಂಘದಲ್ಲಿ ಹಲವರ ನಿರಾಶೆಯಾದೊಡನೆಯೇ ಅವರು ಈ ಹೊಸ ಸಂಸ್ಥೆಯನ್ನು ಸ್ಥಾಪಿಸಿರುವರು ! ಸಾಯಮನ್ನರ ಮುಂದೆ ಸಾಕ್ಷಿಗೆ ಹೋಗಿ ಬಂದೊಡನೆಯೇ ಈ ಸಂಸ್ಥೆಯು ಸಾಯುವುದು ! ಇಂಥ ರಾಷ್ಟ್ರಘಾತಕ ಸಂಸ್ಥೆಗಳಿಗೆ ಕರ್ನಾಟಕದ ಜನತೆಯ ಬೆಂಬಲವಿಲ್ಲ, ಸಂಪಾದಕರ ಬೆಂಬಲವಿಲ್ಲ, ಕರ್ನಾಟಕದ ಪ್ರಮುಖ ಸಂಸ್ಥೆಗಳೊಂದರ ಬೆಂಬಲವೂ ಇಲ್ಲವೆಂಬುವನ್ನು ಸರಕಾರದವರು ಚೆನ್ನಾಗಿ ಲಕ್ಷ್ಯದಲ್ಲಿ ಇಡಬೇಕು.

---




**ಕಿರಿಯ ಕಾಣಿಕೆ:**—(ಕರ್ಣಾಟಕಸಂಘ, ಮಹಾರಾಜಾ ಕಾಲೇಜು ಮೈಸೂರು. ಬೆಲೆ ಕೊಟ್ಟಿಲ್ಲ) ಇತ್ತೀಚೆಗೆ ತರುಣ ಕನ್ನಡಿಗರಲ್ಲಿ ಭಾಷಾಭಿಮಾನವು ಹೇಗೆ ಬೆಳೆಯುತ್ತ ನಡೆದಿದೆ ಯೆಂಬುದಕ್ಕೂ ಕನ್ನಡ ಭಾಷೆಗೆ ಹೇಗೆ ಹೊಸ ರೂಪವು ಬರುತ್ತಿರುವುದೆಂಬುದಕ್ಕೂ ಸಾಕ್ಷಿಯಾಗಿದೆ. ಇದರಲ್ಲಿ ಮೈಸೂರಿನ ಮಹಾರಾಜಾ ಕಾಲೇಜಿನ ವಿದ್ಯಾರ್ಥಿಗಳು ತಾವು ರಚಿಸಿದ ಕೆಲವು ಕವನಗಳನ್ನು ಮುದ್ರಿಸಿ ತಮ್ಮ ಗುರುಗಳಾದ ಪ್ರೊ. ಎಂ. ನವರಿಗೆ ಗುರುದಕ್ಷಿಣೆಯೆಂದೂ ಸಮರ್ಪಿಸಿರುತ್ತಾರೆ. 'ಕನ್ನಡಿಗನ ಕೊರಗು' 'ಪ್ರತಿಭೆ' 'ಅರ್ಧಚಂದ್ರ' 'ತಾಯಿ' 'ತೊರೆ' ಮುಂತಾದ ಅನೇಕ ಕವಿತೆಗಳಲ್ಲಿ ಕವಿಪ್ರತಿಭೆಯು ಚೆನ್ನಾಗಿಯೇ ವ್ಯಕ್ತವಾಗಿದೆ. ಈ ಕವನಗಳು ಪ್ರಾಚೀನ ಸಂಪ್ರದಾಯವನ್ನು ಉಲ್ಲಂಘಿಸಿ ಬರೆದ ಕವನಗಳು. ಕೆಲವು ವರ್ಷಗಳ ಹಿಂದೆ, ಹೀಗೆ ಕವಿತೆಗಳನ್ನು ರಚಿಸಿದವರ ವಿಷಯವಾಗಿ ಟೀಕೆಯು ಆಗುತ್ತಿತ್ತು. ಈಗ ಆ ದಿನಗಳು ಹೋದುವು. ಆದರೆ, ಹೊಸರೂಪವನ್ನು ಕೊಡುವಾಗ ಸ್ವಾಭಾವಿಕವಾಗಿಯೇ ಅನೇಕ ದೋಷಗಳು ಸೇರುವುದೂ ಉಂಟು. ಆದುದರಿಂದ, ಕವಿಗಳು ತಮ್ಮದೊಂದು ಸಮ್ಮೇಳನವನ್ನು ಕೂಡಿಸಿ ಅಥವಾ ಪ್ರತ್ಯೇಕವಾದದ್ದೊಂದು ಸಂಘವನ್ನೇರ್ಪಡಿಕೊಂಡು ಕನ್ನಡ ಕವಿತೆಗಳ ವಿಷವಾಗಿ ಚರ್ಚೆನಡಿಸುವ ಕಾಲವು ಒದಗಿದೆಯೆಂದು ನಮಗೆ ತೋರುತ್ತದೆ. ಸಾಮಾನ್ಯ ಗದ್ಯ ವಾಕ್ಯಗಳು ಕವಿತೆಯ ಪದವಿಯನ್ನು ಹೊಂದಿದ ಉದಾಹರಣೆಗಳನ್ನು ನಾವು ಈ ಪುಸ್ತಕದಲ್ಲಿ ಕಾಣಬಹುದು. ರಸಾತ್ಮಕವಾದ ಗದ್ಯವು ಕಾವ್ಯವಾಗಬಹುದಾದರೂ ಗದ್ಯವಾಕ್ಯಗಳನ್ನು ಕವಿತೆಗಳಲ್ಲಿ ಹೆಚ್ಚಾಗಿ ಸೇರಿಸುವದರಿಂದ ಕವಿತೆಗಳಿಗೆ ಕುಂದುಂಟಾಗುತ್ತದೆ. ವಿಚಾರಮಾಡತಕ್ಕ ಮತ್ತೊಂದು ವಿಷಯವೇನಂದರೆ ಸಂಗೀತ ಕವನಗಳು ಹಾಡಲಿಕ್ಕೆ ಇಂಪಾಗಿರಬೇಕು. ಆ ದೃಷ್ಟಿಯಿಂದಲೂ ನಾವು ಎತ್ತುವ ಹೊಸ ರಚನೆಗಳ ವಿಚಾರಮಾಡುವುದು ಅವಶ್ಯವಿದೆ. ಕವಿಗಳು ಮತ್ತು ಸಂಗೀತಜ್ಞರು ಇವರಿಬ್ಬರೂ ಕೂಡಿ ವಿಚಾರಮಾಡಿ ಹೊಸ ಸಂಪ್ರದಾಯವನ್ನು ಹಾಕುವುದು ಉಚಿತವು. ಇರಲಿ, ಮೈಸೂರಿನ ವಿದ್ಯಾರ್ಥಿಗಳು ಕವಿತೆಗೆ ಹೊಸದಾರಿಯನ್ನು ತೋರಿಸಿರುವುದು ಆನಂದದ ಸಂಗತಿ.

ಹಿಂದಕ್ಕೆ ದಾಸರು ಮತ್ತು ಶರಣರು ಸ್ವಯಂಸ್ಫೂರ್ತಿಯಿಂದ ಹಾಡಿದಾಗ ಭಾಷಾನಿಯಮಗಳ ಕಡೆಗೆ ದುರ್ಲಕ್ಷ್ಯವಾಗಿತ್ತು. ಆದುದರಿಂದ ಈಗಿನ ಹೊಸತರುಣರು ಉತ್ಸಾಹದ ಭರದಲ್ಲಿಯೂ ಕೆಲವು ನಿರ್ಬಂಧಗಳನ್ನಿಟ್ಟುಕೊಳ್ಳುವುದು ಸರಿಯಾದುದೆಂದು ನಮ್ಮ ಅಭಿಪ್ರಾಯ. ಈ ಕವಿತೆಗಳಲ್ಲಿ ಹಿಂದುಸ್ಥಾನದ ಸದ್ಯದ ಸ್ಥಿತಿಯನ್ನು ಪ್ರತಿಬಿಂಬಿಸುವ ಕವನಗಳು ಕಡಿಮೆಯಿವೆ. ಇದು ವಾಚನಾಲಯಗಳಲ್ಲಂತೂ ಅವಶ್ಯವಾಗಿ ಇರಬೇಕಾದ ಪುಸ್ತಕ.

**ಲೋಕಶಿಕ್ಷಣ:**—(ಮರಾಠೀ ಮಾಸಪತ್ರಿಕೆ. ಸಂ— ಶ್ರೀ. ಗಣೇಶ ಗಂಗಾಧರ ಜಾಂಭೇಕರ, ಬಿ. ಎ. ಪುಣೆ— ವಾರ್ಷಿಕ ವರ್ಗಣಿ ೪—೦—೦ ಅಂಚೆವೆಚ್ಚ ಸಹಿತ) ಮರಾಠಿಯಲ್ಲಿ 'ವಿವಿಧಜ್ಞಾನವಿಸ್ತಾರ' 'ಮನೋರಂಜನ' 'ಚಿತ್ರಮಯ ಜಗತ್' 'ವಿದ್ಯಾಸೇವಕ' 'ರತ್ನಾಕರ' ಎಂಬಿವೇ ಮುಂತಾದ ಪ್ರಸಿದ್ಧ ಮಾಸಪತ್ರಿಕೆಗಳು ಇರುವವು. ಈಗ ಲೋಕಶಿಕ್ಷಣವೆಂಬ ಈ ಉಚ್ಚತರಗತಿಯ ಪತ್ರಿಕೆಯು ಹೊರಟದೆ. ಸಂಪಾದಕರು ರಾಷ್ಟ್ರೀಯ ಶಿಕ್ಷಣದ ಬಗ್ಗೆ ಅತ್ಯಂತ ಕಳಕಳಿಯುಳ್ಳ ಧಾರವಾಡಸ್ಥರಾದ ಶ್ರೀ. ಜಾಂಭೇಕರ ಇವರು. ಕೇವಲ ಸ್ತ್ರೀಯರ ಮನೋರಂಜನ ಅಥವಾ ಚಿತ್ರಗಳ ಮೂಲಕ ಲೋಕಪ್ರಿಯತೆ ಅಥವಾ ಸಾಹಿತ್ಯಸೇವೆ ಇವುಗ

ಳನ್ನು ಇವರು ಧ್ಯೇಯವಾಗಿಟ್ಟುಕೊಂಡಿರದೆ, ಲೋಕಶಿಕ್ಷಣದ ದ್ವಾರದಿಂದ ಲೋಕಸೇವೆಯನ್ನು ಮಾಡುವುದನ್ನು ಇವರು ತಮ್ಮ ಧ್ಯೇಯವನ್ನಾಗಿ ಇಟ್ಟುಕೊಂಡಿರುವರು. ಆದುದರಿಂದ ಸದ್ಯದ ಜೀವನಕ್ಕೆ ಪರಿಪೋಷಕವಾಗುವಂಥ ಲೇಖಗಳು ಇದರಲ್ಲಿ ಹೆಚ್ಚಾಗಿ ಬರುವವೆಂದು ಆಶಿಸಬಹುದಾಗಿದೆ. 'ಆ ದೃಷ್ಟಿಯಿಂದ ಸ್ವರಾಜ್ಯ, ಸ್ವಾತಂತ್ರ್ಯ, ಮತ್ತು ಸ್ವಯಂ ನಿರ್ಣಯ' 'ಮುಂಬಯಿ ವಿಶ್ವವಿದ್ಯಾಲಯದ ಸುಧಾರಣೆ' ಎಂಬಿವೇ ಲೇಖಗಳು ವಾಚನೀಯವಾಗಿವೆ ನಮ್ಮ ಮರಾಠೀ ಬಂಧುಗಳು ಈ ಪತ್ರಿಕೆಯ ದ್ವಾರದಿಂದ ಚಿರಕಾಲ ಲೋಕಶಿಕ್ಷಣವನ್ನು ಕೊಡುತ್ತಿರಲಿ.

**ಅಜಾಮಿಳೋಪಾಖ್ಯಾನ:**— (ಲೇ. ಶ್ರೀ. ಗಣೇಶ ಸೂರ್ಯನಾರಾಯಣ ಕೆಕ್ಕಾರ, ಗೋಕರ್ಣ) ಇದರಲ್ಲಿ ಅಜಮಿಳನ ಕಥೆಯು ಸುಲಭವಾದ ಪದ್ಯಗಳಿಂದ ಹೇಳಲ್ಪಟ್ಟಿದೆ. ಲೇಖಕರು ಕವಿಪ್ರತಿಭೆಯನ್ನು ಹೊರಪಡಿಸುವದನ್ನು ತಮ್ಮ ಗುರಿಯನ್ನಾಗಿ ಇಟ್ಟುಕೊಂಡಿಲ್ಲ. ಹಳೆಯ ಕಥೆಯನ್ನು ಕೂಡ ಕವಿತ್ವದಿಂದ ಹೇಳುವುದು ಸಾಧ್ಯವಿದೆ. 'ಶೂದ್ರದಂಪತಿಗಳಲ್ಲಿ' ಕುಲಗೋತ್ರಗಳ ಹಂಬಲಿಸಿ ಮರಗಿದಳ್, ಚಂಚಲ ಚಿತ್ತವಾಕ್ಷಣದೆ ಚಂಚಲಿಸಿತು.' 'ಬೆನ್ನಟ್ಟಜಾಮಿಳನು' ಮುಂತಾದವು ಅಷ್ಟು ಸಾಧುವಾಗಿಲ್ಲ. 'ಬಿಡು ನಿನ್ನ ಬೆಡಗಿನಾನುಡಿ' ಎಂಬುದು ಅವಳ ಆ ಮಾತುಗಳಿಗೆ ಒಪ್ಪುವುದಿಲ್ಲ. 'ಮುನಿವರ ತಾ ವರಸಿಹನರುಂಧತಿಯ' ಎಂಬುದು ಅಲ್ಲಿ ಸರಿಯಾದುದಲ್ಲ. ಕವಿತೆಗಳು ಸರಳ ಭಾಷೆಯಲ್ಲಿ ಬರೆಯಲ್ಪಟ್ಟಿರುವುದರಿಂದ ಹುಡುಗರಿಗೂ ಓದಲಿಕ್ಕೆ ಸುಲಭವಾಗಿದೆ.

**ಹಾಳೂರ ಹಾಡು:**— (ಲೇ. ಮೈದನಹಳ್ಳಿ ರಾಮದಾಸ, ತುಮಕೂರು. ಬೆ. ೦–೬–೦) ಗೌಡ ಮತ್ತು ಶಾನಭೋಗರ ಜಗಳದಿಂದ ಹಾಳಾದ ಒಂದು ಊರಿನ ಹಾಡು. ಇದಕ್ಕಿಂತ ರಸವತ್ತಾಗಿ ಅದನ್ನು ಹಾಡಿದ್ದರೆ ಒಳಿತಾಗುತ್ತಿತ್ತು. ಕೋರ್ಟ ಕಚೇರಿಗಳಿಗೆ ಅಲೆಯುವವರು ಇದನ್ನೋದಿ ಬುದ್ಧಿ ಕಲಿಯಬೇಕು.

೧. **ವಾಗ್ದೇವೀ ಸ್ತೋತ್ರ:**—ವಾಗ್ದೇವಿಯ ಸ್ತೋತ್ರವು ಸುಲಭವಾದ ಶೈಲಿಯಲ್ಲಿ ರಚಿತವಾಗಿದೆ. ನಿತ್ಯಪಠನಕ್ಕೆ ಯೋಗ್ಯ.

೨. **ಹರಿಶರಹಾಷ್ಟಕ:**— (ಬೆ. ೦–೯–೦) ಇದರಲ್ಲಿ ಬ್ರಹ್ಮಾನಂದರು ರಚಿಸಿದ ಸಂಸ್ಕೃತ ಶ್ಲೋಕಗಳ ಭಾಷಾಂತರವು ಕೊಡಲ್ಪಟ್ಟಿದೆ. ಭಕ್ತಿಯನ್ನು ಉದ್ದೀಪಿಸುವುದಕ್ಕೆ ಒಳ್ಳೇ ಪುಸ್ತಕ.

೩. **ಅಧ್ಯಾತ್ಮ ಗೀತಾವಳಿ:**— (ಬೆ. ೮–೪–೦) ಶ್ರೀ. ವೈ. ಸುಬ್ಬರಾಯರು ಭಕ್ತಿರಸಪೂರಿತರಾಗಿ ಹಾಡಿದ ಕವನಗಳಿವು. ಭವದ ಮೋಹವು ಮಿತಿಮೀರಿ ಹೆಚ್ಚುತ್ತಿರುವ ಈ ದಿನಗಳಲ್ಲಿ ಆ ಮೋಹವನ್ನು ಕಡಿಮೆ ಮಾಡುವುದಕ್ಕೆ ಈ ತರಹದ ಪುಸ್ತಕಗಳು ಬೇಕಾಗಿವೆ.

೪. **ಸಂಹಿತೋಪನಿಷತ್ತು:**— ಇದರಲ್ಲಿ ಈ ಉಪನಿಷತ್ತಿನ ಅರ್ಥವು ಶಂಕರ ಮತವನ್ನನುಸರಿಸಿ ಕೊಡಲ್ಪಟ್ಟಿದೆ.

೫. **ಮುಂಡಕೋಪನಿಷತ್ತು:**—ಕನ್ನಡದಲ್ಲಿ ಶಂಕರಭಾಷ್ಯ ಸಮೇತವಾದ ಉಪನಿಷತ್ತುಗಳು ವಿಶೇಷವಾಗಿಲ್ಲ. ಇದರಲ್ಲಿ ಮುಂಡಕೋಪನಿಷತ್ತಿನ ಅರ್ಥವು ಶಾಂಕರ ಭಾಷ್ಯ ಸಮೇತವಾಗಿ ಕೊಡಲ್ಪಟ್ಟಿದೆ. (ಇವೈದೂ ಶ್ರೀ ...ಯ. ಸುಬ್ಬರಾವ ಬೆಂಗಳೂರ ಇವರಿಂದ ಬರೆಯಲ್ಪಟ್ಟವು).

**ಮಹಾಲಿಂಗೋದ್ಭವಚಿತ್ರ:**—ಇದರಲ್ಲಿ ಶ್ರೀ ಮಹಾದೇವರ ಮಹಾಲಿಂಗಮೂರ್ತಿ, ಚಂದ್ರಶೇಖರ ಮೂರ್ತಿ ಮುಂತಾದ ೭೪ ಲೀಲಾಚಿತ್ರಗಳು ಬ್ರಹ್ಮಾಂಡ ಕೃಷ್ಣಮೂರ್ತಿಗಳಿಂದ ಅಂದವಾಗಿ ರಚಿತವಾಗಿವೆ. ಶೈವಾಗಮಗಳನುಸರಿಸಿ ಚಿತ್ರಗಳು ತೆಗೆಯಲ್ಪಟ್ಟಿವೆ. ಶ್ರೀ ಮಹಾದೇವರ ಅನೇಕಬಗೆಯ ಮೂರ್ತಿಗಳ ದರ್ಶನವು ಒಮ್ಮೆಲೆ ಘಟಿಸುವುದು. ಸಿಗತಕ್ಕ ಸ್ಥಳ—ಬಿ. ಕೆ. ಹಯಗ್ರೀವಾಚಾರ್ಯ, ಮುಂಬಯಿ ಬೆ. ೦–೪–೦.

**ಗುರು:**—(ಲೇ. ಬಿ. ಶಿವಯೋಗಿ ಇಂದಿರ,) ಇದು ಅಷ್ಟಾವರಣಗುಚ್ಛದ ದ್ವಿತೀಯ ಪುಷ್ಪ. ಇದರಲ್ಲಿ ಗುರುವೆಂದರೇನು, ಅವರು ಹೇಗಿರಬೇಕು ಎಂಬಿವೇ ವಿಷಯಗಳು ಸಪ್ರಮಾಣವಾಗಿ ಬರೆಯಲ್ಪಟ್ಟಿವೆ. ವೀರಶೈವರಂತೂ ಅವಶ್ಯ ಓದಬೇಕು, ಮಿಕ್ಕವರಿಗೂ ಆ ವಿಷಯವಾಗಿ ಉಪಯುಕ್ತವಾದುದು. ಭಾಷೆಯು ಸರಳವಾಗಿರುವುದು.

(೧) **ಸನಾತನಧರ್ಮಸಂಜೀವಿನೀ** (ಪ್ರಥಮಸಂಪುಟ.)

(೨) **ವರ್ಣವ್ಯವಸ್ಥೆ** ಭಾಗ ೧–೨.

(೩) **ಅಸ್ಪೃಶ್ಯತೆಯೂ ಸನಾತನಧರ್ಮವೂ**

ಈ ಪುಸ್ತಕಗಳು ಸನಾತನ ಧರ್ಮಸಂಜೀವಿನೀ ಎಂಬ ಪತ್ರಿಕೆಯ ಕರ್ತರಾದ ವ್ಯಾಕರಣವಿದ್ವಾನ್ ಎಂ. ಕೆ. ಶ್ರೀನಿವಾಸ

ರಾಘವಾಚಾರ್ಯ, ಮೈಸೂರ ಇವರು ಬರೆದವುಗಳು. ಈ ಮಾಸಪತ್ರಿಕೆಯಲ್ಲಿ ಸನಾತನ ಧರ್ಮತತ್ವ, ಶುದ್ಧಿ, ವಿಧವಾ ವಿವಾಹವಿಮಾಂಸೆ ಮುಂತಾದ ಚರ್ಚೆಯ ವಿಷಯಗಳು ಪುರಾತನ ಪದ್ಧತಿಯಿಂದ ವಿಚಾರಮಾಡಲ್ಪಟ್ಟಿರುವವು. ಈಗಿನ ಕಾಲದಲ್ಲಿ ಪುರಾತನ ಪದ್ಧತಿಯ ಪಂಡಿತರೊಬ್ಬರು ತಮ್ಮ ವಿಚಾರಗಳನ್ನು ಹೊಸ ಜನರ ತಲೆಯಲ್ಲಿ ಹಾಕುವುದಕ್ಕೆ ಮುಂದೆ ಬಂದಿರುವುದು ನಿಜವಾಗಿ ಅಭಿನಂದನೀಯವು. ಇದರಿಂದ ಹಳೆಯ ಪದ್ಧತಿಯಲ್ಲಿಯ ಗುಣದೋಷಗಳು ಸಮಾಜದ ಮುಂದೆ ಬಂದು ನಿಲ್ಲಲಿಕ್ಕೆ ಆಸ್ಪದವಾಗಿದೆ. ಹಳೆಯ ಜನರು ತಮ್ಮ ತತ್ವಗಳ ಮರ್ಮವನ್ನು ತಿಳಿಸದೆ ಅವು ಸಮಾಜದಿಂದ ಸ್ವೀಕೃತವಾಗಬೇಕೆಂದು ಹೇಳಿದರೆ ಕೇಳುವವರಾರು? 'ಇದು ಕಲಿಯುಗ!' ಎಂದು ತಾವು ಮಾತ್ರ ಸತ್ಯಯುಗದವರೆಂಬುದು ವೃಥಾಭಾವನೆಯನ್ನಿಟ್ಟುಕೊಳ್ಳುವುದರಿಂದ ಆಗುವುದೇನು? ಈ ಪುಸ್ತಕಗಳಲ್ಲಿ ಪ್ರತಿಕೂಲವಾಗಿ ತೋರುವ ಪ್ರಮಾಣಗಳನ್ನು ಕೊಟ್ಟು, ಆಧುನಿಕರು ಎತ್ತುವ ಆಕ್ಷೇಪಗಳಿಗೆ ಉತ್ತರವನ್ನು ಕೊಡಲು ಯತ್ನಿಸಿರುವರು. ಅವರ ಉತ್ತರದಿಂದ ಎಲ್ಲರಿಗೂ ಸಮಾಧಾನವಾಗಲಿಕ್ಕಿಲ್ಲ; ಆದರೆ, ಶುದ್ಧಿ ಅಸ್ಪೃಶ್ಯತೆ, ವರ್ಣವ್ಯವಸ್ಥೆ ಮುಂತಾದ ವಿಷಯುಗಳ ಬಗ್ಗೆ ಪ್ರಾಚೀನರು ಮನಬಂದಂತೆ ವಿಚಾರಮಾಡಿರದೆ, ಕೆಲವು ತತ್ವಗಳನ್ನಿಟ್ಟುಕೊಂಡು ಸಮಾಜಹಿತಬುದ್ಧಿಯಿಂದಲೇ ವಿಚಾರಮಾಡಿದ್ದರೆಂಬುದು ಗೊತ್ತಾಗದಿರದು. ಅವುಗಳನ್ನು ಈಗಿನ ಪರಿಸ್ಥಿತಿಗೆ ಹೇಗೆ ಅನ್ವಯಿಸಿಕೊಳ್ಳಬೇಕೆಂಬುದೂ ಒಂದು ಮಹತ್ವದ ಪ್ರಶ್ನೆ. "ಅದು ನಮ್ಮ ಬುದ್ಧಿಗೆ ಗೋಚರವಾಗುವಷ್ಟು ಸುಲಭವಲ್ಲ." "ಎಲ್ಲಾ ಮನುಷ್ಯರಲ್ಲಿಯೂ ರಕ್ತಮಾಂಸಗಳು ಒಂದೇ ಆಗಿರುವಾಗ ಭೇದವೆಲ್ಲಿಂದ ಬಂತು? ಎಂದು ಆಕ್ಷೇಪಿಸುವುದು ಸುಲಭವೇ. ಆದರೆ ಈ ಪ್ರಶ್ನೆಗೆ ಉತ್ತರವನ್ನು ಕೊಡುವುದಾಗಲಿ ಅದನ್ನು ಅರಿತುಕೊಳ್ಳುವುದಾಗಲಿ ಅಷ್ಟು ಸುಲಭವಲ್ಲ." "ಇದನ್ನುಮಹರ್ಷಿಗಳುಬಲ್ಲರು"ಎಂಬಿವೇ ಮುಂತಾದ ಗ್ರಂಥಕರ್ತರ ಉದ್ಗಾರಗಳು ಯೋಗ್ಯವಲ್ಲವು. ನಾಸ್ತಿಕಧರ್ಮಗಳನ್ನು ಕೂಡ ಖಂಡಿಸಿ ಪ್ರಾಚೀನರು ತಮ್ಮ ಧರ್ಮತತ್ವಗಳ ಸತ್ಯತೆಯನ್ನು ಪ್ರಸ್ಥಾಪಿಸಿದರೆಂಬುದನ್ನು ನಾವು ಮರೆಯಬಾರದು. ಈಗಿನ ಸನಾತನ ಧರ್ಮಿಗಳಿಗೆ ಹಿಂದಿನವರಿಗಿಂತಲೂ ಹೆಚ್ಚಿನ ಯುದ್ಧವನ್ನು ಹೂಡಬೇಕಾಗಿದೆ. ಬಹುಶಃ ಇಡೀ ಜಗತ್ತೇ ಅವರಿಗೆ ವಿರುದ್ಧವಾಗಿದೆಯೆಂದರೂ ಸಲ್ಲುವುದು. ಆದುದರಿಂದ ಈಗಿನವರು ವಿಲಕ್ಷಣವಾದ ತಪೋಬಲವನ್ನು ಗಳಿಸಿಕೊಳ್ಳಬೇಕು. ಹಿಂದಿನ ಬ್ರಾಹ್ಮಣರು ಶ್ರೇಷ್ಠರಿದ್ದರೆ ಇರಬಹುದು. ಅದನ್ನು ತೆಗೆದುಕೊಂಡು ಈಗ ಮಾಡುವುದೇನು? ಯೋಗ್ಯತೆಯಿಲ್ಲದೆ ಹಕ್ಕುಗಳನ್ನು ಬೇಡಿದರೆ ಕೊಡುವವರಾರು? ಈಗಿನ ಪರಿಸ್ಥಿತಿಯಲ್ಲಿ ಯಾವ ಮೂಲತತ್ವಗಳಮೇಲೆ ಸಮಾಜವು ಕಟ್ಟಲ್ಪಡಬೇಕೆಂಬುದನ್ನು ಈಗ ಎಲ್ಲರೂ ಯೋಚಿಸಬೇಕಾಗಿದೆ. ಸಮಾಜದ ಕಟ್ಟುವಿಕೆಯೂ ಒಂದು ಶಾಸ್ತ್ರವೆಂಬುದನ್ನು ಲಕ್ಷಕ್ಕೆ ತಾರದೆ, ಮನಬಂದಂತೆ ವಾದಿಸುವುದನ್ನು ಬಿಟ್ಟುಕೊಟ್ಟು ದೂರದೃಷ್ಟಿಯಿಂದ ವಿಚಾರ ಮಾಡಬೇಕಾಗಿದೆ.

**ನಟರಾಜ ಭಕ್ತ ನಾಳಿ ಹೋಗುವನಂದ ಮತ್ತು ಮೀರಾಬಾಯಿ:**— (ಪ್ರಕಾಶಕ— ಶ್ರೀ. ನಂ. ವೆಂಕಟೇಶಯ್ಯಂಗಾರ್, ಬೆಂಗಳೂರು. ಬೆಲೆ ಕೊಟ್ಟಿಲ್ಲ) ಅಂದವಾಗಿ ಮುದ್ರಿಸಲ್ಪಟ್ಟ ಈ ಚಿಕ್ಕ ಪುಸ್ತಕದಲ್ಲಿ ನಂದನೆಂಬ ತಮಿಳು ದೇಶದ ಭಕ್ತನೊಬ್ಬನ ಚರಿತೆಯೂ ರಜಪೂತ ಸ್ತ್ರೀಯಳಾದ ಮೀರಾದೇವಿಯ ಚರಿತೆಯೂ ಅಡಕವಾಗಿವೆ. ನಂದನು ಹೊಲೆಯರವನು. ಆದರೆ ಆತನು ಅತ್ಯಂತ ದೇವಭಕ್ತನು. ನಮ್ಮ ದೇಶದಲ್ಲಿ ಕನಕದಾಸನು ಪೂಜ್ಯನಾಗಿರುವಂತೆ ಆತನು ಅಲ್ಲಿ ಪೂಜ್ಯನಾಗಿರುವನು. ಇಂಥವನ ಚರಿತ್ರೆಯು ಬೋಧಪ್ರದವಾಗಿಯೇ ಇರುವುದೆಂಬುದನ್ನು ಹೇಳಬೇಕಾದುದೇ ಇಲ್ಲ. ಮೀರಾಬಾಯಿಯ ಹೆಸರು ಕನ್ನಡಿಗರಿಗೂ ಗೊತ್ತಿರಬಹುದು. ಅವಳು ಕೃಷ್ಣಭಕ್ತಳು. ಇವೆರಡೂ ಎರಡು ಇಂಗ್ಲಿಷ ಲೇಖಗಳ ಅನುವಾದಗಳು. ಅನುವಾದಕರು ಪ್ರಸಿದ್ಧ ಲೇಖಕರು. ಇವರು ಇಂಥ ಚರಿತ್ರೆಗಳನ್ನು ಸ್ವತಂತ್ರವಾಗಿಯೇ ಏಕೆ ಬರೆಯಬಾರದು? ಮೂಲ ಲೇಖಗಳು ಎಷ್ಟೇ ಚೆನ್ನಾಗಿದ್ದರೂ ಅನುವಾದಗಳು ಅನುವಾದಗಳೇ. ಇದರಿಂದ ಅನ್ಯ ಲೇಖಗಳನ್ನು ಭಾಷಾಂತರಿಸಲೇ ಕೂಡದೆಂದು ನಮ್ಮ ಅರ್ಥವಲ್ಲ. ಕನ್ನಡ ಗ್ರಂಥಕರ್ತರು ಸ್ವತಂತ್ರ ವಾಙ್ಮಯವನ್ನು ಹುಟ್ಟಿಸುವುದರ ಕಡೆಗೆ ಹೆಚ್ಚಿಗೆ ಲಕ್ಷ್ಯಕೊಡಬೇಕೆಂದು ಸೂಚನೆ. ಅನುವಾದದ ಭಾಷಾಶೈಲಿಯಲ್ಲಿ ಸಂಸ್ಕೃತದಂತೆ ಮುಂಚೆ ಕ್ರಿಯಾಪದವನ್ನಿಡುವ ಪದ್ಧತಿಯನ್ನು ಅನುಸರಿಸಿರುವರು. ಉದಾ—ಶಿವಾಲಯವೊಂದಿತ್ತು ಆ ಆಧನೂರು ಗ್ರಾಮದಲ್ಲಿ! ಈ ತರಹದ ವಾಕ್ಯಗಳು ಹೆಚ್ಚಾಗಿ ಹಾಕಿದರೆ ಕಿವಿಗೆ ಬೇಸರವೆನಿಸುವುದು. ಭಾಷೆಯು ಸರಳವಾಗಿರುವುದು, ಕಂಡಿ (ಕಿಂಡಿ)

ಕುಪ್ಪೆ ( ತಿಪ್ಪೆ ) ಮುಂತಾದವು ಮೈಸೂರ ದೇಶದಲ್ಲಿ ಬಳಕೆಯುಳ್ಳಿದ್ದ ಅಯೋಗಗಳು ಸಹಜವಾಗಿಯೇ ತಿಳಿಯುವಂತಿರುವವರಿಂದ ಅರ್ಥವನ್ನು ತಿಳಿದುಕೊಳ್ಳುವುದಕ್ಕೆ ಅಡ್ಡಿಯುಂಟಾಗುವುದಿಲ್ಲ. ಪೌನರುಕ್ತಿ, ಮಂಜುಳಾರವ ಭಕ್ತ್ಯವ್ಯಗ್ರತೆ ಮುಂತಾದ ಶಬ್ದಗಳ ಬದಲು ಪುನರುಕ್ತಿ ಮಂಜುಳರವ ಭಕ್ತಿಯ ಅವ್ಯಗ್ರತೆಗಳನ್ನು ಇಟ್ಟದ್ದರೆ ಲೇಸಾಗುತ್ತಿತ್ತು. ಚೀತುರ, ಮುಂತಾದ ದೇಶದ ಅಥವಾ ವ್ಯಕ್ತಿಗಳ ಹೆಸರುಗಳನ್ನು ಬರೆಯುವಾಗ ಆ ದೇಶದಲ್ಲಿ ಪ್ರಚುರವಾದ ಶಬ್ದಗಳನ್ನು ಉಪಯೋಗಿಸುವುದು ಒಳ್ಳೆಯದು. ಅಥವಾ ಕನ್ನಡನುಡಿಯ ಜಾತಿಗೆ ಒಪ್ಪುವಂತೆ ಬದಲುಮಾಡಿಕೊಳ್ಳಬಹುದು. ಚೀತುರು ಎಂಬುದು ಇಂಗ್ಲಿಷ ಉಚ್ಚಾರಣೆ. ಚಿತ್ತೂರು ಎಂದರೆ ಕಿವಿಗೆ ಇಂಪಾಗುತ್ತಿತ್ತು. 'ಆಕೆಯ ನೋಟವು ಒಂದು ಬಗೆಯ ಅತ್ಯುತ್ಕೃಷ್ಟವಾದ ಕುಸುಮಗಳ ಕೇಸರಗಳಂತೆ ಆತನಮೇಲೆ ಬೀಳಲು' ಎಂಬಿವೇ ಮುಂತಾದ ಕೆಲವು ಕಿವಿಗೆ ಇಂಪಾಗದ ವಾಕ್ಯಗಳಿದ್ದರೂ ಒಟ್ಟಿನ ಮೇಲೆ ಭಾಷೆಯಲ್ಲಿ ಓಜವಿರುವುದು; ವಾಚನಾಲಯಗಳು ಅವಶ್ಯವಾಗಿ ಸಂಗ್ರಹಿಸತಕ್ಕ ಪುಸ್ತಕ.

**ರಾಜಭಕ್ತಿಮುಕ್ತಾವಳಿ** :—(ಲೇ. ಶ್ರೀಕಂಠಯ್ಯ, ತುಮಕೂರು). ಇದರಲ್ಲಿ ಮೈಸೂರಿನ ಮಹಾರಾಜರ ಚರಿತ್ರೆ ಮುಂತಾದವುಗಳ ವಿಷಯವಾಗಿ ಸ್ತುತಿಪರ ಪದ್ಯಗಳಿವೆ, ಅಲ್ಲದೆ ಬೇರೆ ಕೆಲವು ವಿಷಯಗಳೂ ಇವೆ. ಹಿಂದಿನ ಜನರು ತಮ್ಮ ಆಶ್ರಯದಾತನನ್ನು ಮಿತಿಮೀರಿ ಹೊಗಳುವಂತೆ ಇವರು ಮಹಾರಾಜರನ್ನು ಹೊಗಳಿರುವರು. ಮಹಾರಾಜರ ಮನಸ್ಸಿಗೂ ಇದು ಬರಲಾರದೆಂದು ನಮಗೆ ತೋರುತ್ತದೆ. ಲೇಖಕರು ತಮ್ಮ ಕವಿತಾಶಕ್ತಿಯನ್ನು ದೇಶಸೇವೆಯಲ್ಲಿ ಹೆಚ್ಚಾಗಿ ಉಪಯೋಗಿಸಿದ್ದರೆ ಒಳಿತಾಗುತ್ತಿತ್ತು.

**ಪತಿತಪರಾವರ್ತನ** :—(ಲೇ. ಬಿ. ಜಿ. ಹುಲಕವಿ ಧಾರವಾಡ) ಕೆಲವು ವರ್ಷಗಳ ಹಿಂದೆ, ಮಧುರವಾಣಿ ಗ್ರಂಥಮಾಲೆಯಲ್ಲಿ ಪ್ರಕಟವಾದ ಹಳೆಯ ಪುಸ್ತಕ, ಕನ್ನಡಿಗರಿಗೆಲ್ಲರಿಗೂ ಪರಿಚಿತವಾಗಿರಬಹುದು.

**ಅಭಿಷೇಕ ನಾಟಕ**:—(ಲೇ. ಪಾನ್ಯಂ ಸುಂದರ ಶಾಸ್ತ್ರಿಗಳು, ಮದ್ರಾಸ.) ವಾಗ್ಭೂಷಣದಲ್ಲಿ ಕ್ರಮಶಃ ಮುದ್ರಿತವಾದ ಗ್ರಂಥ. ಈಗ ಪುಸ್ತಕರೂಪವಾಗಿ ಪ್ರಸಿದ್ಧಿಸಲ್ಪಟ್ಟಿದೆ. ಶ್ರೀ. ಪಾನ್ಯಂ ಸುಂದರ ಶಾಸ್ತ್ರಿಯವರು ಉದ್ದಾಮ ಲೇಖಕರು. ಆದರೆ ಭಾಸಕವಿಯ ಗ್ರಂಥದ ಈ ಭಾಷಾಂತರದಲ್ಲಿ ಸಂಸ್ಕೃತ ವಾಕ್ಯಶೈಲಿಯನ್ನು ಅನುಸರಿಸಿಯೇ ಕನ್ನಡ ವಾಕ್ಯಶೈಲಿಗಳನ್ನಿಟ್ಟಿರುವುದರಿಂದ, ಭಾಷೆಯು ಕ್ಲಿಷ್ಟವಾಗಿದೆ. ಕಥೆಯು ಮನೋಹರವಾಗಿದೆ. ಭಾಷಾಂತರವು ಚೆನ್ನಾಗಿದೆ.

**ರಾಬಿನ್‌ಸನ್ ಕ್ರೂಸೋವಿನಕಥೆ**:—( ಲೇ. ಪಿ, ರಾಮಾಚಾರ್ಯ ಬಿ. ಎ., ಚಾಮರಾಜಪೇಟೆ ಮೂರನೇ ಬೀದಿ. ಬೆಂಗಳೂರು. ಕ್ರಯ ೦–೧೦–೦ ) ಇಂಗ್ಲಿಷ ಕಥೆಯ ಅನುವಾದವು. ಭಾಷೆಯು ಸರಳವೂ ಸುಲಭವೂ ಆಗಿದೆ. ಮೂಲಕಥೆಯು ಮನೋರಂಜಕವಾಗಿದ್ದು, ಮನುಷ್ಯನು ಪ್ರಪಂಚದಲ್ಲಿ ಹೇಗೆ ಭಗವಂತನನ್ನು ಸ್ಮರಿಸಬಹುದೆಂಬುದು ಅದರಲ್ಲಿ ಮೇಲೆ ಮೇಲೆ ಹೇಳಿದೆ. ಈ ಮಾದರಿಯ ಮೇಲೆಯೇ ಲೇಖಕರು ಬೇರೆ ಸ್ವತಂತ್ರ ಪುಸ್ತಕಗಳನ್ನು ಬರೆಯಬಹುದು. ಅವು ನಮ್ಮ ಬಾಲಕರಿಗೆ ಮತ್ತಿಷ್ಟು ರುಚಿಕರವಾಗಬಹುದು. ಏಕೆಂದರೆ, ನಮ್ಮ ಈಗಿನ ಪರಿಸ್ಥಿತಿಯಲ್ಲಿ ನಮ್ಮ ಬಾಲಕರಿಗೆ ಸಮುದ್ರದ ಪರಿಚಯುವು ವಿಶೇಷವಿರುವುದಿಲ್ಲ. ಇರಲಿ ಪುಸ್ತಕವು ಅಂದವಾಗಿ ಮುದ್ರಿಸಲ್ಪಟ್ಟಿದ್ದು ಬೆಲೆಯೂ ವಿಶೇಷವಿಲ್ಲ. ಬಾಲಕರಿಗೂ ವಾಚನಾಲಯ ಗಳಿಗೂ ಯೋಗ್ಯ ಪುಸ್ತಕ.

Veerashaiva Philosophy ಲೇ. ಸಿದ್ಧರಾಮಪ್ಪಾ ದುಂಡಪ್ಪಾ ಪಾವಟೆ, ಬಿ. ಎ., ಎಲ್‌ಎಲ್. ಬಿ. ಹುಬ್ಬಳ್ಳಿ. ಬೆಲೆ ೧–೮–೦ ) ಶ್ರೀ. ಸಿದ್ಧರಾಮಪ್ಪಾ ಪಾವಟೆಯವರು ವೀರಶೈವ ಧರ್ಮವನ್ನು ಚೆನ್ನಾಗಿ ಅಭ್ಯಾಸಮಾಡಿದವರು, ವೀರಶೈವ ಧರ್ಮದ ಬಗ್ಗೆ ಜನರಲ್ಲಿ ಅಜ್ಞಾನವಿರುತ್ತದೆ. ಆದರೆ ಈಗ ಶ್ರೀ. ಪಾವಟೆಯವರು ಬರೆದಿರುವ ಈ ಇಂಗ್ಲಿಷ ಗ್ರಂಥದಿಂದ ಕೆಲಮಟ್ಟಿಗೆ ಅದು ದೂರಾಗುವುದು. ಈ ಪುಸ್ತಕದಲ್ಲಿ, ಶೈವಾಗಮಗಳು ಯಾವುವು, ಅವು ಪ್ರಮಾಣ ಗ್ರಂಥಗಳು ಏಕೆ, ಅವುಗಳಲ್ಲಿಯ ತತ್ವಜ್ಞಾನವು ಯಾವುದು, ವೀರಶೈವ ಧರ್ಮದ ತತ್ವಗಳೂ ಆ ಆಗಮ ತತ್ವಗಳೂ ಒಂದೇ ಹೇಗೆ? ಇವೇ ಮುಂತಾದ ವಿಷಯುಗಳು ಸುಲಭವಾಗಿ ತಿಳಿಸಲ್ಪಟ್ಟಿವೆ. ವೀರಶೈವರ ತತ್ವಜ್ಞಾನದ ಪರಿಭಾಷೆಯನ್ನು ಎಲ್ಲರೂ ಚೆನ್ನಾಗಿ ಅರಿತುಕೊಳ್ಳಬೇಕು. ಮತ್ತು ಆ ಬಳಿಕ ಆ ತತ್ವಗಳನ್ನು ಮಿಕ್ಕ ಮತಗಳ ತತ್ವಗಳಿಗೆ ಹೋಲಿಸಿದರೆ ಅವುಗಳೊಳಗಿನ ಸಾಮ್ಯ ವೈಷಮ್ಯಗಳು ಗೊತ್ತಾಗುವವು. ಇಂಥ ಪುಸ್ತಕಗಳನ್ನು ಬರೆಯುವಾಗ ನಡುವೆ ಉದ್ದವಾದ ಚರ್ಚಾತ್ಮಕ ಭಾಗವನ್ನು ಸೇರಿಸುವುದು ಸರಿಯಲ್ಲವೆಂದು ತೋರುತ್ತದೆ.

ಶ್ರೀ. ಪಾವಟೆಯವರು ವಿವಂಸಿದ ಆಗಮಗಳು ಪುಸ್ತಕ ರೂಪವಾಗಿ ಜನರ ಮುಂದೆ ಬರುವುದು ಅವಶ್ಯವಿದೆ. ಅವುಗಳಲ್ಲಿ ಯಾವ ಯಾವ ಆಗಮಗಳು ಈಗ ಮುದ್ರಿತವಾಗಿವೆಂಬುದನ್ನು ಅವರು ಈ ಪುಸ್ತಕದಲ್ಲಿ ಸೇರಿಸಿದ್ದರೆ ಲೇಸಾಗುತ್ತಿತ್ತು. ಭಗವದ್ಗೀತೆಯು ತತ್ವಜ್ಞಾನವೂ ವೈದಿಕ ತತ್ವಜ್ಞಾನವೇ ಆಗಿರುವುದರಿಂದ ಅದರೊಳಗಿನ ಶ್ಲೋಕಗಳಿಗೂ ಸ್ಮೃತಿ ಆಗಮ ಪುರಾಣಗಳೊಳಗಿನ ಶ್ಲೋಕಗಳಿಗೂ ಅನೇಕ ಕಡೆಗೆ ಸಾಮ್ಯವು ಕಂಡು ಬಂದರೆ ಆಶ್ಚರ್ಯವೇನು ? ವೇದಾದಿಗಳ ಅರ್ಥವನ್ನು ಪುಷ್ಟೀಕರಿಸುವುದಕ್ಕೋಸ್ಕರವೇ ವ್ಯಾಸರು ಭಾರತವನ್ನು ಬರೆದುದು. ಇರಲಿ. ಶ್ರೀ. ಪಾವಟೆಯುವರು ಬರೆದ ಈ ಪುಸ್ತಕವನ್ನು ಶ್ರೀ. ಬಿಳೆಅಂಗಡಿಯವರು ಪ್ರಸಿದ್ಧಪಡಿಸಿರುವರು.

**ಆರ್ಯ ಕರ್ನಾಟಕ**:— (ಮಾಸಪತ್ರಿಕೆ—ಸಂಪಾದಕರು ಪಂಡಿತ ಶೇಷಾಚಾರ್ಯ ಸರೋವರ, ಮದನಪಲ್ಲಿ ಮದ್ರಾಸ ಇಲಾಖೆ. ವಾರ್ಷಿಕ ಚಂದಾ. ೨—೮—೦) ಕರ್ನಾಟಕದ ಗಡಿನಾಡುಗಳಲ್ಲಿರುವ ಕನ್ನಡಿಗರಲ್ಲಿ ಇತ್ತೀಚಿಗೆ ಭಾಷಾಭಿಮಾನವು ಚೆನ್ನಾಗಿಯೇ ಸ್ಫುರಿಸತೊಡಗಿದೆಂಬುದು ಆನಂದದ ಸಂಗತಿ ಮಃದನಪಲ್ಲಿಯಃಲ್ಲಿಯು ನಮ್ಮ ಬಾಂಧವರಲ್ಲಿಯೂ ಭಾಷಾಭಿಮಾನವು ದೃಗ್ಗೋಚರವಾಗುತ್ತಿದೆ. ಗಡಿನಾಡಿನಲ್ಲಿರುವ ಕನ್ನಡಿಗರು ಕೆಲವು ತೊಂದರೆಗಳಿಗೀಡಾಗುವುದರಿಂದ ಅವರ ವಿಷಯವಾಗಿ ನಾವು ಹೆಚ್ಚಿಗೆ ಸಹಾನುಭೂತಿಯನ್ನು ತೋರಿಸುವುದು ಅವಶ್ಯವು. ಈ ಮಾಸಪತ್ರಿಕೆಯು ಅಂದವಾಗಿ ಮುದ್ರಿಸಲ್ಪಟ್ಟಿದೆ, ೬ ನೆಯ ಪುಟದಲ್ಲಿ ಕನ್ನಡನಾಡು ನರ್ಮದಾನದಿ ಮೊದಲ್ಗೊಂಡು ಗೋದಾವರಿಯವರೆಗೆ ಎಂಬುದು ಕಾವೇರಿಯವರೆಗೆ ಎಂದಿರಬೇಕು. ಎಲ್ಲಾ, ಜನ, ಒಳ್ಳೆಯದು, ಒಳಗೆ, ಉಚಿತ, ಬಾಯಿಯಿಂದ ಮುಂತಾದ ಶಬ್ದಗಳು ಅಶುದ್ಧರೂಪದಲ್ಲಿ ಮುದ್ರಿತವಾಗಿವೆ. ಸರಿಪಡಿಸಬೇಕು. ಈ ಪತ್ರಿಕೆಯ ಲೇಖಗಳಲ್ಲಿ ಭಾಷಾಭಿಮಾನವು ತೋರಿಬರುತ್ತದೆ. ಕನ್ನಡಿಗರೆಲ್ಲರೂ ಕೈಗೊಡಬೇಕು.

**ಕನ್ನಡ ಕೈಪಿಡಿ**: —— ಇದರ ವಿಮರ್ಶೆಯು ಈ ಸಂಚಿಕೆಯ ಬೇರೊಂದು ಲೇಖದಲ್ಲಿ ಬಂದಿರುವುದು.

---



ಬಾದಾಮಿಯ ಒಂದು ಗವಿಯಲ್ಲಿ ಕೊರೆದ
**ನರಸಿಂಹದೇವರ ವಿಗ್ರಹವು.**




ॐ सह नाववतु ॥ सह नौ भुनक्तु ॥ सह वीर्यं करवावहै ॥
तेजस्विनावधीतमस्तु मा विद्विषावहै ॥ ॐ शान्तिः ॥३॥

—श्रुतिः


| ಸಂಪುಟ ೬ | ವಿಭವನಾಮ ಸಂವತ್ಸರ ಆಗಿಯ ಹುಣ್ಣಿವೆ<br>ಶಕ ೧೮೫೦, ೪ನೆಯ ಮೇ, ೧೯೨೮ | ಸಂಚಿಕೆ ೭ |
|---|---|---|


# ಕೊಡಗು

—(೦)—

—ಕೊಡಗು ಬೆಡಗಿನ ಬೀಡು ! ಸೌಂದರ್ಯದಮೃತಮಂ ।
ಕುಡಿಯಿಮೆಲೆ ಕಣ್ಗಳಿರ ! ಇದೊ ಮಂಜು ಬಿತ್ತರಿಸಿ ।
ಕಡಲವೊಲ್ ತೋರ್ದಪುದು ಮೇಲೆಲ್ದ ಗಿರಿಸಾನುಗಳ್ ದ್ವೀಪನಿವಹವಾಗೆ ! ॥
ಅಡಿಯಿಂದೆ ಮುಡಿವರಂ ಬೆಟ್ಟಗಳ್ ನೀಳ್ದೆಸೆವ ।
ಗಿಡಗಳಿಂ ಪಸುರೇರಿ ಸೌಂದರ್ಯದಧಿದೇವಿ– ।
ಯೆಡೆಯಾಡುವೊಳ್ಪವೆತ್ತೆಡೆಗಳಾಗಿತ್ತಲಿದೊ ಸೊಗಯಿಪುವು ಸೊಂಪುವೆತ್ತು ! ॥ ೧ ॥

—ಬಿಸಿಲೆಲೆಗಳೊಳಗಿಂದೆ ಸೋಸಿ ಬರ್ಪದು ಮತ್ತೆ ।
ಪಸುರಮೇಲ್ ನೀರ ಮೇಲಲೆವೆಲರ್ ಸುಳಿದಪುದು ।
ಬಿಸುಪಳಿಯದಿರ್ದಪುದೆ ? ಕೊಡಗು ತಣ್ಣೆಳಲ ತವರೂರಲೇ ತಣ್ಪಿನಿಂಬು ! ॥
ಪೊಸತೆರದ ಬಗೆವಗೆಯ ವಿಹಗಂಗಳೆತ್ತಲುಂ ।
ಮಿಸುಪ ಮೆಯ್ಬಣ್ಣದಿಂ ಮನವೃಲಿಪ ಮಾಟದಿಂ– ।
ದೆಸೆದು ನುಣ್ದನಿಗುಡುತೆ ನಲಿದಪುವು ಮನಮಿಲ್ಲಿ ನಲ್ವಗೆಗಳೆಡೆಯಾದುದು ! ॥ ೨ ॥

—ಪರಿವ* ಕಾಳ್ಪುರದ ಮೆಲ್ಲುಲಿಯಿಂದೆ ಬಗೆಗೊಳಿಪ ।
ದರಿಯಿತ್ತಲುತ್ತುಂಗ ಶಿಖರಂಗಳಿಂದೆಸೆವ ।
ಗಿರಿಯತ್ತಲೇಂ ಪೆಂಪೊ! ತೆಂಬೆಲರ ಸೊಗಯಿಸುವ ಸೋಂಕಿನಾ ಸೊಗಮಿದೆನಿತೊ! ॥
ಬಿರಿವೂಗಳಿನಿಗಂಪಿಗೆನಿತೊಂದು ತುಂಬಿಗಳೊ! ।
ಸುರಯುವತಿಯರ್ ನಲ್ಲರೊಡನಿಲ್ಲಿ ಸಾರ್ತಂದು ।
ಸರಸವಾಡಲ್ಕುಚಿತವಾದ ನೆಲಮಿದು ಕೊಡಗು ಕರುನಾಡ ಮುದ್ದುಗೂಸು! ॥ ೩ ॥

—ಚೆಲುವಿನೀ ಕಡಲೊಳಗೆ ಸಾಲ್ವಿಡಿದು ಸೊಂಪೆಸೆವ ।
ಮಲೆಗಳಿವು ಸ-ವಿಕಂಪತರುರಾಜಿಗಳಿನದೇ- ।
ನಲೆವಲೆವ ತೆರೆಗಳಂತೆಸೆದಪುವೊ! ನವವೃಷ್ಟಿಯಿಂ ಸೃಷ್ಟಿಗೇಂ ಕಾಂತಿಯೊ! ॥
ನೆಲಮಾಗಸಂ ದಿಕ್ಕುಗಳ್ ರಾಮಣೀಯಕದ ।
ನಿಲಯಂಗಳಿವಮೆನಿತು ನೋಡಿದೊಡಮಕ್ಷಿಗಳ್ ।
ತೊಲಗಲೊಲ್ಲವು ಮನಂ ತಣಿಯದೋಲಾಡಿಮೀ ಸೌಂದರ್ಯಜಳಧಿಯು! ॥ ೪ ॥

-- ಬಂದೆನಾನಿಲ್ಲಿಗೆನ್ನಕ್ಕರದ ತಾಯ್ನೆಲದ!
ಚೆಂದಮಂ ನೋಡುತುಂ ಶ್ರೀನಿವಾಸನ ನಲ್ಮೆ- ।
ಯಿಂದೆ ಸುಖದಿಂದೆ ಸಂಚರಿಸುತುಂ ಬಹುಕಾಲದಿಚ್ಛೆ ಕೈಗೂಡಿತಿಂದು! ॥
ಎಂದು ಕಣ್ತುಂಬೆ ಕರುನಾಡ ಚೆಲುವಂ ಕಾಣ್ಬೆ- ।
ನೆಂದು ಮನದೊಳಗನಿಶಮಾಗಿ ಚಿಂತಿಸುತಿರ್ದೆ- ।
ನಂದು ತಿಳಿದಿರ್ದರಾರಿಂತು ಸೊಬಗಿನ ಸುಗ್ಗಿಯಿದಿರೊಳಾಂ ಸಿಲ್ವೆನೆಂದು? ॥ ೫ ॥

—ಎನ್ನ ನಾಡಂದಮಿಂತೆಂದು ಭಾವಿಸಿದೆನಿ- ।
ಲ್ಲಿನ್ನೆಗಂ! ಭಾವನೆಗೆ ಚೆಂದಮಿದು ನಿಲುಕುವುದೆ? ।
ನಿನ್ನ ಸೌಂದರ್ಯಮಿದು ನಿನ್ನ ಪೆರ್ಮೆಯ ಕುರುಪು! ಕರುನಾಡೆ, ಪುಣ್ಯಭೂಮಿ! ॥
ಇನ್ನರಿವುದರಿದಲ್ತು, ನಿರ್ಮಳಾಂತಃಕರಣ- ।
ರುನ್ನತಗುಣೋದಯರ್ ಮಂಗಳನಿಕೇತನರ್ ।
ನಿನ್ನೊಡಲೊಳೆಂತುದಯಿಸಿದರೆಂದು! ಕರುನಾಡು ದೇವರಳ್ಕರಿನ ನಾಡು! ॥ ೬ ॥

—ದರಿಗಳಿರ, ಗಿರಿಗಳಿರ, ಝರಿಗಳಿರ, ಮೃಗಪಕ್ಷಿ- ।
ತರುಗಳಿರ, ಪೂಗಳಿರ, ತೆಂಬೆಲರೆ, ಬೆಳ್ಮಂಜೆ, ।
ನರುಗಂಪೆ, ಇಂಚರವೆ, ಬೀಳ್ಕೊಳ್ವೆನೈ! ನವೋ! ನಿಮ್ಮ ಸೌಹಾರ್ದಮೆನಿತೊ! ॥
ಇರಿಸಿದಿರ್ ಸೌಂದರ್ಯಸಾರಸರ್ವಸ್ವಮಂ ।
ತೆರೆದೆನ್ನ ಮುಂದೆ ನೀಮ್! ಪೊರಗಣ್ಗೆ ನೀಮಿನ್ನು ।
ಮರೆಯಾದೊಡಂ ಹೃದಯಭಿತ್ತಿಯೊಳ್ ಚಿತ್ರಿತರ್! ನಿಮ್ಮನಾಂ ಮರೆವುದೆಂತು? ॥ ೭ ॥

— ಸಾಲಿ ರಾಮಚಂದ್ರರಾಯ.

---

* ಕಾಳ್ಪುರ=ಗಿರಿನದಿ, a forest stream

# ವೈದಿಕಧರ್ಮಗ್ಲಾನಿಯೂ ಕ್ರಮೋನ್ನತಿಯೂ

( ಶ್ರೀಮನ್ನಲೇಮಾವಿನಮಠದ ಶ್ರೀ. ನ ಸಿಂಹಭಾರತಿಸ್ವಾಮಿಗಳವರ ವ್ಯಾಖ್ಯಾನಗಳ ಸಾರ.)

ಅನುವಾದಕ:— ಶ್ರೀ ಮಹಾಬಲೇಶ್ವರಭಟ್ಟ ಹೋಬಳಿ.

[ ೬ನೆಯ ಸಂಚಿಕೆಯಿಂದ ಮುಂದುವರಿದುದು. ]

**ಅಧಿಕಾರಭೇದ:**—ವರ್ಣಭೇದಗಳ ತತ್ವಕ್ಕೆ ಅನುಸಾರವಾಗಿ ಉಂಟಾದ ಅಧಿಕಾರಭೇದಗಳೂ, ಪರಿಪಾಲಿಸಲ್ಪಡತಕ್ಕವುಗಳೇ ಆಗಿವೆ. ಅಧಿಕಾರವನ್ನು ಮೀರಿ ನಡದರೆ ಅನಿಷ್ಟವುಂಟಾಗುವುದೆಂದು ಸ್ಮೃತಿಪ್ರಮಾಣವಿರುವುದು. ಈ ತತ್ವದಿಂದಲೇ ಧೃತರಾಷ್ಟ್ರನು ವಿದುರನಿಂದ ವ್ಯಾವಹಾರಿಕ ನೀತಿಯನ್ನು ತಿಳಿದ ತರುವಾಯ ಸ್ವರೂಪಜ್ಞಾನವನ್ನು ಬೋಧಿಸು. ಎಂದು ವಿದುರನನ್ನು ಕುರಿತು ಹೇಳಲಾಗಿ, ವಿದುರನು ತಾನು ಶೂದ್ರನು, ನೀನು ಕ್ಷತ್ರಿಯನು, ನನಗಿಂತ ಮೇಲು ವರ್ಣದವನು, ನಾನು ತತ್ವಜ್ಞಾನವನ್ನು ಪಡೆದಿರುವೆನಾದರೂ, ನಿನಗೆ ಅದನ್ನು ಬೋಧಿಸಲು ತನಗೆ ಅಧಿಕಾರವಿಲ್ಲ. ಈ ವಿಷಯದಲ್ಲಿ ಸನತ್ಸುಜಾತರನ್ನು ಸ್ಮರಿಸಿದ್ದಲ್ಲಿ ಅವರು ಬಂದು ತತ್ವವನ್ನು ಉಪದೇಶಿಸುವರು, ಎಂದು ಹೇಳಿದ ಸಂಗತಿಯನ್ನು ಭಾರತದ ಉದ್ಯೋಗಪರ್ವದಿಂದ ತಿಳಿಯಬಹುದು. ಇದಲ್ಲದೆ ಏಕಲವ್ಯನೆಂಬ ಒಬ್ಬ ವ್ಯಾಧನು ಧನುರ್ವೇದವನ್ನು ಕಲಿಯಬೇಕೆಂಬ ಕುತೂಹಲದಿಂದ ಅಸ್ತ್ರಾಚಾರ್ಯರಾದ ದ್ರೋಣರ ಬಳಿಗೆ ಬಂದು ತನ್ನ ಮನೋಗತವನ್ನು ಅವರಲ್ಲಿ ವಿಜ್ಞಾಪಿಸಲು ಅವರು ಅವನನ್ನು ಕುರಿತು ಧನುರ್ವೇದವು ಯಜುರ್ವೇದದ ಉಪವೇದವೆನಿಸಿರುತ್ತದೆ. ಶೂದ್ರನಿಗೆ ವೇದಾಧಿಕಾರವಿಲ್ಲ. ಅಧಿಕಾರವಿಲ್ಲದವನಿಗೆ ಅದನ್ನು ಹೇಳುವುದು ನನ್ನ ಕರ್ತವ್ಯವಲ್ಲ. ಎಂದು ಉತ್ತರವನ್ನು ಕೊಟ್ಟಿರುತ್ತಾನೆ. ಯಜ್ಞಯಾಗಾದಿ ಕರ್ಮಗಳನ್ನು ಮಾಡಲಿಕ್ಕೆ ಶೂದ್ರನಿಗೆ ಹೇಗೆ ಅಧಿಕಾರವಿಲ್ಲವೋ ಹಾಗೆ ವೇದಾಧ್ಯಯನವನ್ನು ಮಾಡಲಿಕ್ಕೂ ಅಧಿಕಾರವಿಲ್ಲವೆಂಬುದಾಗಿ ಶ್ರೀಮದಾದ್ಯ ಭಗವತ್ಪಾದ ಶಂಕರಾಚಾರ್ಯರು ಆಜ್ಞೆಮಾಡಿರುತ್ತಾರೆ. ಸ್ತ್ರೀಯರು ಮತ್ತು ಶೂದ್ರರು ಇವರಿಗೆ ವೇದಾಧಿಕಾರವು ಇಲ್ಲದಿರುವ ಕಾರಣದಿಂದಲೇ ಅವರ ತಿಳುವಳಿಕೆಗಾಗಿ ವ್ಯಾಸಾಚಾರ್ಯರು ಐದನೆಯ ವೇದವೆಂದು ಪ್ರಸಿದ್ಧವಾದ 'ಮಹಾಭಾರತ' ವೆಂಬ ಮಹಾ ನಿಬಂಧನವನ್ನು ರಚಿಸಿರುವರು. ಅದರಲ್ಲಿ ಅನುಶಾಸನ ಪರ್ವ, ಭಗವದ್ಗೀತೆ, ಶಾಂತಿಪರ್ವ, ಇವುಗಳನ್ನು ಪರಿಶೀಲಿಸಿದರೆ ಅದರ ಮಹತ್ವವು ತಿಳಿದುಬರುವುದು. ಒಬ್ಬ ಬ್ರಾಹ್ಮಣನ ಪುತ್ರನು ತಂದೆ ಇರುವಾಗಲೇ ಮೃತಪಟ್ಟಿರಲು ಅದರ ಕಾರಣವನ್ನು ಶೋಧಿಸಲಾಗಿ ಒಬ್ಬ ಶೂದ್ರನು ತನಗೆ ಅಧಿಕಾರವಿಲ್ಲದ ತಪಸ್ಸನ್ನಾಚರಿಸುತ್ತಿದ್ದುದೇ ಅದಕ್ಕೆ ಹೇತುವೆಂದು ತೋರಿ ಶ್ರೀರಾಮಚಂದ್ರನು ಅವನನ್ನು ಶಿಕ್ಷಿಸಿದನೆಂಬ ಸಂಗತಿ ರಾಮಾಯಣದ ಉತ್ತರಭಾಗದಿಂದ ತಿಳಿದುಬರುತ್ತದೆ.

**ಶಂಕಾನಿವೃತ್ತಿ:** —ವ್ಯಾಸರು ಕೈವರ್ತವೆಂಬ ಶೂದ್ರಜಾತಿಯ ಕನ್ಯೆಯಿಂದುದ್ಭವಿಸಿ ಬ್ರಾಹ್ಮಣರಾಗಿದ್ದಾರೆ. ವಿಶ್ವಾಮಿತ್ರರು ಮೊದಲು ಕ್ಷತ್ರಿಯರಾಗಿದ್ದು ನಂತರ ಬ್ರಾಹ್ಮಣರಾಗಿದ್ದಾರೆ. ಗುರುಚರಿತ್ರೆ ಎಂಬ ಗ್ರಂಥದಿಂದಲೂ ಶೂದ್ರರು ಮತ್ತು ಚಾಂಡಾಲರು ಆಗಿಂದಾಗ ಉದ್ಧೃತರಾಗಿ ಮೇಲುವರ್ಣದವರಾದುದೂ, ಮಹಾಜ್ಞಾನಿಗಳಾದುದೂ ತಿಳಿದುಬರುತ್ತದೆ. ಪರಾಶರರೆಂಬ ಮಹರ್ಷಿಗಳಿಂದ ಶುದ್ಧಳಾಗಿ ಮಾಡಲ್ಪಟ್ಟ ಕನ್ಯೆಯಲ್ಲಿ ಪರಾಶರರ ಮಹಾವೀರ್ಯದಿಂದ ಜನಿಸಿದ ವ್ಯಾಸರಿಗೆ ಶೂದ್ರತ್ವವು ಬರಲಿಕ್ಕೆ ಕಾರಣವೇ ಇಲ್ಲ. ವಿಶ್ವಾಮಿತ್ರರು ತಮ್ಮ ಅಧಿಕಾರಕ್ಕೆ ಅನುಸಾರವಾಗಿ ಗಾಯತ್ರ್ಯುಪಾಸನೆ ಮೊದಲಾದ ಪವಿತ್ರಕರ್ಮಗಳ ಮೂಲಕ ತಪಸ್ಸನ್ನು ಮಾಡಿ ಬ್ರಾಹ್ಮಣತ್ವವನ್ನು ಪಡೆದಿರುವುದರಿಂದ ಇದು ಕ್ರಮತತ್ವಕ್ಕೆ ವಿರೋಧವಾಗುವಂಥ ಸಂಗತಿಯಲ್ಲ.

**ಕ್ರಮದಿಂದ ಮೇಲಕ್ಕೇರುವಿಕೆ:**— ಗುರುಚರಿತ್ರ ಗ್ರಂಥದಲ್ಲಿ ದತ್ತಾತ್ರೇಯರ ಅಂಶಾವತಾರವೆನಿಸಿದ ನೃಸಿಂಹ ಸರಸ್ವತಿ ಎಂಬವರು ತಮ್ಮ ಅನುಗ್ರಹ ಶಕ್ತಿಯಿಂದ ಕ್ರಮೋನ್ನತಿಯ ತತ್ವಕ್ಕೆ ವಿರೋಧವಾಗದಂತೆ ಆಗಿಂದಾಗ ಒಬ್ಬ ಚಾಂಡಾಲನನ್ನು ಉದ್ಧರಿಸಿ ಇತರ ಸಚ್ಛಿಷ್ಯರೊಡನೆ ಸೇರಿಸಿದರೆಂಬ ವಿಷಯವಾಗಿ ಹೇಳಿದ ಕಥೆ ಮನನೀಯವಾಗಿರುವುದರಿಂದ ಇಲ್ಲಿ ಸ್ವಲ್ಪ ಹೇಳದಿರಲಾರೆವು.

ಶ್ರೀ ನೃಸಿಂಹ ಸರಸ್ವತಿ ಸ್ವಾಮಿಗಳು ಒಂದು ದಿನ ತಮ್ಮ ಮುಖ್ಯ ಶಿಷ್ಯರೊಡನೆ ಗ್ರಾಮಾಂತರವನ್ನು ಕುರಿತು ಹೋಗುವುದಕ್ಕಾಗಿ ಮಾರ್ಗದಲ್ಲಿ ಪ್ರಯಾಣ ಮಾಡುತ್ತಿದ್ದರು. ಹೀಗಿರುವಾಗ ಅದೇ ಮಾರ್ಗದಿಂದ ಸ್ವಲ್ಪ ದೂರದಲ್ಲಿ ಇವರಿಗೆ ಸಮ್ಮುಖವಾಗಿ ಒಬ್ಬ ಪಂಚಮರವನು ಬರುತ್ತಿದ್ದನು. ಅವನನ್ನು ಇವರ ಶಿಷ್ಯರು ನೋಡಿ ಚಾಂಡಾಲನು ಬರುತ್ತಿರುವನು. ನಾವು ಸ್ವಲ್ಪ ಅಡ್ಡವಾಗಿ ಹೋಗಿ ಅವನು ಮುಂದಕ್ಕೆ ಹೋದನಂತರ ಹೋಗೋಣವೆಂದು ಸ್ವಾಮಿಗಳನ್ನು ಪ್ರಾರ್ಥಿಸಿದರು.

ಸ್ವಾಮಿಗಳು ಇದನ್ನು ಕೇಳಿ ಬರಲಿ, ಎಲ್ಲಿಯೂ ನಾವು ಹೋಗಬೇಕಾದುದಿಲ್ಲ. ಇಲ್ಲಿಯೇ ಇರೋಣ ಎಂದು ಅಪ್ಪಣೆ ಮಾಡಿದರು. ಇಷ್ಟರಲ್ಲಿ ಚಾಂಡಾಲನು ಅಲ್ಲಿಗೆ ಬಂದನು. ಇವರನ್ನು ನೋಡಿದೊಡನೆ ಅವನು ಇವರಿಗೆ ನಮಸ್ಕರಿಸಿದನು. ಇವನ ಭಕ್ತಿಯನ್ನು ನೋಡಿ ಸ್ವಾಮಿಗಳವರಿಗೆ ಅತ್ಯಂತವಾಗಿ ದಯೆ ಬಂದಿತು.

ದಯಾರ್ದ್ರಹೃದಯದವರಾದ ಸ್ವಾಮಿಗಳವರು ತಮ್ಮ ಅನುಗ್ರಹ ಶಕ್ತಿಯನ್ನು ಇವನಲ್ಲಿ ಪ್ರಯೋಗಿಸಿ ಇವನನ್ನು ಉದ್ಧರಿಸಬೇಕೆಂದು ನಿಶ್ಚಯಿಸಿದರು. ಇಷ್ಟರಲ್ಲಿ ಚಾಂಡಾಲನು ಭಕ್ತ್ಯತಿಶಯದಿಂದ ತಾನು ಯಾರೆಂಬ ಪ್ರಜ್ಞೆಯನ್ನು ಮರೆತಿದ್ದನು. ವಂದನೆಯನ್ನು ಮಾಡಿ ಎದ್ದು ನಿಂತೊಡನೆ ಸ್ವಾಮಿಗಳು ಅವನ ಮುಂದೆ ನೆಲದ ಮೇಲೆ ಅಡ್ಡವಾಗಿ ಒಂದು ರೇಖೆಯನ್ನು ಎಳೆದು ಇದನ್ನು ದಾಟಿ ಇತ್ತ ಬಾ ಎಂದು ಆಜ್ಞೆ ಮಾಡಿದರು. ಅವನು ಅದರಂತೆ ಆ ಗೆರೆಯನ್ನು ದಾಟಿ ಮುಂದೆ ಬಂದನು. ಬಳಿಕ ಸ್ವಾಮಿಗಳು ಅವನನ್ನು ಕುರಿತು ಈಗ ನೀನು ಯಾವ ಸ್ಥಿತಿಯಲ್ಲಿ ಇರುತ್ತೀ ? ಎಂದು ಕೇಳಲು ತಾನೊಬ್ಬ ಶೂದ್ರನಾಗಿದ್ದು ದೇವ ಬ್ರಾಹ್ಮಣ ಸೇವೆ ಮೊದಲಾದ ಸ್ವಕರ್ತವ್ಯಗಳನ್ನು ಮಾಡುತ್ತಿರುವೆನು, ಎಂದು ವಿಜ್ಞಾಪಿಸಿಕೊಂಡನು. ಪುನಃ ಸ್ವಾಮಿಗಳು ಅವನ ಮುಂದೆ ಇನ್ನೊಂದು ಗೆರೆಯನ್ನು ಎಳೆದು ಇದನ್ನು ದಾಟಿ ಮುಂದೆ ಬಾ, ಎಂದು ಅಪ್ಪಣೆಮಾಡಲು ಅವನು ಹಾಗೆಯೇಮಾಡಿದನು.

ಆ ಮೇಲೆ ಸ್ವಾಮಿಗಳು ಅವನನ್ನು ಕುರಿತು ಈಗ ನೀನು ಯಾವ ದೆಶೆಯಲ್ಲಿರುತ್ತೀ? ಎಂದು ಪ್ರಶ್ನೆ ಮಾಡಿದರು. ನಾನೊಬ್ಬ ವೈಶ್ಯನಾಗಿದ್ದೇನೆ. ತನಗೆ ಇಂಥ ಊರು, ತನ್ನ ಹೆಸರು ಇಂತಹದು. ತಾನು ಒಳ್ಳೇ ಧನಿಕನು. ಕೃಷಿ, ಗೋರಕ್ಷಣ, ವ್ಯಾಪಾರ ಇತ್ಯಾದಿ ಸ್ವಕರ್ತವ್ಯಗಳನ್ನು ಒಳ್ಳೇ ಕೌಶಲ್ಯದಿಂದ ನಡಿಸುತ್ತಿರುವೆನು. ಮುಂತಾದ ಅನುಭವಗಳನ್ನು ಹೇಳಿ ಸುಮ್ಮನಾದನು. ತರುವಾಯ ಸ್ವಾಮಿಗಳು ಅವನ ಮುಂದೆ ಮತ್ತೊಂದು ರೇಷೆಯನ್ನು ಎಳೆದು ಇದನ್ನು ದಾಟಿ ಮುಂದೆ ಬಾ. ಎಂದು ಸೂಚಿಸಿದರು. ಅದರಂತೆ ಅವನು ಮಾಡಲು ತಿರುಗಿ ಸ್ವಾಮಿಗಳು ಅವನನ್ನು ಕುರಿತು ಈಗ ನಿನ್ನ ಅನುಭವವೇನು? ಎಂದರು. ಆಗ ಅವನು ತಾನು ಇಂಥ ರಾಜ್ಯದಲ್ಲಿ ಕ್ಷತ್ರಿಯ ರಾಜನಾಗಿದ್ದೇನೆ. ತನ್ನ ಹೆಸರು, ನೀತಿಯಂತೆ ರಾಜಶಾಸನ, ಯುದ್ಧ, ದಾನ, ಗೋಬ್ರಾಹ್ಮಣ ರಕ್ಷಣ ಇತ್ಯಾದಿ ತನ್ನ ಕರ್ಮವನ್ನೆಲ್ಲ ಹೇಳಿದನು. ಮತ್ತೆ ಶ್ರೀ ಸ್ವಾಮಿಗಳು ಅವನ ಮುಂದೆ ಮತ್ತೆ ಒಂದು ರೇಖೆಯನ್ನು ಎಳೆದು ಇದನ್ನು ದಾಟಿ ಬಾ. ಎಂದು ಅನ್ನಲಾಗಿ ಅವನು ಅದನ್ನು ಮೀರಿ ಬಂದನು. ಪುನಃ ಸ್ವಾಮಿಗಳು ಈಗ ನಿನ್ನ ಅನುಭವವೇನೆಂದು ಅವನನ್ನು ಕೇಳಿದರು. ತಾನು ಇಂಥ ದೇಶದಲ್ಲಿ ಬ್ರಾಹ್ಮಣನಾಗಿದ್ದೇನೆ. ವೇದ ಮತ್ತು ಉಪನಿಷತ್ತುಗಳ ಅಧ್ಯಯನವನ್ನು ಮಾಡಿ ವೈದಿಕತತ್ವವನ್ನು ಚನ್ನಾಗಿ ತಿಳಿದು, ಬ್ರಹ್ಮಚರ್ಯಾಶ್ರಮವನ್ನೂ, ಗ್ರಹಸ್ಥಾಶ್ರಮದಲ್ಲಿ ನಡಿಸಬೇಕಾದ ಯಜ್ಞಯಾಗಾದಿಕರ್ಮಗಳನ್ನೂ ಸಾಂಗವಾಗಿ ನಡಿಸಿ ಸದ್ಯಕ್ಕೆ ವಾನಪ್ರಸ್ಥಾಶ್ರಮ ಸ್ಥಿತಿಯಲ್ಲಿ ಇದ್ದು ಸದ್ಗುರುವನ್ನು ಶೋಧಿಸುತ್ತಿದ್ದೇನೆ. ಮೊದಲಾದ ವಿಷಯಗಳನ್ನು ತಿಳುಹಿಸಿದನು. ಸ್ವಾಮಿಗಳು ಕೂಡಲೆ ಅವನ ಅಂತರ್ಮುಖವಾಗಿದ್ದ ದೃಷ್ಟಿಯನ್ನು ಬಹಿರ್ಮುಖವಾಗಿ ಮಾಡಿದರು. ಆಗ ಅವನು ಬ್ರಾಹ್ಮಣನೇ ಆಗಿದ್ದನು. ಈ ಅದ್ಭುತವಾದ ಚರಿತ್ರವನ್ನು ಸ್ವಾಮಿಗಳ ಶಿಷ್ಯರೆಲ್ಲರೂ, ನೋಡುತ್ತಲೇ ಇದ್ದರು. ಈ ನವೀನ ಬ್ರಾಹ್ಮಣನನ್ನು ತಕ್ಕ ಉಪದೇಶಗಳಿಂದ ಮುಖ್ಯ ಶಿಷ್ಯರೊಂದಿಗೆ ಸೇರಿಸಿಕೊಂಡು ಸೇರಬೇಕಾದ ಗ್ರಾಮಕ್ಕೆ ಸ್ವಾಮಿಗಳು ದಯಮಾಡಿಸಿದರು.

ಈ ಉದಾಹರಣೆಯಿಂದ ಮನುಷ್ಯನು ಯಾವ ವರ್ಣದವನೇ ಆಗಲಿ ಕ್ರಮವಾಗಿ ತನ್ನ ಕರ್ತವ್ಯಗಳನ್ನು ನಡಿಸುತ್ತ ಮೇಲಕ್ಕೇರಬೇಕೆಂಬುದು ಸಿದ್ಧವಾಗುತ್ತದೆ. ವಿಶ್ವಾಮಿತ್ರರಂಥ ಯೋಗ್ಯತೆಯವರಾದರೆ ವರ್ತಮಾನ ಜನ್ಮದಲ್ಲಿಯೇ ಬ್ರಾಹ್ಮಣರಾಗಬಹುದು. ಹಾಗಿಲ್ಲವೆ, ವಿಶ್ವಾಸದಿಂದ ತಮ್ಮ ತಮ್ಮ ಕರ್ತವ್ಯಕರ್ಮಗಳನ್ನು ಮಾಡಿದರೆ ಜನ್ಮಾಂತರಗಳಲ್ಲಿ ಉತ್ತಮವರ್ಣಗಳನ್ನು ಪಡೆಯಬಹುದು. ನೃಸಿಂಹ ಸರಸ್ವತಿ

ಸ್ವಾಮಿಗಳಂಥ ಮಹಾತ್ಮರು ಈಗಲೂ ಯಾವನಿಗಾದರೂ ಗೋಚರಿಸಿ, ಅವನು ತ್ರಿಕರಣಪೂರ್ವಕವಾಗಿಯೂ, ಅವರನ್ನು ಶರಣುಹೋದರೆ ಮನುಷ್ಯಮಾತ್ರರು ಉದ್ಧೃತರಾಗಬಹುದೆಂಬುದರಲ್ಲಿ ಸಂದೇಹವಿಲ್ಲ. ಆದರೆ ಅಂಥ ಮಹನೀಯರನ್ನು ಪಡಕೊಳ್ಳಲಿಕ್ಕೆ ನಾವೆಷ್ಟು ಪ್ರಯತ್ನವನ್ನು ಮಾಡಬೇಕೋ! ತಿಳಿಯದು. ನಮ್ಮ ಇಚ್ಛೆಗಳು ಬಹು ವಿಧವಾಗಿ ಉಂಟಾಗುತ್ತವೆ. ನಾವು ಇಚ್ಛೆಗಳನ್ನು ಗಟ್ಟಿಯಾಗಿ ಹೇಗೆ ಮಾಡುವೆವೋ! ಹಾಗೆ ಪ್ರಯತ್ನಗಳನ್ನು ಗಟ್ಟಿಯಾಗಿ ಮಾಡುವದಿಲ್ಲ. ಇದರಿಂದಲೇ ನಮ್ಮ ನಮ್ಮ ಹೀನಸ್ಥಿತಿ ಬೇಗ ದೂರವಾಗುವುದಿಲ್ಲ.

**ಬ್ರಾಹ್ಮಣಪದ-ನಿರ್ವಚನ :**— 'ಬ್ರಾಹ್ಮಣ' ಎಂಬ ಪದವು ಎರಡು ವಿಧವಾದ ಅರ್ಥಗಳನ್ನು ಬೋಧಿಸುತ್ತದೆ. ಮೊದಲನೆಯ ಅರ್ಥವು ನಾಲ್ಕು ವರ್ಣಗಳಲ್ಲಿ ಮೊದಲನೆಯ ವರ್ಣವೆನಿಸಿದ ಬ್ರಾಹ್ಮಣ್ಯ, ಎಂದು ಆಗುತ್ತದೆ. ಎರಡನೆಯದು ಅತಿವರ್ಣಾಶ್ರಮಿಯಾದ ಬ್ರಹ್ಮಜ್ಞಾನಿ ಎಂದು ಆಗುತ್ತದೆ. ವರ್ಣಶ್ರೇಷ್ಠನಾದ ಬ್ರಾಹ್ಮಣನು ವರ್ಣವಿಹಿತವಾದ ಕರ್ಮಗಳನ್ನು ಮಾಡಬೇಕಾಗುತ್ತದೆ. ಅತಿವರ್ಣಾಶ್ರಮಿಯಾದ ಬ್ರಾಹ್ಮಣನಿಗೆ ಯಾವ ಕರ್ತವ್ಯವೂ, ಉಳಿದಿರುವುದಿಲ್ಲ. ಅವನು ಗುಣಸಂಬಂಧವನ್ನು ಮೀರಿರುವುದರಿಂದ ವರ್ಣ, ಜಾತಿ, ಸ್ಪೃಶ್ಯಾಸ್ಪೃಶ್ಯ, ಕರ್ಮಾಕರ್ಮ, ಭೋಜ್ಯಾಭೋಜ್ಯ, ಪುಣ್ಯಾಪುಣ್ಯ, ಧರ್ಮಾಧರ್ಮ, ಇತ್ಯಾದಿ ವಿಧಿನಿಷೇಧಗಳ ಸಂಪರ್ಕವೇ ಅವನಿಗೆ ಇರುವುದಿಲ್ಲ. ಇಂಥ ಸ್ಥಿತಿಯನ್ನು ಮನುಷ್ಯರಲ್ಲಿ ಯಾರು ಪಡೆದರೂ, ಅವರು ಬ್ರಾಹ್ಮಣರಾಗಬಹುದು. ಬ್ರಹ್ಮವನ್ನು ತಿಳಿದು 'ಬ್ರಾಹ್ಮಣ'ವೆಂಬ ವ್ಯವಹಾರಕ್ಕೆ ವಿಷಯರಾದವರ ಮಹತ್ವವು ವಜ್ರಸೂಚಿಕೋಪನಿಷತ್ತಿನಲ್ಲಿ ಹೇಳಲ್ಪಟ್ಟಿದೆ. ಅದರ ಸಾರಾಂಶವನ್ನು ಇಲ್ಲಿಯೂ ಸ್ವಲ್ಪ ವಿವರಿಸುವಾ.

"ಯಾವನೇ ಆಗಲಿ ನಾನು ನನ್ನದು ಎಂಬ ಅಭಿಮಾನವನ್ನು ಬಿಟ್ಟು ತಾನೇ ಆತ್ಮವು, ಇದು ಅದ್ವಿತೀಯ ತತ್ವ ಅಂದರೆ ಇದಕ್ಕಿಂತಲೂ ಇನ್ನೊಂದು ಸ್ಥಿರಪದಾರ್ಥವಿಲ್ಲ. ವರ್ಣ-ಜಾತಿ ಪಂಥ, ಗುಣಕ್ರಿಯೆ ಇವುಗಳಿಂದ ಇದು ರಹಿತವಾದುದು. ಷಡ್ವೈರಿಗಳಾದ (ಕಾಮ, ಕ್ರೋಧ, ಲೋಭ, ಮೋಹ,ಮದ, ಮಾತ್ಸರ್ಯಗಳಿಂದಾ ರಹಿತವಾದದ್ದು. ಯಾವದೋಷವೂ ಇದಕ್ಕೆ ಇಲ್ಲದೆ ನಿರಂತರವೂ ಇದು ಪರಿಶುದ್ಧವಾದುದಾಗಿದೆ. ಭೂತ-ಭವಿಷ್ಯತ್-ವರ್ತಮಾನಕಾಲಗಳಸಂಪರ್ಕವೇ ಇದಕ್ಕಿಲ್ಲ. ಮತ್ತು ಇದು ಜ್ಞಾನ ಸ್ವರೂಪವೂ, ಆನಂದ ಸ್ವರೂಪವೂ, ಆಗಿದೆ. ನಿರ್ವಿಕಲ್ಪವಾಗಿಯೂ, ಸರ್ವ ಕಲ್ಪಗಳಿಗೆ ಆಧಾರವಾಗಿಯೂ, ಸರ್ವ ವಸ್ತುಗಳಲ್ಲಿ ಅಂತರ್ಭೂತವಾಗಿಯೂ, ಜಗತ್ತಿನ ಒಳಗೂ, ಹೊರಗೂ, ಒಂದೇವಿಧವಾಗಿ ವ್ಯಾಪಿಸಿದುದಾಗಿಯೂ, ವಿಭಾಗವಿಲ್ಲದ ಆನಂದಸ್ವರೂಪವಾಗಿಯೂ, ಅಳೆಯಲಿಕ್ಕೆ ಆಗದಂತಹದಾಗಿಯೂ, ಅನುಭವೈಕವೇದ್ಯವಾಗಿಯೂ, ಪ್ರತ್ಯಕ್ಷ ತೋರುವಂತಹದಾಗಿಯೂ, ಇದೆ. ಎಂದು ಭಾವಿಸುತ್ತ ಸರ್ವ ದುರ್ಗುಣಗಳನ್ನೂ ಪರಿತ್ಯಜಿಸಿ ಶಮದಮಾದಿಸಂಪನ್ನರಾಗಿ ಕೈಯ್ಯಲ್ಲಿದ್ದ ನೆಲ್ಲೀಕಾಯಂತೆಯೇ ಸುಲಭವಾಗಿ ಆ ಶುದ್ಧ ತತ್ವವನ್ನು ತಿಳಿದು ಅದೇ ತಾನೆಂಬ ದೃಢ ಪ್ರತ್ಯಯವನ್ನು ಪಡೆದರೆ ಅವನು ಬ್ರಾಹ್ಮಣನೆಂಬ ವ್ಯವಹಾರಕ್ಕೆ ಅರ್ಹನೆನಿಸುತ್ತಾನೆ. ಇದೇ ಶ್ರುತಿ, ಸ್ಮೃತಿ, ಪುರಾಣೇತಿಹಾಸಗಳ ಅಭಿಪ್ರಾಯ."

**ಆಚಾರ್ಯರ ಅಭಿಪ್ರಾಯ :**— ಶ್ರೀಮಚ್ಛಂಕರಭಗವತ್ಪಾದಾಚಾರ್ಯರೂ, ಈ ಅಭಿಪ್ರಾಯವನ್ನೇ ಒಂದು ಸಂದರ್ಭದಲ್ಲಿ ವ್ಯಕ್ತಗೊಳಿಸಿರುವರು. ಆಚಾರ್ಯರು ಕಾಶಿಯಲ್ಲಿರುವಾಗ ಒಂದುದಿನ ನಿತ್ಯದಂತೆ ಮಧ್ಯಾಹ್ನ ಸ್ನಾನಕ್ಕಾಗಿ, ಮಣಿಕರ್ಣಿಕೆಗೆ ಹೋಗುತ್ತಿದ್ದರು. ಮಾರ್ಗದಲ್ಲಿ ಇವರಿಗೆ ಎದುರಾಗಿ ಒಬ್ಬ ಚಾಂಡಾಲನು ಬರುತ್ತಿದ್ದನು. ಅವನನ್ನು ನೋಡಿ ಆಚಾರ್ಯರು ಲೋಕರೂಢಿಯನ್ನನುಸರಿಸಿ, ಎಲೋ! ಮಾರ್ಗವನ್ನು ಬಿಟ್ಟು ದೂರ ಹೋಗು ಎಂದು ಹೇಳಿದರು. ಇದನ್ನು ಕೇಳಿ ಅವನು ಆಚಾರ್ಯರನ್ನು ಕುರಿತು, ನೀವು ಯಾರನ್ನುದ್ದೇಶಿಸಿ ದೂರ ಹೋಗೆನ್ನುತ್ತೀರಿ ? ದೇಹವನ್ನೋ ? ದೇಹಿಯನ್ನೋ (ಆತ್ಮನನ್ನೊ) ? ದೇಹವನ್ನು ಕುರಿತು ಹೇಳಿದರೆ, ದೇಹವು ಜಡಪದಾರ್ಥವಾದುದಿದ್ದು ಕ್ರಿಯಾಶಕ್ತಿ ಅದರಿಂದ ಘಟಿಸಲಾರದು. ಆತ್ಮವನ್ನು ಕುರಿತು ಹೇಳಿದರೆ ಇವನು ಬ್ರಾಹ್ಮಣ, ಇವನು ಕ್ಷತ್ರಿಯ, ಇವನು ವೈಶ್ಯ, ಇವನು ಶೂದ್ರ ಇವನು ಚಾಂಡಾಲ, ಇವನು ಮ್ಲೇಚ್ಛ ಎಂಬ ಭೇದಗಳಿಗೆ ಆತ್ಮನು ಲಕ್ಷ್ಯನಾಗುವದಿಲ್ಲ. ಆದುದರಿಂದ ನಿಮ್ಮವು ಪ್ರಶ್ನೆ ಅಸಂಭವನೀಯವು. ಎಂದು ಪೂರ್ವಪಕ್ಷವನ್ನು ಮಾಡಿದನು.

ಇದನ್ನು ಕೇಳಿ ಆಚಾರ್ಯರಿಗೆ ಅತ್ಯಾಶ್ಚರ್ಯವೆನಿಸಿತು. ಲೋಕದಲ್ಲಿಯ ಸಾಮಾನ್ಯ ಚಾಂಡಾಲನಿಗೆ ಇಂಥ ಮಹತ್ವದ

ಪೂರ್ವಪಕ್ಷವನ್ನು ಮಾಡಲಿಕ್ಕೆ ಯೋಗ್ಯತೆ ಸಾಲದು. ಆತ್ಮಜ್ಞಾನಿಯು ಹೊರತು ಇದು ಇತರರಿಂದ ಸಾಧ್ಯವಲ್ಲ. ಆದುದರಿಂದ ಇವನು ಚಾಂಡಾಲನಾದರೂ, ಆತ್ಮಜ್ಞಾನಿಯೇ ಇರಬೇಕು. ಎಂದು ನಿಶ್ಚಯಿಸಿ ಮುಂದಿನ ಅಭಿಪ್ರಾಯವನ್ನು ವ್ಯಕ್ತಪಡಿಸಿದರು.

ಸೂರ್ಯನು ಗಂಗಾಜಲದಲ್ಲಿಯೂ, ಚಾಂಡಾಲರ ಓಣಿಯ ನೀರಿನಲ್ಲಿಯೂ, ಅವರಂತೆ ಭಂಗಾರದ ಕೊಡದಲ್ಲಿಯೂ, ಮಣ್ಣಿನ ಘಟದಲ್ಲಿಯೂ, ಪ್ರತಿಬಿಂಬಿಸಿದರೆ ಅವನಲ್ಲಿ ಯಾವ ವ್ಯತ್ಯಾಸವೂ ತೋರುವುದಿಲ್ಲ. ಇವರಂತೆ ತರಂಗಗಳಿಲ್ಲದ ಸಹಜ ಸಿದ್ಧವಾದ ಆನಂದದ ಜ್ಞಾನಕ್ಕೆ ಸಮುದ್ರ ಪ್ರಾಯನಾದ ಅಂತರಾತ್ಮನಲ್ಲಿ ಯಾವ ವ್ಯತ್ಯಾಸವೂ ಇಲ್ಲವಾದುದರಿಂದ ಅಂಥ ಆತ್ಮವಸ್ತುವನ್ನು ಬಲ್ಲವನು ಚಾಂಡಾಲನೇ ಆಗಲಿ ಅಥವಾ ಬ್ರಾಹ್ಮಣನೇ ಆಗಲಿ, ಅವನು ಗುರುವೆಂದೇ ನಾನು ಭಾವಿಸುತ್ತೇನೆ.

ಹೀಗೆ ಹೇಳಿದ ಆಚಾರ್ಯರ ಅಭಿಪ್ರಾಯವನ್ನು ಕೇಳಿ ಚಾಂಡಾಲನಿಗೆ ಅತ್ಯಾನಂದವಾಯಿತು. ಚಾಂಡಾಲನು ನಿಜವಾದ ಚಾಂಡಾಲನಿರದೆ ಆ ರೂಪದಿಂದ ಆಚಾರ್ಯರನ್ನು ಪ್ರತ್ಯಕ್ಷವಾಗಿ ಅನುಗ್ರಹಿಸಬಂದ ಸಾಕ್ಷಾತ್ ವಿಶ್ವೇಶ್ವರಸ್ವಾಮಿಯೇ ಆಗಿದ್ದನು. ಈ ಚರಿತ್ರದ ಅಧಿಕಾಂಶವನ್ನು ಶಂಕರವಿಜಯ ಗ್ರಂಥದಿಂದ ತಿಳಿಯಬಹುದು.

**ಅಕ್ರಮ ಬಲಾತ್ಕಾರ:—** ಜಾತಿ, ಗುಣ, ಕರ್ಮ, ಸ್ಥಾನ, ಇತ್ಯಾದಿಗಳ ನಿರ್ಬಂಧವು ಜ್ಞಾನಿಯಾಗುವವರೆಗೆ ಉಂಟಲ್ಲದೆ ಜ್ಞಾನಿಯಾದನಂತರ ಇರುವುದಿಲ್ಲ. ಎಂದು ಜ್ಞಾನಕಾರಣ ಗ್ರಂಥಗಳು ಪ್ರತಿಪಾದಿಸುತ್ತವೆ. ಏನಂಚ, ಯಾವ ವರ್ಣದವರೂ ಸರಿ, ಉತ್ತಮ ಸ್ಥಿತಿಗೆ ಬರುವುದಾಗಲಿ, ಅಥವಾ ಆತ್ಮಜ್ಞಾನಿಗಳಾಗುವುದಾಗಲಿ ಕ್ರಮವಾಗಿ ತಮ್ಮ ತಮ್ಮ ಕರ್ತವ್ಯಕರ್ಮಗಳನ್ನು ಮಾಡಿಯೇ ತೀರಬೇಕೆಂಬುದು ಈ ಮೇಲಿನ ವಿವರಣದಿಂದ ತಿಳಿಯುವಂತಾಯ್ತು. ಇನ್ನು ಕೆಲವರು ಈ ಕ್ರಮತತ್ವವನ್ನು ಮೂಲೆಗೆ ಒತ್ತಿ ಜ್ಞಾನೋತ್ತರದ ವ್ಯವಹಾರವನ್ನೇ ಪ್ರಚಾರಕ್ಕೆ ತರಬೇಕು, ಬ್ರಾಹ್ಮಣಾಚಾರಗಳನ್ನೇ ಅನುಕರಿಸಬೇಕು, ಇದಕ್ಕೆ ಮಾಡುವಷ್ಟು ಬಲಾತ್ಕಾರವನ್ನು ಮಾಡಿಯೇ ತೀರಬೇಕು ಎಂದು ಹೇಳುವುದಲ್ಲದೆ ಸಾಹಸವನ್ನು ಮಾಡುತ್ತಲೂ ಇರುವರು. ಆದರೆ ಇವರ ಸಾಹಸವು, ಹುಡುಗಾಟದ ವಿವಾಹದಂತೆಯೇ ಸರಿ. ಸೇರಿಗೆ ಸವ್ವಾಸೇರು ಎಂಬ ಗಾದೆಯಂತೆ ಲೋಕದಲ್ಲಿ ಒಂದು ಬಲಕ್ಕಿಂತಲೂ, ಇನ್ನೊಂದು ಬಲವು ಇಮ್ಮಡಿಯಾಗಿರುವುದೆಂಬುದು ಎಲ್ಲರೂ ತಿಳಿದುದೇ ಆಗಿದೆ. ಒಬ್ಬನು ಆಂಗಿಕ ಬಲವನ್ನು ತೋರಿಸಿದರೆ ಇನ್ನೊಬ್ಬನು ಸಾಂಘಿಕ ಬಲವನ್ನು ತೋರಿಸಬಹುದು. ಮತ್ತೊಬ್ಬನು ಯಾಂತ್ರಿಕ ಬಲವನ್ನು ಕಾಣಿಸಿದರೆ ಬಳಿಕೊಬ್ಬನು ಮಾಂತ್ರಿಕ ಬಲವನ್ನು ಪ್ರಯೋಗಿಸುವನು. ಇಷ್ಟು ಬಲಗಳನ್ನು ಲೀಲಾಮಾತ್ರದಿಂದ ಒಮ್ಮೆಗೆ ನುಂಗಿಬಿಡುವ ದೈವಿಕ ಬಲವು ಇದ್ದೇ ಇರುವುದು. ಆದುದರಿಂದ ಅಕ್ರಮ ಬಲಾತ್ಕಾರವು ವ್ಯರ್ಥವಾಗುವುದಲ್ಲದೆ, ಲೋಕದ ಶಾಂತತೆಗೆ ಭಂಗವೂ ಬರುವುದು. ಹಾಗೆ ಮಾಡಿದವರು ಮಹಾದೋಷಕ್ಕೆ ಭಾಗಿಗಳಾಗಿ ದೇವರ ಕೋಪಕ್ಕೆ ಪಾತ್ರರಾಗುತ್ತಾರೆ.

**ಕರ್ತವ್ಯಕರ್ಮಗಳ ಮಹತ್ವ:—** ರಾಜನು ತಾನು ಮಾಡಿದ ನಿಯಮಗಳನ್ನು ಅನುಸರಿಸಿ ತನ್ನಿಂದ ನಿಯಮಿಸಲ್ಪಟ್ಟ ಅಧಿಕಾರಿಗಳು ಸರಿಯಾಗಿ ಕಾರ್ಯಕ್ರಮಗಳನ್ನು ನಡಿಸುತ್ತ ಬಂದರೆ ಅವರ ಮೇಲೆ ಹೆಚ್ಚು ಪ್ರೇಮವನ್ನಿಟ್ಟು ಕ್ರಮವಾಗಿ ಅವರಿಗೆ ಮೇಲು ಮೇಲಿನ ಪದವಿಯನ್ನು ಕೊಡುವಂತೆ ಈಶ್ವರನು ತಾನು ವಿಭಾಗಿಸಿಕೊಟ್ಟ ಕರ್ಮಗಳನ್ನು ಚಾತುರ್ವರ್ಣದವರು ಸರಿಯಾಗಿ ನಡಿಸುತ್ತ ಬಂದರೆ ಕ್ರಮವಾಗಿ ಅವರಿಗೆ ಉತ್ತಮ ಗತಿಯನ್ನು ದಯಪಾಲಿಸುತ್ತಾನೆ. ಆದುದರಿಂದ ನಮ್ಮ ನಮ್ಮ ಕರ್ತವ್ಯಕರ್ಮಗಳನ್ನು ಒಂದೇ ಮನಸ್ಸಿನಿಂದ ಮಾಡಿ "ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ" ಎಂಬ ಗೀತಾವಾಕ್ಯದಂತೆ ದೇವರನ್ನು ಸಂತೋಷಿಸಿ, ಉತ್ತಮ ಪದವಿಯನ್ನೂ, ಉತ್ತಮ ಸಿದ್ಧಿಯನ್ನೂ ಪಡೆವುದು ನಮ್ಮ ಕರ್ತವ್ಯವಾಗಿದೆ. ಈ ಪದವಿಯನ್ನೂ, ಸಿದ್ಧಿಯನ್ನೂ ಪಡೆಯಲಿಕ್ಕೆ ನಮ್ಮ ನಮ್ಮ ಕರ್ತವ್ಯಕರ್ಮಗಳೇ ನಮಗೆ ಸಾಕು. ಬೇರೆಯವರ ಕರ್ಮಗಳನ್ನು ಅಪೇಕ್ಷಿಸುವ ಕಾರಣವಿಲ್ಲ. ಇದಕ್ಕೆ ಹಿಂದೊಮ್ಮೆ ಹೇಳಿದ "ಸ್ವೇ ಸ್ವೇ ಕರ್ಮಣ್ಯಭಿರತಃ ಸಂಸಿದ್ಧಿಂ ಲಭತೇ ನರಃ" ಎಂಬ ಗೀತಾವಾಕ್ಯವೊಂದೇ ಸಾಕು.

ಸ್ವಕರ್ಮಗಳಲ್ಲಿ ಕೆಲವು ಕರ್ಮಗಳು ದೋಷಯುಕ್ತವಾದವುಗಳಾಗಿಯೂ, ಕೆಲವು ದುಃಸ್ಸಾಧ್ಯವಾದುವುಗಳಾಗಿಯೂ, ಕೆಲವು ಸುಸಾಧ್ಯವಾದುವುಗಳಾಗಿಯೂ, ಬುದ್ಧಿವೈಚಿತ್ರ್ಯನುಸಾರ ತೋರುವುದುಂಟು. ಹೀಗೆಯೇ ಪರಧರ್ಮದ ಕರ್ಮ

ಗಳಲ್ಲಿ ಕೆಲವು ಕರ್ಮಗಳು ನಿರ್ದುಷ್ಟವಾದುವುಗಳಾಗಿಯೂ, ಕೆಲವು ಸುಸಾಧ್ಯವಾದುವುಗಳಾಗಿಯೂ, ಕೆಲವು ಮನೋರಂಜಕವಾದುವುಗಳಾಯೂ, ಕೆಲವು ಗೌರವಾಸ್ಪದವಾದುವುಗಳಾಗಿಯೂ, ತೋರಿಬರದೆ ಇರಲಿಕ್ಕಿಲ್ಲ. ಆದರೂ ನಮ್ಮದನ್ನು ನಾವು ಬಿಡಬಾರದು. ಇತರ ಕರ್ಮಗಳನ್ನು ಹಿಡಿಯಬಾರದು. ಮತ್ತು ಅವುಗಳ ಮೇಲೆ ನಮ್ಮ ಬಲಾತ್ಕಾರವನ್ನು ತೋರಿಸಬಾರದು. ಯಾವ ಕಾರ್ಯವಾದರೂ ಸರಿ. ಆರಂಭದೆಶೆಯಲ್ಲಿ ದುಷ್ಟವಾಗಿ ಕಾಣುವುದು. ಹಾಗೆ ಕಂಡರೂ ಕ್ರಮೇಣ ಅದರಲ್ಲಿ ಗುಣವೇ ಹೆಚ್ಚು ಇರುವುದೆಂಬ ಅನುಭವವು ಬರದೆ ಇರುವುದಿಲ್ಲ.

**ಗುಣತ್ರಯದ ಸಂಬಂಧ :—** ಲೋಕದಲ್ಲಿ ಎಲ್ಲ ಕರ್ಮಗಳೂ, ಒಂದಿಲ್ಲೊಂದು ಗುಣಗಳಿಂದ ಹೆಚ್ಚು ಯುಕ್ತವಾಗಿರುವುವಾದರೂ, ಮೂರೂ ಗುಣಗಳ ಸಮಾವೇಶವನ್ನು ಹೊಂದಿಯೇ ಇರುತ್ತವೆ. ಸತ್ವ ರಜ ತಮೋಗುಣಗಳ ಲಕ್ಷಣವನ್ನು ಹಿಂದೆ ಹೇಳಿದೆ. ಈ ಮೂರು ಗುಣಗಳ ಪ್ರಭಾವದಿಂದಲೇ ಕರ್ಮಗಳು ಜರಗುತ್ತಿರುವುವು. ರಾಜಸ ತಾಮಸ ಕರ್ಮಗಳು ಸಾತ್ವಿಕ ಕರ್ಮಗಳನ್ನು ಮಾಡುತ್ತಿರುವವನಿಗೆ ಹೀನವಾದುವುಗಳಾಗಿ ತೋರುತ್ತವೆ. ರಾಜಸ ತಾಮಸ ಕರ್ಮಗಳನ್ನು ಮಾಡುವವನಿಗೆ ಸಾತ್ವಿಕ ಕರ್ಮವು ದುಃಸ್ಸಾಧ್ಯವಾಗಿ ತೋರುವುದು. ಆದರೆ ಸಾತ್ವಿಕ ಕರ್ಮಗಳನ್ನು ಮಾಡುವವನಲ್ಲಿ ರಾಜಸ ತಾಮಸ ಗುಣಗಳೇ ಇಲ್ಲವೆಂದು ಹೇಳಲಿಕ್ಕೆ ಬರುವುದಿಲ್ಲ. ಹೀಗೆಯೇ ರಾಜಸ ತಾಮಸ ಕರ್ಮಗಳನ್ನು ಮಾಡುವವನಲ್ಲಿ ಸಾತ್ವಿಕ ಗುಣಗಳೇ ಇಲ್ಲವೆಂದು ಹೇಳಲಿಕ್ಕೂ ಆಗುವದಿಲ್ಲ. ಯಾವುದಾದುರೊಂದು ಗುಣದ ವಿಶಿಷ್ಟಾವಸ್ಥೆಯಲ್ಲಿ ಅದಕ್ಕನುಸಾರವಾಗಿ ಕರ್ಮಗಳು ಘಟಿಸುತ್ತಿದ್ದರೆ ಇತರ ಎರಡು ಗುಣಗಳು ಅಂತತಃ ಇದ್ದೇ ಇರುವುವು. ಆದುದರಿಂದ ಎಲ್ಲ ವರ್ಣದವರಿಗೂ, ತಮ್ಮ ತಮ್ಮ ಕರ್ತವ್ಯ ಕರ್ಮಗಳು ಈ ಗುಣತತ್ವಕ್ಕೆ ಅನುಸಾರವಾಗಿ ಮೊದಮೊದಲು ದುಷ್ಟವಾದುವುಗಳಾಗಿಯೂ, ಕಷ್ಟಸಾಧ್ಯವಾದುವುಗಳಾಗಿಯೂ, ತೋರುವುದು ಸಹಜ ಸಿದ್ಧವಾದುದಾಗಿರುತ್ತದೆ. ಆದಗೂ ಸ್ವಕರ್ತವ್ಯಗಳನ್ನು ಮಾಡಲೇ ಬೇಕು. ಇದರಿಂದಲೇ ಶ್ರೀಕೃಷ್ಣನು ಅರ್ಜುನನಿಗೆ “श्रेयान् स्वधर्मो विगुणः परधर्मात् स्वनुष्ठितात्।” “सहजं कर्म कौन्तेय सदोषमपि न त्यजेत्।” “सर्वारम्भा हि दोषेण धूमेनाग्निरिवावृताः” ಎಂದು ಉಪದೇಶಿಸಿರುತ್ತಾನೆ.

**ಕರ್ಮ ಮತ್ತು ಆಚಾರ:—** ಯಾವ ವರ್ಣದಲ್ಲಿಯೇ ಆಗಲಿ ಕರ್ಮ ಮತ್ತು ಆಚರಣೆ ಅಥವಾ ನಿಯಮಗಳೆಂದು ಸ್ವಧರ್ಮವು ಎರಡು ವಿಧವಾಗಿ ತೋರಿಬರುತ್ತದೆ. ತ್ರೈವರ್ಣಿಕರು ನಿತ್ಯಕರ್ಮಾದಿಗಳನ್ನು ಮಾಡುವುದು ಕರ್ಮವೆನಿಸುವುದು. ಶುದ್ಧಿಕ್ರಿಯೆ (ಮಣ್ಣು, ನೀರು ಇವುಗಳಿಂದ ಪವಿತ್ರತೆಯನ್ನು ಸಂಪಾದಿಸುವಿಕೆ) ಆಚಾರದಲ್ಲಿ ಬರುತ್ತದೆ. ಮಡಿಮೈಲಿಗೆಯ ನಿಯಮಗಳನ್ನು ಪರಿಪಾಲಿಸುವುದೂ, ಆಚಾರವೇ ಸರಿ. ಹೀಗೆಯೇ ಶೂದ್ರರು ತ್ರೈವರ್ಣಿಕರ ಸೇವೆಯನ್ನೂ, ಕೃಷಿ, ವ್ಯಾಪಾರ ಇತ್ಯಾದಿಗಳನ್ನೂ ಮಾಡುವುದು ಕರ್ಮ. ಅಸ್ಪೃಶ್ಯತೆಯನ್ನು ಪರಿಪಾಲಿಸುವುದು, ತ್ರೈವರ್ಣಿಕರನ್ನು ಕಂಡೊಡನೆ ನಮಸ್ಕರಿಸುವುದು. ಹಾದಿಯಲ್ಲಿ ಅವರು ಎದುರಿಗೆ ಬಂದರೆ ಅವರೇ ಸರಿದು ಹೋಗುವಷ್ಟು ಅವಕಾಶವನ್ನು ಕೊಡದೆ ತಾನೇ ಸರಿದು ನಿಲ್ಲುವುದು. ದೇವಾಲಯಗಳಲ್ಲಿಯೂ, ತ್ರೈವರ್ಣಿಕರ ಕೂಟದಲ್ಲಿಯೂ ನಿಲ್ಲಬೇಕಾದ ಸ್ಥಾನದಲ್ಲಿ ನಿಲ್ಲುವುದು. ತಮಗೆ ಅಧಿಕಾರವಿಲ್ಲದ ಕೆಲವು ನಿಯಮಗಳನ್ನು ಅಧಿಕಾರಿಗಳ ಮೂಲಕ ಪರಿಪಾಲಿಸುವುದು. ಇತ್ಯಾದಿಗಳು ಆಚಾರದಲ್ಲಿ ತೋರುತ್ತವೆ. ಹೀಗೆ ಉತ್ತಮ ಕರ್ಮ ಮತ್ತು ಆಚಾರಗಳನ್ನು ಎಲ್ಲರೂ ನಡಿಸುತ್ತಿರಬೇಕೆಂಬ ವಿಷಯವಾಗಿ ತೈತ್ತರೀಯಕ ಶಿಕ್ಷಾವಲ್ಲಿಯಲ್ಲಿ, ಯಾವ ಕರ್ಮಗಳು ನಮಗೆ ನಿರ್ದುಷ್ಟವಾದುವುಗಳೋ ಅವುಗಳನ್ನು ನೀನು ಮಾಡತಕ್ಕುದು. ಇತರ ದುಷ್ಟ ಕರ್ಮಗಳನ್ನು ಮಾಡಬಾರದು. ಮತ್ತು “ಯಾವ ಆಚಾರಗಳು ನಮಗೆ ದೋಷರಹಿತವಾದುವುಗಳೋ ಅವುಗಳನ್ನೇ ನೀನು ಪರಿಪಾಲಿಸು; ಇತರ ಆಚಾರಗಳನ್ನು ಹಿಡಿಯಬೇಡ” ಎಂದು ಕರ್ಮ ಮತ್ತು ಆಚಾರ ಇವುಗಳ ಕರ್ತವ್ಯತೆಯನ್ನು ಬೋಧಿಸುವ ಎರಡು ವಾಕ್ಯಗಳು ಇರುತ್ತವೆ. ಆದುದರಿಂದ ಅನಾದಿಸಿದ್ಧವಾದ ಕರ್ಮ ಮತ್ತು ಆಚಾರ ಇವುಗಳನ್ನು ಬಿಡುವುದು ಧರ್ಮವಲ್ಲ.

**ಮಡಿ ಮೈಲಿಗೆಗಳು:—** ತ್ರೈವರ್ಣಿಕರಲ್ಲಿ ವಿಶೇಷತಃ ಬ್ರಾಹ್ಮಣರಲ್ಲಿ ಕರ್ಮ ಮತ್ತು ಆಚಾರ ಇವುಗಳ ತತ್ವಾನುಸಾರ ಮಡಿ ಮೈಲಿಗೆಯ ನಿಯಮಗಳು ಪರಿಪಾಲಿಸಲ್ಪಡುವುವು. ಸ್ನಾನವನ್ನು ಮಾಡಿ ಪವಿತ್ರವಸ್ತ್ರವನ್ನು ಧರಿಸಿ ಭಸ್ಮ ಗೋಪೀಚಂದನಗಳನ್ನು ಹಚ್ಚಿಕೊಂಡು ನಿತ್ಯಕರ್ಮಾದಿಗಳಲ್ಲಿ ನಿರತನಾಗಿದ್ದವನು ಮಡಿಯಲ್ಲಿ ಇರುವವನೆಂದೂ, ಸ್ನಾನ

ನೂಡದೆ ಮುಂಚಿನ ದಿನದಲ್ಲಿ ಧರಿಸಿದ ಅಥವಾ ಅದಕ್ಕೂ ಮೊದಲು ಧರಿಸಿ ಬಿಟ್ಟ ಬಟ್ಟೆಗಳನ್ನು ಸುತ್ತಿಕೊಂಡು ಸಿಕ್ಕ ಜಾಗಗಳಲ್ಲಿ ವ್ಯವಹರಿಸುವವನು ಮೈಲಿಗೆಯವನೆಂದೂ, ತಿಳಿಯುವ ಪದ್ಧತಿಯುಂಟೆಂಬುದು ಎಲ್ಲರೂ ತಿಳಿದುದಾಗಿದೆ. ಮೈಲಿಗೆಯವನು ಮಡಿಯುವವನನ್ನು ಮುಟ್ಟಬಾರದು, ಹೀಗೆಯೇ ಮಡಿಯುವವನು ಮೈಲಿಗೆಯವನನ್ನು ಮುಟ್ಟಬಾರದು. ಕದಾಚಿತ್ ಮಡಿಯುವವನು ಮೈಲಿಗೆಯವನನ್ನು ಮುಟ್ಟಿದರೂ, ಸರಿ. ಮೈಲಿಗೆಯವನು ಮಡಿಯುವವನನ್ನು ಮುಟ್ಟಿದರೂ ಸರಿ, ಮಡಿಯವನು ಪುನಃ ಮಡಿಯಾಗುವುದಕ್ಕೆ ಬರುತ್ತದೆ. ಮೈಲಿಗೆಯವನ ಮೈಲಿಗೆ ಹಾಗೆಯೇ ಉಳಿದು ತಾನೂ ಮಡಿಯವನಂತೆ ಮಡಿಯಾಗುವ ಪ್ರಯತ್ನ ನಡಿಸುವುದು ಕರ್ತವ್ಯವಲ್ಲದೆ ಮಡಿಯುವವನ ಕೂಡ, ನಿನ್ನದೇನು ಮಡಿ! ನೀನು ಬೆಳ್ಳಗಿರುವ ವಸ್ತ್ರವನ್ನು ಉಟ್ಟಿರುವಂತೆ ನಾನೂ ಶುಭ್ರವಸ್ತ್ರವನ್ನು ಸುತ್ತಿಕೊಂಡಿರುವೆನು ನೀನು ಸ್ವಲ್ಪ ಬೆಳ್ಳಗಾಗಿದ್ದರೆ ನಾನು ಸ್ವಲ್ಪ ಕಪ್ಪಾಗಿದ್ದೇನೆ. ನಿನ್ನಂತೆ ನನಗೂ, ಎಲಬು ಚರ್ಮಗಳಿವೆ. ರಕ್ತಮಾಂಸಗಳಿವೆ, ಕೈಕಾಲುಗಳಿವೆ, ಎಂದು ಜಗಳವಾಡುತ್ತಲಿದ್ದರೆ ಮಡಿಯುವವನ ಮಡಿಗೇನೂ ಹಾನಿ ತಟ್ಟದೆ ಮೈಲಿಗೆಯವನ ಮೈಲಿಗೆ ಮಾತ್ರ ಯಥಾಸ್ಥಿತವಾಗಿಯೇ ಇರುವುದು.

ಮೇಲು ವರ್ಣಗಳಲ್ಲಿ ಈ ಪ್ರಕಾರ ಮಡಿ ಮೈಲಿಗೆಗಳ ವ್ಯವಹಾರವಿರುವಾಗ ಮೇಲು ವರ್ಣದವರ ಮೈಲಿಗೆಯ ವ್ಯವಹಾರಕ್ಕೂ ನಾಲ್ಕನೆಯ ವರ್ಣದವರ ಮೈಲಿಗೆಯ ವ್ಯವಹಾರಕ್ಕೂ ವ್ಯತ್ಯಾಸವಿಲ್ಲವೆಂದು ಹೇಗೆ ಹೇಳಬೇಕು? ನಾಲ್ಕನೆಯ ವರ್ಣದವ (ಶೂದ್ರ) ರಲ್ಲಿ ಮಡಿ ಮೈಲಿಗೆಗಳ ಭೇದವನ್ನು ಸ್ವೀಕರಿಸದೆ ಮೈಲಿಗೆಯೊಂದೇ ಪರಿಪಾಲಿಸಲ್ಪಡುತ್ತದೆ. ಮೇಲು ವರ್ಣದವರ ಮಡಿಯುವರಿಗೆ ಅದೇ ವರ್ಣದವರ ಮೈಲಿಗೆಯವರು ಅಸ್ಪೃಶ್ಯರೆನಿಸುತ್ತಿರುವಾಗ ಮೇಲು ವರ್ಣಗಳ ಕರ್ಮ ಮತ್ತು ಆಚಾರ ಇವುಗಳಿಗೂ, ಕಡೆಯ ವರ್ಣದವರ ಕರ್ಮ ಮತ್ತು ಆಚಾರ ಇವುಗಳಿಗೂ, ಎಷ್ಟೋ ಅಂತರವಿದ್ದು ಮೇಲು ವರ್ಣದವರಿಗೆ ಕೇವಲ ಮೈಲಿಗೆ ವ್ಯವಹಾರದವರಾದ ಶೂದ್ರರು ಅಸ್ಪೃಶ್ಯರೆನಿಸಲಾರರೇ ? ಶೂದ್ರರಾದರೂ ಈ ಧರ್ಮವನ್ನು ಒಪ್ಪಿಕೊಂಡು ವ್ಯವಹರಿಸುತ್ತ ಬರಲಿಲ್ಲವೇ ? ಮೈಲಿಗೆಯ ವ್ಯವಹಾರದಲ್ಲಿಯೇ ಇದ್ದುಕೊಂಡು ಕೆಲವರು ನಮ್ಮ ಅಸ್ಪೃಶ್ಯತೆಯನ್ನು ದೂರಪಡಿಸಿರಿ. ನಿಮ್ಮಂತೆ ನಮ್ಮನ್ನು ಸಹ ವ್ಯವಹಾರಕ್ಕೆ ಸೇರಿಸಿಕೊಳ್ಳಿರಿ. ನಿಮ್ಮಂತೆಯೇ ನಾವೂ ಪ್ರಾಣಿಗಳು, ಮನುಷ್ಯರು, ನಿಮಗೆ ಬೇಕಾದವರು, ಮುಂತಾದ ಇಲ್ಲದ ಸಲ್ಲದ ಯುಕ್ತಿಗಳನ್ನು ಮುಂದೆಮಾಡಿ ಮೇಲು ವರ್ಣದವರನ್ನು ನಿರ್ಬಂಧಿಸುವುದೂ, ಸಂಪು ಬೆಳಿಸಿ ಸತ್ಯಾಗ್ರಹದ ನಟನೆ ಮಾಡುವುದೂ, ಎಷ್ಟರಮಟ್ಟಿಗೆ ಸಯುಕ್ತಿಕವೋ, ಅವರಿಗೇ ಗೊತ್ತು. ನಾಲ್ಕುವರ್ಣದವರೂ, ತಮ್ಮ ತಮ್ಮ ಕರ್ತವ್ಯ ಕರ್ಮಗಳಲ್ಲಿಯೇ ನಿರತರಾಗಿ ಕ್ರಮದಿಂದ ಪರಿಶುದ್ಧತೆಯನ್ನು ಪಡೆಯಬೇಕಲ್ಲದೆ ಒಮ್ಮಿಂದೊಮ್ಮೆ ಪವಿತ್ರರಾಗಲಿಕ್ಕೆ ಆತುರರಾಗಬಾರದೆಂದು ಶಾಸ್ತ್ರದೃಷ್ಟಿಯಿಂದ ನಾವಂತೂ ಹೇಳದಿರಲಾರೆವು.

**ಆಕ್ಷೇಪ ಪರಿಹಾರ:**—"ಜನ್ಮನಾ ಜಾಯತೇ ಶೂದ್ರಃ ಸಂಸ್ಕಾರಾದ್ದ್ವಿಜ ಉಚ್ಯತೇ" (ಅರ್ಥ ಜನ್ಮತಃ ಮನುಷ್ಯನು ಶೂದ್ರನಾಗಿಯೇ ಜನಿಸುತ್ತಿದ್ದು ಉಪನಯನ ಸಂಸ್ಕಾರದಿಂದ ದ್ವಿಜನೆನಿಸುತ್ತಾನೆ.) ಎಂದು ಸ್ಮೃತಿ ವಚನವಿರುತ್ತದೆ. ಉಪನಯನ ಸಂಸ್ಕಾರದಿಂದ ಹೊಸ ಜನ್ಮವೇ ಎಂದಂತಾಗುತ್ತದೆ. ಇದೊಂದು ಜನ್ಮ, ಮತ್ತು ಜನನಿಯ ಉದರದಿಂದ ಜನಿಸಿದುದೊಂದು ಜನ್ಮ, ಹೀಗೆ ಸಂಸ್ಕೃತನಾದವನು ಎರಡು ಜನ್ಮಗಳನ್ನು ಪಡೆದಂತಾಗುವುದರಿಂದ ಅವನಿಗೆ ದ್ವಿಜ ಎಂಬ ಅನ್ವರ್ಥಕನಾಮವೇ ಪ್ರಾಪ್ತವಾಗುತ್ತದೆ. ಬ್ರಾಹ್ಮಣ ಕ್ಷತ್ರಿಯ ವೈಶ್ಯರು ವೇದೋಕ್ತ ಸಂಸ್ಕಾರಗಳಿಗೆ ಅರ್ಹರಾಗಿರುವುದರಿಂದ ಈ ಮೂರೂ ವರ್ಣಗಳ ಸಂಸ್ಕೃತ ಪುರುಷರಿಗೆ ದ್ವಿಜರೆಂದು ಅನ್ನುತ್ತಾರೆ. ಸಂಸ್ಕೃತವಾದ ಕುಲದಲ್ಲಿಯೇ ಜನಿಸಿ ಮುಂದೆ ಅವನು ಸಂಸ್ಕಾರವನ್ನು ಹೊಂದಿ ದ್ವಿಜನೇ ಆಗುವ ನಿಶ್ಚಯವಿರುವುದರಿಂದ ಆ ಸಂಸ್ಕಾರಿ ಬಾಲಕರನ್ನು ಶೂದ್ರರಂತೆ ಎಣಿಸುವ ಪದ್ಧತಿ ಇರುವುದಿಲ್ಲ. ಸಂಸ್ಕಾರವನ್ನು ಪಡೆಯುವವರಿಗೆ ವಿಧಿಸಿ ವೇಧಗಳ ನಿಯಮಗಳು ಬಾಲಕರಿಗೆ ಹತ್ತುವುದಿಲ್ಲ. ವಿಧಿನಿಷೇಧಗಳಿಲ್ಲವೆಂದು ಸ್ವೇಚ್ಛೆಯಿಂದ ಮಾಂಸಭಕ್ಷಣಸುರಾಪಾನಗಳನ್ನು ಮಾಡಲಿಕ್ಕೆ ಅವರ ಹಿರಿಯರು ಬಿಡುವುದಿಲ್ಲ. ಹುಡುಗರು ಕುಲಾಚಾರಗಳ ನಿಯಮಗಳನ್ನೇ ಪರಿಪಾಲಿಸುತ್ತಾರೆ. ಆದುದರಿಂದ ಹುಟ್ಟುವಾಗ ಎಲ್ಲರೂ ಶೂದ್ರರಾಗಿಯೇ ಹುಟ್ಟುತ್ತಾರೆಂಬ ಆಕ್ಷೇಪವು ವ್ಯರ್ಥವಾದುದು.

( ಮುಂದೆ ಸಾಗುವುದು ).

# ಬರುತ್ತದೆ ಬರುತ್ತದೆ

( ೬ನೇ ಸಂಚಿಕೆಯಿಂದ ಮುಂದೆ ಸಾಗಿದ್ದು )

ವಿಲ್ಲಿಲ್ಲ. ನನಗೆ ಅದು ಬರಲಿ ಬಾರದಿರಲಿ, ನಾರದನ ಭೂಮಿಕೆಯನ್ನು ಮಾಡುವ " ಈರಪ್ಪನು" ಜ್ವರಮಲಗಿದ್ದನು. ಜ್ವರ ನಿವೃತ್ತಿಯಾದರೂ ಅವನಿಗೆ ತಿರುಗಿ ಆ ಪಾರ್ಟ್ ಸಿಗುವ ಸಂಭವವಿದ್ದಿಲ್ಲ. ಕಾರಣ ಅವನ ಸ್ವರವು ಇತ್ತೀಚೆಗೆ ಶೂನ್ಯವಾಗುತ್ತ ಬಂದಿತು. ನನ್ನ ಪಾಲಿಗೆ ಅನುಕೂಲವೇ ಆಯಿತು.

ಆ ದಿನ ಹಸ್ತಪತ್ರಿಕೆಯಲ್ಲಿ "ಮಾಸ್ತರ ಎಂಬ ೧೦ವರುಷದ ಬಾಲಕನು ನಾರದನ ಭೂಮಿಕೆಯನ್ನು ವಹಿಸುವನು" ಎಂದು ಪ್ರಕಟವಾಯಿತು. ಆಗ ನನಗೆ ಲೆಕ್ಕದಲ್ಲಿ ೧೪ ವಯಸ್ಸಾಗಿತ್ತು. ಆದರೆ ನಾಟಕೀಜನರ ವರುಷಕ್ಕೆ ೮ ||| ತಿಂಗಳೆಂದು ನನಗೆ ಹೊಳೆಯಲಿಲ್ಲ.

ನನಗೆ ಬಲು ಹಿಗ್ಗು—ನನ್ನ ಹೆಸರು ಪಾರ್ಟಿಗೆ ಮೊದಲೇ ಪ್ರಸಿದ್ಧಿಗೆ ಬಂತಲ್ಲಾ ಎಂದು. ಇತ್ತ ಏನಾಗುವುದೋ ಎಂಬ ಭಯ. ಆದರೂ ಧೈರ್ಯದಿಂದ ರಾತ್ರಿ ರಂಗಭೂಮಿಯ— "ರಂಗಪಾರ್ಟಿಗೆ ಹೋದೆ. ಭದ್ರಪ್ಪನು ನನ್ನನ್ನು ಭೂಮಿಕೆಗೆ ಸರಿಯಾಗಿ ಶೃಂಗರಿಸಿದನು. ಕೈಯಲ್ಲಿ ತಂಬೂರಿ ಹಿಡಿದೆ. ಸರಿಗೆಯ ಬದಲು ಕರೀ ದಾರಗಳನ್ನು ಕಟ್ಟಿದ್ದರು. ಆದರೂ ಧ್ವನಿಮಾಡುತ್ತ ಹೊರಟೆ. ಕನ್ನಡಿಯು ಎದುರಿಗೆ ನಿಂತರೆ, ನನ್ನ ಚಿತ್ರವು ಅಹುದೇ ಅಲ್ಲವೋ ಎಂಬಷ್ಟು ಸಂಶಯವಾಯಿತು.

" ಹರಿ ಮಂದಿರದಾ ಮಹಾವಿಭವಗೆ–" ಎಂದು ಗಾನಮಾಡುತ್ತ ಪ್ರಥಮಬಾರಿಗೆ ನಡುಗುವ ಶರೀರದಿಂದ ರಂಗಭೂಮಿಗೆ ನುಗ್ಗವಷ್ಟರಲ್ಲೇ, ಜನರ ಕರತಾಡನದ ಸದ್ದು ಕೇಳಿತು. ಅದು ನವೀನ ನಟ ಮಾಸ್ತರ—ನ ಆಗಮನದ ಸಲುವಾಗಿ ಎಂದು ನನಗೆ ತಿಳಿಯಬೇಕೇ. ಅಂತು ಹಾಡುತ್ತ ಕುಣಿಯುತ್ತ ಹೊರಟೆ. ಅಡಗಿತು ಜನವರ್ಗದ ದೃಷ್ಟಿಯೆಲ್ಲಾ ನನ್ನಮೇಲೆ. ಒಂದು ಹಾಡಿನಲ್ಲೇ ನನಗೆ ಬೆವರು ಬಂದಿತು. ಆದರೆ ಮೂರು ನಾಲ್ಕು " ವನ್ಸಮೋರುಗಳು " ಬಂದುವು. ಇನ್ನು ಧೈರ್ಯವಾಯಿತು. ಅಂತು ಶ್ರೀಮನ್ನಾರಾಯಣ ( ಚಿದಂಬರ ) ನೊಡನೆ ಮಾತನಾಡತೊಡಗಿದೆ.

ಮುಂದೆ "ಪೋಗಿನಾವೀಗ" ಗೋಪಕನ್ನೆಯರು ಬಂದರು. ಅವರೊಡನೆ ನನ್ನ ಮಾತುಗಳು. ಬಳಿಕ ಕುಂಜವನದ "ಚೀನು"—"ಶೀನಲ್ಲ" ಆಗಗಲೇ ಶೃಂಗಾರದ ನುಡಿಗಳ ಮರ್ಮ ವರಿತುಕೊಂಡ ಮಾಸ್ತರ—ನಾದ ನಾನು ಆ ಕಾಲದಲ್ಲಿ ರಹಸ್ಯ ವರಿತು ಅಭಿನಯಿಸಿದೆ.

ಆ ದಿನ, ನಾಟಕ ಮುಗಿಯುವುದರೊಳಗೆ, ಅರಶಿನ ಬೇಡಿ ಯುವಕರೊಬ್ಬರು ರಂಗಸ್ಥಳದಮೇಲೆ ಬಂದು ನನ್ನನ್ನು ಬಹಳ ಸ್ತುತಿಸಿ ನನಗೆ ಹಚ್ಚಡವನ್ನು ಹೊದಿಸಿದರು.

ಆ ದಿನ ನಾಟಕವಾಯಿತು. ಎಲ್ಲರ ಬಾಯಿಯಲ್ಲಿಯೂ ಮಾಸ್ತರ—ನಾದ ನಾನು. ನನಗೇ ಗೊತ್ತಿಲ್ಲದ ನಾನು ! ಆ ಒಂದು ಮೊಕ್ಕಾಂನಲ್ಲಿ ನನಗೆ ೫ ಪದಕಗಳು ಸಿಕ್ಕಿತೆಂದರೆ ! ಈರಪ್ಪಗೆ ತುಂಬಾ ಸಿಟ್ಟು. ಒಂದುದಿನ ಅವನು ಈ ಬೇಸರದಿಂದ, ಲೋಕರಂಜನ ನಾಟಕ ಸಭೆಗೆ ಹೇಳದೆ ಹೋಗಿ ಬಿಟ್ಟನು !

ಇನ್ನು ನನ್ನ ಸುದ್ದಿ. ಹೇಗೂ ಕಂಪೆನಿಯ ಮುದ್ದು. ಹೋದ ಊರ ಹಿರಿಯರೂ ನನ್ನ ಬೆನ್ನು ಚಪ್ಪರಿಸುವವರು. ಸಾಲೆಯ ಹುಡುಗರಂತೂ, ನಮ್ಮ ಮನೆಯೆದುರಿಗಿಳಿದು ಮಾಸ್ತರನ ದರ್ಶನ ತೆಗೆದುಕೊಂಡು, ಕೈತೋರಿಸಿ ಅವನೇ ಎಂದು ಆಡುವುದು. ನಾನವರ ಬಳಿಯಲ್ಲಿ ಮಾತನಾಡಿದೆನೆಂದರೆ ಅವರಿಗೆ ಪರಮಾನಂದ. ನನಗಾಗ ಅನಿಸಿತು—ನಾಟಕಕಂಪನಿಯೆಂದರೆ " ನೆಲದಮೇಲಿನ ಸ್ವರ್ಗ " ವೆಂದು.

## ನನ್ನ ಗೆಳೆಯರು

ನಮ್ಮ ವಾಚಕರಿಗೆ ಇದುತನಕ ಬರೇ ನನ್ನೊಬ್ಬನ ಪುರಾಣವನ್ನು ಕೇಳಿ ಬೇಸರವಾಗಿರಬಹುದು. ಅದಕ್ಕಾಗಿ ನನ್ನ ಗೆಳೆಯರ ಸುದ್ದಿಯನ್ನು ಸ್ವಲ್ಪ ಹೇಳುವೆ. ನನ್ನ ಭೂಸ್ವರ್ಗದ ಗೆಳೆಯರು ಹೇಗಿರಬಹುದೆಂಬ ಕಲ್ಪನೆಯು ಎಲ್ಲರಿಗೂ ಹೊಳೆಯಲಾರದು. ಅವರು ನಿಮ್ಮಂತೆ ಅಲ್ಲ. ಅವರು ಸ್ವತಂತ್ರ ಪಕ್ಷಿಗಳು.

ನಮ್ಮಲ್ಲಿ ವಿದ್ಯಾವಂತರು ಬಹಳ. ನಮ್ಮ ರಂಗಸ್ಥಳದ ನೌಕರರ ಮಟ್ಟಿಗೆ ಬರಹವಿಲ್ಲ. ಉಳಿದವರು ಎಲ್ಲರು ವಿದ್ಯಾವಂತರೇ. ನಾಲ್ಕಾರುಮಂದಿ ನಟರು, ಇಂಗ್ಲಿಷು ಎರಡನೆಯ ತರಗತಿಯಲ್ಲಿ ಈಸಿದ್ದರಂತೆ. ಉಳಿದವರಿಗೆ ಒಂದೆರಡು ಬಾರಿ ಮೈಸೂರ ಸೀಮೆಯ ಪ್ರವಾಸದಿಂದ ನೇಕಡಾ ೫೦ ರಷ್ಟು ಇಂಗ್ಲಿಷು ಬರುತ್ತಿತ್ತು. ಬರಹದ ಮಟ್ಟಿಗೆ ಸ್ವಲ್ಪ ಕೊರತೆ. ಕನ್ನಡ ಭಾಷಾವಾಙ್ಮಯವು ಅವರಿಗೆ ಮನೆದಾಸಿಯಂತೆ. ಕೆಲವರಿಗೆ ಎಲ್ಲಾ ಅಕ್ಷರಗಳ ಮೇಲೂ ಸಮದೃಷ್ಟಿ. ಕೆಲವರು ಪರರಿಂದ ಪಾರ್ಟನ್ನು ಹೇಳಿಸಿ ಕಲಿತ ವಿದ್ಯಾವಂತರು. ಇಷ್ಟರಿಂದಲೇ ಉಚ್ಚತರಗತಿಯ ವಿದ್ಯಾವಂತರಾಗಿ, ನಮಗೆಲ್ಲೆಲ್ಲಿಯೂ ಮಾನ್ಯತೆ. ಸಂಗೀತ ವಿದ್ಯೆಯು ನಮ್ಮಲ್ಲಿ ತಕ್ಕಷ್ಟು

ಪ್ರಚಾರವಿದೆ. ಬಹುಮಂದಿಗೆ ಕಂಠಸ್ವರವಿಲ್ಲ. ಆದರೂ ಮಧುರವಾದ ಗಾನ. ಇಂಪಿರಲಿ ಏನೇ ಇರಲಿ, "ಒನ್ಸವೋರ" ಸಿಕ್ಕೇ ಸಿಗುವುದು.

ನಮ್ಮ ಉಡಿಗೆತೊಡಿಗೆಯ ಅಟ್ಟಹಾಸವೂ ಎಂತಹ ರಾಜಕುಮಾರನಿಗೂ ಅಸೂಯೆಯನ್ನು ಹುಟ್ಟಿಸಬಹುದು. ಅದನ್ನು ವರ್ಣಿಸಲು ಕಾಲಿಂದೇರಿ ತಲೆಯವರೆಗೆ ಹೋಗುವೆ. "ಕ್ರೋಮ ಲೆದರ ಶೂ" ಇದು ನಮ್ಮವರಿಗೆ ತಪ್ಪದೆ ಉಂಟು. ನಿತ್ಯವೂ ಅದನ್ನು "ಪಾಲಿಸು" ಮಾಡಬೇಕು. ನಮ್ಮ ಹಳೆಯ ಶಿಸ್ತಿನವರು ಪಂಜೆ ಉಡುವರು. ನಮ್ಮ ಮೈಸೂರ ಮಂದಿ ಜರತಾರಿ ಧೋತ್ರಗಳನ್ನು ಉಳಿದವರು–ಮಾಂಚಿಸ್ಟರ ಪಂಜೆಗಳನ್ನು. ಇನ್ನು ಹೊಸ ಶಿಸ್ತಿನ ಪಂಗಡವು ಮುಸಲ್ಮಾನೀ ತರಹದ ಸುರವಾಲನ್ನುಡುವರು. ಮೈಮೇಲೆ ಉತ್ತಮ ರೇಷ್ಮೆ ಷರಾಯಿ. ಅದರ ಮೇಲೆ, ಮೊಣಕಾಲವರೆಗೆ ತೂಗುವ ಚಿಕ್ಕ ಅಂಗಿ, ಒಂದು ಅಂಗಿಯ ಬೆಲೆ ೨೦–೩೦ ರುಪಾಯಿಗಳಾಗಬಹುದು. ಇನ್ನು ತಲೆಗೆ ಕೆಲವರು ಸರಾಸರಿ ೧ ಅಡಿ ಎತ್ತರದ ಟೋಪಿಯನ್ನಿಡುವರು. ಪ್ರಸಂಗವಶಾತ್ ಇದು ಕುಳಿತುಕೊಳ್ಳಲು ಕುರ್ಚಿಯಾಗಲು ಸಾಕಷ್ಟು ಎತ್ತರವಿದೆ. ಇಲ್ಲದಿದ್ದರೆ ಜರತಾರಿಯಿಂದ ಪೇಟಾ. ಹಿಂದೆ ಹನುಮಂತನ ಬಾಲದಂತೆ ಅವರ ಒಂದ ಸೆರಗು ತೂಗುತ್ತಿರಬೇಕು. ನಮ್ಮ ಮೈಸೂರ ಮಂದಿ. ಅವರಿಗೆ ನಾಚಿಕೆ ಹೆಚ್ಚೋ ಏನೋ ತಲೆಗೊಂದು ಕಾಶ್ಮೀರ ಶಾಲಿನ ಮುಸಕುಹಾಕುವರು. ಇದಲ್ಲದೆ ನಮ್ಮ (ವಜ್ರದಂತಿರುವ ಪುಷ್ಯರಾಗದ) ಬಂಡಿಗಳೇನು, ೧೦ ಬೆರಳುಗಳಿಗೆ ೧೨ ಉಂಗುರಗಳೇನು ! ಕೆಲವರ ಕೈಗಳಿಗೆ ಚಿನ್ನದ ಬೇಡಿಗಳು ಅಲ್ಲ ಬಳೆಗಳು ಇವೆ.

ನಮ್ಮ ಮಂಡಳಿಯಲ್ಲಿ ಬಹುಮಾನಿತನಲ್ಲದವನೆಂದರೆ ನಮ್ಮ ಗೇಸ್ ದೀಪದ ರಕ್ಷಕನು. ಅವನಿಗೂ ಮುಂದೆ ಸಿಗಬಹುದು. ನಮ್ಮ ಮಂದಿಯು ಇಲ್ಲಿಲ್ಲ–ಲಂಕಾದ್ವೀಪದಲ್ಲೇ ತಿರುಗಲಿ–ಆಗಲೇ ನಮ್ಮ ವೇಷಗಳಿಂದ ನಾವು "ರಂಗಭೂಮಿಯ ರಂಗಿನ ಜನರೆಂ"ದು ಅವರಿಗೆ ಗೊತ್ತು.

ಮಂಡಳಿಗೆ ಪ್ರಥಮಬಾರಿಗೆ ಸೇರಿದ ಒಂದೆರಡು ತಿಂಗಳು ಸ್ವಲ್ಪ ಸಂಗೀತ. ಅಭಿನಯ ಪರಿಚಯಮಾಡಿಕೊಳ್ಳುವ ರಗಳೆ. ಮುಂದೆ ನಾವು ಅಂದಂತೆ ಆ ವಿದ್ಯೆಗಳು.

ನಮ್ಮಲ್ಲಿ ನಿತ್ಯ ಎಲ್ಲರೂ ನಾಟಕವಿದ್ದ ಮರುದಿನ ಬೆಳಿಗ್ಗೆ ೧೧.ಘಂಟೆಗೆ ಏಳುವೆವು. ಇಲ್ಲದ ದಿನ ಪ್ರಾತಃಕಾಲ ೯ಘಂಟೆಗೆ ಬೇಗನೆ ಏಳುವೆವು. ಎದ್ದಾಯಿತೆಂದರೆ ೧೦॥ ಯೊಳಗಾಗಿ ಕಾಫಿ ತಿಂಡಿ ಮುಗಿಸಿ, ಮೇನೇಜರನು ಕಾಟಕೊಟ್ಟರೆ ಇಷ್ಟು 'ತಾಲಿಮು, ಮುಂದೆ ಸ್ನಾನ. ನಮ್ಮ ಬಟ್ಟೆಬರೆಗಳಲ್ಲಿ ಒಂದು ಕಲೆಯನ್ನು ನೀವು ಕಾಣಲಾರಿರಿ. ಸರಿ ೧ ಘಂಟೆಗೆ ನಾವು ಊಟಮಾಡಿ, ನಮ್ಮ ಹಾಸಿಗೆಯಮೇಲೆ ಉರುಳಾಡುವೆವು. ತಿರುಗಿ ವ್ಯಾಸಂಗವಿದ್ದರೆ ೪ ಘಂಟೆಗೆ ಏಳುವುದು. ಇಲ್ಲದಿದ್ದರೆ ೫ರ ಮೊದಲು ಏಳುವುದು ನಮ್ಮ ಆರೋಗ್ಯಶಾಸ್ತ್ರಕ್ಕೇ ವಿರುದ್ಧ. ತಿರುಗಿ ಕಾಫಿ. ಕೊನೆಗೆ ಸಂಜೆ ೮–೯ರ ತನಕ ಸ್ವಲ್ಪವಿಹಾರ.

'ನಂದಾದೀಪ' ವೆಂಬು ನೀವು ಕೇಳಿರಬಹುದು. ಅದರಂತೆ ನಮ್ಮಲ್ಲಿ ನಂದಾನಿದ್ರೆಯ ಪ್ರತಾಚರಣೆಯು ಇದೆ. ಇನ್ನು ನಮ್ಮ ಮನೆಗಳಲ್ಲಿ ನಾವಾಗಿ ಕಸಬರಿಗೆಯನ್ನು ಹಿಡಿಯುವ ಮೂರ್ಖತನಕ್ಕೆ ಹೋಗುವುದಿಲ್ಲ. ನಮ್ಮ ಮಂಡಳಿಯ 'ನಾಗಪ್ಪ'ನು ಆ ಕೆಲಸಕ್ಕೆ ನಿಯಮಿಸಲ್ಪಟ್ಟವನು. ಅವನಿಗೆ ಕಸತೆಗೆಯಲು ವಾರಕ್ಕೊಮ್ಮೆ ಅನುಕೂಲಿಸುವುದು.

ನಮ್ಮ ಜನರಿಗೆ ಅಗ್ನಿಸಂಸ್ಕಾರದಲ್ಲಿ ಬಹಳ ಇಷ್ಟ. ಆಕ್ಸರ ಜನರು ಬೀಡಿ ಎಳೆಯುವುದಿಲ್ಲ. ( ಬರೇ ಸಿಗರೆಟ್ಟುಗಳನ್ನು ) ನಮ್ಮ ಚಿದಂಬರ ಮತ್ತು ಅವನಿಗಿಂತಲೂ ಕಿರಿಯ ಬಂಧುಗಳಿಬ್ಬರು ಆ ವಿದ್ಯೆಯಲ್ಲಿ ಘನಪಾಠಿಗಳು. ಅವರಿಂದ ನಾನೂ ಸಂಸ್ಕೃತನಾದೆ. ನಮ್ಮ ಮಂಡಳಿಯು ದಾವಣಗೆರೆಯಿಂದ ಹೊರಡುವ ಮುಂಚಿನದಿನ ನಮ್ಮ ಮೇನೇಜರರ ಮನವಿಯ ಮೇರೆಗೆ! ಸೇನಿಟರಿ ಇನಸ್ಪೆಕ್ಟರರೂ ನಮ್ಮ ಮನೆಯ ಬಳಿಗೆ ಬಂದಿದ್ದರು. ೨॥ ತಿಂಗಳ ನಮ್ಮ ಮುಕ್ಕಾಂನಲ್ಲಿ ನಾವು ಅವರ ಸಲುವಾಗಿ ಅರ್ಧ ಗಾಡಿ, ಬರೇ ಹೊಗೆಬತ್ತಿಯ ತುಂಡುಗಳನ್ನಿರಿಸಿದ್ದೆವು. ಮುನ್ಸಿಪಲ್ ಕೆಲಸ ಮಾಡುವ ಪಂಚಮ ಬಾಲಕರಿಗೆ, ಇನ್ನೆರಡ ವರುಷ ಹೊಗೆಬತ್ತಿಯ ಸಪ್ಲಾಯೇ ಬೇಡವಂತೆ!

ನಮ್ಮ ಮಂಡಳಿಯ ಹಿರಿಯರಲ್ಲಿ ಕೆಲವರು ತೀರಾ ನಿಷ್ಠಾವಂತರು. ಅವರು ನೀರಿನಲ್ಲಿ ಕ್ರಿಮಿಗಳ ಪರಮಾಣುಗಳವೆಯೆಂಬುವ ವೈದ್ಯಕೀಯ ಅಭಿಪ್ರಾಯವನ್ನು, ಕೇಳಿ ಜಲಪಾನವನ್ನೇ ಬಿಟ್ಟಿರುವರು. ಅದರ ಬದಲೆಲ್ಲಾ ವಿಲಾಯತಿಯ ಕಾದಿಟ್ಟ ಸೀಸೆಗಳಲ್ಲಿ ಬರುವ ಕೆಂಪು ನೀರನ್ನು ಕುಡಿಯುವರು. ನಮ್ಮ ಮಂಡಳಿಯಲ್ಲಿ ತೀರಾ ಚಿಕ್ಕವನೆಂದರೆ "ಚಿಕ್ಕು" ಎಂಬುವನು. ಅವನು "——ಳೂರಿನ" 'ಸುಸೇವಿತ' ನಾಟಕ ಮಂಡಳಿಯಿಂದ ನಮ್ಮಲ್ಲಿಗೆ ಬಂದಿದ್ದನು. ಆ ಕಂಪೆನಿಯು ಈಗ ಸುರಸೇವಿತವಂತೆ ಅದರ ಮೇನೆಜರರು ನಮ್ಮ ಚಿಕ್ಕುವಿಗೂ ಅಂತಹ ಪಾನೀಯವನ್ನು ಕೊಡಿಸಿದ್ದರಂತೆ !

ನನ್ನ ಗೆಳೆಯರ ಪೆಟ್ಟಿಗೆಗಳನ್ನು ಕಂಡಿರುವಿರಾ ? ಅದರಲ್ಲಿ ನೀವು ಕಾಣುವ ಕೆಲವು ವಸ್ತುಗಳೆಂದರೆ—೧ ಉತ್ತಮ ಕಾಮ ನಿಯ ಹೇರ ವಾಯಿಲ "೨ ಆಟೋದಿಲ್ ಬಾಹರ್, ೩ ಹಣಿಗೆ ಕನ್ನಡಿ ಇತ್ಯಾದಿ. ೪ ಹರಿಶ್ಚಂದ್ರನ ಗಡಿಯಾರ. ಅಂದರೆ ಆಶ್ಚರ್ಯವಾಗುವುದೇ! ನಿಜ. ಅದಕ್ಕೆ ಆ ಹೆಸರೇ ಒಪ್ಪುವುದು. ಎಷ್ಟು ಜನ ವಿಶ್ವಾಮಿತ್ರರು ಬಂದು, ಅದರ ಕಿವಿಯನ್ನು ಹಿಡಿದು ತಿರುವಿದರೂ ಮರುನಾತೆತ್ತದೆ, ಸತ್ಯಸಂಧ ಹರಿ ಶ್ಚಂದ್ರನಂತೆ ಒಂದೇ ಘಂಟೆಯನ್ನು ತೋರಿಸುವುದು. ೫ ಇನ್ನು ಕೆಲವು ಧಾತುಪೌಷ್ಟಿಕ, ಕಾಮವರ್ಧಕ ಔಷಧಗಳು. ನಮ್ಮವರ ಪಠ್ಯಪುಸ್ತಕವಾದ "ಕಾಮಶಾಸ್ತ್ರ" ಇವುಗಳ ಪ್ರತಿ ಗಳೂ ನಿಮಗೆ ಕೆಲವರಲ್ಲಿ ಸಿಗಬಹುದು. ಇನ್ನು ಕೆಲವುಬಾರಿ, ಕೆಲವು ನಾರೀನೈಸರ್ಗಿಕ ಚಿತ್ರಗಳಿರಬಹುದು.

ಒಟ್ಟಾರೆ ನಮ್ಮ ಮಂದಿಯೆಂದರೆ 'ಅನುರಾವತಿಯವ'ರೇ.

## ೬ ತಾಲಿಮು

ನನ್ನ ಅನುಭವವನ್ನುಸುರುವಾಗ ನಾನು ನಮ್ಮ ಜೀವ ನದ ಮುಖ್ಯ ಸಾಧನವಾದ ನಾಟಕ ಪ್ರದರ್ಶನದ ಸಿದ್ಧತೆ ಯನ್ನು ಹೇಗೆ ಮಾಡುವೆವೆಂದು ನಿಮಗೆ ಕುತೂಹಲವಾಗ ಬಹುದು, ಹೇಳುವೆನು. ನಮ್ಮಲ್ಲಿ "ಹೊಸ ನಾಟಕ" "ಹಳೆ ನಾಟಕ"ವೆಂದು ಎರಡುವಿಧ. ಮೊದಲು ಹಳೆ ನಾಟ ಕದ ಸುದ್ದಿ—

ಇದಕ್ಕೆ ಬಹಳ ಖರ್ಚಿಲ್ಲ. ೧೮೫೭ನೇ ಇಸ್ವಿಯಲ್ಲಿ ಅಚ್ಚಾದ ಬೆಂಗಳೂರ ಚಿಕ್ಕಪೇಟೆ ರಾಮಸ್ವಾಮಿ ಅಂಡಕೋ ಇವರಿಂದ. ಧ್ರುವ ಚರಿತ್ರೆ, ಪಾರಿಜಾತ, ಲಂಕಾದಹನ ಯಾವು ದಾದರೂ ಒಂದು ೬ ಆಣೆ ಪುಸ್ತಕ ತರಿಸಿದರಾಯಿತು. ನಮ್ಮ ಮಾಲಕರು ನಮ್ಮನ್ನು ಸುತ್ತಲೂ ಕುಳ್ಳಿರಿಸಿಕೊಂಡು ಒಂದು ದಿನ ಲಂಕಾದಹನದ ಭೂಮಿಕೆಯನ್ನು ಹಂಚಿದರು. "ಭದ್ರಪ್ಪ ನೀನು ಆಂಜನೇಯ. ರಾಜು—ನೀನು ಸ್ವಯಂಪ್ರಭೆ. ನಾನು ರಾವಣ ಏ - (ಅಂದರೆ ನಾನು) ಸೀತೆ" ಹೀಗೆಲ್ಲಾ ಬಲ್ಪಾಡೆ ಯಾಯಿತು. ಅವರು ಪುಸ್ತಕದ ಆಧಾರದ ಮೇಲಿಂದ ಕಥಾಸಂ ವಿಧಾನವನ್ನು ತಿಳಿಸಿ, 'ನೀನು ಹೀಗೆ ಮಾತನಾಡು' 'ನೀನು ಹೀಗೆ' ಅಂದರು. ಇನ್ನು ಹಾಡಿನ ವಿಚಾರ. ಆಂಜನೇಯನಿಗೆ ಆ ನಾಟಕದ ಜಗಜ್ಜನಿತ ಕಂದ, ವೃತ್ತಗಳ ಗೊತ್ತಿತ್ತು— ಆದರೂ ನಾಟಕವನ್ನು ಬೆಳಗಿನವರೆಗಾಡುವಷ್ಟು ಸ್ಟಾಕು ಇದ್ದಿಲ್ಲ. ಅದಕ್ಕೆ ಅವರು ಎರಡು ತ್ಯಾಗರಾಜ ಹಾಡು ಅಂದರು. ಸ್ವಯಂಪ್ರಭೆಗೆ (ರಾಜು) ಹಿಂದುಸ್ತಾನಿ ಗಾನದ ಮೇಲೆ ಪ್ರೇಮ. ಅದಕ್ಕಾಗಿ ನೀನು "ಜಾವೂಜಾಲೋಟಾ' ಬರುವಾಗ ಮತ್ತು ಹೋಗುವಾಗ" ಕೃಷ್ಣಪ್ರೀಯಾ ಹೈತೋ ಮೇರಾ "ಹಾಡು" ಅಂದರು.

ನನಗೆಲ್ಲಾ ಹೊಸಹಾಡುಗಳು. ಅದಕ್ಕಾಗಿ— "ನಾಟಕ ಎಂದು" ಅಂದೆ. "ಇನ್ನು ೬—೮ ತಾಸುಗಳಿವೆ" ಎಂದರು. ನನಗೆ ಆಶ್ಚರ್ಯವಾಯಿತು! ಅಷ್ಟು ಬೇಗನೆ ಕಲಿಯಲು ಸಾಧ್ಯವೇ ಎಂದು. ಅವರು ನಗುತ್ತ ಬಿಡು. ರಾವಣ ಬರಲು ದೂರಸಾರು ಎಂದು "ದೂರಮರಿಯಾ ಹಾಡ ಹೇಳು" ಎಂದರು.

ಅಂದೇ ರಾತ್ರಿಯೇ "ಲಂಕಾದಹನ"ವಾಯಿತು. ಶೀನೆರಿ ಗಳ ಗದ್ದಲವೇ ಗದ್ದಲ. ಆದಿನ ಕಲೆಕ್ಶನ್ ೮೦೦ ರೂಪಾಯಿ ಆದ್ದರಿಂದ ನಾಟಕ ಚೆನ್ನಾಯಿತು.

ಇನ್ನು ಹೊಸನಾಟಕದ ತಾಲಿಮಿನ ವಿಚಾರ ಹೇಳುವೆನು. ಇದು ಸ್ವಲ್ಪ ಕಠಿಣ. ಮತ್ತು ಒಂದು ಒಂದುವರೆ ತಿಂಗಳು ತನಕ ಹಿಡಿಯುವ ಕೆಲಸ. ಮರಾಠಿಯಲ್ಲಿ ಹೊಸ ನಾಟಕ ಗಳಾಗುತ್ತಿವೆಯೆಂದು ಕೇಳಿ ನಮ್ಮ ಮಾಲಕರು ಹುಬ್ಬಳ್ಳಿಗೆ ಒಂದು ಮರಾಠಿ ಕಂಪನಿ ನಾಟಕ ನೋಡಲು ಹೋಗಿದ್ದರು. ಡ್ರೇಸ್ಸು ಚೆನ್ನಾಗಿದ್ದಿಲ್ಲವಂತೆ. ಆದರೆ ಕಥಾ ಪ್ಲಾಟ ಸೊಗಸಾ ಗಿತ್ತೆಂದು? ಆ ದಿನದ ನಾಟಕವಾದ ಚಂದ್ರಗ್ರಹಣದ ಪುಸ್ತಕ ತಂದರು. ನಮ್ಮ ಸ್ಟೇಜಿನ ಜನರಲ್ಲಿ—ಒಬ್ಬನು ಬೆಳಗಾಂವಿ ಯವನು. ಅವನಿಗೆ ಮರಾಠಿ ಕುರುಡು ಕುರುಡು ಬರುತ್ತಿತ್ತು. ಅವನ ಸಹಾಯದಿಂದ ನಮ್ಮ ಭದ್ರಪ್ಪನು ಅದನ್ನು ಭಾಷಾಂತ ರಿಸಿದನು. ಅಂತಹ ನಾಟಕಗಳು ಹೆಚ್ಚಾದರೆ ನಿಜವಾಗಿ ನಮ್ಮಕನ್ನಡಿಗರಿಗೂ ಮರಾಠಿಗರಿಗೂ ನೆಂಟಸ್ತಿಗೆಆಗಲು ಬಲು ಸುಲಭ. ಇರಲಿ, ನಾಟಕದ ಪಾರ್ಟನ್ನು ಹಂಚಿಕೊಟ್ಟರು. ನಾಟಕವನ್ನು ಬರೆದವರು ಹೇಗೂ ಕವಿಗಳು, ಭಾಷಾಂತರಿ ಸಿದವ ನಮ್ಮ ಭದ್ರಪ್ಪ. ಆದರೆ, ಪಾರ್ಟು "ಪ್ರತ್ಯೇಕ ಬರೆದು ಕೊಟ್ಟವರು, ಅವರು ತಿರುಗಿ ಕವಿಗಳೇ. ಇನ್ನು ಓದುವವನು 'ವಿಧ್ವಂಸ'— (ವಿದ್ವಾಂಸ) ಇವರಿಂದ ಮೂಲಕವಿಯಿಂದ ನಟನ ಕರಗಳಿಗೆ ಬಂದು, ಜನರಬಾಯಿಗೆ ಬೀಳುವುದರಲ್ಲಿ, ಅದು

ಎಷ್ಟೋ ಸುಧಾರಣೆಯನ್ನು ಹೊಂದುವುದು. "ಕಾಯ ಹಕೀ ಕತ್" ಎಂಬ ಕವಿಯ ಮಾತನ್ನು ಭದ್ರಪ್ಪ 'ಏನು ಹಕೀ ಕತು' ಎಂದಿರಿಸಿದನು. ಪ್ರತಿ ತೆಗೆಯುವವನು "ಏನೋ ಹಕ್ಕೀಕತ್ತು, ಎಂದು ಬರೆದನು. ನಟನು" ಮೈನಾ ಹಕ್ಕಿಯ ಕತ್ತು "ಎಂದು ಸುಧಾರಿಸಿ ಜನರಿಗೆ ಕೊಟ್ಟನು. ಇದರಿಂದ ನಿಮಗೆ ತಿಳಿಯಬಹುದು ಸಾಹಿತ್ಯದ ಕಾರ್ಖಾನೆಯೆಂದು.

ಪಾರ್ಟು ಹಂಚಿಕೊಟ್ಟು ಮಾಲಕರು ಉಳಿದ ಕೆಲಸ ವನ್ನು ಮಾಸ್ತರರಿಗೆ ಕೊಟ್ಟು ಹೋದರು. ಉಳಿದ ಕೆಲಸ ತಾಲಿಂಮಾಸ್ತರದ್ದು. ಅವರು (ಭದ್ರಪ್ಪ)—ನಿತ್ಯವೂ ಮಧ್ಯಾಹ್ನ ತಾಲಿಂ ಅಂದರು. ನಾವು ನಿದ್ರಿಸಿ ಬರುವಾಗ ೩ ರಿಂದ ೪ ರೊಳಗೆ ಆಗುತ್ತಿತ್ತು. ೫ ಘಂಟೆಗೆ ನಮ್ಮ ತಾಲಿಂ ಮುಗಿ ಯತಕ್ಕದ್ದು. ನಾವು ನಮ್ಮ ನಮ್ಮ ಭೂಮಿಕೆಗಳನ್ನು ಅಲ್ಲಿ ಓದುತ್ತಿದ್ದೆವು. ಇತ್ತ, ನಮ್ಮ ಕವಿತೆಯು ಮುಂದೆ ಮಾಸ್ತ ರನು ನಿಲ್ಲಲಾರ. ಅಂತು ಘಂಟೆ ೫ ಆಯಿತೆಂದರೆ, ನಾವೆದ್ದೇ ಬಿಡುವೆವು. ಕೆಲವರ ಘಡಿಯಾರದಲ್ಲಿ ಆಗ ೬ ಘಂಟೆ ಯಾಗು ವುದೂ ಉಂಟು. ನಮ್ಮಲ್ಲಿ ಹಿರಿಯರಲ್ಲಿ ಒಬ್ಬರ ತಪ್ಪನ್ನು ಇನ್ನೊಬ್ಬರು ತಿದ್ದುವುದೂ ಕಡಿಮೆ. ಅಂತು, ನಮ್ಮನ್ನು (ಚಿಕ್ಕ ವರನ್ನು) ಎಲ್ಲರೂ ಒಮ್ಮೆಗೇ ಬಾಯಿತೆರೆದು ತಿದ್ದುವರು.

೧೫—೨೦ ದಿನ ನಮ್ಮ ತಾಲಿಮು ನಡೆಯಿತೆಂದರೆ ಕೆಲವ ರಿಗೆ ಬಾಯಿಪಾಠ ಬರುವುದು. ಇಷ್ಟರಲ್ಲಿ ಊರೆಲ್ಲ "ಚಂದ್ರ ಗ್ರಹಣದ" ಸುದ್ದಿ. ಕೆಲವರು ಅರಶಿನ ಟೀಕಿಟಿನವರು "ನಾಳೆ ಯೇ ಅದನ್ನು ಆಡಬೇಕು. ನಮ್ಮ ಡಿ. ಸಿ. ಈ ಊರಿಗೆ ಬರುವರು. ತಿರುಗಿ ಆ ಸಂಧಿ ಸಿಗದು" ಎಂದರು. ಸರಿ! ಮಾಲಕರು ಒಡಂಬಟ್ಟರು. ಆದರೆ ನಮ್ಮ ಮಾಸ್ತರರಿಗೆ ಧೈರ್ಯವಿಲ್ಲ.

ಅಂತು ಆ ರಾತ್ರಿ ಫರದೆ ಬಿಟ್ಟು ರಂಗತಾಲಿಂ ಆಗ ಬೇಕೆಂದು ನಿಶ್ಚಯ. ಒಂಭತ್ತಕ್ಕೆ ನಾವು ಸ್ಟೇಜಿಗೆ ಬಂದೆವು. "ಗೇಸನ್ನು ಹಚ್ಚುತ್ತಿದ್ದರು. ಆಳುಗಳನ್ನು ಯಜಮಾನರು ಕೂಗಿದರು ಯಾರೂ ಇನ್ನೂ ಬಂದಿರಲಿಲ್ಲ. "ಅವರ ಮನೆ ಹಾಳಾಗ. ಇರಲಿ, ಭದ್ರಪ್ಪ. ಸೀನ್ ಲಿಸ್ಟು ನಮ್ಮ ಲಿಂಗಣ್ಣಗೆ ಕೊಟ್ಟರೆ ಎಲ್ಲಾ ಸರಿಹೋಗುವುದು. ನೀವು ಆರಂಭಿಸಿರಿ" ಎಂದರು. ಬಹುಮಟ್ಟಿಗೆ ಪುಸ್ತಕ ಬಲದಿಂದ ೧॥ ಅಂಕ ಮುಗಿಯಿತು. ಅಷ್ಟರಲ್ಲಿ ಹಾಳಾದ ತಾಲೂಕು ಕಛೇರಿಯ ಘಂಟೆ ೨ ತಾಸು ಬಾರಿಸಿತು, ನಾವು ಉಳಿದದ್ದು ನಾಳೆಗೆಂದು ಮನೆಗೆ ಹೊರಟೆವು. ಮರುದಿನ ಶನಿವಾರ. ಹೊಂ ಬೆಳಗೂ ಆಯಿತು. ಆ ದಿನ ತಿರುಗಿ ೧ ಅಂಕ ತಾಲಿಮು ನಡೆಯಿತು. ಉಳಿದ ಸ್ವಲ್ಪ ಅಂಕ ರಾತ್ರೆಗೇ ಸರಿ—ಎಂದೆವು.

ಮಧ್ಯಾಹ್ನ ೧೨ ತಾಸಿನೊಳಗೆ ಎಲ್ಲಾ ಕುರ್ಚಿಗಳು "ರಿಸ ರ್ವ" ಆಗಿತ್ತು. ರಾತ್ರಿ ಆಯಿತು. ಪ್ರೇಕ್ಷಕ ವಿಭಾಗವು ಜನ ರಿಂದ ಕಿಕ್ಕಿರಿದು ಹೋಗಿತ್ತು. ಜನರ ಗದ್ದಲವೇ ಗದ್ದಲ. ಡಿ. ಸಿ. ಯವರು ಬಂದೇ ಬಂದರು. ಅವರ ಹಿಂದೆ ೧೦—೨೦ ಮಂದಿ. ತಾಸು ೧೦ ಆಯಿತು. ನಾಟಕ ಆರಂಭವಾಗಲಿಲ್ಲೆಂದು ಜನರ ಗದ್ದಲ. ಇತ್ತ ಬಂದವರಿಗೆ ಕುರ್ಚಿ ಇಲ್ಲವೆಂದು ನಮ್ಮ ಮಾಲಕರ ಸಂತಾಪ. ಅಂತು ಡಿ. ಸಿ. ಯವರನ್ನು ಕೂಡ್ರಿಸಿ ಸನ್ಮಾನಿಸಿ ಉಳಿದವರನ್ನು ರಂಗಸ್ಥಳದೊಳಕ್ಕೆ ಕರತಂದರು. ಅವರು ಪಾಪ 'ಸ್ಯಾಡ್‌ವಿಂಗ್ಸ' ಬದಿಗಳಿಂದ ನೋಡತೊಡಗಿ ದರು. ಢಂ ಎಂಧು "ಪಟಾಸು" ಹೊಡಿಯಿತು. ನಾಟಕಾ ರಂಭ ಗದ್ದಲಲ್ಲಿ ಒಂದು ಅಂಕ ಆಗುವ ತನಕ ಡಿ. ಸಿ. ಯವರಿದ್ದರು. ಮುಂದೆ ಮುಂದೆ ಮನೆಗೆ ಹೋಗಲು ಹೊರ ಟರು. ಮೇನೇಜರರು ಅವರನ್ನು ರಂಗಪಾರ್ಟಿಗೊಯ್ದು, ಉಪಹಾರದಿಂದ ಸತ್ಕರಿಸಿದರು. ನಾನು ಡಿ. ಸಿ. ಯವರ ಬಳಿ ಯಲ್ಲಿ ಶೃಂಗರಿಸಲ್ಪಟ್ಟು ನಿಂತಿದ್ದೆ. ಅವರು ನನ್ನ ಬೆನ್ನನ್ನು ಚಪ್ಪರಿಸಿ "ನಿನ್ನ ಪಾರ್ಟು ಚೆನ್ನಾಗಿತ್ತು" ಎಂದರು. ನಾನಿನ್ನೂ ರಂಗಸ್ಥಳ ಪ್ರವೇಶಿಸಿದ್ದಿಲ್ಲ. ಪ್ರಾಯಶಃ "ಚೆನ್ನಾ ಗುತ್ತೆ" ಅಂದರೆಂದು ಊಹಿಸಿದೆ. ಅಂತು ಅವರು ಹೊರಡು ವಾಗ "ಚೆನ್ನಾಯಿತು. ಚೆನ್ನಾಯಿತು" ಅಂದರು. ಉಪಾಹಾ ರವೋ ನಾಟಕವೋ ತಿಳಿಯದು.

ನಟ ಜನರಂತು ಆ ದಿನ ಉಟ್ಟದ್ದೇ ಉಡಿಗೆ ಆಡಿದ್ದೇ ಮಾತು. ಹಾಡಿದ್ದೇ ಹಾಡು— ಬಿಟ್ಟರೆ ಗಡಿಬಿಡಿ. ಪಾರ್ಟು ಸಿದ್ಧವಾಗದಿದ್ದಾಗಲೆಲ್ಲಾ "ಲಿಂಗಣ್ಣ"ನು ಅಂಕ ಬಿಡುತ್ತಿದ್ದ. ಹಾಗೆ ಮಾಡಿದಾಗಲೆಲ್ಲಾ ಗದ್ದಲ ಹೆಚ್ಚು. ಅದೊಂದು ಲಾಭವೇ ಆಯಿತು.

ನಾಟಕಾಂತ್ಯವಾಗುತ್ತೆನ್ನುವಷ್ಟರಲ್ಲಿ ಖುರ್ಚಿ ಕುಣಿಯಲ್ಲಿ ಕುಳಿತವನೊಬ್ಬನು, ರಂಗಭೂಮಿಯ ಮೇಲೆ ನಿಂತು, "ಸ್ಯಾ ಲೆನ್ಸ" ಎಂದನು. ಅವನು ಆ ಊರಿನ ಪ್ರಮುಖ. ಆದ್ದ ರಿಂದ ಎಲ್ಲರೂ ನಿಂತರು. ನಾಟಕಾರಂಭವಾದಂದಿನಿಂದ ಶಾಂತ ಗಳಿಗೆಯೆಂದರೆ ಅದೇ. ಅವನು "ಮಿತ್ರರೇ, ನಮ್ಮ ಅಲೆಯಾರ ನಾಟಕ ಸಂಘದವರು ಇಲ್ಲಿಗೆ ಬಂದು ಬಹಳ ದಿನಗಳಾದುವು.

ಅವರ ಪ್ರಯೋಗವನ್ನು ಕಂಡು ನಿಮಗೆ ಆನಂದವಾಗಿರಬಹುದು. ಈ ದಿನ ಅವರಾಡಿದ ಚಂದ್ರಗ್ರಹಣವೆಂದರೆ ಮರಾಠಿಯಲ್ಲಿ ಹೆಸರುವಾಸಿಯಾದ ನಾಟಕ. ಇಂದಿನ ನಾಟಕವು ಬೇಗನೇ ಮುಗಿಯುವುದು. ಅವರು ಇಲ್ಲಿಂದ ನಾಳೆಗೆ ಹೋಗಲಿರುವದರಿಂದ ನಾವು ಅವರಿಗೆ ಅಲ್ಲೂ ಶ್ರೇಯಸ್ಸುಂಟಾಗುವಂತೆ ಭಗವಂತನನ್ನು ಪ್ರಾರ್ಥಿಸುವೆನು ಎಂದನು.

ಒಮ್ಮೆ ನಾವು—ಯಲ್ಲಿ ಸಂಪೂರ್ಣ ರಾಮಾಯಣ ಆಡಿದೆವು. ನಾಟಕ ಅರ್ಧ ಮುಗಿಯುವಷ್ಟರಲ್ಲಿ ಪ್ರೇಕ್ಷಕರು ತೃಪ್ತಿಗೊಂಡು, ನಮ್ಮಿಂದ ಬದಲಿ ನಾಟಕ ಆಡಿಸಿಬಿಟ್ಟರು!

## ೭. ದುಡ್ಡಿನ ಗಿಡ.

ನಮ್ಮ ಮಂಡಳಿಯ ಮಾಲಕರಿಗೂ ಭದ್ರಪ್ಪನಿಗೂ ಒಂದು ದಿನ ಸಂಬಳದ ಕಸವಿಸಿಯು ಬಂದಿತು. ಭದ್ರಪ್ಪನು ೧೩೦ ರೂಪಾಯಿಗೆ ನನ್ನನ್ನು "ಲೋಕರಂಜಕ"ರು ಕರೆಯುತ್ತಿರುವರು. ಅಂದನು. ನಮ್ಮ ಮಂಡಳಿಗೆ ಇತ್ತೀಚೆಗೆ ಉತ್ಪತ್ತಿ ಕಡಿಮೆಯಾಗುತ್ತ ಬಂದುದರಿಂದ ಇದ್ದ ಸಂಬಳವನ್ನು ಮಾಲಕರಿಗೆ ಕೊಡುವುದು ಕಠಿಣವಾಗುತ್ತಿತ್ತು. ಸರಿ. ಭದ್ರಪ್ಪ ಬಿಟ್ಟು ಹೋದ. ಅವನ ಹಿಂದೆ ನಮ್ಮ "ಚಿದಂಬರ." ನಮ್ಮ ನಾಟಕಶಾಲೆಗಳೆಂದರೆ ನಟಜನರ ಅನ್ನಛತ್ರಗಳು. ನಿತ್ಯವೂ ಇಷ್ಟು ಮಂದಿ ಬಿಡುವರು. ಇಷ್ಟು ಮಂದಿ ಬರುವರು. ನಿನ್ನೆಯಿದ್ದವರು ಇಂದಿಲ್ಲ. ಅದರಲ್ಲಿಯೂ ಹಳ್ಳಿಗೆರಡೆರಡು ಮಂಡಳಿಯಾಗುತ್ತಿದೆ. ನಟಜನರಿಗೆ ಬೆಲೆ ಹೆಚ್ಚು. ಹತ್ತು ಕಂಪನಿ ಸುತ್ತಿದರೆ ಅವನಿಗೆ ೧೦೦ ರೂಪಾಯಿ ಸಂಬಳ. ಆವನ ಮೇಲೆ ೫-೬ ಕಂಪೆನಿಗಳ "ಅಡ್ವಾನ್ಸು" ಇನ್ನು ಉಳಿದಿರುವುದು. ಇರಲಿ ಸಂಗತಿ ಹೇಳುವೆ. ಅವರಿಬ್ಬರು ಹೋದ್ದರಿಂದ ನಾಟಕ ಆಡಲು ಬಹಳ ತೊಂದರೆ. ಅಂತು ಯಾರೋ ಒಬ್ಬನು ಭದ್ರಪ್ಪನ ಪಾರ್ಟಗೆ ಬಂದನು. ಚಿದಂಬರನ ಬದಲು ನಾನು. ಆಗ ಸ್ತ್ರೀ ಭೂಮಿಕೆಯು ನನಗೆ ಒಪ್ಪುತ್ತಿತ್ತು. ಬಾಲ ಪಾರ್ಟಗೆ ದೊಡ್ಡವನಾದೆ. ಆದರೆ ಅಂದಿನ ತನಕ ಕಷ್ಟವನ್ನು ಕಾಣದ ನನ್ನ ಪಾಲಿಗೆ ಇತ್ತೀಚೆಗೆ ಒಂದು ಆಪತ್ತು ಬಂದಿತು. ನನ್ನ ಇಂಪಾದ ಧ್ವನಿಯು ಅದೇಕೋ ಕಾಣೆ, ನಾಯವಾಗುತ್ತ ಬಂದಿತು. ಒಂದು ದಿನ ನಾಟಕದಲ್ಲಿ ಸ್ವರವೇ ಹೊರಡಲಿಲ್ಲ. ಜನರು ನನ್ನ ಹಾಡು ಬಂದಾಗಲೆಲ್ಲಾ ಸಿಳ್ಳು ಹೊಡೆಯತೊಡಗಿದರು. ನಾನು ಪಾರ್ಟು ಮುಗಿಸಿ ಒಳಕ್ಕೆ ಬಂದು ಅಳುತ್ತ ಕುಳಿತೆ, ಮಾಲಕರು ನನ್ನ ಬಳಿ ಹಾದುಹೋದರೂ ಮೂಸಿ ನೋಡಲಿಲ್ಲ. ಮರುದಿನದಿಂದ ನನ್ನ ಸಂಬಳವು ೩೦ ರಿಂದ ೧೦ಕ್ಕೆ ಇಳಿಸಲ್ಪಟ್ಟಿತು. ಈ ವ್ಯಥೆಯನ್ನು ಸಹಿಸದಾದೆ. ಅವರ ಪ್ರೇಮ ನನ್ನಿಂದ ಅವರಿಗಿರುವ ಉಪಯೋಗದ ವ್ಯಾಪಾರೀ ನಿಯಮವನ್ನು ಹೊಂದಿತ್ತೆಂದು ಆಗ ತಿಳಿಯಿತು.

ಇತ್ತ ಯಜಮಾನರು, ಬದಲಿ ನಟರನ್ನು ಹುಡುಕುವ ಪ್ರಸಂಗ ಬಂದಿತು. ಇದ್ದಕ್ಕಿದ್ದ ಸ್ಥಿತಿಯಲ್ಲಿ ಜನರ ಆದರವು ಕಡಿಮೆಯಾಯಿತು. ಹಣವಾಗುತ್ತಿದ್ದಿಲ್ಲ. ಹೆಚ್ಚೇನು? ಮುಂದಿನ ಮೊಕ್ಕಾಂಗೆ ಮಂಡಳಿಯನ್ನು ಒಯ್ಯುವದು ಸಹ ಕಠಿಣವಿತ್ತು. ಅವರು ತಮ್ಮ ವ್ಯಥೆಯನ್ನು, ಕೆಲವು ಉದಾರಾಶ್ರಯದವರಲ್ಲಿ ಹೇಳಿಕೊಂಡರು. "ಬರಲಿ ಜನಕ್ಕೆ ಅಂಜುವಿರೇಕೆ. ನನ್ನ ಜತೆಯಲ್ಲಿ ಬನ್ನಿರಿ." ಪಾರ್ಟಗೆ ರೆಡಿ, ಇರುವ ಜನರನ್ನು ಕೊಡಿಸುವೆನೆಂದರು. ಅದೇ ರಾತ್ರಿಯೇ ಇಬ್ಬರು ಬೆಂಗಳೂರಿಗೆ ಪಯಣ ಬೆಳೆಯಿಸಿದರು. ನಾವು ಯಾರು ಬರುವರು ಏನು ಬರುವನು ಎಂಬ ಹಾರೈಕೆಯಲ್ಲಿದ್ದೆವು. ೩ನೇ ದಿನ ಮಾಲಕರೂ ಆ ಸಭ್ಯಗ್ರಹಸ್ಥರೂ, ಮತ್ತೊಂದು ಜನವೂ ಬಂದರು. ಕತ್ತಲೆಯಲ್ಲಿ ಯಾರೆಂದು ಕಾಣಿಸಲಿಲ್ಲ. ಸರಿ, ಆ ರಾತ್ರಿಯೇ ನಾಟಕವಿತ್ತು ಆ ನವೀನ ನಟರು ಪಾರ್ಟ ಮಾಡುವವರಿದ್ದರು.

ರಂಗಪಾರ್ಟಿಗೆ ಬಂದು ನೋಡುವೆ. ಬಂದ ವ್ಯಕ್ತಿಯು ಓರ್ವ ವಾರಾಂಗನೆ! ಶುದ್ಧ ಅಮಾವಾಸ್ಯೆಯ ಬಣ್ಣ. ಅದಕ್ಕೆ ಭೀತಿಯಿಲ್ಲ. ನಮ್ಮಲ್ಲಿ ಬಣ್ಣ ಸವರಿದರಾಯಿತು. ನನಗೆ ಮನಸ್ಸಿನಲ್ಲಿ ಎಲ್ಲಿಲ್ಲದ ತಳಮಳವಾಯಿತು. ನನಗೆ ವಾರಾಂಗನೆಯರೆಂದರೆ ಬಾಲ್ಯದಿಂದ ಸ್ವಲ್ಪ ತಿರಸ್ಕಾರ. ಆದರೆ ಈ ವಾತಾವರಣದಲ್ಲಿ ಕಳೆದ ಆಯುಷ್ಯದ ದೆಸೆಯಿಂದ, ನನ್ನ ಆ ತಳಮಳವು ಬಹಳ ಹೊತ್ತು ನನನ್ನು ಪೀಡಿಸಲಿಲ್ಲ. ಅಂತು ಆಕೆಯು ಸಖಿಯಾಗಿ ರಂಗಸ್ಥಳಕ್ಕೆ ಹೋದೆ. ನಮ್ಮ ಭೂಮಿಕೆಯ ದೆಸೆಯಿಂದ ಸ್ಪರ್ಶಿಸದೆ ಮಾರ್ಗವಿದ್ದಿಲ್ಲ. ಸ್ಪರ್ಶಿಸಲು ಚಂಚಲ. ಆದಿನವು ಅಂತು- ಇಂತು ಕಳೆಯಿತು.

ಆಕೆಗೆ ಗಾನದಲ್ಲಿ ಅಷ್ಟು ಪರಿಶ್ರಮವಿಲ್ಲದಿದ್ದರೂ ಕಂಠವು ಮಧುರವಾಗಿತ್ತು. ಅಭಿನಯವೇನೋ ಕಾಣೆ. ಮಾತುಬಾರದು. ಆದರೂ ಜನರಲ್ಲಿ ಅವಳು ಸುಪ್ರಸಿದ್ಧ ಆಕ್ಟರಳಾದಳು.

ಮೂರನೆಯ ದಿನ ನಾಟಕದ ಪ್ರಕಟನೆಯ ಮೇಲೆ ಮಿಸ್. ಗುಲಾಬಸಾನಿಯವರು "ಬಕಾವಲಿ" ಪಾರ್ಟು ವಹಿಸುವರು ಎಂದಿತ್ತು. ಆ ದಿನದ ಗದ್ದಲವನ್ನು ಹೇಳಬೇಕೇ? ೫೦,೦೦೦

ಜನಸಂಖ್ಯೆಯು ಆ ಹಳ್ಳಿಯಲ್ಲಿ ೬೦೦ ರೂಪಾಯಿ ಉತ್ಪತ್ತಿ. ಸರಿ. ಹಾಗೆಯೇ ಆದಾಯವು ಬೆಳೆಯಿತು. ಆಗ ನನಗೆ ಹೊಳೆಯಿತು. "ರಂಗಭೂಮಿಯಲ್ಲಿ ವಾರಾಂಗನೆಯರೆಂದರೆ ದುಡ್ಡಿನ ಗಿಡಗಳು" ಎಂದು. ಗುಲಾಬಸಾನಿಯವರ ಪ್ರಸಿದ್ಧಿಯು ಬೆಳೆದಂತೆ ನಮ್ಮ ಯಜಮಾನರ ಪ್ರೇಮವೂ ಅವರ ಮೇಲೆ ಬೆಳೆಯಿತು.

ಅಂತು ಈ ಸ್ತ್ರೀಮೂರ್ತಿಯು ದೆಸೆಯಿಂದ ನಟಜನರಲ್ಲಿಯೂ ಸ್ಪರ್ಧೆಯು ಪ್ರಾಪ್ತವಾಯಿತು. ಅಂತು ನನ್ನ ಮೇಲದರಿಂದುಂಟಾದ ಪರಿಣಾಮವನ್ನು ನಾನು ಒಪ್ಪಲೇ ಬೇಕು. ಒಂದು ದಿನ ನಾನೂ ರಾಜುವೂ ಅಂಕದ ವಿರಾಮವಿತ್ತೆಂದು ಒಂದು ಮೂಲೆಯಲ್ಲಿ ಒಂದು ಚಾಪೆಯು ಮೇಲೆ ಹೋಗಿ ಕುಳಿತುಕೊಂಡೆವು. ಹೊರಗೆ ಏನೋ ಗದ್ದಲವು ಕೇಳಿಸಿತು. ನಾನು ಏನೆಂದು ಬಾಗಿಲಿನಿಂದ ಇಣಿಕಿನೋಡಲು ಹೋದೆ. ೫ ನಿಮಿಷಗಳ ಅವಧಿಯಲ್ಲಿ ತಿರುಗಿ ಚಾಪೆಯ ಮೇಲೆ ಬಂದು ಕುಳಿತೆ. ಮತ್ತು "ರಾಜು" ಎಂದು ಕೈಹಿಡಿದೆ. ಆ ಸ್ಪರ್ಶವೇ ಬೇರೆ. ನನಗೆ ರೋಮಾಂಚವಾಯಿತು. ನಾನು ದಿಗಿಲೆದ್ದು ಅಲ್ಲಿಂದೆದ್ದೆ. ಅಲ್ಲಿ ರಾಜುವಿರಲಿಲ್ಲ. ಅವನು ನನ್ನ ಜತೆಯಲ್ಲೇ ಹೊರಟಿದ್ದನಂತೆ. ಅಲ್ಲಿ ಮಲಗಿದ್ದವರು "ಗುಲಾಬಸಾನಿ"ಯವರು. ಎಂತಹ ದುರ್ದೈವೀ ಅನುಭವ.

ಆ ವಾತಾವರಣದಲ್ಲಿ ನನಗೆ ಇರುವುದು ಸಹನವಾಗಲಿಲ್ಲ. ನನ್ನ ಮನಸ್ಸು ಕಲುಷಿತವಿಚಾರದಿಂದ ಪೀಡಿತವಾಯಿತು. ನಾಟಕೀ ವಾತಾವರಣದ ಮಾತುಕಥೆಗಳಲ್ಲಿ ಬಹು ಮಟ್ಟಿಗೆ ಗುಹ್ಯವಿಚಾರಗಳೇ. ಆಗಂತು ಆ ಮಾತುಕಥೆಗಳನ್ನು ಅಷ್ಟು ತಿರಸ್ಕಾರದಿಂದ ನಾನು ಕಾಣುತ್ತಿರಲಿಲ್ಲ. ಇತ್ತ ನಟಿಸುವ ದೃಶ್ಯಗಳೂ ವಿಷಯೋತ್ತೇಜಕ. ಸಾಲದಿದ್ದುದಕ್ಕೆ ಈ ವ್ಯಕ್ತಿಯು ಸಾನ್ನಿಧ್ಯ. ನನಗೆ ನಾನು ಪಾಪಮಾರ್ಗದಲ್ಲಿ ಹೆಜ್ಜೆಯಿಕ್ಕಬಹುದೆಂಬ ಭೀತಿಯಾಯಿತು. ಇನ್ನೂ ಕೆಲವು ದಿನಗಳ ತನಕ ಅಲ್ಲಿ ಇರುತ್ತಿದ್ದರೆ ನನ್ನ ಗತಿಯು ಹೇಗಾಗುತ್ತಿತ್ತೋ ತಿಳಿಯದು.

ಮರುದಿನ ನಾನು ಅಳುತ್ತ ರಾಯರೆದುರಿಗೆ ಬಂದು ಹೊರಡುವೆನೆಂದೆ. "ಏಕೆ" ಅಂದರು. "ನನಗೆ ಸ್ತ್ರೀಯರಿರುವದು ಇಷ್ಟವಿಲ್ಲ"ವೆಂದೆ. "ಇಷ್ಟವಿದ್ದರೆ ಇರು. ಇಲ್ಲದಿದ್ದರೆ ನಡಿ" ಎಂದರು. ಅವರ ಆ ಪ್ರೇಮದ ಹಿಮಾಚಲವು ಎಂದೇ ನನ್ನ ಪಾಲಿಗೆ ಕರಗತೊಡಗಿತ್ತು. ಈಗಂತು ಸಂಪೂರ್ಣ ಸಾಗರಗತವಾಗಿಹೋಯಿತು. ನಾನು "ಲೆಕ್ಕಮಾಡಿ" ಎಂದೆ. ಆ ದಿನವೇ ಲೆಕ್ಕವಾಯಿತು. ಏನು ಲೆಕ್ಕವೋ ಕಾಣೆ. ಮೂರು ವರುಷಕ್ಕೆ ನನ್ನ ಸಂಬಳವು ೧೦–೨೦–೫೫ ರಂತೆ ೬೬೦ ಆಗುತ್ತಿತ್ತು. ೩೦೦ ರೂಪಾಯಿಯನ್ನು ನನ್ನ ತಂದೆಗೆ ಮೊದಲೇ ಕೊಟ್ಟಿದ್ದರು. ಅಂತು ಲೆಕ್ಕಾಚಾರವಾಗಿ ೨೦೦ ರೂಪಾಯಿ ಅವರು ಕೊಡಬೇಕಾಗಿತ್ತು. ಆದರೆ ಅವರು ಇನ್ನೊಂದು ಪುಸ್ತಕ ತೆಗೆದರು. ಅದೇನೆಂದು ನನಗೆ ತಿಳಿಯಲಿಲ್ಲ. ಒಂದೊಂದಾಗಿ, ನಾನು ಕಂಪೆನಿಗೆ ಬಂದಂದಿನಿಂದ ಮಾಡಿದ ಮತ್ತು ಮಾಡದ ತಪ್ಪುಗಳಿಗಾಗಿ ಹಾಕಿದ ಜುಲುಮಾನೆಗಳ ಪಟ್ಟಿ. ಅದರ ಮೊತ್ತವು ೨೨೫–೬–೬ ಪೈ ಬಂದಿತು! ಸರಿ; ನಾನೇ ಅವರಿಗೆ ೨೫–೬–೬ ಕೊಡುವುದಾಯಿತು. ಅಷ್ಟಕ್ಕೆ ಒಂದು ಪ್ರಾಮಿಸರಿ ಬರೆದುಕೊಟ್ಟೆ. ನಾಟಕ ಮಂಡಳಿಯವರಿಗೆ ಜುಲುಮಾನೆಯು ಬುಕ್ಕೆಂದರೆ ಆಪದ್ಬಂಧು.

"ರಾಮ ರಾಮ" ಎನ್ನುತ್ತ ಕಾಸಿಲ್ಲದೆ ಕಣ್ಣೀರು ಸುರಿಸುತ್ತ ಅಲ್ಲಿಂದೆದ್ದೆ. ನನ್ನ ವಿಯೋಗಕಾಲದಲ್ಲಿ ಮಂಡಳಿಯವರು ಬಹಳವಾಗಿ ಅತ್ತರು. ರಾಜುವು ಯಜಮಾನರಿಗೆ ಬುದ್ಧಿ ಹೇಳಹೋದ. ಅವನಿಗೂ ಸಹಸ್ರನಾಮವಾಯಿತು. ಸರಿ. ಅಂದಿಗೆ ನನ್ನ ಒಂದು ಮಂಡಳಿಯ ಸರ್ವಿಸು ಮುಗಿಯಿತಷ್ಟೆ.

## ೮. ನನ್ನ ಎರಡನೆ ಮಂಡಳಿ

ಅಲೆವೂರ ಮಂಡಳಿಯ ಋಣಾನುಬಂಧವನ್ನು ಕಡಿದು ಹೊರಟವನು, ಊರಲ್ಲಿ ಬಂದು ಒಬ್ಬ ಗೆಳೆಯರಲ್ಲಿ ನನ್ನ ಗೋಳನ್ನು ಹೇಳಿ ಅವರಿಂದ ಹತ್ತು ರೂಪಾಯಿ ಇಸುಕೊಂಡು ತಿಪಟೂರಿಗೆ ಬಂದೆ. ಅಲ್ಲಿ ಲೋಕರಂಜಕ ಮಂಡಳಿಯವರ ಪ್ರಯೋಗವು ನಡೆಯುತ್ತಿತ್ತು. ಬಂದವನೇ, ಭದ್ರಪ್ಪ. ಚಿದಂಬರರನ್ನು ಕಾಣಹೋದೆ. ದಾರಿಯಲ್ಲಿ "ಈರಪ್ಪ" (ನಾರದನ ಪಾರ್ಟ)ನ ಭೇಟಿಯಾಯಿತು. ಅವನು ಈಗ ಅಲ್ಲೇ ಇದ್ದ. ಕಂಪೆನಿಯಲ್ಲಿ ಅಲ್ಲ. ಆ ಊರಿನ "ಉಡುಪಿ ಬ್ರಾಹ್ಮಣರ ರಮಾವಿಲಾಸ ಕಾಫಿ ಕ್ಲಬ್ಬಿನಲ್ಲಿ" ನೌಕರನಾಗಿ ಅವನೇ ನನಗೆ ಪೂರ್ವ ವೈರವನ್ನು ಮರೆತು ಚಿದಂಬರ ಭದ್ರಪ್ಪರ ಮನೆಯನ್ನು ತೋರಿಸಿದನು. "ಏಕೆ ಬಂದೆ?" ಯೆಂದನು. ಪೂರ್ವದ ಸ್ಪರ್ಧೆಯು ನೆನಪಿಗೆ ಬಂದು "ಸುಮ್ಮನೆ" ಎಂದೆ.

ಸರಿ, ಭದ್ರಪ್ಪ ಚಿದಂಬರರಿಗೆ ನನ್ನನ್ನು ಕಂಡು ತುಂಬಾ ಸಂತೋಷವಾಯಿತು. ನನಗೆ ಅಲ್ಲೇ ಚಾ ತರಿಸಿ ಕೊಟ್ಟರು.

ನನ್ನ ಸುದ್ದಿ, ಮನೋಹರರಾಯರ ವಿಷಯ ಎಲ್ಲರನ್ನೂ ಹೇಳಿದೆ. ಅವನ: ಕನಿಕರಪಟ್ಟು, ನನ್ನನ್ನು ಮಾಲಕರ ಮನೆಗೆ ಒಯ್ದನು. ಮ್ಹಾಲಕರು ಸ್ವಲ್ಪ ಗಂಭೀರ ಮರ್ಜಿ ಯವರು. ಇತರ ಮಂಡಳಿಯವರಂತೆ ಸುಲಭಸಾಧ್ಯರಲ್ಲ. ಕೊನೆಗೆ "ಪ್ರಾಕ್ಟಿಸಿ"ನಲ್ಲಿ ನೋಡೋಣ ಎಂದು ಭಾರವಾದ ತಲೆಯನ್ನು ತಿರುಗಿಸಿದರು.

ಸರಿ ಮಧ್ಯಾಹ್ನ ಕ್ರಮವಾಗಿ ಮೂರು ತಾಸಿಗೆ ತಾಲಿಂಗೆ ಸೇರಿದೆವು. ಮಾಲಕರು ಚಿದಂಬರನ ಮೂಲಕ ನನಗೆ ಹಾಡಲು ಹೇಳಿ ತಾವು ದೂರ ನಿಂತು ಕೇಳತೊಡಗಿದರು. ನಾನು ಪೇಟಿಯವನ ಮುಂದೆ ಏನೋ ಹಾಡಿದೆ. ನನಗೆ ಆಗ ಧ್ವನಿಯು ಸಂಪೂರ್ಣ ಶೂನ್ಯವಾಗಿತ್ತು. ಆಗವರು ಬದ್ರಪ್ಪನನ್ನು ಕರೆದು– "ಕಂಥವಿಲ್ಲದವರನ್ನೇನು ಮಾಡಲಿ ? ಎಂದರು. ಭದ್ರಪ್ಪ ನಿರುತ್ಸಾಹಿಯಾದ.'' ಆದರೂ ಚನ್ನಾಗಿ ಅಭಿನಯಿಸುವನು. ಮತ್ತು ನರ್ತನವೂ ಬರುವುದು"ಎಂದನು.

ಬಳಿಕ ಅವರ ಅಪ್ಪಣೆಯಂತೆ ನಾಚಿಕೆಯಿಂದ "ನಾಚೂ" ಮಾಡಿದೆ. ಆದರೆ ಬಾಯಿ ತೆರೆದಲ್ಲಿ ಬಣ್ಣಗೇಡು. ನನಗೆ ನಾರದನ ಭೂಮಿಕೆಯನ್ನು ಅಭಿನಯಿಸಲು ಹೇಳಿದರು. ಅದನ್ನು ಮಾಡಿತೋರಿಸಿದೆ. ಮೋರೆಯ ಮೇಲೆ ಅಸಮಾಧಾನಕ ಚಿಹ್ನೆಯನ್ನು ತೋರಿದರು. ಭದ್ರಪ್ಪನವರೇ, ಇಂತಹ ಅಸಾಮಿಗಳು ನಮ್ಮಲ್ಲಿ ಧಾರಾಳವಿವೆ. ಏನು ಮಾಡಲಿ ? ಸಂಬಳವಿಲ್ಲದೆ ನಿಲ್ಲುವುದಾದರೆ ಇರಲಿ "ಅಂದರು. ಬೇರೆ ಗತಿ ಕಾಣದೆ "ಹೂಂ" ಅಂದೆ.

ನಿಮಗೊಂದು ಹೇಳುವೆನು. ನಾಟಕಮಂಡಳಿಯಲ್ಲಿ ತಾವಾಗಿ ಕರೆಯಿಸಿದ ನಟರಿಗೆ ೧ಕ್ಕೆ ೧೧೦ರಂತೆ. ಇನ್ನು ತಾನಾಗಿ ಬಂದವರಿಗೆ ೧೦ಕ್ಕೆ ೧ರಂತೆ ಧಾರಣೆ.

ಅಂತು ಲೋಕರಂಜಕ ಮಂಡಳಿಯಲ್ಲಿ ನಾನು ಬಲು "ಅಗ್ಗ"ವಾಗಿ ಜೀವಿಸತೊಡಗಿದೆ. ಸಂಬಳ ಏನೆಂದು ಕೇಳುತ್ತಿದ್ದವರಿಗೆ ತಿಂಗಳಿಗೆ ಮೂವತ್ತು ಅನ್ನುತ್ತಿದ್ದೆ. ( ದಿನಗಳು !)

ಹೀಗೆಯೇ ೬ ತಿಂಗಳು ಸಂದುವು. ಮಾಲಕರು ಅತಿ ಹೆಚ್ಚಿನ ದಯೆಯಿಂದ ನನಗೆ ೫ ರೂಪಾಯಿ ವೇತನವನ್ನು ನಿಶ್ಚಯಿಸಿದರು—ಮತ್ತೆ "ನೀನು ಇನ್ನು ಮುಂದೆ ನಮ್ಮ ಬೆಳಗಾಂವ್‌ಕರನ ಜತೆಯಲ್ಲಿ ನಕಲಿ ಅಭ್ಯಾಸಮಾಡು. ಅಂದರೆ ಅದರಿಂದ ಉಪಯೋಗವಾಗಬಹುದು " ಎಂದರು. ಅಂದಿನಿಂದ ನಾನು ಬೆಳಗಾಂವಕರನ ಬಾಲದಂತೆ, ಅವನು ಹೋದಲ್ಲಿಗೆ ಹೋಗುತ್ತಿದ್ದೆ. "ಬೆಳಗಾಂವಕರ " ಎಂದರೆ ಕನ್ನಡ ನಾಡಿಗೇ ಗೊತ್ತು. ಅವನಿಗೆ "ವಿನೋದವಟು" ಎಂದು ಬಿದಿರು ಬಂದಿತ್ತು. (ವಿನೋದಪಟು) ಎಂದು. ನನಗೆ ನಕಲಿಯ ಕಲ್ಪನೆಯು ಸ್ವಲ್ಪ. ಇದ್ದಿತ್ತಾದುದರಿಂದ ಅಂತರಂಗವಲ್ಲಿ ಅವನ ಯೋಗ್ಯತೆಯನ್ನು ತೂಗುತ್ತನಡೆದೆ. ನಮ್ಮ ರಂಗಭೂಮಿಯಲ್ಲಿ ಹಾಸ್ಯದಲ್ಲಿ ಹೆಸರು ಹೊಂದಿದವರೆಂದರೆ "—" ಎಂಬವರು. ಅವರ ಹಾಸ್ಯವನ್ನು ಕಂಡ ನನಗೆ, ಇವರ ಅಭಿನಯವು ಹಿಡಿಯಲ್ಲಿಲ್ಲ. ಆದರೆ ಬೆಳಗಾಂವ್‌ಕರನಿಗೆ ಹತ್ತು"—"ರನ್ನು ನುಂಗುವ ತ್ರಾಣವುಂಟಂತೆ. ಇರಬಹುದು ಯಾರಿಗೆ ಗೊತ್ತು ? ಅವನ ಹಾಸ್ಯ ಪದ್ಧತಿಯೆಂದರೆ ಸ್ವಾಭಾವಿಕತನದ್ದಲ್ಲ. ಹಾಗೆ ಸ್ವಾಭಾವಿಕವೇ ನಕಲಿ ಪಾರ್ಟಿನ ಲಕ್ಷಣವಲ್ಲವಂತೆ. ಅದಕ್ಕಾಗಿ ಅವನ ವಿಧಾನವೇ ಬೇರೆ. ಅಂತು ಅವನು ಪ್ರಸಿದ್ಧನೆನ್ನಲು ದೃಷ್ಟಾಂತವು ಇಷ್ಟೆ—ರಂಗಭೂಮಿಗೆ ಅವನು ಬರುವುದೇ ತಡ; ಜನರ: " ಗೊಳ್ಳೆಂ "ದು ನಗತೊಡಗುವರು. ಅವನಾದರೂ, ಜನರನ್ನು ನಗಿಸಲು ಯಾವಾವ ರೀತಿಯ ಉಡಿಗೆ, ನಡಿಗೆ, ಮಾತುಕಥೆ, ಆಡುವುದಕ್ಕೂ ಹಿಂಜರಿಯುತ್ತಿದ್ದಿಲ್ಲ. ಜನರನ್ನು ನಗಿಸುವುದೇ ನಕಲಿಯವನ ಧ್ಯೇಯವಾಗಿರಬೇಕೆಂಬ–ನವಸಿದ್ಧಾಂತವನ್ನು ನಾನು ಅಲ್ಲಿ ತಾನೆ ಕಲಿತೆ.

ಮನಸ್ಸಿಗೆ ಅವನಂತೆ ಆಚರಿಸುವುದು ಸರಿ ಅಲ್ಲವೆಂದು ತೋರಿದರೂ ಉಪಾಯವಿಲ್ಲದೆ ಅವನಂದಂತೆ ಮಾಡುತ್ತಿದ್ದೆ. ಅದರಿಂದ ನಾನೂ ಒಬ್ಬ ವಿನೋದಸಾಗರನಾಗಿ, ಯಜಮಾನರ ದೃಷ್ಟಿಗೆ ಬಿದ್ದು, ಸಂಬಳ ಹೆಚ್ಚಿಸಿಕೊಂಡು, ತಿರುಗಿ ಮನೆಗೆ ಹೋಗುವುದರೊಳಗೆ ನನ್ನ ಮುದಿ ತಂದೆಯ ಮುಂದೆ ಒಂದು ೧೦೦ ರೂಪಾಯಿಯನ್ನಾದರೂ ೫ ವರ್ಷ ನಾಟಕಿ ಸರ್ವಿಸಿನ ಕಾಣಿಕೆಯಾಗಿ ಅರ್ಪಿಸಬೇಕೆಂದು ಶ್ರಮಪಡುತ್ತಿದ್ದೆ.

ಅಂತು ಇನ್ನಾರುತಿಂಗಳಲ್ಲಿ ನನ್ನ ಸಂಬಳವು ೧೦ಕ್ಕೆ ಏರಿಸಲ್ಪಟ್ಟಿತು. ನನ್ನ ನಕಲಿಗಾಗಿ ಎರಡು ಸುವರ್ಣ ಪದಕಗಳು ಬಂದುವು.

ಮುಂದಿನ ಮೊಕ್ಕಾಮಿನಲ್ಲಿ ನನಗೆ ಒಂದು ಬಿರುದು ಬಂದಿತು. ಅದು ನನ್ನ ಗುರುವಿನಂತೆ, ವಿನೋದವಟು ಅಲ್ಲ. ಅಪೇಕ್ಷೆಯಂತೆ—"ವಿನೋದ ಸಾಗರ" ವೂ ಅಲ್ಲ–"ಹಾಸ್ಯಮಹೋದಧಿ" ಎಂದು. ಕೊಟ್ಟವರು ಅಂಥಿಂಥವರಲ್ಲ—ಹುಬ್ಬಳ್ಳಿಯ ಪ್ರಸಿದ್ಧ ಮಾರವಾಡಿ ವ್ಯಾಪಾರಿಗಳಾದ "ಜಗಜೀವನ್‌ಶೇಟ್" ರವರು.

## ೯ ಭಾಷಾಸೇವೆ ಮತ್ತು ಸಮಾಜಸೇವೆ.

ಬರೇ ನಾಟಕವನ್ನು ಆಡಿಕೊಂಡು ಹೋದರೆ ಅದು ಕಳೆ ಕಟ್ಟುವದಿಲ್ಲವಂತೆ. ಅಂದರೆ ನಮ್ಮಲ್ಲಿನ ಕೊರತೆಯು ಜನರಿಗೆ ತಿಳಿದೇ ತಿಳಿಯುವುದು. ಅದಕ್ಕೆ ನಮ್ಮ ಜಾಣರಾದ ಮಾಲಕರು ಒಂದು ಹೊಸ ಉಪಾಯವನ್ನು ತೆಗೆದರು. ಸಮಯವೂ ಅನುಕೂಲವಾಗಿತ್ತು. ಅಂದರೆ ಅದು ಅಸಹಕಾರ ಚಳವಳಿಯ ಅಬ್ಬರದ ವೇಳೆ. ಇತ್ತ ನಮ್ಮ ಬಡತನ. ನಮ್ಮೆಲ್ಲರಿಗೂ ಅವರು ಖಾದಿ ತೊಡಹೇಳಿದರು. ಅಷ್ಟಾಗದಿದ್ದರೆ, ಎಲ್ಲರ ಕಂಣಿಗೂ ಬೀಳುವಷ್ಟು ಎತ್ತರಾದ ಗಾಂಧಿ ಟೊಪ್ಪಿಗೆಯನ್ನಾದರೂ ಧರಿಸಿರಿ ಅಂದರು. ಇದರಿಂದ ಒಮ್ಮೆಗೆ ನಾವು ನಮಗೇ ತಿಳಿಯದಂತೆ ದೇಶಭಕ್ತರಾದೆವು. ಇನ್ನು ನಾಟಕ ಕಾಲದಲ್ಲಿ ಒಂದೊಂದು ಉಪನ್ಯಾಸಕೊಡತೊಡಗಿದರು. ಎಂತಹ ಉದಾತ್ತ ವಿಚಾರಗಳ ಸುರಿಮಳೆಯದು. ಸಮಾಜ ಸುಧಾರಣೆ, ಭಾಷಾ ಸೇವೆ, ರಂಗಭೂಮಿಯ ಸುಧಾರಣೆ ಇವೇ ವಿಷಯುಗಳು. ಜನರೂ, ಅದಕ್ಕೆ ತಲೆತೂಗಿದರು. "ಎಂತಹ ಧ್ಯೇಯ ನಮ್ಮ ರಾಯರದ್ದಪ್ಪಾ" ಎಂದರು. ಆದರೆ ಈ ಜನರಿಗೆ, ಅವರ ನಾಟಕಗಳು ಸಾಹಿತ್ಯ ದೃಷ್ಟಿಯಿಂದ ಎಷ್ಟು ಉತ್ತಮವಿದ್ದುವು ಎಂದಾಗಲಿ, ರಂಗಭೂಮಿಯ ಸೇವೆಗೆಂದು ಎಷ್ಟು ಕಲೆಯು ಉನ್ನತಿಯಾಯಿತು, ನಟರ ನಡತೆ ಹೇಗೆ, ಆಡುವ ನಾಟಕಗಳೆಷ್ಟು ಹಿತಕಾರಿಯಾಗಿವೆ, ಇದರ ಗೊಡವೆಗೆ ಯಾರೂ ಹೋಗಲಿಲ್ಲ. ಅಂತು ನಾವು ಪ್ರಥಮ ವರ್ಗದ ದೇಶಭಕ್ತರಾದೆವು.

ಆದರೆ ಜನರಿಗೆ ಇಷ್ಟರಲ್ಲಿ ಅಸಹಕಾರಿತೆಯ ಜ್ವರವು ಸ್ವಲ್ಪ ತಗ್ಗಿತು. ನಮಗೂ ಸ್ವಲ್ಪ ಕೈಯಲ್ಲಿ ಕಾಸಾಯಿತು. ಸರಿ, ರೋಗಿಗೆ ಸರಿಯಾಗಿ ಚಿಕಿತ್ಸೆ ತೊಡಗಿದೆವು. ಆಗ ಸಾಕಷ್ಟು ಆಡಂಬರದ ಉಡಿಗೆ ತೊಡಿಗೆಗಳು ಬಂದುವು. ಅದರಿಂದಲೂ ಜನರಂಜನೆಯಾಗಿ ಕಾಸಾಯಿತು. ನಮ್ಮ ನಾಟಕಗಳು ಮಾತ್ರ ಅಂದಿನಿಂದ ಇಂದಿನವರೆಗೆ ಒಂದೇ ಆದರೂ ಅದರಿಂದ ಭಾಷಾ, ಸಮಾಜ, ಕಲಾ ಸೇವೆಯಾಗುತ್ತಿದ್ದುವಂತೆ. ಜನರಿಗೆ ಅದನ್ನು ತಿಳಿಯುವ ಶಕ್ತಿಯು ಬರಲಿಲ್ಲ. ಯಾರೇನು ಮಾಡಬೇಕು.

ಒಂದುದಿನ ನಮ್ಮ ಮಾಯಾಜಾಲಕ್ಕೆ ಪ್ರತಿಮಂತ್ರವಾದಿಗಳಾರೊ ಬಂದರು. ಅವರು ನಮ್ಮ ರಾಯರ ಮೇಲೆ ಟೀಕೆಯ ಸುರಿ ಮಳೆಯನ್ನು ಕರೆದರು. ನಮಗೆ ಕಲೆಯಿಲ್ಲ ನೀತಿಯಿಲ್ಲ— ಎಂದರು. ನಮ್ಮ ರಾಯರಿಗೆ ಸಿಟ್ಟು ಬಂದಿತು. ಇಷ್ಟು ಸಾಹಿತ್ಯಸೇವೆ ಮಾಡಿದುದು ವ್ಯರ್ಥವೇ ಎಂದು ರೇಗಿಬಿದ್ದರು. ಟೀಕಾಕಾರನಿಗೆ 'ನೀನಾರು, ನಿನ್ನಪ್ಪನ ಹೆಸರೇನು, ನಿನಗೆ ನಮ್ಮ ಗೊಡವೇಕೆ' ಎಂದು ಬೆದರಿಸಿದರು. ಅವನು ಸ್ವಲ್ಪ ಬಿಸಿರಕ್ತದ ಬಿರುಸಿನ ಹುಡುಗನಿರಬೇಕು. ಇವರ ಅರ್ಥವಿಲ್ಲದ ವಾದಗಳ ಡೊಳ್ಳನ್ನು ಜನರಿಗೆ ಅವನು ತೋರಿಸಿದನು. ನಮ್ಮ ರಾಯರು ಕಾಲಕ್ಕೆ ತಕ್ಕಂತೆ "ದೇವಲೋಕ ಬೊಗಳಿದರೆ ನಾಯಿ ಹಾಳಾಗುವುದೇ— ಅಲ್ಲಲ್ಲ ನಾಯಿ ಬೊಗಳಿದರೆ ದೇವಲೋಕ ಹಾಳಾದೀತೇ" ಎಂದು ಸುಮ್ಮನೆ ಕುಳಿತು ಬಿಟ್ಟರು. ಆದರೂ ದೇಶ ಸೇವೆ ಸಮಾಜ ಸೇವೆ ಒಂದೇ ಸನನೆ ನಡೆಯುತ್ತದೆ.

ಸುಧಾರಣೆ ಸುದ್ದಿ ಹೇಳುವಾಗ ನಮ್ಮ ಪೂರ್ವದೊಡೆಯರ ಸುದ್ದಿಯನ್ನು ಹೇಳದಿದ್ದರೆ ಅನ್ಯಾಯವೇ ಸರಿ. ಅವರಿಗೆ ನಂ ೩ ಇವರ ಚಾತುರ್ಯವಿಲ್ಲದಿದ್ದರೂ "ನಮ್ಮ ನೀತಿಪರವಾದ ನಾಟಕಗಳನ್ನು, ಬರೇ ವಾಙ್ಮಯ ಸಮಾಜ ಸೇವಾ ದೃಷ್ಟಿಯ ಸಲುವಾಗಿಯೇ ಯಾರೂ ಬಾರದ ಈ ಊರಿಗೆ ಪ್ರಥಮ ಬಾರಿಗೆ ಆಡಿ ತೋರಿಸಲು ಬರುವೆವು" ಅಂದು ಬರೆದಿದ್ದರು. ಜನರ ಮೇಲೆ ಎಂತಹ ದಯೆ! ಟೀಕೆಯವರು ಬರೆ ಸುಧಾರಣೆಯ ಹೆಸರನ್ನು ಹೇಳುವರು. ಅವರಿಗೆ ಮಂಡಳಿಯ ಆರ್ಥಿಕ ದೃಷ್ಟಿಯ ಗಮನವಿರುವುದಿಲ್ಲ. ಒಮ್ಮೆ ಹೇಗಾದರೂ ಮಾಡಿ ದುಡ್ಡಾಯಿತೆಂದರೆ, ಮುಂದೆ ಎಲ್ಲಿಂದಾದರೂ ಸುಧಾರಣೆಯನ್ನು ಗೂಡ್ಸಗಾಡಿಗಳ ಮೇಲೆ ತುಂಬಿ ತರಿಸಲು ಬರುವುದು.

. ಅಂತು ನನಗೆ ಪ್ರಯಾಸಕ್ಕೆ ಬಂದಿತು. ನಮ್ಮ ಮಾಲಕರು ನಿಜವಾದ ಸುಧಾರಕರೋ, ಇಲ್ಲವೆ ಟೀಕಾಕಾರನೋ ಎಂದು. ಒಂದು ದಿನ ನಾನು ಹುಬ್ಬಳ್ಳಿ ಮಲ್ಲಿಕಾರ್ಜುನ ಥಿಯೇಟರಿಗೆ ಹೋದೆ. ಯಾರೋ ಗಂಧರ್ವ ಮಂಡಳಿಯವರಂತೆ! ಆ ದಿನ "ಏಕಚ್ ಪಾಲ್ಯಾ" ಆಡುವವರಿದ್ದರು. ಏನೇ ಆಗಲಿ ಎಂದು ಧೈರ್ಯದಿಂದ ಟಿಕೀಟು ತೆಗೆದುಕೊಂಡು, ಒಳನುಗ್ಗಿದೆ. ಅವರ ಮೇಲೆ ಸುಧಾರಣೆಯ ಟೀಕೆ ಮಾಡುವುದು ನನ್ನ ಉದ್ದೇಶವಿತ್ತು. ನಾಟಕವೆಲ್ಲಾ ಕಂಡದ್ದಾಯಿತು. ನನಗೆ "ಅಭಿನಯ"ವೆಂದರೆ ಹೀಗಿರಬೇಕೆ ಎಂದು ತೋರಿತು. ಅವರ ಸಂಗೀತದ ಕುರಿತು ನನ್ನ ಟೀಕೆಯಿದೆ. ಸಂಗೀತವು ಇಂಪಾಗಿತ್ತು. ಆದರೆ ಆ ಗಂಧರ್ವರಾಯರು ಅರ್ಥ ಅರ್ಥ ತಾನನ

ಕನಕ ಹಾಡುವುದನ್ನು ಕಂಡು ಬೇಸರ ಬಂದಿತು. ಅದು ನಾಟಕಕ್ಕೆ ಬೇಡವೆಂದುಕೊಂಡೆ. ಅಲ್ಲಿಂದ ನಮಗೆ ತಿಳಿಯಿತು. ನಾವು ಕಲಾದೃಷ್ಟಿಯಿಂದ ಶುದ್ಧ ಅಮವಾಸ್ಯೆಗಳೆಂದು, ನಮ್ಮಲ್ಲಿ ಬಹಳ ಜನ ನಟರು "ಹಾಡುಗಾರಿಕೆಯೇ ಅಭಿನಯ ವೆಂಬ ಹೊಸ ಶೋಧನೆ"ಯನ್ನು ಮಾಡಿರುವರು. ಮರಾಟಿ ಗರು ಎಂತಹ ಹೆಡ್ಡು ಜನರು! ಓದುಬರಹ ಚೆನ್ನಾಗಿ ಬರುವ ಜನರನ್ನು ಯಾರಾದರೂ ರಂಗಭೂಮಿಗೆ ತರುವರೇ?

ನಮ್ಮಲ್ಲಿ ನಟರಿಲ್ಲವೆಂದು ನಾಟಕಿ ನಾನು ಅಂದರೆ ನನ್ನ ಬಂಧುಗಳಿಗೆ ಬೇಸರಾಗಬಹುದು. ಮರಾಠಿ ನಾಟಕ ಕಂಡು ನನ್ನಲ್ಲಿ ಮೂಡಿದ ನಟನೆಯ ಕಲ್ಪನೆಯಿಂದ ಹೇಳುವುದಾದರೆ, ನಮ್ಮ ವ್ಯವಸಾಯಿಗಳಲ್ಲಿ ನಟರೆನಿಸಿಕೊಳ್ಳಲರ್ಹರು ಇರುವ ರೆಂಬುದು ಸ್ವಲ್ಪ—ಇರಲಿ, ಕೆಲವು ಆಗಿ ಹೋದವರಿದ್ದರು. ಅಂಥವರು ತಮ್ಮ ಕಾಲದಲ್ಲಿ, ಇದ್ದ ಪ್ರೋತ್ಸಾಹ, ಧನ ಇದರ ಬಲವನ್ನು, ನಮ್ಮ ನಾಡ ನಾಟಕಗಳಲ್ಲಿ ಬರೀ ಶೃಂಗಾರದ ಬೆಳೆಯನ್ನು ಬಿತ್ತುವುದರಲ್ಲಿ ಉಪಯೋಗಿಸಿದರಲ್ಲಾ, ಎಂದು ಯಾರೋ ಟೀಕಾಕಾರರ ಮಾತು ನನಗೊಮ್ಮೆ ಕೇಳಿಸಿತ್ತು.

ಆದರೆ ನಮ್ಮಲ್ಲಿ ಸೀನೆರಿ, ಪಡದೆ, ಡ್ರೆಸ್ಸು ನಟನೆ ಮೊದಲಾದ ಕಲಾದೃಷ್ಟಿಗಳಲ್ಲಿ ನನಗೆ ಸಂಶಯ ಬಂದಿದೆ. ಇನ್ನು ನಮ್ಮ ಮಂಡಳಿಗಳ ನೈತಿಕ ವಾತಾವರಣವನ್ನು ಕುರಿತು ಸಮಾಜಸುಧಾರಕರಾದ ನಮ್ಮನ್ನು ಕೇಳುವ ಅಧಿಕಾರವು ಇತ ರರಿಗಿಲ್ಲ. ಆದರೂ ಟೀಕಾಕಾರರು ಮಾತ್ರ, ನಮ್ಮ ಸೀನೆರಿ ಗಳಮೇಲೂ ನೀತಿಯಮೇಲೂ ಟೀಕೆಗಳನ್ನು ಸುರಿಯುತ್ತಿ ರುವರು. ನಾವು ಇಲೆಕ್ಟ್ರಿಕ್ ದೀಪ ತರಿಸಿದರೂ ಸುಧಾರಣೆ ಆಗಲಿಲ್ಲವೆಂದರೆ.....ಯಾರೋ ಹೊಟ್ಟೆಕಿಚ್ಚಿನವರು, ಆಡಿ ಕೊಳ್ಳಲಿ.! ಆಡಿಕೊಳ್ಳಲಿ. ಒಂದು ಸುದ್ದಿ ಮರೆತಿದ್ದೆ. ನಮ್ಮ ನವೀನ ಮಾಲಕರು ಹರಿಶ್ಚಂದ್ರರು. ಒಂದು ಊರಿನಲ್ಲಿ ನಾವು ಕಡೇ ನಾಟಕವೆಂದು ಹಲವು ಬಾರಿ ಹೇಳಿವೆವು. ಜನರಿಗೆ ಬೇಸರ ವಾಗಲು "ದೇವರಾಣೆ ಕೊನೆಯ ನಾಟಕವೆಂದು" ಪ್ರಕಟಿಸಿ ದೆವು. ಇಷ್ಟಾದರೂ ಸಮಾಜಸೇವೆ ಸಾಕಷ್ಟು ಆಗಲಿಲ್ಲವೆಂದು ತಿರುಗಿ ಇನ್ನು ೩-೪ ನಾಟಕಗಳನ್ನು ಆಡಿವೆವು.

## ೧೦ ಅಮೆಚೂರು ನಾಟಕಸಂಘ

ನಮ್ಮ ನಾಡಿನ ಅಲ್ಲಲ್ಲಿ "ರಂಗಭೂಮಿಯ ಷೋಕಿ" ಬಹಳ ಎದ್ದಿದೆ. ದುಡ್ಡಿದ್ದವರು ತಮ್ಮ ಊರಿಗೊಂದೊಂದು ಕಂಪೆನಿ "ತೆಗೆ"ಯುತ್ತಿರುವರು. ಹೇಳಲು ಮರೆತೆ, ಸದ್ಯಕ್ಕೆ ನಮ್ಮ ಭದ್ರಪ್ಪನೊಂದು ನಾಟಕ ಕಂಪೆನಿ ತೆಗೆಯಲಿರುವನಂತೆ ! ಇರಲಿ, ಇನ್ನು ರಂಗಭೂಮಿಯ ಸುಧಾರಣೆಗಾಗಿ, ಕೆಲವರು ಅಮೆಚೂರು ಸಂಘದವರು ಯತ್ನಿಸುತ್ತಿರುವರಂತೆ ! ಅಂತಹ ಒಂದು ಕಥೆಯನ್ನು ನಾನು ಹೇಳಬೇಕಾಗಿದೆ. ನಮ್ಮ ಮಂಡ ಳಿಯು ——ಗೆ ಬಂದಿತು. ಆಗ ಅಲ್ಲಿನ ಅಮೆಚೂರರು ಬಂದು ನಮಗೆ ನಿಮ್ಮ ಥಿಯೇಟರಿನಲ್ಲಿ ನಮ್ಮದೊಂದು ಪ್ರಯೋಗ ಮಾಡಿ ತೋರಿಸಬೇಕು ಅಂದರು. ನಮ್ಮ ಮಾಲಕ ರಿಗೆ ಅಂಥಾದ್ದನ್ನು ಕಂಡರೆ ಅವಮಾನ. ಆದರೆ ಅಲ್ಲಿನ ಅಮೆ ಚೂರರಲ್ಲಿ ಕೆಲವು ಪ್ರಸಿದ್ಧ ನಟರೂ, ತುಂಬಾ ಅಧುನಿಕ ವಿದ್ಯಾ ವಂತರೂ ಇದ್ದರು. ಆದ್ದರಿಂದ ನಮ್ಮ ರಾಯರು ಒಪ್ಪಿದರು.

ಇಂದು ಅವರ ನಾಟಕವು ನಮ್ಮ ಥಿಯೇಟರಿನಲ್ಲಿ ಆಗಲಿದೆ. ಜನರು ಬಹಳವಾಗಿ "ರಿಜರ್ವ" ಮಾಡಿಸಿ ಹೋಗಿರುವರು. ಸಂಜೆ ರಂಗಪಾರ್ಟಿಯಲ್ಲಿ ಎಲ್ಲರೂ ನೆರೆದರು. ಬಂಣ ಸವರಿ ಕೊಂಡು ಆದಿನ ನಾಟಕವೂ ಆಯಿತು. ನಮ್ಮ ಮಾಲಕರು ಸ್ವತಃ ಅವರ ಪ್ರಶಂಸೆಯನ್ನು ಪ್ರೇಕ್ಷಕರ ಮುಂದೆ ಮಾಡಿ ದರು. ಅಮೇಚೂರ ಕಾರ್ಯದರ್ಶಿಯರೂ, ನಮ್ಮ ಮಾಲಕರ ದೇಶ, ಭಾಷಾ, ಸಮಾಜ ಪ್ರೇಮಗಳನ್ನು ಕೊಂಡಾ ಡಿದರು. ಹೀಗೆ "ಉಭಯ ಕುಶಲೋಪರಿ ಸಾಂಪ್ರತ" ಆಗಿ ಆದಿನವ ನಾಟಕವು ಮುಗಿಯಿತು. ಅವರವರು ಅವರವರ ಮನೆಯನ್ನು ಸೇರಿದರು.

ಇಷ್ಟರಲ್ಲೇ ಕಥೆಮುಗಿಸಿದರೆ ನಿಮಗೆ ಬೇಸರವಾಗಬಹುದು. ಆಗಲಿ ಆಗದಿರಲಿ. ನಾನು ಮಾತ್ರ ಹಾಗೆ ಊಹಿಸುವೆನು. ಮೊದಲು ನಮ್ಮ ಮಾಲಕರ ಬಳಿಗೆ ಬಂದು "ನಾಟಕ" ಹೇಗಾ ಯಿತು ಎಂದು ಕೇಳಿದೆ. "ಬಯಲಾಟ" ಎಂದು ನಕ್ಕು ಬಿಟ್ಟರು. ಮಾಲಕರು ನಕ್ಕಮೇಲೆ ಉಳಿದ ಪರಿವಾರಗಣವು ನಗಲೇ ಬೇಕು. ನಾನೂ ನಕ್ಕೆ.

ಇನ್ನು ನನ್ನ ಟೀಕೆ. ಸತ್ಯ ಹೇಳುವುದಾದರೆ ಕೆಲವು ನಟರು ಇರಲಿ, ಒಬ್ಬಿಬ್ಬ ನಟರು, ವ್ಯವಸಾಯಿಗಳಿಗಿಂತಲೂ ಅಭಿ ನಯದಲ್ಲಿ ಮೇಲ್ಮರದವರಿದ್ದರು. ಇದು ಅಂತರಂಗದ ಒಪ್ಪಿಗೆ. ಇನ್ನು ಸಂಗೀತದ ವಿಚಾರದಲ್ಲಿ ನನ್ನ ಮನ್ನಣೆಯಿಲ್ಲ. ಅವರ ಲ್ಲೊಬ್ಬರನ್ನು "ನಿಮ್ಮಂಥವರಿಗೆ ಈ ಕೆಲಸವೇಕೆ ?" ಎಂದು ಕೇಳಿದೆ. "ರಂಗಭೂಮಿಯ ಸುಧಾರಣೆಗಾಗಿ" ಎಂದರು. ಅದಕ್ಕೆ "ಹೀಗೆ ಆರುತಿಂಗಳಿಗೊಮ್ಮೆ ಆಡಿದರೆ ಕಲೆಯನ್ನು ಸುಧಾ

ರಿಸಲು ಶಕ್ಯವೇ" ಎಂದು ಕೇಳಿದೆ. "ಅದೂ ನಿಜ"ಎಂದರು. ನಿಮ್ಮ ಸುಧಾರಣೆಯ ಸ್ವರೂಪಗಳೆಷ್ಟು ಎಂದು ಕೇಳಲಾಗಿ ಅವರು ತಡವಿಲ್ಲದೆ, "ಕಲಾ, ನೈತಿಕ" ಎಂದು ಎರಡು ರೀತಿಯಿಂದಲೂ ಆಗಬೇಕು ಎಂದರು. ನಾನು ತಲೆ ತೂಗಿದೆ. ಕಲೆಯದೃಷ್ಟಿಯಿಂದ ಸುಧಾರಿಸಲು ಅವರು ವಿದ್ಯಾವಂತರಾದುದರಿಂದ ಅವರಿಂದ ಸಾಧ್ಯವಾಗಬಹುದು ಎಂದು ಊಹಿಸಿದೆ.

ಇನ್ನು ನೈತಿಕ ಸುಧಾರಣೆ. ಇದು ಹೇಗಾಗಬೇಕು ಎಂಬ ವಿಚಾರವು ನನಗೇನೋ ಆಗ ಹೊಳೆಯಲಿಲ್ಲ. ಅವರನ್ನು ಕೇಳಬೇಕೆನ್ನುವಷ್ಟರಲ್ಲಿ ಅವರು ಹೊರಟು ಹೋಗಿದ್ದರು. ನಾನು ಅತ್ತಿತ್ತ ನೋಡುತ್ತಿರುವಷ್ಟರಲ್ಲಿ, ಇನ್ನೊಬ್ಬರು—ಅವರು ಸಂಘದ ಪಾರ್ಟುದಾರರೇ—ಬಂದು "ಏನು? " ಎಂದು ಕೇಳಿದರು. ಶಬ್ದವು ನನ್ನ ಕಿವಿಗೆ ಮುಟ್ಟುವುದಕ್ಕೆ ಮೊದಲೇ ಏನೋ ಒಂದು ನಾತವು ನನ್ನ ಸೊಳ್ಳೆಗೆ ಹೊಳೆಯಿತು. ನಾನು ಅವರ ಅಧಿಕಾರದಿಂದ ತಪ್ಪಿಸಿಕೊಳ್ಳಲು ಬೇಗನೆ " ಏನೂ ಇಲ್ಲ "ವೆಂದು ಹೊರಟು ಬಿಟ್ಟೆ.

ಅಂದಿನಿಂದ ನನ್ನ ತಲೆಯಲ್ಲಿ ಸುಧಾರಣೆಯ ಸುಳಿವು ಹತ್ತಿತು. ಅವರ ಮೂಲವೇನು ಎಂದು ಹುಡುಕತೊಡಗಿದೆ. ಅದು ಸುಲಭವಾಗಿ ಸಿಕ್ಕುವಂತೆ ಕಂಡುಬರಲಿಲ್ಲ. ಅಂತು ಒಂದು ವಿಚಾರ ನನಗೆ ಸ್ಪಷ್ಟವಾಗಿ ಹೊಳೆಯಿತು. ನಾನು ಅಂದಿನತನಕ ನಕಲಿಯವನಾಗಿ ಮಾಡುತ್ತಿದ್ದುದು ಅದು ಅಭಿನಯವಲ್ಲವೆಂದು.

## ೧೧. " ಕನ್ನಡಿಯ ಮುಂದೆ "

ದಿನಗಳು ಒಂದೇಸಮನಾಗಿ ಸರಿಯುವುದಿಲ್ಲ. ಮನುಷ್ಯನ ಜೀವಮಾನಗಳಲ್ಲಿ ಏರಿಳಿತಗಳಿದ್ದೇ ಇವೆ. ಒಂದು ದಿನ ದುಃಖ. ಅದು " ನಾಟಕಿ ನನ್ನ " ನ್ನೂ ಬಿಡದೆ ಹೋಯಿತು. ಒಂದು ದಿನ ನಾನು ಕಾಹಿಲೆಯಿಂದ ಹಾಸಿಗೆ ಹಿಡಿದೆ ಇಂದಿಗೆ ನಾನು ಮಂಡಳಿಗೆ ಬಂದು ೬ ವರುಷವಾಯಿತು. ನನಗೀಗ ಇಪ್ಪತ್ತು ವರುಷ್ಸು. ಅಂದಿನಿಂದ ಇಂದಿನ ತನಕ ನಾನು ನಾನಾಗಿ ೧೦ಕಾಸು ಉಳಿಸಿಕೊಳ್ಳಲಶಕ್ತನಾದೆ, ನನ್ನ ಡ್ಯಾಯರಿಯಲ್ಲಿ ಯಾವಾಗಲೂ ಜಮಾ ಕಡಿಮೆ. ಖರ್ಚು ಹೆಚ್ಚು. ಇರಲಿ, ಅವಿಚಾರ. ನನ್ನ ಆರೋಗ್ಯವು ನಾನು ಕಂಪನಿಗೆ ಬಂದಂದಿನಿಂದ ಕೆಡುತ್ತ ಬಂದಿದೆ. ನನಗೆ ಮೊದಲಿನ ಸ್ಮರಣಶಕ್ತಿಯು ಇರುವುದಿಲ್ಲ. ಅತ್ತ ತಾರುಣ್ಯವು ಬರಲು ಸ್ವರವೂ ಹೋಯಿತು. ಇಂದು ದೇಹವು ಕೃಶವಾಗಿ ಎದೆಗುಂಡಿಗೆ ರೋಗವು ತೊಡಗಿದೆ. ನಾನು ಅಂದಿನಿಂದ ಅಷ್ಟು ಎಚ್ಚರಿಕೆಯಿಂದ ತೆಗೆದುಕೊಳ್ಳುವ ಶಕ್ತಿವರ್ಧಕ ಔಷಧಿಗಳು ತಮ್ಮ ನಿಷ್ಪ್ರಯೋಜಕತೆಯನ್ನು ತೋರಿಸಿ ಬಿಟ್ಟವು. ನನಗೆ ಅಶಕ್ತಿಯಿಂದ ಕುಳಿತಲ್ಲಿಂದ ನಿಂತಿರಲು ಸಾಧ್ಯವಿಲ್ಲ. ಪಾರ್ಟು ಮಾಡದೆ ಅಂದಿಗೆ ೧೫ ದಿನಗಳಾಗಿದ್ದವು. ಮಾಲಕರು ಸಿಟ್ಟಿನಿಂದ " ಸಿಕ್ಕಿದ್ದನ್ನು ತಿನ್ನುವುದು. ಮತ್ತು ಕಾಹಿಲೆ ಬೀಳುವುದು. ಇವರ ಆರೈಕೆಯನ್ನು ತೆಗೆದುಕೊಳ್ಳುವುದಾರು " ಎಂದು ಬೈದರು. ನನಗೆ ತಲೆಯ ಮೇಲೆ ಸಿಡಿಲು ಬಡಿದಂತಾಯಿತು. ಭದ್ರಪ್ಪನಿಗೆ ನನ್ನನ್ನು ಊರ ಆಸ್ಪತ್ರೆಗೆ ಒಯ್ದು " ಇನ್‌ಪೇಶಂಟಾಗಿ " ಸೇರಿಸು ಅಂದೆ. ಅವನು ಅಷ್ಟು ಉಪಕಾರ ಮಾಡಿದನು.

ಕೇಳಿದೆನು— ಮಂಡಳಿಯು ಅದೇ ಆರೇಳು ದಿನಗಳಲ್ಲಿ ಮುಂದಿನ ಪ್ರವಾಸಕ್ಕೆ ಹೊರಟಿತೆಂದು. ಮಾಲಕರು ನನ್ನ ಬಳಿಗೆ ಅಂದಿನ ತನಕ ತಾವಾಗಿ ಬರಲಿಲ್ಲ. ಹೆಚ್ಚೇನು? ಆ ದಿನವೂ ಬರಲಿಲ್ಲ. ಚಿದಂಬರ ಭದ್ರಪ್ಪರು ಬಂದು " ನಾವು ಹೋಗುವೆವು " ಅಂದರು. ನನಗೆ ಅದರರ್ಥ ತಿಳಿಯಿತು. ನಾನು ಅಳತೊಡಗಿದೆ. ಚಿದಂಬರನು ಅತ್ತನು. ಅವನು ನನ್ನನ್ನು " ಅಂಣಾ " ಎಂದು ಕರೆಯುತ್ತಿದ್ದ. ನನ್ನ ದುಃಖವನ್ನು ಕಂಡು ಅವನು " ಅಂಣಾ, ದುಃಖಿಸಬೇಡ. ನಾನು ನಿನ್ನ ಬಳಿಯಲ್ಲೇ ಉಳಿಯುವೆನು " ಎಂದನು. " ಮಾಲಕರು ಗದರಿಸಿದರೆ " ಎಂದು ಭದ್ರಪ್ಪ ಹೇಳಿದ. ಚಿದಂಬರನು "ಇಂತಹ ಸಮಯದಲ್ಲಿ ಬಿಟ್ಟು ಹೋಗಲಾರೆ, ಮಾಲಕರು ಸಿಟ್ಟಾದರೆ ಆಗಲಿ. ನನಗೆ ಕಂಪನಿಯೇ ಬೇಡ ನಾಳೆ ನಮಗೆ ಈ ಗತಿಯಾದರೆ " ಎಂದ. ಸರಿ, ಭದ್ರಪ್ಪನು ತನ್ನ ಕಿಸೆಯಿಂದ ನನ್ನ ಬಳಿಯಲ್ಲಿ ನಾಲ್ಕು ರೂಪಾಯಿಗಳನ್ನಿರಿಸಿ ಹೊರಟುಹೋದನು. ಚಿದಂಬರನು ನನ್ನ ಬಳಿಯಲ್ಲಿರದಿದ್ದರೆ ನನ್ನ ಅವಸ್ಥೆಯು ಏನಾಗುತ್ತಿತ್ತು ತಿಳಿಯದು.

ಇನ್ನು ನಮ್ಮ ಡಾಕ್ಟರರ ಸುದ್ದಿಯನ್ನು ಹೇಳುವೆ. ಇದು ಮಾತ್ರ ಖಂಡಿತ ನಾನು ಎರಡು ಮಂಡಳಿಗಳ ಸರ್ವಿಸುದಾರ. ಒಟ್ಟು ಆರು ವರುಷದ ಅನುಭವ. ಈ ಎಲ್ಲ ಪ್ರವಾಸಗಳಲ್ಲಿಯೂ, ನಮಗೊಬ್ಬ ಪ್ರೀತಿಯ ವೈದ್ಯರು ಸಿಕ್ಕಿರುವರು. ಅವರಿಲ್ಲದಿದ್ದರೆ ನಮ್ಮ ಅವಸ್ಥೆಯೇನಾಗುವುದೋ! ನಮ್ಮಲ್ಲಿ ಮೂವತ್ತು ಜನರಿದ್ದರೆ ಅದರಲ್ಲಿ ಅರ್ಧರಷ್ಟು ಮಂದಿ ನಿತ್ಯವೂ ಔಷಧಸೇವನೆ ಮಾಡುವವರೇ. ನಮ್ಮ ಅರ್ಥಾತ್ ಆಹಾರವೇ ಔಷಧ, ಹೀಗಿರುವಲ್ಲಿ, ನಮಗೆ ಸಿಗುವ ವೈದ್ಯರಾ

ದರೂ ಎಂಥವರು ? ಅವರು ತಾವು ಕೊಟ್ಟ ಔಷಧಗಳ ಬೆಲೆಯನ್ನು ತೆಗೆದುಕೊಳ್ಳುವುದಾದರೆ ಅದು ತಿಂಗಳಿಗೆ ೧೦೦ ರೂಪಾಯಿಗೆ ಕಡಿಮೆಯಾಗದು. ಇನ್ನು ಅವರ ಪರಿಶ್ರಮದ ಪುರಸ್ಕಾರವನ್ನು ಹೇಳಲೇಬೇಡ. ಈಗ ನನಗೆ ಸಿಕ್ಕಿದ ವೈದ್ಯರಾದರೂ ಅಂತಹ ಪುಣ್ಯಾತ್ಮರು. ಅವರು ಅತಿ ಪ್ರೀತಿಯಿಂದ ನನ್ನ ಚಿಕಿತ್ಸೆಯನ್ನು ಮಾಡತೊಡಗಿದರು. ಇಷ್ಟೊಂದು ಪ್ರೀತಿ ತೋರಿದ ವೈದ್ಯರೊಡನೆಯೂ ರೂಢಿಯಿಂದ "ನಾಟಕಿ ನಾವು" ಗಳು ಊರು ಬಿಡುವಾಗ "ಹೋಗುವೆವು" ಎಂದು ಹೇಳಿ ಬರಲು ಹೋಗುವುದಿಲ್ಲ, ಇರಲಿ.

ನನ್ನ ಬೇನೆಯು ನಾಲ್ಕಾರು ದಿವಸಗಳವರೆಗೆ ಏರುತ್ತ ಹೋಯಿತು. ಅದಕ್ಕೆ ಇಂಗ್ಲಿಷಿನಲ್ಲಿ Hart disease ಎಂದು ಹೆಸರಂತೆ. ಡಾಕ್ಟರರಿಗೆ ನಾನು ಉಳಿಯುವೆನೆಂಬ ವಿಶ್ವಾಸವಿದ್ದಿಲ್ಲವೆಂದು ಆಮೇಲೆ ಹೇಳಿದರು. ಆಗಂತು ನನ್ನನ್ನು ಮತ್ತು ಅಳುತ್ತಿರುವ ಚಿದಂಬರನನ್ನು, "ಏನೂ ಅಂಜಿಕೆಯಿಲ್ಲ" ಎಂದು ಧೈರ್ಯಗೊಳಿಸುತ್ತಿದ್ದರು. ಚಿದಂಬರಗೆ ಡಾಕ್ಟರರ ಮನಿಯಲ್ಲಿ ಊಟ. ಅಂತು ೧೦ ದಿನಗಳು ಕಠಿಣವಾಗಿ ಸಂದುವು. ಆಮೇಲೆ ನನ್ನ ಹೃದ್ರೋಗವು ಗುಣವಾಯಿತು. ನಿತ್ರಾಣವಂತು ಹಾಗೆಯೇ ಇತ್ತು. ಡಾಕ್ಟರು ಒಂದು ದಿನ ನನ್ನ ಬಳಿಯಲ್ಲಿ ಬಂದು ನಿಂತಾಗ, "ನನ್ನ ಮುಂದಿನ ಚಿಕಿತ್ಸೆ" ಅಂದೆ. ಅವರು ಇನ್ನೂ ಕೆಲವುದಿನ ಅಲ್ಲೇ ಇರಲು ಹೇಳಿದರು. ಮತ್ತು ಮಾತ ನಾಡಕೂಡದೆಂದರು. ನಾನು ವಿಧೇಯನಾಗಿದ್ದೆ. ಏಕೋ ಅವರಿಗೆ ನನ್ನ ಮೇಲೆ ಕನಿಕರವುಂಟಾಯಿತು. ನಾನು ಸಂಪೂರ್ಣ ವಾಸಿಯಾದೆನೆಂದು ಅವರು ನನಗೆ ಹೇಳಿದರು. ನಾನು ಅವರಿಗೆ ಉದ್ದಂಡ ನಮಸ್ಕಾರಮಾಡಿದೆ. ಅವರು ಪ್ರೀತಿಯಿಂದ ಮೇಲಕ್ಕೆ ನನ್ನನ್ನೆಬ್ಬಿಸಿದರು. ನಾನು ಮುಂದೆ ಆಹಾರ ಮೊದಲಾದ ನಿಯಮಗಳನ್ನು ಹೇಗೆ ಇರಿಸಿಕೊಳ್ಳಬೇಕು ಎಂದು ಕೇಳಿದೆ. ಅಷ್ಟಕ್ಕೆ ಅವರ ಕಣ್ಣಿನಿಂದಲೆ ಒಂದು ಹನಿ ನೀರು ಸುರಿಯಿತು. ನನಗೆ ಆಶ್ಚರ್ಯವಾಯಿತು. ಅವರೇಕೆ ಹಾಗೆ ಮಾಡುವರು ಎಂದು ತಿಳಿಯದಾಯಿತು. ಅವರು ಅಳುತ್ತ "ಮಗೂ, ನೀನು ದೇಹಸ್ಥಿತಿಯನ್ನು ಕಠಿಣಾವಸ್ಥೆಗೆ ತಂದು ಕೊಂಡಿರುವೆ. ಇನ್ನು ನಿನ್ನ ವ್ಯವಸಾಯಕ್ಕೆ ತಿ ನರುಷಗಳ ತನಕ ಹೋಗಬೇಡ" ಎಂದರು. "ಅಷ್ಟೇ ಸರಿಯೇ" ಎಂದು ಕೇಳಲು, ಅವರು ತಮ್ಮ ಕೊಟಡಿಗೆ ಹೋಗಿ ಒಂದು ಚಿಕ್ಕ ಪುಸ್ತಕವನ್ನು ತಂದು "ಮಗೂ, ನಿನಗೆ ನಿನ್ನ ಪ್ರಾಣದಾಸೆಯಿಲ್ಲವೇ ?" ಎಂದು ಕೇಳಿದರು. ಈ ಪ್ರಶ್ನೆಯನ್ನು ಕೇಳಿ ಮತ್ತಷ್ಟು ಆಶ್ಚರ್ಯವಾಯಿತು. ಆಗವರು "ನೀನು ನನಗೊಂದು ವಚನವನ್ನು ಕೊಡಬಲ್ಲೆಯಾ ? ನಿನ್ನ ಹಿತದ ಸಲುವಾಗಿ ಹೇಳುವೆನು. ನನಗೆ ನಾಟಕಿವಚನಗಳು ಬೇಡ" ಎಂದರು. ನನ್ನಪ್ರಾಣವನ್ನುಳಿಸಿದ ಅವರ ಮನೆಯ ದಾಸ್ಯಕ್ಕೂ ನಾನು ಸಿದ್ಧನಿದ್ದೆನು. ನಾನು ಅವರ ಪಾದವನ್ನು ಮುಟ್ಟಿ ಪಾದದಾಣೆಯಾಗಿಯೂ ಹೇಳಿದಂತೆ ಮಾಡುವೆನು. ಎಂದೆನು. ನನಗೆ ನನ್ನ ಭಾವೀ ಜೀವನವು ಅವರ ಕೃಪೆಯ ಪುರಸ್ಕಾರವೆಂದು ತಿಳಿಯದೆ ಇರಲಿಲ್ಲ. ಆಗವರು ಸಂತೋಷಿತರಾಗಿ, "— ನೀನು ಈ ಚಿಕ್ಕ ಪುಸ್ತಕವನ್ನು ಓದು. ಮತ್ತು ಇವರಂತೆ ನಡೆಯಲು ಯತ್ನಿಸು" ಎಂದು ಹೇಳಿದರು. ನಾನು ಆತುರದಿಂದ ಆ ಪುಸ್ತಕವನ್ನು ಸ್ವೀಕರಿಸಿದೆನು. ಓದಿಮುಗಿಸಿದ ಬಳಿಕ ಚಿದಂಬರಗೂ ಆ ಪುಸ್ತಕವನ್ನು ಕೊಡಲು ಅವರು ಹೇಳಿದರು.

## ೧೨. "ಸ್ವರ್ಗವೇ, ನರಕವೇ ?"

ಇಷ್ಟೊಂದನ್ನು ಓದಿದ ವಾಚಕರು ಈ ನನ್ನ ಉಪಸಂಹಾರದ ಕೊನೆಯ ಅಧ್ಯಾಯವನ್ನು ಓದದಿರುವಷ್ಟು ನಿರ್ದಯರಾಗಬಾರದು. ಇದನ್ನು ಓದದಿದ್ದರೆ ಹಿಂದಿನ ಪುಟಗಳನ್ನು ಓದಿದ್ದೇ ವ್ಯರ್ಥ.

ಡಾಕ್ಟರರು ನನ್ನ ಕೈಮೇಲಿರಿಸಿದ ಪುಸ್ತಕದ ಹೆಸರು "ಬ್ರಹ್ಮಚರ್ಯ"ವೆಂದು. ನಾನು ತೆರೆದು ಓದತೊಡಗಿದೆ. ಪುಸ್ತಕದಲ್ಲಿ ಹೆಚ್ಚು ಹಾಳೆಗಳಿದ್ದಿಲ್ಲ. ಅದರ ಗ್ರಂಥಕರ್ತರು, ಓದುಗರಿಗೆ ಬೇಸರವಾಗದಿರಲಿ ಎಂದು ಅದನ್ನು, ಜಾಣ್ಮೆಯಿಂದ ಸೂಕ್ಷ್ಮವಾಗಿ ಮುಗಿಸಿದ್ದರು. ಪುಸ್ತಕವನ್ನು ಪೂರ್ಣ ಓದಲು ನನ್ನಿಂದಾಗಲಿಲ್ಲ. ಕಣ್ಣಿನಿಂದ ಅವಿರತವಾಗಿ ಅಶ್ರುಧಾರೆಯು ಸುರಿಯುತ್ತಿತ್ತು. ಚಿದಂಬರನು ಪುಸ್ತಕವನ್ನು ನನ್ನ ಬಳಿಕ ಓದಿದನು. ಆ ಪ್ರಾಣಿಯ ಅವಸ್ಥೆಯು ನನ್ನಂತೆಯೇ ಆಯಿತು ಅದನ್ನೋದಿ ನನಗೆ ನನ್ನ ಕಾಹಿಲೆಯ ಕಾರಣವು ತಿಳಿಯಿತು. ನನ್ನ ಗೆಳೆಯರಿಗೆ ಆಗಾಗ ಅಂಟುತ್ತಿರುವ ಬೇನೆಯ ಕಾರಣವೂ ಹೊಳೆಯಿತು. ರಂಗಭೂಮಿಯ ನೈತಿಕ ಸುಧಾರಣೆಯೇನೆಂದೂ ಹೊಳೆಯಿತು.

ನಾವು ಎಂತಹ ಪಾಪಿಜೀವನವನ್ನು ನಡೆಯಿಸುತ್ತಿದ್ದೆವು ಎಂದು ನನಗೆ ಮಂದಟ್ಟಾಯಿತು. ನಾನು ನನ್ನ ನಾಟಕಿಗೆಳೆಯರು ಹಲವರಂತೆ ವ್ಯಭಿಚಾರಕ್ಕೆ ಬಲಿಬಿದ್ದವನಲ್ಲವೆಂದು ನಂಬಿರಿ. ನಾನು ಆಲೆಪೂರ ಸಂಘದಲ್ಲಿ ಇನ್ನೂ ಸ್ವಲ್ಪ

ಸಮಯ ಇರುತ್ತಿದ್ದರೆ ಹಾಗೂ ಆಗುತ್ತಿದ್ದೆ. ಲೋಕರಂಜಕ ರಲ್ಲಿರುತ್ತಿದ್ದರೂ ಆಗುತ್ತಿತ್ತು. ಕಾರಣ, ನಮ್ಮ ನಡೆ, ನುಡಿ, ನಾಟಕ, ಅಭಿನಯ ಇವು ಶೃಂಗಾರದಿಂದ ಕಲುಷಿತವಾಗಿತ್ತು. ನನ್ನ ಆರಂಭದ ಅನುಭವದಿಂದ, ನಾನು ನನ್ನ ನಾಟಕೀ ಜೀವನದ ಪ್ರತಿಯೊಂದು ಘಟನೆಯನ್ನು ತರ್ಕಿಸತೊಡಗಿದೆ. ನನ್ನ ಪ್ರಥಮದ ಅನುಭವವೆಂದರೆ, "ಕೃಷ್ಣಲೀಲಾ" ನಾಟಕದ ನೋಟ. ಪವಿತ್ರನಾದ ಶ್ರೀಕೃಷ್ಣಭಗವಾನನು ನಾಟಕೀ ಜನರ ಕರದಲ್ಲಿ ಎಂತಹ ಕರ್ಮಚಾಂಡಾಲನಾದನು. ಇನ್ನು ನಾರದರು ಸಹ ಹಾಗೆಯೇ, ಆ ನಡೆಗಳು ನನ್ನಲ್ಲಿ ಗಳನೇ ವಯಸ್ಸಿನಲ್ಲಿ ಪ್ರೇರಿಸಿದ ದುರ್ಭಾವನೆಗಳೇ. ಇನ್ನು ಸ್ವತಃ ನಟನಾಗಿ ಶೃಂಗಾರಾದಿ ಅಭಿನಯದಿಂದ ನನ್ನಮೇಲುಂಟಾದ ವಿಚಾರವೇ!

ಇಷ್ಟೇ ಅಲ್ಲ. ನನ್ನ ಸುತ್ತಲಿನ ಜನರ ನಡೆನುಡಿಗಳು. ಮಾಲಕರಿಂದ ಮೊದಲುಗೊಂಡು ಹಲವು ಮಂದಿ ಸ್ವೇಚ್ಛಾಚಾರಿಗಳು ನನ್ನ ವಧೆ ನನಗು ಭದ್ರಪ್ಪ ಚಿದಂಬರರಿಗಿರುವ ಪ್ರೇಮವು. ಕಾಮದ ಪರಿಣಾವೆಂದು ಆಗ ತಿಳಿಯಿತು. ನಿಜವನ್ನು ಹೇಳುವುದಾದರೆ ನನ್ನ ಅನುಭವಕ್ಕೆ ಬಂದ ಮಂಡಳಿಗಳಲ್ಲಿ, ನಾನು ೪೦–೪೫ ಬಾಲಕರನ್ನು ಸಂಧಿಸಿರುವೆ. ಅವರಿಗೆ ತಕ್ಕಸ್ಟು ಶಿಕ್ಷಣವೇ ಇಲ್ಲ. ಪ್ರಪಂಚದ ತಿಳುವಳಿಕೆಯು ಇಲ್ಲ. ಆದರೆ ಅವರಲ್ಲಿ "ವ್ಯಭಿಚಾರದಿಂದಲ್ಲದರೂ"— ಇನ್ನಿತರ ಬ್ರಹ್ಮಚರ್ಯದೋಷಗಳು ತುಂಬಿವೆ. ನನ್ನ ಗುರುವು ಚಿದಂಬರ. ಚಿದಂಬರಗೆ ಮನೋಹರರ ಉಪದೇಶ. ನಿಜ, ಈ ವಿಚಾರಗಳನ್ನು ಲೇಖನಿಯಿಂದ ಚಿತ್ರಿಸುವುದೆಂದರೆ ಜನರಿಗೆ ಲಜ್ಜಾಸ್ಪದವಾಗಿ ಕಾಣಬಹುದು. ಆದರೆ ಆಗುತ್ತಿರುವ ಅನಾಹುತವನ್ನು ತಪ್ಪಿಸಲು ಹೇಳದೆ ಮಾರ್ಗವಿಲ್ಲ. ಕಾರಣ ನನ್ನ ಅನುಭವಕ್ಕೆ ಬಂದುವದರಲ್ಲಿ ಚಿಕ್ಕಮಕ್ಕಳಲ್ಲಿ ಸಹ ಒಬ್ಬ ಬ್ರಹ್ಮಚಾರಿಯನ್ನೂ ನಾನು ಕಾಣಲಿಲ್ಲ. ಇನ್ನು ಒಬ್ಬನು ಇಲ್ಲವೆಂದರೆ ಅನ್ಯಾಯವಾಗಬಹುದೋ ಏನೋ, ಅಂತು ಇರಬಹುದು. ಇದ್ದರೆ ಅವರ ಸಂಖ್ಯೆಯು ಬಲು ಸ್ವಲ್ಪ. ಈಗಿದ್ದರೂ ನಾಳೆಯು ಆವಾತಾವರಣದಲ್ಲಿ ಅವರು ತಮ್ಮ ಧರ್ಮರಕ್ಷಣೆಯನ್ನು ಮಾಡಿಕೊಂಡುಳಿಯುವರೆಂಬ ಭರವಸೆಯು ನನಗಿಲ್ಲ.

ಯಾವುದು ನನಗೆ ಒಂದುದಿನ ಯಾವುದು "ಸ್ವರ್ಗ"ವಾಗಿ ಕಾಣಿಸಿತು ಅದು "ನರಕವಾಗಿ" ಇಂದಿಗೆ ಹೊಳೆಯಿತು. ಅಂದಿನಿಂದ ನಾನೂ ಚಿದಂಬರನೂ "ರಂಗಭೂಮಿಗೆ"ಸಲಾಂಮನ್ನು ಹೊಡೆದೆವು.

ಕೆಲವು ಮಾಲಕರಿಗೆ, ತಮ್ಮ ದುರ್ಗುಣಗಳ ಜ್ಞಾನವಿಲ್ಲದೆ ಇಲ್ಲ, ಆದರೆ ಅವರಿಗೆ ಸುಧಾರಣೆಗಿಂತಲೂ "ಕಾಂಚನದ" ಆಕರ್ಷಣವು ಹೆಚ್ಚಾಗಿದೆ.

ನನಗೆ ನನ್ನ ತಂದೆಯು ನನ್ನನ್ನು ಮನೋಹರರಾಯರಿಗೆ ಒಪ್ಪಿಸುವಾಗ ನುಡಿದ ಮಾತು—ನೆನಪಾದಾಗಲೆಲ್ಲಾ ಶರೀರದ ಕಂಪನೆಯಾಗುವುದು. "ಮಗೂ, ಇವರೇ ಇನ್ನುಮುಂದೆ ತಂದೆಯೆಂದು ತಿಳಿ. ಇವರು ಹೇಳಿದ್ದನ್ನು ಕೇಳುತ್ತ. ದುಃಸಂಗಕ್ಕೆ ಬೀಳದೆ, ವಿದ್ಯಾವಂತನಾಗಿ ನಿನ್ನ ಮನೆಗೆ ಹೆಸರನ್ನು ತಾ" ಹಾ! ಎಂತಹ ಹೆಸರನ್ನು ನಾನು ತಂದೆನು. ಇತ್ತ ಓದು ಮುಗಿಯಿತು. ಸಂಗೀತವು ಬರುವುದೆಂದರೆ ನನ್ನ ಬ್ರಹ್ಮಚರ್ಯದೋಷದಿಂದ ಸ್ವರವು ಕೆಟ್ಟಿತು. ಹೆಸರು ತರಲು ನೀತಿಯು ವಿಚಿತ್ರವಾಯಿತು!!

ನಾನು ಹೀಗೆಯೇ ಬರೆಯುತ್ತ ಹೋದರೆ ನನ್ನ ನಾಟಕಿ ಬಂಧುಗಳಿಗೆ ಸಿಟ್ಟು ಬರಬಹುದು. ಅವರು ತಮ್ಮ ಅಂತರ್ಯವನ್ನು ಹುಡುಕಿದರೆ ನಿಜತ್ವವು ಸಿಗಬಹುದು.

ಇನ್ನು ನಾಟಕದಿಂದ ಸಮಾಜ, ದೇಶ, ಭಾಷಾಸೇವೆಯೆನ್ನುವ ವರಿಗೆ ನಾನು ಎದುರಾಡಲಾರೆ. ಆಗುವುದು, ಆಗೇ ಆಗುವದು. ಇದು ಇಷ್ಟು ಅನುಭವಗಳ ಮೇಲೂ ನನಗೆ ಉಳಿದ ನಂಬಿಕೆ. ಆದರೆ, ಅಕ್ಷರಜ್ಞಾನವಿಲ್ಲದ ಸಾಹಿತ್ಯವೇನೆಂದು ಅರಿಯದ ಬ್ರಹ್ಮಚರ್ಯಕ್ಕೆ ಬೆಲೆಯನ್ನು ಕೊಡದ ನಟರಿಂದಾಗಲಿ ಮಾಲಕರಿಂದಾಗಲಿ ಅದು ಎಂದೂ ಆಗದು. ಸಮಾಜದ ಮತ್ತು ನಟಜನರ ಬ್ರಹ್ಮಚರ್ಯಾದಿ ನಿಯಮಗಳಿಗೆ ಯಾರು ಗಮನಕೊಡುವದಿಲ್ಲವೋ, ಅಂತಹರಿಂದ ಮಾತ್ರ ರಂಗಭೂಮಿಯು ಸುಧಾರಣೆಯಾಗಲಾರದು.

ಹೀಗೆ ಸುಮ್ಮನೆ ಅರಿಯದೆ, "ಕಾಸಿಗಾಗಿ" ಹೆಣಗಾಡುವವರು ಸುಧಾರಕರಲ್ಲ, ತಮ್ಮ ಜನಾಂಗವನ್ನು ನರಕಕ್ಕೊಯ್ಯಬೇಕೆಂದು ಯತ್ನಿಸುವ ದೈವದ್ರೋಹಿಗಳು. ಎಂದಿನ ತನಕ ಮಾಲಕರು ತಮ್ಮ ಕಾಸಿಗಾಗಿ, ಓದು ಬರಹವಿಲ್ಲದ, ಬಾಲಕರಿಗೆ ನೀತಿಯನ್ನರಿಯುವ ವ್ಯವಸ್ಥೆಯನ್ನಿರಿಸುವರೋ ಅಂದಿನವರೆಗೆ ಅದು ಶಕ್ಯವಿಲ್ಲ. ಈಗ ನಮ್ಮ ನಾಗರಿಕರು ಅಂತರ್ಯವರಿಯದೆ, ಬರೇ ರಂಗಭೂಮಿಯ ಪ್ರೋತ್ಸಾಹವನ್ನು ವಿನೋದದ ಸಲುವಾಗಿ ಮಾಡಿದರೂ ನಡೆಯುದು. ವಿಲಾಸವು ನಟರ ಮತ್ತು ಸಮಾಜದ ಆತ್ಮಕ್ಕಿಂತಲೂ ಅಲ್ಪಬೆಲೆಯ ವಸ್ತುವೆಂದು ಪ್ರೇಕ್ಷಕರು ತಿಳಿಯದಿರಲಿ. ಇನ್ನಾದರೂ ಜನರು ರಂಗದೇವ

ತೆಯ ಮೋರೆಗೆ ಮಸಿಯು ಬಳಿಯುವ ಬದಲು, ಕುಂಕುಮವನ್ನಿಡುವುದು ತಮ್ಮ ಕರ್ತವ್ಯವೆಂದು ತಿಳಿಯಲಿ.

ಇನ್ನು "ಬರುತ್ತದೆ! ಬರುತ್ತದೆ!" ಇದರಿಂದ ಆರಂಭಿಸಿದ ನನ್ನ ಕಥೆಯು ಅವರಿಂದಲೇ ಮುಗಿಯಬೇಕು ಶ್ರೀ. ಗಿರೀಶ ಚಂದ್ರ ಘೋಷರೆಂಬ ನಾಟಕಮಂಡಳಿ ಮಾಲಕರು, ಶ್ರೀ ರಾಮಕೃಷ್ಣ ಪರಮಹಂಸರೊಡನೆ "ನನಗೆ ನಾಟಕಮಂಡಳಿ ಯಿಂದ ಬೇಸರುಂಟಾಗಿದೆ. ಅದನ್ನು ನಿಲ್ಲಿಸುವೆನು" ಎನ್ನಲು ಅವರು "ಬೇಡ. ಅದರ ಉಪಕಾರವು ಬಹಳವಿದೆ" ಎಂದರಂತೆ. ಈ ಮಾತನ್ನು ಯಾರೂ ಅಲ್ಲಗಳೆಯಲಾರರು. ನಿಜವಾದ ನೀತಿಪರ ನಾಟಕವನ್ನು, ನೀತಿಪರ ಕೂಟಗಳು ಆಡಿದರೆ, ಇಂದು ಸಮಾಜದ ಸ್ಥಿತಿಗಳನ್ನು ಹಾಹಾ ಎನ್ನುವುದರಲ್ಲಿ ಸುಧಾರಿಸಲು ಶಕ್ಯವುಳ್ಳ ಶಿಕ್ಷಣಸಂಸ್ಥೆಯದು. ಭಾಷಾ—ಏಕೀಕರಣ ಸೇವೆಗೆ ಅನುಕೂಲಿಸಿದ ಸಂಗತಿಯುಸು. ಆದರೆ ಇದ್ದಕಿದ್ದಂತೆ ನಾವು ಈ ಆದರ್ಶವೆಂಬ ಉತ್ತರಧ್ರುವದ ಪಾಲಿಗೆ, ದಕ್ಷಿಣ ಧ್ರುವದಲ್ಲಿರುವೆವು.

ಈ ಅಮಾವಾಸ್ಯೆಯಿಂದ ಹುಣ್ಣಿಮೆಯು ಉದಯಿಸಲೇ ಬೇಕು. ನಮ್ಮ ನಾಡಿನಲ್ಲಿ ನವೀನ ಉತ್ಸಾಹಿಗಳು ಬೆಳೆಯುತ್ತಿರುವರು. "ಕಲಾ-ನೀತಿ"ಗಳೆರಡೂ ಅಭೇದ್ಯವೆನ್ನುವ ಆ ತರುಣ ವೃಂದದಿಂದ ನಮ್ಮ ರಂಗಭೂಮಿಯು ಮುಂದೆ ಬರಬೇಕು. ರಂಗಭೂಮಿಗಾಗಿ ಕಣ್ಣೀರನ್ನಿಡುವ ನನಗೆ ಪ್ರತಿದಿನವೂ ಕನಸಿನಲ್ಲಿ ಅಂತಹದೊಂದು ರಂಗಭೂಮಿಯ ಚಿತ್ರವು "ಬರುತ್ತದೆ, ಬರುತ್ತದೆ" ಎಂದು ತೋರುವುದು.

---

## ಜೀವನ

॥ ವಾರ್ಧಿಕ ಷಟ್ಪದಿ ॥

ಜೀವನವು ಝರಿಯಾಗಿ ತಿಳಿ ನೀರ ತೊರೆಯಾಗಿ ।
ಮಾವು ನೀರಲ ಹಲಸು ಮರಗಳಿಗೆ ನೀರೆರೆದು ।
ಜೀವಿಗಳ ಜೀವಾಳ ಕಡಲು-ಬೊಮ್ಮನ ಸೇರೆ, ಜನ್ಮಸಾಫಲ್ಯವಿಂತು ॥

ಜೀವನವು ಎದೆಯೊಳಗೆ ಮಿದುವಾಗಿ ನವಿರಸದ ।
ಹೂವಾಗಿ, ಹಗಲೊಳಗೆ ಜಗಕೆ ಗಂಧವ ಬೀರಿ ।
ಸಾವ ಸಂಜೆಗೆ ಸೇರೆ, ಬರುವಿರುಳ ಕಾಣದಲೆ, ಜನ್ಮ ಸಾಫಲ್ಯವಿಂತು ॥೧॥

ಜೀವನವು ಮೇರೆಮೀರಿಹ ಕಾಲ ಗಗನದೊಳು ।
ಜೀವಂತವಾಗಿ, ಮಿರುಮಿರುಗಿ ಬೆಳಕನು ನೀಡಿ ।
ಸಾವಿನೊಳು ಚಣದೊಳಗೆ ಸೇರುತಿಹ ಉಡುವಾಗೆ, ಜನ್ಮಸಾಫಲ್ಯವಿಂತು ॥

ಜೀವನವು ಹೊರಗೆ ನುಣುಪಾಗೊಳಗೆ ವಿಷ ಪಡೆದ ।
ಹಾವಾಗಿ, ಕಟುಕತರ ಭಾವಮಂ ತಳೆದೊಂದು ।
ಸಾವಿರ ಬರಿಸ ಬಾಳಿ ಜನರ ಬೈಗಳ ಕೇಳಿ, ಜನ್ಮಸಾಫಲ್ಯವೇನು ! ॥೩॥

—ದಿನಕರ ದೇಸಾಯಿ; ಅಂಕೋಲಾ.



ಶ್ರೀ. ಮಿಣಜಿಗಿ ಮಡಿವಾಳಪ್ಪನವರು ಎ. ಎಂ.

ಚಿತ್ರಕಲಾಕೋವಿದರಾದ

# ಶ್ರೀ. ಮಡಿವಾಳಪ್ಪಾ ಮಿಣಜಿಗಿಯವರು

ಲೇಖಕ :— ಶ್ರೀ. ಕಲಾಪ್ರೇಮಿ.

ಕರ್ನಾಟಕವು ಒಂದು ಕಾಲಕ್ಕೆ ಅನೇಕ ಬಗೆಯ ಚಿತ್ರಕಲೆಗಳ ಆಗರವಾಗಿತ್ತು. ಇಷ್ಟೇ ಅಲ್ಲ, ಇಡೀ ಹಿಂದುಸ್ಥಾನದಲ್ಲಿ ಚಿತ್ರಕಲೆಯ ಸೇವೆಯನ್ನು ಕರ್ನಾಟಕವು ಮಾಡಿದಷ್ಟು ಮತ್ತಾವ ಪ್ರಾಂತವೂ ಮಾಡಿಲ್ಲವೆಂದು ಹೇಳಿದರೆ ಇತಿಹಾಸ ಗೊತ್ತಿಲ್ಲದವರಿಗೆ ಅದು ಅತಿಶಯೋಕ್ತಿಯಾಗಿ ತೋರಬಹುದು. ಆದರೆ ಅದು ಅತಿಶಯೋಕ್ತಿಯು ಅಲ್ಲ. ಕ್ರಿಸ್ತಶಕದ ಪ್ರಾರಂಭದಿಂದ ಚಿತ್ರಗಳಲ್ಲಿ ಪ್ರಸಿದ್ಧವಾಗಿರುವ ಅಜಂತೆಯ ಗುಹೆಗಳು ನಮ್ಮ ಪೂರ್ವಜರಿಂದಲೇ ಕಟ್ಟಲ್ಪಟ್ಟವುಗಳು. ಆ ಗುಹೆಗಳಲ್ಲಿರುವ ಬಣ್ಣದ ಚಿತ್ರಗಳನ್ನು ನೋಡುವುದಕ್ಕೆ ಜಗತ್ತಿನ ಯಾವತ್ತು ಭಾಗಗಳ ತಜ್ಞರು ಈ ಕಡೆಗೆ ಬಂದು ಹೋಗುತ್ತಾರೆ. ಕಲ್ಲೊಳಗಿನ ಚಿತ್ರಗಳಂತೂ ಕರ್ನಾಟಕವಲ್ಲಿ ಹೇರಳವಾಗಿ ದೊರೆಯುತ್ತವೆ. ಜಗತ್ತಿನಲ್ಲೆಲ್ಲ ಆಶ್ಚರ್ಯಕರವಾದ ಅದ್ಭುತವಸ್ತುವೆಂದು ಹೊಗಳಿಸಿಕೊಳ್ಳಲ್ಪಡುತ್ತಿರುವ ವೇರೂಳಿನ ಕೈಲಾಸಗುಡಿಯನ್ನು ಕಟ್ಟಿದವನು ನಮ್ಮ ಕನ್ನಡ ಅರಸನೇ ಅಲ್ಲವೆ? ಬೇಲೂರ ಹಳೇಬೀಡು ಸೋಮನಾಥಪುರಗಳ ದೇವಾಲಯಗಳಲ್ಲಿಯ ಚಿತ್ರಗಳೇನು ಕಡಿಮೆ ತರಹದ ಚಿತ್ರಗಳೊ? ಹೀಗೆ ಚಿತ್ರಕಲೆಯು ಕರ್ನಾಟಕದ ವೈಶಿಷ್ಟ್ಯವಾಗಿರಲು ಈಗ ನಾವು ಅದನ್ನು ಕಳೆದುಕೊಳ್ಳಹತ್ತಿರುವುದು ಯಾವ ಕನ್ನಡಿಗನನ್ನು ವ್ಯಸನಕ್ಕೀಡುಮಾಡಲಿಕ್ಕಿಲ್ಲ? ಇರಲಿ, ಇಂಥ ಪರಿಸ್ಥಿತಿಯಲ್ಲಿ ಚಿತ್ರಕಲೆಯ ಪುನರುದ್ಧಾರವನ್ನು ಮಾಡಲು ಯತ್ನಿಸುವುದು ನಮ್ಮ ಕರ್ತವ್ಯ ವಾಗಿದೆ. ಹಿಂದಿನ ಕಾಲಕ್ಕೆ ಬಣ್ಣದಲ್ಲಿ ಬರೆದ ಚಿತ್ರಗಳು, ಭಾವಚಿತ್ರಗಳು, ಇಟ್ಟಂಗಿಯಿಂದ ಮಾಡಿದ ಗೊಂಬೆಗಳು ಚಂದನದಲ್ಲಿ ಕೆತ್ತಿದ ಸುಳುವು ಬೊಂಬೆಗಳು ಇವೇ ಮುಂತಾದುವುಗಳು ಈಗ ಸಹ ಅಲ್ಲಲ್ಲಿಗೆ ದೊರೆಯುತ್ತವೆ. ಅವುಗಳನ್ನು ಕೂಡಿಹಾಕುವುದಕ್ಕೆ ಪ್ರತಿಯೊಬ್ಬ ಕನ್ನಡಿಗನು ಯತ್ನಿಸಬೇಕು. ಈ ದೃಷ್ಟಿಯಿಂದ ಬೆಂಗಳೂರಿನಲ್ಲಿ ಕೂಡಲಿಕ್ಕಿರುವ ಚಿತ್ರಪ್ರದರ್ಶನಕ್ಕೆ ಕನ್ನಡಿಗರೆಲ್ಲರೂ ಸಹಾಯ ಮಾಡುವುದು ಅವಶ್ಯ. ಇರಲಿ.



ಶ್ರೀದುರ್ಗಾ.

ಹೀಗೆ ಚಿತ್ರಕಲೆಯನ್ನು ಪುನರುಜ್ಜೀವನಗೊಳಿಸುವುದಕ್ಕೆ ಪ್ರಯತ್ನಿಸುತ್ತಿರುವವರಲ್ಲಿ ಶ್ರೀ. ಮಿಣಜಿಗಿ ಮಡಿವಾಳಪ್ಪನವರು ಒಬ್ಬರು. ಇವರು ವಿಜಾಪೂರದವರು. ಈ ತರುಣರು ೧೯೧೭ನೆಯ ಇಸ್ವಿಯಲ್ಲಿ ಡ್ರಾಯಿಂಗ ಇಂಟರಮಿಡಿಯೆಟ್ ಪರೀಕ್ಷೆಯಲ್ಲಿ ಅತ್ಯುತ್ತಮ ರೀತಿಯಿಂದ ಪಾಸಾಗಿ ೧೯೨೧ನೆಯ ಇಸ್ವಿಯ ಜೂನತಿಂಗಳಿನಲ್ಲಿ ಮುಂಬಯಿಯಲ್ಲಿ ಸರ್. ಜೆ. ಜೆ. ಆರ್ಟ್ಸ್‌ಸ್ಕೂಲಿನಲ್ಲಿ ಚಿತ್ರಕಲೆಯೊಳಗೆ ಸೇರಿ ಮೊದಲನೆಯ ವರ್ಷದ ಪರೀಕ್ಷೆಯಲ್ಲಿ ಒಂದನೆಯ ನಂಬರನ್ನು ಪಡೆದರು ಮೂರನೆಯ ಮತ್ತು ನಾಲ್ಕನೆಯ ವರ್ಷದ ಅಭ್ಯಾಸಕ್ರಮದಲ್ಲಿ ಪೇಂಟಿಂಗ ವಿಷಯವನ್ನು ತೆಗೆದುಕೊಂಡು, ಪರೀಕ್ಷೆಯಲ್ಲಿ ಉತ್ತಮ ತರಗತಿಯಲ್ಲಿ ಪಾಸಾದರು. ನಾಲ್ಕನೆಯ ವರ್ಷದ ಅಭ್ಯಾಸವನ್ನು ಮಾಡುವಾಗ ಬ್ರಿಟಿಶ್ ಸಾಮ್ರಾಜ್ಯದ ಪ್ರದರ್ಶನಸಲುವಾಗಿ ಚಿತ್ರತೆಗೆಯುವ ಕೆಲಸವು ಇವರಿಗೆ ಒಪ್ಪಿಸಲ್ಪಟ್ಟಿತ್ತು. ೧೯೨೫ರಲ್ಲಿ ಡ್ರಾಯಿಂಗ ಟೀಚರ ಪರೀಕ್ಷೆಯಲ್ಲಿ ಉತ್ತಮರೀತಿಯಿಂದ ತೇರ್ಗಡೆಹೊಂದಿದರು. ೧೯೨೭ನೆಯ ಇಸ್ವಿಯ ಮಾರ್ಚ ತಿಂಗಳಲ್ಲಿ ಚಿತ್ರಕಲೆಯ ಪಂಡಿತಪರೀಕ್ಷೆಯನ್ನು ಪಾಸಾಗಿರುವರು. ಮುಂಬಯಿ ಮತ್ತು ಮದ್ರಾಸ ಪ್ರದರ್ಶನಗಳಿಗೆ ಅವರು ಕಳುಹಿದ ಚಿತ್ರಗಳಿಗೆ ಬಹುಮಾನಗಳು ದೊರೆತಿವೆ. ಪ್ರಯತ್ನಪಟ್ಟರೆ ಅತ್ಯುತ್ಕೃಷ್ಟರಾದ ಚಿತ್ರಗಾರರಲ್ಲಿ ಗಣಿಸಲ್ಪಡಬಹುದಾದ ಈ ತರುಣರು ತೆಗೆದ ಚಿತ್ರಗಳ ಮಾದರಿಗಳು ಶಿವಾನುಭವ ಪತ್ರಿಕೆಯಲ್ಲಿ ಪ್ರಕಟವಾಗಿವೆ. ನಮ್ಮ ವಿನಂತಿಯ ಮೇರೆಗೆ ಅವರು ಪ್ರೇಮಪೂರ್ವಕವಾಗಿ ಕಳುಹಿವ ಆ ಚಿತ್ರಗಳನ್ನು ಇಲ್ಲಿ ಕೊಟ್ಟಿರುವೆವು ಈ ಚಿತ್ರಗಳನ್ನು ನೋಡಿದರೆ, ಅವರಲ್ಲಿ ಆ ಕಲೆ ಹೇಗೆ ಸ್ಫುರಿಸುತ್ತಿರುವುದೆಂಬುದು ಗೊತ್ತಾಗುವುದು. ಶ್ರೀ. ಮಿಣಜಿಗಿಯವರು ತೆಗೆದ ಕಾಯಕದ ಅಯ್ಯನವರದೊಂದು ಉತ್ಕೃಷ್ಟವಾದ ಚಿತ್ರವು ಜಯಕರ್ನಾಟಕದ ಕಡೆಗೆ ಬಂದಿತ್ತು. ಅದು ವಿವಿಧ ಬಣ್ಣಗಳಲ್ಲಿ ಬರೆಯಲ್ಪಟ್ಟ ಚಿತ್ರವಾಗಿತ್ತು. ಹಾಗೆ ಆ ಚಿತ್ರವನ್ನು ಬಣ್ಣಗಳಲ್ಲಿಯೇ ಮುದ್ರಿಸಬೇಕೆಂದು ಜಯಕರ್ನಾಟಕವು ಯೋಚಿಸಿತ್ತು. ಆದರೆ, ಜಯಕರ್ನಾಟಕದ ಆರ್ಥಿಕಸ್ಥಿತಿ ಅನುಕೂಲವಿಲ್ಲವಾದುದರಿಂದ ಅದನ್ನು ಜಯಕರ್ನಾಟಕವು ಮುದ್ರಿಸಲಿಲ್ಲ. ಇರಲಿ, ಇಂಥ ಚಿತ್ರಗಳು ಆಯಾ ಬಣ್ಣಗಳಲ್ಲಿಯೇ ಮುದ್ರಿತವಾಗುವುದು ಅವಶ್ಯವಾಗಿದೆ. ಕರ್ನಾಟಕದ ಶ್ರೀಮಂತರು ಕೈಗೊಟ್ಟರೆ ಇಂಥ ಚಿತ್ರಗಳು ಕನ್ನಡಿಗರಿಗೆ ಬರಲು ಅವಕಾಶವಾಗುತ್ತದೆ ಶ್ರೀ. ಮಿಣಜಿಗಿಯವರ ನಿಜವಾದ ಆಯುಷ್ಯವು ಈಗ ಪ್ರಾರಂಭವಾಗಿದೆ. ಅವರ ಮುಂದೆ ಕೆಲಸದ ಒಂದು ದೊಡ್ಡ ರಾಶಿಯೇ ಬಿದ್ದಿದೆ. ಕರ್ನಾಟಕವನ್ನೆಲ್ಲ ಸುತ್ತಿ, ಕರ್ನಾಟಕದ ಚಿತ್ರಗಳ ಮಾಟವು ಯಾವುದೆಂಬುದನ್ನು ಕಂಡು ಹಿಡಿದು, ಆ ಮಾಟದ ಮೇಲೆ



ಶ್ರೀನಟರಾಜ

ತಮ್ಮ ಚಿತ್ರಗಳನ್ನು ತೆಗೆಯುವುದು ಅವಶ್ಯವಿವೆ. ಹಾಗೆ ನೂಡದೆ, ಈಗ ಸುಂದರವಾಗಿ ತೋರುವ ಚಿತ್ರಗಳ ಅನುಕರಣವನ್ನು ಮಾತ್ರವೇ ಮಾಡಿದರೆ ಸಾಲದೆಂದು ನಮ್ಮ ಅಭಿ



ಶ್ರೀಹರಳಯ್ಯನವರು.

ಪ್ರಾಯ. ಶ್ರೀ. ಮಡಿವಾಳಪ್ಪನವರು ಹಂಪೆಯ ಗುಡಿಯಲ್ಲಿ ಬಣ್ಣದ ಚಿತ್ರಗಳಿವೆ, ಐಹೊಳಿ, ಪಟ್ಟದಕಲ್ಲು, ಬೇಲೂರು ಮುಂತಾದುವುಗಳಲ್ಲಿ ಅನೇಕ ಶಿಲ್ಪ ಚಿತ್ರಗಳಿವೆ, ಅವುಗಳಲ್ಲಿಯ ಉಡುಪುತೊಡಪು ಮುಂತಾದುವುಗಳನ್ನು ಸೂಕ್ಷ್ಮವಾಗಿ ಅವಲೋಕಿಸಿ, ಕರ್ನಾಟಕದ ಶಿಲ್ಪಕಲೆಯನ್ನು ಪುನರುಜ್ಜೀವನಗೊಳಿಸುವರೆಂದು ನಂಬುತ್ತೇವೆ. ಮೈಸೂರಿನ ಶ್ರೀ. ವೆಂಕಟಪ್ಪಯ್ಯನವರಂಥವರು ಇಂಥ ತರುಣರನ್ನು ತಮ್ಮ ಕೈಯಲ್ಲಿ ತೆಗೆದುಕೊಂಡರೆ, ಒಳಿತಾಗುವುದು.

# ಸರಸಿಯ ಗೊಂಬೆ

( ಕಥೆ )

ಲೇಖಕ :— ಶ್ರೀ. ಆನಂದ, ಬೆಂಗಳೂರು.

೧

ಸರಸಿ ವೆಂಕಟರಾಮಯ್ಯನವರ ಮಗಳು. ವೆಂಕಟರಾಮಯ್ಯನವರು ನಮ್ಮ ಹಳ್ಳಿಯ ಶ್ಯಾನುಭೋಗರು. ದಯವಿಟ್ಟು ನಿಮ್ಮ ಹಳ್ಳಿ ಯಾವುದು ಎಂದು ಕೇಳಬೇಡಿ. ನಿಮಗೆ ನಮ್ಮ ಹಳ್ಳಿಯ ಹೆಸರು ಗೊತ್ತಾದರೆ ನಾನು ಯಾರು ಎಂದು ಖಂಡಿತವಾಗಿಯೂ ಗೊತ್ತಾಗುತ್ತದೆ. ನಾನು ಯಾರು ಎಂದು ತೋರಿಸಿಕೊಳ್ಳಲು ನನಗೆ ಇಷ್ಟವಿಲ್ಲ. ನಿಮಗೆ ಯಾವ ಯಾವ ವಿಷಯಗಳನ್ನು ಹೇಳಬೇಕೆಂದು ತೋರುತ್ತಿದೆಯೋ ಅವುಗಳನ್ನೆಲ್ಲಾ ಮರೆಮಾಚಿವೆ ಹೇಳುತ್ತೇನೆ. ಅನಾವಶ್ಯಕವಾದುವನ್ನೆಲ್ಲಾ ಹೇಳಿ ವೃಥಾ ನಿಮಗೇಕೆ ಬೇಸರವನ್ನುಂಟುಮಾಡಲಿ? ಇಷ್ಟು ಹೇಳಿದರೆ ಸಾಕು—ನಮ್ಮ ಹಳ್ಳಿ ಮೈಸೂರು ಸೀಮೆಯಲ್ಲೇ ಎಲ್ಲೋ ಒಂದುಕಡೆ ಒಂದು ನದಿಯ ದಡದಮೇಲಿದೆ. ಇನ್ನು ವೆಂಕಟರಾಮಯ್ಯನವರ ವಿಷಯ. ಹಳ್ಳಿಯ ಶ್ಯಾನುಭೋಗರು ಅಂದಮೇಲೆ ನೆಮ್ಮದಿಯಾಗಿದ್ದಾರೆ ಎಂಬುದು ತಿಳಿದವಿಷಯವೇ ! ಮಿತವಾದ ಸಂಸಾರ. ಅವರು ನಮಗೆ ಸ್ವಲ್ಪ ದೂರದ ಸಂಬಂಧ. ಅವರಿಗೆ ಮೂರು ಮಕ್ಕಳು. ಮೂರೂ ಹೆಣ್ಣು. ಸರಸಿಯೇ ಮೊದಲನೆಯವಳು. ಇಲ್ಲಿ ನಾನು ಹೇಳುವುದು ಮುಕ್ಕಾಲು ಪಾಲು ಸರಸಿಯ ವಿಚಾರ.

ನಮ್ಮ ಮನೆಗೂ ಸರಸಿಯ ಮನೆಗೂ ಹತ್ತಿರ. ನಮ್ಮಮನೆಯ ಸಾಲಿನಲ್ಲೇ, ಎಡಕ್ಕೆ ಎರಡನೆಯದಲ್ಲ ಮೂರನೆಯದೆ ಅವರ ಮನೆ. ಆ ಸಾಲಿನಲ್ಲಿ ನಮ್ಮ ಮನೆಯೊಂದಕ್ಕೇ ಮಹಡಿ ಇರುವುದು. ನಮ್ಮ ಸಾಲು ಉತ್ತರಾಭಿಮುಖವಾಗಿದೆ. ಅದರಲ್ಲಿ ಇರುವುದೆಲ್ಲಾ ಒಟ್ಟು ಎಂಟು ಹತ್ತು ಮನೆಗಳು. ನಮ್ಮ ಮನೆಯ ಮುಂದಿನ ರಸ್ತೆಯಲ್ಲಿ, ಪಶ್ಚಿಮಾಭಿಮುಖವಾಗಿ ಸುಮಾರು ನೂರೈವತ್ತು ಗಜಹೋದರೆ ಎಡಕ್ಕೆ ಒಂದು ಕಾಲುಹಾದಿ ಸಿಕ್ಕುವುದು. ಅದು ನಮ್ಮ ಸಾಲಿನ ಹಿಂಭಾಗದಲ್ಲಿ ಹರಿಯುವ ನದಿಯ ಸೋಪಾನಕ್ಕೆ ಹೋಗುತ್ತದೆ. ಸೋಪಾನ ಒರಟು ಒರಟಾಗಿದ್ದರೂ ಅದರಿಂದ ನಮ್ಮ ಹಳ್ಳಿಗೆ ಬಹಳ ಪ್ರಯೋಜನ. ಆ ಸೋಪಾನದ ಹತ್ತಿರದಲ್ಲೇ ನದಿಯ ದಡದ ಮೇಲೆ ಒಂದು ತೋಪು. ಅದರ ನೆರಳಿನಲ್ಲಿ ಒಂದು ಚಿಕ್ಕದಾದ ಪುರಾತನಕಾಲದ ದೇವಸ್ಥಾನ. ನರಸಿಂಹಸ್ವಾಮಿ ದೇವರದು. ಒಟ್ಟಿನಲ್ಲಿ ನಮ್ಮ ಹಳ್ಳಿ ಬಹು ರಮ್ಯವಾದ ಸ್ಥಳ. ಈ ನನ್ನ ಮಾತಿನ ನಿಜತ್ವವನ್ನು, ಹಳ್ಳಿಯಲ್ಲಿದ್ದು ಅದರ ಸುಖವನ್ನು ಸವಿದವರು ಮಾತ್ರ ತಿಳಿಯಬಲ್ಲರು. ನಾನು ನಮ್ಮ ಹಳ್ಳಿಯಲ್ಲಿ ಐಸುರೂಪಾಯಿ ಪರೀಕ್ಷೆ ಮುಗಿಸಿಕೊಂಡು ಮುಂದೆ ಓದುವುದಕ್ಕೆ ಬೆಂಗಳೂರಿಗೆ ಹೋಗಿ ನಮ್ಮ ಸೋದರಮಾವನ ಮನೆಯಲ್ಲಿದ್ದೆ. ಹಳ್ಳಿಯಲ್ಲಿರುವತನಕ ನನ್ನ ಮನಸ್ಸಿನಲ್ಲಿದ್ದ ಆನಂದ, ಗೆಲವು ಇವು ನಾನು ಬೆಂಗಳೂರಿಗೆ ಬಂದೊಡನೆಯೇ ಮಾಯವಾದುವು. ಬೆಂಗಳೂರಿಗೆ ಬಂದ ಮೇಲೆ ನಮ್ಮ ಹಳ್ಳಿಯ ಸುಖದ ಆಳ ಇಷ್ಟು ಎಂದು ಗೊತ್ತಾಯಿತು. ಎಷ್ಟು ? ಎಂದು ಕೇಳುವಿರೋ ? ಅದಕ್ಕೆ ಆಳವೇ ಇಲ್ಲ. ಬೆಂಗಳೂರಲ್ಲಿ ನಾಲ್ಕುದಿನ ಇರುವುದರಲ್ಲಿಯೆ ನನಗೆ ಹುಚ್ಚುಹಿಡಿದಂತಾಯಿತು. ಹುಚ್ಚುಹಿಡಿಯದೆ ಮತ್ತೇನು ! ಆ ಮೋಟಾರುಗಳೋ ! ಆ ಬೈಸಿಕಲ್ಲುಗಳೊ !- ಆಧೂಳೋ! ಇವೆಲ್ಲವನ್ನೂ ಮೀರಿಸಿದ ಆ ಜಟಕಾಗಾಡಿಗಳೋ ! ಅಬ್ಬಬ್ಬ! ಮನಸ್ಸಿನಲ್ಲೇ ನಮ್ಮ ಹಳ್ಳಿಬಿಟ್ಟರೆ ಇನ್ನು ಇಲ್ಲ ಅಂದುಕೊಂಡು ಬಿಟ್ಟೆ. ಯಾವುದೇ ಆಗಲಿ ಇದ್ದಾಗ ಅದರ ಗುಣ ಚೆನ್ನಾಗಿ ಗೊತ್ತಾಗುವುದಿಲ್ಲ. ಅಥವಾ ಗೊತ್ತು ಮಾಡಿಕೊಳ್ಳಲು ಪ್ರಯತ್ನಿಸುವುದಿಲ್ಲ. ಇಲ್ಲದಾಗ ಅಯ್ಯೋ ಇಲ್ಲವಲ್ಲಾ ! ಹಾಗಿತ್ತು ! ಹೀಗಿತ್ತು ! ಅಂದುಕೊಳ್ಳುತ್ತೇವೆ. ಇಲ್ಲಿ ಗೋಪಾಲಸ್ವಾಮಿ ಮಾತು ಜ್ಞಾಪಕಕ್ಕೆ ಬರುತ್ತದೆ. ಅವನು ಹಾಸ್ಟೆಲಿನಲ್ಲಿದ್ದ ದೊಡ್ಡ ಮನುಷ್ಯರ ಮಗ. ಒಂದುದಿನ ಅವನನ್ನು ನಮ್ಮ ಮನೆಗೆ ಊಟಕ್ಕೆ ಕರೆದುಕೊಂಡು ಹೋದೆ. ಊಟಕ್ಕೆ, ಇತರ ಅಡಿಗೆಗಳ ಜೊತೆಗೆ ಮೆಂತ್ಯದ ಹಿಟ್ಟಿನ ಗೊಜ್ಜು ಮಾಡಿತ್ತು. ಗೋಪಾಲಸ್ವಾಮಿ ಊಟಕ್ಕೆ ಪ್ರಾರಂಭಿಸಿದವನು, ಮೊದಲಿನಿಂದ ಕೊನೆಯವರೆಗೂ ಆ ಹಿಟ್ಟಿನ ಗೊಜ್ಜಿನಲ್ಲೇ ಮುಗಿಸಿ ಬಿಟ್ಟ. ನಾನು ನಗುತ್ತ ‘‘ಇದೇನೋ ಗೋಪು, ಎಲ್ಲಾ ಬಿಟ್ಟು ಬರೀ ಗೊಜ್ಜನೇ ಹಿಡಿದಿದ್ದೀಯಾ!” ಎಂದು ಕೇಳಿದೆ. ಅವನು ಅದಕ್ಕೆ ಉತ್ತರವಾಗಿ “ ಲೋ ! ಬಿಡೋ!!

ಇನ್ನೆಲ್ಲಾ ಯಾವಾಗಲೂ ಇದ್ದೇ ಇವೆ. ಈ ಗೊಜ್ಜು ನೋಡು ಅಪರೂಪ. ಅದನ್ನ ತಿಂದು ಈಗ ಎರಡು ವರ್ಷಗಳಮೇಲೆ ಆಗಿತ್ತು. ನನಗೇನೋ ಅದು ಬಲು ರುಚಿ !'' ಎಂದು ಹೇಳಿ ನಾಲಗೆಯನ್ನು ಚಪ್ಪರಿಸಿದ. ನೋಡಿ, ಅವನಿಗೆ ಮೆಂಥ್ಯದ ಹಿಟ್ಟಿನ ಗೊಜ್ಜು ಹೇಗೋ ನನಗೆ ನಮ್ಮ ಹಳ್ಳಿಹಾಗೆ. ನೀವು ಏನಾದರೂ ಅಂದುಕೊಳ್ಳಿ ! ನಮ್ಮ ಹಳ್ಳಿಯ ಮಾತನ್ನೆತ್ತಿದ್ದರಿಂದ ಇದನ್ನೆಲ್ಲಾ ಹೇಳಬೇಕಾಗಿ ಬಂತು. ಹಳ್ಳಿಯ ಮಾತು ಏಕೆ ಎಂದರೆ ಸರಸಿ ನಮ್ಮ ಹಳ್ಳಿಯ ಹುಡುಗಿ. ಅಲ್ಲದೆ ಇದರಲ್ಲಿ ನನ್ನ ವಿಷಯವೂ ಸ್ವಲ್ಪ ಸೇರಿದೆ. ಹೇಗೆ ಅನ್ನುವಿರೋ-ಮಾರಿಗೆ ಹಾಲಿನಲ್ಲಿ ನೀರು ಬೆರತಹಾಗೆ—ಹಾಲುಮಾರುವವರು ಅಪ್ಪಟವಾದ ಹಾಲನ್ನು ಕೊಡುವುದು ಅವರ ಕಸಬಿಗೆ ವಿರುದ್ಧ ! ಇದುವರೆಗೆ ನಾನು ಹೇಳಿರುವುದೆಲ್ಲಾ ಅಪ್ಪಟ ನೀರು ಅನ್ನಬಹುದು. ಇನ್ನು ಸರಸಿಯ ವಿಷಯ.

ಸರಸಿ ಎಳೆಯ ಮಗುವಾಗಿದ್ದಾಗಿನಿಂದಲೂ ನಾನು ಬಲ್ಲೆ. ನನಗೆ ಉಪನಯನವಾದ ಎಂಟು ದಿನಗಳಲ್ಲೆ ಅವಳು ಹುಟ್ಟಿದಳು. ಅವಳು ಹುಟ್ಟಿದ್ದೂ ನಮ್ಮ ಹಳ್ಳಿಯಲ್ಲಿ. ನನಗೆ ಉಪನಯನವಾಗಿದ್ದೂ ನಮ್ಮ ಹಳ್ಳಿಯಲ್ಲಿ. ಅವಳು ಹುಟ್ಟಿದಾಗ ನಾನು ಅವರ ಮನೆಗೆ ಹೋಗಿ ಕೊಬ್ಬರಿ ಸಕ್ಕರೆ ತಿಂದುಕೊಂಡು ಬಂದುದೂ, ನಾಮಕರಣದ ದಿನ ಊಟಕ್ಕೆ ಹೋಗಿದ್ದುದೂ ಎಲ್ಲಾ ಜ್ಞಾಪಕವಿದೆ. ಎಷ್ಟೋ ದಿನ ನಾನು ಅವರ ಮನೆಗೆ ಹೋಗಿದ್ದಾಗ ಅವಳನ್ನು ಎತ್ತಿ ಮುದ್ದಾಡಿದ್ದೇನೆ. ತೊಟ್ಟಿಲಲ್ಲಿ ಇಟ್ಟು ತೂಗಿದ್ದೇನೆ. ಮಕ್ಕಳನ್ನು ಕಂಡರೆ ನನಗೆ ಏನೋ ಸುಖ. ಅದರಲ್ಲೂ, ಹೂವಿನ ಎಸಳಿನಂತಹ ಎಳೆಯ ಮಕ್ಕಳನ್ನು ಕಂಡರಂತೂ ಬಹಳ ಪ್ರೀತಿ. ಒಂದು ದಿನ ಅವರ ಮನೆಗೆ ಹೋಗಿದ್ದೆ; ಮಗು ತೊಟ್ಟಿಲಲ್ಲಿ ನಿದ್ರಿಸುತ್ತಿತ್ತು. ಹತ್ತಿರ ಯಾರೂ ಇರಲಿಲ್ಲ. ಎಲ್ಲರೂ ಒಳಗೆ ಎಲ್ಲೋ ಕೆಲಸದಲ್ಲಿದ್ದರು. ನಾನು ಸದ್ದುಮಾಡದೆ ನಿದ್ರಿಸುತ್ತಿದ್ದಹಾಗೆಯೇ ಸರಸಿಯನ್ನು ಎತ್ತಿಕೊಂಡು ಕಾಣದ ಹಾಗೆ ನಮ್ಮ ಮನೆಗೆ ಬಂದು ಬಿಟ್ಟೆ ! ಅವರ ಮನೆಯವರೆಲ್ಲಾ ಬಹಳ ಗಾಬರಿಯಾಗಿ ಬಿಟ್ಟಿದ್ದರು ! ನೆನೆಸಿಕೊಂಡರೆ ಈಗಲೂ ನಗು ಬರುತ್ತೆ. ಈಗ ಸ್ವಲ್ಪ ದಿನಗಳ ಕೆಳಗೆ ನಾನು ಸರಸಿಯನ್ನು ಕಂಡಾಗ, ಯಾವುದೋ ಸಂದರ್ಭದಲ್ಲಿ ಅವಳಿಗೆ ಈ ವಿಷಯ ಹೇಳಿದೆ. ಅವಳು ಸುಳ್ಳು ಸುಳ್ಳೆ ಸಿಟ್ಟು ತೋರಿಸಿ ವಕ್ರವಾಗಿ ನನ್ನ ಕಡೆ ನೋಡಿ ಮುಖವನ್ನು ಆಕಡೆ ತಿರುಗಿಸಿಕೊಂಡು ಬಿಟ್ಟಳು. ಸರಸಿ ಮಗುವಿನಲ್ಲಿ ಎಷ್ಟು ಮುದ್ದಾಗಿದ್ದಳೋ ಬೆಳೆಯುತ್ತ ಬೆಳೆಯುತ್ತ ಮುದ್ದು ಮುದ್ದಾಗಿಯೇ ಬೆಳೆದಳು. ಐದಾರು ವರ್ಷಗಳ ಹುಡುಗಿಯಾಗಿದ್ದರೂ ಬಹಳ ಚುರುಕು. ಅವಳಿಗೆ ಇದ್ದ ಸ್ನೇಹಿತರಲ್ಲೆಲ್ಲಾ ನಾನೇ ಸ್ವಲ್ಪ ವಯಸ್ಸಾಗಿದ್ದವನು. ಉಳಿದವರೆಲ್ಲಾ ಹೆಚ್ಚು ಕಡಿಮೆ ಅವಳ ವಾರಿಗೆ. ಸಾಧಾರಣವಾಗಿ ಅವಳ ಜೊತೆಗೆ ಆಡುವುದಕ್ಕೆ ಯಾರೂ ಸಿಕ್ಕದೆ ಹೋದರೆ ಆಗ ನನ್ನನ್ನು ಹುಡುಕಿಕೊಂಡು ಬರುತ್ತಿದ್ದಳು. ನನ್ನಲ್ಲಿ ಅವಳಿಗೆ ಹೆಚ್ಚು ಸಲಿಗೆ. ಏಕೆಂದರೆ ಅವಳಿಗೆ ದೇವಸ್ಥಾನದ ತೋಪಿನಿಂದ ದೇವಗಣಗಲೆ ಹೂವು ತಂದುಕೊಡುತ್ತಿದ್ದೆ. ಹೊಳೆಮರಳಿಗೆ ಹೋಗಿ ಅವಳ ಆಟಕ್ಕೆ ದುಂಡಾದ ಸಣ್ಣ ಸಣ್ಣ ಕಲ್ಲುಗಳನ್ನು ತಂದು ಕೊಡುತ್ತಿದೆ. ಒಂದೊಂದು ದಿನ ಸಾಯಂಕಾಲ ನಮ್ಮ ತೋಟಕ್ಕೆ ಕರೆದುಕೊಂಡು ಹೋಗಿ ಅಲ್ಲಿ ಏನಾದರೂ ಹಣ್ಣುಗಳನ್ನು ಕಿತ್ತುಕೊಡುತ್ತಿದ್ದೆ. ಇಷ್ಟಲ್ಲದೆ ನಮ್ಮ ಮನೆಗೆ ಯಾವಾಗಲಾದರೂ ಬಂದಾಗ ಏನಾದರೂ ತಿಂಡಿ ಕೊಡುತ್ತಿದ್ದೆ. ಇಷ್ಟೆಲ್ಲ ಮಾಡಿದ ಮೇಲೆ ಸ್ವಲ್ಪ ಸ್ನೇಹ ಇಲ್ಲದೆ ಇರುತ್ತದೆಯೆ ? ನನಗೂ ಅವಳೊಂದಿಗೆ ವಿನೋದವಾಗಿ ಸ್ವಲ್ಪ ಕಾಲ ಕಳೆಯಬೇಕೆಂದು ಆಸೆ. ಅವಳಿಗೆ ಆಟದ ಮೇಲೆ ಮನಸ್ಸು; ನನಗೆ, ಅವಳ ಪ್ರತಿ ಆಟ—ನೋಟ—ಮಾಯ ಇವುಗಳಲ್ಲಿ ಅವಳ ಶುದ್ಧವಾದ ಎಳೆಯ ಮನಸ್ಸು ಹೇಗೆ ಹರಿಯುತ್ತಿದೆ, ನೋಡಬೇಕು ಅನ್ನುವ ಕುತೂಹಲ. ನೀವು ಮಕ್ಕಳೊಡನೆ ಮಕ್ಕಳಾಗಿ ಆಡಿದರೆ ಆಗ ನಿಮಗೆ ಅವರ ಸುಖ—ಆನಂದಗಳು ಗೊತ್ತಾಗುತ್ತವೆ. " ನನ್ನ ಬಳಿಗೆ ಬರುವ ಚಿಕ್ಕ ಮಕ್ಕಳನ್ನು ತಡೆಯಬೇಡಿ; ಏಕೆಂದರೆ ಸ್ವರ್ಗವು ಅಂತಹ ಚಿಕ್ಕಮಕ್ಕಳಿಂದ ತುಂಬಿ ತುಳುಕುತ್ತಿದೆ " ಎಂದು ಹೇಳಿದ ಏಸುವಿನ ಮಾತು ಕಟ್ಟಿದ ಸಾರ ಎಂದು ನನಗೆ ತೋರುತ್ತಿದೆ. ಅಂತಹ ಸ್ವರ್ಗದ ಬಾಗಿಲನ್ನು ತೆಗೆದು, ಸರಸಿ ಎಷ್ಟೋ ಸಾರಿ ನನ್ನನ್ನು ಕೈಹಿಡಿದು ಅದರ ಒಳಕ್ಕೆ ಕರೆದುಕೊಂಡು ಹೋಗಿದ್ದಾಳೆ. ನಾನು ಇಲ್ಲಿ ಬರೆಯುವದೆಲ್ಲಾ ಅವಳಿಂದ ಕಲಿತ ವಿಷಯಗಳು. ನಾನು ಅವಳೊಡನೆ ಇಡುತ್ತಿದ್ದಷ್ಟು ಹೊತ್ತು, ನನಗೆ ಹೊರಗಿನ ಪ್ರಪಂಚವೆಲ್ಲಾ ಮಾಯವಾಗಿ ಅವಳದ್ದೇ ಬೇರೇ ಒಂದು ವಿಚಿತ್ರವಾದ ಪ್ರಪಂಚದಲ್ಲಿ ತೇಲುತ್ತಿದ್ದ ಹಾಗೆ ಅನುಭವವಾಗುತ್ತಿತ್ತು. ಅಲ್ಲಿ ಇರುವವರೆಗೂ, ಅವಳಿಗೂ ನನಗೂ ಇದ್ದ ವಯೋಭೇದವೇ ಕಾಣುತ್ತಿರಲಿಲ್ಲ. ಅವಳ ಪ್ರಪಂಚದ ಧರ್ಮವೇ ಬೇರೆ. ಅಲ್ಲಿ

ನಿರ್ಜೀವವಾದ ಅಥವಾ ಅನುಪಯುಕ್ತವಾದ ಪದಾರ್ಥ ಒಂದೂ ಇಲ್ಲ, ಅಲ್ಲಿ ಕಲ್ಲು ಮಣ್ಣುಗಳೇ ತಿಂಡಿತೀರ್ಥ ಭಕ್ಷ್ಯ ಭೋಜ್ಯ! ದುಡ್ಡು ಕಾಸು! ಒಂದೊಂದು ಸಾರಿ ಅವಳು ಅಂಗಡಿ ಇಟ್ಟುಕೊಂಡು ವ್ಯಾಪಾರದ ಆಟ ಆಡುತ್ತಿದ್ದಳು; ಸೊಪ್ಪು ಸದೆ ಇವೇ ಅವಳ ಸರಕು. ಸಣ್ಣ ಸಣ್ಣ ಕಲ್ಲುಗಳೇ ಕೊಳ್ಳುವುದಕ್ಕೆ ದುಡ್ಡು. ಕಲ್ಲುಗಳಿಗೆ ಅವುಗಳ ಗಾತ್ರಕ್ಕೆ ತಕ್ಕ ಬೆಲೆ! ಒಂದು ದಿನ ಅವಳೂ ಅವಳ ಸಂಗಾತಿಗಳೂ ಸೇರಿ ಗೊಂಬೆ ಮದುವೆ ಆಟ ಎಂದು ಆಡುತ್ತಿದ್ದರು. ನಾನು ಅವರಿಗೆ ತಿಳಿಯದ ಹಾಗೆ ದೂರ ನಿಂತು ನೋಡುತ್ತಿದ್ದೆ. ನನಗೆ ಅದು ಕೇವಲ ಆಟ ಎಂದು ತೋರುತ್ತಿತ್ತು. ಆದರೆ ಅವರಿಗೆ ಹಾಗೆ ತೋರುತ್ತಿತ್ತೇನು? ಎಂದಿಗೂ ಇಲ್ಲ. ಅವರ ಆಟದ ರೀತಿಯನ್ನು ನೋಡಿದರೆ ಆಗ ಅದು ಗೊತ್ತಾಗುತ್ತದೆ. ಅವರಿಗೆ ಆ ಗೊಂಬೆಗಳೆಲ್ಲಾ ನಮ್ಮ ಹಾಗೆಯೇ ಮನುಷ್ಯರು! ಚಿಕ್ಕ ಮಕ್ಕಳಿಗೆ ಅವು ಮಾತನಾಡ ಬಲ್ಲವು. ನಗಬಲ್ಲವು, ಅಳ ಬಲ್ಲವು, ಊಟಮಾಡ ಬಲ್ಲವು, ನಿದ್ದೆಮಾಡಬಲ್ಲವು, ಅವರಿಗೆ ಇರುವ ಕಲ್ಪನಾಶಕ್ತಿಗೆ ಮೇರೆ ಇದ್ದಂತೆ ನನಗೆ ತೋರುವುದಿಲ್ಲ. ಅವರು ಎರಡು ಕಾಲಗಳ ಮಧ್ಯದಲ್ಲಿ ಒಂದು ಉದ್ದವಾದ ಕೋಲನ್ನು ಇಟ್ಟುಕೊಂಡು ಕುದುರೆ ಆಟವಾಡುವುದನ್ನು ನಿಮ್ಮಲ್ಲಿ ಅನೇಕರು ನೋಡಿರುವಿರಿ. ಬಾಲ್ಯದ ಮೇರೆದಾಟದ ನಮಗೆ ಅದು ಕಟ್ಟಿಗೆ! ಆದರೆ ಅವರ ಮುಖವನ್ನು ನೋಡಿ; ಯಾವ ಸವಾರನಿಗೂ ಇಲ್ಲದ ಹುಮ್ಮಸು ಇರುತ್ತಿದೆ! ನಮ್ಮ ದೇಹ ದೊಡ್ಡದಾದಹಾಗೆಲ್ಲ ನಮ್ಮ ಕಲ್ಪನಾಶಕ್ತಿ ಚಿಕ್ಕದಾಗುತ್ತ ಹೋಗುತ್ತದೆ. ಎಂದು ತೋರುವುದು! ನೀವು ಸಮಯಬಿದ್ದಾಗ ಅವರಿಗೆ ಹುಣಸೆಯ ಮಗ ಬೇವಿನ ಮರದ ಕಥೆಯನ್ನು ಹೇಳಿ. ನಾಳೆ ಅವರು ಆ ಮರಗಳ ಹತ್ತಿರ ಹೋಗಿ ಅವುಗಳೊಡನೆ ಮಾತನಾಡಿ ಯೋಗಕ್ಷೇಮ ವಿಚಾರಿಸಿಕೊಂಡು ಬರುತ್ತಾರೆ. ತಾವು ನೋಡಿದ ಎಲ್ಲಾ ಪದಾರ್ಥಗಳಿಗೂ ಅವರು ಜೀವಕಳೆಯನ್ನು ತುಂಬಿ, ತಮ್ಮದಾರಿಗೆ ಎಳೆದುಕೊಂಡು ತಮ್ಮ ಆಟಗಳಲ್ಲಿ ಭಾಗಿಗಳನ್ನಾಗಿ ಮಾಡಿಕೊಳ್ಳುತ್ತಾರೆ. ಇದು ಅವರ ಕಲ್ಪನಾಶಕ್ತಿ—ಅವರ ಅಪೂರ್ವವಾದ ಪ್ರಪಂಚದ ಧರ್ಮ. ಈಗಲೂ ಆ ದಿನಗಳನ್ನೆಲ್ಲ ನೆನೆಸಿಕೊಂಡರೆ ನನ್ನ ಪ್ರತಿ ರಕ್ತನಾಳಗಳಲ್ಲೂ ಆನಂದದ ಪ್ರವಾಹ ಹರಿಯುತ್ತದೆ. ಆಗ ಸಾಕ್ಷಾತ್ತಾಗಿ ಅನುಭವಿಸುತ್ತಿದ್ದವನಿಗೆ ಈಗ ನೆನಪು ಮಾತ್ರ! ದೊಡ್ಡನಿಧಿಯನ್ನು ಕಳೆದುಕೊಂಡ ಅದೃಷ್ಟಹೀನನು ಪುನಃ ಆ ನಿಧಿಯನ್ನು ಕನಸಿನಲ್ಲಿ ಕಂಡು ಸುಖಪಟ್ಟಹಾಗೆ! ನಾನೇನೋ ಜ್ಞಾಪಿಸಿಕೊಳ್ಳುತ್ತಾ ಇರುತ್ತೇನೆ. ಆದರೆ ಸರಸಿ ಒಂದು ದಿನ ಒಂದು ಘಳಿಗೆಯಾದರೂ ಜ್ಞಾಪಿಸಿಕೊಳ್ಳುವಳೇ? ಜ್ಞಾಪಿಸಿಕೊಂಡಾಳು! ಅಥವಾ ಹೇಗೋ! ಹೇಳುವುದು ಹೇಗೆ!

ನಾನು ನನಗೆ ಬೇಸರವಾದಗಲೆಲ್ಲಾ, ಅಥವಾ ಅವಳಿಗೆ ಜೊತೆಗೆ ಆಡುವುದಕ್ಕೆ ಇನ್ಯಾರೂ ಸಿಕ್ಕದೆ ಇದ್ದಾಗಲೆಲ್ಲಾ, ನಾವಿಬ್ಬರೂ ಒಟ್ಟಿಗೆ ಸ್ವಲ್ಪಹೊತ್ತು ಕಾಲಕಳೆಯುತ್ತಿದ್ದೆವು. ಅವಳಿಗೆ ಭಕ್ತಿಯೋ ಪ್ರೀತಿಯೋ ಏನೋ ಹೇಳಲಾರೆ. ಅಂತು ಒಂದು ವಿಧವಾದ ಆದರಣೀಯವಾದ ಭಾವನೆ. ಆರು ವರ್ಷದ ಹುಡುಗಿಯಾಗಿದ್ದರೂ ಬಲು ಮಾತಿನ ಗಿಣಿ. ಇಷ್ಟರ ಮಧ್ಯೆ ನಾಚಿಕೆ ಬೇರೆ! ತನಗೆ ಗುರುತಿಲ್ಲದ ಗಂಡು ಹುಡುಗರು ಯಾರಾದರೂ ಎದುರಿಗೆ ಬಂದುಬಿಟ್ಟರೆ, ಹೊಸದಾಗಿ ಮದುವೆಯಾದ ಹುಡುಗಿಯ ಹಾಗೆ ಆಡಿ ಓಡಿಬಿಡುತ್ತಿದ್ದಳು. ಆದರೆ ನನ್ನ ಹತ್ತಿರ ಅದೆಲ್ಲಾ ಇಲ್ಲ. ಬಹಳ ಸಲಿಗೆ. ನಾನೆಲ್ಲಿಯಾದರೂ ಮಧ್ಯಾಹ್ನ ನಮ್ಮ ಮನೆಯಲ್ಲಿ ಮಲಗಿ ನಿದ್ದೆಮಾಡುತ್ತಿದ್ದರೆ, ಮೆಲ್ಲಗೆ ಸಪ್ಪಳಿಲ್ಲದೆ ಬಂದು ಕಿವಿಯಲ್ಲಿ ಕಿರ್ರನೆ ಊದಿಬಿಡುವಳು. ಅಥವಾ ಜಕ್ಕಟ ಗುಳ್ಳೆ ಇಟ್ಟು ಬಿಡುವಳು. ಇಲ್ಲವೆ, ಕಾಲು ಕೆರೆದು ಬಿಡುವಳು. ಅಂತು ಏನಾದರೂ ಮಾಡಿ ನನ್ನನ್ನು ಎಬ್ಬಿಸಿ ಬಿಡಬೇಕು. ನಾನು ನಿದ್ರೆಯಿಂದ ಎಚ್ಚತ್ತವನಾಗಿ ಗಾಬರಿಯಿಂದ ಕಣ್ಣುಬಿಟ್ಟರೆ ಅವಳು ದೂರ ಮೂಲೆಗೆ ಹೋಗಿ ನಿಂತುಕೊಂಡು ತನ್ನ ಪುಟ್ಟ ಎಳೆಯ ದೇಹವನ್ನು ಹಾಗೆ ಹೀಗೆ ಬಳುಕಿಸುತ್ತ, ಮುದ್ದಾಗಿ ಮಿಂಚುವ ಕಣ್ಣುಗಳನ್ನು ಇನ್ನಷ್ಟು ದೊಡ್ಡದಾಗಿ ಬಿಡುತ್ತ, ಚಪ್ಪಾಳೆ ತಟ್ಟಿ ಕಿಲಕಿಲನೆ ನಕ್ಕು ಬಿಡುವಳು. ನನಗೆ ಆ ಚಿಕ್ಕ ರತಿಯನ್ನು ಕಂಡರೆ ಮನಸ್ಸಿಗೆ ಬಹಳ ಸುಖವಾಗುತ್ತಿತ್ತು. ಒಂದು ದಿನ ಹಾಗೆಯೇ ಮಲಗಿಕೊಂಡಿದ್ದೆ. ನಿದ್ದೆ ಬಂದಿರಲಿಲ್ಲ. ಹೊರಗೆ ಸರಸಿ ಬರುತ್ತಿರುವದು ಗೊತ್ತಾಯಿತು. ತಟ್ಟನೆ ಕಣ್ಣು ಮುಚ್ಚಿಕೊಂಡು ನಿದ್ದೆ ಬಂದಹಾಗೆ ನಡಿಸಿದೆ. ಸರಸಿ ಒಳಗೆ ಬಂದು ನನ್ನನ್ನು ನೋಡಿ, ಒಳ್ಳೇ ಸಮಯ ಅಂದುಕೊಂಡಿರಬೇಕು. ಕಿವಿಯಲ್ಲಿ ಊದುವುದಕ್ಕೆಂದು ಹತ್ತಿರ ಬಂದಳು. ನಾನು ಹತ್ತಿರ ಬರುವವರೆಗೂ ಸುಮ್ಮನಿದ್ದು ಆ ಮೇಲೆ ಸರ್ರನೆ ಅವಳನ್ನು ಹಿಡಿದು ಎಳೆದು ತಬ್ಬಿಕೊಂಡು ಅವಳ ಮುಖಕ್ಕೆ ಚೆನ್ನಾಗಿ ಒಂದು ಮುತ್ತು ಕೊಟ್ಟೆ. ಅವಳು ಬಿಡಿಸಿಕೊಂಡು

ಹೋಗಲು ಪ್ರಯತ್ನಪಟ್ಟಳು. ಸಾಧ್ಯವಾಗಲಿಲ್ಲ. ನಾನು "ನನಗೆ ಒಂದು ಸಿಹಿಯಾದ ಮುತ್ತು ಕೊಟ್ಟರೆ ಬಿಡುತ್ತೇನೆ" ಎಂದೆ. ಕೂಡಲೆ ಅವಳು ನನ್ನ ಮುಖಕ್ಕೆ ತನ್ನ ಮುಖವ ನ್ನಿಟ್ಟು ಒಂದು ಮುತ್ತು ಕೊಟ್ಟಳು. ನನಗೆ ಅವಳ ಮುಖ ವನ್ನೂ ಆ ಕಣ್ಣುಗಳ ಸೊಬಗನ್ನೂ ನೋಡಿ, ಬಾಲಚಂದ್ರನು ಮಿರುಗುವ ಎರಡು ನಕ್ಷತ್ರಗಳೊಡನೆ ಭೂಮಿಗೆ ಇಳಿದಂತಾ ಯಿತು. ಸರಸಿ ಎಂತಹ ಮುತ್ತು ಕೊಟ್ಟಳು ! ಅವಳ ಮಿತ ವಾದ ದೇಹದಲ್ಲಿ ಅಡಗಿದ್ದ ಅನಂತವಾದ ಹೃದಯದ, ಅಮಿ ತವಾದ ಪ್ರೇಮವೋ ಅಭಿಮಾನವೋ, ಅವಳ ಆ ಎಳಸಾದ ತುಟಿಗಳನ್ನು ಹಾಯ್ದು ಬಂದು ನನ್ನ ಹೃದಯಕ್ಕೆ ಇಳಿದ ಹಾಗಾಯಿತು. ಗಂಭೀರವಾಗಿ ಅಡಗಿ ಈ ವಿಶ್ವವನ್ನೇ ವ್ಯಾಪಿಸಿ ರುವ ಅನಂತವಾದ ದೈವಿಕ ಪ್ರೇಮದ ಮೇಲಿನ ಮಾಯೆ ಎಂಬ ಮುಸುಕನ್ನು ಚಿಕ್ಕಮಕ್ಕಳು ತಮ್ಮ ಚಿಗುರಿನಂತಹ ತುಟಿಗಳ ಅರ್ಥವಿಲ್ಲದ ಚುಂಬನದಿಂದ ಒಂದೇಸಲಕ್ಕೆ ಹಾರಿಸಿ ಬಿಡುತ್ತಾರೆ ಎಂದು ನನಗೆ ಬೋಧೆಯಾಗುತ್ತದೆ. ಸರಸಿ ಮುತ್ತುಕೊಟ್ಟು ನನ್ನ ಸಾಲವನ್ನು ತೀರಿಸಿದ ಮೇಲೆ, ನಾನು ಹಾಸ್ಯವಾಗಿ, "ಸರಸಿ, ನೀನು ಹೀಗೆಯೇ ಮಾಡುತ್ತಿರು; ನಿನ್ನನ್ನು ಸಿಮ್ಮಪ್ಪನಿಗೆ ಹೇಳಿ ಒಂದು ಕೋರೆ ತಿಮ್ಮಣ್ಣನಿಗೆ ಮದುವೆಮಾಡಿಸಿ ಬಿಡುತ್ತೇನೆ! ಆಗ ಹೀಗೆಲ್ಲಾ ಮಾಡು, ನಿನಗೆ ಚೆನ್ನಾಗಿ ಸರಚಿ ಬಿಡುತ್ತೆ!" ಅಂದೆ. ಅವಳಿಗೆ ಸ್ವಲ್ಪ ಸಿಟ್ಟು ಬಂತು. ಚಂದ್ರನಂತಹ ಮುಖವನ್ನು ಸೌತೇಕಾಯಿಯ ಹಾಗೆ ಮಾಡಿಕೊಂಡು, ಕೊರಳನ್ನು ಒಂದು ವಿಧವಾಗಿ ಕೊಂಕಿಸಿ "ಊ" ಎಂದಳು. ಅಷ್ಟಕ್ಕೇ ಸುಮ್ಮನಾಗಲಿಲ್ಲ. ನನ್ನ ಮಾತಿಗೆ ಸರಿಯಾಗಿ ಮಾತನಾಡಬೇಕೆಂದು "ನಿನ್ನ ಹೆಂಡತಿ ಯಾರು ಗೊತ್ತೇ? " ಎಂದು ಕೇಳಿದಳು. ನಾನು ತಮಾಷೆಗೆ "ನೀನು" ಅಂದೆ. ಅವಳು ದೊಡ್ಡದಾಗಿ ನಕ್ಕು ಕೈತಟ್ಟುತ್ತೆ " ಹಾಗಾದರೆ ನೀನು ಕೋರೆ ತಿಮ್ಮಣ್ಣನಾಗ ಬೇಕಾಯಿತಲ್ಲ " ಅಂದು ಬಿಟ್ಟಳು! ಅಬ್ಬಾ! ಸರಿಯಾಗಿಯೇ ಮಾತನಾಡಿದಳು ಅಂದುಕೊಂಡು " ಹೌದು ! ಹೌದು! ಮರತಿದ್ದೆ. ನಾನು ನಿನ್ನ ಮದುವೆಯಾಗುವುದಿಲ್ಲ. ಹಾಗಾ ದರೆ ನನಗೆ ಯಾರನ್ನು ಗೊತ್ತುಮಾಡಿರುವ!" ಎಂದು ಕೇಳಿದೆ. ಅವಳು "ಬಿಟ್ಟರೆ ಹೇಳುತ್ತೇನೆ" ಎಂದು ಹೇಳಿದಳು. ನಾನು ಬಿಟ್ಟೆ. ಅವಳು ದೂರ ಓಡಿಹೋಗಿ, ಬಾಗಿಲಿನ ಆಚೆ ನಿಂತುಕೊಂಡು ಬಗ್ಗಿ ನೋಡಿ "ಕಪ್ಪನೆ ಕರಡಿ" ಎಂದು ಹೇಳಿ ನಿಲ್ಲದೆ ಓಟಕಿತ್ತಳು. ನನಗೆ ಅವಳ ಆಟ. ಅವಳ ಮಾತು ಕೇಳಿ ಬಹಳ ಆನಂದವಾಯಿತು. ಸರಸಿ ಬಹಳ ಸರಸಿಯಾ ಗುತ್ತಾಳೆ ಅಂದುಕೊಂಡೆ. ಅವಳಿಗೆ ಒಳ್ಳೆಯ ತಕ್ಕ ಗಂಡ ಸಿಕ್ಕಲಿ ಎಂದು ಮನಸ್ಸಿನಲ್ಲೇ ಹಾರೈಸಿದೆ.

೨

ಸರಸಿಗೆ ಅವಳ ಏಳನೆಯ ಹುಟ್ಟಿದ ಹಬ್ಬದ ದಿನ ಒಂದು ಗೊಂಬೆ ಬಹುಮಾನವಾಗಿ ಕೊಟ್ಟೆ. ಅದು ಅರಗಿನಗೊಂಬೆ. ಬೆಣ್ಣೆ ಕೃಷ್ಣನ ವಿಗ್ರಹ. ನಾನು ಬೆಂಗಳೂರಲ್ಲಿ ಯಾವುದೋ ಅಂಗಡಿಗೆ ಹೋಗಿದ್ದಾಗ ಅದನ್ನು ನೋಡಿದೆ. ಬಹಳ ಚೆನ್ನಾಗಿತ್ತು. ಸರಸಿಗೆ ಅದನ್ನು ತೆಗೆದುಕೊಂಡು ಹೋಗಿ ಕೊಟ್ಟರೆ ಚೆನ್ನಾಗಿರುತ್ತೆ ಅಂದುಕೊಂಡು ಅದನ್ನು ಕೊಂಡು ತಂದಿದ್ದೆ. ಸರಸಿಗೆ ಅವಳ ಹುಟ್ಟಿದ ಹಬ್ಬದ ದಿನ ಬಹಳ ಸಡಗರ. ಹಿಂ ದಿನ ರಾತ್ರೆಯಲ್ಲಾ ಬಹುಶಃ ಅವಳಿಗೆ ನಿದ್ದೆ ಬಂದಿರಲಾರದು. ಮೂರು ದಿನಗಳ ಹಿಂದೆಯೇ ಅವಳು ನನ್ನ ಹತ್ತಿರ ಬಂದು, ನನ್ನ ಹೆಸರು ಹಿಡಿದು ಕರೆದು "ಊ–ಊ– ಮತ್ತೇ, ನಾಳೆ ಅಲ್ಲ. ಅದರ ನಾಳೆ ನನ್ನ ಹುಟ್ಟಿದ ಹಬ್ಬ; ನೀನೂ ಊಟಕ್ಕೆ ಬರಬೇಕು. ಮರೀಬೇಡಾ ಮತ್ತೇ ನೋಡು ! " ಎಂದು ಔತಣ ಹೇಳಿ ಹೋಗಿದ್ದಳು. ಹುಟ್ಟಿದ ಹಬ್ಬದ ದಿನ ಅವಳು ಎಲ್ಲರಿ ಗಿಂತಲೂ ಮುಂಚೆಯೇ ಎದ್ದು ಎರೆದುಕೊಂಡು ಚೆನ್ನಾಗಿ ಶೃಂಗಾರಮಾಡಿಕೊಂಡು ಬಂದು ನನಗೆ ತೋರಿಸಿದಳು. ಅವಳು ಹೊಸದಾಗಿ ಏನು ಉಡಿಗೆತೊಡಿಗೆ ಹಾಕಿಕೊಂಡರೂ ನನಗೆ ಮೊದಲು ಬಂದು ತೋರಿಸಬೇಕು. ನಾನು ಬಹಳ ಚೆನ್ನಾಗಿದೆ ಎಂದು ತಲೆಯನ್ನು ತೂಗಬೇಕು. ಅಲ್ಲಿಯ ವರೆಗೂ ಅವಳಿಗೆ ಸಮಾಧಾನವಿರುವುದಿಲ್ಲ. ಊಟಕ್ಕೆ ಕುಳಿತು ಕೊಳ್ಳುವಾಗಲಂತೂ ಅವಳ ಮಾತೇ ಮಾತು ! ನನ್ನ ಹತ್ತಿರ ಕುಳಿತುಕೊಳ್ಳಬೇಕೆಂದು ಅವಳ ಇಷ್ಟ. ಹೆಂಗಸರ ಮಧ್ಯೆ ಕುಳಿತುಕೊಳ್ಳಲಿ ಎಂದು ಅವಳ ತಾಯಿ ಹೇಳಿದರು. " ನೀನು ಈ ದಿನ ಹೆಂಗಸರ ಮಧ್ಯೆ ಕುಳಿತುಕೋಬೇಕಮ್ಮ " ಎಂದು ನಾನೂ ಹೇಳಿದೆ. ಅವಳು ಕೇಳಳು. ಕೊನೆಗೆ " ನೀನೂ ಅಲ್ಲೇ ಬಾ" ಎಂದಳು. ನನಗೆ ವಿಪರೀತ ನಗು ಬಂತು ! " ಸರಿ ! ಚೆನ್ನಾಯ್ತು ! ನಾನೇನು ನಿನ್ನ ಹಾಗೆ ಹೆಂಗಸೆ? " ಎಂದೆ. ಕೊನೆಯಲ್ಲಿ, ಅವಳು ಹೆಂಗಸರ ಮಧ್ಯೆ ಕುಳಿತುಕೊಳ್ಳ ಬೇಕೆಂದೂ, ನಾನು ಅವಳಿಗೆ ಕಾಣುವ ಹಾಗೆ ಗಂಡಸರ ಮಧ್ಯೆ ಕುಳಿತುಕೊಳ್ಳತಕ್ಕದ್ದೆಂದೂ ತೀರ್ಮಾನವಾಗಿ ಚರ್ಚೆ ಮುಗಿಯಿತು.

ಊಟವಾಯಿತು. ಗಂಡಸರೆಲ್ಲಾ ತಾಂಬೂಲಕ್ಕೆ ಕುಳಿತರು. ನಾನೂ ಅವರ ಮಧ್ಯೆ ಕುಳಿತಿದ್ದೆ. ಸರಸಿ ಹಿಂದಿನಿಂದ ಓಡಿ ಬಂದು, ನನ್ನ ಬೆನ್ನು ಬಾಚಿಕೊಂಡು, ಸಾಯಂಕಾಲ ಆ ಕಡೆಗೆ ಬರಬೇಕೆಂದು ಕಿವಿಯಲ್ಲಿ ಊದಿ ಹೇಳಿದಳು. ನಾನು 'ಉಹು' ಎಂದರೆ ನನಗೆ ಗೊತ್ತು. ಸಾಯಂಕಾಲ ಆರತಿ ಚೆನ್ನಾಗಿ ನಡೆಯುವುದಿಲ್ಲ ಎಂದು. ಅಲ್ಲದೆ ನನಗೂ ಆ ಬಾಲಸುಂದರಿ ಹಸೆಯ ಮೇಲೆ ಕುಳಿತಿರುವುದನ್ನು ನೋಡಬೇಕೆಂದು ಆಸೆಯಾಯಿತು. ಆಗಲಿ ಎಂದು ಒಪ್ಪಿಕೊಂಡೆ.

ಸಾಯಂಕಾಲ ಅವರ ಮನೆಗೆ ಹೋದೆ. ಹೋಗುವಾಗ ಜೊತೆಯಲ್ಲಿ ನಾನು ಬೆಂಗಳೂರಿಂದ ತಂದಿದ್ದ ಬೆಣ್ಣೆ ಕೃಷ್ಣನ ಗೊಂಬೆಯನ್ನು ತೆಗೆದುಕೊಂಡು ಹೋದೆ. ಒಳಗಡೆ ದೊಡ್ಡ ಹಜಾರದಲ್ಲಿ ಆರತಿಯಾಗುವುದಕ್ಕೆ ಏರ್ಪಾಡಾಗಿತ್ತು. ನಾನು ಜಗುಲಿಯ ಮೇಲೆ ಹೋಗಿ, ಕಿಟಕಿಗೆ ಸ್ವಲ್ಪ ಓರೆಯಾಗಿ ನಿಂತುಕೊಂಡೆ. ಒಳಗೆ ಕಿಟಕಿಗೆ ಎದುರಾಗಿ ಹಸೆಯ ಮೇಲೆ ಸರಸಿ ಅವಳ ಇಬ್ಬರು ತಂಗಿಯರು ಮತ್ತು ಒಂದು ಗಂಡು ಮಗುವೂ ಕುಳಿತಿದ್ದರು. ನನಗೆ ನೋಡಿ ಬಹಳ ಆನಂದವಾಯಿತು. ಕ್ಷಣಕಾಲ ನನ್ನ ಹೃದಯವು ಎಲ್ಲವನ್ನೂ ಮರೆತು ಆ ಆನಂದವನ್ನು ಮಾತ್ರ ಅನುಭವ ಮಾಡಿತು. ಅವಳು ಕೈಕಾಲುಗಳನ್ನು ಮುದುರಿಕೊಂಡು ಕುಳಿತಿದ್ದ ಆ ಸೊಗಸೋ, ಆ ಎಳೆಯ ಸುಂದರವಾದ ಮುಖವೋ, ಅದರ ತುಂಬಾ ಆ ವಿಶಾಲವಾದ ಎಳೆ ಮಿಂಚಿನ ಕಣ್ಣಗಳೊ, ಹಸೆಯ ನಿಯಮವನ್ನನುಸರಿಸಿ ಸ್ವಲ್ಪ ಬಾಗಿದ ಅವಳ ಕೊರಳ ಕೊಂಕೋ, ಇವು ಒಂದೊಂದರಲ್ಲಿಯೂ, ಒಟ್ಟಿನಲ್ಲಿಯೂ ಕಾಣಬರುತ್ತಿದ್ದ ಆ ಗಾಂಭೀರ್ಯವೋ!– ನನ್ನ ಕಣ್ದಣಿಯೆ ನೋಡಿದೆ. ನನ್ನ ಮನಸ್ಸಿಗೆ, ಆ ಕ್ಷಣದಲ್ಲೇ ತಕ್ಕ ಗಂಡು ಸಿಕ್ಕಿ ಬಿಟ್ಟರೆ ಆ ಪುಟ್ಟ ವಧುವಿಗೆ ಅಲ್ಲಿಯೇ ಮದುವೆಮಾಡಿಬಿಡಬಹುದಲ್ಲಾ ಅನ್ನಿಸಿತು. ಯೋಗ್ಯನೂ ತಕ್ಕವನೂ ಆದ ಗಂಡ ಸಿಕ್ಕಲಿ ಎಂದು ಪುನಃ ಪುನಃ ಹಾರೈಸಿದೆ. ಇನ್ನೂ ಆರತಿ ಆಗಿರಲಿಲ್ಲ. ಬಂದಿದ್ದ ಮುತ್ತೈದೆಯರೆಲ್ಲಾ ಒಬ್ಬೊಬ್ಬರಾಗಿ ತಮತಮಗೆ ಬಂದ ಹಾಡುಗಳನ್ನು ಹೇಳುತ್ತಿದ್ದರು. ಸರಸಿ ಹಸೆಯ ಮೇಲೆ ಕುಳಿತು ಬಹಳ ಹೊತ್ತಾಗಿತ್ತೆಂದು ತೋರುತ್ತದೆ. ಎಷ್ಟು ಹೊತ್ತು ಸುಮ್ಮನೆ ಕಲ್ಲಿನ ಗೊಂಬೆಯ ಹಾಗೆ ಕುಳಿತಿರುವುದಕ್ಕಾಗುತ್ತದೆ! ಅವಳಿಗೆ ಬಹಳ ಹೊತ್ತು ಗಂಭೀರವಾಗಿ ಕುಳಿತು ಅಭ್ಯಾಸವಿಲ್ಲ! ಸ್ವಲ್ಪ ಸ್ವಲ್ಪವಾಗಿ ಕೈ ಕಾಲು ಅಲ್ಲಾಡಿಸುವುದು, ಸೆರಗು ಸರಿಯಾಗಿದ್ದರೂ ಪುನಃ ಪುನಃ ಸರಿಮಾಡಿಕೊಳ್ಳುವುದು–ಹೀಗೆ ಪ್ರಾರಂಭಿಸಿ ಬರಬರುತ್ತ ತಲೆಯನ್ನು ಪೂರ್ತಿಯಾಗಿ ಎತ್ತಿ ಕಿಟಕಿಯ ಹೊರಗೆ ನಾನು ನಿಂತುದದನ್ನು ನೋಡಿದಳು. ನೋಡಿದಳೋ ಇಲ್ಲವೋ, ಕಣ್ಣುಗಳು ಅಗಲವಾದವು. ಅವುಗಳ ತುಂಬ ಮಿಂಚು! ತಾನು ಹಸೆಯ ಮೇಲೆ ಕುಳಿತಿದ್ದುದನ್ನು ಮರೆತು ಬಿಟ್ಟಳು! ನನಗೆ "ಇನ್ನೇನು ಗತಿ! ಎದ್ದು ಓಡಿ ಬಂದು ಬಿಡುತ್ತಾಳೆಯೇನೋ!" ಎಂದು ಭಯವಾಯಿತು. ಓಡಿ ಬರಲಿಲ್ಲ. ಆದರೆ ಏನು! ಥಟ್ಟನೆ ಹಸೆ ಮಣೆಯ ಮೇಲೆ ಎದ್ದು ನಿಂತುಕೊಂಡು ಕೈತಟ್ಟುತ್ತ, ನನ್ನ ಹೆಸರು ಹಿಡಿದು ಕೂಗಿ "ಬಾ! ಬಾ! ಒಳಗೆ ಬಂದು ಕೂತುಕೊ" ಎಂದು ಕೂಗಿಬಿಟ್ಟಳು! ಶುದ್ಧ ಹುಡುಗಿ! ಸ್ವಲ್ಪವೂ ಗೊತ್ತಿಲ್ಲ. ಅಲ್ಲಿದ್ದ ಹೆಂಗಸರೆಲ್ಲಾ ಕಿಟಕಿಯ ಕಡೆ ತಿರುಗಿನೋಡಿದರು. ಇವರೆಲ್ಲಾ ನನ್ನ ಕಡೆ ನೋಡುವ ಹಾಗೆ ಮಾಡಿಬಿಟ್ಟಳಲ್ಲಾ– ಎಂದು ನನಗೆ ಬಹಳ ನಾಚಿಕೆಯಾಯಿತು. ಕಿಟಕಿಯಿಂದ ಸ್ವಲ್ಪ ಪಕ್ಕಕ್ಕೆ ಹೋಗಿ "ಸುಮ್ಮನಿರು!–ಬರುತ್ತೇನೆ" ಎಂದು ಹೇಳುವ ಹಾಗೆ ಕೈಸನ್ನೆಮಾಡಿದೆ. ಆಗ ಪುನಃ ಹಸೆಯ ಮೇಲೆ ಕುಳಿತುಕೊಂಡಳು. ಆರತಿಯಾಗುವುದಕ್ಕೆ ಮುಂಚೆ ನಾನು ಸರಸಿಯ ತಾಯಿಯನ್ನು ಕರೆದು, ನಾನು ತೆಗೆದುಕೊಂಡುಹೋಗಿದ್ದ ಗೊಂಬೆಯನ್ನು ಅವರ ಕೈಲಿಟ್ಟು, "ಇದು ಸರಸಿಗೆ, ಅವಳ ಹುಟ್ಟಿದ ಹಬ್ಬದ ಉಡುಗರೆ" ಎಂದು ಹೇಳಿ ಕೊಟ್ಟೆ. ನಾನು ನೋಡುತ್ತಿದ್ದ ಹಾಗೆಯೇ ಅವರು ಅದನ್ನು ತೆಗೆದುಕೊಂಡು ಹೋಗಿ, ಅವಳ ಹಣೆಗೆ ಕುಂಕುಮವಿಟ್ಟು, ಆ ಗೊಂಬೆಯನ್ನು ಅವಳಿಗೆ ಕೊಟ್ಟರು. ಅವಳಿಗೆ ಎಷ್ಟು ಸಂತೋಷವಾಯಿತೋ ಅದನ್ನು ನಾನು ಹೇಳಲಾರೆ! ಅವಳ ಮುಖ ಅರಳಿಹೋಯಿತು. ಅದನ್ನು ಕೈಲಿ ಹಿಡಿದುಕೊಂಡು ಬಿರಿಗಣ್ಣಿನಿಂದ ನೋಡುತ್ತ ತೊಡೆಯ ಮೇಲೆ ಇಟ್ಟುಕೊಂಡಳು; ತಾಯಿ ತನ್ನ ಮಗುವಿಗೆ ನಾಮಕರಣವಾಗುವಾಗ ಅದನ್ನು ತನ್ನ ತೊಡೆಯ ಮೇಲೆ ಮಲಗಿಸಿಕೊಳ್ಳುತ್ತಾಳಲ್ಲಾ ಹಾಗೆ. ಇದುವರೆಗೂ ಇದ್ದ ಅವಳ ಗಂಭೀರ ಹಾರಿಹೋಯಿತು. ನಿಮಿಷಕ್ಕೆ ನಾಲ್ಕು ಸಾರಿ ನನ್ನ ಕಡೆ ನೋಡುವುದಕ್ಕೆ ಪ್ರಾರಂಭಿಸಿದಳು. ತನಗೆ ಆರತಿ ಎನ್ನುವದನ್ನು ಮರೆತುಬಿಟ್ಟಳು! ಬಂದವರಿಗೆಲ್ಲಾ ಅವಳ ಆಟವನ್ನು ನೋಡಿ ನಗು! ಸರಸಿ ಅದನ್ನು ತನ್ನ ಪುಟ್ಟ ಎದೆಗೆ ಅಪ್ಪಿಕೊಂಡು ಮುತ್ತಿಡುವುದಕ್ಕೆ ಪ್ರಾರಂಭಿಸಿದಳು. ಅವಳ ತಾಯಿ

"ಸರಸು ! ಇದೇನು ? ಗಂಭೀರವಾಗಿ ಕುಳಿತುಕೋ! ಅದನ್ನು ಪಕ್ಕದಲ್ಲಿಡು!" ಎಂದು ಸ್ವಲ್ಪ ಗದರಿಸಿದರು. ನನಗೆ "ಅಯ್ಯೋ ಯಾಕೆ ಗದರಿಸಿದರೋ" ಅನ್ನಿಸಿತು. ಸರಸಿ ಮನಸ್ಸಿಲ್ಲದ ಮನಸ್ಸಿನಿಂದ ಅದನ್ನು ಪಕ್ಕದಲ್ಲಿಟ್ಟುಕೊಂಡು, ಗಂಭೀರವಾಗಿ ಕುಳಿತುಕೊಳ್ಳಲು ಪ್ರಯತ್ನಮಾಡಿದಳು. ಬಹಳ ಕಷ್ಟವಾಯಿತು. ಆದರೂ ಕ್ಷಣಕ್ಕೆ ಒಂದು ಸಲ ಅದರ ಕಡೆಗೆ ಓರೆಗಣ್ಣಿನಿಂದ ನೋಡುವಳು. ಮೆಲ್ಲನೆ ಬಲಗೈಯನ್ನು ಪಕ್ಕಕ್ಕೆ ಎಳೆದುಕೊಂಡು ಅದನ್ನು ನಿಧಾನವಾಗಿ ಸವರುವಳು. ಅದರ ಮುಖ, ಕೈ, ಕಾಲು, ಹೊಟ್ಟೆ ಎಲ್ಲವನ್ನೂ ತಡವರಿಸಿ ನೋಡುವಳು. ಅವಳ ತಾಯಿ ಇದನ್ನು ಕಂಡು ಒಂದುಸಲ "ಸರಸಾ!" ಎಂದು ಕಣ್ಣುಬಿಟ್ಟರು. ಸರಸಿ ಸರ್ರನೆ ಕೈಯೆಳೆದುಕೊಂಡು ಮುಖದ ಮೇಲೆ ಗಂಭೀರಮುದ್ರೆ ಹಾಕಿಕೊಂಡಳು! ನನಗೆ ತಡೆಯಲಾರದಷ್ಟು ನಗು ಬಂತು. ಅವಳ ತಾಯಿಯೂ ಬಂದವರಲ್ಲಿ ಒಬ್ಬರೂ ಸೇರಿ ಆರತಿ ಎತ್ತಿದರು; ಎತ್ತುವುದಕ್ಕೆ ಮುಂಚೆ ಹಸೆಯ ಮೇಲಿದ್ದವರಿಗೆಲ್ಲಾ ಹಣೆಗೆ ಕುಂಕುಮವನ್ನಿಟ್ಟು ತಾಂಬೂಲ ಕೊಟ್ಟರು. ಸರಸಿ ಮನಸ್ಸಿನಲ್ಲಿ ಆ ಗೊಂಬೆಗೂ ಕುಂಕುಮ ಹಚ್ಚಿಸಬೇಕು. ತಾಂಬೂಲ ಕೊಡಿಸಬೇಕು– ಎಂದು. ಆದುದರಿಂದ ಅವರು ತನಗೆ ಕುಂಕುಮ ಹಚ್ಚಿ ತಾಂಬೂಲ ಕೊಡುವಾಗ, ಪಕ್ಕದಲ್ಲಿದ್ದ ಆ ಗೊಂಬೆಯನ್ನು ಕೈಗೆ ತೆಗೆದುಕೊಂಡು ಪುನಃ ತೊಡೆಯ ಮೇಲೆ ಮಲಗಿಸಿಕೊಂಡಿದ್ದಳು. ತನಗೆಲ್ಲಾ ಹಚ್ಚಿ ಅದರಮೇಲೆ ಗೊಂಬೆಗೂ ಹಚ್ಚುತ್ತಾರೆ– ಅಂದುಕೊಂಡಿದ್ದಳು ಎಂದು ಕಾಣುತ್ತೆ. ಆದರೆ ಅವರು ಹಚ್ಚಲಿಲ್ಲ. ಸರಸಿಗೆ ಸ್ವಲ್ಪ ರೇಗಿರಬೇಕು ! ಅವಳು ನಿರ್ಭಯವಾಗಿ ಆ ಗೊಂಬೆಯನ್ನು ಕೈಲಿ ತೆಗೆದುಕೊಂಡು ಮುಂದಕ್ಕೆ ಚಾಚಿ " ಅಚ್ಚಿ ! ಅಚ್ಚಿ ! ಇದಕ್ಕೂ ಕುಂಕ್ಮ–ಎಲೇ ಅಡಿಕೆ!" ಎಂದಳು. ಅವರು ನಕ್ಕು ಅದಕ್ಕೂ ಕುಂಕುಮ ಹಚ್ಚಿ– ತಾಂಬೂಲ ಕೊಟ್ಟರು. ಆರತಿಗೆ ಬಂದಿದ್ದವರಿಗೆಲ್ಲಾ ಅರಿಶಿನ ಕುಂಕುಮ, ತಾಂಬೂಲ ಬಾಗಿನ ಕೊಟ್ಟಿಯಾಯಿತು. ಬಾಗಿನಕ್ಕೆ ಅವಲಕ್ಕಿ ಉಂಡೆ ಬಾಳೇಹಣ್ಣು. ಸರಸಿ ಯಥಾ ರೀತಿಯಾಗಿ ಆ ಗೊಂಬೆಗೂ ಕೊಡಿಸಿದಳು. ನಾನು ಮನಸ್ಸಿನಲ್ಲೇ "ಭೇಷ್!" ಅಂದುಕೊಂಡೆ.

ಸರಸಿಗೆ ಎಷ್ಟು ಹೊತ್ತಿಗೆ ಬಂದಿದ್ದವರೆಲ್ಲಾ ಹೊರಟು ಹೋಗುತ್ತಾರೋ ಅನ್ನಿಸಿರಬೇಕು. ಅವರೆಲ್ಲಾ ಹೊರಡುವುದಕ್ಕೆ ಏಳಲು ನಾನು ಜಗುಲಿಯ ಮೇಲಿದ್ದ ಕೊಠಡಿಯೊಕ್ಕೆ ಹೋದೆ–ಅವರು ಹೊರಟದ್ದೇ ತಡ ಸರಸಿ ನಾನಿದ್ದ ಕೊಠಡಿಯೊಳಕ್ಕೆ ಚಿಗರಿಮರಿ ಹಾರಿ ಬಂದ ಹಾಗೆ ಬಂದಳು. ನಾನು ಅವಳನ್ನು ನನ್ನ ತೋಳುಗಳಲ್ಲಿ ಸೇರಿಸಿಕೊಂಡು ಮೃದುವಾದ ಅವಳ ಗಲ್ಲವನ್ನು ಸವರುತ್ತ "ಎಲ್ಲಿ! ಸರು, ಒಂದು ಮುತ್ತು ಕೊಡು ನೋಡೋಣ!" ಎಂದೆ. ಸರಸಿ ಒಂದಕ್ಕೆ ಹತ್ತಾಗಿ ನನ್ನ ಮುಖವನ್ನೆಲ್ಲಾ ಮುತ್ತಿನಿಂದ ತುಂಬಿ ಬಿಟ್ಟಳು. ನನಗೆ ಜೋಡಿ ಬಾಗಿನ; ಸರಸಿಯ ತಾಯಿ ಕೊಟ್ಟಿದ್ದು ಒಂದು. ಅವಳು ಖುದ್ದಾಗಿ ಕೊಟ್ಟದ್ದು ಒಂದು. ನಾನು ಬಾಗಿನವನ್ನೆಲ್ಲಾ ತುಂಬಿಕೊಂಡು ಮನೆಗೆ ಹೊರಡೋಣೆಂದು ಎದ್ದರೆ ಸರಸಿ ಬಿಡಳು. ನಾನು ಅಲ್ಲೇ ಊಟಮಾಡಿಕೊಂಡು ಹೊರಡಬೇಕು ಎಂದು ಅವಳ ಇಷ್ಟ. ಅವಳ ಇಷ್ಟ ಪ್ರಕಾರ ಅಲ್ಲಿಯೇ ಊಟಮಾಡಿ ಮನೆಗೆ ಹೊರಟೆ. ಸ್ವಲ್ಪ ದೂರ ಬಂದಿದ್ದೆ. ಅಷ್ಟರಲ್ಲೇ ಸರಸಿ ನನ್ನ ಹೆಸರು ಹಿಡಿದು ಕೂಗಿದಳು. ನಾನು ತಿರುಗಿ ನೋಡಿದೆ. ಸರಸಿ ಅವರ ಮನೆಯ ಮೆಟ್ಟಲಿನ ಮೇಲೆ ನಿಂತಿದ್ದಳು. ನಾನು ಕೊಟ್ಟಿದ್ದ ಗೊಂಬೆಯನ್ನು ಎಡಗೈಯಿಂದ ತನ್ನ ಹೃದಯಕ್ಕೆ ಒತ್ತಿಕೊಂಡಿದ್ದಳು. ನಾನು ತಿರುಗಿದುದನ್ನು ನೋಡಿ ಅವಳು ಮೆಲ್ಲ ಮೆಲ್ಲನೆ ಬಳುಕುತ್ತ ಕಂಭವನ್ನು ಒರಗಿಕೊಂಡು, ನಗುತ್ತ "ನಾಳೇನೂ ಬರ್ತೀಯಾ?" ಎಂದು ಕೇಳಿದಳು. "ಆಗಲಿ" ಎಂದು ಕೂಗಿ ಹೇಳಿ ತಿರುಗಿ ಮನೆಯ ಕಡೆ ಹೊರಟೆ. ಹೋಗುತ್ತಾ, ಸ್ವಲ್ಪ ಹೊತ್ತಿಗೆ ಮುಂಚೆ ನೋಡಿದ್ದೆಲ್ಲಾ ಮನಸ್ಸಿಗೆ ಬಂದು ಕಣ್ಣಿಗೆ ಕಟ್ಟಿದಂತಾಯಿತು. ಅಷ್ಟು ಪುಟ್ಟದೇಹದಲ್ಲಿ ಎಷ್ಟು ಅಭಿಮಾನ! ಎಷ್ಟು ಪ್ರೇಮ :— ಅಂದುಕೊಂಡೆ. ದೇವರು, ಪ್ರಪಂಚದಲ್ಲಿನ ತಾಯ್ತನವನ್ನೆಲ್ಲಾ ಈ ಪುಟ್ಟಶರೀರದಲ್ಲಿ ಎರಕ ಹೊಯ್ದಿದ್ದಾನೆ–ಎಂದು ತೋರಿತು. ಅವಳಿಗೆ ಯಾವಾಗಲೂ ಸುಖವೇ ಇರಲಿ ಎಂದು ಅತ್ಯಂತ ಗೂಢವಾಗಿ ಹಾರೈಸಿಕೊಂಡೆ. ಅಷ್ಟರಲ್ಲೇ ಮನೆಸಿಕ್ಕಿತು.

೩

ಮಾರನೆಯ ದಿನ ಬೆಳಗ್ಗೆ ನಾನಿನ್ನೂ ಎದ್ದೇ ಇರಲಿಲ್ಲ; ಅಷ್ಟು ಹೊತ್ತಿಗೆ ಸರಸಿ ನಮ್ಮ ಮನೆಗೆ ಬಂದುಬಿಟ್ಟಿದ್ದಳು. ಅವಳ ಕೈಯಲ್ಲಿ ನಾನು ಕೊಟ್ಟಿದ್ದ ಗೊಂಬೆ ಇತ್ತು. ನಾನು "ಸರಸೀ" ಎಂದು ಕೂಗಿ ಒಂದು ಮಗ್ಗಲಿಗೆ ತಿರುಗಿದೆ. ಸರಸಿ ಬಂದು ನನ್ನ ಪಕ್ಕದಲ್ಲಿ ಹಾಸಿಗೆಯ ಮೇಲೆ ಕುಳಿತುಕೊಂಡಳು. ನಾನು ಯೋಚಿಸಿದ್ದರಲ್ಲಿ ಅವಳು ಬಹುಶಃ ರಾತ್ರಿಯೆಲ್ಲಾ ನಿದ್ದೆ ಮಾಡಿರಲಾರಳು ಎಂದು ತೋರಿತು. "ಏನು ಸರಸಿ ಇಷ್ಟು

ಬೇಗ ಬಂದು ಬಿಟ್ಟೆ; ರಾತ್ರೆ ನಿದ್ದೆಮಾಡಿದೆಯಾ? ” ಎಂದು ಕೇಳಿದೆ. ಅದಕ್ಕೆ ಅವಳು “ಇಲ್ಲ–, ನನ್ಮಗು ಭಾಳ ಅಳ್ತಿತ್ತು; ನಿದ್ದೆಮಾಡೋಕೆ ? ಬಿಡ್ಲಿಲ್ಲ ” ಎಂದು ಹೇಳಿ ಆ ಅರಗಿನ ಗೊಂಬೆಯನ್ನು ತೊಡೆಯ ಮೇಲೆ ಇಟ್ಟುಕೊಂಡು ತಟ್ಟತೊಡಗಿದಳು. ನನಗೆ ನಗು ಬರುವ ಹಾಗಾಯಿತು ನಕ್ಕರೆ ಕೆಲಸ ಕೆಟ್ಟುಹೋಗಿಬಿಡುತ್ತೆ ಅಂದುಕೊಂಡು, ನಗುವನ್ನು ತಡೆದು, ಬಹು ವಾತ್ಸಲ್ಯದಿಂದ “ ಯಾಕೆ? ” ಎಂದು ಕೇಳಿದೆ.

“ ಅದಕ್ಕೇ–ಮತ್ತೇ–ಜ್ವರಾ ಬಂದಿತ್ತು ”

“ ಅಯ್ಯೋ ! ಪಾಪ! ಯಾಕೆ ಬಂತು? ”

“ ರಾತ್ರೆ ಬಾಳೇಹಣ್ಣು – ಅವಲಕ್ಕಿ ಉಂಡೆ ಎಲ್ಲಾ ತಿಂದ್ಬಿಡ್ತು ”

ಅದಕ್ಕೇ ಬಂತು.

ಮಕ್ಕಳದು ಎಂತಹ ಕಲ್ಪನಾಶಕ್ತಿ ! ನೋಡಿ, ಸರಸಿಗೆ ಅದು ಅರಗಿನ ಗೊಂಬೆಯಾಗಿರಲಿಲ್ಲ. ಅದು ಜೀವವುಳ್ಳ–ಮುದ್ದಾದ–ಅವಲಕ್ಕಿ ಉಂಡೆ–ಬಾಳೇಹಣ್ಣು ಎಲ್ಲಾ ತಿಂದು ಬಿಟ್ಟರೆ ಜ್ವರಾ ಬರುವಂತಹ ಮಗುವಾಗಿ ಬಿಟ್ಟಿದ್ದಿತು.

ನಾನು:“ಹೋಗಲಿ ಬಿಡು ಸರಸು, ಆಸ್ಪತ್ರೆಗೆ ಹೋಗಿ ಔಷಧಿ ತಂದುಕೊಡೋಣ” ಅಂದು ಸ್ವಲ್ಪ ಹೊತ್ತು ಸುಮ್ಮನಿದ್ದೆ. ಸರಸಿ ತನ್ನ ತೊಡೆಯನ್ನು ಮೆಲ್ಲಗೆ ಅಲುಗಿಸುತ್ತ ಆ “ಮಗು” ವಿಗೆ ನಿದ್ದೆ ಬರುವ ಹಾಗೆ ಮಾಡುತ್ತಿದ್ದಳು. ನಾನು ಪುನಃ “ ಸರಸೀ ” ಎಂದು ಕರೆದೆ. ಅವಳು ಫಕ್ಕನೆ ನನ್ನ ಕಡೆಗೆ ತಿರುಗಿ ದೊಡ್ಡದಾಗಿ ಕಣ್ಣು ಬಿಟ್ಟು, ತುಟಿಯ ಮೇಲೆ ಬೆರಳನ್ನಿಟ್ಟು “ನಿದ್ದೆ ಮಾಡ್ತಾ ಇದೆ! ಸದ್ಮಾಡ್ಬೇಡ!” ಎಂದು ಮೆಲ್ಲಗೆ ಉಸುರಿದಳು. ನಾನು ಬಾಯಿ ಭದ್ರವಾಗಿ ಹಿಡಿದುಕೊಂಡು ನಗು ಕಡೆಗೆ. ಇನ್ನು ನಗು ಬರುವುದಿಲ್ಲ ಅನ್ನುವ ಹಾಗಾದ ಮೇಲೆ ಪಿಸು ಮಾತಿನಲ್ಲಿ “ಸರಸ” ಎಂದು ಕರೆದೆ. ಸರಸಿ ನನ್ನ ಕಡೆಗೆ ತಿರುಗಿದಳು.

“ಈ ಮಗುವಿನ ತಾಯಿ ಯಾರು!” ಎಂದು ಕೇಳಿದೆ.

ನಾನು ಎಂದು ಹೇಳುತ್ತಾಳೆ ಎಂದು ಗೊತ್ತಿದ್ದರೂ ತಮಾಷೆಗೆ ಪುನಃ ಕೇಳಿದೆ.

“ನಾನು” ಎಂದು ಅವಳಿಂದ ಉತ್ತರ ಬಂತು.

“ ತಂದೆ ಯಾರು? ”

ಈ ಪ್ರಶ್ನೆಗೆ ಉತ್ತರ ಬರಲಿಲ್ಲ. ಏನು ಹೇಳಬೇಕೆಂದು ತೋರದೆ ಅವಳ ಮನಸ್ಸಿನಲ್ಲುಂಟಾಗಿದ್ದ ಭಾವ ಮುಖದಲ್ಲಿ ತೋರಿತು. ನಾನು.

“ ನಿನ್ನ ತಾಯಿ ಯಾರೆ ”

“ ಅಜ್ಜಿ ”

“ ತಂದೆ? ”

“ ಅಪ್ಪ! ”

(ಅವಳು ತಂದೆಯನ್ನು “ಅಪ್ಪ” ಎಂದು ಕರೆಯುವಳು.)

“ಈಗ ಹೇಳು; ಈ ಮಗುವಿನ ತಾಯಿ–”

“—ನಾನು”

“ಸರಿ ನೀನು ತಾಯಿಯಾದರೆ ತಂದೆಯೂ ಒಬ್ಬರು ಇರಬೇಕಾಯಿತಲ್ಲ, ಅವರು ಯಾರು?”

ಪುನಃ ಉತ್ತರವಿಲ್ಲ. ಸ್ವಲ್ಪ ಹೊತ್ತು ಯೋಚಿಸಿ, ಆಮೇಲೆ ಮನಸ್ಸಿಗೆ ಏನೋ ಹೊಳೆದಿರಬಹುದು. ಥಟ್ಟನೆ ನನ್ನ ಕಡೆ ತಿರುಗಿ “ನೀನು” ಅಂದುಬಿಟ್ಟಳು! ಶುದ್ಧ ಹುಡುಗಿ! ನನಗೋ ನಗು, ಮಳೆಗಾಲದಲ್ಲಿ ಕನ್ನಂಬಾಡಿ ಕಟ್ಟೆ ತುಂಬಿದ ಹಾಗೆ ತುಂಬಿಕೊಂಡು ಬಂತು. ಗಟ್ಟಿಯಾಗಿ ನಕ್ಕು ಬಿಟ್ಟೆ! ಅವಳು “ಅಯ್ಯೋ! ಹೋಗು! ಮಗೂನ ಎಬ್ಬಿಸ್ಬಿಟ್ಟೆ!” ಎಂದು ಹೇಳಿ ಹುಬ್ಬುಗಂಟಿಕ್ಕಿ ನನ್ನ ಕಡೆಗೆ ನೋಡಿದಳು. “ನಾನು ಅವನ್ನ ಇಲ್ಲಿ, ನನ್ನ ಹಾಸಿಗೆಯ ಮೇಲೆ ಮಲಗಿಸು. ನಾನು ತಟ್ಟಿ ಮತ್ತೆ ನಿದ್ದೆ ಬರಸ್ತೀನಿ.” ಎಂದು ಹೇಳಿ ಅವನ್ನು ನನ್ನ ಪಕ್ಕದಲ್ಲಿ ಹಾಸಿಗೆಯ ಮೇಲೆ ಇಟ್ಟುಕೊಂಡು ತಟ್ಟುತ್ತಾ ಅವಳನ್ನು ಕುರಿತು, “ ಅಲ್ವೇ ಸರಸಿ, ನಾನು ಹ್ಯಾಗೆ ಅದರ ತಂದೆ? ” ಎಂದು ಕೇಳಿದೆ.

“ ನೀನೇ ಅಲ್ವೇನು ತಂದ್ಕೊಟ್ಟಿದ್ದು ಅದನ್ನ! ”

ನಾನು ಏನು ಹೇಳುವುದು! ಒಪ್ಪಿಕೊಳ್ಳ ಬೇಕಾಗಿ ಬಂತು. ಎಷ್ಟು ಸುಲಭವಾಗಿ ನನ್ನನ್ನು ಒಬ್ಬ ತಂದೆಯನ್ನಾಗಿ ಮಾಡಿಬಿಟ್ಟಳು ಸರಸಿ! ದೊಡ್ಡವಳಾದ ಮೇಲೆ ಒಳ್ಳೆಯ ತಾಯಿಯಾಗುತ್ತಾಳೆ ಅಂದುಕೊಂಡೆ. ಸರಸಿ ನನ್ನ ಕಡೆಗೇ ನೋಡುತ್ತಿದ್ದಳು. ನಾನು ರಾಗವಾಗಿ “ ಸರಸೀ ” ಎಂದು ಕರೆದು ಅವಳನ್ನು ಹತ್ತಿರಕ್ಕೆ ಎಳೆದುಕೊಂಡು ಅವಳ ಮುಖವನ್ನೇ ನೋಡುತ್ತಿದ್ದೆ. ಅವಳಿಗೆ ಅರ್ಥವಾಯಿತು. ಬಗ್ಗಿ ನನಗೊಂದು

ಮುತ್ತು ಕೊಟ್ಟಳು. ನಾನು ಎದ್ದು ಅವಳನ್ನು ಅಲ್ಲಿಯೇ ಬಿಟ್ಟು ಮುಖತೊಳೆದುಕೊಳ್ಳುವುದಕ್ಕೆ ಹೊರಟೆ.

೪

ಸರಸಿಗೆ ನಾನು ಗೊಂಬೆಕೊಟ್ಟು ಐದಾರು ದಿನಗಳಾದ ಮೇಲೆ ಒಂದು ದಿನ ಬೆಳಿಗ್ಗೆ ಸುಮಾರು ಏಳೂವರೆ ಎಂಟು ಗಂಟೆ ಸಮಯವಿರಬಹುದು, ನಾನು ನಮ್ಮ ಮನೆಯ ಜಗುಲಿಯ ಮೇಲೆ ಕುಳಿತುಕೊಂಡು ರಾಜಶೇಖರ ವಿಲಾಸ ವನ್ನು ಓದುತ್ತಿದ್ದೆ. ಅಷ್ಟು ಹೊತ್ತಿಗೆ ಸರಸಿ ನಮ್ಮ ಮನೆಯ ಕಡೆ ಬರುತ್ತಿದ್ದುದು ಕಾಣಿಸಿತು. ನೋಡುವುದರಲ್ಲಿ ಅಳುತ್ತಿದ್ದ ಹಾಗೆ ತೋರಿತು. ಅಡಿಗಡಿಗೆ ಕೈ ಕಣ್ಣಿನ ಹತ್ತಿರ ಹೋಗುತ್ತಿತ್ತು. ನಮ್ಮ ಮನೆಯ ಹತ್ತಿರ ಬಂದಳು. ನಿಜವಾಗಿಯೂ ಅಳುತ್ತಿದ್ದಳು. "ಯಾಕೆ ಅಳುತ್ತಿದ್ದಾಳೆ! ಏನು ತಂಟೆಮಾಡಿ ಅವರ ಅಮ್ಮನ ಕೈಲಿ ಏಟು ತಿಂದಿದ್ದಾಳೋ" ಅನ್ನಿಸಿತು, ಸರಿಸಿ ಬಂದು ನನ್ನ ಮುಂದೆ ಕಂಭವನ್ನು ಒರಗಿ ಕೊಂಡು ನಿಂತು ಮೆಲ್ಲಗೆ ಬಿಕ್ಕಳಿಸಿ ಅಳಲಾರಂಭಿಸಿದಳು. ನನಗೆ ಆ ಮಗುವಿನ ಅಳುವನ್ನು ನೋಡಿ ಮನಸ್ಸು ತಲ್ಲಣಿಸಿತು. ಪುಸ್ತಕವನ್ನು ಮುಚ್ಚಿಟ್ಟು ಎದ್ದು, ಅವಳ ಕೈಹಿಡಿದು ನನ್ನ ಕೊಠಡಿಗೆ ಕರೆದುಕೊಂಡು ಹೋಗಿ ಹತ್ತರ ಕೂರಿಸಿಕೊಂಡು "ಯಾಕೆ ಸರಸು ಬೆಳಗಾಗತ್ತಲೆ ಅಳ್ತಿದ್ದೀಯಾ ?" ಎಂದು ಕೇಳಿದೆ.

ನನ್ನ ಪ್ರಶ್ನೆಗೆ ಉತ್ತರ ಹೇಳದೆ ಅಳುವನ್ನು ಹೆಚ್ಚುಮಾಡಿ ದಳು.

"ಯಾಕೆ ಹೇಳು ಅಜ್ಜಿ ಏನಾದರೂ ಹೊಡೆದರೆ?"

ಮಾತೇ ಇಲ್ಲ ! ಬರೀ ಅಳು ! ನಾನು ಅವಳನ್ನು ಇನ್ನೂ ಹತ್ತಿರಕ್ಕೆ ಎಳದು ಕಟ್ಟಿಕೊಂಡು ಅವಳ ಮುಂದಲೆಯನ್ನೂ ಕಣ್ಣೀರಿನಿಂದ ತೊಯ್ದು ಎಳಸಾದ ಕೆನ್ನೆಗಳನ್ನೂ ಸವರುತ್ತ. "ನೋಡು, ಸರಸಿ, ನೀನು ಒಳ್ಳೇ ಹುಡುಗಿ; ನನ್ನ ಹತ್ತಿರ ಹೇಳುವದಿಲ್ವೋ? ಮರೆತು ಬಿಟ್ಟೆಯಾ, ತೋಟದಿಂದ ಚಕ್ಕೋತನ ಹಣ್ಣು ತಂದ್ಕೊಟ್ಟದ್ದು ? ಇನ್ನೂ ಬೇಕಾದಷ್ಟು ತಂದ್ಕೊಡ್ತೀನಿ, ನೀನು ಹೇಳಿದ್ರೆ" ಎಂದು ಹೇಳಿದೆ. 'ಚಕ್ಕೋತನ ಹಣ್ಣು ಅಂದೊಡನೆಯೇ ಸರಿಸಿ ಬಾಯಿಬಿಡುವುದಕ್ಕೆ ಪ್ರಯತ್ನಿಸಿದಳು.

"ಊ-ಊ-ಊ-ಮತ್ತೇ-ನನ್ಮಗು-ಊ-ಊ.-"

"ಏನೇ ನಿನ್ಮಗು ? ಏನಾಯ್ತು ಹೇಳು; ಅದಕ್ಕೆ ಮತ್ತೆ ಜ್ವರ ಬಂತೆ!"

"ಊ-ಊ-ನನ್ಮಗೂ-ಊ-ಕೆಟ್ಹೋಯ್ತು-ಊ-ಊ ಊ-ಊ."

ಅವಳ ಗೊಂಬೆಗೆ ಏನೋ ಆಗಿರಬೇಕು ಎಂದು ಊಹಿಸಿದೆ. ಅವಳನ್ನೂ ಕರೆದುಕೊಂಡು ಅವಳ ಮನೆಗೆ ಹೋಗಿ ವಿಚಾರಿಸಲಾಗಿ ನಡೆದ ಸಮಾಚಾರ ಗೊತ್ತಾಯಿತು. ಹಿಂದಿನ ರಾತ್ರೆ ಗೊಂಬೆಯನ್ನೂ ಹತ್ತಿರದಲ್ಲೇ ಇಟ್ಟುಕೊಂಡು ಮಲಗಿದ್ದಳಂತೆ. ಬೆಳಿಗ್ಗೆ ಎದ್ದು ಮುಖತೊಳೆದುಕೊಳ್ಳುವುದಕ್ಕೆ ಹೋಗುವಾಗ ಅದನ್ನೂ ಕೈಲಿಹಿಡಿದುಕೊಂಡು ಹೋದಳಂತೆ. ಬೆಳಿಗ್ಗೆ ಸ್ವಲ್ಪ ಚಳಿಯಾಗಿತ್ತು. ಆದ್ದರಿಂದ "ಮಗು" ಬೆಂಕಿ ಕಾಯಿಸಿಕೊಳ್ಳಲಿ ಅಂದು ಅದನ್ನು ಒಲೆಯ ಮುಂದಿಟ್ಟು ತಾನು ಮುಖ ತೊಳೆದುಕೊಳ್ಳುವುದಕ್ಕೆ ಹೋದಳಂತೆ. ಸರಿ, ಮುಖ ತೊಳೆದುಕೊಂಡು ಬಂದು ನೋಡುವಾಗ ಆ ಗೊಂಬೆ ಬೆಂಕಿಯ ಕಾವಿಗೆ ಕರಗಿ ಮುದ್ದೆಯಾಗಿ, ವಿಕಾರವಾಗಿ ಗುರ್ತು ಸಿಕ್ಕದ ಹಾಗಾಗಿ ಬಿಟ್ಟಿದ್ದಿತು. ನನಗೆ ನೋಡಿ ಅಯ್ಯೋ! ಪಾಪ! ಅನ್ನುವಹಾಗಾಯಿತು.

ಸರಸಿಯನ್ನು ಸಮಾಧಾನಮಾಡುವುದು ಬಹಳ ಕಷ್ಟವಾಯಿತು. ಅವಳ ತಾಯಿ ಒಳ್ಳೇ ಮಾತಿನಿಂದ ಹೇಳಿದರು. ಗದರಿಸಿ ಹೇಳಿದರು. ಏನು ಮಾಡಿದರೂ ಅವಳ ದುಃಖ ಕಡಿಮೆಯಾಗಲಿಲ್ಲ. ನನಗೆ ಒಂದು ಉಪಾಯ ತೋರಿತು. ಅವಳನ್ನು ಪುನಃ ನಮ್ಮ ಮನೆಗೆ ಕರೆದುಕೊಂಡು ಹೋಗಿ, ಅದೇ ದಿನವೇ ಬೆಂಗಳೂರಿಗೆ ನಮ್ಮ ಸೋದರಮಾವನಿಗೆ ಬರೆಯ ಅದಕ್ಕಿಂತ ಚೆನ್ನಾಗಿರುವ "ಮಗು" ವನ್ನು ತರಿಸಿ ಕೊಡುವುದಾಗಿ ಹೇಳಿ ಅವಳ ಎದುರಿಗೆ ಕಾಗದ ಪೇನು ತೆಗೆದುಕೊಂಡು ಕಾಗದ ಬರೆದಹಾಗೆ ನಟಿಸಿದೆ. ಆಗ ಅವಳ ದುಃಖ ಸ್ವಲ್ಪಮಟ್ಟಿಗೆ ಇಳಿಯಿತು. ಕಣ್ಣೀರು ಒರಸಿಕೊಳ್ಳುತ್ತ "ಎಷ್ಟುದಿನ ಆಗತ್ತೆ ಬರೋದು?" ಎಂದು ಕೇಳಿದಳು. ನಾನು "ಅದೇನು! ನಾಲ್ಕೈದು ದಿನಗಳಲ್ಲಿ ಬಂದು ಬಿಡುತ್ತೆ! ಏನೂ ಯೋಚನೆ ಮಾಡಬೇಡ" ಎಂದು ಸಮಾಧಾನ ಹೇಳಿ ನಮ್ಮ ಮನೆಯಲ್ಲೇ ಕಾಫಿ ತಿಂಡಿಕೊಟ್ಟು ಕಳಿಸಿದೆ.

ನಾಲ್ಕು ದಿನ ಆದ ಮೇಲೆ ಸರಸಿ "ಎಲ್ಲಿ ಬರ್ಲಿಲ್ಲ" ಎಂದು ಕೇಳಿದಳು. "ಬರುತ್ತೆ-ಬರುತ್ತೆ ನೋಡು ಕಾಗದ ಬಂದಿದೆ. 'ಒಳ್ಳೇಮಗು ಹುಡುಕ್ತಾ ಇದೀನಿ ಸಿಕ್ಕೊಡ್ನೆ ಕಳಸ್ತೀನಿ'

ಅಂತ ಬರೆದಿದ್ದಾರೆ ನೋಡು " ಎಂದು ಹೇಳಿ ಯಾವುದೋ ಒಂದು ಕಾಗದವನ್ನು ತೋರಿಸಿದೆ. ಅವಳು ಅದೂ ನಿಜವೇನೋ ಅಂದುಕೊಂಡು ಸುಮ್ಮನಾಗಿ ದಿನವೂ ನಿರೀಕ್ಷಣೆಯಲ್ಲೇ ಇದ್ದಳು. ಆ ಅರಿಯದ ಮಗುವಿಗೆ ಸುಳ್ಳು ಹೇಳುವಂತಾಯಿತಲ್ಲಾ !–ಎಂದು ಸಂಕಟವಾಯಿತು. ಆದರೆ ಏನು ಮಾಡುವುದು? ನಿರ್ವಾಹವಿಲ್ಲ. ಹಾಗೆ ಹೇಳದೆ ಇದ್ದರೆ ಪುನಃ ರಗಳೆಗೆ ಪ್ರಾರಂಭಿಸಿಬಿಡುತ್ತಾಳೆ ಎಂಬ ಭಯ. ಇವತ್ತು–ನಾಳೆ–ಕಳ್ಸಿದಾರಂತೆ–ರೈಲಿನಲ್ಲಿ ಬರ್‍ತಾ ಇದೆ–ಎಂದು ಹೇಳುತ್ತಾ ದಿನಗಳನ್ನು ಕಳೆದೆ. ಅಷ್ಟರಲ್ಲೇ ನನ್ನ ರಜ ಮುಗಿದು ನಾನು ಬೆಂಗಳೂರಿಗೆ ಹೊರಡಬೇಕಾಗಿ ಬಂತು. ಆಗ ನಾನು ಹೆಬ್ಬಾಳಿನಲ್ಲಿ ಅಗ್ರಿಕಲ್ಚರಲ ಸ್ಕೂಲಿನಲ್ಲಿ ಓದುತ್ತಾ ಇದ್ದೆ. ಅಲ್ಲಿ ಮುಗಿಸಿಕೊಂಡು, ಹಳ್ಳಿಯಲ್ಲಿ ನಮ್ಮ ಭೂಮಿಕಾಣಿ ನೋಡಿಕೊಂಡಿರಬೇಕೆಂಬ ಅಭಿಪ್ರಾಯ.

ನಮ್ಮ ಹಳ್ಳಿಯಿಂದ—ಗೆ ಬಂದು ರೈಲುಹತ್ತಿ ಬೆಂಗಳೂರು ಸೇರಿದೆ.

೫

ರಜಮುಗಿದು ನಾನು ಹೆಬ್ಬಾಳು ತಲುಪಿ ಆರೇಳು ದಿನಗಳಾಗಿದ್ದುವು. ಒಂದು ದಿನ ಸಾಯಂಕಾಲ ನಾನು ಹೆಬ್ಬಾಳು ಕೆರೆಯನ್ನು ಬಳಸಿಕೊಂಡು ಹೋಗಿ ಅದರ ಆಚೆ ಕಡೆಯಲ್ಲಿದ್ದ ಒಂದು ಎತ್ತರವಾದ ಬಂಡೆಯಮೇಲೆ ಕುಳಿತು, ಸುಖವಾಗಿ ಬೀಸಿ ಬರುತ್ತಿದ್ದ ತಂಗಾಳಿಯನ್ನು ಸೇವಿಸುತ್ತಿದ್ದೆ. ಪ್ರೇಯಸಿಯನ್ನು ಬಹಳಹೊತ್ತು ಕಾಯಿಸಿ ಆಮೇಲೆ ಅವಳ ಮನೆಗೆ ಹೋಗುವ ನಾಯಕನು, ಅವಳ ಮನೆಯ ಹತ್ತಿರ ಹತ್ತಿರ ಹೋದಹಾಗೆಲ್ಲಾ " ಛೆ ! ಎಷ್ಟು ಹೊತ್ತು ಕಾಯಿಸಿಬಿಟ್ಟೆ ! ಏನು ಅನ್ನುವಳೋ! ಎಷ್ಟು ಸಿಟ್ಟುಮಾಡುವಳೋ! " ಎಂಬ ಮನಸ್ಸಿಗೆ ಸುಖವನ್ನುಂಟುಮಾಡುವ ಭೀತಿಯಿಂದ, ಹೆಜ್ಜೆಗಳನ್ನು ಮೆಲ್ಲ ಮೆಲ್ಲಗೆ ಇಡುವಂತೆ, ಸೂರ್ಯನು ಪಶ್ಚಿಮಾಕಾಶದಲ್ಲಿ ತಡೆತಡೆದು ಇಳಿಯುತ್ತಿದ್ದ. ಅನೇಕ ಜಾತಿಯ ಪಕ್ಷಿಗಳು ತಮ್ಮ ತಮ್ಮ ರಾಗಗಳನ್ನು ಹಾಡುತ್ತ ಸೂರ್ಯನ ಚಿನ್ನದ ಕಿರಣಗಳಲ್ಲಿ ತೂರಿ ತೂರಿ ಹಾರಾಡುತ್ತಿದ್ದುವು. ಕೆರೆಯ ಮೈದಾನದಲ್ಲಿ ಆ ಹಳ್ಳಿಯ ದನಕರುಗಳು ಹುಲ್ಲುಮೇಯುತ್ತಿದ್ದುವು. ಏರಿಯ ತಡಿಯಲ್ಲಿ ಕೆಲವು ಹಳ್ಳಿಯ ಹೆಂಗಸರು ಕೊಡಗಳಲ್ಲಿ ನೀರು ತುಂಬಿಕೊಳ್ಳುತ್ತಾ ಇದ್ದರು. ಇನ್ನು ಕೆಲವರು ತುಂಬಿದ ಕೊಡಗಳನ್ನು ತಲೆಯಮೇಲೆ ಇಟ್ಟುಕೊಂಡು, ಆ ಭಾರಕ್ಕೆ ಬಳುಕುತ್ತ ಒಯ್ಯಾರದಿಂದ ಗುಂಪುಗುಂಪಾಗಿ ಏರಿಯಮೇಲೆ ನಡೆದು ಹೋಗುತ್ತಿದ್ದರು. ನಾನು ಕುಳಿತಿದ್ದ ಸ್ಥಳಕ್ಕೆ ಹಿಂಭಾಗದಲ್ಲಿದ್ದ ತೋಪಿನೊಳಗಿನಿಂದ ಯಾರೋ ಗಟ್ಟಿಯಾಗಿ ಲಾವಣಿ ಹೇಳುತ್ತಿದ್ದುದು ಕೇಳಿಬರುತ್ತಿತ್ತು; ಗೊಲ್ಲರ ಹುಡುಗನಿರಬಹುದು. ಇವನ್ನೆಲ್ಲಾ ನೋಡುತ್ತಿದ್ದಹಾಗೆಯೇ ಗೋಲ್ಡ್‌ಸ್ಮಿತ್ ಕವಿಯ " Deserted Village " ಜ್ಞಾಪಕಕ್ಕೆ ಬಂತು. ಗೋಲ್ಡ್‌ಸ್ಮಿತ್ ಕವಿ, ಪ್ರತಿಭಾಶಾಲಿ. ಈ ಸಮಯದಲ್ಲಿ ಅವನು ನನ್ನ ಜೊತೆಯಲ್ಲಿ ಆ ಬಂಡೆಯ ಮೇಲೆ ಕುಳಿತಿದ್ದಿದ್ದರೆ !–ಅನ್ನಿಸಿತು. ದೇವರು ನನಗೂ ಕವಿಯ ಹೃದಯವನ್ನೂ, ಕವಿಯ ಕಣ್ಣುಗಳನ್ನೂ ಕೊಟ್ಟಿದ್ದರೆ, ನಾನೂ ಆಗಿನ ಸನ್ನಿವೇಶವನ್ನು ವರ್ಣಿಸಿ ಸೊಗಸಾದ ಒಂದು ಕಾವ್ಯವನ್ನು ಬರೆದಿಡುತ್ತಿದ್ದೆ. ಆದರೆ ಎಲ್ಲಾ–" ರೆ " ಮೇಲಿನ ಮಾತು ! ನಮ್ಮ ಆಸೆಯೇ ಒಂದು–ನಮ್ಮ ಪಾಲಿಗೆ ಬರುವುದೇ ಒಂದು. ಇದರಲ್ಲಿ ಅರ್ಥವಿಲ್ಲ ಎಂದು ಕೆಲವರು ಗೊಣಗುಟ್ಟುತ್ತಾರೆ. ಆದರೆ ನಾವು ಆ ದೇವದೇವನ ಕಾರ್ಯಕಲಾಪಗಳಿಗೆ ಅರ್ಥವನ್ನು ಕಟ್ಟುವಷ್ಟು ಶಕ್ತರೆ ?......ಹೀಗೆಯೇ ಯೋಚಿಸುತ್ತ ಯೋಚಿಸುತ್ತ ನಮ್ಮ ಹಳ್ಳಿಯ ವಿಷಯವೂ ಅದರ ಸುಖಸಂತೋಷಗಳೂ ಮನಸ್ಸಿಗೆ ಬಂದುವು. ನಮ್ಮ ಹಳ್ಳಿ ನನ್ನೆದುರಿಗೆ ಬಂದು ನಿಂತಂತಾಗಿ ಅಲ್ಲಿ ಬೀದಿಯಲ್ಲಿ ಕುಣಿಕುಣಿದು ನಲಿಯುತ್ತ ಸರಸಿ ಬರುತ್ತಿದ್ದಹಾಗೆ ತೋರಿತು. ಬರಬರುತ್ತ ಹಳ್ಳಿ ಮಾಯವಾಗಿ ಸರಸಿ ಮಾತ್ರ ನನ್ನ ಮನಸ್ಸಿನಲ್ಲಿ ಉಳಿದುಕೊಂಡಳು. ಇನ್ನೊಂದು ಯೋಚನಾತರಂಗ ಹೊರಟಿತು. ಆ ತರಂಗದ ತುದಿಯಲ್ಲಿ ಸರಸಿ...ನಮ್ಮ ಹಳ್ಳಿಗೆಲ್ಲಾ ಅವಳು ಬಹಳ ಸುಂದರಿಯಾದ ಹುಡುಗಿಯಾಗುತ್ತಾಳೆ. ಈಗಾಗಲೆ ಅವಳಿಗೆ ಏಳುವರ್ಷ. ಇನ್ನೆಷ್ಟುದಿನ ?–ಅಬ್ಬಬ್ಬಾ ಅಂದರೆ ಇನ್ನು ನಾಲ್ಕುವರ್ಷ. ಆಮೇಲೆ ಮದುವೆಯಾಗುತ್ತಾಳೆ. ಅವಳಿಗೆ ಒಳ್ಳೇ ಗಂಡ ಸಿಕ್ಕಬೇಕು. ಹೌದು ದೇವಾ! ಅವಳಿಗೆ ಇಷ್ಟು ರೂಪು ಇಷ್ಟುಗುಣಕೊಟ್ಟು ಆ ರೂಪ ಆ ಗುಣಗಳಿಗೆ ತಕ್ಕ ಗಂಡನನ್ನು ಕೊಡಲಾರೆಯಾ? ಭಗವಂತಾ, ನೀನು ಅವಳ ಹಣೆಯಲ್ಲಿ ಏನು ಬರೆದಿರುವೆಯೋ ? ಅಷ್ಟು ಮುದ್ದಾದ ಹಣೆಯಲ್ಲಿ ಏನು ಕಷ್ಟವನ್ನು–ಏನು ದುಃಖವನ್ನು ತುಂಬಿದ್ದೀಯೋ ? ... ಬಹುಶಃ ಬೇರೆ ಊರಿಗೆ ಕೊಡುತ್ತಾರೆ. ಆಮೇಲೆ ?— ಆಮೇಲೆ ಅವಳು ಗಂಡನ ಮನೆಗೆ ಹೋಗುತ್ತಾಳೆ. ಆಮೇಲೆ ನಮ್ಮ ಹಳ್ಳಿಗೆ ಸರಸಿ ಇಲ್ಲದ ಹಾಗಾ

ತ್ತದೆ. ನನಗೂ ಇಲ್ಲದ ಹಾಗಾಗುತ್ತದೆ. ಅವಳು ಮದುವೆ ಯಾಗುವವರೆಗೂ ಒಂದು ತರಹ ಸರಸಿ-ಆಮೇಲೆ ಬೇರೆ-ಜೊತೆಯಲ್ಲಿ ಹುಟ್ಟಿದ ಅಕ್ಕತಂಗಿಯರೇ ಬೇರೆಯಾಗಿರುತ್ತಾರೆ; ಇನ್ನು ಅವಳ ಮಾತೇನು? ಮೊದಲಿನಹಾಗೆ ನನ್ನೊಡನೆ ಸಲಿಗೆ ಯಾಗಿ ಬಂದು ಆಡುತ್ತಾಳೇನು ? ಎಂದಿಗೂ ಇಲ್ಲ. ಅದು ಹೇಗಾದೀತು ? ಮೊದಲು, ನನ್ನನ್ನು ಕಂಡೊಡನೆಯೇ ಓಡಿ ಬಂದು ನನ್ನ ಹೆಗಲಮೇಲೆ ಹಾರಿ ಕುಳಿತುಕೊಳ್ಳುತ್ತಿದ್ದವಳು ಮದುವೆಯಾದಮೇಲೆ ನನ್ನೆದುರಿಗೆ ನಿಲ್ಲುವುದಿಲ್ಲ. ಓಡಿಬಿಡು ತ್ತಾಳೆ. ಇದುವರೆಗೂ ನನ್ನ ಹೃದಯಕ್ಕೆ ಅಂಟಿಕೊಂಡಿದ್ದ ಸರಸಿ ಲಗ್ನವಾದಮೇಲೆ ಇದ್ದಕ್ಕಿದ್ದಹಾಗೆಯೇ ದೂರವಾಗಿ ಬಿಡುತ್ತಾಳೆ. "ಜೀವನದ ಧರ್ಮ" ಯಾರು ಏನುಮಾಡಲಾದೀತು ಅಯ್ಯೋ ! ಸರಸಿ ಯಾಕೆ ದೊಡ್ಡವಳಾಗುತ್ತಿದ್ದಾಳೆಯೋ ! ಅವಳು ಎಂದೆಂದಿಗೂ ಈಗ ಇರುವಹಾಗೆಯೇ ಏಳುವರ್ಷದ ಹುಡುಗಿಯಾಗಿಯೇ ಇರಬಾರದೇ ! ಕಾಲದ ಪರಿವರ್ತನೆಗೆ ಯಾರೂ ಹೊರತಲ್ಲ. ಆದರೆ ಸಂಶಿವಮಾತ್ರ! ಕಾಲದ ಪ್ರವಾ ಹಕ್ಕೆ ಸಿಕ್ಕದೆ ಈಗಿನ ಏಳುವರ್ಷವೇ ಅವಳಿಗೆ ಸ್ಥಿರವಾದರೆ!-ಓ ! ಆಗ ಅವಳು ಯಾವಾಗಲೂ ನಮ್ಮ ಹಳ್ಳಿಯಲ್ಲೇ ಇರು ತ್ತಾಳೆ !-ನನ್ನೊಡನೆ ಆಟಪಾಟ ಸಲಿಗೆ ಎಲ್ಲಾ ಮೊದಲಿನ ಹಾಗೆಯೇ ! ನಾನು ಪ್ರತಿದಿನವೂ ಅವಳನ್ನು ನೋಡಬ ಹುದು!...ಇದೆಲ್ಲಾ ನನ್ನ ಬಣ ಹಂಬಲು. ಅವಳು ದೊಡ್ಡವ ಳಾಗದೆ ಇರುತ್ತಾಳೆಯೆ ? ಮದುವೆಯಾಗದೆ ಇರುತ್ತದೆಯೆ ? ಮೊಗ್ಗು ಹೂವಾಗಿ ಅರಳದೆ ಇರುತ್ತದೆಯೆ ? ಆಮೇಲೆ ಯಾರೋ ಅದೃಷ್ಟಶಾಲಿ ಆ ಹೂವನ್ನು ಕೊಯ್ದುಕೊಂಡು ಹೋಗುತ್ತಾನೆ. ಆಮೇಲೆ ನಮ್ಮ ಹಳ್ಳಿ ಬರಿಯದಾಗುತ್ತೆ. ಆದರೆ ಅವಕ್ಕೆ ಏನು ನಷ್ಟ ! ಇದಕ್ಕೆ ಮೊದಲು ಎಷ್ಟುಜನ ನಮ್ಮ ಹಳ್ಳಿಯ ಹುಡುಗಿಯರು ಮದುವೆಯಾಗಿ ಹಳ್ಳಿಯನ್ನು ಬಿಟ್ಟು ತಮ್ಮ ತಮ್ಮ ಗಂಡನ ಮನೆಗೆ ಹೋಗಿಲ್ಲ! ಹಾಗಾದರೆ ನಷ್ಟ ಯಾರಿಗೆ ?...ಯಾರಿಗೆ ?......ಇವೆಲ್ಲಾ ಆಗಲೇಬೇಕು; ಬೇರೆ ಮಾರ್ಗವಿಲ್ಲ. ಬೇರೆ ಮಾರ್ಗವಿಲ್ಲವೆ ?...ಇರಬಹುದು ! ಇದೆ!-ಇದೆ! ದೇವರು ಇಷ್ಟಪಟ್ಟರೆ ಬೇಕಾದಹಾಗೆ ಇದೆ !... ಹೌದು, ಯಾವಾಗ ಬಾರದು ? ಆಗ ? ಆಗ ಸರಸಿ ನಮ್ಮ ಹಳ್ಳಿಯಲ್ಲೇ ಇರುತ್ತಾಳೆ. ನಾನು ದಿನವೂ ಅವಳನ್ನು ನೋಡ ಬಹುದು. ಸರಸಿ! ಸರಸಿ, ನನ್ನ ಸರಸಿಯಾಗುತ್ತಾಳೆ. ನನ್ನ ಹೃದಯಕ್ಕೆ ಅಂಟಿಕೊಂಡಿರುವವಳು ಆಗ ನನ್ನ ಹೃದಯದಲ್ಲಿ ಸೇರಿ ನನ್ನ ಒಂದೊಂದು ರಕ್ತನಾಳದಲ್ಲಿ ಓಡುತ್ತಾಳೆ !... ಆಹಾ ! ಆ ದಿನ ಬರಬಾರದೇ ! ...ನಾನೂ ಅವಳೂ ಒಟ್ಟಿಗೆ ನಮ್ಮ ನದಿಯ ಮರಳಿನಲ್ಲಿ ಓಡಾಡಬಹುದು-ದೇವಸ್ಥಾನದ ತೋಪಿನಲ್ಲಿ ಮನಸ್ಸು ಬಂದಹಾಗೆ ಸುತ್ತಾಡಬಹುದು. ನಮ್ಮ ಹೊಲಗದ್ದೆಗಳಿಗೆ ಅವಳನ್ನು ಕರೆದುಕೊಂಡು ಹೋಗಬಹುದು. ನಮ್ಮದೊಂದು ಸೊಗಸಾದ ತೋಟ ಇದೆ. ಅದರಲ್ಲಿ ಅನೇಕ ತರಹ ಹಣ್ಣಿನ ಗಿಡಗಳಿವೆ. ತೋಟದ ಮಧ್ಯದಲ್ಲಿ ಒಂದು ಸೋಪಾನದ ಕೊಳ ಇದೆ. ಮೆಟ್ಟಲುಗಳು ಬಹಳ ಚನ್ನಾಗಿವೆ. ನಾನೂ ಅವಳೂ ಅಲ್ಲಿಗೆ ಹೋಗಿ ಆ ಮೆಟ್ಟಲುಗಳ ಮೇಲೆ ಕುಳಿತುಕೊಂಡು ಬಹಳಹೊತ್ತು ಮನಸ್ಸಿಗೆ ತೋರಿದುದನ್ನೆಲ್ಲಾ ಮಾತನಾಡಹುದು. ನಾನೇ ಹಣ್ಣುಗಳನ್ನು ಕಿತ್ತು ತರುತ್ತೇನೆ. ಇಬ್ಬರೂ ಮನಸ್ಸು ದಣಿಯುವಹಾಗೆ ತಿನ್ನಬಹುದು. ಅಲ್ಲಿ ಬಗೆಬಗೆಯ ಹೂವಿನ ಗಿಡಗಳಿವೆ. ಅವಳು ಹಣ್ಣು ತಿನ್ನುತ್ತಿ ರುವಾಗ ನಾನು ಅವುಗಳನ್ನೆಲ್ಲಾ ಕಿತ್ತುತಂದು ಅವಳ ಮುಂದೆ ರಾಶಿಹಾಕುತ್ತೇನೆ. ನಾರು ಇದ್ದರೆ ಮಾಲೆ ಕಟ್ಟಬಹುದು ಎಂದು ಅವಳು ಹೇಳುತ್ತಾಳೆ. ನಾನು ಬಾಳೇಮರದಿಂದ ನಾರು ತಂದುಕೊಡುತ್ತೇನೆ. ಮಾತನಾಡುತ್ತ ಆಡುತ್ತ ಅವಳು ಆ ಹೂವುಗಳನ್ನೆಲ್ಲಾ ಮಾಲೆಯಾಗಿ ಕಟ್ಟುತ್ತಾಳೆ-ನಾನು "ಬಹಳ ಚನ್ನಾಗಿದೆ!" ಅನ್ನುತ್ತೇನೆ. ಅವಳು ಆ ಮಾಲೆಯನ್ನು ನನ್ನ ಕೊರಳಿಗೆ ಹಾಕುತ್ತಾಳೆ. ನಾನು ಅದನ್ನು ತೆಗೆದು, ಅವ ಳನ್ನು ಹತ್ತಿರಕ್ಕೆ ಎಳೆದುಕೊಂಡು ಅವಳ ತುರುಬಿಗೆ ಸುತ್ತು ತ್ತೇನೆ. ಅವಳು ನಗುತ್ತಾಳೆ. ನಾನೂ ನಗುತ್ತೇನೆ. "ಎಲ್ಲಿ, ಒಂದು ಮುತ್ತು' " ಅನ್ನುತ್ತೇನೆ. ಅವಳು "ಊ! ಮುತ್ತು!" ಎಂದು ಹೇಳಿ ಹಿಂದಕ್ಕೆ ಸರಿದು ಮಿಕ್ಕ ಹೂಗಳನ್ನೆಲ್ಲಾ ಬಾಚಿ ತೆಗೆದುಕೊಂಡು ನನ್ನಮೇಲೆ ಎರಚುತ್ತಾಳೆ. ನಾನು ಇದ್ದ ಕ್ಕಿದ್ದ ಹಾಗೆಯೇ " ಚೇಳು ! ಚೇಳು ! " ಎಂದು ಕೂಗು ತ್ತೇನೆ. ಅವಳು ಬೆಚ್ಚಿಬಿದ್ದು ನನ್ನ ಪಕ್ಕಕ್ಕೆ ಥಟ್ಟನೆ ಸರಿದು ನನ್ನನ್ನು ಬಲವಾಗಿ ತಬ್ಬಿಕೊಳ್ಳುತ್ತಾಳೆ. ಆಗ ನಾನು "ಸಿಕ್ಕಿದೆ ಯಲ್ಲ ಈಗ! ಏನಮ್ಮಿ? " ಎಂದು ಕೇಳುತ್ತೇನೆ. " ಸೋತೆ, ಬಿಡಿ" ಅನ್ನುತ್ತಾಳೆ. "ಸುಮ್ಮನೆ 'ಸೋತೆ' ಅಂದರೆ ಬಿಡೊಲ್ಲೆ" ಎಂದು ಹೇಳುತ್ತೇನೆ. "ಇನ್ನೇನಾಗ್ಬೇಕು?" ಎಂದು ಕೇಳು ತ್ತಾಳೆ. " ನಿನಗೆ ತಿಳಿಯದೆ? " ಎಂದು ಹೇಳುತ್ತೇನೆ. "ತಿಳಿ ಯದು" ಅನ್ನುತ್ತಾಳೆ. ನಾನು " ಹೇಳಿಕೊಡು... " ಅಂದು ಕೊಳ್ಳುವಷ್ಟರಲ್ಲಿ ಈ ತಿರುಕನ ಕನಸಿಗೆ ಭಂಗವಾಯಿತು.

ಏರಿ ಆಚೆಯಲ್ಲಿದ್ದ ಹಳ್ಳಿಯಲ್ಲಿ ಯಾವುದೋ ಹುಲ್ಲು ಗುಡಿಸ ಲಿಗೆ ಬೆಂಕಿ ಹತ್ತಿ ಹಳ್ಳಿಯ ಜನಗಳೆಲ್ಲಾ ಬೊಬ್ಬಿಡುವುದು ಕೇಳಿಬಂತು. ನಾನೂ ತಟ್ಟನೆ ಎದ್ದು ಆ ಕಡೆಗೆ ಓಡಿದೆ.

೬

ಇನ್ನು ನಾಲ್ಕುವರ್ಷಗಳು ಕಳೆದುವು. ಈ ನಾಲ್ಕುವರ್ಷ ಗಳಲ್ಲಿ ಬಿಡಿಸಿ ಹೇಳಬೇಕಾದ ಹೆಚ್ಚು ಸಂಗತಿಗಳೇನೂ ನಡೆ ಯಲಿಲ್ಲ. ನಾನು ಹೆಬ್ಬಾಳಿನಲ್ಲಿ ನನ್ನ ವ್ಯಾಸಂಗವನ್ನು ಮುಗಿ ಸಿಕೊಂಡು ಬಂದು ನಮ್ಮ ಹಳ್ಳಿಯಲ್ಲಿ ನೆಲಸಿದೆ. ನಿದಾನ ವಾಗಿ ನಮ್ಮ ಜಮೀನಿನ ಆಡಳಿತವನ್ನು ನಾನೇ ವಹಿಸಲಾ ರಂಭಿಸಿದೆ. ನನ್ನ ಕೆಲಸವೇನೂ ಅಷ್ಟು ಹೆಚ್ಚಾಗಿರಲಿಲ್ಲ. ಬೇಕಾದಹಾಗೆ ವಿರಾಮ ಸಿಕ್ಕುತ್ತಿತ್ತು. ನಾನು ಆ ಕಾಲವನ್ನೆಲ್ಲಾ ನನ್ನ ಒಂದು ಕನಸಿನಿಂದ ತುಂಬುತ್ತಿದ್ದೆ. ಪ್ರತಿಯೊಂದು ಸಲವೂ ಆ ಒಂದೇ ಕನಸು ನನ್ನ ಜೀವನವನ್ನು ಆವರಿಸುತ್ತಿತ್ತು. ಒಂ ದೊಂದು ಸಲವೂ ನಾನು ಆ ಕನಸನ್ನು ಹೆಚ್ಚು ಹೆಚ್ಚು ನಯ ವಾಗಿ ನೇಯುತ್ತ ಅವನ್ನು ನನ್ನ ಹೃದಯದ ಅಂತರಾಳದಲ್ಲಿ ಭದ್ರಪಡಿಸಿ ಈ ನಾಲ್ಕು ವರ್ಷಗಳ ಕಾಲ ಪೋಷಿಸಿದೆ. ನಾನು ಹೀಗೆ ಮಾಡಿದುದು ಸರಿಯೋ ತಪ್ಪೋ ನಾನು ಕಾಣೆ. ಫಲಿ ತಾಂಶದಿಂದ ಒಂದು ವಿಷಯ ಪ್ರಾರಂಭದ ಔಚಿತ್ಯಾನೌಚಿತ್ಯಗ ಳನ್ನು ನಿರ್ಧರಿಸುವುದಾದರೆ ನಾನು ಹಾಗೆ ಮಾಡಿದುದು ಬಹಳ ಅನುಚಿತವಾದ ಕೆಲಸವಾಯಿತೆಂದು ನನಗೆ ಈಗ ತೋರು ತ್ತದೆ. ಮೇಲೆ ಹೋದಷ್ಟೂ ಬೀಳುವ ಆಳ ಹೆಚ್ಚಾಗುವು ದೆಂದು ಅರಿಯದೆ ನಾನು ನಿರ್‍ಯೋಚನೆಯಿಂದ ನನ್ನ ಕನಸಿನ ಶಿಖರವನ್ನೇರಿದೆ. ಒಂದು ವೇಳೆ ಅಲ್ಲಿಂದ ಜಾರಿದರೆ ಏನು ಗತಿ?—ಎಂದು ಮನಸ್ಸಿಗೆ ಆಗಾಗ ತೋರಿದರೂ ಆ ಪರಿಣಾ ಮದ ವಿಷಯವಾಗಿ ನನ್ನ ಮನಸ್ಸು ಯೋಚಿಸಲೊಲ್ಲದೆ ಹೋಯಿತು. ಈ ಆತ್ಮವಂಚನೆಯಿಂದ ನನ್ನ ಮನಸ್ಸು ಬಹಳ ದುಃಖಕ್ಕೆ ಗುರಿಯಾಯಿತು. ಇದರಿಂದ ಎಲ್ಲಾ ನನಗೆ ಈಗ ತೋರುವುದೇನೆಂದರೆ ಅನೇಕ ವೇಳೆ ಆಸೆಯೇ ನಮ್ಮ ದುಃಖಕ್ಕೆ ಕಾರಣ. ಹುಟ್ಟುವುದು ನಮ್ಮ ಆಸೆಯಲ್ಲ. ಸಾಯು ವುದು ನಮ್ಮ ಆಸೆಯಲ್ಲ. ಹೀಗಿರುವಲ್ಲಿ ಇವೆರಡರ ಮಧ್ಯೆ ನಮ್ಮ ಆಸೆ ಪ್ರಬಲವಾಗಲೇಕೆ ?

ಸರಸಿ ಮೆಲ್ಲಮೆಲ್ಲಗೆ ವಧೂ ವೇಷವನ್ನು ತಾಳುತ್ತಿದ್ದಳು. ಅವಳು ಬೆಳೆದ ಹಾಗೆಲ್ಲಾ ನಾನು ನೇಯ್ದುಕೊಂಡಿದ್ದ ಕನ ಸಿನ ಬಣ್ಣ ಮಾಸುತ್ತ ಬಂತು. ಅದರ ಒಂದೊಂದು ಎಳೆಯೂ ಛಿದ್ರ ಛಿದ್ರವಾಗತೊಡಗಿತು. ಒಂದುದಿನ ಅದು ನನ್ನ ಹೃದಯದಿಂದ ಸಂಪೂರ್ಣವಾಗಿ ಅಳಿಸಿ ಹೋಗುವಂತಾ ಯಿತು. ಆದಿನ ಹೇಗೆ ಬಂತು ಎನ್ನುವುದನ್ನು ನಾನು ಇಲ್ಲಿ ವಿವರಿಸಲಾರೆ. ಅದರಿಂದ ನನಗೆ ಬಹಳ ಯಾತನೆಯಾಗು ತ್ತದೆ. ಅಂತೂ ಆದಿನ ಬಂತು. ಸರಸಿಯನ್ನು ಬೇರೆ ಕಡೆಗೆ ಕೊಟ್ಟು ಲಗ್ನಮಾಡಿದರು.

ನನ್ನ ಪ್ರೇಮದ ಬೆಳಕು ಇವಕ್ಕಿದ್ದಹಾಗೆಯೇ ದುಃಖದ ಜಾಲೆಯಾಯಿತು.

೭

ಸರಸಿಯ ವಿಷಯದಲ್ಲಿ ನನ್ನ ಬಲವತ್ತರವಾದ ಆಸೆ ಕೈಗೂ ಡದಿದ್ದರೂ ನನ್ನ ನಿರಂತರವಾದ ಹಾರೈಕೆ ಕೈಗೂಡಿತು. ಅವ ಳನ್ನು ಅನುರೂಪನೂ, ಯೋಗ್ಯನೂ ಆದ ವರನಿಗೆ ಕೊಟ್ಟು ಲಗ್ನಮಾಡಿದರು. ಅವಳ ಗಂಡನ ಊರು ಕೋಲಾರ. ಮೈಸೂರು ಕಾಲೇಜಿನಲ್ಲಿ ಓದುತ್ತಿದ್ದ. ಕೇಳಿದುದರಲ್ಲಿ ಅವರಿಗೆ ಬೇಕಾದ ಹಾಗೆ ಇದೆಯೆಂದೂ, ಅವನು ತನ್ನ ತಾಯಿತಂದೆಗ ಳಿಗೆ ಒಬ್ಬನೇ ಮಗನೆಂದೂ ತಿಳಿಯ ಬಂತು. ನನ್ನ ವಿಷಯ ಹೇಗಾದರೂ ಇರಲಿ, ಸರಸಿಗೆ ಯಾವುದರಲ್ಲಿ ಏನೂ ಕೊರತೆ ಯಿಲ್ಲದಂತಾಯಿತಲ್ಲಾ, ಅಷ್ಟೇ ನನಗೆ ಸಂತೋಷ. ನನ್ನ ದುಃಖದ ಜ್ವಾಲೆಯ ಮೇಲೆ ಈ ಸಂತೋಷವನ್ನು ಚಿಮುಕಿಸಿ ಆರಿಸಲು ಪ್ರಯತ್ನ ಪಡುತ್ತಿದ್ದೆ.

ಮದುವೆಯಾದ ಮೇಲೂ ಸರಸಿಯನ್ನು ಆಗಾಗ ನೋಡು ತ್ತಿದ್ದೆ. ಆದರೆ ಎಷ್ಟು ವ್ಯತ್ಯಾಸ ! ಆ ಸಲಿಗೆ ಆಟಪಾಟ ಎಲ್ಲ ಮರೆತುಬಿಟ್ಟಳೆಂದು ತೋರುತ್ತದೆ. ಅವಳು ಮದುವೆ ಯಾದಮೇಲೆ ನನ್ನನ್ನು ಅಣ್ಣಯ್ಯಾ ಎಂದು ಕರೆಯಲು ಪ್ರಾರಂಭಿಸಿದಳು. ನಾನೂ ಅವಳನ್ನು ಸರಸಮ್ಮ ಎಂದು ಕರೆಯಬೇಕಾಯಿತು. ಸರಸಿಯನ್ನು ನಾನು ಕಳೆದುಕೊಂಡೆ ನೆಂಬ ಭಾವನೆ ನನ್ನ ಹೃದಯದಲ್ಲಿ ನಿಂತಿತ್ತು. ಆದರೆ ಅವಳಿಗೆ ಆ ಭಾವನೆ ಇಲ್ಲ. ಏಕೆಂದರೆ ಅವಳು ಯಾವ ಆಸೆಯನ್ನೂ ಇಟ್ಟುಕೊಂಡಿರಲಿಲ್ಲ. ಇಟ್ಟುಕೊಳ್ಳುವ ವಯಸ್ಸೂ ಇರಲಿಲ್ಲ. ಆದುದರಿಂದ ಆ ವಂಚನೆಯಿಂದ ದುಃಖಕ್ಕೆ ಈಡಾದವನು ನಾನೊಬ್ಬನೆ. ಅವಳಿಗೆ ಆ ದುಃಖವನ್ನು ದೇವರು ತಪ್ಪಿಸಿದ ನಲ್ಲಾ ಅಷ್ಟೇ ನನ್ನ ತೃಪ್ತಿ.

ಮದುವೆಯಾದ ಎರಡುವರ್ಷಗಳಲ್ಲಿಯೆ ಸರಸಿ ಗಂಡನ ಮನೆಗೆ ಹೋದಳು. ಅವಳು ಹೊರಡುವ ದಿನ ನಾನು ಮನೆ

ಯಲ್ಲಿರಲಿಲ್ಲ. ನಮ್ಮ ತೋಟಕ್ಕೆ ಹೋಗಿ ಅಲ್ಲಿ ಕೊಳವ ಸೋಪಾನದ ಮೇಲೆ ಕುಳಿತು ಬೇಕಾದಷ್ಟು ಕಣ್ಣೀರು ಸುರಿಸಿದೆ, ಬೇಕಾದಷ್ಟು ನಿಟ್ಟುಸಿರು ಬಿಟ್ಟೆ. ಅಲ್ಲಿ ಸುತ್ತು ಮುತ್ತಲು ಗಿಡಗಳ ತುಂಬ ಅನೇಕ ಜಾತಿಯ ಹೂಗಳು ಅರಳಿ ಜಗ್ಗುತಿದ್ದುವು. ಅವುಗಳನ್ನೆಲ್ಲಾ ನೋಡಿ ಅಯ್ಯೋ! ಅನ್ನಿಸಿತು. ಒಂದು ರೀತಿಯಾಗಿ ಆಗದಿದ್ದರೆ ಅವುಗಳ ಜನ್ಮ ಸಾರ್ಥಕವಾಗುತ್ತಿತ್ತು. ಆದರೆ ಅವುಗಳಿಗೇನು? ಯಾರು ಇದ್ದರೂ ಇಲ್ಲದಿದ್ದರೂ ಅವು ಅರಳದೆ ಇರುತ್ತವೆಯೋ ? ಅದು ದೇವರ ನಿಯಮ...ಎಲ್ಲವೂ ದೇವರ ನಿಯಮ! ಸಾಯಂಕಾಲ ಹೊತ್ತು ಮಾಡಿಕೊಂಡು ಮನೆಗೆ ಬಂದೆ. ಅಷ್ಟು ಹೊತ್ತಿಗೆ ಸರಸಿ ನಮ್ಮ ಹಳ್ಳಿ ಬಿಟ್ಟು ಹೊರಟು ಹೋಗಿದ್ದಳು.

ರಾತ್ರೆ ಹಸಿವು ತೋರಲಿಲ್ಲ. ಆದರೂ ಸ್ವಲ್ಪ ಊಟಮಾಡಿ ಕೊಠಡಿಗೆ ಹೋಗಿ ಮಲಗಿಕೊಂಡು ಬಿಟ್ಟೆ. ಬೇಗ ನಿದ್ರೆ ಹತ್ತುವ ಹಾಗೆ ಕಾಣಲಿಲ್ಲ.

ತೋಟದಲ್ಲಿ ಕುಳಿತಿದ್ದಾಗ "ಎಲ್ಲವೂ ದೇವರ ನಿಯಮ" ಅಂದಿದ್ದು ಪುನಃ ಈಗ ಜಾಗರಿತವಾಯಿತು.

ಸರಸಿ ಪುನಃ ನಮ್ಮ ಹಳ್ಳಿಗೆ ಬಂದುದು ಎರಡು ವರ್ಷಗಳ ಮೇಲೆ. ಅದಕ್ಕೆ ಮುಂಚೆ ಒಂದು ಬಾರಿಯೂ ಅವಳು ತೌರು ಮನೆಗೆ ಬರಲಿಲ್ಲ. ಅವಳಿಗೆ ಗೌರೀಹಬ್ಬ, ಶ್ರಾವಣಮಾಸದ ವ್ರತ ಎಲ್ಲವೂ ಅಲ್ಲೇ ನಡೆಯಿತಂತೆ ಅಂತಹ ಸೊಸೆಯನ್ನು ಯಾವ ಅತ್ತೆ ತಾನೆ ಬಿಟ್ಟಿರಬಲ್ಲಳು ? ಕೊನೆಗೆ ಅವಳ ಹೆರಿಗೆ ಬಾಣಂತನ ಕೂಡ ಅಲ್ಲೇ ಆಯಿತು. ನಮ್ಮ ಹಳ್ಳಿಗೆ ಗಂಡು ಮಗು ಎಂದು ವರ್ತಮಾನ ಮಾತ್ರ ಬಂತು. ಅವಳು ಗಂಡನ ಮನೆಗೆ ಹೋದಮೇಲೆ ಮೊದಲನೆಯ ಸಲ ತೌರುಮನೆಗೆ ಬಂದುದು ಆರುತಿಂಗಳ ಮಗುವಿನೊಡನೆ.

ಅವಳು ಗಾಡಿಯಲ್ಲಿ ಬರುತ್ತಿದ್ದಾಗ ನಾನು ನಮ್ಮ ಮನೆಯ ಜಗುಲಿಯ ಮೇಲೆ ನಿಂತಿದ್ದೆ. ಅವಳು ದೂರದಲ್ಲೇ ನನ್ನನ್ನು ಕಂಡು ಗುರ್ತಿಸಿ, ಗಾಡಿ ನಮ್ಮ ಮನೆಯ ಮುಂದೆ ಬಂದೊಡನೆಯೇ ನಿಲ್ಲಿಸ ಹೇಳಿ, ನನ್ನನ್ನು ಕುರಿತು, "ಅಣ್ಣಯ್ಯಾ ಕ್ಷೇಮವಾಗಿದ್ದೀಯಾ ?" ಎಂದು ಕೇಳಿ ಕೈಲಿ ಎತ್ತಿಕೊಂಡಿದ್ದ ಮಗುವನ್ನು ನನ್ನ ಕಡೆಗೆ ತಿರುಗಿಸಿ "ಪುಟ್ಟ! ಪುಟ್ಟ! ನೋಡು ಮಾವನ್ನ!" ಎಂದಳು. ಆ ಮೇಲೆ ನನ್ನನ್ನು ಕುರಿತು "ಮನೆಗೆ ಬನ್ನೀಯಾ?" ಎಂದು ಹೇಳಿ ಗಾಡಿಯನ್ನು ಮುಂದಕ್ಕೆ ಹೊಡೆಸಿದಳು,

ನಾನು ಅವರ ಮನೆಗೆ ಹೋದಾಗ ಮಧ್ಯಾಹ್ನ ಸುಮಾರು ಮೂರುಗಂಟೆ ಇರಬಹುದು. ಸರಸಿಯನ್ನು ನೋಡಿದೆ. ಈಗ ಅವಳು ಸಣ್ಣಹೆಂಗಸು ಅದಕ್ಕೂ ಹೆಚ್ಚಾಗಿ ತಾಯಿ ಅವಳನ್ನು ನೋಡಿದವರಲ್ಲಿ ಬಹಳ ಸುಖವಾಗಿದ್ದಾಳೆ, ಎಂದು ತೋರಿತು. ತನ್ನ ಮಗುವನ್ನು ತಂದು ತೋರಿಸಿ ನನ್ನ ಕೈಲಿಟ್ಟಳು. ಮಗು ಬಹಳ ಮುದ್ದಾಗಿದ್ದಿತು. ಆರೇ ತಿಂಗಳಾಗಿದ್ದರೂ ವರ್ಷದ ಮಗು ಅನ್ನುವಹಾಗಿತ್ತು.

ಸರಸಿ ತನ್ನ ಗಂಡನ ಮನೆಯಿಂದ ತಂದಿದ್ದ ತಿಂಡಿ ಸ್ವಲ್ಪ ಕೊಟ್ಟಳು. ಅದನ್ನು ತಿನ್ನುತ್ತ, ಯೋಗಕ್ಷೇಮ ವಿಚಾರ, ಅದು ಇದು ಮಾತನಾಡುತ್ತ, ಹಿಂದಿನ ವಿಷಯಗಳನ್ನೆಲ್ಲ ಜ್ಞಾಪಿಸಿಕೊಳ್ಳುತ್ತ ಅರಗಿನಗೊಂಬೆ ಪ್ರಸ್ತಾಪವನ್ನೆತ್ತಿ, ಅವಳು ಅದಕ್ಕಾಗಿ ...ತ್ತದ್ದೂ, ನಾನು ಇನ್ನೊಂದು ಗೊಂಬೆ ತರಿಸಿ ಕೊಡುವುದಾಗಿ ಹೇಳಿ ಸಮಾಧಾನ ಮಾಡಿದುದೂ ಆ ಮೇಲೆ ಅದೆಲ್ಲಾ ಮರೆತು ಹೋದದ್ದೂ ಎಲ್ಲಾ ಹೇಳಿ ಆ ಮೇಲೆ,

"ಏನಮ್ಮಾ, ಸರಸಮ್ಮ, ಗೊಂಬೆ ತರಿಸಿಕೊಡುತ್ತೇನೆ." ಎಂದು ಹೇಳಿ ಆಗ ಮರೆತು ಬಿಟ್ಟೆ. ಈಗಲಾದರೂ ಹೇಳು, ನೀನು ಆಗಿನ ಹಾಗೆಯೇ ಅತ್ತು ಹಟಮಾಡಿದರೆ, ಈಗಲೂ ಇನ್ನೊಂದು ಗೊಂಬೆ ತರಿಸಿಕೊಡಲು ಸಿದ್ಧವಾಗಿದ್ದೇನೆ" ಎಂದು ಹಾಸ್ಯವಾಗಿ ಹೇಳಿದೆ. ಅದಕ್ಕೆ ಅವಳು ಉತ್ತರವಾಗಿ ತನ್ನ ಮಗನನ್ನು ...ತ್ತಿ ತಬ್ಬಿಕೊಂಡು ಒಂದು ಮುತ್ತು ಕೊಟ್ಟು ನನ್ನ ಕಡೆಗೆ ನೋಡುತ್ತ,

"ಅಣ್ಣಯ್ಯಾ, ನಮ್ಮ ಪುಟ್ಟನ್ನು ನೋಡು! ಇದಕ್ಕಿಂತ ಹೆಚ್ಚಿನ ಗೊಂಬೆ ನನಗೆ ಇನ್ಯಾವುದು?" ಎಂದು ಹೇಳಿ, ಪುಟ್ಟನನ್ನು ತನ್ನ ತೊಳ್ಗಳ ಮೇಲೆ ಕುಣಿಸುತ್ತ "ಅಲ್ವೇನೋ ಪುಟ್ಟ" ಎಂದು ಕೇಳಿದಳು. ಆ ನೋಟವನ್ನು ನೋಡಿ ನನ್ನ ಕಣ್ಣು ಸಾರ್ಥಕವಾಯಿತು. ಬಹಳ ದಿನಗಳ ಹಿಂದೆಯೇ ಅವಳ ಕೇವಲ ಬಾಲ್ಯವಲ್ಲಿ ನಾನು ಕಂಡಿದ್ದ ತಾಯ್ತನದ ಮೊಳಕೆ ಈಗ ಕೋಮಲವಾದ ಲತೆಯಾಗಿ ಬೆಳೆದು, ತನ್ನ ಮೊದಲನೆಯ ಮೊಗ್ಗನ್ನು ಧರಿಸಿ ನನ್ನೆದುರಿಗೆ ನಿಂತಿದ್ದುದನ್ನು ನೋಡಿ ನನಗೆ ಮಿತಿಮೀರಿದ ಆನಂದವಾಯಿತು. ಆಗ ನನಗೆ ಶ್ರೀ ರಾಮಾಶ್ವಮೇಧದಲ್ಲಿ ಸೀತಾದೇವಿ ತನ್ನ ಸಖಿಯನ್ನು ಕುರಿತು "ಎಳದರೆಯದೊಳ್ ನಲ್ಗೂಗಿ ಸಂಪೆತ್ತ ಬಾಲಕೇಳಿಯಂ ಕಣ್ದಣಿಯೆ ಕಂಡು ಸಂಸಾರದ ಸಾರಮಿದೆನುತೆ ಸಂತಸಂಬಡುವ ಪೆಣ್ಗಳೆ ಧನ್ಯೆಯರಲ್ತೆ" ಎಂದು ಹೇಳಿದ ಮಾತು ಜ್ಞಾಪಕಕ್ಕೆ ಬಂತು.

---

# ವಿಲಾಯತಿಯ ಪ್ರವಾಸ

ಲೇಖಕ:—ಶ್ರೀ. ಅಸುಂಡಿ ರಂಗರಾಯರು ಬಿ. ಎ., ಎಂ. ಎಸ್. ಸಿ., ಲಂಡನ್.

(೪ನೆಯ ಸಂಚಿಕೆಯಿಂದ ಮುಂದುವರಿದುದು.)

ಇಂದು ರವಿವಾರ; ಪ್ರಯಾಣ ಬೆಳೆಸಿ ಮೂರು ದಿನಗಳಾದುವು. ಸಮುದ್ರ ಮಧ್ಯದಲ್ಲಿ ನಮ್ಮ ಹಡಗು ಒಂದೇ ಒಂದಾಗಿ ತನ್ನ ಹಾದಿಯನ್ನು ಹಿಡಿದಿರುವುದು. ದೃಷ್ಟಿ ಹರಿಯುವವರೆಗೆ ನೋಡಿದರೂ ನೀರೇ ನೀರು. ಮೇಲೆ ಉಜ್ವಲವಾದ ಸೂರ್ಯನಿಂದ ದೇದೀಪ್ಯಮಾನವಾದ ಮುಗಿಲು; ಕೆಳಗೆ ನೀರು; ಬದಿಗೆಲ್ಲ ನೀರು. ಹಡಗಿನ ಯಂತ್ರದ ಸೊಪ್ಪಳೇ ಸೊಪ್ಪಳು. ಸಮುದ್ರದ ಗುಡುಗು ಸಹ ಕೇಳಬರುವುದಿಲ್ಲ. ಹೊರಗೆ ತೋರಿಕೆಗೆ ಮಾತ್ರ ಸಮುದ್ರವು ಉಗ್ರವಾಗಿ ತನ್ನ ತೆರೆಗಳನ್ನು ಸಿಟ್ಟಿನ ಭರದಲ್ಲಿ, ಮನುಷ್ಯನು ಕಾಲು ಅಪ್ಪಳಿಸುವಂತೆ, ದಂಡೆಗೆ ಅಪ್ಪಳಿಸಿ ಅರ್ಭಟಿಸುತ್ತದಲ್ಲದೆ ತನ್ನೊಳಗೆ ತಾನು ಬಹು ಶಾಂತವಾಗಿಯೂ ಭವ್ಯವಾಗಿಯೂ ಇರುವುದು. ಈ ಭವ್ಯತೆ ಹಗಲು ಭೀಕರವಾಗಿ ತೋರುವುದು !

ಈ ಹೊತ್ತು ಹುಣ್ಣಿವೆ. ಸೂರ್ಯನು ತನ್ನ ಪ್ರಖರವಾದ ಕಿರಣಗಳಿಂದ ಸಮುದ್ರವನ್ನು ಕಾಯಿಸಿ ಒಂದೆಡೆಯಲ್ಲಿ ತನ್ನ ತಾಯ ಹೊಟ್ಟೆಯನ್ನು ಸೇರಹತ್ತಿರುವನು. ಮತ್ತೊಂದೆಡೆಯಲ್ಲಿ ಚಂದ್ರನು, ರವಿಯಿಂದ ರೇಗಿಸಲ್ಪಟ್ಟ ಸಮುದ್ರವನ್ನು ತನ್ನ ವಿಮಲಾಂಶಗಳಿಂದ ಸಂತೈಸಲೆಂದೋ, ಸಂಪೂರ್ಣ ಕಾಂತಿಯಿಂದ ಕಂಗೊಳಿಸಹತ್ತಿರುವನು. ಕ್ಷಿತಿಜದ ಮೇಲೆ ಚಂದ್ರನು ಹುಟ್ಟಿದೊಡನೆಯೆ ಆತನ ಕಿರಣಗಳು ಸಮುದ್ರದ ಸಪಾಟಿನ ಮೇಲೆ ಬೀಳುವುದರಿಂದ ಆತನು ಕಡಲನ್ನು ಮುದ್ದಿಡುವಂತೆ ತೋರುತ್ತದೆ. ಹಡಗು ಕಡಿದೊಡೆದು ಬಂದ ಮಾರ್ಗವು ಈ ಕಿರಣಗಳಿಂದ ಬೆಳ್ಳಗೆ ಹೊಳೆಯಹತ್ತಲು, ಸಮುದ್ರವು ತನ್ನೆಲ್ಲ ದುಃಖಗಳನ್ನು ನುಂಗಿ, ಒಡೆಯನಾದ ಚಂದ್ರನ ಮುದ್ದಿಗೆ ಕುಲುಕುಲು ನಗುವುದೋ ಎಂಬಂತೆ ತೋರುವುದು. ಮಧ್ಯಾಹ್ನದ ಭೀಕರತೆ ಎತ್ತೋ ಅಡಗಿ ಹೋಗಿರುವುದು ಶಾಂತತೆಯೇ, ಪ್ರಸನ್ನತೆಯೇ ನಿಸರ್ಗದ ಗುಣವಾಗಿರುವುದು. ಈ ಹೊತ್ತು ಚಂದ್ರ—ಸಮುದ್ರದ ಆ ಒಂದು ಬಗೆಯ ರಹಸ್ಯವಾದ ಲೀಲೆ ನೋಡದವು ನನ್ನ ಕಣ್ಣಿಗೆ ಕಾಣಲಾರದು. ಏಕೆಂದರೆ ನನ್ನ ಕಣ್ಣು ಒಂದೇ ಸ್ಥಳದಲ್ಲಿರುವುದಿಲ್ಲ. ಹಡಗಿನ ವೇಗದಿಂದ ಓಡುತ್ತಿರುವ ನನಗೆ ಆ ರಹಸ್ಯವು ಹೇಗೆ ಕಂಡಿತು! ಆದರೆ ಚಂದಪ್ಪನ ಮತ್ತೊಂದು ಗುಟ್ಟು ಈ ಹೊತ್ತು ಹೊರಬಿದ್ದಿತು. ಸಮುದ್ರದೊಡನೆ ರಹಸ್ಯದಲ್ಲಿ ವಿನೋದಿಸುತ್ತಿರುವ ಚಂದ್ರನು ಸ್ವಾರ್ಥಿಯೇ ಸೈ. ಆತನಿದ ನಿಸರ್ಗಕ್ಕೇನು ಭೂಷಣ !



ಶ್ರೀ. ಅಸುಂಡಿ ರಂಗರಾಯರು ಬಿ. ಎ., ಎಂ. ಎಸ್ ಸಿ., ಲಂಡನ್

ನಮ್ಮ ಹೆಂಗಳೆಯರು ಹೇಳುವಂತೆ ಚಂದಪ್ಪನಿಂದ

ಗುಜು ಗುಜು ಮಾಪುರಿಗೇನ್ವಸ್ತ
ಗುಜಾಲ ಮಾಪುರಿಗೇನ್ವಸ್ತ
ಶ್ಯಾಮುದಂಡಿಗ್ಗೇನ್ವಸ್ತ; ಎಲ್ಲ
ಲೋಕಕ್ಕೆಲ್ಲಾ ಏನ್ವಸ್ತ

ಹಾಗಲ್ಲ. ಚಂದಪ್ಪನ ಆ ಸ್ವಾರ್ಥ ವಿನೋದವು ಈಗೆಲ್ಲಿರುವುದು! ಎತ್ತ ನೋಡಿದತ್ತ ತನ್ನ ಹಿಮಕಿರಣಗಳಿಂದ ನಿಸರ್ಗವನ್ನು ಮೈದೊಳೆದು ರಾತ್ರಿ ದೇವತೆಯ ಪೂಜೆಗೆ ತನ್ನೊಡನೆ ಇಡೀ ಚರಾಚರ ಸೃಷ್ಟಿಯನ್ನು ಸಜ್ಜುಗೊಳಿಸುತ್ತಿರುವನಲ್ಲ; ಇವನು ಸ್ವಾರ್ಥಿಯೇ ? ಅಂತೂ ಲೋಕನಾಯಕರ ಲೀಲೆಯು ಅಗಾಧವಾದುದೇ ಸೈ. ಅವರ ಸ್ವಾರ್ಥವೂ ಲೋಕಕ್ಕೆ ಕಲ್ಯಾಣವನ್ನೇ ಉಂಟುಮಾಡುತ್ತದೆ.

ಏಡನ್ನ ಆಖಾತವು ಸಮೀಪಿಸುತ್ತಲೆ ಆಫ್ರಿಕೆಯ ಗುಡ್ಡಗಳು ಕಾಣಹತ್ತಿದುವು. ಗೇಣು ಸಹ ನೆಲವನ್ನು ಸುಮಾರು ಒಂದು ವಾರದವರೆಗೆ ಕಾಣದಿದ್ದ ನಮ್ಮೆಲ್ಲರಿಗೆ ಒಂದು ತರದ ಸಂತೋಷವಾಯಿತು. ಅಖಂಡ ತಿಂಗಳಾನುಗಟ್ಟಲೆ ನೆಲವನ್ನು ಕಾಣದೆ ಜಲಸಮೂಹದಲ್ಲಿ ಹೊಸ ಪ್ರದೇಶವನ್ನು ಹುಡುಕಲೆಂದು ಹೊರಟ ಕೋಲಂಬಸನಿಗೆ ಅಮೇರಿಕೆಯ ದಂಡೆಯನ್ನು ಕಂಡಾಗ ಉಂಟಾಗಿದ್ದ ಹರ್ಷವನ್ನು ನಾವು ಎಣಿಸಬಲ್ಲೆವಾದೆವು. ಹಿಂದೀಮಹಾಸಾಗರದಲ್ಲಿರುವಾಗ ಕಡಲಬೇನೆ ಹತ್ತಿದವರಿಗೆ ವಾಸಿಯಾಯಿತು. ಶಾಂತವಾದ ಜನಸಮೂಹದಲ್ಲಿ ಹಡಗು ಹೋಗಹತ್ತಿದುದರಿಂದ ಅದು ಸ್ವಲ್ಪವಾದರೂ ಹೊಯ್ದಾಡಲೊಲ್ಲದು. ರಾತ್ರಿ ೧೦ ಘಂಟೆಗೆ ಏಡನ್ ಬಂದರವು ಕಂಡಿತು. ಮುಂಬೈ ಬಂದರದಂತೆ ಈ ಬಂದರದ ದೀವಿಗೆಗಳ ಸಾಲುಗಳು ಚಂದವಾಗಿ ತೋರುವುವು. ಏಡನ್ನ ದಾಟಿ ನಮ್ಮ ಹಡಗು ಕೆಂಪು ಸಮುದ್ರವನ್ನು ಹೊಕ್ಕಿತು.

ಇದಕ್ಕೆ ಕೆಂಪು ಸಮುದ್ರವೆಂಬ ಹೆಸರು ದಂಡ. ನೀರಿನಲ್ಲಿ ಒಂದೂ ತೆರೆಯಿಲ್ಲವಾದುದರಿಂದ ಸರೋವರವೆಂದರೆ ಒಪ್ಪುವಂತಿತ್ತು. ನೀರು ಕೆಂಪಿಲ್ಲವಾದರೂ ಈ ವಿಶೇಷಣವು ಹೇಗೆ ರೂಢವಾಯಿತೋ ಎಂದು ಹಲವು ಯೋಚನೆ ಮಾಡಿದರೂ ಸರಿಯಾಗಿ ಹೊಳೆಯಲಿಲ್ಲ. ಆದರೆ ಇದರಲ್ಲಿ ಮೀನುಗಳು ಬಹಳವಾಗಿದ್ದುವು. ಹಾರಾಡುವ ಮೀನುಗಳ ಗಂಪು ಪದೇ ಪದೇ ಕಣ್ಣಿಗೆ ಬೀಳುವುದು. ಆದುದರಿಂದ ಇದಕ್ಕೆ ನಾವು ಮತ್ಸ್ಯಸರೋವರವೆಂದು ಹೆಸರಿಟ್ಟೆವು. ಬಲಕ್ಕೆ ಅರಬಸ್ಥಾನದ ಉಸುಗು ನೆಲವೂ ಎಡಕ್ಕೆ ಆಫ್ರಿಕೆಯ ಹಸುರಿಲ್ಲದ ಗುಡ್ಡಗಳೂ ಇರುವುದರಿಂದ ಇಲ್ಲಿಯ ಹವೆ ಬಹಳ ಉಷ್ಣವಾಗಿರುವುದೆಂತಲೂ ಇದನ್ನು ದಾಟಲಿಕ್ಕೆ ಹತ್ತುವ ಎರಡು ದಿವಸಗಳವರೆಗೆ ಒಂದೇ ಸಮನೆ ಬಿಸಿಗಾಳಿ ಬೀಸಹತ್ತಿ ಪ್ರವಾಸವು ಪ್ರಯಾಸವಾಗುವುದೆಂತಲೂ ಜನರು ಮೊದಲು ಹೇಳಿದ್ದರು. ಆದರೆ ನಮಗೆ ಈ ಬಿಸಿಗಾಳಿಯ ರುಚಿಯು ದೊರಕಲಿಲ್ಲ. ಹವೆ ಹಿಂದೀ ಮಹಾಸಾಗರದಲ್ಲಿಯಷ್ಟು ಉಷ್ಣವಾಗಿತ್ತು. ಬೇಸಿಗೆ ಕಾಲದಲ್ಲಿ ಆ ತರದ ಗಾಳಿ ಬೀಸಬಹುದೆಂದು ನಾವು ಊಹಿಸಿದೆವು.

ಈ ಪ್ರಕಾರವಾಗಿ ಎಂಟುದಿನಗಳವರೆಗೆ ಎಲ್ಲಿಯೂ ನಿಲ್ಲದಲೆ ಸಮುದ್ರದಲ್ಲಿ ಓಡಹತ್ತಿದ ನಮಗೆ ಮರುದಿವಸ ಸುಯೇಝು ಬಂದರವೂ ಪೋರ್ಟ ಸೈದ ಬಂದರವೂ ಬರುವುದೆಂದು ತಿಳಿದು ಹರ್ಷವಾಯಿತು. ಮರುದಿನ ಬೆಳಿಗ್ಗೆ ನಾವು ಇನ್ನೂ ಹಾಸಿಗೆಯಲ್ಲಿಯೇ ಇದ್ದಾಗ ಹೊರಗಿನಿಂದ "ಗ್ರೇಪ್ಸ್, ಫಾಯಿನ್ ಗ್ರೇಪ್ಸ್, ಸ್ವೀಟ ಗ್ರೇಪ್ಸ್, ಗುಡ್ ಸಿಗಾರೆಟ್ಸ್ ಫಾಯಿನ್ ಇಜಿಪ್ಶನ್ ಸಿಗಾರೆಟ್ಸ್, ರೀಯಲ್ ಅಂಬರ, ಗುಡ್‌ಕ್ವಾಲಿಟಿ, ನೋವ್ಹೇರ ಗೆಟ್ ಸರ್, ಚೀಪ ಸರ್, ನೋ ಕಾಸ್ಟಲಿ ಮಾಡಮ್" ಎಂಬ ಕಲಾಟ ಧ್ವನಿಯು ಕೇಳಹತ್ತಿತು. ಸುಯೇಝು ಬಂದರದಲ್ಲಿ ನಮ್ಮ ಹಡಗು ನಿಂತಿತ್ತು. ಹಡಗಿನ ಸುತ್ತಲೂ, ದ್ರಾಕ್ಷಿ, ಸೀಮೆಯ ಬೀಡಿ, ತರತರದ ನೋಟದ ಚಿತ್ರಗಳು, ನಾವು ಹೋರಿಗಳ ಕೊರಳೊಳಗೆ ಹಾಕುವಂಥ ಮಣಿ ಸರಗಳು (ಇವುಗಳನ್ನು ಸೀಮೆಯ ಹೆಂಗಸರು ಬಹು ಮಮತೆಯಿಂದ ಕಂಠಾಭರಣಗಳೆಂದು ಉಪಯೋಗಿಸುವರು) ಇವೇ ಮೊದಲಾದ ಸರಕುಗಳನ್ನು ಸಣ್ಣ ಸಣ್ಣ ಡೋಣಿಗಳಲ್ಲಿ ತುಂಬಿಕೊಂಡು, ವ್ಯಾಪಾರಸ್ಥರು ನಮ್ಮನ್ನು ಮುತ್ತಿದ್ದರು. ಇವರು ಜಾತಿಯಿಂದ ಅರಬರಿದ್ದು ದಿನಾಲು ಬಂದು ಹೋಗುವ ಹಡಗುಗಳ ಸುತ್ತಲೂ ತಮ್ಮ ತೇಲಂಗಡಿ ( floating shop ) ಗಳನ್ನು ಒಯ್ದು ತಮ್ಮ ವ್ಯಾಪಾರವನ್ನು ಸಾಗಿಸುತ್ತಾರೆ. ಇವರು ಬಹಳ ಚತುರರಿದ್ದು ಒಂದಾಣೆಯ ಪದಾರ್ಥಕ್ಕೆ ರೂಪಾಯಿ ಬೆಲೆ ಹೇಳಿ ಕೊನೆಗೆ ನಾಲ್ಕಾಣೆಯನ್ನಾದರೂ ಗಿರಾಕಿಗಳಿಂದ ಉಚ್ಚುವರು. ಎದೆಯನ್ನು ಸೀಳಿದರೆ ನಾಲ್ಕಕ್ಷರಗಳು ಹೊರಡುವುದು ಸಂಶಯವಾದರೂ ತಮ್ಮ ಕೆಲಸವನ್ನು ಸಾಗಿಸುವಷ್ಟು ಇಂಗ್ರೇಜಿ ಮಾತಾಡಬಲ್ಲರು. ಇವರ ಆಂಗ್ಲ ಭಾಷೆಯ ಮಾದರಿ ಮೇಲೆ ಕೊಟ್ಟಂತೆ ಇರುವುದು. ಡೋಣಿಯ ಕಂಬದ ಮೇಲೆ ಕುದುರೆ ಹತ್ತಿದಂತೆ ಅಡಿರಿ ಕುಳಿತು ಪರಿಪರಿಯಾಗಿ ಒದರಿ ತಮ್ಮ ಉದ್ಯೋಗವನ್ನು ಹೂಡಿದ ಈ ಅರಬರನ್ನು ನೋಡಿ ನಾವು ಬಹು ವಿಧವಾಗಿ ವಿನೋದಗೊಂಡೆವು.

ನಮಗೆ ಸುಯೇಝುನಲ್ಲಿ ಬಂದರ ಮಾಡುವುದಿದ್ದಿಲ್ಲ. ಆದರೆ ಕಾಲುವೆಯು ಇಟುಕರಿದ್ದುದರಿಂದ ಸರತಿಗೆ ಒಂದರಂತೆ ಹಡಗುಗಳು ಬಿಡಲ್ಪಡುತ್ತವೆ. ಆದುದರಿಂದ ಪ್ರತಿ ಹಡಗೂ ತಾಸೆರಡು ತಾಸು ತಡೆಯಬೇಕಾಗುತ್ತದೆ. ನಮ್ಮ ಹಡಗು; ಮುಂಜಾನೆ ೮ ಘಂಟೆಗೆ ಕಾಲುವೆ ಸೇರಿತು. ಚಿಕ್ಕ ಹೊಳೆಯಲ್ಲಿ ಹೋಗುವವೊ ಎಂಬಂತೆ ತೋರಿತು. ಕಾಲುವೆಯು ಉದ್ದಳತೆ ೧೦೦ ಮೈಲು ಇದ್ದು ಆಳು ೩೦ ಅಡಿ ಇರುವುದು; ಅಗಲು ೨೧೫-೨೬೫ ಅಡಿ ಇರುತ್ತದೆ. ತಳಕ್ಕೆ ಉಸುಗು ಮಣ್ಣು ರೇವೆ ಕುಳಿತು ಆಳು ಕಡಿಮೆಯಾಗಬಾರದೆಂದು ಮಣ್ಣು ತೆಗೆಯುವ ಯಂತ್ರಗಳು ( Sledgers ) ಯಾವಾಗಲೂ ಕೆಲಸ ನಡೆಸಿರುತ್ತವೆ. ಸುಮಾರು ೪-೫ ಮೈಲಿನ ಅಂತರದಲ್ಲಿ ಕಾಲುವೆಯ ಮೇಲ್ವಿಚಾರಕರ ಕಚೇರಿಗಳಿರುತ್ತವೆ. ಕಾಲುವೆಯ ಒಂದು ದಂಡೆಗೆ ಅರಬಸ್ತಾನದ ಉಸುಗು ಬೈಲೂ ಮತ್ತೊಂದಕ್ಕೆ ದೂರದಲ್ಲಿ ಸುಯೇಝು ಪಟ್ಟಣವೂ ಇರುವುವು. ಸುಯೇಝುವ ದಂಡೆಗೆ ಹಸುರು ಇದ್ದುದರಿಂದಲೂ ಅನೇಕ ಜನರು ದಂಡೆಗುಂಟ, ಒಂಟೆಯೇ ಮುಖ್ಯವಾದ ವಾಹನವನ್ನು ಏರಿ ಓಡಾಡುತ್ತಿರುವುದರಿಂದಲೂ ನಮಗೆ ಇದೇ ಹೆಚ್ಚು ಆಕರ್ಷಕವಾಯಿತು. ಮಧ್ಯದಲ್ಲಿ ಭೆಟ್ಟಿಯಾಗುವ ಜನರು ತಮ್ಮ ಕೈಗಳನ್ನು ಬೀಸುತ್ತ ನಮ್ಮ ಪ್ರಯಾಣವು ಸುಖಕರವಾಗಲೆಂದು ಹಾರೈಸುತ್ತಿದ್ದರು. ಭೂಚರ ಪ್ರಾಣಿಗಳನ್ನು ೭-೮ ದಿವಸ ನೋಡದಿದ್ದ ನಮಗೆ ಈ ನೋಟವು ಹಸಿದವನಿಗೆ ಸವಿಯೂಟದಂತಾಯಿತು. ಕಾಲುವೆಯ ಸುತ್ತಲೂ ಇರುವ ಅಖಂಡ ಪ್ರದೇಶವನ್ನು ನೋಡುತ್ತಿರುವಾಗ, ಮೂರು ಖಂಡಗಳ ಸಂಗಮ ಸ್ಥಾನವಾದ ಈ ಸ್ಥಳದಲ್ಲಿ ಒಂದು ವಿಶ್ವವಿದ್ಯಾನಿಲಯುವನ್ನು ಸ್ಥಾಪಿಸಿ ಅನ್ಯೋನ್ಯ ರಾಷ್ಟ್ರೀಯತ್ವಕ್ಕೆ ಪುಟಕೊಡುವಂತೆ ಏರ್ಪಡಿಸಿದರೆ ಜಗತ್ತಿಗೆ ಕಲ್ಯಾಣವಾಗುವುದೆಂದು ನನಗೆ ಅನಿಸಿತು. ಆದರೆ ಈ ಧ್ಯೇಯವು ಕೈಗೂಡುವುದೆಂತು ? ಚಿಕ್ಕಂದಿನಿಂದಲೂ ಬಯಸಿ ಬಯಸಿ ಕೊನೆಗೆ ನಿಜವಾಗಿಯೂ ಹೊರಡಿಸಿದ ಚಿಕ್ಕ ವಿದ್ಯಾಲಯವೇ ನಮ್ಮಿಂದ ಏಳ್ಗೆ ಹೊಂದಲಿಲ್ಲವೆಂಬ ಸಂಗತಿ ನೆನಪಾಗಿ ಈ ಹುಚ್ಚು ಧ್ಯೇಯವನ್ನು ನಾವೆಲ್ಲರೂ ಪರಿಪರಿಯಾಗಿ ನಗೆಗೀಡುಮಾಡಿದೆವು.

ಈ ಕಾಲುವೆ ಕೆಂಪುಸಮುದ್ರವನ್ನು ಭೂಮಧ್ಯಸಮುದ್ರಕ್ಕೆ ಜೋಡಿಸುತ್ತಿರುವುದರಿಂದ ಯುರೋಪ-ಹಿಂದುಸ್ಥಾನಗಳ ಬಾಹೋಗುಗಳಿಗೆ ಒಳ್ಳೇ ಅನುಕೂಲವಾಗಿರುವುದು. ಎಂಟನೇ ಶತಕದಲ್ಲಿ ಆಗಿಹೋದ ಹಾರೂನಲ್ ರಶೀದ ಎಂಬ ಅರಬೀ ಅರಸನ ತಲೆಯಲ್ಲಿಯೇ ಇಂಥದೊಂದು ಕಾಲುವೆಯನ್ನು ಮಾಡಿಸುವ ವಿಚಾರವಿದ್ದಿತು. ಆದರೆ ಇದರಿಂದ ಬಲಾಢ್ಯವಾದ ಯುರೋಪಿನ ರಾಷ್ಟ್ರಗಳಿಗೆ ತನ್ನ ಚಿಕ್ಕ ದೇಶವು ಸಮೀಪವಾಗಿ ಅವುಗಳಿಗೆ ಅದು ಮೆತ್ತನ್ನ ತುತ್ತಾಗಬಹುದೆಂದು ತಿಳಿದು ಈ ಆಲೋಚನೆಯನ್ನು ಆತನು ಬಿಟ್ಟುಕೊಟ್ಟನು. ಬಳಿಕ 'ಕೇಪ ಆಫ ಗುಡ್ ಹೋಪ' ಮಾರ್ಗವು ಗೊತ್ತು ಹಚ್ಚಲ್ಪಟ್ಟು, ಹಿಂದುಸ್ಥಾನದ ಸಂಗಡ ಯುರೋಪದ ವ್ಯಾಪಾರವು ಹೆಚ್ಚಾಗಿ ನಡೆಯಲು, ೧೫ನೆಯ ಶತಕದಲ್ಲಿ ವ್ಹೆನಿಸಸರು ಈ ತರದ ಕಾಲುವೆಯನ್ನು ಅಗಿಯಲೆತ್ನಿಸಿ ಇಜಿಪ್ತರ ಅನುಮತಿಯನ್ನು ಪಡೆಯುವಷ್ಟರಲ್ಲಿ ತುರುಕರು ಇಜಿಪ್ತರನ್ನು ಗೆದ್ದುದರಿಂದ ಇವರ ಯತ್ನವಾದರೂ ಸಫಲವಾಗಲಿಲ್ಲ. ಮುಂದೆ ಅದ್ವಿತೀಯ ಪರಾಕ್ರಮಿಯಾದ ನೆಪೋಲಿಯನ್ನನು ೧೭೯೮ಲರಲ್ಲಿ ಇಜಿಪ್ತಕ್ಕೆ ಹೋದಾಗ ಈ ಕಲ್ಪನೆಯನ್ನು ಮನಸ್ಸಿನಲ್ಲಿ ತಂದುಕೊಂಡು ಇದನ್ನು ಹೇಗೆ ಚೆನ್ನಾಗಿ ಕೈಗೂಡಿಸಬಹುದೆಂಬುದನ್ನು ನಿರ್ಣಯಿಸಲೆಂದು ಒಂದು ಮಂಡಲವನ್ನು ನಿಯಮಿಸಿದನು. ಆದರೆ ಹಲಕೆಲವು ತೊಂದರೆಗಳ ಮೂಲಕವಾಗಿ ಆತನು ಈ ಕೆಲಸಕ್ಕೆ ಕೈಹಾಕಲಾರನಾದನು. ಕೊನೆಗೆ ೧೮೫೪ರಲ್ಲಿ ಫರ್ಡಿನಾಂಡ ಡಿ ಲೆಸೆಪ್ಸ ಎಂಬೊಬ್ಬ ಫ್ರೆಂಚ ಎಂಜಿಯು (Engi-ner) (L. C. E. ಎಂಬ ಮುಂಬೈ ವಿದ್ಯಾಲಯದ ಪದವಿಯಿಂದ ಈ ಶಬ್ದವನ್ನು, ರೂಢಿಯಲ್ಲಿದ್ದುದನ್ನು, ಇಲ್ಲಿ ಉಪಯೋಗಿಸಿದೆ) ಕಾಲುವೆಯನ್ನು ಅಗಿವುದೇ ತನ್ನ ಧ್ಯೇಯವೆಂದು ಅದನ್ನು ಸಾಧಿಸುವ ಯತ್ನದಲ್ಲಿದ್ದನು. ಈ ಸುಮಾರಕ್ಕೆ ತನ್ನ ಗೆಳೆಯನಾದ ಸಯ್ಯದ ಪಾಶಾ ಎಂಬಾತನು ಇಜಿಪ್ತದ ವ್ಹಾಯಿಸ್ರಾಯನಾಗಲು, ಲೆಸೆಪ್ಸನು ಆತನಿಂದ ಕಾಲುವೆಯನ್ನು ಮಾಡಲಿಕ್ಕೆ ಅಪ್ಪಣೆ ಪಡೆದುಕೊಂಡು ತುರ್ಕಸ್ಥಾನಕ್ಕೆ ಅರಸನ ಮುದ್ರಿಕೆಯನ್ನು ದೊರಕಿಸಲೆಂದು ಹೋದನು. ಆದರೆ ಬ್ರಿಟಿಶ ಮುತ್ಸದ್ದಿಗಳು ಈ ಸಾಹಸಕ್ಕೆ ವಿರೋಧಿಗಳಾಗಿದ್ದರು. ಫ್ರೆಂಚರ ಕಡುಹಗೆಗಳಾಗಿ ಯುರೋಪದಲ್ಲಿಯೂ ಹಿಂದುಸ್ಥಾನದಲ್ಲಿಯೂ ಇವರು ಒಂದೇಸಮನೆ ಕಾದಾಡಿದ್ದರಾದುದದರಿಂದ, ಈ ಕಾಲುವೆ ಫ್ರೆಂಚಜನರಿಗೆ ಹಿಂದುಸ್ಥಾನದಲ್ಲಿ ತಮ್ಮಸಂಗಡ ಮತ್ತೆ ಜಗಳಹೂಡುವುದಕ್ಕೆ ಒಳ್ಳೆಯ

ಉಪಾಯವಾಗುವುದೆಂದು ಇವರು ನಂಬಿದ್ದರು. ಆದುದರಿಂದ ತುರುಕ ಅರಸನ ಕಿವಿಯೂದಿ ಈ ಕೆಲಸಕ್ಕೆ ಕಲ್ಲು ಒಗೆಯುವ ಉದ್ಯೋಗವನ್ನು ಇವರು ಒಳ್ಳೆಯ ಕುಶಲತೆಯಿಂದ ಮಾಡ ತೊಡಗಲು ನಾಲ್ಕಾರು ವರ್ಷಗಳವರೆಗೆ ಈ ವಿಚಾರವು ಮರೆ ಯಾಯಿತು. ಆದರೂ ಕೊನೆಗೆ ಲೆಸೆಪ್ಸನು ಅರಸನ ಅನು ಮತಿಯನ್ನು ಪಡೆದು ಒಂದು ಮಂಡಲವನ್ನುಏರ್ಪಡಿಸಿ ಅದರ ಮುಖಾಂತರವಾಗಿ ಹಣ ಕಲೆಹಾಕಿ ೧೮೫೯ ರಲ್ಲಿ ಕಾಲುವೆ ತೋಡುವದಕ್ಕೆ ಮೊದಲುಮಾಡಿದನು. ಕುಂಟುತ್ತ ಕೂರುತ್ತ ೧೦೦ ಮೈಲು ಆಗುವುದಕ್ಕೆ ಇವನಿಗೆ ಹತ್ತುವರ್ಷ ಹಿಡಿಯಿತು. ೧೮೬೯ರಲ್ಲಿ ಈ ಕಾಲುವೆ ಉಪಯೋಗಿಸಲ್ಪಡಹತ್ತಿತು. ಫ್ರಾಂಕಿನ ಈಗಿನ ಕ್ರಯದ ಮೇಲಿಂದ ಎಣಿಸಲಾಗಿ ಇದಕ್ಕೆ ೪೩ ಕೋಟಿ ೯೦ ಸಾವಿರ ರೂಪಾಯಿ ಆಗಿನ ಕಾಲದಲ್ಲಿ ವೆಚ್ಚ ತಗಲಿತು.

ಈ ಕಾಲುವೆಯ ಒಂದು ತುದಿಗೆ ಸುಯೇಝು ಮತ್ತೊಂ ದಕ್ಕೆಪೋರ್ಟಸೈದ ಬಂದರಗಳಿದ್ದು ಪೂರ್ವಪಶ್ಚಿಮ ದೇಶಗಳು ಇದರಿಂದ ಹೆಚ್ಚು ಸಮೀಪವಾಗಿರುತ್ತವೆ. ಇವೆರಡು ಬಂದರ ಗಳು ಈ ದೇಶಗಳ ನಡುವಿನ ದಡ್ಡೀ ಬಾಗಿಲುಗಳಂತೆ ಇರು ತ್ತವೆ. ಆದುದರಿಂದ ಇವುಗಳ ಮೇಲೆ ಪ್ರಭುತ್ವವಿದ್ದ ರಾಷ್ಟ್ರವು ಬಲವುಳ್ಳದ್ದಾಗುವುದೆಂಬಲ್ಲಿ ಸಂಶಯವಿಲ್ಲ. ಈ ಸಂಗತಿಯನ್ನು ಅರಿತುಕೊಂಡೇ ಬ್ರಿಟಿಶರು ೧೮೭೫ ರಲ್ಲಿ ಈ ಕಾಲುವೆಯ ಕಾರ್ಯಕಾರಿ ಮಂಡಲದ ಪಾಲುಗಾರರಾದರು; ಹಾಗು ಸಮ ಯೋಚಿತವಾಗಿ ಇಜಿಪ್ತದಲ್ಲಿ ತಮ್ಮ ರಾಜಕೀಯ ಅಧಿಕಾರವು ನೆಲೆಗೊಳ್ಳಲು ಇವೆರಡು ಬಂದರಗಳ ಸಂರಕ್ಷಣವನ್ನು ತಮ ಕಡೆಗೆ ಇಟ್ಟುಕೊಂಡರು. ಹೀಗೆ ಫ್ರೆಂಚರ ಸಾಹಸದಿಂದ ಕೊರೆಯಲ್ಪಟ್ಟ ಕಾಲುವೆ ಸದ್ಯಕ್ಕೆ ಬ್ರಿಟಿಶರ ಅಧೀನದ ಲ್ಲಿಯೇ ವಸ್ತುತಃ ಇರುತ್ತದೆ. ಇದರಿಂದ ಯುದ್ಧದ ಸಮಯ ದಲ್ಲಿ ಇವರಿಗೆ ಬಹುಬಗೆಯ ಅನುಕೂಲತೆಗಳುಂಟಾದುವು. ಶಾಂತತೆಯ ದಿನಗಳಲ್ಲಿ ಎಲ್ಲ ರಾಷ್ಟ್ರಗಳ ಹಡಗುಗಳೂ ಸುಂಕ ಕೊಟ್ಟು ಈ ಕಾಲುವೆಯನ್ನು ದಾಟಬಹುದಾದರೂ ಯುದ್ಧ ಕಾಲದಲ್ಲಿ ತಮ್ಮ ಮತ್ತು ತಮ್ಮ ಹಿಂಬಾಲಿಗರ ಹಡಗುಪಡೆ ಯನ್ನು ಬೇಕಾದಾಗ ಈ ಕಾಲುವೆಯೊಳಗಿಂದ ಒಯ್ಯುವಂ ತೆಯೂ, ವೈರಿಗಳ ಹಡಗು ಒಂದೂ ದಾಟದಂತೆ ವೈರಿಯ ಮೂಗು ಹಿಡಿಯಲಿಕ್ಕೂ ಈ ಕಾಲುವೆ ಉಪಯೋಗಿಸಲ್ಪ ಟ್ಟಿತು. ಇದರಂತೆಯೇ ಭೂಮಧ್ಯ ಸಮುದ್ರದ ಪೂರ್ವ ಬಾಗಿ ಲಾದ ಜಿಬ್ರಾಲ್ಟರ ಬಂದರವು ಸ್ಪೇನ ದೇಶದಲ್ಲಿದ್ದರೂ ಬ್ರಿಟಿ ಶರ ಸ್ವಾಮಿತ್ವದಲ್ಲಿರುವುದು. ಇಷ್ಟೇಕೆ, ಜಗತ್ತಿನ ಎಲ್ಲ ಭಾಗ ಗಳಲ್ಲಿಯೂ ಇರುವ ಇಂಥ ಆಯಮೆಟ್ಟಿನ ಸ್ಥಳಗಳ ಪ್ರಭು ತ್ವದ ಮೂಲಕವೇ ಬ್ರಿಟಿಶ ಜನರು ಇಷ್ಟೊಂದು ಮಹತಿ ಯನ್ನು ಪಡೆದಿರುವರೆಂದು ಧಾರಾಳವಾಗಿ ಹೇಳಬಹುದು.

( ಮುಂದೆ ಸಾಗುವುದು. )



# ಶ್ರೀ ಬಸವಸಂದೇಶ ಪಂಚಕವು

ಲೇಖಕ:—ಶ್ರೀ. ಸಿದ್ಧರಾಮಪ್ಪಾ ಪಾವಟೆ ಬಿ. ಎ., ಎಲ್‌ಎಲ್. ಬಿ. ವಕೀಲ ಹುಬ್ಬಳ್ಳಿ.

ಪರಮತತ್ವದಲ್ಲಿ ನಿಜಸಂಯುಕ್ತರು. ಆನು ನೀನೆಂಬ ಶಬ್ದಸೂತಕಿಗಳ ಕಳೆದು ತೋರದಿರಯ್ಯ ಎನಗೆ. ಮಹಾನುಭಾವರ ತೋರಯ್ಯ ಎನಗೆ. ಲಿಂಗೈಕ್ಯರ, ಲಿಂಗಸುಖಿಗಳ ಲಿಂಗರೂಪಾಗಿಪ್ಪವರ, ಲಿಂಗಾಭಿಮಾನಿಗಳ ತೋರಯ್ಯ ಕೂಡಲಸಂಗಮದೇವ—(ಶರಣನ ಭಕ್ತಸ್ಥಳ ೨೭)

ಭೇದಭಾವವ ಮಾಜಿ ಮರೆಯಿರಿ ।
ಭೇದವೆಂಬುದು ಖೇದಕರವಹು ।
ದಾದ ಕತದಿಂ ನಿಮ್ಮೊಳಗೆ ನೀವೇಸುದಿನತನಕ ॥



ಕಾದುವಿರಿ ಕನ್ನಡಿಗರೀ ತಿಳಿ ।
ಹೋದುದೇ ನಿಮಗಕಟ ನಾಡಿನ ।
ಸೇದೆ ಮರುಕವ ಮಾಡದೇತಕೊ ಸಂಗಮನೆ ಬಲ್ಲ ॥೧॥

ಸೆಟ್ಟಿಯೆಂಬೆನೆ ಸಿರಿಯಾಳನ, ಮಡಿವಳನೆಂಬೆನೆ ಮಾಚಯ್ಯನ, ಡೋಹರನೆಂಬೆನೆ ಕಕ್ಕಯ್ಯನ, ಮಾದರನೆಂಬೆನೆ ಚೆನ್ನಯ್ಯನ ನಾನು ಹಾರುವನೆಂಬೆನೆ ಕೂಡಲಸಂಗಮದೇವ ನಗುವ. (ಭಕ್ತನ ಭಕ್ತಸ್ಥಳ ೩೪೪)

ನಾನು ಹಿರಿಯನು ನೀನು ಕಿರಿಯನು ।
ನಾನು ಕುಲಜನು ನೀನು ಕುಲವಿಲಿ ।
ನಾನು ಕಲಿತನು ನೀನು ಕಲಿಯದ ಕಾಲುರಿಚನೆಂಬ ॥
ಹೀನ ಮನವದು ತೊಲಗಿ ಭಾರತ—।
ಧೇನುವಿನ ಬಳಲಿಕೆಯ ಬಾಡಿಪ—।
ನೂನ ಮನ ನಿಮಗಕ್ಕೆ ಸಂಗಮನಾಥನೊಲವಿಂದೆ ॥೨॥

ಶಿವಧರ್ಮವ ಕೆಡಿಸುವವನು ಅಧರ್ಮಕಿಳಿವನು ಕೂಡಲಸಂಗಮದೇವ ಸಾಕ್ಷಿಯಾಗಿ—(ಮಾಹೇಶ್ವರ ಸ್ಥಳ ೯೪)

ಆರ್ಯಧರ್ಮವ ಪಾಲಿಸುವ ನರ—।
ನಾರ್ಯನಪ್ಪನು ತಪ್ಪದಿದು ಬೇ—।
ರಾರ್ಯತೆಯದೆಲ್ಲಿಹುದೊ ಬರಿಬಾಯ್ವಾತಿದೆಂತಲ್ಲ ।
ಧೈರ್ಯಗೆಟ್ಟಾ ವೇದಧರ್ಮವ ।
ಕಾರ್ಯವರಿಯದೆ ಕಳೆದು ಕೊಳುವಾ ।
ದಾರ್ಯಹೀನತೆ ನಿಮಗೆ ಬಂದುದು ಸಂಗಮನ ಮರೆದು ॥೩॥

ಹಡೆದೊಡವೆಯು ಪಡೆದ ಪದಾರ್ಥವನು ಮೃಡಭಕ್ತರಿಗಲ್ಲದೆ ಕಡಬಡ್ಡಿಯ ಕೊಡಲಾಗದು. ಬಂದರೊಂದು ಲೇಸು ಬಾರದಿದ್ದೊಡೆರಡು ಲೇಸು. ಅಲ್ಲಿದ್ದರೆಯು ಲಿಂಗಕ್ಕೆ ಬೋನ, ಇಲ್ಲದ್ದರೆಯು ಲಿಂಗಕ್ಕೆ ಬೋನ. ಲಿಂಗದೊಡವೆ ಲಿಂಗಕ್ಕೆ ಸಾರಿತ್ತಾಗಿ ಬಂದಿತ್ತೆಂಬ ಪರಿಣಾಮವಿಲ್ಲ, ಬಾರದೆಂಬ ದುಃಖವಿಲ್ಲ. ಇದು ಕಾರಣ, ಕೂಡಲಸಂಗಮದೇವ ನಿಮ್ಮ ಶರಣರಿಗಲ್ಲದೆ ಕಡಬಡ್ಡಿಯ ಕೊಡಲಾಗದು.

ಒಡವೆಗಳ ನಿಮ್ಮವನೆ ಕೊಳ್ಳಿರಿ ।
ಒಡವೆಗಳ ನಿಂಮವನೆ ಮಾರಿರಿ ।
ಒಡವೆಗಳು ಚೆಲು ನಿಮ್ಮವೆನ್ನುತಲೆಂದು ಭಾವಿಸಿರಿ ॥
ಬಡವರಾಗಿಹ ನಿಂಮರೊಡವೆಗೆ ।
ಕಡುವೆಲೆಯ ಕೊಟ್ಟರೆಯುದುಡ್ಡದು ।
ಬಿಡದೆ ನಿಂಮೊಳಗಿಪ್ಪುದಿಪ್ಪುದು ಸಂಗಮನು ಮೆಚ್ಚೆ ॥೪॥

ತಿಳುವಳಿಕೆ. ಆದರೆ ಇದು ತಪ್ಪೆಂದೂ ಎಲ್ಲಕ್ಕೂ ಮೊದಲು ಈ ಮಾತನ್ನು ಕಂಡು ಹಿಡಿದುದು ಹಿಂದುಧರ್ಮವೆಂದೂ ವೇದ ಮತ್ತು ಉಪನಿಷತ್ತುಗಳೊಳಗಿನ ಕೆಲವು ಅವತರಣಗಳಿಂದ ಶ್ರೀ. ಮಹೇಶಚಂದ್ರ ಘೋಷರೆಂಬವರು ವೇದಿಕ ಮ್ಯಾಗಝಿನ್ ಎಂಬ ಪತ್ರಿಕೆಯಲ್ಲಿ ಸಿದ್ಧಮಾಡಿರುವರು. ಅವತರಣಿಕೆಗಳು ಇಂತಿವೆ.

त्वं हि पिता, त्वं माता

( ಋಗ್ವೇದ )

ನೀನು ತಂದೆ, ನೀನು ತಾಯಿ.

सखा पिता पितृतमःपितॄणाम्

( ಋಗ್ವೇದ )

ನೀನು ಮಿತ್ರನು, ತಂದೆ, ತಂದೆಗಳಲ್ಲಿ ಶ್ರೇಷ್ಠನಾದ ತಂದೆ.

पिता नोऽसि पिता नो बोधि ।

( ಯಜುರ್ವೇದ )

ನೀನು ನಮ್ಮ ತಂದೆ, ತಂದೆಯಾಗಿ ನಮಗೆ ಬೋಧಿಸು.

सर्वस्य शरणं सुहृद ।

( ಶ್ವೇತಾಶ್ವತರ ಉಪನಿಷತ್ತು )

ಎಲ್ಲರ ಆಶ್ರಯವು, ಮಿತ್ರನು.

एतत् प्रेयः पुत्रात् प्रेयो वित्तात् प्रेयोऽन्यस्मात् सर्वस्मात् ।

( ಬೃಹದಾರಣ್ಯಕೋಪನಿಷತ್ತು )

ಮಗನಿಂದಲೂ ಪ್ರಿಯನು, ವಿತ್ತದಿಂದಲೂ ಪ್ರಿಯನು, ಉಳಿದುದೆಲ್ಲದರಿಂದಲೂ ಪ್ರಿಯನು.

— Vedic magazine

---

## ಅಫಗಾಣಿಸ್ತಾನದ ಅಮೀರರಿಗೆ ಯುರೋಪಿನಲ್ಲಿ ವಿಶೇಷತಃ ಇಂಗ್ಲಂಡಿನಲ್ಲಿ ಈ ಅಪೂರ್ವ ಆದರಾತಿಥ್ಯವೇಕೆ ?

ಈ ಪ್ರಶ್ನಕ್ಕೆ ಪುಣೆಯ ಕೇಸರಿಯಲ್ಲಿ ಸಮರ್ಪಕವಾದ ಉತ್ತರವು ಬಂದಿದೆ. ಅದರ ಸಾರಾಂಶವು ಇಂತಿದೆ.

ಅಫಗಾಣಿಸ್ತಾನದ ಅಮೀರರಿಗೆ ಯುರೋಪಿನಲ್ಲಿ ಈಗ ಪ್ರಚಂಡವಾದ ಆದರಾತಿಥ್ಯವು ದೊರೆವುದಕ್ಕೆ ಕಾರಣವು ಸೋವಿಯಟ್ ರಶಿಯುವು ಏಸಿಯಾಖಂಡದಲ್ಲಿ ಆರಂಭಿಸಿದ ರಾಜಕಾರಣವು. ಏಶಿಯಾದ ರಾಜಕೀಯ ಕ್ಷೇತ್ರದಲ್ಲಿ ಸೋವಿಯಟರು ಪ್ರವೇಶಿಸುವ ಮೊದಲು ಜಪಾನ ಮತ್ತು ತುರ್ಕಸ್ತಾನಗಳ ಹೊರತಾಗಿ ಉಳಿದೆಲ್ಲ ರಾಷ್ಟ್ರಗಳು ಒಂದಿಲ್ಲೊಂದು ಯುರೋಪಿಯನ್ ರಾಷ್ಟ್ರದ ಕೈಗೊಂಬೆಗಳಾಗಿದ್ದುವು. ರಾಜಕಾರಣದ ಕಣದಲ್ಲಿ ಸೋವಿಯಟರು ಬಂದೊಡನೆ ಎಲ್ಲರಿಗೂ ನೀವು ಸ್ವಾತಂತ್ರವು ಬೇಕೆನ್ನಿರಿ, ಅದು ನಿಮ್ಮದೇ ಇರುವುದು, ಎಂದು ಸಾರಿದರು. ಯುರೋಪಿನೊಳಗಿನ ಭಾಂಡವಲಗಾರ ರಾಷ್ಟ್ರಗಳು ಎಂದೂ ಮಾಡದಿದ್ದ ಉಪಕ್ರಮವನ್ನು ಇವರು ಮಾಡಿದರು. ಏಶಿಯಾಖಂಡದಲ್ಲಿಯ ರಾಷ್ಟ್ರಗಳಲ್ಲಿ ಇತರ ಯುರೋಪಿಯನ್ ರಾಷ್ಟ್ರಗಳಂತೆ ರಶಿಯಕ್ಕೂ ಕೆಲವು ವಿಶೇಷಾಧಿಕಾರಗಳಿದ್ದುವು. ಆದರೆ ರಶಿಯುವು ಅವನ್ನು ಬಿಟ್ಟು ಕೊಟ್ಟಿತು, ಮತ್ತು ಇರಾಣ ಮತ್ತು ಅಫಗಾಣ ರಾಷ್ಟ್ರಗಳ ತರುಣರಿಗೆ ಪಾಶ್ಚಾತ್ಯ ಯುದ್ಧಕಲೆಯ ಶಿಕ್ಷಣವನ್ನು ಕೊಟ್ಟಿತು. ಇದಲ್ಲದೆ ಇನ್ನೊಂದು ಮಹತ್ವದ ಮಾತನ್ನು ಸೋವಿಯಟ್‌ರು ಮಾಡಿದರು. ಅವರು ಅಫಗಾಣಕ್ಕೆ, ಇಂಗ್ಲಂಡು ಎಷ್ಟೇ ಬಲಾಢ್ಯವಾಗಿರಲಿ, ಅದರ ಸೈನ್ಯವು ಎಷ್ಟೇ ದೊಡ್ಡದಾಗಿರಲಿ, ಅದರ ಪರರಾಷ್ಟ್ರೀಯ ಧೋರಣವು ಇನ್ನು ಮುಂದೆ ವಾಯಿಸರಾಯನ ಮನೋಲಹರಿಯಂತೆ ಯಶಸ್ವಿಯಾಗಿ ನಡೆಯಲಾರದು, ಎಂಬ ಮಾತನ್ನು ಮನದಟ್ಟಾಗಿ ಮಾಡಿಕೊಟ್ಟಿತು. ಅಮೀರರು ಸಿಂಹಾಸನವನ್ನು ಏರಿದ ಕಾಲದಲ್ಲಿ ಅವರು ಪ್ರಕಟಿಸಿದ ಅಪೂರ್ವವಾದ ಕರ್ತೃತ್ವ ಶಕ್ತಿಯನ್ನು ಕಂಡು ಬ್ರಿಟಿಶರು ಅವರೊಂದಿಗೆ ಒಪ್ಪಂದುಮಾಡಿಕೊಳ್ಳಬೇಕಾಯಿತು ಮತ್ತು ಅಫಗಾಣಿಸ್ತಾನದ ಪರರಾಷ್ಟ್ರೀಯ ಧೋರಣದಲ್ಲಿ ಮನಸ್ಸು ಹಾಕಲು ತಮಗಿದ್ದ ಅಧಿಕಾರವನ್ನು ಬಿಟ್ಟುಕೊಟ್ಟು ಅಮೀರರು ಪೂರ್ಣಸ್ವತಂತ್ರರಾಜರೆಂದು ಒಪ್ಪಿಕೊಳ್ಳಬೇಕಾಯಿತು. ಇತ್ತ ಸೋವಿಯಟ್‌ರು ಅಮೀರರೊಂದಿಗೆ ಮಿತ್ರತ್ವದಿಂದ ನಡೆಕೊಳ್ಳುತ್ತಿರುವರು, ಮತ್ತು ಅವರು ಅಫಗಾಣಿಸ್ತಾನದ ಅಂತರ್ಬಾಹ್ಯ ಸುಧಾರಣೆಗಳನ್ನು ಮಾಡಲು ಸಹಾಯಮಾಡಿದುದಲ್ಲದೆ ಅಫಗಾಣಿಸ್ತಾನವನ್ನು ಸ್ವಾವಲಂಬಿಯಾಗಿ ಮಾಡಲು ಸಹಾಯಮಾಡಿದರು. ಸೋವಿಯಟ್ ಸರಕಾರದ ಈ ಧೋರಣದಿಂದ ಬ್ರಿಟಿಶ್ ಮುತ್ಸದ್ದಿಗಳ ಮೇಲೆ ಆಗಬೇಕಾದ ಪರಿಣಾಮವಾಯಿತು. ಬ್ರಿಟಿಶರಿಗೆ ಅಫಗಾಣಿಸ್ತಾನವನ್ನು ಸೋವಿಯಟ್‌ರ ಪಕ್ಷದಿಂದ ಬಿಡಿಸಿ ತಮ್ಮ

ಪಕ್ಷದಲ್ಲಿ ಸೇರಿಸಿಕೊಳ್ಳುವುದಿಷ್ಟವಾಗಿರುವುದು. ಈ ಕಾರಣ ದಿಂದಲೇ ಅಫಗಾಣಿಸ್ಥಾನದ ಅಮೀರರಿಗೆ ಇಂಗ್ಲಂಡಿನಲ್ಲಿ ಈ ಅಪೂರ್ವವಾದ ಆದರಾತಿಥ್ಯವು.

—'ಕೇಸರಿ'

## ಚೇಳುಕಡಿತಕ್ಕೆ ಬಿಸಿನೀರಿನ ಉಪಾಯವು

ಈ ಕೆಳಗಿನ ಮಾತು ಬಾಂಬೇ ಕ್ರಾನಿಕಲ್ ಪತ್ರದಲ್ಲಿ ಬಂದಿದೆ.

ಪುಣೆಯ ನೆರೆಯಲ್ಲಿರುವ ಹಿಂಗಣೆ ಎಂಬ ಊರಲ್ಲಿ ಒಬ್ಬ ಸದ್ಗೃಹಸ್ಥರು ಮನೆಯಲ್ಲಿ ಮಲಗಿರುವಾಗ ಮೊಳಕಾಲಿಗೆ ಚೇಳು ಕಚ್ಚಿತು. ಬಾಧೆಯಿಂದ ಕೂಡಲೇ ಅವರು ಎಚ್ಚತ್ತು ತಮ್ಮ ಪತ್ನಿಗೆ ನೀರು ಕಾಸಿತರಲು ಹೇಳಿದರು. ಬಿಸಿನೀರು ಬಂದೊಡನೆ ಅವರು ತಮ್ಮ ಮೊಳಕಾಲನ್ನು ಎರಡು ತಾಸಿನ ವರೆಗೆ ಅದರಲ್ಲಿ ಮುಳುಗಿಸಿ ಕುಳಿತರು. ವೇದನೆ ನಿಂತಿತು. ಇದೇ ಪ್ರಯೋಗವನ್ನು ತಮ್ಮ ಒಬ್ಬ ಮಿತ್ರರಿಗೆ ಚೇಳು ಕಚ್ಚಿದಾಗ ಮಾಡಿದರು. ಆಗಲೂ ಪ್ರಯೋಗವು ಯಶಸ್ವಿಯಾಯಿತು.

—"The Bombay Chronicle."

## ಅಂಜೀರದ ಉಪಯೋಗವು

ಅಂಜೀರದಲ್ಲಿ ರಕ್ತಶುದ್ಧಿಮಾಡುವ ಗುಣವಿರುತ್ತದೆ. ಶಿಶಿರ ಋತುವಿನಲ್ಲಿ ನಾಲಿಗೆ, ತುಟಿಗಳು ಒಡೆದರೆ ಇದರ ಎಲೆಗಳ ಮಶಿಮಾಡಿ ಹಚ್ಚುವರು. ಚಲೋ ಎರಡು ಅಂಜೀರಗಳನ್ನು ಸುಲಿದು ರಾತ್ರಿ ಕಲ್ಲುಸಕ್ಕರೆಯ ಹುಡಿಯಲ್ಲಿಟ್ಟು ಬೆಳಿಗ್ಗೆ ತಿನ್ನಬೇಕು. ಇದರಂತೆ ಹದಿನೈದು ದಿವಸಗಳವರೆಗೆ ತಿನ್ನುವು ದರಿಂದ ಮೈ ಕಾಯುವುದು ಕಡಿಮೆಯಾಗಿ ಶಕ್ತಿ ಬರಹತ್ತು ವುದು. ರಾತ್ರಿ ಎರಡು ಒಣಗಿದ ಅಂಜೀರಗಳನ್ನು ತಿಂದು ಸ್ವಲ್ಪ ನೀರು ಕುಡಿದು ಮಲಗುವುದರಿಂದ ಬೆಳಿಗ್ಗೆ ಮಲಶುದ್ಧಿ ಯಾಗುವುದು.

—'ನಂದಿನೀ'

## ಕಂಕೋಳ ಅಥವಾ ಗಂಧಮೆಣಸು

ಕಂಕೋಳವು ಬಹು ಸುವಾಸಿಕವಿದ್ದು ತಂಪಾಗಿದೆ. ಇದನ್ನು ಅರ್ಧತೊಲೆಯಷ್ಟು ಜಜ್ಜಿ ಹಾಕಿ ಅಷ್ಟಮಾಂಶ ಕಷಾಯ ಮಾಡಿ ಅದರಲ್ಲಿ ಆರೆಂಟು ಹನಿ ಗಂಧದೆಣ್ಣೆ ಹಾಕಿ ಕಷಾ ಯವು ತಣ್ಣಗಾದ ಮೇಲೆ ಕುಡಿಯುವುದರಿಂದ ಮೂತ್ರವು ಸರಿಯಾಗಿ ಆಗುವುದು. ಇದರ ಒಂದು ಮಾಸಿ ವಸ್ತ್ರಗಾಳಿತ ಚೂರ್ಣ, ಶ್ರೀಗಂಧವನ್ನು ತೇದು ಮಾಡಿದ ಗಂಧ ಒಂದು ಮಾಸಿ, ಕಾಲುತೊಲೆ ಸಕ್ಕರೆ ಕೂಡಿಸಿ ದಿನಕ್ಕೆ ನಾಲ್ಕು ಸಾರೆ ತಕ್ಕೊಳ್ಳುವುದರಿಂದ ಮೂತ್ರದಲ್ಲಾಗುವ ಯಾವುದೇ ಪ್ರಕಾ ರದ ಉರಿಯಾದರೂ ನಿಲ್ಲುವುದು. ಇದನ್ನೂ ಕಲ್ಲುಸಕ್ಕರೆಯನ್ನೂ ಬಾಯಲ್ಲಿಟ್ಟುಕೊಂಡು ರಸವನ್ನು ನುಂಗುತ್ತಿರುವುದರಿಂದ ಮುಖರೋಗವು ( ಬಾಯಿವಡೆ, ಬಾಯಿ-ಹುಣ್ಣು ಮು.) ಗುಣವಾಗುವುದು. ಸನ್ನಿಪಾತದಲ್ಲಿ ರಕ್ತವು ವಾಂತಿಯಾಗು ತ್ತಿದ್ದರೆ ಇದರ ಚೂರ್ಣದ ನಸ್ಯಮಾಡಬೇಕು.

—'ನಂದಿನೀ'

## ಸುವರ್ಣಭೂಮಿಯ ಸುವರ್ಣವೇನಾಯಿತು ?

೧. ಯುರೋಪಿಯನ್ ನೌಕರರ ಪಗಾರ ರೂಪದಿಂದ ಇಂಗ್ಲಂಡಿನ ಬ್ಯಾಂಕಿನಲ್ಲಿ ಹರಿದು ಹೋಯಿತು.

೨. ಸಂಸ್ಥಾನಿಕರ ಪರದೇಶಗಮನದ ಸರಬರಾಯಿ ಖರ್ಚಿನ ರೂಪದಿಂದ ಹಾಳಾಯಿತು.

೩. ಶ್ರೀಮಂತರ ಮೋಟಾರಿನ ರೂಪದಿಂದ ಕೆಲವು ದಿವಸ ತೋರಿ ನಾಶವಾಯಿತು.

೪. ನಡೆಯಲು ಶಕ್ತಿಸಾಲದವರಿಗೆ ಕಾಲುಗಾಡಿಯಾಗಿ ಮುರಿದು ಹೋಯಿತು.

೫. ಚಹಾ, ಕಾಫಿ ಕುಡಿಯುವ ವಿಲಾಸಿಗಳ ಮನೆಯಲ್ಲಿ ಕಪ್ಪು ಬಸಿಗಳ ರೂಪದಿಂದ ಒಡೆದು ಹೋಯಿತು.

೬. ಡೌಲಿನಿಂದ ಮೆರೆಯುವವರ ನಯವಾದ ಬಟ್ಟೆಗಳ ರೂಪದಿಂದ ಹರಿದು ಹೋಯಿತು.

೭. ಅತಿಥಿಗಳ ಸತ್ಕಾರಕ್ಕಾಗಿ ಸಿಗ್ರೇಟಿನ ರೂಪದಿಂದ ಸುಟ್ಟು ಭಸ್ಮವಾಯಿತು.

೮. ಅಶಕ್ತರು ತಿನ್ನಲು ಬಿಸ್ಕಿಟಿನ ರೂಪದಿಂದ ತೋರಿ ನಾಶವಾಯಿತು.

೯. ಆಲಸ್ಯದಿಂದ ಕಾಲಕಳೆವವರ ಮುಂಗೈಯಲ್ಲಿ ರಿಸ್ಟ ವಾಚಿನಿಂದ ತೋರಿ ಕೊಂಕಿಹೋಯಿತು.

೧೦. ಮೋಟಾರಿನ ಪೆಟ್ರೋಲ್ ರೂಪದಿಂದ ಸುಟ್ಟು ಹೋಯಿತು.

೧೧. ಹೆಂಗುಸರ ಕೈ ಬಳೆಗಳ ರೂಪದಿಂದ ಒಡೆದು ಹೋಯಿತು.

—ನವಕರ್ನಾಟಕ

೧೨. ಭಾರತದ ದಾಸ್ಯಪಾಶವನ್ನು ಬಿಗಿಮಾಡುವ ಸೈನ್ಯದ ವೆಚ್ಚಕ್ಕಾಗಿ ಸವೆದು ಹೋಯಿತು.

—ಸಾ. ಬ.




॥ नाहं कर्ता हरिः कर्ता तत्पूजा कर्म चाखिलम् ॥

## ಬಾರ್ಡೋಲಿಯ ಕಾಳಗ

ಗಾಂಧಿಯವರ ಗುಜರಾಥದಲ್ಲಿ ಬಾರ್ಡೋಲಿಯ ಜನರು ಸರಕಾರದ ವಿರುದ್ಧವಾಗಿ ಕಾಳಗ ಹೂಡಿರುವುದನ್ನು ಈಗ ಎಲ್ಲರೂ ಕೇಳಿರಬಹುದು. ಸರಕಾರದವರು ಅನ್ಯಾಯದಿಂದ ಕರಿಗೆಗಳನ್ನು ವಸೂಲಮಾಡಿಕೊಳ್ಳುವುದನ್ನು ನಿಶ್ಚಯಿಸಿದ್ದರಿಂದ ರೈತರು ಅದನ್ನು ಕೊಡದೆ ಸತ್ಯಾಗ್ರಹವನ್ನು ಮಾಡುವುದನ್ನು ನಿಶ್ಚಯಿಸಿರುವರು. ಸರಕಾರದವರು ರೈತರ ಆಸೆಯನ್ನು ಜಪ್ತುಮಾಡಿ ಹಣವನ್ನು ವಸೂಲಮಾಡಹತ್ತಿರುವರು. ಜಪ್ತುಮಾಡಿದ ಮಾಲನ್ನು ಯಾರೂ ಕೊಳ್ಳಲೊಲ್ಲರು! ಇಷ್ಟೇ ಅಲ್ಲ, ಅದನ್ನು ಒಯ್ಯಲಿಕ್ಕೆ ಸಹ ಕೂಲಿಕಾರರು ಸಿಗಲೊಲ್ಲರು. ಸರಕಾರದವರು ರೇಗಿಗೆದ್ದು ಬಡರೈತರನ್ನು ಪರಿಪರಿಯಿಂದ ಕಾಡುತ್ತಿರುವರು. ಮೋಟಾರುಗಳಿಗೆ ಪರವಾನಿಗೆಯನ್ನು ಕೊಡಲೊಲ್ಲರು. ಅದರಿಂದ ಜನರಿಗೆ ಬಹಳೇ ತೊಂದರೆಯಾಗಿರುತ್ತದೆ. ಆದರೂ ಅವರು ಶಾಂತವಾಗಿ ಇದೆಲ್ಲವನ್ನೂ ಸಹಿಸುತ್ತಿರುವುದು ಅವರಿಗೆ ಭೂಷಣವು. ಫಾರ್ಶಿಜನರಂಥ ರಾಜನಿಷ್ಠರೂ ಈ ಸತ್ಯಾಗ್ರಹದಲ್ಲಿ ಕೂಡಿರುವರೆಂಬುದನ್ನು ನೋಡಿದರೆ, ಬಾರ್ಡೋಲಿಯಲ್ಲಿ ಎಷ್ಟು ಅನ್ಯಾಯವಾಗಿದೆಯೆಂಬುವದರ ಕಲ್ಪನೆಯು ಜನರಿಗೆ ಬರಬಹುದು ಸರಕಾರದವರು ಜನರು ದಂಗೆಮಾಡಬಹುದೆಂದು ಸುಳ್ಳೇ ಅಂಜಿರುವರು. ದೇ. ಬ. ಪಾಟೀಲರು ಆ ಪ್ರಕಾರ ಅಂಜಲಿಕ್ಕೆ ಕಾರಣವಿಲ್ಲೆಂದು ಆಶ್ವಾಸನಕೊಟ್ಟಿದ್ದಾರೆ. ಮಹಾತ್ಮಾಗಾಂಧಿಯವರ ನಿಜವಾದ ಶಿಷ್ಯರು ತಾವೆಂಬುದನ್ನು ತೋರಿಸುವ ಭಾರವು ಜನರ ಮೇಲೆ ಇರುತ್ತದೆ. ಅಲ್ಪಸ್ವಲ್ಪ ಕೂಡ ಹಿಂಸೆಯಾಯಿತೆಂದರೆ ಅದನ್ನೇ ಗುದ್ದವಾಗಿ ಮಾಡಿ, ಈ ಚಳವಳವನ್ನು ಮುರಿಯುವ ಸಂಧಿಯು ಸರಕಾರಕ್ಕೆ ದೊರೆಯುವುದೆಂಬುದನ್ನು ಜನರು ಮರೆಯಬಾರದು. ಮತ್ತು ರೈತರನ್ನು ಪೀಡಿಸುವುದಕ್ಕೂ ಮರ್ಯಾದೆ ಇರುತ್ತದೆಂಬುವನ್ನು ಸರಕಾರವೂ ಮರೆಯಬಾರದು.

---

## ಕರ್ನಾಟಕದ ಸುಲಿಗೆಗಾರರು

ಕನ್ನಡಿಗರು ಕರ್ನಾಟಕದ ಸುಲಿಗೆಗಾರರು ಯಾರೆಂಬುದನ್ನು ಚೆನ್ನಾಗಿ ಅರಿತುಕೊಳ್ಳುವುದು ಅವಶ್ಯವಿದೆ. ಏಕಂದರೆ, ಇವರು ನಮ್ಮವರು ಇವರು ನಮ್ಮವರಲ್ಲವೆಂಬ ಜ್ಞಾನವಿರದಿದ್ದರೆ, ಅನ್ಯರು ನಮ್ಮನ್ನು ಸುಲಿದುಕೊಂಡು ಹೋದರೂ ತಿಳಿಯದೆ ಹೋಗುವುದು. ಆದುದರಿಂದ, ಕರ್ನಾಟಕವ ಸುಲಿಗೆಗಾರರು ಯಾರೆಂಬುದಕ್ಕೆ ನಾವು ಈ ಸಲ ಸಂಕ್ಷೇಪವಾಗಿ ಉತ್ತರ ಕೊಡುವೆವು. ಕರ್ನಾಟಕದ ಹಿತವನ್ನು ಬುದ್ಧಿಪೂರ್ವಕವಾಗಿ ದುರ್ಲಕ್ಷಿಸಿ, ಕರ್ನಾಟಕದ ಎಲ್ಲಬಗೆಯ ಸಂಪತ್ತನ್ನು ಸೆಳೆದುಕೊಂಡು ಹೋಗುವವರೆಲ್ಲರೂ ಕರ್ನಾಟಕದ ಸುಲಿಗೆಗಾರರು ಎಂಬುದು ಸಹಜವಿದೆ. ಕರ್ನಾಟಕದಲ್ಲಿ ಶಾಶ್ವತವಾಗಿ ವಾಸವಾಡುವವರೆಲ್ಲರೂ ಕರ್ನಾಟಕಸ್ಥರು. ಕರ್ನಾಟಕದಲ್ಲಿ ಶಾಶ್ವತವಾಗಿ ವಾಸಮಾಡಿ, ಕರ್ನಾಟಕಕ್ಕೆ ಎರಡು ಬಗೆಯುವವರೆಲ್ಲರೂ ಕರ್ನಾಟಕ ದ್ರೋಹಿಗಳು. ಇದರಲ್ಲಿ ಜಾತಿಯ ಸಂಬಂಧವಿಲ್ಲ, ಧರ್ಮದ ಸಂಬಂಧವಿಲ್ಲ, ಭಾಷೆಯ ಸಂಬಂಧವಿಲ್ಲ, ಮತದ ಸಂಬಂಧವಿಲ್ಲ. ಕರ್ನಾಟಕದಲ್ಲಿ ಶಾಶ್ವತವಾಗಿ ವಾಸಿಸುವವರೆಲ್ಲರೂ ಕರ್ನಾಟಕಸರು, ಅವರು ಜಾತಿಯಿಂದ ಮುಸಲ್ಮಾನರೇ ಇರಲಿ, ಬ್ರಾಹ್ಮಣರೇ ಇರಲಿ, ಕ್ರಿಶ್ಚಿಯನ್ನರೇ ಇರಲಿ, ಹೊಲೆಯರೇ ಇರಲಿ, ಅವರೆಲ್ಲರೂ ಕರ್ನಾಟಕರು. ಅವರ ಮೂಲ ಭಾಷೆಯು ಮರಾ

ಟಿಯೇ ಇರಲಿ, ತೆಲುಗೇ ಇರಲಿ, ತಮಿಳೇ ಇರಲಿ, ಕೊಡಗು ಅಥವಾ ಕೊಂಕಣಿಯೇ ಇರಲಿ ಕನ್ನಡವೇ ಇರಲಿ, ಎಲ್ಲರೂ ಕರ್ನಾಟಕರು. ಕರ್ನಾಟಕದ ಉನ್ನತಿಯು ಸರ್ವವಿಧದಿಂದಲ್ಲೂ ಆಗಬೇಕೆಂದು ಬಯಸುವುದೇ ಅವರ ಆದ್ಯಕರ್ತವ್ಯವು. ಹಾಗೆ ಯಾರು ಬಯಸುವುದಿಲ್ಲವೋ ಅವರೆಲ್ಲರೂ ಕರ್ನಾಟಕಕ್ಕೆ ಅಹಿತಮಾಡುವವರು. ಕರ್ನಾಟಕದ ಹಿತವೆಂಪರೆ ಕೇವಲ ರಾಜಕೀಯ, ಸಾಮಾಜಿಕ ಅಥವಾ ವಾಙ್ಮಯ ದೃಷ್ಟಿಯಿಂದಷ್ಟೇ ಹಿತವಲ್ಲ; ಆದರೆ ಪ್ರತಿಯೊಂದು ದೃಷ್ಟಿಯಿಂದಲೂ ಕರ್ನಾಟಕದ ಹಿತವು. ಇದನ್ನು ತತ್ವತಃ ಎಲ್ಲರೂ ಒಪ್ಪಿದರೂ, ಸ್ವಾರ್ಥಕ್ಕೆ ತುಸು ಧಕ್ಕೆ ತಗಲಿದೊಡನೆಯೆ, ಈ ವಿಶಾಲವಾದ ದೃಷ್ಟಿಯು ಕರಗಿ ನೀರಾಗಿ ಹೋಗುತ್ತದೆ. ಅದು ಹೇಗೆ ಕರಗಿ ಹೋಗುತ್ತದೆಂಬುದನ್ನು ನಾವು ಒಂದೆರಡು ಉದಾಹರಣೆಗಳಿಂದ ಸ್ಪಷ್ಟವಾಗಿ ತಿಳಿಸಿಕೊಡುವೆವು. ಕರ್ನಾಟಕದಲ್ಲಿ ವ್ಯಾಪಾರಕ್ಕೋಸ್ಕರ ಅನ್ಯ ಪ್ರಾಂತಗಳಿಂದ ಅನೇಕರು ಬಂದು ನೆಲೆಸಿರುವರು. ಮಾರವಾಡಿಗಳು ಹಳ್ಳಿಪಳ್ಳಿಗಳನ್ನು ಕೂಡ ಹೊಕ್ಕಿರುವರು, ಗುರ್ಜರರು ಕಚ್ಛಮುಸಲ್ಮಾನರು ಇವರೇ ಮುಂತಾದವರು ಕರ್ನಾಟಕದಲ್ಲಿ ವ್ಯಾಪಾರಮಾಡುತ್ತಿರುವರು. ಇವರೆಲ್ಲರೂ ಕರ್ನಾಟಕರಲ್ಲವೆ? ಎಂಬುದಾಗಿ ಅನೇಕರು ಪ್ರಶ್ನೆ ಮಾಡುತ್ತಿರುವರು. ಅದಕ್ಕೆ, 'ಅಹುದು ಅವರು ಕರ್ನಾಟಕರು' ಎಂದುದು ನಮ್ಮ ಸ್ಪಷ್ಟವಾದ ಉತ್ತರ. ಅದೇ ಮೇರಿಗೆ, ಭಾಷೆಯ ಸಂಬಂಧದಿಂದಲೂ ಹೇಳಬಹುದು. ಕರ್ನಾಟಕದಲ್ಲಿ ಮನೆಮಾಡಿಕೊಂಡು ನಿಂತ ಮರಾಟಗರೂ ತೆಲುಗರೂ ತಮಿಳರೂ ಮುಸಲ್ಮಾನರೂ ಎಲ್ಲರೂ ಕರ್ನಾಟಕರೇ. ಅವರಿಗೂ ಮೂಲಕನ್ನಡಿಗರಿಗೂ ಭೇದವಿಲ್ಲ. ಆದರೆ ಈ ಸಂದರ್ಭದಲ್ಲಿ ಒಂದು ಪ್ರಶ್ನೆ ಹೊರಡುತ್ತದೆ. ಅದೇನೆಂದರೆ ಅವರು ನಮ್ಮ ಕರ್ನಾಟಕದ ಹಿತವನ್ನು ಬಯಸದಿದ್ದರೆ? ಬಯಸದಿದ್ದರೆ ಅರ್ಥಾತ್ ಅವರು ಕರ್ನಾಟಕದ್ರೋಹಿಗಳು. ಮಾರವಾಡ ದೇಶದಿಂದ ಈ ದೇಶಕ್ಕೆ ಬಂದು, ಇಲ್ಲಿಯ ಸಂಪತ್ತನ್ನು ಸೆಳೆದುಕೊಂಡು ಹೋಗಿ ಕರ್ನಾಟಕದ ಸಾಂಪತ್ತಿಕ ಉನ್ನತಿಗೆ ಪ್ರತ್ಯಕ್ಷವಾಗಿಯಾಗಲಿ ಅಪ್ರತ್ಯಕ್ಷವಾಗಿಯಾಗಲಿ ನೆರವಾಗದಿದ್ದವರು ಕರ್ನಾಟಕ ದ್ರೋಹಿಗಳಲ್ಲವೆ? ಪರಪ್ರಾಂತಗಳಿಂದ ಇಲ್ಲಿಗೆ ಬಂದ ಅನೇಕ ವ್ಯಾಪಾರಸ್ಥರು ಸ್ಥಾನಿಕಹಿತದ ಬಗ್ಗೆ ಎಷ್ಟು ಉದಾಸೀನರಾಗಿರುತ್ತಾರೆ, ನೋಡಿರಿ. ಇಂಥವರಿಗೆ ಕರ್ನಾಟಕರು ಪರಕೀಯರೆಂದು ಭಾವಿಸಿದರೆ ಅದು ಕರ್ನಾಟಕದ ತಪ್ಪೋ! ಹಾಗೆಯೇ ಮರಾಟಿಗರ ಪ್ರಶ್ನೆಯು. ಕರ್ನಾಟಕಕ್ಕೆ ಬಂದು ನೆಲೆಸಿರುವ ಮರಾಟಿಗರು ಕರ್ನಾಟಕದ ಭಾಷೆಯ ಹಿತವನ್ನು ಬಯಸುವುದು ನ್ಯಾಯವು. ಹಾಗೆ ಅವರು ಮಾಡದಿದ್ದರೆ, ಅವರು ಪರಕೀಯರೇ ಸರಿ! ಒಟ್ಟಿನಲ್ಲಿ, ಕರ್ನಾಟಕದ ಹಿತವನ್ನು ಅವರು ಯಾವ ಪ್ರಮಾಣದಿಂದ ದುರ್ಲಕ್ಷಿಸುವರೋ ಆ ಪ್ರಮಾಣದಿಂದ ಅವರಿಗೆ ಪರಕೀಯತ್ವವು ಅಂಟಿಕೊಳ್ಳುವುದು. ಕೆಲವು ಮರಾಟಿಗರು ದ್ವಿವಿಧ ರೂಪವನ್ನು ತಾಳಬೇಕೆಂದೆನ್ನುತ್ತಾರೆ. ಅವರಿಗೆ ಕರ್ನಾಟಕ ಭಾಷೆ ಮತ್ತು ಸಂಸ್ಕೃತಿ ಇವುಗಳೊಡನೆ ಬೆರೆಯುವುದು ಬೇಡ, ಮರಾಟಿ ಭಾಷೆ ಮತ್ತು ಸಂಸ್ಕೃತಿ ಇವುಗಳನ್ನು ಪೋಷಿಸಿ, ಕರ್ನಾಟಕದ ಭಾಷೆ ಮತ್ತು ಸಂಸ್ಕೃತಿಯನ್ನು ಹೀಯಾಳಿಸುವುದು ಬೇಕು. ಇಂಥವರಿಗೆ ನಾವು ಕರ್ನಾಟಕದ ಸುಲಿಗೆಗಾರರೆಂದೇ ಕರೆಯುತ್ತೇವೆ. ಹೀಗೆಂದಕೂಡಲೆ, ನಾವು ಮರಾಟಿಯ ದ್ವೇಷಮಾಡುತ್ತೇವೆಂದು ಅವರು ಕೂಗನ್ನೆಬ್ಬಿಸುತ್ತಾರೆ! ಮಹಾ ಉಚ್ಛ್ರಾಯದಲ್ಲಿರುವ ಮರಾಟಿಭಾಷೆ ಮತ್ತು ಸಂಸ್ಕೃತಿಯನ್ನು ದೂಷಿಸಿದ್ದರೆ ಅದು ದ್ವೇಷವಾಗುತ್ತಿತ್ತು. ಕರ್ನಾಟಕದಲ್ಲಿ, ಕರ್ನಾಟಕದ ಭಾಷೆ ಮತ್ತು ಸಂಸ್ಕೃತಿಯ ಪ್ರಾಬಲ್ಯವನ್ನು ಪ್ರಸ್ಥಾಪಿಸುವುದಕ್ಕೆ ಪ್ರಯತ್ನಿಸುವುದು ಮರಾಟಿಯ ದ್ವೇಷವೋ ಹೇಗೆ ಎಂಬುದನ್ನು ತಿಳಿದವರು ಶಾಂತವಾಗಿ ಯೋಚಿಸಲಿ. ಈ ಪ್ರಶ್ನೆಯು ಹಿಂದೂ-ಮುಸಲ್ಮಾನರ ತಂಟೆಯ ಪ್ರಶ್ನೆಯನ್ನು ಇಷ್ಟರ ಮಟ್ಟಿಗೆ ಹೋಲುತ್ತದೆ. ಮುಸಲ್ಮಾನರು "ನಾವು ಹಿಂದೀಗಳಲ್ಲವೆಂದು ನೀವು ಅನ್ನುವಿರೋ" ಎಂದು ಕೇಳುತ್ತಿರುವರು. ಅದಕ್ಕೆ ನೀವು ಸರ್ವ ಪ್ರಕಾರದಿಂದಲೂ ಹಿಂದುಸ್ಥಾನದ ಹಿತವನ್ನು ಬಯಸಿದರೆ ನೀವು ಹಿಂದೀಗಳೇ ಸರಿ, ಇಲ್ಲದಿದ್ದರೆ ಅಲ್ಲವೆಂದು ನಮ್ಮ ಉತ್ತರ ಇಲ್ಲಿಯೂ ಹಾಗೆಯೇ ಇದೆ. ಮರಾಟಿಗರು, ಮುಸಲ್ಮಾನರೇ ಮುಂತಾದವರು ಕರ್ನಾಟಕ ಭಾಷೆಯನ್ನು ಪೋಷಿಸಿದರೆ ಅವರು ಕರ್ನಾಟಕರು, ಇಲ್ಲದಿದ್ದರೆ ಅಲ್ಲ. ಈ ತತ್ವದ ಮರ್ಮವನ್ನು ಅನೇಕ ಮಾರವಾಡಿಗಳು, ಗುರ್ಜರು, ಮರಾಟಿಗರು ಅರಿತು ಅವರು ಕರ್ನಾಟಕದೊಡನೆ ಸಂಪೂರ್ಣತಾದಾತ್ಮ್ಯ ಹೊಂದಿರುವರು ಅವರೆಲ್ಲರೂ ಕರ್ನಾಟಕರೇ, ಅರ್ಥಾತ್ ಮಿಕ್ಕವರು ಅಲ್ಲ. ಅನೇಕರಿಗೆ ಈ ತತ್ವದ ಮರ್ಮವು ತಿಳಿದಿರುವುದಿಲ್ಲ. ಅವರಿಗೆ ತಿಳಿಸಿ ಹೇಳುವುದು ಕರ್ನಾಟಕರ ಕರ್ತವ್ಯ. ಈ ತತ್ವವನ್ನು ತಿಳಿದೂ ತಿಳಿದು ಬುದ್ಧಿಪೂರ್ವಕವಾಗಿ ದುರ್ಲಕ್ಷಿಸುವವರೂ ಕರ್ನಾಟಕದ ಸುಲಿಗೆಗಾರರು.

## ಮರಾಟಿಗರ ಸ್ವಾರ್ಥಬುದ್ಧಿಯು

ಮಹಾರಾಷ್ಟ್ರವು ಜೀವವಂತ ಪ್ರಾಂತವು, ವಿದ್ಯೆಯಲ್ಲಿ ರಾಜಕಾರಣದಲ್ಲಿ ಮುಂದುವರಿದ ಪ್ರಾಂತವು, ಮರಾಟಿಗರು ಸ್ವಭಾವತಃ ಸತತೋದ್ಯೋಗಿಗಳು, ಧೈರ್ಯಶಾಲಿಗಳು, ಸಾರ್ವಜನಿಕ ಬುದ್ಧಿಯುಳ್ಳವರು, ಅಭಿಮಾನ ಶಾಲಿಗಳು; ಆದರೆ ಈ ಗುಣಗಳೊಂದಿಗೆ ಅವರಲ್ಲಿ ಕೆಲವು ದುರ್ಗುಣಗಳೂ ಸೇರಿವೆ. ಅವರಷ್ಟು ಭಾಷಾಭಿಮಾನಿಗಳು ಬಂಗಾಲಿಗಳನ್ನು ಬಿಟ್ಟರೆ ಬೇರೊಬ್ಬರಿಲ್ಲ. ಆದರೆ, ಅವರಲ್ಲಿ ಅನೇಕಸಲ, ಈ ಅಭಿಮಾನದ ಅತಿರೇಕವಾಗಿ ದುರಭಿಮಾನದ ರೂಪವನ್ನು ತಾಳುತ್ತದೆ. ತಮ್ಮ ನಾಡಿನಲ್ಲಿನ ತಮ್ಮ ಭಾಷೆಯನ್ನು ಬೆಳಿಸಿಕೊಂಡರೆ ಸಾಲದು, ಅನ್ಯನಾಡುಗಳಲ್ಲಿ 'ಏನಕೇನ ಪ್ರಕಾರೇಣ' ಅದನ್ನು ಸೇರಿಸಬೇಕೆಂದು ಇವರಿಗೆ ದುರ್ಬುದ್ಧಿ. ಇವರಲ್ಲಿ ದೇಶಾಭಿಮಾನವು ಚೆನ್ನಾಗಿಯೇ ಇರುತ್ತದೆ. ಆದರೆ, ಕೆಲವರಿಗೆ ಇಡೀ ಹಿಂದುಸ್ಥಾನದ ತುಂಬ ಮಹಾರಾಷ್ಟ್ರಶಾಹಿಯನ್ನು ಸ್ಥಾಪಿಸಬೇಕೆಂಬ ದುಷ್ಟ ಆಶೆ. ಈ ವಿಚಾರಗಳ ಪ್ರಸಾರಾರ್ಥವಾಗಿ, ಅಲ್ಲಿಯ ಕೆಲವು ಪಂಡಿತರು 'ಬೃಹನ್ಮಹಾರಾಷ್ಟ್ರ'ವೆಂಬುದೊಂದು ವಿಲಕ್ಷಣ ಸ್ವಾರ್ಥಪರವಾದ ಕಲ್ಪನೆಯನ್ನು ತೆಗೆದಿರುವರು. ಈ 'ಬೃಹನ್ಮಹಾರಾಷ್ಟ್ರ'ದ ಕಲ್ಪನೆಯು ಭಯಂಕರ ಕಲ್ಪನೆಯು. ರಾಷ್ಟ್ರೀಯತ್ವಕ್ಕೆ ವಿಘಾತಕವಾದ ಕಲ್ಪನೆಯು. ಈ ಕಲ್ಪನೆಯ ಮೂಲಕ ಕಾಶಿಯಲ್ಲಿರುವ ಮರಾಟಿಗನ ಮನದಲ್ಲಿ ತಾನೂ ಕಾಶಿಯವನೆಂಬ ಕಲ್ಪನೆಯು ಬರದೆ, ತಾನೂ ಮರಾಟಿಗನೆಂಬ ಕಲ್ಪನೆಯೇ ಸದಾ ಜಾಗ್ರತವಾಗಿ ಉಳಿಯುತ್ತಿದೆ. ಅದರಿಂದ, ಅತನು ಕಾಶಿಯ ಹಿತವನ್ನು ಬಯಸದೆ, ಅಲ್ಲಿ ನಿಂತುಕೊಂಡು ಮಹಾರಾಷ್ಟ್ರದ ಹಿತವನ್ನು ಬಯಸಹತ್ತುವನು! ತಂಜಾವರದಲ್ಲಿ ನೂರಾರು ವರ್ಷಗಳ ಹಿಂದೆ ಕೆಲವು ಮರಾಟಿಗರು ನೆಲೆಸಿರುವರು. ಇವರೆಲ್ಲರೂ ಮರಾಠೀ ಭಾಷೆಯನ್ನೇ ಮುಖ್ಯವಾಗಿ ಇಟ್ಟುಕೊಳ್ಳಬೇಕಂತೆ! ಮರಾಠೀ ಉಡಿಗೆತೊಡಿಗೆಗಳನ್ನು ಬಿಡಕೂಡದಂತೆ! ಸ್ವರಾಜ್ಯವಾದರೂ ಕೂಡ ಮಹಾರಾಷ್ಟ್ರದವರೇ ಪ್ರಬಲರಾಗಿ ಉಳಿಯುವಂತೆ ಪ್ರಯತ್ನಿಸಬೇಕಂತೆ! ಇದು ಸ್ವಾರ್ಥದ ಪರಮಾವಧಿಯಲ್ಲವೆ? ಹಿಂದಮಾತೆಯ ದ್ರೋಹವಲ್ಲವೆ? ಆದರೆ ಕೇಸರಿಯಂಥ ಮುಖಂಡ ಪತ್ರವು ಕೂಡ ಈ ರಾಷ್ಟ್ರವಿಘಾತಕ ಕಲ್ಪನೆಯನ್ನು ಪಸರಿಸುವದನ್ನು ನೋಡಿದರೆ, ಯಾವ ದುರ್ಗುಣಗಳ ಮೂಲಕ ಮರಾಟಿಗರು ಹಿಂದುಸ್ಥಾನವನ್ನು ಪರಕೀಯರಿಗೆ ಆಹುತಿಯಾಗಿ ಕೊಟ್ಟರೋ ಆ ದುರ್ಗುಣಗಳ ಬೇರುಗಳು ಇನ್ನೂ ಅಚ್ಚಳಿಯದೆ ಉಳಿದಿರುವುದೆಂದು ಬಹು ದುಃಖದಿಂದ ಹೇಳಬೇಕಾಗುತ್ತದೆ!

ಇಷ್ಟು ಸ್ವಾರ್ಥಬುದ್ಧಿಯಿಂದ ತುಂಬಿದ ಮಹಾರಾಷ್ಟ್ರವು ಈಗ ಕರ್ನಾಟಕ ಭಾಷೆಯನ್ನು ಹತ್ತೊತ್ತುವ ಹಂಚಿಕೆಯನ್ನು ಹೂಡಿದ್ದರಲ್ಲಿ ಆಶ್ಚರ್ಯವೇನು? ಬೆಳಗಾಂವಿಯು ಶುದ್ಧ ಕನ್ನಡ ಜಿಲ್ಹೆಯು. ಹೊಟ್ಟೆಯನ್ನು ತುಂಬಿಕೊಳ್ಳುವುದಕ್ಕೆಂದು ಹಲವು ಮರಾಟಿಗರು ಬಂದು ಬೆಳಗಾಂವಿಯ ಪಟ್ಟಣದಲ್ಲಿ ನೆಲೆಸಿರುವರು. ಬೆಳಗಾಂವಿಯಲ್ಲಿ ಮಹಾರಾಷ್ಟ್ರ ಸಾಹಿತ್ಯ ಸಮ್ಮೇಲನವನ್ನು ಹೂಡಿದ್ದರ ದೋಷವು ಮುಖ್ಯತಃ ಮೂರು ಮಂದಿಯ ಮೇಲೆ ಇರುತ್ತದೆ. (೧) ಮಹಾರಾಷ್ಟ್ರ ಸಾಹಿತ್ಯ ಪರಿಷತ್ತು. (೨) ಬೆಳಗಾಂವಿಯಲ್ಲಿರುವ ಮರಾಟಿಗರು (೩) ಬೆಳಗಾಂವಿಯಲ್ಲಿರುವ ಹಲವು ಬುದ್ಧಿಗೇಡಿಗಳಾವ ಕರ್ನಾಟಕದ ಮುಖಂಡರು. ಈ ಮೂವರ ಹೊಂಚಿನಿಂದ ಮಹಾರಾಷ್ಟ್ರವು ಇಂದಿನ ದಿವಸ ಕರ್ನಾಟಕವನ್ನು ಅಪಮಾನಗೊಳಿಸುತ್ತಿದೆ! ಕೇಸರಿಯ ಸಂಪಾದಕರಿಗೆ ಧೈರ್ಯವಿದ್ದರೆ ಅವರು ನಾವು ಪ್ರತಿಪಾದಿಸುವ ಮುಖ್ಯ ತತ್ವಗಳು ಸುಳ್ಳೆಂದು ಖಂಡಿಸಲಿ. ಅವಕ್ಕೆ ಉತ್ತರಕೊಡಲು ನಾವು ಸಿದ್ಧರಿದ್ದೇವೆ. ಹಾಗೆ ಮಾಡುವುದನ್ನು ಬಿಟ್ಟುಕೊಟ್ಟು, ಅಡ್ಡದಾರಿ ಹಿಡಿಯುವುದು ತೀರ ಹೇಡಿತನವು. ಮಹಾರಾಷ್ಟ್ರ ಸಾಹಿತ್ಯ ಪರಿಷತ್ತಿನವರು ವಿವೇಕವನ್ನೂ ಸಭ್ಯತನವನ್ನೂ ಸಂಪೂರ್ಣವಾಗಿ ತ್ಯಜಿಸಿದಂತೆ ತೋರುತ್ತದೆ. ಔತಣಕೊಡದ ಮನೆಯಲ್ಲಿ ಹೊಕ್ಕು ಅವರು ನೂಕಿದರೂ ನೆಲಹಿಡಿದುಕೊಂಡು ಕುಳಿತುಕೊಳ್ಳುವ ಭಿಕ್ಷುಕನಂತೆ ಆ ಸಾಹಿತ್ಯಪರಿಷತ್ತು ವರ್ತಿಸಿ, ವಿವೇಕವನ್ನು ಪೂರ್ಣವಾಗಿ ಬಿಟ್ಟುಕೊಟ್ಟಿರುವುದೆಂಬುದನ್ನು ಜಗತ್ತಿಗೆ ತೋರಿಸುತ್ತದೆ. ಮತ್ತು ಕರ್ನಾಟಕ ಸಾಹಿತ್ಯ ಪರಿಷತ್ತಿಗೆ ತಾನೇ ಆಮಂತ್ರಣವನ್ನು ಕೊಟ್ಟು ಕರಿಸಿಕೊಂಡು, ಅದರ ಪ್ರತಿನಿಧಿಗಳನ್ನು ಪ್ರತಿನಿಧಿಗಳೆಂದು ಗಣಿಸದೆ ಅವರನ್ನು ಅಪಮಾನಮಾಡಿದ್ದರಿಂದ ಅವರು ಸಭ್ಯತನವನ್ನು ಕೂಡ ಸಂಪೂರ್ಣವಾಗಿ ಬಿಟ್ಟಿರುವರೆಂಬುದು ಸಿದ್ಧವಾಗುತ್ತದೆ. ಬೆಳಗಾಂವಿಯ ಮರಾಟಿಗರಿಗೆ ಬುದ್ಧಿ ಇಲ್ಲ, ಅವರು ಮಹಾರಾಷ್ಟ್ರದವರ ಬೆನ್ನುಹತ್ತುವುದರಿಂದ, ತಮ್ಮ ಕಾಲಿನ ಮೇಲೆ ತಾವೇ ಕಲ್ಲನ್ನು ಒಗೆದುಕೊಂಡಂತಾಗುವುದೆಂಬುದರ ಎಚ್ಚರವು ಅವರಿಗಿಲ್ಲ. ಬೆಳಗಾಂವಿಯಲ್ಲಿಯ ಕರ್ನಾಟಕ ಭಾಷೆಯು

ದ್ರೋಹವನ್ನು ಬಯಸುತ್ತಿದ್ದು ಹಲವರು (ಇಂಥವರ ಸಂಖ್ಯೆಯು ದಿನದಿನಕ್ಕೆ ಕಡಿಮೆಯಾಗುತ್ತಿರುವುದೆಂಬುದು ಸಂತೋಷದ ಸುದ್ದಿ) ಮರಾಟಿಗರ ಮೋಹಕ್ಕೆ ಬಲಿ ಬಿದ್ದಿರುವುದು ನಮ್ಮ ದುರ್ದೈವವು. ಶ್ರೀ ಗಂಗಾಧರರಾವ ದೇಶಪಾಂಡೆಯವರು ಹಿಂದಕ್ಕೆ ಭಾಷಾನ್ವಯಪ್ರಾಂತವಿಭಾಗಕ್ಕೆ ವಿರೋಧಿಗಳಾಗಿದ್ದರು. ಆದರೆ, ಅವರಲ್ಲಿಯ ಹಳೆಯ ಕೆಲವು ತಪ್ಪು ಕಲ್ಪನೆಗಳು ಇನ್ನೂ ಹೋಗಿಲ್ಲವೆಂದೂ ಒಳಗಿಂದೊಳಗೆ ಅವರು ಮಹಾರಾಷ್ಟ್ರಕ್ಕೆ ತಮ್ಮ ಬೆಂಬಲವನ್ನು ಕೊಡುತ್ತಿರುವರೆಂದೂ ಕೆಲವು ಕನ್ನಡಿಗರಿಗೆ ಸಂದೇಹವುಂಟಾಗಿರುತ್ತದೆ. ಆದಕಾರಣ ನಾವು ಅವರಿಗೆ ವಿನಯಪೂರ್ವಕವಾಗಿ ಕೇಳಿಕೊಳ್ಳುವುದೇನೆಂದರೆ ಮಹಾರಾಷ್ಟ್ರದವರು ನಡೆಯಿಸಿದ ಈ ಕೃತ್ಯಕ್ಕೆ ಅವರ ಬೆಂಬಲವು ಇರುವುದೋ ಹೇಗೆ, ಇದ್ದರೆ ಅದಕ್ಕೆ ಕಾರಣಗಳೇನೆಂಬುದನ್ನು ಅವರು ಜನರಿಗೆ ಸ್ಪಷ್ಟವಾಗಿ ತಿಳಿಸಬೇಕು. ಮತ್ತು ಸರಳವಾದ ಮಾರ್ಗದಿಂದ ತಮ್ಮ ಅಂಬೋಣವನ್ನು ಸಮರ್ಥಿಸಿಕೊಳ್ಳಲು ಪ್ರಯತ್ನಿಸಬೇಕು. ಕೊನೆಗೆ, ನಾವು ಕರ್ನಾಟಕರಿಗೆ ಹೇಳುವುದೇನೆಂದರೆ ಮಹಾರಾಷ್ಟ್ರದ ಸ್ವಭಾವವನ್ನು ಬಲ್ಲವರು ಅವರಿಂದ ನ್ಯಾಯಸಿಗುವುದೆಂಬ ಆಶೆಯನ್ನು ಬಿಟ್ಟುಕೊಡಿರಿ, ಮತ್ತು ನಿಮ್ಮ ಹಿತ ಸಂರಕ್ಷಣೆಯನ್ನು ಮಾಡಿಕೊಳ್ಳಿರಿ. ನಾವು ಮರಾಟಿಗರಿಗೆ ಹೇಳುವುದೇನೆಂದರೆ ನೀವು ಸರಳ ಹಾದಿಯನ್ನೂ ಸಭ್ಯತನವನ್ನೂ ಬಿಟ್ಟು ಅಡ್ಡ ಹಾದಿಯನ್ನು ಹಿಡಿದರೆ ನಿಮ್ಮ ಕಾರ್ಯವು ಸಫಲವಾಗುವುದೆಂದು ನೀವು ತಿಳಿದಿದ್ದರೆ ಅದು ತಪ್ಪು. ಬೆಳಗಾಂವಿಯು ಎಚ್ಚತ್ತಿದೆ, ಬೆಳಗಾಂವಿಯ ಕನ್ನಡಿಗರಲ್ಲಿ ಭಾಷಾಭಿಮಾನವು ಬೆಳೆಯುತ್ತಿದೆ. ಇನ್ನು ನೀವು ತಿಪ್ಪರಲಾಗ ಹಾಕಿದರೂ ಬೆಳಗಾಂವಿಯು ಮರಾಟಿಯಾಗಲಾರದು. ಹೀಗೆ ಮಾಡುವುದರಿಂದ, ನಿಮ್ಮ ಮೋರೆಗೆ ಮಾತ್ರ ಮಸಿಯನ್ನು ಹಚ್ಚಿಕೊಂಡಂತಾಗುವುದಲ್ಲದೆ ಮತ್ತೇನೂ ಇಲ್ಲವೆಂಬುದನ್ನು ನೀವು ಸೆರಗಿಗೆ ಗಂಟುಹಾಕಿಕೊಳ್ಳಿರಿ.

---

## ಕುಸುಮ

—ಹೂಬಳ್ಳಿಯಲಿ ಕುಸುಮವರಳುತಿಹ ವೇಳೆಯಲಿ
ಮಲಗುತಿರಬೇಡ ಕಂದಾ
ಆವುದೀಧಾರಿಣಿಗೆ ಸೊಬಗದನು ನೋಡುವುದೆ
ಪಡೆದ ನಯನಗಳೆ ಚಂದ ॥ ೧ ॥

—ನಮ್ಮ ಪೂರ್ವದ ಪುಣ್ಯ ಬರಿಸಿದುದು ಎಳೆಮುಗುಳ
ಕರ್ಮರಂಗಸ್ಥಳಕ್ಕೆ
ಜನ್ಮಜನ್ಮವು ಸಫಲವಾಗಲದರಿದೆಬೆಡಗ
ನೋಡಿ ನಲಿಯುವ ಜನಕ್ಕೆ ॥ ೨ ॥

— ಜಗದೊಳಾವುದು ಸೊಗಸು ಮುಗುಳೊಂದು ಮೊಗವೆತ್ತಿ
ನಗೆಯ ತಾ ತೋರದಿರಲು
ಬಗೆಗುಡಿದ ಬೇವಸವ ಪರಿಹರಿಪ ಪರಿಮಳವ
ಮೊಗೆಮೊಗೆದು ಚೆಲ್ಲದಿರಲು ॥ ೩ ॥

—ಭೇರಿಯನು ಬಾರಿಸುತ ಊರನೆಚ್ಚರಿಸುತ್ತ
ಬಾರದೀಕುಸುಮಸಮಿತಿ
ತೋರದಂತಿರೆ ಬಂದು ತಿಳಿವ ಮೊದಲೇ ಮುಗಿದು
ಸೇರುತಿದೆ ತನ್ನ ನೆಲೆಯಾ ॥ ೪ ॥

—ಅದರಿಂದ ಸುಮವರಳಿಯುದುರಿ ಹೋಗದ ಮುನ್ನ
ಎದೆಯು ಜಾಗೃತವಾಗಲಿ
ಅದರ ನಗೆಯನು ಕಲಿತು ಅದರ ತತ್ವವನರಿತು
ಅಮಿತ ಮೋದವನೊಂದಲಿ ॥ ೫ ॥

—ಶಂಕರಭಟ್ಟ ಕಡೆಂಗೊಡ್ಲು ಮಂಗಳೂರು.

---

# ಆತ್ಮ ನಿವೇದನ

( ಶ್ರೀಯುತ ಮುಜುಮುದಾರರ " Traffic in Soul " ಎಂಬ ಚಿತ್ರವನ್ನು ನೋಡಿ ಬರೆದುದು )

೧

"ಬೃಂದಾವನಕೆ ಹಾಲನು ಮಾರಲು
ಹೋಗುವ ಬಾರೇ, ಬೇಗ ಸಖಿ! "
"ಬೃಂದಾವನದಿ ಹಾಲನು ಕೊಳ್ಳುವ–
ರಾರಿಹರೇ ಹೇಳಿಂದುಮುಖಿ? "

೨

"ಗೋಗಳ ಕಾಯುವ ಗೋವಿಂದನಿಹನೇ;
ಹಾಲನು ಕೊಳ್ಳುವನೆಲೆ ಗೋಪೀ !
ಚಿನ್ನವ ಕೊಡನೇ, ರನ್ನವ ಕೊಡನೇ,
ತನ್ನನೆ ಕೊಡುವನು ಬಾರೆ ಸಖಿ !

೩

"ಕಣ್ಣನು ಮೋಹಿಪ ಪೀತಾಂಬರವ,
ಬಣ್ಣದ ಬಳೆಗಳ ಧರಿಸು ಸಖಿ;
ಚೆನ್ನನ ಮೋಹಿಪ ಹಾರವು ಎದೆಯನು
ಸಿಂಗರಿಸಲಿ ಹೇ ನಳಿನಮುಖಿ !

೪

"ಝುಃಣ ಝುಣವೆನ್ನಲಿ ನೂಪುರ ಗೋಪಿ,
ಹಣೆಯೊಳು ಚಂದನ ರಂಜಿಸಲಿ !
ತೊಂಡೆಯ ಹಣ್ಣನು ತುಟಿಗಳು ನಗಲಿ
ವದನವು ಮೀರಲಿ ತಾವರೆಯ !

೫

"ಯಮುನಾ ತೀರದೊಳಲೆಯುವ ಬಾರೇ,
ಹಾಲು ಬೇಕೇ ಹಾಲೆಂದು ಸಖಿ !
ಹಾಲನು ಮಾರುವ ನೆವದಿಂದ ಹರಿಯ
ಮೋಹಿಸಿ ಕರೆಯುವ ಬಾರೆ ಸಖಿ !

೬

"ಹಾಲ ನಿವೇದಿಸಿ ಆತ್ಮವನರ್ಪಿಸಿ
ಮುಕ್ತಿಯ ಹೊಂದುವ ಬಾರೆ ಸಖಿ !
ಹಾಲನು ಮಾರಿ ಹರಿಯನು ಕೊಳ್ಳುವ
ನಾವೇ ಧನ್ಯರು ಕಮಲಮುಖಿ !

೭

"ನಮ್ಮೊ ಲಾಭವ ಮೀರುವ ಲಾಭವು
ಬೇರಿನ್ನಿಹುದೇ ? ಇಂದುಮುಖಿ !
ಬೃಂದಾವನಕೆ ಹಾಲನು ಮಾರಲು
ಹೋಗುವ ಬಾರೇ ಬೇಗ ಸಖಿ !

—ಕಿಶೋರ ಚಂದ್ರವಾಣಿ




**ಶ್ರೀರಾಮದಾಸಸ್ವಾಮಿಗಳ ಚರಿತ್ರವು :**—ಮೂರನೆಯ ಆವೃತ್ತಿ. ಲೇ:-ಶ್ರೀ. ಗದಿಗಯ್ಯಾಸ್ವಾಮಿ ಹೊನ್ನಾಪುರಮಠ ಡಿಸ್ಟ್ರಿಕ್ಟಪ್ಲೀಡರ ಧಾರವಾಡ. ಪುಟಗಳ ಸಂಖ್ಯೆ೧೨೬. ಬೆಲೆ ೧ರೂ. ಪುಣ್ಯಪ್ರತಾಪಶಾಲಿಯಾದ ಶ್ರೀ ಶಿವಾಜಿಮಹಾರಾಜರ ಗುರುಗಳಾದ ಶ್ರೀ ರಾಮದಾಸಸ್ವಾಮಿಗಳು ಸಂಸಾರದ ಮೋಹಪಾಶವನ್ನು ಕಿತ್ತೊಗೆದ ತಪಸ್ವಿಗಳಾಗಿದ್ದು ಜನತೆಯಲ್ಲಿ ಸ್ವಾಭಿಮಾನವನ್ನೂ ಸ್ವಧರ್ಮನಿಷ್ಠೆಯನ್ನೂ ಸ್ವದೇಶವಾತ್ಸಲ್ಯವನ್ನೂ ಜಾಗೃತಗೊಳಿಸಿದ ಕರ್ಮವೀರರಾಗಿದ್ದರು. ಶ್ರೀ ಶಿವಾಜಿಗೆ ಮಹಾರಾಷ್ಟ್ರರಾಜ್ಯಸಂಸ್ಥಾಪನೆಯ ಕಾರ್ಯದಲ್ಲಿ ಶ್ರೀ ರಾಮದಾಸರು ಮಾರ್ಗದರ್ಶಕರಾಗಿದ್ದರು. ಅಂತಹರ ಚರಿತ್ರೆಯ ವಾಚನವು ಈಗಿನ ಕಾಲದಲ್ಲಿ ಅಂತ್ಯಂತ ಅವಶ್ಯವು. ಬಹುಕಾಲದಿಂದ ಕನ್ನಡ ವಾಙ್ಮಯ ಕ್ಷೇತ್ರದಲ್ಲಿ ಪರಿಶ್ರಮ ಮಾಡಿದ ಶ್ರೀ. ಗದಿಗೆಯ್ಯಾಸ್ವಾಮಿಯವರು ಲಲಿತವಾದ ಭಾಷೆಯಲ್ಲಿ ಶ್ರೀ ರಾಮದಾಸರ ಚರಿತ್ರೆಯನ್ನು ಬರೆದಿರುವರು. ಈ ಪುಸ್ತಕವು ೩ನೆಯ ಆವೃತ್ತಿಯನ್ನು ಕಂಡುದು ಅದರ ಲೋಕಪ್ರಿಯತೆಯನ್ನು ವ್ಯಕ್ತಗೊಳಿಸುತ್ತದೆ. ಕರ್ನಾಟಕದ ಎಲ್ಲ ಭಾಗಗಳಲ್ಲಿಯ ವಾಙ್ಮಯ ಪ್ರೇಮಿಗಳು ಇದಕ್ಕೆ ಎಂದಿನಂತೆ ಉದಾರಾಶ್ರಯವನ್ನು ಕೊಡುವರೆಂದು ನಂಬಿದ್ದೇವೆ.

**ಮದ್ಯನಿಷೇಧ :**—ದಾವಣಗೆರೆ ಪ್ರಾಣಿದಯಾಜ್ಞಾನ ಪ್ರಸಾರಕ ಸಂಘದ ಮದ್ಯನಿರೋಧಕ ಗ್ರಂಥಾವಳಿಯ ೧ನೆಯ ಪುಸ್ತಕವು. ಬರೆದವರು ಸಂಘದ ಪ್ರಚಾರಕರಾದ ಶ್ರೀ ಟಿ. ಬಿ. ಕೇಶವರಾಯರು. ಮದ್ಯಪಾನದಿಂದ ವ್ಯಕ್ತಿಗೂ ದೇಶಕ್ಕೂ ಆಗುವ ಹಾನಿ ಎಷ್ಟು ಭಯಂಕರವಾಗಿದೆಂಬುದನ್ನು ತೋರಿಸಿ ಕುಡಿತವನ್ನು ತಗ್ಗಿಸುವ ಉಪಾಯಗಳಾವುವೆಂಬುದನ್ನು ಸೂಚಿಸಿರುವರು. ಮದ್ಯಪಾನದ ವ್ಯಸನವನ್ನು ನಿಲ್ಲಿಸಲು ಯತ್ನಿಸುವ ಜನರಿಗೆ ಈ ಪುಸ್ತಕವು ಬಹು ಪ್ರಯೋಜನಕಾರಿಯಾಗಿರುವುದು. ಬೇಕಾದವರಿಗೆ ಸಂಘವು ಈ ಪುಸ್ತಕವನ್ನು ಉಚಿತವಾಗಿ ಕೊಡುವುದು.

**ಗೃಹವೈದ್ಯ:**—(ನಂದಿನೀ ಗ್ರಂಥಮಾಲಾ ಕುಸುಮ ೨.) ಇದು ಶ್ರೀ ಕ್ಷೇತ್ರ ಗೋಕರ್ಣದಲ್ಲಿ ವಾಸಿಸುತ್ತಿರುವ ಸುಪ್ರಸಿದ್ಧ ವೈದ್ಯರಾದ ಡಾ. ಸೀತಾರಾಮ ವಿಘ್ನೇಶ್ವರಭಟ್ಟ ಭಡತಿ ಇವರು ಬರೆಯುತ್ತಲಿರುವ ಗೃಹವೈದವೆಂಬ ಗ್ರಂಥದ ಪೂರ್ವಾರ್ಧವು. ಗೋಕರ್ಣದ ನಂದಿನಿ ಮಾಸಪತ್ರಿಕೆಯಲ್ಲಿ ಈ ಪುಸ್ತಕದಲ್ಲಿ ವಿವೇಚಿಸಲ್ಪಟ್ಟ ವಿಷಯವು ಕ್ರಮಶಃ ಬಂದಿರುತ್ತದೆ. ಹಳ್ಳಿಗಳಲ್ಲಿ ವಾಸಿಸುವವರಿಗೂ ಪಟ್ಟಣಗಳಲ್ಲಿ ಇರುತ್ತಿರುವ ಬಡಬಗ್ಗರಿಗೂ ಬೇನೆಬೇಸರಿಕೆಗಳೊದಗಿದಾಗ ಅವರಿಗೆ ತಜ್ಞರ ಸಹಾಯವು ದೊರೆವುದು ಒಂದಿಲ್ಲೊಂದು ಕಾರಣದಿಂದ ಅಶಕ್ಯವಾಗುತ್ತದೆ. ಮೊದಲಿನ ಕಾಲದಲ್ಲಿ ಸುಲಭವಾದ ಔಷಧಗಳನ್ನು ಬಲ್ಲವರು ಅಲ್ಲಲ್ಲಿ ಇರುತ್ತಿದ್ದರು. ಅವು ಸಾಮಾನ್ಯರಿಗೂ ಕೂಡ ಗೊತ್ತಿದ್ದ ಮತ್ತು ಮನೆಯಹತ್ತರವೇ ಸುಲಭವಾಗಿಯೂ ವಿಪುಲವಾಗಿಯೂ ದೊರೆತು ಸಿದ್ಧಮಾಡಲಿಕ್ಕೆ ಕಠಿಣವಲ್ಲದ ಔಷಧಗಳನ್ನು ಕೊಟ್ಟು ರೋಗಿಗಳ ತೊಂದರೆಗಳನ್ನು ದೂರಮಾಡುತ್ತಿದ್ದರು. ಆದರೆ ಆ ಗೃಹವೈದ್ಯವು ಈಗ ಲುಪ್ತವಾಗಹತ್ತಿದೆ. ಇಂತಹ ಕಾಲದಲ್ಲಿ ಡಾ. ಸೀತಾರಾಮ ಇವರು ಈ ಪುಸ್ತಕವನ್ನು ಪ್ರಸಿದ್ಧಿಸಿ ಕನ್ನಡಿಗರಿಗೆ ದೊಡ್ಡ ಉಪಕಾರಮಾಡಿರುವರಲ್ಲದೆ ಆರ್ಯವೈದ್ಯಕದ ಪುನರುಜ್ಜೀವನದ ಕಾರ್ಯಕ್ಕೆ ಬಹುಮಟ್ಟಿಗೆ ನೆರವಾಗಿರುವರೆಂದು ನಮ್ಮ ಅಭಿಪ್ರಾಯವು. ನಾವು ಅನೇಕ ವನಸ್ಪತಿಗಳನ್ನು ಒಂದಿಲ್ಲೊಂದು ರೂಪದಿಂದ ನಮ್ಮ ನಿತ್ಯದ ಆಹಾರದಲ್ಲಿ ಉಪಯೋಗಿಸುತ್ತೇವೆ. ಅವುಗಳ ಮತ್ತು ಬೇರೆ ಅನೇಕ

ವನಸ್ಪತಿಗಳ ಔಷಧಿಗುಣಗಳನ್ನು ಈ ಪುಸ್ತಕದಲ್ಲಿ ವಿಸ್ತಾರ ಪೂರ್ವಕವಾಗಿ ಹೇಳಿರುವರು. ಪ್ರತಿಯೊಬ್ಬ ಕುಟುಂಬಿ ಈ ಪುಸ್ತಕವನ್ನು ಸಂಗ್ರಹಿಸಬೇಕೆಂದು ನಮ್ಮ ಅಗತ್ಯದ ಸೂಚನೆಯಿದೆ.

**ಗಾಂಧೀಜಿಯವರ ಆತ್ಮಕಥೆ ಅಥವಾ ಆತ್ಮ ಶೋಧನೆ. ಎರಡನೆಯ ಭಾಗ:**— ಬೆಂಗಳೂರಿನ "ವಿಶ್ವ ಕರ್ನಾಟಕ" ಪತ್ರದಲ್ಲಿ ಕ್ರಮಶಃ ಪ್ರಕಟವಾಗುತ್ತಿರುವ ಮ. ಗಾಂಧಿಯವರ ಆತ್ಮಚರಿತ್ರದ ಎರಡನೆಯ ಭಾಗವು. ಮ. ಗಾಂಧಿಯವರ ಚರಿತ್ರೆ ಪಾವನವೂ ಬೋಧಪ್ರದವೂ ಆಗಿ ದೆಂಬುದನ್ನು ನಾವು ಪ್ರತ್ಯೇಕವಾಗಿ ಹೇಳುವ ಅವಶ್ಯವಿಲ್ಲ. ಮಹಾತ್ಮಾಜಿಯವರೇ ತಮ್ಮ ಚರಿತ್ರೆಯನ್ನು ಬರೆಯುತ್ತಿರುವ ದಾದುದರಿಂದ ಅವರಲ್ಲಿ ಅಸತ್ಯಾಂಶಕ್ಕೆ ಎಳ್ಳಷ್ಟು ಆಸ್ಪದವಿಲ್ಲ. ಅವರು ತಮ್ಮ ಚರಿತ್ರೆಯನ್ನು ಬರೆಯುತ್ತಿರುವುದು ಗುಜರಾಥಿ ಭಾಷೆಯಲ್ಲಿ. ಅದು ಈಗ ಅನೇಕ ಪೌರ್ವಾತ್ಯ ಮತ್ತು ಪಾಶ್ಚಾತ್ಯ ಭಾಷೆಗಳಲ್ಲಿ ತರ್ಜುಮೆಯಾಗಹತ್ತಿದೆ. ವಿಶ್ವ ಕರ್ನಾಟಕದವರಂತೆ ಬೇರೆ ಪತ್ರದವರೂ ಈ ಚರಿತ್ರೆಯನ್ನು ಕನ್ನಡಿಸುತ್ತಿರುವರು. ಆದರೆ ವಿಶ್ವಕರ್ನಾಟಕದವರ ಭಾಷೆ ಲಲಿತವೂ ಮನೋಹರವೂ ಆಗಿರುತ್ತದೆಂದು ನಮ್ಮ ಅಭಿ ಪ್ರಾಯವು. ಕಾಗದವೂ ಮುದ್ರಣವೂ ಒಳಿತಾಗಿರುವುವು. ಸುಮಾರು ೨೦೦ ಪುಟಗಳ ಈ ಪುಸ್ತಕಕ್ಕೆ ಬೆಲೆಯೂ ಸ್ವಲ್ಪ. ೧೨ ಆಣೆ ಮಾತ್ರ. ಕನ್ನಡಿಗರು ಅವಶ್ಯವಾಗಿ ಸಂಗ್ರಹಿಸಬೇ ಕಾದ ಪುಸ್ತಕವಿದು.

**ಬೆಂಗಳೂರು ಶ್ರೀ ಪ್ರಾಣಿದಯಾ ಪ್ರಚಾರಕ ಸಂಘದ ಪ್ರಭವ ಸಂವತ್ಸರದ ಪ್ರಥಮ ವರದಿ:**— ಕಳೆದ ವರ್ಷದಲ್ಲಿ ಈ ಸಂಘದವರು ಅನೇಕ ಸ್ಥಳಗಳಲ್ಲಿ ಧರ್ಮದ ಹೆಸರಿನಿಂದ ಆಗುತ್ತಿರುವ ಪಶುಹಿಂಸೆಯನ್ನು ತಮ್ಮ ಪ್ರಯತ್ನದಿಂದ ಹೇಗೆ ನಿಲ್ಲಿಸಿದರೆಂಬುದು ಈ ಚಿಕ್ಕ ವರದಿ ಯಲ್ಲಿ ವರ್ಣಿಸಲ್ಪಟ್ಟಿರುವುದು. ಈ ಸಂಘದವರ ಕಾರ್ಯ ಕ್ಷೇತ್ರವು ಹೆಚ್ಚಲೆಂದೂ ಅವರ ಪ್ರಯತ್ನಗಳಿಗೆ ಪರಮೇಶ್ವ ರನು ಯಶವನ್ನೀಯಲೆಂದೂ ನಾವು ಅಂತಃಕರಣಪೂರ್ವಕ ವಾಗಿ ಹಾರೈಸುತ್ತೇವೆ.

**ಆಸ್ತೀಕಾಖ್ಯಾನ :**— ಪೌರಾಣಿಕ ಗ್ರಂಥಮಾಲೆಯ ೧ನೆಯ ಪುಷ್ಪ. ಪುಟಗಳ ಸಂಖ್ಯೆ ೩೩. ಬೆಲೆ ೦—೪—೦. ಬರೆ ದವರು ಶ್ರೀ. ಶ್ರೀನಿವಾಸ ನರಸಿಂಹಾಚಾರ್ಯ ಹೆಬಸೂರ ಪೆನ್ಶನ್ ಮಾಸ್ತರ ಧಾರವಾಡ. ಇದರಲ್ಲಿ ಮಹಾಭಾರತದೊ ಳಗಿನ ಪರೀಕ್ಷದ್ರಾಜನ ಸರ್ಪಯಾಗದ ಕಥಾವಿಷಯವು ಸಂಗ್ರಹವಾಗಿ ಹೇಳಲ್ಪಟ್ಟಿರುವುದು. ಭಾಷೆ ತಕ್ಕಮಟ್ಟಿಗೆ ವ್ಯಾಕರಣಶುದ್ಧವಾಗಿದ್ದರೂ ಸರಣಿ ಮಾತ್ರ ಕೆಲವೆಡೆಗಳಲ್ಲಿ ಮರಾಠಿ ಭಾಷೆಯ ಸರಣಿಯಂತಿರುತ್ತದೆ. ಉದಾ:—"ಹೀಗೆ ಜರತ್ಕಾರನು ತಾನು ಯಾವ ಯಾವ ದೇಶಗಳಿಗೆ ಹೋಗು ವನೊ ? ಅಲ್ಲಲ್ಲಿ ಉಚ್ಚಸ್ವರದಿಂದ ಹೇಳುತ್ತಿದ್ದದ್ದೇನಂದರೆ" "ಅವರು ಮಹಾ ದುಃಖವನ್ನು ಮಾಡುತ್ತ ಅಂದದ್ದೇನಂದರೆ" ಇತ್ಯಾದಿ. "ಈ ದೇಹತ್ಯಾಗವನ್ನೇ ಮಾಡುವೆನು" ಎಂಬುದು ಅಶುದ್ಧಪ್ರಯೋಗವು.

**ರಾಜಸೂಯಯಾಗ ಅಥವಾ ಶ್ರೀಕೃಷ್ಣ ಮಹಿಮೆ:** — ಪೌರಾಣಿಕ ಗ್ರಂಥಮಾಲೆಯ ೨ನೆಯ ಪುಷ್ಪ. ಪುಟಗಳ ಸಂಖ್ಯೆ ೪೯. ಬೆಲೆ. ೦—೪—೦. ಬರೆದವರು ಆಸ್ತೀ ಕಾಖ್ಯಾನವನ್ನು ಬರೆದ ಶ್ರೀ. ಹೆಬಸೂರ ಶ್ರೀನಿವಾಸಾಚಾ ರ್ಯರು. ಈ ಪುಸ್ತಕದಲ್ಲಿ ಪಾಂಡವರ ದಿಗ್ವಿಜಯದಿಂದ ರಾಜ ಸೂಯಯಾಗದ ಸಮಾಪ್ತಿಯ ವರೆಗಿನ ಕಥಾಭಾಗವು ಬಂದಿ ರುತ್ತದೆ. ಈ ಪುಸ್ತಕದ ಭಾಷೆಯಲ್ಲಿ ಸುಧಾರಣೆಯನ್ನು ಕಾಣಬಹುದು. ಕನ್ನಡಿಗರು ಶ್ರೀ. ಶ್ರೀನಿವಾಸಾಚಾರ್ಯರ ಈ ಎರಡೂ ಪುಸ್ತಕಗಳನ್ನು ತಮ್ಮ ಚಿಕ್ಕ ಮಕ್ಕಳಿಂದ ಒಮ್ಮೆಯಾ ದರೂ ಓದಿಸಬೇಕೆಂದು ನಮ್ಮ ಸೂಚನೆ.

**(೧) ಶ್ರೀಮದ್ವೀರಶೈವ ಶಿವಯೋಗಮಂದಿರದ ೧೮೪೮-೪೯ನೆಯ ಸಂವತ್ಸರದ ವರದಿ :—(೨) ಹೂಲಿಯ ಶ್ರೀ ವೀರಶೈವ ಧರ್ಮೋತ್ತೇಜಕ ಸಂಘದ ಶಕೆ ೧೮೩೬ರಿಂದ ೧೮೪೬ರ ವರೆಗೆ ಹತ್ತು ವರ್ಷಗಳ ರಿಪೋರ್ಟು :**—ಇವೆರಡೂ ವರದಿಗ ಳಿಂದ ಆ ಆ ಸಂಸ್ಥೆ ಮಾಡುತ್ತಿರುವ ಲೋಕೋಪಯುಕ್ತ ವಾದ ಕಾರ್ಯದ ಮಹತ್ವವು ವ್ಯಕ್ತವಾಗುತ್ತದೆ. ಉದಾರ ಹೃದಯರಾದ ಸಜ್ಜನರ ಸಹಾಯದಿಂದ ಈ ಸಂಸ್ಥೆಗಳು ಉತ್ತರೋತ್ತರ ಅಭಿವೃದ್ಧಿಯನ್ನೈದಲೆಂದು ಹಾರೈಸುತ್ತೇವೆ.

**ಭಕ್ತವಾಣಿ:**—ಲೇಖಕರು ಶ್ರೀ. ಗೋವಿಂದ ಪೈ. ಪ್ರಕಾ ಶಕರು ಶ್ರೀ. ಸಿ. ಆರ್. ಕಾಮತ ಮಂಗಳೂರು. ಬೆಲೆ: ೦-೧-೦ ಮನುಷ್ಯನ ಜೀವನಯಾತ್ರೆಯಲ್ಲಿ ಅವನಿಗೆ ಉಪಯೋಗವಾ ಗುವ ೧೮೮ ಸೂಕ್ತಿಗಳ ಸಂಗ್ರಹವು ಈ ಚಿಕ್ಕ ಪುಸ್ತಕದ

ಲ್ಲಿದೆ. ಈ ಸೂಕ್ತಿಗಳನ್ನು ಅನೇಕ ಪೌರ್ವಾತ್ಯ ಮತ್ತು ಪಾಶ್ಚಾತ್ಯ ಉದ್ಗ್ರಂಥಗಳಿಂದ ತೆಗೆದುಕೊಂಡಿರುವರು. ಜನತೆಯಲ್ಲಿ ಇಂತಹ ಪುಸ್ತಕಗಳ ಪ್ರಸಾರವಾಗುವುದು ಹಿತಕರವು. ಶ್ರೀ. ಗೋವಿಂದ ಪೈರವರು ತಾವು ಸಂಗ್ರಹಿಸಿದ ಮತ್ತೆ ಬೇರೆ ವಚನಗಳನ್ನು ಕ್ರಮಶಃ ಪುಸ್ತಕರೂಪದಿಂದ ಜನರಲ್ಲಿ ಪ್ರಚುರಗೊಳಿಸಬೇಕೆಂದು ಅವರಿಗೆ ನಮ್ಮ ವಿನಂತಿಯಿದೆ.

(೧) ಸಚಿತ್ರ ಸುದಾಮುಚರಿತ್ರ:-ಬೆಲೆ ೦—೪—೦. (೨) ಪ್ರಹ್ಲಾದಚರಿತ್ರ:—ಬೆಲೆ ೦-೬-೦. ಇವು ಧಾರವಾಡದ ಶ್ರೀ ವಾಗ್ದೇವಿ ಗ್ರಂಥಮಾಲೆಯು ಕ್ರಮವಾಗಿ ಮೊದಲನೆಯ ಮತ್ತು ಎರಡನೆಯ ಪುಷ್ಪಗಳು. ಬರೆದವರು ಶ್ರೀ. ಗದಿಗೆಯ್ಯಾಸ್ವಾಮಿ ಹೊನ್ನಾಪುರಮಠ ಧಾರವಾಡ. ಈ ಪುಸ್ತಕಗಳೊಳಗಿನ ಕಥಾವಿಷಯವು ಬಹುಶಃ ಎಲ್ಲರಿಗೂ ಗೊತ್ತಿದ್ದುದೇ ಇರುವುದು. ಶ್ರೀ. ಗದಿಗೆಯ್ಯನವರು ಬಾಲಕರಿಗಾಗಿ ಲಲಿತ ಮತ್ತು ಸರಳವಾದ ಭಾಷೆಯಲ್ಲಿ ಈ ಚರಿತ್ರಗಳನ್ನು ಬರೆದಿರುವರು. ಕನ್ನಡಿಗರು ತಮ್ಮ ಮಕ್ಕಳಿಗೆ ಈ ಪುಸ್ತಕಗಳನ್ನು ಕೊಂಡುಕೊಟ್ಟು ಅವರಿಂದ ಅವನ್ನು ಓದಿಸಬೇಕೆಂದು ಆಗ್ರಹಪೂರ್ವಕವಾಗಿ ಸೂಚಿಸುತ್ತೇವೆ.

**First aid in child birth:—** By Hon'ble Dr. U. Ramarao Madras. Price 0–4–0

ಪ್ರಸವ ಮತ್ತು ಶಿಶುಪಾಲನ ಇವುಗಳ ಬಗ್ಗೆ ಹೆಣ್ಣುಮಕ್ಕಳಿಗೆ ಅವಶ್ಯವಾಗಿ ಇರಬೇಕಾದ ಮಾಹಿತಿಯನ್ನು ಈ ಪುಸ್ತಕದಲ್ಲಿ ಕೊಟ್ಟಿರುವರು. ತಕ್ಕಮಟ್ಟಿಗೆ ಇಂಗ್ಲಿಷ ಭಾಷೆಯನ್ನು ಬಲ್ಲವರಿಗೆ ಈ ಪುಸ್ತಕವು ಬಹು ಉಪಯೋಗವಾಗುವದು. ವಿಷಯವಿವೇಚನೆ ಸುಬೋಧವಾಗಿರುವುದು. ಅವಶ್ಯವೆನಿಸಿದಲ್ಲಿ ಚಿತ್ರಗಳನ್ನು ಕೊಟ್ಟಿರುವುದರಿಂದ ವಿಷಯವನ್ನು ತಿಳಿದುಕೊಳ್ಳಲು ಅಷ್ಟು ಕಷ್ಟಪಡಬೇಕಾದುದಿಲ್ಲ.

---

ಕಲಬುರ್ಗಿಯಲ್ಲಿ ಕೂಡಿದ ೧೮ನೆಯ ಕರ್ನಾಟಕ
ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾದ



ಶ್ರೀ. ಬಿ. ಎಂ. ಶ್ರೀಕಂಠಯ್ಯ, ಎಂ. ಎ., ಬಿ. ಎಲ್. ಅವರು




ॐ सह नाववतु ॥ सह नौ भुनक्तु ॥ सह वीर्यं करवावहै ॥
तेजस्विनावधीतमस्तु मा विद्विषावहै ॥ ॐ शान्तिः ॥३॥

—श्रुतिः

ಸಂಪುಟ ೬ | ವಿಭವನಾಮ ಸಂವತ್ಸರ ಕಾರ ಹುಣ್ಣಿವೆ
ಶಕ ೧೮೫೦, ೩ನೆಯ ಜೂನ, ೧೯೨೮ | ಸಂಚಿಕೆ ೮

# ವೈದಿಕಧರ್ಮಗ್ಲಾನಿಯೂ ಕ್ರಮೋನ್ನತಿಯೂ

(ಶ್ರೀಮನ್ನೆಲಮಾವಿನಮಠದ ಶ್ರೀ ನರಸಿಂಹಭಾರತೀಸ್ವಾಮಿಗಳವರ ವ್ಯಾಖ್ಯಾನಗಳ ಸಾರವು)

ಅನುವಾದಕ:— ಶ್ರೀ. ಮಹಾಬಲೇಶ್ವರಭಟ್ಟ ಹೋಬಳಿ

[ ೭ನೆಯ ಸಂಚಿಕೆಯಿಂದ ಮುಂದುವರಿದುದು ]

**ಶೂದ್ರತ್ವದ ಲಕ್ಷಣ—** ವಿಧಿನಿಷೇಧಗಳನ್ನೂ ಹಿತಾಹಿತಗಳನ್ನೂ ಬೋಧಿಸುವ ವೇದವನ್ನು ಉಪಲಬ್ಧಿಯಲ್ಲಿಡಲು ಪ್ರಯತ್ನನಡಿಸಲಿಕ್ಕೂ, ವೇದೋಕ್ತವಾದ ಕೆಲವು ನಿಯಮಗಳನ್ನು ಸರ್ವಸಾಧಾರಣವಾಗಿ ನಡಿಸಲಿಕ್ಕೂ, ನಾಲ್ಕುವರ್ಣದವರಿಗೂ ಅಧಿಕಾರವು ಸರಿಯಾಗಿದ್ದರೂ ವೇದವನ್ನೋದುವುದಕ್ಕೂ, ವಿಧಿನಿಷೇಧಗಳ ನಿಯಮಕ್ಕೂ ಶೂದ್ರರಿಗೆ ಅಧಿಕಾರವಿಲ್ಲ. ಇದರಿಂದಲೇ ಪೂರ್ವದಿಂದಲೂ, ಶೂದ್ರರು ವೇದಾಧ್ಯಯನದ ಪಾಠಶಾಲೆಗಳನ್ನು ಸ್ಥಾಪಿಸಿ ಇತರ ವರ್ಣದವರಿಗೆ ವಿಶೇಷತಃ ಬ್ರಾಹ್ಮಣರಿಗೆ ಅನುಕೂಲತೆಯನ್ನು ಕಲ್ಪಿಸಿಕೊಟ್ಟುದು ಕಂಡುಬರುತ್ತದೆಯೇ ಹೊರ್ತು ಸ್ವತಃ ಅಧ್ಯಯನ ಮಾಡಲಿಲ್ಲ. ಇದು ಎಲ್ಲರಿಗೂ ತಿಳಿದ ಸಂಗತಿಯಾಗಿದೆ. ವೇದಾದಿಗ್ರಂಥಗಳಲ್ಲಿಯೂ, ಪಾರಂಪರ್ಯವಾಗಿ ಬಂದ ಆಚಾರಗಳಲ್ಲಿಯೂ, ವಿಶ್ವಾಸವನ್ನಿಟ್ಟು ವೇದಧರ್ಮಿಗಳನ್ನು ಅಭಿಮಾನಿಸುತ್ತ ಬರುವುದೇ ನಾಲ್ಕನೆಯವರ್ಣದವರ ಕರ್ತವ್ಯವಾಗಿದೆ. ಹೀಗೆ ಅಭಿಮಾನಿಸದೆ ಅವರು ಮನಸ್ಸಿಗೆ ಬಂದ ಹಾಗೆ ವೇದವನ್ನೂ, ಬ್ರಾಹ್ಮಣರನ್ನೂ, ಪೂರ್ವಾಚಾರಗಳನ್ನೂ ಮನಸ್ವಿ ನಿಂದಿಸುವವರಾದರೆ ನಾಸ್ತಿಕರೆನಿಸಿ ಶೂದ್ರತ್ವವನ್ನೂ ಕಳಕೊಂಡು ಅಧೋಗತಿಗೆ ಇಳಿಯುವರು. ಇತರ ವರ್ಣದವರೂ ಹಾಗೆ ಅವಿಶ್ವಾಸಿಗಳಾದರೆ ಅವರಿಗೂ ಈ ನಿಯಮವು ಹತ್ತುವುದು. ಶೂದ್ರರ ಶೂದ್ರತ್ವಕ್ಕೆ ವೇದವನ್ನು ನಂಬುವುದೂ,

ವೇದಧರ್ಮಗಳನ್ನು ಅಭಿಮಾನಿಸುವುದೂ, ಪಾರಂಪರ್ಯವಾಗಿ ಬಂದ ಆಚಾರಗಳನ್ನು ಬಿಡದೆ ಅವುಗಳನ್ನು ರೂಢಿಸುತ್ತ ಬರುವುದೂ, ಹೇತುವಾಗಿರುವುದರಿಂದ ಹಾಗೆ ನಡೆದರೆ ಆಸ್ತಿಕರೂ ಎನಿಸಿ ಶೂದ್ರತ್ವವನ್ನೂ ಕಾಪಾಡಿಕೊಂಡಂತಾಗುವುದು. ಮತ್ತು ಇದರಿಂದ ಸುಖಶಾಂತಿಗಳೂ ಹೆಚ್ಚುವುವು.

**ಶಾಸ್ತ್ರವಿಧಿ**—ಶ್ರೀಕೃಷ್ಣನು ಗೀತೆಯಲ್ಲಿ ಅರ್ಜುನನನ್ನು ಕುರಿತು "ಯಃ ಶಾಸ್ತ್ರವಿಧಿಮುತ್ಸೃಜ್ಯ ವರ್ತತೇ ಕಾಮಕಾರತಃ। ನ ಸ ಸಿದ್ಧಿಮವಾಪ್ನೋತಿ ನ ಸುಖಂ ನ ಪರಾಂಗತಿಮ್॥ (ಅರ್ಥ-ಯಾವನು ಶಾಸ್ತ್ರವಿಧಿಯನ್ನು ಬಿಟ್ಟು ಮನಸ್ಸಿಗೆಬಂದಂತೆ ವರ್ತಿಸುತ್ತಾನೋ ಅವನು ಸಿದ್ಧಿ (ಪುರುಷಾರ್ಥಯೋಗ್ಯತೆ) ಯನ್ನೂ, ಸುಖ (ಬ್ರಹ್ಮಾನಂದ) ವನ್ನೂ, ಶ್ರೇಷ್ಠಗತಿ (ಇಂದ್ರಾದಿಲೋಕಪ್ರಾಪ್ತಿ) ಯನ್ನೂ ಪಡೆಯಲಾರನು.) ಎಂದು ಉಪದೇಶಿರುತ್ತಾನೆ. ' ಶಾಸ್ತ್ರವಿಧಿ, ಎಂಬ ವಾಕ್ಯದಲ್ಲಿ' 'ಶಾಸ್ತ್ರ, ಮತ್ತು ವಿಧಿ, ಎಂದು ಎರಡು ಶಬ್ದಗಳಿರುತ್ತವೆ. ನಮಗೆ ಕಾರ್ಯಾಕಾರ್ಯಗಳನ್ನು ಬೋಧಿಸಿ ಮನಸ್ಸಿಗೆ ಬಂದಹಾಗೆ ನಡಿಯಲಿಕ್ಕೆ ಬಿಡದೆ ಪುರುಷಾರ್ಥಪ್ರಾಪ್ತಿಗೆ ಯೋಗ್ಯತೆಯನ್ನೂ ಪುರುಷಾರ್ಥದ ಜ್ಞಾನವನ್ನೂ ಯಾವುದು ಉಂಟುಮಾಡುತ್ತದೋ ಅದೇ ಶಾಸ್ತ್ರವೆಂದು ತಿಳಿಯಬೇಕು ಈ ಶಾಸ್ತ್ರವು ಪ್ರವೃತ್ತಿಧರ್ಮ, ನಿವೃತ್ತಿಧರ್ಮ ಎಂದು ಎರಡು ವಿಧವಾದ ಧರ್ಮಗಳನ್ನು ಬೋಧಿಸುವುದು. ಇಂಥ ಕಾರ್ಯವನ್ನು ಮಾಡಬೇಕು, ಇಂಥಹ ಕಾರ್ಯವನ್ನು ಬಿಡಬೇಕು. ಮಾಡತಕ್ಕ ಕಾರ್ಯವನ್ನು ಹೇಗೆ ಮಾಡಬೇಕು, ಎಂಬವನ್ನು ಬೋಧಿಸುವ ಶಾಸ್ತ್ರಕ್ಕೆ 'ವಿಧಿ' ಯಂದು ಅನ್ನುತ್ತಾರೆ. ಯಾಕಂದರೆ ಮೇಲಿನ ಅಭಿಪ್ರಾಯಗಳನ್ನು ವಿಧ್ಯರ್ಥವಾಕ್ಯಗಳಿಂದಲೇ ಬೋಧಿಸುವುದರಿಂದ ಅದಕ್ಕೆ ವಿಧಿ ಎಂದೆನ್ನಲಿಕ್ಕೆ ಕಾರಣವಾಯಿತು. ಈ ಮೇಲಿನ ಶ್ಲೋಕದಲ್ಲಿ ಶ್ರೀಕೃಷ್ಣನು 'ಶಾಸ್ತ್ರ' ಶಬ್ದದ ಮುಂದೆ 'ವಿಧಿ' ಯಂಬ ಶಬ್ದವನ್ನು ಪ್ರಯೋಗಿಸಿದ್ದು ಪ್ರಯೋಜನದೃಷ್ಟಿಯಿಂದಲೇ ಇದುತ್ತದೆ. 'ಶಾಸ್ತ್ರಂ' ಎಂದು ಸುಮ್ಮನೆ ಒಂದೇಪದವನ್ನು ಹೇಳಿದ್ದಾರೆ. ನಿವೃತ್ತಿಧರ್ಮದ ಬೋಧವನ್ನು ಮಾಡುವ ವೇದಾಂತಶಾಸ್ತ್ರವೆಂದು ಅರ್ಥಮಾಡಲಿಕ್ಕೆ ಬರುತ್ತಿತ್ತು. ಆ ಸಂದೇಹಕ್ಕೆ ಆಸ್ಪದವಾಗಬಾರದೆಂಬ ಹೇತುವಿನಿಂದ 'ಶಾಸ್ತ್ರ' ಶಬ್ದದ ಮುಂದೆ 'ವಿಧಿ,' ಶಬ್ದವನ್ನು ಹೇಳಿರುತ್ತಾನೆ. ಏನಂಚ ಶಾಸ್ತ್ರದ ಮೊದಲನೆಯ ಭಾಗದಲ್ಲಿ ಹೇಳಿದ ಕರ್ತವ್ಯಕರ್ಮಗಳನ್ನು ಮಾಡಿ [ಅಥವಾ ಮಾಡುತ್ತಿರುವಾಗ ಎರಡನೆಯ ಭಾಗದಲ್ಲಿ ಹೇಳುವ ಜ್ಞಾನವನ್ನು ಸಂಪಾದಿಸಬೇಕೆಂಬ ಗಂಭೀರಾರ್ಥವು ಈ 'ಶಾಸ್ತ್ರವಿಧಿ' ಎಂಬ ವಾಕ್ಯದಿಂದ ಬೋಧಿತವಾಗುತ್ತದೆ.

**ನಿಷ್ಕಾಮಕರ್ಮದ ಪ್ರಯೋಜನ**–'ನ ಸ ಸಿದ್ಧಿಮವಾಪ್ನೋತಿ ನ ಸುಖಂ ನ ಪರಾಂ ಗತಿಮ್' ಎಂಬ ಮೇಲಿನ ಶ್ಲೋಕದ ಉತ್ತರಾರ್ಧದಲ್ಲಿ ಸಿದ್ಧಿಂ, ಸುಖಂ, ಪರಾಂಗತಿಮ್, ಈ ಮೂರುಪದಗಳು ಮಹತ್ವದವುಗಳಿರುತ್ತವೆ. ಸಿದ್ಧಿ ಅಂದರೆ ಸುಖವೆಂಬ ಪುರುಷಾರ್ಥಪ್ರಾಪ್ತಿಗೂ, ಇಂದ್ರಾದಿಲೋಕಗಳ ಪ್ರಾಪ್ತಿಗೂ, ಹೇತುವಾದ ಯೋಗ್ಯತೆಯೆಂದು ಅರ್ಥವಾಗುತ್ತದೆ. 'ಸುಖ' ಎಂಬ ಪದದಿಂದ ಪ್ರಾಣಿಗಳು ಮುಖ್ಯವಾಗಿ ಅಪೇಕ್ಷಿಸುವ ಆತ್ಯಂತಿಕ ಸುಖರೂಪವಾದ ಮೋಕ್ಷವೆಂದು ಅರ್ಥವಾಗುತ್ತದೆ. 'ಪರಾಂಗತಿಮ್' ಎಂಬ ವಾಕ್ಯದಿಂದ ಮನುಷ್ಯಲೋಕಕ್ಕಿಂತಲೂ, ಉತ್ತಮವೆನಿಸಿದ ಇಂದ್ರಲೋಕಾದಿಗಳ ಬೋಧವಾಗುತ್ತದೆ. ಇಂದ್ರಲೋಕಾದಿಗಳ ಪ್ರಾಪ್ತಿಗೂ ಆತ್ಯಂತಿಕ ಸುಖ ಸ್ವರೂಪವಾದ ಮೋಕ್ಷಕ್ಕೂ, ಕಾರಣವೆನಿಸಿದ ಯೋಗ್ಯತಾರೂಪವಾದ ಸಿದ್ಧಿ ಬರಬೇಕಾದರೆ ಮನುಷ್ಯನು ಶಾಸ್ತ್ರೋಕ್ತವಾದ ಕರ್ತವ್ಯಕರ್ಮಗಳನ್ನೂ ಪ್ರಯತ್ನಗಳನ್ನೂ ಮಾಡಬೇಕು.

ಶಾಸ್ತ್ರೋಕ್ತವಾಗಿ ಆ ಆ ವರ್ಣದವರಿಗೆ ಹಂಚಲ್ಪಟ್ಟ ಕರ್ತವ್ಯಕರ್ಮಗಳನ್ನು ನಡಿಸುವ ರೀತಿ ಎರಡುವಿಧವಾಗಿರುತ್ತದೆ. ಇಂದ್ರಾದಿಲೋಕಪ್ರಾಪ್ತಿಯ ಅಪೇಕ್ಷೆಯಿಂದ ಸ್ವಕರ್ಮಗಳನ್ನು ಮಾಡುವುದು ಒಂದು ವಿಧ, ಯಾವ ಫಲವನ್ನೂ ಅಪೇಕ್ಷಿಸದೆ ಕರ್ತವ್ಯಕರ್ಮಗಳನ್ನು ಮಾಡುವುದು ಮತ್ತು ತನ್ನ ಕರ್ತವ್ಯ ಎಂಬ ಭಾವನೆಯಿಂದ ಅವುಗಳನ್ನು ನಡಿಸುತ್ತಿರುವುದು ಇನ್ನೊಂದು ವಿಧ. ಉತ್ತಮ ಲೋಕಪ್ರಾಪ್ತಿಯ ನಿಮಿತ್ತದಿಂದ ನಡಿಸುವ ಕರ್ಮಗಳು ಇಹದಲ್ಲಿಯೂ, ತಕ್ಕಷ್ಟು ಪ್ರಯೋಜನವನ್ನುಂಟುಮಾಡಿ ಪರಲೋಕವನ್ನು ಕಾಣಿಸುತ್ತವೆ. ಫಲಾಪೇಕ್ಷೆಯಿಲ್ಲದೆ ಕರ್ತವ್ಯಬುದ್ಧಿಯಿಂದಲೇ ಕರ್ಮಗಳನ್ನು ಮಾಡುತ್ತ ಬಂದರೆ ಪಾಪಕ್ಷಯವೂ ಈಶ್ವರಪ್ರೀತಿಯೂ, ಆಗುವುದೆಂದು ಮಹಸೀಯರು ಅನ್ನುತ್ತಾರೆ. ಫಲವನ್ನು ಉದ್ದೇಶಿಸಿ ಕರ್ಮಗಳನ್ನು ಮಾಡುವುದರಿಂದ ಪುಣ್ಯಪಾಪಗಳ ಮೂಲಕ ಬಂಧವು ಉಂಟಾಗುತ್ತದೆ. ಫಲವನ್ನಪೇಕ್ಷಿಸದೆ ಕೇವಲ ಈಶ್ವರಪ್ರೀತ್ಯರ್ಥವಾಗಿ ಕರ್ತವ್ಯಬುದ್ಧಿಯಿಂದ ಮಾಡುವ ಕರ್ಮಗಳಿಂದ ಪುಣ್ಯಪಾಪಗಳೆರಡ

ಮೂಲಗಳೂ ನಷ್ಟವಾಗಿ ಮೋಕ್ಷರೂಪವಾದ ಪೂರ್ಣಸುಖದ ಲಾಭವಾಗುವುದು.

**ಯೋಗಭ್ರಷ್ಟನ ಜನ್ಮ—** ಸ್ವಕರ್ಮಗಳನ್ನು ಫಲಾಪೇಕ್ಷೆಯಿಂದಲೇ ಆಗಲಿ ಅಥವಾ ಕರ್ತವ್ಯಬುದ್ಧಿಯಿಂದಾಗಲಿ ನಡುತ್ತಿರುವಾಗಲೇ ಸಿದ್ಧಿ ಉಂಟಾಗದೆ ಕರ್ಮಕರ್ತನಿಗೆ ಕಾಲಧರ್ಮಾನುಸಾರವಾಗಿ ಅವಸಾನ ಸಮಯವು ಸಂಭವಿಸಿದರೆ ಅವನ ಮುಂದಿನ ಏಳಿಗೆಯು ಲಕ್ಷಣವೇನು? ಎಂದು ಅರ್ಜುನನು ಶ್ರೀಕೃಷ್ಣನನ್ನು ಪ್ರಶ್ನಿಸಿದಾಗ ಗೀತೆಯಲ್ಲಿ ಶ್ರೀಕೃಷ್ಣನು ಅರ್ಜುನನನ್ನು ಕುರಿತು "ಪಾರ್ಥ ನೈವೇಹ ನಾಮುತ್ರ ವಿನಾಶಸ್ತಸ್ಯ ವಿದ್ಯತೆ" ಈ ವಾಕ್ಯವನ್ನು ಮೊದಲು ಮಾಡಿ "ಯತತೇ ಚ ತತೋ ಭೂಯಃ ಸಂಸಿದ್ಧೌ ಕುರು ನಂದನ," ಎಂಬ ವಾಕ್ಯದವರೆಗೂ, ವಿವರಿಸಿ ಸಂದೇಹವನ್ನು ಪರಿಹರಿಸಿದ್ದಾನೆ. ಫಲಾಪೇಕ್ಷೆಯಿಂದ ಕರ್ಮಗಳನ್ನು ನಡಿಸುತ್ತಿದ್ದವನು ಮತ್ತು ಫಲಾಪೇಕ್ಷೆಯಿಲ್ಲದೆ ಕರ್ತವ್ಯಬುದ್ಧಿಯಿಂದ ಕರ್ಮಗಳನ್ನು ನಡಿಸುತ್ತಿದ್ದವನು ಈ ಎರಡೂ ಜನರ ಭವಿಷ್ಯಸ್ಥಿತಿಯನ್ನು, ಶ್ರೀಕೃಷ್ಣನು ವ್ಯಕ್ತಪಡಿಸಿದಂತೆ ಈ ವಿವರಣದಿಂದ ತಿಳಿದು ಬರುತ್ತದೆ. ಇದರ ಆದ್ಯಂತ ಸಾರಾಂಶವು ಈ ಕೆಳಗೆ ಹೇಳುವಂತೆ ಇದೆ.

"ಎಲೈ ಅರ್ಜುನನೇ ಫಲಾಪೇಕ್ಷೆಯಿಂದಾಗಲಿ ನಿಷ್ಕಾಮಬುದ್ಧಿಯಿಂದಾಗಲಿ ಕರ್ತವ್ಯಕರ್ಮಗಳನ್ನು ಮಾಡಿದವನು ಅಧೋಗತಿಗೆ ಈಡಾಗುವುದಿಲ್ಲ. ಉತ್ತಮ ಕರ್ಮಗಳನ್ನು ಮಾಡುವವನು ಯಾವನನಾದರೂ, ಸರಿ ದುರ್ಗತಿಯನ್ನು ಎಂದೂ ಪಡೆಯಲಾರನು. ದೇಹಾವಸಾನದ ನಂತರ ಉತ್ತಮಲೋಕಗಳನ್ನು ಸೇರಿ ದೇವಮಾನದ ಅನೇಕ ವರ್ಷಗಳ ಪರ್ಯಂತ ಅಲ್ಲಿ ನಾನಾ ಭೋಗಗಳನ್ನು ಅನುಭವಿಸಿ ಪುನಃ ಭೂಲೋಕದಲ್ಲಿ ಭೋಗವಾಸನೆಗಳು ಅವಶಿಷ್ಟವಿದ್ದರೆ ಅಂಥವನು ಉತ್ತಮ ರಾಜಕುಲದಲ್ಲಿಯೂ, ಹಾಗಿಲ್ಲವೆ ಜ್ಞಾನಕ್ಕಾಗಿ ಮಾಡತಕ್ಕ ಕೇವಲ ಕರ್ತವ್ಯ ಕರ್ಮಗಳು ಅವಶಿಷ್ಟವಾಗಿದ್ದರೆ ಅಂಥವನು ಯೋಗಿಗಳ ಕುಲದಲ್ಲಿಯೂ, ಜನಿಸುವನಲ್ಲದೆ ಪೂರ್ವಾಭ್ಯಾಸಬಲದಿಂದ ಸಿದ್ಧಿಯನ್ನು ಪಡೆವುದಕ್ಕಾಗಿ ಪುನಃ ಯತ್ನಿಸುತ್ತಾನೆ."

ಫಲಬುದ್ಧಿಯಿಂದ ಕರ್ಮಗಳನ್ನು ಮಾಡಿ ಪುಣ್ಯಶೀಲನಾದವನಿಗೆ ಉತ್ತಮ ರಾಜನ ಕುಲದಲ್ಲಿ ಜನ್ಮವು ಬರುವುದೆಂದು ಮೇಲೆ ಹೇಳಿದರೂ, ಕರ್ತವ್ಯದೃಷ್ಟಿಯಿಂದ ಕರ್ಮಗಳನ್ನು ಮಾಡಿದವನಿಗೆ ಭೋಗವಾಸನೆಗಳು ಅವಶಿಷ್ಟವಾದರೆ ರಾಜಕುಲದಲ್ಲಿ ಜನ್ಮವು ಅವನಿಗೆ ಬರುವದಿಲ್ಲವೆಂದು ಅನ್ನಬಾರದು. ಜನಕ, ಪ್ರಿಯವ್ರತ ಮೊದಲಾದವರೆಲ್ಲ ಮಹಾರಾಜರಷ್ಟೇ? ಅವರೆಲ್ಲ ಪೂರ್ವಜನ್ಮಸುಕೃತಬಲದಿಂದಲೇ ರಾಜಕುಲದಲ್ಲಿ ಜನಿಸಿ ಪೂರ್ವಾಭ್ಯಾಸಬಲದಿಂದ ಭೋಗವಾಸನೆಗಳನ್ನು ಕಳಕೊಂಡು ಭೋಗಗಳಲ್ಲಿ ಪುನರಾಸಕ್ತಿಯನ್ನು ಪಡೆಯದೆ ರಾಜನಿಯಮಗಳನ್ನು ಕರ್ತವ್ಯದೃಷ್ಟಿಯಿಂದಲೇ ಜ್ಞಾನೋತ್ತರದಲ್ಲಿಯೂ, ನಿರ್ಮಮಬುದ್ಧಿಗಳಾಗಿ ನಡಿಸಿದರೆಂಬುದನ್ನು ಪುರಾಣಗಳಿಂದ ತಿಳಿಯಬಹುದು. ಪೂರ್ವ ಪೂರ್ವ ಜನ್ಮಗಳ ಅಭ್ಯಾಸಬಲವು ಉತ್ತರೋತ್ತರ ಜನ್ಮಗಳಿಗೆ ಸಹಕಾರಿಯಾಗುವುದೆಂಬುದು "ಪ್ರಯತ್ನಾದ್ಯತಮಾನಸ್ತು ಯೋಗೀ ಸಂಶುದ್ಧಕಿಲ್ಬಿಷಃ ॥ ಅನೇಕಜನ್ಮಸಂಸಿದ್ಧಸ್ತತೋ ಯಾತಿ ಪರಾಂ ಗತಿಮ್ ॥" (ಅರ್ಥ– ಪ್ರಯತ್ನಪೂರ್ವಕವಾಗಿ ಶ್ರಮಪಡುವ ಕರ್ಮಯೋಗಿ ಸಕಲ ಪಾಪಗಳಿಂದ ಪರಿಮುಕ್ತನಾಗಿ ಬಹುಜನ್ಮಗಳಿಂದ ಸಿದ್ಧಿಯನ್ನು ಪಡೆದು ಬಳಿಕ ಉತ್ತಮಗತಿಯನ್ನು ಹೊಂದುತ್ತಾನೆ.) ಎಂಬ ಗೀತಾವಾಕ್ಯದಿಂದ ಸ್ಪಷ್ಟವಾಗುತ್ತದೆ. ಆದುದರಿಂದ ಕರ್ತವ್ಯಕರ್ಮವು ವ್ಯರ್ಥವಾಗಲಾರದು.

**ಅವ್ಯವಸ್ಥೆ—** ನಾಲ್ಕೂ ವರ್ಣದವರೂ ಸ್ವಕರ್ತವ್ಯಕರ್ಮಗಳನ್ನು ಕಾಮನೆಯಿಂದ ಮಾಡಲಿ ನಿಷ್ಕಾಮನೆಯಿಂದ ಮಾಡಲಿ, ಅವುಗಳಿಂದ ಆತ್ಮೋದ್ಧಾರವೂ ಜಗತ್ತಿನ ಉದ್ಧಾರವೂ, ಆಗುವುದು. ನಡಿಸುತ್ತಿರುವ ಸ್ವಕರ್ಮಗಳ ಅದೃಷ್ಟಶಕ್ತಿಯ ಹೆಚ್ಚು ಅಂಶಗಳು ಆತ್ಮೋದ್ಧಾರದ ವಿಷಯದಲ್ಲಿಯೇ ಬೀಳುವುವಾದರೂ, ಕೆಲವಂಶಗಳು ದೇವಲೋಕದವರ ತೃಪ್ತಿಗೆ ಹೇತುವೆನಿಸುತ್ತವೆ. ಅವುಗಳಿಂದ ತೃಪ್ತರಾದ ದೇವತೆಗಳು ಸುವೃಷ್ಟಿಯನ್ನು ಜಗತ್ತಿಗೆ ಅನುಗ್ರಹಿಸಿ, ಸುಫಲ–ಸುಭಿಕ್ಷಗಳುಂಟಾಗುವಂತೆ ಮಾಡುವರು. ತಮ್ಮ ತಮ್ಮ ಕರ್ತವ್ಯಗಳನ್ನು ಮರೆತು ಉನ್ಮತ್ತರಂತೆ ಇದ್ದರೆ ಜಗತ್ತಿನ ಪರಿಣಾಮವು ಕೆಟ್ಟು, ಉಣ್ಣಲಿಕ್ಕೆ ಅನ್ನವೂ, ಕುಡಿಯಲಿಕ್ಕೆ ನೀರೂ, ಕಡಿಮೆಯಾಗಿ ಜೀವವುಳಿಸಿಕೊಂಡರೆ ಸಾಕೆಂಬಷ್ಟು ಅನಿಷ್ಟವು ಪ್ರಾಪ್ತವಾಗುವುದೆಂಬುದು ಜನರ ಅನುಭವದಿಂದಲೇ ಸಿದ್ಧವಾದ ಸಂಗತಿಯಾದುದರಿಂದ ಹೆಚ್ಚು ವರ್ಣಿಸಬೇಕಾದ ಅವಶ್ಯಕತೆ ಇಲ್ಲ. ನಮ್ಮ ತಪ್ಪನ್ನು ನಾವೇ ಯೋಚಿಸಬೇಕು. ಶಾಲೆಯ ಹುಡುಗನು ಯಾವುದಾದರೊಂದು ತಪ್ಪನ್ನು ಮಾಡಿ

ದರೆ, ಶಿಕ್ಷಕನು, ತನ್ನ ಕಿವಿಗಳನ್ನು ತಾನೇ ಹಿಡಿದು ಕೂತೇಳುವ ಶಿಕ್ಷೆಯನ್ನು ಕೊಟ್ಟು ಹುಡುಗನಿಗೆ ಬುದ್ಧಿಗಲಿಸುವಂತೆ ದೇವರು ಅನೇಕ ಶ್ರಮಗಳನ್ನು ನಮ್ಮ ನಮ್ಮ ಕರ್ಮಾನುಸಾರವಾಗಿಯೇ ನಮಗೆ ತೋರಿಸಿ ಬುದ್ಧಿಗಲಿಸುವಂತೆ ಮಾಡಿದರೂ, ಕಲಿತುಕೊಳ್ಳದೆ ಪ್ರಪಂಚರಂಗದಲ್ಲಿ ತಾಂಡವವಾಡುತ್ತಿದ್ದೇವೆ. ಇನ್ನೂ ನಮ್ಮ ತಪ್ಪನ್ನು ನಾವು ಯೋಚಿಸುವಷ್ಟು ವಿವೇಕಬುದ್ಧಿ ನಮಗೆ ಬರಲಿಲ್ಲವಲ್ಲ! ಕಲಿಯುಗದ ಆರನೆಯ ಸಹಸ್ರದ ಆದಿಶತಕದಲ್ಲಿಯೇ ಇಂಥ ಅವ್ಯವಸ್ಥೆ ಪ್ರಾಪ್ತವಾಗಿ ವರ್ಣಕಲಹ, ಧರ್ಮಕಲಹ, ಮೊದಲಾದ ಕಲಹತರಂಗಗಳು ಅಲ್ಲೋಲಕಲ್ಲೋಲವಾಗಿ ಪ್ರಪಂಚ ಸಮುದ್ರದಲ್ಲಿ ತೋರಲಿಕ್ಕೆ ಹತ್ತಿದ ಮೇಲೆ ಮುಂದೆ ನಮ್ಮೆಲ್ಲರ ಗತಿಯೇನು? 'ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ। ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಮ್ ॥ ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಂ। ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ ॥' ಎಂಬ ಭಗವತ್ಪ್ರತಿಜ್ಞಾರ್ಥ ಶ್ಲೋಕಗಳನ್ನೇ ಪುನಃ ಪುನಃ ಸ್ಮರಿಸುತ್ತ ಶಿಷ್ಟರು (ಆಸ್ತಿಕರು) ಕಾಲಕ್ರಮಣಮಾಡಬೇಕಲ್ಲದೆ ಇನ್ನಾವ ಉಪಾಯವೂ ತೋರದು.

**ಪುಣ್ಯಪಾಪವಿವೇಕ**— ಫಲಾಪೇಕ್ಷೆಯಿಂದ ಕರ್ಮಗಳನ್ನು ಮಾಡಿದರೆ ಅವುಗಳಿಂದ ಸಂಭವಿಸುವ ಪುಣ್ಯಪಾಪಗಳ ಅನುಸಾರವಾಗಿ ಸಂಸಾರಬಂಧವು ಬಲಪಡುತ್ತ ಹೋಗುವುದು. ಹಾಗೆಯೇ ಇದ್ದರೆ ಎಲ್ಲಿಯವರೆಗೆ ಆ ಬಂಧವು ಇರುವುದು ಎಂದು ಶಂಕಿಸಿದರೆ ನಿರಭಿಮಾನದಿಂದ ಕರ್ತವ್ಯಕರ್ಮಗಳನ್ನು ಮಾಡಿಯೂ, ವಿವೇಚಕ ಬುದ್ಧಿಯಿಂದ ಆತ್ಮವಿಚಾರ ಮಾಡಿಯೂ ಆತ್ಮಜ್ಞಾನವನ್ನು ದೃಢವಾಗಿ ಪಡೆಯುವವರೆಗೆ ಅದು ತಪ್ಪಲಾರದೆಂದು ತಿಳಿಯಬೇಕು. ಅವಿವೇಕ ಪ್ರಾಬಲ್ಯದಿಂದ ಸ್ವಲ್ಪ ಸುಖವಾದರೂ, ಅದನ್ನು ಪಡೆಯಬೇಕೆಂಬ ಇಚ್ಛೆ ಉಳ್ಳವನಾಗಿ ಒಮ್ಮೆ ಪುಣ್ಯಕರ್ಮವನ್ನು ಮಾಡುತ್ತಾನೆ ಇನ್ನೊಮ್ಮೆ ಪಾಪಕರ್ಮವನ್ನು ಮಾಡುತ್ತಾನೆ. ಇದರಿಂದ ಸ್ವಲ್ಪ ಸುಖವು ಘಟಿಸಿದಂತೆ ತೋರಿದರೂ ದುಃಖಮಿಶ್ರಿತವಾಗಿಯೇ ತೋರುವುದು, ದುಃಖವೆ ಹೆಚ್ಚು ತೋರುವುದು. ಆದುದರಿಂದಲೇ ಸಂಸಾರಿಯಾದವನು ದುಃಖಿ ಎಂದೇ ಶಾಸ್ತ್ರಕಾರರು ವ್ಯವಹರಿಸುತ್ತಾರೆ. ರತ್ನಗಳನ್ನು ಚೆನ್ನಾಗಿ ಪರೀಕ್ಷಿಸಲಿಕ್ಕೆ ಬರುವವನು ಒಳ್ಳೇ ರತ್ನಗಳನ್ನೇ ತೆಗೆದುಕೊಳ್ಳುತ್ತಾನೆ. ರತ್ನಪರೀಕ್ಷೆ ಇಲ್ಲದವನು ಒಮ್ಮೆ ಒಳ್ಳೇ ರತ್ನವನ್ನೂ ತೆಗೆದುಕೊಳ್ಳಬಹುದು! ಇನ್ನೊಮ್ಮೆ ಸಾಧಾರಣ ರತ್ನವನ್ನೂ ತೆಗೆದುಕೊಳ್ಳಬಹುದು! ತಿಳಿದವನು ಹೀನರತ್ನಗಳನ್ನು ಪ್ರಾಯಃ ತೆಗೆದುಕೊಳ್ಳುವುದಿಲ್ಲ. ಉತ್ತಮರತ್ನಗಳನ್ನೇ ತಕ್ಕ ಬೆಲೆಗಳಿಂದ ಸ್ವೀಕರಿಸುವವನು. ತಿಳಿಯದವನು ಉತ್ತಮ ರತ್ನಗಳಿಗೂ, ಸಾಮಾನ್ಯ ರತ್ನಗಳಿಗೂ ಒಂದೇ ವಿಧವಾಗಿ ಬೆಲೆಗಳನ್ನು ಕಟ್ಟಿ ಅವುಗಳನ್ನು ತೆಗೆದುಕೊಳ್ಳುವನು. ತಿಳಿದವನಲ್ಲಿ ಉತ್ತಮ ರತ್ನಗಳ ವ್ಯಾಪಾರವೇ ಅಧಿಕವಾಗಿ ನಡೆಯುವುದು. ರತ್ನಪರೀಕ್ಷೆ ಇಲ್ಲದೆ ವ್ಯಾಪಾರ ಮಾಡುವವನಲ್ಲಿ ದುಷ್ಟರತ್ನಗಳೇ ಹೆಚ್ಚು ಶೇಖರಿಸುವುವು. ಕದಾಚಿತ್ ಈ ಎರಡೂ ಜನರೂ, ಭಿನ್ನ ಭಿನ್ನ ಕಾಲಗಳಲ್ಲಾದರೂ ಸರಿ, ಇಬ್ಬರೂ ಇನ್ನೊಬ್ಬ ದೊಡ್ಡವಿಮರ್ಶಕನಲ್ಲಿ ಕೂಡಿಹೋಗಿ ತಮ್ಮಲ್ಲಿರುವ ರತ್ನಗಳನ್ನು ವಿಮರ್ಶಮಾಡಿಸಿದರೂ ಸರಿ, ಮಾರುವುದಾದರೂ ಸರಿ. ಅವನು ಉತ್ತಮ ರತ್ನಗಳ ಯೋಗ್ಯ ವಿಮರ್ಶೆಯನ್ನು ಮಾಡಿ ಅವುಗಳಿಗೆ ತಕ್ಕ ಬೆಲೆಯನ್ನು ಕಟ್ಟುವನು. ದುಷ್ಟರತ್ನಗಳ ವಿಮರ್ಶೆಯನ್ನು ಮಾಡಿ, ಅವುಗಳಿಗೂ ತಕ್ಕ ಬೆಲೆಯನ್ನು ಮಾಡುವನು. ಆದರೆ ಉತ್ತಮರತ್ನಗಳೊಡನೆ ಸ್ವಲ್ಪ ದುಷ್ಟರತ್ನಗಳಿದ್ದರೆ ಬಹಳವಾಗಿರುವ ಉತ್ತಮ ರತ್ನಗಳೊಡನೆ ಸೇರಿ ಹೋಗುವುವು. ದುಷ್ಟರತ್ನಗಳೊಡನೆ ಸ್ವಲ್ಪ ಉತ್ತಮರತ್ನಗಳಿದ್ದರೆ ಅವು ಬಹುವಾಗಿರುವ ದುಷ್ಟರತ್ನಗಳಂತೆಯೇ ತೋರುವುವು. ಉತ್ತಮ ರತ್ನಗಳಿಗೂ, ದುಷ್ಟರತ್ನಗಳಿಗೂ, ತಕ್ಕ ಬೆಲೆ ಆ ಆ ಮಾಲಿಕರಿಗೆ ದೊರೆಯುವುದೇ ನಿಜ. ಆದರೆ ಉತ್ತಮದವನಿಗೆ ತನ್ನ ರತ್ನಗಳಿಗೆ ತಕ್ಕ ಬೆಲೆ ಬರುವುದರಿಂದ ಆನಂದವಾಗುದು. ದುಷ್ಟರತ್ನಗಳ ಸಂಗ್ರಾಹಕನಿಗೆ ತನ್ನ ಇಚ್ಛೆಯಂತೆ ಬೆಲೆ ಬರದೇ ಇರುವುದರಿಂದ ವ್ಯಸನವುಂಟಾಗುವುದು.

**ವಿವೇಕಿ ಮತ್ತು ಅವಿವೇಕಿ**— ಹೀಗೆಯೇ ವಿವೇಕಿಯಾದವನು ವಿಚಾರಪೂರ್ವಕ ಉತ್ತಮ ಕರ್ಮಗಳನ್ನೇ ಹೆಚ್ಚು ಮಾಡುತ್ತಾನೆ. ತಿಳಿಗೇಡಿಯಾದವನು ಅವಿಚಾರದಿಂದ ದುಷ್ಕರ್ಮಗಳನ್ನು ಮಾಡುತ್ತಾನೆ. ಪುಣ್ಯಕಾರ್ಯಗಳೂ, ಕ್ವಚಿತ್ ಅವನಿಂದಾ ಘಟಿಸುತ್ತಲೂ ಇರುತ್ತವೆ, ಆದರೆ ಅವಿವೇಕಿ ಪುಣ್ಯಕಾರ್ಯಗಳನ್ನು ಮಾಡುವುದು ಬಹಳ ಕಡಿಮೆ. ವಿವೇಕಿ ಪಾಪಕರ್ಮಗಳನ್ನು ಮಾಡುವುದೂ ಬಹಳ ಅಪರೂಪವೇ! ಕರ್ಮಾಕರ್ಮಗಳ ಮಹತ್ವ ಲಘುತ್ವಗಳೂ, ಪುಣ್ಯಪಾಪಗಳೂ, ಸುಖದುಃಖಗಳೂ ವಿವೇ

ಕೆಗೆ ವಿಚಾರಣೀಯಾಂಶಗಳಾಗಿರುವುವು. ಅವನು ಮಾಡುವ ಪ್ರಾಯಃ ಎಲ್ಲ ಕರ್ಮಗಳಿಂದಲೂ, ಅವನಿಗೆ ಮಹತ್ವವೂ, ಪುಣ್ಯವೂ, ಸುಖವೂ, ಲಭಿಸುವುದು. ಅವಿವೇಕಿಯಾದವನಿಗೆ ಕರ್ಮಾಕರ್ಮಗಳ ವಿಮರ್ಶೆ ಮಾಡಲಿಕ್ಕೆ ಚನ್ನಾಗಿ ಬರದಿದ್ದರೂ, ಸುಖವೇ ಬೇಕು ದುಃಖ ಬೇಡ ಎಂಬ ಇಚ್ಛೆ ಮಾತ್ರ ಬಲವಾಗಿರುತ್ತದೆ. ಹೀಗಿದ್ದರೂ ಅವನ ಕರ್ಮಾನುಸಾರ ಲಘುತ್ವವೂ, ಪಾಪವೂ, ದುಃಖವೂ, ಮಾತ್ರ ಅವನನ್ನು ಬಿಡವುವೇ ಇಲ್ಲ. ಪಾಪಕ್ಕಿಂತಲೂ ಪುಣ್ಯವು ವಿಶೇಷವಾಗಿ ಯಾವನಲ್ಲಿ ಸಂಚಿತವಾಗುವುದೋ, ಅವನೇ ಪುಣ್ಯವಂತನು. ಇದರ ವ್ಯತಿರಿಕ್ತವು ಯಾವನಲ್ಲುಂಟಾಗಿರುವುದೋ ಅವನೇ ಪಾಪಿ. ಲೋಕದಲ್ಲಿ ಯಾವ ಪದಾರ್ಥವನ್ನು ನೋಡಿದರೂ, ಅವುಗಳಲ್ಲಿ ಗುಣದೋಷಗಳೆರಡೂ ತೋರಿಬರುತ್ತವೆ. ಕೇವಲ ಗುಣಗಳೂ, ಕೇವಲ ದೋಷಗಳೂ, ಇರುವ ಪದಾರ್ಥಗಳೇ ವಿರಲ. ಗುಣಕ್ಕಿಂತಲೂ ದೋಷವು ಅಧಿಕವಾಗಿರುವ ಪದಾರ್ಥಕ್ಕೆ ದೋಷಿ, ಎಂದು ಹೇಳುವರು. ಇದರ ವ್ಯತಿರಿಕ್ತ ಪದಾರ್ಥವು 'ಗುಣಿ' ಎಂದು ವ್ಯವಹರಿಸಲ್ಪಡುವುದು. ಇದರಿಂದಲೇ ಅಧಿಕಪುಣ್ಯ ವಿರುವವನು ಪುಣ್ಯವಂತನೆಂದೂ, ಹೆಚ್ಚು ಪಾಪವಿರುವವನು ಪಾಪಿಎಂದೂ, ಶಾಸ್ತ್ರದಲ್ಲಿ ಮತ್ತು ಲೋಕದಲ್ಲಿ ವ್ಯವಹರಿಸುವವುದುಂಟು. ಪುಣ್ಯ ಪಾಪಗಳನ್ನು ಸಂಗ್ರಹಿಸಿದವರಿಗೆ. ಅದಕ್ಕೆ ತಕ್ಕ ಫಲಗಳನ್ನು ನಿಶ್ಚಯಿಸ್ಸಿ ಕೊಡುವುದಕ್ಕೆ ' ಯಮಃ ಸಂಯಮತಾಮಸ್ಮಿ । ' ಎಂಬ ಗೀತಾವಾಕ್ಯದಂತೆ ದೇವರು ಯಮಧರ್ಮರಾಜನೆಂಬ ಹೆಸರಿನಿಂದ ನ್ಯಾಯಪದವಿಯನ್ನಲಂಕರಿಸುತ್ತಾನೆ.

ಅಂಥ ಪರಮಾತ್ಮನು " ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ । ' ಎಂಬ ಭಗವದ್ವಾಕ್ಯಾರ್ಥಾನುಸಾರವಾಗಿ ಯಲ್ಲ ಪ್ರಾಣಿಗಳ ಹೃದಯಗಳಲ್ಲಿ ಸಾಕ್ಷೀಭೂತನಾಗಿಯೂ, ಅಂತರ್ಯಾಮಿಯಾಗಿಯೂ, ಅಪರಿಚ್ಛಿನ್ನನಾಗಿಯೂ, ವಾಸವಾಡುತ್ತಾನೆ. ಯಾರಿಗೂ ನಾವು ಅಂಜದಿದ್ದರೂ, ನಮ್ಮನಮ್ಮ ಹೃದಯಲ್ಲಿರುವ ಸಾಕ್ಷಿಯಾಗಿರುವ ದೇವರಿಗೆ ಅಂಜಬೇಕು. ಮಗನಿಗೆ ತಂದೆಯ ಭಯವಿದ್ದರೆ ಪ್ರಾಯಃ ಅವನು ನೀತಿವಂತರಾಗದೆ ಇರಲಾರನೋ ? ಹಾಗೆ ನಮ್ಮನಮ್ಮ ಹೃದಯಸ್ಥ ದೇವರ ಭಯವು ನಮಗಿದ್ದರೆ ನಾವು ನೀತಿವಂತರಾಗದೆ ಎಂದೂ ಇರಲಾರೆವು. ಒಬ್ಬನ ಭಯವು ಇನ್ನೊಬ್ಬನಿಗೆ ಜಡವಾಗಿದ್ದರೆ ಬೇಡ. ದೇವರ ಭಯವಾದರೂ ಬೇಡವೇ ? ಲೋಕದಲ್ಲಿ ಯಾದರೂ ಒಬ್ಬನ ಭಯವು ಇನ್ನೊಬ್ಬನಿಗೆ ಬೇಡವೆಂದು ಹೇಳುವ ರೂಢಿ ತಾಮಸಾವಸ್ಥೆಯ ಆಧಿಕ್ಯದಲ್ಲಿ ಕಂಡು ಬರುವುದೇ ಹೊರತು ಸಾತ್ವಿಕ ರಾಜಸಾವಸ್ಥೆಗಳಲ್ಲಿಲ್ಲ. ಪತ್ನಿ ಪತಿಗೂ, ಪುತ್ರರು ತಂದೆತಾಯಿಗಳಿಗೂ, ಶಿಷ್ಯರು ಗುರುವಿಗೂ, ತೆಳತೆಳಗಿನ ವರ್ಣದವರು ಮೇಲು ಮೇಲು ವರ್ಣದವರಿಗೂ, ಪ್ರಜೆಗಳು ರಾಜನಿಗೂ, ಭೃತ್ಯರು ಸ್ವಾಮಿಗೂ, ಅಂಜಿ, ಮತ್ತು ಅಂಕಿತರಾಗಿ ನಡೆಯುವುದಿಲ್ಲವೇ ? ಇದರಿಂದಲೇ ಲೋಕದಲ್ಲಿ ನೈತಿಕ ಆಚರಣೆಗಳು ಹೆಚ್ಚಿ ಚಿನ್ನಕ್ಕೆ ಪುಟವನ್ನು ಕೊಟ್ಟರೆ ಬಣ್ಣವು ಮತ್ತಷ್ಟು ಏರಿ ಚೆನ್ನಾಗುವಂತೆ ಮಾನವ ಸಮಾಜದ ಗೌರವವು ಅಧಿಕವಾಗುವುದು. ಇಲ್ಲವಾದರೆ ಅದು ಪಾತಾಳಕ್ಕಿಳಿದು ಸೂಕ್ಷ್ಮವಾದ ಗಾಳಿಗೂ ತೂರಿಹೋಗುವಂಥ ಹೊಟ್ಟು ಹತ್ತಿಗಳಿಗಿಂತಲೂ ಸಮಾಜವು ಲಾಘವವನ್ನು ಪಡೆಯುವುದೆಂಬುದರಲ್ಲಿ ಸಂದೇಹವಿಲ್ಲ. ಆದುದರಿಂದ ಜನರು ವಿಧೇಯವಿಧಾಯಕ ಭಾವವನ್ನೂ, ಭಗವದ್ಭಕ್ತಿಯನ್ನೂ ಮರೆಯಬಾರದಾಗಿ ಅಪೇಕ್ಷಿಸುತ್ತೇವೆ.

**ಸಂಸಾರವೃಕ್ಷ:—** ಸಂಸಾರ ರೂಪವಾದ ವೃಕ್ಷದ ಅಭಿವೃದ್ಧಿಗೆ ಮನುಷ್ಯನು ಮಾಡುವ ಕರ್ಮಗಳೇ ಪೋಷಕ ಪದಾರ್ಥವೆನಿಸುತ್ತವೆ. ಇವುಗಳಿಂದಲೇ ಅದು ಭದ್ರವಾಗಿರುವವುದು ಈ ಸಂಸಾರ ವೃಕ್ಷವು ಬೆಟ್ಟಗಳಲ್ಲಿ ದೊರೆಯುವ ಒಂದು ಸಾಮಾನ್ಯ ವೃಕ್ಷದ ಸಾಮ್ಯವನ್ನೇ ಪಡೆಯುವುದೆಂದು ಯೋಚಿಸಲಾಗದು. ಸಾಮಾನ್ಯ ವೃಕ್ಷದ ಬೇರುಗಳು ಭೂಮಿಯಲ್ಲಿ ತಳಮುಖವಾಗಿ ವ್ಯಾಪಿಸಿಕೊಳ್ಳುವುವು. ಶಾಖೆಗಳು ಮೇಲ್ಮುಖವಾಗಿ ಬೆಳೆಯುವುವು. ಕೆಳಮುಖವಾಗಿ ಶಾಖೆಗಳೂ, ಮೇಲ್ಮುಖವಾಗಿ ಬೇರುಗಳೂ, ಕ್ವಚಿತ್ ಕೆಲವು ವೃಕ್ಷಗಳಲ್ಲಿ ತೋರಿಬರುತ್ತಿದ್ದರೂ, ಅವು ಕಾರಣಾಂತರಗಳಿಂದ ಇರಬಹುದೆಂದು. ಹೇಳಬೇಕೇ ಹೊರತು ಸ್ವಾಭಾವಿಕವೆಂದು ಅನ್ನಬಾರದು ಸಂಸಾರ ವೃಕ್ಷದ ಸ್ವರೂಪವು ಹಾಗಲ್ಲ. ವಿಚಿತ್ರವಾದುದು ಅದು ಬುಡಮೇಲಾಗಿಯೂ, ತುದಿಕೆಳಗಾಗಿಯೂ. ಇರುವುದು. ಅವರ ಮೂಲವು ಮೇಲೂ, ಕೆಳಗೂ, ವ್ಯಾಪಿಸಿರುವಂತೆ ಶಾಖೆಗಳೂ, ಹಾಗೆಯೇ ವ್ಯಾಪಿಸಿರುವುವು. ಸಾಮಾನ್ಯ ವೃಕ್ಷದ ಆಕೃತಿಯನ್ನು ಅವಲೋಕನಾ ಮಾತ್ರದಿಂದಲೇ ಗ್ರಹಿಸಬಹುದು ಅಲ್ಲದೆ ಕೊಡಲಿ, ಕರಗಸ, ಮೊದಲಾದ ಆಯುಧಗಳಿಂದ ಅದನ್ನು ಕತ್ತರಿಸಬಹುದು ಇಲ್ಲವೆ ಬೆಂಕಿಯಿಂದ ಸುಟ್ಟು ಬೂದಿಮಾಡಬಹುದು. ಆದರೆ ಸಂಸಾರವೃಕ್ಷದ ಆಕೃತಿಯಾದರೋ ಕಣ್ಣಿಗೆ ಕಾಣುವುದಿಲ್ಲ. ಮನಸ್ಸಿಗೆ ನಿಲು

ಕುವುದಿಲ್ಲ. ಕೊಡಲಿ ಮೊದಲಾದ ಆಯುಧಗಳಿಗೆ ಅದು ವಿಷಯವಲ್ಲ. ಬುದ್ಧಿಯಿಂದ ಮಾತ್ರ ನಿಶ್ಚಯಿಸಲಿಕ್ಕೆ ಬರುತ್ತದೆ. ಹಾಗೆ ನಿಶ್ಚಯಿಸುವುದಾದರೆ ಇದಕ್ಕೆ ಆದಿ, ಮಧ್ಯ ಅಂತ್ಯ ಇವುಗಳು ಇಲ್ಲದಿರುವ ಕಾರಣ ಇದು ಅನಾದಿಯೆಂದೇ ನಿಶ್ಚಯಿಸಬೇಕಾಗುತ್ತದೆ. ಈ ಅನಾದಿಯಾದ ಸಂಸಾರ ವೃಕ್ಷವನ್ನು ವೈರಾಗ್ಯವೆಂಬ ಶಸ್ತ್ರದಿಂದ ಛೇದಿಸಬಹುದು. ಬೇರೆ ಏತರಿಂದಲೂ ಇದರ ಛೇದನವು ಸಾಧ್ಯವಿಲ್ಲ. ಈ ವೈರಾಗ್ಯ ಶಸ್ತ್ರಕ್ಕೆ ಅಸಂಗ ಶಸ್ತ್ರವೆಂದು ತತ್ವಜ್ಞರು ವ್ಯವಹರಿಸಿದ್ದಾರೆ. ವೈರಾಗ್ಯಪರನಾದವನಿಗೆ ಜಗತ್ತು ಅಸತ್ಯವಾದುದು ತನ್ನ ದೇಹಕ್ಕೆ ಹೇಗೆ ನಾಶವಿರುವುದೋ ಹಾಗೆ ಜಗತ್ತಿಗೂ ಇರುವುದು, ತಾನು ಎಂಬ ಪದಾರ್ಥವೇ ಆತ್ಮಸ್ವರೂಪ, ಇವೇ ಸರ್ವವ್ಯಾಪಕವಾದ ತತ್ವ ಮತ್ತು ನಿತ್ಯ ಮುಕ್ತ ಸ್ವರೂಪ ಎಂಬ ದೃಢ ನಿಶ್ಚಯ ಭಾವನೆ ಇರುವುದರಿಂದ ಸಂಸಾರ ವೃಕ್ಷವು ಅದರ ಜ್ಞಾನದೆಶೆಯಲ್ಲಿ ನಷ್ಟವಾಗಿ ಆತ್ಮವಸ್ತು ಮಾತ್ರ ತೋರುವಂತಾಗುವುದು. ಶ್ರೀಕೃಷ್ಣ ಪರಮಾತ್ಮನು ಗೀತೆಯಲ್ಲಿ ಅರ್ಜುನನನ್ನು ಕುರಿತು ಈ ಸಂಸಾರ ವೃಕ್ಷದ ವಿವರಣೆಯನ್ನೂ ಅದನ್ನು ಛೇದಿಸುವ ಶಸ್ತ್ರದ ಉಪದೇಶವನ್ನೂ ಹದಿನೈದನೆಯ ಅಧ್ಯಾಯದಲ್ಲಿ ಹೇಳಿರುತ್ತಾನೆ.

**ಗೀತಾಶಾಸ್ತ್ರದ ಯೋಗ್ಯತೆ:**—ಶ್ರೀ ಕೃಷ್ಣನು ಅರ್ಜುನನಿಗೆ ಸಂಸಾರ ಬಂಧದ ಮಹತ್ವವನ್ನೂ, ಇದು ಅನಾದಿಯೆಂಬುದನ್ನೂ, ಅಸಂಗವೆಂಬ ಶಸ್ತ್ರದಿಂದಲೇ ಇದನ್ನು ಛೇದಿಸಬಹುದೆಂಬದನ್ನೂ, ಇದನ್ನು ಛೇದಿಸಿದ ಹೊರತು ಆತ್ಮವಸ್ತುವಿನ ಲಾಭವಾಗುವುದಿಲ್ಲವೆಂಬುವನ್ನೂ, ವಿಸ್ತಾರವಾಗಿ ಉಪದೇಶಿಸಿರುತ್ತಾನೆ. ಗೋಮಾತೆಯ ಸಾರವು, ಅದರ ಕೆಚ್ಚಲಿನಿಂದ ಕ್ಷೀರರೂಪವಾಗಿ ಹೊರಟು ಅದು ಸರ್ವಾದರಣೀಯವಾಗಿದ್ದಂತೆ ವೇದದ ಕರ್ಮಕಾಂಡ, ಜ್ಞಾನಕಾಂಡ, ಉಪಾಸನಾಕಾಂಡ, ಇವುಗಳ ಮತ್ತು ಸ್ಮೃತಿ ದರ್ಶನ, ಇತ್ಯಾದಿಗಳ ಸಾರವು ಗೀತಾಶಾಸ್ತ್ರರೂಪವಾಗಿ ಶ್ರೀಕೃಷ್ಣ ಪರಮಾತ್ಮನ ಮುಖದಿಂದಲೇ ಹೊರಟಿದ್ದು ಇದು ಸರ್ವಾದರಣೀಯವೆನಿಸಿ ಜಗತ್ತಿನಲ್ಲಿ ಉಪಲಬ್ಧವಾಗಿರುವ ಸರ್ವಧರ್ಮಗ್ರಂಥಗಳಲ್ಲಿ ಶಿರೋಮಣಿ ಗ್ರಂಥವೆನಿಸಿರುವುದೆಂದೂ, ಇತರ ಸಹಸ್ರ ಪ್ರಮಾಣಗ್ರಂಥಗಳನ್ನು ಸಾರಭೂತವಾದ ಇದೊಂದೇ ಶಾಸ್ತ್ರವು ಗೆಲ್ಲುವುದೆಂದು, ಇದನ್ನು ಮನುಷ್ಯ ಮಾತ್ರರು ನಂಬಲಿಕ್ಕೆ ಅವಕಾಶ ವಿರುವವುದೆಂದೂ, ಸಕಲ ಭಾಷೆಗಳಲ್ಲಾದ ಇವರ ಪರಿವರ್ತನಗಳ ವ್ಯಾಪ್ತಿಯಿಂದಲೇ ಹೇಳಲಿಕ್ಕೆ ಬರುತ್ತದೆ. ಈ ಶಾಸ್ತ್ರವು ಕೇವಲ ಅರ್ಜುನನಿಗಾಗಿಯೇ ಅವತರಿಸಿತೆಂದು ಭಾವಿಸಲಾಗದು. ಅರ್ಜುನನ ಮೂಲಕ ಮನುಷ್ಯಮಾತ್ರರ ಉದ್ಧಾರಕ್ಕಾಗಿ ಹೊರಟಿರುತ್ತದೆಂದು ಭಾವಿಸಬೇಕು! 'ಸಮೋಽಹಂ ಸರ್ವಭೂತೇಷು ನ ಮೇ ದ್ವೇಷ್ಯೋಽಸ್ತಿ ನ ಪ್ರಿಯಃ ಎಂದು ಶ್ರೀಕೃಷ್ಣನು ಇದೇ ಶಾಸ್ತ್ರದ ಒಂದು ಕಡೆಯಲ್ಲಿ ತನ್ನ ಪ್ರೇಮತತ್ವದ ಮಹತ್ವವನ್ನು ವ್ಯಕ್ತಪಡಿಸಿರುತ್ತಿದ್ದು ಈ ಸಾಮ್ಯವೇ ಅವನ ಮುಖದಿಂದ ಹೊರಟ ಗೀತಾಶಾಸ್ತ್ರಕ್ಕೂ ಸಂಬಂಧಿಸಿರುತ್ತದೆ. ಇದು ಯಾವ ಧರ್ಮವನ್ನು ದ್ವೇಷಿಸುವುದಿಲ್ಲ. ಯಾವ ಜನಾಂಗವನ್ನೂ ದೂಷಿಸುವುದಿಲ್ಲ. ಧರ್ಮತತ್ವವನ್ನೂ, ಸಮವಾಗಿಯೇ ಬೋಧಿಸುತ್ತದೆ. ಅಂದಮೇಲೆ ನಾವೆಲ್ಲರೂ, ವರ್ಣದ್ವೇಷ ಜಾತಿದ್ವೇಷ, ಮತದ್ವೇಷ, ಮೊದಲಾದ ದ್ವೇಷಭಾವನೆಗಳನ್ನು ಬಿಟ್ಟು ಈ ಗೀತಾಶಾಸ್ತ್ರದ ಮುಂದೆ ಎಷ್ಟು ನಮ್ರವಾಗಿ, ನಡೆಯಬೇಕೆಂಬುದನ್ನು ನಾವೇ ಯೋಚಿಸಬಹುದು. ಅಸಂಗದಿಂದ ಸ್ವಕರ್ತವ್ಯಕರ್ಮಗಳನ್ನು ಮಾಡಬೇಕಾಗಿ ಬೋಧಿಸುವ ಸಾಹಸವನ್ನೇ ಗೀತಾಶಾಸ್ತ್ರವು ಅಧಿಕವಾಗಿ ತೋರಿಸಿರುತ್ತದೆ. ಇದರಿಂದಲೇ ಇದು ಸಾಧ್ಯಕ್ಕಿಂತಲೂ, ಸಾಧನವನ್ನು ವ್ಯಕ್ತಪಡಿಸುವಂತಹದಾಗಿದೆ. ಎಂದು ವ್ಯಾಖ್ಯಾನ ಕರ್ತರಲ್ಲಿ ಕೆಲವರು ಪ್ರತಿಪಾದಿಸುತ್ತಾರೆ.

**ಚಿತ್ತಶುದ್ಧಿಯ ಅಮೂಲ್ಯತೆ:**—"ಅಸಕ್ತೋ ಹ್ಯಾಚರನ್ ಕರ್ಮ ಪರಮಾಪ್ನೋತಿ ಪೂರುಷಃ" "ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ ॥" "ಯೋಗಿನಃ ಕರ್ಮ ಕುರ್ವಂತಿ ಸಂಗಂ ತ್ಯಕ್ತ್ವಾತ್ಮಶುದ್ಧಯೇ॥" ಇತ್ಯಾದಿ ಗೀತಾವಾಕ್ಯಗಳು ಅಸಂಗತತ್ವವನ್ನು ಬೋಧಿಸುತ್ತವೆ. ಪುತ್ರ ಮಿತ್ರಾದಿಗಳಲ್ಲಿರುವ ಅಭಿಮಾನವನ್ನು ಕಳಕೊಳ್ಳುವುದೂ, ಅಸಂಗತತ್ವದಲ್ಲಿಯೇ ಬರುತ್ತಿದ್ದರೂ, ಅಸಂಗದಿಂದ ಸ್ವಕರ್ಮಗಳನ್ನಾಚರಿಸುವದರಿಂದುಂಟಾಗುವಷ್ಟು ಮಹತ್ವವು ಅದರಿಂದ ಬರಲಾರದು. ಪುತ್ರಮಿತ್ರಾದಿಗಳು ಕಾರಣಾಂತರದಿಂದ ತಾವಾಗಿಯೇ ಪ್ರೇಮಸಂಬಂಧವನ್ನು ಮುರಿದು ಬೇರೆಯಾಗುವುದಕ್ಕೂ, ಆ ಮೂಲಕ ತನಗೆ ವೈರಾಗ್ಯ ಬರುವುದಕ್ಕೂ ಶಕ್ಯವಿದೆ. ಆದರೆ ಕರ್ಮಫಲದ ಸಂಬಂಧವು ಮಾತ್ರ ಹಾಗಲ್ಲ. ಅದು ತಾನಾಗಿಯೇ ಕರ್ತೃ ಸಂಬಂಧವನ್ನು ಬಿಡಲು ಯಾವಾಗಲೂ, ಸಾಧ್ಯವಿಲ್ಲ. ಕರ್ಮಫಲವನ್ನು ಬಿಡಲಿಕ್ಕೆ ಕರ್ಮ ಮಾಡುವವನಿಗೆ ಸಾಧ್ಯವಿದೆ. ಫಲಾಪೇಕ್ಷೆಯಿಲ್ಲದೆ ಕೇವಲ

ದೇವರ ಪ್ರೀತ್ಯರ್ಥವಾಗಿ ಸ್ವಕರ್ಮಗಳನ್ನು ಮಾಡುತ್ತಿದ್ದರೆ ಸರಿ. ಫಲಸಂಬಂಧವು ತಪ್ಪಿಹೋಗುವುದು. ಪುಣ್ಯಪಾಪಗಳು ಸಂಘಟಿಸುವುದಿಲ್ಲ. ಇದ್ದ ಪುಣ್ಯ ಪಾಪ ಫಲಗಳು ಅನುಭವದಿಂದ ತೀರಿ ಹೋಗುವುವು. ನಿಷ್ಕಾಮ ಕರ್ಮವ ನ್ನಾಚರಿಸುವುದರಿಂದ ಮುಂದಿನ ಜನ್ಮದ ಬೀಜವೇ ನಷ್ಟವಾದಂತಾಗುವುದು. ಇದರಿಂದ ಪಾಪಕ್ಷಯಪೂರ್ವಕ ಪರಮಾತ್ಮ ಪ್ರೀತಿಯುಂಟಾಗಿ ಅದು ಇಹಪರ ಸುಖಸಂಬಂಧವಿಲ್ಲದ ಮತ್ತು ನಿತ್ಯ ಸುಖಜ್ಞಾನಕ್ಕೆ ಹೇತುವಾದ ಚಿತ್ತಶುದ್ಧಿಯನ್ನು ಕೊಡುತ್ತದೆ. ಈ ಚಿತ್ತ ಶುದ್ಧಿಯ ಮಹತ್ವವನ್ನು ಇಷ್ಟೆಂದು ಹೇಳಲು ಸಾಧ್ಯವಿಲ್ಲ.

**ಎಲ್ಲ ಧರ್ಮಗಳ ಪ್ರಯೋಜನವು ಒಂದೇ:—** ಲೋಕದಲ್ಲಿ ಹಲವು ಧರ್ಮಗಳು ಉಪಲಬ್ಧಿಯಲ್ಲಿರುತ್ತವೆ. ಯಾವಧರ್ಮದ ಅನುಯಾಯಿಗಳನ್ನು ನೋಡಿದರೂ ಅವರಲ್ಲಿ ಕರ್ಮ ಮತ್ತು ಆಚರಣೆ ಈ ಎರಡು ಲಕ್ಷಣಗಳು ಧರ್ಮಾತ್ಮಕವಾಗಿ ತೋರಿಬರುತ್ತವೆ. ದೇವರ ಪ್ರೀತಿಗಾಗಿಯೂ, ತಮ್ಮ ಪವಿತ್ರತೆಗಾಗಿಯೂ ಅವುಗಳು ನಡಿಸಲ್ಪಡುತ್ತವೆ. ಮತ್ತು ಇವುಗಳಿಂದ ತಮ್ಮ ಸರ್ವ ದುಃಖಗಳೂ, ಹೋಗಿ ಪೂರ್ಣಸುಖಿಗಳಾಗುವೆವೆಂದು, ಪ್ರಾಯಃ ಎಲ್ಲರೂ ನಂಬುತ್ತಾರೆ. “ ದುಃಖವು ಬೇಡ, ಸುಖವೇ ಬೇಕು ” ಎಂಬ ಮಹತ್ವಾಕಾಂಕ್ಷೆ ಜೀವವರ್ಗವನ್ನೆ ಆಶ್ರಯಿಸಿರುವುದೆಂಬ ಸಂಗತಿಯನ್ನೂ ಯಾರೂ ಅಲ್ಲಗಳೆವುದಿಲ್ಲ. ಈ ಸುಖೇಚ್ಛೆಯಿಂದಲೇ ಇರುವೆ ಮೊದಲುಗೊಂಡು ಬ್ರಹ್ಮನವರೆಗೂ, ತಮ್ಮ ತಮ್ಮ ಯೋಗ್ಯತೆಗೆ ತಕ್ಕಂತೆ ಪ್ರಯತ್ನಗಳನ್ನು ನಡಿಸಿ ಸುಖವನ್ನು ಪಡೆವುದು ತಿಳಿದು ಬರುತ್ತದೆ. ಪಾಶ್ಚಾತ್ಯ ಪಂಡಿತರೂ, “ಎಲ್ಲರೂ ತಮ್ಮ ತಮ್ಮ ಯೋಗ್ಯತೆಗೆ ತಕ್ಕಂತೆ ಬದುಕಲಿ ನಾವೂ ನಮ್ಮ ನಮ್ಮ ಯೋಗ್ಯತೆಗೆ ತಕ್ಕಂತೆ ಬದುಕೋಣ” ಎಂಬ ಉದ್ಗಾರವನ್ನು ತೆಗೆದಿರುವರೆಂದು ಪೂರ್ವಾತ್ಯಪಂಡಿತರಲ್ಲಿ ಕೆಲವರು ಪ್ರತಿಪಾದಿಸುತ್ತಾರೆ. ಎಲ್ಲರೂ ಇದನ್ನು ಮನನ ಮಾಡಬಹುದಾಗಿದೆ. ಪ್ರಾಣಿವರ್ಗದಲ್ಲಿ ಇರುವೆಗೂ ಮನುಷ್ಯನಿಗೂ, ರೂಪದಿಂದ ಹೋಲಿಸಲಾಗದಿದ್ದರೂ, ಸುಖೇಚ್ಛಾ ದೃಷ್ಟಿಯಿಂದಲೂ, ಸುಖಪ್ರಾಪ್ತಿಯ ದೃಷ್ಟಿಯಿಂದಲೂ, ಸಾಮ್ಯವನ್ನು ಹೇಳಲಿಕ್ಕೆ ಬರುತ್ತದೆ. ಮನುಷ್ಯನ ಪ್ರಯತ್ನವು ಸುಖಕ್ಕಾಗಿಯೇ ಇದ್ದು ಪ್ರಯತ್ನಮಾಡಿ ಸುಖವನ್ನೇ ಹೇಗೆ ಪಡೆಯುತ್ತಾನೋ ಹಾಗೆ ಇರುವೆಯೂ, ಪಡೆಯುತ್ತದೆ. ಮನುಷ್ಯನು ದೊಡ್ಡ ಮಂದಿರದಲ್ಲಿ ಸುಖಪಟ್ಟರೆ ಇರುವೆ ಹೊದರಿನಲ್ಲಿದ್ದು ಸುಖಪಡುವುದು. ಒಂದೇ ಜಲಾಶಯದಲ್ಲಿ ಮನುಷ್ಯನು ತನಗೆ ಬೇಕಷ್ಟು ನೀರು ಕುಡಿಯಬಹುದು. ಇರುವೆಯೂ, ತನಗೆ ಬೇಕಷ್ಟು ನೀರು ಕುಡಿದು ತೃಪ್ತವಾಗಬಹುದು. ಮನುಷ್ಯನಿಗೆ ಬೇಕಷ್ಟು ನೀರು ಕುಡಿಯಲು ಇರುವೆಯಿಂದಾದೀತೇ ! ಇರುವೆಗೆ ಬೇಕಷ್ಟು ನೀರು ಮನುಷ್ಯನ ದೇಹವನ್ನು ನೀಗಿಸುವುದೇ ? ತನ್ನ ಯೋಗ್ಯತೆಗೆ ತಕ್ಕಂತೆ ನೀರು ಕುಡಿದುದರಿಂದ ಮನುಷ್ಯನು ಹೊಂದುವ ತೃಪ್ತಿಯನ್ನೇ ಇರುವೆ ತನ್ನ ಯೋಗ್ಯತೆಗೆ ತಕ್ಕಷ್ಟು ನೀರು ಕುಡಿದು ಪಡೆಯುತ್ತದೆ. ಪ್ರಾಣಿವರ್ಗಕ್ಕೆ ದಾಹವಾದರೆ ಹೇಗೆ ನೀರು ಬೇಕೋ ಹಾಗೆ ದುಃಖವಾದಾಗ ಸುಖವು ಬೇಕು. ಯಾರ ಸುಖಕ್ಕೂ, ಯಾರೂ ಅಡ್ಡ ಬರಬಾರದು ಸುಖಕ್ಕಾಗಿ ಎಲ್ಲ ಪ್ರಾಣಿಗಳೂ, ಪಡುವ ಶ್ರಮದ ಯೋಗ್ಯತೆ ಒಂದೇ. ಅದಕ್ಕೆ ಪ್ರಯೋಜನ ರೂಪವಾಗಿ ದೊರೆವ ಸುಖವು ಒಂದೇ. ಮನುಷ್ಯರು ಮಾತ್ರ ಸುಖಕ್ಕಾಗಿ ತಮ್ಮ ತಮ್ಮ ಧರ್ಮ ಮೂಲಕ ಶ್ರಮಪಡಬೇಕಾಗುತ್ತದೆ. ಇತರ ಪ್ರಾಣಿಗಳ ಶ್ರಮಗಳು ಹಾಗಿಲ್ಲ. ಏನಂಚ ಎಲ್ಲ ಧರ್ಮಗಳೂ, ಸುಖಕ್ಕಾಗಿಯೇ ಇರುವುವೆಂದೂ, ಆಯಾಯ ಧರ್ಮದವರು ಆಯಾದಧರ್ಮದಿಂದಲೇ ಸುಖವನ್ನು ಪಡೆಯಬಹುದೆಂದೂ, ಧರ್ಮಕ್ಕೆ ಅದೊಂದೇ ಮುಖ್ಯವಾದ ಪ್ರಯೋಜನವೆಂದೂ, ತಿಳಿಯಬೇಕು. ಇತ್ಯಾದಿ ವಿಸ್ತೃತ ಅಭಿಪ್ರಾಯಗಳು ಮೇಲೆ ಹೇಳಿದ ಪಾಶ್ಚಾತ್ಯ ಸೂತ್ರದಿಂದ ಹೊರಡುತ್ತವೆ. ಈ ಅಭಿಪ್ರಾಯಗಳು ಪೌರ್ವಾತ್ಯರಿಗೂ, ಇಷ್ಟೇ ಏಕೆ ಮನುಷ್ಯ ಕುಲಕ್ಕೇ ಮಾನ್ಯವಾದುವುಗಳಾಗಿವೆ-

ಒಂದು ನಗರದಲ್ಲಿ ಹಲವು ವ್ಯಾಪಾರಿಗಳು ಹಲವು ಜಿನಸುಗಳ ವ್ಯಾಪಾರವನ್ನು ಮಾಡುತ್ತ ಧನವನ್ನು ಸಂಪಾದಿಸುತ್ತಾರೆ. ಒಬ್ಬನು ಅಡಿಕೆಯ ವ್ಯಾಪಾರವನ್ನು ಮಾಡುತ್ತಾನೆ. ಇನ್ನೊಬ್ಬನು ಯಾಲಕ್ಕಿಯ ವ್ಯಾಪಾರವನ್ನು ಮಾಡುತ್ತಾನೆ. ಮತ್ತೊಬ್ಬನು ಹತ್ತಿಯ ವ್ಯಾಪಾರವನ್ನು ನಡಿಸುತ್ತಾನೆ. ಹೀಗೆ ಬೇರೆ ಬೇರೆ ಜನರು ಬೇರೆ ಬೇರೆ ಪದಾರ್ಥಗಳ ವ್ಯಾಪಾರಗಳನ್ನು ನಡಿಸುತ್ತಾರೆ. ಈಪ್ರಸಂಗದಲ್ಲಿ ವ್ಯಾಪಾರಿಗಳೂ, ವ್ಯಾಪಾರದ ಜಿನಸುಗಳೂ, ಬೇರೆ ಬೇರೆಯಾಗಿ ತೋರಿದರೂ, ವ್ಯಾಪಾರಿಗಳ ಉದ್ಯೋಗವೂ, ವ್ಯಾಪಾರದ ಸ್ವರೂಪವೂ, ಅದರಿಂದ ಬರುವ ಧನಸ್ವರ ಪವೂ, ಬೇರೆ ಬೇರೆಯಲ್ಲ. ಎಲ್ಲ ವ್ಯಾಪಾರಿಗಳ ಸ್ವರೂಪವೂ ಒಂದೇ, ಅದಕ್ಕೆ ಪ್ರಯೋಜನ ರೂಪವಾಗಿ ಬರುವ ಎಲ್ಲ ಧನದಸ್ವರೂಪವೂ ಒಂದೇ. ಸಂಕ್ಷೇಪವಾಗಿ ಹೇಳುವುದಾದರೆ ವರ್ತಕರು ಮಾಡುವುದೇನು ?

ವ್ಯಾಪಾರ ! ಅದರಿಂದ ಅವರಿಗೆ ಬರುವುದೇನು ? ಸಂಪತ್ತು. ವ್ಯಾಪಾರದ ಲಾಭ ನಷ್ಟಗಳ ಸಂಗತಿದೇಶ-ಕಾಲ, ವ್ಯವಸಾಯ, ಬುದ್ಧಿ ಸಾಮರ್ಥ್ಯ ಇತ್ಯಾದಿಗಳನ್ನವಲಂಬಿಸಿರುವುದರಿಂದ ಅವುಗಳ ವಿಚಾರವು ಬೇರೆ ಪ್ರಸಂಗದಲ್ಲಿ ಅದು ಇಲ್ಲಿ ಅನಾವಶ್ಯಕವು. ಸಂಪತ್ತಿಗೆ ವ್ಯಾಪಾರವು ಬೇಕು. ವ್ಯಾಪಾರಕ್ಕೆ ಜೀನಸುಗಳು ಬೇಕು. ಜೀನಸುಗಳಿಗೆ ವರ್ತಕರು ಬೇಕು. ವರ್ತಕರಿಗೆ ಧನವೇ ಇಷ್ಟಾರ್ಥವಾಗಿದ್ದು ಅದು ತಾನಾಗಿ ಬರುವುದಿಲ್ಲ. ಅದನ್ನು ಪಡೆಯಬೇಕಾದರೆ ಜೀನಸುಗಳ ವ್ಯಾಪಾರವನ್ನು ಮಾಡಬೇಕು. ಜೀನಸು. ವ್ಯಾಪಾರಿಯನ್ನೂ, ವ್ಯಾಪಾರವನ್ನೂ, ಅಪೇಕ್ಷಿಸುತ್ತದೆ. ಇಷ್ಟೇ ಹೇಳಿದರೆ ಸಾಕು.

**ಎಲ್ಲರೂ ಲಕ್ಷದಲ್ಲಿಡತಕ್ಕ ವಿಷಯ:–** ಈ ಮೇಲೆ ಹೇಳಿದ ಉದಾಹರಣೆಯಂತೆ ಈ ಪ್ರಪಂಚದಲ್ಲಿ ಆಸ್ಮದಾದಿಗಳು ಬೇರೆ ಬೇರೆ ಪಂಗಡದವರಾಗಿದ್ದು ಬೇರೆ ಬೇರೆ ಆಚರಣೆಗಳನ್ನು ನಡಿಸುವುದರ ಮೂಲಕ ಧರ್ಮವನ್ನೇ ಆಚರಿಸುತ್ತೇವೆ ಈ ಧರ್ಮವು ನಮ್ಮೆಲ್ಲರ ಏಕ ರೂಪವಾದ ಇಚ್ಛೆಯಂತೆ ನಿತ್ಯಸುಖವನ್ನು ಅನುಗ್ರಹಿಸುತ್ತದೆ. ವರ್ತಕರು ವ್ಯಾಪಾರ ಮಾಡುವುದಕ್ಕೂ ಜೀನಸುಗಳು ವ್ಯಾಪಾರಕ್ಕೂ ಹೇಗೆ ಬೇಕೋ ಹಾಗೆ ಆ ಆ ಧರ್ಮದವರಿಂದ ನಾವು ಧರ್ಮವನ್ನು ಆಚರಿಸುವುದಕ್ಕೂ ಆಚರಣೆಗಳೂ ಧರ್ಮಕ್ಕೂ ಬೇಕು. ಜೀನಸುಗಳಿಲ್ಲದೆ ವ್ಯಾಪಾರವು ಹೇಗೆ ನಡೆಯಲಾರದೋ ! ಹಾಗೆ ಆಚರಣೆಗಳಿಲ್ಲದೆ ಧರ್ಮವು ನಡೆಯಲಾರದೆಂಬುದನ್ನು ಎಲ್ಲರೂ ಅಂಗೀಕರಿಸ ಬಹುದಾಗಿದೆ. ನಮ್ಮ ನಮ್ಮ ಆಚರಣೆಗಳ ಮೂಲಕ ಧರ್ಮವು ಸುರಕ್ಷಿತವಾಗಿ ಸಾಗುತ್ತಿದ್ದರೆ ನಿತ್ಯ ಸುಖವು ನಮ್ಮ ಸಮಿ ಸಮೀಪಕ್ಕೆ ಬರುತ್ತಿರುವುದು ಜೀನಸುಗಳು ಬೇರೆಯಾಗಿದ್ದರೂ, ವ್ಯಾಪಾರಸ್ವರೂಪವು ಹೇಗೆ ಬೇರೆಯಲ್ಲವೋ ಹಾಗೆ ನಮ್ಮ ನಮ್ಮ ಆಚರಣೆಗಳು ಬೇರೆ ಬೇರೆ ವಿಧವಾಗಿ ತೋರುತ್ತಿದ್ದರೂ, ಧರ್ಮಸ್ವರೂಪವು ಬೇರೆ ಬೇರೆಯಲ್ಲ. ಮತ್ತು ಧರ್ಮದಿಂದ ಪ್ರಾಪ್ತವಾಗುವ ನಿತ್ಯಸುಖರೂಪವಾದ ಪ್ರಯೋಜನವೂ ಬೇರೆ ಬೇರೆಯಲ್ಲ. ಸುಖಕ್ಕೆ ಧರ್ಮವು ಬೇಕು. ಧರ್ಮಕ್ಕೆ ಆಚರಣೆಗಳು ಬೇಕು. ಆಚರಣೆಗಳಿಗೆ ಮನುಷ್ಯರು ಬೇಕು. ಏವಂಚ ಸುಖಕ್ಕಾಗಿ ನಮ್ಮ ನಮ್ಮ ಆಚರಣೆಗಳನ್ನು ನಾವು ನಾವು ಪರಿಪಾಲಿಸುವುದೇ ನಮ್ಮ ನಮ್ಮ ಧರ್ಮವೆಂಬುದು ಸಿದ್ಧವಾಗುತ್ತಿದ್ದು ಅವುಗಳನ್ನು ಕರ್ತವ್ಯದೃಷ್ಟಿಯಿಂದ ಆಚರಿಸುತ್ತ ಬಂದರೆ ನಿತ್ಯಸುಖರೂಪವಾದ ಪ್ರಯೋಜನವು ನಮ್ಮೆಲ್ಲರಿಗೂ ಸಮನಾಗಿಯೇ ದೊರೆವುದೆಂದು ತಿಳಿಯಬೇಕು ಹೀಗಿರುವಾಗ ತಮ್ಮ ತಮ್ಮ ಧಾರ್ಮಿಕ ಕರ್ತವ್ಯಕ್ಷೇತ್ರವನ್ನು ಅತಿಕ್ರಮಿಸಿ ಅನ್ಯಕ್ಷೇತ್ರದಲ್ಲಿ ಕಾಲಿಡಕ್ಕೆ ಹೋದರೆ ಅದರಿಂದ ಇನ್ನೊಬ್ಬನಿಗೆ ತೊಂದರೆ ಮಾಡಿದಂತಾಗುವುದಲ್ಲದೆ ತನ್ನ ಸುಖಕ್ಕೆ ತಾನೇ ಅಡ್ಡಬಂದಂತಾಗುತ್ತದೆ. ಈ ಸಂಗತಿಯನ್ನು ಎಲ್ಲ ವರ್ಣದವರೂ, ಎಲ್ಲ ಜಾತಿಯವರೂ, ಚೆನ್ನಾಗಿ ಲಕ್ಷ್ಯದಲ್ಲಿಡಬೇಕು.

(ಸಶೇಷ)

---

# ಸಾರಿಪುತ್ರನ ಕಡೆಯ ದಿನಗಳು

ಲೇ:—ಶ್ರೀ. ಮಾಸ್ತಿ ವೆಂಕಟೇಶ ಐಯ್ಯಂಗಾರ ಎಂ. ಎ, ಮೈಸೂರು

೧

ಗುರುದೇವನ ಮಹಾಪರಿನಿರ್ವಾಣಾನಂತರ ಸಾರಿಪುತ್ರನು ಊರಕಡೆಗೆ ತಿರುಗಿದನು. ಅವನು ಆ ಊರನ್ನು ಬಿಟ್ಟು ಅಂದಿಗೆ ನಾಲ್ವತ್ತು ವರುಷಕ್ಕೆ ಮೇಲೆ ಆಗಿತ್ತು. ಊರನ್ನು ಬಿಟ್ಟಾಗ ಅವನಿನ್ನೂ ಚಿಕ್ಕವನು, ಈಗ ಮುದುಕನಾಗಿದ್ದನು. ಶಾಕ್ಯಮುನಿಯು ವಾರಣಾಸಿಯಲ್ಲಿ ನವೀನ ಮತವೊಂದನ್ನು ಪ್ರಚಾರಗೊಳಿಸುತ್ತಿರುವನೆಂಬ ಸಂಗತಿ ತಿಳಿದು ಅವನು ಆ ಮುನಿಯ ವಾಕ್ಯಾರ್ಥವನ್ನು ಕೇಳಬೇಕೆಂದು ಅಪೇಕ್ಷಿಸಿದ ಅಂದಿನ ದಿನವು ಅವನಿಗೆ ಈಗ ಮೊನ್ನೆಯಂತೆ ಕಂಡಿತು. ಅಂದು ಅವನು ನರಸಿಂಹಶರ್ಮ—ಆಮೇಲೆ ಸಾರಿಪುತ್ರನಾದನು. ಆ ಹೆಸರಿನೊಂದಿಗೆ ಬಂದ ಮಾರ್ಪಾಡೆಷ್ಟು! ನರ್ಮದಾ ತೀರ್ಥದ ಬಳಿಯ ನರಸಿಂಹೇಶ್ವರನ ಅಗ್ರಹಾರದ ಅಗ್ರ ಘನಪಾಠಿಯ ಒಬ್ಬನೇ ಮಗನು ಬುದ್ಧದೇವನ ಶಿಷ್ಯರಲ್ಲಿ ಒಬ್ಬನಾದನು. ಆ ಕತೆಯೆಲ್ಲ ಈಗ ಅವನಿಗೆ ಇನ್ನು ಯಾರವಿಷಯವೋ ಎಂಬಂತೆ ಕಾಣುವುದು. ಬಾಲ್ಯದಿಂದ ತಂದೆಯು ಅವನನ್ನು ಪಂಡಿತನಾಗಲೆಂದು ತಿದ್ದಿದನು. ಮಗನು ತಂದೆಯಂತೆ ಸಂಸ್ಕೃತ ವಿದ್ಯೆಯಲ್ಲಿ ಘನ ಪಂಡಿತನೆಂದು ಹೆಸರು ಪಡೆದು ವಂಶವನ್ನೂ ವಂಶದ ಹೆಸರನ್ನೂ ಉಳಿಸುವಂಥ ವಿದ್ವಾಂಸನೆನ್ನಿಸಿಕೊಂಡನು. ಇಪ್ಪತ್ತುವರುಷದ ಮಗನಿಗೆ ತಂದೆಯು ಸೊಸೆಯನ್ನು ಮನೆಗೆ ಕರೆತಂದನು. ಸಂಸಾರವು ಎಲ್ಲಾ ವಿಧದಲ್ಲು ಸುಖವಾಗಿತ್ತು. ಆದರೆ ಸಾರಿಪುತ್ರನಿಗೆ ತೃಪ್ತಿಯಿರಲಿಲ್ಲ. ಅವನಿಗೆ ವಿದ್ಯೆಯೆಲ್ಲ ವ್ಯರ್ಥವೆಂದು ಕಂಡಿತು. ಕಲಿತುದೆಲ್ಲ ವೃಥಾಕೃಷಿಯೆಂದು ತೋರಿತು. ವರ್ಷವೆಲ್ಲ ನೀರೆರೆದು ಬಳ್ಳಿಯನ್ನು ಬಳೆಯಿಸಿ ಕೊನೆಗೆ ಅದರಲ್ಲಿ ಹೂವನ್ನು ಕಾಣದವನಂತೆ ಅವನು ಕಾತರನಾದನು. ಅವನಿಗೆ ಭಗವಂತನೆಂಬ ವಸ್ತುವಿನಲ್ಲಿ ಸಾಕಾದಷ್ಟು ನಂಬಿಕೆ ಹುಟ್ಟಲಿಲ್ಲ. ವೇದದಿಂದ ಅಂಥ ಅತ್ಯುತ್ತಮ ಪರವಸ್ತುವನ್ನು ಅರಿತರೆಂಬ ಮಹನೀಯರು ಆ ಜ್ಞಾನಕ್ಕೆ ತಕ್ಕ ನಡತೆಯುಳ್ಳವರಾಗಿರಲಿಲ್ಲ. ಅದನ್ನು ಕಂಡು ಅವನು ಈ ತಿಳಿವಿನಿಂದ ಫಲವೇನು ? ಯಾವ ತಿಳಿವಿನಿಂದ ಮನುಷ್ಯನು ದೇವರಾಗುವನೊ ಅದನ್ನು ನಾನು ತಿಳಿವುದು ಎಂದನು. ಅದಾಗದಿದ್ದರೆ ಅದು ತಿಳಿವಲ್ಲ ಎಂದುಕೊಳ್ಳುವನು. ಇದು ತಿಳಿವಿನ ಹೆಚ್ಚಿನ ಮಟ್ಟಗಳಲ್ಲಿ ಬರುವ ಅತೃಪ್ತಿ. ಇದರಿಂದ ಸಾರಿಪುತ್ರನ ಅತೃಪ್ತನಾಗಿದ್ದನು. ಬುದ್ಧನು ವಾರಣಾಸಿಯಲ್ಲಿ ಹೊಸ ಮತವನ್ನು ಪ್ರಚಾರಪಡಿಸುತ್ತಿರುವನೆಂದು ಕೇಳಿದಾಗ ಸಾರಿಪುತ್ರನು ಇದರಲ್ಲಿ ಏನಿದೆಯೊ ನೋಡೋಣವೆಂದು ನಿರ್ಧರ ಮಾಡಿಕೊಂಡನು. ಆಗ ಅವನ ತಂದೆ ಮುದುಕರು. ಮಗನನ್ನು ಕುರಿತು ಹೋಗಬೇಡ ಅವನೆಲ್ಲೊ ಆ ವೇದವನ್ನು ಬಿಟ್ಟ ಕಪಿಲವಸ್ತುವಿನ ಜನರ ರಾಜನ ಮಗನಂತೆ. ವೇದವನ್ನು ಬಿಟ್ಟವನು ತತ್ತ್ವವೇನನ್ನು ಹೇಳಿಯಾನು ಎಂದರು. ಆದರೆ ನರಸಿಂಹನಿಗೆ ಬುದ್ಧನಲ್ಲಿ ಆಗಲೇ ಅರ್ಧ ನಂಬುಗೆ ಹುಟ್ಟಿತ್ತು. ಸಣ್ಣವಯಸ್ಸಿನಲ್ಲಿ ಸತ್ಯಾನ್ವೇಷಣಕ್ಕಾಗಿ ಅರಮನೆ ರಾಜ್ಯ ಹೆಂಡತಿ ಮಕ್ಕಳನ್ನು ಬಿಡುವವನು ಸತ್ಯವ್ರತನೇ ಸರಿ. ಅಂಥವನು ಆರು ವರುಷ ಅರಣ್ಯದಲ್ಲಿ ತಪಸ್ಸುಮಾಡಿ ತನಗೆ ತಿಳಿವು ವುಂಟಾಗಿದೆಯೆಂದರೆ ಆ ಮಾತು ಸುಳ್ಳಾಗಿರಲಾರದು. ಆ ತಿಳಿವು ವೇದದಿಂದ ಬೇರೆಯಾದದ್ದೆಂಬಲ್ಲವೇ ಎಲ್ಲರ ಆಕ್ಷೇಪಣೆ. ವೇದವು ನಿತ್ಯ, ವೇದವು ಏಕ. ಅದು ಉಪದೇಶವಾಗುವುದು ಭಗವಂತನಿಂದ—ಶಾಕ್ಯಮುನಿಯಂತ ತಪಸ್ಸಿಗೆ ಬಂದ ಬೆಳಕು ವೇದದ್ದಲ್ಲದೆ ಇನ್ನೆಲ್ಲಿಯದು? ಬೇರೆಯಾದರೆ ಅದು ಏನು ಎಂದು ನೋಡುವುದಕ್ಕೆ ಏನು ಅಡ್ಡಿ ? ಅದನ್ನು ಕೇಳಿದಮಾತ್ರಕ್ಕೆ ವೇದದಲ್ಲಿ ನಂಬಿಗೆ ಕೆಡುವುದಾದರೆ ವೇದದ ಅರ್ಥದ ಬೆಲೆ ಎಷ್ಟಾದಹಾಗಾಯಿತು ? ಗುರುವಾಕ್ಯದಲ್ಲಿ ವಿತರ್ಕ ಕೂಡದು. ಆದರೆ ಗುರುವಾಕ್ಯದಿಂದ ಮನಸ್ಸಿಗೆ ಶಾಂತಿಯುಂಟಾಗದಿದ್ದರೆ ಇತರ ವಾಕ್ಯವನ್ನು ಕೇಳಿಯಾದರೂ ಇದರ ಅರ್ಥವನ್ನು ತಿಳಿದು ಶಾಂತಿಯನ್ನು ಪಡೆಯಬಹುದಷ್ಟೆ. ಹೃದಯದಲ್ಲಿನ ಗುರು ಗುರು ಅಲ್ಲವೆ ? ತನಗೆ ಸತ್ಯ ಇಷ್ಟೇ ಅಲ್ಲ ಎಂದು ಆ ಗುರು ಏಕೆ ಹೇಳುತ್ತಿದ್ದಾನೆ—ಬುದ್ಧನ ಉಪದೇಶವನ್ನು ಕೇಳಬೇಕು. ಎಂದು ನರಸಿಂಹನು ದೃಢಮಾಡಿಕೊಂಡನು. ಕೆಲವುದಿನ ಬಿಟ್ಟು ವಾರಣಾಸಿಗೆ ಹೊರಟುಹೋದನು; ಮತ್ತೆ ಊರಿಗೆ ಬರಲಿಲ್ಲ ಬುದ್ಧನು ಯಶೋಧರೆಯನ್ನೂ ರಾಹುಲನನ್ನೂ ಬಿಟ್ಟಂತೆ ಇವನು ತನ್ನ ಹೆಂಡತಿ ವೇದವತಿಯನ್ನೂ ಎರಡು ವರುಷದ ಮಗಳು ಕುಮುದಿನಿಯನ್ನೂ ಅಂದು ತಂದೆಯ ಜತೆಯಲ್ಲಿ ಬಿಟ್ಟು ನಡೆದನು. ಇಂದೇ ಅವನು ಮತ್ತೆ ಊರಕಡೆ

ತಿರುಗಿದ್ದು. ಅದುವರಿಗೆ ಅವನು ಗುರುಸೇವೆಯಲ್ಲೇ ಎಲ್ಲಸುಖವನ್ನೂ ಕಂಡನು; ಎಲ್ಲ ಆಸೆಗಳಿಗೂ ಪರಿತೃಪ್ತಿಯನ್ನು ಪಡೆದನು.

ಆ ಗುರುವಾಗಲಿ ಎಂಥ ಗುರು. ಅವನನ್ನು ನೋಡದ ಜನರಿಗೆ ಅಂಥ ಜೀವವಿರಬಹುದೆಂದು ತೋರದು. ನೋಡಿದ ತನಗಾಗಲಿ ಅವನ ಗುಣ ಇಷ್ಟೇ ಎಂದು ಹೇಳುವುದು ಸಾಧ್ಯವೆ? ಆ ಮನುಷ್ಯ ಅಂಥ ದೈವವಾದದ್ದು ಹೇಗೆ? ಅಂದು ತಾನು ವಾರಣಾಸಿಯಲ್ಲಿ ಆತನನ್ನು ನೋಡಿದ ಮೊದಲು ಆತನ ಮಹಾಪರಿನಿರ್ವಾಣದ ವರೆಗೆ ಆ ಗುರುದೇವನು, ಆ ದೇವತಾಂಶ ಪುರುಷನು, ಒಂದೇ ಸಮನಾಗಿ ಯೋಚನೆಯಿಲ್ಲದೆ, ಭೀತಿಯಿಲ್ಲದೆ, ಆಕ್ರೋಶವಿಲ್ಲದೆ, ಅಶ್ರದ್ಧೆಯಿಲ್ಲದೆ, ತಾನೆನ್ನದೆ ತನ್ನದೆನ್ನದೆ, ತಾನು ಹೆಚ್ಚೆನ್ನದೆ, ನೀನು ಬೇರೆಯೆನ್ನದೆ ಸಮಸ್ತ ಭೂತದಲ್ಲಿಯೂ ಏಕರೀತಿಯಾದ ಭ್ರಾತೃವಾತ್ಸಲ್ಯವನ್ನು ತೋರಿದನು. ಆ ಗುರು ದೇವರಲ್ಲದೆ ಬೇರೆ ಹೇಗೆ? ಕೃಷ್ಣಾವತಾರ ಆದಮೇಲೆ ಈತನೆ ಅವತಾರ. ಇವನೇ ಒಂಭತ್ತನೆಯ ಅವತಾರ. ಇವನು ದೇವರೇ, ದೇವರಲ್ಲದವನಿಗೆ ಆ ನಡತೆ ಬರುವುದು ಹೇಗೆ? ದೇವರಲ್ಲದವನಿಗೆ ಆಆತ್ಮಪ್ರತ್ಯಯವೆಲ್ಲಿರುವುದು.? ದೇವರಲ್ಲಲ್ಲದೆ ಆ ಶಾಂತಿಯಿನ್ನೆಲ್ಲಿ. ತಾನು ದೇವರನ್ನು ಕಣ್ಣಾರ ನೋಡಿದ್ದಾಯಿತು. ತನ್ನ ಜನ್ಮ ಸಾರ್ಥಕವಾಯಿತು.

ಹಾಗೆಯೇ ಸಾರಿಪುತ್ರನು ತಾನು ಮೊದಲು ಗುರುವಿನಬಳಿ ಹೋದದಿನ ಏನು ನಡೆಯಿತೆಂದು ನೆನೆದುಕೊಂಡನು. ಆ ಚಿತ್ರ ಇನ್ನೂ ಸ್ಥಿರವಾಗಿತ್ತು. ನಗರದ ಉಪವನದಲ್ಲಿ ದೊಡ್ಡದಾದ ಅಶ್ವತ್ಥವೃಕ್ಷ. ಅದರಡಿ ಗುರು ಕುಳಿತಿದ್ದನು. ಹತ್ತಿರ ನಾಲ್ಕುಜನ ವೇದಾನುಯಾಯಿಗಳು. ಸುತ್ತ ನೂರಾರುಜನ ಸೇರಿಕೊಂಡಿದ್ದರು. ವೈದಿಕರು ಪ್ರಶ್ನೆಗಳನ್ನು ಕೇಳುವರು. ಗುರು ಉತ್ತರವನ್ನು ಹೇಳುತ್ತಿದ್ದನು.

"ನಿನ್ನ ಮತದ ಪ್ರಕಾರ ದೇವರಿರುವನೊ ಇಲ್ಲವೊ?"

"ದೇವರು ಎಂದರೆ ಯಾರು?"

"ಸರ್ವವ್ಯಾಪಿಯೂ ಸರ್ವಶಕ್ತನೂ ಜಗನ್ನಿಯಾಮಕನೂ ಆದ ಪರಮ ಪುರುಷನು"

"ನೀವು ಪರಮಪುರುಷನನ್ನು ನೋಡಿರಬಹುದು; ಅವನ ಗುಣಗಳಿಷ್ಟನ್ನು ವರ್ಣಿಸುತ್ತಿದ್ದೀರಿ. ನಾನು ಅವನನ್ನು ನೋಡಿಲ್ಲ."

"ನಿನ್ನ ಮತ ಸರಿಯೆ ಎಂದು ನಿರ್ಧರಿಸುವುದು ಹೇಗೆ?"

"ನನ್ನ ಮತ ನನಗೆ ಸರಿ"

"ಹಾಗಾದರೆ ಅದನ್ನು ಇವರಿಗೆಲ್ಲ ಹೇಳಿಕೊಡುವುದೇಕೆ?"

"ಅವರಿಗೆ ಅವರ ಮತವನ್ನು ಕಂಡುಕೊಳ್ಳು ಎಂದು ಹೇಳುತ್ತೇನೆ"

"ಹಾಗಾದರೆ ನೀನು ಮತಸ್ಥಾಪಕನಲ್ಲವೊ"

"ಒಬ್ಬೊಬ್ಬನೂ ಅವನ ಮತವನ್ನು ಸ್ಥಾಪಿಸಿಕೊಳ್ಳಬೇಕು ನಾನು ನನ್ನ ಮತವನ್ನು ಸ್ಥಾಪಿಸಿಕೊಂಡಿದ್ದೇನೆ-"

"ಹಾಗಾದರೆ ನೀನು ಏನನ್ನು ಹೇಳಿಕೊಡುವೆ?"

"ಹೇಳಿಸಿಕೊಂಡವರನ್ನು ಕೇಳಿ"

"ನೀನು ಕರ್ಮಕ್ಕೆ ವಿರೋಧಿಯೊ?"

"ಕರ್ಮವೆಂದರೇನು?"

"ಯಜ ಯಾಗಗಳು ನಿತ್ಯವಿಧಿ ಹೋಮಗಳು"

"ತಿಳಿದು ಮಾಡಿದರೆ ಅದರಲ್ಲಿಯೂ ಪ್ರಯೋಜನವಿರಬಹುದು."

"ಅದನ್ನು ಬಿಡಬಹುದೆಂದು ನೀನು ಹೇಳುವುದೇಕೆ!"

"ಬೇರೆಯದನ್ನು ಹಿಡಿದು ಅದನ್ನು ಬಿಡಿ ಎನ್ನುತ್ತೇನೆ."

"ಬಿಟ್ಟರೆ ತೊಂದರೆಯಿಲ್ಲದುಂಟೆ?"

"ಕೆಲವರಿಗೆ ಉಂಟು"

"ಯಾರಿಗೆ?"

"ಅದು ಅವರಿಗೆ ತಿಳಿಯುತ್ತದೆ"

"ಹಾಗಾದರೆ ಅವರವರ ಇಷ್ಟದಂತೆ, ಮಾಡಿದರೆ ಮಾಡಬಹುದು ಬಿಟ್ಟರೆ ಬಿಡಬಹುದು"

"ಇಷ್ಟದಂತೆ ಅಲ್ಲ, ಬುದ್ಧಿಯಂತೆ"

"ಬುದ್ಧಿಯು ಕೆಟ್ಟುದಾದರೆ"

"ಆಗ ಕರ್ಮವೂ ಕೆಡುವುದು"

"ಕರ್ಮವನ್ನು ಬಿಟ್ಟರೆ ಒಳ್ಳೆಯದು ಹೇಗೆ ಆಗುವುದು!"

"ಒಳ್ಳೆಯ ನಡತೆಯಿಂದ"

"ಒಳ್ಳೆಯದೆಂದು ತಿಳಿಯುವುದು ಹೇಗೆ?"

"ಒಳಗಿರುವ ಬೆಳಕಿನಿಂದ"

"ಅದು ಮಂಕಾಗಿದ್ದರೆ?"

"ಇನ್ನೊಬ್ಬರ ಬೆಳಕಿನಿಂದ"

"ಅದು ಮಂಕಾಗಿದ್ದರೆ?"

"ಮನುಷ್ಯನಿಗೆ ಬೇರೆ ಗತಿಯಿಲ್ಲ."

"ವೇದಗಳಿವೆಯಲ್ಲ?"

"ವೇದ ಇದೆ "

"ಅವು ಸುಳ್ಳೆ!" "ವೇದ ಸುಳ್ಳಲ್ಲ. "

"ನೀನು ಅದನ್ನು ನಂಬುವೆಯ ? "

"ನಂಬಿ ನಡೆಯುತ್ತಿದೇನೆ "

"ಮತ್ತೆ ಕರ್ಮವನ್ನು ಬಿಟ್ಟಿದೇಯೆ! "

"ಯಾವುದನ್ನು ಕರ್ಮ ಕರ್ಮ ಎನ್ನುವಿರಿ ? ಕರ್ಮವಿಲ್ಲದೆ ಬದುಕಿಲ್ಲ "

"ಇದು ಬರಿಯ ಮಾತು "

"ವೇದ ಮಾತಲ್ಲವೆ ? "

"ನೀನು ಜನರನ್ನು ಕೆಡಿಸುತ್ತಿದೀಯೆ ಎಂದು ನಮ್ಮ ಭಾವನೆ "

"ಅವರ ನಡತೆಯನ್ನು ನೋಡಿ ಹೇಳುತ್ತೀರಾ ? "

ಹೀಗೆ ಬಹಳ ಹೊತ್ತು ಮಾತು ನಡೆಯಿತು. ಎಲ್ಲರು, ಕೇಳುತ್ತಿದ್ದರು. ಕೊನೆಗೆ ಗುರುದೇವನು " ಅಯ್ಯಾ, ನೀವು ನನ್ನನ್ನು ಪರೀಕ್ಷೆ ಮಾಡುವುದಕ್ಕೆ ಬಂದಿದ್ದೀರಿ, ನಿಮ್ಮ ಮನಸ್ಸನ್ನು ಹೀಗೆಯೇ ಪರೀಕ್ಷೆಮಾಡಿಕೊಳ್ಳಿ. ನಿಮಗೆ ನೀವೇ ಉತ್ತರವನ್ನು ಹೇಳಿಕೊಳ್ಳಿ, ನನಗೆ ಹೇಳಬೇಡಿ. ಎಷ್ಟು ವೇದವನ್ನು ನಂಬುತ್ತೀರೋ ಎಷ್ಟನ್ನು ನಂಬುವುದಿಲ್ಲವೊ ಕಂಡುಕೊಳ್ಳಿ, ಹಿರಿಯರು ಹೇಳಿದ್ದೆಂದು ಅದರಂತೆ ಮಾಡುವುದು ಒಳ್ಳೆಯದೇ, ನಮಗೆ ಏನೆಂದು ತೋರುತ್ತದೆ ಎಂದು ನೋಡುವುದೂ ಒಳ್ಳೆಯದೇ. ಹಿರಿಯರು ಹೊರಗಣ ಗುರುಗಳು. ಅವರ ಧ್ವನಿಯನ್ನು ಕೇಳಿ. ಒಳಗೂ ಒಬ್ಬ ಗುರು ಇದ್ದಾನೆ. ಅವನ ಧ್ವನಿಯನ್ನೂ ಕೇಳಿ—ಅವನನ್ನು ಮುಚ್ಚಿಡಬೇಡಿ. ಎರಡು ಧ್ವನಿಯೂ ಶ್ರುತಿ ಸೇರಿದಾಗ ತೋರುವ ಸತ್ಯ ನಿಜವಾದ ಸತ್ಯ. ಅದುವರೆಗಿನ ಸತ್ಯ ವೇಷದ ಸತ್ಯ. " ಎಂದನು. ಅವರು ಹೊರಟು ಹೋದರು. ಆ ಮೇಲೆ ಗುರುವರನು ಜನರಿಗೆಲ್ಲ ಅಂತಃ ಸಾಕ್ಷಿಯ ವಿಷಯವಾಗಿ ನಾಲ್ಕು ಮಾತನ್ನು ಹೇಳಿ ಎಲ್ಲರನ್ನೂ ಕೊಟ್ಟು ಕಳುಹಿಸಿದನು.

ಗುರುವಿನ ಈ ವಿಲಕ್ಷಣವಾದ ಪಾರಿಶುದ್ಧ್ಯ ಸಹನ ಸೌಜನ್ಯಗಳಿಗೆ ಆದಿನ ತನ್ನ ಮನವು ಹೇಗೆ ಸೋತುಹೋಯಿತೆಂಬುದೂ ತಾನು ಹೋಗಿ ಅವನ ಬಳಿ ನಿಂತು ತನ್ನ ಪೂರ್ವೋತ್ತರವನ್ನು ಹೇಳಿ ತನ್ನನ್ನು ಶಿಷ್ಯನಾಗಿ ಇಟ್ಟುಕೊಳ್ಳಬೇಕೆಂದು ಪ್ರಾರ್ಥಿಸಿದುದೂ ಗುರು ನಗುತ್ತ ಇಷ್ಟು ಕಲಿತ ನೀನು ಗುರುವಾಗ ಬಹುದೇ ಹೊರತು ಶಿಷ್ಯನಾಗುವುದು ಹೇಗೆ ಎಂದು ಹೇಳಿ ಮತ್ತೆ " ನಿನ್ನಿಂದ ಧರ್ಮಕ್ಕೆ ಸೇವೆ ನಡೆಯುವುದು ಇರುವದೊ ಏನೊ ನಾನು ಬಲ್ಲೆನೆ? ನೀನು ನಮ್ಮ ಬಳಿ ಇರು! ಶಿಷ್ಯ ಎನ್ನುವ ಮಾತು ಹಾಗಿರಲಿ " ಎಂದುದೂ ಸಾರಿಪುತ್ರನಿಗೆ ಜ್ಞಾಪಕಕ್ಕೆ ಬಂದುವು. ಕೆಲದಿನಗಳಲ್ಲಿ ಅವನು ಶಿಷ್ಯನಾದನು. ಸಾರಿಪುತ್ರನೆಂದು ಹೆಸರು ಪಡೆದನು. ಆ ಮೇಲೆ ದಿನದಿನವೂ ಆ ಮಹಾಪುರುಷನ ದಿವ್ಯ ತೇಜಸ್ಸಿನ ಮಹಿಮೆಯಿಂದ ತನಗೆ ಮನಸ್ಸಿನಲ್ಲಿದ್ದ ಸಂದೇಹಗಳೆಲ್ಲ ನಿವೃತ್ತಿಯಾಗಿ, ಸರ್ವವ್ಯಾಪಿಯಾದ ಭಗವಂತನು ಹೃದಯದಲ್ಲಿದ್ದಾನೆ. ಮನುಷ್ಯನ ಬದುಕು ಅವನ ನಿರಂತರ ಪ್ರೇರಣೆಯಿಂದ ಸದಾಕಾಲವೂ ಒಳ್ಳೆಯದಾಗುತ್ತಿದೆ, ಹಾಗೆ ಆಗುತ್ತಿರುವುದನ್ನು ಅರಿಯುವುದೇ ಅವನ ಅಜ್ಞೇಯವಾದ ಸ್ವರೂಪವನ್ನು ತಿಳಿಯುವುದಕ್ಕೆ ಮೊದಲ ಮೆಟ್ಟಲು, ಇದಿಷ್ಟು ಸಿದ್ಧವಾಗುವುದು ಈ ಬದುಕಿನ ಮುಖ್ಯ ಕೆಲಸ, ಎಂದು ಭಾವನೆಯು ಸಿದ್ಧವಾಯಿತು. ಇದರಿಂದಲೇ ಅಲ್ಲವೇ ವೇದವು ಹಿರಿದಾದದ್ದು, ಇದರಿಂದಲೇ ವೇದವು ಒಂದೇ ಒಂದು; ದೇಶವಿಲ್ಲ, ಕಾಲವಿಲ್ಲ, ವ್ಯಕ್ತಿಪ್ರಭೇದವಿಲ್ಲ. ನಿತ್ಯವಾದ ಒಂದೇ ಒಂದು ಸತ್ವವು ಎಲ್ಲ ಉಪಾಧಿಯಲ್ಲಿ ಅದಕ್ಕೆ ತಕ್ಕಂತೆ ಆಕಾರವನ್ನು ತಾಳುತ್ತಿದೆ. ಇದರಿಂದಲೇ ಮಾನವ ಜೀವನವು ಸತ್ಯಕ್ಕೆ ಸಮನ್ವಯವಾಗುವುದು. ಒಬ್ಬೊಬ್ಬನೂ ಅವನಿಗೆ ತಕ್ಕ ಕರ್ತವ್ಯವನ್ನು ಮಾಡಬೇಕು. ಇದರಿಂದಲೇ ಜೀವನವು ಸಾರ್ಥಕವಾಗಬೇಕು. ಹೀಗೆಂದು ಮೊದಲಾಗಿ ನರಸಿಂಹ ಶರ್ಮನು ಗುರುವಿನ ಮುಖದಿಂದ ತಿಳಿದು ಪ್ರಪಂಚದ ಸಮಸ್ತ ವ್ಯಾಪಾರವನ್ನೂ ಸಮದೃಷ್ಟಿಯಿಂದ ನೋಡುವುದನ್ನು ಕಲಿತನು. ಕೊಂಚಕಾಲದಲ್ಲಿ ಗುರು ವೈದಿಕ ಪಂಥದ ಪಂಡಿತರು ಚರ್ಚೆಗೆ ಬಂದರೆ ಅವರಿಗೆ ಸಾರಿಪುತ್ರನನ್ನು ತೋರಿಸಿ, " ನಾನು ವೇದಗಳನ್ನು ಓದಿದವನಲ್ಲ. ನಿಮ್ಮೊಂದಿಗೆ ಚರ್ಚೆಮಾಡಲಾರೆ. ಈತನು ಓದಿದವನು. ಇವನು ನಿಮಗೆ ಸಮ್ಮತವಾಗಿ ಎಲ್ಲವನ್ನೂ ಹೇಳುವನು" ಎನ್ನುವನು. ಸಾರಿಪುತ್ರನು ಗುರುವಿನ ಪಾದಗಳನ್ನು ಮುಟ್ಟಿ ಬಂದು ಪಂಡಿತರಲ್ಲಿ ಕುಳಿತು ಸಾಧ್ಯವಾದಷ್ಟು ಮಟ್ಟಿಗೆ ವೇದಗಳ ಭಾಷ್ಯಗಳ ಮಾತುಗಳನ್ನು ಉಪಯೋಗಿಸಿ ಬುದ್ಧಧರ್ಮವು ಅವರ ಧರ್ಮಕ್ಕೆ ವಿರೋಧವೆಂದು ಕಂಡರೂ ಜನರಿಗೆ ಅದಕ್ಕಿಂತಲೂ ಉತ್ತಮವಾದ ಮಾರ್ಗವನ್ನು ತೋರಿಸುವುದಕ್ಕೆಂದೇ ಪ್ರಾಪ್ತವಾದದ್ದೆಂದು ವಾದಿಸುವನು. ಗುರುವಿನ ಅನುಗ್ರಹದಿಂದ ಇಂಥ ವಾದಗಳಲ್ಲಿ ಅವನು ಸಮಾಧಾನವಾಗಿಯೂ ಸಮಂಜಸವಾಗಿಯೂ ಯುಕ್ತಿಯುಕ್ತವಾಗಿಯೂ ಮಾತಾಡುವುದು ಸಾಧ್ಯವಾಯಿತು. ಗುರುದೇವನು

ಇದಕ್ಕೆಲ್ಲ ಮೆಚ್ಚಿ ಒಮ್ಮೆ, "ನಾನರಿತ ಧರ್ಮಕ್ಕೆ ಸಾರಿಪುತ್ರನು ಬಲಗಣ್ಣು ಆನಂದನು ಎಡಗಣ್ಣು—ಇವರಿಬ್ಬರಿಂದ ಅದು ಸ್ಥಿರವಾಗಿ ಪ್ರಚಾರವಾಗಬೇಕು." ಎಂದನು. ಆನಂದನು ಗುರುವಿನ ಸೋದರದ ನೆಂಟನು, ಅವನಿಗೆ ಸಮೀಪದ ಸೇವಕನು, ಅತ್ಯಂತ ಪ್ರಿಯ ಶಿಷ್ಯನು—ಇಂತಹವನೊಂದಿಗೆ ತನ್ನನ್ನು ಸರಿಯೆಂದು ಭಾವಿಸಿದ ಗುರುವಿನ ಅತುಲವಾದ ಪವಿತ್ರಪ್ರೇಮದ ಭಾರದಿಂದ ಸಾರಿಪುತ್ರನು ಅಂದು ಅತಿಸುಖಿಯೂ ಅತಿಖಿನ್ನನೂ ಆದನು. ಆಮೇಲೆ ಮತ್ತೆ ಮತ್ತೆ ಎಂದಿಗೆ ನಾನು ಈ ಪ್ರೇಮಕ್ಕೆ ತಕ್ಕ ವಸ್ತು ಆಗುವೆನೂ ಎಂದು ಯೋಚಿಸುತ್ತ ಗುರುವಿನ ಕೃಪೆಯಿಂದ ಅದು ಬೇಗ ಆಗಲಿ ಎಂದು ಪ್ರಾರ್ಥಿಸುವನು.

ಸಂವತ್ಸರದ ಮೇಲೆ ಸಂವತ್ಸರವು ಹರಿದುಬರಲು ಗುರುದೇವನ ಬದುಕು ಗಂಗಾನದಿಯ ಪ್ರವಾಹದಂತೆ ವಿಶಾಲವಾಗಿ ಪ್ರಶಾಂತವಾಗಿ ಸುಖದಾಯಕವಾಗಿ ನಾಡಿನಲ್ಲೆಲ್ಲ ಹರಡಿತು. ಆ ಪ್ರವಾಹದಲ್ಲಿ ಮಿಳಿತವಾಗಿ ಅವನ ಸೇವಕರ ಬದುಕು ಆ ವಿಶಾಲತೆ, ಆ ಸುಪ್ರಶಾಂತತೆ ಆ ಸುಖದಾಯಕತೆಯಲ್ಲಿ ಭಾಗಿಗಳಾದುವು. ಸುಂದರಸುಖವಾಸಗಳಾದ ವನಪ್ರದೇಶಗಳಲ್ಲಿ ಧೀರಗಂಭೀರಗಳಾದ ವೃಕ್ಷತಂಡಗಳ ಮಧ್ಯದಲ್ಲಿ ಶೀಲನಿರ್ಮಲಗಳಾದ ನದೀತೀರಗಳ ಆಶ್ರಮಗಳಲ್ಲಿ ಗುರುದೇವನು ತನ್ನ ಆ ಸುಂದರವಾದ ಸುಖಸಾಧಕವಾದ ಧೀರವಾದ ಗಂಭೀರವಾದ ನಿತ್ಯ ನಿರ್ಮಲವಾದ ನೀತಿ ಪದ್ಧತಿಯನ್ನು ಜನರಿಗೆ ವಿವರಿಸಿದನು. ಆವಿವರಣದ ರೀತಿಯು ದಿನದಿಂದ ದಿನಕ್ಕೆ ದೇಶವಿಸ್ತಾರವಾದ ಧರ್ಮಸೌಧವನ್ನು ಕಟ್ಟುವ ರೀತಿಯೊ ಎಂಬಂತಿತ್ತು. ನಾಲ್ವತ್ತು ವರುಷಗಳಕಾಲ ಹೀಗೆ ಜೀವನವನ್ನು ನಡೆಯಿಸಿ ಗುರುದೇವನು ಮಹಾ ಪರಿನಿರ್ವಾಣವನ್ನೈದಿದನು. ಆನಂದನು ತಬ್ಬಿಲಿಯಾದೆನೆಂದು ಅತ್ತನು. ಸಾರಿಪುತ್ರನು ದೇವರು ಕಣ್ಮರೆಯಾದನೆಂದು ಖಿನ್ನನಾಗಿ ಹೃದಯದಲ್ಲಿ ಅವನನ್ನು ಕಾಣುತ್ತ ಮುಂದೆ ಏನು ಮಾಡುವುದೆಂದು ಯೋಚಿಸುವ ಮೊದಲು ಹಿಂದಣ ಬಂಧುಗಳನ್ನು ಒಮ್ಮೆ ನೋಡುವ ಎಂದು ತೋರಿ ಊರಕಡೆ ತಿರುಗಿದ್ದನು. ಯೌವನದಲ್ಲಿ ಎಲ್ಲವನ್ನೂ ಬಿಟ್ಟು ಜಾತಿಗೆಟ್ಟು ತಾನು ವೈದಿಕನೆಂಬುವನ್ನು ಮರೆತು ಬೌದ್ಧ ಸನ್ಯಾಸಿಯಾದವನಿಗೆ ಮುಪ್ಪಿನಲ್ಲಿ ಊರಿನ ಚಿಂತೆಯೇನು ? ಸಾರಿಪುತ್ರನಿಗೆ ಈ ಯೋಚನೆಯುಂಟು. ಆದರೆ ಅವನಿಗೆ ಅನೇಕ ಕಾರಣಗಳಿಂದ ಊರಿಗೆ ಹೋಗುವುದು ಆವಶ್ಯಕವೆಂದು ತೋರಿತು. ತಾನು ಚಿಕ್ಕಂದಿನಲ್ಲಿ ಸಣ್ಣ ವಯಸ್ಸಿನ ಹೆಂಡತಿಯನ್ನೂ ಮಗಳನ್ನೂ ಮುದುಕನಾಗಿದ್ದ ತನ್ನ ತಂದೆಗೆ ಭಾರವಾಗಿ ಬಿಟ್ಟು ಬಂದಿದ್ದನು. ಸಂಸಾರ ಹೇಗೆ ನಡೆಯುವುದೆಂದು ಏನೂ ಯೋಚನೆ ಇಲ್ಲ. ಆದರೂ ಅವರು ಬಹಳ ದುಃಖಿತರಾಗಿದ್ದಿರಬೇಕು. ತಾನಾದರೊ ಗುರುವನ್ನು ನೋಡಿ ವೈರಾಗ್ಯ ಸ್ಥಿರವಾದ ಮೇಲೆ ಊರಿಗೆ ಹೋಗುವ ಯೋಚನೆಯನ್ನು ತೀರಾ ಬಿಟ್ಟುಬಿಟ್ಟಿದ್ದನು. ವೈರಾಗ್ಯವು ಎಲ್ಲಿ ಹೇಗೆ ಬಂದರೆ ಅಲ್ಲಿಯೇ ಹಾಗೆಯೇ ಅದನ್ನು ಸ್ವೀಕರಿಸುವುದು ಶ್ರುತಿಸಿದ್ಧವಾದ ಬುದ್ಧಿವಾದ. ಆದ್ದರಿಂದ ಅವನು ಸನ್ಯಾಸವನ್ನು ಸ್ವೀಕರಿಸುವ ಮೊದಲು ಊರಿಗೆ ಹೋಗಿ ಬರಲಿಲ್ಲ. ಆ ಮೇಲೆ ಬುದ್ಧದೇವನು ಕಪಿಲವಸ್ತುವಿಗೆ ಹೋದಾಗ ಯಶೋಧರೆಯನ್ನೂ ರಾಹುಲನನ್ನೂ ಹೇಗೆ ಕಂಡನೆಂಬುದನ್ನು ನೋಡಿದನು. ಗುರುದೇವನಿಗೆ ಜಗತ್ತೇ ತನ್ನದಾಗಿತ್ತು ಅವನಿಗೆ ಯಶೋಧರೆಯು ಮತ್ತೆ ಯಾರಾದರೂ ಹೆಂಗಸು ಹೇಗೋ ಹಾಗೆಯೇ. ರಾಹುಲನು ಮಗನೇ. ಆದರೆ ಮಿಕ್ಕವರ ಮಕ್ಕಳಂತೆಯೇ ಪ್ರಿಯನು. ಗುರು ಅನೇಕಸಲ ಇದನ್ನು ನಾನು ಮನೆಯನ್ನು ಬಿಟ್ಟೆ ದೇಶವನ್ನು ಕಟ್ಟಿಕೊಂಡೆ ಎಂಬ ಮಾತಿನಿಂದ ವರ್ಣಿಸುವನು. ಅಲ್ಲದೆ ತನ್ನ ಹೆಂಡತಿ ಮಗು ಎಂದ ಮಾತ್ರಕ್ಕೆ ಹತ್ತಿರ ಹೋದರೆ ಬಂಧನಕ್ಕೆ ಸಿಕ್ಕಿಯೇನು ಎಂದು ದೂರ ಇರುತ್ತಿರಲಿಲ್ಲ. ಹತ್ತಿರ ಹೋದರೆ ಬಂಧನಕ್ಕೆ ಸಿಕ್ಕಿಯೇನು ಎನ್ನುವವನು ಇದ್ದಲ್ಲಿಯೆ ಬಂಧನದಲ್ಲಿದ್ದಾನೆ ಎನ್ನುವನು. ಅವನು ಸಾರಿಪುತ್ರನನ್ನು ಕುರಿತು ಒಂದೆರಡು ಸಲ ಊರಿಗೆ ಬೇಕಾದರೆ ಹೋಗಿ ಬಾ—ತಂದೆ ಮುದುಕನೆಂದೆ-ಯಾರಾದರೂ ಒಬ್ಬ ಮುದುಕನನ್ನು ಕಂಡರೆ ಕನಿಕರದಿಂದ ಕಾಣಬೇಕಲ್ಲ, ಅದರಂತೆ ತಂದೆಯನ್ನು ಕಾಣಬೇಕು. ಹೋಗಿ ಸಮಾಧಾನ ಮಾಡಿ ಬಾ ಎಂದು ಹೇಳಿದನು. ಸಾರಿಪುತ್ರನು ನಮ್ಮ ತಂದೆ ಬಹಳ ಜ್ಞಾನಿಗಳು. ಅವರು ಇದಕ್ಕೆಲ್ಲ ವ್ಯಥೆಪಡುವವರಲ್ಲ. ನನ್ನ ಪತ್ನಿಯು ಸಂಪ್ರದಾಯದಲ್ಲಿ ಬೆಳೆದಾಕೆ. ಮನೆಗೆ ತಾಯಾಗಿ ಇರುತ್ತಾಳೆ. ನನಗೆ ಯಾವ ವಿಧವಾದ ಯೋಚನೆಯೂ ಇಲ್ಲ. ಎಂದು ಉತ್ತರ ಹೇಳಿದ್ದನು. ಅಲ್ಲದೆ ದಿನಕಳೆದ ಹಾಗೆ ಅವನಿಗೆ ಬುದ್ಧದೇವನು ದೇವರ ಅವತಾರವೇ ಎಂದು ಮನಸ್ಸಿನಲ್ಲಿ ಭಾವನೆ ದೃಢವಾಗುತ್ತ ಬಂತು. ತಾನು ದೇವರ ಸಾನ್ನಿಧ್ಯದಲ್ಲಿರಬೇಕಾದರೆ ತನ್ನದೆನ್ನಬಹುದಾದ ಯಾವ ವಸ್ತುವಿಗಾಗಲಿ ತೊಂದರೆ ಆಗಲಾರದೆಂದು ಅವನ ಭಾವನೆ. ಇಂದೂ ಅದೇ ಧೈರ್ಯವುಂಟು. ಆದರೆ ಅವರ ಮನಸ್ತೃಪ್ತಿಗಾಗಿ

ಹೋಗಿ ಅವರಿಗೆ ಸುಖವನ್ನು ತೋರಿಸಬೇಕೆಂದು ಅವನಿಗೆ ತೋರಿತು. ಅದರಿಂದ ಊರಿನಕಡೆ ಹೊರಟಿದ್ದನು.

ಊರಿನ ಹತ್ತಿರ ಹತ್ತಿರ ಬಂದಹಾಗೆ ಸಾರಿಪುತ್ರನಿಗೆ ತನ್ನ ಬಾಲ್ಯದ ಬದುಕೆಲ್ಲ ಚೆನ್ನ ಚೆನ್ನವಾಗಿ ಜ್ಞಾಪಕಕ್ಕೆ ಬಂದಿತು. ಇದು ನರ್ಮದಾ ನದಿಯ ವಿಸ್ತಾರವಾದ ಪ್ರವಾಹದ ಶಯ್ಯೆ. ಇಲ್ಲಿ ಅದರ ನೀರಿನಿಂದ ಬೆಳೆಯುವ ಸುಂದರವಾದ ವನಗಳು. ಇಲ್ಲಿ ನದಿಯ ಪಾರ್ಶ್ವದಲ್ಲಿ ಉನ್ನತವಾಗಿ ಬೆಳೆದಿರುವ ವಟವೃಕ್ಷಗಳು. ತಾನೂ ಇತರ ಹುಡುಗರೂ ಸೇರಿ ಇಲ್ಲಿ ಅನೇಕಾವರ್ತಿ ಹೂವು ತುಳಸಿಗಾಗಿ ಬರುತ್ತಿದ್ದರು. ಅಗೋ ಅಲ್ಲಿ ನರ್ಮದಾ ತೀರ್ಥದ ಸ್ನಾನಘಟ್ಟದ ಸೋಪಾನ ಮಂಟಪಗಳು ಹಚ್ಚಿರುವ ಮರಗಳ ಮಧ್ಯೆ ಶುಭ್ರವಾಗಿ ಮಿರುಗುತ್ತಿರುವವು. ಅಲ್ಲಿ ಕೆಲವರು ನಿಂತಿರುವುದು ಕಾಣುವುದು. ಕಟ್ಟಡವು ಅಂದು ಇದ್ದಂತೆಯೇ ಇದೆ. ಈ ದೂರದಿಂದ ನೋಡಿದರೆ ಜನರೂ ಅದೇ ಜನರೆ ಇದ್ದರೂ ಇರಬಹುದು. ಇಂದು ಅಂದೇನೋ ಎಂಬಂತೆ ಇದೆ. ಸುಮಾರು ಅದೇ ಸಮಕ್ಕೆ ಈ ತೋಪಿನ ಆಚೆಗೆ ನೃಸಿಂಹೇಶ್ವರನ ಅಗ್ರಹಾರ. ಅಷ್ಟು ಹೊತ್ತಿಗೆ ದಾರಿಯಲ್ಲಿ ಊರಕಡೆಯಿಂದ ಕೆಲವು ಜನರು ಬಂದರು. ಅವರ ಹಿಂದೆ ಒಬ್ಬರಿಬ್ಬರು ಹುಡುಗರು ಕೆಲವು ದನಗಳನ್ನು ಹೊಡೆದುಕೊಂಡು ಬಂದರು. ಕಾಷಾಯವಸ್ತ್ರವನ್ನು ಧರಿಸಿರುವ ಈತನನ್ನು ನೋಡಿ ದೊಡ್ಡವರಾದವರು ನಮಸ್ಕಾರ ಮಾಡಿ ಮುಂದೆ ನಡೆದರು. ದೊಡ್ಡವರು ಮಾಡಿದ್ದನ್ನು ನೋಡಿ ಸಣ್ಣವರೂ ನಮಸ್ಕಾರ ಮಾಡಿ ಹೋದರು. ಸಾರಿಪುತ್ರನು ಇವರು ಯಾರಿಗೂ ನನ್ನ ಗುರುತು ಸಿಕ್ಕಲಿಲ್ಲ. ಸನ್ಯಾಸಿಯೆಂದು ನಮಸ್ಕಾರ ಮಾಡುತ್ತಿದ್ದಾರೆ ಎಂದುಕೊಂಡನು. ತೋಪನ್ನು ದಾಟಿದ ಮೇಲೆ ಊರು ಕಾಣುವುದು. ಊರಲ್ಲಿ ಮಧ್ಯದ ಮನೆ ತನ್ನದಾಗಿತ್ತು. ಅದು ಈಗ ಏನಾಗಿದೆಯೋ, ಅದರ ಜನ ಏನಾಗಿದ್ದಾರೊ, ವೇದವತಿ ಈಗ ಬಹಳ ವೃದ್ಧ ಸ್ತ್ರೀಯಾಗಿರಬೇಕು. ಅವಳು ಜೀವಂತಳಾಗಿರುವಳೆಂದು ಅವನ ಭಾವನೆಯೆ ವಿನಾ ತೀರಿ ಹೋಗಿರಬಹುದೆಂದು ಭಾವಿಸುವುದು ಅವನ ಮನಸ್ಸಿಗೆ ಅಸಾಧ್ಯವಾಗಿತ್ತು. ತನ್ನ ತಂದೆ ಆ ವೇಳೆಗೆ ತೀರಿಹೋಗಿರಬೇಕು. ಆ ಮಗಳೊ? ಸಂಸಾರಿಯಾಗಿ ಬಾಳುತ್ತಿರುವಳೊ? ಮಗಳು ಏನಾಗಿರಬಹುದು ಎಂದಾಗ ಸಾರಿಪುತ್ರನು ಕ್ಷಣಮಾತ್ರ ನರಸಿಂಹಶರ್ಮನಾಗಿ ಅವನ ಕರುಳು ಸ್ವಲ್ಪ ನುಲಿದಂತಾಯಿತು. ಒಡನೆ ಅವನು ಮಗುವನ್ನು ಕಳೆದುಕೊಂಡು ಗೌತಮಿಗೆ ಗುರು ಸಮಾಧಾನವನ್ನು ತಂದ ವಿಚಾರವನ್ನು ನೆನೆದುಕೊಂಡು ಯಾರ ಮನೆಯಲ್ಲಿ ಎಂದೂ ಸಾವಾಗಿಲ್ಲವೊ ಅವರ ಮನೆಯಿಂದ ಒಂದು ಕಾಳು ಮೆಣಸನ್ನು ತಂದು ಸತ್ತವರ ಬಾಯಲ್ಲಿ ಹಾಕಿದರೆ ಅವರು ಮತ್ತೆ ಬದುಕುವರು, ಅಂಥ ಮೆಣಸು ಮಾತ್ರ ಇಲ್ಲ. ಹೀಗೆಂದುಕೊಂಡು ಅವನು ತೋಪನ್ನು ದಾಟಿ ಮುಂದಕ್ಕೆ ಬಂದನು. ಊರು ಕಣ್ಣಿಗೆ ಬಿತ್ತು. ಅದನ್ನು ಕಣ್ಣಾರೆ ನೋಡುತ್ತ ಅವರ ಮುಂದುಗಡೆಯ ಒಂದು ಅಶ್ವತ್ಥ ವೃಕ್ಷದ ಬಳಿ ಬಂದು ಸೇರಿದನು. ಅಲ್ಲಿ ಸ್ವಲ್ಪ ನಿಂತು ತೀರ್ಥಕ್ಕೆ ಹೋಗಿ ಆ ಮೇಲೆ ಸ್ನಾನವನ್ನು ಮುಗಿಸಿಕೊಂಡು ಊರೊಳಗೆ ಹೋಗುವುದೇ, ಮೊದಲು ಊರೊಳಗೆ ಹೋಗಿ ಆ ಮೇಲೆ ಸ್ನಾನಕ್ಕೆ ಹೋಗುವುದೇ ಎಂದು ಯೋಚಿಸಿ, ಇಲ್ಲಿ ಎರಡು ನಿಮಿಷ ಕುಳಿತು ಆ ಮೇಲೆ ಹೇಗೆ ತೋರಿದರೆ ಹಾಗೆ ಮಾಡುವುದು ಎಂದು ಆ ಮರದ ಕೆಳಗೆ ಕಟ್ಟಿದ್ದ ಒಂದು ಕಟ್ಟೆಯ ಮೇಲೆ ಕುಳಿತನು.

ತನ್ನ ಊರಿನಬಳಿಗೆ ಬಂದೆನೆಂದಾಗಲಿ ತನ್ನ ಜನದ ಬಳಿ ಬಂದೆನೆಂದಾಗಲಿ ತನ್ನ ಬಾಲ್ಯದ ನೆನಪಿನಿಂದಾಗಲಿ ಸಾರಿಪುತ್ರನ ಮನಸ್ಸಿನಲ್ಲಿ ವಿಶೇಷ ಕೋಲಾಹಲವೇನೂ ಆಗಲಿಲ್ಲ. ಅಂದಿನ ಚರಿತವೆಲ್ಲ ಚಿತ್ರಸರಣಿಯಂತೆ ಸಾವಧಾನವಾಗಿ ಮನಸಿನಲ್ಲಿ ಪ್ರವಹಿಸಿತು. ಎಲ್ಲಾ ಸಂಗತಿಯೂ ಒಟ್ಟಿನ ಒಂದು ಚಿತ್ರದಲ್ಲಿ ಅದರದರ ಸ್ಥಳದಲ್ಲಿ ಸೇರಿ ಸಮಂಜಸವಾಗಿ ಕಂಡಿತು. ಅವನು ಅದನ್ನೆಲ್ಲ ಸಮಚಿತ್ತದಿಂದ ಪರಿಶೀಲಿಸಿ ತಾನು ಅತೃಪ್ತಿಪಟ್ಟುದು ಸರಿಯೆಂದೂ ಗುರುದೇವನ ಹೆಸರನ್ನು ಕೇಳಿ ಅವನನ್ನು ಅರಸಿಹೋದುದು ಸರಿಯೆಂದೂ ಎಲ್ಲವೂ ಭಗವದನುಗ್ರಹದಿಂದ ನಡೆದುದೆಂದೂ ಕಂಡನು. ಸಾರಿಪುತ್ರನು ಬೌದ್ಧನಾದರೂ ಅವನು ಭಗವಂತನನ್ನು ಬಿಡಲಿಲ್ಲ. ಭಗವಂತನನ್ನು ಕಣ್ಣಾರೆ ಕಂಡವನು. ಅವನನ್ನು ಇಲ್ಲವೆನ್ನುವುದು ಹೇಗೆ? ಕಣ್ಣಾರೆ ದಿನಾ ಕಾಣುತ್ತಿರುವವನು ಅವನಿದಾನೆಯೇ ಎಂದು ಸಂಶಯಪಡುವುದು ಹೇಗೆ. ಗುರು ಕೂಡ ಅನೇಕ ಸಲ ಕಾಣದುದನ್ನು ದೈವವೆನ್ನಬೇಡ. ದೇಹದಲ್ಲಿ ಕಾಣುವ ದೇವರು ಉಂಟು. ದೇಹದಲ್ಲಿ ಕಾಣದ ದೇವರೂ ಉಂಟು. ದೇಹದಲ್ಲಿರುವವನು ದೇಹಬಿಟ್ಟವನು ಕಾಣುವಂತೆ ದೇವರನ್ನು ಕಾಣುವುದು ಅಸಾಧ್ಯ. ದೇವರೆಂಬ ಭಾವನೆ ಮನಸ್ಸಿನಲ್ಲಿ ಹುಟ್ಟುವುದು ದೇವರ ಸಂಬಂಧ ಉಂಟಾದಾಗಲೇ. ಮನಸ್ಸಿನಲ್ಲಿ ದುಃಖ ಹುಟ್ಟುವುದು ಆ ಭಾವ ಕಡಿಮೆಯಾದಾಗ. ದೇವರೆಂಬ ಭಾವ ಮನಸ್ಸಿನಲ್ಲಿ ಬಂದಾಗ ಅದನ್ನು ಅಟ್ಟಬೇಡ. ಅದನ್ನೇ ಆರಾಧಿಸು. ಕೆಲವರಿಗೆ ಗುಣರಹಿತ

ವಾದ ತತ್ವ ಗೋಚರವಾಗುವುದು. ಅದು ಅವರ ದೈವ. ಕೆಲವರಿಗೆ ಗುಣರಹಿತ ತತ್ವ ಮನಸ್ಸಿಗೆ ಅಂಟುವುದಿಲ್ಲ. ಅವರು ಗುಣಸಹಿತವಾದ ತತ್ವವನ್ನು ಗ್ರಹಿಸಬೇಕು ಎಂದು ಹೇಳುವರು.

* * * *

ಒಂದು ದಿನ ಸಾರಿಪುತ್ರನು ಇಂಥ ಸಂದರ್ಭದಲ್ಲಿ ಗುರುದೇವ, ನಾನು ಒಂದು ಮಾತನ್ನು ಕೇಳುತ್ತೇನೆ, ದಯಮಾಡಿ ಅನುಗ್ರಹಿಸಬೇಕು ಎಂದನು. ಗುರುದೇವನು ನೀನು ಏನು ಕೇಳಿದರೂ ನಾನು ಇಲ್ಲವೆನ್ನುವುದಿಲ್ಲ ಎಂದನು. "ತಾವು ದೇವರ ಒಂಭತ್ತನೆಯ ಅವತಾರವೇ?—ನನಗೆ ತಿಳಿಸಬೇಕು."

"ನೀನು ಬ್ರಾಹ್ಮಣಕುಲದಲ್ಲಿ ಜನಿಸಿದವನು. ನಿನಗೆ ಇನ್ನೂ ಈ ರೀತಿಯ ನಂಬುಗೆ ಹೋಗಲಿಲ್ಲ."

"ಮೊದಲು ಸ್ವಲ್ಪ ಅಸ್ಥಿರವಾಗಿತ್ತು. ನಿಮ್ಮನ್ನು ನೋಡಿದ ಮೇಲೆ ಸ್ಥಿರವಾಗುತ್ತ ಬಂದಿದೆ"

"ದೇವರು ಎನ್ನದಿದ್ದರೆ ನಿನಗೆ ತೃಪ್ತಿಯಿಲ್ಲವೊ?"

"ಇಲ್ಲ"

"ಹಾಗಾದರೆ ನಿನಗೊಬ್ಬ ದೇವರು ಬೇಕು."

"ಹೌದು"

"ನನ್ನನ್ನು ದೇವರೆಂದೆಣಿಸಿ ಪೂಜಿಸುವುದು ಸಾಧ್ಯವೊ?"

"ಸಾಧ್ಯ!"

"ಹಾಗಾದರೆ ಪೂಜಿಸು"

ಸಾರಿಪುತ್ರನು "ನಾನು ಧನ್ಯನು" ಎಂದು ಅವನಿಗೆ ನಮಸ್ಕರಿಸಿದನು. ಮತ್ತೊಂದು ಸಲ ಗುರು,"ದೇವರು" ಭೂಮಿಗೆ ಬಂದು ನಾನು ದೇವರೆಂದು ಹೇಳಿದರೆ ಜನರು ಒಪ್ಪುವ ದಿನ ಹೋಯಿತು. ಮುಂದಕ್ಕೆ ಗುರುವೆಂದರೂ ಒಪ್ಪರು. ಮನುಷ್ಯನೇ ದೇವರು. ಒಬ್ಬೊಬ್ಬನೂ ದೇವಾಂಶ. ಜ್ಞಾನ ಬೆಳೆದ ಹಾಗೆ ದೇವರೆನ್ನುವುದನ್ನು ಹೃದಯದಲ್ಲಿ ಕಾಣುವೆವು" ಎಂದು ಹೇಳಿದನು. ಇನ್ನು ಅವನು ದೇವರೆನ್ನುವುದರಲ್ಲಿ ಸಂಶಯವೇನು? ಸಾರಿಪುತ್ರನು ತನ್ನ ಬಾಲ್ಯದ ವೇದವಿದ್ಯೆಯೆಲ್ಲವೂ ಗುರುದೇವನ ಸೇವೆಯಲ್ಲಿ ಪರಿಪಾಕಕ್ಕೆ ಬಂದಿತು ಎಂದುಕೊಂಡನು.

ಇದನ್ನೆಲ್ಲ ನೆನೆದುಕೊಂಡು ಸಾರಿಪುತ್ರನು ಅಲ್ಲೇ ಕುಳಿತಿದ್ದನು. ಊರಿನ ಜನರು ತೀರ್ಥಕ್ಕೆ ಹೋಗುತ್ತಿದ್ದರು. ಅವರಲ್ಲಿ ಯಾರಾದರೂ ತಿಳಿದವರಿರುವರೇ ಎಂದು ನೋಡಿದನು. ಯಾರೂ ಕಾಣಲಿಲ್ಲ. ಹೆಂಗುಸರು ಕೆಲವರು ಪಾತ್ರೆಗಳನ್ನು ತೆಗೆದುಕೊಂಡು ಕೆಲವರು ಮಡಿಬಟ್ಟೆಯನ್ನು ತೆಗೆದುಕೊಂಡು ಕೆಲವರು ಮಕ್ಕಳನ್ನು ಕರೆದುಕೊಂಡು ಹೋಗುತ್ತಿದ್ದರು. ಅವರಲ್ಲಿ ತನ್ನ ಮಗಳಂತೆ ಯಾರಾದರೂ ಇರುವರೋ ಎಂದು ನೋಡಿದನು. ಮೂರುವರ್ಷದ ಹುಡುಗಿಯನ್ನು ನೋಡಿದ್ದವನು ನಾಲ್ವತ್ತುವರ್ಷದ ಮೇಲೆ ಗುರುತಿಸುವುದು ಸಾಧ್ಯವಲ್ಲ. ಎಂದು ಅವನಿಗೆ ತೋರಿದರೂ ಮನಸ್ಸು ಅವನನ್ನು ಒಪ್ಪಿರಲಿ . ಇಂಥ ಹಠವು ಮನಸ್ಸಿಗೆ ಸ್ವಭಾವ. ಅದರಿಂದಲೇ ಮನುಷ್ಯನು ದೇವರೆಂಬ ವಸ್ತುವನ್ನು ಈ ಬದುಕಿನಲ್ಲಿ ನೋಡದೇ ಇದ್ದರೂ ನೋಡಿದ್ದಂತೆಯೆ ಧೈರ್ಯದಿಂದಲೂ, ನೋಡಿದಾಗ ಗುರುತಿಸುವೆಂಬ ಭರವಸೆಯಿಂದಲೂ ಪ್ರವರ್ತಿಸುತ್ತಾನೆ. ಮನಸ್ಸಿಗೆ ಆ ಶಕ್ತಿ ಇರುವುದೂ ನಿಜ. ತಿದ್ದಿಕೊಂಡರೆ ಆ ಶಕ್ತಿ ವೃದ್ಧಿಯಾಗುವುದು. ಸಾರಿಪುತ್ರನು ಹೀಗೆಯೇ ನೋಡುತ್ತಿರಲಾಗಿ ಊರಕಡೆ ಹೋಗುತ್ತಿದ್ದವರಲ್ಲಿ ಇಬ್ಬರು ಹೆಂಗುಸರಲ್ಲಿ ಒಬ್ಬಳು ಆ ಸನ್ಯಾಸಿಯನ್ನು ನೋಡಿ ಯಾರಾದರೂ ಹೋಗಿ ಊರಿಗೆ ಕರೆಯಬಾರದೇ ಎಂದಳು. ಇನ್ನೊಬ್ಬಳು ಬೌದ್ಧರವನು ಇರಬಹುದು, ಯಾರು ಕರೆಯುತ್ತಾರೆ ಎಂದಳು. ಬುದ್ಧನ ಮಾತು ಆ ವೇಳೆಗೆ ಸೀಮೆಯಲ್ಲೆಲ್ಲ ತಿಳಿದಿತ್ತು. ಸಾರಿಪುತ್ರನಿಗೆ ಹೀಗೆ ತೋರಿ ಇದರಿಂದ ಸಂತೋಷವಾಯಿತು. ಅಷ್ಟರಲ್ಲಿ ಅವರ ಜತೆಯಲ್ಲಿದ್ದ ಸಣ್ಣ ಹುಡುಗಿಯೊಂದು ಇವನ ಕಡೆಗೆ ಬಂದು ಅಲ್ಲಿ ಬಿದ್ದಿದ್ದ ಅಶ್ವತ್ಥದ ಹಣ್ಣನ್ನು ಆರಿಸುತ್ತ ಇವನ ಕಡೆ ಆಗಾಗ ನೋಡುತ್ತ ನಿಂತಿತು. ಸಾರಿಪುತ್ರನು ಹಿಂದಿನ ರಾತ್ರಿ ತಂದಿದ್ದ ಸ್ಥಳದಲ್ಲಿ ಯಾರೋ ಕೊಟ್ಟಿದ್ದ ಎರಡು ಬಾಳೆಯಹಣ್ಣನ್ನು ಮಕ್ಕಳು ಯಾರಾದರೂ ಬಂದರೆ ಕೊಡುವುದಕ್ಕೆ ಇರಲಿ ಎಂದು ತನ್ನ ಕೂಡ ತಂದಿದ್ದನು. ಅದನ್ನು ಮಗುವಿಗೆ ಕೊಡೋಣವೆಂದುಕೊಂಡನು. ಹಾಗೆಯೆ ಹುಡುಗಿಯ ಮುಖವನ್ನು ನೋಡಿ ತನ್ನ ಮಗಳ ಮುಖವಂತೆ ಇದೆ ಎಂದು ಭಾವಿಸಿದನು. ಆ ಮೇಲೆ ಇದು ಭ್ರಮೆಯೆಂದನು. ಆ ಮೇಲೆ ಇದರಲ್ಲಿ ಆಶ್ಚರ್ಯವೇನು ಎಂದುಕೊಂಡನು. ಆನೇಕೆ

"ಮಗು, ನಿನ್ನ ಹೆಸರೇ ನಮ್ಮ?" ಎಂದು ಕೇಳಿದನು.

"ವೇದ"

"ನಿನಗೆ ಹಣ್ಣು ಬೇಕೆ? ಕೊಡುತ್ತೇನೆ ಬಾ!"

"ಕೊಡು, ನೋಡೋಣ" ಹೀಗೆಂದು ಹೇಳಿ ಹುಡುಗಿ ಪಂಥಮಾಡುವವಳಂತೆ ಹತ್ತಿರ ಬಂದು ಕೈನೀಡಿದಳು. ಸಾರಿಪುತ್ರನು ಹಣ್ಣನ್ನು ತೆಗೆದು ಅವಳಿಗೆ ಕೊಟ್ಟನು. ಹುಡುಗಿ ತೆಗೆದುಕೊಂಡು

" ನಿನ್ನ ಹೆಸರೇನು? " ಎಂದಳು.

" ಸಾರಿಪುತ್ರ "

" ನಮ್ಮ ತಾತ ನಿನ್ನ ಹಾಗೆಯೆ ಬಟ್ಟೆಹಾಕಿಕೊಂಡು ಸನ್ಯಾಸಿಯಾಗಿದ್ದಾನೆ. "

" ಅವನೆಲ್ಲಿ? "

" ಎಲ್ಲೋ? "

" ಅವನ ಹೆಸರೇನು? "

" ತಿಳಿಯದು "

" ನಿಮ್ಮ ತಾಯಿ ಹೆಸರೇನು "

" ಅಮ್ಮ "

" ನಿಮ್ಮಮ್ಮನ ಹೆಸರು "

" ವೇದಮ್ಮನವರು "

ಹೆಂಗಸರು ಮುಂದೆ ಹೋಗಿದ್ದರು. ಅವರಲ್ಲಿ ಒಬ್ಬಳು ಹಿಂದಿರುಗಿ " ಲೇ ಹರಟೇಮಲ್ಲಿ, ಬಾ " ಎಂದು ಕೂಗಿದಳು. ಹುಡುಗಿ "ಬಂದೆ" ಎಂದಳು. ಅವರು ಮುಂದೆ ನಡೆದರು. ಹುಡುಗಿ ತನ್ನ ಮಗಳ ಮಗಳಿರಬೇಕು, ಅದರಿಂದಲೆ ಈ ಹೋಲಿಕೆ, ಎಂದು ಸಾರಿಪುತ್ರನು, " ವೇದಮ್ಮ, ನಿಮ್ಮ ತಾತನನ್ನು ತೋರಿಸುತ್ತೇನೆ. ನನ್ನನ್ನು ನಿಮ್ಮ ಮನೆಗೆ ಕರೆದುಕೊಂಡು ಹೋಗು " ಎಂದನು. ಹುಡುಗಿ " ಬಾ " ಎಂದು ಮುಂದೆ ಹೊರಟಳು. ಇವನು ಅವಳನ್ನೆತ್ತಿಕೊಂಡು ನಾನು ನಿಮ್ಮ ಮನೆ ತೋರಿಸಲೆ ಎಂದು ಅವಳ ಸಂಗಡ ಮಾತನಾಡುತ್ತ ಊರನ್ನು ಹೊಕ್ಕನು.

ಅದೇ ಬೀದಿ, ಅದೇ ದೇವಾಲಯ, ಅದೇ ಮನೆ, ಮನೆಯ ಮುಂದೆ ಒಬ್ಬ ಚಿಕ್ಕವಯಸ್ಸಿನ ಸ್ತ್ರೀ ರಂಗವಲ್ಲಿಯನ್ನಿಕ್ಕುತ್ತಿದ್ದಳು. ಅಪರಿಚಿತನು ಮಗುವನ್ನೆತ್ತಿಕೊಂಡು ಬರುತ್ತಿರುವುದನ್ನು ನೋಡಿ ರಂಗವಲ್ಲಿಯನ್ನಿಕ್ಕುವುದನ್ನು ಬಿಟ್ಟು ಸುಮ್ಮನೆ ನಿಂತಳು.

ಸಾರಿಪುತ್ರನಿಗೆ ಅವಳು ತನ್ನ ಮಗಳೆಂಬುದು ಖಂಡಿತವಾಯಿತು. ತನ್ನ ಪರಿಚಯವನ್ನು ಮೆಲ್ಲಗೆ ತಿಳಿಸಬೇಕೆಂದು ಸಾರಿಪುತ್ರನ ಉದ್ದೇಶ, ಮಗುವನ್ನು ಕೆಳಗೆ ಬಿಡುತ್ತ ಅವನು " ಇದು ನಿಮ್ಮ ಮಗುವೇ, ತಾಯಿ! " ಎಂದು ಕೇಳಿದನು.

" ಹೌದು "

" ನನ್ನ ಹೆಸರು ಸಾರಿಪುತ್ರ ನಾನು ಈ ಊರನಲ್ಲಿ ಹುಟ್ಟಿ ಬೆಳೆದವನು. ನನ್ನನ್ನು ಆಗ ನರಸಿಂಹಶರ್ಮನೆಂದು ಕರೆಯುತ್ತಿದ್ದರು. "—

ಇವನು ಈ ಮಾತುಗಳನ್ನು ಹೇಳುವವೊಳಗಾಗಿ ಕುಮುದಿನಿಯು ತಂದೆಯನ್ನು ದೃಷ್ಟಿಸಿನೋಡಿ ತಂದೆಯೆಂದು ಹೇಗೊ ತಿಳಿದಳು. ಅವನು ಮಾತನ್ನು ಮುಗಿಸುವುದರೊಳಗೆ,"ಅಮ್ಮಾ, ಅಪ್ಪ ಬಂದನು." ಎಂದು ಕೂಗುತ್ತ ದಡದಡನೆ ಮನೆಯವೊಳಕ್ಕೆ ಓಡಿದಳು. ಒಳಗಿಂದ ಒಬ್ಬ ವೃದ್ಧ ಸುಮಂಗಲಿ-ಮಗಳು ಕೂಗಿದುದು ಕೇಳಿರಬೇಕು, ಮಾತು ತಿಳಿದಿರಲಾರದು.—"ಏನೇ ಅಮ್ಮಾ ಮಗು ಬಿದ್ದಳೆ" ಎನ್ನುತ್ತ ಹೊರಕ್ಕೆ ಬಂದಳು. ಹಜಾರದಲ್ಲಿ ಮಗಳ ಮಾತನ್ನು ಕೇಳಿದಳು.

ಕುಮುದಿನಿ ಎರಡುಸಲ, " ಅಪ್ಪ ಬಂದರು ಸನ್ಯಾಸಿಯಾಗಿದ್ದಾರೆ ಅಲ್ಲಿ ನಿಂತಿದ್ದಾರೆ ನೋಡು, " ಎಂದು ಸ್ವಲ್ಪ ಗಟ್ಟಿಯಾಗಿ ಹೇಳಿದಳು. ವೇದವತಿಗೆ ವಯಸ್ಸಿನಿಂದ ಕಿವಿ ಮಂದವಾಗಿತ್ತು. ಇಷ್ಟು ಹೇಳಿದಮೇಲೆ ಮಗಳ ಮಾತು ಏನೆಂದು ತಿಳಿಯಿತು.

ಮುಖವನ್ನು ಬೇರೆಕಡೆ ತಿರುಗಿಸಿಕೊಂಡು, " ಸನ್ಯಾಸಿಯೇ? ಅವರೇ? " ಎಂದಳು.

" ಅಪ್ಪಾ; ಹೇಳಲಿಲ್ಲವೆ; ಹೆಸರು ಹೇಳಿದರು—ಸನ್ಯಾಸಿಯಾಗಿದಾರೆ "

ವೇದವತಿ—" ಹೆಸರು ಹೇಳಿದರೆ? ಸನ್ಯಾಸಿ ಆಗಿದಾರೆಯೆ? ಮನೆಗೆ ಬರಬಾರದಲ್ಲ. ನಾನು ನೋಡುವುದು ಅವರಿಗೆ ಅನಿಷ್ಟ. ನೀನು ಹೋಗಿ ವಿಚಾರಿಸಿಕೊ ಸುಖವಾಗಿ ಬಂದರಲ್ಲ ಅಷ್ಟೇ ಸಂತೋಷ, " ಎಂದು ಹೇಳಿ " ನನಗೆ ನೋಡೋ ಪುಣ್ಯ ಇಲ್ಲ " ಎಂದಳು. ಸಾರಿಪುತ್ರನು " ನಾನು ಬೌದ್ಧ ಸನ್ಯಾಸಿ, ನನಗೆ ವೈದಿಕಸನ್ಯಾಸಿಗಳ ನಿಯಮವಿಲ್ಲ. ನೀವು ಬರಬಹುದು" ಎಂದನು.

ವೇದವತಿಗೆ ಚೆನ್ನಾಗಿ ತಿಳಿಯಲಿಲ್ಲ.—"ಏನಂತೆ?" ಎಂದಳು. ಕುಮುದಿನಿಯು ತಿಳಿಸಿದಳು. ವೇದವತಿ " ಹಾಗೆಯೆ-ಒಳ್ಳೆಯದಾಯಿತು. " ಎಂದು ಹತ್ತಿರಕ್ಕೆ ಬಂದು ಗಂಡನನ್ನು ದೃಷ್ಟಿಸಿ ನೋಡಿ " ನಿಮ್ಮ ಮಗಳನ್ನು ನೋಡುವುದಕ್ಕೆ ಬಂದಿರಲ್ಲ ಅಷ್ಟೇ ಸಂತೋಷ " ಎಂದು ಅವನ ಕಾಲನ್ನು ಮುಟ್ಟಿ ಕಣ್ಣಿಗೆ ಒತ್ತಿಕೊಂಡು, ಅಲ್ಲೇ ಕುಳಿತು ಒಂದು ಕ್ಷಣ ಬಿಟ್ಟು " ಕುಮುದಾ, ಒಂದು ಮಣೆಹಾಕಿ ಕುಳ್ಳಿರಿಸಮ್ಮ—ವೇದಾ ಬಾ ತಾಯಿ ನಿಮ್ಮ ತಾತನಿಗೆ ನಮಸ್ಕಾರ ಮಾಡು" ಎಂದಳು.

ಅಂದು ಮನೆಯಲ್ಲಿ ಬಹಳ ಸಡಗರ. ಅರ್ಧಗಳಿಗೆಯಲ್ಲಿ ಊರಜನವೆಲ್ಲ ಬಂದು ಸೇರಿತು. ಹಿಂದೆ ನರಸಿಂಹನನ್ನು ನೋಡಿದ್ದವರನೇಕರು ಸಾರಿಪುತ್ರನನ್ನು ನೋಡಿ ಗುರುತಿಸಿ—

ವಿಶ್ವಾಸದಿಂದ ಮಾತನಾಡಿಸಿದರು. ಕೆಲವರು ಜಾತಿ ಏಕೆ ಕೆಟ್ಟಿ ಎಂದರು; ಕೆಲವರು ಸನ್ಯಾಸಿಯೇಕಾದೆ ಎಂದರು; ಕೆಲವರು ಚಿಕ್ಕಂದಿನಲ್ಲಿ ತಾವು ಜತೆಯಾಗಿ ಆಡಿದ್ದನ್ನೆಲ್ಲ ಜ್ಞಾಪಕಕೊಟ್ಟರು. ಸಾರಿಪುತ್ರನು ಸಮಾಧಾನವಾಗಿ ಎಲ್ಲರಿಗೂ ಉತ್ತರವನ್ನು ಕೊಡುತ್ತ ನಗುತ್ತ ಎಲ್ಲರನ್ನು ವಿಶ್ವಾಸದಿಂದ ಮಾತನಾಡಿಸಿದನು. ಸಣ್ಣವರನೇಕರು ಅವನಿಗೆ ನಮಸ್ಕಾರ ಮಾಡಿ ಆಶೀರ್ವಾದ ಪಡೆದರು. ಮಧ್ಯಾಹ್ನ ಬಹಳ ಹೊತ್ತಿನವರೆಗೆ ಸಲ್ಲಾಪಗಳು ನಡೆದುವು.

* * * *

ಸಾರಿಪುತ್ರನ ತಂದೆಯು ತೀರಿಹೋಗಿ ಐದಾರು ವರುಷವಾಗಿತ್ತು. ಅವರು ಮೊಮ್ಮಗಳಿಗೆ ಮದುವೆಮಾಡಿ ಆ ಅಳಿಯನನ್ನು ಮನೆಯಲ್ಲಿರಿಸಿಕೊಂಡಿದ್ದರು. ಕುಮುದಿನಿಗೆ ತಾತನನ್ನೂ ತಾಯನ್ನೂ ಬಿಡಲು ಮನಸ್ಸಿಲ್ಲ. ಅಳಿಯನ ತಾಯಿ ತಂದೆ ಹಠಮಾಡಿದರು. ಅವನು ಅವಳನ್ನು ಅಲ್ಲೇ ಬಿಟ್ಟು ತನ್ನ ಊರಿನಲ್ಲಿದ್ದನು. ಕುಮುದಿನಿ ಆರು ತಿಂಗಳು ಅಲ್ಲಿ, ಆರು ತಿಂಗಳು ಇಲ್ಲಿ ಇರುತ್ತಿದ್ದಳು. ಸಾರಿಪುತ್ರನ ತಂದೆ ಮಗನನ್ನು ನೋಡಿದರೂ ನೋಡಬಹುದು. ಅವನು ಬಂದಾನೆ ಎಂದು ಆಶೆ ಇಟ್ಟುಕೊಂಡೇ ತೀರಿಹೋದರಂತೆ. ಅವನು ಬಂದರೆ ಈ ಸಂಸಾರ ಅವನ ಮೇಲೆ ಹಾಕಿ ಹೋಗಬಹುದು, ಬರಲಿಲ್ಲವಲ್ಲ, ಎಂದು ಆಗಾಗ ಹೇಳುವರು. ಸೊಸೆ ನೀವು ನಮಗಾಗಿ ಚಿಂತೆ ಮಾಡಬೇಡಿ, ನಾರಾಯಣ ಗೋವಿಂದಾ ಅಂತಾ ಇರಿ. ನನ್ನನ್ನೇ ಮಗನೆಂದು ಎಣಿಸಿಕೊಳ್ಳಿ. ನಿಮಗೆ ಆಗಬೇಕಾದ ಕರ್ಮವೆಲ್ಲ ನಾನು ಮಾಡಿಸುತ್ತೇನೆ. ನಾನು ಒಂಟಿಯಾಗುತ್ತೇನೆ ಅಂತ ಅಲ್ಲವೆ? ನಾನು ಕುಮುದ ಅವರ ಮನೆಗೆ ಹೋದರೂ ಹೋದೆ. ನನ್ನ ಮಾತೇನು ಎನ್ನುತಿದ್ದಳು. ಕೊನೆಗೆ ಅವರು ಸೊಸೆಯನ್ನು ನೀನು ಹುಟ್ಟಿನಲ್ಲಿ ಹೆಂಗಸು ಹೊರತು ಗುಣದಲ್ಲೆಲ್ಲ ಗಂಡಸರಂತೆ ಇದ್ದೀಯೆ. ಮನೆಗೆ ಒಳ್ಳೆ ಹೆಸರು ತಂದೆ. ನೀನು ದೀರ್ಘಸುಮಂಗಲಿಯಾಗಿರು ಮುಂದಿನ ಜನ್ಮದಲ್ಲಿ ದೇವರು ನಿನಗೆ ಈ ಪಾತಿವ್ರತ್ಯಕ್ಕೆ ಸರಿಯಾದ ಪತಿಸಹವಾಸವನ್ನು ಕೊಡುತ್ತಾನೆ. ಎಂದು ಹೇಳಿ, ಕುಮುದಾ ನಿಮ್ಮ ಅತ್ತೆಮನೆಯವರು ಏನೇ ಹೇಳಲಿ, ನಿಮ್ಮಮ್ಮನನ್ನುಒಬ್ಬಳನ್ನೇ ಬಿಡಬೇಡ ಒಂಟಿಯಾಗಿರುತ್ತಾಳೆ, ಬೇಸರಪಡುತ್ತಾಳೆ" ಎಂದು ಹೇಳಿ ಕಣ್ಣುಮುಚ್ಚಿಕೊಂಡರಂತೆ. ಸಾರಿಪುತ್ರನು ಇದನ್ನೆಲ್ಲ ಕೇಳಿದನು. ಮಧ್ಯಾಹ್ನವಾದಮೇಲೆ ತೀರ್ಥಕ್ಕೆ ಹೋಗಿ ಸ್ನಾನಾದಿಗಳನ್ನು ಮುಗಿಸಿಕೊಂಡು ಬಂದನು. ಮನೆಯೊಳಗೆ ಊಟಮಾಡಬೇಕೆಂದರು. ನೀವು ಕೊಟ್ಟರೂ ಭಿಕ್ಷೆ—ಯಾರು ಕೊಟ್ಟರೂ ಭಿಕ್ಷ. ನೀವು ಕೊಡುವ ಭಿಕ್ಷವನ್ನು ತಿನ್ನಬೇಕೆಂದರೆ ಅದೇ ಆಗಲಿ ಎಂದನು. ಮಾರನೆಯ ದಿನದಿಂದ ತೀರ್ಥದ ಬಳಿಯ ಮಂಟಪ ಒಂದರಲ್ಲಿ ಸ್ಥಳವನ್ನು ಮಾಡಿಕೊಂಡು ಅಲ್ಲಿ ನಿಂತನು. ವಿಧಿಯಂತೆ ಭಿಕ್ಷದಿಂದ ಜೀವನವನ್ನು ನಡೆಸುತ್ತ ಮುಂದಣದಾರಿಯನ್ನು ದೇವರು ತೋರಿಸಲಿ ಎಂದು ಅಲ್ಲಿ ಧ್ಯಾನದಲ್ಲಿರುತ್ತಿದ್ದನು.

ಸಾರಿಪುತ್ರನ ಹೆಸರು ಆ ಕಡೆಯೆಲ್ಲ ಪ್ರಸಿದ್ಧವಾಯಿತು. ಬೌದ್ಧಮತವು ಬೇರೊಂದು ಮತವಲ್ಲವೆಂದೂ, ವೈದಿಕಧರ್ಮವನ್ನೇ ಎಲ್ಲರ ಮೋಕ್ಷಕ್ಕೆಂದು ಸುಲಭವಾಗಿ ಮಾಡಲು ಭಗವಂತನು ಬೌದ್ಧಾವತಾರವನ್ನು ಮಾಡಿದನು ಎಂದೂ ಅಲ್ಲೆಲ್ಲ ಸಾರಿ ಸಾರಿಪುತ್ರನು ಜನರಿಗೆ ಬೌದ್ಧಮತದಲ್ಲಿ ಪ್ರೀತಿ ಉಂಟಾಗುವಂತೆ ಮಾಡಿದನು. ಅವನು ಊರಿಗೆ ಬಂದ ಕೆಲವು ಕಾಲದಲ್ಲಿ ಬೌದ್ಧಸನ್ಯಾಸಿಗಳು ಇನ್ನೂ ಕೆಲವರು ಅಲ್ಲಿ ಬಂದು ಸೇರಿದರು. ಅಷ್ಟರಲ್ಲೆ ಕುಮುದಿನಿಯ ಯಜಮಾನನು ಅಲ್ಲಿಗೆ ಬಂದು ಆ ಮನೆಯಲ್ಲಿ ನಿಂತನು. ಅವನೂ ಕುಮುದಿನಿಯೂ ಮತ್ತೆ ಮತ್ತೆ ಸಾರಿಪುತ್ರನ ಮಂಟಪದ ಬಳಿಯೇ ಇರುತ್ತ ಅವನ ಉಪಚಾರ ಮಾಡುತ್ತಿದ್ದರು. ಒಂದೆರಡು ವರುಷವಾದನಂತರ ವೇದವತಿಯು ನಿಮ್ಮ ಧರ್ಮದಲ್ಲಿ ನಾನೂ ಭಿಕ್ಷುಣಿಯಾಗಬಹುದಾದರೆ ನನಗೂ ಅದೇ ಸ್ಥಿತಿಯನ್ನು ಕೊಡಿ ನಿಮ್ಮ ಜತೆಗೆ ಇರುತ್ತೇನೆ ಎಂದಳು. ಸಾರಿಪುತ್ರನು ಅವಳನ್ನು ಭಿಕ್ಷುಣಿಯನ್ನಾಗಿ ಮಾಡಿದನು. ಆ ಮೇಲೆ ಅಲ್ಲಿ ಇನ್ನೂ ಕೆಲವರು ಭಿಕ್ಷುಣಿಯರು ಬಂದು ಸೇರಿದರು. ಅಷ್ಟರಲ್ಲಿ ಆನಂದನು ಗೋದಾವರೀತೀರದ ಪುಳಿಂದ ರಾಜನಿಂದ ಆಹ್ವಾನವನ್ನು ಪಡೆದು ಅಜಾಂತದ ಬಳಿ ಐನೂರು ಜನಶ್ರಮಣರಿಗಾಗಿ ಒಂದು ವಿಹಾರವನ್ನು ಏರ್ಪಡಿಸುವ ಯೋಚನೆಯನ್ನು ಮಾಡಿ ಈ ಕೆಲಸಕ್ಕೆ ನೀನು ಬರಬೇಕೆಂದು ಸಾರಿಪುತ್ರನಿಗೆ ಹೇಳಿಕಳುಹಿಸಿದನು, ಸಾರಿಪುತ್ರನು ಊರಜನರಿಗೆಲ್ಲ ಹೇಳಿ ಮಗಳನ್ನೂ ಅಳಿಯನನ್ನೂ ಮೊಮ್ಮಗಳನ್ನೂ ಬಿಟ್ಟು ಭಿಕ್ಷುಣಿಯಾದ ವೇದವತಿಯೊಡನೆಯೂ ತನ್ನ ಇತರ ಸಹವಾಸಿಗಳಾದ ಶ್ರಮಣರೊಡನೆಯೂ ಕರ್ಣಾಟರಾಷ್ಟ್ರದ ಮುಖವಾಗಿ ತೆರಳಿದನು.

# ವಿಲಾಯತಿಯ ಪ್ರವಾಸ

ಲೇ:—ಶ್ರೀ. ಅಸುಂಡಿ ರಂಗರಾಯರು ಬಿ. ಎ., ಎಂ. ಎಸ್. ಸಿ. ಲಂಡನ್

( ೭ನೆಯ ಸಂಚಿಕೆಯಿಂದ ಮುಂದುವರಿದುದು. )

ಇನ್ನೊಂದು ಸಂಗತಿ ಈ ಮೊದಲೇ ಹೇಳತಕ್ಕುದು ಉಳಿದಿರುವುದು. ನಾವು ಪೂರ್ವದಿಂದ ಪಶ್ಚಿಮಕ್ಕೆ ಹೊರಟಿರುವೆವಷ್ಟೆ. ಇದರಿಂದ ಸೂರ್ಯನು ದಿನಾಲು ಹೆಚ್ಚೆಚ್ಚು ತಡಮಾಡಿ ಹುಟ್ಟಹತ್ತುವನು. ನಾವು ಅಡ್ಡದಾಟುವ ಪ್ರತಿಯೊಂದು ರೇಖಾಂಶಕ್ಕೆ ಆತನು ೪ ಮಿನೀಟಿನಂತೆ ತಡಮಾಡಿ ಮೂಡುವನು. ಹೀಗಾಗಿ ನಾವು ಏಳೆಂಟು ರೇಖಾಂಶಗಳನ್ನು ದಾಟಿದೆವೆಂದರೆ ಹಡಗಿನ ಕಪ್ತಾನನು ಗಡಿಯಾರಗಳನ್ನು ಅರ್ಧಗಂಟೆ ಹಿಂದೆ ಚೆಲ್ಲುತ್ತಿದ್ದನು. ಹೀಗೆ ಬದಲಿಸುತ್ತ ಲಂಡನ್ ಮುಟ್ಟುವಷ್ಟರಲ್ಲಿ ನಾವು ನಮ್ಮ ಗಡಿಯಾರಗಳನ್ನು ೫॥ ತಾಸು ಹಿಂದೆ ಹಾಕಿದ್ದೆವು. ಅಂದರೆ ಹಿಂದುಸ್ಥಾನದ ಗಡಿಯಾರಕ್ಕೂ ಇಲ್ಲಿಯ ಗಡಿಯಾರಕ್ಕೂ ಇಷ್ಟು ತಾಸಿನ ಅಂತರವಿರುವುದು. ಅಲ್ಲಿ ನೀವು ಬೆಳಿಗ್ಗೆ ಏಳುವ ಸಮಯವು ನಮಗೆ ಇಲ್ಲಿ ಭರತಿ ನಿದ್ದೆಯ ಸಮಯ. ಹಿಂದುಸ್ಥಾನದಲ್ಲಿ ಪ್ರತಿರಾತ್ರಿಯೂ ರೂಢಿಯಿಂದ ೧೦ ಗಂಟೆಗೆ ಮಲಗುವ ಅಭ್ಯಾಸವಿದ್ದವರಿಗೆ ಇಲ್ಲಿಯ ಸಂಜೆ ೪।೫ ಗಂಟೆಗೆ ನಿದ್ದೆಯ ಆಕಳಿಕೆಗಳು ಎಷ್ಟೋ ದಿವಸ ಬರಹತ್ತುವವು.

ಕಾಲುವೆ ದಾಟಲಿಕ್ಕೆ ನಮಗೆ ೧೧ ತಾಸು ಹಿಡಿಯಿತು. ಸಂಜೆಯ ಏಳು ಗಂಟೆಗೆ ಪೋರ್ಟಸೈದ ಬಂದರವು ಬಂದಿತು. ಮುಂದೆ ಒಂದೆರಡು ತಾಸುಗಳಲ್ಲಿಯೇ ಬೇಕಿದ್ದವರಿಗೆ ಹಡಗು ಇಳಿದು ಊರಲ್ಲಿ ತಿರುಗಾಡಲಿಕ್ಕೆ ಏರ್ಪಾಡು ಮಾಡಲ್ಪಟ್ಟಿತು. ಇಲ್ಲಿ ಹಡಗು ಕಲ್ಲಿದ್ದಲಿ ಹೇರಿಕೊಳ್ಳುವುದಿದ್ದುದರಿಂದ ಮೂರು ನಾಲ್ಕು ತಾಸು ನಿಲ್ಲುತ್ತಿತ್ತು. ಆದರೆ ಈ ಬಂದರದಲ್ಲಿ ಕೆಟ್ಟ ಚಾಳಿಯ ಜನರು ಇರುವುದರಿಂದ ಊರಲ್ಲಿ ಹೋಗದಿರುವುದೇ ಒಳಿತೆಂದು ಮುಂಬೈಯಲ್ಲಿ ನಮಗೆ ಕೆಲವರು ಹೇಳಿದ್ದರು. ಆದರೂ ನಾವು ಏಳೆಂಟು ಜನರು ಒಂದಾಗಿ ಊರಲ್ಲಿ ಹೊರಟೆವು. ಅಂಗಡಿ ಸಾಲುಗಳು ಬೀದಿಯ ಇಬ್ಬದಿಗೂ ಚೆಂದವಾಗಿ ನಿರ್ಮಿಸಲ್ಪಟ್ಟಿದ್ದು ಮುಂಬೈಯ ಕಿಲ್ಲೆಯೊಳಗಿನ ಅಂಗಡಿ ಸಾಲುಗಳನ್ನು ಬಹುಮಟ್ಟಿಗೆ ಹೋಲುತ್ತವೆ. ಬೀದಿಗುಂಟ ಚಿತ್ರಪಟಗಳನ್ನು ಮಾರುವ ಜನರು ಅನೇಕರು ಭೆಟ್ಟಿಯಾಗುವರು. ಇವರೇ ಕೆಟ್ಟ ಜನರೆಂದು ನಮಗೆ ತಟ್ಟನೆ ಹೊಳೆಯಿತು. ಇವರು ಜನರ ಮನಸ್ಸನ್ನು ಕಂಡುಹಿಡಿದು ಅವರಿಗೆ ಬೇಕಿದ್ದರೆ ಅವರನ್ನು ವೇಶ್ಯೆಯರ ಮನೆಗೆ ಒಯ್ಯುವರು. ಆದರೆ ಈ ಬಗೆಯ ಸ್ಥಿತಿ ಎಲ್ಲ ಬಂದರಗಳಲ್ಲಿಯೂ ಇದ್ದೇ ಇರುವುದು. ಮುಂಬೈಯಲ್ಲಿ ಇಂತಹ ಜನರು ಎಷ್ಟಿಲ್ಲ? ಕೋಲಂಬೋ, ನೇಪಲ್ಸ, ಜಿಬ್ರಾಲ್ಟರ ಈ ಬಂದರಗಳಲ್ಲಿಯೂ ಇಂತಹ ಜನರನ್ನು ನಾವು ಹಲವರನ್ನು ಕಂಡೆವು. ಆದುದರಿಂದ ಪೋರ್ಟಸೈದ ಬಂದರವೊಂದನ್ನೇ ಅಲ್ಲಗಳೆವುದು ಉಚಿತವಲ್ಲವೆಂದು ನಮಗೆ ಅನಿಸಿತು. ರಾತ್ರಿಯ ಸಮಯವಿದ್ದುದರಿಂದ ದೀಪವಿಲ್ಲದ ಚಿಕ್ಕ ಬೀದಿಗಳಲ್ಲಿ ಹೋಗಲಿಕ್ಕೆ ನಾವು ಧೈರ್ಯಮಾಡಲಿಲ್ಲವಾದರೂ ಊರಲ್ಲಿಯ ದೊಡ್ಡ ದೊಡ್ಡ ಬೀದಿಗಳೆಲ್ಲವನ್ನೂ ತಿರುಗಿದೆವು. ಊರು ಹೇಳಿಕೊಳ್ಳುವಂತಹದಿಲ್ಲವಾದರೂ ನೆಲದಮೇಲೆ ಕಾಲಿಡುವುದೇ ವಿನೋದವಾಗಿ ನಮಗೆ ಇದೇ ಚೆಂದವಾಗಿ ತೋರಿತು.

ಪೋರ್ಟಸೈದ ಬಂದರವನ್ನು ದಾಟಿ ಭೂಮಧ್ಯಸಮುದ್ರವನ್ನು ಹಡಗು ಸೇರಲು ಹವೆಯಲ್ಲಿಯ ಉಷ್ಣತೆ ಹಿಂಗಹತ್ತಿತು. ಈ ಸಮುದ್ರವೂ ಬಹಳ ಶಾಂತವಿದ್ದಿತು. ನೀರು ಹಿಂದೀ ಮಹಾಸಾಗರದಂತೆ ಘನನೀಲವಿದ್ದರೂ ಅಲ್ಲಿಯಂಥ ದೊಡ್ಡ ತೆರೆಗಳು ಇಲ್ಲಿ ಇರಲಿಲ್ಲ. ಹಾರಾಡುವ ಮೀನುಗಳು ವಿಪುಲವಾಗಿದ್ದವು. ಒಂದುದಿನ ಸಂಜೆಯ ಸಮಯದಲ್ಲಿ ನಾವು ಡೆಕ್ಕಿನಮೇಲೆ ಕುಳಿತಿರಲು ನಮ್ಮೆದುರಿಗೆ ಧೂಮಕೇತುವಿನಂತೆ ಒಂದು ಜ್ವಾಲೆಯ ಬಾಲವು ಕಾಣಹತ್ತಿತು. ಇದೇನೆಂದು ಹೆಚ್ಚು ಕುತೂಹಲದಿಂದ ನೋಡಲಾಗಿ ಅದೊಂದು ಜ್ವಾಲಾಮುಖಿ ತನ್ನೊಳಗಿನ ಬೆಂಕಿಯನ್ನು ಹೊರಗೆ ಬೀರುತ್ತಿತ್ತು. ಇದೇ ಸ್ಟ್ರಾಂಬೋಲಿಯೆಂಬ ಜಾಗೃತ ಜ್ವಾಲಾಮುಖಿಯು. ಇದು ಸಮುದ್ರ ಸಪಾಟಿನಿಂದ ಮೂರು ಸಾವಿರ ಅಡಿ ಎತ್ತರವಿದ್ದು ಮೂರು ನಾಲ್ಕು ತಿಂಗಳಿಗೊಮ್ಮೆ ಬೆಂಕಿಕಾರಹತ್ತುತ್ತದೆ. ರಾತ್ರಿ ೧೦ ಗಂಟೆಯವರೆಗೆ ಈ ನೋಟವು ನಮ್ಮಿಂದ ಮರೆಯಾಗಲಿಲ್ಲ. ಮಾರನೆಯದಿನ ಬೆಳಿಗ್ಗೆ ನೇಪಲ್ಸ ಬಂದರವು ಬಂದಿತು. ಜಗತ್ತಿನಲ್ಲಿ ಪ್ರಸಿದ್ಧವಾದ ವೆಸೂವಿಯಸ್

ಜ್ವಾಲಾಮುಖಿಯೂ ಗ್ರೀಕರ ಪೂರ್ವವೈಭವದ ವಿಜಯನಗರವಾದ ಪಾಂಪಿ ಎಂಬ ಹಾಳು ಪಟ್ಟಣವೂ ಇಲ್ಲಿಗೆ ಸಮೀಪವಾಗಿದ್ದು ಒಂದು ದಿವಸ ಅವಕಾಶವಿದ್ದಿದ್ದರೆ ಇವುಗಳನ್ನು ನೋಡಬಹುದಾಗಿತ್ತು. ಆದರೆ ನಮ್ಮ ಹಡಗು ಎರಡೇ ತಾಸು ಬಂದರದಲ್ಲಿರುವುದೆಂದು ತಿಳಿದುದರಿಂದ ನೇಪಲ್ಸ ಪಟ್ಟಣವನ್ನು ಮಾತ್ರ ನೋಡುವುದು ಸಾಧ್ಯವೆಂದು ಕಂಡು ಊರು ನೋಡುವುದಕ್ಕೆ ಕೆಳಗಿಳಿದು ಹೋದೆವು.

ನೇಪಲ್ಸ ದಕ್ಷಿಣ ಇತಲಿಯ ಮುಖ್ಯ ಪಟ್ಟಣವು. ಊರು ಬಲು ಚೆಂದವಾಗಿ ತೋರುತ್ತದೆ. ಇಲ್ಲಿಯ ಜನರಲ್ಲಿ "ನೇಪಲ್ಸ ನೋಡಿ ಸಾಯಿ" ಎಂಬುದು ಗಾದೆಯಾಗಿರುವುದು. ಬೀದಿಗಳೆಲ್ಲವೂ ಕಲ್ಲಿನಿಂದ ಹೊಂದಿಸಲ್ಪಟ್ಟ ಕಾರಣ ಕುದುರೆಯ ಗಾಡಿಗಳು ಹೋಗುವಾಗ ಕಿವಿ ಗಡಚಿಕ್ಕುವಷ್ಟು ಸಪ್ಪಳಾಗುವುದು. ಇಲ್ಲಿಯ ಜನರ ಮುಖಮುದ್ರೆ ನಮ್ಮಂತೆ ಇದ್ದು ಬಣ್ಣವು ಬೆಳ್ಳಗಿರುವುದರಿಂದ ಅವರು ಹೆಚ್ಚು ರೂಪವಂತರಾಗಿ ಕಾಣುತ್ತಾರೆ. ಸಂಗೀತದಲ್ಲಿಯೂ ಚಿತ್ರಕಲೆಯಲ್ಲಿಯೂ ಇವರು ಪೂರ್ವದಿಂದಲೂ ಪ್ರಸಿದ್ಧರು. ಪೂರ್ವವೈಭವದ ಹೆಗುರುತುಗಳಿಂದ ಹಾಳು ಅರಮನೆಗಳೂ ಮೂಲೆಗುಂಪಾದ ಕೋಟೆಗಳೂ ಇನ್ನೂ ಅಲ್ಲಲ್ಲಿ ದೃಗ್ಗೋಚರವಾಗುತ್ತವೆ. ಜಲಚರ ಪ್ರಾಣಿಗಳನ್ನು ಅವುಗಳ ಸ್ವಾಭಾವಿಕ ಪರಿಸ್ಥಿತಿಯಲ್ಲಿಯೇ ಇಡಲ್ಪಟ್ಟ ಜಲಗೃಹವು ( Aquarium ) ಇಲ್ಲಿ ಬಹಳ ಸೊಗಸಾಗಿರುವುದು. ಇದನ್ನು ನೋಡಿದರೆ ಸಮುದ್ರದ ಬುಡದಲ್ಲಿ ಈ ಪ್ರಾಣಿಗಳು ಹೇಗೆ ಜೀವಿಸುತ್ತಿರಬಹುದೆಂಬ ಕಲ್ಪನೆ ಸ್ಪಷ್ಟವಾಗುತ್ತದೆ. ಇಲ್ಲಿ ದ್ರಾಕ್ಷೆಗಳು ವಿಪುಲ. ಭೂಮಧ್ಯಸಮುದ್ರದ ದಂಡೆಯ ಹವೆ ದ್ರಾಕ್ಷೆಗೆ ಅನುಕೂಲವಿದ್ದುದರಿಂದ ಸ್ಪೇನ, ಪೋರ್ತುಗಾಲ, ಮುಂತಾದ ದಂಡೆಯ ದೇಶಗಳು ದ್ರಾಕ್ಷಿ ಬೆಳೆವುದರಲ್ಲಿಯೂ ಅದರಿಂದ ಮದಿರೆ ಮಾಡುವುದರಲ್ಲಿಯೂ ಪ್ರಸಿದ್ಧವಿರುವುವು. ನಾವು ಸೂರ್ಯನನ್ನು ಚಂದಪ್ಪನೆಂದು ತಪ್ಪುತಿಳಿದುಕೊಂಡದ್ದು ಇಲ್ಲಿಯೇ ಮೊದಲು.

ಹೇಮಂತ ಶೈಶಿರದ ಮಾಗಿ ಮಡಲಿಡೆ ತರಣಿ ।
ಸೋಮನಂತಿರೆ ಬಿಸಿಲ್ಬೆಳದಿಂಗಳಂತೆಸೆಯೆ ॥

ಎಂದು ಕವಿಯ ವರ್ಣನೆ ತಟ್ಟನೆ ನನ್ನ ಬಾಯಿಂದ ಹೊರಟಿತು. ಹಿಂದುಸ್ತಾನದಲ್ಲಿ ಬೀದಿಗುಂಟ ಗಾಡಿಗಳನ್ನು ಹೊಡೆಯುವಾಗ ಬೀದಿಯ ಎಡಬದಿಯಿಂದ ಹೊಡೆಯುತ್ತಾರಷ್ಟೆ. ಇದೇ ಪರಿಪಾಠವು ಬ್ರಿಟಿಶ ಸಾಮ್ರಾಜ್ಯದಲ್ಲಿ ಎಲ್ಲಕಡೆಗೂ ಇರುವುದು. ಆದರೆ ಯುರೋಪ್ ಖಂಡದಲ್ಲಿ ಇವರ ವಿರುದ್ಧ ಪರಿಪಾಠವಿರುವುದು. ನೇಪಲ್ಸಿನಲ್ಲಿ ಬೀದಿಯ ಬಲಬದಿಯಿಂದ ಗಾಡಿಹೊಡೆವುದನ್ನು ನೋಡಿ ನನಗೆ ಆಶ್ಚರ್ಯವಾಯಿತು. ಗಾಡಿಹೊಡೆವವನು ಇದೇ ಪದ್ಧತಿ ಸರ್ವತ್ರವೂ ಇರುವುದೆಂತಲೂ ಬ್ರಿಟಿಶ ಜನರು ಮಾತ್ರ ಇದಕ್ಕೆ ವಿರುದ್ಧವಾಗಿರುವರೆಂತಲೂ ಹೇಳಿದನು.

ಬೆಳಗಿನ ಹತ್ತುಗಂಟೆಗೆ ನೇಪಲ್ಸ ಬಿಟ್ಟು ಮಾರನೆಯದಿನ ಮಧ್ಯಾಹ್ನಕ್ಕೆ ನಮ್ಮ ಹಡಗು ಟುಲೋನೆಂಬ ಫ್ರೆಂಚ ಬಂದರವನ್ನು ತಲುಪಿತು. ಪಿ. ಓ ಕಂಪನಿಯ ಹಡಗುಗಳಿಗೆ ಮಾರ್ಸೇಲವಿದ್ದಂತೆ ಈ ಕಂಪನಿಯ ಹಡಗುಗಳಿಗೆ ಟುಲೋನು. ಎಷ್ಟೋ ಜನರು ಇಲ್ಲಿ ಇಳಿದು ಫ್ರಾನ್ಸ್ ದೇಶವನ್ನು ರೈಲಿನಿಂದ ಹಾಯ್ದು ಲಂಡನ್ ಶಹರಕ್ಕೆ ಹೋಗುತ್ತಾರೆ. ಇದರಿಂದ ಮೂರು ನಾಲ್ಕು ದಿವಸಗಳು ಉಳಿವುವಲ್ಲದೆ ಬಿಸ್ಕೆ ಉಪಸಾಗರವು ಪ್ರಕ್ಷುಬ್ಧತೆಯಲ್ಲಿ ಹೆಸರುಪಡೆದುದರಿಂದ ಅದರಲ್ಲಿಯ ಪ್ರವಾಸವನ್ನು ತಪ್ಪಿಸಲಿಕ್ಕೆ ಬರುತ್ತದೆ. ನಮಗೆ ಸಮುದ್ರಬೇನೆ ಏನೂ ಆಗದಿದ್ದುದರಿಂದ ಬಿಸ್ಕೆ ಉಪಸಾಗರವನ್ನು ದಾಟಿಯೇ ನೋಡಬೇಕೆಂಬ ಹೆಮ್ಮೆಯಿತ್ತು. ಇದಲ್ಲದೆ ಟುಲೋನಿನಿಂದ ಹೋಗುವುದೆಂದರೆ ಮತ್ತೆ ೫ ಪೌಂಡಿನ ಹೆಚ್ಚಿನ ವೆಚ್ಚ. ಇದೆಲ್ಲವನ್ನೂ ವಿಚಾರಿಸಿ ಸಮುದ್ರದಿಂದಲೇ ಲಂಡನ್ ಪಟ್ಟಣವನ್ನು ಮುಟ್ಟುವುದನ್ನು ನಿಶ್ಚೈಸಿದೆವು.

ಟುಲೋನ್ ಬಂದರವು ಬಹಳ ಸುಂದರವಿರುತ್ತದೆ. ಇದು ಫ್ರೆಂಚರ ಹಡಗುಪಡೆಯ ಮುಖ್ಯವಾದ ಬಂದರಗಳಲ್ಲಿ ಒಂದು ಇಲ್ಲಿಂದ ವಿಲಾಯತಿಯ ಟಪಾಲವನ್ನು ರೈಲು ಮಾರ್ಗವಾಗಿ ಕಳಿಸುವರು. ನಮ್ಮ ಹಡಗು ಮೂರು ನಾಲ್ಕು ತಾಸು ಇಲ್ಲಿ ಆ ಸಲುವಾಗಿ ನಿಂತಿತು. ಆಗ ನಾವು ಎಷ್ಟೋ ಯುದ್ಧದ ಹಡಗುಗಳನ್ನು ನೋಡಿದೆವು. ಮರುದಿನ ಬೆಳಿಗ್ಗೆ ಹಡಗು ಲಿಸ್ಬನ್ ಎಂಬ ಪೋರ್ತುಗಾಲ್ ದೇಶದ ಮುಖ್ಯ ಪಟ್ಟಣದ ಹತ್ತರ ಹೋಗುತ್ತಿತ್ತು. ದಂಡೆಗುಂಟ ಸಣ್ಣ ಸಣ್ಣ ಹಳ್ಳಿಗಳೂ ದ್ರಾಕ್ಷೆಯ ತೋಟಗಳೂ ಬಹಳ ರಮಣೀಯವಾಗಿ ಕಾಣುತ್ತಿದ್ದುವು. ಮಧ್ಯಾಹ್ನಕ್ಕೆ ಜಿಬ್ರಾಲ್ಟರು ಬಂದಿತು. ಹಿಂದೆ ಹೇಳಿದಂತೆ ಇದು ಸ್ಪೇನದಲ್ಲಿದ್ದರೂ ಇಲ್ಲಿಯ ಬಂದರವು ಇಂಗ್ರೇಜಿಯರ ಕೈವಶವಾಗಿರುವುದು. ಸಮುದ್ರದ ದಂಡೆಗಿರುವ ಗುಡ್ಡಗಳನ್ನೂ ಅವುಗಳಲ್ಲಿ ಕಟ್ಟಿದ ಮನೆಗಳನ್ನೂ ನೋಡಿದರೆ ಇದು ಮಾರ್ಮುಗೋವೆಯಂತೆ ತೋರು

ತ್ತಿದೆ. ಹಡಗು ಇಲ್ಲಿ ನಾಲ್ಕಾರು ತಾಸು ನಿಲ್ಲುವುದಿದ್ದುದರಿಂದಲೂ ಪುನಃ ನಾವು ಸ್ಪೇನ್‌ದೇಶದ ಮೇಲೆ ಹಾಯುವೆವೋ ಇಲ್ಲವೋ ಎಂಬ ಸಂಶಯವಿದ್ದುದರಿಂದಲೂ ಊರು ನೋಡುವದಕ್ಕೆ ನಾವು ಕೆಳಗಿಳಿದೆವು. ಸ್ಪೇನೀ ಜನರು ದಪ್ಪಾಗಿರುವುದರಿಂದ ಇವರಿಗೆ ಯುರೋಪಿನ್ ಪಠಾಣರೆಂದು ಕರೆದರೆ ತಪ್ಪಾಗದು. ಬೀದಿಗಳಲ್ಲಿ ಗಂಡುಸರೇ ಹೆಚ್ಚು. ಪೋಷಾಕಿನಿಂದ ಎಣಿಸಿದರೆ ಇಲ್ಲಿಯ ಜನರು ಅಷ್ಟೊಂದು ಶ್ರೀಮಂತರೆಂದು ಕಾಣುವುದಿಲ್ಲ. ಇಲ್ಲಿಯೂ ದ್ರಾಕ್ಷೆ, ಸೇಬೂ, ಕಿತ್ತಳೆ ಹಣ್ಣುಗಳು ವಿಪುಲ.

ಜಿಬ್ರಾಲ್ಟರವನ್ನು ರಾತ್ರಿ ಬಿಟ್ಟು ಬೆಳಗಾಗುವುದರೊಳಗೆ ನಾವು ಬಿಸ್ಕೆ ಉಪಸಾಗರದಲ್ಲಿ ಹೊಯ್ದಾಡುತ್ತಿದ್ದೆವು. ಚಳಿ ಮೆಲ್ಲಗೆ ಪ್ರಾರಂಭವಾಗಿದ್ದುದರಿಂದ ನಾವು ಹತ್ತಿಯ ಬಟ್ಟೆಗಳನ್ನು ಬಿಟ್ಟು ಉಣ್ಣೆಯ ವಸ್ತ್ರಗಳನ್ನು ಹಾಕಹತ್ತಿದೆವು. ಉಪಸಾಗರವು ಪ್ರಕ್ಷುಬ್ಧವಿದ್ದು ಹಡಗು ಒಂದೇ ಸಮನೆ ಜೋಕಾಲಿ ಆಡಹತ್ತಿತ್ತು. ಜನರು ಬಹುತರವಾಗಿ ಎಲ್ಲರೂ ಹಾಸಿಗೆ ಹಿಡಿದರು. ನಮಗೆ ಈ ಉಪಸಾಗರವೂ ಏನೂ ತೊಂದರೆ ಕೊಡಲಿಲ್ಲ. ನಾವು ಎಂದಿನಂತೆ ನಮ್ಮ ಆಡುವ, ನೋಡುವ, ಉಣ್ಣುವ ವ್ಯವಸಾಯಗಳನ್ನು ಚಕ್ಕಂದವಾಗಿ ನಡೆಸಿದ್ದೆವು. ಮುಂದೆ ಎರಡು ದಿವಸಕ್ಕೆ ಪೋರ್ಟ್ಸಮಥ ಬಂದರವು ಬಂದಿತು. ಆಗ ಸಮುದ್ರವು ಶಾಂತವಿದ್ದುದರಿಂದ ಮತ್ತೊಮ್ಮೆ ಎಲ್ಲರಿಗೂ ಕಳೆಯೇರಿತು. ಇಲ್ಲಿಯೂ ಕೆಲವು ಜನರು ಇಳಿದು ರೈಲುಮಾರ್ಗವಾಗಿ ತಂತಮ್ಮ ಊರುಗಳಿಗೆ ಹೋದರು. ಮರುದಿನ ಬೆಳಿಗ್ಗೆ ಹಡಗು ತೇಮ್ಸ ನದಿಯಲ್ಲಿ ಹೋಗಹತ್ತಿತು. ಹಡಗಿನಲ್ಲಿಯ ಇಂಗ್ರೇಜಿ ಜನರು ತಮ್ಮ ತಾಯ್ನಾಡು ಬಂತೆಂಬ ರಭಸದಲ್ಲಿ ಮನಸ್ಸಿಗೆ ಬಂದಂತೆ ಕುಣಿಕುಣಿದು ಹಾಡತೊಡಗಿದರು. ಬಳಿಕ ಸಪ್ಟಂಬರ ೨೯ನೆಯ ತಾರೀಖಿನ ೧೧ ಘಂಟೆಯ ಸುಮಾರಕ್ಕೆ ತಿಲ್ಬರಿ ಎಂಬ ಲಂಡನ್ ಶಹರದ ಬಂದರವು ಬಂದಿತು. ನಮಗೆ ಕಡೆಯ ಊಟವನ್ನು ನೀಡಿ ಹಡಗಿನವರು ಕೆಳಗಿಳಿಯಲು ಅಪ್ಪಣೆಕೊಟ್ಟರು. ಆಮೇಲೆ ಕಸ್ಟಮ್ ತಪಾಸಣೆಯನ್ನು ಮುಗಿಸಿಕೊಂಡು ರೈಲುಹತ್ತಿ ಒಂದು ತಾಸಿನೊಳಗೆ ಲಂಡನ್ ಶಹರಕ್ಕೆ ಹೋದೆವು.

ಇಲ್ಲಿಗೆ ಸದ್ಯದ ಪ್ರವಾಸವು ಮುಗಿದಂತಾಯಿತು. ಇಲ್ಲಿಯ ನಡೆನುಡಿಗಳು, ಪರಿಸ್ಥಿತಿ, ಜನರು, ಮುಂತಾದುವುಗಳ ಬಗ್ಗೆ ವಿಸ್ತಾರವಾಗಿ ಬರೆವುದೆಂದರೆ ಈ ಲೇಖನದ ಮರ್ಯಾದೆಯನ್ನು ಮೀರಿದಂತಾಗುವುದು. ಆದುದರಿಂದ ಉಳಿದ ಶಹರಗಳನ್ನೂ ಜನರನ್ನೂ ವರ್ಣಿಸಿದಂತೆ ಇಲ್ಲಿಗೆ ಬಂದ ಕೂಡಲೆ ಇಲ್ಲಿಯ ಜನರ ಬಗ್ಗೆ ನನಗೆ ಹೊಳೆದ ಅಭಿಪ್ರಾಯವನ್ನು ಇಲ್ಲಿ ಸೇರಿಸಿ ಈ ಲೇಖವನ್ನು ಮುಗಿಸುತ್ತೇನೆ.

ಇಲ್ಲಿಗೆ ಬಂದ ಪ್ರತಿಯೊಬ್ಬನಿಗೂ ಬೀದಿಯಲ್ಲಿ ಅನುಭವಕ್ಕೆ ಬರುವ ಸಂಗತಿಗಳೆಂದರೆ ಎರಡು. ಒಂದು ಗಂಡುಸರಿಗಿಂತ ಹೆಂಗುಸರೇ ಹೆಚ್ಚು ಬೀದಿಯಲ್ಲಿ ಕಾಣುವರು. ಎರಡನೆಯದು ಇಲ್ಲಿಯ ಜನರ ಸೌಜನ್ಯ ಮತ್ತು ವಿಶ್ವಾಸ. ಮಾತಿನಲ್ಲಿ ಇವರಷ್ಟು ಮೆತ್ತಗೆ ಮತ್ಯಾವ ಜನಾಂಗದವರೂ ಇರಲಿಕ್ಕಿಲ್ಲ. ಇಲ್ಲಿಯ ಹೆಂಗುಸರಲ್ಲಿ ವಿನಯಕ್ಕಿಂತ ಸೌಜನ್ಯವೇ ಹೆಚ್ಚು; ಚೆಲುವಿಕೆಗಿಂತ ವೈಯಾರವೇ ಹೆಚ್ಚು. ಮುಪ್ಪಾದ ಹೆಂಗುಸಿಗೆ ಆದರವು ಕಡಿಮೇ. ಮುದುಕ ವಿಧವೆಯ ಅವಸ್ಥೆ ಶೋಚನೀಯವಾದುದು. ಅವಳ ಕೈಯಲ್ಲಿ ಗಂಟಿದ್ದರೆ ಅವಳು ತನ್ನಷ್ಟಕ್ಕೆ ತಾನು ಸುಖವಾಗಿರಬಹುದು. ಆದರೆ ದೊಡ್ಡಪ್ಪನು ಅವಳಲ್ಲಿರದಿದ್ದರೆ ಅವಳನ್ನು ಯಾರೂ ಮಾತಾಡಿಸುವುದಿಲ್ಲ. ಬೀದಿಯಲ್ಲಿ ಕಡ್ಡಿಪೆಟ್ಟಿಗೆ, ಹೂವು ಹಿಡಿದುಕೊಂಡು ಮಾರುವ ನೆವದಿಂದ ತಿರಿದುಕೊಳ್ಳುವುದಕ್ಕೆ ನಿಂತ ಇಂತಹ ಎಷ್ಟೋ ಮುದುಕರನ್ನು ಈ ಊರಲ್ಲಿ ಕಾಣಬಹುದು.

---

# ಚಿತ್ರದುರ್ಗದ ಇತಿಹಾಸ

.........................

ಲೇಖಕ:--- ಚಿತ್ರದುರ್ಗದ ಶ್ರೀ. ಹುಲ್ಲೂರ ಶ್ರೀನಿವಾಸ ಜೋಯಿಸ

ಚಿತ್ರದುರ್ಗವು ಬಹು ಪುರಾತನ ಪಟ್ಟಣವು. ಇದರ ಇತಿಹಾಸವು ಮನೋರಂಜಕವಾಗಿರುವುದು. ಅನೇಕ ವೇಳೆ ಮಹಿಮಾತಿಶಯವನ್ನು ಹೊಂದಿದ ರಾಜ್ಯದ ಅಥವಾ ಪಟ್ಟಣಗಳ ಇತಿಹಾಸದ ಮೂಲವನ್ನೂ ವೈಭವದ ಕಾರಣಗಳನ್ನೂ ಗೊತ್ತುಮಾಡುವುದು ಶ್ರಮಸಾಧ್ಯವಾಗುವುದು. ಇತರ ಪುರಾತನ ಪಟ್ಟಣಗಳಂತಲ್ಲದೆ, ಅನೇಕ ವಂಶದ ಸಾಮಂತರಾಜರುಗಳಿಗೂ, ಪಾಳೆಯಗಾರರಿಗೂ ಮುಖ್ಯಪಟ್ಟಣವಾಗಿದ್ದು, ಈ ಸ್ಥಳಗಳಲ್ಲಿರುವ ಪ್ರಾಚೀನ ಕಲ್ಲುಕಟ್ಟಡಗಳಿಂದಲೂ ಶಿಲಾಲಿಪಿಗಳಿಂದಲೂ ಮತ್ತು ಇತರ ಹೆಗ್ಗುರುತುಗಳಿಂದಲೂ ಈ ನಗರದ ಇತಿಹಾಸವನ್ನು ಗೊತ್ತುಮಾಡಲು ಅವಕಾಶವಾಗಿರುವುದು. ಮೇಲು ದುರ್ಗವು(ಚಿತ್ರದುರ್ಗದ ಬೆಟ್ಟಕ್ಕೆ ಮತ್ತೊಂದು ಹೆಸರು) ಮತ್ತೊಂದು ಎತ್ತರವಾದ ಗುಡ್ಡದ ಸಾಲಿನಿಂದ ಸುತ್ತಲ್ಪಟ್ಟಿರುವುದು. ಈ ಒಳಗಿನ ಗುಡ್ಡಕ್ಕೆ ಬಲವಾದ ಆರುಸುತ್ತಿನ ಕೋಟೆ ಕಟ್ಟಲ್ಪಟ್ಟಿರುವುದು. ಗುಡ್ಡವನ್ನೂ, ಆರುಸುತ್ತು ಕೋಟೆಯನ್ನೂ ಬಳಸಿಕೊಂಡು ಮತ್ತೊಂದು ಭದ್ರವಾದ ಕೋಟೆ ಇರುವುದು. ಹೊರಸುತ್ತಿನ ಗುಡ್ಡಗಳಲ್ಲಿ ಮರೆಯಾಗಿದ್ದು, ಕಣಿವೆಗಳನ್ನು ರಕ್ಷಿಸಿಕೊಂಡಿದ್ದಲ್ಲಿ ಬಲವಾದ ಶತ್ರುಗಳಿಗೂ ಕೂಡ ಕೋಟೆಯನ್ನು ಸ್ವಾಧೀನ ಮಾಡಿಕೊಳ್ಳಲು ಅಸಾಧ್ಯವಾಗುತ್ತದೆ. ಒಂದು ವೇಳೆ ಕಣಿವೆಗಳನ್ನು ದಾಟಿ ಕೋಟೆಯನ್ನು ಮುತ್ತಿಕೊಂಡಲ್ಲಿ ಶತ್ರುಗಳಿಗೆ ಹೊರಗಿನಿಂದ ಬರುವ ಸಹಾಯವನ್ನೂ, ಆಹಾರ ಸಾಮಗ್ರಿಗಳನ್ನೂ ತಡೆಮಾಡುವುದಕ್ಕೂ, ಕೋಟೆಯಲ್ಲಿರುವವರಿಗೆ ಹೊರಗಿನಿಂದ ಆಹಾರ ಸಾಮಗ್ರಿಯನ್ನು ಒದಗಿಸುವುದಕ್ಕೂ ಸ್ವಾಭಾವಿಕವಾದ ಅನುಕೂಲತೆಗಳಿರುವುವು. ಈ ನಗರವು ಉಚ್ಛ್ರದೆಸೆಯಲ್ಲಿದ್ದಾಗ ಅದು ಯಾವ ಯಾವ ರಾಜಮನೆತನಕ್ಕೆ ಆಶ್ರಯವಾಗಿತ್ತು, ಮತ್ತು ಕಾಲಚಕ್ರಕ್ಕೆ ಸಿಕ್ಕು ಯಾವ ಮಾರ್ಪಾಟಿಗೊಳಗಾಯಿತು ಮೊದಲಾದ ವಿಷಯಗಳು ಈ ಪ್ರಾಚೀನ ನಗರದ ಇತಿಹಾಸವನ್ನು ತಿಳಿದುಕೊಳ್ಳಲು ಪ್ರಯತ್ನಪಡುವವರಿಗೆ ಗೋಚರವಾಗುವುವು.

*　　*　　*　　*

**ಹೆಸರುಗಳು** — ಚಿತ್ರದುರ್ಗಕ್ಕೆ ಬೇರೆ ಬೇರೆ ಕಾಲಗಳಲ್ಲಿ ಬೇರೆ ಬೇರೆ ಹೆಸರುಗಳಿದ್ದುವು. ಚಿನ್ಮೂಲಾದ್ರಿ, ಹಿಡಿಂಬಪತ್ತನ, ಚಂದ್ರವಳ್ಳಿ ಸೂಳ್ಗಲ್ಲು ಚಿಮ್ಮನಗಿರಿ ಬೆಮ್ಮತ್ತನಕಲ್ಲು ಪಟ್ಟಣ, ಪೆರುಮಾಳೆಪುರ, ಬ್ರಹ್ಮಪುರಿಗಿರಿ, ಫರಕ್ಕಾಬಾದ್ ಎಂಬುವು ಮುಖ್ಯವಾದವುಗಳಾಗಿವೆ.

**ಚಿನ್ಮೂಲಾದ್ರಿ**— ಕೆಲವು ವಚನಗ್ರಂಥಗಳಲ್ಲಿಯೂ, ಕೋಲಾಟ ಪದಗಳು, ಲಾವಣಿಗಳು, ಭರಮಣ್ಣನಾಯ್ಕನ ಸಂಸಾರವಿಜಯ, ದಂಡಕ ಮೊದಲಾದವುಗಳಲ್ಲಿಯೂ, ಚಿತ್ರದುರ್ಗಕ್ಕೆ ಚಿನ್ಮೂಲಾದ್ರಿಯೆಂದು ಉಕ್ತವಾಗಿರುವುದು. ಚಿನ್ಮೂಲಾದ್ರಿ * ಎಂಬ ಹೆಸರು ಪುರಾಣಕಾಲದಿಂದಲೂ ಬಂದಿರಬಹುದು. ಚಿನ್ಮೂಲಾದ್ರಿ ಎಂದರೆ ಜ್ಞಾನಕ್ಕೆ ಆಶ್ರಯವಾದ ಬೆಟ್ಟ. ಅಂದರೆ ಜ್ಞಾನಿಗಳಾದ ಋಷಿಗಳೂ, ಸಾಧುಗಳೂ, ಈ ದುರ್ಗದಲ್ಲಿ ಆಶ್ರಮಗಳನ್ನು ಕಟ್ಟಿಕೊಂಡು ವಾಸಿಸುತ್ತ ಇದ್ದುದರಿಂದ ಈ ಹೆಸರು ಬಂದಿರಬಹುದು.

**ರಾಮಾಯಣದ ಕುರುಹು**— ಚಿತ್ರದುರ್ಗದ ಜಿಲ್ಲೆಯಲ್ಲಿ ರಾಮಾಯಣಕಾಲದ ಕುರುಹುಗಳು ಕಂಡು ಬಂದಿರುತ್ತವೆ. ನರ್ಮದಾನದಿಯಿಂದ ದಕ್ಷಿಣ ದಿಕ್ಕಿನಲ್ಲಿ ದಂಡಕಾರಣ್ಯವೆಂಬ ಮಹಾ ಅರಣ್ಯವಿತ್ತು. ಅದರ ಕರ್ನಾಟಕಭಾಗಕ್ಕೆ ಇದ್ದ ವನಕ್ಕೆ ಮಾತಂಗವನವೆಂದು ಹೆಸರು. ಈ ಅರಣ್ಯಗಳಲ್ಲಿ ರಾಕ್ಷಸರೂ, ವಾನರವರೂ ವಾಸವಾಗಿದ್ದರು. ಗುಹಾಸುರನು ಹರಿಹರವಿರುವ ಸ್ಥಳದಲ್ಲಿಯೂ ಹಿಡಿಂಬಾಸುರನು ಚಿತ್ರದುರ್ಗದ ಬಳಿಯಲ್ಲಿಯೂ, ಬಕಾಸುರನು ರಹಮಾನ್‌ಘಟ್ ವಿರುವ ಸ್ಥಳದಲ್ಲಿಯೂ, ಮಹಿಷಾಸುರನು ಚಾಮುಂಡಿಬೆಟ್ಟ

---

* ಈ ಗಿರಿಯ ಪ್ರದೇಶವು ಸಿದ್ಧಮಹಾಪುರುಷರ ಆಶ್ರಮವಾಗಿ ತಪಸ್ಸಿಗೆ ಯೋಗ್ಯವಾದ ಸಾಧನವಾದುದರಿಂದ ಚಿನ್ಮೂಲಾದ್ರಿ ಎಂದು ಕರೆಯುತ್ತಾರೆ. ( ಪುಟ ೧ (೩) ಚಿತ್ರದುರ್ಗದ ಪಾಳ್ಯಗಾರರ ಚರಿತ್ರೆ ಎಂ. ಬಿ. ಡಿ ಮದಕರಿ ನಾಯ್ಕರಿಂದ ವೃತ್ತಾಂತರತ್ನಾಕರ ತಾರೀಖು ೨೯ನೆಯ ಜುಲೈ೧೯೧೪)

ದಲ್ಲಿಯೂ ವಾಸವಾಗಿದ್ದರು. ಅಗಸ್ತ್ಯ, ಗೌತಮ, ವಿಭಾಂಡಕ ಮಾರ್ಕಾಂಡೇಯ, ದತ್ತಾತ್ರೇಯ, ಕಣ್ವ ಮೊದಲಾದ ಋಷಿಗಳ ಆಶ್ರಮಗಳು ಕರ್ಣಾಟಕದಲ್ಲಿದ್ದುವು. ಸಿತಾದೇವಿಯನ್ನು ರಾವಣನು ಕೊಂಡೊಯ್ಯಲು, ದುಷ್ಟನಿಗ್ರಹಮಾಡಿ ಅವಳನ್ನು ಬಿಡಿಸಿಕೊಂಡು ಬರಲು ಶ್ರೀರಾಮನಿಗೆ ಸಹಾಯ ಮಾಡಿದ ವಾನರರ ಮುಖ್ಯಪಟ್ಟಣವಾದ ಕಿಷ್ಕಿಂಧಾ ನಗರವು * ಚಿತ್ರದುರ್ಗ ಜಿಲ್ಲೆಯ ಉತ್ತರ ಮೇರೆಯಲ್ಲಿ ಅನತಿದೂರದಲ್ಲಿರುವ ಹಂಪೆಯಿಂದ ತಿಳಿದುಬರುವುದು. ಸೀತೆಯಿಂ ರಾವಣನೆಯೆ ಜಟಾಯು ಕಾದಿ ಸತ್ತಲ್ಲಿ ರಾಮಪ್ರತಿಷ್ಠೆಯಿಂಗೆಯ್ದಲ್ಲಿ ಎಂದು ಮುಂತಾಗಿ ಮೊಳಕಾಲ್ಮುರು ತಾಲ್ಲೂಕಿನಲ್ಲಿರುವ ಜಟ್ಟಿಂಗಿ ರಾಮೇಶ್ವರಬೆಟ್ಟದ ಮೇಲಿರುವ ಶಾ. ಶ. ಅಲಕ್ಷಿನೆಯ ಸಂವತ್ಸರದ (ಕ್ರಿ. ಶ. ೯೬೨) ಶಿಲಾಶಾಸನದಿಂದ ತಿಳಿಯಬರುವುದು.† ಇದೇ ಗುಡ್ಡದ ಸಮೀಪದಲ್ಲಿರುವ ಮತ್ತೊಂದು ಗುಡ್ಡದ ಮೇಲೆ ಜಟಾಯುವಿನ ದೇವಸ್ಥಾನವಿರುವುದು. ಈ ಕುರುಹುಗಳು ಶ್ರೀರಾಮನ ಪಾದಧೂಳಿಯಿಂದ ಕರ್ನಾಟಕದ ಈ ಭಾಗವು ಪವಿತ್ರವಾಗಿರುವುದನ್ನು ವ್ಯಕ್ತಗೊಳಿಸುತ್ತದೆ.

**ಹಿಡಿಂಬಕ್ಷೇತ್ರ—** ದ್ವಾಪರಯುಗದಲ್ಲಿ ಈ ಸ್ಥಳಕ್ಕೆ ಹಿಡಿಂಬಕ್ಷೇತ್ರವೆಂದು ಹೆಸರಿತ್ತು. ಮಹಾಭಾರತಕಾಲದಲ್ಲಿ ಕರ್ನಾಟಕದೇಶದಲ್ಲಿ ಪ್ರಸಿದ್ಧರಾದ ಅನೇಕ ರಾಜರುಗಳಿದ್ದರು. ಮಣಿಪುರದಲ್ಲಿ (ಚಾಮರಾಜ ನಗರದ ಬಳಿ) ಬಭ್ರುವಾಹನನೂ ಕುಬತ್ತೂರಿನಲ್ಲಿ (ಸೊರಬದ ತಾಲೂಕಿನಲ್ಲಿ) ಕುಂತಳಾಧೀಶನಾದ ಚಂದ್ರಹಾಸನೂ, ಹಾನಗಲ್ಲಿನಲ್ಲಿ ವಿರಾಟರಾಯನೂ, ಕೊಲ್ಹಾಪುರದಲ್ಲಿ ಶೃಗಾಲವಾಸುದೇವನೆಂಬ ಅರಸೂ, ತ್ರಿಗರ್ತ (ಮಲೆನಾಡು) ದೇಶದಲ್ಲಿ ಸುಶರ್ಮನೆಂಬ ಅರಸೂ ಆಳುತ್ತಿದ್ದರು. ಚಿತ್ರದುರ್ಗವು ಹಿಡಿಂಬಕ್ಷೇತ್ರವಾಗಿತ್ತು. ಪಾಂಡವರು ಈ ಭಾಗದಲ್ಲಿ ಸಂಚರಿಸಿರುವರು. ಲಾಕ್ಷಾಗೃಹ ದಹನವಾದನಂತರ ಪಾಂಡವರು ಹಿಡಿಂಬ ವನಕ್ಕೆ ಬಂದರು. ಅವರನ್ನು ತಿನ್ನಲು ಬಂದ ನರಮಾಂಸಭಕ್ಷಕನಾದ ಹಿಡಿಂಬಾಸುರನನ್ನು ಭೀಮಸೇನನು ಸಂಹಾರಮಾಡಿ ವೇದವ್ಯಾಸರ ಅಪ್ಪಣೆಯಂತೆ ಅವನ ತಂಗಿ ಹಿಡಿಂಬೆಯನ್ನು ಲಗ್ನವಾದನು. ಆಕೆಯಲ್ಲಿ ಜನಿಸಿದ ಘಟೋತ್ಕಚನಿಗೆ ವನಾಧಿಪತ್ಯವನ್ನು ಕಟ್ಟಿದನಂತರ ಕುಂತೀಸಮೇತರಾಗಿ ಪಾಂಡವರು ಶಾಲಿಹೋತ್ರ ನಾಶ್ರಯಕ್ಕೆ ತೆರಳಿದರು.

**ಹಿಡಿಂಬಪತ್ತನ—**ಮೇಲ್ಕಂಡ ಸಂಗತಿ ಈ ಸ್ಥಳದಲ್ಲಿಯೇ ನಡೆದಿರಬಹುದೆಂದು ಊಹಿಸಲು ಅನೇಕ ಆಧಾರಗಳು ದೊರಕಿರುತ್ತವೆ. ಈ ಕ್ಷೇತ್ರವು ಹಿಡಿಂಬ ಹಿಡಿಂಬಿಯರ ವಾಸಸ್ಥಳವಾಗಿತ್ತು ಎಂದು ಸ್ಥಳಪುರಾಣವಿದೆ. ರಾಕ್ಷಸರು ಪರಮಶೈವಭಕ್ತರು. ಇವರು ವರಕಾಂಕ್ಷೆಯಿಂದ ಘೋರತಪಸ್ಸನ್ನು ಮಾಡಿ ವರಗಳನ್ನು ಪಡೆಯುತ್ತಿದ್ದ ವಿಷಯಗಳು ಪುರಾಣೋಕ್ತವಾದುವುಗಳು. ಹಿಡಿಂಬಾಸುರನು ಶಿವಲಿಂಗವನ್ನು ಪೂಜಿಸುತ್ತಿದ್ದನು. ಶ್ರೀಮನ್ಮಹಾನಗರ ಬೆನ್ನತ್ತನ ಕಲ್ಲ ಪಟ್ಟಣದಲ್ಲಿ ಪಾಂಡುನಂದನವೃಕೋದರಮಥಿತ ಹಿಡಿಂಬಕಾಸುರವಿದಾರಣ ಕಾಲಪ್ರಸನ್ನ ಪ್ರತ್ಯಕ್ಷ ಪರಮೇಶ್ವರ ಶ್ರೀಸದಾಶಿವಮೂರ್ತಿ ಶ್ರೀಹಿಡಿಂಬನಾಥ ದೇವರು‡ ಎಂದು ಈ ಶಿವದೇವಸ್ಥಾನವು ಚಿತ್ರದುರ್ಗದ ಬೆಟ್ಟದ ಮೇಲೆ ಈಗೂ ಇರುವುದು. ಈ ದೇವಸ್ಥಾನದಲ್ಲಿ ಒಂದು ಸುಲಿದ ತೆಂಗಿನ ಕಾಯಿಯಷ್ಟು ಗಾತ್ರವಾದ ಪದಾರ್ಥವು ಹಲ್ಲಿನಾಕಾರವಾಗಿರುವುದು. ಇದನ್ನು ಹಿಡಿಂಬನ ಹಲ್ಲು ಎಂದು ಹೇಳುವರು. ಬೆಟ್ಟದ ಮೇಲೆ ಭಾರಿ ಗುಂಡುಗಳಿರುವುವು. ಇವುಗಳಲ್ಲಿ ಒಂದಕ್ಕೆ ಭೀಮನ ಕಲ್ಲು ಎಂದೂ ಮತ್ತೊಂದಕ್ಕೆ ಹಿಡಿಂಬನ ಕಲ್ಲು ಎಂದೂ ಹೆಸರುಗಳು ಈಗಲೂ ಉಂಟು. ಶಾಸನಗಳಲ್ಲಿಯೂ ಚಿತ್ರದುರ್ಗಕ್ಕೆ ಹಿಡಿಂಬಪತ್ತನವೆಂದು ಉಕ್ತವಾಗಿರುತ್ತದೆ §

**ಪಾಂಡವರು—**ಚಿತ್ರದುರ್ಗಕ್ಕೆ ಪಶ್ಚಿಮದಲ್ಲಿ ಅಂಕಳಿ ಮಠವಿರುವುದು. ಈ ಮಠದ ಮುಂಭಾಗದಲ್ಲಿ ಪಂಚಲಿಂಗ ದೇವರ ಗುಡಿ ಇರುವುದು. ಈ ದೇವಸ್ಥಾನದಲ್ಲಿರುವ ಧರ್ಮೇಶ್ವರ, ಭೀಮೇಶ್ವರ, ಅರ್ಜುನೇಶ್ವರ, ನಕುಲೇಶ್ವರ ಮತ್ತು ಸಹದೇವೇಶ್ವರ ಎಂಬ ಪಂಚಲಿಂಗಗಳನ್ನು ಪಾಂಡವರು ಹಿಡಿಂಬವನದಲ್ಲಿದ್ದಾಗ ಪ್ರತಿಷ್ಠಿಸಿದರು. + ಅಲ್ಲದೆ ಕುಂತೀಸುತರು ಪ್ರತಿಷ್ಠಿಸಿದ ಧರ್ಮೇಶ್ವರ, ಭೀಮೇಶ್ವರ

* (*a* ಪುಟ) ೧೪—೧೫ The Never to be forgotten Emprire by Mr. B. S. Rao B. A., etc.

† (*b* Molakalmurun)

‡ ಶಿಲಾಶಾಸನ ಚಿತ್ರದುರ್ಗ (೧೪)

§ ಶಿಲಾಶಾಸನ ಚಿತ್ರದುರ್ಗ (೩೨)

+ ಚಿತ್ರದುರ್ಗದ ಪಂಚಲಿಂಗ ದೇವಸ್ಥಾನದಲ್ಲಿರುವ ಶಿಲಾಲೇಖನ ಚಿ—೩೨.

ದೇವಸ್ಥಾನಗಳು ಪಾಂಡುರಂಗ ಬೆಟ್ಟದ ಮೇಲೆಯೂ, ಫಲ್ಗುಣೇಶ್ವರ ದೇವಸ್ಥಾನವು ಮೇಲುದುರ್ಗದ ಮೇಲೆಯೂ, ಇರುವುವು. ಚಿತ್ರದುರ್ಗಕ್ಕೆ ಸುಮಾರು ೫-೬ ಮೈಲು ದೂರದಲ್ಲಿರುವ ಪಾಂಡುರಂಗಸ್ವಾಮಿ ಬೆಟ್ಟದ ಮೇಲೆ ಪುರಾತನವಾದ ದೇವಸ್ಥಾನವಿರುವುದು. ಶ್ರೀಕೃಷ್ಣಪರಮಾತ್ಮನು ತನ್ನ ಪರಮ ಆಪ್ತರೂ ಪರಮ ಭಕ್ತರೂ ಭಾವಮೈದುನರೂ ಆದ ಪಾಂಡವರನ್ನು ಹುಡುಕಿಕೊಂಡು ಬಂದು ಅವರಿಗೆ ದರ್ಶನವಿತ್ತು ಅಲ್ಲಿಂದ ಮುಂದೆ ದ್ರೌಪದಿಯ ಸ್ವಯಂವರದವರಿಗೂ, ಅವರು ನಡೆಸಬೇಕಾಗ ಕರ್ತವ್ಯವನ್ನು ತಿಳಿಸಿದನು. ಪಾಂಡವರನ್ನು ಹುಡುಕುತ್ತಾ ಬಂದ ರಂಗನಾಥನಾದ್ದರಿಂದ ಪಾಂಡುರಂಗನಾಥನೆಂತ ಪ್ರಸಿದ್ಧವಾಗಿರುವನು. ಈತನು ನೆಲಸಿದ ಗ್ರಾಮಕ್ಕೆ ಪುಂಡರೀಕಪುರ (ಪಂಡ್ರಹಳ್ಳಿ) ಎಂದು ಹೆಸರಾಯಿತು.

**ಪಾಂಡುಕುಳಿ**—ಚಿತ್ರದುರ್ಗದ ತಾಲೂಕಿನಲ್ಲಿ ಕೆಲವು ಸ್ಥಳಗಳಲ್ಲಿ ಕಲ್ಲಿನ ಮನೆಗಳ ಗುರುತುಗಳು ಕಾಣಬರುತ್ತವೆ. ಅವುಗಳಿಗೆ ಪಾಂಡುಕುಳಿ ಎಂದೂ, ಸೀತಾಮನೆಯೆಂದೂ ಹಳ್ಳಿಯ ಜನಗಳು ಹೇಳುತ್ತಾರೆ. ಈ ಎಲ್ಲಾ ಅಂಶಗಳು ಚಿತ್ರದುರ್ಗದ ಜಿಲ್ಲೆಗೆ ರಾಮಾಯಣ ಮಹಾಭಾರತ ಕಾಲದಲ್ಲಿ ಇತರ ದೇಶಗಳೊಡನೆ ಇದ್ದ ಸಂಬಂಧಗಳನ್ನು ವ್ಯಕ್ತಗೊಳಿಸುವುವು.

**ಜನಮೇಜಯ**— ಹಿಡಿಂಬಾಸುರನ ತರುವಾಯ ಘಟೋತ್ಕಜನು ಇಲ್ಲಿ ಪಟ್ಟಣವನ್ನು ಕಟ್ಟಿ ಅದನ್ನು ತನ್ನ ಸೋದರಮಾವನಾದ ಹಿಡಿಂಬನ ಹೆಸರಿನಲ್ಲಿ ಹಿಡಿಂಬಪತ್ತನವೆಂದು ಕರೆದಿರಬಹುದು. ಪರೀಕ್ಷಿತತನಯನಾದ ಜನಮೇಜಯರಾಜನು ಹಿಡಿಂಬ ಪಟ್ಟಣದಲ್ಲಿ ಗೋಪಾಲಕೃಷ್ಣದೇವರನ್ನು ಪ್ರತಿಷ್ಠಿಸಿದನೆಂದು ಸ್ಥಳಪುರಾಣವಿರುವುದು. ಈ ರಾಜನು ಹಿರೇಮಗಳೂರಲ್ಲಿ ಸರ್ಪ ಯಾಗವನ್ನು ಮಾಡಿದ ವಿಷಯವು ಪುರಾಣೋಕ್ತವಾಗಿರುವುದು. ಈ ರಾಜನು ಕಿಷ್ಕಿಂಧೆಯಲ್ಲಿ ನಿಂತು ಆಳುತ್ತಿದ್ದಂತೆ ತಿಳಿಯಬರುವುದು. ಈತನು ಹರಿಹರೇಶ್ವರ ಸನ್ನಿಧಿಯಲ್ಲಿ ಬ್ರಾಹ್ಮಣರಿಗೆ ಭೂದಾನಗಳನ್ನು ಕೊಟ್ಟು ಶಾಸನಗಳನ್ನು ಬರೆಸಿರುವನು. ಈ ಶಾಸನಗಳು ನಿಜವಾದುವುಗಳೇ ಅಲ್ಲವೆ ಎಂಬ ವಿಷಯವು ಚರ್ಚಾಸ್ಪದವಾಗಿರುವುದು.

ಹೊಳಲ್ಕೆರೆಯಲ್ಲಿರುವ ಶ್ರೀಮದ್ಭಕ್ತಪಾಲ ಶ್ರೀವೇಣುಗೋಪಾಲಸ್ವಾಮಿಯ ದೇವಸ್ಥಾನವಿರುವುದು. ಈ ದೇವರನ್ನೂ ಚಿತ್ರದುರ್ಗದ ಗೋಪಾಲಕೃಷ್ಣದೇವರನ್ನೂ, ಜನಮೇಜಯರಾಯನು ಪ್ರತಿಷ್ಠಿಸಿದನೆಂದು ಪ್ರತೀತಿಯುಂಟು. "ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನಶಕ ೧೪೯೦ ನೆಯ ವಿಭವ ಸಂವತ್ಸರದ ಜೇಷ್ಠಶುದ್ಧ ೫ ಮಂಗಳವಾರದಲ್ಲು ಶ್ರೀಮನ್ಮಹಾರಾಜಾಧಿರಾಜ ರಾಜಪರಮೇಶ್ವರ ವೀರಪ್ರತಾಪ ವೀರ ಸದಾಶಿವ ಮಹಾರಾಯರು ಪೃಥ್ವೀರಾಜ್ಯಂಗೈಯುತ್ತಿರಲು ಶ್ರೀಮನ್ಮಹಾಮುಲೇಶ್ವರ ಅಳಿಯ ರಾಮರಾಜಯ್ಯ ದೇವ ಮಹಾ ಅರಸುಗಳು ತುರುತ್ತು ರಾಜಕಾರ್ಯವಾಗಿ ಅಸ್ತಮಾನವಾಗಲಾಗಿ ಪಟ್ಟಣ ಸಿಂಹಾಸನ ರಾಜ್ಯ ದೇಶವೆಲ್ಲಾ ಕೆಟ್ಟು ಖಿಲವಾಗಲಾಗಿ ರಾಜೇಶ್ರೀ ತಿರುಮಲ ರಾಜ್ಯೆಯದೇವಮಹಾ ಅರಸುಗಳು ಶ್ರೀಮನ್ಮಹಾಕಾಮಗೇರೆ ಕಸ್ತೂರಿ ಮದಕರಿ ನಾಯಕರಿಗೆ ಅಮರವಾಗಣೆಗೆ ಪಾಲಿಸಿದ ಮೇಲೆ ಖಿಲವಾಗಿ ಹೋದ ಹೊಳಲಕೆರೆಯ ಶ್ರೀಮದ್ಭಕ್ತಪಾಲ ಶ್ರೀವೇಣುಗೋಪಾಲಕೃಷ್ಣ ಸ್ವಾಮಿ ದೇವಬ್ರಾಹ್ಮಣರು ಪುನಃ ಪ್ರತಿಷ್ಠೆಯಂ ಜೀರ್ಣೋದ್ಧಾರವಂ ಮಾಡಿ ತತ್ಪೂರ್ವದಲ್ಲಿ **ಜನಮೇಜಯ ದೇವತಾಪ್ರತಿಷ್ಠೆ** ವಿಷ್ಣುವರ್ಧನರಾಯರ ಭೂಪ್ರತಿಷ್ಠೆ ಕ್ರಿಷ್ಣರಾಯರು ರಾಮರಾಜ್ಯೆಯನವರ ಜೀರ್ಣೋದ್ಧಾರಣೆ ಕಸ್ತೂರಿ ಮದಕರಿನಾಯಿಕರು ಸಾರೋದ್ಧಾರಣೆಯಂ ಮಾಡಿ ಶ್ರೀಗೋಪಾಲಕೃಷ್ಣಗೆ ಸಲುವ ಅರ್ಚಕರು ಶ್ರೀಮತ್ಪಾಂಚರಾತ್ರದ ಆತ್ರೇಯಸಗೋತ್ರದ ಬೋಧಾಯನ ಸೂತ್ರದ ಯಜುಶ್ಯಾಖಾಧ್ಯಾಯಿಗಳಾದ ಯಂಕಟಾಚಾರ್ಯ ದೀಕ್ಷಿತರಿಗೆ ಧಾರಾದತ್ತವಾಗಿ ಸಹಿರಣ್ಯೋದಕಪೂರ್ವಕವಾಗಿ ಕೃಷ್ಣಾರ್ಪಣವಾಗಿ ಕೊಟ್ಟ..." ಹೊಳಲ್ಕೆರೆಯ ಗೋಪಾಲಕೃಷ್ಣದೇವರ ದೇವಸ್ಥಾನದಲ್ಲಿರುವ ತಾಮ್ರಶಾಸನದಿಂದ ತೆಗೆದಿರುವ * ಈ ವಿಷಯವು ಮೇಲ್ಕಂಡ ಪ್ರತೀತಿಯನ್ನು ಪುಷ್ಟೀಕರಿಸುವುದು.

ಈ ಎರಡು ದೇವರುಗಳ ವಿಗ್ರಹಗಳೂ ಒಂದೇ ತರವಾಗಿರುವುವು. ಇವುಗಳ ಶಿಲಾಪ್ರಭಾವಳಿಯಲ್ಲಿ ಕೆತ್ತಿರುವ ದಶಾವತಾರದ ವಿಗ್ರಹವನ್ನು ಹೋಲುವವಿಗ್ರಹಗಳು ಎಲ್ಲಿಯೂ ಇರುವುದಿಲ್ಲವೆಂದು ಹೇಳುವರು.

---

* ಮೊಳಕಾಲ್ಮುರು ೨೭.

ಹೊಳಲ್ಕೆರೆ— ೬-೭ ಈ ಶಾಸನಗಳಲ್ಲಿ ಕಂಡುಬರುವ ವೆಂಕಟಾಚಾರ್ಯರ ವಂಶದವರಾದ ವೇ. ಗೋಪಾಲಾಚಾರ್ಯರೆಂಬವರು ಈ ಎರಡ ದೇವಸ್ಥಾನಗಳಿಗೂ ಅರ್ಚಕರಾಗಿರುವರು.

# ದಿವ್ಯರಶ್ಮಿಗಳು

(ಲೇಖಕರು :— ಶ್ರೀ. ಬಿ. ಎನ್. ಶ್ರೀನಿವಾಸಯ್ಯ ಎಂ. ಎಸ್‌ಸಿ., ಹಾಸನ)

ನಮ್ಮ ಮನೆಯ ಹೆಂಚುಗಳೆರಡರ ನಡುವಿಂದಾಗಲಿ, ಗೋಡೆಯ ಬಿರುಕಿನೊಳಗಿಂದಾಗಲಿ ಮನೆಯೊಳಗೆ ಬೀಳುವ ಬಿಸಿಲುಕೋಲನ್ನು ನಾವೆಲ್ಲರೂ ನೋಡಿಯೇ ಇರುತ್ತೇವೆ. ಇದನ್ನು ನೋಡಿರುವವರಿಗೆ 'ರಶ್ಮಿ' ಅಥವಾ 'ಕಿರಣ'ಗಳೆಂದ ರೇನೆನ್ನುವುದನ್ನು ತಿಳಿವುದು ಕಷ್ಟವಾಗಲಾರದು. ಏಕೆಂದರೆ ಬಿಸಿಲುಕೋಲೆನ್ನುವುದು ಸೂರ್ಯಕಿರಣಗಳ ಸಮೂಹವೇ ಹೊರತು ಬೇರೆಯಲ್ಲ. ಇದೇ ರೀತಿಯಲ್ಲಿ ಯಾವ ದೀಪದಿಂದ ಹೊರಡುವ ಪ್ರಕಾಶವಾದರೂ ಕಿರಣಗಳ ಸಮೂಹದಿಂದಲೇ ಉಂಟಾಗುತ್ತದೆ. ಈ ರಶ್ಮಿಗಳು ಪದಾರ್ಥಗಳ ಮೇಲೆ ಬಿದ್ದು, ನಂತರ ನಮ್ಮ ಕಣ್ಣಿಗೆ ತಲಪುವುದರಿಂದಲೇ ನಮಗೆ ಪದಾರ್ಥಗಳು ಕಾಣಬರುತ್ತವೆ. ಆದುದರಿಂದ ಬಾಹ್ಯ ಪ್ರಪಂಚದಲ್ಲಿನ ವಸ್ತುಸಮುದಾಯವು ನಮ್ಮ ಕಣ್ಣಿಗೆ ಕಾಣಿಸಬೇಕಾದರೆ ಯಾವುದಾದರೊಂದು ತೆರದ ಕಿರಣಗಳ ಸಹಾಯವು ಬೇಕೇ ಬೇಕು. ಸಾಧಾರಣವಾದ ತೇಜಸ್ಸಿನ ಕಿರಣಗಳು ಗಾಳಿ, ಗಾಜು, ನೀರು ಮೊದಲಾದ ಕೆಲವು ಪದಾರ್ಥಗಳನ್ನು ಸುಲಭವಾಗಿ ಪ್ರವೇಶಿಸಬಲ್ಲುವು. ಇಂತಹ ವಸ್ತುಗಳಿಗೆ ಪಾರದರ್ಶಕ ( Transparent ) ವಸ್ತುಗಳೆಂದು ಹೆಸರು. ಸೂರ್ಯನ ಬೆಳಕು ಮರ, ಲೋಹಗಳು ಇವೇ ಮುಂತಾದ ಕೆಲವು ವಸ್ತುಗಳನ್ನು ಪ್ರವೇಶಿಸಲಾರದು. ಅಂದರೆ ಇವು ಅಪಾರದರ್ಶಕವಾದುವು ( Opaque ). ಗಾಜಿನ ಕೊಳವಿಯೊಂದರಲ್ಲಿ ಯಾವುದಾದರೊಂದು ನಾಣ್ಯವನ್ನಿಟ್ಟು ಸೂರ್ಯಕಿರಣಗಳಿಗಡ್ಡಲಾಗಿ ಹಿಡಿದರೆ, ಈ ನಾಣ್ಯವು ಮಾತ್ರ ತನ್ನ ಹಿಂದಿಟ್ಟ ಛಾಯಾಗ್ರಾಹಕ ಭಿತ್ತಿ ( Screen ) ಯ ಮೇಲೆ ಛಾಯೆಯನ್ನು ಕೊಡುತ್ತದೆ, ಗಾಜು ಛಾಯೆಯನ್ನು ಕೊಡಲಾರದು. ನಮ್ಮ ಕಣ್ಣಿಗೂ ಬೇರೆ ಇನ್ನೊಂದು ವಸ್ತುವಿಗೂ ನಡುವೆ ಪಾರದರ್ಶಕಪದಾರ್ಥವಿದ್ದರೆ ಆ ವಸ್ತು ನಮಗೆ ಕಾಣುತ್ತದೆ, ಅಪಾರದರ್ಶಕವಾದುದಿದ್ದರೆ ಅದು ಕಾಣಿಸುವುದಿಲ್ಲ. ಈ ಮೇಲಿನ ಕೆಲವು ಅಂಶಗಳನ್ನು ನೆನಪಿನಲ್ಲಿಡುವುದು ಪ್ರಸ್ತುತ ಲೇಖದಲ್ಲಿನ ವಿಷಯಗಳನ್ನು ತಿಳಿದುಕೊಳ್ಳಲು ಅವಶ್ಯವಾಗಿದೆ.

ಈ ಲೇಖಕ್ಕೆ ವಿಷಯವಾದುವುಗಳೂ ಒಂದು ಬಗೆಯ ರಶ್ಮಿಗಳೇ ಆದರೂ, ಇವಕ್ಕೂ ಸಾಮಾನ್ಯಕಿರಣಗಳಿಗೂ ಕೆಲವು ಪ್ರಬಲವ್ಯತ್ಯಾಸಗಳಿರುವುದರಿಂದ, ಇವನ್ನು ಪ್ರತ್ಯೇಕಿಸಿ 'ದಿವ್ಯರಶ್ಮಿ'ಗಳೆಂದು ಕರೆದಿರುತ್ತೇವೆ. ಇವುಗಳ 'ದಿವ್ಯತೆ'ಯನ್ನು ವಿಶದಪಡಿಸುವುದೇ ಇಲ್ಲಿ ನಮ್ಮ ಉದ್ದೇಶ.

ಕ್ರಿಸ್ತಶಕ ೧೮೯೫ನೆಯ ವರ್ಷಕ್ಕೆ ಮೊದಲು ಯಾರಾದರೂ ನಮ್ಮ ಶರೀರದಲ್ಲಿ ಚರ್ಮದ ಮರೆಯಲ್ಲಿ ಅಡಗಿರುವ ಅಸ್ಥಿಪಂಜರವನ್ನು ಚರ್ಮವನ್ನು ಸುಲಿಯದೆಯೇ ನೋಡುವುದು ಸಾಧ್ಯವೆಂದು ಹೇಳಿದ್ದರೆ ಆ ಮಾತು ತುಂಬ ಹಾಸ್ಯಾಸ್ಪದವಾಗುತ್ತಿತ್ತು; ಮತ್ತು ಅದನ್ನು ಹೇಳಿದವನು ಹುಚ್ಚನೋ ಮಾಯಾವಿಯೋ ಇರಬೇಕೆಂದು ಯೋಚಿಸುತ್ತಿದ್ದೆವು. ತಪಃಪ್ರಭಾವದಿಂದ ಉಂಟಾಗುವ ದಿವ್ಯದೃಷ್ಟಿಗೆ ಮಾತ್ರ ಗೋಚರವಾಗಬಹುದಾದ ವಿಚಿತ್ರಗಳನ್ನು ಕೇವಲ ಪಾಮರರಾದ ಕಲಿಯುಗದ ಜನರು ನೋಡಬಲ್ಲರೆಂದರೆ ಎಂದಿಗೂ ನಂಬುವ ಮಾತೆಂದೆಣಿಸಲ್ಪಡುತ್ತಿರಲಿಲ್ಲ. ಸೂರ್ಯಕಿರಣಗಳೇ ಎಲ್ಲಕ್ಕಿಂತ ಪ್ರಬಲವಾದ ದೃಷ್ಟಿಸಾಧಕಗಳೆಂದು ಆಕಾಲದವರೆಗಿದ್ದ ಅಭಿಪ್ರಾಯವೂ, ಅವುಗಳಿಗೆ ದುರ್ಗಮವಾದ ವಸ್ತುಗಳನ್ನು ಭೇದಿಸಬಲ್ಲ ಕಿರಣಗಳನ್ನು ಹಿಂದಿನವರು ಕಂಡಿರದೆ ಇದ್ದುದೂ ಇಂತಹ ಭಾವನೆಗೆ ಕಾರಣ. ನಮ್ಮ ಚರ್ಮವು ಅಪಾರದರ್ಶಕವಾದುದರಿಂದ ಅದರ ಮರೆಯಲ್ಲಿನ ಅಸ್ಥಿಪಂಜರವು ದೃಷ್ಟಿಗೋಚರವಾಗುವ ಬಗೆಯೊಂದುಂಟೆಂದು ಹಿಂದಿನವರು ಊಹಿಸಲು ಆಧಾರಗಳೂ ಇರಲಿಲ್ಲ.

ಈಗಿನ ಸ್ಥಿತಿಯೇ ಬೇರೆ. ನಾಲ್ಕೈದು ವರ್ಷಗಳ ಹಿಂದೆ ಮೃತನಾದ 'ರಾಂಟ್‌ಜನ್' ( Rontgen ) ಎಂಬ ಪ್ರಸಿದ್ಧ ಭೌತಿಕ ಶಾಸ್ತ್ರಜ್ಞ ( Physicist )ನು ೧೮೯೫ರಲ್ಲಿ ಆಕಸ್ಮಿಕವಾಗಿ ಒಂದು ಬಗೆಯ ಶಕ್ತಿಯನ್ನು ಕಂಡುಹಿಡಿದನು. ಯಾವುದಾದರೊಂದರ ಸ್ವಭಾವ ಅಥವಾ ಹೆಸರು ಗೊತ್ತಿಲ್ಲದಿದ್ದರೆ ಅದನ್ನು ಇಂಗ್ಲಿಷಿನಲ್ಲಿ 'ಎಕ್ಸ್' ( X ) ಎಂದು ಕರೆವುದುಂಟು. ಈ ಅಭ್ಯಾಸದಂತೆ ಮೇಲೆ ಹೇಳಿದ ಶಕ್ತಿಯ ಸ್ವಭಾವವು ಬಹಳ ಅದ್ಭುತವಾಗಿದ್ದರೂ ವಿವರವಾಗಿ ತಿಳಿಯದೆ ಇದ್ದುದರಿಂದ, ಇನ್ನೂ ಚೆನ್ನಾಗಿ ಪರಿಶೀಲಿಸಿ ಸರಿಯಾದ ಹೆಸರನ್ನಿಡುವವರೆಗೆ ಅದಕ್ಕೆ "ಎಕ್ಸ್-ರೇ" ( X-ray ) ಎಂಬ ಅಂಕಿತವು ಕೊಡಲ್ಪಟ್ಟಿತು; ಮತ್ತು ಕಂಡುಹಿಡಿದ

ಮಹನೀಯನ ಹೆಸರನ್ನೊಳಗೊಂಡಿರುವಂತೆ 'ರಾಂಟ್‌ಜನ್ ರಶ್ಮಿ'ಗಳೆಂದೂ (Rontgen Rays) ಕರೆವುದುಂಟು ಆದರೆ ಮೊದಲನೆಯ ಹೆಸರೇ ಹೆಚ್ಚು ಆಕರ್ಷಕವಾಗಿ ವಾಡಿಕೆಯಲ್ಲಿದ್ದು ಬಿಟ್ಟಿದೆ. ಈ ಕಿರಣಗಳನ್ನೇ ಅವುಗಳಿಗಿರುವ ದಿವ್ಯ ಮತ್ತು ಅಪಾರ್‌ಶಕ್ತಿಯ ಸಲುವಾಗಿ "ದಿವ್ಯರಶ್ಮಿ"ಗಳೆಂದು ಇಲ್ಲಿ ಕರೆಯೋಣ. ಸನ್ ೧೮೯೫ ರಲ್ಲಿ ರಾಂಟ್‌ಜನ್ನನಿಗೆ ಲಭಿಸಿದ ಈ ದಿವ್ಯರಶ್ಮಿಗಳ ಶೋಧವು (Discovery) ಕೇವಲ ಆಕಸ್ಮಿಕ ಮತ್ತು ಅನಿರೀಕ್ಷಿತವಾದುದು. ಇಂತಹ ಕಿರಣಗಳಿವೆಯೆಂದು ಊಹಿಸಿ, ಉದ್ದೇಶಪೂರ್ವಕವಾಗಿ ಅವುಗಳನ್ನು ಕಂಡುಹಿಡಿಯಲು ಮಾಡಿದ ಪ್ರಯತ್ನವಾದರೂ ಯಾವುದೂ ಇರಲಿಲ್ಲ.

ವಿದ್ಯುಚ್ಛಕ್ತಿ ಲೋಹದ ತಂತಿಗಳಲ್ಲಿ ಸುಲಭವಾಗಿ ಪ್ರವಹಿಸಬಲ್ಲುದೆನ್ನುವುದು ವಿದ್ಯುದ್ದೀಪ ಮುಂತಾದುವುಗಳನ್ನು ನೋಡಿದವರಿಗೆ ತಿಳಿದಿರುವ ಅಂಶವೇ. ದ್ರವಪದಾರ್ಥಗಳಲ್ಲಿಯೂ ಈ ಶಕ್ತಿ ಪ್ರವಹಿಸಬಲ್ಲುದಾದುದರಿಂದಲೇ, ವಿದ್ಯುತ್ತಿನ ಸಹಾಯದಿಂದ ಚಿನ್ನ, ಬೆಳ್ಳಿಗಳ ಮುಲಾಮು ಮಾಡುವುದು (Electroplating) ಸಾಧ್ಯವಾಗಿರುತ್ತದೆ. ಇದೇ ರೀತಿಯಲ್ಲಿ ವಿದ್ಯುತ್ತು ವಾಯುವಿನಲ್ಲಿಯೂ ಪ್ರವಹಿಸಬಲ್ಲುದೇ ? ಹಾಗಿದ್ದರೆ ವಾಯುವನ್ನು ವಿರಳಮಾಡುತ್ತ ಬಂದ ಹಾಗೆಲ್ಲ ಈ ಪ್ರವಾಹದಲ್ಲಿ ಏನಾದರೂ ಹೆಚ್ಚುಕಡಿಮೆಗಳಾಗುವುವೇ? ಎನ್ನುವ ಅಂಶವನ್ನು ಶಾಸ್ತ್ರಜ್ಞರು ಪರೀಕ್ಷಿಸುತ್ತಿದ್ದರು. ಇದಕ್ಕೆ ಸಂಬಂಧಪಟ್ಟ ಪ್ರಯೋಗ (Experiment) ಗಳಲ್ಲೊಂದಾಗಿ ರಾಂಟ್‌ಜನ್ನನು ಗಾಜಿನ ಕೊಳವಿಯೊಂದರಲ್ಲಿನ ವಾಯುವನ್ನು ಅತಿವಿರಳಮಾಡಿ ಅದಕ್ಕೆ ವಿದ್ಯುತ್ಪ್ರಯೋಗ ಮಾಡಿದ್ದನು. ಕೆಲವು 'ಸ್ವದೀಪಕರಸ' Fluorescent Chemical, ಉದಾಹರಣೆ: ಬೇರಿಯಂ ಪ್ಲಾಟಿನೋ–ಸಯನೈಡ್‌ಗಳಿಂದ ಲೇಪಿತವಾದ ಗಾಜಿನ ಹಲಗೆಯೊಂದು ಆಕಸ್ಮಿಕವಾಗಿ ಈ ಗಾಜಿನ ನಳಿಕೆ (Tube) ಯ ಬಳಿಯಿತ್ತು. ಸಾಮಾನ್ಯವಾದ ಬೆಳಕಿನ ಮತ್ತು ಇನ್ನು ಕೆಲವು ಬಗೆಯ ಕಿರಣಗಳು ಇಂತಹ ಹಲಗೆಯ ಮೇಲೆ ಬಿದ್ದರೆ ಅದು ಪ್ರಕಾಶಿಸುತ್ತದೆ. ರಾಂಟ್‌ಜನ್ನನು ಮೇಲೆ ಹೇಳಿದ ಪ್ರಯೋಗವನ್ನು ಮಾಡುತ್ತಿದ್ದಾಗ ಈ ಹಲಗೆ ಹೊಳೆಯಲಾರಂಭಿಸಿತು. ಸಾಮಾನ್ಯವಾದ ಬೆಳಕು ಯಾವುದೂ ಕೊಟಡಿಯೊಳಕ್ಕೆ ಪ್ರವೇಶಿಸುವುದು ಸಾಧ್ಯವಾಗಿರಲಿಲ್ಲ. ಆದಕಾರಣ ಮೇಲೆ ವಿವರಿಸಿದ ಪ್ರಯೋಗದ ಪರಿಣಾಮವಾಗಿ ಯಾವುದೋ ಒಂದು ಹೊಸತರದ ಶಕ್ತಿ ಉತ್ಪನ್ನವಾಗಿರಬೇಕೆಂಬುದು ಸ್ವಾಭಾವಿಕವಾದ ಊಹೆ. ಇದಲ್ಲದೆ ಮತ್ತೊಂದು ವಿಚಿತ್ರವು ಕಂಡಿತು. ಭಾವಚಿತ್ರಗಳನ್ನು ತೆಗೆಯಲುಪಯೋಗಿಸುವ ಹಲಗೆಗಳು (Photographic plates) ಬೆಳಕಿಗೆ ಬಿದ್ದರೆ ಕೆಡುವುವಾದಕಾರಣ, ಸಾಮಾನ್ಯವಾದ ಬೆಳಕು ಅವಕ್ಕೆ ತಗಲದಿರುವಂತೆ ಅವುಗಳನ್ನು ಸೂರ್ಯನ ಬೆಳಕಿಗೆ ಅಪಾರದರ್ಶಕವಾದ ದಪ್ಪ ಕಪ್ಪು ಕಾಗದದಲ್ಲಿ ಸುತ್ತಿಡುವುದು ವಾಡಿಕೆ. ಹೀಗೆ ಭದ್ರವಾಗಿ ಕಾಪಾಡಲ್ಪಟ್ಟ ಕೆಲವು ಪ್ಲೇಟುಗಳು, ಸೂರ್ಯನ ಬೆಳಕು ಒಳಗೆ ಬರದಂಥ ಆ ಕತ್ತಲು ಕೋಣೆಯಲ್ಲಿ, ರಾಂಟ್‌ಜನ್ನನ ಪರೀಕ್ಷೆ (Investigation) ಯ ಕೊಳವಿಗೆ ಹತ್ತಿರದಲ್ಲಿದ್ದುವು. "ಸ್ವದೀಪಕ ಫಲಕ" (Fluorescent Screen) ದ ಉದ್ದೀಪನವು, ಯಾವುದೋ ಹೊಸ ತರದ ಶಕ್ತಿ ಹುಟ್ಟಿರಬೇಕೆಂಬ ಶಂಕೆಯನ್ನು ರಾಂಟ್‌ಜನ್ನನ ಮನಸ್ಸಿನಲ್ಲಿ ಉಂಟುಮಾಡಿತ್ತು. ಆದಕಾರಣ ಮೇಲಿನ ಪ್ರಯೋಗವು ಪೂರಯಿಸಿದ ಮೇಲೆ ಅವನು ಸುರಕ್ಷಿತವಾಗಿಟ್ಟಿದ್ದ ಪ್ಲೇಟುಗಳನ್ನು ತೆಗೆದು ನೋಡಿದನು. ಅವು ಬೆಳಕಿಗೆ ಬಿದ್ದಂತೆ ಕೆಟ್ಟುಹೋಗಿದ್ದುದನ್ನು (Fogged) ಕಂಡನು. ಅಂದರೆ ಕಪ್ಪುಕಾಗದದ ಆವರಣವು ಈ ಶಕ್ತಿಗೆ ಏನೂ ಅಡಚಣೆ ಮಾಡಲಾರದೆಂದೂ, ಆ ಕಾಗದವು ಇದಕ್ಕೆ ಪಾರದರ್ಶಕವೆಂದೂ ಬಯಲಾಯಿತು. ಸೂರ್ಯಕಿರಣಗಳಿಗೆ ದುರ್ಗಮವಾದ ವಸ್ತುಗಳನ್ನು ಪ್ರವೇಶಿಸಬಲ್ಲ ಒಂದು ಬಗೆಯ ಕಿರಣಗಳು, ಮೇಲೆ ಹೇಳಿದ ಪ್ರಯೋಗದಿಂದ ಉತ್ಪನ್ನವಾಗಿವೆಯೆಂದು ಸಹಜವಾಗಿ ಅವನಿಗೆ ತೋರಿತು. ಆದುಕಾರಣ ಸುಮ್ಮನೆ 'ಪಾರ'–'ಅಪಾರ' ದರ್ಶಕ ವಸ್ತುಗಳೆಂದು ಹೇಳುವುದರಲ್ಲಿ ಅರ್ಥವಿಲ್ಲದಂತಾಯಿತು. ಒಂದು ಬಗೆಯ ಕಿರಣಕ್ಕೆ ಪಾರದರ್ಶಕವಾದ ಪದಾರ್ಥವು ಮತ್ತೊಂದು ಬಗೆಯ ರಶ್ಮಿಗೆ ಅಪಾರದರ್ಶಕವಾಗಬಹುದೆನ್ನುವುದು ನಿರ್ಧಾರವಾಯಿತು. ಆದುದರಿಂದ ಮುಂದೆ ಈ ಪದಗಳನ್ನುಪಯೋಗಿಸಬೇಕಾದರೆ, ಯಾವ ಬಗೆಯ ತೇಜಸ್ಸಿಗೆ ಅನ್ವಯಿಸುವುದೆನ್ನುವುದನ್ನೂ ಸಂಗಡಲೇ ಸೂಚಿಸುವುದು ಅತ್ಯವಶ್ಯಕವೆನ್ನುವುದು ವಿಶದವಾಯಿತು.

ಹೀಗೆ ಆಕಸ್ಮಿಕವಾಗಿ ಕಂಡು ಹಿಡಿಯಲ್ಪಟ್ಟ ಈ ಪರಿಣಾಮ (Phenomena) ಗಳು, ತತ್ಕಾಲದಲ್ಲಿ ಪರೀಕ್ಷ್ಯವಾದ ವಿಷಯಕ್ಕೆ ಉಪಕಾರಿಗಳಾಗದೆ ಯಾವುದೋ ಅಪ್ರಧಾನ ಘಟನೆ (Side-issue) ಗಳೆಂದು ತಿರಸ್ಕರಿಸದೆ, ಇವುಗಳಲ್ಲಿ ಏನಾದರೂ ಮಹತ್ವವಿರಲಿ ಇಲ್ಲದಿರಲಿ ಕೂಲಂಕಷವಾಗಿ ಪರೀ

ಕ್ಷಿಸಿಯೇ ತೀರಬೇಕೆಂದು ನಿರ್ಧರಿಸಿದುನು. ರಾಂಟ್‌ಜನ್ ಮತ್ತು ಆಗ ಈ ವಿಷಯುವಲ್ಲಿ ಮನಗೊಟ್ಟ ಇತರರ ವೈಜ್ಞಾನಿಕದೃಷ್ಟಿ (Scientific bent of mind) ಮತ್ತು ವಿಚಾರಪರತೆ ( Spirit of Inquiry ) ಗಳನ್ನು ನಿದರ್ಶಿಸುತ್ತದೆ. ಈ ಗುಣಗಳು ವೈಜ್ಞಾನಿಕ (Scientist) ನಿಗೆ ಬಹು ಆವಶ್ಯಕವಾದುವು. ಇವುಗಳಿರುವುದರಿಂದಲೇ ಶಾಸ್ತ್ರಜ್ಞನು ಯಾವುದನ್ನೂ ತುಚ್ಛೀಕರಿಸಲಾರನು; ಆರಂಭದಲ್ಲಿ ಎಷ್ಟೇ ಅಲ್ಪವಾಗಿ ತೋರಿದರೂ, ಅಂತಹುದರಲ್ಲಿಯೇ ಏನಾದರೂ ಮಹತ್ವ ಅಡಗಿರಬಹುದೆನ್ನುವುದೂ, ಅಂತಹವೇ ಪರಿಣಾಮದಲ್ಲಿ ಲೋಕೋಪಕಾರಿಗಳಾಗಿಯೂ, ಮನುಷ್ಯನ ಜ್ಞಾನಪ್ರಸಂಚವನ್ನು ವಿಸ್ತರಿಸುವುವಾಗಿಯೂ, ಅವನ ಬುದ್ಧಿಯುನ್ನು ಪರೀಕ್ಷಿಸಿ, ವ್ಯವಸಾಯುಮಾಡಿ ವೃದ್ಧಿಪಡಿಸುವುವಾಗಿಯೂ, ಮಹತ್ಕಾರ್ಯಗಳನ್ನು ನೆರವೇರಿಸಬಲ್ಲುವಾಗಿಯೂ ಆಗಬಹುದೆನ್ನುವುದೂ ಅವನ ಧೃಡನಂಬಿಗೆ. ಈ ನಂಬಿಗೆಯಿಂದಲೇ ಯಾವುದನ್ನೂ ನಿರಾಕರಿಸದೆ ಪ್ರತಿಯೊಂದು ವಿಷಯುವನ್ನೂ ಅವಗಾಹನೆಗೆ ತಂದುಕೊಂಡು ತನ್ನ ವೈಜ್ಞಾನಿಕತರ್ಕಗಳನ್ನೆಲ್ಲಾ ಅದರಮೇಲೆ ಉಪಯೋಗಿಸಿ ಅದರ ನಿಜಾಂಶವನ್ನು ಆದಷ್ಟುಮಟ್ಟಿಗೆ ತಿಳಿದು ಪ್ರಸಿದ್ಧಪಡಿಸುತ್ತ ಲೋಕಸೇವೆಯುನ್ನು ಮಾಡುತಿರುತ್ತಾನೆ.



ಇಂತಹ ದೃಷ್ಟಿಯಿಂದಲೇ, ತನಗೆ ಆಕಸ್ಮಿಕವಾಗಿ ಕಂಡುಬಂದ ಪರಿಣಾಮಗಳನ್ನು ತುಚ್ಛೀಕರಿಸದೆ ರಾಂಟ್‌ಜನ್ನನೂ ಮತ್ತು ಆಗಿನ ಇತರ ಶಾಸ್ತ್ರಜ್ಞರೂ ಈ ವಿಷಯುವನ್ನು ಮುಂದಕ್ಕೆ ಪರೀಕ್ಷಿಸಹತ್ತಿದರು. ರಾಂಟ್‌ಜನ್ನನು ಸಾಯುವ ಮೊದಲೇ, ತಾನು ಕಂಡ ಈ ದಿವ್ಯರಶ್ಮಿಗಳ ಅಪಾರಶಕ್ತಿಯಿಂದ ವೈದ್ಯಶಾಸ್ತ್ರಕ್ಕೂ ತನ್ಮೂಲಕ ಜನಸಾಮಾನ್ಯಕ್ಕೂ ಅತ್ಯಂತ ಉಪಕಾರವಾಗಿರುವುದೆನ್ನುವುದನ್ನು ಕಂಡುನೂ, ಇದೂ ಅಲ್ಲದೆ ಇನ್ನೂ ಬಹಳ ಕಷ್ಟಕರವಾದ ಅನೇಕ



ಶೋಧನೆ (Research) ಗಳಲ್ಲಿ ಈ ರಶ್ಮಿಗಳು ಸಹಾಯಕಗಳಾಗಿರುವುದನ್ನು ಕಂಡುದೂ ಬಹಳ ತೃಪ್ತಿಕರವೇ ಸರಿ.

ದಿವ್ಯರಶ್ಮಿಗಳಿಂದ ಎಷ್ಟರಮಟ್ಟಿಗೆ ಲೋಕೋಪಕಾರವಾಗಿದೆಯೆನ್ನುವುದು ೧, ೨, ೩ನೆಯ ಚಿತ್ರಗಳನ್ನು ಸಾವಧಾನವಾಗಿ ಪರೀಕ್ಷಿಸುವುದರಿಂದ ತಿಳಿಯುತ್ತದೆ. ದಿವ್ಯಕಿರಣ



ಗಳನ್ನು ಉತ್ಪತ್ತಿಮಾಡಿ ಅವುಗಳ ಉತ್ಪತ್ತಿಸ್ಥಾನ ( Origin of X-rays) ಕ್ಕೂ ಮತ್ತು 'ಸ್ವದೀಪಕಫಲಕ' (Fluorescent sereen )ಕ್ಕೂ ನಡುವೆ ನಮ್ಮ ಅಂಗೈಯನ್ನು ಹಿಡಿದರೆ ೧ನೆಯ ಚಿತ್ರದಂತಹ ಛಾಯೆ ಆ ಹಲಗೆಯ ಮೇಲೆ ಕಾಣುತ್ತದೆ. ಈ ಹಲಗೆಗೆ ಬದಲು ಫೋಟೋಗ್ರಾಫಿಕ್ ಪ್ಲೇಟ (Photographic plate) ನ್ನಿಟ್ಟರೆ ಸಾಧಾರಣ

ಭಾವಚಿತ್ರವು ಬೀಳುವಂತೆ ೧ನೆಯ ಚಿತ್ರದಲ್ಲಿನಂತಹ ಭಾವ ಚಿತ್ರವು ಅವರ ಮೇಲೆ ಬೀಳುತ್ತದೆ. ಈ ಚಿತ್ರದಲ್ಲಿ ನಮ್ಮ ಬೆರಳುಗಳ ಮತ್ತು ಮಣಿಕಟ್ಟಿನ ( Wrist ) ಮೂಳೆಗಳು ವಿಶದವಾಗಿ ಕಾಣಬರುವುದನ್ನು ಗಮನಿಸಬೇಕು.

೨, ೩ನೆಯ ಚಿತ್ರಗಳು ಚರ್ಮದ ಜೋಡು ಕೂಡಿಸಿದ ಕಾಲುಗಳನ್ನು ದಿವ್ಯರಶ್ಮಿಗಳಿಗಡ್ಡಲಾಗಿಟ್ಟರೆ ಸಿಗುವ ಛಾಯೆ ಗಳು. ಇವುಗಳಲ್ಲಿ ಜೋಡಿನ ಮಂದವಾದ ಚರ್ಮದ ಛಾಯೆ ಬಹಳ ಮಂಕಾಗಿ ಕಾಣುತ್ತವೆ ; ಆದರೆ ಅಡಿಯ ಮತ್ತು ಬೆರಳುಗಳ ಅಸ್ಥಿಗಳು ಬಹಳ ಚೆನ್ನಾಗಿ ಕಾಣುತ್ತವೆ. ಯಾವ ಚಿತ್ರದಲ್ಲಿಯೂ ಮಾಂಸ, ಖಂಡ, ಚರ್ಮ, ರಕ್ತನಾಳಗಳು ಕಾಣುವುದೇ ಇಲ್ಲ. ಕಾಲಳತೆಗೆ ಸರಿಯಾಗದ ಜೋಡನ್ನು ಉಪಯೋಗಿಸುವುದರಿಂದ ಬೆರಳುಗಳು ಹೇಗೆ ವಕ್ರವಾಗ ಬಹುದೆಂಬುದು ೩ನೆಯ ಚಿತ್ರದಿಂದ ಚೆನ್ನಾಗಿ ತಿಳಿವುದು.

ಈ ರೀತಿ ಚಿತ್ರಗಳೇಕೆ ಬರಬೇಕೆನ್ನುವುದನ್ನು ತಿಳಿವುದಕ್ಕೆ, ಈ ಲೇಖದ ಆರಂಭದಲ್ಲಿ ಸೂಚಿಸಿದ ಅಂಶಗಳನ್ನೂ, ದಿವ್ಯ ರಶ್ಮಿಗಳೂ ಸೂರ್ಯರಶ್ಮಿಗಳಂತಹ—ಆದರೆ ಕಣ್ಣಿಗೆ ಕಾಣದ— ಒಂದು ಬಗೆಯ ಕಿರಣಗಳೆನ್ನುವುದನ್ನೂ ನೆನಪಿನಲ್ಲಿಡಬೇಕು. ಅಲ್ಲಿ ಹೇಳಿದಂತೆ, ಯಾವುದಾದರೊಂದು ವಸ್ತು ನಮಗೆ ಕಾಣ ಬೇಕಾದರೆ ಅದರಮೇಲೆ ಸ್ವಯಂ ಪ್ರಕಾಶವುಳ್ಳ ದೃಶ್ಯ ( Luminous and visible ) ಕಿರಣಗಳು ಬಿದ್ದು ಅಲ್ಲಿಂದ ಚದರಿ (Scattered) ನಮ್ಮ ಕಣ್ಣನ್ನು ಹೊಗ ಬೇಕು. ಆದರೆ ದಿವ್ಯರಶ್ಮಿಗಳು ಅದೃಶ್ಯವಾಗಿರುವ ಕಾರಣ ಮೇಲಿನ ರೀತಿಯಲ್ಲಿ ಸ್ವತಃ ವಸ್ತುದರ್ಶನ ಮಾಡಿಸಲಾರವು. ಬೇರೆ ಉಪಾಯವನ್ನು ನಾವು ಹುಡುಕಬೇಕು. ದಿವ್ಯರಶ್ಮಿಗಳ ಸಹಾಯದಿಂದ ಛಾಯೆ (Shadow) ಯನ್ನು ಪಡೆದು, ಅವಕ್ಕೆ ಅಪಾರದರ್ಶಕವಾದ ಪದಾರ್ಥಗಳನ್ನು ನೋಡ ಲಿಕ್ಕೆ ಉಪಾಯವಿಲ್ಲ. ಆದರೆ ಈ ಛಾಯೆಗಳನ್ನು ಹಿಡಿಯ ಬಹುದು; ಪಾರದರ್ಶಕವಾದುವುಗಳನ್ನು ನೋಡಬೇಕಾದರೆ ಸಾಮಾನ್ಯವಾದ ಬೆಳಕಿನ ವಿಷಯದಲ್ಲಿ ಉಪಯೋ ಗಿಸುವ ಉಪಕರಣಗಳು ಸಾಲವು. ಮೇಲೆ ವಿವರಿಸಲ್ಪಟ್ಟ 'ಸ್ವದೀಪಕ ಫಲಕ— ' ವಾಗಲಿ ಫೋಟೋಗ್ರಾಫಿಕ್ ಪ್ಲೇಟಾ ಗಲಿ ನಮ್ಮ ಸಹಾಯಕ್ಕೆ ಬೇಕು. ಸಾಮಾನ್ಯ ಬೆಳಕಿಗೆ ಅಪಾರ ದರ್ಶಕವಾದ ನಮ್ಮ ಚರ್ಮವು ಈ ರಶ್ಮಿಗಳಿಗೆ ಪಾರದರ್ಶಕವು. ಆದುದರಿಂದಲೇ ಇದರ ನೆರಳು ನಮಗೆ ಕಾಣಿಸುವುದಿಲ್ಲ ; ಮೂಳೆಗಳಾದರೋ ಈ ಕಿರಣಗಳಿಗೂ ಅಪಾರದರ್ಶಕವಾದು ದರಿಂದ ಅವುಗಳ ನೆರಳು ನಮಗೆ ಕಾಣಿಸುತ್ತದೆ. ಹೀಗೆ ಸೂರ್ಯಕಿರಣಗಳಿಗೆ ಅಪಾರದರ್ಶಕವಾದ ಅನೇಕ ವಸ್ತುಗಳನ್ನು ಈ ನಮ್ಮ ರಶ್ಮಿಗಳು ಸುಲಭವಾಗಿ ಪ್ರವೇಶಿಸಬಲ್ಲವು.

ನಮ್ಮ ಎದೆಯನ್ನು ಈ ರಶ್ಮಿಗಳಿಗೆ ಅಡ್ಡಲಾಗಿಟ್ಟರೆ, ಎದೆ ಮೂಳೆಗಳು ಮಾತ್ರ ತಮ್ಮ ಛಾಯೆಯನ್ನು ಕೆಡವುವ ಕಾರಣ ಕಂಡುಬರುತ್ತವೆ. ಕಾರಣಾಂತರದಿಂದ ಗುಂಡುಸೂಜಿಯೋ, ತುಪಾಕಿಯ ಗುಂಡೋ ಅಥವಾ ಇನ್ನು ಯಾವುದಾದರೂ ಹೊರಗಣ ವಸ್ತುವೋ (Foreign matter) ಶ್ವಾಸಕೋ ಶಕ್ಕೆ ಅಥವಾ ಅಸ್ಥಿಪಂಜರದ ಒಳಭಾಗಕ್ಕೆ ಹೊಕ್ಕಿದ್ದರೆ ಆ ವಸ್ತುವಿನ ಛಾಯೆ ಕೂಡಾ ಕಾಣುತ್ತದೆ. ಈ ಪರೀಕ್ಷೆ ಯಿಂದ ಹೊರಗಣ ವಸ್ತು ಇಂತಹ ಸ್ಥಳಕ್ಕೇ ಹೊಕ್ಕಿರುವು ದೆನ್ನುವುದು ನಿರ್ದಿಷ್ಟವಾಗಿ, ವೈದ್ಯರು ಶಸ್ತ್ರಪ್ರಯೋಗದಿಂದ ಅದನ್ನು ಈಚೆಗೆ ತೆಗೆಯಲು ಅನುಕೂಲವಾಗುತ್ತದೆ. ಹೀಗೆ ಯೇ ನಮ್ಮ ಕಾಲು ಅಥವಾ ಕೈ ಮೂಳೆಗಳು ಕಾರಣಾಂತರ ದಿಂದ ಸ್ಥಾನ ತಪ್ಪಿದ್ದರೆ ( Dislocated ) ಅಥವಾ ಮುರಿ ದಿದ್ದರೆ ( Fractured ) ಅಪಾಯವು ಎಲ್ಲಿ ಸಂಭವಿಸಿದೆ ಯೆನ್ನುವುದನ್ನು ದಿವ್ಯರಶ್ಮಿಪ್ರಯೋಗದಿಂದ ( By X-ray photography ) ತಿಳಿದುಕೊಂಡು ಸರಿಪಡಿಸಬಹುದು. ಇದೇ ರೀತಿಯಲ್ಲಿ ಅನೇಕ ರೋಗಗಳ ಸ್ವರೂಪವನ್ನು ಪ್ರತ್ಯ ಕ್ಷತಃ ಅಂಗಗಳನ್ನು ನೋಡಿ ಪರೀಕ್ಷಿಸುವುದಕ್ಕೆ ಸಾಧ್ಯವಾಗಿ ರುತ್ತೆ. ಈ ಉಪಾಯದಿಂದ ಅನೇಕ ಜನರ ಪ್ರಾಣಗಳು ಉಳಿ ದಿವೆ; ಎಷ್ಟೋ ಮಂದಿಯ ಅಂಗಗಳು ನೆಟ್ಟಗಾಗಿವೆ; ಯುದ್ಧ ರಂಗದಲ್ಲಿ ಸೈನಿಕರ ಮೈಯೊಳಗೆ ಹೊಕ್ಕ ಗುಂಡುಗಳು ತೆಗೆ ಯಲ್ಪಟ್ಟಿವೆ; ಜೋಡುಗಳು ಕಾಲಿಗೆ ಕೂರದೆಇದ್ದು ಉಂಟಾ ಗಿರುವ ಅಪಾಯಗಳು ಗೊತ್ತಾಗಿವೆ; ಮತ್ತು ಕಳ್ಳರು ಕೆಲವು ವೇಳೆ ತಾವು ಮಾಡಿದ ಕಳವು ಪತ್ತೆಯಾಗದಿರಲೆಂದು ಪದಾ ರ್ಥಗಳನ್ನು ನುಂಗಿದರೆ, ಅಂತಹ ಮೋಸವೂ ಪತ್ತೆಯಾಗಿದೆ. ( ಶ್ರೀ. ಪಾ. ರಾ. ರಾಮಯ್ಯನವರ ಲೇಖ ನೋಡಿ. ಜಯಕ- ರ್ನಾಟಕ, ಸಂಪುಟ ೫— ಸಂಚಿಕೆ ೭. ಪುಟ ೪೦೬ ) ಹೀಗೆ ಇನ್ನು ಯಾವಬಗೆಯಿಂದಲೂ ನೋಡಲಸಾಧ್ಯವಾದುದನ್ನು ಕಾಣಲು ನಮಗೆ ಶಕ್ತಿ ಬಂದಿದೆ. ಒಟ್ಟಿನಲ್ಲಿ ಈ ಸಾಧನದ ದೆಸೆಯಿಂದ ನಮಗೆ ಸ್ವಲ್ಪ ಮಟ್ಟಿಗಾದರೂ ದಿವ್ಯದೃಷ್ಟಿ ಬಂದಂತಾಯಿತೆಂದರೆ ಅತಿಶಯೋಕ್ತಿಯಾಗಲಾರದು; ಇಂತಹು ದನ್ನು ಸಾಧಿಸಿರುವುಗಳನ್ನು ದಿವ್ಯ ರಶ್ಮಿಗಳೆಂದು ಕರೆದರೆ ತಪ್ಪಾಗಲಾರದು.

ದಿವ್ಯರಶ್ಮಿಗಳ ಉತ್ಪತ್ತಿವಿಧಾನ ( Production of X rays ) ವನ್ನು ಸ್ವಲ್ಪ ಪರೀಕ್ಷಿಸುವ.



ಎರಡು ಕೊನೆಗಳಲ್ಲಿಯೂ ಮುಚ್ಚಲ್ಪಟ್ಟಿರುವ ಗಾಜಿನ ನಳಿಕೆ ( Tube ) ಯೊಂದನ್ನು ತೆಗೆದುಕೊಳ್ಳೋಣ. ಈ ಕೊನೆಗಳೆರಡರಲ್ಲಿಯೂ ಗಾಜಿನ ಮೂಲಕ ಲೋಹದ ವಿದ್ಯುನ್ಮಾರ್ಗ (Electrodes) ಗಳು ಪ್ರವೇಶಿಸಲ್ಪಟ್ಟಿರಬೇಕು; ಅಂದರೆ ಈ ಲೋಹದ ಸಾಧನಗಳ ಮೂಲಕವೇ ಕೊಳವಿಯೊಳಗಿನ ವಾಯುವಿಗೆ ವಿದ್ಯುತ್ಪ್ರಯೋಗವಾಗತಕ್ಕುದು. ಈ ಕೊನೆಗಳಲ್ಲದೆ ಬೇರೊಂದು ಕಡೆಯಿಂದ ಈ ಕೊಳವಿಯನ್ನು **ವಾಯುಶೋಷಕ ಯಂತ್ರ** ( Airpump ) ಕ್ಕೆ **ವಾಯುನಿರೋಧಕ**(Airtight)ವಾಗಿ ಸೇರಿಸಲು ಅವಕಾಶವಿರಬೇಕು. ( ಚಿತ್ರ ೪ ). ಎಲ್ಲವನ್ನೂ ಸೇರಿಸಿದ ಮೇಲೆ, ಹೊರಗಿಂದ ಒಳಕ್ಕೆ ಗಾಳಿ ಬರದಂತಿರಬೇಕು. ಮೇಲೆ ಹೇಳಿದ ಎರಡು ವಿದ್ಯುನ್ಮಾರ್ಗಗಳಲ್ಲಿ ಯಾವುದರ ಮೂಲಕ ವಿದ್ಯುತ್ತು ಒಳಗೆ ಪ್ರವೇಶಿಸುತ್ತದೋ ಅದಕ್ಕೆ " **ಧನಧ್ರುವ** " Positive electrode) ಅಥವಾ " **ಉದ್ಗಾಮಿಮಾರ್ಗ** " (Anode) ವೆಂದೂ, ಯಾವುದರ ಮೂಲಕ ವಿದ್ಯುತ್ತು ಹೊರಕ್ಕೆ ಹೋಗುತ್ತದೋ ಅದಕ್ಕೆ " **ಋಣಧ್ರುವ** " (Negative Electrode ) ಅಥವಾ " **ಅವಗಾಮಿಮಾರ್ಗ** " (Cathode) ವೆಂದೂ ಹೆಸರು. ವಾಯುಶೋಷಕ ಯಂತ್ರಕ್ಕೆ ಕೊಳವಿಯನ್ನು ಸೇರಿಸಿ, ನಂತರ ವಿದ್ಯುನ್ಮಾರ್ಗಗಳೆರಡ



ನ್ನೂ, ಸಾಕಾದಷ್ಟು ಶಕ್ತ್ಯಂತರ (Sufficient Potential Difference ) ವುಳ್ಳ **ವಿದ್ಯುತ್ಪರಿವರ್ತಕ ಯಂತ್ರ** (Transformer) ಅಥವಾ **ಉಪಪಾದನ ವಿದ್ಯುದ್ಯಂತ್ರ** ( Induction Coil ) ದ ಉಚಿತಸ್ಥಾನಗಳಿಗೆ (Proper Terminals) ಸೇರಿಸಿದರೆ ನಾಳದೊಳಗಿನ ವಾಯುವಿಗೆ ವಿದ್ಯುತ್ಪ್ರಯೋಗವಾಗುವುದು.

ಪ್ರಾರಂಭದಲ್ಲಿ ನಳಿಕೆ ( Tube ) ಯೊಳಗಿನ ವಾಯು ಹೊರಗಣ ವಾತಾವರಣದ ಒತ್ತಡ ( Atmospheric Pressure ) ದಲ್ಲಿಯೇ ಇರುತ್ತದೆ. ಇಂತಹ ಸಂದರ್ಭದಲ್ಲಿ ವಿದ್ಯುತ್ಪ್ರವಾಹವು ಸುಲಭವಾಗಿ ಆಗಲೊಲ್ಲದು. ವಾಯುಶೋಷಕ ಯಂತ್ರವು ಕೆಲಸಮಾಡುತ್ತ ಬಂದಹಾಗೆಲ್ಲ, ವಾಯುವಿನ ಒತ್ತಡವು ಕಮ್ಮಿಯಾಗುತ್ತ ಬಂದು ನಮ್ಮ ಕೊಳವಿಯೊಳಗಿನ ದೃಶ್ಯವು ಬಹು ಸುಂದರವಾದ ಬದಲಾವಣೆಗಳನ್ನು ಹೊಂದುತ್ತಗೆ. ಮೊದಲು ಮೊದಲು ವಿದ್ಯುನ್ಮಾರ್ಗಗಳ ತುದಿ

ಯಲ್ಲಿ ಮಾತ್ರ ಪ್ರಕಾಶವಿದ್ದು, ವಾಯು ವಿರಳವಾದ ಹಾಗೆಲ್ಲ ಈ ಪ್ರಕಾಶವು ಮುಂದರಿಯುತ್ತದೆ. ಇನ್ನೂ ಹೆಚ್ಚು ವಿರಳ ವಾದರೆ ೩ನೆಯ ಚಿತ್ರದಲ್ಲಿ ಕಾಣಿಸಿರುವಂತೆ ಆಗುತ್ತದೆ; ಅಂದರೆ ಕೆಲವು ಭಾಗಗಳು ಪ್ರಕಾಶವಾಗಿಯೂ ಇವುಗಳ ಮಧ್ಯೆ ಕತ್ತಲಾಗಿಯೂ ಇರುವ ಒಂದು ಪರಂಪರೆ (Striations) ಕಾಣಬರುತ್ತದೆ. ಇನ್ನೂ ವಾಯುಶೂನ್ಯ ಮಾಡುತ್ತ ಬಂದರೆ ಪ್ರಕಾಶವು ಕಮ್ಮಿಯಾಗುತ್ತ ಬಂದು, ಕೊನೆಗೆ ಕೊಳವಿಯ ಗಾಜು ಒಂದು ವಿಧವಾಗಿ ಪ್ರಕಾಶಿಸಲು ಆರಂಭಿಸುತ್ತದೆ (Phosphorescent glow). ಈ ಹೊಳಪಿನ ಬಣ್ಣವು ಬೇರೆ ಬೇರೆ ಗಾಜುಗಳಿಗೆ ಬೇರೆ ಬೇರೆ ವಿಧವಾಗಿರುತ್ತದೆ. 'ಸೋಡಿಯಂ' (Sodium) ಸೇರಿರುವ ಗಾಜು ಹಳದಿ ಮತ್ತು ಹಸುರು ಮಿಶ್ರಿತವಾದ ಬಣ್ಣದಿಂದ ಹೊಳೆಯುತ್ತದೆ; ಸೀಸ (Lead) ಸೇರಿರುವ ಗಾಜು ನೀಲಿ ಮತ್ತು ಬೂದು ಮಿಶ್ರಿತವಾದ ಬಣ್ಣದಿಂದ ಹೊಳೆಯುತ್ತದೆ. ಈ ಹೊಳಪು ಕಂಡಾಗಲೇ ದಿವ್ಯರಶ್ಮಿಗಳು ಹೊರಬೀಳುವುವು. (X ray stage).

ವಾಯು ಸಾಕಾದಷ್ಟು ವಿರಳವಾಗಿರುವಾಗ, ಮೇಲೆ ಹೇಳಿದ ಪ್ರಕಾಶಗಳಲ್ಲದೆ ಒಂದು ಬಗೆಯ ನೀಲಿ ಬಣ್ಣದ ಕಿರಣಗಳು 'ಅವಗಾಮಿಮಾರ್ಗ' (Cathode) ದಿಂದ ನೆಟ್ಟಗೆ ಹೊರಟು ನಳಿಕೆಯ ಒಂದು ಕೊನೆಯಿಂದ ಮತ್ತೊಂದು ಕೊನೆಯುವರೆಗೂ ಪಸರಿಸುತ್ತವೆ. ಇವಕ್ಕೆ **ಋಣಧ್ರುವ ಕಿರಣ**ಗಳೆನ್ನುತ್ತಾರೆ (Cathode Rays). ಈ ಕಿರಣಗಳು ಕೊಳವಿಯ ಗಾಜಿಗೆ ಎಲ್ಲೆಲ್ಲಿ ತಗಲುತ್ತವೋ ಅಂತಹ ಸ್ಥಳಗಳಿಂದಲೇ ದಿವ್ಯರಶ್ಮಿಗಳು ಹೊರಡುವುವು; ಈ ಋಣಧ್ರುವ ಕಿರಣಗಳು ವಿದ್ಯುತ್ತಿನ ಅಣು (Electron) ಗಳ ಪ್ರವಾಹವೆಂದು ದೃಢೀಕರಿಸಲ್ಪಟ್ಟಿದೆ. ಆದುದರಿಂದ ನಮ್ಮ ದಿವ್ಯರಶ್ಮಿಗಳ ಉತ್ಪತ್ತಿ ಈ ವಿದ್ಯುದಣುಗಳು ಯಾವುದಾದರೊಂದು ಪ್ರತಿಬಂಧ(Obstacle)ಕ್ಕೆತಗುಲುವುದರಿಂದಾಗುವುದೆಂದೂ, ಹಾಗೆ ತಗುಲುವುದರಿಂದ ಅವುಗಳಲ್ಲಿನ ಶಕ್ತಿ (Energy) ದಿವ್ಯರಶ್ಮಿಗಳ ರೂಪವನ್ನು ಹೊಂದಿ ಈ ಪ್ರತಿಬಂಧದಿಂದ ಹೊರಹೊರಡುತ್ತದೆಯೆಂದೂ ಧಾರಾಳವಾಗಿ ತರ್ಕಿಸಬಹುದು;

ಅಂದರೆ, ದಿವ್ಯರಶ್ಮಿಗಳ ಉತ್ಪತ್ತಿಗೆ ಅವಶ್ಯವಾದುವು ಅತಿಶೂನ್ಯ (High vacuem) ವಾದ ಗಾಜಿನ ಗೋಲ (Bulb) ಮತ್ತು ವಿದ್ಯುಪ್ರಯೋಗಕ್ಕೆ ಸಾಕಾದಷ್ಟು ಶಕ್ತ್ಯಂತರವುಳ್ಳ ಯಂತ್ರ. ಈಗ ವೈದ್ಯರು ಹೆಚ್ಚು ಶ್ರಮವಿಲ್ಲದೆ ದಿವ್ಯರಶ್ಮಿಗಳನ್ನು ಹುಟ್ಟಿಸಿ ಉಪಯೋಗಿಸಲು ಅನುಕೂಲಿಸುವಂತೆ ಸಾಕಾದಷ್ಟು ವಿರಳವಾಯುವನ್ನೊಳಕೊಂಡ ಮತ್ತು ವಿಶಿಷ್ಟ ಮಾರ್ಗ ಸಹಿತವಾದ ಗಾಜಿನ ಕೊಳವಿ ಅಥವಾ ಗೋಲುಗಳು ಮಾರಾಟಕ್ಕೆ ದೊರೆಯುತ್ತವೆ. ಇವುಗಳನ್ನು 'ದಿವ್ಯರಶ್ಮಿಗೋಲ' (IX-Ray Bulb) ಅಥವಾ ದಿವ್ಯರಶ್ಮಿನಳಿಕೆ (IX-Ray tube) ಎನ್ನಬಹುದು.

ಅನಿಯತವಾಗಿ ಗಾಜಿನ ಎಲ್ಲ ಭಾಗಗಳಿಗೂ ವಿದ್ಯುದಣು ಪ್ರವಾಹವು (Streem of Electrons) ತಗುಲಿ ಆ ಎಲ್ಲ ಭಾಗಗಳಿಂದಲೂ ದಿವ್ಯರಶ್ಮಿಗಳು ಹೊರಡುವುದನ್ನು ತಪ್ಪಿಸಿ, ನಿಯತವಾದೊಂದು ಸ್ಥಳದಿಂದ ಮಾತ್ರ ಹೊರಡುವಂತೆ ಏರ್ಪಡಿಸುವುದಕ್ಕಾಗಿ ಈ ಗೋಲಗಳಲ್ಲಿ 'ಆ್ಯಂಟಿ ಕ್ಯಾಥೋಡ್' (Anticathode) ಎಂಬುದೊಂದು ಸಾಧನವಿರುತ್ತದೆ. ಋಣಧ್ರುವ ಕಿರಣಗಳು ಈ ಸಾಧನದ ಮೇಲೆ ಗುರಿಯಾಗಿ ಬಂದು ಹೊಡೆದು ಅದರಿಂದ ಮಾತ್ರ ದಿವ್ಯರಶ್ಮಿಗಳನ್ನು ಹೊರಡಿಸುತ್ತವೆ. ಕಿರಣಗಳು ಗುರಿಯಿಟ್ಟು ಈ ಸಾಧನದ ಮೇಲೆ ಹೊಡೆವುದರಿಂದ ಇದನ್ನು "ಗುರಿ" (Target) ಯೆಂದು ಕರೆವುದೂ ಉಂಟು. ಅನೇಕ ದಿವ್ಯರಶ್ಮಿ ಗೋಲಗಳಲ್ಲಿ ಉದ್ಗಾಮಿ ಮಾರ್ಗವೇ 'ಗುರಿ' ಯಾಗಿಯೂ ಏರ್ಪಟ್ಟಿರುತ್ತದೆ. ಈ ಗೋಲಗಳಲ್ಲಿಯೂ ಬೇರೆ ಬೇರೆ ಪ್ರಯೋಗಗಳಿಗೆ ಅನ್ವಯಿಸುವಂಥ, ಮತ್ತು ಒಂದೊಂದರಲ್ಲಿ ಒಂದೊಂದು ಅನುಕೂಲತೆ ಮೇಲಾಗಿರುವಂಥ ಹಲವು ಮಾದರಿಗಳುಂಟು. ಉದಾಹರಣೆಗಾಗಿ, ಕೆಲವು ಕೊಳವಿಗಳಲ್ಲಿ, ವಿದ್ಯುದಣುಗಳ ಹೊಡೆತದಿಂದ ಬಹಳ ಬಿಸಿಯಾಗುವ 'ಗುರಿ' ಯನ್ನು ನೀರಿನ ಸಹಾಯದಿಂದ ತಣ್ಣಗೆ ಮಾಡುವ (Water-cooling) ಅವಕಾಶವಿದೆ; ಮತ್ತೆ ಕೆಲವು ನಳಿಕೆಗಳಲ್ಲಿ ಶೂನ್ಯವು (Vacuum) ತೀರ ಉತ್ತಮವಾಗಿದ್ದು ವಿದ್ಯುದಣುಗಳ ಉತ್ಪತ್ತಿಗಾಗಿ ಅವಗಾಮಿಮಾರ್ಗವನ್ನು ಕೆಂಪಾಗಿ ಕಾಯಿಸುವ ಸಾಧನವಿದೆ (ಚಿತ್ರ ೫ ನ್ನು ನೋಡಿ). ಆದರೆ ಇವೆಲ್ಲದರಲ್ಲಿಯೂ ಮುಖ್ಯವಾದ ನಿಯಮವೂ Principal ನಡೆಯುವ ಘಟನೆ (Phenomena) ಗಳೂ ಫಲಿತಾಂಶವೂ ಒಂದೇ. (ಚಿತ್ರ ೫).

ದಿವ್ಯರಶ್ಮಿಗಳ ನಿಜಸ್ವಭಾವವನ್ನು ಕುರಿತು ಸ್ವಲ್ಪ ವಿಚಾರ ಮಾಡೋಣ. ಇವೂ ಮತ್ತು ಸಾಮಾನ್ಯವಾಗಿ ನಮ್ಮ ಕಣ್ಣಿಗೆ ಕಾಣಬರುವ ಬೆಳಕೂ ಒಂದೇ ಮೂಲಕಾರಣದಿಂದ ಉತ್ಪನ್ನವಾಗಿ ಒಂದೇ ಜಾತಿಗೆ ಸೇರಿವೆಯೆಂದರೆ ಬಹಳ ವಿಸ್ಮಯವಾ

ಗುಬಹುದು. ಹುಲಿಯು ಶಕ್ತಿಗೂ ಬೆಕ್ಕಿನ ಶಕ್ತಿಗೂ ಎಷ್ಟೋ ಅಂತರವಿದ್ದರೂ ಅವೆರಡೂ ಹೇಗೆ ಒಂದೇ ಜಾತಿಗೆ ಸೇರಿರುವವೊ ಹಾಗೆಯೇ ಈ ಎರಡು ಬೆಳಕುಗಳ ಶಕ್ತಿಯಲ್ಲಿ ವ್ಯತ್ಯಾಸವು ಬಹಳವಾಗಿದ್ದರೂ ಎರಡೂ ಒಂದೇ ಜಾತಿಯವೆಂದು ಹೇಳಬಹುದು.

ಇಷ್ಟೇ ಅಲ್ಲ, ತಂತಿಯಿಲ್ಲದೆಯೆ ದೇಶಾಂತರದಿಂದ ಸಮಾಚಾರ ತರಿಸುವುದಕ್ಕೂ. ಅಲ್ಲಿ ನಡೆಯುವ ಸಂಗೀತ, ಭಾಷಣ ಮುಂತಾದುವನ್ನು ಇಲ್ಲಿದ್ದ ಹಾಗೆಯೇ ಕೇಳುವುದಕ್ಕೂ ಸಾಧನವು ಈಚೆಗೆ ಏರ್ಪಟ್ಟಿರುವುದಷ್ಟೆ. (Wireless). ಇಂತಹ ಅದ್ಭುತವನ್ನು ಸಾಧ್ಯವಾಗಿ ಮಾಡಿರುವುವು ಒಂದು ಬಗೆಯ 'ತರಂಗ' ಅಥವಾ 'ಅಲೆಗಳು. ಇವು ಕೂಡ ನಮ್ಮ ದಿವ್ಯರಶ್ಮಿಗಳ ಜಾತಿಗೇ ಸೇರಿವೆಯೆಂದರೆ ಇನ್ನೂ ಆಶ್ಚರ್ಯವಾಗಿ ತೋರಬಹುದು! ಮೇಲೆ ನೋಡಿದರೆ ಒಂದಕ್ಕೊಂದು ಸಂಬಂಧವಿಲ್ಲದಂತೆ ಕಾಣುವ ಈ ವಿವಿಧ ಪರಿಣಾಮಗಳಷ್ಟು ಒಂದೇ ಜಾತಿಗೆ ಹೇಗೆ ಸೇರಿದುವೆನ್ನುವುದು ತಿಳಿದುಕೊಳ್ಳಲರ್ಹವಾದ ವಿಷಯ.

ಒಟ್ಟಿನಲ್ಲಿ ಬೇರೆ ಬೇರೆಯಾಗಿ ಕಾಣುವ ಇವೆಲ್ಲಕ್ಕೂ ಮುಖ್ಯ ಕಾರಣವು ಸರ್ವವ್ಯಾಪಿಯಾದ ಆಕಾಶದಲ್ಲಿ (Ether) ನಡೆಯುವ ಅಣುಗಳ ಸ್ಫುರಣ (Vibration) ದಿಂದುಂಟಾಗುವ ತರಂಗಗತಿ. ( Wave motion ). ತಂತಿಯಿಲ್ಲದೆ ಸುದ್ದಿಯನ್ನು ತರತಕ್ಕವು ವಿದ್ಯುತ್ತರಂಗಗಳು. ( Electric waves ). ನಮ್ಮ ಕಣ್ಣಿಗೆ ಕಾಣಿಸುವ (visible) ಬೆಳಕನ್ನುಂಟುಮಾಡುವುವೂ ಒಂದು ಬಗೆಯ ತರಂಗಗಳು; ನಮ್ಮ ಕಣ್ಣಿಗೆ ಕಾಣಿಸದಿದ್ದರೂ (Invisible) ಅಪಾರಶಕ್ತಿಯುತವಾದ ನಮ್ಮ ದಿವ್ಯರಶ್ಮಿಗಳೇ ಮುಂತಾದ ಹಲವು ಬಗೆಯ ಕಿರಣ (Radiation) ಗಳಿಗೂ ಕಾರಣವಾದುವು ಒಂದು ಬಗೆಯ ತರಂಗಗಳೇ. ಇವೆಲ್ಲವುಗಳ ಉತ್ಪತ್ತಿ ಆಕಾಶದಲ್ಲಿ ನಡೆವ ಅಣುಸ್ಫುರಣದಲ್ಲಿಯೇ. ಮೂಲ ಕಾರಣವೊಂದೇ ಆದರೂ ಇವುಗಳ ಸ್ವಭಾವದಲ್ಲಿ ವ್ಯತ್ಯಾಸವಾಗುವುದಕ್ಕೆ ಈ ಅಣುಸ್ಫುರಣದ ವೇಗವು (Frequency of vibration) ಒಂದೊಂದಕ್ಕೂ ಬೇರೆಯಾಗಿರುವುದೇ ಕಾರಣ. ಇದನ್ನು ಬೇರೊಂದು ವಿಧವಾಗಿ ಹೇಳಬಹುದು. ನೀರಿನಲ್ಲಿ ಕಲ್ಲೊಂದನ್ನೆಸೆದರೆ ಅಲೆಗಳು ಹುಟ್ಟಿ ಎಲ್ಲಾ ಕಡೆಗೂ ಹರಡುವುದನ್ನು ಸಾಮಾನ್ಯವಾಗಿ ನಾವೆಲ್ಲರೂ ನೋಡಿಯೇ ಇರುತ್ತೇವೆ. ಈ ತರಂಗ ಪರಂಪರೆಯಲ್ಲಿ, ಸಾಲಾಗಿ ನೋಡಿದರೆ ~~~~~~ ಹೀಗೆ ಆಕಾರವು ಕಾಣುತ್ತದೆ; ಅಂದರೆ ಈ ತರಂಗಗಳ **ಉಬ್ಬು** ಶಿಖರ (crest of a wave) ಗಳೂ **ತಗ್ಗು** (Trough ( of a wave ) ಗಳೂ ಕಾಣುತ್ತವೆ. ಈ ಶ್ರೇಣಿಯಲ್ಲಿ ( Succession ) ಒಂದು ಶಿಖರದಿಂದ ಪಕ್ಕದ ಶಿಖರಕ್ಕೆ ಇರುವ ದೂರವು 'ತರಂಗಾಯಾಮ' (Wavelength) ವೆನಿಸುತ್ತದೆ. ನಿಯಮಾನುಸಾರವಾಗಿ ನಡೆಯುವ ಮತ್ತು ಬದಲಾಯಿಸದ ತರಂಗಗತಿ (Constant type wave motion) ಯಲ್ಲಿ ಈ ಆಯಾಮವು ನಿಯತ ( Fixed, constant) ವಾದುದಾಗಿರುತ್ತದೆ. ಮೇಲೆ ಹೇಳಿದ ವಿವಿಧ ತರಂಗಗತಿಗಳಿಗೆ ಪರಸ್ಪರ ಸ್ವಭಾವಭೇದಕ್ಕೆ ಕಾರಣವು ಈ ತರಂಗಾಯಾಮವು ಒಂದರಿಂದೊಂದು ಬೇರೆಯಾಗಿರುವುದೇ.

ಎಂದರೆ ವಿದ್ಯುತ್ತರಂಗಗಳಲ್ಲಿ ತರಂಗಾಯಾಮವು ಬಹಳ ಹೆಚ್ಚು; ಸಾಮಾನ್ಯವಾಗಿ ೩೦೦ ಮೀಟರುಗಳಷ್ಟು ಇರುತ್ತದೆ. ( ೧೬೦೦ ಮೀಟರುಗಳು=೧ ಮೈಲು ); ಕಣ್ಣಿಗೆ ಕಾಣುವ ಬೆಳಕು ಸಾಮಾನ್ಯವಾಗಿ $\frac{೧}{೨.೦೦೦೦೦೦}$ ಮೀಟರಿನಷ್ಟು ಆಯಾಮವುಳ್ಳ ಅಲೆಗಳಿಂದುತ್ಪನ್ನವಾಗಿದೆ. ಈ ವ್ಯತ್ಯಾಸವೇ ಅವುಗಳ ಸ್ವಭಾವವನ್ನು ಅಷ್ಟು ಬದಲಾಯಿಸುವುದು. ಈ ಲೇಖದ ಕೊನೆಯಲ್ಲಿ ಕೊಟ್ಟಿರುವ ಪಟ್ಟಿಯಲ್ಲಿ, ವಿವಿಧವಾಗಿ ಪರಿಣಮಿಸುವ ತರಂಗಗತಿಗಳಲ್ಲಿ ಪರಸ್ಪರ ಸ್ವಭಾವವನ್ನು ಬದಲಾಯಿಸತಕ್ಕ ಸ್ಫುರಣವೇಗ ಮತ್ತು ತರಂಗಾಯಾಮಗಳು ತೋರಿಸಲ್ಪಟ್ಟಿವೆ. ಸ್ಫುರಣವೇಗವು ಒಂದು ಸೆಕೆಂಡಿಗೆ (ಒಂದು ತಾಸಿನ $\frac{೧}{೩೬೦೦}$ ನೆಯ ಭಾಗ) ಎಷ್ಟು ಬಾರಿ ಸ್ಫುರಣವು ನಡೆವುದೆಂಬ ಅಂಶವನ್ನು ಸೂಚಿಸುವುದು.

ಈ ತರಂಗಾಯಾಮದ ಅಂತರವನ್ನೂ ಅದರಿಂದುಂಟಾಗುವ ಸ್ವಭಾವ ವ್ಯತ್ಯಾಸವನ್ನೂ ಇನ್ನೂ ಮುಂದಟ್ಟುಮಾಡಿಕೊಳ್ಳಬೇಕಾದರೆ ಒಂದು ಸಾಮಾನ್ಯ ನಿದರ್ಶನವನ್ನು ತೆಗೆದುಕೊಳ್ಳೋಣ. ಸಮುದ್ರದಲ್ಲಿ ನಿರಂತರವಾಗಿ ಬಡಿದಾಡುತ್ತಿರುವ ಅಗಾಧವಾದ ಅಲೆಗಳನ್ನು ನೋಡಿದವರಿಗೆ ಅವುಗಳ ಸಾಮರ್ಥ್ಯದ ವಿಷಯವಾಗಿ ಒತ್ತಿ ಹೇಳಬೇಕಾಗಿಲ್ಲ. ದೊಡ್ಡ ಹಡಗುಗಳನ್ನೇ ಅಲ್ಲೋಲಕಲ್ಲೋಲವಾಗಿ ತೂಗಿಸುತ್ತವೆ. ಇವುಗಳನ್ನು ನಮ್ಮ ವಿದ್ಯುತ್ತರಂಗಗಳಿಗೆ ಹೋಲಿಸಬಹುದು. ಸಮುದ್ರವನ್ನು ಬಿಟ್ಟು ದೊಡ್ಡ ಸರೋವರದ ಕಡೆ ಅಥವಾ ಹೊಳೆಯ ಕಡೆ ನೋಡಿದರೆ, ದೊಡ್ಡ ಗಾಳಿಯಿಂದುಂಟಾದ ಅಲೆಗಳು ಕಾಣಬರುವುವು. ಇವು ಸಮುದ್ರ ತರಂಗಗಳಷ್ಟು

ವಿಸ್ತಾರವೂ ಬಲವೂ ಉಳ್ಳುವಲ್ಲ. ದೊಡ್ಡ ಹಡಗಿನ ಮೇಲೆ ಇವು ಏನೂ ಮಾಡಲಾರವು; ಆದರೆ ಸಣ್ಣ ದೋಣಿಗಳನ್ನು ಅಲ್ಲಾಡಿಸಬಲ್ಲುವು. ಇದನ್ನು ಬಿಟ್ಟು ಸಣ್ಣ ಕೆರೆಗೆ ಬಂದು ನಮ್ಮ ಉಸಿರಿನಿಂದ ನೀರನ್ನು ಅಲ್ಲಾಡಿಸಿದರೆ ಬಹು ಸಣ್ಣವಾದ ತೆರೆಗಳು ಹುಟ್ಟುವುವು. ಇವು ಬಹು ಸ್ವಲ್ಪ ಆಯಾಮವುಳ್ಳವು; ಮತ್ತು ಹುಡುಗರು ಆಟಕ್ಕಾಗಿ ಮಾಡಿದ ಕಾಗದದ ದೋಣಿಗಳನ್ನು ಮಾತ್ರ ಕೆಣಕಬಲ್ಲುವು. ಈ ಸಣ್ಣ ನಿದರ್ಶನದಿಂದ ಅಲೆಗಳಲ್ಲಿ ಹೇಗೆ ವಿಸ್ತಾರಸಾಮರ್ಥ್ಯಗಳ ಅಂತರ ವಿರಬಹುದೆನ್ನುವುದೂ, ಇಲ್ಲಿ ನಾವು ವಿಚಾರಿಸುತ್ತಿರುವ ಅಲೆಗಳಿಗೂ ಇವಕ್ಕೂ ಹೇಗೆ ಮೇಲುಮೇಲಿನ (Superficial) ಕೆಲವು ವಿಷಯಗಳಲ್ಲಿ ಹೋಲಿಕೆ ಇರುವುದೆಂಬುದೂ ತಿಳಿವುದು.

ತರಂಗಾಯಾಮದ ಬದಲಾವಣೆಯಿಂದ ಸ್ವಭಾವವ್ಯತ್ಯಾಸಗಳುಂಟಾಗುವುದನ್ನು ತೋರಿಸುವ ಇನ್ನೊಂದು ಉದಾಹರಣೆಯನ್ನು ನೋಡೋಣ. ಸೂರ್ಯನ ಬೆಳಕು ಬಿಳುಪಾಗಿ ಕಂಡರೂ ಅದು ಏಳು ಬೇರೆ ಬೇರೆ ಬಣ್ಣಗಳ ಮಿಶ್ರಣದಿಂದುಂಟಾಗಿದೆಯೆಂದು ತಿಳಿದಿದೆಯಷ್ಟೆ. ಈ ಬಣ್ಣಗಳು ಬೇರೆ ಬೇರೆಯಾಗಿರುವುದು ತರಂಗಾಯಾಮದ ವ್ಯತ್ಯಾಸದಿಂದಲೇ ಇವೆಲ್ಲವೂ ಬೆಳಕೇ; ಎಲ್ಲಕ್ಕೂ ಅಣುಸ್ಫುರಣವೇ ಮೂಲ; ಆದರೆ ಹಳದಿ ಬಣ್ಣವನ್ನುಂಟುಮಾಡುವ ತರಂಗಗಳಿಗೂ, ಕೆಂಪನ್ನುಂಟುಮಾಡುವ ಅಲೆಗಳಿಗೂ, ಆಯಾಮವ್ಯತ್ಯಾಸವಿರುತ್ತದೆ. ಕೆಂಪಿನ ಅಲೆಗಳು ತುಂಬ ತರಂಗಾಯಾಮವುಳ್ಳವು; ಈ ಶ್ರೇಣಿಯ ಮತ್ತೊಂದು ಕೊನೆ (Other endof the scale) ಯಲ್ಲಿರುವ ನೀಲಲೋಹಿತವು (Violet) ತುಂಬ ಕಡಿಮೆಯಾದ ಆಯಾಮವುಳ್ಳದ್ದು. ಕೆಂಪಿಗಿಂತ ಹೆಚ್ಚು (Infrared), ನೀಲಲೋಹಿತಕ್ಕಿಂತ ಕಡಿಮೆ (Ultra. violet) ತರಂಗಾಂತರವುಳ್ಳವು ಕಣ್ಣಿಗೆ ಗೋಚರವಾಗಲಾರವು; ಫೋಟೋಗ್ರಾಫಿಕ್ ಪ್ಲೇಟುಗಳನ್ನು ಮಾತ್ರ ಮಾರ್ಪಡಿಸಬಲ್ಲುವು.

ವಿದ್ಯುತ್ತರಂಗಳಿಂದ ಆರಂಭಿಸಿ ಕ್ರಮವಾಗಿ ತರಂಗಾಯಾಮವನ್ನು ಕಮ್ಮಿಮಾಡುತ್ತ ಅಂದರೆ ಸ್ಫುರಣವೇಗವನ್ನು ಹೆಚ್ಚಿಸುತ್ತ ಬಂದರೆ ಕೆಂಪಿಗಿಂತ ಹೆಚ್ಚು ಆಯಾಮವುಳ್ಳ ತೇಜಸ್ಸು (Infrared) ನಮಗೆ ಸಿಗುತ್ತದೆ; ಆಮೇಲೆ ಕೆಂಪು, ಹಳದಿ ನೀಲಿ, ನೀಲಲೋಹಿತ ಬಣ್ಣಗಳು ಕ್ರಮವಾಗಿ ಸಿಗುತ್ತವೆ; ಅಲ್ಲಿಂದ ಮುಂದೆ ಅದೃಶ್ಯವಾದ "ಅತಿನೀಲಲೋಹಿತ" (Ultra Violet) ವರ್ಗವು ಬರುವುದು. ಇನ್ನೂ ಮುಂದೆ ಹೋದರೆ ನಮ್ಮ ದಿವ್ಯರಶ್ಮಿವರ್ಗವು ಸಿಕ್ಕುವುದು. ಇದರಲ್ಲಿ ಸ್ಫುರಣವೇಗ ಹೆಚ್ಚಾದಷ್ಟು ರಶ್ಮಿಗಳ ಪ್ರವೇಶನಾಶಕ್ತಿ (Penetrating Power) ಹೆಚ್ಚಾಗುತ್ತದೆ. ಈ ಶಕ್ತಿ ಕಮ್ಮಿಇದ್ದರೆ ಮೃದು (Soft Xrays) ಹೆಚ್ಚಾಗಿದ್ದರೆ, ಕಠಿಣ (Hard X rays) ವೆನ್ನುತ್ತಾರೆ. ಇನ್ನೂ ತರಂಗಾಯಾಮ ಕಮ್ಮಿಯಾಗಲು "ಗ್ಯಾಮ" ಕಿರಣಗಳು ಸಿಕ್ಕುತ್ತವೆ.

ಆದಕಾರಣ, ಕೆಳಗಣ ಪಟ್ಟಿಯಲ್ಲಿ ಕಾಣಬರುವ ಅದ್ಭುತಗಳೆಲ್ಲಕ್ಕೂ ಒಂದೇ ಮೂಲಕಾರಣವಿದ್ದರೂ ಅವುಗಳ ತರಂಗಾಯಾಮವ್ಯತ್ಯಾಸದಿಂದ ಸ್ವಭಾವದಲ್ಲಿ ಕೆಲವು ವ್ಯತ್ಯಾಸಗಳಿವೆಯೇ ಹೊರತು ವಸ್ತುತಃ ಒಂದಕ್ಕೊಂದಕ್ಕೆ ಭೇದವಿಲ್ಲ. ಎಲ್ಲ ಒಂದೇ ಜಾತಿಯವು; ಒಂದೇ ಅವಿಚ್ಛಿನ್ನವಾದ ಪರಂಪರೆ (Continuous Series) ಗೆ ಸೇರಿದುವೇ ಹೊರತು ಬೇರೆ ಅಲ್ಲ. ನಮ್ಮ ದಿವ್ಯರಶ್ಮಿಗಳೂ ಈ ಜಾತಿಯವೇ.

ದಿವ್ಯರಶ್ಮಿಗಳಲ್ಲಿಯೂ ತರಂಗಾಯಾಮವು ಬೇರೆ ಬೇರೆ ಇದ್ದು ಬೇರೆ ಬೇರೆ ಜಾತಿಯ ದಿವ್ಯರಶ್ಮಿಗಳೂ ಇರಬಹುದು. ಅಂವರೆ ಬೆಳಕಿನಲ್ಲಿ ಹೇಗೆ ಬೇರೆ ಬೇರೆ ಬಣ್ಣಗಳಿವೆಯೋ ಹಾಗೆ ಬೇರೆ ಬೇರೆ ಲೋಹಗಳಿಂದ ಮಾಡಿದ "ಗುರಿ" (Target) ಗಳಿಂದ ಬೇರೆ ಬೇರೆ "ಬಣ್ಣ" ಅಂದರೆ ತರಂಗಾಯಾಮದ ದಿವ್ಯ ರಶ್ಮಿಗಳುತ್ಪನ್ನವಾಗುವವು. ಇವುಗಳಿಗೆ ತಕ್ಕ ಹಾಗೆ ಪ್ರವೇಶನಶಕ್ತಿಭೇದವೂ ಇರುವುದು. ಬಿಳೀ ಬಣ್ಣದ ಬೆಳಕಿನ ಹಾಗೆಯೇ ಅನೇಕ ತರಂಗಾಯಾಮಗಳ ಮಿಶ್ರವಾದ "ಬಿಳಿ" ಅಥವಾ "ಸಾಮಾನ್ಯ" (White or General X rays) ದಿವ್ಯರಶ್ಮಿಗಳುಂಟು.

ವೈದ್ಯ ಶಾಸ್ತ್ರದಲ್ಲಿ ನಮ್ಮ ಈ ದಿವ್ಯ ಕಿರಣಗಳು ಪ್ರಯೋಗಿಸಲ್ಪಟ್ಟಿರುವುದಲ್ಲದೆ ಅವುಗಳಿಂದ ಮತ್ತೊಂದು ಮಹತ್ಕಾರ್ಯವು ಸಾಧಿಸಲ್ಪಟ್ಟಿದೆ.

ಸ್ಫಟಿಕ (crystal) ಗಳಲ್ಲಿನ ಸಂಯುಕ್ತ ಪದಾರ್ಥಗಳ ಭಾಗಗಳಾದ ಬೇರೆ ಬೇರೆ ಅಣುಗಳು ಅಥವಾ ಅಣುಸಮೂಹಗಳು ಈ ಸ್ಫಟಿಕದೊಳಗೆ ಯಾವ ರೀತಿ ಸೇರಿಸಲ್ಪಟ್ಟಿವೆ, ಯಾವ ಗಾತ್ರದ ಇಂತಹ ಅಣು ಸಮೂಹಗಳ ಜೋಡಣೆಯಿಂದ ಸ್ಫಟಿಕದಲ್ಲಿನ ವಿನ್ಯಾಸವು ಏರ್ಪಡುತ್ತದೆ, ಅದರ ಸಾಂದ್ರತೆ (Density) ಮತ್ತು ಇತರ ಗುಣಗಳು

(Properties) ಅನ್ವಯವಾಗುತ್ತವೆ. ಎನ್ನುವ ವಿಷಯುಗಳನ್ನು ಈ ರಶ್ಮಿಗಳ ಸಹಾಯದಿಂದ ಶೋಧಿಸಲಾಗಿದೆ. ಈ ಸ್ಫಟಿಕಗಳನ್ನು ಹಾಗೆಯೋ ಅಥವಾ ಭಸ್ಮರೂಪವಾಗಿಯೋ ದಿವ್ಯರಶ್ಮಿಗಳಿಗಡ್ಡಲಾಗಿಟ್ಟರೆ, ರಶ್ಮಿಗಳು ಆ ಪದಾರ್ಥದ ಮೂಲಕ ಪ್ರವೇಶಿಸಿ ಹಿಂದಿಡಲ್ಪಟ್ಟ ಫೋಟೋಗ್ರಾಫಿಕ್ ಪ್ಲೇಟಿನ ಮೇಲೆ ಕೆಲವು ಬಗೆಯ ಚಿತ್ರಗಳನ್ನು ಕೊಡುತ್ತವೆ. ಈ ಚಿತ್ರಗಳ ಪರೀಕ್ಷಣದಿಂದ ಸ್ಫಟಿಕವಿನ್ಯಾಸವು ಸ್ಪಷ್ಟವಾಗಿ ಕಾಣುತ್ತದೆ.

ಆದುದರಿಂದ ನಮ್ಮ ದಿವ್ಯಕಿರಣಗಳು ನಮ್ಮ ದೇಹದೊಳಗೆ ಪ್ರವೇಶಿಸಿ ಅದರಲ್ಲಿನ ಭಗವನ್ಮಾಯೆಯನ್ನೂ, ಆತನ ಶಿಲ್ಪಕೌಶಲ್ಯವನ್ನೂ ನಮಗೆ ತೋರಿಸಿಕೊಡುವುದಲ್ಲದೆ, ಇತರ ಪದಾರ್ಥಗಳೊಳಗೂ ಹೋಗಿ ಅವು ಸ್ಫಟಿಕಗಳೇ ಅಲ್ಲವೇ ಎನ್ನುವುದನ್ನೂ ಹಾಗಿದ್ದರೆ ಅವುಗಳ ರಚನೆಯನ್ನೂ ಕಣ್ಣು ಮುಂದಿಡುತ್ತವೆ. ಈಗಾಗಲೇ ಅನೇಕ ಸ್ಫಟಿಕಗಳ ರಚನೆ ಹೀಗೆ ನಿರ್ಣಯವಾಗಿದೆ; ಇನ್ನೂ ಅನೇಕ ಘನ ಪದಾರ್ಥಗಳು ಪರೀಕ್ಷೆಗೊಳಗಾಗುತ್ತಿವೆ. ಹೀಗೆಯೇ ದ್ರವ ಮತ್ತು ವಾಯು ಪದಾರ್ಥಗಳು ದಿವ್ಯರಶ್ಮಿಗಳನ್ನು ಹೇಗೆ ಚದರಿಸುತ್ತವೆ (Scatter) ಎಂಬುದನ್ನು ಪರೀಕ್ಷಿಸಿ ಇದರಿಂದ ವಸ್ತು ರಚನೆಯ (Structure of matter) ವಿಷಯವಾಗಿ ಅನೇಕ ವಿಚಾರಗಳು ಬಯಲಿಗೆ ಬೀಳುತ್ತಿವೆ. ಈ ವಿಷಯವಲ್ಲಿ ಈಗ ನಮ್ಮ ದೇಶದಲ್ಲಿಯೇ ಪ್ರೊಫೆಸರ್ ರಾಮನ್ ಎಂಬವರು ಕಲಕತ್ತೆಯಲ್ಲಿ ತಮ್ಮ ಪ್ರಯೋಗಾಲಯದಲ್ಲಿ ಬಹಳ ಶೋಧಗಳನ್ನು ನಡೆಸುತಲಿದ್ದಾರೆ. ದಿವ ರಶ್ಮಿಗಳ ಸ್ವಭಾವವನ್ನು ಕುರಿತು ಪ್ರಯೋಗ ನಡೆಯಿಸಿದವರಲ್ಲಿ ಅನೇಕರು ಪ್ರಪಂಚದಲ್ಲೆಲ್ಲಾ ಅತಿವಿಖ್ಯಾತರಾದ ಶಾಸ್ತ್ರಜ್ಞರೆನಿಸಿಕೊಂಡು ಜ್ಞಾನಪ್ರಪಂಚವನ್ನು ವಿಸ್ತರಿಸಿ ಕೀರ್ತಿ ಪಡೆದಿರುತ್ತಾರೆ. ಇವರಲ್ಲಿ ಸೀಗ್‌ಬಾನ್, (Seigbhan) ಬಾರ್‍ಕ್ಲಾ (Barkla) ಕಾಂಪ್‌ಟನ್ (Compton) ಇವರು ಎಲ್ಲಕ್ಕಿಂತ ಅತಿಶಯವಾದ 'ನೊಬೆಲ್' ಬಹುಮಾನವನ್ನು (Nobel Prize) ಪಡೆದವರಾಗಿರುತ್ತಾರೆ. ಇವರಲ್ಲಿ ಕಾಂಪ್‌ಟನ್ ಎಂಬವರಿಗೆ ಇದೇ ವರ್ಷ ಈ ಬಹುಮಾನವು ಬಂದಿತು.

ಹೀಗೆ ದಿವ್ಯದೃಷ್ಟಿಗೆ ಮಾತ್ರ ಸಾಧ್ಯವೆನಿಸಿಕೊಂಡಿದ್ದ ಭಗವನ್ಮಾಯೆಗಳನ್ನು ನಮಗೆ ಸಾಕ್ಷಾತ್ತಾಗಿ ತೋರಿಸಿಕೊಟ್ಟಿರುವ ಈ ಸಾಧನಗಳಿಗೆ "ದಿವ್ಯರಶ್ಮಿ" ಗಳೆಂಬ ಹೆಸರು ಸಾರ್ಥಕವಲ್ಲವೇ ?

## ವಿವಿಧ ತರಂಗಗಳ ಪಟ್ಟಿ

| ಪರಿಣಾಮದ ಹೆಸರು. | ಸ್ಫುರಣವೇಗ) (ಒಂದು ಸೆಕೆಂಡಿಗೆ | ತರಂಗಾಯಾಮ (ಸೆಂಟಿಮೀಟರುಗಳು) ೧ಇಂಚು (ಅಂಗುಲ) = ೨ ೫/೧೦ ಸೆಂಟಿಮೀಟರ |
| --- | --- | --- |
| ವಿದ್ಯುತ್ತರಂಗ | ೧,೦೦೦೦೦೦ | ೩೦೦೦೦ |
| ಹಳದಿ ಬೆಳಕು | ೫,೦೦೦,೦೦೦,೦೦೦,೦೦೦,೦೦ | ೬/೧೦೦೦೦೦ |
| ನೀಲಲೋಹಿತ ವರ್ಣಾತೀತ | ೩,೦೦೦,೦೦೦,೦೦೦,೦೦೦,೦೦೦ | ೧/೧೦೦೦೦೦ |
| "ಮೃದು" ದಿವ್ಯರಶ್ಮಿ | ೩,೦೦೦೦೦೦೦೦೦೦೦೦೦೦೦೦೦ | ೧/೧೦೦೦೦೦೦೦ |
| ದಿವ್ಯರಶ್ಮಿ (ಸಾಧಾರಣ) | ೩,೦೦೦೦೦೦೦೦೦೦೦೦೦೦೦೦೦೦ | ೧/೧೦೦೦೦೦೦೦೦ |
| "ಕಠಿಣ" ದಿವ್ಯರಶ್ಮಿ | ೩,೦೦೦೦೦೦೦೦೦೦೦೦೦೦೦೦೦೦೦ | ೧/೧೦೦೦೦೦೦೦೦೦ |
| 'ಗ್ಯಾಮ' ಕಿರಣ | ೧೦೦೦೦೦೦೦೦೦೦೦೦೦೦೦೦೦೦೦೦೦ | ೧/೧೦೦೦೦೦೦೦೦೦೦೦ |

# ತ್ರಿಪದಿ

ಲೇಖಕ:— ಶ್ರೀ ಪ್ರಲ್ಹಾದ

ಕನ್ನಡ ವೃತ್ತಗಳಲ್ಲಿ ಷಟ್ಪದಿಗಳಿಗೆ ಅಗ್ರಸ್ಥಾನವು ಕೊಡಲ್ಪಟ್ಟಿದೆಯೆಂದು ಹೇಳಬಹುದು. ೧೨ನೆಯ ಶತಮಾನದವರೆಗಿನ ಕವಿಗಳೆಲ್ಲರೂ ಸಂಸ್ಕೃತ ವೃತ್ತಗಳಲ್ಲಿಯೇ ತಮ್ಮ ಕಾವ್ಯಗಳನ್ನು ರಚಿಸಿದರು. ಅವುಗಳಲ್ಲಿ ಕನ್ನಡ ವೃತ್ತಗಳು ಅಲ್ಲೊಂದಿಲ್ಲೊಂದು. ೧೨ನೆಯ ಶತಮಾನದಿಂದ ಕವಿಗಳು ಪೂರ್ವದ ಚಂಪೂಕಾವ್ಯಗಳಿಂದ ಭಿನ್ನವಾದ ಮಾರ್ಗವನ್ನು ಹಿಡಿಯಲು ಪ್ರಾರಂಭಿಸಿದರು. ಆಗ ಷಟ್ಪದಿಗೆ ವಿಶೇಷ ಪ್ರಾಶಸ್ತ್ಯವು ದೊರೆಯಿತು. ಷಟ್ಪದಿ ಕಾವ್ಯಗಳು ಅಗ್ಗಳವಾಗಿ ಹುಟ್ಟಿದುವು ಕವಿಗಳು ಈ ಷಟ್ಪದಿಗೆ ಮೋಹಿಸಿ ತಮ್ಮ ಗ್ರಂಥಗಳಲ್ಲಿ ಮನಬಂದಂತೆ ಹೊಗಳಿರುವರು. ನಾಗವರ್ಮನು ಕರ್ಣಾಟ ವಿಷಮ ಜಾತಿಯಲ್ಲಿ ಹೇಳಿದ ಮದನವತಿ, ಅಕ್ಕರ, ಗೀತಿಕೆ, ಏಳೆ, ಅಕ್ಕರಿಕೆ ಛಂದೋವತಂಸ ಮೊದಲಾದುವುಗಳಲ್ಲಿ ಸಂಪೂರ್ಣಕಾವ್ಯಗಳನ್ನು ಬರೆದುದು ನೋಡಲಿಕ್ಕೆ ಸಿಕ್ಕುವುದಿಲ್ಲ. ವೀರಶೈವ ಕವಿಗಳೇನೋ ತ್ರಿಪದಿಯಲ್ಲಿ ಕೆಲವು ಕಾವ್ಯಗಳನ್ನು ಬರೆದಿರುವರು ಅವೂ ಕೈಬೆರಳಿನಲ್ಲಿ ಎಣಿಸುವಷ್ಟು. ಅವುಗಳಲ್ಲಿಯೂ ಸರ್ವಜ್ಞವಚನಗಳನ್ನು ಬಿಟ್ಟರೆ ಉಳಿದ ಕಾವ್ಯಗಳ ಹೆಸರುಗಳನ್ನು ಸಹ ಕನ್ನಡಿಗರು ಕೇಳಿದುದು ವಿರಳ. ತ್ರಿಪದಿಯೆಂದ ಕೂಡಲೆ ಸರ್ವಜ್ಞವಚನಗಳೇ ಎಂದು ಗ್ರಹಿಕೆಯಾಗುವ ಸ್ಥಿತಿ ಬಂದಿದೆ. ಕನ್ನಡಿಗರು ಸರ್ವಜ್ಞವಚನಗಳನ್ನು ಮರೆತರೆ ( ಅದು ಶಕ್ಯವೇ ? ) ತ್ರಿಪದಿ ಹೇಳಹೆಸರಿಲ್ಲದಂತಾಗುವುದೆಂದು ಮೇಲೆ ಮೇಲೆ ನೋಡುವಲ್ಲಿ ಕಂಡು ಬರುವುದು. ಆದರೆ ಕನ್ನಡಿಗರಲ್ಲಿ ಆಳವಾಗಿ ಬೇರೂರಿರುವ ತ್ರಿಪದಿಯನ್ನು ನೋಡುವಲ್ಲಿ ಕನ್ನಡ ನುಡಿ ಬಾಳಿರುವವರೆಗೆ ತ್ರಿಪದಿಯೂ ಬದುಕಿರುವುದೆಂದು ಹೇಳಬೇಕಾಗುತ್ತದೆ. ಇದಿಷ್ಟು ಹೇಳಿದರೆ ಕನ್ನಡಿಗರು ತ್ರಿಪದಿಗೆಯೆ ಅಗ್ರಸ್ಥಾನವನ್ನು ಕೊಟ್ಟಿರುವರೆಂಬುದನ್ನು ಬೇರೆಯಾಗಿ ಹೇಳಬೇಕಾಗುವುದಿಲ್ಲ. ಆದರೆ ದುರ್ದೈವದಿಂದ ಅಚ್ಚಗನ್ನಡಿಗರಲ್ಲಿ ಆಳವಾಗಿ ಬೇರೂರಿರುವ ತ್ರಿಪದಿಯ ಕಡೆಗೆ ಅದಾರ ಲಕ್ಷ್ಯವೂ ಹೋದಂತೆ ಕಾಣುವುದಿಲ್ಲ.

ತ್ರಿಪದಿಯನ್ನು ಕುರಿತು ಹೆಚ್ಚು ವಿಚಾರ ಮಾಡುವವರೆಂದರೆ ಸರ್ವಜ್ಞ ವಚನಗಳನ್ನೂ ಅವನ ಜೀವಿತದ ವಿಚಾರವನ್ನೂ ಸಂಶೋಧಿಸುವವರು. ಇಷ್ಟುದಿನ ಈ ಸರ್ವಜ್ಞಮೂರ್ತಿಯ ವಚನಗಳ ಕಡೆಗೆ ಅದಾರ ಲಕ್ಷ್ಯವೂ ವಿಶೇಷ ಹೋಗಿದ್ದಿಲ್ಲ. ಈಗ ಮ. ಉತ್ತಂಗಿಯವರು ವಿಶೇಷ ಪರಿಶ್ರಮಬಟ್ಟು ಅವನ ವಚನಗಳನ್ನು ಸಂಶೋಧಿಸಿ ಅಚ್ಚುಹಾಕಿಸಿದರು. ಅವರಾದರೂ ಈ ತ್ರಿಪದಿಯ ಬಗ್ಗೆ ವಿಶೇಷ ವಿಚಾರ ಮಾಡಿದಂತೆ ತೋರುವುದಿಲ್ಲ. ಮೇಲೆ ಮೇಲೆ ವಿಚಾರಿಸಿರುವುದರಿಂದಲೇ ತ್ರಿಪದಿಯ ವಿಷಯವಾಗಿ ಅವೆಷ್ಟೋ ವಿಪರ್ಯಾಸ ಮಾಡಿ ಬರೆದಿರುವರು. ಕಾವ್ಯಗಳಲ್ಲಿ ತ್ರಿಪದಿ ವಿಶೇಷವಾಗಿ ಸೇರದಿರುವುದಕ್ಕೆ ಕಾರಣವನ್ನು ಹೀಗೆ ಹೇಳಿರುವರು—"ಕನ್ನಡದಲ್ಲಿ ಕಂದ, ವೃತ್ತ, ಚೌಪದಿ, ಷಟ್ಪದಿ ಮುಂತಾದ ಕಾವ್ಯಪದ್ಧತಿಗಳು, ಕವಿಗಳು ತಮ್ಮ ಕಾವ್ಯ ಚಾತುರ್ಯವನ್ನು ತೋರಿಸುವುದಕ್ಕೆ ಉತ್ತಮ ಸಾಧನಗಳಾಗಿಯೂ ಕೇಳುವುದಕ್ಕೆ ಮನೋಹರವಾಗಿಯೂ ಇರುವದರಿಂದ ಪ್ರೌಢಕವಿಗಳಲ್ಲಿ ಹೆಚ್ಚಿನವರು ಇವುಗಳಲ್ಲಿಯೇ ತಮ್ಮ ಯೋಚನೆಗಳನ್ನು ರೂಪುಗೊಳಿಸಿದ್ದಾರೆ. ಅದರಿಂದ ಕನ್ನಡ ವಾಙ್ಮಯವೆಲ್ಲ ಇವುಗಳಿಂದಲೇ ತುಂಬಿ ಹೋಗಿದೆ. ಆದರೆ ತ್ರಿಪತಿಯಲ್ಲಿ ಈ ತರವ ಸುಭಗತೆಯು ಇಲ್ಲ. ಅದರಿಂದ ಅದು ಕಾವ್ಯಗಳಲ್ಲಿ ಬರುವದು ಅಪರೂಪ. *

ಕಾವ್ಯವೆಂದರೆ ಬಣ್ಣನೆಯ ಹೊತ್ತಿಗೆಯೆಂದು ತಿಳಿದಿರುವ ಕವಿಗಳು ತ್ರಿಪದಿಯನ್ನು ಬಿಸಾಡಿದ ಮಾತ್ರಕ್ಕೆ ಅವರಲ್ಲಿ ಸುಭಗತೆ ಇರುವುದಿಲ್ಲವೆಂದು ಹೇಳಲಿಕ್ಕಾಗುವುದೇ ? ಕನ್ನಡಿಗರಲ್ಲಿ ಆಳವಾಗಿ ಬೇರೂರಿರುವ ತ್ರಿಪದಿ ಅವರ ಕಣ್ಣಿಗೆ ಬಿದ್ದಿದ್ದರೆ ಅವರೆಂದೂ ಹೀಗೆ ಬರೆಯುತ್ತಿದ್ದಿಲ್ಲ. ತ್ರಿಪದಿಯಲ್ಲಿ ಸುಭಗತೆ ಇದ್ದುದರಿಂದಲೇ ಅದು ಕನ್ನಡಿಗರ ಜೀವಾಳದ ವೃತ್ತವಾಗಿದೆ. ಇದೇ ಉತ್ತಂಗಿಯವರು ಸರ್ವಜ್ಞನ ತ್ರಿಪದಿಗಳ ವಿಷಯವಾಗಿ—"ಕಾಡು ಮರಗೆಲಸದವನೆಂದು ತಿಳಿಯಲ್ಪಟ್ಟಿರುವ ಇವನು ತನ್ನ ತ್ರಿಪದಿಯೆಂಬದೊಂದೇ ಚೀರಣದಿಂದ ಬಿಡಿ

* ಸರ್ವಜ್ಞ ವಚನಗನಗಳು: ಪ್ರಸ್ತಾವನೆ ಪುಟ ೪೭–೪೮

ರುವ ಮನೋಹರವಾದ ಚಿತ್ರಗಳನ್ನು ನೋಡಿದಷ್ಟು ಕನ್ನಡಿಗರಿಗೆ ಆನಂದವೆನಿಸುವದು."* ಎಂದು ಬರೆದು ಸರ್ವಜ್ಞನ ವಚನಗಳಲ್ಲಿಯೇ ಆಗಲೊಲ್ಲದೇಕೆ, ತ್ರಿಪದಿಗಳಲ್ಲಿ ಸುಭಗತೆ ಇರುವುದೆಂದು ಒಪ್ಪಿರುವರು.

ತ್ರಿಪದಿಯಲ್ಲಿ ಸುಭಗತೆ ಇರುತ್ತಿದ್ದರೆ ಕವಿಗಳು ತ್ರಿಪದಿಯನ್ನು ಬಿಸಾಡಿಸುವುದೇಕೆ? ಎಂಬುನೊಂದು ಪ್ರಶ್ನೆ ಬರುತ್ತದೆ. ತ್ರಿಪದಿಯನ್ನು ಬಿಸಾಡಲಿಕ್ಕೆ ಉತ್ತಂಗಿಯುವರು ಮತ್ತೊಂದು ಕಾರಣವನ್ನು ಹೀಗೆ ಹೇಳುವರು— "ತ್ರಿಪದಿಗೆ ಒಂದು ತರದ ವಿಲಕ್ಷಣ ಸ್ವಭಾವವಿದ್ದು ಇದರಲ್ಲಿ ಪದ್ಯಗಳನ್ನು ರಚಿಸುವದು ಅನೇಕಾವರ್ತಿ ತೋರುವಷ್ಟು ಸುಲಭವಾಗಿರುವದಿಲ್ಲವಾದ್ದರಿಂದಲೂ ಇದರಲ್ಲಿ ೫೦ಕ್ಕಿಂತ ಹೆಚ್ಚು ಮಾತ್ರೆಗಳುಳ್ಳ ಪದ್ಯಗಳನ್ನು ಅಂದರೆ ಪಾಂಡಿತ್ಯವನ್ನು ವೇದ್ಯವರಿಸುವ ದೀರ್ಘಸಮಾಸಗಳನ್ನು ಸೇರಿಸುವದಕ್ಕೆ ಅನುಕೂಲವಿಲ್ಲದ್ದರಿಂದಲೂ ಕವಿಗಳಲ್ಲಿ ಹೆಚ್ಚಿನವರು ಇದನ್ನು ಬಿರುಸು ಕಟ್ಟಿಗೆಯೆಂದು ಬಿಸಾಡಿ ಬಿಟ್ಟಿದ್ದಾರೆ."†

ಇದೂ ಪೂರ್ಣವಾಗಿ ಸಮಂಜಸವಾಗುವುದಿಲ್ಲ. ತ್ರಿಪದಿಯಲ್ಲಿ ಪದ್ಯಗಳಳನ್ನು ರಚಿಸುವುದು ಬಹು ಸುಲಭ. ಅದೆಷ್ಟು ಸುಲಭವಾಗಿರುವುದೆಂಬುದು ತ್ರಿಪದಿಯನ್ನು ರಚಿಸುವ ಮತ್ತು ಹಾಡುವ ಕನ್ನಡಿಗರ ತರಗತಿಯನ್ನು ನೋಡಿದರೆ ಸ್ಪಷ್ಟವಾಗಿ ತೋರುವಂತಿದೆ. ಕನ್ನಡ ಕವಿಗಳಿಂದ ಅಗ್ರಮಾನವನ್ನು ದೊರಕಿಸಿರುವ ಷಟ್ಪದಿಗಳಲ್ಲಾದರೂ ೫೦ಕ್ಕಿಂತ ಹೆಚ್ಚಿನ ಮಾತ್ರೆಯುಗಣಗಳು ಎಲ್ಲಿವೆ? ಹೀಗಿರಲು ಷಟ್ಪದಿಗಳಲ್ಲಿ ತೋರಿಸುವ ಪಾಂಡಿತ್ಯವನ್ನು ತ್ರಿಪದಿಯಲ್ಲಿ ತೋರಿಸಲಿಕ್ಕೆ ಬರುತ್ತಿದ್ದಿಲ್ಲವೆ? ಅವರು ತ್ರಿಪದಿಯನ್ನು ಬಿಸಾಡಲಿಕ್ಕೆ ಅದರಲ್ಲಿರುವ ೫ ಮಾತ್ರೆಯ ಗಣಗಳು ಕಾರಣವಾಗಲಿಲ್ಲ. ಪೂರ್ವದ ಕವಿಗಳು ಕಾವ್ಯವೆಂದರೆ ಬಣ್ಣನೆಯ ಹೊತ್ತಿಗೆಯೆಂದು ತಿಳಿಯುತ್ತಿದ್ದರೆಂದು ಅವರ ಕಾವ್ಯಗಳಿಂದಲೇ ಕಂಡುಬರುತ್ತದೆ.

ಉದಧಿ ಪುರಾಧಿಪ ಸುತ ಮಂ-।
ತ್ರಿ ದೂತ ಗಮನಾಜಿ ವಿರಹ ಪರಿಣಯ ಸುರತ ॥
ರ್ತು ದಿನೇಶ ಚಂದ್ರ ಮಧುಕುಭೃ ।
ದಂದಕ ವನಸ್ಪತಿಯ ಕೃತಿಗೆ ಪದಿನೆಂಟಂಗಂ ।

—ಉದಯಾದಿತ್ಯಾಲಂಕಾರ ೧೩

ಹದಿನೆಂಟು ವಸ್ತುಗಳ ವರ್ಣನೆ ಇದ್ದರೆ ಮಹಾಕಾವ್ಯವಾಗುತ್ತಿತ್ತು. ಅದರಿಂದ ಈ ಹದಿನೆಂಟು ವಸ್ತುಗಳಲ್ಲಿ ಆವುದೊಂದು ವಸ್ತು ಬಂದರೆ ಬಣ್ಣನೆಗೆ ಸೀಮೆಯೆ ಉಳಿಯುತ್ತಿರಲಿಲ್ಲ. ಇವುಗಳ ಬಣ್ಣನೆಯನ್ನು ದೀರ್ಘಸಮಾಸಯುಕ್ತ ಪಾಂಡಿತ್ಯದ ಭಾಷೆಯಲ್ಲಿ ಬಗೆ ಬಗೆಯ ರೀತಿಯಲ್ಲಿ ಮುಂದಿರಿಸಲು ಚಿಕ್ಕ ಚಿಕ್ಕ ವೃತ್ತಗಳಲ್ಲಿ ಆಸ್ಪದವಿರುವುದಿಲ್ಲ. ಅದಕ್ಕಾಗಿಯೇ ಪೂರ್ವದ ಕವಿಗಳು ಚಂಪೂಗ್ರಂಥಗಳಲ್ಲಿ ಪ್ರತಿಯೊಂದು ಚರಣದಲ್ಲಿ ೨೯ ಇಲ್ಲವೆ ಅದಕ್ಕೂ ಹೆಚ್ಚು ಅಕ್ಷರಗಳುಳ್ಳ ಅಕ್ಷರ ವೃತ್ತಗಳನ್ನು ಉಪಯೋಗಿಸಿರುವರು. ವರ್ಣನೆಗೆ ವೃತ್ತಗಳೂ ಎಲ್ಲಿ ಸಾಲುವುದಿಲ್ಲವೆಂದೆನಿಸಿತೊ ಅಲ್ಲಿ ಅವನ್ನೂ ಬಿಟ್ಟು ೧–೨ ಪುಟಗಳ ವರೆಗೂ ಬರೆಯಲಿಕ್ಕೆ ಅನುಕೂಲವಿರುವ ಗದ್ಯವನ್ನು ಉಪಯೋಗಿಸಿರುವರು. ಷಟ್ಪದಿಗಳಲ್ಲಿ ಕಾವ್ಯ ಬರೆದಿರುವ ಕವಿಗಳೂ ಶರಷಟ್ಪದಿಯಂತಹ ಚಿಕ್ಕ ಷಟ್ಪದಿಯನ್ನು ಬಿಟ್ಟು ಭಾಮಿನಿ ವಾರ್ಧಿಕ ಷಟ್ಪದಿಗಳನ್ನೇ ವಿಶೇಷವಾಗಿ ಬಳಸಿರುವರು. ೬೦ ಮಾತ್ರೆಯ ಶರಷಟ್ಪದಿ ಅನುಕೂಲಿಸದಿರುವಾಗ ೫೦ ಮಾತ್ರೆಯ ತ್ರಿಪದಿಯಲ್ಲಿ ಆಸ್ಪದವು ಹೇಗೆ ದೊರೆಯಬೇಕು? ತ್ರಿಪದಿಯಲ್ಲಿ ರಚಿಸುವ ಪದ್ಯಗಳು ಅಚ್ಚುಕಟ್ಟಾಗಿಯೇ ಇರಬೇಕಾಗುವುದು. ಹೀಗೆ ಅಚ್ಚುಕಟ್ಟಾಗಿ ಸಂಪೂರ್ಣಕಾವ್ಯಗಳನ್ನು—ಬರೆವುದು ಬಿಗಿ ಅದರಿಂದಲೇ ಕೃತಿಗಳಲ್ಲಿ ತ್ರಿಪದಿಗೆ ಸ್ಥಾನದೊರೆಯಲಿಲ್ಲ. ಬರೆದ ೮–೧೦ ಕಾವ್ಯಗಳ ವಿಷಯಗಳು ವರ್ಣನೆ, ಚರಿತ್ರೆ ಮೊದಲಾದುವಾಗಿರದೆ ಸ್ತೋತ್ರ ವೇದಾಂತಗಳೇ ಆಗಿವೆ.‡

* ಸರ್ವಜ್ಞ ವಚನಗಳು: ಪ್ರಸ್ತಾವನೆ. ಪುಟ ೪೯–೫೦

† ಸರ್ವಜ್ಞನ ವಚನ ಪ್ರಸ್ತಾವನೆ ಪುಟ ೪೯

‡ ತ್ರಿಪದಿಯಲ್ಲಿ ಬರೆದ ಗ್ರಂಥಗಳು—ಸಿದ್ಧರಾಮನ ಮಿತ್ರಸ್ತೋತ್ರ ತ್ರಿವಿಧಿ, ಬಸವಸ್ತೋತ್ರ ತ್ರಿವಿಧಿ. ಅಷ್ಟಾವರಣ ಸ್ತೋತ್ರ ತ್ರಿವಿಧಿ; ...ಮ್ಮನ ತ್ರಿವಿಧಿ; ಶೀಲವಂತಯ್ಯನ ಗುರುಲಿಂಗ ತ್ರಿವಿಧಿ; ಮಲ್ಲಿಕಾರ್ಜುನನ ತ್ರಿಪದಿ; ಕರಸ್ಥಲನಾಗದೇವನ ತ್ರಿಪದಿ ಪರಂಜ್ಯೋತಿ ಅನುಭವ ಮುಕುರ ...ವಣ: ಲಿಂಗದೇವನ ಬೋಧಾಮೃತ ಸರ್ವಜ್ಞ ವಚನ ಮು. ಪ್ರ. ೪೯

ತ್ರಿಪದಿಯಲ್ಲಿ ಉಪಮಾನ ಮೊದಲಾದುವುಗಳಿಗೆ ವಿಶೇಷ ಆಸ್ಪದವಿಲ್ಲ. ಅಚ್ಚುಕಟ್ಟಾಗಿಯೇ ಬರೆಯಬೇಕು. ಹೀಗೆ ಬರೆದುದು ರಸವತ್ತಾಗುವುದೇ ? ಎಂದ ಮೇಲೆ ಸುಭಗತೆಯೆಲ್ಲಿ ? ಕವಿಗಳೆಲ್ಲರೂ ಬೀಸಾಡಿದ ತ್ರಿಪದಿಗೆ ಕನ್ನಡದಲ್ಲಿ ಅಗ್ರಸ್ಥಾನವಿದೆಯೆಂದು ಹೇಳುವುದು ಹೇಗೆ ? ಎಂದು ಕೇಳಬಹುದು. ಕಥೆ ವರ್ಣನೆಗಳನ್ನು ಬರೆಯಲು ಬಾರದಿದ್ದರೆ ಎಲ್ಲಕ್ಕೂ ನಿರುಪಯುಕ್ತವಾಯಿತೇನು ? ಖಂಡ ಕಾವ್ಯಗಳಿಗೂ ಸ್ಫುಟ ಕವಿತೆಗಳಿಗೂ ವಿಶೇಷ ಅನುಕೂಲಿಸಬಾರದೇಕೆ? ಇಂತಹ ಖಂಡಕಾವ್ಯಗಳನ್ನೂ ಸ್ಫುಟಕವಿತೆಗಳನ್ನೂ ಬರೆವ ಗೋಜಿಗೆ ಪೂರ್ವದ ಕವಿಗಳು ಹೋಗಲಿಲ್ಲ. ಆದರಿಂದ ಅವರು ತ್ರಿಪದಿಯನ್ನು ತಿರಸ್ಕರಿಸಿರುವರು. ಈ ತಿರಸ್ಕೃತ ತ್ರಿಪದಿಯೇ ಸರ್ವಜ್ಞನಿಗೆ ಅನುಕೂಲವಾಗಿ ಕಂಡಿತು ಇನ್ನು ಅಚ್ಚುಕಟ್ಟಿನ ಮಾತು. ಅಚ್ಚುಕಟ್ಟಾದುದು ಮನೋಹರ ಇರುವುದೇ ಇಲ್ಲವೆ ? ಒಂದು ಚಿತ್ರವನ್ನು ತೆಗೆವುದಿದ್ದಲ್ಲಿ ಕೆಲಚಿತ್ರಕಾರರು ಚಿತ್ರವು ಮನೋಹರವಾಗಿ ಕಾಣಬೇಕೆಂದು ಅದಕ್ಕೆ ಹೊಂದಿ ಗಿಡಬಳ್ಳಿಗಳನ್ನು ಚಿತ್ರಿಸುವರು. ಬೇರೆ ಕೆಲವರು ಈ ಗೊಂದಲ ಹಾಕದೆ ಅಚ್ಚುಕಟ್ಟಾಗಿಯೇ ಚಿತ್ರಿಸುವರು. ಇಂತಹ ಚಿತ್ರವೂ ಅದೆಷ್ಟೋ ಮನೋಹರವಾಗಿರುವುದು. ಈ ಮಾತನ್ನು ನಂಬದವರು ವೆಂಕಟಪ್ಪನವರು ಚಿತ್ರಿಸಿದ ಅರ್ಧ ನಾರೀಶ್ವರನ ಚಿತ್ರವನ್ನು ನೋಡಬೇಕು. *

"ಎಂಟು ಹತ್ತು ನೀರಸ ಕಾವ್ಯಗಳು ಮಾತ್ರ ರಚಿಸಲ್ಪಟ್ಟ ತ್ರಿಪದಿ ಕನ್ನಡಿಗರಲ್ಲಿ ಆಳವಾಗಿ ಬೇರೂರಿರುವುದೆಂದು ಹೇಗೆ ಹೇಳುವುದು ? ತ್ರಿಪದಿ ಮತ್ತೆಲ್ಲಿರುವುದು ? ತ್ರಿಪದಿಗೆ ಕನ್ನಡಿಗರು ವಿಶೇಷ ಮರುಳಾಗಿರುವರೆಂದು ಹೇಳುವ ಮಾತು ಹೇಗೆ ಸಮಂಜಸ ? ಇದೇನೋ ಒಣಮಾತು," ಎನ್ನಬಹುದು ಆವುದೊಂದು ವಿಷಯವನ್ನು ತೆಗೆದುಕೊಂಡು ಹೇಳುವಾಗ ಆ ವಿಷಯವು ವಿಶೇಷ ಮಹತ್ವದ್ದೆಂದು ಹೇಳುವ ಪರಿಪಾಠ. ಅದರಂತೆಯೆ ನಾನು ಹೇಳಿರುವೆನೆಂದೂ ಎನ್ನಬಹುದು. ಹಾಗೇನೂ ಇದರಲ್ಲಿಲ್ಲ. ತ್ರಿಪದಿಯ ಮಹತ್ವವು ನನಗಾದರೂ ಇಷ್ಟುದಿನ ಎಲ್ಲಿ ಗೊತ್ತಿತ್ತು? ಶಾಲೆಯಲ್ಲಿ ಕಲಿತ ಸರ್ವಜ್ಞಪದಗಳೇ ತ್ರಿಪದಿಯೆಂದೂ ಅವು ಮನೋಹರದಾಟಿಯಲ್ಲಿ ಎನ್ನಲಿಕ್ಕೆ ಬಾರದ ಪದ್ಯಗಳೆಂದೂ ಭಾವಿಸಿದ್ದೆನು. ಅದೆಂದು ಕನ್ನಡಿಗರು ಹೆಜ್ಜೆ ಹೆಜ್ಜೆಗೆ ಎನ್ನುವ ಅನೇಕ ಪದ್ಯಗಳೂ ತ್ರಿಪದಿಯಲ್ಲಿರುವುವು ತಿಳಿಯಿತೋ ಅಂದು ತ್ರಿಪದಿಯ ವಿಷಯವಾಗಿರುವ ಮೊದಲಿನ ಭಾವನೆ ದೂರಾಯಿತು.

ಪ್ರತಿ ದಿವಸ ಸೂರ್ಯೋದಯಕ್ಕೆ ಏಳುವ ನಾನು ಕೆಲದಿನ ಅರುಣೋದಯಕ್ಕೆ ಏಳಬೇಕಾಗಿ ಬಂತು. ಈ ವೇಳೆಗ ನಮ್ಮ ನೆರೆಮನೆಯ ಹೆಣ್ಣುಮಗಳು ಬೀಸಲಿಕ್ಕೆಹಾಕುತ್ತಿದ್ದಳು. ನಾವಿರುವ ಮನೆಗೂ ಅವಳ ಮನೆಗೂ ಒಂದೇ ಪಡಸಾಲೆ. ಅವಳು ಬೀಸಲು ಹಾಕುವುದು ಈ ಪಡಸಾಲೆಯೊಳಗೆ. ಆದರಿಂದ ಅವಳು ಹಾಡುವ ಹಾಡುಗಳು ನನಗೆ ಸ್ಪಷ್ಟವಾಗಿ ಕೇಳುತ್ತಿದ್ದುವು. ಅವಳ ಹಾಡಿನೊಳಗಿನ ಕೆಲವು ಭಾಗವು ನನ್ನ ಮನವನ್ನು ಆಕರ್ಷಿಸಿತು. ಪ್ರತಿದಿವಸವೂ ಅವಳ ಹಾಡನ್ನು ಕೇಳಹತ್ತಿದೆನು. ನನಗೆ ಉತ್ತಮವೆನಿಸಿದ ಹಾಡುಗಳನ್ನು ಬರೆದಿಡಬೇಕೆಂದೂ ಬಯಕೆಯಾಯಿತು. ಅವಳು ಹಾಡುವ ಹಾಡುಗಳು ಛಂದೋಬದ್ಧ ವೃತ್ತಗಳೆಂಬುದು ನನಗೆ ಗೊತ್ತಿರಲಿಲ್ಲ. ಹಾಡುಗಳೆಂದೇ ಭಾವಿಸಿದ್ದೆ. ಬರೆದಿಡಬೇಕೆಂದು ಬಯಕೆಯಾಗಲು ಅವಳಿಗೆ ಆಗೆಂದ ಪದ್ಯವನ್ನೇ ಮತ್ತೊಮ್ಮೆ ಹೇಳಬೇಕೆಂದು ಒತ್ತಾಯ ಪಡಿಸಿದೆ. ಅವಳು ನಾಚುತ್ತ ದಾಟಿಯನ್ನು ಬಿಟ್ಟು ಹಾಗೆಯೆ ಹೇಳಿದಳು. †

ಅವಳು ಹೇಳಿದ ಪದ್ಯವಿದು—

> ಹಸಿವು ಇಲ್ಲದ ಊಟ। ಕುಸಿ(೧)ಯು ಇಲ್ಲದ ನಗೆಯು ॥
> ವಿಶ್ವಾಸ ವಿರದ ಗೆಳೆತನವ । ಮಾಡಿದರೆ ॥
> ಬಿಸಿಲೊಳಗೆ ದಾರಿ ನಡೆದಂತೆ ॥‡

ಅವಳ ಪದ್ಯವನ್ನು ಕೇಳಿದೊಡನೆಯೆ ಇದು ಸರ್ವಜ್ಞ ವಚನವೊ ? ಎನ್ನಿಸಿತು. ಸರ್ವಜ್ಞವಚನವೆಂದೇ ಭಾವಿಸಿ ಉತ್ತಂಗಿಯವರ ಸರ್ವಜ್ಞವಚನದಲ್ಲಿ ಹುಡುಕಾಡಿದೆ, ಇರಲಿಲ್ಲ. ಅದಾವಾಗ ಬರೆದೆನೋ ಆಗ ಮೂರನೆಯ ಚರಣವು ಪೂರ್ಣವಾಗಿ ಇಪ್ಪುದನ್ನು ನೋಡಿ ಇದು ಸರ್ವಜ ವಚನವಲ್ಲ, ಬೇರೊಂದು ತ್ರಿಪದಿ, ಎಂದು ತಿಳಿದೆ. ಆಗ ತಿಳಿಯಿತು ಬೀಸುವ ಹಾಡುಗಳು ತ್ರಿಪದಿಗಳಾಗಿರುವುವೆಂದು.

---

* ಈ ಚಿತ್ರವು ಪ್ರಬುದ್ಧ ಕರ್ಣಾಟಕದ ೮ನೆಯ ಸಂಪುಟದ ೨ನೆಯ ಸಂಚಿಕೆಯಲ್ಲಿ ಬಂದಿದೆ.

† ಅವಳಿಂದ ಹಾಡುಗಳಲ್ಲಿ ಅಲ್ಪಸ್ವಲ್ಪ ಸುಧಾರಣೆಮಾಡಿ ಬರೆದಂತಹವು.

‡ ೧ ಕುಸಿಯಿಲ್ಲದ=ಇಚ್ಛೆಯಿಲ್ಲದ ಸಂತೋಷವಿಲ್ಲದ

ಅವಳು ಹಾಡಿದ ಹಾಡುಗಳಲ್ಲಿ ಇನ್ನೂ ಒಂದೆರಡು ಇಲ್ಲಿ ಕೊಡುವ ಮನಸ್ಸಿದೆ. ಅದರಿಂದ ತ್ರಿಪದಿಯ ಶೈಲಿಯನ್ನು ತಿಳಿದುಕೊಳ್ಳಲು ಸಹಾಯವಾಗುವುದಲ್ಲದೆ ತ್ರಿಪದಿಗಳಲ್ಲಿನ ಸುಭಗತ್ವವೂ ಹಳ್ಳಿಯ ಸಾಹಿತ್ಯದ ಮನೋಹರತ್ವವೂ ಒಮ್ಮೆಲೇ ವ್ಯಕ್ತವಾಗುವುವು.

ಉತ್ತಮರ ಗೆಳೆತನವು । ಪುತ್ಥಳಿಯ ಸರದಂತೆ ॥
ಮತ್ತೆ ಹೀನಾಯ ಗೆಳೆತನವ । ಕೂಡಿದರೆ ॥
ಹಿತ್ತಾಳಿಗಿಂತ ಬೆಲೆ ಕಡಿಮೆ ॥

ಕಚ್ಚಿಕ್ಕಿ[೨] ಕಡಿಯಲ್ಲ[೩] । ನುಚ್ಚಕ್ಕಿ ಬಾನಲ್ಲ ॥
ಕಚ್ಚಾಡೆ ಬಳಿಕ ನೆರೆಯಲ್ಲ । ಮನವಮಾತು ।
ಬಿಚ್ಚಾಡುವವಳು ಗೆಳತ್ಯಲ್ಲ ॥ *

ಮಡದೀನ ಬಡಿದಾನ । ಮನದಾಗ ಮರಗ್ಯಾನ ॥
ಒಳಗ್ಹೋಗಿ ಪದರ ಹಿಡಿದಾನ । (ದತಾ) ಕೇಳ್ಯಾನ ॥
ನಾಹೆಚ್ಚ ನಿನ್ನ ತವರ್ಹೆಚ್ಚ ? ॥

ತಾಯಿದ್ರ ತವರ್ಹೆಚ್ಚು । ತಂದಿದ್ರ ಬಳಗ್ಹೆಚ್ಚ ॥
ಸರವಕ್ಕೆ ಹೆಚ್ಚು ಸತಿಪುರುಷ । ಮನೆಯೊಳಗ ॥
ಕಂದವ್ವನಿರಲು ಅದು ಹೆಚ್ಚು ॥

ಇವುಗಳಲ್ಲಿ ಮೊದಲಿನವೆರಡು ಅದೊಬ್ಬ ಅವಿಶ್ವಾಸನ ಗೆಳತಿಯನ್ನು ಕುರಿತು ರಚಿಸಿದಂತಹವು. ಇವುಗಳಲ್ಲಿ ಹೇಳುವ ಮಾತು ಎಷ್ಟು ಅಚ್ಚುಕಟ್ಟಾಗಿವೆ ! ಅದೆಷ್ಟು ಒಪ್ಪಾಗಿವೆ ! ೩-೪ ಪದ್ಯಗಳಲ್ಲಿ ತೆಗೆದ ಚಿತ್ರವಂತೂ ಅದೆಷ್ಟು ರಮ್ಯ ! ಅವುಗಳಲ್ಲಿನ ಮಾತುಗಳು ಎಷ್ಟು ಸ್ವಾಭಾವಿಕ ! ಒಂದು ಉಪಮಾನವೇ ರೂಪಕವೇ ಏನಿದೆ ? ಏನಿಲ್ಲದಿದ್ದರೂ ತೆಗೆದ ಚಿತ್ರವು ಅದೆಷ್ಟು ಚೆನ್ನಾಗಿ ಒಡಮೂಡಿದೆ! ಗಂಡ ಹೆಂಡಿರ ನಡುವೆ ತವರು ಮನೆಯ ಒಂದು ಮಾತಿನ ವಿಷಯವಾಗಿ ವಾದವು ಪ್ರಾರಂಭವಾಗುವುದು ಆ ವಾದದಲ್ಲಿ ಬಡಿಯಲು ಅಧಿಕಾರವುಳ್ಳ(!)ಗಂಡನು ಹೆಂಡತಿಯನ್ನು ಒಂದು ಪೆಟ್ಟು ಬಡಿದುಕೊಳ್ಳುವನು. ಬಡಿದು ಬಹಳ ವೇಳೆ ಆಗಿರುವುದಿಲ್ಲ. ಅದಾಗಲೇ ಮನದಲ್ಲಿ ಮರುಕವು ಉತ್ಪನ್ನವಾಗುವುದು. "ಅಂತಹ ದೊಡ್ಡ ತಪ್ಪು ಹೆಂಡತಿಯು ಕಡೆಗಿರಲಿಲ್ಲ. ನಾನು ವ್ಯರ್ಥವಾಗಿ ಬಡಿದುಕೊಂಡೆನಲ್ಲ! ನಾನು ಮಾಡಿದುದು ಅವಳ ತಪ್ಪಿಗಿಂತ ಹೆಚ್ಚಿನ ತಪ್ಪು. ಎಂತಹ ತಪ್ಪು ಮಾಡಿದೆ!" ಎಂದು ಮರುಕ "ಮನದಾಗ ಮರುಗ್ಯಾನ ಒಳಗ್ಹೋಗಿಪದರ ಹಿಡಿದಾನ" ಎಂಬೆರಡೇ ಮಾತುಗಳನ್ನು ಹೇಳಿದ್ದರೂ ಈ ಎರಡೇ ಮಾತಿನಲ್ಲಿ ಅವನ ಆಗಿನ ಹೃದಯಚಿತ್ರವು ಸ್ಪಷ್ಟವಾಗಿ ಒಡಮೂಡಿದೆ. ಮರ.ಗಿ ಒಬ್ಬಳೇ ಇರುವಲ್ಲಿ ಹೋಗಿ ಸೆರಗು ಹಿಡಿವನು. ಅದೇತಕ್ಕೆ ? ಬಡಿದುದು ತಪ್ಪಾಯಿತೆಂದು ಕ್ಷಮೆ ಬೇಡಿಕೊಳ್ಳಲಿಕ್ಕೆ ? ಹೋಗಿ ನೋಡುವನೇನು ? ನಾಹೆಚ್ಚೋ ನಿನ್ನ ತವರು ಹೆಚ್ಚೋ? ಎಂದಿಷ್ಟೇ ಕೇಳುವನು. ಇವರಲ್ಲೆಲ್ಲಿಯ ಕ್ಷಮೆ ? ಹೀಗನ್ನುವಲ್ಲಿ ಅವನ ತಲೆಯಲ್ಲಿದ್ದ ಎರಡು ಮೂರು ತರದ ವಿಚಾರಗಳು ಸಂಕಲಿತವಾಗಿವೆ. ಅವನ ತಲೆಯಲ್ಲಿದ್ದ ವಿಚಾರಗಳು ಯಾವುವು ? ಎಲಾ ಹೆಂಡತಿಯನ್ನು ತಪ್ಪಿಲ್ಲದೆ ಹೊಡೆದೆನಲ್ಲ ! ಬಹಳನೊಂದುಕೊಂಡಿರಬೇಕು. ಅವಳಲ್ಲಿ ಕ್ಷಮೆ ಕೇಳಿಕೊಳ್ಳಬೇಕು; ಎಂಬುದೊಂದು. ಛೇ! ಹೆಂಡತಿ ನನ್ನನ್ನು ಕೀಳಾಗಿ ಭಾವಿಸಿದಳು. ತನ್ನ ತವರೇ ಹೆಚ್ಚೆಂದು ತಿಳಿದಳಲ್ಲ! ನಾನವಳಿಗೆ ಕ್ಷುದ್ರನಾದೆನೆ ಎಂಬ ಕಳವಳದ ಕೋಪವೊಂದು. ಇದು ಅವಳ ಅಜ್ಞಾನ ನಾನು ತಿಳಿಹೇಳಿದರೆ ಸುಗುಣೆಯಾದ ತನ್ನ ಹೆಂಡತಿ ಇನ್ನು ಮುಂದೆ ಹೀಗೆ ಮಾಡಲಿಕ್ಕಿಲ್ಲ. ತಿಳಿಹೇಳಬೇಕು ಎಂಬುದೊಂದು. ಈ ಎಲ್ಲ ವಿಚಾರಗಳೂ ಅವನ ತಲೆಯಲ್ಲಿ ಒಡಮೂಡಿ ಮುಖದಲ್ಲಿ ಕಾಣಿಸಿಕೊಳ್ಳಹತ್ತಿವೆ. ಇದೇಕಾಲಕ್ಕೆ ಹೋಗಿ ಸೆರಗು ಹಿಡಿದು "ನಾ ಹೆಚ್ಚೋ ನಿನ್ನ ತವರು ಹೆಚ್ಚೋ !" ಎಂದು ಕೇಳುವನು. ಉತ್ತಮ ಚಿತ್ರಕಾರನೊಬ್ಬನು ಈ ವಿಷಯದ ಒಂದು ಚಿತ್ರವನ್ನು ತೆಗೆದರೆ ಅದೆಷ್ಟು ಮನೋಹರವಾಗಿ ಕಾಣಬಹುದು ? ಈ ಒಂದು ತ್ರಿಪದಿಯಲ್ಲಿ,೪-೫ ಚಿಕ್ಕ ಮಾತುಗಳಲ್ಲಿ ಆ ಚಿತ್ರವು ಸ್ಪಷ್ಟವಾಗಿ ಚಿತ್ರಿಸಲ್ಪಟ್ಟಿದೆ. ಇಲ್ಲಿ ನೋಡಬೇಕು. ಅಚ್ಚುಕಟ್ಟಾಗಿದ್ದಗೂ ಅದೆಷ್ಟು ಮನೋಹರವಾದ ಚಿತ್ರತವಾಗಿರುವುದೆಂಬುದನ್ನು !

ಈ ವೇಳೆಯಲ್ಲಿ ಅವಳು ಕೊಡುವ ಉತ್ತರವೂ ಅದೆಷ್ಟು ಸಮರ್ಪಕ! ಅದರಲ್ಲಿಯೂ ಹೆಚ್ಚಿನ ಮಾತಿಲ್ಲ. "ತಾಯಿದ್ದರೆ ತವರುಮನೆ ಹೆಚ್ಚು. ತಂದೆಯಿದ್ದರೆ ಒಳಗ ಹೆಚ್ಚು. (ತಾಯಿ ತಂದೆಗಳಿಲ್ಲದಿದ್ದರೆ ತವರಿನಲ್ಲಿಯೂ ಬಳಗದಲ್ಲಿಯೂ ಹುರುಳಿಲ್ಲ.) ಗಂಡನು ಮಾತ್ರ ಎಲ್ಲರಿಗೂ ಹೆಚ್ಚು. ಮಗುವು ಗಂಡನಿಗಿಂತಲೂ ಹೆಚ್ಚು". ಇವಿಷ್ಟು ಮಾತಿನಲ್ಲಿ ಅವಳು ಎಂತಹ ಚಾತುರ್ಯವನ್ನು ತೋರಿಸಿರುವಳು! "ನಾನು ತವರುಮನೆಯ ಪಕ್ಷ ಹಿಡಿದು ವಾದಿಸಿದುದು ತಾಯಿಯಲ್ಲಿರುವ ಅಭಿಮಾನದಿಂ

* ೨ ಕಚ್ಚಿಕ್ಕಿ=ಅಕ್ಕಿತೊಳೆದ ನೀರು ೩ ಕಡಿ=ಪಳದೆ ೪ ಕಚ್ಚಾಡು=ಜಗಳಾಡು.

ದಲ್ಲದೆ ನಿನಗಿಂತ ಅವರು ಹೆಚ್ಚಿನವರೆಂದು ಭಾವಿಸಿಯಲ್ಲ. ನಿನಗಿಂತ ಹೆಚ್ಚಿನವಸ್ತು ಆವುದೂ ಇಲ್ಲ. ಇದ್ದರೆ ಅದು ನಿನ್ನ ಕಂದಮ್ಮನೊಂದೇ" ಎಂಬುದೇ ಅವಳ ಆಶಯು. ಈ ಉತ್ತರವು ಅವನ ತಲೆಯುಲ್ಲಿ ತಾಕಲಾಡುವ ಮೂರು ವಿಚಾರಗಳನ್ನೂ ಹೊಡೆದೋಡಿಸುವುದು. ಹೆಂಡತಿಗೆ ಕೋಪ ಬಂದಿತೋ ಏನೋ ಕ್ಷಮೆ ಕೇಳಬೇಕೆಂಬ ವಿಚಾರವಮಾಡಿದುವಕ್ಕೆ "ನೀನು ಬಡಿಯಲಿ ಹೊಡೆಯಲಿ, ನೀನೇ ನನಗೆ ದೈವ, ನಿನ್ನಲ್ಲಿ ಏತರಕೋಪ? ನೀನು ಕ್ಷಮೆ ಬೇಡಿಕೊಳ್ಳುವ ಕಾರಣವೇ ಇಲ್ಲ. ನೀನು ನನ್ನ ಮಾತಿನಿಂದ ನಿನಗಿಂತ ತವರೇ ಹೆಚ್ಚೆಂದು ತಿಳಿದುಕೊಂಡಿರುವೆನೆಂದು ಕೋಪಿಸಿಕೊಂಡಿರುವಿ, ಅದು ನಿನ್ನ ತಪ್ಪು ತಿಳುವಳಿಕೆ. ನನಗೆ ನಿನಗಿಂತ ಹೆಚ್ಚಿನ ವಸ್ತು ಆವುದೂ ಇಲ್ಲ. ಇದ್ದಿದ್ದರೆ ಅದೂ ನಿನ್ನ ಮಗುವೇ, ಎಂಬ ಉತ್ತರವೆಲ್ಲವೂ ಈ ಮಾತುಗಳಲ್ಲಿ ಅಡಕವಾಗಿರುವುದು. ಈ ಮಾತುಗಳಿಂದ ಅವನಿಗೆಷ್ಟು ಆನಂದವಾಗಿರಬೇಕು? ಹೆಂಡತಿ ಅಜ್ಞಾನಿ, ತಿಳಿಹೇಳಿದರೆ ಸುಧಾರಿಸಬಹುದೆಂದು ಬಂಧವನಿಗೆ ತನ್ನ ಅಜ್ಞಾನವೇ ಕಂಡುಕೊಂಡಿತು. ಇವಳ ಮಾತಿನಿಂದ ಅವನು ಅದೆಷ್ಟು ತೃಪ್ತನಾಗಿರಬೇಕು? ತ್ರಿಪದಿಗಳಲ್ಲಿರುವ ಒಂದೊಂದು ಪದವೂ ಇಷ್ಟು ಗರ್ಭಿತಾರ್ಥವುಳ್ಳದು. ಆದರೂ ಆ ಅರ್ಥವನ್ನು ಸಂಪೂರ್ಣವಾಗಿ ವ್ಯಕ್ತಮಾಡುವಂತಹದು.

ನೋಡಿದಿರಾ ತ್ರಿಪದಿಯ ಸುಭಗತೆಯನ್ನು ಪದ್ಯಗಳು ರಸವತ್ತಾಗಿಲ್ಲವೆ? ಕಾಲಿದಾಸನನ್ನು ಜಯಿಸಬೇಕೆಂದು ಬಂದೊಬ್ಬ ಕವಿಧಾರಾನಗರದ ಹೆಣ್ಣುಮಕ್ಕಳನ್ನು ಮಾತಾಡಿಸಿ "ಇವರೇ ಇಂತಹ ಕವಿಗಳಾಗಿರುವಲ್ಲಿ ಕಾಲಿದಾಸನು ಎಂತಹ ಕವಿಯಾಗಿರಬೇಕು? ಅವನನ್ನು ಜಯಿಸುವುದು ತನ್ನಿಂದ ಶಕ್ಯವಿಲ್ಲ. ಎಂದು ತಿರುಗಿದನಂತೆ. ಪರಭಾಷೆಯುಲ್ಲಿರುವ ಸಾಹಿತ್ಯದಿಂದ ಕಣ್ಣುಕುಕ್ಕಿ ಆ ಸಾಹಿತ್ಯಕ್ಕೆ ಮರುಳಾಗಿ ಕನ್ನಡಸಾಹಿತ್ಯವು ಕೀಳೆಂದು ಭಾವಿಸಿರುವ ಪಂಡಿತರು ಹೆಣ್ಣುಮಕ್ಕಳ ಇಂತಹ ಒಂದೆರಡು ಪದ್ಯಗಳನ್ನು ಕಣ್ತೆರೆದುನೋಡಲಿ.

ನನಗೆ ಬೀಸುವ ಹಾಡುಗಳು ತ್ರಿಪದಿಗಳೆಂದು ತಿಳಿದ ದಿವಸವೇ ನನ್ನ ಮಗುವನ್ನು ತೊಟ್ಟಿಲಲ್ಲಿಟ್ಟು ತೂಗುವಾಗ ನನ್ನ ತಾಯಿ ಹಾಡಿದ ಲಾಲಿಪದಗಳು ಕಿವಿಗೆ ಬಿದ್ದವು.

ಕಂದ ಕಾಡುವುದಿಂದು । ಕಮಲದ ಹೂವಿಗೆ ॥
ತುಂಬುಚ್ಚಿ ಬಿದ್ದ ಮಗಿಮಾವ । ಹಣ್ಣಿಗೆ ॥
ಕಂದ ಕಾಡುವುದು ಹಗಲೆಲ್ಲ ॥

ಕಂದಮ್ಮ ಅತ್ತರೆ । ಕಣಗಿಲು ಕಾತಾವ ॥
ಒಣಗಿದ್ದ ಬಾಳಿ ಚಿಗಿತಾವ । ಕಂದನಾ ॥
ಗೊಡ್ಡೆಮ್ಮೆಯೆಲ್ಲ ಹೈನನ ॥

ನಾನು ಇವೂ ಆವುದೊಂದು ವೃತ್ತಗಳಲ್ಲಿರುವುವೊ? ಎಂದು ಬರೆದುಕೊಂಡು ನೋಡುವಲ್ಲಿ ತ್ರಿಪದಿಗಳೇ ಆಗಿರಬೇಕೆ!

ತ್ರಿಪದಿಯಲ್ಲಿ ಬರುವ ಮಾತಿನ ಶೈಲಿಯನ್ನು ಈ ಪದ್ಯಗಳಲ್ಲಿಯೂ ಕಾಣಬಹುದು. ಮಗು ಎರಡು ವಸ್ತುಗಳನ್ನು ನೋಡಿ, ಬೇಡಿ ಹಟಮಾಡುವುದು. ಮಗು ಮೋಹಿಸಿದ್ದುದು ಆ ವಸ್ತುಗಳ ಬಣ್ಣಕ್ಕೆ. ಮಗು ಮೋಹಿಸಬೇಕಾದರೆ ಆ ವಸ್ತುಗಳು ತಕ್ಕಷ್ಟು ದೊಡ್ಡವಾಗಿರಬೇಕು. ಅಂತಹ ದೊಡ್ಡವಾದ ಕಮಲ ಮಗಿಮಾವುಗಳನ್ನೇ ಇಲ್ಲಿ ತೆಗೆದುಕೊಂಡಿದೆ. ಕಮಲದ ಬಣ್ಣವು ಎಲ್ಲರಿಗೂ ಗೊತ್ತು. ಅದರಿಂದ ಅದಕ್ಕೆ ಆವ ವಿಶೇಷಣವನ್ನೂ ಹೇಳುವ ಕಾರಣ ಬೀಳಲಿಲ್ಲ. ಮಾವಿನ ಹಣ್ಣಿಗಾಗಿ ವಿಶೇಷಣವನ್ನು ಹೇಳಲೇಬೇಕಾಯಿತು. ಅದು ತುಂಬುಚ್ಚಿ ಬಿದ್ದ ಮಗಿಮಾವು. ಹೀಗೆ ಹೇಳಿ ಆ ಮಗಿಮಾವಿನ ಬಣ್ಣವನ್ನು ಬಹುಸ್ಪಷ್ಟವಾಗಿ ಮುಂದಿರಿಸಿದೆ. ಮಗಿಮಾವಿನ ಬಣ್ಣವು ಅಂತಹ ಬೂದುಹಸಿರಲ್ಲ. ಕಪ್ಪು ಬಣ್ಣದ ಮೇಲಿನ ಹಸಿರೂ ಅಲ್ಲ. ಸುಖವಾಗಿ ಬೆಳೆದ ಸದಾಮಲ್ಲಿಗೆಯ ಬಣ್ಣವಿರುವುದಲ್ಲ ಅಂತಹ ಹಸಿರು, ಅದೇ ಸುಳಿಬಿಚ್ಚಿದ ಕುಡಿಬಾಳೆಯ ಎಲೆಯ ಹಸಿರು. ಮಗುವು ಮೋಹಿಸಿದ್ದುದು ಇಂತಹ ಹಸಿರುಮುರಿಯುವ ಕಾಯನ್ನು ನೋಡಿಯಲ್ಲ; ಅಡೆಗೆ ಹಾಕಿ ತೆಗೆದಿರುವ ಸಪ್ಪಗಿನ ಅರಿಸಿನ ಬಣ್ಣದ ಹಣ್ಣನ್ನು ನೋಡಿಯೂ ಅಲ್ಲ. ಗಿಡದಲ್ಲಿಯೇ ಪಾಡಾಗಿ ಅದೇ ತುಂಬುಕಳಚಿ ಬಿದ್ದ ಮಗಿಮಾವನ್ನು ನೋಡಿ. ಅದರ ಕೆಲಭಾಗವು ಬಿಸಿಲಿನಿಂದ ಅರಿಸಿನ ಬಣ್ಣದ್ದಾಗಿರುವುದು. ಆ ಬಣ್ಣವು ಅಡೆಯಿಂದ ಹೊರಗೆ ತೆಗೆದ ನಿಸ್ತೇಜವಾದ ಹಣ್ಣಿನ ಅರಿಸಿನ ಬಣ್ಣವಲ್ಲ. ಟವಟವಿಸುವ (ಸತೇಜ) ಅರಿಸಿನ ಬಣ್ಣ. ಆ ಮಗಿಮಾವಿನ ಉಳಿದ ಭಾಗದಲ್ಲಿ ಹಸುರಿನ ನಡುವೆ ಅಲ್ಲಲ್ಲಿ ಅರಿಸಿನ ಬಣ್ಣದ ಸಣ್ಣದೊಡ್ಡ ಚುಕ್ಕೆಗಳು ಒಡೆದಿರುವುವು. ಮತ್ತು ಅರಿಸಿನ ಬಣ್ಣದ ಎಳೆಗಳೂ ಕಂಡುಬರುವುವು. ಮಗುವು ಮೋಹಿಸಿದುದು ಈ ಬಣ್ಣದಮಾವು. ನೋಡಿದಿರಾ! ಈ ಬಣ್ಣವನ್ನು ತೋರಿಸಲಿಕ್ಕೆ ವಿಶೇಷ ಆಯಾಸಪಟ್ಟಿಲ್ಲ. ಆಯಾಸಪಟ್ಟಿದ್ದರೂ ತ್ರಿಪದಿಯುಲ್ಲಿ ಸಾಧ್ಯವಾಗುತ್ತಿರಲಿಲ್ಲ. "ತುಂಬುಚ್ಚಿ ಬಿದ್ದ" ಎಂಬುದೊಂದೇ ವಿಶೇಷಣವಲ್ಲಿ ಆ ಬಣ್ಣವನ್ನು ಅದೆಷ್ಟು ಚೆನ್ನಾಗಿ ಚಿತ್ರಿಸಿದೆ!

ಎರಡನೆಯ ಪದ್ಯವು ಕಂದನ ಅಳುವಿಕೆಯನ್ನು ಕುರಿತು ರಚಿತವಾದುದು. ಕಂದನು ಅಳಲು ಮೂರು ಸಂಗತಿಗಳು ನಡೆ ವವು. ಕಣಗಿಲು ಕಾಯಾಗುವುದು; ಒಣಗಿದ ಬಾಳಿ ಚಿಗಿವುದು. ಗೊಡ್ಡೆಮ್ಮೆ (ಬರಡು) ಗಳು ಹೈನ ಮಾಡು ವವು. ಕಣಗಿಲಕ್ಕೂ ಬಾಳೆಗೂ ವಿಶೇಷ ತಂಪು ಬೇಕು. ಕಣ ಗಿಲು ಹಳ್ಳಕೊಳ್ಳಗಳ ದಂಡೆಗೇ ಬಹಳ. ಷ್ಯಗದ ಜಡೆ ಕೂತು ಮಳೆಯಾಗಿ ನೆಲವೆಲ್ಲವೂ ತಂಪಾಯಿತೆಂದರೆ ಮಳೆಗಾ ಲವು ಅರ್ಧಮರ್ಧ ಹಿಸ್ಮೆಟ್ಟಲು–ಕಣಗಿಲು ಹೂತು ಕಾತು ಕಂಗೊಳಿಸುವುದು. ಬೇಸಗೆಯ ಬಿಸಿಲಿನಿಂದ ಕಮರಿಹೋದ ಬಾಳೆ ಚಿಗಿತು ಹಸುರುಮುರಿವುದು. ಮಳೆಯಿಂದಾಗುವ ಕಾರ್ಯವು ಕಂದನ ಅಳುವಿಕೆಯಿಂದಾಯಿತು. ಎಂದರೆ ಕಂದನು ಇಷ್ಟೊಂದು ಪರಿ ಅತ್ತಿತು. ಅದರ ಕಣ್ಣೀರು ಧಾರೆಯಾಗಿ ಸುರಿದು ಕಾಲುವೆಯಾಗಿ ಹರಿಯಿತು. ಕಂದನು ಅತ್ತುದು ಏತರಿಂದ? ಹಸಿವಿನಿಂದ. ಕಂದನ ಈ ಅಳುವಿಕೆಗೆ ಕನಿಕರಪಟ್ಟು ಬರಡೆಮ್ಮೆಗಳೂ ಹೈನುಕೊಡಲಾರಂಭಿಸಿದುವು ಸಹಜವದೆ; ಮಳೆಗಾಲದಲ್ಲಿ ಅದೆಲ್ಲಿಯೂ ಬೆಳೆದ ಹಸಿರು ಹುಲ್ಲನ್ನು ಹಸಿನಡಗುವಂತೆ ಮೇದು ಕೊಬ್ಬಿದ ಅದಾವ ಗೊಡ್ಡು ತೊರೆದು ಹೈನುಕೊಡಲಿಕ್ಕಿಲ್ಲ! ಬರಡಲ್ಲದ ಎಮ್ಮೆ ಗಳಂತು ಈ ಕಾಲದಲ್ಲಿ ಈದು ಹೈನು ಮಾಡಿಯೇ ಮಾಡು ವುವು. ಅದೆಲ್ಲಿಯೂ ಹೈನದ ಸಮೃದ್ಧಿ! ಇಲ್ಲಿ ನೋಡಬೇಕು ಕನ್ನಡಿಗರು ಕವನಗಳಲ್ಲಿ ತೋರಿಸಿರುವ ಪ್ರಕೃತಿ–ನಿರೀಕ್ಷಣದ ಕುಶಲತೆಯನ್ನು, ತ್ರಿಪದಿಯ ಭಾಷೆಯ ಶೈಲಿಯನ್ನು!

( ಸಶೇಷ ,

---

## ಬಂಧು

ಗೂಡಿಗೊಂದೊಂದ ಕರೆಕರೆದು ಹಾರುವ ಹಕ್ಕಿ ।
ಹಾಡನಾಲಿಸುವಾಗಳೆನ್ನ ಮಾನಸದಿ ॥
ಮೂಡುತಿದೆ ಮರುಕ; ಕಣ್ಣೆತ್ತಿದೀ ಬ್ರಹ್ಮಾಂಡ ।
ಸೀಡದೊಳಗಾರೆನ್ನ ಬಳಿಯ ಜತೆ ಹಕ್ಕಿ ? ॥ ೧ ॥

ಆಕಾಶದೊಂದು ಮೂಲೆಯಲಿ ಮುಗಿಲುಗಳೆರಡು ।
ಏಕಾಂತದಲಿ ಸರಸವಾಡುತಿರುವಾಗ ॥
ಮೂಕವಪ್ಪುದು ಹೃದಯವಿದು ಪ್ರೇಮಾಮೃತದ ।
ಓಕುಳಿಯ ಮಾಳ್ಪ ಕಾದಂಬಿನಿಯೆನುತ್ತ ॥ ೨ ॥

ಕೊಂಬಿನಲಿ ಕುಳಿತು ನುಣ್ಬಾಳಿರುಗಳ ಸವಿಸವಿದು ।
ತುಂಬುದನಿಯಲಿ ಹಾಡೆ ಕೋಗಿಲೆಗಳೆರಡು ॥
ಹಂಬಲಿಸುತಿರೆ ಭಾವವೆನ್ನೆದೆಯ ಕಾನನದಿ–।
ರುಂಬಿನಲಿ ನಲಿವ ಕೋಗಿಲೆಯಿಲ್ಲವೆಂದು ॥ ೩ ॥

ಕತ್ತಲೆಯು ಕದಲಿ ಮುಂಬೆಳಕು ಹರಿಯದ ಮುನ್ನ ।
ಅತ್ತಿಸಂಚರಿಪ ಇರುಳ ಸೆರಗಿನಲಿ ॥
ತತ್ತರಿಸುತಿಹ ತಾರೆಯೆನ್ನೆಡೆಗೆ ಕೈದೋರಿ ।
ಹೃತ್ತಾಪವಾರುತಿದೆ ಬಂಧುವಿಹನೆನುತ ॥ ॥ ೪ ॥

—ಶಂಕರಭಟ್ಟ ಕಡೆಂಗೊಡ್ಲು, ಮಂಗಳೂರು.

---

# ವರರುಚಿ ಮಹಾಮಂತ್ರಿ.

ಲೇಖಕ—ಶ್ರೀ. ಎನ್. ಶೇಷಾದ್ರಿ ಶರ್ಮ, ಬಿ. ಎ. ಬೆಂಗಳೂರು.

೧. ಅಮಾತ್ಯರಾಕ್ಷಸ, ಯೌಗಂಧರಾಯಣ, ಚಾಣಕ್ಯಾದಿಯಾದ ಮಹಾಮಂತ್ರಿಗಳ ವಿಷಯವಾಗಿ ನಮ್ಮಲ್ಲಿ ಜನರಿಗೆ ಸ್ವಲ್ಪಮಟ್ಟಿಗಾದರೂ ಗೊತ್ತಿದೆಯಷ್ಟೇ; ಆದರೆ ವರರುಚಿಯ ವಿಷಯವೇನೋ ಸ್ವಲ್ಪ ತಿಳಿಯೋಣ.

ಪೂರ್ವದ ರಾಜರಲ್ಲೆಲ್ಲ ಬಹು ಧನಾಢ್ಯನೂ, ಶಕ್ತನೂ ಆದ ನಂದನೆಂಬೊಬ್ಬರಾಜನು ಮಗಧರಾಜ್ಯದಲ್ಲಿ ಆಳುತ್ತಿದ್ದನಲ್ಲವೇ? ಈ ವರರುಚಿಯೂ ಅವನ ಕಾಲಿಕನೂ ಮತ್ತು ಆ ರಾಜ್ಯದಲ್ಲಿ ಮಹಾಮಂತ್ರಿಯೂ, ಅದ್ವಿತೀಯ ಪಂಡಿತನೂ, ಉದಾರಚರಿತನೂ, ಘನವೇದಾಂತಿಯೂ ಆಗಿದ್ದ ಪುರುಷಶ್ರೇಷ್ಠನು. ಇತರ ಪೂರ್ವಾಚಾರ್ಯರಂತೆ ಇವನ ಚರಿತ್ರೆಯೂ ಕೂಡ ನಮಗೆ ಬಹಳೆಡೆಯಲ್ಲಿ ದೊರೆವುದಿಲ್ಲ. ಆದರೂ ಇದನ್ನು ಸ್ವಲ್ಪ ಚೆನ್ನಾಗಿ ತಿಳಿಯಬೇಕೆಂದು ಎಷ್ಟೋ ಜನಕ್ಕೆ ಇಚ್ಛೆಯಿದೆಯಲ್ಲವೇ?

### ಭಾಗ ೧ ಚರಿತ್ರೆ.

(ಸಾಂಪ್ರದಾಯಕರೀತಿಯಿಂದ)

೨. **ಚಾರಿತ್ರಿಕಕಾಲ ಮತ್ತು ಬಾಲ್ಯ**—ಕ್ರಿಸ್ತಪೂರ್ವ ಸುಮಾರು ನಾಲ್ಕನೆಯ ಶತಮಾನದ ಮಧ್ಯಕಾಲದಲ್ಲಿ, ಅಂದರೆ ಗ್ರೀಸು ದೇಶದ ಅರಸನಾದ ಅಲೆಕ್ಸಾಂಡರನು ನಮ್ಮ ದೇಶದ ಮೇಲೆ ಜೈತ್ರಯಾತ್ರೆಗೆ ಬರುವುದಕ್ಕೆ ಸ್ವಲ್ಪ ಹಿಂದೆ, ಅಂದರೆ, ಕ್ರಿ. ಪೂ. ೩೨೭–೩೬ಕ್ಕೆ ಸುಮಾರು ೫೦ ವರ್ಷಕ್ಕೆ ಹಿಂದೆ ವತ್ಸದೇಶದ ರಾಜಧಾನಿಯಾದ ಕೌಶಾಂಬೀನಗರಿಯಲ್ಲಿ ದ್ವಿಜಶ್ರೇಷ್ಠನಾದ ಸೋಮದತ್ತ ಅಥವಾ ಅಗ್ನಿಶಿಖನೆಂಬೊಬ್ಬ ಬ್ರಾಹ್ಮಣನು ವಸದತ್ತೆಯೆಂಬ ಪತ್ನಿಯೊಡನೆ ಸಂಸಾರ ನಡೆಸುತ್ತಿದ್ದನು. ಇವರ ಮಗನೇ ನಮ್ಮ ಕಥಾನಾಯಕನಾದ ವರರುಚಿಯೆಂಬ ಮಹಾತ್ಮನು. ತಂದೆಯಾದರೋ ಈ ಬಾಲಕನು ಇನ್ನೂ ಚಿಕ್ಕವನಾಗಿರುವಾಗಲೇ ಸ್ವರ್ಗಸ್ಥನಾದನು; ಆಮೇಲೆ ಇವನ ತಾಯಿ ತಾವು ಹೀಗೆ ಅನಾಥರಾದುದರಿಂದ ಕೇವಲ ಕಷ್ಟಬಾಳಿನಿಂದ ಅಲ್ಲಲ್ಲಿ ಸಣ್ಣ ಕೆಲಸಗಳು ದೊರೆತಲ್ಲಿ ಮಾಡುತ್ತ, ತನ್ನ ಬಾಲಕನನ್ನು ಬಹು ಪ್ರೀತಿಯಿಂದ ಕಾಪಾಡಿದಳು. ಈ ರೀತಿಯಲ್ಲಿ ಕೆಲವುಕಾಲ ಕಳೆದನಂತರ ಒಂದುದಿನ ಸಾಯಂಕಾಲ ಇವರ ಮನೆಗೆ ಇಬ್ಬರು ಅತಿಥಿಗಳು ಬಂದರು. ಆಗ ಪಕ್ಕದ ಮನೆಯಲ್ಲಿ ಮೃದಂಗ ಶಬ್ದವು ಕೇಳಿಸಲು, ಇವನ ತಾಯಿ ಬಾಲಕನನ್ನು ನೋಡಿ "ಅಪ್ಪಾ, ನಿಮ್ಮ ತಂದೆಯ ಸ್ನೇಹಿತನು ಸಂಗೀತ ನಡೆಸುತ್ತಿದ್ದಾನೆ. ನೋಡುವುದಕ್ಕೆ ನನಗೆಲ್ಲಿ ಪುಣ್ಯವಿದೆ?" ಎಂದು ಶೋಕಿಸುತ್ತಿರುವಲ್ಲಿ, ಬಾಲಕನು ತಾಯಿಯನ್ನು ತಡೆದು, "ಅಮ್ಮಾ, ನಾನು ಹೋಗಿ ಅದನ್ನು ಕೇಳಿಕೊಂಡು ಬಂದು ನಿನಗೆ ಎಲ್ಲವನ್ನೂ ಪೂರ್ತಿಯಾಗಿ ಹೇಳುತ್ತೇನೆ. ಅದುವರೆಗೂ ಸಮಾಧಾನದಿಂದಿರು" ಎಂದು ಹೇಳಿ, ಕೂಡಲೆ ಈ ವಿಷಯದಲ್ಲಿ ಕುತೂಹಲರಾದ ಆ ಅತಿಥಿಗಳನ್ನೂ ಒಡನೆ ಕರೆದುಕೊಂಡು ಹೋಗಿ, ಕೇಳಿ ಬಂದು ಎಲ್ಲವನ್ನೂ ತನ್ನ ತಾಯಿಯ ಮುಂದೆ ಸಾಂಗವಾಗಿ ಹೇಳಲು, ಆ ಅತಿಥಿಗಳು ಬಹಳ ಆಶ್ಚರ್ಯಪಟ್ಟು, ಜಾಗ್ರತೆಯಾಗಿ ಕಲಿಯಲಸಾಧ್ಯವಾದ ಪ್ರಾತಿಶಾಖ್ಯ (ವೇದೋಚ್ಚಾರಣೆಯನ್ನು ತಿಳಿಸುವ ಸೂತ್ರ)ವನ್ನು ಹೇಳಲು, ಅದನ್ನೂ ಕೂಡ ಒಂದು ತಪ್ಪೂ ಇಲ್ಲದಂತೆ ಪೂರ್ಣವಾಗಿ ಹಿಂತಿರುಗಿ ಹೇಳಲು, ಅವರು ಬಹಳವಾಗಿ ಸಂತೋಷಪಟ್ಟು, ಆ ಮನೆಯ ಯಜಮಾನಿಗೆ ಸಾಷ್ಟಾಂಗವೆರಗಿ, ಅವರಲ್ಲಿ ದೊಡ್ಡವನಾದ ವ್ಯಾಡಿಯೆಂಬವನು ಹೀಗೆ ಹೇಳಿದನು.

೩. "ಅಮ್ಮಾ, ನೀವು ಎಷ್ಟು ಧನ್ಯರೆಂದು ಯಾರು ತಾನೇ ಹೇಳಬಲ್ಲರು? ನಾವಾದರೋ ವೇತಸವೆಂಬ ಗ್ರಾಮದಲ್ಲಿರುವ ದೇವಸ್ವಾಮಿ ಮತ್ತು ಕರಂಭಕರೆಂಬ ಇಬ್ಬರು ಬ್ರಾಹ್ಮಣ ಸಹೋದರರ ಮಕ್ಕಳು. ಇವರು ಧನವಂತರಾಗಿದ್ದರೂ ನಮಗೆ ವಿದ್ಯಾಲಾಭವಾಗುವುದಕ್ಕೆ ಮೊದಲೇ ಸ್ವರ್ಗಸ್ಥರಾಗಲು, ನಮ್ಮ ತಾಯಂದಿರೂ ಕೂಡ ತಮ್ಮ ಪತಿಗಳ ಸಮೀಪವನ್ನೈದಲು, ವಿದ್ಯಾಕಾಂಕ್ಷಿಗಳಾದ ನಾನು ಮತ್ತು ನನ್ನ ತಮ್ಮನಾದ ಈ ಇಂದ್ರದತ್ತನು ಸೇರಿ ವಿದ್ಯಾರ್ಜನೆಗಾಗಿ ಕುಮಾರಸ್ವಾಮಿಯನ್ನು ತಪಸ್ಸಿನಿಂದ ಆರಾಧಿಸಿದೆವು. ಆಗ ಆ ಭಕ್ತವತ್ಸಲನು ನಮ್ಮ ಕನಸಿನಲ್ಲಿ ಪ್ರತ್ಯಕ್ಷನಾಗಿ, "ನಂದಮಹಾರಾಜನಿಂದ ಪಾಲಿಸಲ್ಪಡುತ್ತಿರುವ ಪಾಟಲೀಪುತ್ರಕ್ಕೆ ಹೋಗಿ ಅಲ್ಲಿರುವ ವರ್ಷೋಪಾಧ್ಯಾಯನಿಂದ ಸಕಲ ವಿದ್ಯೆಗಳನ್ನು

ಕಲೆಯಿರಿ"ಎಂದು ಆಜ್ಞೆಮಾಡಿದನು. ಇದರಂತೆಯೇ ನಾವು ಮಗಧ ದೇಶದ ರಾಜಧಾನಿಯಾದ ಪಾಟಲೀಪುತ್ರಕ್ಕೆ ಬಂದು, ಅಲ್ಲಿ ಬಹುಜನರನ್ನು ಕೇಳಿ, ಒಂದು ಪಾಳ ಮನೆಗೆ ಬಂದು ವರ್ಷೋಪಾಧ್ಯಾಯರನ್ನು ಕಾಣಲು ಆ ಮಹಾತ್ಮರು ಧ್ಯಾನ ಸ್ಥರಾಗಿದ್ದರು. ಆದರೂ ನಮ್ಮ ಪುಣ್ಯವಿಶೇಷದಿಂದ ಅವರ ಸಮೀಪದಲ್ಲಿಯೇ ಪತಿಶುಶ್ರೂಷೆ ಮಾಡುತ್ತಿದ್ದ ಗುರುಪತ್ನಿ ನಮ್ಮ ಭಕ್ತಿಯನ್ನು ನೋಡಿ ಮರುಕಪಟ್ಟು ಹೀಗೆಂದು ಅಜ್ಞಾಪಿಸಿದರು.

**ವರ್ಷೋಪಾಧ್ಯಾಯರೂ, ಅವರ ವಿದ್ವಾರ್ಜನೆಯೂ**— "ಅಪ್ಪಾ, ಮಕ್ಕಳಿರಾ, ಹೀಗೆ ಕೇವಲ ನೀವಿಬ್ಬರೇ ಬಂದರೆ ಇಲ್ಲಿ ನಿಮಗೆಂದಿಗೂ ವಿದ್ಯೆ ದೊರೆಯದು. ಮತ್ತು ಇತರರಂತೆ ನೀವು ಕೂಡ ಗುರುವನ್ನು ಎಂದಿಗೂ ಅರಿಯಲಾರಿರಿ. ಆದರೆ ಮೊದಲು ಹೊರಟು ಗುರುಪ್ರಿಯನಾದ ಏಕಶ್ರುತಧರನನ್ನು ಎಲ್ಲಿಂದಲಾದರೂ ಹುಡುಕಿ ಕರೆತಂದರೆ ವಿದ್ಯೆಯೆಲ್ಲವೂ ನಿಮ್ಮ ಕರತಲಾಮಲಕವಾಗುವುದು. ಏಕೆಂದರೆ ಪೂರ್ವದಲ್ಲಿ ನನ್ನ ಸ್ವಾಮಿಯಾದ ಈ ನಿಮ್ಮ ಗುರು ಕೇವಲ ವಿದ್ಯಾಹೀನನಾಗಿ, ಉತ್ತಮ ಸ್ಥಿತಿಯಲ್ಲಿದ್ದ ತನ್ನ ತಮ್ಮನಾದ ಉಪವರ್ಷನ ಮನೆಯಲ್ಲಿರುತ್ತ ಒಮ್ಮೆ ಆತನ ಹೆಂಡತಿಯಿಂದ ಅಕಾಲದಲ್ಲಿ ತಂಬಿಟ್ಟಿನ (ಮುಟ್ಟುಸ್ನಾನ ಬಿಟ್ಟದ್ದಕ್ಕಾಗಿ ಕೊಟ್ಟ) ದಾನವನ್ನು ಸ್ವೀಕರಿಸಲು, ನಾನು ಹೀಯಾಳಿಸಿದೆನು. ತನ್ನ ಅವಿವೇಕನಾಶಕ್ಕಾಗಿಯೂ ಸರ್ವ ವಿದ್ಯಾರ್ಜನೆಗಾಗಿಯೂ ಕಾಡಿಗೆ ಹೋಗಿ ಷಣ್ಮುಖನನ್ನು ಕುರಿತು ದೀರ್ಘತಪಸ್ಸು ಮಾಡಿದನು. ಆಗ ಸಂತುಷ್ಟನಾದ ಆ ದೇವನು ಕೃಪೆಯಿಟ್ಟು ಇವರಿಗೆ ಸರ್ವ ವಿದ್ಯೆಯನ್ನೂ ಹಸ್ತಗತಮಾಡಿ, ನಿನಗೆ ಏಕ ಶ್ರುತಿಧರನು ದೊರೆತ ಹೊರತು ಈ ವಿದ್ಯೆಯನ್ನು ಯಾರಿಗೂ ಉಪದೇಶಿಸಬೇಡವೆಂದು ಆಜ್ಞಾಪಿಸಿದನು. ಇದರಿಂದ ಇವರು ತಮ್ಮ ತಮ್ಮನಾದ ಉಪವರ್ಷನಂತೆ ಶಂಕರಸ್ವಾಮಿಯೆಂಬೊಬ್ಬ ಈ ಊರಿನ ದ್ವಿಜಶ್ರೇಷ್ಠರ ಮಕ್ಕಳಾದರೂ, ಎಷ್ಟು ವಿದ್ವಾಂಸರಾದರೂ ಈಗ ನಾವಿನ್ನೂ ಅತಿಕಠೋರವಾದ ದುರ್ದೆಶಯಲ್ಲಿದ್ದೇವೆ. ಮತ್ತಿದರಿಂದಲೇ ಊರಿನವರೆಲ್ಲರೂ ನಮ್ಮನ್ನು ಹೀಯಾಳಿಸುತ್ತಾರೆ. ಆದರೆ ನೀವು ಬುದ್ಧಿವಂತರಾಗಿ ಹೊರಟು ನಾನು ಹೇಳಿದಂತೆ ಮಾಡಿದರೆ, ನಿಮಗೆ ಎಲ್ಲವೂ ಶ್ರೇಯಸ್ಕರವಾಗುವುದೆ" ಎಂದರು. ಹೀಗೆ ಉಪದಿಷ್ಟರಾದ ನಾವು ಕೂಡಲೇ ಆ ಗುರುಪತ್ನಿಗೆ ಗೃಹಕೃತ್ಯಕ್ಕಾಗಿ ನೂರುವರಹಗಳನ್ನು ಕೊಟ್ಟು, ಆ ಬಾಲಕನನ್ನು ಹುಡುಕಲು ಹೊರಟು ಎಷ್ಟೆಷ್ಟೋ ದೇಶಗಳನ್ನು ಅಲೆದರೂ ಸಾರ್ಥಕವನ್ನಿನ್ನೂ ಪಡೆಯಲಿಲ್ಲ. ಆದರೆ ನಮ್ಮ ಸುದೈವದಿಂದಲೋ ಏನೋ ಈಗ ತಾನೇ ಆ ನಿಧಿಯೇ ನಮ್ಮ ಕೈ ಸೇರುವಂತಿದೆ. ಆದುದರಿಂದ, ಅಮ್ಮಾ, ಈ ನಿಮ್ಮ ಪುತ್ರರತ್ನನಾದ ಏಕಶ್ರುತಿಧರನನ್ನು ನನ್ನೊಡನೆ ವಿದ್ವಾರ್ಜನೆಗಾಗಿ ಕಳುಹಿಸಿ ಕೊಡಿ" ಎಂದು ಪ್ರಾರ್ಥಿಸಿದನು.

೪. **ವಿದ್ಯಾಭ್ಯಾಸ**— ಇದಕ್ಕೆ ಆ ಸತ್ಪುತ್ರವತಿಯೂ ಕೂಡ, "ಅಪ್ಪಾ, ನಿಮ್ಮ ಮಾತು ನಿಜವೇ ಸರಿ. ಏಕೆಂದರೆ ಈ ನಮ್ಮ ಬಾಲಕನು ಹುಟ್ಟಿದ ಕೂಡಲೆ ಅಶರೀರವಾಣಿಯೊಂದು ಹೀಗೆ ಹೇಳಿತು, "ಈತನು ಏಕಶ್ರುತಧರನಾಗಿ ವರ್ಷೋಪಾಧ್ಯಾಯರಿಂದ ಪಾಠಕಲಿತು ಪ್ರಸಿದ್ಧ ವೈಯ್ಯಾಕರಣಿಯಾದ ವರರುಚಿಯಾಗುವನು; ಏಕೆಂದರೆ ಇವನಿಗೆ ಎಲ್ಲೆಲ್ಲಿಯೂ ಉತ್ತಮ ವಸ್ತುಗಳೇ ರುಚಿಸುವುವು. (ಪ್ರೀತಿಪಾತ್ರವಾಗುವುವು)". ಆದುದರಿಂದ ನಿಮ್ಮ ತಮ್ಮನಾದ ಈ ಬಾಲಕನನ್ನು ನಿಮ್ಮೊಡನೆಯೇ ಕರೆದುಕೊಂಡು ಹೋಗಿ ವಿದ್ಯಾದಾನ ಮಾಡಿ" ಎಂದಳು. ಕೂಡಲೇ ಬೆಳಗಿನ ದಿವಸ ವ್ಯಾಡಿ ವರರುಚಿಯು ವೇದಾಧ್ಯಯನಕ್ಕಾಗಿ ತಾನೇ ನಿಂತು ವಿಜೃಂಭಣೆಯಿಂದ ಉಪನಯನ–ಮಹೋತ್ಸವವನ್ನು ಸಾಂಗವಾಗಿ ನೆರವೇರಿಸಿ, ಆ ವಸುದತ್ತೆಗೆ ಮಗನ ಅಗಲಿಕೆಯನ್ನು ಸಹಿಸಿಕೊಂಡಿರುವಂತೆ ಸಮಾಧಾನ ಹೇಳಿ, ಈ ಮೂವರೂ ಶಿಷ್ಯರೂ ಪಾಟಲೀಪುತ್ರಕ್ಕೆ ಹೊರಟರು. ಆ ನಗರವನ್ನು ಶೀಘ್ರದಲ್ಲಿ ಸೇರಿ ವರ್ಷೋಪಾಧ್ಯಾಯರಿಗೆ ಮುಖ್ಯ ಶಿಷ್ಯನನ್ನು ತಂದು ತೋರಿಸಿದರು. ಅವರ ಸಂತೋಷವನ್ನು ಇಷ್ಟೆಂದು ಹೇಳಲಾಗದು. ಏಕೆಂದರೆ ಆಚಾರ್ಯರು ಕೂಡಲೆ ಆ ಮಗುವನ್ನು ತಬ್ಬಿಕೊಂಡು ಮುದ್ದಾಡಿದ್ದಲ್ಲದೆ ಶುಭಮುಹೂರ್ತದಲ್ಲಿ ದಿವ್ಯಸ್ವರದಿಂದ ಪ್ರಣವಪೂರ್ವಕವಾಗಿ ವೇದಾಧ್ಯಯನವನ್ನು ಪ್ರಾರಂಭಿಸಿದರು. ಗುರುವಿನಿಂದ ಒಂದುಬಾರಿ ಕೇಳುತ್ತಲೇ ವರರುಚಿಯೂ, ಎರಡು ಸಲ ಕೇಳುವುದರಿಂದ ವ್ಯಾಡಿಯೂ ಮೂರುಸಲ ಕೇಳುವುದರಿಂದ ಇಂದ್ರದತ್ತನೂ ವಿದ್ಯೆಯನ್ನು ಕಲಿಯುತ್ತಿದ್ದರು.

ಹೀಗೆ ಕೆಲಸಕ್ಕೆ ಬಾರದೆ ಅತಿಅಸಹ್ಯವಾಗಿ ಕಾಣುತ್ತಿದ್ದ ಮನೆಯಿಂದ ಈಗಿಷ್ಟು ಇಂಪಾದ ಧ್ವನಿಯೂ ವಿದ್ಯಾಧನಾನಂದಗಳೂ ಶೋಭಿಸುತ್ತಿರಲು ಉಪವರ್ಷನೇ ಮೊದಲಾದ

ಆ ಪಟ್ಟಣದ ಜನರೆಲ್ಲರೂ ಇಂಥ ಮಹಾಗುರುವಿನ ಏಳಿಗೆಗಾಗಿ ಬಹಳ ಸಂತೋಷಪಟ್ಟು ಉತ್ಸವಾದಿಗಳನ್ನು ಬಹು ವಿಜೃಂಭಣೆಯಿಂದ ಮಾಡಿದರು. ಅಲ್ಲದೆ ಆ ದೇಶಕ್ಕೂ ರಾಜಧಾನಿಗೂ ಒಡೆಯನೂ ವಿದ್ಯಾಭಿಮಾನಿಯೂ ಆದ ನಂದ ಮಹಾರಾಜನು ಷಣ್ಮುಖನ ಅನುಗ್ರಹಕ್ಕೆ ಪಾತ್ರನಾದ ವರ್ಷೋಪಾಧ್ಯಾಯರನ್ನು ನೋಡಿ ಬಹು ಸಂತೋಷಪಟ್ಟು ಇವರ ಮನೆಯಲ್ಲಿ ಸುವರ್ಣದಕ್ಷಿಣೆಯನ್ನು ವರ್ಷಿಸಿ ಧನ್ಯನಾದನು. (ಶೇಷ).

---

## ಬೆಳ್ದಿಂಗಳಲ್ಲಿ

—ಚಂದಿರನ ತಂಬೆಳಗು ಪಸರಿಸಿರೆ ಕಲ್ಗಳುಂ |
ಮಂದಹಾಸಂಗೊಳುತುಮಿರ್ಪಂತೆ ತೋರ್ದಪುವು! ।
ಚೆಂದವೆನಿತೊದವಿದುದೊ ಇಳೆಗಂತರಿಕ್ಷಕಾಗಸಕೆಲ್ಲದಿಕ್ಕುಗಳ್ಗೆ! ॥
ಹೊಂದಿಕೆಯೊಳಿರ್ಪುದೀ ನಲ್ಮೊಗದ ಶಾಂತಿ! ಎನಿ—।
ತೊಂದು ಮಧುರವೊ ಪೆರೆಯ ತೀರ ದನಿ! ಅಡಿಗಡಿಗೆ ।
ನಿಂದು ಸವಿಯುತಮಿರ್ಪುದದನಲಾ ತೆಂಗಾಳಿ! ಮೋಹಿಸರದಾರಿಂಪಿಗೆ! ॥ ೧ ॥

—ಮನದೊಳೊದವಿದುದು ಮೃದುಮಧುರಭಾವನೆಯೆನ್ನ ।
ಮನಮೆ ಈ ಬಾಹ್ಯಸೃಷ್ಟಿಯ ರೂಪೊ? ಸೃಷ್ಟಿಯೇ ।
ಮನದ ರೂಪೋ? ಮನದೊಳಿರ್ಪುದಂ ಸೃಷ್ಟಿಯೊಳ್ ಕಂಡಪೆಂ! ಚಿತ್ರವೆನಿತೊ ! ॥
ಮನಮುಳಿದುದೋ ಸೃಷ್ಟಿಯುಳಿದುದೋ ಮೇಣ್ ತಿಳಿಯ— ।
ದೆನಗೀಗಳೆತ್ತಲುಂ ತೋರ್ಪುದೊಂದೇ ಒಂದು! ।
ಮನಮಿಲ್ಲ ಸೃಷ್ಟಿಯಿಲ್ಲಾನಂದಮಾನಂದಮಾನಂದವೊಂದೆ ಒಂದು! । ೨ ॥

—ಅರಸು ನೀನೇ ದೇವ! ಸತ್ಯಮಿದು! ಮಿಕ್ಕವ— ।
ರ್ಗರಸೆಂಬುದುಪಚಾರವಚನವೈ! ನಿನ್ನ ಕಣ್ ।
ಪರಿವುದೆಲ್ಲೆಡೆಯಲ್ಲಿ! ಸಂದಿಗೊಂದಿಗಳಲ್ಲಿ ಪರಿವುದೈ! ನಿನ್ನ ಕಣ್ಗೆ ॥
ಪೊರಗಾಗದಿರ್ಪೆನಾಂ ಪದಿನಾಲ್ಕು ಲೋಕಂಗ— ।
ಳೆರೆಯ? ನೀನಿನಿತತುಳಭಾಗ್ಯಭಂಡಾರಮಂ ।
ತೆರೆದಿರಿಸಿದ್ಯೆ ಮುಂದೆ! ಏನಿದಚ್ಚರಿ ತಂದೆ! ನಿನ್ನೊಲ್ಮೆಯೆನ್ನೊಳೆನಿತೊ! ॥ ೩ ॥

—ಸಾಲಿ ರಾಮಚಂದ್ರರಾಯ

---




॥ नाहं कर्ता हरिः कर्ता तत्पूजा कर्म चाखिलम् ॥

## ಸಂಪೂರ್ಣ ಸ್ವಾತಂತ್ರ್ಯವೇ ನಮ್ಮ ಧ್ಯೇಯ

ಹಿಂದುಸ್ಥಾನದ ಮುಖ್ಯ ಧ್ಯೇಯವು ಯಾವುದಿರಬೇಕೆಂಬ ವಿಷಯವು ಮದ್ರಾಸದಲ್ಲಿ ರಾಷ್ಟ್ರೀಯ ಸಭೆ ಕೂಡಿದಾಗಿಂದ ಮೇಲೆ ಮೇಲೆ ತಲೆ ಎತ್ತುಹತ್ತಿದೆ. ಈ ಕಲ್ಪನೆಯ ಮೂಲ ಉತ್ಪಾದಕರು ಬಾಬು ಅರವಿಂದಘೋಷ ಇವರು. ಸುಮಾರು ೨೦ ವರ್ಷಗಳ ಹಿಂದೆ, ಅವರು ಹಿಂದುಸ್ಥಾನವನ್ನು ಬ್ರಿಟಿಶರ ಬಿಗಿಯಾದ ಮುಷ್ಟಿಯಿಂದ ಬಿಡಿಸುವುದೇ ತಮ್ಮ ಮುಖ್ಯ ಧ್ಯೇಯವೆಂದು ಧೈರ್ಯದಿಂದ ಸಾರಿದರು. ಒಡನೆಯೆ, ಹಿಂದುಸ್ಥಾದಲ್ಲಿ ಹಾಹಾಕಾರವೆದ್ದಿತು. ೧೯೦೬ ನೆಯ ಇಸ್ವಿಯಲ್ಲಿ ಕಲಕತ್ತೆಯಲ್ಲಿ ಕೂಡಿದ ರಾಷ್ಟ್ರೀಯಮಹಾಸಭೆಯಲ್ಲಿ ಹಿಂದುಸ್ಥಾನದ ಧ್ಯೇಯವು ಸ್ವರಾಜ್ಯವಾಗಿರಬೇಕೆಂದು ಶ್ರೀ. ದಾದಾಭಾಯಿ ನವರೋಜಿಯವರು ಸಾರಿದೊಡನೆಯೆ, ದೇಶದಲ್ಲಿ ಈ ವಿಷಯವಾಗಿ ಇಬ್ಬಣಗಳಾದುವು. ಸ್ವರಾಜ್ಯವೆಂದರೆ ಸಂಪೂರ್ಣ ಸ್ವರಾಜ್ಯ ಅಥವಾ ಸಂಪೂರ್ಣ ಸ್ವಾತಂತ್ರ್ಯವಲ್ಲವೆಂದೂ ಬ್ರಿಟಿಶರ ಸಾಮ್ರಾಜ್ಯ ಸತ್ತೆಯ ಕೆಳಗೆ ಹಿಂದುಸ್ಥಾನವು ಸ್ವರಾಜ್ಯವನ್ನನುಭವಿಸುವುದೆಂಬುದೇ ಅದರ ಅರ್ಥವೆಂದೂ ಹಲವರು ವಾದಿಸಿದರು. ಬಾಬು ಬಿಪಿನಚಂದ್ರಪಾಲರವರು ಸ್ವರಾಜ್ಯವೆಂದರೆ ಸಂಪೂರ್ಣಸ್ವಾತಂತ್ರ್ಯವೆಂದೇ ಅರ್ಥವೆಂದು ಹೇಳಿ, ಬ್ರಿಟಿಶರ ಆಡಳಿತದ ಕೆಳಗೆ, ಹಿಂದುಸ್ಥಾನವು ಸಂಪೂರ್ಣ ಸ್ವರಾಜ್ಯವನ್ನು ಅನುಭೋಗಿಸುವುದು ಹೇಗೆ ಶಕ್ಯವಿಲ್ಲೆಂಬುದನ್ನು ಸ್ಪಷ್ಟವಾಗಿ ತೋರಿಸಿದರು. ಮುಂದೆ ಬಾಬು ಅರವಿಂದ ಘೋಷರವರ ಮೇಲೆ ಖಟ್ಲೆಯಾದಾಗಲ್ಲಿ ಈ ಪ್ರಶ್ನೆ ಹೊರಟಿತ್ತು. ಈ ಪ್ರಕಾರವಾಗಿ, ಯಾವನೊಬ್ಬನು ಬ್ರಿಟಿಶರನ್ನು ಹೊರಗೆ ತಳ್ಳಿ ಸಂಪೂರ್ಣ ಸ್ವಾತಂತ್ರ್ಯವನ್ನು ಗಳಿಸುವುದೇ ಹಿಂದುಸ್ಥಾನದ ದೂರಿನ ಧ್ಯೇಯವೆಂದು ಹೇಳುವುದು ಶುದ್ಧ ರಾಜದ್ರೋಹವೆಂದು ಆಗ ಕೆಲವರು ಪ್ರತಿಪಾದಿಸಿದರು. ಆದರೆ ಹಾಗೆ ಅದನ್ನು ಧ್ಯೇಯವಾಗಿ ಇಟ್ಟುಕೊಳ್ಳುವುದೇನೂ ರಾಜದ್ರೋಹವಲ್ಲವೆಂದು ಆಗ ಕೋರ್ಟಿನವರು ನಿರ್ಣಯಿಸಿಕೊಟ್ಟರು. ಆ ಮಾತಿಗೆ ಈಗ ಸುಮಾರು ೨೦ ವರ್ಷಗಳಾಗಿ ಹೋದುವು. ಆಗ ಹಲಕೆಲವು ವ್ಯಕ್ತಿಗಳು ಮಾತ್ರವೇ ಇಟ್ಟುಕೊಂಡಿದ್ದ ಈ ಧ್ಯೇಯವು ಹೋದ ವರುಷ ರಾಷ್ಟ್ರೀಯ ಮಹಾಸಭೆಯಲ್ಲಿ, ಇಡೀ ರಾಷ್ಟ್ರದ ಧ್ಯೇಯವಾಗಿ ಸ್ವೀಕರಿಸಲ್ಪಟ್ಟಿರುತ್ತದೆ. ಒಟ್ಟಾರೆ, ಆ ಕಲ್ಪನೆಯು ರೂಢಮೂಲವಾಗುವುದಕ್ಕೆ ಸುಮಾರು ಒಂದು ತಲೆ ಹಿಡಿಯಿತು. ಇನ್ನು ಈಗ ಆ ಕಲ್ಪನೆಯ ಎರಡನೆಯ ಅಂಕವು ಪ್ರಾರಂಭವಾಗಿದೆ. ರಾಷ್ಟ್ರೀಯ ಸಭೆಯು ಆ ಧ್ಯೇಯದ ನಿಜವಾದ ಅರ್ಥವೇನು, ಅದು ಸಾಧ್ಯವಿದೆಯೋ ಇಲ್ಲವೋ, ಅದರ ಮಾರ್ಗದಲ್ಲಿ ಬರುವ ವಿಘ್ನಗಳಾವುವು, ಅವುಗಳ ನಿವಾರಣೆ ಹೇಗೆ ಮಾಡಬೇಕು, ಎಂಬುದು ಮುಂತಾದುವುಗಳು ಇನ್ನು ಕೆಲವು ವರ್ಷ ಚರ್ಚಿಸಲ್ಪಡುವುವೆಂದು ತೋರುತ್ತದೆ. ಹಿಂದೆ ಕ್ರೊಮ್ಮೆ ಈ ಪ್ರಶ್ನೆ ರಾಷ್ಟ್ರೀಯ ಸಭೆಯಲ್ಲಿ ಹೊರಟಾಗ, ಮಹಾತ್ಮಾಗಾಂಧಿಯವರು ಅದನ್ನು ಬಡಿದುಹಾಕಿ, ಸ್ವರಾಜ್ಯದ ಅರ್ಥವು ಬ್ರಿಟಿಶರನ್ನು ಹಾಕಲೇ ಬೇಕೆಂದೂ, ಅಲ್ಲ, ಅಥವಾ ಬಿಡಬೇಕೆಂದೂ ಅಲ್ಲ ಎಂಬದಾಗಿ ಹೇಳಿ, ರಾಷ್ಟ್ರವನ್ನು ಸಾಧ್ಯಕ್ಕಿಂತಲೂ ಹೆಚ್ಚಿಗೆ ಸಾಧನದ ಕಡೆಗೆ ಹೊರಳಿಸಿದ್ದರು. ಆ ಮೇರೆಗೆ, ಇಷ್ಟು ವರುಷ, ರಾಷ್ಟ್ರವು ಮಹಾತ್ಮಾಗಾಂಧಿಯವರನ್ನು ಹಿಂಬಾಲಿಸಿತ್ತು. "ಹಾಲು ಇಲ್ಲ ಬಟ್ಟಲು ಇಲ್ಲ, ಗುಟಕ್ಕನೆಂದರು" ಎಂಬಂತೆ, ಹಿಂದುಸ್ಥಾನಕ್ಕೆ ಒಂದು ಹೆಜ್ಜೆಯನ್ನಿಡುವುದಕ್ಕೆ ಕೂಡ ತ್ರಾಣವಿಲ್ಲದಾಗ, ಗುಡದಂಥ ಮಾತುಗಳನ್ನಾಡಿ

ಪ್ರಯೋಜನವೇನು? ಎಂಬುದಾಗಿ ರಾಷ್ಟ್ರವು ಯೋಚಿಸಿ, ಧ್ಯೇಯಕ್ಕಿಂತಲೂ ಸಾಧನದ ಕಡೆಗೆ ಹೆಚ್ಚಿಗೆ ಲಕ್ಷ್ಯಪೂರೈಸಿತು. ಮಹಾತ್ಮಾಗಾಂಧಿಯವರ ತಪೋಬಲದಿಂದ ಈಗ ಅದು ಕೆಲಮಟ್ಟಿಗೆ ಶಕ್ತಿಯನ್ನು ಸಂಪಾದಿಸಿದೆ, ಆತ್ಮವಿಶ್ವಾಸವನ್ನು ಪಡೆದಿದೆ. ಆದುದರಿಂದ, ಈಗ ಪುನಃ ಧ್ಯೇಯದ ವಿಚಾರವು ತಲೆ ಎತ್ತಲಾರಂಭಿಸಿದೆ, ಇದು ಹೀಗೆ ಜನರ ಮನಸ್ಸಿನೊಳಗೆ ಹಣಿಕಿಹಾಕುವುದಕ್ಕೆ ಮತ್ತು ಕೆಲವು ಕಾರಣಗಳುಂಟಾಗಿವೆ. ಮಹಾತ್ಮಾಗಾಂಧಿಯವರು ಕೈಕೊಂಡಿರುವ ಸತ್ಯಾಗ್ರಹವು, ಸ್ವರಾಜ್ಯವನ್ನು ಪಡೆವುದಕ್ಕೆ ಸಾಕಾಗುವುದೋ ಇಲ್ಲವೋ ಎಂಬ ಸಂದೇಹವು ಜನತೆಗೆ ಪ್ರಾಪ್ತವಾಗಹತ್ತಿದೆ. ಆಳರಸರು ಸತ್ಯಾಗ್ರಹಿಗಳ ಸಂಕಟವನ್ನು ನೋಡಿ, ಸ್ವಲ್ಪವಾದರೂ ಕರುಣಾವಶರಾಗಿದ್ದರೆ ಈ ತರಹದ ವಿಚಾರಗಳಿಗೆ ಆಸ್ಪದವೇ ಇರಲಿಲ್ಲ. ಆದರೆ ಸತ್ಯಾಗ್ರಹಚಳವಳದ ಅನುಭವದ ಮೇಲಿಂದ ಆಳರಸರ ಪಾಷಾಣ ಹೃದಯಕ್ಕೆ ತುಸುವಾದರೂ ದ್ರವ ಒಡೆವ ಸಂಭವವಿಲ್ಲವೆಂದು ಹಲವರಿಗೆ ಮನವರಿಕೆಯಾಗಹತ್ತಿದೆ. ಹಾಗೆ ದ್ರವ ಒಡೆಯದಿದ್ದರೆ ಮುಂದೇನು ಮಾಡಬೇಕೆಂಬ ಯೋಚನೆ ರಾಷ್ಟ್ರಕ್ಕೆ ಹುಟ್ಟಲಾರಂಭಿಸಿದೆ. ಮುಂದೇನು ಮಾಡಬೇಕೆಂಬುದರ ವಿಚಾರವು ಇನ್ನೂ ಪೂರ್ಣವಾಗಿಲ್ಲ, ಮುಂದೆ ಯಾವ ಉಪಾಯಗಳನ್ನು ಕೈಕೊಳ್ಳಬೇಕೆಂಬುದನ್ನು ರಾಷ್ಟ್ರವು ಇನ್ನೂ ನಿರ್ಧರಿಸಿಲ್ಲ. ಆದರೂ ಇಷ್ಟು ಮಾತ ನಿಜ, ಈಗಿನ ಉಪಾಯಗಳು ಸಾಲವು ಎಂಬ ಮಾತು ರಾಷ್ಟ್ರಕ್ಕೆ ಗೊತ್ತಾಗಿ ಹೋಗಿದೆ. ಮದ್ರಾಸಿನಲ್ಲಿ ಸಂಪೂರ್ಣ ಸ್ವಾತಂತ್ರ್ಯದ ನಿರ್ಣಯವು ಮಂಜೂರಾದುದಕ್ಕೆ ಹಿಂದುಸ್ಥಾನದ ಈತರಹದ ಮನಃಸ್ಥಿತಿಯೇ ಕಾರಣವೆಂದು ನಮಗೆ ತೋರುತ್ತದೆ.

---

## ಹಿಂದುಸ್ಥಾನವನ್ನು ಅನ್ಯರು ನುಂಗಲಿಕ್ಕಿಲ್ಲವೆ ?

ಸಂಪೂರ್ಣಸ್ವಾತಂತ್ರ್ಯವನ್ನು ಧ್ಯೇಯವನ್ನಾಗಿ ಸ್ವೀಕರಿಸುವ ಮಾರ್ಗದಲ್ಲಿಯ ಎಲ್ಲಕ್ಕೂ ದೊಡ್ಡ ತೊಂದರೆಯೆಂದರೆ, ಬ್ರಿಟಿಶರು ಈ ದೇಶವನ್ನು ಬಿಟ್ಟು ಹೋದರೆ, ನಾವು ಮತ್ತೊಬ್ಬರಿಗೆ ತುತ್ತಾಗಬಹುದೆಂಬ ಅಂಜಿಕೆ ಅನೇಕರ ಮನಸ್ಸಿನಲ್ಲಿ ಇರುತ್ತದೆ. "ಸಂಪೂರ್ಣ ಸ್ವಾತಂತ್ರ್ಯವೇನೋ ಎಲ್ಲರಿಗೂ ಪ್ರಿಯವಾಗಿರಬಹುದು, ಅದು ಎಲ್ಲ ವ್ಯಕ್ತಿಗಳ ಮತ್ತು ರಾಷ್ಟ್ರಗಳ ಜನ್ಮಸಿದ್ಧವಾದ ಹಕ್ಕೂ ಆಗಿರಬಹುದು, ಆದರೆ ಅದರಿಂದೇನು ಪ್ರಯೋಜನ ? ನಾವು ವ್ಯವಹಾರ್ಯವಾದದನ್ನೇ ಧ್ಯೇಯವಾಗಿಟ್ಟುಕೊಳ್ಳಬೇಕಲ್ಲದೆ, ಅವ್ಯವಹಾರ್ಯವಾದುದನ್ನು ನಮ್ಮ ಧ್ಯೇಯವನ್ನಾಗಿ ಇಟ್ಟುಕೊಂಡು ಪ್ರಯೋಜನವೇನು ? ನಮ್ಮ ಹತ್ತಿರ ಅಸ್ತ್ರಶಸ್ತ್ರಗಳಿಲ್ಲ, ಮದ್ದುಗುಂಡುಗಳಿಲ್ಲ, ಮತ್ತು ಈ ಸಾಧನಗಳಿಲ್ಲದೆ ಬ್ರಿಟಿಶರನ್ನು ಹಿಂದಾಸ್ಥಾನದಿಂದ ಹೊರಗೆ ತಳ್ಳುವುದು ಎಂದಿಗೂ ಸಾಧ್ಯವಿಲ್ಲ, ಅವರಾಗಿಯೇ ಬಿಟ್ಟು ಹೋಗುವರೆಂದು ಆಶಿಸುವುದೂ ಮೂರ್ಖತನವು. ಆದುದರಿಂದ, ಸಂಪೂರ್ಣಸ್ವಾತಂತ್ರ್ಯವನ್ನು ಧ್ಯೇಯವಾಗಿ ಇಟ್ಟುಕೊಳ್ಳುವುದು ಚಂದಪ್ಪನನ್ನು ಬೇಡಿದಂತೆಯೇ ಸರಿ"—ಎಂಬುದಾಗಿ ಜನತೆಯ ಮನಸ್ಸಿನಲ್ಲಿ ಆಕ್ಷೇಪಗಳು ಬರುವುದು ಸ್ವಾಭಾವಿಕವಿದೆ. ಇದಲ್ಲದೆ, ಒಂದುವೇಳೆ, ಬ್ರಿಟಿಶರನ್ನು ಹೊರಗೆ ಹಾಕುವುದು ಶಕ್ಯವೆಂದು ಕಲ್ಪಿಸಿದರೂ, ಇವರನ್ನು ಹೊರಗೆ ಹಾಕಿದರೆ ಮತ್ತೊಬ್ಬರು ಬಂದು ನಮ್ಮ ಎದೆಯಮೇಲೆ ಕುಳಿತುಕೊಳ್ಳುವರು ಎಂಬುದಾಗಿ ಮುಂದಿನ ಭೀತಿ. ಆದುದರಿಂದಲೇ, ಕೆಲವರು ಈ ತರಹದ ಬ್ರಿಟಿಶರಿಂದ ರಹಿತವಾದ ಹಿಂದುಸ್ಥಾನದ ಚಿತ್ರವನ್ನು ತಮ್ಮ ಕಲ್ಪನೆಯಲ್ಲಿ ಕೂಡ ತರುವುದಕ್ಕೆ ಹೆದರುತ್ತಾರೆ. ಆದುದರಿಂದ, ಶ್ರೀ. ಜವಾಹಿರಲಾಲ ನೇಹರು, ಶ್ರೀ. ಸುಭಾಷಚಂದ್ರ ಮುಂತಾದವರು ಹಿಂಬರಿಕೆಯಿಂದ ಸಾಗಿ, ಮುಂಚೆ ಈ ಕೊನೆಯ ಭೀತಿಯನ್ನು ದೂರಮಾಡಲು ಯತ್ನಿಸಹತ್ತಿರುತ್ತಾರೆ. ಈ ಕೊನೆಯ ಭೀತಿ ನಿರಾಧಾರವಾಗಿಗೆ. ಬ್ರಿಟಿಶರು ಹಿಂದುಸ್ಥಾನವನ್ನು ಬಿಟ್ಟು ಹೋದರೆ ರಶಿಯಾ ಜಪಾನ ತುರ್ಕಸ್ಥಾನ ಮುಂತಾದ ಯಾವುದೊಂದು ರಾಷ್ಟ್ರವು ನಮ್ಮನ್ನು ತನ್ನ ಅಂಕಿತದಲ್ಲಿ ಇಟ್ಟುಕೊಂಡು ಆಳುವುದೆಂಬುದು ತಪ್ಪು ಎಂಬುದಾಗಿ ಇವರ ಉಪದೇಶದ ಮರ್ಮ. ಪಂಡಿತ ಜವಾಹಿರಲಾಲ ನೆಹರು ಇವರು ಎರಡು ವರ್ಷ ಪರದೇಶದಲ್ಲಿ ಪ್ರವಾಸ ಮಾಡಿ ತಮ್ಮ ಅನುಭವವನ್ನು ಹಿಂದುಸ್ಥಾನದ ಜನರೆದುರಿಗೆ ಇಡತ್ತಿದ್ದಾರೆ. ಹಿಂದುಸ್ಥಾನವೆಂದರೆ ಒಂದು ದೊಡ್ಡ ಬೆಣ್ಣೆಯ ಮುದ್ದೆ. ಈ ಬೆಣ್ಣೆಯ ಮುದ್ದೆ ಯಾರಿಗೆ ಬೇಡ! ಪ್ರತಿಯೊಂದು ರಾಷ್ಟ್ರಕ್ಕೂ ಇದರ ಮೇಲೆ ಆಶೆ, ಈ ಆಶೆಯ ಮೂಲಕವೇ ಹಿಂದುಸ್ಥಾನ ದೇಶವು ಸುರಕ್ಷಿತವಾಗಿ ಉಳಿವ ಸಂಭವವುಂಟು. ಏಕೆಂದರೆ, ಬ್ರಿಟಿಶರ ಬಾಯಿಯಿಂದ ಈ ಮುದ್ದೆ ಹೊರಬಿದ್ದೊಡನೆಯೆ ಅದನ್ನು ಎತ್ತಬೇಕೆಂಬ ಯೋಚಿಸುವ ರಾಷ್ಟ್ರದ ವಿರುದ್ಧವಾಗಿ ಜಗತ್ತಿನ ಮಿಕ್ಕ ರಾಷ್ಟ್ರಗಳು ಏಳುವುದೇ ನಿಜ. ಈ ಕಾರಣದ ಮೂಲಕ, ಹಿಂದು

ಸ್ಥಾನವು ಯಾರ ಬಾಯಿಯಲ್ಲಿಯೂ ತುತ್ತಾಗದೆ ಸ್ವತಂತ್ರವಾಗಿಯೇ ಉಳಿವುದು. ಯುರೋಪಿನಲ್ಲಿ ಅನೇಕ ಚಿಕ್ಕ ಚಿಕ್ಕ ರಾಷ್ಟ್ರಗಳುಂಟು. ಆ ರಾಷ್ಟ್ರಗಳನ್ನು ನುಂಗಲಿಕ್ಕೆ ಸಮರ್ಥವಾದ ರಾಷ್ಟ್ರಗಳೂ ಅನೇಕವಾಗಿವೆ. ಸ್ವಿಝರ್ಲಂಡ, ಹಾಲಂಡ, ಬೆಲ್‌ಜಮ್ ಮುಂತಾದ ಚಿಕ್ಕ ಚಿಕ್ಕ ರಾಷ್ಟ್ರಗಳನ್ನು ನುಂಗಬೇಕೆಂಬ ಇಚ್ಛೆ ಇಂಗ್ಲಂಡ ಫ್ರಾನ್ಸ, ರಶಿಯಾ ಜರ್ಮನಿ, ಇಟಲಿ ಮುಂತಾದ ರಾಷ್ಟ್ರಗಳಿಗೆ ಉಂಟಾದರೆ, ಆ ಚಿಕ್ಕ ದೇಶಗಳನ್ನು ಈ ದೊಡ್ಡ ದೇಶಗಳು ಅರಕ್ಷಣದಲ್ಲಿ ನುಂಗಬಹುದಾಗಿತ್ತು. ಆದರೆ ಹಾಗೆ ಇಚ್ಛೆಯುತ್ಪನ್ನವಾಗದಿರುವುದಕ್ಕೆ ಮಿಕ್ಕ ರಾಷ್ಟ್ರಗಳ ಅಂಜಿಕೆಯೇ ಕಾರಣ. ಆದುದರಿಂದಲೇ, ಅವೆಲ್ಲ ಚಿಕ್ಕ ರಾಷ್ಟ್ರಗಳು ಕೂಡ ಸಂಪೂರ್ಣ ಸ್ವಾತಂತ್ರ್ಯವನ್ನು ಅನುಭವಿಸುತ್ತವೆ. ಒಟ್ಟಾರೆ, ಚಿಕ್ಕ ದೊಡ್ಡ ಯಾವತ್ತು ರಾಷ್ಟ್ರಗಳು ತನ್ಮಟ್ಟಕ್ಕೆ ತಾವು ಸಂಪೂರ್ಣ ಸ್ವಾತಂತ್ರ್ಯವನ್ನು ಅನುಭವಿಸುತ್ತ ಇರುವುದಕ್ಕೆ ಈ ತರಹದ ಆಕರ್ಷಣಶಕ್ತಿಯೇ ಕಾರಣ. ಒಂದು ದೊಡ್ಡ ರಾಷ್ಟ್ರವು ಮತ್ತೊಂದು ಚಿಕ್ಕ ರಾಷ್ಟ್ರವನ್ನು ನುಂಗಬೇಕೆನ್ನುವಷ್ಟರಲ್ಲಿ, ಮಿಕ್ಕೆಲ್ಲ ರಾಷ್ಟ್ರಗಳು ತಮ್ಮ ಶಕ್ತಿಯನ್ನು ಆ ಚಿಕ್ಕ ರಾಷ್ಟ್ರಕ್ಕೆ ಕೊಟ್ಟು, ಆ ಶಕ್ತಿಯ ಮೂಲಕ, ಆ ಚಿಕ್ಕ ರಾಷ್ಟ್ರವನ್ನು ಸಂರಕ್ಷಿಸುತ್ತವೆ. ಬ್ರಿಟಿಶರು ಬಿಟ್ಟು ಹೋದರೆ, ಜರ್ಮನಿ ಬರುವುದೆಂಬ ಭೀತಿಯಿಲ್ಲ. ಏಕೆಂದರೆ, ಈ ಯುದ್ಧದ ಜರ್ಮನಿಯವರ ಬಾಯಿಯಲ್ಲಿ ಬೀಳಬಾರದೆಂದು ಫ್ರಾನ್ಸ ಸರ್ವದಾ ಎಚ್ಚರಿಕೆಪಡುತ್ತದೆ. ಜಪಾನ ದೇಶವು ಹಿಂದುಸ್ಥಾನ ದೇಶವನ್ನು ಆಕ್ರಮಿಸಬೇಕೆಂದು ಯೋಚಿಸಿದರೆ ಅದರ ಬೆನ್ನ ಮೇಲೆ, ಅಮೇರಿಕವು ಟೊಣಪಿಯನ್ನು ಹಾಕಲಿಕ್ಕೆ ಸಜ್ಜಿದೆ. ಇದೇ ಬಗೆಯಾಗಿ, ಪ್ರತಿಯೊಂದು ದೇಶಕ್ಕೆ ಕೆಲಕೆಲವು ಅಡಚಣೆಗಳಿರುವುವು. ಆದುದರಿಂದ ಸಂಪೂರ್ಣಸ್ವಾತಂತ್ರ್ಯವು ಸಿಕ್ಕರೆ, ಬ್ರಿಟಿಶರ ಬದಲಾಗಿ ಅನ್ಯ ಯಾವುದೊಂದು ರಾಷ್ಟ್ರವು ನಮ್ಮನ್ನು ನುಂಗಬಹುದೆಂಬ ಅಂಜಿಕೆ ಈಗಿನ ದಿವಸಗಳಲ್ಲಿ ಸಂಪೂರ್ಣವಾಗಿ ನಿರಾಧಾರವಾದುದು. ಸಂಪೂರ್ಣ ಸ್ವಾತಂತ್ರ್ಯವನ್ನು ರಕ್ಷಿಸುವುದಕ್ಕೆ ಮುಖ್ಯವಾಗಿ ನಮಗೆ ಬೇಕಾಗಿರುವುದು ನಮ್ಮ ಸ್ವರಾಜ್ಯವನ್ನು ನಾವೇ ನಡೆಸುವ ಶಕ್ತಿ. ಅದಕ್ಕೆ ಮಾತ್ರ ನಾವು ಅನ್ಯ ದೇಶದವರನ್ನು ಅವಲಂಬಿಸಿದರೆ ಸಾಗದು. ನಮ್ಮ ರಾಜ್ಯವನ್ನು ಆಳುವ ಶಕ್ತಿಯನ್ನು ನಾವೇ ಗಳಿಸಬೇಕು. ಹೀಗೆ ಸ್ವರಾಜ್ಯವನ್ನು ನಡೆಯಿಸುವುದಕ್ಕೆ ನಮಗೆ ಪ್ರಾಪ್ತವಾಗಿರುವ ಶಕ್ತಿಯೇ ನಮ್ಮನ್ನು ಅನ್ಯರಾಷ್ಟ್ರಗಳಿಂದ ಸಂರಕ್ಷಿಸಿಕೊಳ್ಳುವುದಕ್ಕೂ ಸಾಕಾಗುತ್ತದೆ. ಏಕೆಂದರೆ ಅನ್ಯರಿಂದ ನಮ್ಮ ದೇಶವನ್ನು ಸಂರಕ್ಷಿಸುವ ವಿಷಯದಲ್ಲಿ, ಅನ್ಯ ರಾಷ್ಟ್ರಗಳು ನಮಗೆ ತಮ್ಮ ಶಕ್ತಿಯನ್ನು ಕೊಡಲಿಕ್ಕೆ ಸಜ್ಜವಾಗುತ್ತವೆ. ಈ ಕಾರಣದ ಮೂಲಕ, ನಮ್ಮ ಜನರು ನಿಷ್ಕಾರಣವಾದ ಈ ಭೀತಿಯನ್ನು ಮುಂಚೆ ಬಿಟ್ಟುಕೊಡಬೇಕು.

---

## ಯಾವತ್ತು ಪಂಗಡುಗಳ ಪರಿಷತ್ತು

ಹಿಂದುಸ್ಥಾನಕ್ಕೆ ಬೇಕಾದ ಸ್ವರಾಜ್ಯವು ಯಾವ ಬಗೆಯದಿರಬೇಕೆಂಬುದನ್ನು ಗೊತ್ತುಪಡಿಸುವುದಕ್ಕೋಸ್ಕರ ಹಿಂದುಸ್ಥಾನದೊಳಗಿನ ಯಾವತ್ತು ಪಂಗಡುಗಳ ಪರಿಷತ್ತು ಕರೆಯಲ್ಪಟ್ಟಿತ್ತು. ಮುಂಬಯಿಯಲ್ಲಿ ಅದರ ಸಭೆಯು ಕೂಡಿ, ಆ ಪ್ರಕಾರದ ಒಂದು ಯೋಜನೆಯನ್ನು ತಂದಿರಿಸುವುದಕ್ಕೋಸ್ಕರ ಒಂದು ಕಮೀಟಿಯು ನೇಮಿಸಲ್ಪಟ್ಟಿತು. ಸ್ವರಾಜ್ಯದ ಘಟನೆಯನ್ನು ತಯಾರಿಸುವ ಕಲ್ಪನೆ ಹೊಸದಲ್ಲ. ಮಾಂಟೆಗ್ಯೂ ಸಾಹೇಬರು ಇಲ್ಲಿಗೆ ಬಂದಾಗ ಆ ಪ್ರಕಾರದ ಯೋಜನೆಯು ಸಿದ್ಧವಾಗಿತ್ತು. ಆದರೆ ಇತ್ತೀಚೆಗೆ ಅನೇಕ ಹೊಸ ವಿಷಯಗಳನ್ನು ವಿಚಾರ ಮಾಡುವುದು ಅವಶ್ಯವಾಗಿದೆ. ಹಿಂದೂ ಮುಸಲ್ಮಾನರಲ್ಲಿಯ ಭೇದವೇ ಎಲ್ಲಕ್ಕೂ ಮಹತ್ವದ ವಿಷಯು. ಮುಂದಿನ ಸ್ವರಾಜ್ಯದಲ್ಲಿ ಮುಸಲ್ಮಾನರು ತಮಗೆ ವಿಶಿಷ್ಟ ಹಕ್ಕುಗಳಿರಬೇಕೆಂದು ಬೇಡಹತ್ತಿದ್ದಾರೆ. ಹಿಂದುಸ್ಥಾನದಲ್ಲಿ ಹಿಂದೂ ಜನರ ಸಂಖ್ಯೆಯೇ ಹೆಚ್ಚಿಗಿರುವುದರಿಂದಲೂ, ಮುಸಲ್ಮಾನರು ಪರಧರ್ಮದವರಾಗಿರುವುದರಿಂದಲೂ, ಹಿಂದುಸ್ಥಾನಕ್ಕೆ ಸ್ವರಾಜ್ಯ ದೊರೆತರೆ, ಅದು ಹಿಂದುಗಳ ರಾಜ್ಯವೇ ಆಗಿ, ಮುಸಲ್ಮಾನರಿಗೆ ಅನೇಕ ತರಹದ ಸಂಕಟಗಳನ್ನು ಅನುಭವಿಸಬೇಕಾಗುವುದೆಂದೂ ಅವರಿಗೆ ಬಹಳ ಭೀತಿಯುಂಟಾಗಿರುವುದು. ಇದೇ ಭೀತಿಯೇ ಸ್ವರಾಜ್ಯದ ಮಾರ್ಗದಲ್ಲಿ ಅಡ್ಡ ಬರುತ್ತಿದೆ. ಆದರೆ, ಈ ಭೀತಿಯು ನಿಜವಾದ ಭೀತಿಯಲ್ಲ. ಸ್ವರಾಜ್ಯ ಸಿಕ್ಕರೆ ಹಿಂದೂ ಜನರು ಮುಸಲ್ಮಾನರನ್ನು ಸಂಕಟಗಳಿಗೆ ಗುರಿಮಾಡುವರೆಂದು ತಿಳಿಯುವುದು ತಪ್ಪು. ಹಿಂದುಗಳು ಸ್ವರಾಜ್ಯ ಬೇಡುವುದು ಮುಸಲ್ಮಾನರನ್ನು ಬಗ್ಗಿಸಬೇಕೆಂಬ ಉದ್ದೇಶದಿಂದ ಅಲ್ಲ, ಆದರೆ, ಅದಕ್ಕಿಂತ ಹೆಚ್ಚು ಉದಾತ್ತವಾದ ಉದ್ದೇಶದಿಂದ. ಇವಲ್ಲದೆ ಹಿಂದುಗಳು ಸ್ವಭಾವತಃ ಮೃದುಮನಸ್ಕರು. ಮೇಲಾಗಿ ಮುಸಲ್ಮಾನರ ಜನ

ಸಂಖ್ಯೆಯೇನು ಈ ದೇಶದಲ್ಲಿ ಚಿಕ್ಕದಿಲ್ಲ. ಆರೇಳು ಕೋಟಿ ವೀರರಾದ ಮುಸಲ್ಮಾನರನ್ನು ಜುಲುಮೆಯಿಂದಾಳುವ ಶಕ್ತಿಯು ಯಾರಲ್ಲಿ ಇದೆ ? ಆದರೆ, ಈ ಪ್ರಕಾರದ ಭೀತಿಯು ಮುಸಲ್ಮಾನರ ಮನದಲ್ಲಿ ಇರುವುದೆಂಬುದು ಸುಳ್ಳಲ್ಲವಷ್ಟೆ. ಆ ಭೀತಿಯನ್ನು ನಾವು ದೂರ ಮಾಡಬೇಕಲ್ಲವೆ ? ಹಾಗೆ ಮಾಡಲು ಹಿಂದುಗಳು ಸಿದ್ಧರಿದ್ದಾರೆ. ಆದರೆ ಕೆಲವು ಮುಸಲ್ಮಾನರ ಮನದಲ್ಲಿ, ಈ ಹೊತ್ತು ಸಾಧಿಸಿಕೊಂಡು, ಮುಸಲ್ಮಾನರ ಶಕ್ತಿಯನ್ನು ಮೇತಿಮೀರಿ ಬೆಳಿಸಬೇಕೆಂದು ದುರ್ಬುದ್ಧಿ ಹುಟ್ಟಿದೆ. ಅವರಿಗೆ ಜಗತ್ತಿನಲ್ಲೆಲ್ಲ ಮುಸಲ್ಮಾನ ಸಾಮ್ರಾಜ್ಯವನ್ನು ಸ್ಥಾಪಿಸುವ ಒಣ ಕನಸುಗಳು ಬೀಳಹತ್ತಿವೆ. ಅಫಗಾಣಿಸ್ಥಾನ, ಇರಾಣ, ತುರ್ಕಸ್ಥಾನ, ಅರಬಸ್ಥಾನ ಮುಂತಾದ ರಾಷ್ಟ್ರಗಳು ತಮ್ಮ ಬೆಂಬಲಕ್ಕೆ ಬರುವುವೆಂದೂ ಅವರ ಬೆಂಬಲದಿಂದ ಮುಸಲ್ಮಾನಸಾಮ್ರಾಜ್ಯವನ್ನು ಹಿಂದುಸ್ಥಾನದಲ್ಲಿ ಸ್ಥಾಪಿಸಬಹುದೆಂದೂ ಹಲವು ಮುಸಲ್ಮಾನರಿಗೆ ಅನಿಸುತ್ತದೆ. ಆದುದರಿಂದಲೇ, ಹಿಂದುಗಳ ಮನದಲ್ಲಿ ಮುಸಲ್ಮಾನರ ಮೇಲೆ ವಿಶ್ವಾಸವಿಲ್ಲ. ಹಿಂದು ಮತ್ತು ಮುಸಲ್ಮಾನರೊಳಗೆ ರಾಜಿಯಾಗದಿರುವುದಕ್ಕೆ ಅವರಿಬ್ಬರ ಮನದಲ್ಲಿರುವ ಈ ಭೀತಿಗಳೇ ಮೂಲಕಾರಣ. ಆಯಾ ಸಮಾಜಗಳ ಮುಖಂಡರ ಆಚರಣೆಯಿಂದಲೇ ಈ ಭೀತಿಗಳು ದೂರವಾಗಬೇಕು. ಒಬ್ಬರು ಮತ್ತೊಬ್ಬರಲ್ಲಿ ವಿಶ್ವಾಸವಿಡುವಷ್ಟು ಅವರ ಆಚರಣೆ ಉದಾತ್ತವಾದುದಾಗಿರಬೇಕು. ಹಾಗಿಲ್ಲದಿದ್ದರೆ, ಇಬ್ಬರಲ್ಲಿ ಎಂದೂ ರಾಜಿಯಾಗಲಾರದು. ಮುಸಲ್ಮಾನರು ಈಗ ಕೆಲವು ಪ್ರಾಂತಗಳಲ್ಲಿ ತಮ್ಮ ಬಹುಮತವನ್ನು ಮಾಡಿಕೊಳ್ಳಬೇಕೆಂದು ಹವಣಿಸುತ್ತಾರೆ. ಪಂಜಾಬ ಬಂಗಾಲಗಳಲ್ಲಿ ಈಗ ಅವರು ಹಿಂದೂಗಳಿಗಿಂತ ಹೆಚ್ಚಿಗೆ ಇದ್ದಾರೆ. ಹಿಂದುಸ್ಥಾನದ ಗಡಿನಾಡನ್ನು ಸ್ವತಂತ್ರನಾಗಿ ಮಾಡಿದರೆ, ಅದರಲ್ಲಿಯೂ ಅವರೇ ಹೆಚ್ಚಿಗಿರುವುದರಿಂದ, ಅದೂ ಒಂದು ತಮ್ಮ ಪ್ರಾಂತವೇ ಆಗುವುದು. ಬಲೂಚಿಸ್ಥಾನವು ತಮ್ಮದೇ ಒಂದು ಪ್ರಾಂತವಾಗುವುದು. ಇದಲ್ಲದೆ ಮುಂಬಯಿ ಇಲಾಖೆಯೊಳಗಿಂದ ಸಿಂಧ ಪ್ರಾಂತವನ್ನು ಬೇರ್ಪಡಿಸಿದರೆ ಅದರಲ್ಲಿಯೂ ಮುಸಲ್ಮಾನರ ವರ್ಚಸ್ಸೇ ಬೆಳೆಯುವುದು. ಹೀಗೆ ನಾಲ್ಕೈದು ತಮ್ಮ ಪ್ರಾಂತಗಳನ್ನು ಮಾಡಿಕೊಳ್ಳಬೇಕೆಂದು ಅವರ ಇಚ್ಛೆ. ಈ ಪ್ರಕಾರವಾಗಿ ೫ ಪ್ರಾಂತಗಳಲ್ಲಿ ಮುಸಲ್ಮಾನರ ಸಂಖ್ಯೆಯು ಅಧಿಕವಾಗುವುದರಿಂದ, ಮಿಕ್ಕ ಒಂಬತ್ತು ಪ್ರಾಂತಗಳಲ್ಲಿ ಹಿಂದು ಜನರು ಮುಸಲ್ಮಾನರನ್ನು ಕೆಟ್ಟ ರೀತಿಯಿಂದ ನಡೆಯಿಸಿಕೊಂಡರೆ, ತಾವು ಈ ಐದು ಪ್ರಾಂತಗಳಲ್ಲಿ ಹಿಂದೂ ಜನರನ್ನು ಕೆಟ್ಟ ರೀತಿಯಿಂದ ನಡೆಯಿಸಿಕೊಳ್ಳಬಹುದೆಂದು ಮುಸಲ್ಮಾನರ ತರ್ಕ. ಈ ದುರ್ಬುದ್ಧಿಯು ಒಳಿತಲ್ಲ. ಹಿಂದು ಮುಸಲ್ಮಾನರಲ್ಲಿ ಜಗಳವು ತಾನಾಗಿಯೇ ಹುಟ್ಟುವುದೆಂದು ನಮ್ಮ ಆಳರಸರು ಹೊಂಚುಹಾಕಿಕೊಂಡು ಕುಳಿತಿರುವರು. ಆದಕಾರಣ, ಈಗ ಕೂಡಿರುವ ಕಮೀಟಿಯ ಮೇಲೆ ಬಹಳ ದೊಡ್ಡ ಜವಾಬದಾರಿಯಿರುತ್ತದೆ. ಅದನ್ನು ಅವರು ಹೇಗೆ ಕೊನೆಗಾಣಿಸುವರೋ ಎಂಬುದನ್ನು ರಾಷ್ಟ್ರವು ಇದಿರು ನೋಡುತ್ತಿರುವುದು.

---



ಕರ್ನಾಟಕ ಪ್ರಾಂತಿಕ ಪರಿಷತ್ತಿನ ಮಂಟಪದ ಮಹಾದ್ವಾರವು
ಆಧ್ಯಕ್ಷರು ಸ್ವಾಗತಾಧ್ಯಕ್ಷರೊಡನೆ ನಿಂತಿರುವ ೧.

## ಕರ್ನಾಟಕ ಪ್ರಾಂತಿಕ ಪರಿಷತ್ತು

ಈ ಪರಿಷತ್ತಿಗೆ ಮುಂಬಯಿಯ ಪ್ರಸಿದ್ಧ ದೇ. ಭ. ನರಿಮನ್ ಇವರು ಅಧ್ಯಕ್ಷರು. ಇವರು ತಮ್ಮ ಭಾಷಣದಲ್ಲಿ ಬ್ರಿಟಿಶ್ ಆಡಳಿತದ ದುಷ್ಪರಿಣಾಮಗಳನ್ನು ವಿಸ್ತಾರವಾಗಿ ವರ್ಣಿಸಿ, ಸಾಯಮನ್ ಕಮೀಶನನ್ನು ಧಿಕ್ಕರಿಸಿ ಕರ್ನಾಟಕದಲ್ಲಿ ಹೊಸದಾಗಿ ಹುಟ್ಟಿರುವ ಬ್ರಿಟಿಶ್ ಕರ್ನಾಟಕ ಸಂಘವ ಮೂರ್ಖತನವನ್ನು ಚೆನ್ನಾಗಿ ಬೈಲಿಗೆ ಎಳೆದು, ತರುಣರಿಗೆ ದೇಶಕಾರ್ಯವನ್ನು ಕೈಕೊಳ್ಳಲು ಪ್ರೋತ್ಸಾಹಗೊಳಿಸಿದರು. ಇವರ ಅಸ್ಖಲಿತವಾದ ಭಾಷಣವು ನಡೆದಾಗ ಸಭಾಮಂದಿರವು ತಲ್ಲೀನವಾಗಿತ್ತು. ಈ ಪರಿಸತ್ತಿನಲ್ಲಿ ಅನೇಕ ಮಹತ್ವದ ನಿರ್ಣಯಗಳು ಮಂಜೂರಮಾಡಲ್ಪಟ್ಟವು. ಸಂಪೂರ್ಣಸ್ವಾತಂತ್ರ್ಯದ ಧ್ಯೇಯಕ್ಕೆ ಈ ಪರಿಷತ್ತು ಪುಷ್ಟಿಯನ್ನು ಕೊಟ್ಟಿತು. ಸಾಯಮನ್ ಕಮಿಶನಕ್ಕೆ ಬಹಿಷ್ಕಾರ ಹಾಕಿತು. ಬಾಡೋರ್ಲಿಯ ಸತ್ಯಾಗ್ರಹಕ್ಕೆ ನೆರವಾಗುವುದನ್ನು ನಿಶ್ಚಯಮಾಡಿತು. ಬಾಡೋರ್ಲಿಯ ಸತ್ಯಾಗ್ರಹವು ಈಗ ಇಡೀ ಹಿಂದುಸ್ಥಾನದ ಪ್ರಶ್ನೆಯಾಗಿರುವುದು. ಹಿಂದೀ ತರುಣರ ಪರೀಕ್ಷೆಯ ಕಾಲವು ಒದಗಿರುವುದು. ಅಲ್ಲಿ ಹಿಂದೀ ಜನರು ನಡೆಯಿಸಿದ ಯುದ್ಧವು ಧರ್ಮಯುದ್ಧವು. ಆದರೆ, ಆಳರಸರು ಧರ್ಮಯುದ್ಧವನ್ನು ಮಾಡದೆ ಸತ್ಯಾಗ್ರಹಿಗಳನ್ನು ಪರಿಪರಿಯಿಂದ ಪೀಡನೆಗೆ ಗುರಿಮಾಡುತ್ತಿರುವರು. ಇಂಥ ಪ್ರಸಂಗದಲ್ಲಿ, ಹಿಂದುಸ್ಥಾನದ ಮಿಕ್ಕ ಪ್ರಾಂತಗಳು ಬಾಡೋರ್ಲಿಯ ಸತ್ಯಾಗ್ರಹಕ್ಕೆ ಬೆಂಬಲ ಕೊಡಬೇಕಲ್ಲವೆ? ಆದುದರಿಂದ ಈ ಪರಿಷತ್ತಿನಲ್ಲಿ ಕರ್ನಾಟಕವು ಬಾಡೋರ್ಲಿಗೆ ಧನದಿಂದ ಸಹಾಯ ಮಾಡಬೇಕೆಂದು ಗೊತ್ತಾಗಿರುವುದು ವಿಹಿತವೇ ಆಯಿತು. ಅಲ್ಲದೆ ಕರ್ನಾಟಕ ಸೇವಾದಲದ ಮುಖ್ಯಸ್ಥರಾದ ಡಾ। ಹರ್ಡೀಕರ ಇವರು ಕರ್ನಾಟಕದ ತರುಣರನ್ನು ಆ ಧರ್ಮ ಯುದ್ಧಕ್ಕೆ ಹುರುಪುಗೊಳಿಸಬೇಕೆಂದು ಗೊತ್ತು ಮಾಡಲ್ಪಟ್ಟದೆ. ಡಾ। ಹರ್ಡಿಕರ ಇವರು ಈ ಕಾರ್ಯವನ್ನು ಅತ್ಯಂತ ಉತ್ಸಾಹದಿಂದ ಮಾಡುವರೆಂದು ನಂಬಿದ್ದೇವೆ. ಇಡೀ ದೇಶವು ಸಾಯಮನ್ ಕಮಿಶನಿಗೆ ಬಹಿಷ್ಕಾರವನ್ನು ಹಾಕಿರುವಾಗ ಕರ್ನಾಟಕದಲ್ಲಿ ಬ್ರಿಟಿಶ್ ಕರ್ನಾಟಕ ಸಂಘವು ಅದರೊಡನೆ ಸಹಕಾರ ಮಾಡುವುದನ್ನು ಗೊತ್ತು ಪಡಿಸಿದ್ದು ತೀರ ಅನ್ಯಾಯ್ಯವಾದುದು. ಕರ್ನಾಟಕದ ಏಕೀಕರಣದ ಸಲುವಾಗಿ ಸಾಯಮನ್ ಕಮಿಶನ್ನಿನ ಮುಂದೆ ಹೋಗಬೇಕೆಂದು ಈ ಸಂಘದವರ ಉದ್ದೇಶ. ಆದರೆ, ಕರ್ನಾಟಕಏಕೀಕರಣಕ್ಕಿಂತಲೂ ಸ್ವಾಭಿಮಾನವು ಹೆಚ್ಚಿನದಲ್ಲವೆ?

**ಇಡೀ ಹಿಂದುಸ್ಥಾನಕ್ಕೆ ಅಪಮಾನಮಾಡಿ, ಕರ್ನಾಟಕಕ್ಕೆ ಏಕೀಕರಣವನ್ನು ಕೊಟ್ಟರೆ ಅದು ನಮಗೆ ಬೇಡ. ಕರ್ನಾಟಕ-ಏಕೀಕರಣವು ರಾಷ್ಟ್ರದ ಉನ್ನತಿಗೆ ಸಾಧನಮಾತ್ರವು. ಅದೇ ನಮ್ಮ ಸರ್ವಸ್ವವಲ್ಲವೆಂಬುದನ್ನು ನಾವು ಮರೆಯಕೂಡದು.**



ಡ್ಯಾ. ಕೆ. ಎಫ್. ನರೀಮನ್ನರು

ಸಾಯಮನ್ ಸಾಹೇಬರು ಈ ದೇಶಕ್ಕೆ ಬಂದೊಡನೆಯೆ ಇಲ್ಲಿ ಎದ್ದ ಭಯಂಕರವಾದ ಬಿರುಗಾಳಿಯನ್ನು ಹೇಗೆ ಶಾಂತಗೊಳಿಸಬೇಕೆಂಬುದನ್ನು ಯೋಚಿಸಿದರು. ಆಗ ಅವರು ಹಲವರಿಗೆ ಜೇನುತುಪ್ಪದ ತೊಟ್ಟಹನಿಯ ವಾಸನೆಯನ್ನು ತೋರಿಸಿ, ಹಿಂದುಸ್ಥಾನದಲ್ಲಿಯ ಒಕ್ಕಟ್ಟನ್ನುಮುರಿಯಬೇಕೆಂದು ಯೋಚಿಸಿದ್ದಾರೆಂಬುದನ್ನುಮರುಳ ಬ್ರಿಟಿಶ್‌ಕರ್ನಾಟಕದಬಂಧುಗಳುಸರ್ವಥಾ ಮರೆಯಕೂಡದು. ಮತ್ತು ಸಾಯಮನ್ ಕಮಿಶನಿನೊಂದಿಗೆ ಈ ರೀತಿ ಸಹಕಾರ ಮಾಡಿ, ಕರ್ನಾಟಕದ ಮೋರೆಗೆ ಮಸಿಹಚ್ಚಬಾರದೆಂದು ನಾವು ಅವರಿಗೆ ಕೈಜೋಡಿಸಿಕೊಂಡು ಪ್ರಾರ್ಥಿಸುತ್ತೇವೆ. ಮಳೆಗಾಲದಲ್ಲಿ ಹುಟ್ಟುವ ನಾಯಿಛತ್ರಿಗಳಂಥ ಈ ತರಹದ ಸಂಸ್ಥೆಗಳಿಂದ ದೇಶಕ್ಕೆ ಹಾನಿ ಆಗುವುದೇ ವಿನಾ ಎಂದಿಗೂ ಲಾಭವಾಗುವುದಿಲ್ಲ. ಇದಲ್ಲದೆ, ಕರ್ನಾಟಕದ ಏಕೀಕರಣಕ್ಕೋಸ್ಕರ ಸಾಯಮನ್ ಕಮಿಶನ್ನದ ಮುಂದೆ ಹೋಗಲು ಕಾರಣವೇ ಇಲ್ಲ. ಆಂಧ್ರ, ಒಡಿಸಾ ಜನರು ಮುಂತಾದವರಿಗೂ ಪ್ರತ್ಯೇಕ ಪ್ರಾಂತಗಳು ಬೇಕಾಗಿರುವುವಲ್ಲವೆ? ಅವರು ಅದಕ್ಕೋಸ್ಕರ ಸಾಯಮನ್ ಕಮಿಶನಿನ ಮುಂದೆ ಹೋಗುತ್ತಿರುವರೆ? ಹಿಂದೀಜನರನ್ನು ಮೋಸಗೊಳಿಸುವ ಈ ಯುಕ್ತಿಗೆ ಕರ್ನಾಟಕದ ಮರುಳರು ಬಲಿ ಬೀಳುತ್ತಿರುವುದನ್ನು ನೋಡಿ ನಮಗೆ ವಿಷಾದವೆನಿಸುತ್ತದೆ. ಆದರೆ, ಸುದೈವದಿಂದ ಅವರಿಗೆ ಕರ್ನಾಟಕದ ಜನತೆಯ ಬೆಂಬಲವಿಲ್ಲ. ಇರಲಿ, ಮುಂದಿನ ವರುಷ ಈ ಪರಿಷತ್ತು ಬೆಳಗಾಂವಿಗೆ ಕರೆಯಲ್ಪಟ್ಟಿರುವುದು. ಬೆಳಗಾಂವಿ ದೇ. ಗಂಗಾಧರರಾಯರಂಥ ಕರ್ತೃತ್ವಶಕ್ತಿಯುಳ್ಳ ಮುಖಂಡರ ಸ್ಥಾನ; ಅವರಿಗೆ ಶ್ರೀ. ನಾರಾಯಣರಾವ ಜೋಶಿಯವರಂಥ ಶ್ರೀಮಂತ ವಕೀಲರ ಬೆಂಬಲ. ಅಂದಬಳಿಕ ಮುಂದಿನ ಪರಿಷತ್ತೂ ವೈಭವದಿಂದ ಜರುಗುವುದೆಂದು ಊಹಿಸಲು ಅಡ್ಡಿ ಇಲ್ಲ. ಆದರೆ, ಆಮಂತ್ರಣವನ್ನು ಕೊಡುವಾಗ ಮುಂದಿನ ವರುಷದ ಪರಿಷತ್ತಿನಲ್ಲಿ ಕರ್ನಾಟಕರೂ ಮತ್ತು ಮರಾಠಿಗರೂ ಕೂಡಿ ಕೆಲಸ ಮಾಡುತ್ತಿರುವ ಅಪೂರ್ವ ಸಂಧಿಯನ್ನು ಕರ್ನಾಟಕರು ಕಾಣಬಹುದೆಂಬುದಾಗಿ ಶ್ರೀ ನಾರಾಯಣರಾವ ಜೋಶಿಯವರು ಪೌರುಷವನ್ನು ಕೊಚ್ಚಿದರು. ಇದು ಸ್ವಾಭಿಮಾನ ಶೂನ್ಯತೆಯ ದ್ಯೋತಕವೋ ಹೇಗೆ ಎಂಬುದು ಮುಂದೆ ತಿಳಿಯುವುದು. ಶ್ರೀ. ವಿಶ್ವನಾಥರಾವ ಜೋಗ ಇವರು ಕರ್ನಾಟಕದಲ್ಲಿರುವ ತಮ್ಮಂಥ ಮರಾಠಿ ಮಾತೃಭಾಷೆಯುಳ್ಳವರು ಕರ್ನಾಟಕರೇ ಎಂದೂ, ಆದುದರಿಂದ ಧಾರವಾಡದಲ್ಲಿ ಆ ತರಹದ ಭೇದಕ್ಕೆ ಅಸ್ಪದವೇ ಇಲ್ಲವೆಂದೂ ಹೇಳಿ ಶ್ರೀ ನಾರಾಯಣರಾಯರಿಗೆ ಚೆನ್ನಾಗಿ ಬುದ್ಧಿ ಕಲಿಸಿದರು.

---

## ಪ್ರಥಮ ಕರ್ನಾಟಕ ಖಾದೀ ಪರಿಷತ್ತು

ಈ ಪರಿಷತ್ತು ಮೇ ೨೬ನೆಯ ತಾರೀಖಿನ ದಿವಸ ಮುಂಜಾನೆ ಕೂಡಿತ್ತು. ಅಧ್ಯಕ್ಷರಾದ ಶ್ರೀ. ಮಂಜಪ್ಪಾ ಹರ್ಡೇಕರ ಇವರು ತಮ್ಮ ಭಾಷಣದಲ್ಲಿ, ಕರ್ನಾಟಕವಲ್ಲಿ ಖಾದಿಯ ಪ್ರಸಾರವು ಹೇಗೆ ಬೆಳೆಯುತ್ತ ನಡೆದಿದೆಂಬುದನ್ನು ವರ್ಣಿಸಿ, ಪರದೇಶದ ಬಟ್ಟೆಗಳಿಗೆ ಬಹಿಷ್ಕಾರ ಹಾಕುವ ನೆವದಿಂದ ಖಾದಿಯ ಮಹತ್ವವನ್ನು ಕೆಲವರು ಕಡಿಮೆ ಮಾಡಿ ಗಿರಣಿಯ ನೂಲಿನ ಬಟ್ಟೆಗಳ ಪುರಸ್ಕಾರ ಮಾಡುತ್ತಿದ್ದುದನ್ನು ನಿಷೇಧಿಸಿ,

ಖಾದಿಯ ಪ್ರಸಾರವು ಹೆಚ್ಚಾಗುವುದಕ್ಕೆ ಕೆಲವು ಉಪಯುಕ್ತವಾದ ಸೂಚನೆಗಳನ್ನು ಕೊಟ್ಟರು. ಈ ಸಭೆಯಲ್ಲಿ ಹಲವು ಮಹತ್ವದ ನಿರ್ಣಯಗಳು ಮಂಜೂರಾದುವು. ಖಾದಿಯ ಪ್ರಸಾರವನ್ನು ಹೆಚಿಸುವುದಕ್ಕೋಸ್ಕರ ಜಿಲ್ಲೆಗಳ ಪ್ರತಿನಿಧಿಗಳಿಂದ ಕೂಡಿದ ಒಂದು ಮಧ್ಯವರ್ತಿ ಮಂಡಳವು ಸ್ಥಾಪಿಸಲ್ಪಟ್ಟಿತು. ಖಾದಿಯ ಸುದ್ದಿಗಳನ್ನು ಕೊಡುವುದಕ್ಕೋಸ್ಕರ ಒಂದು ಪತ್ರನನ್ನು ಹೊರಡಿಸಬೇಕೆಂದು ಗೊತ್ತಾಯಿತು. ಮಹಾರಾಷ್ಟ್ರದವರು ತಮ್ಮ ಖಾದಿಯ ಪರಿಷತ್ತಿನಲ್ಲಿ ಕೂಡ ಕರ್ನಾಟಕವನ್ನು ಆಕ್ರಮಿಸುವ ತಮ್ಮ ದುರ್ಬುದ್ಧಿಯನ್ನು ಬಿಟ್ಟಿರುವುದಿಲ್ಲ. ಮಹಾರಾಷ್ಟ್ರದ ವ್ಯಾಖ್ಯೆಯನ್ನು ಮಾಡುವಾಗ ಮರಾಠಿ



ದೇ. ಭ. ಹರ್ಡೇಕರ ಮಂಜಪ್ಪನವರು

ಭಾಷೆಯಾಡುವ ಅಲ್ಪ ಸ್ವಲ್ಪ ಜನರು ಎಲ್ಲಿ ಇರುವರೋ ಅದೆಲ್ಲವೂ ಮಹಾರಾಷ್ಟ್ರವಂತೆ! ಹೀಗೆ ವ್ಯಾಖ್ಯಾನ ಮಾಡಿ, ಅವರು ಮುಖ್ಯ ಮಹಾರಾಷ್ಟ್ರದ ದಕ್ಷಿಣಕ್ಕಿರುವ ಈ ವಿಲಕ್ಷಣವಾದ ಮಹಾರಾಷ್ಟ್ರಕ್ಕೆ ದೇ. ಗಂಗಾಧರರಾಯರನ್ನು ಸುಭೇದಾರರನ್ನಾಗಿ ನೇಮಿಸಿದ್ದರು. ಮಹಾರಾಷ್ಟ್ರದವರು ತಮ್ಮ ಖಾದೀ ಪರಿಷತ್ತಿನಲ್ಲಿ ಮಾಡಿದ ಮಹಾರಾಷ್ಟ್ರದ ಈ ವಿಲಕ್ಷಣ ವ್ಯಾಖ್ಯೆಯನ್ನು ಶ್ರೀ. ಗಂಗಾಧರರಾವ ದೇಶಪಾಂಡೆಯವರು ತೀಕ್ಷ್ಣವಾಗಿ ನಿಷೇಧಿಸಿದರು. ಮತ್ತು ಮಹಾರಾಷ್ಟ್ರದವರು ಈ ತರಹದ ದುರ್ಬುದ್ಧಿಯನ್ನು ಬಿಟ್ಟುಕೊಡಬೇಕೆಂದು ಹೇಳಿದುದಲ್ಲದೆ ಮಹಾರಾಷ್ಟ್ರದವರ ಈ ಆಚರಣೆಯ ಬಗ್ಗೆ ಪರಿಷತ್ತಿಗೆ ಖೇದವಾಗುತ್ತದೆಂಬ ಅರ್ಥದ ಠರಾವನ್ನು ಸಭೆಯ ಮುಂದೆ ಇಟ್ಟರು. ಆಗ ಶ್ರೀ. ವಿನಾಯಕರಾವ ಜೋಸಿ ಇವರು ಎದ್ದು, ತಾವು ಮೂಲತಃ ಮರಾಠಿಗರಾಗಿದ್ದರೂ ಕರ್ನಾಟಕದಲ್ಲಿ ನೆಲಸಿದ ಬಳಿಕ ಸಂಪೂರ್ಣವಾಗಿ ಕರ್ನಾಟಕರೇ ಆಗಿರುವರೆಂದೂ ಇಲ್ಲಿ ನೆಲಸಿರುವ ಮರಾಠಿಗರು ಹಾಗೇ ತಿಳಿಯಬೇಕೆಂದೂ ತಮ್ಮ ಬಂಧುಗಳಿಗೆ ಬೋಧಿಸಿದರು. ಮತ್ತು ಮಹಾರಾಷ್ಟ್ರದವರು ಮಹಾರಾಷ್ಟ್ರದ ತಪ್ಪು ವ್ಯಾಖ್ಯೆಯನ್ನು ಮಾಡಿ ಜಗಳ ತೆಗೆಯುವುದು ನಿಂದ್ಯವು, ಹೇಯವು, ಗರ್ಹಣೀಯವಾದುದೆಂದೂ ಈ ಪ್ರಕಾರ ಆಚರಿಸುವ ಈ ಮರಾಟಿಗರು ದೇಶದ್ರೋಹಿಗಳೇ ಇರುವರೆಂದೂ ಸ್ಪಷ್ಟವಾಗಿ ಹೇಳಿದರು. ಮತ್ತು ಖಾದೀ ಪರಿಷತ್ತಿನಲ್ಲಿ ತಂದಿರುವ ಈ ನಿಶೇಧಪರವಾದ ಠರಾವು ಅತಿಶಯ ಸೌಮ್ಯವಿರುತ್ತದೆಂದೂ ಅದನ್ನು ತೀಕ್ಷ್ಣವಾಗಿ ಮಾಡಬೇಕೆಂದು ತಮ್ಮ ಇಚ್ಛೆಯಿರುತ್ತದೆಂದೂ ಅವರು ಸೂಚಿಸಿದರು. ಇದು ಈ ಸಲ ಖಾದೀ ಪರಿಷತ್ತಿನಲ್ಲಿ ಆಗಿರುವ ವಿಶೇಷ ಸಂಗತಿ. ಅದೇ ಮೇರೆಗೆ ಕರ್ನಾಟಕ ಏಕೀಕರಣ ಪರಿಷತ್ತಿನಲ್ಲಿ ಮಹಾರಾಷ್ಟ್ರ ಬಂಧುಗಳು ಹೊರಡಿಸಿರುವ ಬೃಹನ್ ಮಹಾರಾಷ್ಟ್ರ ಕಲ್ಪನೆಯ ಕೆಲವು ಅಂಶಗಳಿಂದಲೂ ಅವರು ಗ್ವಾಲ್ಹೇರಿಯ ಸಾಹಿತ್ಯ ಪರಿಷತ್ತಿನಿಂದಲೂ ತಮ್ಮ ಖಾದಿಯ ಪರಿಷತ್ತಿನಲ್ಲಿ ಮಾಡಿದ ಮಹಾರಾಷ್ಟ್ರದ ವ್ಯಾಖ್ಯೆಯಮೇಲಿಂದಲೂ ಮಹಾರಾಷ್ಟ್ರದವರ ಆಕ್ರಮಣ ಶೀಲತೆ ಸ್ಪಷ್ಟವಾಗಿ ತೋರಿಬರುತ್ತದಾದುದರಿಂದ ಪರಿಷತ್ತು ಅವರ ಆ ದುರ್ಬುದ್ಧಿ ರಾಷ್ಟ್ರೀಯತ್ವಕ್ಕೆ ವಿರುದ್ಧವಾದುದೂ ಕರ್ನಾಟಕಕ್ಕೆ ಘಾತಕವಾದುದೂ ಇರುವುದರಿಂದ ಅದನ್ನು ಚೆನ್ನಾಗಿ ನಿಷೇಧಿಸಿತು. ಖಾದಿಯ ಪರಿಷತ್ತಿನ ಇನ್ನೊಂದು ವಿಶೇಷವೇನೆಂದರೆ ಖಾದೀಕಾರ್ಯವು ಅಖಿಲ ಭಾರತ ನೂಲುಗಾರರ ಸಂಘದವರ ಕಾರ್ಯವೆಂದು ಇಷ್ಟು ದಿವಸ ಸಾಮಾನ್ಯ ಜನತೆಯ ತಿಳವಳಿಕೆಯಾಗಿತ್ತು. ಆದರೆ ಅದು ಜನತೆಯ ಸಹಕಾರದಿಂದ ನಡೆಯಬೇಕಾಗಿರುವ ಕಾರಣ, ಜನತೆಯು ಔದಾಸೀನ್ಯವನ್ನು ತೊಲಗಿ, ಆ ಮಂಡಳದ ಕಾರ್ಯದಲ್ಲಿ ತಾನೂ ಭಾಗವನ್ನು ತೆಗೆದುಕೊಳ್ಳಬೇಕೆಂದು ಈ ಪರಿಷತ್ತು ಸಾರಿ ಹೇಳಿ, ಅದಕ್ಕನುಗುಣವಾಗಿ ಅನೇಕ ನಿರ್ಣಯಗಳನ್ನು ಮಾಡಿತು.

---

## ಕರ್ನಾಟಕ ಏಕೀಕರಣ ಪರಿಷತ್ತು

ಈ ಪರಿಷತ್ತಿಗೆ ರಾ. ಸಾ. ಫಕೀರಪ್ಪಾ ಹಳಕಟ್ಟಿಯವರು ಅಧ್ಯಕ್ಷರು. ಅವರು ತಮ್ಮ ಭಾಷಣದಲ್ಲಿ, ಕರ್ನಾಟಕ ಪ್ರಾಂತದ ಅವಶ್ಯಕತೆಯನ್ನು ವಿವರಿಸಿ, ಅದಕ್ಕೋಸ್ಕರ ಕೈಕೊಳ್ಳಬೇಕಾದ ಉಪಾಯುಗಳನ್ನುಕುರಿತು ಚರ್ಚಿಸಿದರು. ಈ ಪರಿಷತ್ತಿನ ವಿಶೇಷವೇನೆಂದರೆ ರಡ್ಡಿ ಮತ್ತು ಕುರುಬ ಸಮಾಜಗಳ ಮುಖಂಡರೂ ಬಂದಿದ್ದರು. ಕರ್ನಾಟಕದ ಏಕೀಕರಣದ ಪ್ರಶ್ನೆಯೆಂದರೆ ಯಾವತ್ತು ಸಮಾಜಗಳ ಪ್ರಶ್ನೆಯು. ಕರ್ನಾಟಕ ಏಕೀಕರಣದ ಕಲ್ಪನೆಯು ಈಗ ಸರ್ವಮಾನ್ಯವಾಗಿದೆಯೆಂಬುದು ಸಂತೋಷದ ಸಂಗತಿ. ಕರ್ನಾಟಕವು ಪ್ರತ್ಯೇಕ ಪ್ರಾಂತವಾಗುವುದಕ್ಕೆ ಯಾವ ತೊಂದರೆ ಉಂಟೆಂಬುದನ್ನು ಕನ್ನಡಿಗರೆಲ್ಲರೂ ಕೂಡಿ ವಿಚಾರ ಮಾಡಬೇಕು. ಈ ಪರಿಷತ್ತಿನಲ್ಲಿ ಚಿಕ್ಕ ಚಿಕ್ಕ ಸಮಾಜಗಳ ಪರವಾಗಿ ಮುಖಂಡರು ಮಾಡಿದ ಭಾಷಣಗಳಿಂದ, ಕರ್ನಾಟಕದ ಏಕೀಕರಣವಾದರೆ ವೀರಶೈವ ಸಮಾಜವು ಪ್ರಬಲವಾಗಿ ವೀರಶೈವರು ಮಿಕ್ಕ ಸಮಾಜಗಳನ್ನು ಹಿಮ್ಮೆಟ್ಟಿಸಬಹುದೆಂಬ ಅಂಜಿಕೆಯು ಮಿಕ್ಕ ಸಮಾಜಗಳ ಮುಖಂಡರಲ್ಲಿ ಉದಯವಾಗಿದೆಯೆಂಬುದು ಈ ಪರಿಷತ್ತಿನಲ್ಲಿ ಸ್ಪಷ್ಟವಾಯಿತು. ಹೀಗೆ ಪರಸ್ಪರ ವಿಚಾರವಿನಿಮಯವಾದುದು ವಿಹಿತವೇ ಆಯಿತು. ಶ್ರೀ. ಮಧ್ವರಾವ ಕಬ್ಬೂರ ಇವರು ಆ ಮುಖಂಡರಿಗೆ ಉತ್ತರಕೊಟ್ಟು ಅವರ ಸಮಾಧಾನ ಪಡಿಸಲು ಯತ್ನಿಸಿದರು. ಅದರಿಂದ, ಆಗ ಆ ಮುಖಂಡರ ಸಮಾಧಾನವಾಗಲಿಲ್ಲ. ಅಲ್ಪಸಂಖ್ಯಾಕ ಸಮಾಜಗಳಿಗೆ ಸಂರಕ್ಷಕ ಹಕ್ಕುಗಳನ್ನು ಕೊಡಬೇಕೆಂದು ಅವರು ಸೂಚನೆ ತಂದಿದ್ದರು. ಅದು ಹೇಗೆ ಅಶಕ್ಯವಿದೆಂಬುದನ್ನು ಶ್ರೀ. ಕಬ್ಬೂರ ಇವರು ಸಿದ್ಧಪಡಿಸಿ ತೋರಿಸಿದರು. ಶ್ರೀ. ಪಾಟೀಲ ಇವರು ತಂದ ಸೂಚನೆಯು ಮಂಜೂರಾಗಲಿಲ್ಲ. ಇರಲಿ, ಕರ್ನಾಟಕ ಏಕೀಕರಣದ ಮಾರ್ಗದಲ್ಲಿ ಅನೇಕ ತೊಂದರೆಗಳುಂಟು. ಕೆಲವರಿಗೆ ಭಾಷಾನ್ವಯ ಪ್ರಾಂತ ರಚನೆಯಾದರೆ ಕೆಲವು ಕಡೆಗೆ ಮುಸಲ್ಮಾನರು ಪ್ರಬಲರಾಗುವದೆಂದು ಭೀತಿಯಿದ್ದರೆ, ಕರ್ನಾಟಕದಲ್ಲಿ ವೀರಶೈವರು ಪ್ರಬಲರಾಗುವುದೆಂದು ಅಂಜಿಕೆ. ಆದರೆ ಸ್ವರಾಜ್ಯವು ಸುಖದ ಹಾಸಿಗೆಯಲ್ಲ. ಸ್ವರಾಜ್ಯದ ಸಲುವಾಗಿ ಕೆಲವರು ಅನೇಕ ಸುಖಗಳಿಗೆ ಎರವಾಗಲೇ ಬೇಕಾಗುತ್ತದೆ, ಆದರೆ, ಒಟ್ಟಿನ ಮೇಲೆ, ಸ್ವರಾಜ್ಯದಿಂದ ಇಡೀ ದೇಶಕ್ಕೆ ಕಲ್ಯಾಣವಾಗುವುದೋ ಇಲ್ಲವೋ ಹೇಗೆ ಎಂಬುದನ್ನು, ನಾವು ಮುಖ್ಯವಾಗಿ ಯೋಚಿಸಬೇಕು. ಮೇಲಾಗಿ, ಭಾಷಾನ್ವಯ ವಿಭಾಗಗಳಾಗದಿದ್ದರೆ ಈ ಚಿಕ್ಕ ಸಮಾಜಗಳಿಗೆ ಮತ್ತೆ ಅನೇಕ ತೊಂದರೆಗಳುಂಟಾಗುತ್ತವೆಂಬುದನ್ನು ಅವರು ಮರೆಯಕೂಡದು. ಮುಖ್ಯವಾಗಿ, ಇಡೀ ರಾಷ್ಟ್ರದ ಹಿತವನ್ನು ಕಣ್ಣು ಮುಂದಿಟ್ಟುಕೊಂಡು ನಾವು ಇಂಥ ಪ್ರಶ್ನೆಗಳನ್ನು ಬಿಡಿಸುವುದು ಉಚಿತವು.



ರಾ. ಸಾ. ಫಕೀರಪ್ಪ ಹಳಕಟ್ಟಿ ಬಿ. ಎ. ಎಲ್ಎಲ್. ಬಿ.

ಈ ಕರ್ನಾಟಕ ಏಕೀಕರಣ ಪರಿಷತ್ತಿನಲ್ಲಿ ಮಂಜೂರಾದ ಮತ್ತೊಂದು ಮಹತ್ವದ ನಿರ್ಣಯವೆಂದರೆ ಜಾತಿಗಳ ದುರಭಿಮಾನವನ್ನು ಕನ್ನಡಿಗರು ಬಿಟ್ಟು ಕರ್ನಾಟಕದ ಏಕೀಕರಣವನ್ನು ಮಾಡಬೇಕೆಂಬುದು. ಈ ನಿರ್ಣಯವನ್ನು ಅವಲಂಬಿಸಿ ಅದನ್ನು ಆಚರಣೆಯಲ್ಲಿ ತಂದರೆ ರಡ್ಡಿ ಕುರುಬ ಮುಂತಾದ ಚಿಕ್ಕ ಸಮಾಜಗಳ ಭೀತಿಯು ತಾನಾಗಿಯೇ ದೂರಾಗುವುದೆಂದು ನಮಗೆ ವಿಶ್ವಾಸವುಂಟು. ಮರಾಠಿಗರಲ್ಲಿ ಕರ್ನಾಟಕದ ಆಕ್ರಮಣವನ್ನು ಮಾಡುವ ದುರ್ಬುದ್ಧಿಯನ್ನು ಈ ಪರಿಷತ್ತು ಚೆನ್ನಾಗಿ ನಿಷೇಧಿಸಿರುತ್ತದೆ. ನಮ್ಮ ಬೆಳಗಾಂವಿಯ ಹಳೆಯ ಮುಖಂಡರ ಸೌಜನ್ಯದ ಲಾಭವನ್ನು ತೆಗೆದುಕೊಂಡು, ಮರಾಠಿಗರು ಕರ್ನಾಟಕವನ್ನು ಮೋಸಗೊಳಿಸಲು ಹವಣಿಸಿದರೆ ಕರ್ನಾಟಕವು ಎಂದಿಗೂ ಮೋಸ ಹೋಗದೆಂಬುದನ್ನು ಮರಾಟಿಗರು ಮರೆಯಬಾರದು. ಶ್ರೀ. ವಿನಾಯಕರಾವ ಜೋಸಿ, ಶ್ರೀ. ವಿಶ್ವನಾಥರಾವ ಜೋಗ ಇವರೇ ಮುಂತಾದು

ನುಕರ್ನಾಟಕವು ಕೈಕೊಂಡ ಮಾರ್ಗವು ಸರಿಯಾದುದೆಂದು ಸಮರ್ಥಿಸಬೇಕು, ಶ್ರೀ. ದತ್ತಾತ್ರಯ ಬೆಳವಿ, ಶ್ರೀ. ನಾರಾಯಣರಾವ ಜೋಸಿ ಇಂಥವರು ಕರ್ನಾಟಕಕ್ಕೆ ಹೆಸರಿಡಬೇಕು ! ಇದು ಎಂಥ ವಿಚಿತ್ರ! ಇರಲಿ, ಸ್ವಲ್ಪ ಯೋಚಿಸಿದರೆ ಅವರಿಗೆ ಕರ್ನಾಟಕವು ಕೈಕೊಂಡ ಮಾರ್ಗದ ಸತ್ಯತೆಯು ಹೊಳೆಯದೆ ಇರದು.

---

## ಹಿಂದೀಪರಿಷತ್ತು

ಈ ಪರಿಷತ್ತಿಗೆ ಪಂಡಿತ ತಾರಾನಾಥರು ಅಧ್ಯಕ್ಷರು. ಅವರ ವಾಣಿಯಲ್ಲಿ ಎಂಥ ಅಮೋಘಶಕ್ತಿಯುಂಟೆಂಬುದನ್ನು ಬೇರೆ ಹೇಳಬೇಕೆ ? ಅವರು ತಮ್ಮ ಅಸ್ಖಲಿತವಾದ ಹಿಂದೀ ಭಾಷಣದಲ್ಲಿ. ಹಿಂದೀ ಭಾಷೆಯನ್ನು ಕಲಿಯುವುದರಿಂದ ಮುಸಲ್ಮಾನ ಸಂಸ್ಕೃತಿಯು ಜ್ಞಾನವಾಗಿ ಹಿಂದು ಮುಸಲ್ಮಾನರ ಐಕ್ಯಕ್ಕೆ ಅದು ಬಲವಾದ ಕಾರಣವಾಗುವುದಲ್ಲದೆ ಅದು



ಪ. ತಾರಾನಾಥರು

ರಾಷ್ಟ್ರಭಾಷೆಯಾಗಿರುವುದರಿಂದ ಎಲ್ಲರೂ ಅದನ್ನು ಕಲಿಯುವುದು ಅತ್ಯವಶ್ಯವೆಂದು ಹೇಳಿದರು. ಈ ಪರಿಷತ್ತಿನಲ್ಲಿ (೧) ಎಲ್ಲರೂ ಹಿಂದೀಭಾಷೆಯನ್ನು ಅವಶ್ಯವಾಗಿ ಕಲಿಯಬೇಕು, (೨) ಮದ್ರಾಸದ ಹಿಂದೀ ಪ್ರಚಾರ ಸಭೆಯವರು ಧಾರವಾಡ ಹುಬ್ಬಳ್ಳಿಗಳಲ್ಲಿ ಪ್ರಚಾರಕರನ್ನು ನೇಮಿಸಬೇಕು, ಇವೇ ಮುಂತಾದ ಮಹತ್ವದ ನಿರ್ಣಯಗಳಾದುವು.

---

## ಮಹಿಲಾ ಪರಿಷತ್ತು

ಬೆಂಗಳೂರಿನ ಕು. ಇಂದಿರಮ್ಮ ಬಿ. ಎ. ಇವರು ಮಹಿಲಾ ಪರಿಷತ್ತಿನ ಅಧ್ಯಕ್ಷಸ್ಥಾನವನ್ನು ವಹಿಸಿದ್ದರು. ಮಿಸ್. ಮೇಯೋ ಇವಳು ತನ್ನ ಮದರ ಇಂಡಿಯಾ ಪುಸ್ತಕದಲ್ಲಿ



ಕುಮಾರಿ ಇಂದಿರಮ್ಮ ಬಿ. ಎ.

ಹಿಂದುಸ್ಥಾನದ ಬಗ್ಗೆ ಮಾಡಿದ ನಿಂದ್ಯವಾದ ವಿಧಾನಗಳು ಖಂಡಿಸಲ್ಪಟ್ಟವು. ಮತ್ತು ಶ್ರೀ. ಶಾರದಾ ಇವರ ವಿವಾಹ ವಯೋಮರ್ಯಾದೆಯ ಬಿಲ್ಲಿಗೆ ಪುಷ್ಟಿ ಕೊಡಲ್ಪಟ್ಟಿತು.

---

## ಕರ್ನಾಟಕದ ಅನೇಕ ಪರಿಷತ್ತುಗಳು

ಹೋದ ತಿಂಗಳಿನಲ್ಲಿ, ಕರ್ನಾಟಕದಲ್ಲಿ ಅನೇಕ ಕಡೆಗೆ ಅನೇಕ ಪರಿಷತ್ತುಗಳು ಕೂಡಿದುವು. ಅವುಗಳಲ್ಲಿ ಅನೇಕ ಪರಿಷತ್ತುಗಳು ಅಖಿಲ ಕರ್ನಾಟಕಕ್ಕೆ ಸಂಬಂಧಿಸುವುಗಳಿದ್ದುವು. ಬೆಂಗಳೂರಿನಲ್ಲಿ ಕಲಾ ಮಂದಿರದ ವತಿಯಿಂದ ಕೂಡಿದ ಸಭೆಯೂ ಪ್ರದರ್ಶನವೂ ಅಖಿಲ ಕರ್ನಾಟಕಕ್ಕೆ ಸಂಬಂಧಿಸಿದುವುಗಳಿದ್ದುವು. ಶ್ರೀ. ಸುಬ್ಬರಾಯರೆಂಬವರು ಈ ಕಲಾ ಮಂದಿರದ ಪ್ರವರ್ತಕರು. ಅವರು ಈಗ ೭—೮ ವರ್ಷಗಳಿಂದ ಲಲಿತಕಲೆಗಳ ಬೆಳವಣಿಗೆಯ ಬಗ್ಗೆ ಸದ್ದಿಲ್ಲದೆ ಅವಿಶ್ರಾಂತವಾಗಿ ಶ್ರಮಪಡುತ್ತಿರುವರು. ಹೋದ ಸಲ, ಅವರು ಕರ್ನಾ

ಟಕದ ಕಲೆಗಳದೊಂದು ಚಿಕ್ಕದಾದ ಪ್ರದರ್ಶನವನ್ನು ಆರಂಭಿಸಿದ್ದರು. ಈ ಸಲ, ಅದಕ್ಕೆ ವಿಸ್ತಾರವಾದ ಸ್ವರೂಪ ಕೊಟ್ಟರು. ಬೆಂಗಳೂರಿನ ಈ ಕಲಾಪ್ರದರ್ಶನವು ಬಹಳ ಪ್ರೇಕ್ಷಣೀಯವಾಗಿತ್ತು. ಕರ್ನಾಟಕದ ಬೇರೆ ಬೇರೆ ಭಾಗಗಳಿಂದ ಅನೇಕ ಸುಂದರವಾದ ಚಿತ್ರಗಳು ಬಂದಿದ್ದವು. ಅಲ್ಲದೆ, ಹೊರಗಿನಿಂದಲೂ ಅನೇಕ ವಸ್ತುಗಳು ಬಂದಿದ್ದವು. ಹುಬ್ಬಳ್ಳಿಯಲ್ಲಿ ಮುಸಲ್ಮಾನರ ಶಿಕ್ಷಣ ಪರಿಷತ್ತು ಕೂಡಿತ್ತು. ಮುಸಲ್ಮಾನರು ವಿದ್ಯೆಯಲ್ಲಿ ಹಿಂದುಳಿದವರೆಂಬ ಕಲಂಕವನ್ನು ತೆಗೆದುಹಾಕಲಿಕ್ಕೆ ಈ ಪರಿಷತ್ತು ಪ್ರಯತ್ನಿಸುತ್ತಿದೆ. ಮಂಗಳೂರಿನಲ್ಲಿ ಕರ್ನಾಟಕದ ನಾಲ್ಕನೆಯ ಆಯುರ್ವೇದ ಪರಿಷತ್ತು ಕೂಡಿತ್ತು. ಡಾ॥ ಹಣಮಂತರಾವ ಸವಣೂರ ಇವರು ಕರ್ನಾಟಕದಲ್ಲಿ ಆಯುರ್ವೇದವನ್ನು ಪ್ರಸಾರಮಾಡುವುದಕ್ಕೆ ಹಗಲಿರಳು ಹೆಣಗುತ್ತಿರುವರು. ಕರ್ನಾಟಕವು ತನ್ನ ಔದಾಸೀನ್ಯವನ್ನು ತೊಲಗಿ, ಅವರಿಗೆ ಸಹಾಯಮಾಡಿದರೆ ಸ್ವಲ್ಪ ವರ್ಷಗಳಲ್ಲಿ ಅನೇಕ ವೈದ್ಯರು ಉತ್ಪನ್ನರಾಗುವರೆಂದು ಆಶಿಸಬಹುದು.

ಧಾರವಾಡವು ಈ ಸಲ, ಅನೇಕ ಕರ್ನಾಟಕ ಪರಿಷತ್ತುಗಳ ಕೇಂದ್ರವಾಗಿತ್ತು. ಇಲ್ಲಿ, ಪ್ರಥಮ ಕರ್ನಾಟಕ ಖಾದೀ ಪರಿಷತ್ತು, ನಾಲ್ಕನೆಯ ಕರ್ನಾಟಕ ಪ್ರಾಂತಿಕ ಪರಿಷತ್ತು, ಮೂರನೆಯ ಕರ್ನಾಟಕ ಏಕೀಕರಣ ಪರಿಷತ್ತು, ಎರಡನೆಯ ಕರ್ನಾಟಕ ಹಿಂದೀ ಪರಿಷತ್ತು, ಮಹಿಲಾ ಪರಿಷತ್ತು ಮುಂತಾದುವುಗಳು ಕೂಡಿದುವು. ನಾಲ್ಕೈದು ದಿವಸ, ಧಾರವಾಡದಲ್ಲಿ ಈ ಪರಿಷತ್ತುಗಳದೊಂದು ದೊಡ್ಡ ಜಾತ್ರೆಯೇ ಕೂಡಿತ್ತು. ಇವುಗಳ ಮೂಲಕ, ಕರ್ನಾಟಕದಲ್ಲಿ ನವ ಚೈತನ್ಯವು ಉತ್ಪನ್ನವಾಗಿದೆ. ಬೆಂಗಳೂರು, ತುಮಕೂರು, ಉತ್ತರ ಕನ್ನಡ, ಬಳ್ಳಾರಿ ವಿಜಾಪುರ, ಬೆಳಗಾಂವಿ ಮುಂತಾದ ಅನೇಕ ಜಿಲ್ಲೆಗಳಿಂದ ಈ ಪರಿಷತ್ತುಗಳಿಗೆ ಪ್ರತಿನಿಧಿಗಳೂ ಮುಖಂಡರೂ ಬಂದಿದ್ದರು. ಇದೇ ಸುಮಾರಿಗೆ, ಪಂಡಿತ ಜವಾಹಿರಲಾಲ ಇವರು ಬಂದು ಸಂಪೂರ್ಣ ಸ್ವಾತಂತ್ರ್ಯದ ವಿಷಯವಾಗಿ ವ್ಯಾಖ್ಯಾನಕೊಟ್ಟರು. ಜನರಲ್ಲಿ ದೇಶಾಭಿಮಾನವು ತುಂಬಿತುಳುಕುತ್ತಿತ್ತು. ಒಂದೇ ಊರಿನಲ್ಲಿ ಒಂದೇ ಕಾಲಕ್ಕೆ ಅನೇಕ ಪರಿಷತ್ತುಗಳು ಕೂಡುವುದರಿಂದ ದೇಶದ ಶಕ್ತಿ ಹೆಚ್ಚಿಗೆ ವಿಕಾಸವಾಗುವುದು. ಆದುದರಿಂದ, ಮುಂದಿನ ಸಲ ಬೆಳಗಾಂವಿಯಲ್ಲಿ ಪ್ರಾಂತಿಕ ಪರಿಷತ್ತನ್ನು ಕರೆದಿರುವುದರಿಂದ ಅದೇ ಕಾಲಕ್ಕೆ ನಮ್ಮ ಬೆಳಗಾಂವಿಯ ಬಂಧುಗಳು ಮಿಕ್ಕ ಅನೇಕ ಪರಿಷತ್ತುಗಳನ್ನು ಕೂಡಿಸಿ, ಕರ್ನಾಟಕದ ಶಕ್ತಿಸಂವರ್ಧನಕ್ಕೆ ಸಹಾಯಮಾಡುವರೆಂದು ನಂಬುತ್ತೇವೆ. ಸರ್ವಾಂಗಗಳ ಉನ್ನತಿಯಾಗುವುದರಿಂದಲೇ ದೇಶದ ಶಕ್ತಿ ಬೆಳೆವುದು. ಈ ಪ್ರಕಾರ ಒಂದೇ ಕಾಲಕ್ಕೆ ಪರಿಷತ್ತುಗಳನ್ನು ಕೂಡಿಸುವುದರಿಂದ, ಕರ್ನಾಟಕದ ವಿವಿಧ ಚಳವಳಿಗಳ ಮುಖಂಡರು ಮಿಲಿತರಾಗುವುದಕ್ಕೆ ಮಾರ್ಗವಾಗಿ, ವಿಚಾರವಿನಿಮಯದಿಂದ ಅನೇಕ ತಪ್ಪುತಿಳುವಳಿಕೆಗಳು ದೂರಾಗುವ ಸಂಭವವುಂಟು. ಆದುದರಿಂದ, ಈ ಪರಿಷತ್ತುಗಳು ಕೂಡಿದ ಕಾಲಕ್ಕೇ ಮುಖಂಡರದೊಂದು ಪರಿಷತ್ತು ಕೂಡಿದರೆ ಒಳ್ಳೆಯದು. ಇದರ ವಿಚಾರವನ್ನು ನಮ್ಮ ಬೆಳಗಾಂವಿಯ ಬಂಧುಗಳು ಮಾಡುವರೆಂದು ನಂಬುತ್ತೇವೆ.

---

## ಕಲಬುರ್ಗಿ-ಯಲ್ಲಿ ಕೂಡಿದ ೧೪ನೆಯ ಕರ್ನಾಟಕ ಸಾಹಿತ್ಯ ಸಮ್ಮೇಳನವು.

ಶ್ರೀ. ಕಪಟರಾಳ ಕೃಷ್ಣರಾವ ಶ್ರೀ. ಕೃಷ್ಣರಾವ ದೇಶಮುಖ ಶ್ರೀ, ಜನಾರ್ದನರಾವ ದೇಸಾಯಿ, ರೆ. ನಾನಪ್ಪಾ ದೇಸಾಯಿ ಇವರೇ ಮುಂತಾದ ಮಹನೀಯರ ಪ್ರಯತ್ನದಿಂದ ಕಲಬುರ್ಗಿಯಲ್ಲಿ ಜೂನ ತಿಂಗಳ ೧, ೨, ೩ನೆಯ ತಾರೀಖುಗಳಲ್ಲಿ ಕೂಡಿದ ೧೪ನೆಯ ಕರ್ನಾಟಕ ಸಾಹಿತ್ಯಸಮ್ಮೇಳನವು ಶ್ರೀ ಬಿ. ಎಂ ಶ್ರೀಕಂಠಯ್ಯನವರ ಅಧ್ಯಕ್ಷತೆಯಲ್ಲಿ ಯಶಸ್ವಿಯಾಗಿ ಜರುಗಿತು. ಸಮ್ಮೇಳನಕ್ಕೆ ಹೈದ್ರಾಬಾದ, ರಾಯಚೂರ, ಸುರಪುರ ಮುಂತಾದ ನಿಜಾಂ ಇಲಾಖೆಯ ಕನ್ನಡ ಭಾಗಗಳಿಂದಲೂ ಮೈಸೂರ, ಬೆಂಗಳೂರ, ಧಾರವಾಡ, ವಿಜಾಪುರ, ಜಮಖಂಡಿ ಮುಂತಾದ ಸ್ಥಳಗಳಿಂದಲೂ ಅನೇಕ ಪ್ರತಿನಿಧಿಗಳು ಬಂದಿದ್ದರು. ಕಲಬುರ್ಗಿಯ ಮಹಾಜನಗಳು ಅತ್ಯಂತ ಉತ್ಸಾಹದಿಂದ ಸಭೆಗೆ ಬರುತ್ತಿದ್ದರು. ಅಧ್ಯಕ್ಷರ ಭಾಷಣವು ಗಂಭೀರವಾದುದೂ ಉದಾತ್ತವಿಚಾರಗಳಿಂದ ಪರಿಪುತವಾದುದೂ ಆಗಿತ್ತು. ಅವರು ಹಳೆಯ ಕನ್ನಡವನ್ನು ಹೀಯಾಳಿಸದೆ, ಕನ್ನಡಭಾಷೆಗೆ ಹೊಸ ಕಾಲಕ್ಕೆ ತಕ್ಕಂತೆ ಹೊಸ ರೂಪವನ್ನು ಕೊಟ್ಟು, ಹೊಸ ಉಡಿಗೆ ತೊಡಿಗೆಗಳನ್ನು ಉಡುಗರೆಯಾಗಿ ಕೊಡುವುದಕ್ಕೆ ಉಪದೇಶಿಸಿದರು. ಮೈಸೂರಿನ ಕಾಲೇಜ ವಿದ್ಯಾರ್ಥಿಗಳು ಶ್ರೀ. ಕೆ. ವಿ. ಪುಟ್ಟಪ್ಪ ಎಂಬ ತರುಣ ವಿದ್ಯಾರ್ಥಿಯು ಬರೆದ

"ಯಮುನ ಸೋಲು" ಎಂಬ ಚಿಕ್ಕ ನಾಟಕವನ್ನೂ, ಅಧ್ಯಕ್ಷರು ಬೆವಗದಾಯುದ್ಧವನ್ನೂ ಅಭಿನಯಿಸಿ ತೋರಿಸಿದರು. ನಿಜಾಂ ಕರ್ನಾಟಕದ ಕನ್ನಡ ಭಾಷೆಗೆ ಒದಗಿರುವ ಆಪತ್ತುಗಳನ್ನು ಪರಿಹರಿಸುವ ಬಗ್ಗೆ ಕೆಲವು ನಿರ್ಣಯಗಳು ಮಂಜೂರಾ ದುವು. ಗ್ರಾಮಸ್ಥರು ಕನ್ನಡದಲ್ಲಿ ದಪ್ತರ ಇಡಬೇಕು, ಖಾಸಗಿ ಮತ್ತು ಸರಕಾರಿ ಶಾಲೆಗಳಲ್ಲಿ ಕನ್ನಡ ಭಾಷೆಗೆ ಅವಕಾಶ ಕೊಡಬೇಕು, ಇವೇ ಮುಂತಾದ ನಿರ್ಣಯಗಳು ತೀವ್ರವಲ್ಲಿಯೇ ಕಾರ್ಯದಲ್ಲಿ ಬರುವಂತೆ ಏರ್ಪಾಡು ಆಗುವುದೆಂದು ನಾವು ಕೋರುತ್ತೇವೆ. ಕರ್ನಾಟಕ ಸಾಹಿತ್ಯ ಪರಿಷತ್ತಿನ ಪ್ರತಿನಿಧಿಗಳಾಗಿ ಗ್ವಾಲ್ಹೇರಿಗೆ ಹೋದ ಶ್ರೀ. ಬೇಂದ್ರೆ ಮತ್ತು ಕವಿಭೂಷಣ ಬೆಟಗೇರಿ ಇವರಿಗೆ ಮಹಾರಾಷ್ಟ್ರದವರು ತೋರಿಸಿದ ಅನಾದರದ ಬಗ್ಗೆ ಸಮ್ಮೇಳನವು ದುಃಖವನ್ನು ವ್ಯಕ್ತಪಡಿಸಿತು. ಮತ್ತು ಮಹಾರಾಷ್ಟ್ರದವರ ಆಕ್ರಮಣಶೀಲತೆಯನ್ನು ನಿಷೇಧಿಸಿತು. ಒಟ್ಟಿನ ಮೇಲೆ ಕಲಬುರ್ಗಿಯ ಕನ್ನಡಿಗರಲ್ಲಿ ಆತ್ಮಜಾಗ್ರತಿಯು ಚನ್ನಾಗಿಯೇ ದೃಗ್ಗೋಚರವಾಗುತ್ತದೆ. ಅಹುದು. ಹಿಂದುಸ್ಥಾನದಲ್ಲೆಲ್ಲ ಆತ್ಮಜಾಗ್ರತಿಯ ಚಿಹ್ನಗಳು ಕಾಣಬರುತ್ತಿರಲು ಅವರ ಗಾಳಿ ನಿಜಾಂ ಕನ್ನಡಿಗರಿಗೆ ಸೋಂಕದೆ ಹೇಗೆ ಉಳದೀತು! ಅಜ್ಞಾನದ ಮೂಲಕ ಮತ್ತು ಸುತ್ತಲಿನ ಪರಿಸ್ಥಿತಿಯ ಮೂಲಕ ಅವರಲ್ಲಿ ಜಾಗ್ರತಿಯುಂಟಾಗಲಿಕ್ಕೆ ಇಷ್ಟು ವಿಳಂಬವಾಗಿದ್ದರೂ ಈಗ ಜಾಗ್ರತಿಯು ಉಂಟಾದ ಬಳಿಕ ಅಲ್ಲಿಯ ಕನ್ನಡಿಗರು ಪರಿಸ್ಥಿತಿಯ ಮತ್ತು ಅಜ್ಞಾನದ ಪರದೆಯನ್ನು ಹರಿದೊಗೆದಿಕುವುದರಿಂದ ಅವರು ತೀವ್ರವೇ ಕರ್ನಾಟಕದ ಸೇವೆಯಲ್ಲಿ ಮಹತ್ವದ ಭಾಗವನ್ನು ತೆಗೆದು ಕೊಳ್ಳುವರೆಂದು ನಮಗೆ ಬಲವಾದ ಆಶೆಯುಂಟಾಗಿದೆ.




**ಉದಯಭಾರತ** :—ಮಂಗಳೂರಲ್ಲಿ ಕನ್ನಡ ಸಾಹಿತ್ಯ ಭಕ್ತರು ಹೊರಡಿಸುವ ಮಾಸಪತ್ರಿಕೆ. ಸಂಪಾದಕರು :—ಶ್ರೀ. ಶ್ರೀನಿವಾಸ ಪುರಷೋತ್ತಮ ಭಟ್‌ರವರು. ಉದಯಭಾರತವು ಒಂದನೆಯ ವರ್ಷದಲ್ಲಿ ತ್ರೈಮಾಸಿಕವಾಗಿದ್ದು ಈ ತನ್ನ ಎರಡನೆಯ ವರ್ಷದಲ್ಲಿ ಮಾಸಪತ್ರಿಕೆಯಾಗಿರುವುದು ಸಂತೋಷಕರವಾಗಿರುವುದು. ಒಳ್ಳೆಯ ಬರಹಗಾರರು ದೊರೆತಿರುವುದರಿಂದ ಅದು ಬೇಗನೆ ಪತ್ರಿಕಾ ಪ್ರಪಂಚದಲ್ಲಿ ಪ್ರಥಮಶ್ರೇಣಿಯಲ್ಲಿ ವಿರಾಜಿಸದಿರದೆಂದು ನಮ್ಮ ನಂಬುಗೆಯಿದೆ. ಕನ್ನಡ ನುಡಿಯ ಪ್ರೇಮಿಗಳು ಅವಶ್ಯವಾಗಿ ಉದಯಭಾರತದ ಗ್ರಾಹಕರಾಗಬೇಕೆಂದು ಅವರಿಗೆ ನಮ್ಮ ಆಗ್ರಹದ ಸಲಹೆಯಿದೆ.

**ರಾಷ್ಟ್ರಬಂಧು** :—ಮಂಗಳೂರಲ್ಲಿ ಹೊಸದಾಗಿ ಹೊರಟ ಸಾಪ್ತಾಹಿಕ ಪತ್ರವು. ಜಯಕರ್ನಾಟಕದ ವಾಚಕರಿಗೆ ತಮ್ಮ ಲೇಖನಗಳಿಂದ ಪರಿಚಿತರಾದ ಶ್ರೀ. ಕಡೆಂಗೋಡ್ಲು ಶಂಕರಭಟ್ಟರು ಇದರ ಸಂಪಾದಕರು. ಶ್ರೀ. ಶಂಕರಭಟ್ಟರು ರಸಿಕರು. ಏಕನಿಷ್ಠವಾಙ್ಮಯ ಭಕ್ತರು. ಉಜ್ವಲರಾಷ್ಟ್ರಾಭಿಮಾನಿಗಳು. ಇವರ ನೇತೃತ್ವದಲ್ಲಿ ರಾಷ್ಟ್ರಬಂಧು ರಾಷ್ಟ್ರಸೇವೆಯನ್ನು ಮಾಡಲು ಮುಂದುವರಿದುದನ್ನು ನೋಡಿ ನಮಗೆ ಆನಂದವಾಗುತ್ತದೆ. ಪತ್ರದ ಧೋರಣವು ಪುರೋಗಾಮಿಯಾಗಿರುವುದು. ರಾಷ್ಟ್ರೀಯತ್ವದ ಪೋಷಣಕ್ಕೆ ಅವಶ್ಯವಾದ ವಿವಿಧ ವಿಷಯಗಳ ಬಗ್ಗೆ ಲೇಖನಗಳು ಇದರಲ್ಲಿ ಬರುತ್ತವೆ. ಶ್ರೀ. ಶಂಕರಭಟ್ಟರು ಪತ್ರಿಕೆಯ ಸಂಪಾದಕತ್ವವನ್ನು ವಹಿಸಿದುದಕ್ಕಾಗಿ ನಾವು ಅಂತಃಕರಣಪೂರ್ವಕವಾಗಿ ಅವರನ್ನು ಅಭಿನಂದಿಸಿ ಅವರ ರಾಷ್ಟ್ರಬಂಧುವಿಗೆ ಸ್ವಾಗತವನ್ನೀಯುತ್ತೇವೆ. ಮತ್ತು ಕನ್ನಡಿಗರು ರಾಷ್ಟ್ರಬಂಧುವಿಗೆ ಚಂದಾದಾರರಾಗಿ ಆಶ್ರಯವನ್ನೀಯಬೇಕೆಂದು ಆಗ್ರಹಪೂರ್ವಕವಾಗಿ ಸೂಚಿಸುತ್ತೇವೆ.

**ಜನ್ಮಭೂಮಿ** :—ಕನ್ನಡ ಪತ್ರಿಕಾ ಪ್ರಪಂಚದಲ್ಲಿ ಜನ್ಮಭೂಮಿ ಹೊಸದಾಗಿ ಜನ್ಮವೆತ್ತಿದ ವಾರಪತ್ರಿಕೆ. ಈ ಪತ್ರಿಕೆಯ ಸಂಪಾದಕರಾದ ಶ್ರೀ. ಚಿನ್ನಭಂಡಾರ ಸುಬ್ಬರಾವ್ ಬಿ. ಎ. ಇವರಾದರೂ ನಮ್ಮ ವಾಚಕರಿಗೆ ತಮ್ಮ ಲೇಖನಗಳಿಂದ ಪರಿಚಿತರೇ. ಕನ್ನಡ ಭಾಷೆಯ ಅನನ್ಯಭಕ್ತರಾದ ಸುಬ್ಬರಾಯರ ಲೇಖನಕೌಶಲ್ಯದ ಬಗ್ಗೆ ಹೊಸದಾಗಿ ನಾವೇನೂ ಹೇಳಬೇಕಿಲ್ಲ. ರಾಷ್ಟ್ರಬಂಧುವಿನಂತೆ ಈ ಪತ್ರಿಕೆಯ ಧೋರಣವಾದರೂ ಪುರೋಗಾಮಿಯಾಗಿರುವುದು. ಇಷ್ಟು ದಿನಗಳವರೆಗೆ ಮೈಸೂರುಸಂಸ್ಥಾನದಲ್ಲಿಯ ಮಲೆನಾಡಿನಲ್ಲಿ ಒಂದಾದರೂ ಸಾಪ್ತಾಹಿಕವಿರಲಿಲ್ಲ. ಮಲೆನಾಡಿನ ಹಿತಾಹಿತದ ಚರ್ಚೆಯಾಗುವುದು ಅತ್ಯಾವಶ್ಯಕವೆಂದು ಕಂಡು ಶ್ರೀ. ಸುಬ್ಬರಾಯರು ತೀರ್ಥಹಳ್ಳಿಯಲ್ಲಿ ನಿಂತು ಈ ಪತ್ರವನ್ನು ಹೊರಡಿಸುತ್ತಿರುವರು. ಅವರ ಹೊಸಸಾಹಸಕ್ಕೆ ಕನ್ನಡಿಗರು ಪ್ರೋತ್ಸಾಹವನ್ನೀಯುವರೆಂದು ಆಶಿಸುತ್ತೇವೆ.

**ಶಿವಾಜಿ ವಿಜಯ** :— ಗದ್ಯನಾಟಕವು. ಬೆಂಗಳೂರ ಒಕ್ಕಲಿಗರ ಪತ್ರಿಕೆಯ ಸಂಪಾದಕರಾದ ಶ್ರೀ ಹೊಸಹಳ್ಳಿ ಕೆ. ವೀರಣ್ಣಗೌಡರು ವಿದ್ಯಾರ್ಥಿಗಳು ತಮ್ಮ ಶಾಲೆಗಳ ವಾರ್ಷಿಕೋತ್ಸವ ಮುಂತಾದ ಸಮಯಗಳಲ್ಲಿ ಆಡಿತೋರಿಸಲು ಯೋಗ್ಯವಾಗಿರಬೇಕೆಂಬ ಉದ್ದೇಶದಿಂದ ಇದನ್ನು ಬರೆದಿರುವರು. ರಾಷ್ಟ್ರಪುರುಷರ ವೀರ್ಯಕಾರ್ಯಗಳನ್ನು ಇಂದಿನವರು ಅಭಿನಯಿಸಿ ಯುವಕರನ್ನು ಹುರಿದುಂಬಿಸುವುದಕ್ಕಾಗಿ ಬರೆದ ನಾಟಕವಿದೆಂದು ಗ್ರಂಥಕರ್ತರು ಹೇಳುವರು. ಸುಂದರ ಮತ್ತು ಶುದ್ಧವಾದ ಶೈಲಿಯಲ್ಲಿ ಇದು ರಸವತ್ತಾಗಿ ಬರೆಯಲ್ಪಟ್ಟಿರುವುದಾದುದರಿಂದ ಶ್ರೀ. ವೀರಣ್ಣಗೌಡರ ಉದ್ದೇಶವು ಬಹುಮಟ್ಟಿಗೆ ನೆರವೇರಿರುವುದೆಂದು ನಮ್ಮ ಅಭಿಪ್ರಾಯ. ನಾಟ

ಕನನ್ನು ಓದುತ್ತ ಹೋದ ಹಾಗೆಲ್ಲ ಪರಾಕ್ರಮ ಶಾಲಿಯಾದ ನಾಯಕನ ಧೀರೋದಾತ್ತ ಗುಣಗಳು ಮೂರ್ತಿಮತ್ತಾಗಿ ಕಣ್ಣಮುಂದೆ ನಿಲ್ಲುತ್ತವೆ. ಕಾಗದ, ಮುದ್ರಣ, ಬೈಂಡಿಂಗ ಇವೆಲ್ಲವು ಮನೋಹರವಾಗಿರುವವು. ಪುಸ್ತಕವು ಸಂಗ್ರಾಹ್ಯವಾಗಿಹೆಂದು ನಾವು ಬೇರೆ ಹೇಳಬೇಕಿಲ್ಲ.

**ಒಕ್ಕಲಿಗರ ಪತ್ರಿಕೆಯ ವಾರ್ಷಿಕ ಸಂಚಿಕೆ ೧೯೩೮**:--ಈ ಸಂಚಿಕೆ ಅವರ ಸಂಪಾದಕರಾದ ಶ್ರೀ ವೀರಣ್ಣನವರ ಸಾಹಸದ ಪ್ರತಿಬಿಂಬವು. ವಿದ್ವಜ್ಜನರಿಂದ ಬರೆಯಲ್ಪಟ್ಟ ಅನೇಕ ಬೋಧಪ್ರದವೂ ಮನೋರಂಜಕವೂ ಆದ ಲೇಖ ಮತ್ತು ಕವಿತೆಗಳಿಂದ ಈ ಸಂಚಿಕೆ ಶೋಭಿತವಾಗಿರುವುದಲ್ಲದೆ ಅನೇಕ ಮಹಾಪುರುಷರ ಮತ್ತು ಕಟ್ಟಡಗಳ ಚಿತ್ರಗಳಿಂದ ಆಕರ್ಷಕವಾಗಿರುವುದು. ಇದರಲ್ಲಿಯ "ಬಾಲೇ, ನಾ ನಿನ್ನ ಪ್ರಾಣೇಶನಲ್ಲವೆ! ಹೆದರಬೇಡ ಬಾ" ಎಂಬ ಚಿತ್ರವು ಅತ್ಯಂತ ಹೃದಯದ್ರಾವಕವಾಗಿರುವುದು. ವೃದ್ಧ ಬಾಲಿಕಾ ವಿವಾಹದ ನೀತಿಬಾಹ್ಯತೆಯನ್ನೂ ನಿರ್ಘೃಣತೆಯನ್ನೂ ಈ ಚಿತ್ರವು ಮನಸ್ಸಿಗೆ ನಡುವಂತೆ ವ್ಯಕ್ತಗೊಳಿಸುತ್ತದೆ. ಈ ಸುಂದರ ಮತ್ತು ಉಪಯುಕ್ತವಾದ ಸಂಚಿಕೆಯನ್ನು ಹೊರಡಿಸಿದುದಕ್ಕಾಗಿ ಒಕ್ಕಲಿಗರ ಪತ್ರಿಕೆಯ ಸಂಪಾದಕರನ್ನು ನಾವು ಮನಃಪೂರ್ವಕವಾಗಿ ಅಭಿನಂದಿಸುತ್ತೇವೆ.

**ಬಂಧ ವಿಮೋಚನೆ**:—ಇದು "ಶಿವಾಜಿ ವಿಜಯ"ದಂತೆ ಶಾಲೆಯ ವಿದ್ಯಾರ್ಥಿಗಳು ಅಭಿನಯಿಸುವುದಕ್ಕೋಸ್ಕರ ಬರೆಯಲ್ಪಟ್ಟ ಚಿಕ್ಕ ನಾಟಕವು. ಬೆಂಗಳೂರು ದೇಶೀಯ ವಿದ್ಯಾಲಯ ಅಧ್ಯಾಪಕರಾದ ಶ್ರೀ. ಕೆ. ಲ. ಸುಬ್ಬರಾವ, ಬಿ. ಎ. ಅವರು ಈ ಪುಸ್ತಕದ ಕರ್ತರು. ಕವಿವರ್ಯ ರವೀಂದ್ರನಾಥರ "ಜಲಪಾತ"ವೆಂಬ ನಾಟಕದ ಕನ್ನಡ ಅನುವಾದವಿದು. ಅನುವಾದವು ಚೆನ್ನಾಗಿರುವುದು. ಗದ್ಯಭಾಗವು ಒಳಿತಾಗಿರುವುದು. ಪದ್ಯ ಭಾಗವೇಕೋ ನಮ್ಮ ಮನಸ್ಸಿಗೆ ಹಿಡಿಯದು.

**ಬೆಂಜೆಮಿನ್ ಫ್ರಾಂಕಲಿನ** :—ಅಮೇರಿಕೆಯ ಸುಪ್ರಸಿದ್ಧ ದೇಶಭಕ್ತನೂ ರಾಜಕಾರಣಿಯೂ ಆದ ಬೆಂಜೆಮಿನ್ ಫ್ರಾಂಕಲಿನ್ ಮಹಾಶಯನ ಜೀವನ ಚರಿತ್ರೆಯಿದು. "ಬಂಧ ವಿಮೋಚನೆ"ಯ ಕರ್ತರಾದ ಶ್ರೀ. ಕೆ. ಲ ಸುಬ್ಬರಾಯರು ಇದನ್ನು ಬರೆದಿರುವರು. ಕನ್ನಡಿಗರಲ್ಲಿ ನವಚೈತನ್ಯವು ಪ್ರಾದುರ್ಭವಿಸಿದ ಕಾಲದಲ್ಲಿ ಈ ಚರಿತ್ರನಾಯಕನಂತಹ ರಾಷ್ಟ್ರಧುರಂಧರ ಸ್ಫೂರ್ತಿದಾಯಕ ಚರಿತ್ರೆಗಳು ನಮ್ಮ ತರುಣರ ಕಣ್ಣಮುಂದೆ ಇರುವುದು ಅತ್ಯಂತ ಅವಶ್ಯಕವಾದುದು. ಅತಿ ದಾರುಣವಾದ ದಾರಿದ್ರ್ಯದಲ್ಲಿ ಜನ್ಮವೆತ್ತಿದ ಬೆಂಜಮಿನ್ ಫ್ರಾಂಕಲಿನನು ತನ್ನ ಉದ್ಯಮ ಪ್ರಿಯತೆಯಿಂದಲೂ ಉಜ್ವಲದೇಶಾಭಿಮಾನದಿಂದಲೂ ಸತ್ಯ ಮತ್ತು ಪ್ರಾಮಾಣಿಕತೆಯಿಂದಲೂ ಹೇಗೆ ರಾಷ್ಟ್ರೋದ್ಧಾರಕನಾದ ಮಹಾಪುರುಷನಾದನೆಂಬುದು ಸುಂದರವಾದ ಭಾಷಾಶೈಲಿಯಲ್ಲಿ ಹೃದಯಂಗಮವಾಗಿ ಶ್ರೀ. ಸುಬ್ಬರಾಯರಿಂದ ಚಿತ್ರಿಸಲ್ಪಟ್ಟಿರುವುದು. ಪ್ರತಿಯೊಬ್ಬ ಕನ್ನಡ ಬಾಲಕನ ಮತ್ತು ಬಾಲಿಕೆಯ ಕೈಯಲ್ಲಿ ಈ ಪುಸ್ತಕವು ಅವಶ್ಯವಾಗಿ ಇರಬೇಕೆಂದು ನಮಗೆನಿಸುತ್ತದೆ.

**ಗ್ರಾಮ ಸೇವೆ**:-ಬೆಂಗಳೂರ ಪೌರಸಾಮಾಜಿಕ ಸಂಘದವರು ಪ್ರಕಟಿಸಿದ ಪುಸ್ತಕವಿದು. ಬರೆದವರು ಮೈಸೂರ ಸರಕಾರದ ಎಂಟೋಮಾಲಜಿಸ್ಟರೂ ಮೈಸೂರು ವಿಶ್ವವಿದ್ಯಾಲಯದ ಫೆಲೋಗಳೂ ಆದ ಡಾಕ್ಟರ ಕುನ್ಹಿ ಕಣ್ಣಾನ್ ಎಂ. ಎ. ಪಿ ಎಚ್. ಡಿ. ಅವರು. ನಮ್ಮ ಹಿಂದುಸ್ಥಾನವು ಮುಂಬಯಿ, ಮದ್ರಾಸ, ಅಹಮ್ಮದಾಬಾದಿನಂಥ ನಾಲ್ಕಾರು ಪಟ್ಟಣಗಳಲ್ಲಿಲ್ಲ. ಅದಿರುವುದು ಏಳು ಲಕ್ಷ ಹಳ್ಳಿಗಳಲ್ಲಿ. ಈ ಹಳ್ಳಿಗಳ ಸ್ಥಿತಿಯ ವಿಚಾರವನ್ನು ಬಿಟ್ಟು ದೇಶೋದ್ಧಾರದ ಯಾವ ಯೋಜನೆಯೂ ಫಲಕಾರಿಯಾಗಲರಿಯದು. ನಮ್ಮ ಹಳ್ಳಿಗಳ ಸ್ಥಿತಿ ಭಯೋತ್ಪಾದಕವಾಗಿರುವುದು. ಈ ದುರವಸ್ಥೆಯನ್ನು ದುರ್ಲಕ್ಷಿಸುವುದು ಸರ್ವಥಾ ಕ್ಷಮ್ಯವಲ್ಲ. ಈ ಮಾತನ್ನು ಲಕ್ಷ್ಯದಲ್ಲಿ ತಂದು ಡಾ. ಕುನ್ಹಿ ಕಣ್ಣಾನ್ ರವರು ಗ್ರಾಮಸೇವೆಯೇ ನಿಜವಾದ ದೇಶಸೇವೆಯೆಂಬ ಮಾತನ್ನು ತರುಣರ ಮನಸ್ಸಿನಲ್ಲಿ ಬಿಂಬಿಸಲು "ಗ್ರಾಮಸೇವೆ"ಯೆಂಬ ಈ ಚಿಕ್ಕ ಪುಸ್ತಕದಲ್ಲಿ ಯತ್ನಿಸಿರುವರು. ಗ್ರಾಮಗಳ ಸ್ಥಿತಿ ಎಷ್ಟು ಭಯಾನಕವಾಗಿರುವುದು, ಅದನ್ನು ಹೋಗಲಾಡಿಸಲು ಯಾವ ಉಪಾಯಗಳನ್ನು ಕೈಕೊಳ್ಳಬೇಕು ಎಂಬಿವೇ ಮುಂತಾದ ಉಪಯುಕ್ತವಾದ ಮಾತುಗಳು ಈ ಪುಸ್ತಕದಲ್ಲಿ ಸೋಪಪತ್ತಿಕವಾಗಿ ಚರ್ಚಿಸಲ್ಪಟ್ಟಿವೆ.

**ನೀತಿ ಧರ್ಮ ಸಂಗ್ರಹ** :— ಬೆಂಗಳೂರು ಶ್ರೀ. ಚಾಮರಾಜೇಂದ್ರ ಸಂಸ್ಕೃತಮಹಾಪಾಠಶಾಲೆಯ ಅಧ್ಯಕ್ಷರಾದ ಶ್ರೀ. ಸಿ. ವೆಂಕಟರಮಣಯ್ಯನವರು ವಿದ್ಯಾರ್ಥಿಗಳ ಉಪಯೋಗಕ್ಕಾಗಿ ಬರೆದ ಪುಸ್ತಕವಿದು. ನೀತಿಧರ್ಮಗಳಿಗೆ ಸಂಬಂಧಿಸಿದ ಮಹತ್ವದ ವಿಷಯಗಳನ್ನು ಕುರಿತು ಬರೆಯಲ್ಪಟ್ಟ ೩೬ ಪ್ರವಚನಗಳು ಈ ಪುಸ್ತಕದಲ್ಲಿ ಇರುತ್ತವೆ. ಭಾಷೆ ಶುದ್ಧವೂ ಪ್ರೌಢವೂ ಆಗಿರುವುದು. ಆದರೆ ಮಕ್ಕಳಿಗೆ ಸ್ವಲ್ಪ ಗಡುಸಾಗುವುದೆಂದು ನಮ್ಮ ಅಭಿಪ್ರಾಯ. ಕೆಲವೆಡೆಗ

ಳಲ್ಲಿ ವಾಕ್ಯಗಳು ಅನವಶ್ಯಕವಾಗಿ ಉದ್ದವಾಗಿರುವುದರಿಂದ ಬಾಲಕರ ಮನಸ್ಸಿನಲ್ಲಿ ವಾಕ್ಯಾರ್ಥವು ಚಟ್ಟನೆ ಹೊಳೆಯಲು ಅನನುಕೂಲವಾಗುತ್ತದೆ ಸಂಸ್ಕೃತ ಶಬ್ದಗಳ ಪ್ರಾಚುರ್ಯದಿಂದ ವಿಷಯುಗ್ರಹಣಕ್ಕೆ ಆಗಾಗ್ಗೆ ತಡೆಯುಂಟಾಗುತ್ತದೆ. ಮಕ್ಕಳಿಗಾಗಿ ಬರೆದ ಪುಸ್ತಕಗಳಲ್ಲಿಯು ಭಾಷಾಶೈಲಿ ಆದಷ್ಟು ಸುಲಭವೂ ಸರಳವೂ ಆಗಿರುವುದು ಒಳಿತೆಂದು ನಾವು ಹೇಳಬಿರಿವು.

**ಶ್ರೀವಿದ್ಯಾರಣ್ಯ ಚರಿತ್ರಸಂಗ್ರಹ:**— ನೀತಿಧರ್ಮಸಂಗ್ರಹಕಾರರಾದ ಶ್ರೀ. ಸಿ. ವೆಂಕಟರಮಣಯ್ಯನವರು ಈ ಪುಸ್ತಕವನ್ನು ಬರೆದವರು. ಕರ್ನಾಟಕದ ರಾಷ್ಟ್ರಪುರುಷರಾದ ಶ್ರೀ. ವಿದ್ಯಾರಣ್ಯರ ಬಗ್ಗೆ ಯಾರು ಎಷ್ಟು ಬರೆದರೂ ಸಾಲದು. ಅವರ ಸ್ವಾರ್ಥತ್ಯಾಗ, ಅವರ ಮಹಾಮತಿತ್ವ, ಅವರ ಹೃದಯವೈಶಾಲ್ಯ, ಅವರ ದೇಶಕಾರ್ಯ ಮೊದಲಾದುವುಗಳ ಬಗ್ಗೆ ಸಂಗತಿಗಳನ್ನು ಶೋಧಿಸಿ ಪ್ರಕಾಶಕ್ಕೆ ತರುವುದು ಅತ್ಯಂತ ಇಷ್ಟವು. ಶ್ರೀ. ವೆಂಕಟರಮಣಯ್ಯನವರು ಬಹು ಮಟ್ಟಿಗೆ ಈ ದಿಶೆಯಲ್ಲಿ ಪ್ರಯತ್ನಿಸಿರುವುದು ಶ್ಲಾಘ್ಯವು. ಪ್ರಸ್ತುತ ಪುಸ್ತಕದಿಂದ ಶ್ರೀ. ವಿದ್ಯಾರಣ್ಯರ ಬಗ್ಗೆ ವಾಚಕರಿಗೆ ಅನೇಕ ಸಂಗತಿಗಳು ಗೊತ್ತಾಗುವುವು. ಕನ್ನಡಿಗರ ಸಂಗ್ರಹದಲ್ಲಿ ಈ ಪುಸ್ತಕವು ಅವಶ್ಯವಾಗಿ ಇರಬೇಕೆಂದು ನಮ್ಮ ಸೂಚನೆ.

**ನಿಜಗುಣ ಶಿವಯೋಗೀಂದ್ರ ವಿರಚಿತ ನೀತಿಸಂಗ್ರಹ:**— ಈ ಉಪಯುಕ್ತವಾದ ಪುಸ್ತಕವನ್ನು ಬರೆದವರು ಶ್ರೀ. ಮಹಾಲಿಂಗಯ್ಯಾ ವೀರಯ್ಯಾ ಹಿರೇಮಠ ದ್ಯಾಂಪುರ ಇವರು. ಶ್ರೀ ಶಿವಯೋಗಮಂದಿರದ ಮಹಾಸ್ವಾಮಿಗಳಿಂದ ಇದು ಪರಿಶೋಧಿಸಲ್ಪಟ್ಟಿದೆ. ಶ್ರೀ ನಿಜಗುಣ ಶಿವಯೋಗೀಂದ್ರರಿಂದ ಬರೆಯಲ್ಪಟ್ಟ 'ವಿವೇಕಚಿಂತಾಮಣಿ'ಯೆಂಬ ಗ್ರಂಥದಲ್ಲಿ ನೀತಿಸಂಗ್ರಹವೆಂಬುದೊಂದು ವಿಷಯವಿರುತ್ತದೆ. ಅದರಲ್ಲಿ ಅವರು ನೀತಿವಿಷಯಕವಾದ ೬೦ ವಚನಗಳನ್ನುಹೇಳಿರುವರು. ಈ ವಚನಗಳಲ್ಲಿ ಅಡಕವಾಗಿರುವ ನೀತಿತತ್ವವು ಸರ್ವ ಧರ್ಮದವರಿಗೂ ಮಾನ್ಯವಾಗಿರುವುದು ಶ್ರೀ. ಹಿರೇಮಠರವರು ತಮ್ಮ ಈ ಪುಸ್ತಕದಲ್ಲಿ ಈ ವಚನಗಳನ್ನು ಕೊಟ್ಟು ಸದ್ಗ್ರಂಥಗಳ ಆಧಾರಗಳೊಡನೆ ವಿವರಣೆಯನ್ನು ಬರೆದಿರುತ್ತಾರೆ. ಭಾಷೆ ಸುಗಮವಾಗಿರುವುದು. ಶ್ರೀ ನಿಜಗುಣರ ವಚನಗಳೆಂಬ ಈ ೬೦ ರತ್ನಗಳನ್ನು ಬೈಲಿಗೆ ತಂದಿಟ್ಟು ಗ್ರಂಥಕರ್ತರು ಕನ್ನಡಿಗರನ್ನು ಉಪಕೃತರನ್ನಾಗಿ ಮಾಡಿರುವರು.

---




ॐ सह नाववतु ॥ सह नौ भुनक्तु ॥ सह वीर्यं करवावहै ॥
तेजस्विनावधीतमस्तु मा विद्विषावहै ॥ ॐ शान्तिः ॥३॥

—श्रुतिः


| ಸಂಪುಟ ೬ | ವಿಭವನಾಮ ಸಂವತ್ಸರ ಕಡಲೆಗಡಬಿನ ಹುಣ್ಣಿವೆ<br>ಶಕ ೧೮೫೦, ೩ನೆಯ ಜುಲಾಯಿ, ೧೯೨೮ | ಸಂಚಿಕೆ ೯ |
|---|---|---|


# ವೈದಿಕಧರ್ಮಗ್ಲಾನಿಯೂ ಕ್ರಮೋನ್ನತಿಯೂ

( ಶ್ರೀಮನ್ನೆಲವೂವಿಸಮಠದ ಶ್ರೀನರಸಿಂಹಭಾರತಿಸ್ವಾಮಿಗಳವರ ವ್ಯಾಖ್ಯಾನಗಳ ಸಾರವು )

ಅನುವಾದಕ:—ಶ್ರೀ. ಮಹಾಬಲೇಶ್ವರಭಟ್ಟ ಹೋಬಳಿ

[ ೮ನೆಯ ಸಂಚಿಕೆಯಿಂದ ಮುಂದುವರಿದುದು ]

**ಧರ್ಮಾಂತರದ ನಿರಪೇಕ್ಷೆ :—** ಯಾವ ಧರ್ಮದವರೂ, ಪ್ರಯೋಜನಕ್ಕಾಗಿ ಬೇರೆ ಧರ್ಮವನ್ನು ಅಪೇಕ್ಷಿಸಬೇಕಾದುದಿಲ್ಲ. ಅದಕ್ಕಾಗಿ ಧರ್ಮಾಂತರದವರನ್ನು ತಮ್ಮ ಧರ್ಮಕ್ಕೆ ಬನ್ನಿರೆಂದು ಅಕ್ಷತೆಕೊಡಬೇಕಾದುದೂ ಬೇಡ. ಹಾಗೆ ವರ್ತಿಸಿದಲ್ಲಿ ಜನ್ಮಸಿದ್ಧವಾದ ಅಧಿಕಾರಸ್ವಾತಂತ್ರ್ಯದ ಪರಿಹಾರಕ್ಕೆ ಬಾಧ್ಯತೆ ಕೊಟ್ಟಂತಾಗುತ್ತದೆ. ಜ್ಞಾನಿ ವಿಚಾರಪೂರ್ವಕ ತಾತ್ವಿಕ ಸೋಪಾನಗಳನ್ನು ಅವಲಂಬಿಸಿ ಸಾವಕಾಶವಾಗಿ ಪ್ರಾಪಂಚಿಕ ಸ್ವಾತಂತ್ರ್ಯವನ್ನು ಪರಿತ್ಯಜಿಸಿ ನಿತ್ಯಸ್ವಾತಂತ್ರ್ಯವನ್ನು ಪಡೆಯುತ್ತಾನೆ. ಅಜ್ಞಾನಿ ಅವಿವೇಕಪೂರ್ವಕ ಧರ್ಮಾಂತರವನ್ನು ಸೇರಿದರೆ ಇದ್ದ ಸ್ವಾತಂತ್ರ್ಯವು ಹೋಗಿ ಬಲವಾದ ಅಜ್ಞಾನದಿಂದ ಪರತಂತ್ರನಾಗುತ್ತಾನೆ. ಇದೆಷ್ಟು ವಿಚಿತ್ರವಾದುದು ನೋಡಿರಿ. ತನ್ನ ಧರ್ಮದಲ್ಲಿಯೇ ಇದ್ದು ಜನ್ಮಸಿದ್ಧವಾಗಿ ಬಂದ ಅಲ್ಪಸ್ವಾತಂತ್ರ್ಯವನ್ನು ವಿಚಾರಪೂರ್ವಕ ಕಳಕೊಂಡರೆ ನಿತ್ಯಸ್ವಾತಂತ್ರ್ಯವು ದೊರೆಯುತ್ತದೆ. ಇದು ಮನುಷ್ಯನಿಗೆ ಇಷ್ಟವೇ ಅಲ್ಲವೇ? ಅಜ್ಞಾನದಿಂದ ಜನ್ಮಸಿದ್ಧವಾದ ಸ್ವಾತಂತ್ರ್ಯವನ್ನು ಕಳಕೊಂಡರೆ ಅದು ಅಜ್ಞಾನವನ್ನು ಧೃಢಪಡಿಸುವುದಲ್ಲದೆ ಅದರಿಂದ ಮಾತೃಸ್ಥಾನವನ್ನು ಮನಸ್ಸಿ ತುಳಿದು ತನ್ನ ಕೀರ್ತಿಗೆ ಮಹಾ ಕಲಂಕವನ್ನುಂಟುಮಾಡಿಕೊಂಡಂತಾಗುವುದಿಲ್ಲವೇ? ಆದುದರಿಂದ ತನ್ನ ಧರ್ಮದಲ್ಲಿಯೇ ತಾನಿದ್ದು ಯತ್ನಿಸಬೇಕು. ಯಾವ ಧರ್ಮದ

ತತ್ವವನ್ನೇ ಆಗಲಿ ಆ ಆ ಧರ್ಮದ ಅನುಯಾಯಿಗಳಾಗಿ ಸ್ವಧರ್ಮವನ್ನು ಬೋಧಿಸುವ ವ್ಯಕ್ತಿಗಳ ಕಾರ್ಯಕ್ಷೇತ್ರವು ಸ್ವಧರ್ಮದವರ ಸಂಘವೇ ಆಗಿರಬೇಕಲ್ಲದೆ ಧರ್ಮಾಂತರದವರಿಗೆ ತಮ್ಮ ಧರ್ಮದ ಹುಚ್ಚು ಹಿಡಿಸಲಿಕ್ಕೆ ಅವರು ಹೋಗಬಾರದು. ಬೇಕಾದರೆ ಎಲ್ಲ ಧರ್ಮಗ್ರಂಥಗಳ ಅನುಭವವನ್ನು ಪಡೆದು ಧರ್ಮಗಳ ಏಕಾಕಾರವನ್ನೂ, ಪ್ರಯೋಜನ ಏಕತ್ವವನ್ನೂ, ಎಲ್ಲರಿಗೂ ಬೋಧಿಸಬಹುದು. ಇದರಿಂದ ಆವಾವ ಧರ್ಮದವರಿಗೆ ಸ್ವಧರ್ಮದಲ್ಲಿಯೇ ಹೆಚ್ಚು ಕರ್ತವ್ಯ ಜಾಗರೂಕತೆಯುಂಟಾಗುವುದಲ್ಲದೆ ಧರ್ಮಾಂತರದ ಹುಚ್ಚು ಹಿಡಿವುದಕ್ಕೆ ಆಸ್ಪದವಾಗುವದಿಲ್ಲ. ಧರ್ಮಾಂತರದವರನ್ನು ಸ್ವಧರ್ಮಕ್ಕೆ ಸೇರಿಸಿಕೊಳ್ಳುವುದಕ್ಕಾಗಿ ನಡಿಸುವ ಸಾಹಸವನ್ನು ಸ್ವಧರ್ಮದಲ್ಲಿ ಉಂಟಾಗಿದ್ದ ಅವಸ್ಥೆಯನ್ನು ಹೋಗಲಾಡಿಸುವ ವಿಷಯದಲ್ಲಿ ಉಪಯೋಗಿಸಿದರೆ ಹೆಚ್ಚು ಶ್ರೇಯಸ್ಕರವೆಂಬುವನ್ನು ತಿಳುಹಿಸಬೇಕಾದುದಿಲ್ಲ.

ಯಾವ ವರ್ಣದವರೇ ಆಗಲಿ, ಅಥವಾ ಯಾವ ಜಾತಿಯವರೇ ಆಗಲಿ, ಇಲ್ಲವೆ ಯಾವ ವರ್ಗದವರೇ ಇರಲಿ, ತಮ್ಮ ತಮ್ಮ ಧರ್ಮವನ್ನು ಕರ್ತವ್ಯದೃಷ್ಟಿಯಿಂದ ಮಾಡಿ ಜ್ಞಾನವನ್ನು ಸಂಪಾದಿಸಲಿಕ್ಕೆ ಬರುತ್ತದೆ. ಆ ವಿಷಯದಲ್ಲಿ ಹೀನ ಭಾವನೆ ಮತ್ತು ಉತ್ಕೃಷ್ಟಭಾವನೆ ಇವುಗಳನ್ನು ಧರ್ಮ ಧರ್ಮಾಂತರಗಳಲ್ಲಿ ಇಡಕೂಡದು. ಬ್ರಾಹ್ಮಣನ ಆಚಾರಕ್ಕೂ, ಪಂಚಮನ ಕರ್ಮಕ್ಕೂ, ಎಷ್ಟೋ ಅಂತರವು ತೋರಿಬರುವುದು. ಹೀಗೆಯೇ ಪಂಚಮನ ಕರ್ಮಕ್ಕೂ ಪಶು ಪಕ್ಷಿಗಳ ವೃತ್ತಿಗೂ, ಅಂತರವೆಷ್ಟೋ ಇದೆ. ನಮ್ಮ ನಮ್ಮ ಶರೀರದ ಎಲ್ಲ ಅವಯುವಗಳು, ಶಾರೀರಿಕ ಆರೋಗ್ಯವನ್ನು ಸಮವಾಗಿಯೇ ಸಂಪಾದಿಸುತ್ತವೆ. ಆ ಆ ಅವಯುವಗಳು ಆ ಆ ಕೆಲಸವನ್ನು ಮಾಡುವುದರಿಂದ ಶರೀರಕ್ಕೆ ಆರೋಗ್ಯವುಂಟಾಗುತ್ತದೆ. ಯಾವುದಾದರೊಂದು ಅವಯುವವಿಲ್ಲವಾದರೆ ಅಥವಾ ಅದು ತನ್ನ ಕೆಲಸವನ್ನು ಮಾಡದೆ ಸ್ತಬ್ಧವಾದರೆ ಶರೀರಕ್ಕೆ ಅನಾರೋಗ್ಯವು ಪ್ರಾಪ್ತವಾಗುತ್ತದೆ. ಆರೋಗ್ಯಸಂಪಾದನದೃಷ್ಟಿಯಿಂದ ಎಲ್ಲ ಅವಯುವಗಳ ಯೋಗ್ಯತೆ ಒಂದೇ. ಹೆಚ್ಚುಕಡಿಮೆಗಳೇನೂ ಇಲ್ಲ. ಅವಯುವಗಳು ತಮ್ಮ ತಮ್ಮ ಕರ್ತವ್ಯಗಳನ್ನು ಮಾಡಿ ಸಾರ್ಥಕತೆಯನ್ನು ಪಡೆವಂತೆ ಮನುಷ್ಯನು ತನ್ನ ಕರ್ತವ್ಯಕರ್ಮಗಳನ್ನು ಮಾಡುವುದರಿಂದ ಶರೀರಕ್ಕೆ ಆರೋಗ್ಯವೂ, ಅವುಗಳಿಗೆ ಸಾರ್ಥಕ್ಯವೂ, ಹೇಗೆ ಪ್ರಾಪ್ತವಾಗುತ್ತದೋ ಹಾಗೆ ಎಲ್ಲ ವರ್ಣದವರೂ, ಎಲ್ಲ ಧರ್ಮದವರೂ, ಎಲ್ಲ ಜಾತಿಯವರೂ, ಎಲ್ಲ ವರ್ಗದವರೂ, ತಾವು ಸಮಾಜಶರೀರದ ಒಂದೊಂದು ಅಂಗಗಳಂತೆ ಇರುತ್ತೇವೆಂದು ತಿಳಿದು ಅವಯುವಧರ್ಮವನ್ನನುಸರಿಸಿ ತಮ್ಮ ತಮ್ಮ ಕರ್ತವ್ಯಗಳನ್ನು ನಡಿಸುತ್ತ ಬಂದರೆ ಅದರಿಂದ ಸಮಾಜದ ಕಲ್ಯಾಣವೂ, ಆಗುವುದು, ಜನ್ಮಸಾರ್ಥಕತೆಯೂ ಉಂಟಾಗುವುದು. ಆದುದರಿಂದ ತಮ್ಮ ತಮ್ಮ ಕರ್ತವ್ಯಗಳಲ್ಲಿ ಉಚ್ಚನೀಚ ಭಾವನೆಗಳನ್ನಿಡದೆ ಅವುಗಳನ್ನು ಎಲ್ಲರೂ ಪರಿಪಾಲಿಸುತ್ತ ಬಂದಲ್ಲಿ ಚಿತ್ತಶುದ್ಧಿದ್ವಾರಾ ಆತ್ಮಜ್ಞಾನವಾಗುವುದೆಂಬುದರಲ್ಲಿ ಸಂದೇಹವಿಲ್ಲ.

ಪತ್ನಿ ತನ್ನ ಮುಖ್ಯಕರ್ತವ್ಯವಾದ ಪತಿಸೇವೆಯನ್ನು ಮಾಡುವುದರಿಂದಲೂ, ಒಬ್ಬ ವ್ಯಾಧನು ಕುಲಕ್ರಮವಾಗಿ ನಡೆದುಬಂದ ಮಾಂಸವಿಕ್ರಯರೂಪವಾದ ಮತ್ತು ಮಾತೃಪಿತೃ ಸೇವಾರೂಪವಾದ ಕರ್ತವ್ಯಕರ್ಮಗಳನ್ನು ಮಾಡಿದುದರಿಂದಲೂ, ಅವರಿಗೆ ಜ್ಞಾನವೂ, ವಿಚಿತ್ರ ಮಹಿಮೆಯೂ, ಉಂಟಾಯಿತೆಂದು ಭಾರತ ಅರಣ್ಯಪರ್ವದಿಂದ ತಿಳಿದುಬರುತ್ತದೆ. ಆ ಸಾಧ್ವೀಮಣಿಯೂ, ವ್ಯಾಧನೂ, ಒಬ್ಬ ಜ್ಞಾನಿಯಾದ ಯತಿಯ ಮುಂದೆ ಪರೀಕ್ಷೆಯನ್ನು ಕೊಟ್ಟು ಯತಿಯ ಮನಸ್ಸಿನಲ್ಲಿ ಅತ್ಯಾಶ್ಚರ್ಯವನ್ನುಂಟುಮಾಡಿದರು. ಇದಲ್ಲದೆ, ಒಂದು ಗಿಳಿ ಪೂರ್ವ ಸಂತತಿ ವಾಸಮಾಡಿದ ಸ್ಥಾನದಲ್ಲಿಯೇ ಇದ್ದು ಪೂರ್ವಜರಲ್ಲಿ ಪ್ರೇಮಪೂರ್ವಕ ಗುರುಭಕ್ತಿಯನ್ನೂ, ಆಶ್ರಿತಸ್ಥಾನದಲ್ಲಿ ಮಹತ್ವದ ಬುದ್ಧಿಯನ್ನೂ, ಇಟ್ಟು ಜ್ಞಾನ ಮತ್ತು ವಿಚಿತ್ರಮಹಿಮೆಯನ್ನು ಪಡೆದು ವೃದ್ಧ ಬ್ರಾಹ್ಮಣರೂಪದಿಂದ ( ನಿಜರೂಪವನ್ನು ಮರೆಸಿಕೊಂಡು) ಬಂದ ಇಂದ್ರನನ್ನು ಜ್ಞಾನಬಲದಿಂದ ಇಂದ್ರನೆಂದೇ ತಿಳಿದು ಅವನ ಮುಂದೆ ತನ್ನ ಜ್ಞಾನಮಹಿಮೆಗಳ ಪರೀಕ್ಷೆಯನ್ನು ಕೊಟ್ಟು ಇಂದ್ರನ ತಲೆಯನ್ನು ನಡುಗಿಸಿರುವ ವಾರ್ತೆ ಶಾಂತಿಪರ್ವದಲ್ಲಿ ಇದೆ. ಜನಕಾದಿಗಳು ಯಾವ ತತ್ವದಿಂದ ಕರ್ತವ್ಯ ಕರ್ಮಗಳನ್ನು ಮಾಡಿ ಮಹತ್ವವನ್ನು ಪಡೆದರೆಂಬುದನ್ನೂ, ಶುಕಾದಿಗಳಿಗೆ ಅವರು ಕರ್ತವ್ಯಕರ್ಮಗಳನ್ನು ಕರ್ತವ್ಯದೃಷ್ಟಿಯಿಂದ ಮಾಡಲಿಕ್ಕೆ ಹೇಗೆ ಕಲಿಸಿದರೆಂಬುದನ್ನೂ, ಭಾಗವತ ಗ್ರಂಥದಿಂದ ತಿಳಿಯಬಹುದು. ಪಕ್ಷಿಜಾತಿಯೂ ಸಹ ಆಶ್ರಿತ ಸ್ಥಾನದಲ್ಲಿಯೂ, ಪೂರ್ವಸಂತತಿಯಲ್ಲಿಯೂ, ಮಹತ್ವದ ಭಾವನೆಯಿಂದ ನಡೆದುಕೊಂಡು ಮಹತ್ವವನ್ನು ಪಡೆದಿರುವುದೆಂದ ಬಳಿಕ ಮನುಷ್ಯನು ತನ್ನ ಸ್ವಾಭಾವಿಕ ಕರ್ಮಗಳನ್ನು ಕರ್ತವ್ಯದೃಷ್ಟಿಯಿಂದ ಮಾಡಿದರೆ ಜ್ಞಾನವನ್ನೂ, ಮಹಿಮೆಯನ್ನೂ

ಪಡೆದಿಲ್ಲವೆಂದು ಹೇಳುವಷ್ಟು ಆಧಾರವೇನಿದೆ ? ಏವಂಚ ಎಲ್ಲರೂ ತಮ್ಮ ತಮ್ಮ ಕರ್ತವ್ಯಗಳನ್ನು ಕರ್ತವ್ಯಬುದ್ಧಿಯಿಂದ ಮಾಡುತ್ತಬಂದಲ್ಲಿ ಎಲ್ಲರಿಗೂ ಪ್ರಯೋಜನವು ಏಕರೀತಿ ಯಿಂದಲೇ ದೊರೆಯುತ್ತದಾದ ಕಾರಣ ಧರ್ಮಾಂತರದ ಅಪೇಕ್ಷೆ ಅನಾವಶ್ಯಕವೆಂದು ಎಲ್ಲರೂ ತಿಳಿದಿರಬೇಕು.

**ಆರ್ಯರೂ, ಅನಾರ್ಯರೂ :—** ಈ ಭಾರತ ಭೂಮಿಯಲ್ಲಿ ಆರ್ಯರು ಸ್ಥಳಾಂತರದಿಂದ ಬಂದು ನೆಲಸಿದ ರೆಂದೂ, ಅದಕ್ಕೂ ಮೊದಲು ಅನಾರ್ಯರು ಮಾತ್ರ ಇಲ್ಲಿ ವಾಸಿಸುತ್ತಿದ್ದರೆಂದೂ, ಅನಾರ್ಯರು ಕಪ್ಪಾಗಿದ್ದುದರಿಂದಲೂ ಆರ್ಯರು ಬೆಳ್ಳಗಿದ್ದುದರಿಂದಲೂ, ಮುಂದೆ ಎರಡು ವರ್ಗಗ ಳಾದುವೆಂದೂ, ಮುಂದೆ ಮತ್ತೆ ಆರ್ಯರಲ್ಲಿ ಶ್ರಮವಿಭಾಗದ ತತ್ವಾನುಸಾರ ಮೂರು ವರ್ಗಗಳುಂಟಾದುವೆಂದೂ, ಆಗ ಸ್ಪೃಶ್ಯಾಸ್ಪೃಶ್ಯ ವ್ಯವಹಾರಕ್ಕೆ ಆಸ್ಪದವಿರಲಿಲ್ಲವೆಂದೂ, ಆರ್ಯರಲ್ಲಿ ವರ್ಣಕಲ್ಪನೆ ಉಂಟಾದ ಬಳಿಕ ಆ ವ್ಯವಹಾರವು ಉಂಟಾಗಿರಬಹುದೆಂದೂ, ಊಹಾಪ್ರಿಯರೂ ವರ್ಗಬದ್ಧ ಸಮಾಜದವರೂ ಆದ ಪಾಶ್ಚಿಮಾತ್ಯರ ಮತ್ತು ಏಕಮುಖ ವಾಗಿ ಪಾಶ್ಚಾತ್ಯ ಶಿಕ್ಷಣವನ್ನು ಪಡೆದವರ ಅಭಿಪ್ರಾಯ.

ಇದು ಸಯುಕ್ತಿಕವಲ್ಲ, ಇಷ್ಟೇ ಎಲ್ಲ, ಆದರೆ ನಿರಾಧಾರ ವಾದುದಿರುತ್ತದೆ. ಕೇವಲ ಊಹೆ ವಿಶ್ವಸನೀಯವೆನಿಸುವು ದಿಲ್ಲ. ಕಾಮಿಲಾರೋಗದಿಂದ ಪೀಡಿತನಾದವನ ಕಣ್ಣಿಗೆ ಜಗ ತ್ತಿನ ಪದಾರ್ಥಗಳೆಲ್ಲವೂ, ಹಳದೀಬಣ್ಣದವುಗಳಾಗಿಯೇ ತೋರುವುವಂತೆ. ಈ ತತ್ವವು ಕ್ರಿಸ್ತಿ ಬೈಬಲಿನಲ್ಲಿ ಇದ್ದರೆ ಇರಲಿ. ಅದು ನಮ್ಮ ಶ್ರೌತಸ್ಮಾರ್ತ ಗ್ರಂಥಗಳನ್ನು ಬಾಧಿಸಲಾರದು. ಬೈಬಲಿನ ತತ್ವವು ಅದರ ಅನುಯಾಯಿಗಳಿಗೆ ಮಾನ್ಯವಿರಲಿ. ನಾವು ನಮ್ಮ ಶಾಸ್ತ್ರದ ತತ್ವವನ್ನು ಮೂಲೆಗೊತ್ತಬಾರದು. ನಮ್ಮ ಶಾಸ್ತ್ರಗ್ರಂಥಗಳಲ್ಲಿ ವರ್ಣೋತ್ಪತ್ತಿ, ಗುಣಕರ್ಮ ವಿಭಾಗ, ಇವುಗಳ ವಿಷಯವಾಗಿ ವಿವರಣೆ ತೋರುವದೇ ಹೊರತು ಆರ್ಯರು ಇನ್ನೊಂದು ಕಡೆಯಿಂದ ಹಿಂದುಸ್ಥಾ ನಕ್ಕೆ ಬಂದರೆಂಬುದು ನಮ್ಮ ಅವಲೋಕನೆಯಲ್ಲಿ ಬಂದ ಯಾವ ಶಾಸ್ತ್ರ ಗ್ರಂಥಗಳಲ್ಲಿಯೂ, ಉಪಲಬ್ಧವಾಗಲಿಲ್ಲವೆಂದು ಹೇಳ ಬಹುದು.

ಅನಾದಿಯಿಂದ ಸಿದ್ಧವಾಗಿ ಬಂದ ಅಧಿಕಾರವನ್ನನು ಸರಿಸಿ ಅಭಿಮಾನಪೂರ್ವಕವಾಗಿ ವೇದವನ್ನು ಓದಿ ಅದ ರೊಳಗಿನ ತತ್ವದಂತೆ ಸ್ವತಃ ಯಾರು ನಡೆಯುತ್ತಾರೋ ಅವರು ಆರ್ಯರು. ವೇದದ ಸಂಬಧವಿಲ್ಲದವರು ಅನಾರ್ಯರು ಎಂದು ಶಾಸ್ತ್ರತಃ ತಿಳಿದುಬರುತ್ತದೆ. ವೇದೋಕ್ತವಾದ ಧಾರ್ಮಿಕ ಮತ್ತು ನೈತಿಕ ಕರ್ಮನಿಯಮಗಳನ್ನು ಪರಿಪಾಲಿಸುವವ ರೆಲ್ಲರೂ ಆರ್ಯರೆಂದು ಕೆಲವರು ಅನ್ನುತ್ತಾರೆ. ಇವರ ಮತ ದಂತೆ ‘ ಎಲ್ಲರೂ ’ ಎಂಬ ಶಬ್ದದಲ್ಲಿ ಶೂದ್ರರು ಮತ್ತು ಪಂಚ ಮರು ಇವರ ಸಮಾವೇಶವಾಗುತ್ತದೆ. ಬೈಬಲ್, ಕುರಾನ ಗಳ ಮತವನ್ನು ಅನುಸರಿಸದೆ ವೇದೋಕ್ತವಾದ ನೈತಿಕ ನಿಯ ಮಗಳನ್ನೂ ವೇದಶ್ರದ್ಧೆಯನ್ನೂ ಪಾರಂಪರ್ಯವಾಗಿ ಅವರು ರಕ್ಷಿಸಿಕೊಂಡೇ ಬಂದಿರುವುದರಿಂದ ಹಾಗೆ ಹೇಳಲಿಕ್ಕೆ ಅವ ಕಾಶವೂ ದೊರೆಯುತ್ತದೆ. ಇದು ಸುಮ್ಮನೆ ಬಾಯಿಮಾತು ಆದುದರಿಂದ ಪ್ರಧಾನವಲ್ಲ. ಶೂದ್ರರ ಮತ್ತು ಪಂಚಮರ ಜಾತಿ ಅಂದರೆ ಶೂದ್ರತ್ವವೂ, ಪಂಚಮತ್ವವೂ, ವೇದ ವನ್ನು ಅಭಿಮಾನಿಸುವುದರಿಂದಲೇ ಉಳಿದಿದೆ. ಇಲ್ಲವಾದರೆ ವಿದೇಶೀಯರ ಮ್ಲೇಂಛತ್ವವೂ ಇವರಿಗೂ, ಬಂದು ಬಿಡಬಹುದಾಗಿತ್ತು. ಆದರೆ ಅವರ ಭಾರತ ಭೂಮಿಯ ನಿವಾಸವೂ, ವೇದಾಭಿಮಾನವೂ, ಅವರ ಜಾತಿ ಕಟ್ಟಳೆಗಳನ್ನು ಅಸ್ತಿತ್ವದಲ್ಲಿಟ್ಟುಕೊಂಡಿದೆ. ಪಂಚಮರು ಗೋಮಾಂಸವನ್ನು ತಿನ್ನುವವರಾದರೂ, ವಿದೇಶೀಯರಂತೆ ಯೂ, ದೇಶೀಯಮಹಮದೀಯರಂತೆಯೂ, ಗೋವಧೆಯನ್ನು ಎಂದೂ ಮಾಡಿದವರಲ್ಲ. ಹಿಂದೂ ಧರ್ಮಶಾಸ್ತ್ರದಂತೆ ಇವರ ಕೂಟವು ಜಾತಿಬದ್ಧ ಸಮಾಜವಿರುತ್ತದೆ. ವರ್ಗಬದ್ಧ ಸಮಾಜ ಕ್ಕಿಂತ ಜಾತಿಬದ್ಧವಾದ ಸಮಾಜವೇ ಮೇಲೆಂದು ನಮ್ಮ ಧಾರ್ಮಿಕ ಅನುಭವವೂ ಸೂಚಿಸುತ್ತದೆ. ಇದರಿಂದಲೇ ವಿದೇ ಶೀಯರು ಭಾರತಭೂಮಿಗೆ ಹಿಂದುಸ್ಥಾನವೆಂದೂ, ಭಾರತ ಭೂಮಿಯ ನಿವಾಸಿಗಳಿಗೆ ಹಿಂದುಗಳೆಂದೂ, ಭಾರತೀಯರು ವಿದೇಶಗಳಿಗೆ ಮ್ಲೇಂಛದೇಶಗಳೆಂದೂ, ವಿದೇಶೀಯರು ಮ್ಲೇಂ ಛರೆಂದೂ, ಪರಸ್ಪರ ಕರೆದುಕೊಳ್ಳುವುದು ರೂಢವಾಗಿದೆ. ಕಾರಣ ವೇದವನ್ನು ಓದಿ ವೇದೋಕ್ತ ಕರ್ಮಗಳನ್ನಾಚರಿ ಸುವ ತ್ರೈವರ್ಣಿಕರು ಆರ್ಯರೆಂತಲೂ, ಇತರರು ಅನಾರ್ಯ ರೆಂತಲೂ, ಸಿದ್ಧವಾಗುತ್ತದೆ.

**ಜಾತಿಯೂ, ವರ್ಗವೂ:–** ಬ್ರಾಹ್ಮಣ, ಕ್ಷತ್ರಿಯ ವೈಶ್ಯ, ಶೂದ್ರ, ವರ್ಣಗಳಲ್ಲಿ ಅನುಲೋಮ ವಿಲೋಮ ಸಂಸರ್ಗಗ ಳಿಂದ ‘ಸಂಕರಜಾತಿ’ ಎಂದು ಸ್ಮೃತಿಯಿಂದ ನಿರ್ದೇಶಿಸಲ್ಪಡುವ ಅತಿಶೂದ್ರರ ಮತ್ತು ಪಂಚಮರ ಜಾತಿಗಳು ಉತ್ಪನ್ನವಾಗಿವೆ. ಯಾವಯಾವ ಜಾತಿಗೆ ಯಾವ ಯಾವ ಹೆಸರು ಬಂದಿವೆ ಎಂಬು ದರ ಉಪಪತ್ತಿಯನ್ನು ಮನ್ವಾದಿ ಸ್ಮೃತಿಗಳಲ್ಲಿಯೂ, ಅಮರ

ಕೋಶದ ಶೂದ್ರವರ್ಗದಲ್ಲಿಯೂ, ನೋಡಬಹುದು. ಇದೇ ತತ್ವದಿಂದ ಹಿಂದೂಸಮಾಜದಲ್ಲಿ ಅನೇಕ ಜಾತಿಗಳು ಉಪಲಬ್ಧಿಯಲ್ಲಿ ಬರುತ್ತವೆ. ತಮ್ಮತಮ್ಮಧರ್ಮದ ನಿರ್ಮಲತೆಯನ್ನು ಕಾಪಾಡಿಕೊಳ್ಳುವುದೇ ಹಲವು ಜಾತಿಗಳ ಉಪಲಬ್ಧಿಗೆ ಹೇತುವಾಯಿತೆಂದು ಹೇಳಬಹುದು. ಉತ್ಕ್ರಾಂತಿತತ್ವಾನುಸಾರವಾಗಿ ಪೂರ್ವಪೂರ್ವಜಾತಿಯ ನಿಯಮವನ್ನೇ ಉತ್ತರೋತ್ತರ ಸಂಕರಜಾತಿ ಅನುಕರಿಸುತ್ತ ಹೋಗುತ್ತದೆ. ಪೂರ್ವಜಾತಿ ದುಷ್ಟ ಜಾತಿಯ ಪೃಥಕ್ಕರಣ ಮಾಡುವುದರಿಂದ ಸ್ವಧರ್ಮಕ್ಕೆ ಕಲಂಕವು ಪ್ರಾಪ್ತವಾಗುವುದಿಲ್ಲ. ಹಿಂದೂ ಸಮಾಜದ ಯಾವಜಾತಿಗಳನ್ನು ನೋಡಿದರೂ ಅವರಲ್ಲಿ ಧರ್ಮಜಾಗರೂಕತೆಯೂ, ಅದಕ್ಕೆ ತಕ್ಕ ವ್ಯವಸ್ಥೆಯೂ, ಕಂಡುಬರುತ್ತದೆ. ದೋಷಿಯಾದವರು ಪ್ರಾಯಶ್ಚಿತ್ತ ಹೊಂದುವವರೆಗೆ ಅವನನ್ನು ಜಾತಿಯಿಂದ ಬಾಹಿಷ್ಕರಿಸಲಿಕ್ಕೂ, ಅಪರಿಹಾರ್ಯದೋಷದಿಂದ ಯುಕ್ತನಾದವನನ್ನು ಜಾತಿಯಿಂದ ಬಾಹ್ಯನನ್ನಾಗಿ ಮಾಡಲಿಕ್ಕೂ, ಹಿಂದೂಧರ್ಮಶಾಸ್ತ್ರವು ಸಮ್ಮತಿಯನ್ನು ಕೊಡುತ್ತದೆ. ಜಾತಿಭೇದವೇ ವರ್ಣಗಳ ಪರಿಶುದ್ಧತೆಯನ್ನು ಮಾಡುವುದು ಮತ್ತು ಸ್ವಧರ್ಮವನ್ನು ರಕ್ಷಿಸುವುದು ಮತ್ತು ಆನುವಂಶಿಕ ಸಂಸ್ಕಾರಗಳಲ್ಲಿ ಅತಿಶೀಘ್ರವಾಗಿ ಜಾಗರೂಕತೆಯನ್ನು ಉಂಟುಮಾಡುತ್ತದೆ. ಆದುದರಿಂದ ಜಾತಿಭೇದಗಳು ಅಂಗೀಕರಿಸತಕ್ಕವುಗಳಾಗಿವೆ.

ಖ್ರಿಸ್ತಸಮಾಜ ಮಹಮದೀಯ ಸಮಾಜಗಳು ವರ್ಗಬದ್ಧ ಸಮಾಜಗಳಾಗಿರುತ್ತವೆ. ವರ್ಣಭೇದವನ್ನೂ ಸಂಕರದೋಷವನ್ನೂ ಈ ಸಮಾಜದವರು ಅಂಗೀಕರಿಸುವುದಿಲ್ಲ. ಯಾವಜಾತಿಯವರನ್ನಾದರೂ ವರ್ಗದಲ್ಲಿ ಸೇರಿಸಿಕೊಳ್ಳುತ್ತಾರೆ. ವರ್ಗಭೇದಗಳಿದ್ದರೂ, ಸ್ಪೃಶ್ಯಾಸ್ಪೃಶ್ಯ ಊಟ ಉಪಚಾರಗಳಲ್ಲಿ ಯಾವಭೇದವನ್ನೂ ಯಾವವರ್ಗದವರೂ, ಎಣಿಸುವುದಿಲ್ಲ. ಶ್ರೀಮಂತನು, ಸಾಮಾನ್ಯನು, ದರಿದ್ರನು, ಕೂಲಿಕಾರನು, ಎಂಬ ತರತಮಭಾವನೆಯೊಂದಿದ್ದರೆ ಇರಬಹುದು, ಅಸ್ಪೃಶ್ಯತೆಯೊಡನೆ ಜಾತಿಭೇದಗಳನ್ನು ತೆಗೆದು ಹಾಕಬೇಕು. ಪ್ರೌಢವಿವಾಹವನ್ನೂ ಪುನರ್ವಿವಾಹವನ್ನೂ ಪ್ರಚಾರದಲ್ಲಿ ತರಬೇಕು. ಬ್ರಾಹ್ಮಣಾದಿವರ್ಣಗಳ ಮೂಲೋತ್ಪಾಟನ ಮಾಡಬೇಕು. ಎಂಬ ಕಲ್ಪನಾಬೀಜಗಳನ್ನುಹಿಂದುಗಳ ಚಿತ್ತಕ್ಷೇತ್ರದಲ್ಲಿ ಬಿತ್ತಿದವರು ವರ್ಗಬದ್ಧ ಸಮಾಜದವರು. ಪಾಶ್ಚಾತ್ಯ ಪದ್ಧತಿಯಿಂದ ಉಚ್ಚಶಿಕ್ಷಣವನ್ನು ಪಡೆದವರಲ್ಲಿ ಕೆಲವರು ಈ ತತ್ವವನ್ನೇ ಅವಲಂಬಿಸಿ ಬೋಧಿಸಿರುವುದಾಗಿ ತಿಳಿದುಬರುತ್ತದೆ. ನಮ್ಮಲ್ಲಿರುವ ನಾಲ್ಕು ವರ್ಣಗಳನ್ನೇ ನಾಲ್ಕು ವರ್ಗಗಳನ್ನಾಗಿ ವರ್ಗಬದ್ಧ ಸಮಾಜದವರು ಕಲ್ಪಿಸುತ್ತಾರೆ. ಇದು ಯೋಗ್ಯವಾದುದಲ್ಲ. ಹಿಂದೂ ಸಮಾಜವು ವರ್ಗಬದ್ಧವಾಗಿಯೇ ಇದ್ದಿದ್ದರೆ ಇದೂವರೆಗೂ ವರ್ಣಭೇದಜಾತಿಭೇದ ಮೊದಲಾದುವುಗಳ ಉಪಲಬ್ಧಿ ಇರಲಿಕ್ಕೆ ಕಾರಣವಿಲ್ಲ. ವರ್ಣಗಳಮೇಲೆ ವರ್ಗಗಳನ್ನು ಕಲ್ಪಿಸುತ್ತಿದ್ದಾರೆಯೇ ಹೊರತು ವರ್ಗಗಳಮೇಲೆ ವರ್ಣಗಳು ಮನುಷ್ಯಕಲ್ಪಿತವಾದವುಗಳೆಂದು ಆಕ್ಷೇಪಿಸುವುದಕ್ಕೆ ಅವಕಾಶವಿಲ್ಲ. ಆದುದರಿಂದ ವರ್ಗಕ್ಕಿಂತಲೂ, ಜಾತಿಯೇ ಮೇಲು.

**ಶ್ರಮವಿಭಾಗ :—** ಶ್ರಮವಿಭಾಗಗಳಿಂದ ಜಾತಿಭೇದಗಳು ಉಂಟಾಗಿರುವವೆಂದು ಪಾಶ್ಚಿಮಾತ್ಯರಲ್ಲಿ ಕೆಲವರು ತರ್ಕಿಸುತ್ತಾರೆ. ಶ್ರಮವಿಭಾಗವು, ಸಾಮಾಜಿಕ, ಔದ್ಯೋಗಿಕ, ಸ್ಥಾನಿಕ, ಎಂದು ಮೂರುವಿಧವಾಗಿ ಅರ್ಥಶಾಸ್ತ್ರದಲ್ಲಿ ವಿಭಾಗಿಸಲ್ಪಟ್ಟಿದೆ. ಹಿಂದೂ ಸಮಾಜದ ನಾಲ್ಕು ವರ್ಣಗಳಲ್ಲಿ ಬ್ರಾಹ್ಮಣವರ್ಣವು, ಧರ್ಮ ಮತ್ತು ಜ್ಞಾನ ಇವುಗಳ ಪ್ರಚಾರದ ಶ್ರಮವನ್ನು ವಹಿಸಿರುತ್ತದೆ. ಕ್ಷತ್ರಿಯವರ್ಣವು ಸಮಾಜವನ್ನು ರಕ್ಷಿಸುವುದರಲ್ಲಿ ಶ್ರಮಿಸುತ್ತದೆ. ವೈಶ್ಯವರ್ಣವು ಕೃಷಿ ವ್ಯಾಪಾರಗಳ ಭಾರವನ್ನು ಹೊತ್ತುಕೊಂಡಿದೆ. ಶೂದ್ರವರ್ಣವು ಸೇವಾಧರ್ಮವನ್ನು ಪರಿಪಾಲಿಸುತ್ತದೆ. ಇದಲ್ಲದೆ ಸಾಮಾಜವು ತನ್ನ ಘಟಕ ವ್ಯಕ್ತಿಗಳ ವಿಷಯದಲ್ಲಿಯೂ ಪ್ರತಿಯೊಂದು ವ್ಯಕ್ತಿಸಮಾಜದ ವಿಷಯದಲ್ಲಿಯೂ, ಶ್ರಮವಿಭಾಗವನ್ನು ತೆಗೆದುಕೊಳ್ಳುತ್ತದೆ. ಇತ್ಯಾದಿ ವಿಷಯಗಳು ಸಾಮಾಜಿಕ ಶ್ರಮವಿಭಾಗದಲ್ಲಿ ಸೇರುತ್ತವೆ. ಹಲವು ಜನರು ಸಹಕಾರಿ ತತ್ವವನ್ನು ಅವಲಂಬಿಸಿ ಐಕ್ಯಮತದಿಂದ ವ್ಯಾಪಾರ ಮತ್ತು ಯಾಂತ್ರಿಕ ಸಂಸ್ಥೆಗಳನ್ನು ನಡಿಸುತ್ತ ಸಾಂಪತ್ತಿಕ ಪರಿಸ್ಥಿತಿಯನ್ನು ಬೆಳಿಸುತ್ತಿರುವರು. ಹೊಲಮನೆಗಳನ್ನು ಮಾಡಿ, ಕೆಲವರು ಧಾನ್ಯಾದಿಗಳನ್ನು ಸಂಪಾದಿಸುವರು. ಈ ಶ್ರಮಗಳು ಔದ್ಯೋಗಿಕ ಶ್ರಮವಿಭಾಗದಲ್ಲಿ ಬರುತ್ತವೆ. ಮನೆಯಲ್ಲಿ ಸ್ತ್ರೀಯರು ಒಳಗಿನ ಕಾರ್ಯಭಾರವನ್ನು ವಹಿಸಿದಂತೆ ಪುರುಷರು ಹೊರಗಿನ ಭಾರವನ್ನು ವಹಿಸುತ್ತಾರೆ. ಸ್ಕೂಲುಗಳಲ್ಲಿ ಹೆಚ್ಚು ವಿದ್ಯಾರ್ಥಿಗಳಿದ್ದರೆ ಹೆಚ್ಚು ಉಪಾಧ್ಯಾಯರು ಕೆಲಸ ಮಾಡಬೇಕಾಗುತ್ತದೆ. ಅರಮನೆಗಳಲ್ಲಿ ಕಾರ್ಯನಿರ್ವಾಹಕ್ಕಾಗಿ ಮಂತ್ರಿಯೇ ಮೊದಲ್ಗೊಂಡು ಕಕ್ಕಸದ ಮನುಷ್ಯನವರೆಗೂ, ಅನೇಕ ದರ್ಜೆಗಳಿರುತ್ತವೆ. ಇತ್ಯಾದಿಗಳೆಲ್ಲಾ ಸ್ಥಾನಿಕ ಶ್ರಮವಿಭಾಗದಲ್ಲಿ ಸಮಾವೇಶವಾಗುತ್ತವೆ.

ಶ್ರಮವಿಭಾಗದ ತತ್ವಾನುಸಾರ ನಾಲ್ಕುವರ್ಣಗಳು ಕಲ್ಪನೆ ಯಾದಬಳಿಕ ಬಹುಜನರು ಬಹು ಕಲೆಗಳನ್ನು ಕಲಿತು ಅವುಗಳನ್ನು ನಡಿಸುತ್ತ ಬಂದುದರಿಂದ ಮುಂದೆ ಹಲವುಜಾತಿಗಳು ಉದ್ಭವಿಸಿದುವು, ಮತ್ತು ಸ್ಪೃಶ್ಯಾಸ್ಪೃಶ್ಯನಿಯಮಗಳುಂಟಾದುವು ಎಂದು ಶ್ರಮವಿಭಾಗವಾದಿಗಳು ವಾದಿಸುತ್ತಾರೆ. ಗೀತಾಶಾಸ್ತ್ರಾನುಸಾರ ವರ್ಣಸೃಷ್ಟಿಯಾದನಂತರ ಕರ್ಮವಿಭಾಗಗಳಾದುವೆಂದು ತೋರುತ್ತದೆ. ದೋಷಸಾಂಕರ್ಯದಿಂದ ಹಲವು ಜಾತಿಗಳ ಉತ್ಪತ್ತಿಯಾಯಿತೆಂದು ಸ್ಮೃತಿ ಅನ್ನುತ್ತದೆ. ಸಂಕರಜಾತಿಗಳ ಉತ್ಪತ್ತಿಯನಂತರ ಆ ಜಾತಿಯವರ ಪರಿಶ್ರಮದಿಂದ ಹಲವು ಕಲೆಗಳು ಅಸ್ತಿತ್ವದಲ್ಲಿ ಬಂದುವು. ಅವುಗಳೇ ಅವರ ಉಪಜೀವಕಗಳೂ ಆದುವು. ಈಗಲೂ ಆ ಆ ಜಾತಿಯವರಲ್ಲಿ ಆ ಆ ಕಲೆಗಳನ್ನು ನೋಡಬಹುದು. ಆದರೆ ಸದ್ಯದ ಆದಿಭೌತಿಕ ಕಲೆಗಳ ಅತ್ಯುಚ್ಚ ಪರಿಸ್ಥಿತಿಯಲ್ಲಿ ಅವುಗಳು ತಲೆಎತ್ತದಂತೆ ಆಗಿರುವುವು. ಏವಂಚ ವರ್ಣಸೃಷ್ಟಿಯಾದನಂತರ ಸಾಮಾಜಿಕ ಶ್ರಮವಿಭಾಗವೂ, ಸಂಕರಜಾತಿಗಳ ಉತ್ಪತ್ತಿಯಾದನಂತರ ನಾನಾಕಲೆಗಳ ಉದಯವೂ ಆಯಿತೆಂದು ಹೇಳುವುದು ಎಷ್ಟು ಯುಕ್ತವೋ ಅಷ್ಟು ಶ್ರಮವಿಭಾಗದನಂತರ ವರ್ಣಜಾತಿಗಳು ಕಲ್ಪಿಸಲ್ಪಟ್ಟವೆ, ಎನ್ನುವುದು ಯುಕ್ತವೆನಿಸುವುದಿಲ್ಲ. ಇಷ್ಟೇ ಏಕೆ ? ಅಸಂಭಾವ್ಯವೆಂದು ಹೇಳಿದರೆ ಶಾಸ್ತ್ರಮತವನ್ನು ಪುಷ್ಟಿಗೊಳಿಸಿದಂತೆ ಆಗುವುದಲ್ಲದೆ ಅದೇನೂ ತಪ್ಪಾಗಲಾರದು. ಆದುದರಿಂದ ಶ್ರಮವಿಭಾಗದ ತತ್ವಕ್ಕೆ ತಾವು ಮಾನ್ಯತೆಯನ್ನು ಕೊಟ್ಟರೂ, ಶ್ರಮವಿಭಾಗಸುಸಾರವಾಗಿ ವರ್ಣಜಾತಿಗಳ ಕಲ್ಪನೆಯಾಯಿತೆಂದು ನಂಬಬಾರದು.

(ಸಶೇಷ)

---

## ಒಂದು ಹಾಡು

ಎದೆಯು ಬಯಕೆಯ ಹಾಡು ನಾದಸೀಮೆಯ ಮೀರಿ ।
ಹುದುಗಿ ವಿಶ್ವಾನಂತಶಾಂತಿಗಾನದಲಿ ॥
ಮೃದುಮೇಳದಿಂದೆ ಮಧುರತೆ ಜೀರಲೆಳಸುತಿರೆ ।
ಅದನು ಬಿಸುಸುಯ್ಯ ಹೊಯ್ಲಲಿ ತಡೆವರೇನೈ ? ॥ ೧ ॥
ಮುಗಿಲ ಮೇಲಿಂದಿಳಿದು ನಲಿದು ನಾಟ್ಯವನಾಡಿ ।
ಚಿಗುರ ತಳ್ಳಿಯ ಸುಖಕೆ ಸೋತು ಬೇಸತ್ತು ॥
ಹೊಗಲೆಳಸಿ ಬಂದೆಡೆಯನುದುರೆ ಮಂಜಿನ ಹನಿಯು ।
ಬಗೆಗಾಗಿ ಬಗೆಗೆಟ್ಟು ಬಸವಳಿವರೇನೈ ॥ ೨ ॥
ತನ್ನ ಕಾಲದಲಿ ನಗೆ ಚೆಂದುಟಿಯನೆಡೆಗೊಂಡು ।
ಜೊನ್ನವನು ಪಸರಿಸಿತು; ಕಾಲವದು ಕಳೆಯೆ ॥
ಇನ್ನು ತನಗೆಡೆಯಿಲ್ಲವೆಂದು ಬೀಳ್ಕೊಡಲದನು ।
ಕಣ್ಣೀರ ಕಡಲಿನಲಿ ಕೆಡೆಯಿಸುವರೇನೈ ॥ ೩ ॥
ಧರೆಯ ಸೊಬಗುಗಳೊಂದೆ ನೆಲದಿ ನಿಲ್ಲವು ಸೃಷ್ಟಿ ।
ಯುರುಳಿ ಬೇಸತ್ತು ನಿಲ್ವನಿತು ಪರ್ಯಂತ ॥
ಮಿರುಗುತೊಂದೆಡೆ ಮತ್ತೆ ತೆರಳುವುವು ಬೇರೆಡೆಗೆ ।
ತೆರಳೆ ದಿನ, ಬೆಳಕು ದೀಪದೊಳಡಗುವಂತೆ ॥ ೪ ॥

—ಶ್ರೀ. ಶಂಕರಭಟ್ಟ ಕಡೆಂಗೋಡ್ಲು

# ವರರುಚಿ ಮಹಾಮಂತ್ರಿ

ಲೇಖಕ:—ಶ್ರೀ. ಎಸ್. ಶೇಷಾದ್ರಿಶರ್ಮ ಬಿ. ಎ, ಬೆಂಗಳೂರು.

೩ನೆಯ ಸಂಚಿಕೆಯಿಂದ ಮುಂದುವರಿದದು.

**೫. ಯೌವನ ಮತ್ತು ವಿವಾಹ:**— ಹೀಗೆ ಕೆಲವು ವರ್ಷಗಳು ಕಳೆಯುತ್ತ ಗುರುಕುಲದಲ್ಲಿ ವಾಸಿಸುತ್ತಿದ್ದ ವರರುಚಿ ಕೌಮಾರಾವಸ್ಥೆಯನ್ನು ದಾಟಿ ಸರ್ವ ವಿದ್ಯೆಗಳನ್ನು ಚೆನ್ನಾಗಿ ಅರಿತವನಾದನು.

ಈಗ ಒಂದು ದಿವಸ ವಾಡೀಂದ್ರದತ್ತರೊಡಗೂಡಿ ಇಂದ್ರೋತ್ಸವವನ್ನು ನೋಡಲು ಹೊರಟಿದ್ದ ವರರುಚಿ ಬಹು ಸುಂದರ ಗಾತ್ರಿಯಾಗಿ ಸರ್ವಾಲಂಕಾರಭೂಷಿತೆಯಾಗಿ ಸಖೀಜನರೊಡನೆ ಪ್ರಿಯಸಲ್ಲಾಪಗಳಿಂದ ಮಂದಗಾಮಿನಿಯಾಗಿ ಹೋಗುತ್ತಿದ್ದ ಹಿಂದೆ ತಾನೆಂದಿಗೂ ನೋಡದಿದ್ದ ರಮಣೀಮಣಿಯೊಬ್ಬಳನ್ನು ನೋಡಿದನು. ಉತ್ತರ ಕ್ಷಣದಲ್ಲೇ ಇವನ ಮನಸ್ಸೆಲ್ಲವನ್ನೂ ಆಕೆಯ ಸೊಬಗು ಸೂರೆಮಾಡಿ ಬಿಟ್ಟಿತು. ಇದರಿಂದ ವರರುಚಿ ಮಿತ್ರನಾದ ಇಂದ್ರದತ್ತನನ್ನು ಕುರಿತು “ಅಣ್ಣಾ, ಈ ಮೋಹನಾಂಗಿಯಾದ ಕನ್ಯಾಮಣಿ ಯಾರಿರಬಹುದೆ”ಂದು ಕಾತರದಿಂದ ಕೇಳಿದನು. ಆ ಮಿತ್ರನು ಕೂಡಲೆ “ತಮ್ಮಾ ವರರುಚಿ, ಇದೇನಾಶ್ಚರ್ಯ? ಈಕೆ ಯಾರೆಂದು ನಿನಗೆ ಗೊತ್ತಿಲ್ಲವೇ ? ಏಕೆ, ನಮ್ಮ ಆಚಾರ್ಯರ ತಮ್ಮನ ಮಗಳಾದ ಉಪಕೋಶೆಯೇ ಇವಳಲ್ಲವೇ?” ಎಂದು ಉತ್ತರವಿತ್ತನು. ಅನಂತರ ಕದಲಿದ ಮನವುಳ್ಳವನಾಗಿ ಆಕೆಯನ್ನೇ ಸ್ಮರಿಸುತ್ತ, ಹಂಬಲಿಸುತ್ತ ಲೋಕವೆಲ್ಲವನ್ನೂ ತನ್ಮಯನಾಗಿ ಕಾಣುತ್ತ ತದೇಕಮನನಾಗಿ ಆ ರಾತ್ರಿಯೆಲ್ಲವನ್ನೂ ಕಳೆದನು.

೬. ಆಗ ಅರ್ಧರಾತ್ರಿಯಾದ ಮೇಲೆ ಇವನು ನಿದ್ರೆಯಲ್ಲಿರಲು ಕನಸಿನಲ್ಲಿ ಶ್ವೇತಾಂಬರವನ್ನುಟ್ಟ ದೇವತೆಯೊಬ್ಬಳನ್ನು ಕಂಡನು. ಈಕೆ ಇವನ ಸಮೀಪವನ್ನೈದಿ ಸಂತೈಸುತ್ತ “ಮಗು, ನನ್ನನ್ನು ನಿನ್ನ ಶರೀರಾಂತರ್ವರ್ತಿಯಾದ ಸರಸ್ವತಿ ಯೆಂದು ತಿಳಿ. ಈ ನಿನ್ನ ಪ್ರಿಯೆಯಾದ ಉಪಕೋಶೆ ಪೂರ್ವ ಜನ್ಮದಲ್ಲಿಯೂ ಕೂಡ ನಿನ್ನ ಪತ್ನಿಯಾಗಿದ್ದಳು. ಮತ್ತು ಈಗಲೂ ಕೂಡ ನಿನ್ನನ್ನೇ ವರಿಸುತ್ತಾಳಲ್ಲದೆ ಇನ್ನು ಯಾರನ್ನೂ ಬಯಸುವುದಿಲ್ಲ. ಆದುದರಿಂದ ಚಿಂತೆಯನ್ನು ಬಿಡು”ಎಂದು ಹೇಳಿ ಅಂತರ್ಧಾನಹೊಂದಿದಳು. ಅನಂತರ ನಿದ್ದೆಯಿಂದೆದ್ದು ವರರುಚಿ ಆ ಕನ್ಯಾಮಣಿಯ ಮನೆಯ ಹತ್ತಿರವಿದ್ದ ಮಾವಿನ ಗಿಡದ ಕೆಳಗೆ ಹೋಗಿ ಕೂತು ಕೊಂಡನು.

೭. ಸ್ವಲ್ಪ ಹೊತ್ತಿನಲ್ಲಿಯೇ ಉಪಕೋಶೆಯ ಸಖಿಯರು ಬಂದು ಇವನನ್ನು ಪ್ರೀತಿ ಪೂರ್ವಕವಾಗಿ ಮಾತಾಡಿಸಿ ತಮ್ಮ ಮನೆಯೊಳಗೆ ಬರಬೇಕೆಂದು ಪ್ರಾರ್ಥಿಸಿದರು. ಆದರೂ ವರರುಚಿ ತನ್ನ ಸಲುವಾಗಿ ಆ ಬಾಲೆ ಬಹಳ ಪರಿತಪಿಸುತ್ತಿರುವಳೆಂದು ತಿಳಿದಿದ್ದರೂ, ಗುರುಜನಗಳಿಂದ ಕೊಡಲ್ಪಡದ ಕುಲೀನೆಯನ್ನು ತಾನೇ ಹೋಗಿ ಪರಿಗ್ರಹಿಸುವುದಕ್ಕೆ ಒಪ್ಪಲಿಲ್ಲ.

೮. ಇದರಿಂದ ಉಪಕೋಶೆಯ ತಾಯಿ ಕೃಶೆಯೂ ನಿರಾಶೆಯೂ ಉಲ್ಲಾಸಹೀನೆಯೂ ಆದ ತಮ್ಮ ಮಗಳನ್ನು ನೋಡಿ ಸರ್ವವಿಷಯವನ್ನೂ ಚೆನ್ನಾಗಿ ತಿಳಿದವಳಾಗಿ, ತನ್ನ ಪತಿಯನ್ನು ಕಂಡು ಅವನಿಂದ ವರ್ಷೋಪಾಧ್ಯಾಯರಿಗೆ ಈ ವಿಚಾರವೆಲ್ಲವನ್ನೂ ತಿಳಿಸಿದಳು. ಮತ್ತು ಅವರಿಬ್ಬರೂ ಇಂಥ ಅನುಕೂಲವಾದ ಶ್ರೇಷ್ಠವಿವಾಹಕ್ಕೆ ಸಂತೋಷದಿಂದ ಒಪ್ಪಿ ವ್ಯಾಡಿಯನ್ನು ಕೌಶಾಂಬಿಗೆ ಕಳುಹಿಸಿ, ವರರುಚಿಯ ತಾಯಿಯನ್ನು ಕರೆಸಿಕೊಂಡು, ಆಕೆಯ ಸಮ್ಮತಿಯಂತೆ ಶುಭಮುಹೂರ್ತದಲ್ಲಿ ಅಗ್ನಿಸಾಕ್ಷಿಕವಾಗಿ ಉಪಕೋಶೆಯನ್ನು ವರರುಚಿಗೆ ಕೊಟ್ಟು ಮಹೋತ್ಸವದಿಂದ ವಿವಾಹವನ್ನು ಬೆಳೆಸಿದರು. ಅನಂತರ ವರರುಚಿ ಆ ನಗರದಲ್ಲೇ ಮಾತೃಪತ್ನಿಯರೊಂದಿಗೆ ಸುಖದಿಂದ ವಾಸಮಾಡುತ್ತಿದ್ದನು.

**೯. ಪಾಣಿನಿಯ ಏಳಿಗೆ ಮತ್ತು ವರರುಚಿಯ ಸೋಲು:**—ಹೀಗೆ ಕೆಲವು ಕಾಲ ಕಳೆವಲ್ಲಿ ವರ್ಷೋಪಾಧ್ಯಾಯರ ಶಿಷ್ಯಬೃಂದವು ದಿನೇ ದಿನೇ ಹೆಚ್ಚಿ ಸರ್ವದಿಕ್ಕುಗಳನ್ನೂ ಅವರ ಕೀರ್ತಿಯಿಂದ ತುಂಬಿತು. ಇದರಿಂದ ಅತಿ ದಡ್ಡನಾದ ಪಾಣಿನಿಯೆಂಬೊಬ್ಬ ಶಿಷ್ಯನೂ ಕೂಡ ಬಂದು ಇವರನ್ನು ಸೇವಿಸುತ್ತಿದ್ದನು. ಇವನ ದೃಢಭಕ್ತಿಯನ್ನು ನೋಡಿ, ಇವನ ಮಂದಮತಿಗೆ ಕನಿಕರಗೊಂಡು ಗುರುಪತ್ನಿ ಒಂದು ದಿವಸ

ಈ ಶಿಷ್ಯನನ್ನು ಕರೆದು—"ಅಪ್ಪಾ, ಪಾಣಿನಿ, ನೀನು ಹೀಗೆ ಎಷ್ಟು ಸೇವಿಸಿದರೇನು ಫಲ ! ಇದಕ್ಕೆ ಬದಲಾಗಿ ಮೊದಲು ಹೋಗಿ ದೇವತಾ ಪ್ರಸಾದವನ್ನು ಪಡೆದುಕೊಂಡು ಬಾರಪ್ಪ" ಎಂದು ಉಪದೇಶಿಸಿದಳು.

೧೦. ಆ ಆಜ್ಞೆಯನ್ನು ಶಿರಸಾವಹಿಸಿ ಹಿಮಾಲಯಪರ್ವತಕ್ಕೆ ಹೋಗಿ ಪಾಣಿನಿ ಭವಾನೀಪತಿಯನ್ನು ಏಕಮನಸ್ಸಿನಿಂದ ತೀವ್ರ ತಪಸ್ಸು ಮಾಡಿ ಆರಾಧಿಸಲು ಆ ಭಕ್ತವತ್ಸಲನು ಸುಪ್ರೀತನಾಗಿ ಈ ದೃಢಮನಸ್ಸಿನ ಶಿಷ್ಯನಿಗೆ ಸರ್ವವಿದ್ಯೆಗಳಿಗೂ ಮುಖಪ್ರಾಯವಾದ ಹೊಸದೊಂದು ವ್ಯಾಕರಣ ಶಾಸ್ತ್ರವನ್ನೆ ಅನುಗ್ರಹಿಸಿ ಕೊಟ್ಟನು. ಇದರಿಂದ ಅತ್ಯಂತ ತೇಜೋವಿಶಿಷ್ಟನಾಗಿ ಪಾಣಿನಿ ಪಾಟಲೀಪುತ್ರಕ್ಕೆ ಹಿಂದಿರುಗಿ ಬಂದು ವರರುಚಿಯನ್ನು ವಾಗ್ವಾದಕ್ಕೆ ಕರೆದನು. ವಾದವು ಏಳುದಿನ ನಡೆದರೂ ಪಾಣಿನಿ ಸೋಲದಿರಲು ಕೊನೆಗೆ ಎಂಟನೆಯ ದಿವಸ ವರರುಚಿ ಅವನನ್ನು ಪೂರ್ಣವಾಗಿ ಸೋಲಿಸಿದನು. ಆದರೆ ಯಾರ ಸಂತೋಷಕ್ಕೂ ಅವಕಾಶಗೊಡದೆ ಉಮಾಪತಿಯೇ ಆಕಾಶದಿಂದ ಹುಂಕಾರಮಾಡಿದನೋ ಇಲ್ಲವೋ ಅಷ್ಟರಲ್ಲಿಯೇ ರೂಢಿಯಲ್ಲಿದ್ದ ಐಂದ್ರವ್ಯಾಕರಣವು ನಾಶವಾಗಿ, ವರರುಚಿ ಮೊದಲ್ಗೊಂಡು ಸಕಲ ಪಂಡಿತರೂ ಪಾಣಿನಿಯಿಂದ ಪರಾಜಿತರಾಗಿ ಮೂಢರಾದರು. ಆದುದರಿಂದ ಎಂದೂ ಯೋಚಿಸದಿದ್ದ ಈ ಸೋಲಿನಿಂದ ಅತಿ ಖೇದಪಟ್ಟ ವರರುಚಿ ತನ್ನಲ್ಲಿದ್ದ ದ್ರವ್ಯವನ್ನು ಹಿರಣ್ಯಗುಪ್ತನೆಂಬೊಬ್ಬ ವರ್ತಕನಲ್ಲಿ ಗುಟ್ಟಾಗಿಟ್ಟು ಈ ವಿಷಯವನ್ನು ಗೋಪ್ಯವಾಗಿ ತನ್ನ ಪತ್ನಿಯೊಬ್ಬಳಿಗೆ ಮಾತ್ರ ತಿಳಿಸಿ ಈಶ್ವರಾರಾಧನೆಗಾಗಿ ತಪಸ್ಸುಮಾಡಲು ಹಿಮವತ್ಪರ್ವತಕ್ಕೆ ಹೊರಟನು.

**ಉಪಕೋಶೆಯ ಪಾತಿವ್ರತ್ಯ:**—ಈ ಸಮಯದಲ್ಲಿ ಗಂಡನಿಗೆ ಶುಭವಾಗಲೆಂದು ಪತಿವ್ರತಾಶಿರೋಮಣಿಯಾದ ಉಪಕೋಶೆ ಪ್ರತಿನಿತ್ಯವೂ ಗಂಗಾತೀರಕ್ಕೆ ಹೋಗಿ ಸ್ನಾನ ಮಾಡಿಕೊಂಡು ಬಂದು ನಿಯತವ್ರತೆಯಾಗಿ ದೇವತಾಪೂಜೆಯನ್ನು ಮಾಡುತ್ತಿದ್ದಳು. ಹೀಗಿರಲು ಒಂದು ದಿನ ಈ ಶೋಭನಾಂಗಿ ಗಂಗಾತೀರದಲ್ಲಿ ಧೈರ್ಯದಿಂದ ಒಬ್ಬಳೇ ಸಂಚರಿಸುತ್ತಿದ್ದುದನ್ನು ನೋಡಿ ಕಾಮಾಸಕ್ತರಾದ ಯುವರಾಜಮಂತ್ರಿಯೂ, ರಾಜಪುರೋಹಿತನೂ, ಸೇನಾಪತಿಯೂ ಕೂಡ ತಮ್ಮ ಇಚ್ಛಾಪೂರ್ತಿಗಾಗಿ ಒಂದೇ ದಿವಸದಲ್ಲಿ ಪ್ರಯತ್ನಪಟ್ಟರು. ಈಕೆ ಇಂದು ನಿಧಾನದಿಂದ ಸ್ನಾನಮಾಡಿ ಸಾಯಂಕಾಲದಲ್ಲಿ ಮನೆಗೆ ಬರುತ್ತಿರುವಲ್ಲಿ ಮಧ್ಯಮಾರ್ಗದಲ್ಲಿ ಹಠಾತ್ತಾಗಿ ಯುವರಾಜಮಂತ್ರಿ ಮುಂದೆ ಬಂದು ಇವಳನ್ನು ತಡೆದು ಪೀಡಿಸಿದನು. ಇದರಿಂದ ಸುತ್ತಮುತ್ತಲೂ ನೋಡಿ ಯಾರೂ ಇಲ್ಲದೆ ತಾನು ಅನಾಥೆಯಾಗಿರುವುದನ್ನು ಕಂಡು, ಒಂದು ಕ್ಷಣಯೋಚಿಸಿ, ಧೈರ್ಯಗೆಡದೆ ಪ್ರತಿಭೆಯಿಂದ ಹೀಗೆಂದಳು. "ಆರ್ಯ, ನನ್ನ ಸತ್ಕುಲವನ್ನೂ, ಪತಿಪ್ರವಾಸವನ್ನೂ ಚೆನ್ನಾಗಿ ತಿಳಿದೂ ಕೂಡ ಇಷ್ಟು ಅವಸರಪಡಿಸಲೇಕೆ? ಇದೇನಾದರೂ ತಕ್ಕ ಕಾಲದೇಶವಾಗಿದೆಯೇ? ಇದು ಬಿಟ್ಟು ನಾಳೆಯಾದರೋ ಊರಿನ ಜನರೆಲ್ಲರೂ ವಸಂತೋತ್ಸವದ ಸಂಭ್ರಮವನ್ನು ನೋಡುವುದರಲ್ಲಿ ನಿರತರಾಗಿರುವಾಗ ರಾತ್ರಿ ಮೊದಲನೆಯ ಯಾಮಕ್ಕೆ ನಮ್ಮ ಮನೆಗೆ ಬಂದರೆ ಅನುಕೂಲವಾಗುವುದಿಲ್ಲವೇ? ಯೋಚಿಸಿ ನೋಡು." ಹೀಗೆ ಹೇಳಿ ಅವನಿಂದ ತಪ್ಪಿಸಿಕೊಂಡು ಮುಂದೆ ಹೋಗುವಲ್ಲಿ ಕಾಮಾಂಧನಾದ ಪುರೋಹಿತನು ಇವಳನ್ನು ತಡೆದನು. ಮೊದಲಂತೆಯೇ ಹೇಳಿ ಇವನಿಗೂ ಕೂಡ ಆ ಮಾರನೆಯ ರಾತ್ರಿಯ ಎರಡನೆಯ ಯಾಮಕ್ಕೆ ಬರುವಂತೆ ಹೇಳಿ ಪತಿಪಾದವನ್ನು ಸ್ಮರಿಸುತ್ತ ಮುಂದೆ ನಡೆದಳು. ಅಷ್ಟರಲ್ಲಿ ಸೇನಾಪತಿ ಬಂದು ಅಡ್ಡಗಟ್ಟಲು ಅವನಿಗೂ ಹೀಗೆಯೇ ಮೂರನೆಯ ಜಾವಕ್ಕೆ ಬರುವಂತೆ ಹೇಳಿ ಇಷ್ಟು ಮಟ್ಟಿಗಾದರೂ ದುಷ್ಟರ ಕೈಯಿಂದ ಪಾರಾದೆನಲ್ಲ ಎಂದು ದೇವರನ್ನು ಸ್ತೋತ್ರಮಾಡುತ್ತ ಮನೆಯನ್ನು ಸೇರಿ, 'ಹಾದೇವ, ಇಂತಹ ಸುಂದರ ದೇಹವನ್ನು ಕೊಟ್ಟು ನನ್ನನ್ನು ಏಕೆ ಇಷ್ಟೊಂದು ಕಷ್ಟಕ್ಕೂ ಅವಮಾನಕ್ಕೂ ಗುರಿಮಾಡುವೆ?' ಎಂದು ಹೇಳಿ ಬಹುವಾಗಿ ವ್ಯಸನಪಟ್ಟಳು. "ಹಾ ದೇವಾಧಿದೇವ ! ನಡತೆ ಕೆಟ್ಟಮೇಲೆ ಜೀವವಿದ್ದೇನು ಫಲ? ಎಷ್ಟು ರೂಪವಿದ್ದೇನು ಫಲ ? ಈ ನಶ್ವರವಾದ ರೂಪಿನಿಂದ ನಮ್ಮನ್ನು ಏಕೆ ತಾನೆ ಧೂರ್ತರ ಪಾಲು ಮಾಡುವೆ ? ನಮ್ಮಂಥವರಿಗೆ ಮರಣವೇಉತ್ತಮವಲ್ಲವೆ? ಇಲ್ಲದಿದ್ದರೆ ಎಷ್ಟು ಹಾನಿಯಾದೀತು? " ಎಂದು ಹೇಳಿ ಅಳುತ್ತ ಕುಳಿತಳು. ಆದರೆ ಇವಳ ದಾದಿಯರು ಕೂಡಲೇ ಬಂದು. "ಅಮ್ಮಾ, ನೀವು ಇಷ್ಟಕ್ಕಾಗಿ ಏಕೆ ಅಳಬೇಕು ? ಏಕೆ ಪರಿತಪಿಸಬೇಕು ? ಇರಲಿ. ಆ ದುಶ್ಶೀಲರು ನಮ್ಮ ಮನೆಗೂ ಬರಲಿ. ಮುಂದಿನ ವಿಚಾರವನ್ನೆಲ್ಲಾ ನಾವು ನೋಡಿಕೊಳ್ಳಲು ಸಿದ್ಧರಾಗಿರುವಾಗ ನೀವು ಏಕೆ ಕಾತರಪಡುತ್ತೀರಿ ? ಅದುವರೆವಿಗೂ ಸ್ವಲ್ಪ ವಿಶ್ರಮಿಸಿಕೊಳ್ಳಿ" ಎಂದು ಹಲವು ವಿಧದಿಂದ ಧೈರ್ಯ ಹೇಳಿ ಸಮಾಧಾನ ಪಡಿಸಿದರು. ರಾತ್ರಿ ಹೇಗೋ ಕಳೆಯಿತು. ಬೆಳಗಾದ ಕೂಡಲೇ ಉಪಕೋಶ ತನ್ನ ಸಖಿಯೊಬ್ಬಳಿಗೆ ವರ್ತಕನಲ್ಲಿ ಹೋಗಿ ಪೂಜಾಕಾರ್ಯಕ್ಕಾಗಿ ನಮ್ಮ ಯಜಮಾನರು ಕೊಟ್ಟ

ರುವ ದುಡ್ಡಿನಲ್ಲಿ ಸ್ವಲ್ಪವನ್ನು ತಾರೆಂದು ಹೇಳಿ ಕಳು ಹಿಸಿದಳು. ಆದರೋ ಆ ಪಾಪಿಷ್ಟನು ತಾನೇ ಬಂದು, "ಆರ್ಯಳೆ, ನಿನ್ನ ಲಾವಣ್ಯಾತಿಶಯದಿಂದ ಮೊದಲು ನನ್ನನ್ನು ಸೇವಿಸು. ಇಲ್ಲದಿದ್ದರೆ, ಸಾಕ್ಷಿಯಿಲ್ಲದ ನಿನ್ನ ಗಂಡನ ದುಡ್ಡಿನಲ್ಲಿ ಒಂದು ಕಾಸನ್ನೂ ಕೊಡೆನೆಂ"ದನು. ಇಂಥಾ ವಜ್ರಕಠೋರವಾದ ನಿರ್ಲಜ್ಜತನದ ಮಾತನ್ನು ಕೇಳಿ ಮೈನಡುಗುತ್ತಿದ್ದ ಆ ನಾರೀಮಣಿ ಕ್ಷಣಕಾಲ ಯೋಚಿಸಿ ಧೈರ್ಯಗೊಂಡು "ಆಗಲಿ, ಇನ್ನೇನು ಮಾಡುವುದು! ಇವನೂ ಆ ಹಾಳು ಜನರ ದಾರಿಯನ್ನೇ ಹಿಡಿದನೆ"ಂದು ದುಃಖಿಸಿ, ಉಳಿದಿದ್ದ ಆರಾತ್ರಿಯ ನಾಲ್ಕನೆಯ ಜಾವದಲ್ಲಿ ಬಂದು ನೋಡೆಂದು ಹೇಳಿ ಕಳು ಹಿಸಿದಳು.

೧೨. ಅನಂತರ ರಾತ್ರಿಗಾಗಿ ಬೇಕಾದ ಸಲಕರಣೆಗಳನ್ನು ಸಿದ್ಧಮಾಡಿಕೊಂಡು ದಾದಿಯರಿಂದೊಡಗೂಡಿ ಮುಂದೇನಾಗುವುದೋ ಎಂದು ಭಯವ್ಯಸನಗಳಿಂದ ಕೂಡಿ ನಿರೀಕ್ಷಿಸುತ್ತಿದ್ದಳು. ರಾತ್ರಿಯಾಯಿತು. ಆಗಲೇ ಬಹುವೇಶಾಡಂಬರದಿಂದ ಯಾರೂ ಕಾಣದಂತೆ ಕತ್ತಲಿನಲ್ಲಿ ಯುವರಾಜಮಂತ್ರಿ ಇವರ ಮನೆಯೊಳಗೆ ಪ್ರವೇಶಿಸಿದನು. ಆವರೆ ಕೂಡಲೇ ದಾದಿಯರು ಮುಂದೆ ಬಂದು, "ಸ್ನಾನಮಾಡದಿರುವ ನಿನ್ನನ್ನು ನಮ್ಮ ಯಜಮಾನಿ ಎಂದಿಗೂ ಮುಟ್ಟಲೊಪ್ಪಳು" ಎಂದು ಹೇಳಿ, ಸ್ನಾನಕ್ಕಾಗಿ ಅವನನ್ನು ಆದರದಿಂದ ಮನೆಯೊಳಗೆ ಕರೆದುಕೊಂಡು ಹೋಗಿ, ಕತ್ತಲು ಕೊಠಡಿಯೊಂದರಲ್ಲಿ ಅವನ ಸರ್ವ ವಸ್ತ್ರಾಭರಣಗಳನ್ನು ತೆಗಿಸಿಟ್ಟು, ಘಮಘಮಿಸುವ ಕಸ್ತೂರಿಕಾದಿ ಪರಿಮಳಯುಕ್ತವಾದ ಎಣ್ಣೆಯನ್ನು ಒತ್ತುವ ನೆವದಲ್ಲಿ ಸರಸಸಲ್ಲಾಪಗಳಿಂದ ಕಾಲವನ್ನು ಕಳೆದರು. ಇಷ್ಟರಲ್ಲಿ ಎರಡನೆಯ ಜಾವವಾಗಿ ರಾಜಪುರೋಹಿತನು ಬರಲು, ಆ ಕತ್ತಲು ಕೋಣೆಯಲ್ಲೇ ಇಷ್ಟೊಂದು ಅಭ್ಯಂಜನ ಸೌಖ್ಯದಲ್ಲಿದ್ದು, ತನ್ನ ಮನದಲ್ಲಿ ಏನೇನೋ ಸಾವಿರಾರು ಸಂತೋಷಗಳನ್ನು ಕಟ್ಟಿಸಿಕೊಳ್ಳುತ್ತಿದ್ದ ಮಂತ್ರಿಗೆ ದಾದಿಯರು "ಈಗೇನು ಮಾಡುವುದು? ನಮ್ಮ ಗೃಹಸ್ವಾಮಿಯಾದ ವರರುಚಿಯ ಮಿತ್ರನಾದ ರಾಜಪುರೋಹಿತನು ಬಂದನಲ್ಲ? ಒಳ್ಳೆಯದು, ಸದ್ಯಕ್ಕೆ ನೀವು ಇದರೊಳಗೆ ಇರಿ" ಎಂದು ಹೇಳಿ, ಅವನನ್ನು ದೊಡ್ಡ ಪೆಟ್ಟಿಗೆಯೊಂದರಲ್ಲಿ ಸೇರಿಸಿ, ಹೊರಗಿನ ಬಾಗಿಲನ್ನು ಭದ್ರವಾಗಿ ಮುಚ್ಚಿಬಿಟ್ಟರು. ಆಮೇಲೆ ಪುರೋಹಿತನಲ್ಲಿ ಬಂದು ಅವನನ್ನು ಇದೇರೀತಿಯಲ್ಲಿ ಸರಸ ಮಾತುಗಳಿಂದ ಒಲಿಸಿಕೊಂಡು ಎಣ್ಣೆ ಒತ್ತುತ್ತ, ಸೇನಾಪತಿ ಬರುವ ಹೊತ್ತಿಗೆ ಇವನನ್ನೂ ಅದೇ ಪೆಟ್ಟಿಗೆಯಲ್ಲಿ ಸೇರಿಸಿ ಬಂಧಿಸಿದರು. ಇದರಂತೆಯೇ ಶೆಟ್ಟಿ ಬರುವವರೆಗೂ ಸೇನಾಪತಿಯನ್ನು ಅಭ್ಯಂಜನ ಮಾಡಿಸುವ ನೆವದಲ್ಲಿ ಮೂಢನನ್ನಾಗಿ ಮಾಡಿ ಅವನು ಬಂದ ಕೂಡಲೇ ಯಥಾಪ್ರಕಾರವಾಗಿ ಇವನನ್ನೂ ಕೂಡ ಅದೇ ಪೆಟ್ಟಿಗೆಯಲ್ಲಿ ಹಾಕಿ ಬೀಗಮುದ್ರೆ ಮಾಡಿದರು. ಇಷ್ಟಾದರೂ ಆ ದುರಾತ್ಮರು ಪೆಟ್ಟಿಗೆಯಲ್ಲಿ ಪರಸ್ಪರವಾಗಿ ಒಬ್ಬರನ್ನೊಬ್ಬರು ಮುಟ್ಟುತ್ತಿದ್ದರೂ ನಾಚಿಕೆಯಿಂದಲೂ ಭಯದಿಂದಲೂ ಯಾವ ಮಾತನ್ನೂ ಆಡದೆ ಸ್ತಬ್ಧವಾಗಿ ನಿಂತಿದ್ದರು. ಇಷ್ಟರಲ್ಲಿ ತನ್ನ ಶರೀರವನ್ನೂ ಹಾಳು ಹಣೇಬರಹವನ್ನೂ ಬಹುವಾಗಿ ನಿಂದಿಸುತ್ತಿದ್ದ ಉಪಕೋಶೆ ದಾದಿಯರಿಂದ ಕೊಂಚ ಧೈರ್ಯಗೊಂಡು ತನ್ನ ಮನಸ್ಸನ್ನು ಸ್ವಲ್ಪ ಸಮಾಧಾನಕ್ಕೆ ತಂದುಕೊಂಡು, ಮುಂದೆ ನಿಂತಿರುವ ಶೆಟ್ಟಿಯನ್ನು, "ನಮ್ಮ ಯಜಮಾನರು ನಿನ್ನ ಕೈಯಲ್ಲಿ ಕೊಟ್ಟಿರುವ ಹಣವನ್ನು ನನಗೆ ಕೊಡು" ಎಂದು ಕೇಳಿದಳು. "ಹಾಗೆಯೇ ಆಗಲಿ, ಕೊಡುತ್ತೇನೆ" ಎಂದು ಅವನು ಹೇಳಿದಮಾತನ್ನು ಕೇಳಿದಕೂಡಲೇ, ಆ ಪೆಟ್ಟಿಗೆಯಲ್ಲಿರುವವರು ಕೇಳುವಂತೆ ಈಕೆ ಗಟ್ಟಿಯಾಗಿ, "ಭೋ ಗೃಹದೇವತೆಗಳಿರಾ, ಕೇಳಿ, ಕೇಳಿ. ಈ ನಮ್ಮ ಹಿರಣ್ಯಗುಪ್ತನು ಹೇಳಿದ ಮಾತನ್ನು ಕೇಳಿ" ಎಂದು ಕೂಗಿ ಹೇಳಿದಳು.

ಅನಂತರ ದಾದಿಯರು ಇವನಿಗೂ ಯಥಾಕ್ರಮದಿಂದ ಅಭ್ಯಂಜನಮಾಡಿಸುವ ನೆವದಲ್ಲಿ ಕಾಲತಳ್ಳಿ, "ಇನ್ನೇಕೆ ತಡ! ರಾತ್ರಿಯೆಲ್ಲಾ ಕಳೆದು ಬೆಳಕು ಹರಿಯುತ್ತಿದೆ. ಮನೆಬಿಟ್ಟು ಹೊರಡೋ, ನೀಚ" ಎಂದು ಹೇಳುತ್ತ ಯಾವ ಮಾತನ್ನೂ ಕೇಳದೆ ಅರ್ಧಚಂದ್ರಪ್ರಯೋಗಮಾಡಿ ಇವನನ್ನು ತಮ್ಮ ಮನೆಯಿಂದ ಆಚೆಗೆ ತಳ್ಳಿಬಿಟ್ಟರು.

೧೩. ಇದೆಲ್ಲ ಹೇಗಾದರೂ ಇರಲಿ. ಮಾರನೆಯ ಪ್ರಾತಃಕಾಲ ದಾದಿಯರಿಂದೊಡಗೂಡಿ ನಮ್ಮ ಪತಿವ್ರತಾ ಶಿರೋಮಣಿ ನಂದ ಮಹಾರಾಜನ ಅರಮನೆಗೆ ಬಂದು ಅವನಲ್ಲಿ, "ಹೇ ದೇವ, ಈ ಊರಿನ ಹಿರಣ್ಯಗುಪ್ತ ಶೆಟ್ಟಿ ನಮ್ಮ ಯಜಮಾನರು ತನ್ನಲ್ಲಿ ಕೊಟ್ಟಿದ್ದ ಹಣವನ್ನು ಈಗ ಇಲ್ಲವೆಂದು ಹೇಳಿ ಮೋಸಮಾಡುತ್ತಾನೆ. ಆದುದರಿಂದ ಅದನ್ನು ತಾವು ದಯವಿಟ್ಟು ಕೊಡಿಸಬೇಕೆಂ"ದು ಪ್ರಾರ್ಥಿಸಿದಳು. ಅನಂತರ ರಾಜನಿಂದ ರಾಜಾಸ್ಥಾನಕ್ಕೆ ಕರಿಸಲ್ಪಟ್ಟು ಆ ಶೆಟ್ಟಿ, "ಈಕೆಯ ಹಣವು ನನ್ನಲ್ಲಿ ಒಂದು ಕಾಸೂ ಇಲ್ಲವೆಂ"ದು ಪ್ರಮಾಣಮಾಡಿ ಹೇಳಿದನು. ಅದರಿಂದ ಉಪಕೋಶೆ "ಮಹಾರಾಜ, ಸಾಕ್ಷಿಗಳೆಂದರೆ ಈ ವಿಷಯದಲ್ಲಿ ನಮ್ಮ ಯಜಮಾನರಿಂದ ನಮ್ಮ ಮನೆಪೆಟ್ಟಿಗೆಯಲ್ಲಿ ಇಡಲ್ಪಟ್ಟಿರುವ

ದೇವತೆಗಳೇ ಹೊರತು ಬೇರೆ ಯಾರನ್ನೂ ನಾನು ಕಾಣೆ. ಇವರ ಮುಂದೆ ಈ ಶೆಟ್ಟಿ ತಾನಾಗಿಯೇ ಈ ಧನವು ತನ್ನಲ್ಲಿ ರುವುದೆಂದೂ, ಅದನ್ನು ನನಗೆ ಕೊಡುವೆನೆಂದೂ ಒಪ್ಪಿಕೊಂಡಿದ್ದಾನೆ. ಆದುದರಿಂದ ಇದೆಲ್ಲವನ್ನೂ ತಾವು ದಯವಿಟ್ಟು ವಿಚಾರಿಸಬೇಕೆಂ"ದು ಪ್ರಾರ್ಥಿಸಿದಳು. ಇಷ್ಟು ಧೈರ್ಯದಿಂದ ಹೇಳಿದ ಮತ್ತು ತಾನು ಹಿಂದೆ ಎಂದೂ ಕೇಳದ ಮಾತಿನಿಂದ ಆಶ್ಚರ್ಯಗೊಂಡ ಮಹಾರಾಜನು ತನ್ನ ಭಟರಿಂದ ಆ ಪೆಟ್ಟಿಗೆಯನ್ನು ಸಭೆಗೆ ತರಿಸಿಕೊಂಡನು. ಆಗ ಆ ಸಾಧ್ವಿ ಮಣಿ, 'ಭೋ ದೇವತೆಗಳಿರಾ, ಈ ಹಿರಣ್ಯಗುಪ್ತಶೆಟ್ಟಿ ಏನು ಹೇಳಿದನೋ ಅದನ್ನು ಯಥಾವತ್ತಾಗಿ ಹೇಳಿಬಿಡಿ. ಅನಂತರ ನೀವು ನಿಮ್ಮ ಮನೆಗೆ ಹೋಗಿ" ಎಂದು ಗಟ್ಟಿಯಾಗಿ ಹೇಳಿದಳು. ಇದರಿಂದ ಸಭೆಯಲ್ಲಿ ತಮ್ಮ ಗುಟ್ಟು ಇನ್ನೆಲ್ಲಿ ಬೈಲಾಗುತ್ತದೆಯೋ ಎಂಬ ಭಯದಿಂದ ಬಹುವಾಗಿ ನಡುಗುತ್ತಿದ್ದ ಆ ಧೂರ್ತಾಗ್ರೇಸರರು, "ಹೌದು, ನಿಜವಾಗಿಯೂ ಇವನು ನಮ್ಮೆದುರಿಗೆ ಈ ಧನವನ್ನು ಕೊಡುತ್ತೇನೆಂದು ಒಪ್ಪಿಕೊಂಡಿದ್ದಾನೆಂ"ದು ಹೇಳಿದರು. ಇದರಿಂದ ನಿರುತ್ತರನಾದ ಶೆಟ್ಟಿ ತನ್ನಲ್ಲಿ ಇಟ್ಟಿದ್ದ ಧನವನ್ನೆಲ್ಲಾ ಈಗ ತಂದೊಪ್ಪಿಸಿ ದ್ದನು.

೧೬. ಅನಂತರ ಈ ವಿಷಯದಲ್ಲಿ ನಿಜವೇನೆಂದು ಮಹಾರಾಜನಿಂದ ಬಹುವಾಗಿ ಪ್ರಾರ್ಥಿಸಲ್ಪಟ್ಟ ಆ ನಾರೀಮಣಿ ಆ ಸಭೆಯಲ್ಲಿಯೇ ಪೆಟ್ಟಿಗೆಯ ಬಾಗಿಲನ್ನು ತೆಗೆದು ಎಲ್ಲರ ಮುಂದೆಯೂ ಆ ಪುರುಷಾಧಮರನ್ನು ಈಚೆಗೆಳೆದಳು. ಸಭೆಯವರಲ್ಲಿ ಎಲ್ಲರೂ ಇವರನ್ನು ಬಹಳವಾಗಿ ಧಿಕ್ಕರಿಸಿದರು. ಆ ಮೇಲೆ ಇವರ ಗುಟ್ಟೇನೆಂದು ಆ ಧಾರ್ಮಿಕ ಮಹಾರಾಜನಿಂದ ಕೇಳಲ್ಪಟ್ಟು ಆ ಸಾಧ್ವೀಮಣಿ ಇವರ ಚರಿತ್ರೆಯನ್ನೆಲ್ಲಾ ಯಥಾವತ್ತಾಗಿ ತಿಳಿಸಿದಳು. ಸಭೆಯವರೆಲ್ಲರೂ "ಶೀಲವತಿಯರಾದ ಕುಲಸ್ತ್ರೀಯರ ಚರಿತ್ರೆ ಅಜೇಂಕ್ಯವಾದುದೇ ಸರಿ" ಎಂದು ಬಹಳವಾಗಿ ಸ್ತೋತ್ರಮಾಡಿದರು. ಮತ್ತು ಪರಸ್ತ್ರೀಕಾಮುಕರಾದ ಆ ನಾಲ್ಕುಜನರನ್ನೂ ವೃದ್ಧನಾದ ಮಹಾರಾಜನು ಅವರ ಸರ್ವಸ್ವವನ್ನೂ ಕಿತ್ತುಕೊಂಡು ದೇಶಭ್ರಷ್ಟರನ್ನಾಗಿ ಮಾಡಿದನು. ಅವರೂಕೂಡ ಚಂಡಾಲರಿಂದಲೂ ಧಿಕ್ಕರಿಸಲ್ಪಟ್ಟು, ಜಿಗುಪ್ಸಿತವಾದ ತಮ್ಮ ಪ್ರಾಣಗಳನ್ನು ಸ್ವಲ್ಪಕಾಲದಲ್ಲಿಯೇ ಕಳೆದುಕೊಂಡರು. ಹೀಗೆಯೇ ಆ ಸಾಧ್ವೀಮಣಿಯನ್ನು ಆ ಧಾರ್ಮಿಕ ರಾಜನು ಬಹುವಾಗಿ ಸತ್ಕರಿಸಿದುದಲ್ಲದೆ, ಈ ವಿಷಯಗಳೆಲ್ಲವನ್ನೂ ಚೆನ್ನಾಗಿ ತಿಳಿದ ವರ್ಷೋಪವರ್ಷರುಗಳೂ ಕೂಡ ಸ್ತುತಿಸಿದರು. ಮತ್ತಿವಳನ್ನು ಆ ಊರಿನವರೆಲ್ಲರೂ ಪಾತಿವ್ರತ್ಯದ ಪ್ರತ್ಯಕ್ಷ ದೇವತೆ ಎಂದು ಪೂಜಿಸಿದರು. ಉಪಕೋಶೆ ಮಾತ್ರ ಅನವರತವೂ ಪತಿಪಾದವನ್ನೇ ಮನದಲ್ಲಿ ನೆನೆಯುತ್ತ ಬಹು ಕಷ್ಟದಿಂದ ಮನೆಯಿಂದ ಹೊರಗೆ ಹೋಗದೆಯೆ ಕಾಲವನ್ನು ಕಳೆಯುತ್ತಿದ್ದಳು.

**೧೫. ವರರುಚಿಯ ತಪಸ್ಸಿದ್ಧಿ ಮತ್ತು ವ್ಯಾಕರಣ ಪೂರ್ತಿಮಾಡುವುದು** :—ಇಷ್ಟರಲ್ಲಿ ವರರುಚಿಯ ತೀವ್ರ ತಪಸ್ಸಿಗೆ ಮೆಚ್ಚಿ ಈಶ್ವರನು ಇವನಿಗೆ ಪಾಣಿನೀಯ ಶಾಸ್ತ್ರವನ್ನು ಸಂಪೂರ್ಣವಾಗಿ ಕಲಿತು ಅದನ್ನು ಇನ್ನೂ ಉತ್ತಮ ರೀತಿಯಲ್ಲಿ ರಚಿಸುವಂತೆ ಅನುಗ್ರಹಿಸಿದನು. ಈ ವ್ಯಾಕರಣ ಶಾಸ್ತ್ರದಲ್ಲೇ ಪಾಣಿನಿಯ ಅಷ್ಟಾಧ್ಯಾಯಕ್ಕೆ ವಾರ್ತಿಕಕಾರನಾಗಿ ಇದುವರೆಗೆ ಸರ್ವರಿಂದಲೂ ಪೂಜಿಸಲ್ಪಡುತ್ತಿದ್ದಾನೆ. ಇವನಿಂದ ಮುಂದೆ ಬಂದ ಪತಂಜಲಿ ಮಹರ್ಷಿಗಳು (ಸುಮಾರು ಕ್ರಿ. ಪೂ. ೧೫೫ರಲ್ಲಿ) ಇವರಿಂದ ರಚಿತವಾದ "ವರರುಚಿ ಕಾವ್ಯ" ವೊಂದಿತ್ತೆಂದು ಹೇಳುತ್ತಾರೆ; ಆದರೆ ಆ ಗ್ರಂಥವು ನಮಗಿನ್ನೂ ದೊರೆತಿಲ್ಲ. ಹೀಗೆ ಕಾತ್ಯಾಯನನು ತಪಸ್ಸಿದ್ಧಿಯಿಂದ ಕೀರ್ತಿವಂತನಾಗಿ ಊರಿಗೆ ಹಿಂತಿರುಗಿ ಬಂದು ತನ್ನ ತಾಯಿಗೂ ಗುರುಗಳಿಗೂ ಅಭಿವಂದಿಸಿದನು, ಮತ್ತಿವರಿಂದ ಪತ್ನಿಯ ಉದಾರಚರಿತ್ರೆಯನ್ನು ಕೇಳಿ ಸಂತೋಷಪಟ್ಟನು. ಇಂಥಾ ಸತ್ಪತ್ನಿ ಇದ್ದಮೇಲೆ ಗಾರ್ಹಸ್ಥ್ಯದ ಶ್ಲಾಘ್ಯತೆಯನ್ನು ಎಷ್ಟೆಂದು ಹೇಳಿದರೂ ತೀರದೆಂದು ದೇವತೆಗಳನ್ನು ವಂದಿಸಿದನು.

**೧೬. ಗುರುದಕ್ಷಿಣೆ ಮತ್ತು ಇಂದ್ರದತ್ತನ ಪರಕಾಯ ಪ್ರವೇಶ** :—ಇದಾದಮೇಲೆ ವರರುಚಿಯು ಮುಖದಿಂದ ಕೇಳಬೇಕೆಂದಿದ್ದ ನವವ್ಯಾಕರಣವನ್ನು ವರ್ಷೋಪಾಧ್ಯಾಯರಿಗೆ ಕುಮಾರಸ್ವಾಮಿ ತಾನಾಗಿಯೇ ಸಂಪೂರ್ಣವಾಗಿ ತಿಳಿಸಿದನು. ಮತ್ತಿದನ್ನು ವ್ಯಾಡೀಂದ್ರದತ್ತರು ವರ್ಷೋಪಾಧ್ಯಾಯರಿಂದ ಸಾಂಗವಾಗಿ ಕಲಿತರು. ಅನಂತರ ಒಂದು ದಿವಸ ಇವರಿಬ್ಬರೂ ಗುರುವನ್ನು ಸಮೀಪಿಸಿ, "ಇನ್ನು ನಮ್ಮ ವಿದ್ಯೆಯೇನೋ ತಮ್ಮ ಮಹಾನುಗ್ರಹದಿಂದ ಸಾಂಗವಾಗಿ ಪೂರ್ಣವಾಯಿತು. ಆದರೆ ತಮಗೆ ಗುರುದಕ್ಷಿಣೆಯನ್ನೇನು ಕೊಡಬೇಕೊ ನಮಗೆ ತಿಳಿಯದು. ದಯವಿಟ್ಟು ಹೇಳಬೇಕೆಂ"ದು ಬಹು ನಮ್ರವಾಗಿ ಪ್ರಾರ್ಥಿಸಲು ಅವರು ಒಂದು ಕೋಟಿ ವರಹವನ್ನು ಕೇಳಿದರು. ಆಗಲೆಂದು ಒಪ್ಪಿಕೊಂಡು

ಅಣ್ಣತಮ್ಮಂದಿರಿಬ್ಬರೂ ವರರುಚಿಯಲ್ಲಿ ಬಂದು, "ತವ್ಮಾ, ವರರುಚಿ, ಇಷ್ಟು ಭೂರಿದಕ್ಷಿಣೆಯನ್ನು ಅ 'ಣಿತ ದ್ರವ್ಯಾಧೀಶ್ವರನಾದ ನಂದಭೂಪಾಲನಲ್ಲಿ ಅಲ್ಲದೆ ಇನ್ನೆಲ್ಲಿಯೂ ಪಡೆಯಲಾಗುವುದಿಲ್ಲ. ಮತ್ತು ಪೂರ್ವದಲ್ಲಿಯೇ ಅವನು ನಿನ್ನ ಭಾರ್ಯೆಯನ್ನು ತನ್ನ ಧರ್ಮಸೋದರಿಯಂತೆ ಭಾವಿಸಿದ್ದಾನೆ. ಆದುದರಿಂದ ನೀನು ಬಂದು ಕೇಳಿದರೆ ಇಷ್ಟು ಹಣವನ್ನು ಕೊಡುವನು. ಈಗವನು ಅಯೋಧ್ಯೆಯಲ್ಲಿರುವನು. ನಾವು ಕೂಡ ಅಲ್ಲಿಗೆ ಹೋಗೋಣ ಬಾ" ಎಂದು ಕರೆದರು. ಹಾಗೆಯೇ ಆಗಲೆಂದು ಒಪ್ಪಿಕೊಂಡು ಇವನೂ ಕೂಡ ತನ್ನ ಪ್ರಿಯಮಿತ್ರರೊಡನೆ ಹೊರಟನು. ಇವರೆಲ್ಲರೂ ಜಾಗ್ರತೆಯಾಗಿ ಬಂದು ಅಯೋಧ್ಯೆಯನ್ನು ಸೇರಿದರು. ಆದರದೇನು ಮಹಾಶೋಕವು? ಈಗ ತಾನೆ ನಂದಭೂಪಾಲನು ಪರಲೋಕವನ್ನೈದಿದ್ದನು. ಎಲ್ಲೆಲ್ಲಿಯೂ ಹಾಹಾಕಾರವಿದ್ದಿತು !

೧೭. ಆದರೂ ಧೈರ್ಯಗೆಡದೆ ಇಂದ್ರದತ್ತನು ತನ್ನ ಮಿತ್ರರನ್ನು ಕುರಿತು ಹೀಗೆ ಹೇಳಿದನು, "ಈಗ ನಾವು ಬರಿ ಕೈಯಲ್ಲಿ ತಿರುಗಿ ಹೋಗುವುದಕ್ಕಾಗುವುದಿಲ್ಲ. ಆದುದರಿಂದ ಸದ್ಯಕ್ಕೆ ನನಗೆ ಬರುವ ಯೋಗವಿದ್ಯೆಯಿಂದ ಈ ನಂದಮಹಾರಾಜನ ಶರೀರವನ್ನು ಸೇರುತ್ತೇನೆ. ಕೂಡಲೇ ವರರುಚಿ ಬಂದು ನನ್ನಲ್ಲಿ ಈ ದ್ರವ್ಯವನ್ನು ಬೇಡಲಿ. ಮತ್ತು ನಾನು ಹಿಂತಿರುಗಿ ನನ್ನ ನಿಜಶರೀರಕ್ಕೆ ಬರುವವರೆಗೂ ವ್ಯಾಡಿ ಈ ದೇಹವನ್ನು ಈ ಹಾಳುದೇವಾಲಯದಲ್ಲಿ ಕಾಯುತ್ತಿರಲಿ." ಇದಕ್ಕೆ ಅವರಿಬ್ಬರೂ ಒಪ್ಪಲು ಮುಂದಿನ ಕಾರ್ಯದಲ್ಲಿ ಅವರೆಲ್ಲರೂ ಸೇರಿ ಪ್ರವೃತ್ತರಾದರು.

೧೮. ಈ ಮಧ್ಯೆ ಮಹಾರಾಜನ ಮರಣವಾರ್ತೆಯಿಂದ ಲೋಕವೇ ನಿರಾನಂದವಾಗಿ ಪರಿಣಮಿಸಿತು. ಅರಮನೆಯಲ್ಲಿ ಎಲ್ಲೆಲ್ಲಿಯೂ ಹಾಹಾಕಾರವು ತುಂಬಿದ್ದಿತು, ಶಕಟಾಲನೇ ಮೊದಲಾದ ಮಂತ್ರಿವರ್ಯರು ಅಂತಃಪುರಕ್ಕೆ ಬಂದು ಅಲ್ಲಿಯ ಶೋಕವನ್ನು ನಿಲ್ಲಿಸಲು ಪ್ರಯತ್ನ ಮಾಡುತ್ತಿದ್ದರು. "ಅನಾಥರಾದೆವಲ್ಲಾ, ನಮ್ಮನ್ನು ಸಂತಸಗೊಳಿಸುವರು ಇನ್ಯಾರಿರುವರೆ"ಂದು ಸ್ತ್ರೀಜನವು ಗೋಳಿಡುತ್ತಿರುವಲ್ಲಿ, ಅಮಾತ್ಯಗು "ರಾಜ್ಯವು ಅನಾಯಕವಾಯಿತಲ್ಲ; ರಾಜಕುಮಾರನಾದ ಚಂದ್ರಗುಪ್ತನು ಇನ್ನೂ ಬಾಲಕನು. ಶತ್ರುಗಳಾದರೋ ಇಂಥ ದುರವಸ್ಥೆಯನ್ನೇ ಎರಡು ಹೊತ್ತೂ ಎದುರುನೋಡುತ್ತಿರುವರು. ಇನ್ನು ನಾನೆಷ್ಟು ಜಾಗ್ರತೆಯಿಂದಿರಬೇಕೋ" ಎಂದು ಪರಿತಪಿಸುತ್ತಿದ್ದರು. ಶಕಟಾಲನೂ ರಾಜನನ್ನು ಹೀಗೆ ದುಃಖದಿಂದ ನೋಡುತ್ತಿರಲು ಅವನಲ್ಲಿ ಸ್ವಲ್ಪ ಜೀ[illegible] ಕಳೆಯನ್ನು ಕಂಡು ಶಿರಸ್ಸನ್ನು ಮುಟ್ಟಿದನು, ನಂದಮಹಾರಾ[illegible]ಜನು ಎಚ್ಚರಿಸಲ್ಪಟ್ಟವನಂತೆ ಕಣ್ಣುಬಿಟ್ಟು "ಇಷ್ಟೇಕೆ[illegible] ರೋದನವೇತಕ್ಕೆ? ನಾನಿನ್ನೂ ಜೀವಿಸಿರುವೆನಲ್ಲ! ಇನ್ನೂ ನೂರು ವರ್ಷ ಬದುಕಿರುವೆನೆ"ಂದು ಮೆತ್ತಮೆತ್ತಗೆ ಹೇ[illegible] ತೊಡಗಿದನು.

೧೯. ಕೂಡಲೇ ಆ ರೋದನವೆಲ್ಲವೂ ನಿಂತು, "ಪ್ರಜೆಗಳ[illegible] ಪುಣ್ಯವಿಶೇಷದಿಂದ ಮಹಾರಾಜನು ಇನ್ನೂ ಬದುಕಿರುವನು[illegible] ಯಾರೋ ಒಬ್ಬ ಸಿದ್ಧಪುರುಷನು ನಮ್ಮ ರಾಜನನ್ನು ಜೀ[illegible]ದಿಂದುಳಿಸಿರುವನೆಂ"ದು ಜನಗಳೆಲ್ಲರೂ ಆನಂದಪರವ[illegible]ರಾದರು. ಇಂತಹ ಹರ್ಷೋತ್ಸವದಲ್ಲಿ ಕಂಚುಕಿಯೊಬ್ಬನ[illegible] ಮಹಾರಾಜರಲ್ಲಿ ಬಂದು "ಪ್ರಭೋ, ಪಾಟಲೀಪುತ್ರದಿಂ[illegible] ಬಂದು ತಮ್ಮ ದರ್ಶನಕ್ಕಾಗಿ ಸರ್ವಶಾಸ್ತ್ರಕೋವಿದನಾದ ವ[illegible]ರುಚಿಯೆಂಬೊಬ್ಬ ದ್ವಿಜೋತ್ತಮನು ಬಾಗಿಲಲ್ಲಿ ಕಾದಿರುವ[illegible]ನೆ"ಂದು ಬಿನ್ನವಿಸಲು, "ಸಾವಕಾಶಮಾಡದೆ ಕರೆದುಕೊಂಡು ಬಾ" ಎಂದು ರಾಜಾಜ್ಞೆಯಾಯಿತು.

೨೦. ಹೀಗೆ ಕಂಚುಕಿಗಳಿಂದ ದಾರಿತೋರಿಸಲ್ಪಟ್ಟ ವರ[illegible]ರುಚಿ ಮಹಾರಾಜನಲ್ಲಿ ಬಂದು, "ದೇವ, ನಾನು ಇಲ್ಲಿಗೊಂದು ಕಾರ್ಯಕ್ಕಾಗಿ ಬಂದೆನು. ಆದರೆ ಈ ವೇಳೆಯಲ್ಲಿ ಜನರೆಲ್ಲರೂ ತಮ್ಮ ದೀರ್ಘಾಯುರಾರೋಗ್ಯಕ್ಕಾಗಿ ಮಹೋತ್ಸವಮಾಡು[illegible]ತ್ತಿದ್ದಾರೆ. ನನಗೂ ಬಹಳ ಸಂತೋಷವಾಯಿತು. ಇ[illegible]ರಿಂದ, ಗುರುದಕ್ಷಿಣೆಯ ಸಲುವಾಗಿ ಹಣಕ್ಕಾಗಿ ಬಂ[illegible] ನನಗೆ ಒಂದು ಕೋಟಿ ದ್ರವ್ಯವನ್ನು ದಯವಿಟ್ಟು ಕೊಡಬೇಕೆಂ"ದು ಪ್ರಾರ್ಥಿಸಿದನು. ಮಹಾರಾಜನು ಹಾಗೆಯೇ ಆಗಲೆಂದು ಪ್ರಧಾನ ಸಚಿವನಾದ ಶಕಟಾಲನಿ[illegible] "ಈ ಸುವರ್ಣವನ್ನು ಇವನಿಗೆ ಕೊಡೆಂ"ದು ಆಜ್ಞಾಪಿಸಿದನು.

೨೧. ಮಂತ್ರಿಯಾದರೊ ಸೂಕ್ಷ್ಮಮತಿಯಾಗಿ, "ಆ[illegible] ಇದೇನು ಆಶ್ಚರ್ಯ ! ಸತ್ತವನು ಕೂಡಲೇ ಬದುಕುತ್ತಾನೆ[illegible] ಕೂಡಲೇ ಭಿಕ್ಷುಕನು ಎಲ್ಲಿಂದಲೋ ಬಂದು ಕೋಟಿ ದ್ರ[illegible]ವನ್ನು ಕೇಳುತ್ತಾನೆ. ರಾಜನಾದರೋ ಹಿಂದುಮುಂ[illegible] ಯೋಚಿಸದೆ ಕೊಡೆಂದು ಆಜ್ಞಾಪಿಸುತ್ತಾನೆ. ಇ[illegible] ರಾಜ್ಯವೋ ಶತೃಬೃಂದಕ್ಕೆ ಒಳಗಾಗಿದೆ. ಯುವರಾಜನೋ ಕೇವಲ ಬಾಲಕನು. ಆದುದರಿಂದ ಈಗ ಯಾರೋ ದುಷ್ಟ[illegible] ಕುತಂತ್ರದಿಂದ ರಾಜನ ದೇಹವನ್ನು ಆಕ್ರಮಿಸಿರಬೇಕು[illegible] ಇವನೆಂದಿಗೂ ನಿಜವಾದ ಪೂರ್ವದ ನಂದನಲ್ಲ. ಆ[illegible]

...ನ ನೋಡಲು ಇಲ್ಲಿ ಬಂದಿರುವ ಪುರುಷನನ್ನು ಈ ರಾಜ ...ದೇಹದಲ್ಲಿಯೇ ಗಟ್ಟಿಮಾಡುವುದು ಅವಶ್ಯಕವಾಗಿದೆ. ಮತ್ತು ...ಕ್ಕಾಗಿ ಸುತ್ತಲಿರುವ ಮೃತ ಶರೀರಗಳನ್ನೆಲ್ಲಾ ಸುಡಿಸಿ ...ಡುವೆನೆ"ಂದು ನಿರ್ಧರಿಸಿ ಚಾರರನ್ನು ಬಿಟ್ಟು ನಿಮ್ಮ ಕಣ್ಣಿಗೆ ಬಿಪ್ಪ ಎಲ್ಲ ಮೃತಶರೀರಗಳನ್ನು ವಿಳಂಬಮಾಡದೆ ಸುಡಿಸಿರಿ ಎಂದು ಆಜ್ಞಾಪಿಸಿದನು. ಶಕಟಾಲನ ಆಜ್ಞೆಯಂತೆ ದೇವಾಲಯದಲ್ಲಿದ್ದ ಇಂದ್ರದತ್ತನ ದೇಹವೂ ವ್ಯಾಡಿಯಿಂದ ಬ್ರಹ್ಮಘಾತವಾಗುತ್ತೆಂದು ಎಷ್ಟು ತಡೆಯಲ್ಪಟ್ಟರೂ ಸುಡಲ್ಪಟ್ಟಿತು.

( ಮುಂದೆಸಾಗುವುದು )

---

# ತ್ರಿಪದಿ

ಲೇಖಕ:— ಶ್ರೀ. ಪ್ರಹ್ಲಾದ.

( ಆನೆಹು ಸಂಚಿಕೆಯಿಂದ ಮುಂದುವರಿದುದು. )

ತ್ರಿಪದಿ ಬೇರೂರಿರುವುದು ಹೆಂಗುಸರಲ್ಲಷ್ಟೇ ಅಲ್ಲ. ಗಂಡುಸರಲ್ಲಿಯೂ ಬೇರೂರಿದೆ. ಈಮಾತು ಮೇಲಿನ ಸಂಗತಿ ನಡೆದ ಮರುದಿವಸ ಗೊತ್ತಾಯಿತು. ಮರುದಿವಸ ನಿತ್ಯವಂತೆ ನಸುಕಿನಲ್ಲೆದ್ದು ಹೊರಗೆ ಹೋಗುವಷ್ಟರಲ್ಲಿ ಹಂತಿಯ ಹಾಡು ಕಿವಿಗೆ ಬಿದ್ದಿತು. ಇವೂ ತ್ರಿಪದಿಗಳಾಗಿರುವುವೊ ಏನೋ ನೋಡಬೇಕು, ಎಂದು ಆ ಹೆಣ್ಣುಮಕ್ಕಳ ದಾಟಿಯಿಂದ ಆ ಹಂತಿಯ ಹಾಡನ್ನು ಎಂದು ನೋಡಿದೆ. ಸರಿಹೋಯಿತು. ಮನೆಗೆಬಂದು ಬರೆದು ನೋಡುವಲ್ಲಿ ತ್ರಿಪದಿಯೇ. ಆಗಲೆ ಮತ್ತೊಂದು ವಿಚಾರವು ತಲೆದೋರಿತು. ಒಕ್ಕಲಿಗರು ಬಂಡಿಯ ಮೇಲೆ ಕುಳಿತು ಬಲೂರಿಹಾಕುವ ಹಾಡುಗಳೂ ಮೊಟ್ಟೆ ಹೊಡೆವಾಗ ಹಾಡುವ ಹಾಡುಗಳೂ ಹೋಳಿಹುಣ್ಣಿಮೆಯಲ್ಲಿ ಕರಿ ಎತ್ತಿನ ಮುಂದೆ ಎನ್ನುವ ಹೋಳಿಯ ಹಾಡುಗಳೂ ತ್ರಿಪದಿಗಳು ಆಗಿರಬಹುದೋ ? ತ್ರಿಪದಿಯನ್ನು ಈ ದಾಟಿಗಳಿಂದ ಎಂದುನೋಡಿದೆ. ಅವರ ಹಾಡನೊಂದು ಹೆಂಗುಸರ ದಾಟಿಯಲ್ಲಿ ಹಾಡಿನೋಡಿದೆ, ಅದೂ ಸರಿಹೋಗಬೇಕೆ !

ಕನ್ನಡಿತಿ ಕಂದಮ್ಮನನ್ನು ಲಾಲಿಸುವ ಲಾಲಿಪದಗಳು ತ್ರಿಪದಿಯಲ್ಲಿ, ಅವಳೆನ್ನುವ ಒನಕೆವಾಡುಗಳು *ತ್ರಿಪದಿಯಲ್ಲಿ, ಕನ್ನಡಿಗನು ಮೊಟ್ಟೆಹೊಡೆವಾಗ ಹಂತಿತಿರುವುವಾಗ ಬಂಡಿ ಹೊಡೆವಾಗ ಹಾಡುವ ಹಾಡುಗಳು ತ್ರಿಪದಿಯಲ್ಲಿ ; ಆವ ಕಾಲದಲ್ಲಿ ಹಾಡುವ ಹಾಡೂ ತ್ರಿಪದಿಯಲ್ಲಿಯೇ; ಎನ್ನುವ ದಾಟಿಗಳು ಮಾತ್ರ ಬೇರೆ ಬೇರೆ. ಈಗ ಹೇಳಿ, ತ್ರಿಪದಿ ಕನ್ನಡಿಗರಲ್ಲಿ ಅದೆಷ್ಟು ಆಳವಾಗಿ ಬೇರೂರಿರುವುದೆಂಬುದನ್ನು. ತ್ರಿಪದಿಯನ್ನು ಕನ್ನಡಿಗರು ಮರೆವುದು ಶಕ್ಯವೇ ? ತ್ರಿಪದಿ ಕನ್ನಡಿಗರಿಗೆ ಕೇಳುವುದಕ್ಕೆ ಮನೋಹರವಾಗಿರದಿದ್ದರೆ ಇಷ್ಟು ಬಳಕೆಯಲ್ಲಿ ಬರುತ್ತಿತ್ತೆ ? ಮನೋಹರವಾಗಿರುವುದರಿಂದಲೇ ಅದು ಕನ್ನಡಿಗರ ಜೀವಾಳದ ವೃತ್ತವಾಗಿದೆ. ಕನ್ನಡಿಗರು ತ್ರಿಪದಿಗೆ ಅದೆಂತಹ ಸ್ಥಾನವನ್ನು ಕೊಟ್ಟಿರುವರು ?

ಸಾಮಾನ್ಯರು ಈ ತ್ರಿಪದಿಗಳನ್ನು ರಚಿಸಿ ಹಾಡುವಲ್ಲಿ ತ್ರಿಪದಿಗಳನ್ನು ರಚಿಸುವುದು ಬಹು ಸುಲಭವಾಗಿರುವುದೆಂಬುದು ತಾನೇ ಸಿದ್ಧವಾಗುತ್ತದೆ. ಕನ್ನಡನಾಡಿನ ೮–೧೦ ವರ್ಷದ ಹುಡುಗೆ ಕೂಡ—

ಕೂಸು ಕುಂಚಿಗೆ ತಿಂತು । ಹಾಸಿಗೇ ನೆಲತಿಂತು ॥
ಮಾಡಿದ್ದ ಅಡಿಗೆ ಒಲೆತಿಂತು । ಕಂದನ್ನ ॥
ಇದ್ದಷ್ಟು ಮೂಗು ಇಲಿ ತಿಂತು ॥

ಎಂದು ಹಾಡುಕಟ್ಟಿ ಹಾಡಿ ಮಗುವನ್ನು ಮಲಗಿಸಬಹುದು !

* * *

ತ್ರಿಪದಿಗಳನ್ನು ಎನ್ನುವಲ್ಲಿ ಒಂದು ವಿಶಿಷ್ಟತೆಯಿದೆ. ತ್ರಿಪದಿಗಳನ್ನು ಅನೇಕ ರೀತಿಯಿಂದೆಂದರೂ ಅವೆಲ್ಲವುಗಳಲ್ಲಿ ಈ ವೈಶಿಷ್ಟ್ಯವು ಇದ್ದುದು ಕಂಡುಬರುವುದು. ತ್ರಿಪದಿಯ ಎರಡನೆಯ ಚರಣದ ಮೊದಲಿನ ಭಾಗವನ್ನು ಎರಡುಸಾರೆ ಎನ್ನುವುದೇ ಆ ವೈಶಿಷ್ಟ್ಯ. ಅದು ಹೀಗೆ—

ಆಕಳಾ ಹೈನಲ್ಲ । ಮಗಳು ಬೀಗಿತಿಯಲ್ಲ ॥
ಮನೆಗೆ ಬಂದಳಿಯ ಮಗನಲ್ಲ ।

---

* ಬೀಸುವಾಗ ಕುಟ್ಟುವಾಗ ಎನ್ನುವ ಹಾಡು.

ಮನೆಗೆಬಂದಳಿಯ ಮಗನಲ್ಲ ಕಂದಯ್ಯ ॥
ಮೆಚ್ಚಿಬಂದವಳು ಮಡದ್ಯಲ್ಲ ॥—

* * *

ಉಳಿದ ಕವಿಗಳು "ಬಿರುಸುಕಟ್ಟಿಗೆ"ಯೆಂದು ಬಿಸುಟ ಈ ತ್ರಿಪದಿಯನ್ನು ಸರ್ವಜ್ಞನು ಬಹು ಆಸ್ಥೆಯಿಂದ ಏಕೆ ಉಪಯೋಗಿಸಿದನೆಂಬುದು ಈಗ ಸಹಜ ತಿಳಿದುಬರುವುದು. "ಉಚ್ಚವಿಚಾರಗಳನ್ನು ಬಿಚ್ಚಿ, ಅಚ್ಚಗನ್ನಡದಲ್ಲಿ ಅಚ್ಚು ಕಟ್ಟಾಗಿಟ್ಟು ತುಚ್ಛಜನರಿಗೆ ಸ್ವಚ್ಛವಾಗಿ ಬೋಧಿಸುವುದಕ್ಕೆ ಈ ಕಾವ್ಯರೂಪವು ಸ್ವಾಭಾವಿಕವಾಗಿ ಸಹಾಯಕವಾಗಿರುವುದರಿಂದ ಸರ್ವಜ್ಞನು ಉದ್ದೇಶಪೂರ್ವಕವಾಗಿ ಈ ಅಚ್ಚು ಪಡಿಯನ್ನು (ತ್ರಿಪದಿಯನ್ನು) ನಿಶ್ಚವೂ ಪ್ರಯೋಗಿಸಿಕೊಂಡಿರುವಂತೆ ತೋರುತ್ತದೆ." ತ್ರಿಪದಿ ಕನ್ನಡಿಗರ ರೋಮ ರೋಮಗಳಲ್ಲಿಯೂ ಭೇದಿಸಿದ ವೃತ್ತ. ಈ ಸಾಮಾನ್ಯರ ವೃತ್ತವನ್ನೇ ಸಾಮಾನ್ಯರಿಗಾಗಿ ರಚಿಸಿದ ತನ್ನ ಪದ್ಯಗಳ ಸಲುವಾಗಿ ಎತ್ತಿಕೊಂಡನು. ಇದಿಷ್ಟೇ ಅಲ್ಲ. ತ್ರಿಪದಿಯಲ್ಲಿಯು ಮನೋಹರವಾಗಿ ಪದಗಳನ್ನು ರಚಿಸಲು ಬರುತ್ತದೆಂಬುದನ್ನು ತೋರಿಸಿಕೊಟ್ಟಿರುವನು. ಕವಿಯ ಹುಟ್ಟಿಗೆ ಪರಿಸ್ಥಿತಿ ಕಾರಣವಾಗಿದೆಯಂತೆ, ಕವಿ ತನ್ನ ಚಾತುರ್ಯದಿಂದ ಪರಿಸ್ಥಿತಿಯನ್ನು ಬದಲಿಸಿ ತನ್ನ ಬೆನ್ನುಹತ್ತುವಂತೆ ಮಾಡುವನಂತೆ. ಸರ್ವಜ್ಞನ ಕಾವ್ಯಗಳಲ್ಲಿ ಕಂಡುಬರುವ ಅನೇಕ ರೀತಿಗಳು ಅವನು ಜನಸಾಮಾನ್ಯದಿಂದ ಎತ್ತಿಕೊಂಡಂತಹವಿರುತ್ತವೆ. ಅವಕ್ಕೆಯೆ ತನ್ನ ಚಾತುರ್ಯದ ಕುಂದಣ ಕೂಡಿಸಿರುವನು. ಈಮಾತು ಮೇಲೆ ಬರೆದ ಹೆಣ್ಣುಮಕ್ಕಳ ಹಾಡಿನಲ್ಲಿಯ ಪದ್ಧತಿಗಳಿಂದ ವ್ಯಕ್ತವಾಗುತ್ತದೆ.

ಈ ತ್ರಿಪದಿಯಿಂದ ಛಂದಸ್ಸಿಗೆ ಸಂಬಂಧಿಸಿದ ಇನ್ನೊಂದು ಮಾತು ಸ್ಪಷ್ಟವಾಗುವಂತಿದೆ. "ಕನ್ನಡಕ್ಕೆ ಛಂದಸ್ಸು" ಎಂಬ ಲೇಖದಲ್ಲಿ—"ದ್ರಾವಿಡಛಂದಸ್ಸಿನ ಮಟ್ಟು ತಾಳವಾಗಿದೆ. ಈ ತಾಳಕ್ಕೆ ಯೋಗ್ಯಸ್ವರೂಪವನ್ನು ಕೊಡಲರಿಯದೆ ಸಂಸ್ಕೃತ ಛಂದಸ್ಸಿನಂತೆ ಅಕ್ಷರ ಗಣಗಳ ಸ್ವರೂಪಕೊಡುವಲ್ಲಿ ಅದು ಬೇರೆ ಬೇರೆ ಭಾಷೆಗಳಲ್ಲಿ ಬೇರೆ ಬೇರೆ (ಗಣ)ಗಳ ರೂಪವನ್ನು ಹೊಂದಿತು," ಎಂದು ಬರೆದಿದೆ. * ಜನಸಾಮಾನ್ಯದಲ್ಲಿರುವ ತ್ರಿಪದಿಯನ್ನು ನೋಡಲು ಈ ಮಾತು ಸರಿಯಾಗಿರುವುದೆಂಬುದು ಕಂಡು ಬರದೆ ಇರಲಿಕ್ಕಿಲ್ಲ. ತ್ರಿಪದಿ ಕನ್ನಡಿಗರ ಜೀವಾಳದ ವೃತ್ತ. ಬಹುದಿವಸದಿಂದಲೂ—ಕನ್ನಡದಲ್ಲಿ ಗ್ರಂಥಗಳಾಗುವ ಪೂರ್ವದಿಂದಲೂ—ಅದು ಕನ್ನಡಿಗರಲ್ಲಿ ನೆಲಸಿರಬೇಕು. ಕ್ರಿಸ್ತ ಶಕದ ಸುಮಾರು ೭೦೦ರಲ್ಲಿ ಬರೆಯಲ್ಪಟ್ಟ ಶಾಸನದಲ್ಲಿಯೂ ತ್ರಿಪದಿ ಇರುವುದು.

ಸಾಧುಗೆ ಸಾಧು ಮಾಧುರ್ಯಂಗೆ ಮಾಧುರ್ಯಂ ।
ಬಾಧಿಪ್ಪ ಕಲಿಗೆ ಕಲಿಯುಗ । ವಿಪರೀತನ್
ಮಾಧವ ನೀತನ್ ಪೆರನಲ್ಲ ।
ಒಳ್ಳಿತ್ತುಕೆಯ್ವೊರಾರ್ ಪೊಲ್ಲದುಮದರಂತೆ ।
ಬಲ್ಲಿತ್ತು ಕಲಿಗೆ ವಿಪರೀತಾ । ಪುರಾಕೃತ ।
ಮಿಲ್ಲಿ ಸಂಧಿಕ್ಕುಮದುಬಂದು ।
ಕಟ್ಟಿದ ಸಿಂಘಮನ್ ಕೆಟ್ಟೊದೇನೆಮಗೆಂದು ।
ಬಿಟ್ಟವೊಲ್ ಕಲಿಗೆ ವಿಪರೀತನ್ । ಗಹಿತರ್ಕಳ್
ಕೆಟ್ಟರ್ ಮೇಣ್ ಸತ್ತರ ವಿಚಾರಂ ।

ಈ ತ್ರಿಪದಿಗಳನ್ನು ನೋಡುವಲ್ಲಿ ಕನ್ನಡ ಛಂದಸ್ಸಿಗೆ ವ್ಯವಸ್ಥಿತ ಸ್ವರೂಪಕೊಡುವ ಮೊದಲು ಹುಟ್ಟಿದಂತೆ ತೋರುತ್ತವೆ. ಕನ್ನಡ ಛಂದಸ್ಸಿನಿಂದ ದೂರಿರಿಸಿದ— (ಲಘುಗುರು) ಗಣವೂ ಇದರಲ್ಲಿ ಒಂದುಕಡೆಗೆ ಬಂದಿದೆ.— (ಪುರಾಕೃತ). ಇದಲ್ಲದೆ ಚರಣಗಳನ್ನು ತೋರಿಸಲಿಕ್ಕೆ ಹಾಕಿದ ಚಿಹ್ನವು ಎರಡನೆಯ ಚರಣದಲ್ಲಿ ನಾಗವರ್ಮನ ತ್ರಿಪದಿಯಲ್ಲಿ ಹೇಳಿದ ಭಾಗಕ್ಕಿಂತ ಒಂದುಗಣ ಹಿಂದೆ ಇರುತ್ತದೆ. — ("ಬಾಧಿಪ್ಪ ಕಲಿಗೆ ಕಲಿಯುಗ" । ನಾಗವರ್ಮನ ತ್ರಿಪದಿಯಂತೆ, ಬಾಧಿಪ್ಪ ಕಲಿಗೆ ಕಲಿಯುಗ ವಿಪರೀತನ್. ಎಂಬಲ್ಲಿಗೆ ಇರಬೇಕಾಗುವುದು.) ಕಡೆಯ ಗಣವು ಮೂರನೆಯ ಚರಣದಲ್ಲಿಯೂ ಬರುವುದಿಲ್ಲ. ಏಕೆಂದರೆ ಮೂರನೆಯ ಚರಣದ ಪ್ರಾಸವಿದ್ದ ಗಣವು ಆ ಮೊದಲಿನ ಗಣದ ಮುಂದಿನ ಗಣದಿಂದ ಪ್ರಾರಂಭವಾಗುವುದು. ಮೇಲೆ ಹೇಳಿದ ತ್ರಿಪದಿಯು ದಾಟಯಂತೆ ಎನ್ನುವುದನ್ನು ತೋರಿಸುವುದಕ್ಕಾಗಿ ಹೀಗೆ ಹಾಕಿರಬೇಕೆಂದು ತೋರುತ್ತದೆ.

ಅದು—

ಸಾಧುಗೆ ಸಾಧುಗೆ ಮಾಧುರ್ಯಂಗೆ ಮಾಧುರ್ಯಂ ।
ಬಾಧಿಪ್ಪ ಕಲಿಗೆ ಕಲಿಯುಗ ।
ಬಾಧಿಪ್ಪಕಲಿಗೆ ಕಲಿಯುಗ ವಿಪರೀತನ್
ಮಾಧವ ನೀತನ್ ಪೆರನಲ ।

* ಜಯಕರ್ನಾಟಕ ಸಂಪುಟ ೬ ಸಂ. ೧.

ನಾಗವರ್ಮನ ತ್ರಿಪದಿಯ ಲಕ್ಷಣವು ಇಂತಹ ತ್ರಿಪದಿಗಳಿಗೆ ವ್ಯವಸ್ಥಿತ ಸ್ವರೂಪಕೊಟ್ಟು ಹೇಳಿದಂತಹದು. ಈಗ ದೊರೆತ ಛಂದಸ್ಸುಗಳಲ್ಲಿ ನಾಗವರ್ಮನ ಛಂದಸ್ಸೇ ಪ್ರಾಚೀನವಾದುದು. ಅದಕ್ಕೂ ಪೂರ್ವದಲ್ಲಿ ಛಂದಸ್ಸಿನಮೇಲಿನ ಗ್ರಂಥಗಳು ಆಗಿರಲೇ ಇಲ್ಲವೆಂದು ಅಲ್ಲ. 'ಗುಣಗಾಂಕೀಯ'ವೆಂಬ ಛಂದೋಗ್ರಂಥವು ೯ನೆಯ ಶತಮಾನದಲ್ಲಿ ಬರೆಯಲ್ಪಟ್ಟಿರಬೇಕೆಂದು ಪ್ರಾಕ್ತನ ವಿಮರ್ಶ ವಿಚಕ್ಷಣ ಆರ್. ನರಸಿಂಹಾಚಾರ್ಯರು ಅಭಿಪ್ರಾಯಪಟ್ಟಿರುವರು.* ಕನ್ನಡದ ಅವಸ್ಥಾಭೇದಗಳಬಗ್ಗೆ ಬರೆವಾಗ —೮-೯ನೆಯ ಶತಮಾನಗಳಲ್ಲಿ ಕನ್ನಡಭಾಷೆಗೆ ವ್ಯವಸ್ಥಿತ ಸ್ವರೂಪಕೊಡುವ ಕೆಲಸವು ನಡೆದಿರಬೇಕೆಂಬ ಅಭಿಪ್ರಾಯ ಸೂಚಿಸಿದ್ದಿತು.† ಕನ್ನಡ ಛಂದಸ್ಸಿಗೂ ವ್ಯವಸ್ಥಿತ ಸ್ವರೂಪಕೊಡುವ ಕೆಲಸವು ಅದೇ ವೇಳೆಗೆ ನಡೆದಿರಬೇಕು. ಇಷ್ಟೆಲ್ಲ ಗೊಂದಲಹಾಕಿ ಹೇಳುವುದು ಮೇಲಿನ ತ್ರಿಪದಿಗಳು ಕನ್ನಡ ಛಂದಸ್ಸಿಗೆ ವ್ಯವಸ್ಥಿತ ಸ್ವರೂಪ ಕೊಡುವ ಮೊದಲಿನವೆಂಬುದನ್ನು ತೋರಿಸಲಿಕ್ಕೆ. ಅದು ಹೇಗಿದ್ದರೂ ತ್ರಿಪದಿ ಬಹುಕಾಲದಿಂದ ಕನ್ನಡಿಗರಲ್ಲಿ ಬಳಕೆಯಲ್ಲಿರುವುದೆಂಬುದು ನಿರ್ವಿವಾದ. ಈ ತ್ರಿಪದಿಗೆ ವ್ಯವಸ್ಥಿತ ಸ್ವರೂಪಕೊಡುವಲ್ಲಿ ಆವ ರೂಪವು ಬಂದಿತೋ ನೋಡಿ—

ಬಿಸರುಹೋದ್ಭವಗಣಂ ರಸಪಶಸ್ಥಾನದೊಳ್ ।
ಬಿಸರುಹ ನೇತ್ರಗಣಮೆ ಬರ್ಕುಳಿದುವು ।
ಬಿಸರುಹನೇತ್ರೇ ತ್ರಿಪದಿಗೆ ।

— ಛಂದೋಂಬುಧಿ ೫. ೨೪೯.
ಕಾವ್ಯಕಲಾನಿಧಿಪ್ರತಿ

ಈ ಲಕ್ಷಣದಿಂದಲೂ ಲಕ್ಷ್ಯಪದ್ಯದಿಂದಲೂ ತ್ರಿಪದಿಯ ಮೊದಲನೆಯ ಚರಣದಲ್ಲಿ ೪ ವಿಷ್ಣುಗಣಗಳು ೨ನೆಯ ಚರಣದಲ್ಲಿ ೧ ವಿಷ್ಣುಗಣ ೧ ಬ್ರಹ್ಮಗಣ ತರುವಾಯ ೨ ವಿಷ್ಣುಗಣ. ೩ನೆಯ ಚರಣದಲ್ಲಿ ೧ ವಿಷ್ಣುಗಣ ೧ ಬ್ರಹ್ಮಗಣ ತರುವಾಯ ಒಂದು ವಿಷ್ಣುಗಣ ಇರಬೇಕೆಂದು ತಿಳಿದುಬರುತ್ತದೆ. ವಿಷ್ಣುಗಣವು ಎಂಟುಪ್ರಕಾರದಿಂದಾಗುತ್ತದೆ. ಬ್ರಹ್ಮಗಣವು ನಾಲ್ಕುತರದಿಂದಾಗುತ್ತದೆ.

| ಬ್ರಹ್ಮಗಣ. | ಮಾತ್ರೆ. | ವಿಷ್ಣುಗಣ. | ಮಾತ್ರೆ. | ವಿಷ್ಣುಗಣ. | ಮಾತ್ರೆ. |
|---|---|---|---|---|---|
| ಗ ಗ | ೪ | ಗ ಗ ಗ | ೬ | ಗ ಗ ಲ | ೫ |
| ಲ ಲ ಗ | ೪ | ಲ ಲ ಗ ಗ | ೬ | ಲ ಲ ಗ ಲ | ೫ |
| ಗ ಲ | ೩ | ಗ ಲ ಗ | ೫ | ಗ ಲ ಲ | ೪ |
| ಲ ಲ ಲ | ೩ | ಲ ಲ ಲ ಗ | ೫ | ಲ ಲ ಲ ಲ | ೪ |

ಲ=ಲಘು ಗ=ಗುರು

ವಿಷ್ಣುಗಣವು ೪, ೫, ೬, ಮಾತ್ರೆಗಳಲ್ಲಿ ಬೇಕಾದಷ್ಟು ಮಾತ್ರೆಯದು ಇರಬಹುದು. ಎಂದಮೇಲೆ ತಾಳಕ್ಕೆ ಸರಿಯಾಗುವುದು ಹೇಗೆ ? ಎಂದು ಪ್ರಶ್ನೆಬರುತ್ತದೆ. ತ್ರಿಪದಿಯಲ್ಲಿ ಬರುವ ಗಣವು ೫ ಮಾತ್ರೆಯದು. ಪದ್ಯವನ್ನು ಎನ್ನುವಾಗ ಮಾತ್ರೆಗಳು ಕಡಿಮೆಬಿದ್ದರೆ ಎಳೆದು ಮಾತ್ರೆಗಳನ್ನು ಸರಿಮಾಡಿಕೊಂಡು ಎನ್ನುವ ರೂಢಿ. ಆಪ್ರಕಾರ ತ್ರಿಪದಿಯನ್ನು ಎನ್ನುತ್ತಿದ್ದರು. ಮುಂದೆ ಆ ತ್ರಿಪದಿಗೆ ಛಂದಸ್ಸಿನ ಸ್ವರೂಪ ಕೊಡುವಾಗ ಒಂದು ತಾಳವು ಬೀಳುವಲ್ಲಿ ಒಂದೊಂದು ಗಣವನ್ನು ಕಲ್ಪಿಸಿ ಅದರಲ್ಲಿ ಬರುವ ಅಕ್ಷರಗಳಿಗೆ ಸಂಸ್ಕೃತ ಛಂದಸ್ಸಿನಂತೆ ಗುರುಲಘುಸ್ವರೂಪಕೊಟ್ಟು ಗಣಗಳನ್ನುಮಾಡಿಕೊಂಡರು. ಆದರಿಂದ ಒಂದು ಗಣವು ನಾಲ್ಕುಮಾತ್ರೆಯದಾದರೆ ಇನ್ನೊಂದು ಐದುಮಾತ್ರೆಯದಾಯಿತು. ಅದೆಷ್ಟು ಮಾತ್ರೆಯದಿದ್ದರೂ ೫ ಮಾತ್ರೆಗೇ ತಾಳಬೀಳುವದು. ಕನ್ನಡಿಗರಿಗೆ ಈ ಅಕ್ಷರಗಣದ ತಪ್ಪು ತಿಳಿಯಬರಲು ಮಾತ್ರೆಯಂತೆ ಗಣಮಾಡಿಕೊಂಡಾಗ. ತ್ರಿಪದಿಗೆ ೫ ಮಾತ್ರೆಯ ಗಣಗಳನ್ನೇ ಇಟ್ಟುಕೊಂಡಿರುವರು. ಅದೆಲ್ಲಿ ಬ್ರಹ್ಮಗಣವು ಬರುವುದೋ ಅಲ್ಲಿ ೩ ಮಾತ್ರೆಯ ಗಣಗಳನ್ನೇ ಇಟ್ಟುಕೊಂಡಿರುವರು.

ಈಗ ಸಾಂಗತ್ಯ ಎನ್ನುವೆವಲ್ಲ. ಅದರಲ್ಲಿ ಪ್ರತಿಯೊಂದು ಚರಣದಲ್ಲಿ ಇಂತಿಷ್ಟೇ ಮಾತ್ರೆಗಳಿರಬೇಕೆಂದು ಇನ್ನೂವರೆಗೆ ಯಾರೂ ನಿಯಮಹಾಕಿ ಕೊಟ್ಟಿಲ್ಲ. ಆದರೆ ಹ್ರಸ್ವವಿದ್ದಲ್ಲಿ ದೀರ್ಘಮಾಡಿಕೊಂಡು ಒಂದೊಂದು ಚರಣಗಳಲ್ಲಿ ಎಷ್ಟೆಷ್ಟು ತಾಳ ಬೀಳಬೇಕೋ ಅಷ್ಟಷ್ಟು ತಾಳ ಹಾಕೇ ಹಾಕುವೆವು. ಈ ಸಾಂಗತ್ಯವು ತ್ರಿಪದಿಯ ರೂಪವೇ ಆಗಿರುವುದು. (ಕನ್ನಡಿಗರ ಸಂಗೀತವು ವಿಶೇಷವಾಗಿ ಈ ತ್ರಿಪದಿಯೇ—! ತ್ರಿಪದಿಯ ದಾಟಿಯೇ- ಆಗಿರುವುದರಿಂದ ಇದಕ್ಕೆ ಸಾಂಗತ್ಯವೆಂದು ಹೆಸರು ಬಂದಿರಬಹುದಲ್ಲವೆ ? ) ತ್ರಿಪದಿಯನ್ನು ಎನ್ನುವಾಗ ಎರಡನೆಯ ಚರಣವನ್ನು ಅರ್ಧಕ್ಕೆ ನಿಲ್ಲಿಸಿ ಮತ್ತೊಮ್ಮೆ ಆ ಚರಣವನ್ನು ಎನ್ನುವೆವಷ್ಟೆ. ಅದೇ ಚರಣವನ್ನು ಎರಡುಸಾರೆ ಎನ್ನದೆ ಆ ಸ್ಥಳದಲ್ಲಿ ಹೊಸಚರಣ ಹಾಕಿದರೆ ಅದು ಸಾಂಗತ್ಯವಾಗುವುದು. ಈಗಿರುವ ಸಾಂಗತ್ಯಗಳಿಗೆ ವೃತ್ತಗಳ ಸ್ವರೂಪ ಕೊಡಹೋದರೆ, ಒಂದು ನಾಲ್ಕು ಮಾತ್ರೆಯದಾಗಬಹುದು, ಒಂದು ಐದುಮಾತ್ರೆಯದಾಗಬಹುದು. ಚರಣದ ಕಡೆಯ ಗಣವು ಆರುಮಾತ್ರೆಯದೂ ಆಗಬಹುದು.

* ಕವಿಚರಿತೆ I ಅವತರಣಿಕೆ. † ಜಯಕರ್ನಾಟಕದ ವರ್ಷ ೫. ಸಂಚಿಕೆ ೬.

( ಎರಡನೆಯ ನಾಲ್ಕನೆಯ ಚರಣಗಳಲ್ಲಿ ನಡುವಿನಗಣ ೩ ಮಾತ್ರೆಯಾಗಿ ಮಾಡಿಕೊಂಡರೆ ಕಡೆಯ ಗಣವು ೫–೬ ಮಾತ್ರೆಯದಾಗುವುದು. ನಡುವಿನಗಣ ೫ ಮಾತ್ರೆಯದಾಗಿ ಮಾಡಿಕೊಂಡರೆ ಕಡೆಯ ಗಣ ೩ ಮಾತ್ರೆಯದಾಗುವುದು. ) ಇದನ್ನು ತಿಳಿದುನೋಡಿದರೆ ಕನ್ನಡಿಗರ ಛಂದಸ್ಸಿನ ಮೂಲವು ತಾಳವೇ–ಮಾತ್ರಾಗಣ–ಇದ್ದು ಅದಕ್ಕೆ ಸರಿಯಾದ ರೂಪಕೊಡಲರಿಯದೆ ಬ್ರಹ್ಮ ವಿಷ್ಣು ರುದ್ರಗಣಗಳೆಂಬ ಅಕ್ಷರ ಗಣಗಳ ಸ್ವರೂಪವು ಕೊಡಲ್ಪಟ್ಟಿರುವುದೆಂಬುದು ಸಹಜ ತಿಳಿದುಬರುವುದು. ಇದು ಸಂಸ್ಕೃತದ ಅಕ್ಷರಗಣಗಳ ಪರಿಣಾಮ.

ನಾಗವರ್ಮನ ಛಂದಸ್ಸಿನಲ್ಲಿ ಹೇಳಿದ ಬ್ರಹ್ಮ ವಿಷ್ಣುಗಣಗಳು ಸರಿಯಾದುವುಗಳಲ್ಲವೆಂದಮೇಲೆ ತಾಳಕ್ಕೆ ಹೊಂದುವಂತೆ ತ್ರಿಪದಿಯಲಕ್ಷಣ ಹೇಗೆ ಹೇಳಬೇಕು? ಅದರ ರೂಪವೇ ಆದ ಸಾಂಗತ್ಯದ ಲಕ್ಷಣವೆಂತು ? ಎಂಬ ಪ್ರಶ್ನೆಗಳುದ್ಭವಿಸುತ್ತವೆ. ತ್ರಿಪದಿಯ ಲಕ್ಷಣವನ್ನು ಸಂಪೂರ್ಣವಾಗಿ ಹೀಗೆ ಹೇಳಬಹುದು—

ಮೊದಲನೆಯ ಚರಣವಲ್ಲಿ ಐದುಮಾತ್ರೆಯ ನಾಲ್ಕುಗಣಗಳು. ಎರಡನೆಯ ಗಣದ ಕೊನೆಗೆ ಯತಿ.* ( ಮೂರನೆಯ ಗಣದ ಎರಡನೆಯಕ್ಷರವು ಪ್ರಾಸಾಕ್ಷರವೇ ಆಗಿದ್ದರೆ ವಿಶೇಷ ಶೋಭೆ. ಎಂದರೆ ಮೊದಲನೆಯ ಚರಣದಲ್ಲಿ ಎರಡು ಚರಣಗಳಾಗುವಂತಿರಬೇಕು. )

ಎರಡನೆಯ ಚರಣದಲ್ಲಿ ಒಂದು ೫ ಮಾತ್ರೆಯಗಣ, ತರುವಾಯ ಒಂದು ೩ ಮಾತ್ರೆಯದು. ಅದಾದಮೇಲೆ ಎರಡು ೫ ಮಾತ್ರೆಯಗಣಗಳು. ಈ ಚರಣವಲ್ಲಿ ೩ ಮಾತ್ರೆಯ ಗಣದ ಕೊನೆಯಲ್ಲಿಯೂ ಮುಂದಿನ ಗಣದ ಕೊನೆಯಲ್ಲಿಯೂ ಯತಿ ಇರಬೇಕು.

ಮೂರನೆಯ ಚರಣದಲ್ಲಿ– ಒಂದು ೫ ಮಾತ್ರೆಯಗಣ, ತರುವಾಯ ಒಂದು ೩ ಮಾತ್ರೆಯಗಣ ತರುವಾಯ ೫ ಮಾತ್ರೆಯಗಣ. ಈ ಚರಣದಲ್ಲಿಯೂ ಮೂರುಮಾತ್ರೆಯ ಗಣದಕೊನೆಗೆ ಯತಿ.

ಉದಾಹರಣೆಃ—

ಎಲ್ಲ ಬಲ್ಲವರಿಲ್ಲ–ಬಲ್ಲಿದರು ಬಹಳಿಲ್ಲ ॥
ಬಲ್ಲವರಿದ್ದು–ಬಲವಿಲ್ಲ । ಸಾಹಿತ್ಯ ॥
ವೆಲ್ಲರಿಗೆ ಇಲ್ಲ–ಸರ್ವಜ್ಞ ॥

—ಸರ್ವಜ್ಞವಚನ. ೧೩೪೩

ಇದನ್ನೇ ನಾಲ್ಕುಚರಣಗಳಾಗಿ ಹೇಳಿದರೆ ಸಾಂಗತ್ಯವಾಗುವುದು.

ಮೊದಲನೆಯ ಚರಣದಲ್ಲಿ– ೫ ಮಾತ್ರೆಯ ೪ ಗಣ. ೫×೪

ಎರಡನೆಯ ಚರಣದಲ್ಲಿ– ೫ ಮಾತ್ರೆಯ ಎರಡುಗಣ. ನಡುವೆ ಮೂರುಮಾತ್ರೆಯ ಗಣ. ( ೫+೩+೫ )

ಮೂರನೆಯ ಚರಣ– ೫+೩+೫+೫

ನಾಲ್ಕನೆಯ ಚರಣ - ಎರಡನೆಯ ಚರಣದಂತೆ.

ಸಾಂಗತ್ಯದ ಲಕ್ಷಣವನ್ನು ಹೀಗೂ ಹೇಳಬಹುದು—

೧–೩ ಚರಣಗಳು– ೫×೪ ( ಐದುಮಾತ್ರೆಯ ನಾಲ್ಕು ಗಣ )

೨–೪ ಚರಣಗಳು– ೫×೩+೨ ಗ ( ಐದುಮಾತ್ರೆಯ ಮೂರುಗಣ ತರುವಾಯದಲ್ಲಿ ೪ ಮಾತ್ರೆಯಗಣ )

ಮೇಲಿನ ಲಕ್ಷಣಕ್ಕೂ ಇದಕ್ಕೂ ತೋರಿಕೆಯಲ್ಲಿ ಭಿನ್ನತೆಯಿರುವುದು. ಆದರೆ ಒಳಹೊಕ್ಕುನೋಡಿದರೆ ಆವ ಭೇದವೂ ಕಂಡುಬರಲಿಕ್ಕಿಲ್ಲ. ಮೂರನೆಯ ಚರಣದಲ್ಲಿನ ೩ ಮಾತ್ರೆಯಗಣವನ್ನು ಎಳೆದುತಂದು–ಅಲ್ಲಿ ಯತಿ ಇದ್ದೇ ಇರುತ್ತದೆ– ೫ ಮಾತ್ರೆಯದು ಎನ್ನಬೇಕಾಗುತ್ತದೆ. ಎರಡು ನಾಲ್ಕನೆಯ ಚರಣಗಳಲ್ಲಿನ ಗಣಗಳು ಹೀಗೂ ಆಗುವುವು.

೫+೫+೩ ಇವುಗಳಲ್ಲಿ ಕಡೆಯಗಣ ಎಳೆದೆನ್ನಬೇಕಾಗುವುದು. ಅದರಿಂದ ಕೊನೆಯಅಕ್ಷರ ಲಘುವಿದ್ದರೂ ಗುರುವಾಗುವುದು. ಆದುದರಿಂದ ಅದನ್ನು ೫+೫+೨ ಗ ಎಂದು ಹೇಳಿತು.

ನೀರಿಕೇ ಳಿಲೆನಿನ್ನ–ಸೆರೆಮಾಡಿ ನಾಪೋಗಿ ।
ಬೇರಿನ್ನು ಹೇಗೆಜೀ ವಿಸಲಿ ।
ನಾರಿಕೇ ಳಿಲೆನಿನ್ನ ಸುಖದುಃಖಕಿಲ್ಲದೆ ।
ವಿೂರಿ ಪೋದಡೆ ಫಲ ವಹುದೇ ॥

—ಕಪೋತವಾಕ್ಯ. ೨೬

* ಪಾದಾಂತ್ಯ ಯತಿ ಯಿರಲೇಬೇಕೆಂದು ಬೇರೆಯಾಗಿ ಹೇಳಬೇಕಾಗಿಲ್ಲ,

# ನಾವೂ ಹಾಗೆಯೇ !

ಲೇಖಕ:—ಶ್ರೀ. ಆನಂದ ಬೆಂಗಳೂರು.

Let us not insult Truth for fear of offending men.
—Rabindranath Tagore.

೧

ಒಂದು ದಿನ ಸಾಯಂಕಾಲ. ತಂಗಾಳಿ ಮೆಲ್ಲಮೆಲ್ಲನೆ ತೊನೆಯುತ್ತಿತ್ತು. ಸೂರ್ಯ ಆಗ ತಾನೆ ಮುಳುಗಿದ್ದ. ಮಶ್ಚಿಮ ದಿಕ್ಕಿನಲ್ಲಿ ಆಕಾಶವೆಲ್ಲಾ ಉಜ್ವಲವಾದ ಓಕಳಿವರ್ಣ. ಆ ಓಕಳಿಯಲ್ಲಿ ಅಲ್ಲಿ ಇಲ್ಲಿ ತೇಲುತ್ತ ಹೂಗಳಂತೆ ಛಿದ್ರ ಛಿದ್ರ ಮೋಡಗಳು. ಪಕ್ಷಿಗಳು ತಮ್ಮ ಸಾಯಂಕಾಲದ ರಾಗದ ಆಲಾಪನೆಯಲ್ಲಿದ್ದುವು. ಹೊತ್ತು ಬಹಳ ಸುಖವಾಗಿತ್ತು.

ಕೃಷ್ಣ ಮೂರ್ತಿ ಆಗ ತಾನೆ ಮನೆಗೆ ಬಂದಿದ್ದ. ಅವನ ಮನೆ ಶೇಷಾದ್ರಿಪುರದಲ್ಲಿ. ಕಾಲೇಜಿನಲ್ಲಿ ಆಟವಾಡಿಕೊಂಡು ಬಂದಿದ್ದ. ದಣುವಾರಿಸಿಕೊಳ್ಳುವುದಕ್ಕೋಸ್ಕರ ಮನೆಯ ಮುಂದಿನ ಹೂದೋಟದಲ್ಲಿ ಒಂದು ಸುಖಾಸನದ (Easy chair)ದಲ್ಲಿ ಕುಳಿತಿದ್ದ. ಸ್ವಲ್ಪ ಹೊತ್ತು ಸುಮ್ಮನಿದ್ದು "ಶಾರೀ" ಎಂದು ಕೂಗಿದ. ಉತ್ತರ ಬರಲಿಲ್ಲ. ಪುನಃ "ಶಾರೀ" ಎಂದು ಕರೆದ. ಶಾರಿ ಒಳಗಿನಿಂದ ಜಾಗ್ರತೆಯಾಗಿ ನಡೆದು ಬಂದಳು. ಶಾರಿ ಅವನ ಹೆಂಡತಿ, ಅವಳ ಹೆಸರು ಶಾರದೆ; ಇವನಿಗೆ ಶಾರಿ. ಮದುವೆಯಾಗಿ ಎರಡು ವರ್ಷಗಳಾಗಿತ್ತು. ಇಷ್ಟುದಿನ ಅವಳು ಇಲ್ಲಿ ಇರಲಿಲ್ಲ. ತೌರುಮನೆಗೆ ಹೋಗಿದ್ದವಳು ಬಂದು ಎಂಟು ದಿನಗಳಾಗಿದ್ದುವು ಅಷ್ಟೆ. ಶಾರದೆ ಬಂದು, ನಿರಿ ಸರಿಮಾಡಿಕೊಂಡು, ಮುಂದಲೆಯನ್ನು ಎಡಗೈಯಲ್ಲಿ ಸವರಿಕೊಳ್ಳುತ್ತ, ಬಲಗೈಯಿಂದ ಸೆರಗನ್ನು ಮೇಲಕ್ಕೆಳೆದುಕೊಂಡು, ಅವನ ಕುರ್ಚಿಯ ಹಿಂದುಗಡೆ ನಿಂತುಕೊಂಡು, ತಗ್ಗಿದ ಧ್ವನಿಯಿಂದ, "ಏನು—ಕರೆದದ್ದು!" ಎಂದು ಕೇಳಿದಳು.

"ಅದೇನು! ಅಲ್ಲೇ ನಿಂತೆ! ಮುಂದಕ್ಕೆ ಬರಬಾರದೆ ?"

"ಉಹು ! ನಾನೊಲ್ಲೆ ! ನೀವು ಹಿಡಿದುಕೊಳ್ಳುತ್ತೀರಿ, ಯಾರಾದರೂ ನೋಡಿದರೆ ಏನು ಗತಿ !"

"ಇಲ್ಲ; ಏನು ಮಾಡೊಲ್ಲ ಬಾ."

"ಶಾರದೆ ಅವನ ಮುಂದುಗಡೆ ಬಂದು ಅವನ ಕೈಗೆ ಸಿಕ್ಕದಷ್ಟು ದೂರದಲ್ಲಿ ನಿಂತಳು. ಅವಳಿಗೆ ಒಳಗೊಳಗೇ ನಗು. ದೇಹವೆಲ್ಲಾ ಬಳುಕುತ್ತಿತ್ತು. ಕೃಷ್ಣಮೂರ್ತಿ ಏಳುವವನಂತೆ ನಟಿಸಿದ. ಶಾರದೆ ಹೆದರಿ ಹಿಂದಕ್ಕೆ ಸರಿದು "ಅಯ್ಯೋ ! ಬೇಡಿ, ನಿಮ್ಮ ದಮ್ಮಯ್ಯ ಸುಮ್ಮನೆ ಇರಿ!" ಎಂದು ಧ್ವನಿಯನ್ನು ಕುಗ್ಗಿಸಿ ಹೇಳಿದಳು.

"ಅಯ್ಯೋ! ಬೆಪ್ಪೆ ! ಇದ್ಯಾಕೆ ಹೀಗಾಡ್ತೀಯೆ ! ಒಳಗೆ ಹೋಗಿ ಒಂದು ಲೋಟ ನೀರು ತೆಗೆದುಕೊಂಡು ಬಾ."

ಶಾರದೆ ಒಳಗೆ ಹೋಗಿ ನೀರು ತಂದಳು. ಅವಳು ತರುವುದರೊಳಗೆ ಕೃಷ್ಣಮೂರ್ತಿ ಇನ್ನೊಂದು ಕುರ್ಚಿಯನ್ನು ತರಿಸಿ ತನ್ನ ಪಕ್ಕದಲ್ಲೇ ಇಡಿಸಿದ್ದ. ಶಾರದೆ ಗಂಡನಿಗೆ ನೀರು ಕೊಟ್ಟು ಇನ್ನೊಂದು ಕುರ್ಚಿಯನ್ನು ನೋಡಿ ಸ್ವಲ್ಪ ಆಶ್ಚರ್ಯವನ್ನು ನಟಿಸಿ "ಇದೇನು ? ಇನ್ನೊಂದು ಕುರ್ಚಿ ಯಾರಿಗೆ!" ಎಂದು ಕೇಳಿದಳು.

"ರಾಣಿಯವರಿಗೆ,"

"ಸರಿ ! ಚೆನ್ನಾಯ್ತು ! ನಾನು ಕುಳಿತುಕೊಳ್ಳೋದಿಲ್ಲ."

"ನೀನೇ ಏನು ರಾಣಿ!"

"ರಾಣಿಯೋ ಗಿಣಿಯೋ ನಾನೊಲ್ಲೆ !"

"ಹಾಗಾದರೆ ನನಗೆ ಈ ನೀರು ಬೇಡ."

"ಅಯ್ಯೋ ! ಕುಡೀರೀ ಅಂದ್ರೆ !"

"ಅಯ್ಯೋ ! ಕುಳಿತುಕೊಳ್ಳೀ ಅಂದ್ರೆ !"

"ಹು ! ಕುಳಿತುಕೊಂಡೆ !"

"ಹು ! ಕುಡಿದೆ! "

ಇಬ್ಬರೂ ಮೆಲ್ಲಗೆ ತಮ್ಮ ತಮ್ಮಲ್ಲೇ ಮಾತಾಡಿಕೊಳ್ಳುತ್ತಿದ್ದರು. ಆಗಾಗ ಶಾರದೆ ಮನೆಯ ಕಡೆ ತಿರುಗಿ ನೋಡುತ್ತಿದ್ದಳು. ಮಧ್ಯೆ ಮಧ್ಯೆ ಶಾರದೆ ಮೆಲ್ಲನೆ ನಗುತ್ತಿದ್ದಳು. ಅದು, ಸುಳಿ ಸುಳಿದು ಹರಿವ ಸಣ್ಣ ನದಿ ಬಂಡೆಗಳ ಸಂದಿನಲ್ಲಿ ಮಾಡುವ ಮೆಲ್ದನಿಯನ್ನ ಹೋಲುತ್ತಿತ್ತು.

"ಶಾರಿ, ನಾನು ಬರೆದ ಕಥೆಯನ್ನು ಓದಿದೆಯಾ?"

"ಹು ! ಓದಿದೆ ಚೆನ್ನಾಗಿದೆ !—ಆದರೆ ಒಳ್ಳೇ ಕೆಲಸ ನಿಮ್ಮದು ! ನಾವುನಾವು ಮಾತಾಡಿಕೊಂಡಿದ್ದೆಲ್ಲಾ ಬರೆದು ಬಿಟ್ಟಿದ್ದೀರಲ್ಲ ! ಚೆನ್ನಾಯ್ತು!"

"ನಿನ್ನ ಮಾತ್ತು ಅಷ್ಟು ಚೆನ್ನ ! ಅಷ್ಟು ಮುದ್ದು !"

"ಹೂ ! ಹೂ ! ಈಗ ಹಾಗೇ ಹೇಳ್ಕೋಬೇಕು ! ನಿರ್ವಾಹವಿಲ್ಲ !"

"ಆಗಲಿ, ಅದರದ್ದು ಇನ್ನೊಂದು "ಕಾಪಿ" ಮಾಡ್ಕೀಯಾ?"

"ಯಾಕೆ ?"

" ಕಾಲೇಜಿನಲ್ಲಿ ನಮ್ಮ ' ಪ್ರಬುದ್ಧ ಕರ್ಣಾಟಕ ' ಇಲ್ವೇ, ಆ ಸಂಘದವರು ಒಂದು 'ಸಂಣ ಕಥೆಗಳ ಸ್ಪರ್ಧೆ' ಇಟ್ಟಿದ್ದಾರೆ. ಎಲ್ಲಾವ್ದದಕ್ಕಿಂತ ಚೆನ್ನಾಗಿರುವುದಕ್ಕೆ ಮೆಡ್ಲು ಕೊಡ್ತಾರೆ. ಅದಕ್ಕೆ ನನ್ನ ಕಥೇನೂ ಕಳ್ಸೋಣಾ ಅಂತ "

"ಹು ಆಗಲಿ"

ಇಷ್ಟು ಮಾತು ಆಗಿದ್ದಾಗ ಹೊರಗೆ ಯಾರೋ "ಕೃಷ್ಣಮೂರ್ತೀ !" ಎಂದು ಕೂಗಿದ ಹಾಗಾಯಿತು. ಶಾರದೆ ಬೆಚ್ಚಿ " ಅಕೋ ! ಯಾರೊ ನಿಮ್ಮನ್ನು ಕೂಗ್ತಾರೆ ನೋಡಿ " ಎಂದು ಹೇಳಿ ಸರ್ರನೆ ಎದ್ದು ಮನೆಯ ಕಡೆ ಮಿಂಚಿದಳು. ಕೃಷ್ಣಮೂರ್ತಿಯ ಮನಸ್ಸಿಗೆ ಬಹಳ ಜುಗುಪ್ಸೆಯಾಯಿತು. ಬಹಳ ಬೇಸರಪಟ್ಟುಕೊಂಡು ಬಂದು ನೋಡಿದ. ಗುಂಡಪ್ಪ ಬಂದಿದ್ದ. ಗುಂಡಪ್ಪ ಅವನ ಪ್ರಾಣ ಸ್ನೇಹಿತ. ಅವನನ್ನು ನೋಡಿ "ಬಾ, ಗುಂಡ, ಕೂತುಕೋ. ಏನು ಬಂದೆ?" ಎಂದು ಕೇಳಿದ. ಇಬ್ಬರೂ ಹೋಗಿ ತೋಟದಲ್ಲಿದ್ದ ಕುರ್ಚಿಗಳ ಮೇಲೆ ಕುಳಿತುಕೊಂಡರು. ಗುಂಡ, ಅವನ ಮಾತಿಗೆ ಉತ್ತರವಾಗಿ " ವೈ. ಯಂ. ಸಿ. ಎ. ಗೆ ಹೋಗಿದ್ದೆ. ಈಗ ತಾನೆ ಅಲ್ಲಿಂದಬರ್ತಾಇದ್ದೇನೆ. ಹಾಗೇ ನೋಡಿಕೊಂಡು ಹೋಗೋಣ ಎಂತ ಬಂದೆ, " (ನಗುತ್ತ) " ಕತ್ತಲೆ, ಕಾಣಿಸಲಿಲ್ಲ ಕೂಗಿಬಿಟ್ಟೆ ! ಆ ಮೇಲೆ ನನ್ನ ತಪ್ಪು ಗೊತ್ತಾಯ್ತು !" ಎಂದು ಹೇಳಿದ.

"ಸರಿ ! ತಪ್ಪೇನು ಬಂತು !"

"ತಪ್ಪಿಲ್ಲ ತಾನೆ !! ಹೋಗಲಿ ಬಿಡು–'ಸ್ಪರ್ಧೆ'ಗೆ ಕಥೆ ಬರೆದೆಯಾ ?"

"ಹೂ, ಏನೋ ಒಂದು ಬರೆದಿದ್ದೇನೆ; ಶಾರಿ ಅದರ'Fair copy' ಮಾಡುತ್ತಿದ್ದಾಳೆ. "

"ಸರಿ ! ಸರಿ ! ಹಾಗಾದರೆ ಅದು ' Fair ' ಆಗೇ ಇರಬೇಕು."

"ನೀನು ಬರೀಲಿಲ್ವೆ ?"

"ನನಗೆ ಏನೋ ಸೋಮಾರಿತನ ಕಣೋ ! ಈಗ ಒಂದು ತಿಂಗಳ ಹಿಂದೆಯೇ ಬರೆಯೋಣ ಅಂದುಕೊಂಡು ಒಂದು ಕಾಗದದ ಮೇಲೆ ಏನೇನೋ ಗುರುತು ಹಾಕಿಟ್ಟಿದ್ದೆ. ಅದೆಲ್ಲಿ ಹೋಯಿತೋ ದೇವರೇ ಬಲ್ಲ. ಕಳೆದೇ ಹೋಯಿತೋ ಏನೋ! ಒಂದೆರಡು ಸಲ ಹುಡುಕಿದೆ, ಸಿಕ್ಕಲಿಲ್ಲ. ಹಾಳಾಯಿತು ! ಎಂದು ಸುಮ್ಮನಾದೆ. "

"ಇನ್ನೊಂದು ಸಲ ಚೆನ್ನಾಗಿ ಹುಡುಕು."

"ನೀನು ನನ್ನ ರೂಂ ನೋಡಿದರೆ ಏನು ಹೇಳುವಿಯೋ ! ಅದೊಂದು ಗೊಬ್ಬರದ ಗುಂಡಿಯಾಗಿದೆ. ಹೋದರೆ ಹೋಯಿತು ಬಿಡೋ!"

"ಲೋ, ಐವತ್ತು ರೂಪಾಯಿ ಮೆಡ್ಲು !"

"ನಿನಗೇ ಇರಲಪ್ಪ ಅದೆಲ್ಲಾ. ಆ ಮೆಡ್ಲು ನಿನಗೆ ಬಂದರೆ ಒಂದು ಸಾರ್ಥಕ."

"ಅದೇನು ?"

" 'Fair copy' ಮಾಡ್ತಾರಲ್ಲಾ ಅವರ ಕೊರಳಿಗೆ ಹಾಕಬಹುದು !"

"ಬಂದ ಕಾಲಕ್ಕೆ ನೋಡೋಣಂತೆ"

"ನಿನಗೆ ಬರಬೇಕು ಅನ್ನೋದೇ ನನ್ನ ಹಾರೈಕೆ. ಇನ್ನು ಹೊತ್ತಾಯ್ತು. ಹೊರಡ್ತೇನೆ."

"ಹು, ಹೊರಡು"

ಇಬ್ಬರೂ ಎದ್ದು ನಿಂತುಕೊಂಡರು. ಗುಂಡ ಹೊರಟ. ಕೃಷ್ಣಮೂರ್ತಿ ಅಷ್ಟು ಹೊತ್ತಿಗೆ ಏನನ್ನೋ ಜ್ಞಾಪಿಸಿಕೊಂಡು ಗುಂಡನನ್ನು ಕೂಗಿ, "ಲೋ ಗುಂಡ ! ನಾಳೆ ಬೆಳಿಗ್ಗೆ ನಿನ್ನ ರೂಮಿಗೆ ಬರುತ್ತೇನೋ. ನನ್ನ "Bradley"ಬೇಕು. ಅದನ್ನ ಏನಾದರೂ ಓದಿದೆಯೇನೋ !" ಎಂದ.

" ಓದೋದೇ ! ಆಗಲಿ ಬೆಳಿಗ್ಗೆ ಬಾ. ಕೊಡ್ತೇನೆ. ನಿನ್ನಿಂದ ತೆಗೆದುಕೊಂಡಿದ್ದು ಒಂದೇ–ಅದನ್ನು ಕೈಯಿಂದ ಮುಟ್ಟಿಯೂ ಇಲ್ಲ." ಹೀಗೆಂದು ಹೇಳಿ ಗುಂಡ ಹೊರಟು ಹೋದ.

ಕೃಷ್ಣಮೂರ್ತಿ ಮನೆಯೊಳಕ್ಕೆ ಹೋದ.

೨

ಮೂರನೆಯ ದಿನ ಬೆಳಿಗ್ಗೆ ಕೃಷ್ಣಮೂರ್ತಿ ಗುಂಡಪ್ಪನ ರೂಮಿಗೆ ಹೋದ. ಗುಂಡಪ್ಪ ಇನ್ನೂ ಎದ್ದೇ ಇರಲಿಲ್ಲ. ಕೃಷ್ಣಮೂರ್ತಿನೇ ಹೋಗಿ ಎಬ್ಬಿಸಿದ. ರೂಮು ಕಳ್ಳರು ಬಿದ್ದಮನೆ ಹಾಗೆ ಇತ್ತು. ಪುಸ್ತಕಗಳೂ, ಬಿಡಿ ಬಿಡಿ ಹಾಳೆಗಳೂ ನೆಲದ ಮೇಲೂ ಮೇಜಿನ ಮೇಲೂ ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದುವು. ಬಟ್ಟೆಬರೆಗಳ ಸ್ಥಿತಿಯೂ ಹಾಗೆಯೇ. ಕೃಷ್ಣಮೂರ್ತಿ ಈ ರಂಪವನ್ನು ನೋಡಿ, "ಗೊಬ್ಬರದ ಗುಂಡಿಯೇ!"

...ಂದುಕೊಂಡ. ಗುಂಡ ನನ್ನನ್ನು ನೋಡಿ "ಇದೇನೋ ...ಡ! ಇಷ್ಟೊಂದು ಗಲೀಜು ಮಾಡಿ ಬಿಟ್ಟಿದ್ದೀಯೆ!" ಎಂದು ...ಳಿದ.

ಗುಂಡ "ನಾನು ಆಗಲೇ ಹೇಳಲಿಲ್ವೇನೋ? ಎಲ್ಲಾ ಆ ಕೈ ...ಡಿದವಳ ಮಹಿಮೆ !"

"ನನ್ನ ಪುಸ್ತಕ ಎಲ್ಲಿ ? "

"ಅದೋ ನೋಡು ಆ ಗೂಡಿನಲ್ಲಿ ಬಿದ್ದಿದೆ."

ಕೃಷ್ಣಮೂರ್ತಿ ಪುಸ್ತಕವನ್ನು ತೆಗೆದುಕೊಂಡು ಅದರ ಮೇಲಿದ್ದ ಧೂಳನ್ನು ಒರಸಿ ಗುಂಡನನ್ನು ಕುರಿತು "ಏಳೋ, ಕೋಟು ಹಾಕಿಕೋ ಸ್ವಲ್ಪ ಕಾಫಿ ಕುಡಿದುಕೊಂಡು ಬರೋಣ" ಎಂದ. ಗುಂಡ ಅಂಗಿ ಹಾಕಿಕೊಂಡು ಸಿದ್ಧನಾದ. ...ಬ್ಬರೂ ಹೋಟಲಿನ ಕಡೆ ಹೊರಟರು. ಅಲ್ಲಿ ಮುಗಿದನಂ...ರ ಕೃಷ್ಣಮೂರ್ತಿ ಗುಂಡಪ್ಪನನ್ನು ಅವನ ರೂಮಿನ ಹತ್ತಿರ ...ಟ್ಟು ತನ್ನ ಮನೆಗೆ ಬಂದ.

ಆದಿನ ರಾತ್ರಿ ಕೃಷ್ಣಮೂರ್ತಿ ತನ್ನ ಕೊಠಡಿಯಲ್ಲಿ ಒಬ್ಬನೇ ...ಳಿತುಕೊಂಡು ಏನನ್ನೋ ಬರೆಯುತ್ತಿದ್ದ. ಒಳಗಿನಿಂದ ...ಗಿಲ ಅಗಳಿ ಹಾಕಿದ್ದ. ಅವನು ಬರೆಯುತ್ತಿದ್ದಾಗ ಮಧ್ಯೆ ...ಗಿಲನ್ನು ತಟ್ಟಿದ ಹಾಗಾಯಿತು. ಕೃಷ್ಣಮೂರ್ತಿ ಕುಳಿ...ದ್ದ ಹಾಗೆಯೇ ಬಾಗಿಲ ಕಡೆಗೆ ಮುಖವನ್ನು ತಿರುಗಿಸಿ, "ಯಾರು!" ಎಂದು ಕೇಳಿದ. ಉತ್ತರ ಬರಲಿಲ್ಲ. ಸ್ವಲ್ಪ ಹೊತ್ತು ...ಟ್ಟು ಪುನಃ ತಟ್ಟಿದ ಹಾಗಾಯಿತು. ಕೃಷ್ಣಮೂರ್ತಿ ಸ್ವಲ್ಪ ...ಟ್ಟಿನಿಂದ "ಯಾರದು!" ಎಂದು ಮೊದಲಿಗಿಂತಲೂ ಗಟ್ಟಿ...ಯಾಗಿ ಕೇಳಿದ. ಹೊರಗೆ ಕೈಬಳೆಗಳ ಸದ್ದು ಕೇಳಿಸಿತು. ...ಜೊತೆಗೆ "ನಾವು" ಎಂದು ಉತ್ತರ ಬಂತು. ಅದೆಲ್ಲಿ ಹೋ...ಯಿತೋ ಅವನ ಸಿಟ್ಟೆಲ್ಲಾ! ಜಗ್ಗನೆ ಎದ್ದು ಬಾಗಿಲನ್ನು ತೆರೆದ. ...ನೋಡಿದರೆ ಹೊಸ್ತಿಲಿನ ಆಚೆ ಅವನ ಚೆಲ್ವಿನ ಶಾರಿ. ಅವಳ ...ಮುದ್ದಾದ ಮುಖದ ಮೇಲೆ ಮುಗುಳ್ನಗೆಯ ಸುಳಿ; ಬೇಸಿ...ಗೆಯ ಬೆಳದಿಂಗಳ ರಾತ್ರೆಯಲ್ಲಿ ಅಡಗಿದ ಚಂದ್ರನ ಅಮೃತ...ದಿಂದ ತೊಯ್ದ ಕಾದಂಬಿನಿಯ ಅಂಚನ್ನು ನೆನಪಿಗೆ ತರು...ತ್ತಿತ್ತು. ಅವಳ ಎಡಗೈಯಲ್ಲಿ ಒಂದು ಬೆಳ್ಳಿಯ ತಟ್ಟೆ ಅದರ ...ಒಂದು ಭಾಗದಲ್ಲಿ ಎರಡು ಚಪ್ಪರ ದ್ರಾಕ್ಷಿಗೊಂಚಲು ...ಇನ್ನೊಂದು ಭಾಗದಲ್ಲಿ ತಾಂಬೂಲ, ಬಲಗೈಯಲ್ಲಿ ಒಂದು ...ಬಟ್ಟಲು ಹಾಲು

ಶಾರದೆ ನಗುತ್ತ "ಒಳಗೆ ಬರಬಹುದೆ ? ಸಿಟ್ಟಿನಲ್ಲಿರುವ ...ಹಾಗೆ ಕಾಣುತ್ತೆ! " ಎಂದಳು.

"ಅಯ್ಯೋ ! ಹಾಗೆಂದರೇನು ! ದಯಮಾಡೀ ಅಂದ್ರೆ "

ಶಾರದೆ ಒಳಗೆ ಬಂದಳು. ಕೃಷ್ಣಮೂರ್ತಿ ಪುನಃ ಬಾಗಿಲನ್ನು ಹಾಕಿಕೊಂಡು ಮಂಚದಮೇಲೆ ಹೋಗಿ ಕುಳಿತುಕೊಂಡ. ಶಾರದೆ ತಟ್ಟೆಯನ್ನೂ ಬಟ್ಟಲನ್ನೂ ಮೇಜಿನಮೇಲೆ ಇಟ್ಟು, ಅದರ ಮೇಲಿದ್ದ ಕೈಬರಹದ ಕೆಲವು ಹಾಳೆಗಳನ್ನು ನೋಡಿ "ಇದೇನು ? ಇನ್ನೊಂದು ಕಥೆ ಬರೆವಹಾಗಿದೆಯಲ್ಲ? " ಎಂದು ಕೇಳಿದಳು—ಕೃಷ್ಣಮೂರ್ತಿ ಕೂಡಲೆ ಉತ್ತರ ಕೊಡಲಿಲ್ಲ. ಸ್ವಲ್ಪ ಹೊತ್ತು ಸುಮ್ಮನಿದ್ದು "ಹೌದು; ಇನ್ನೊಂದು ಕಥೆ ಬರೀತಾ ಇದ್ದೇನೆ" ಎಂದು ಹೇಳಿದ. ಶಾರದೆ ಕುತೂಹಲದಿಂದ "ಯಾವಾಗ ಮುಗಿಯುತ್ತೆ ? " ಎಂದು ಕೇಳಿದಳು.

"ಇವತ್ತೇ, ಮಲಗುವುದಕ್ಕೆ ಮುಂಚೆ ಮುಗಿಸೋಣ ಅಂತ. ಆದರಂತೂ ಸರಿ; ಇಲ್ಲದೇ ಇದ್ದರೆ ನಾಳೆಯನಾದರೂ ಮುಗಿಸಬೇಕು "

ಶಾರದೆ ಹತ್ತಿರ ಹೋಗಿ ಅವನ ಪಕ್ಕದಲ್ಲಿ ಕುಳಿತುಕೊಂಡು ಅವನ ಭುಜವನ್ನು ಮೆಲ್ಲಗೆ ಅಲುಗಿಸುತ್ತ "ನಾನೂ ಓದಬೇಕು ಆಕಥೇನ " ಎಂದು ಮೆಲ್ಲಗೆ ಹೇಳಿದಳು.

" ಇನ್ನೂ ಪೂರ್ತಿಯಾಗಿಲ್ಲ; ಈಗಲೇ ಏನು ಅವಸರ? "

" ಎಷ್ಟಾಗಿದೆಯೋ ಅಷ್ಟೇ ಆಯಿತು "

" ಉಹು ! ಬೇಡ. ಈಗಿನ್ನೂ ಹರಕುಹರಕಾಗಿದೆ. ಎಲ್ಲಾ ಬರೆದಮೇಲೆ ಓದಿದರೆ ಸೊಗಸು! "

ಶಾರದೆ, ಧ್ವನಿಯನ್ನು ಸ್ವಲ್ಪ ರಾಗಮಾಡಿ, "ಊ, ನಾ-ಬಿ-ಡೊ-ಲ್ಲಾ" ಎಂದಳು.

" ಏ-ನ್ಮಾ-ಡ್ತೀ-ಯಾ ? "

" ಏನೋ ! "

" ನೋಡು ನೀನು ಒಳ್ಳೇ ಹುಡುಗಿ, ಹಟಮಾಡಬೇಡ " (ಮೇಜಿನಮೇಲಿದ್ದ ತಟ್ಟೆಯನ್ನು ನೋಡಿ) "ಎಲ್ಲೀದು-ದ್ರಾಕ್ಷಿ?"

" ಆಚೆಬೀದೀಲಿ ಸೋನಮ್ಮನವರ ಮನೆಗೆ ಹೋಗಿದ್ದೆ. ಅವರು ಕೊಟ್ಟಿದ್ದು" ದ್ರಾಕ್ಷಿ ಹಣ್ಣುಗಳನ್ನು ತಿಂದುದಾಯಿತು. ಶಾರದೆಗೂ ತಿನ್ನು—ಎಂದು ಹೇಳಿದ. ಅವಳು ತಿನ್ನೊಲ್ಲಾ—ಎಂದು ಹಟಮಾಡಿದಳು. ಅವನು ಬಿಟ್ಟರೆ ಸರಿ! ತಿನ್ನಿಸಿದ, ಆ ಮೇಲೆ ತಾಂಬೂಲ, ಆವಾಗ ಒಂದಿಷ್ಟು ಜಗಳ. ಇದೇನು ನಿಮ್ಮಲ್ಲಿ ಅನೇಕರಿಗೆ ಹೊಸದಲ್ಲ. ಗಟ್ಟಿಯಾಗಿ ಜಗಳವೂ

ಡುವಹಾಗಿಲ್ಲ. ಹೊರಗಿನವರಿಗೆಲ್ಲಾ ಕೇಳಿಸಿಬಿಡುತ್ತದೆ! ಜಗಳ ಮಾಡದೆ ಇರುವುದಕ್ಕೆ ಮನಸ್ಸಿಲ್ಲ. ಹೇಗೋ ಆ ತಾಂಬೂಲದ ಜಗಳ ಮುಗಿಯುವ ಹೊತ್ತಿಗೆ, ಶಾರದೆಯ ತುರುಬು ಬಿಚ್ಚಿ ಕೂದಲು ಕೆದರಿ ಅವಳು ಮುಡಿದುಕೊಂಡಿದ್ದ ಹೂವೆಲ್ಲಾ ಚಲ್ಲಾಪಿಲ್ಲಿಯಾಗಿ ನೆಲದಮೇಲೆ ಉದುರಿದ್ದವು. ಕೃಷ್ಣಮೂರ್ತಿಯ ಷರಟಿನ ಜೇಬು ಹರಿದು, ಅವನ ಬಲಮುಂಗೈಮೇಲೆ ಅವಳ ಹಲ್ಲು ಸ್ವಲ್ಪ ಊರಿದ ಗುರುತಿತ್ತು. ಜಯಲಕ್ಷ್ಮಿ ಯಾರನ್ನು ಒಲಿದಳೋ ಹೇಳುವುದು ಕಷ್ಟ. ಸೋಲುವುದಕ್ಕೋಸ್ಕರ ಪ್ರಾರಂಭಿಸಿದ ಜಗಳ. ಶಾರದೆ, ತುರುಬನ್ನು ಪುನಃ ಸುತ್ತಿಕೊಂಡು, ಕೆದರಿದ್ದ ಮುಂಗುರುಳನ್ನು ಉಗುರ್ಗನೆಯಿಂದ ತಿದ್ದಿಕೊಳ್ಳುತ್ತ, ಸೀರೆಯ ಸೆರಗನ್ನೂ ನಿರಿಯನ್ನೂ ಸರಿಪಡಿಸಿಕೊಳ್ಳುತ್ತ, ನಗುತ್ತ ನಗುತ್ತ ಪುನಃ ಗಂಡನ ಸಮೀಪಕ್ಕೆ ಬಂದಳು. ಕೃಷ್ಣಮೂರ್ತಿ ಇವಳು ಬರುವುದನ್ನು ನೋಡಿ, “ ಬೇಡಾ !—ಬೇಡಾ ! ” ಎಂದು ಓರೆಗಣ್ಣಿನಿಂದ ನೋಡಿದ. ಅವಳೂ ಅವನನ್ನು ಓರೆಗಣ್ಣಿನಿಂದ ನೋಡುತ್ತ “ಯಾಕೇ?—ಯಾಕೇ?” ಎಂದು ಕೇಳಿದಳು.

“ ನೀನು ಹತ್ತಿರ ಇದ್ದರೆ ಕಥೆ ಬರೆಯೋಕೆ ಮನಸ್ಸು ಎಲ್ಲಿಂದಾ ತರಲಿ ? ”

“ಹಾಗಾದರೆ ಈವೊತ್ತು ಬೇಡ. ಇನ್ನೆಂದಾದರೂ ಬರೆದರೆ ಆಯ್ತು”.

“ಸರಿ! ಚೆನ್ನಾಯ್ತು! ಈವೊತ್ತೇನೋ ಕಥೆ ಬರೆಯೋಣಾ ಅಂತ ಮನಸ್ಸು ಹುಟ್ಟಿದೆ — ಈವೊತ್ತು ಬಿಟ್ಟರೆ ಇನ್ನೆಷ್ಟು ದಿನಕ್ಕೋ ಪುನಃ ಈ ಮನಸ್ಸು ಬರಬೇಕಾದರೆ ! “ ಇಲ್ಲಾ, ಈವೊತ್ತೆ ಬರೆದು ಬಿಡಬೇಕು ”

ಶಾರದೆ ಸುಳ್ಳು ಸುಳ್ಳೇ ಸ್ವಲ್ಪ ಸಿಟ್ಟನ್ನು ತೋರಿಸಿ “ಹಾಗಾದರೆ ನೀವೊಬ್ಬರೇ ಬರ್ಕೊಳ್ಳಿ—ನಾನು ಈವೊತ್ತು ಇಲ್ಲಿರೊಲ್ಲ—ಹೋಗ್ತೀನಿ ” ಎಂದು ಹೇಳಿ ಬಾಗಿಲಕಡೆಗೆ ಹೊರಟಳು. ಕೃಷ್ಣಮೂರ್ತಿ ತಟ್ಟನೆ ಎದ್ದುಹೋಗಿ ಅವಳನ್ನು ಹಿಡಿದುಕೊಂಡು—“ ಇಲ್ಲ, ಇಲ್ಲ ಬಾ— ಈವೊತ್ತು ಕಥೆ ಬೇಡ. ಇದೇಕೆ ಇಷ್ಟೊಂದು ಕೋಪ ? ” ಎಂದು ಕರೆದುಕೊಂಡು ಹೋಗಿ ಮಂಚದಮೇಲೆ ಕೂರಿಸಿಕೊಂಡ. ಅವಳಿಗೆ ಒಳಗೊಳಗೇ ನಗು—ಕೃಷ್ಣಮೂರ್ತಿ ಅವಳನ್ನು ನೋಡುತ್ತ “ ಹೀಗೆ ಮಾಡೋಣ; ನಾನು ಕಥೆ ಮುಗಿಸುವ ಹೊತ್ತಿಗೆ ಬಹಳ ಹೊತ್ತಾಗುತ್ತದೆ. ನೀನು ಮಲಗಿಕೋ ನಾನು ಕಥೆಯನ್ನು ಮುಗಿಸುತ್ತಲೆ ನಿನ್ನನ್ನು ಎಬ್ಬಿಸುತ್ತೇನೆ. ನಿನಗೆ ಆಗ ನಿದ್ದೆ ಕಟ್ಟಿ ಓದುವುದಕ್ಕಾದರೆ ಓದು—ಇಲ್ಲದಿದ್ದರೆ ನಾಳೆ ಬೆಳಿಗ್ಗೆ ಅಗತ್ಯವಾಗಿ ಓದಬಹುದು. ಮಹಾರಾಣಿಯವರಲ್ಲಿ ಇದೇ ನನ್ನ ವಿಜ್ಞಾಪನೆಗಳು. ” ಎಂದು ನಗುತ್ತ ಹೇಳಿದ. ಅವಳು ನಿರ್ವಾಹವಿಲ್ಲದೆ ಒಪ್ಪಿದಳು. ಕೃಷ್ಣಮೂರ್ತಿ ಕಥೆಬರೆವುದಕ್ಕೆ ಕುಳಿತ. ಶಾರದೆ ಮಲಗಿಕೊಂಡಳು—ಆದರೆ ನಿದ್ದೆ ಇಲ್ಲ. ಸ್ವಲ್ಪಹೊತ್ತು ಬಿಟ್ಟುಕೊಂಡು “ ಆಯಿತೇ? ” ಎಂದು ಕೇಳಿದಳು. ಕೃಷ್ಣಮೂರ್ತಿಗೆ ನಗು ಬಂತು. ಅವನು “ಹು, ಹನ್ನೆರಡುಗಂಟೆ ಆಯಿತು ” ಎಂದು ಉತ್ತರಕೊಟ್ಟ.

ಕೃಷ್ಣಮೂರ್ತಿ ಬೇಗಬೇಗನೆ ಬರೆಯುತ್ತಕೊಂಡು ಹೋಗುತ್ತಿದ್ದ. ಮಾತುಗಳೂ, ಭಾವಗಳೂ, ಯೋಚನೆಗಳೂ ನಾನು ಮುಂದೆ ತಾನು ಮುಂದೆ ಎಂದು ಬರುತ್ತಿದ್ದುವು. ಅವನ ಲೇಖನಿಗೆ ತಡೆಯೇ ಇಲ್ಲ. ಬರೆದ ಹಾಳೆಗಳನ್ನು ಜೋಡಿಸುವುದಕ್ಕೂ ಪುರಸತ್ತಿಲ್ಲ—ಬರೆದ ಹಾಗೆಲ್ಲಾ ಪಕ್ಕಕ್ಕೆ ಎಸೆಯುತ್ತಿದ್ದ. ಸುಮಾರು ರಾತ್ರಿ ಎರಡುಗಂಟೆಯ ಹೊತ್ತಿಗೆ ಕಥೆಯನ್ನು ಬರೆದು ಮುಗಿಸಿದ. ಆಮೇಲೆ ಆ ಹಾಳೆಗಳನ್ನೆಲ್ಲಾ ಸರಿಯಾಗಿ ಜೋಡಿಸಿ, ಹೊಲಿದು—ಅದರ ಮೊದಲನೆಯ ಹಾಳೆಯಮೇಲೆ “ಹಳೆಯ ಕನಸು” ಎಂದು ಬರೆದ. ಅದು ಅವನು ಆ ಕಥೆಗೆ ಕೊಟ್ಟ ಹೆಸರು. ಅದರ ಕೆಳಗೆ “ ನನ್ನ ಶಾರದೆಗೆ ” ಎಂದು ಬರೆದು, ಪುಸ್ತಕವನ್ನು ಸುತ್ತಿ, ಮೆಲ್ಲಗೆ ಮಂಚದ ಸಮೀಪಕ್ಕೆ ಹೋಗಿ, ಶಾರದೆಗೆ ಎಚ್ಚರವಾಗದಂತೆ ಅವಳ ಸೆರಗಿನ ತುದಿಯಲ್ಲಿ ಕಟ್ಟಿ ದೀಪವನ್ನು ಆರಿಸಿ ಮಲಗಿಕೊಂಡು ನಿದ್ದೆಹೋದ.

೨

ಮಾರನೆಯ ದಿನ ಸಾಯಂಕಾಲ ಗುಂಡಪ್ಪ ಕೃಷ್ಣಮೂರ್ತಿ ಇಬ್ಬರೂ ಕಾಲೇಜಿನಿಂದ ಮನೆಯಕಡೆ ಬರುತ್ತಿದ್ದರು. ಕೃಷ್ಣಮೂರ್ತಿ, ತಮ್ಮ ಮನೆಯಲ್ಲೇ ಇಬ್ಬರೂ ಟೀ ತೆಗೆದುಕೊಂಡು ಆಮೇಲೆ ಒಟ್ಟಿಗೆ ಸುತ್ತಾಡಿಕೊಂಡು ಬರುವುದಕ್ಕೆ ಹೋಗೋಣವೆಂದು ಹೇಳಿದ. ಅದೇಪ್ರಕಾರ ಇಬ್ಬರೂ ಅಲ್ಲಿ ಟೀ ಮುಗಿಸಿಕೊಂಡು ಯಶವಂತಪುರದ ರಸ್ತೆಯನ್ನು ಸೇರುವುದಕ್ಕೋಸ್ಕರ ಸಂಪಗೆರಸ್ತೆಯಲ್ಲಿ ನಡೆದು ಹೋಗುತ್ತಿದ್ದರು. ಗಂಧದ ಎಣ್ಣೆಯ ಕಾರ್ಖಾನೆಯವರೆಗೂ ಬಂದಿದ್ದರು. ಮಾತುಕಥೆ ಹೆಚ್ಚಾಗಿರಲಿಲ್ಲ. ಏನಿದ್ದರೂ ಗುಂಡಪ್ಪನೇ ಆಗಾಗ ಮಾತಾಡುತ್ತಿದ್ದವನು. ಕೃಷ್ಣಮೂರ್ತಿ ಸುಮ್ಮನೆ “ ಹುಂ, ಹುಂ ” ಎನ್ನುತ್ತಿದ್ದ ಅಷ್ಟೆ. ಆಗ ತಾನೆ ಸ್ವಲ್ಪ ಮಳೆ ಬಿದ್ದು, ರಸ್ತೆಯಲ್ಲಿ

ಘೋಲ್ಲದೆ, ಗಾಳಿ ನಿರ್ಮಲವಾಗಿ ತಂಪಾಗಿ ಬೀಸುತ್ತಿತ್ತು. ನಿಧಾನವಾಗಿ ನಡೆದು ಹೋಗುತ್ತಿದ್ದರೂ ಕೃಷ್ಣಮೂರ್ತಿ ಏನೂ ಮಾತಿಲ್ಲದೆ ಮೌನವಾಗಿದ್ದುದನ್ನು ನೋಡಿ ಗುಂಡನಿಗೆ ಆಶ್ಚರ್ಯವಾಯಿತು. ಅವನು ತಾಳ್ಮೆಯನ್ನು ಬಿಟ್ಟು "ಲೋ, ಕಿಟ್ಟು ! ಯಾಕೋ ಈದಿನ ಹೀಗಿದ್ದೀಯೆ? " ಎಂದು ಕೇಳಿದ.

"ಹೇಗಿದ್ದೇನೆ? "

"ಸುಮ್ಮನೆ 'ಹುಂ'–ಗುಟ್ಟಿಕೊಂಡು ಮೌನ ಗೌರಿವ್ರತ! "

"ರಾತ್ರಿಎಲ್ಲಾ ನಿದ್ದೆ ಇಲ್ಲ ಕಣೋ "

ನಗುತ್ತ "ಸರಿ! "

"ಏನು ಸರಿ! ಬಿಸ! "

"ಇದುವರೆಗೂ ಸರಿಯಾಗಿದ್ದೆ. ಈಗ ಯಾಕೆ ಹೀಗೆ ಎಂದರೆ 'ನಿದ್ದೆ ಇಲ್ಲಾ' ಅಂತ ಸುಳ್ಳುಹೇಳ್ತೀಯಲ್ಲಾ ! ಇನ್ನೇನು ವಿಚಾರ? "

"ಹೌದು, ಒಂದು ವಿಷಯ ಇದೆ. ಅದನ್ನು ಈಗಲೇ ನಿನಗೆ ಹೇಳಬೇಕೋ ಬೇಡವೋ ಎಂದು ಯೋಚಿಸುತ್ತಿದ್ದೆ. ಅಷ್ಟೆ "

"ಹೇಳಬಹುದು ಅಂದುಕೊಂಡ್ಯೋ ಅಥವಾ ಬಾರದು ಅಂದುಕೊಂಡ್ಯೋ? "

"ಕಥೆ ಕಳಿಸೋಕೆ ಇನ್ನೂ ಎಷ್ಟು ದಿನ ಇದೆ? "

"ಇವತ್ತೆಷ್ಟು ತಾರೀಖು ? ಏಳು—ಇನ್ನೆಂಟು ದಿನ ಇದೆ "

"ಹಾಗಾದರೆ ಈವೊತ್ತಿಗೆ ಏಳನೇ ದಿನ ನಿನಗೆ ಹೇಳುತ್ತೇನೆ"

"ಏನು, ಇನ್ನೊಂದು ಕಥೆ ಬರೆದೆಯೋ? "

"ಹೌದು; ನಿನ್ನೆ ರಾತ್ರಿ ಪ್ರಾರಂಭಮಾಡಿ ನಿನ್ನೆ ರಾತ್ರಿನೇ ಮುಗಿಸಿ ಬಿಟ್ಟೆ "

"ಏನು ? ನೀನು!–ರಾತ್ರಿ ! ಕಥೆ ಬರೆಯೋದು ! ಸಾಧವಾಯಿತೆ? "

"ಲೇ, ನಿಜವಾಗಿಯೂ ಒಂದು ಕಥೆ ಬರೆದೆನೋ "

"ನಿಜವಾಗಿಯೂ? "

"ಸತ್ಯವಾಗಿಯೂ; ಅದಕ್ಕೇ ನಿದ್ದೆ ಇಲ್ಲಾ ಅಂದದ್ದು–"

"ಹಾಗಾದರೆ ನೋಡಬೇಕು. ಬಹಳ ಸಂತೋಷ! ಒಂದು ರಾತ್ರಿಯಲ್ಲಿ ಮುಗಿಸಿದ ಕಥೆ ಹೇಗಿದೆಯೋ ನೋಡೋಣ! "

"ಲೋ ಗುಂಡ, ಇನ್ನೂ ಎಂಟುದಿನ ಇದೆಯಲ್ಲ. ನೀನೂ ಒಂದು ಕಥೆ ಬರೀಬಹುದು, ಮನಸ್ಸು ಮಾಡಿದರೆ "

"ಉಹು! ನ-ನ್ಗೆ-ಆ-ಗೋ-ದಿ-ಲ್ಲಾ! "

"ಹಾಗಾದರೆ ಹೀಗೆ ಮಾಡೋಣ—ನಾನು ನೆನ್ನೆ ರಾತ್ರಿ ಬರೆದನಲ್ಲಾ ಅದನ್ನು ನಿನ್ನ ಹೆಸರಿನಲ್ಲಿ ಕಳಿಸು—ನನ್ನ ಹೆಸರಿನಲ್ಲಿ ನಾನು ಮೊದಲು ಬರೆದದ್ದನ್ನು ಕಳಿಸ್ತೇನೆ, ಏನ್ಹೇಳ್ತೀಯಾ? "

"ಉಹು ! ಅದಾಗದು. ಇಲ್ಕೇಳೋ ಕಿಟ್ಟು. ನನಗೆ ಈ ವರ್ಷ ಕಳ್ಸೋಕೇ ಮನಸ್ಸಿಲ್ಲ. ಹಾಗೆ ನನಗೆ-ಕಥೆ ಕಳಿಸ್ಬೇಕು, ಮೆಡ್ಲು ಹೊಡೀಬೇಕು. ಎಂದು ಮನಸ್ಸಿದ್ದಿದ್ರೆ ಅದೇನೂ ದೊಡ್ಡಲ್ಲ- ಬೇಕಾದ್ರೆ ಈಗ್ಲೇ ಹೋಗ್ತಾ ಹೋಗ್ತಾ ಒಂದ್ಕಥೆ ಹೇಳೇನು! ಆದ್ರೆ ಉಹು-ನನಗೆ ಮನಸ್ಸಿಲ್ಲ-ನೀನು ಹತ್ಕಥೆ ಬರೆದಿದ್ರೂ ನಿನ್ನ ಹೆಸರಿನಲ್ಲೇ ಕಳ್ಸು "

"ಹಾಗಾದ್ರೆ ನಾನೂ ಕಳ್ಸೋದಿಲ್ಲ "

"ಮಣ್ಣುಹೊಯ್ತು ! ಅಲ್ಲವೋ ಬೆಪ್ಪ ! ನಾನು ಕಳಿಸ್ದೇ ಇದ್ರೆ ನೀನೇಕೋ ಕಳಿಸ್ಬಾರ್ದು ? ನೀನು ಕಳಿಸ್ಲೇಬೇಕು ! ನಾನು ಯಾಕೆ ಕಳಿಸೊಲ್ಲ ಗೊತ್ತೆ ? "

"ಯಾಕೆ? "

ನಗುತ್ತ—

"ನಾನು ಕಳಿಸಿದರೆ ನಿನಗೆ ಮೆಡ್ಲು ಬರೋದಿಲ್ಲ! "

"ಸಂತೋಷ, ನಿನಗೇ ಬರಲಿ! "

"ನನಗೆ ಬಂದ್ರೆ ನಾನ್ಯಾರ ಕೊರಳಿಗೆ ಹಾಕಲಿ? "

"ನಿನ್ಕೊರಳಿಗೆ! "

"ನನ್ಕೊರಳಿಗೆ ಬೇಡಾ ಅಂತ! ನೀನು ಕಳಿಸ್ಬೇಕು-ಮೆಡ್ಲು ಹೊಡೀಬೇಕು ಯಾರು?-ಅವರ ಹೆಸರೇನು? ಶಾರೀ-ಅಂತಾನೆ?-ಅವರ ಕೊರಳಿಗೆ ಹಾಕ್ಬೇಕು, ಹಾಗಾದರೆ ನನಗೆ ಬಹಳ ಸಂತೋಷ! "

"ಸರಿ, ಇಷ್ಟು ಹಟವಾದರೆ ಇನ್ನೇನು ಮಾಡುವುದು? "

ನಿಧಾನವಾಗಿ ಮಾತು ಬೇರೇ ದಾರಿಹಿಡಿಯಿತು. ಅವರಿಬ್ಬರೂ ಯಶವಂತಪುರದ ಸ್ಟೇಷನ್ನಿನ ತನಕ ಹೋಗಿ ತಿರುಗಿದರು. ಬರುವಾಗ ಕತ್ತಲೆಯಾಗಿತ್ತು. ಗುಂಡ ತನ್ನ ಕೊಠಡಿಯ ಹತ್ತಿರ ಬಂದೊಡನೆಯೆ, "ಲೋ, ಇನ್ನು ಹೊತ್ತಾಯಿತೋ, ಹೊರಡ್ತೀನಿ. ಹೊತ್ತಾಗಿ ಹೋದ್ರೆ ಹೋಟೆಲ್ನಲ್ಲಿ ಕೂಳ್ಗೇ ಚಕ್ರು. ಬೆಳಿಗ್ಯೆ ಬರ್ತೀನೆ ನಿನ್ನ ರಾತ್ರಿಯ ಕಥೆ ನೋಡೋಕೆ! " ಎಂದು ಹೇಳಿ ಕೊಠಡಿಯ ಕಡೆಗೆ ತಿರುಗಿದ,

ಕೃಷ್ಣಮೂರ್ತಿ ಒಬ್ಬನೇ ಆದ. ಮನೆಗೆ ಇನ್ನೂ ಒಂದು ಫರ್ಲಾಂಗ ಇದೆ. ಮನಸ್ಸಿನಲ್ಲೇ ಏನೇನೋ ಯೋಚನೆ ಮಾಡುತ್ತ ನಿಧಾನವಾಗಿ ನಡೆದು ಬರುತ್ತಿದ್ದ. ತನ್ನಷ್ಟಕ್ಕೆ ತಾನೇ ಗುಂಡಪ್ಪನ ಗುಣಕಥನಮಾಡುತ್ತಿದ್ದ-"ಶುದ್ಧ ಫೂಲ್! ಸೋಮಾರಿತನದಲ್ಲಿ ಮೊದಲು! ಜಂಭ ಜೇರೆ! ತಾನು ಕಳ್ಸಿದರೆ ನನಗೆ ಬರೋದಿಲ್ವಂತೆ! ಅದೇನೋ ನಿಜ-ಆದರೆ? ನಾಳೆ ಬರ್ಲಿ" (ಹಾಗೆಯೇ ಸ್ವಲ್ಪಹೊತ್ತು ಯೋಚಿಸಿ) "ಉಹು! ನಾಳೆಬೇಡ, ಕಳ್ಸೋವಾಗ ಅವನಿಗೆ ಗೊತ್ತಾಗದಂತೆ ಕಳಿಸಿದರೆ ಸರಿ— ಅವನು.ನಾಳೆ ಬಂದರೆ?—ಹು! ಒರ್ಲಿ ಅದಕ್ಕೆ ಸರಿಯಾಗಿ ಮಾಡ್ತೀನೆ"—ಇಷ್ಟು ಯೋಚನೆ ಮಾಡುವಷ್ಟರಲ್ಲೇ ಮನೆಯಹತ್ತಿರ ಬಂದುಬಿಟ್ಟ. ಸ್ವಲ್ಪ ನಗುತ್ತ "ಅವನಿಗೆ ಸ್ವಲ್ಪ ಬುದ್ಧಿ ಕಲಿಸ್ಬೇಕು!'' ಅಂದುಕೊಂಡು ಮನೆಯೊಳಕ್ಕೆ ಹೋದ.

೪

ಆದಿನ ರಾತ್ರಿ ಸುಮಾರು ಎಂಟುಗಂಟೆ ಸಮಯ. ಕೃಷ್ಣಮೂರ್ತಿ ಊಟವಾಗಿ ತನ್ನ ಕೊಠಡಿಯಲ್ಲಿ ಮಂಚದ ಮೇಲೆ ಮಲಗಿಕೊಂಡಿದ್ದ. ಏನೋ ಬಹಳ ಯೋಚನೆಯಲ್ಲಿದ್ದಂತೆ ತೋರುತ್ತಿತ್ತು. ಅವನ ಮನಸ್ಸು ಗಾಳಿಗೆ ಸಿಕ್ಕ ತರಗೆಲೆಯಂತೆ ಆಗಿತ್ತು. ತನ್ನಲ್ಲಿ ತಾನು, "ನಾನೇನೋ ಈಚೆಗೆ ಬರೆದ ಕಥೆಯನ್ನು ಅವನ ಹೆಸರಿನಲ್ಲೇ ಕಳಿಸೋಣ ಎಂದು ಹೇಳಿದೆ—ಅವನೇ ಬೇಡಾ ಅಂದ—ಇನ್ನು ನಾನು ಮಾಡುವುದೇನು? ಅದಕ್ಕೋಸ್ಕರವೇ ಅದನ್ನು ಬರೆದೆ. ಅವನು ಹೀಗೆ ಹೇಳುತ್ತಾನೆ ಎಂದು ತಿಳಿದ್ದಿದ್ರೆ ಬರೀತಲೇ ಇರ್ಲಿಲ್ಲ. ಈಗ ಬರೆದಿದ್ದಾಯ್ತಲ್ಲ. ನಾನೇನೋ ಮೊದಲು ಬರೆದದ್ದನ್ನು ಕಳಿಸ್ಬಿಡ್ತೀನೆ—ಇದು ಹೀಗೇಇರ್ಲಿ—ಅವನಿಗೆ ಒಂದಲ್ಲ ಒಂದುದಿನ ಚೆನ್ನಾಗಿ ಬೈದು ಹೇಳಿಬಿಡೋದು-ಇನ್ನೇನು ಮಾಡೋಕಾಗತ್ತೆ?" ಎಂಬುದಾಗಿ ಯೋಚಿಸುತ್ತಿದ್ದ—ಇಷ್ಟು ಹೊತ್ತಿಗೆ ಶಾರದೆ ಎಂದಿನಂತೆ ಕೈಯಲ್ಲಿ ತಾಂಬೂಲದ ತಟ್ಟೆಯನ್ನು ಹಿಡಿದುಕೊಂಡು ಅವನ ಕೊಠಡಿಯೊಳಕ್ಕೆ ಬಂದಳು. ಅವಳು ಬರುವಿಕೆಯ ಸೊಗಸನ್ನು ಕೃಷ್ಣಮೂರ್ತಿ ನೋಡಲಿಲ್ಲ. ಅವಳು ಮೆಲ್ಲಮೆಲ್ಲನೆ ಅಡಿಯಿಡುತ್ತ, ಅಂದುಗೆಯ ತಾಳಕ್ಕೆ ಸರಿಯಾಗಿ ಬಳುಕುತ್ತ, ಆ ಬಳುಕಿಗೆ ತಕ್ಕ ಕಟಾಕ್ಷದಿಂದಲೂ, ಆ ಕಟಾಕ್ಷವನ್ನನುಸರಿಸಿದ ಮುಗುಳ್ನಗೆಯಿಂದಲೂ, ತನಗಾಗಿ ಕಾದಿರುವ ರಾಜನ ಅಂತಃ ಪುರವನ್ನು ಪ್ರವೇಶಿಸುವ ರಾಣಿಯಂತೆ ಬಂದಳು. ಕೃಷ್ಣಮೂರ್ತಿ ತನ್ನ ಯೋಚನೆಯಲ್ಲಿದ್ದವನು ಇದನ್ನೆಲ್ಲಾ ನೋಡಲಿಲ್ಲ. ಯಾರಿಗೋಸ್ಕರ ಈ ಒನಪು ಒಯ್ಯಾರಗಳನ್ನು ಮಾಡಿಕೊಂಡು ಬಂದಳೊ ಅವರು ತನ್ನ ಕಡೆ ತಿರುಗದೆ ಇದ್ದುದನ್ನು ನೋಡಿ ಅವಳ ಹೆಮ್ಮೆಗೆ ಸಿಡಿಲು ತಾಗಿದಂತಾಯಿತು. ಅವಳ ನಿರೀಕ್ಷೆ, ದೊಡ್ಡ ದೊಡ್ಡ ಮರಗಳನ್ನೆಲ್ಲಾ ಕಿತ್ತು ಉರುಳಿಸುವೆನೆಂದು ಸೊಕ್ಕಿನಿಂದ ಹೊರಟ ಸುಂಟರಗಾಳಿ ನಿರ್ಜನವಾದ ಬಯಲಿನಲ್ಲಿ ಬೀಸಿದಂತಾಯಿತು. ಅವಳ ಮುಖ ಕ್ಷಣಕಾಲದ ಹಿಂದೆ ಎಷ್ಟು ನಲಿಯುತ್ತಿತ್ತೋ ಈಗ ಅಷ್ಟು ಕಂದಿ ಹೋಯಿತು. ಕಣ್ಣುಗಳಲ್ಲಿ ನೀರು ಅಂಚುಗಟ್ಟಿ ತುಂಬಿಕೊಂಡಿತು. ಅವಳು ತಾಂಬೂಲದ ತಟ್ಟೆಯನ್ನು ಮೇಜಿನ ಮೇಲಿಟ್ಟು, ಕೊಠಡಿಯ ಬಾಗಿಲನ್ನು ಹಾಕಿ ಮಂಚದ ಸಮೀಪಕ್ಕೆ ಹೋದಳು. ಕೃಷ್ಣಮೂರ್ತಿ ಕದಲಲಿಲ್ಲ. ಅವಳು ಅವನ ಪಕ್ಕದಲ್ಲಿ ಕುಳಿತುಕೊಂಡು ಮೆಲ್ಲಗೆ ಅವನ ಗಲ್ಲವನ್ನು ಮುಟ್ಟಿ ತನ್ನ ಕಡೆಗೆ ತಿರುಗಿಸಿಕೊಂಡಳು. ಕೃಷ್ಣಮೂರ್ತಿ ಸ್ವಲ್ಪನಗುತ್ತ ಅವಳ ಮುಖವನ್ನು ನೋಡಿದ. ಅವನ ಕೆನ್ನೆಯ ಮೇಲೆ ಅವಳ ಕಣ್ಣುಗಳಿಂದ ಒಂದೆರಡು ಹನಿ ಬಿಸಿನೀರು ಬಿತ್ತು. ಅವನಿಗೆ ದಿಗ್ಭ್ರಮೆಯಾಯಿತು. ಸರನೆ ಎದ್ದು ಅವಳನ್ನು ತಬ್ಬಿಕೊಂಡು "ಯಾಕೆ? ಶಾರಿ? ಏನಾಯಿತು?" ಎಂದು ಕೇಳಿದ ಅವಳು ಉತ್ತರ ಕೊಡಲಿಲ್ಲ. ಮುಖವನ್ನು ಬೇರೇ ಕಡೆ ತಿರುಗಿಸಿಕೊಂಡು ಅಳುತ್ತಿದ್ದಳು. ಅವಳ ಕೋಮಲವಾದ ಕಪೋಲಗಳನ್ನು ತನ್ನ ಕೈಯಿಂದ ಸವರುತ್ತ, ಅವಳ ಕಣ್ಣೀರನ್ನು ಒರಸಿ, ಅವಳ ಮುಖವನ್ನು ತನ್ನ ಕಡೆಗೆ ತಿರುಗಿಸಿಕೊಂಡ. ಅವಳ ತುಟಿಗಳು ದುಃಖದ ಉದ್ವೇಗದಿಂದ ಕಂಪಿಸುತ್ತಿದ್ದವು. ಅವನು ಅವುಗಳ ಮೇಲೆ ಪ್ರೇಮದ ಮುದ್ರಿಕೆಯನ್ನೊತ್ತಿ ಆ ಕಂಪನವನ್ನು ನಿಲ್ಲಿಸಿ, ಕಾತರದಿಂದ "ಶಾರಿ! ಏನಾಯಿತು ಹೇಳಬಾರದೆ? ಯಾಕೆ ಈ ಕಣ್ಣೀರು? ನನ್ನಾಣೆ ಹೇಳು—" ಎಲ್ಲಿ ಹೀಗೆ ತಿರುಗು... ಅಮ್ಮ ಏನಾದರೂ ಅಂದಳೆ? ಎಂದು ಕೇಳಿದ. ಶಾರದೆ ಈಗಲೂ ಮೌನವಾಗಿದ್ದಳು. ಅವಳ ಎರಡು ಹನಿ ಕಣ್ಣೀರು ಅವನ ಕೆನ್ನೆಗಳ ಮೇಲೆ ಬಿದ್ದು ಅವನ ಹೃದಯ ಅಲ್ಲೋಲಕಲ್ಲೋಲವಾಗಿತ್ತು. ಅವಳ ಮೌನ ಅವನ ತಾಳ್ಮೆಯ ಬುಡವನ್ನೇ ಅಲ್ಲಾಡಿಸಿ ಬಿಟ್ಟಿತು. ಅವನು ಪುನಃ ಅವಳನ್ನು ಗಾಢವಾಗಿ ಆಲಿಂಗಿಸಿಕೊಂಡು "ಶಾರಿ, ಅದೇನು ಹೇಳಲೇ ಬೇಕು ನನ್ನ ಮೇಲೆ ಆಣೆಯಿದೆ. ಹೇಳು ಅಮ್ಮ ಏನು—" ಎಂದು ಮಾತು ಪೂರೈಸುವುದರೊಳಗಾಗಿ, ಅವಳು ದೊಡ್ಡದಾಗಿ ನಿಟ್ಟುಸಿರು ಬಿಟ್ಟು, ತಲೆಯನ್ನು ತಗ್ಗಿಸಿ "ಅಯ್ಯೋ ಪಾಪ! ಅವರು ನನಗೆ ಇಲ್ಲಿ ತಾಯಿಯ ಹಾಗೆ

ಇದ್ದಾರೆ ಅವರಷ್ಟು ಬಹಳ ದೊಡ್ಡಗುಣ" ಎಂದು ಮೆಲ್ಲಗೆ ಹೇಳಿ, ತಲೆಯನ್ನು ಸ್ವಲ್ಪ ಎತ್ತಿ ಗಂಡನ ಮುಖಕ್ಕೆ ಕಣ್ಣಿನ ತುದಿಯಿಂದ ಒಂದು ಮೃದು ಮಧುರವಾದ ಅಂಬನ್ನು ಎಸೆದಳು. ಆ ಅಪೂರ್ವವಾದ ಅಂಬು ಆಗ ತಾನೆ ಕಣ್ಣೀರಿನಲ್ಲಿ ತೋಯ್ದಿದ್ದರಿಂದ ಮೃದುವಾಗಿತ್ತು. ಮಾಧುರ್ಯ-ಬತ್ತಳಿಕೆಯ ಗುಣ. ಕೃಷ್ಣಮೂರ್ತಿಗೆ ಈ ಆಟದಿಂದ "ನೀವು ಕಾರಣ!" ಎಂದು ಹೇಳಿದ ಹಾಗಾಯಿತು. ಆ ಅಂಬಿನ ತುದಿ ಅವನ ಹೃದಯದ ಮೇಲೆ ಹಾಗೆ ಬರೆಯಿತೆಂದು ತೋರುತ್ತದೆ. ಅವನ ಮನಸ್ಸಿಗೆ ಒಂದು ಅರೆಕ್ಷಣದಲ್ಲಿ ಎಲ್ಲಾ ಮಿಂಚಿನವೇಗದಿಂದ ಹೊಳೆಯಿತು. ಅವನು ದೊಡ್ಡದಾಗಿ ನಕ್ಕು "ಆಹಾ ! ಈಗ ತಿಳಿಯಿತು ! ಹೌದು, ಹೌದು ! ನನ್ನ ತಪ್ಪು ! ಇನ್ನು ಮೇಲೆ ಹಾಗೆ ಮಾಡುವುದಿಲ್ಲ. ಏನೋ ಯೋಚನೆಯಲ್ಲಿದ್ದೆ. ನೀನು ಬಂದುದು ಗೊತ್ತಾಗಲಿಲ್ಲ. ಅದುದರಿಂದ ಈ ತಪ್ಪು ನಡೆದು ಹೋಯಿತು. ತಿಳಿದೂ ತಿಳಿದೂ ನಾನು ಎಂದು ನಿನ್ನಲ್ಲಿ ಉದಾಸೀನನಾಗಿದ್ದೆ ಹೇಳು, ಶಾರಿ ? ನೀನು ಬಂದಾಗ ನನ್ನ ಮನಸ್ಸು ನನ್ನ ದೇಹದಲ್ಲಿರಲಿಲ್ಲ. ಹೀಗೆಂದು ಹೇಳಿ ಅವಳ ತಾವರೆಯೆಸಳಿನಂತೆ ಮೃದುವಾದ ಕೆನ್ನೆಯನ್ನು ತನ್ನ ಕೆನ್ನೆಗೆ ಒತ್ತಿಕೊಂಡ. ಸ್ವಲ್ಪ ಹೊತ್ತಿಗೆ ಮುಂಚೆ ಎಷ್ಟು ಸುಲಭವಾಗಿ ಅವಳ ಮುಖ ಕಂದಿ ಹೋಗಿತ್ತೋ ಈಗ ಅಷ್ಟು ಸುಲಭವಾಗಿ ಅದರ ತುಂಬ ನಗೆದಿಂಗಳು ಹರಡಿಕೊಂಡಿತು. ಕಣ್ಣಿನಲ್ಲಿ ನೀರು ಆರಿ ಹೊಳಪೇರಿತು. ತುಂಬಿ ಬಂದ ಮುಗುಳ್ನಗೆಯಿಂದ ಅವಳ ಎಳಸಾದ ತುಟಿಗಳು ಸ್ವಲ್ಪ ಅಲುಗಿದುವು. ಬೆಳದಿಂಗಳ ರಾತ್ರಿಯಲ್ಲಿ ಮಲ್ಲಿಗೆಯ ಮೊಗ್ಗೆ ಅರಳಿದಂತೆ ಆಯಿತು. ಅವನು "ನನ್ನ ಮನಸ್ಸು ನನ್ನ ದೇಹದಲ್ಲಿರಲಿಲ್ಲ" ಎಂದು ಹೇಳಿದೊಡನೆಯೇ ಅವಳ ಮುಗುಳ್ನಗೆ ಮೃದು ನಗುವಾಯಿತು. ನಕ್ಕು ತಲೆಯನ್ನು ಬಗ್ಗಿಸಿಕೊಂಡು, ಸೆರಗಿನ ತುದಿಯಲ್ಲಿ ಗುಂಟು ಹಾಕುತ್ತ "ಯಾರನ್ನು ಹುಡಿಕಿಕೊಂಡು ಹೋಗಿತ್ತು ? " ಎಂದು ಕೇಳಿದಳು. ಅವಳ ಮಾತಿಗೆ ಅವಳಿಗೇ ನಗು. ಕೃಷ್ಣಮೂರ್ತಿ ಮೆಲ್ಲಗೆ ಅವಳಿಗೆ ಒಂದು ಗುದ್ದು ಹಾಕಿ, "ಅಯ್ಯೋ! ಗಂಡು ಬೀರೀ ! " ಎಂದು ಹೇಳಿ ಮೆಲ್ಲಗೆ ಅವಳ ಕೆನ್ನೆಯನ್ನು ಹಿಂಡಿದ. ಅವಳು ಎದ್ದು ಓಡಿಹೋಗುವುದಕ್ಕೆ ಪ್ರಯತ್ನಮಾಡಿದಳು. ಆದರೆ ಕೃಷ್ಣಮೂರ್ತಿ ಹುಷಾರಾಗಿದ್ದ. ನಿನ್ನೊಬ್ಬಳ ಕಾಟ ಸಾಲದೆ ! ನೋಡು ಈಗ ಒಂದು ಕ್ಷಣದಲ್ಲಿ ನನ್ನ ಎದೆಯನ್ನು ಒಡೆದು ಬಿಟ್ಟಿದ್ದೆಲ್ಲಾ ! " ಎಂದ.

"ಹೌ-ದು-ಮು-ತ್ತೆ !"

"ಹೌದು ಹೌದು !,,

ಯಾವುದಾದರು ಮನೆಗೆ ಬೆಂಕಿ ಬಿದ್ದಿದ್ದರೆ ಬಹಳ ಕಷ್ಟದಿಂದ ಅದನ್ನು ಆರಿಸಿ ದಣಿದವನು ಒಂದು ಕಡೆ ಹೋಗಿ ಕುಳಿತುಕೊಂಡು, "ಉಸ್ಸಪ್ಪ!" ಅನ್ನುವಹಾಗೆ ಕೃಷ್ಣಮೂರ್ತಿ ನೀಳವಾಗಿ ಉಸರು ಬಿಟ್ಟು "ಉಸಪ್ಪಾ !" ಎಂದ. ಶಾರದೆ ಎದ್ದು ಹೋಗಿ ತಾಂಬೂಲದ ತಟ್ಟೆಯನ್ನು ಮಂಚದ ಮೇಲೆ ತಂದಿಟ್ಟುಕೊಂಡು ಗಂಡನಿಗೆ ಎಲೆ ಮಡಿಸಿಕೊಡುತ್ತ" 'ಏನು? ಈವೊತ್ತು? ಅಷ್ಟೊಂದು ಯೋಚನೆ! ಮನಸ್ಸು ದೇಹವನ್ನು ಬಿಟ್ಟು ಓಡಿ ಹೋಗುವಹಾಗೆ!" ಎಂದು ಕೇಳಿದಳು. ಅವಳಿಗೆ ನಗು. ಕೃಷ್ಣಮೂರ್ತಿ ಎಲೆ ಅಡಿಕೆ ಅಗಿಯುತ್ತ ಅದರ ಜೊತೆಗೆ ಅಕ್ಷರಗಳನ್ನು ಅಗಿಯುತ್ತ "ಏನೋ-ಯೋ-ಚ-ನೆ-ಸ್ವ-ಂತ-ದ್ದು" ಎಂದ.

"ಬೇಡ-ಅಷ್ಟು ಸ್ವಂತ ಆದರೆ !"

"ನೋಡಿದೆಯಾ-ನಿನ್ನ ಡೊಂಕುಬುದ್ಧಿ !"

"ಹಾಗಾದರೆ ಅದೇನು-ನನಗೆ ಅದರಲ್ಲಿ ಅರ್ಧವಾದರೂ ಹೇಳಬೇಕು."

"ಹೇಳೋಕೆ ಮುಂಚೆ ಸುಂಕ ಕೊಡಬೇಕು"

"ಉ ! ಸುಂಕ ! ನೀವೇನ್ಸಾಮ್ರಿ!ಅದೇ ಕೆಲಸ ನಿಮಗೆ!"

"ಹಾಗಾದರೆ ಬಿಡು !"

"ಇಲ್ಲ ! ಇಲ್ಲ ! ಹೇಳಿ ಇಗೋ ಕೊಟ್ಟೆ......ಈಗಹೇಳಿ!"

"ನಾನು ನಿನ್ನೆ ಬರೆದ ಕಥೆ ಓದೀಯಾ !"

"ಹೊ ಓದಿದೆ! ಅದಕ್ಕಿಂತ ಇದೇ ಬಹಳ ಚನ್ನಾಗಿದೆ !"

"ಅದರ ವಿಷಯವೇ ಯೊಚಿಸ್ತಿದ್ದೆ"

"ಅಯ್ಯೊ! ಪಿಸ್ಸೆ! ಇಷ್ಟೇನೇ! ಇದಕ್ಕೆ ಸುಂಕ! ಯಾಕೆ—ಹೊಸದನ್ನೇ ಕಳ್ಸಿ"

ಕೃಷ್ಣಮೂರ್ತಿಯ ಮುಖದಲ್ಲಿ ಕಳವಳ ತಲೆದೋರಿತು 'ಆವಾಗ ಅದೇ ಚನ್ನಾಗಿದೆ ಅಂತ ಹೇಳಿದೆಯಲ್ಲಾ !" ಎಂದ.

"ಹೌದು ! ಆಗ ಇದು ಇತ್ತೇನು ? ಬರೀ ಕರಿಬಾಳೇ ಹಣ್ಣೇ ಇದ್ರೆ ಅದೇ ಸಾಕು. ರಸಬಾಳೇಹಣ್ಣು ಇದ್ರೆ ಯಾವುದು ರುಚಿ?"

"ಅಬ್ಬಾ ! ಏನು ಉಪಮಾನ ಬಹಳ ಜೋರಾಗಿದೆ!"

"ಅಷ್ಟಲ್ಲದೆ ಏನು - ನನಗೇನೋ ಹೊಸ ಕಥೇನೊ ಒಪ್ಪಿತು."

"ಒಂದು ಕಥೇನ ನನ್ನ ಸ್ನೇಹಿತನ ಹೆಸರಿನಲ್ಲಿ ಕಳ್ಸೋಣ ಅಂತ."

"ಹಾಗಾದರೆ ಮೊದಲನೇದನ್ನ ಅವರ ಹೆಸ್ರಿನಲ್ಲಿ ಕಳಿಸ್ಬಿಡಿ"

"ಹಾಗಿಲ್ಲ–ಕಳಿಸಿದ್ರೆ ಎರಡನೇಯದನ್ನೇ ಅವನ ಹೆಸರಿನಲ್ಲಿ, ಕಳಸ್ಬೇಕು. ಇಲ್ದೇ ಇದ್ರೆ ಇಲ್ಲ."

"ಹಾಗಾದರೆ ಬೇಡೇ ಬೇಡ"

"ಅವನೂ ಬೇಡಾ ಅಂತಾನೆ ಹೇಳಿದ"

"ಒಳ್ಳೇದೇ ಆಯ್ತು !"

"ಅವನಿಗೆ ಗೊತ್ತಾಗದ ಹಾಗೆ ಅವನ ಹೆಸರಿನಲ್ಲಿ ಕಳಿಸೋಣಾ ಅಂತ"

"ಅದೇನು ಅಂಥಾ ಬಲವಂಥ ! ಏನು ಬೇಡ !"

"ಹುಂ ! ನೊಡೋಣ. ಇನ್ನೂ ಬೇಕಾದಷ್ಟು ದಿನ ಇದೆಯಲ್ಲ. ನಿದ್ದೆ ಮಾಡಬೇಕು. ಈಗಾಗಲೇ ಹನ್ನೆರಡುಗಂಟೆಯಾಯಿತು."

ಹೀಗೆಂದು ಹೇಳಿ ಕುಳಿತಹಾಗೆಯೇ ಹಾಸಿಗೆಯ ಮೇಲೆ ಉರುಳಿ ಹೊದಿಕೆಯನ್ನು ಎಳೆದುಕೊಂಡ. ಶಾರದೆ, ಸ್ವಲ್ಪ ಹೊತ್ತಿಗೆ ಮುಂಚೆ ನಡೆದುದನ್ನೆಲ್ಲ ನೆನೆದುಕೊಂಡಳು. ಅವಳಿಗೆ ವಿಪರೀತ ನಗು ಬಂತು. ಕೃಷ್ಣಮೂರ್ತಿ ಮುಸುಕಿನೊಳಗಿಂದಲೇ "ಏನೇ ಅದು–ನಗ್ತೀಯಾ ?" ಎಂದ

"ಸುಂಕ ಸುಂಕ ! ಸುಂಕ ಕೊಟ್ರೆ !"

"ಊ ಹೂ ! ನೀನು ಈಚೆಗೆ ಬಹಳ ಹೆಚ್ಚಿಕೊಂಡಿದ್ದೀಯೆ ."

ಶಾರದೇನೂ ದೀಪವನ್ನು ಸಣ್ಣಗೆ ಮಾಡಿ ಮಲಗಿಕೊಂಡಳು. ಕೃಷ್ಣಮೂರ್ತಿ ನಿದ್ದೆಮಾಡಬೇಕು ಎಂದು ಹೇಳಿದ್ದು ಎಷ್ಟೋ ಅಷ್ಟೆ. ಅವನಿಗೆ ನಿದ್ದೆಬರುವಹಾಗೆ ಇರಲಿಲ್ಲ. ಶಾರದೆಯೇ ಮುಂಚೆ ನಿದ್ದೆಹೋದವಳು. ರಾತ್ರಿ ಬಹಳ ನಿಶ್ಶಬ್ದವಾಗಿತ್ತು. ಕೃಷ್ಣಮೂರ್ತಿಗೆ ಆ ನಿಶ್ಶಬ್ದವಾದ ರಾತ್ರಿ, ಅವನ ಕೇವಲ ಗೂಢವಾದ ಯೋಚನೆಗಳನ್ನೆಲ್ಲಾ ಕಿವಿಗೊಟ್ಟು ಕೇಳುವಂತೆ ತೋರಿತು. ಶಾರದೆ ಸುಖವಾಗಿ ನಿದ್ದೆಹೋಗುತ್ತಿದ್ದಳು. ಅವಳ ನೀಳವಾಗಿಯೂ ಮೃದುವಾಗಿಯೂ ಆಡುತ್ತಿದ್ದ ಉಸಿರು ಮಾತ್ರ ಆ ರಾತ್ರಿಯ ಮೌನವಾದ ಆವರಣಕ್ಕೆ ಭಂಗವನ್ನುಂಟುಮಾಡುತ್ತಿತ್ತು. ಅವನು ರಾತ್ರಿ ಊಟವಾದಮೇಲೆ ಆ ಕೊಠಡಿಗೆಬಂದು, ಹಾಸಿಗೆಯಮೇಲೆ ಮಲಗಿ ಪ್ರಾರಂಭಿಸಿದ್ದ ಯೋಚನಾತರಂಗಗಳು; ಮಧ್ಯೆ ಸ್ವಲ್ಪಕಾಲ ಭಂಗ ಹೊಂದಿ, ಈಗ ಪುನಃ ಪ್ರಾರಂಭವಾಗಿದ್ದುವು. ಅವನ ಮನಸ್ಸು ಹೊಸ ಊರಿಗೆ ಹೋಗಿ ದಾರಿತಪ್ಪಿದವನಂತೆ ಆಗಿತ್ತು. ಸುಮ್ಮನೆ ಮಗ್ಗುಲಿಂದ ಮಗ್ಗುಲಿಗೆ ಹೊರಳುತ್ತಿದ್ದ ನಿದ್ದೆಇಲ್ಲದೆ ಸುಮ್ಮನೆ ಮಲಗಿರುವುದಕ್ಕೆ ಬೇಸರವಾಗಿ ಹಾಗೆಯೇ ಹಾಸಿಗೆಯಮೇಲೆ ಎದ್ದು ಕುಳಿತುಕೊಂಡ. ಶಾರದೆಯಕಡೆಗೆ ತಿರುಗಿನೋಡಿದ. ಅವಳ ನಿದ್ದೆಗೆ ಸ್ವಲ್ಪವೂ ಭಂಗವಿಲ್ಲ. ಸಣ್ಣಗೆ ಮಾಡಿಟ್ಟಿದ್ದ ದೀಪದ ಕ್ಷೀಣವಾದ ಬೆಳಕು ಅವಳ ಮುಖದಮೇಲೂ, ಸುಖವಾಗಿ ಪವಡಿಸಿದ್ದ ಅವಳ ದೇಹದ ಮೇಲೂ ಬೀಳುತ್ತಿತ್ತು. ಸೆಕೆಯಾಗಿದ್ದುದರಿಂದ ಅವಳ ಹಣೆಯಮೇಲೂ, ಕೆನ್ನೆಗಳಮೇಲೂ ಬೆವರಿನ ತುಂತುರು ಮೂಡಿದುವು. ಕೃಷ್ಣಮೂರ್ತಿ ಎದ್ದುಹೋಗಿ ಕಿಡಕಿಯ ಬಾಗಿಲುಗಳನ್ನು ತೆಗೆದು, ಪುನಃ ಬಂದು ಅವಳ ಸಮೀಪದಲ್ಲಿ ಕುಳಿತುಕೊಂಡು, ಅವಳನ್ನು ನಟ್ಟದೃಷ್ಟಿಯಿಂದ ನೋಡತೊಡಗಿದನು. ಸ್ವಲ್ಪ ಕೆದರಿದ ಮುಂಗುರುಳು. ಹಣೆಯಲ್ಲಿ ಬೆವರಿನಿಂದ ತೊಯ್ದ ಕುಂಕುಮದ ಬೊಟ್ಟು. ತಾಂಬೂಲವನ್ನು ಸವಿದು ರಂಗೇರಿದ ತಿದ್ದಿದ ತುಟಿಗಳು. ಮಾಟವಾಗಿ, ಮಿತವಾಗಿ ಸಂಪಗೆಯ ಹೂವಿನಹಾಗೆ ಮೂಗು. ಮಂಜಿನ ಹನಿಯಹಾಗೆ, ಅದನ್ನು ಅಲಂಕರಿಸಿದ ಮೂಗುಬಟ್ಟು. ನೀಳವಾದ, ಕಪ್ಪಾದ, ಸರಳವಾಗಿ ಬಾಗಿದ ಹುಬ್ಬುಗಳು, ಅದರ ಕೆಳಗೆ, ತಾವರೆಎಸಳಿನ ಭರಣಿಯಂತೆ ಮುಚ್ಚಿದ ಕಣ್ಣೆವೆಗಳು. ಇಂಬಾಗಿ ತುಂಬಿಕೊಂಡಿದ್ದ ಕೆನ್ನೆಗಳು–ಸುಂದರವಾದ ಸುಳಿಗಲ್ಲ. ಇವುಗಳೆಲ್ಲದರಮೇಲೂ ಪಸರಿಸಿದ ಒಂದು ವಿಧವಾದ ಸೌಮ್ಯಕಳೆ–ಕೃಷ್ಣಮೂರ್ತಿ ಇವು ಒಂದೊಂದನ್ನೂ ನಿಧಾನವಾಗಿ ನೋಡಿದ ಅವಳ ಆಟ–ಅವಳ ನೋಟ–ಅವಳ ಬಿನ್ನಾಣದ ಮಾತು, ಒಂದೊಂದಾಗಿ ಅವನ ಜ್ಞಾಪಕಕ್ಕೆ ಬಂದುವು. ಅವನ ಹೃದಯಕ್ಕೆ ಮದವೇರಿ, ಅದು ಅವನ ಪ್ರೇಯಸಿಯ ರೂಪಸಾಗರದಲ್ಲಿ ಧುಮಿಕಿ ಓಲಾಡುತ್ತಿತ್ತು. ಸ್ವಲ್ಪಹೊತ್ತು ಈ ರೀತಿಯಾಗಿ ಸುಖಾನುಭವಮಾಡಿ ಪುನಃ ಮೊದಲು ಪ್ರಾರಂಭಿಸಿದ್ದ ಯೋಚನೆಗಳಕಡೆ ಗಮನಕೊಟ್ಟ. ಅವಳು ಕಥೆಯ ವಿಷಯವಾಗಿ ಹೇಳಿದುದೆಲ್ಲಾ ಜ್ಞಾಪಕಕ್ಕೆ ಬಂತು– "ರಸಬಾಳೆಹಣ್ಣು–ಕರಿಬಾಳೆಹಣ್ಣು ! ಎಷ್ಟು ನಿಜವಾದ ಮಾತು!" ಎಂದು ಕೊಂಡ. "ಮೊದಲನೆಯದನ್ನೂ ಕಳಿಸೋದಕ್ಕೆ ತಾನೆ ಬರೆದದ್ದು ? ಹೊಸದನ್ನು ಬರೆಯದೆ ಇದ್ದಿದ್ದರೆ ?" ಎಂದು ತೋರಿತು. "ಹಳೆಯದನ್ನೇ ಕಳಿಸಿಬಿಡುತ್ತೇನೆ ! ನಾನೇನೋ ಅವನನ್ನ ಕೇಳಿದೆ–ಅವನೇ ಬೇಡಾ ಅಂದ-ಇನ್ನೇನು ಮಾಡೋದು? ನನ್ನಾತ್ರಿಲ್ಲೇ ಬಿದ್ದಿರತ್ತೆ! ಹಳೆ

ಸುದರ ಅದೃಷ್ಟ ಹೇಗೋ ಹೇಳ್ಲಾರೆ- ಹೊಸ್ದು ಕಳ್ಸಿದ್ರೆ ಖಂಡಿತ ಆದ್ರೆ-ಉಹು ! " ಇಲ್ಲಿಗೆ ಸ್ವಲ್ಪ ಯೋಚನೆನಿಂತಿತು—ಸ್ವಲ್ಪ ಹೊತ್ತು ಏನೂ ಇಲ್ಲ—ಆಮೇಲೆ ಪುನಃ " ಅವಳಕೊರಳಿಗೆ ಹಾಕ್ಬೇಕು !" ಗಂಡನ ಈ ಮಾತು ಜ್ಞಾಪಕಕ್ಕೆ ಬಂತು. ಕುಳಿತು ಕೊಂಡು ಹಾಗೆಯೇ ಪುನಃ ಶಾರದೆಯ ಕಡೆಗೆ ನೋಡಿದ ನೋಡ ತ್ತಿದ್ದಹಾಗೆಯೇ ಅವನ ಕಣ್ಣುಗಳು—ಮುಚ್ಚಿಕೊ ಳ್ಳುವು-ಮುಚ್ಚಿಕೊಂಡಿದ್ದ ಕಣ್ಣುಗಳ ಕತ್ತಲೆಯನ್ನೆಲ್ಲಾ ಹರಿಸಿ, ಶಾರದೆ ನಗುತ್ತ ನಲಿಯುತ್ತ ತನ್ನಕಡೆ ಬರುತ್ತಿದ್ದ ಹಾಗೆ ಯೋಚನೆ ಥಳಥಳ ಹೊಳೆವ ಸೊಗಸಾದ ಚಿನ್ನದ ಪದ ಕವನ್ನು ಅವಳ ಕೊರಳಿಗೆ ಹಾಕಿದಹಾಗೆ ಅನುಭವ—ಕೂಡಲೆ ಅವಳು ತನ್ನನ್ನು ಅವಳ ತೋಳಸೆರೆಯಲ್ಲಿ ಬಿಗಿದುಕೊಂಡಹಾಗೆ ಭಾವನೆ. ಆಮೇಲೆ ನಿಧಾನವಾಗಿ ಈ ದೃಶ್ಯ ಮಾಯವಾಗಿ ಪುನಃ ಕತ್ತಲು ಕವಿಯಿತು— " ಆದದ್ದಾಗಲಿ—ಕಳಿಸಿಬಿಡು ತ್ತೇನೆ ! " ಅಂದುಕೊಂಡು, ಕಣ್ಣುಬಿಟ್ಟ. ಅವನ ಪಕ್ಕದಲ್ಲಿ, ಶಾರದೆ ಮಲಗಿದ್ದಹಾಗೆಯೇ ಸ್ವಲ್ಪ ಒಂದು ಪಕ್ಕಕ್ಕೆ ಹೊರ ಳಿದಳು. ಕೃಷ್ಣಮೂರ್ತಿಯ ದೃಷ್ಟಿ ಪುನಃ ಶಾರದೆಯ ಮುಖದಮೇಲೆ ಬಿತ್ತು. ಅವಳತುಟಿಗಳು ಸ್ವಲ್ಪ ಅಲುಗಿದವು. ಅವುಗಳಮೇಲೆ ಮೆಲ್ಲನೆ ಒಂದು ಮುಗಳ್ನಗೆ ಹರಿತುಬಂತು ಶಾರದೆ ಏನೋ ಕನಸು ಕಾಣುತ್ತಿದ್ದಳು. ಕೃಷ್ಣಮೂರ್ತಿಗೆ ನಗುಬಂತು. ತನ್ನ ಪ್ರೇಯಸಿಯ ಸುಖದ ಕನಸಿನ ಸುಖ ವನ್ನು ತಾನೂ ಅನುಭವಿಸಬೇಕೆಂದು ಅವನಿಗೆ ಆಸೆಯಾ ಯಿತು. ಮೆಲ್ಲಗೆ ಬಾಗಿ, ಮುಗುಳ್ನಗೆಯಲ್ಲಿ ಮುಳುಗಿ ಬೆಳಗು ತ್ತಿದ್ದ ಅವಳ ಅಚೆಂದುಟಿಗಳಮೇಲೆ ಒಂದು ಮುತ್ತುಕೊಟ್ಟ. ಶಾರದೆಗೆ ಎಚ್ಚರವಾಯಿತು. ಕಣ್ಣು ಉಜ್ಜಿಕೊಂಡು, ಗಂಡ ಎದ್ದುಕುಳಿತಿದುದನ್ನು ನೋಡಿ ಆಶ್ಚರ್ಯದಿಂದ " ಇದೇನು, ಯಾವಗ ಎದ್ದುದು ? " ಎಂದು ಕೇಳಿದಳು.

" ಏಳೋದೆಲ್ಲಿ ಬಂತು ; ನಿದ್ದೆಮಾಡಲೇ ಇಲ್ಲ "

" ಹಾಗಾದರೆ ಏನ್ಮಾಡ್ತಿದ್ರಿ ? "

" ನಿನ್ನ ಮುಖಾನೇ ನೋಡ್ತಿದ್ದೆ ! "

" ಅದ್ಯಾಕೋ ! "

" ಅದ್ಯಾಕೆ ! —ಕಾಸು ಖರ್ಚುಮಾಡಿ ಮದುವೆಮಾಡ್ಕೊಂ ಡಿದ್ದಕ್ಕೆ—ಅದಿರಲಿ, ಅದೇನು ಕನಸು ?

" ಏನೂ ಇಲ್ಲ ! " —(ನಕ್ಕು)— " ಮನಸ್ನಲ್ಲಿ ಮಂಡ್ಗೆ ತಿಂದ್ಹಾಗೆ ! "

" ಅದೇನೇ ಹೇಳೇ ಬಿನ್ನಾಣಿ ! "

" ನೀವು ಬಿನ್ನಾಣಿ—ಗಿನ್ನಾಣಿ ಅಂದ್ರೆ ಹೇಳೊಲ್ಲ ! "

" ಹೇಳ್ದೆ ಇದ್ರೆ ಅಷ್ಟೇ ಹೋಗು "

— ಹೀಗೆಂದು ಹೇಳಿ ಕೃಷ್ಣಮೂರ್ತಿ ಮಲಗಿಕೊಳ್ಳುವುದಕ್ಕೆ ಪ್ರಯತ್ನಪಟ್ಟ " ಇಲ್ಲ, ಇಲ್ಲ, ಹೇಳ್ತೀನಿ ಕೇಳಿ. ಏನು ಅಂದ್ರೇ, ನೀವು ನಾನ್ಹೇಳಿದ್ನಲ್ಲಾ ಹಾಗೆ, ಹೊಸಕಥೆ ಕಳಿಸಿದ ಹಾಗೂ—ಅದಕ್ಕೆ ಪದಕ ಬಂದಹಾಗೂ-ನೀವುಅದನ್ನು ನನಗೆ ಕೊಟ್ಟಹಾಗೂ ಕನಸುಬಿತ್ತು—ಇದು ಮನಸ್ನಲಿ ಮಂಡ್ಗೆ ತಿಂದ್ಹಾಗಲ್ವೇನು ? "

" ಅದ್ಹೇಗೆ ? "

" ಹೌದು; ಹಳೇಯದಕ್ಕಿಂತ ಹೊಸ್ದೇ ಚೆನ್ನಾಗಿದೆ! ನೀವು ಹಳೇಯದನ್ನೇ ಕಳ್ಸಿದ್ರೆ ?

" ಇಲ್ಲ. ಅದನ್ನು ಕಳ್ಸೊಲ್ಲ "

" ಹಾಗಾದ್ರೆ ಹೊಸದನ್ನು ಕಳಿಸ್ತೀರೇ! "

" ಉಹೂ ಅದನ್ನೂ ಕಳ್ಸೊಲ್ಲ! "

( ಶಾರದೆ ಪೆಚ್ಚು ಮುಖ ಹಾಕಿಕೊಂಡು )

" ಸರಿ, ನಿರ್ಯೋಚನೆಯಾಯ್ತು! ಇನ್ನಾ ನೀ-ವು ತ-ಮಾ-ಷೆ ಮಾ—ಡ್ತಿ—ರಿ— " ಎಂದು ಕೊರಳನ್ನು ಕೊಂರೆಸಿ, ಓರೆಗಣ್ಣಿ ನಿಂದ ಗಂಡನನ್ನು ನೋಡಿದಳು.

" ತೆಗೆದೆಯಲ್ಲ ನಿನ್ನ ಆಟಾನ, "

" ನಿಮಗೆ ಬರೊಲ್ವೇನು? "

ಗುಂಡಪ್ಪ ಅವನು ಹೇಳಿದ ಪ್ರಕಾರ ಮಾರನೆಯ ದಿನ ಬೆಳಗ್ಗೆ ಕೃಷ್ಣಮೂರ್ತಿಯ ಮನೆಗೆ ಹೋಗಲಿಲ್ಲ. ಕೃಷ್ಣ ಮೂರ್ತಿ, ಕಾದು ಕಾದು ಸಾಕಾಗಿ ಕೊನೆಗೆ " ಹುಂ ! ಒಳ್ಳೆ ಯದೇ ಆಯ್ತು! " ಅಂದುಕೊಂಡ. ಹಾಗಾದರೂ ಗುಂಡಪ್ಪ ಕಾಲೇಜಿನಲ್ಲಿ ಸಿಕ್ಕಾಗ ಅವನು ಬರದೆ ಇದ್ದುದಕ್ಕೆ ಕಾರಣ ವನ್ನು ಕೇಳಿದ. ಅದಕ್ಕೆ ಗುಂಡ " ಬರ್‍ತಿದ್ದೆ ಕಣೋ ! ಆದರೆ ಏನ್ಮಾಡ್ಲಿ, ಏಳೋದೇ ಹೊತ್ತಾಯ್ತು. ರಾತ್ರಿ ಎರಡು ಗಂಟೆ ತನಕ ' ನೋಟ್ಸ್ ' ಬರೀತಾ ಕೂತ್ಬಿಟ್ಟೆ. ಆದ್ರೂ ಇನ್ನೂ ಮುಗ್ದಿಲ್ಲ. ಬೆಳಿಗ್ಗೆ ಎದ್ಮೇಲೆ ಕಾಲೇಜಿಗೆ ಹೊರಡೋತನ್ಕ ಬರೀತಿದ್ದೆ. ಊಟಕ್ಕೂ ಪುರಸತ್ತಿಲ್ಲ " ಎಂದು ಹೇಳಿದ. ಕೃಷ್ಣಮೂರ್ತಿ

" ಕಥೆ ಕಳಿಸಿಬಿಡಬೇಕಲ್ಲೋ "— ಎಂದ

" ಕಳ್ಸು-ಕಳ್ಸು. ಅದು ವಾಪಸು ಬಂದಮೇಲೆ ನೋಡಿದ ರಾಯ್ತು. ಅದನ್ನೂ 'ಫೇರ್' ಕಾಪಿ ಮಾಡಿಸುವೆಯಷ್ಟೆ! "

" ಓಹೋ! "

" ಎರಡನ್ನೂ ಕಳಿಸ್ತೀಯೋ ಅಥವಾ —"

" ಒಂದು ನನ್ನ ಹೆಸರ್ನಲ್ಲಿ, ಇನ್ನೊಂದು—"

" ಉಹು ! ಉಹು ! ಖಂಡಿತ ಬೇಡ-ನಾನು ಮೊದಲೇ ಹೇಳಿದ್ದೇನೆ "

... ... ...

ಇಂದು ಕಥೆ ಕಳಿಸುವುದಕ್ಕೆ ಕೊನೆಯ ದಿನ—ಕೃಷ್ಣಮೂರ್ತಿ ಅವನ ಕೊಠಡಿಯಲ್ಲಿ ಕುಳಿತುಕೊಂಡಿದ್ದ. ಎದುರಿಗೆ ಮೇಜಿನ ಮೇಲೆ ಅವನು ಬರೆದ ಎರಡು ಕಥೆಯ ಪುಸ್ತಕಗಳೂ ಇದ್ದುವು. ಯಾವುದನ್ನು ಕಳಿಸಬೇಕೆಂದು ಅವನ ಮನಸ್ಸು ಇನ್ನೂ ನಿರ್ಧರವಾಗಿರಲಿಲ್ಲ. ತಾನಾಗಿ ನಿರ್ಧರಿಸುವುದಕ್ಕೆ ಅವನ ಮನಸ್ಸಿಗೆ ಶಕ್ತಿಸಾಲದೆ ಹೋಯಿತು. ಅದು ಒಂದು ಸಲ "ಹಳೆಯದು" ಅನ್ನುವುದು. ಹಳೆಯುದನ್ನು ತೆಗೆದುಕೊಳ್ಳುವುದಕ್ಕೆ ಮುಂಚೆ " ಹೊಸದು ! ಹೊಸದು ! " ಎಂದು ಧ್ವನಿ ಮಾಡುವುದು. ಹೊಸದನ್ನೇ ಕಳಿಸೋಣವೆಂದು ಅದರ ಕಡೆ ನೋಡಿದಾಗ "ಬೇಡಾ! ಬೇಡಾ! " ಎಂದು ಪ್ರತಿಧ್ವನಿಯಾಗುವುದು. ಅಂತು ಯಾವುದನ್ನೂ ಇತ್ಯರ್ಥಮಾಡಲಾಗಲಿಲ್ಲ. ಆ ಸಮಯಕ್ಕೆ ಸರಿಯಾಗಿ ಶಾರದೆ ಅಲ್ಲಿಗೆ ಬಂದಳು.

" ಇದೇನು, ಹೀಗೆ ಕುಳಿತಿದ್ದೀರಿ? "—ಎಂದು ಕೇಳಿದಳು. ಕೃಷ್ಣಮೂರ್ತಿ ತನ್ನ ಮನಸ್ಸಿನಲ್ಲಿದ್ದ ಕಷ್ಟವನ್ನು ಹೇಳಿದ.

" ಅಯ್ಯೋ ! ಇಷ್ಟ್ಯಾಕೆ ಯೋಚನೆ ? ನನ್ಮಾತುಕೇಳಿ—ಹೊಸದನ್ನೇ ಕಳ್ಸಿ "

" ಉಹು ! ಇಬ್ಬರ ಮಾತೂ ಬೇಡ—ಚೀಟಿ ಬರೆದುಹಾಕಿ ಎತ್ತಿಬಿಡೋಣ. ಯಾವುದು ಎಂದು ಬರತ್ತೋ ಅದು! "

" ಹು! ಹಾಗೇ ಆಗಲಿ ! "—(ಮನಸ್ಸಿನಲ್ಲಿ) " ದೇವರೇ, ಹೊಸ್ದನ್ನೇ ಕಳ್ಸೋಹಾಗಾಗ್ಲಪ್ಪ! "

ಹೊಸದು-ಹಳೆಯದು ಎಂದು ಎರಡು ಚೀಟಿ ಬರೆದು ಮಡಿಸಿ ಹಾಕಿದ. ಶಾರದೆಯನ್ನೇ ಎತ್ತು ಅಂದ. ಶಾರದೆ ಕಣ್ಣು ಮುಚ್ಚಿಕೊಂಡು—"ದೇವರೇ!" ಎಂದು ಮೆಲ್ಲಗೆ ಹೇಳಿ ಚೀಟಿ ಎತ್ತಿದಳು. ಬಿಚ್ಚಿ ಓದಿದರೆ " ಹೊಸದು "—ಎಂದು ಇತ್ತು. ಕೃಷ್ಣಮೂರ್ತಿ ಆದಿನ ಹೊಸ ಕಥೆಯನ್ನೇ ಕಳಿಸಿಬಿಟ್ಟ.

... ... ...

ಇದಾದ ಎರಡು ಮೂರು ದಿನಗಳಲ್ಲಿ ಶಾರದೆ ತವರುಮನೆಗೆ ಹೋದಳು. ಕೃಷ್ಣಮೂರ್ತಿಗೆ ಒಂದೆರಡು ದಿನಗಳಿಂದ ಮನಸ್ಸಿಗೆ ಶಾಂತಿಇಲ್ಲ. ಬೇಜಾರು. ಕಾಲೇಜಿನಲ್ಲಿ ಬೇಜಾರು-ಮನೆಯಲ್ಲಿ ಬೇಜಾರು. ಆಟದಲ್ಲಿ ಬೇಜಾರು. ಊಟದಲ್ಲಿ ಬೇಜಾರು ಅವನಿಗೆ ಬೇಜಾರು ಬೆನ್ನುಹತ್ತಿಬಿಟ್ಟಿತ್ತು. ಗುಂಡಪ್ಪ ಇಷ್ಟು ದಿನ ಸೋಮಾರಿಯಾಗಿದ್ದು, ಈಗ ' ನೋಟ್ಸ್ ' ಬರೆವ ಗಲಾಟೆಯಲ್ಲಿ ಇವನ ಜೊತೆಯಲ್ಲಿ ಹೆಚ್ಚುಸೇರದ ಹಾಗಾಯ್ತು. ಕೃಷ್ಣಮೂರ್ತಿಯೇ ಒಂದೆರಡು ಸಲ ಅವನನ್ನು ನೋಡಿಕೊಂಡು ಬರೋಣ ಎಂದು ಹೊರಟ. ಆದರೆ, ಹೊರಟಾಗ ಇದ್ದ ಮನಸ್ಸು ಹೊರಟು ಸ್ವಲ್ಪದೂರ ಹೋದಮೇಲೆ ಇರಲಿಲ್ಲ. ಗುಂಡನ ಕೊಠಡಿಗೆ ಹೋಗುವುದು ಬಿಟ್ಟು ಎಲ್ಲಿಯೋ ಹುಚ್ಚನಂತೆ ಹೊರಟುಬಿಟ್ಟ. ಹೆಂಡತಿ ಹಿಡಿಸಿದ ಹುಚ್ಚು ಇರಬಹುದೆ? ಅಥವಾ, ಎಷ್ಟೆಷ್ಟುತರ ಹುಚ್ಚು ಇರುತ್ತದೆಯೋ! ಒಂದುದಿನ ಕಾಲೇಜಿನಲ್ಲಿ ಗುಂಡಪ್ಪ ಕೃಷ್ಣಮೂರ್ತಿ ಸಿಕ್ಕಾಗ "ಏನೋ ಅಪರೂಪವಾಗಿ ಬಿಟ್ಟೆ! " ಎಂದು ಕೇಳಿದ.

" ಏನೋ ಬೇಜಾರು ಕಣೋ " ಎಂದು ಉತ್ತರ ಬಂತು.

" ಯಾತ್ಕೆ ಹೊರಡೋದು ತಾನೆ—ಮಾ—ಅಲ್ಲ ಹೆಂಡತಿ ಮನೆಗೆ ! ಮುಂದಿನವಾರ ಸಲೀಸಾಗಿದೆ. ನಾಳೆ ಶನಿವಾರ-ನಾಳಿದ್ದು ಭಾನುವಾರ. ಸೋಮವಾರ ಬೆಳಿಗ್ಗೆ ಕ್ಲಾಸು. ಮಂಗಳವಾರ ರಜ ಬುಧವಾರ ಒಂದೇ ' ಪಿರಿಯಡ್ಡು '—ಗುರುವಾರ ರಜ. ಶುಕ್ರವಾರ ಚಕ್ರಕೊಟ್ರೆ ಮತ್ತೆ ಶನಿವಾರ ಭಾನುವಾರ—ನೋಡು-ಯೋಚನೆ ಮಾಡ್ನೋಡು. "

ಗುಂಡಪ್ಪ ಸಲಹೆ ಕೊಟ್ಟದ್ದು ಎಷ್ಟೋ ಅಷ್ಟೇ, ಕೃಷ್ಣಮೂರ್ತಿ ಹೋಗಲಿಲ್ಲ. ಹಾಗೂ ಹೀಗೂ ಒಂದೂವರೆ ತಿಂಗಳು ಕಳೆಯಿತು. ಅಷ್ಟು ಹೊತ್ತಿಗೆ ಸಂಘದಿಂದ ಕಥೆಗಳ ಸ್ಪರ್ಧೆಯ ಫಲಿತಾಂಶ ಪ್ರಚುರವಾಯಿತು. ಕೃಷ್ಣಮೂರ್ತಿ ಕಳಿಸಿದ್ದ ಕಥೆಗೆ ಮೊದಲನೆಯ ಸ್ಥಾನ ಕೊಡಲ್ಪಟ್ಟಿತು. ಈ ವರ್ತಮಾನದಿಂದ ಕೃಷ್ಣಮೂರ್ತಿಯ ಸ್ನೇಹಿತರಿಗೆಲ್ಲಾ ಬಹಳ ಸಂತೋಷವಾಯಿತು. ಆದರೆ ಅವನಿಗೆ ಮಾತ್ರ ಸಂತೋಷವಾದಹಾಗೆ ಕಾಣಲಿಲ್ಲ. ಎಲ್ಲರಿಗಿಂತ ಗುಂಡಪ್ಪನಿಗೆ ಬಹಳ ಸಂತೋಷ. ಅವನಿಗೆ ಗೊತ್ತಾದಕೂಡಲೆ ಕೃಷ್ಣಮೂರ್ತಿಯನ್ನು ಕಂಡು "ಲೋ ! ನೋಡೋ ಈಗ, ಬೆಪ್ಪುಕಡಿ ! ಕಳ್ಸೋದೇ ಇಲ್ಲ, ಅಂದ್ಬಿಟ್ಟಿದ್ದೆಯಲ್ಲೋ" ಎಂದು ಹಾಸ್ಯವಾಗಿ ಮಾತಾಡಿದ.

"ಏನೋ ಕಳಿಸ್ಬೇಕಾಗಿತ್ತು—ಕಳಿಸ್ಬಿಟ್ಟೆ"

"ವಾಹವಾ! ಈಗ ಮೆಡ್ಲು ಬಂದ್ಮೇಲೆ !"

ಕೃಷ್ಣಮೂರ್ತಿಗೆ, ಗುಂಡಪ್ಪನ ಈ ಮಾತಿಗೆ ಏನು ಉತ್ತರ ಕೊಡಬೇಕೆಂದು ಗೊತ್ತಾಗಲಿಲ್ಲ. ಏನೋ ನೆನಮಾಡಿಕೊಂಡು ಅಲ್ಲಿ ನಿಲ್ಲದೆ ಹೊರಟುಹೋದ.

ಹೀಗೆಯೇ ಕೆಲವು ದಿನಗಳು ಕಳೆದುವು. ಶಾರದೆಯಿಂದ ಕಾಗದ ಬಂತು. ಒಂದೆರಡು ದಿನಗಳಲ್ಲೇ ಬರುವುದಾಗಿ ಬರೆದಿದ್ದಳು. ಕೃಷ್ಣಮೂರ್ತಿ ಆ ಎರಡು ದಿನಗಳನ್ನು ಹೇಗೆ ಕಳೆದನೋ!

ಶಾರದೆ ಬಂದಳು. ಬಂದೊಡನೆಯೇ ಮೊದಲನೆಯ ಪ್ರಶ್ನೆ "ಕಥೆಯ ವಿಚಾರ ಏನಾಯ್ತು?,, ಎಂದು. ಕೃಷ್ಣಮೂರ್ತಿ ಬಹುಮಾನ ಬಂದ ವಿಷಯ ಹೇಳಿದ. ಶಾರದೆ ಸಂತೋಷದಿಂದ ಉಬ್ಬಿಹೋದಳು. "ನಿಜವಾಗಿಯೂ ಮಂಡಿಗೆ ತಿಂದಹಾಗೇ ಆಯ್ತು!" ಎಂದು ಹೇಳಿ ಗಂಡನ ಮುಖವನ್ನು ನೋಡಿ ನಕ್ಕಳು—ಕೃಷ್ಣಮೂರ್ತಿಯೂ ನಕ್ಕ. ಆದರೆ ಅವನ ಮನಸ್ಸು ನಗುವಹಾಗೆ ಇರಲಿಲ್ಲ. ಬಲಹಂತದ ನಗು. ತಾನು ನಗದೆ ಇದ್ದರೆ ಅವಳು ಎಲ್ಲಿ ಅಳುತ್ತಾಳೋ ಎಂದು ಅವನಿಗೆ ಭಯ. ನಡೆದಿದುದೆಲ್ಲಾ ಜ್ಞಾಪಕದಲ್ಲಿ ಇತ್ತು. ಅದಕ್ಕೇ ಆ ಸುಳ್ಳು ನಗುವನ್ನು ಹೊರಕ್ಕೆ ನೂಕಿದ.

೨

ಈದಿನ ಸೆಂಟ್ರಲ ಕಾಲೇಜಿನ ಕರ್ನಾಟಕ ಸಂಘದ ವಾರ್ಷಿಕೋತ್ಸವ. ಅಂತಹ ಉತ್ಸವವನ್ನು ನಿಮ್ಮಲ್ಲಿ ಕೆಲವರು ನೋಡಿದ್ದೀರಿ—ಇನ್ನು ಉಳಿದವರು ಅದರ ವರ್ಣನೆಗಳನ್ನು ಪ್ರಬುದ್ಧ ಕರ್ನಾಟಕದಲ್ಲಿ ಓದಿದ್ದೀರಿ ಆದುದರಿಂದ ಇಲ್ಲಿ ಆ ಉತ್ಸವದ ವರ್ಣನೆ ಅನಾವಶ್ಯಕ. ಸಂಘದಿಂದ ಏರ್ಪಟ್ಟ ಸ್ಪರ್ಧೆಗಳಲ್ಲಿ ತೇರ್ಗಡೆಯಾದವರಿಗೆಲ್ಲಾ ಈ ಉತ್ಸವಕಾಲದಲ್ಲೇ ಬಹುಮಾನವನ್ನು ಹಂಚುವುದು.

ಸಾಯಂಕಾಲ ಐದುಗಂಟೆ ಯಾಗಿತ್ತು. ಆದರೂ ಕೃಷ್ಣಮೂರ್ತಿ ಇನ್ನೂ ಮನೆ ಬಿಟ್ಟು ಹೊರಟಿರಲಿಲ್ಲ. ಶಾರದೆಗೆ ಆಶ್ಚರ್ಯವಾಯಿತು. "ಯಾಕೆ ?—ಹೋಗೊಲ್ವೆ?" ಎಂದು ಕೇಳಿದಳು "ಇಲ್ಲ; ಏನೋ ಬೇಜಾರು"—ಎಂದು ಉತ್ತರ ಬಂತು—ಶಾರದೆಗೆ ಸ್ವಲ್ಪ ಅಸಮಾಧಾನವಾಯಿತು; ತಾನು ಹತ್ತಿರದಲ್ಲಿದ್ದೂ ಬೇಜಾರು ಅಂದನಲ್ಲಾ ಎಂದು. ಉತ್ಸವಕ್ಕೆ ಹೋಗಲೇ ಕೂಡದು ಎಂದು ಮಾಡಿಕೊಂಡಿದ್ದವನು, ಹೆಂಡತಿಯ ಬಲವಂತ ಹೆಚ್ಚಾಗಿ ಹೊರಟ. ಶಾರದೆ, "ಅಲ್ಲಿ ಮುಗಿಯುತ್ತಲೆ ಬೇಗ ಬಂದು ಬಿಡಿ. ಹೊತ್ತಾಗಿ ಬಂದರೆ ನಾ ಸುಮ್ಮನೆ ಇರೊಲ್ಲ!" ಎಂದು ಹೇಳಿ ಒಂದು ಸಲ ಅವನನ್ನು ಚೆನ್ನಾಗಿ ಕಣ್ಣು ತುಂಬಾ ನೋಡಿ ಒಳಕ್ಕೆ ಹೊರಟು ಹೋದಳು.

ಕಾಲೇಜಿನಲ್ಲಿ ಉತ್ಸವದ ಕಾರ್ಯಗಳೆಲ್ಲಾ ಕ್ರಮವಾಗಿ ನಡೆದು ಸ್ಪರ್ಧೆಯಲ್ಲಿ ತೇರ್ಗಡೆಯಾದದರಿಗೆ ಬಹುಮಾನವನ್ನು ಹಂಚುವ ಹೊತ್ತು ಬಂತು. ಸಂಘದ ಕಾರ್ಯದರ್ಶಿಗಳು ತೇರ್ಗಡೆಯಾದವರಿಗೆ ಹೆಸರುಗಳ ಪಟ್ಟಿಯನ್ನು ಹಿಡಿದುಕೊಂಡು ಓದಿದರು. ಪದಕದ ಬಹುಮಾನವೇ ದೊಡ್ಡ ಬಹುಮಾನ. ಆದುದರಿಂದ ಕೃಷ್ಣಮೂರ್ತಿಯ ಹೆಸರನ್ನು ಮೊದಲು ಓದಿದರು. ಅಗ್ರಾಸನಾಧಿಪತಿಗಳು ಪದಕವನ್ನು ಕೈಗೆ ತೆಗೆದುಕೊಂಡರು. ಕೃಷ್ಣಮೂರ್ತಿ ಬರಲಿಲ್ಲ. ಕಾರ್ಯದರ್ಶಿಗಳೂ ಪುನಃ ಅವನ ಹೆಸರನ್ನು ಹಿಡಿದು ಕೂಗಿದರೂ ಕೃಷ್ಣಮೂರ್ತಿ ಇಲ್ಲ! ಎಲ್ಲರಿಗೂ ಆಶ್ಚರ್ಯ! ಗುಂಡಪ್ಪನಿಗೆ ಬಹಳ ವ್ಯಸನವಾಯಿತು. ಎದ್ದು ತಾನೇ ಅವನ ಪರವಾಗಿ ಆ ಪದಕವನ್ನು ತೆಗೆದುಕೊಳ್ಳುವುದಾಗಿ ಹೇಳಿದ—ಅಗ್ರಾಸನಾಧಿಪತಿಗಳು ಅವನ ಮುಖವನ್ನು ನೋಡಿ ನಗುತ್ತ "ಅಯ್ಯೊ, ಸದ್ಯಕ್ಕೆ ನೀನೇ ಕೃಷ್ಣಮೂರ್ತಿ,, ಎಂದು ಹೇಳಿ ಆ ಪದಕವನ್ನು ಅವನ ಕೈಗೆ ಕೊಟ್ಟರು.

ಯಥಾ ಕ್ರಮವಾಗಿ ಸಭೆ ಮುಕ್ತಾಯವಾಯಿತು.

ಸಭೆ ಮುಗಿದ ಮೇಲೆ ಗುಂಡಪ್ಪ, ಪದಕವನ್ನು ಕೃಷ್ಣಮೂರ್ತಿಗೆ ಕೊಡುವುದಕ್ಕೋಸ್ಕರ ಅವನ ಮನೆಗೆ ಹೋದ. ಕೃಷ್ಣಮೂರ್ತಿ ಮನೆಯಲ್ಲಿಯೂ ಇರಲಿಲ್ಲ. "ಬೆಳಿಗ್ಗೆ ನೋಡಿದಂತಾಯ್ತು ಅಂದುಕೊಂಡು ಹಿಂತಿರುಗಿ ಸ್ವಲ್ಪದೂರ ಬಂದಿದ್ದ. ದೂರದಲ್ಲಿ ಕೃಷ್ಣಮೂರ್ತಿ ಬರುತ್ತಿದುದನ್ನು ಕಂಡ. ಅವನು ತಲೆ ಬಗ್ಗಿಸಿಕೊಂಡು ನಿಧಾನವಾಗಿ ನಡೆದು ಬರುತ್ತಿದ್ದ. ಇಬ್ಬರೂ ಸಮೀಪಿಸಿದರು, ಆದರೂ ಕೃಷ್ಣಮೂರ್ತಿ ತಲೆಯೆತ್ತಲಿಲ್ಲ—ಗುಂಡ 'ಲೋ, ಎಲ್ಲೋ ಹೋಗಿದ್ದೆ ಇಷ್ಟು ಹೊತ್ತೂ?' ಎಂದು ಕೇಳಿದ—ಕೃಷ್ಣಮೂರ್ತಿ ಆಗ ತಲೆಯೆತ್ತಿ "ಆ—ಆ ? ಓ ! ನೀನೋ !" ಎಂದ.

ಗುಂಡ— "ಯಾಕೋ ಬರ್ಲಿಲ್ಲ ಇವತ್ತು? " ಎಂದು ಕೇಳಿದ.

" ಯಾಕೆ ಬರಬೇಕಾಗಿತ್ತು ? "

" ಯಾಕೆ! ಪದಕ ತೆಗೆದುಕೊಳ್ಳುವುದಕ್ಕೆ! "

ಇಬ್ಬರೂ ಮಾತನಾಡುತ್ತ ಗುಂಡಪ್ಪನ ಕೊಠಡಿಯ ಕಡೆಗೆ ಹೊರಟರು. ಕೃಷ್ಣಮೂರ್ತಿ ಸ್ವಲ್ಪ ಹೊತ್ತು ಮೌನವಾಗಿದ್ದು ಆ ಮೇಲೆ ಮಾತನಾಡಲು ಪ್ರಾರಂಭಿಸಿದ.

" ಇಲ್ಲಿ ಕೇಳು, ಗುಂಡ, ನಮ್ಮ ಹಣೇಬರಹ ಯೋಗ್ಯತೆ ನಮಗೆ ಗೊತ್ತೇ ಇರುತ್ತದೆ. ಎಂದು ಕೆಲವರ ನಂಬಿಕೆ. ಅದು ಶುದ್ಧ ಸುಳ್ಳು. ನಮ್ಮಲ್ಲಿ ಸ್ವಲ್ಪ ಯೋಗ್ಯತೆ ಇದ್ದರೂ ಅದನ್ನು ಅಗಾಧವಾಗಿ ಮಾಡಿ ಜನರನ್ನು ಮರುಳು ಮಾಡಲು ಪ್ರಯತ್ನಿಸುತ್ತೇವೆ. ಹುಳುಕು ಎಷ್ಟಿದ್ದರೂ ಇದ್ವೇ ಇರುತ್ತೆ!– ಅದರ ಕಡೆ ಕಣ್ಣುಮುಚ್ಚಿಕೊಳ್ಳುತ್ತೇವೆ. ಅದು ಹುಳುಕು ಅಲ್ಲ ಎಂದು ನಮ್ಮ ಮನಸ್ಸಿಗೆ ನಾವೇ ಹೇಳಿಕೊಳ್ಳುತ್ತೇವೆ. ಇದು ಆತ್ಮವಂಚನೆ ಅನೇಕ ವೇಳೆ"

" ಇದೇನೊ, ಉತ್ಸವಕ್ಕೆ ಯಾಕೆ ಬಂದಿಲ್ಲ ಅಂದ್ರೆ ಈ ಉಪನ್ಯಾಸ ತೆಗೆದೆ ? "

" ನಾನು ಹೇಳುವುದನ್ನು ಪೂರ್ತಿ ಕೇಳು, ಆ ಮೇಲೆ ನೀನು ಕೇಳಿದ್ದಕ್ಕೆಲ್ಲಾ ಉತ್ತರ ಕೊಡುತ್ತೇನೆ. ಕೇಳು, ಅನೇಕ ವೇಳೆ ನಮ್ಮ ಮೋಸಕ್ಕೆ ನಾವೇ ಬಲಿಬೀಳುತ್ತೇವೆ. ನಮಗೆ ಗೊತ್ತಿಲ್ಲದ ಹಾಗೆ ಅನೇಕ ದುರ್ಗುಣಗಳು ನಮ್ಮಲ್ಲಿ ಅಡಗಿರಬಹುದು— ವಿಷದ ಬೀಜಗಳಂತೆ ಎಲ್ಲಿಯೋ ಹುದುಗಿಕೊಂಡು ಇರುತ್ತವೆ—ಸರಿಯಾಗಿ ಹದಬಿದ್ದಾಗ ಮೊಳೆಕೆಗೆ ಪ್ರಾರಂಭ. ಆ ಮೇಲೆ ಅದರ ಬೆಳವಣಿಗೆಗೆ ತಡೆಯೇ ಇಲ್ಲ. ಯಾರದ್ದೋ ಒಬ್ಬರ ಹಣ್ಣಿನ ತೋಟ ಎಂದು ಇಟ್ಟುಕೊ, ಅದರಲ್ಲಿ ಒಳ್ಳೇ ಜಾತಿಯ ಕಿತ್ತಳೆ ಹಣ್ಣಿನ ಗಿಡಗಳು. ಅವುಗಳತುಂಬ ಹಣ್ಣುಗಳು. ಅವುಗಳ ಮನೋರಂಜಕವಾದ ಬಣ್ಣ- ಒಳ್ಳೇ ರಸದಿಂದ ಉಬ್ಬಿ ಬೆಳೆದ ಅವುಗಳ ಸೊಂಪು- ತಿನ್ನುವುದಕ್ಕೆ ಮುಂಚೆಯೇ ಅವುಗಳನ್ನು ನೋಡಿ. ಮನಸ್ಸಿಗೆ ಅನುಭವವಾದ ಅವುಗಳ ರುಚಿ- ತಿನ್ನಬೇಕು. ಎಂಬ ಲಲಾಸೆ- ಇವೆಲ್ಲಾ ಮನಸ್ಸನ್ನು ಅಪಹರಿಸುತ್ತವೆ. ಇದಕ್ಕೆ ಅನುಕೂಲವಾಗಿ, ಆ ತೋಟಕ್ಕೆ ಕಾವಲುಗಾರರು ಯಾರೂ ಇಲ್ಲವೆ ನಿರ್ಜನವಾಗಿದ್ದರೆ, ಆಗ ಅದರ ಹತ್ತಿರ ಅಕಸ್ಮಾತ್ತಾಗಿ ಹೋದ ಮನುಷ್ಯನ ಅಡಗಿದ ಗುಣಗಳು ಪರೀಕ್ಷೆಗೆ ಎದುರಾಗುತ್ತವೆ. ಅವನು ತನ್ನ ಸ್ಥಳದಿಂದ ಹೊರಟಾಗ ಅವನ ಮನಸ್ಸಿನಲ್ಲಿ ಯಾವ ವಿಧವಾದ ಯೋಚನೆಯೂ ಇಲ್ಲದೆ ಇದ್ದಿರಬಹುದು. ಅಂದರೆ ಕದಿವ ಗುಣ ಯೋಚನೆಯಾಗಿ ಪರಿಣಮಿಸದೆ ಇರಬಹುದು. ಆ ಗುಣ ಅವನಲ್ಲಿ ಅಡಗಿ ಇದ್ದುದೇ ಆದರೆ ಅದು ಈ ಸನ್ನಿವೇಶದಲ್ಲಿ ಅವನ ಎಲ್ಲಾ ಸ್ಥೈರ್ಯವನ್ನೂ ಒದ್ದು ಹೊರಹಾರುತ್ತದೆ. ಆಗಲೂ ಅವನು ಆ ಕೆಲಸವನ್ನು ಕೆಟ್ಟದ್ದು ಎಂದು ತೋರುವ ಹಾಗೆ ಯೋಚಿಸುವುದಿಲ್ಲ. ದುರಭ್ಯಾಸಗಳನ್ನು ಮಾಡುವ ಅನೇಕರು, ಪ್ರಾರಂಭದಲ್ಲಿ ಯಾರಾದರೂ ಆಕ್ಷೇಪಿಸಿ ಕೇಳಿದರೆ "ಸುಮ್ಮನೆ!- ತಮಾಷೆಗೆ!- ಸರಿ! ಇದನ್ಯಾವೋನು ಅಭ್ಯಾಸ ಮಾಡೋನು ! " ಎಂದು ಉಡಾಫೆ ಮಾಡುತ್ತಾರೆ. ವಿಷವನ್ನು ತಮಾಷೆಗೆ ತಿಂದರೆ ಫಲವೇನಾದರೂ ವ್ಯತ್ಯಾಸವಾಗುತ್ತೇನು? ಇದು ಪಕ್ಕಾ ಆತ್ಮವಂಚನೆ "

ಇಷ್ಟು ಹೊತ್ತಿಗೆ ಇಬ್ಬರೂ ಗುಂಡಪ್ಪನ ಕೊಠಡಿಗೆ ಬಂದರು. ಗುಂಡಪ್ಪ ದೀಪ ಹಚ್ಚಿದ. ಇಬ್ಬರೂ ಕುಳಿತುಕೊಂಡರು. ಗುಂಡ ಪದಕವನ್ನು ತೆಗೆದು ಕೃಷ್ಣಮೂರ್ತಿಯ ಕೈಗೆ ಕೊಟ್ಟು "ಸರಿ, ನಿನ್ನ ಉಪನ್ಯಾಸ ಮುಗಿಯಿತಪ್ಪ. ಈಗ ಹೇಳು. ಯಾಕೆ ಬರಲಿಲ್ಲ? " ಎಂದು ಕೇಳಿದ. ಕೃಷ್ಣಮೂರ್ತಿ ಆ ಮಾತಿಗೆ ಉತ್ತರ ಕೊಡದೆ ಆ ಪದಕವನ್ನು ತೆಗೆದುಕೊಂಡು, "ಎಲ್ಲಿ, ಕೋಟಿನ ಮೇಲೆ ಹಾಕಿಕೊಂಡರೆ ಹೇಗೆ ಇರುತ್ತದೆ. ನೋಡೋಣ " ಎಂದು ಹೇಳಿ ಅದನ್ನು ಅವನ ಅಂಗಿಯ ಮೇಲೆ ಚುಚ್ಚಿ, ಅವನನ್ನು ಎಬ್ಬಿಸಿ, ಬೆಳಕಿಗೆ ಎದುರಾಗುವಂತೆ ತಿರುಗಿಸಿದ. ಗುಂಡ ನಗುತ್ತ, ಯುದ್ಧದಲ್ಲಿ ಸಾಹಸ ಮಾಡಿ ಪದಕವನ್ನು ಪಡೆದ ಸಿಪಾಯಿಯಂತೆ ನೆಟ್ಟಗೆ ನಿಂತುಕೊಂಡು ಎದೆಯನ್ನು ಸ್ವಲ್ಪ ಮುಂದಕ್ಕೆ ಚಾಚಿ, ತಲೆಯನ್ನು ಸ್ವಲ್ಪ ಗರ್ವದಿಂದ ಮೇಲಕ್ಕೆ ಎತ್ತಿದ. ಕೃಷ್ಣಮೂರ್ತಿ ಹಾಗೆಯೇ ಸ್ವಲ್ಪ ಹಿಂದಕ್ಕೆ ಸರಿದು, ಅವನನ್ನೂ, ಅವನ ಎದೆಯ ಮೇಲೆ ಬೆಳಕಿನಲ್ಲಿ ಹೊಳೆಯುತ್ತಿದ್ದ ಪದಕವನ್ನೂ, ಅವನ ಮುಖದ ಮೇಲಿನ ಆ ಹುಸಿ ಗರ್ವವನ್ನೂ, ಅವನು ನಿಂತಿದ್ದ ವರಸೆಯನ್ನೂ ನೋಡಿ, ದೊಡ್ಡದಾಗಿ ಕಣ್ಣು ಬಿಟ್ಟು ಹಸನ್ಮುಖಿಯಾಗಿ "ಹಾ! ನಿನಗೆ ಪದಕ ಎಷ್ಟು ಚೆನ್ನಾಗಿ ಒಪ್ಪುತ್ತದೆ!" ಎಂದ. ಅವನ ಧ್ವನಿ ಸ್ವಲ್ಪ ಅದುರಿದ ಹಾಗಾಯಿತು. ಗುಂಡಪ್ಪ ದೊಡ್ಡದಾಗಿ ನಕ್ಕು "ಓಹೊ! ನಿನಗೂ ಅಷ್ಟೇ ಚೆನ್ನಾಗಿ ಒಪ್ಪುತ್ತೆ! "ಎಂದ. ಕೃಷ್ಣಮೂರ್ತಿನೂ ನಕ್ಕ. ಆದರೆ ಅದು ಒಳಗಿನಿಂದ ಬಂದ ನಗು ಅಲ್ಲ. ಮುಖದ ಮೇಲೆ ಮಾತ್ರ ನಗು. ಅವನ ಹೃದಯ ಅಳುತ್ತಿತ್ತು. ಅವನು ನಟ್ಟ ದೃಷ್ಟಿಯಿಂದ ಗುಂಡನ ಮುಖವನ್ನು ನೋಡತೊಡಗಿದ. ನೋಡುತ್ತಿದ್ದ ಹಾಗೆಯೇ ಅವನ ಆ ಮೇಲಿನ ನಗು ಒಳಕ್ಕೆ ಸರಿದು ಅವನ ಹೃದಯದ ಅಳುವಿನಲ್ಲಿ ಮುಳುಗಿತು. ಕಣ್ಣುಗಳಲ್ಲಿ ಹಸಿಗೂಡಿ ದೀಪದ ಬೆಳಕಿನಲ್ಲಿ ಹೊಳೆದುವು. ಮುಖ ಬಾಡಿ ಅದನ್ನು ಒಂದು ವಿಧವಾದ ದೈನ್ಯತೆ ಆವರಿಸಿತು. ಹಾಗೆಯೇ ಅವನು ಮುಖವನ್ನು ತಗ್ಗಿಸಿದ. ಕಣ್ಣೀರು ಅವನ ಕೆನ್ನೆಗಳ ಮೇಲೆ ಜಾರಿ ಹರಿಯಲಾರಂಭಿಸಿತು. ಕೃಷ್ಣಮೂರ್ತಿ ನಿಶ್ಶಬ್ದವಾಗಿ ಅಳುತ್ತಿದ್ದ. ಗುಂಡಪ್ಪನಿಗೆ ಇದೊಂದೂ ಅರ್ಥವಾಗಲಿಲ್ಲ

ಇದ್ದಕ್ಕಿದ್ದ ಹಾಗೆಯೇ ಅವನು ಅಳುವುದನ್ನು ನೋಡಿ ಅವನಿಗೆ ವಿಸ್ಮಯವಾಯಿತು. ಅವನು ಕೃಷ್ಣಮೂರ್ತಿಯ ಹತ್ತಿರ ಹೋಗಿ ಅವನ ಹೆಗಲಮೇಲೆ ಕೈಹಾಕಿ "ಲೋ, ಕಿಟ್ಟು, ಯಾಕೋ? ಏನೋ ಇದು?" ಎಂದು ಕೇಳಿದ ಕೃಷ್ಣಮೂರ್ತಿ ಮಾತನಾಡಲಿಲ್ಲ. ತನ್ನ ಎರಡು ಕೈಗಳಿಂದಲೂ ಮುಖವನ್ನು ಮುಚ್ಚಿಕೊಂಡು ಬಿಟ್ಟ. ಕಣ್ಣೀರು ನಿಲ್ಲಲಿಲ್ಲ. ಗುಂಡ ಬಹಳವಾಗಿ ಕೇಳಿದ. ತನ್ನ ಮೇಲೆ ಆಣೆ ಇಟ್ಟುಕೊಂಡ. ತಮ್ಮ ಸ್ನೇಹದಮೇಲೆ ಆಣೆ ಇಟ್ಟುಕೊಂಡ. ಸ್ನೇಹದ ಮಾತು ಬಂದೊಡನೆಯೇ ಕೃಷ್ಣಮೂರ್ತಿ ಮಾತನಾಡಿದ. ಮುಖದಿಂದ ಕೈತೆಗೆಯಲಿಲ್ಲ. ಹಾಗೆಯೇ ನಿಧಾನವಾಗಿಯೂ, ಗಂಭೀರವಾಗಿಯೂ "ಗುಂಡ! ನನ್ನಂತಹ ಪಾಪಿ ಇಲ್ಲ! ಏನೋ ಮಾಡುವುದಕ್ಕೆ ಹೋಗಿ ಏನೋ ಮಾಡಿಬಿಟ್ಟೆ!" ಹೀಗೆಂದು ಹೇಳಿ ಸುಮ್ಮನಾದ.

+ + + +

"ಅದೇನು ಅಂಥಾದ್ದು ?"

"ಆ ಪದಕ ನ್ಯಾಯವಾಗಿ ನನಗೆ ಬರಬೇಕಾದ್ದಲ್ಲ. ನಾನು ಅಯೋಗ್ಯನಾಗಿಬಿಟ್ಟೆ !"

ಗುಂಡನಿಗೆ ಆಶ್ಚರ್ಯವಾಯಿತು—

"ಅದು ಹೇಗೆ ? ಏನು ಕಳವುಮಾಲೆ ? ಸೊಗಸಾಗಿ ಗೆದ್ದಿಲ್ಲವೆ !"

"ಹೌದು ? ಕಳವುಮಾಲು—ಕಥೆ ನನ್ನ ಸ್ವಂತ ಕಲ್ಪನೆಯಲ್ಲ"

ಗುಂಡನಿಗೆ ಇನ್ನೂ ಆಶ್ಚರ್ಯವಾಯಿತು. ಅವನು ಆ ಆಶ್ಚರ್ಯವನ್ನು ಕಣ್ಣುಗಳಲ್ಲಿ ತೋರಿಸುತ್ತ "ಹಾಗಾದರೆ ಯಾರದ್ದು!" ಎಂದು ಕೇಳಿದ.

ಕೃಷ್ಣಮೂರ್ತಿ ಈ ಪ್ರಶ್ನೆಗೆ ಉತ್ತರಕೊಡಲಿಲ್ಲ. ತನ್ನ ಜೇಬಿನಿಂದ ಒಂದು ಲಕೋಟೆಯನ್ನು ತೆಗೆದು ಅದನ್ನು ಗುಂಡನ ಕೈಗೆ ಕೊಟ್ಟ. ಗುಂಡ ಆತುರದಿಂದ ಅದರ ಒಳಗಿದ್ದ ಕಾಗದವನ್ನು ತೆಗೆದು ನೋಡಿದ. ತಾನು ಗುರುತುಹಾಕಿ ಇಟ್ಟಿದ್ದ ಕಥೆಯ ಸಂವಿಧಾನ ! ಕ್ಷಣಕಾಲ ಅವನು ಸ್ತಂಭಿತನಾಗಿಬಿಟ್ಟ. ಏನು ಮಾತನಾಡಬೇಕೆಂದು ಅವನಿಗೆ ತೋರಲಿಲ್ಲ. ಆಮೇಲೆ ಆ ಕಾಗದವನ್ನೇ ನೋಡುತ್ತ, "ಇದೆಲ್ಲಿ ಸಿಕ್ಕಿತು ನಿನಗೆ ?" ಎಂದು ಕೇಳಿದ.

"Bradley"

ಗುಂಡನ ಮುಖ ಗಂಭೀರವಾಯ್ತು. ಬರಬರುತ್ತ ಆ ಗಂಭೀರಭಾವ ನಿಧಾನವಾಗಿ ಮಾಯವಾಗಿ ಅದರಮೇಲೆ ಒಂದು ಅಪೂರ್ವವಾದ ನಗು ತೋರಿತು. ಹಾಗೆಯೇ ಅವನು ಸ್ವಲ್ಪ ಯೋಚನಾಪರನಾದ. ಆಮೇಲೆ ಮೆಲ್ಲಗೆ ಕೃಷ್ಣಮೂರ್ತಿಯ ಹತ್ತಿರಹೋಗಿ ಅವನ ಹೆಗಲಿನಮೇಲೆ ಕೈಹಾಕಿ, "ಇದರಲ್ಲಿ ಅಳುವುದಕ್ಕೆ ನಿನಗೆ ಏನು ಕಾರಣವಿದೆಯೋ ನಾ ಕಾಣೆ ! ಕಿಟ್ಟು, ನಾನು ಹೆಚ್ಚು ಏನೂ ಹೇಳುವುದಿಲ್ಲ. ಇಲ್ಲಿ ಕೇಳು, ನೀನು ಬೇರೆ, ನಾನು ಬೇರೆ ಎಂದು ನನಗೆ ಎಂದೆಂದಿಗೂ ತೋರುವುದಿಲ್ಲ. ನೀನುಮಾತ್ರ ಬೇರೆ ಎಂದು ಎಣಿಸುವಹಾಗೆ ಕಾಣುತ್ತೆ. ಇಲ್ಲವಾದರೆ ಈ ಸಣ್ಣವಿಷಯಕ್ಕೆಲ್ಲಾ ನೀನು ಇಷ್ಟು ಕಣ್ಣೀರೇಕೆ ಸುರಿಸಬೇಕು! ನನ್ನ ತಾಯಿ ಸತ್ತು ಸ್ವರ್ಗದಲ್ಲಿದ್ದಾಳೆ. ಆಕೆಯನ್ನು ಸ್ಮರಿಸಿಕೊಂಡು ಹೇಳುತ್ತೇನೆ. ನನ್ನಲ್ಲಿ ಆ ಭೇದಭಾವವಿಲ್ಲ" ಎಂದು ಹೇಳಿದ. ಗುಂಡನ ಕಣ್ಣುಗಳಲ್ಲಿಯೂ ಸ್ವಲ್ಪ ನೀರಾಡಿತು. ಕೃಷ್ಣಮೂರ್ತಿಗೆ ಸಮಾಧಾನವಾದಂತೆ ತೋರಲಿಲ್ಲ. ಗುಂಡಪ್ಪ ಕಣ್ಣೊರಸಿಕೊಂಡುಪುನಃ ಹೇಳತೊಡಗಿದ.

"ಕಿಟ್ಟು, ನೋಡು, ದೇವರು ನನ್ನ ಪ್ರಯತ್ನವಿಲ್ಲದೆಯೇ ನನಗೆ ತಿಳಿಯದಂತೆ ನನ್ನಿಂದ ಒಂದು ಒಳ್ಳೆಯ ಕೆಲಸವನ್ನು ಮಾಡಿಸಿದ್ದಾನೆ. ಆ ಕಥೆಯನ್ನು ನಾನೇ ಬರೆದು, ನನಗೆ ಆ ಪದಕ ಬಂದಿದ್ದರೆ ಅದಕ್ಕೆ ಈಗಿನ ಉಪಯೋಗ ಇರುತ್ತಿತ್ತೆ ! ನಾನು ಆ ಪದಕವನ್ನು ತೆಗೆದುಕೊಂಡು ಏನು ಮಾಡಬೇಕಾಗಿತ್ತು? ಯಾರ ಕೊರಳಿಗೆ ಹಾಕಬೇಕಾಗಿತ್ತು! ಈಗ ನೋಡು ಅದರ ಸಾರ್ಥಕ್ಯ ! ಒಂದುವೇಳೆ ನಾನೇ ಅದನ್ನು ಗೆದ್ದು ನಿನ್ನ ಹೆಂಡತಿಗೆ ಬಹುಮಾನವಾಗಿ ಕೊಟ್ಟಿದ್ದೆ—ಎಂದು ಇಟ್ಟುಕೊ. ನೀನು ಗೆದ್ದುಕೊಡುವುದು ಹೇಗಿರುತ್ತದೆ? ನಾನು ಕೊಟ್ಟರೆ ಹೇಗಿರುತ್ತದೆ? ಇದಕ್ಕೆ ಯಾಕೆ ಇಷ್ಟು ಕೊರಗು? ಇಷ್ಟು ಕಣ್ಣೀರು ! ನಮ್ಮ ಸ್ನೇಹಕ್ಕೆ ಈ ಕಣ್ಣೀರೇ ಬೆಲೆಯೆ ? ನಾನು ನನ್ನ ಕಥೆಗಳಲ್ಲಿ ನಿನ್ನ ಮಾತುಗಳನ್ನೂ, ನಿನ್ನ ಅಭಿಪ್ರಾಯಗಳನ್ನೂ ಸೇರಿಸಿಲ್ಲವೆ ? ಆ "ಹೊಸಮಲ್ಲಿಗೆ" ಅನ್ನೋ ಕಥೆಯುಲ್ಲಿ ಮುಕ್ಕಾಲೆಲ್ಲಾ ನಿನ್ನದೇ ! ಅದರಲ್ಲಿ ಹೆಸರುಮಾತ್ರ ನನಗೆ ಬಂತು ! ನೀನು ಹೀಗೆಲ್ಲಾ ಆಡುವುದನ್ನು ನೋಡಿ ನನಗೆ ನಗಬೇಕೋ ಅಳಬೇಕೋ ತಿಳಿಯದು ! ಈ ಹಾಳು ಕಾಗದ ತಾನೆ, ನನ್ನದು ಅನ್ನುವುದಕ್ಕೆ ಸಾಕ್ಷಿ !" ಹೀಗೆಂದು ಹೇಳಿ ಕೃಷ್ಣಮೂರ್ತಿ ಕೊಟ್ಟಿದ್ದ ಆ ಕಾಗದವನ್ನು ತೆಗೆದುಕೊಂಡು, ತನ್ನ ಮೇಜಿನಮೇಲಿದ್ದ ದೀಪದಹತ್ತಿರ ಹೋಗಿ,

ಅದರ ಮೇಲೆ ಆ ಕಾಗದವನ್ನು ಹಿಡಿದ. ಅರ್ಧ-ನಿಮಿಷದಲ್ಲಿ ಎಲಾ ಸುಟ್ಟು ಬೂದಿಯಾಯಿತು. ತಿರುಗಿ ನೋಡಿದ. ಕೃಷ್ಣ ಮೂರ್ತಿ ಕೊಠಡಿಯಲ್ಲಿರಲಿಲ್ಲ. ಗುಂಡಪ್ಪ ತಿರುಗಿ ನಿಂತಿದ್ದ ಹಾಗೆಯೇ ಆಲಿಸಿಕೇಳಿದ. ಕೃಷ್ಣಮೂರ್ತಿ ಹೊರಗೆ ನಿಶ್ಶಬ್ದವಾಗಿ ಅಳುತ್ತಿದ್ದಂತೆ ಬೋಧೆಯಾಯ್ತು.

ಅದೇ ದಿನ ರಾತ್ರಿ, ಬಹಳ ಹೊತ್ತಾಗಿತ್ತು. ಕೃಷ್ಣಮೂರ್ತಿ ಶಾರದೆ ಇಬ್ಬರೂ ತಮ್ಮ ಕೊಠಡಿಯಲ್ಲಿ ಮಾತನಾಡುತ್ತ ಕುಳಿತು ಕೊಂಡಿದ್ದರು. ದೀಪ ಸಣ್ಣಗೆ ಉರಿಯುತ್ತಿತ್ತು. ಕೃಷ್ಣಮೂರ್ತಿ ಬಹಳ ಹೊತ್ತಿನಿಂದ ಮಾತನಾಡುತ್ತಿದ್ದಂತೆ ತೋರುತ್ತದೆ. ಶಾರದೆ ಮೌನವಾಗಿ ಎಲ್ಲವನ್ನು ಕೇಳುತ್ತಿದ್ದಳು. ಎಲ್ಲವನ್ನು ಹೇಳಿ ಕೊನೆಗೆ, "ಶಾರೀ, ಅವನಿಗೆ ಬುದ್ಧಿಕಲಿಸಬೇಕು ಅಂದು ಕೊಂಡವನು. 'ನಾನೇ ಕಲಿವ ಹಾಗಾಯಿತು.!" ಎಂದು ಹೇಳಿ ತಲೆತಗ್ಗಿಸಿಕೊಂಡ. ಅವನ ಹೃದಯ ಗಾಣಕ್ಕೆ ಕೊಟ್ಟ ಕಬ್ಬಿನಂತೆ ಆಗಿತ್ತು. ಕಣ್ಣುಗಳಿಂದ ಹನಿಗಳು ಜಾರ ತೊಡಗಿದುವು. ಅವನು ಮೀರಿ ಬಂದ ದುಃಖವನ್ನು ತಡೆಯು ಲಾರದೆ, ಹೆಂಡತಿಯ ತೊಡೆಯ ಮೇಲೆ ತಲೆಯನ್ನಿಟ್ಟು, ಮುಖವನ್ನು ಮುಚ್ಚಿಕೊಂಡು "ಶಾರೀ, ಶಾರೀ, ನಾನೆಂತಹ ಪಾಪಿಯೆ !ನೀನು ಪಾಪಿಯ ಹೆಂಡತಿಯಾದೆಯಲ್ಲಾ!" ಎಂದು ಹೇಳಿ ಅತ್ತ. ಶಾರದೆಗೂ ಕಣ್ಣುಗಳಲ್ಲಿ ನೀರು ಹರಿದು ಬಂದು ಬಹಳ ಹೊತ್ತು ಮೌನವಾಗಿದ್ದಳು—ಮಾತು ಸುಲಭವಾಗಿ ಹೊರಡುವಂತಿರಲಿಲ್ಲ. ನಾಲಗೆ ಮಾಡಲಾಗದ ಕೆಲಸವನ್ನು ಹೃದಯ ಮಾಡಿತು. ಶಾರದೆ ಪ್ರಯತ್ನಪೂರ್ವಕವಾಗಿ ಗಂಡನನ್ನು ಬಹುಪ್ರೇಮದಿಂದ ತನ್ನ ಬಾಹುಗಳಲ್ಲಿ ಬಿಗಿದಪ್ಪಿಕೊಂಡು ಅವನ ಮುಖಕ್ಕೆ ತನ್ನ ಮುಖವನ್ನಿಟ್ಟು ಒಂದು ಮುತ್ತು ಕೊಟ್ಟಳು. ಇಬ್ಬರ ಕಣ್ಣೀರೂ ಒಂದಾಗಿ ಸೇರಿದುವು. ಒಂದು ದುಃಖದ ಕಣ್ಣೀರು, ಇನ್ನೊಂದು ಕ್ಷಮೆಯ ಕಣ್ಣೀರು.

ಶಾರದೆ ಮೂರ್ತಿಮತ್ತಾದ ಕ್ಷಮೆ. ಅದನ್ನು ಅವಳು ಆ ಚುಂಬನದಿಂದ ಸ್ಥಿರೀಕರಿಸಿದಳು.

ಸಮುದ್ರದಲ್ಲಿರುವ ಮೀನು ನೀರಿಗೆ ಗೋಚರಿಸದಂತೆ ಯಾವ ಕೆಲಸವನ್ನು ಮಾಡಬಲ್ಲುದು ?

**ನಾವೂ ಹಾಗೆಯೇ !**

---

ಈ ಕಥೆಗೆ ಬೆಂಗಳೂರ ಸೆಂಟ್ರಲ್ ಕಾಲೇಜಿನ ಕರ್ನಾಟಕ ಸಂಘದಿಂದ ಮುದ್ದಣನ ಜ್ಞಾಪಕಾರ್ಥವಾಗಿ ಏರ್ಪಟ್ಟ ಸುವರ್ಣಪದಕವು ದೊರೆತಿರುವುದು.

—ಸಂಪಾದಕ.

# * ದೇವರ ವಿಚಾರ

( ಲೇ.— ಶ್ರೀ. ಬಿ. ಚಂದ್ರಶೇಖರಯ್ಯ ಬಿ. ಎ. )

### ೧ ಇರುವ ಭಾವನೆ

ಜನರ ಮಾತನ್ನು ನೋಡಿದರೆ ದೇವರನ್ನು ಕಾಣದವರು ಇರುವಂತೆಯೇ ತೋರುವುದಿಲ್ಲ. ಮನುಷ್ಯನು ಕುರುಡನಾಗಲಿ ಕುಂಟನಾಗಲಿ ಹುಡುಗನಾಗಲಿ ಮುದುಕನಾಗಲಿ ಸುಖಿಯಾಗಲಿ ದುಃಖಿಯಾಗಲಿ ಕಾಡಿನಲ್ಲಿ ವಾಸಮಾಡುವ ಕುರುಬನಾಗಲಿ ಯಾವನೇ ಆದರೂ ಅವನು ದೇವರನ್ನು ಯಾವುದಾದರೊಂದು ಕಾರಣದಿಂದ ಸ್ಮರಿಸಿಕೊಳ್ಳುತ್ತಿರುತ್ತಾನೆ. ಸುಖಿಯಾದವನು ತನಗೆ ಸೌಖ್ಯವೂ ಸಂತೋಷವೂ ದೊರೆತುದಕ್ಕಾಗಿ ದೇವರನ್ನು ಸ್ತುತಿಸುತ್ತಾನೆ. ದೇವರು ದೊಡ್ಡವನೆಂತಲೂ ಒಳ್ಳೆಯವನೆಂತಲೂ ಸರ್ವಜ್ಞನೆಂತಲೂ ಅವನ ಬಾಯಿಂದ ಅಭಿಪ್ರಾಯವು ಹೊರಡುವುದು. ದುಃಖವನ್ನು ಕಂಡವನು ದೇವರಿಗೆ ತನ್ನ ವಿಷಯದಲ್ಲಿ ಕನಿಕರವಿಲ್ಲವೆಂದು ತಪ್ಪುಹೊರಿಸುತ್ತಾನೆ. ಅಂಥವನು ತನ್ನ ಕಷ್ಟವನ್ನೂ ಇತರರ ಸುಖವನ್ನೂ ಹೋಲಿಸಿಕೊಂಡು, ದೇವರು ತನಗೆ ಅನ್ಯಾಯಮಾಡುತ್ತಾನೆಂದು ದೂರುವನು. ಕುರುಡಕುಂಟರು ತಮ್ಮದು ಯಾವ ತಪ್ಪೂ ಇಲ್ಲದಿದ್ದರೂ ದೇವರು ತಮ್ಮಲ್ಲಿ ಆ ದೋಷಗಳನ್ನು ಉಂಟುಮಾಡಿದನೆಂದು ಹೇಳುತ್ತಾರೆ. ಒಂದು ವೇಳೆ ಅವನನ್ನು ಆ ಅಪರಾಧಕ್ಕೆ ಗುರಿಮಾಡದಿದ್ದರೂ ಆ ದೋಷಗಳು ನಿವಾರಣೆಹೊಂದಿ ತಮಗೆ ಸುಖವುಂಟಾಗಿ ತಾವು ನಾಲ್ಕು ಜನರಂತೆ ಬಾಳಲು ದೇವರ ಸಹಾಯವನ್ನು ಕೋರುತ್ತಾರೆ. ಯಾವನಾದರೂ ಹುಡುಗನು ಮೂರುಕಾಸನ್ನು ಕಳೆದುಕೊಂಡರೆ ದೇವರು ಅದನ್ನು ಹುಡುಕಿಕೊಡಬೇಕು. ಅವನು ಬಿದ್ದು ಪೆಟ್ಟಾದರೆ ಅದನ್ನು ವಾಸಿಮಾಡುವವನು ದೇವರಾಗಬೇಕು. ಮುದುಕನೊಬ್ಬನಿಗೆ ಊಟವು ಈ ದಿನ ಹೊತ್ತಾದರೆ ನಾಳೆಯ ದಿನ ಊಟವು ಕಾಲಕ್ಕೆ ಸರಿಯಾಗಿ ದೊರೆವ ಹಾಗೆ ದೇವರು ಏರ್ಪಾಡು ಮಾಡಬೇಕು. ಈ ದೌರ್ಭಾಗ್ಯಕ್ಕೆ ಗುರಿಯಾದರೆ ಮುದುಕನು, ತಾನು ಸ್ನಾನಾಹ್ನಿಕಗಳಲ್ಲಿಯೂ ದೇವರ ಪೂಜೆಯಲ್ಲಿಯೂ ಔದಾಸೀನ್ಯವನ್ನು ತೋರಿಸದಿದ್ದರೂ, ನಿತ್ಯವೂ ತಪ್ಪದಂತೆ ಭಗವದ್ಗೀತೆಯ ಅಧ್ಯಾಯಗಳನ್ನು ಪಾರಾಯಣ ಮಾಡುತ್ತಿದ್ದರೂ, ದೇವರು ಏಕೆ ಹೀಗೆ ಮಾಡಿದನೆಂದು ತರ್ಕಿಸಲಾರಂಭಿಸುವನು. ವರ್ತಕನಿಗೆ ವ್ಯಾಪಾರದಲ್ಲಿ ಲಾಭವು ಬರುವಂತೆ ಮಾಡುವವನೂ ರೈತನ ಫಸಲಿಗೆ ಮಳೆ ಹುಯ್ಯುವಂತೆ ಮಾಡುವವನೂ, ಯಾರಾದರೊಬ್ಬರು ಒಂದು ಕೆಲಸವನ್ನು ಕೈಗೊಂಡರೆ ಅದರೊಳಗಿನ ವಿಘ್ನಗಳು ಅಳಿವಂತೆ ಮಾಡುವವನೂ ದೇವರು.

ಇದುವರೆಗೆ ಗಂಡುಸರ ವಿಷಯವನ್ನು ಹೇಳಿಯಾಯಿತು. ಹೆಂಗುಸರು ದೇವರನ್ನು ಯಾವರೀತಿಯಲ್ಲಿ ಉಪಚರಿಸುತ್ತಾರೆಂಬುದನ್ನು ವಿಚಾರಿಸಿದರೆ ವಿಸ್ಮಯವಾದೀತು. ಸೀತಕ್ಕನ ಬೆಂಡೋಲೆಯ ತಿರುಪು ಬಿದ್ದು ಹೋದರೆ ಅದನ್ನು ಹುಡುಕಲು ದೇವರಿಂದಲ್ಲದೆ ಅನ್ಯರಿಂದ ಸಾಧ್ಯವೇ ಅಲ್ಲ. ಅಡಿಗೆಗೆ ಉಪ್ಪು ಹೆಚ್ಚಾಗದಿರುವಂತೆ ದೇವರೇ ನೋಡಿಕೊಳ್ಳಬೇಕು. ಅಮ್ಮನು ಒಲೆಯ ಮೇಲೆ ಬೇಳೆ ಹಾಕಿ ನೀರು ತರಲು ನೆರೆಮನೆಗೆ ಹೋದರೆ, ಅವಳು ಬರುವವರೊಳಗೆ ತಳಹಿಡಿಯದಂತೆ ದೇವರಲ್ಲದೆ ಮತ್ತೆ ಯಾರು ನೋಡಿಕೊಳ್ಳುವವರು? ಅಷ್ಟು ಮಾಡದಿದ್ದರೆ ಆತನು ಸರ್ವಾಂತರ್ಯಾಮಿಯಾಗಿ ಸರ್ವಜ್ಞನಾಗಿ ಫಲವೇನು ? ಅವ

---

* [ ದೇವರೆಂದರೇನು, ದೇವರಿರುವುದು ಯಾವರೂಪದಲ್ಲಿ, ಅವನನ್ನು ಹೇಗೆ ಕಾಣಲಾದೀತು. ಇವೇ ಮುಂತಾದ ಪ್ರಶ್ನೆಗಳು ಬಹುಕಾಲದಿಂದಲೂ ನನ್ನ ಮನಸ್ಸಿನಲ್ಲಿ ಹುಟ್ಟಿ ಬಾಧಿಸುತ್ತಿದ್ದವು. ಕಾಲಕ್ರಮದಲ್ಲಿ ಈ ಪ್ರಬಂಧದಲ್ಲಿ ವಿಸ್ತರಿಸುವಂತೆ ನಿರ್ಣಯವಾವಿರ್ಭವಿಸಿತು. ಈ ವಿಧವಾದ ಪ್ರಶ್ನೆಗಳಾಗಲಿ ಚಿಂತನೆ ಮಾಡುವವರ ಯೋಗ್ಯತೆಗನುಸಾರವಾದ ಉತ್ತರವಾಗಲಿ ಹೊಸದಲ್ಲ. ಆದರೆ ಕೆಲವರು ಸ್ವತಃ ಚಿಂತನೆಮಾಡದೆ ಇತರರು ಹೇಳಿದುದನ್ನು ಒಪ್ಪಿಕೊಂಡು ಸುಮ್ಮನಾಗುತ್ತಾರೆ. ಅಂಥವರು ನಾನು ಬರೆದಿರುವುದನ್ನು ಓದಿ, ಈಗಲಾದರೂ ಚಿಂತಿಸಲಾರಂಭಿಸಿ, ನನ್ನ ಭಾವನೆಯಲ್ಲಿರುವ ದೋಷಗಳನ್ನು ತಿದ್ದಬೇಕಲ್ಲದೆ, ತಮ್ಮ ಬುದ್ಧಿಗೆ ತೋರುವ ಭಾವನೆಗಳನ್ನು ತಿಳಿಸಬೇಕೆಂಬುದೇ ಈ ಪ್ರಬಂಧವನ್ನು ಬರೆವುದರಲ್ಲಿ ನನಗಿರುವ ಮುಖ್ಯ ಅಭಿಮತ. ಜಯಕರ್ನಾಟಕವನ್ನು ಓದುವ ಸಂಭಾವಿತರು ಈ ವಿಷಯಕ್ಕೆ ಗಮನಕೊಟ್ಟು ನನ್ನ ಅಭಿಮತವನ್ನು ನೆರವೇರಿಸುವರೆಂದು ನನ್ನ ಭರವಸೆ. ]

ನಲ್ಲಿ ಆ ಗುಣಗಳಿವೆಯೆಂದು ಭಾಗವತವು ಹೇಳುವುದು ಸುಳ್ಳು ತಾನೆ? ಮೊನ್ನೆ ನಮ್ಮ ವೆಂಕತ್ತೆ ಸುಬ್ರಾಯಶೆಟ್ಟಿಯ ಅಂಗಡಿಯಿಂದ ಸೀರೆ ತಂದು ಉಟ್ಟು ಒಗೆದರು. ಹೊಸಹೊಸಾ ಸೀರೆ! ಬಣ್ಣ ಕದರಿ ಹೋಯಿತು. "ಅಯ್ಯೋ, ದೇವರೆ, ಹೀಗೂ ಆಗಬೇಕೆ!" ಎಂದು ಕೊರಗಿದರು. ವಿಷಯವನ್ನು ದೇವರ ಕಿವಿಗೆ ಹಾಕಿಯಾಯಿತು. ಸೀರೆಯ ಬಣ್ಣವನ್ನು ಹೋಗಿಸುವಂತಹ ಔದಾಸೀನ್ಯಕ್ಕಾಗಿ ಅವನನ್ನು ದೂರಿಯೂ ಆಯಿತು. ಹೆಂಗಸರು ಮಾಂಗಲ್ಯವು ಶಾಶ್ವತವಾಗಿರಲೆಂಬ ಆಶಯದಿಂದ ಗೌರಿಯನ್ನು ಪೂಜಿಸುತ್ತಾರೆ. ತಮಗೆ ಐಶ್ವರ್ಯವು ಹೆಚ್ಚಲೆಂಬ ಆಶಯದಿಂದ ಲಕ್ಷ್ಮಿಯನ್ನು ಪೂಜಿಸುತ್ತಾರೆ. ಹೊಟ್ಟೆಯೂ ಬೆನ್ನೂ ತಣ್ಣಗಿರಲೆಂದು ಸುಬ್ರಹ್ಮಣ್ಯೇಶ್ವರನನ್ನು ಪೂಜಿಸಿ ಕಡಬುಮಾಡಿ ಅವನಿಗೆ ತಿನ್ನಿಸುತ್ತಾರೆ. ತಮಗೆ ಅಭ್ಯುದಯವುಂಟಾಗಲೆಂತ ಸತ್ಯನಾರಾಯಣನ ಪೂಜೆ ಮಾಡುತ್ತಾರೆ. ನಿಮ್ಮ ಪ್ರಯತ್ನವೆಲ್ಲ ದಡ್ಡತನವೆಂದು ನಾನು ಒಂದಾನೊಂದು ದಿನ ನಮ್ಮ ಅಜ್ಜಿಗೆ ಹೇಳಿದೆ. ಅದಕ್ಕೆ ಅವರು, "ಹಾಗೆ ಹೇಳು, ನಿನಿಗೆ ದೇವರು ಕಣ್ಣನ್ನು ಕುಕ್ಕಿಡುತ್ತಾನೆ!" ಎಂದು ಹೆದರಿಸಿ, ಅಂತಹ ಘೋರವಾದ ಅಪರಾಧವನ್ನು ಮತ್ತೆ ಮಾಡಬೇಡವೆಂದು ಬುದ್ಧಿಯಮಾತು ಹೇಳಿದರು.

ಈ ರೀತಿಯಾಗಿ ಜನರು ದೇವರನ್ನು ಕೋರದ ಸಮಯವಿಲ್ಲ. ಅವನು ತಿಳಿಯದ ವಿಚಾರವಿಲ್ಲ. ಅವನು ಮಾಡದ ಅಥವಾ ಮಾಡಲಾರದ ಕೆಲಸವಿಲ್ಲ. ಯಾರಿಗೂ ಇಲ್ಲದಷ್ಟು ಕೆಲಸ ದೇವರಿಗೆ, ಯಾರಿಗೂ ಇಲ್ಲದಷ್ಟು ಸಂಪಾದನೆ ದೇವರಿಗೆ. ಇದನ್ನೆಲ್ಲಾ ನೋಡಿದರೆ ಅವನಲ್ಲಿ ಯಾರು ತಾನೇ ಅಸೂಯೆ ಹೊಂದುವುದಿಲ್ಲ? ಎಲ್ಲರೂ ಎಲ್ಲಾ ವಿಷಯಗಳಿಗೂ ಯಾವನನ್ನು ಸ್ಮರಿಸಿ ಯಾವನ ಸಹಾಯವನ್ನು ಅಪೇಕ್ಷಿಸುತ್ತಾರೋ ಅಂಥವನ ಪದವಿಯು ಯಾರಿಗೆ ತಾನೇ ಬೇಡ ?

ಮೇಲೆ ಹೇಳಿರುವ ಉದಾಹರಣೆಗಳು ಕೆಲವು ಮಾತ್ರ. ಧಾನ್ಯದ ರಾಶಿಯೊಳಗೆ ಕೈಹಾಕಿ ಒಂದು ಹಿಡಿ ಧಾನ್ಯವನ್ನು ತೆಗೆದುಕೊಂಡು ಪರೀಕ್ಷಿಸಿದ ಹಾಗೆ ಆದರೂ ಇದಿಷ್ಟು ಉದಾಹರಣೆಗಳಿಂದಲೇ ಒಂದು ಅಂಶವು ಗೊತ್ತಾದೀತು. ಅವುಗಳ ಸಹಾಯದಿಂದ ಸಾಮಾನ್ಯ ಮನುಷ್ಯನಿಗೆ ದೇವರೆಂದರೆ ಯಾವ ವಿಧವಾದ ಭಾವನೆಯಿದೆ ಎಂಬುದು ಪತ್ತೆಯಾಗುವುದು. ಆ ಭಾವನೆ ಯಾವುದು? ಮೇಲೆ ಹೇಳಿರುವ ಮನುಷ್ಯನಿಗೆ ದೇವರೆಂಬ ಶಬ್ದಕ್ಕೆ ನಿಷ್ಕೃಷ್ಟವಾದ ಅರ್ಥವಿಲ್ಲವೇ ಇಲ್ಲ. ದೇವರು ಯಾರೆಂಬುದನ್ನೂ ಅವನ ಸ್ವಭಾವವೆಂಥದೆಂಬುದನ್ನೂ ಅವನು ಶುದ್ಧಾಂಗವಾಗಿ ಅರಿಯನು. ಆದರೆ, ಭಗವಂತನು ಸರ್ವಾಂತರ್ಯಾಮಿಯೆಂದೂ ಸರ್ವಜ್ಞನೆಂದೂ ಸರ್ವಶಕ್ತನೆಂದೂ ಶಾಸ್ತ್ರಗಳು ಹೇಳುವುದಿಲ್ಲವೆ? ಎಲ್ಲರ ಮನಸ್ಸಿನಲ್ಲಿಯೂ ಆ ಅಭಿಪ್ರಾಯವಿದೆಯಲ್ಲ? ಇರಬಹುದು. ಈ ಭಾವನೆಗಳಲ್ಲಿ ನಿಜಾಂಶವಿಲ್ಲದೆ ಇಲ್ಲ. ಶಾಸ್ತ್ರಗಳು ಭಗವಂತನಲ್ಲಿ ಆ ಗುಣಗಳಿವೆಯೆಂದು ವರ್ಣಿಸುವುವು. ಆವರ್ಣನೆಗೆ ಆಧಾರವು ಪುಷ್ಕಳವಾಗಿರುವುದು. ಆದರೆ ಸಾಮಾನ್ಯ ಜನರಾದ ನಿಮಗೂ ನಮಗೂ ಆಧಾರವು ಯಾವುದು? ಶಾಸ್ತ್ರಗಳ ವಚನಕ್ಕೆ ಸ್ವಂತ ಅನುಭವವೇ ಆಧಾರ. ಜನ ಸಾಮಾನ್ಯನ ಬಾಯಿಂದ ಪರಮಾತ್ಮನ ವಿಷಯದಲ್ಲಿ ಅದೇ ಸಿದ್ಧಾಂತವು ಹೊರಟರೂ ಅದಕ್ಕೆ ಅನುಭವದ ಆಧಾರವಿಲ್ಲ. ಶಾಸ್ತ್ರಕಾರರು ಚಿಂತನೆಮಾಡಿ ದೇವರ ವಿಷಯದಲ್ಲಿ ಒಂದು ನಿಶ್ಚಯಕ್ಕೆ ಬಂದಿದ್ದಾರೆ. ಆದರೆ ಜನಸಾಮಾನ್ಯನು ಅಷ್ಟೊಂದು ಗಾಢವಾಗಿ ಚಿಂತಿಸಿ ಮಾತನಾಡುವನೇನು? ಅವನು ಪರಮಾತ್ಮನು ಸರ್ವಶಕ್ತನೆಂದು ನುಡಿದರೆ ಅದು ಇತರರು ಯಾರೋ ಹೇಳಿದ ಮಾತು. ಅವನ ಗುರುಗಳೋ ವೈದಿಕ ಗ್ರಂಥಗಳೋ ಹೇಳಿದುದನ್ನು ಅವನು ಗಿಣಿಯ ಹಾಗೆ ಪುನರುಚ್ಚರಣೆಮಾಡಿ ಕೀರ್ತಿಯನ್ನು ಸಂಪಾದಿಸುತ್ತಾನೆ. ಆ ಶಬ್ದಕ್ಕೆ ಅರ್ಥವೇನೆಂಬುದೂ ಪರಮಾತ್ಮನು ಹೇಗೆ ಸರ್ವಶಕ್ತನೆಂಬುದೂ ಅವನಿಗೆ ಸ್ವಲ್ಪವೂ ತಿಳಿಯದು. ಆದುದರಿಂದ ಅವನು ಹೇಳುವುದು ಯಥಾರ್ಥಾಂಶವಲ್ಲ–ಬರಿ ಅದೊಂದು ಕಥೆ. ದೇವರು ಸರ್ವಜ್ಞನೆಂದು ಅವನು ವರ್ಣಿಸುವುದಕ್ಕೆ "ದೇವರು ಸರ್ವಜ್ಞನಂತೆ" ಎಂಬುದರಲ್ಲಿ ಎಷ್ಟು ಸತ್ಯವಿದೆಯೋ ಆ ವಾಕ್ಯವನ್ನು ಎಷ್ಟರ ಮಟ್ಟಿಗೆ ಸ್ವಾನುಭವದಿಂದ ತಿಳಿದ ಹಾಗಾಯಿತೋ ಅಷ್ಟೇ ಅರ್ಥ.

"ಕತ್ತೆ ಬಲ್ಲದೆ ಹೊತ್ತ ಕಸ್ತುರಿಯ ಪರಿಮಳವ?"

ಸಾಮಾನ್ಯ ಮನುಷ್ಯನಿಗೆ ದೇವರೆಂದರೇನೆಂಬುದು ಗೊತ್ತಿಲ್ಲವೆಂದು ತಾನೇ ಹೇಗೆ ಹೇಳಲಾದೀತು? ಅವನು ಗುಡಿಗೆ ಹೋಗಿ ಅಲ್ಲಿ ದೇವರನ್ನು ಪೂಜಿಸುವುದಿಲ್ಲವೆ? ಮನೆಯಲ್ಲಿ ನಿತ್ಯವೂ ಆರಾಧಿಸುವುದಿಲ್ಲವೆ? ಮನೆಯಲ್ಲಿ ಅಥವಾ ಗುಡಿಯಲ್ಲಿ ವಿಗ್ರಹಗಳಲ್ಲಿ ಭಗವಂತನನ್ನು ಕಾಣುವುದಿಲ್ಲವೆ? ಈ ಪ್ರಶ್ನೆಗಳಿಗೆ ಉತ್ತರವನ್ನು ಮುಂದೆ ಹೇಳಲಾದೀತು. ಆಗ ದೇವರೆಂಬುದರ ವಸ್ತು-ನಿಷ್ಕರ್ಷೆಯೂ ವಿಗ್ರಹಗಳಲ್ಲಿಯೂ ಇತರ ಬಾಹ್ಯವಸ್ತುಗಳಲ್ಲಿಯೂ ದೇವರನ್ನು ಆವಾಹನೆಮಾಡಿ ಕಾಣಲೆಳಸುವುದರ ಅರ್ಥವೂ ವ್ಯಕ್ತವಾಗುವುದು. ಆದರೆ ಈಗ ಜನಗಳು ಆ ಬ

ವನ್ನು ನಿತ್ಯವೂ ಪ್ರತಿಕ್ಷಣವೂ ಉಪಯೋಗಿಸುವಾಗ ಯಾವ ವಸ್ತುವನ್ನು ಉದ್ದೇಶಿಸುತ್ತಾರೆಂಬುದನ್ನು ನಿರ್ಧರಿಸಬಹುದು.

ಯಾವನಾದರೊಬ್ಬನು ತನ್ನದೊಂದು ಒಡವೆಯನ್ನು ಕಳೆದು ಕೊಂಡ ಪಕ್ಷದಲ್ಲಿ ದೇವರಿಗೆ ಹರಸಿಕೊಳ್ಳುತ್ತಾನೆ– "ಆ ಒಡವೆ ಸಿಕ್ಕಿದರೆ ಈಡುಗಾಯಿ ಹಾಕುತ್ತೇನೆ" ಎಂದು ಸಂಕಲ್ಪಿಸಿ ಕೊಳ್ಳುತ್ತಾನೆ. ಆದರೆ ಒಡವೆ ಹಾಳಾಗಲು ದೇವರು ಕಾರಣ ವಾದನೆ? ಅಥವಾ ಅದು ಮತ್ತೆ ಸಿಕ್ಕಲು ತಾನೇ ಅವನು ಕಾರಣ ವಾದಾನೆ? ದೇವರು ಬಂದು ಈಡುಗಾಯಿ ಸಿಕ್ಕುತ್ತದೆಂಬ ಲಾಭದ ಆಸೆಗಾಗಿ ಕಳೆದುಕೊಂಡ ವಸ್ತುವನ್ನು ಹುಡುಕಿಕೊಡು ವನೆ? ಯಾವುದೂ ಇಲ್ಲ. ಹಾಗಾದರೆ ಒಡವೆ ಹೋದುದು ಅಸ ಡ್ಡೆಯಿಂದಲೆಂತಲಾಗಲಿ ಕಳ್ಳನೊಬ್ಬನಿಗೆ ದುರಾಸೆಯುಂಟಾದು ದರಿಂದಲೆಂತಲಾಗಲಿ ಉತ್ತರಹೇಳಬಹುದು. ಅದು ಸಿಕ್ಕಿದ ಪಕ್ಷ ದಲ್ಲಿ ವಸ್ತುಲಾಭವು ಅವನ ಸ್ವಂತ ಪ್ರಯತ್ನದಿಂದಲಾಗಲಿ ಇತರ ಜನರ ಸಹಾಯದಿಂದಲಾಗಲಿ ಉಂಟಾಯಿತೆಂದು ಉತ್ತರಹೇಳಬಹುದು. ಅಂತಹ ಉತ್ತರವು ಸಂಪೂರ್ಣವಾಗಿ ಸತ್ಯವಾದುದು. ಆದರೆ ಈ ವಿಚಾರದಲ್ಲಿ ದೇವರು ಕೊಂಚವೂ ಕೈಹಾಕಲಿಲ್ಲವೆಂಬುದೂ, ದೇವರೆಂಬಾತನೊಬ್ಬನು ಪ್ರಪಂಚ ದಲ್ಲಾಗಲೀ ಅಥವಾ ವಿಶ್ವದ ಮತ್ತಾವ ಭಾಗದಲ್ಲಾಗಲೀ ಇದ್ದ ಪಕ್ಷದಲ್ಲಿ ವಸ್ತುನಾಶವೂ ವಸ್ತುಲಾಭವೂ ಅವನ ಕಿವಿಯನ್ನು ಮುಟ್ಟಲಾರವೆಂಬುದೂ ಸ್ಮರಣೆಯಲ್ಲಿರಲಿ. ಒಂದೇ ಒಗೆತಕ್ಕೆ ವೆಂಕತ್ತೆ ಹಣ ಸುರಿದು ತಂದ ಸೀರೆಯ ಬಣ್ಣವು ಕದರಿದರೆ ಅದಕ್ಕೆ ದೇವರು ಜವಾಬ್ದಾರನಲ್ಲ. ನೂಲಿಗೆ ಸರಿಯಾಗಿ ಬಣ್ಣ ಹಾಕದಿದ್ದ ಮಗ್ಗದವನೋ ಮತ್ತೆ ಯಾವನೋ ಕಾರಣವಾದನು. ಅಜ್ಜಯ್ಯನಿಗೆ ಈ ದಿನ ಅನ್ನ ಹಾಕುವುದು ಹೊತ್ತಾದರೆ ಅದಕ್ಕೆ ಅಜ್ಜಮ್ಮನು ನೆರೆಮನೆಯ ಸುಬ್ಬಕ್ಕನ ಸಂಗಡ ಬೆಳಗ್ಗೆ ಮಾತ ನಾಡುತ್ತ ಹೊತ್ತು ಕಳೆದುದೇ ಕಾರಣ. ಉದಾಹರಣೆಗಳು ಸಾಕು. ಮನುಷ್ಯರ ಜೀವಮಾನದಲ್ಲಿ ನಡೆವ ಸಂಗತಿಗಳಿಗೆ ದೇವರು ಯಾವರೀತಿಯಲ್ಲಿಯೂ ಸಂಬಂಧ ಪಟ್ಟಿಲ್ಲವೆಂಬುದು ಇವಿಷ್ಟರಿಂದಲೇ ಗೊತ್ತಾಗುತ್ತದೆ. ಭಗವಂತನನ್ನು ಬಯಲಿ ಗೆಳೆಯದ ಕೆಲವರು, ಈ ಸಂಗತಿಗಳಿಗೆಲ್ಲಾ ಅದೃಷ್ಟವು ಕಾರಣ ವೆಂದೂ ನಮ್ಮ ಪೂರ್ವಿಕರು ಕರ್ಮವು ಕಾರಣವೆಂದೂ ಹೇಳು ತ್ತಾರೆ. ನಿಮಿತ್ತವು ಯಾವುದೇ ಆಗಲಿ ಪ್ರಪಂಚದ ವಿದ್ಯ ಮಾನವು ಭಗವಂತನ ತಲೆಗೆ ಕಟ್ಟಿದುದಲ್ಲ. ಅದೃಷ್ಟವೆಂದು ನಾವು ಕರೆವುದು ನಮ್ಮ ನಮ್ಮ ಗುಣ ಅಥವಾ ಕರ್ಮ ಮತ್ತು ಸಾಮಾಜಿಕ ಪರಿಸ್ಥಿತಿ–ಇವೆರಡರ ಸಂಯೋಗ ಮತ್ತು ಫಲಿ ತಾಂಶವೆಂಬುದು ಎಲ್ಲರಿಗೂ ತಿಳಿದ ವಿಷಯವೇ. ನನ್ನ ಮನೆಯಲ್ಲಿ ಕಳ್ಳತನವಾದರೆ ನಮ್ಮೂರಿನಲ್ಲಿ ಕಳ್ಳನೊಬ್ಬನಿದ್ದುದೂ, ಅವನು ನನ್ನ ಮನೆಯಲ್ಲಿ ಒಡವೆ ವಸ್ತುಗಳಿರುವುದನ್ನು ಅವುಗಳನ್ನು ಧರಿಸಿ ಮನೆಯ ಹೆಂಗಸರು ಬೀದಿಯಲ್ಲಿ ಮೆರೆದುದರಿಂದ ತಿಳಿ ದುದೂ ಕಾರಣ. ನಾಲ್ಕು ಜನರ ನಡುವೆ ಇದ್ದೆನೆಂದರೆ ನನ್ನ ಜೀವನದ ಸಂಗತಿಗಳು ವಿಶೇಷವಾಗಿ ಮಾರ್ಪಡುವುವು. ಜನ ಮಧ್ಯದಲ್ಲಿರದೆ ಕಾಡಿನಲ್ಲಿ ಒಂಟಿಯಾಗಿ ವಾಸಮಾಡಿಕೊಂಡಿ ದ್ದರೂ ನಾವು ಮಾಡಿದ ಕೆಲಸದ ಫಲವನ್ನು ನಾವು ಅನುಭವಿಸ ಬೇಕೆಂಬ ಕಾರ್ಯಕಾರಣಗಳ ಅನ್ಯೋನ್ಯತೆ ಸುಳ್ಳಾಗದು. ಕಾಡಿನಲ್ಲಿ ಮುಳ್ಳುತುಳಿದರೆ ಅದಕ್ಕೆ ನನ್ನ ಅಲಕ್ಷ್ಯತೆಯೆ, ನಿಮಿತ್ತ. ಮನುಷ್ಯನು ಊರಲ್ಲಿಯೇ ಇರಲಿ ಕಾಡಿನಲ್ಲಿಯೇ ಇರಲೀ ಯಾವುದೊಂದು ಸಂಘಟನೆಗೂ ಅವನ ಗುಣವೂ ಅವನಿರುವ ಸನ್ನಿವೇಶವೂ ಉತ್ತರವಾದಿಯಾಗುವುವು. ಸನ್ನಿವೇಶವೂ ಸ್ವಂತ ಗುಣವೂ ಏಕೀಭವಿಸಿದರೆ ಮನುಷ್ಯನಿಗೆ ಲಾಭವೂ ಪರಸ್ಪರ ವಿರುದ್ಧಭಾವವನ್ನು ವಹಿಸಿದರೆ ಅಲಾಭವೂ ಉಂಟಾಗುವುವು. ಸ್ಥಿತಿ ಹೀಗಿದ್ದರೂ ನಾವು ಈ ಮುಖ್ಯಾಂಶವನ್ನು ಸರ್ವದಾ ಸ್ಮರಿಸಿಕೊಳ್ಳುವುದಿಲ್ಲ. ಆದುದರಿಂದಲೇ ಪ್ರತಿಯೊಂದು ಸಂಘಟ ನೆಗೂ ನಮ್ಮ ಕೈಮೀರಿದ, ಅತಿ ಮಾನುಷವಾದ ಯಾವುದಾದ ರೊಂದು ವ್ಯಕ್ತಿಯನ್ನು ನಿರ್ಮಿಸಿ ಅದರ ತಲೆಗೆ ಕಾರಣವನ್ನು ಕಟ್ಟುತ್ತೇವೆ. ವರ್ತಕನೊಬ್ಬನು ತನಗೆ ವ್ಯಾಪಾರದಲ್ಲಿ ನಷ್ಟ ವಾದರೆ ಅಥವಾ ಗಿರಾಕಿ ಕಡಿಮೆಯಾದರೆ ಅದು ನೆರೆಯಲ್ಲಿ ಮತ್ತೊಬ್ಬ ವರ್ತಕನು ವ್ಯಾಪಾರವನ್ನು ಹೂಡಿದುದೇ ನಿಮಿತ್ತ ವೆಂಬುದನ್ನು ಯೋಚಿಸದೆ, ದೈವವೆಂದೂ ಗ್ರಹಚಾರವೆಂದೂ ಕರ್ಮವೆಂದೂ ಮನುಷ್ಯನಿಗಿಂತ ಬಲವತ್ತರವಾದ ಸುಲಭವಾಗಿ ಅರ್ಥವಾಗದ ಕರ್ತನನ್ನು ಕಲ್ಪಿಸಿಕೊಂಡು ದೂರುತ್ತಾನೆ. ನಿಜ ವಾದ ನಿಮಿತ್ತವು ಯಾವುದೆಂಬುದನ್ನು ಅವನು ನಿರ್ಧರ ಮಾಡು ವುದಿಲ್ಲ. ಜಗತ್ತಿನ ಜನನಕ್ಕೆ ದೇವರು ಭಾಗಿಯಾದರೆ ಜನಗಳ ವ್ಯಾಪಾರಕ್ಕೂ ಭಾಗಿಯಾದಾನೆ? ಅತಿ ಮಾನುಷವಾದ ಆ ವ್ಯಕ್ತಿ ಇಂತಹದೆಂಬುದನ್ನೂ ಗೊತ್ತುಮಾಡಲಾರದೆ ಇರುವುದರಿಂದಲೇ ಈ ರೀತಿ ವ್ಯಾಖ್ಯಾನಮಾಡಬೇಕಾಗುತ್ತದೆ. ಮನುಷ್ಯನಿಗಿಂತ ಹೆಚ್ಚಿನ ಶಕ್ತಿಯುಳ್ಳ ವಸ್ತುವೊಂದಿದ್ದೇ ಇರಬೇಕು. ಅದು ಇಂದ್ರಿಯ ಗೋಚರವಲ್ಲದುದಾಗಿರಬೇಕು. ಇವೆರಡು ಗುಣಗ ಳನ್ನೂ ಒಳಗೊಂಡ ವಸ್ತುವು ನಮಗೆ ತಿಳಿದ ಹಾಗೆ ದೇವರಲ್ಲದೆ ಬೇರೆ ಯಾವುದೂ ಕಾಣುವುದಿಲ್ಲ. ಆದುದರಿಂದ ಪ್ರಪಂಚದಲ್ಲಿ

ಸಂಭವಿಸುವ ವಿಶೇಷ ವಿದ್ಯಮಾನಗಳೆಲ್ಲಕ್ಕೂ ದೇವರಲ್ಲದೆ ಮತ್ತೊಬ್ಬರು ಕರ್ತರಲ್ಲನೆಂದು ಭಾವನೆ ಹುಟ್ಟುತ್ತದೆ. ಆದರೆ ದೇವರಿಗೂ ನಮಗೂ ನಡುವೆ ಮತ್ತೊಂದು ತತ್ವವಿದ್ದೇ ಇರುವುದು. ಆ ತತ್ವವು ದೇಶಕಾಲಗಳ ಸ್ಥಿತಿಯೆಂದು ಹೆಸರನ್ನು ಪಡೆವುದು. ದೇವರಿಗೂ ಅವಕ್ಕೂ ಸಂಬಂಧವು ಸ್ವಲ್ಪವೂ ಇಲ್ಲ. ಈ ಅಂಶವನ್ನು ಸ್ಮರಣೆಯಲ್ಲಿಟ್ಟುಕೊಂಡು, ನಡೆವ ಪ್ರತಿಯೊಂದು ಸಂಗತಿಗೂ ನ್ಯಾಯ್ಯವಾದ ಸಮಾಧಾನವನ್ನು ಹುಡುಕಿದಲ್ಲಿ, ಕೆಲಸವು ಕೆಟ್ಟು ನಮಗೆ ನಷ್ಟವಾಗುವುದೂ, ನಷ್ಟವಾದುದರಿಂದ ಉತ್ಪನ್ನವಾಗುವ ಅಸಮಾಧಾನವೂ, ಅಸಮಾಧಾನವನ್ನು ಹೊಂದಿ ದೇವರನ್ನು ದೂರುವುದೂ ತಪ್ಪುವುದು. ಕಾರಣಸ್ಥಾನದಲ್ಲಿ ದೇವರಿಗೆ ಬದಲಾಗಿ ಮತ್ತೊಂದು ತತ್ವವನ್ನು ನಿಲ್ಲಿಸಿ, ದೇವರಲ್ಲಿ ಅನ್ಯಾಯವಿಲ್ಲವೆಂದು ಹೇಳಿಕೊಂಡು ಕೊರಗದಿರಬಹುದು. ಈಗಿನ ಕಾಲದಲ್ಲೂ ಕೂಡ ಪಶ್ಚಿಮ ದೇಶಗಳಲ್ಲಿ ಕೆಲವರು ತತ್ವಜ್ಞಾನಿಗಳು, ಜಗತ್ತಿನಲ್ಲಿ ಅಧರ್ಮವು ಅತಿಯಾಗಿದೆಯೆಂದೂ, ಧರ್ಮಸ್ವರೂಪನಾದ ಪರಮಾತ್ಮನಿಂದ ನಿರ್ಮಿತವಾಗಿ ಅವನ ಅಂಶಭೂತವಾದ ಅದರಲ್ಲಿ ಅಧರ್ಮವು ಕಾಲಿಡಲು ಅವಕಾಶ ಉಂಟಾದುದು ವಿಚಿತ್ರವೆಂದೂ ವಿಷಾದಪಡುತ್ತಾರೆ. ಜಗತ್ತನ್ನು ದೇವರು ಸೃಷ್ಟಿಮಾಡಿರಬಹುದು. * ಆದರೆ ಅಧರ್ಮವನ್ನು ಹೇಗೆ ಸೃಷ್ಟಿಮಾಡ್ಯಾನು? ಮಾವಿನ ಹಣ್ಣು ಬಿಡುತ್ತದೆ. ಆದರೆ ಹಣ್ಣು ಕೊಳೆತು ಕೆಟ್ಟುಹೋಗಲು ದೇವರು ಕಾರಣನಲ್ಲ. ಅಥವಾ ಗಿಡವು ಕಾರಣವಲ್ಲ. ಅದೇ ಪ್ರಕಾರದಲ್ಲಿ ನಮ್ಮ ನಮ್ಮ ದೆಸೆಯಿಂದ ಹುಟ್ಟುವ ಅಧರ್ಮಕ್ಕೂ ಅನ್ಯಾಯಕ್ಕೂ ದೇವರು ಹೇಗೆ ಮೂಲವಾದಾನು?

ನಾವು ದೇವರು ದೇವರೆಂದು ಪ್ರತಿಮಾತಿಗೂ ಆಡುತ್ತಿರುತ್ತೇವೆ. ಆದರೆ ಅದು ಎಷ್ಟರಮಟ್ಟಿಗೆ ಅಬದ್ಧವೆಂಬುದು ಮೇಲಿನ ವಿಮರ್ಶೆಯಿಂದ ತಿಳಿದು ಬರುತ್ತದೆ. ನಮ್ಮಲ್ಲಿ ನಮಗಿರುವುದಕ್ಕಿಂತಲೂ ನಮಗೆ ದೇವರಲ್ಲಿ ಪರಿಚಯವು ಹೆಚ್ಚಾಗಿರುವಂತೆ ತೋರುತ್ತದೆ. ನಾನು ಎಂದು ಹೇಳುವುದಕ್ಕಿಂತ ಎಷ್ಟೋ ಸಾರಿ ಹೆಚ್ಚಾಗಿ ನಾವು ಭಗವನ್ನಾಮವನ್ನುಚ್ಚರಿಸುತ್ತೇವೆ. ಜನರು ಸಪ್ತಾಹಗಳನ್ನು ರಚಿಸಿಕೊಂಡು ಉಸಿರಾಡುವವುದಕ್ಕೂ ವ್ಯವಧಾನವಿಲ್ಲದ ರೀತಿಯಲ್ಲಿ ಭಗವಂತನನ್ನು ಧ್ಯಾನಮಾಡುವುದನ್ನು ನೋಡಿದ್ದೇನೆ. ಅವರಿಗೆ ಹಸಿವೂ ಕೂಡ ಮರೆತು ಹೋಗುತ್ತದೆ. ಅವರನ್ನು ಕುರಿತು ಯಾರಾದರೂ, "ನೀವು ಸ್ತೋತ್ರಮಾಡುತ್ತಿರುವುದು ಯಾರನ್ನು ಕುರಿತು ?" ಎಂದು ಕೇಳಿದರೆ, "ಮತ್ತೆ, ಯಾರನ್ನು ? ದೇವರನ್ನು!" ಎಂದು ಬಲು ಬೇಗ ಉತ್ತರ ಹೇಳುವರಲ್ಲದೆ ನಮ್ಮ ಮೌಢ್ಯಕ್ಕಾಗಿ ನಕ್ಕರೂ ನಕ್ಕಾರು. ಆದರೆ ದೇವರು ಎಲ್ಲಿದ್ದಾನೆ, ಅವನನ್ನು ಕಾಣುವುದು ಹೇಗೆ, ಆ ರೀತಿ ಕೂಗಿ ಕುಣಿದು ಮಾಡಿದರೆ ದೇವರನ್ನು ಕಾಣಲಾದೀತೆ, ಹಾಗೆ ಮಾಡದಿದ್ದರೆ ಕಾಣಲಾಗುವುದಿಲ್ಲವೆ; ಎಂದು ಮೊದಲಾಗಿ ಪ್ರಶ್ನೆಗಳನ್ನು ಕೇಳಿರಿ. ಅವರು ಯಾರೂ ಉತ್ತರ ಹೇಳಲಾರರು. ದೇವರನ್ನು ಮನುಷ್ಯರಂತೆ ಆಕಾರಗೊಳಿಸಿ ವಾಸಸ್ಥಾನವೇ ಮೊದಲಾದುವನ್ನು ನಿರ್ಧರಿಸಲು ಹೊರಟರೆ ದೇವರು ನಮಗೆ ಎಂದಿಗೂ ಸಿಕ್ಕುವುದಿಲ್ಲ. ನಾವು ಹುಡುಕುತ್ತ ಹುಡುಕುತ್ತ ಹೋದಹಾಗೆ ಅತನು ದೂರವಾಗುವನು. ಗೋಚರನಾದನೆಂದು ಧೈರ್ಯಹೇಳಿಕೊಂಡರೂ ಗೋಚರನಾಗುವುದಿಲ್ಲ.‡ ದೇವರನ್ನು ಹೊರಗೆ ಎಲ್ಲಿಯಾದರೂ ಕಾಣುವುದೂ ಗಾಳಿಯನ್ನು ಬಲೆಯಲ್ಲಿ ಹಿಡಿವುದೂ ಒಂದೇಸಮವಾಗಿ ಸಫಲವಾಗುವುವು. ಆದರೆ ಜನಸಾಮಾನ್ಯನು ಮಾಡಿರುವ ಪ್ರಯತ್ನವೆಲ್ಲಾ ಭಗವಂತನನ್ನು ಹೊರಗೆ ಎಲ್ಲಿಯೋ ಕಾಣುವುದಕ್ಕೋಸ್ಕರ ಮಾಡಿದುದೇ ಆಗಿದೆ. ಬಾಹ್ಯಪ್ರಪಂಚದಲ್ಲಿ ಪರಮಾತ್ಮನು ಗೋಚರನಾಗುವನೆ, ಎಷ್ಟರಮಟ್ಟಿಗೆ ಕಂಡುಬರುವನು, ಮೊದಲಾದ ವಿಚಾರಗಳನ್ನು ಮುಂದೆ ಚರ್ಚಿಸಲಾಗುವುದು. ನಾವು ವಿಷ್ಣು ವೈಕುಂಠದಲ್ಲಿಯೂ ಬ್ರಹ್ಮನು ಸತ್ಯಲೋಕದಲ್ಲಿಯೂ ಇಂದ್ರನು ಸ್ವರ್ಗದಲ್ಲಿಯೂ ಇದ್ದಾರೆಂದು ಒಬ್ಬೊಬ್ಬ ದೇವತೆಗೆ ಒಂದೊಂದು ಲೋಕವನ್ನು ಹಂಚಿಕೊಡುತ್ತೇವೆ. ಆದರೆ ಅವೆಲ್ಲವೂ ಕಲ್ಪನೆಯಲ್ಲದೆ ಬೇರೆಯಲ್ಲ. ಸ್ವರ್ಗವನ್ನು ಕಂಡಿರುವವರು ಯಾರು ? ವಿಷ್ಣುವಿರುವ ಲೋಕವು ನಮಗೆ ತಿಳಿದು ಬಂದುದು ಹೇಗೆ? ಅಲ್ಲಿ ವಿಷ್ಣು ವಿರುವನೆಂಬುದು ತಾನೇ ಹೇಗೆ ನಿಶ್ಚಿತವಾಗಿದೆ ? ಇಂತಹ ಪ್ರಶ್ನೆಗಳನ್ನು ಕೇಳಲಾರದೆ ರಾಮಭಟ್ಟರು ಕಿವಿಮುಚ್ಚಿಕೊಂಡಾರು. ಹೀಗೆಲ್ಲಾ ಕೇಳಿದ ಕೃಷ್ಣರಾಯನನ್ನು ನಾಸ್ತಿಕ ಭ್ರಷ್ಟನೆಂದು ಕರೆದರೂ ಕರೆದಾರು. ಆದರೂ ಅವುಗಳಿಗೆ ಸಮಾಧಾನಕರವಾದ ಉತ್ತರವನ್ನು ಕೊಡಲಾರರು. ಈ ಲೋಕಗಳೆಲ್ಲಾ ಗಗನಕುಸುಮಗಳು. ವಿಷ್ಣುವೂ ಬ್ರಹ್ಮನೂ ಹೊರಗೆ ಎಲ್ಲಿಯೂ ಕಾಣಲಾ

---

* ಈ ಅಂಶವನ್ನು ಮುಂದೆ ಚರ್ಚಿಸಿದೆ.

‡ ಕೇನೋಪನಿಷತ್ತಿನಲ್ಲಿ ಪರಮಾತ್ಮನ ಈ ಗುಣವನ್ನು ವಿಶದಗೊಳಿಸುವ ಎರಡು ಉದಾಹರಣೆಗಳು ವರ್ಣಿತವಾಗಿವೆ.

ವು. ಅವರ ಮಹಿಮೆಯನ್ನು ವರ್ಣಿಸುವವರು ಕೇವಲ ಕಥೆ ಹೇಳುವವರು. ವಿಷ್ಣುವಿನ ದಶಾವತಾರವನ್ನು ಓದುವವರು ಕಟ್ಟುಕಥೆಯನ್ನು ಓದುವವರು. ಭಾಗವತವು ಮತ್ತೊಂದು ವಿಧವಾದ ಕಥೆ ಮಾತ್ರ. ಕಥೆಯ ವೈಶಿಷ್ಟ್ಯವು ಕಲ್ಪನೆಯ ಕಗ್ಗ ಮಾತ್ರ.

ಪುರಾಣಗಳನ್ನೂ ಗ್ರಂಥಗಳನ್ನೂ ಬಿಟ್ಟು ಅವುಗಳನ್ನು ಬರೆದವರು ಯಾರೆಂದು ನೋಡಲು ಹೋದರೆ ಅವುಗಳ ಕಲ್ಪಿತತ್ವವು ಸ್ಪಷ್ಟವಾಗುವುದು. ಈ ಪ್ರಸಿದ್ಧ ಗ್ರಂಥಗಳಿಗೆ ಕರ್ತರಿಲ್ಲ. ಅಥವಾ ಮನುಷ್ಯರು ಕರ್ತರಲ್ಲ. ಅವು ಅಪೌರುಷೇಯವಾದುವುಗಳು. ಅವುಗಳನ್ನು ರಚಿಸಿದವರು ಮನುಷ್ಯರೆಂದರೆ, ದೇವರ ಚರಿತ್ರೆಯನ್ನು ಅಷ್ಟೊಂದು ನಿಷ್ಕರ್ಷೆಯಿಂದ ಹೇಳುವ ಮಹಾತ್ಮರು ದೇವರನ್ನು ಯಾವಾಗ ಯಾವ ರೂಪದಲ್ಲಿ ಯಾವ ವಿಧದಲ್ಲಿ ಪ್ರತ್ಯಕ್ಷಮಾಡಿಕೊಂಡರೆಂದು ಪ್ರಶ್ನೆಯನ್ನು ಕೇಳಬೇಕಾಗುವುದು. ಅದಕ್ಕೆ ಉತ್ತರ ಹೇಳಬಲ್ಲವರು ಯಾರು ? ಒಂದು ವೇಳೆ ಮಹರ್ಷಿಗಳು ಆ ಉದ್ಗ್ರಂಥಗಳನ್ನು ರಚಿಸಿದರೆಂದು ಹೇಳಬಹುದು. ಅಂತಹ ಋಷಿಗಳೂ ಇರಬಹುದು. ಆದರೆ ಇಷ್ಟು ಮಾತ್ರ ಅವರಲ್ಲಿಯೂ ಸತ್ಯವಾದುದು. ಏನೆಂದರೆ ಅವರು ದೇವರನ್ನು ಹೊರಗೆಲ್ಲಿಯೂ ಹುಡುಕಲಿಲ್ಲ. ನನಗೆ ಈ ಅಂಶವು ಸರ್ವತಃ ಖಂಡಿತವೆಂದು ತೋರುತ್ತದೆ. ದೇವರು ಹೊರಗೆಲ್ಲಿಯೂ ಇಲ್ಲ. ಅಂಗಡಿಯಲ್ಲಿ ಪರಮಾತ್ಮನ ಪಟವನ್ನು ಕೊಂಡುಕೊಂಡು ಮನೆಗೆ ತಂದರೆ, ನಾವು ತಂದುದು ಪಟವೊಂದನ್ನೇ ಹೊರತು ದೇವರನ್ನಲ್ಲ. ಬೀದಿ ಬೀದಿಯಲ್ಲಿ ಹೊರಟು ಜನರಿಂದ ಕಾಯಿ ಬಾಳೆ ಹಣ್ಣುಗಳನ್ನೂ ಕರ್ಪೂರವನ್ನೂ ನೈವೇದ್ಯ ಮಾಡಿಸಿಕೊಂಡು ಅಟ್ಟಹಾಸದಿಂದ ದೇವಸ್ಥಾನಕ್ಕೆ ಹಿಂದಿರುಗುವ ಉತ್ಸವ ಮೂರ್ತಿ ಎಂದೆಂದಿಗೂ ಯಾವ ವಿಧವಾದ ದೇವರೂ ಅಲ್ಲ.

ಸ್ಥಿತಿ ಈ ರೀತಿಯಾಗಿರಲಾಗಿ ದೇವರನ್ನು ಕಣ್ಣಿಂದ ಕಂಡವನೆಂದು ಯಾವ ಮಹಾತ್ಮನನ್ನು ಕೊಂಡಾಡಲಾದೀತು? ಸ್ವಾಮಿ ವಿವೇಕಾನಂದರು ಹುಡುಗನಾಗಿದ್ದಾಗ ಒಂದು ದಿನ ಮಹರ್ಷಿ ದೇವೇಂದ್ರನಾಥ ಠಾಕೂರರ ಬಳಿಗೆ ಹೋಗಿ ಇದ್ದಕ್ಕಿದ್ದ ಹಾಗೆ "ಮಹಾಶಯ, ನೀವು ದೇವರನ್ನು ನೋಡಿದ್ದೀರಾ?" ಎಂದು ಪ್ರಶ್ನೆಹಾಕಿದರಂತೆ. ಮಹರ್ಷಿಗಳಿಗೆ ಯಾವ ಉತ್ತರವೂ ತೋರಲಿಲ್ಲ. ಮಹರ್ಷಿಗಳ ಪಾಡೇ ಹೀಗಾಗಲಾಗಿ ಸಾಮಾನ್ಯರ ಮಾತೇನು? ಸಾವಿರಾರು ವರ್ಷಕಾಲ ಏಕಾಗ್ರ ಚಿತ್ತರಾಗಿ ತಪಸ್ಸು ಮಾಡಿದರೂ ಗೋಚರನಾಗದಿರುವ ಪರಮಾತ್ಮನು ಸೀರೆಯ ಬಣ್ಣ ಹೋಯಿತೆಂದು ವ್ಯಥೆಪಡುವ ವೆಂಕತ್ತೆಯ ಕಣ್ಣಮುಂದೆ ನಿಂತಾನೆ? ಸೂಜಿಯ ಮೊನೆಯ ಮೇಲೆ ನಿಂತು ಧ್ಯಾನಮಾಡುವವರಿಗೆ ಕಾಣದಿದ್ದವನು ಒಲೆಯ ಮುಂದೆ ಕುಳಿತು ಬೇಳೆ ತಳಸೀಯನಂತೆ ನೋಡಿಕೊಳ್ಳುತ್ತಿರುವನೆ? ಇವೆಲ್ಲವೂ ಭ್ರಮೆಹೊರತು ಮತ್ತೇನೂ ಅಲ್ಲ. ಒಡವೆಯನ್ನು ಕತ್ತಿನಲ್ಲಿ ಧರಿಸಿ ಊರೆಲ್ಲಾ ಹುಡುಕಿದರೆ ಅದು ಸಿಕ್ಕುವ ಸಂಭವವುಂಟೆ ?

( ಸಶೇಷ ),

---

## ಕೋಗಿಲೆ—ಅನ್ಯೋಕ್ತಿ

ಈ ನಾಡಿನಲ್ಲಿ ಜನರೆಲ್ಲರು ಕರ್ಣಹೀನರ್ ।
ನೀನೇಕೆ ನಲ್ನುಡಿಗಳಾಡುವಿ, ಕೋಗಿಲೇ, ಪೇಳ್ ॥
ನೀನಾವುದೊಂದು ಕರಿಬಣ್ಣದ ಕಾಗೆಯೆಂದು ।
ಜ್ಞಾನಾಂಧರೀ ಜನರು ಮನ್ನಿಸುವರ್ ರಸಜ್ಞರ್ ॥

ಎ. ಭಾ. ಜ.

# ಹರಿಶ್ಚಂದ್ರಕಾವ್ಯ

ಲೇಖಕ:— ಶ್ರೀ. ತಿರುಮಲೆ ಶ್ರೀನಿವಾಸಾಚಾರ್ಯ. ಬಿ. ಎ. ಎಲ್ ಎಲ್. ಬಿ. ಹಾಸನ

ಕನ್ನಡಿಗರು ಆದರಿಸಬೇಕಾದ ಕಾವ್ಯಗಳಲ್ಲಿ ರಾಘವಾಂಕನ ಹರಿಶ್ಚಂದ್ರ ಕಾವ್ಯವು ಮೇಲ್ಮೆವೆತ್ತುದು; ಈ ಕವಿ ಕನ್ನಡ ಸಾಹಿತ್ಯದಲ್ಲಿ ಕನ್ನಡತನವನ್ನು ಹೆಚ್ಚಿಸಿದ ಮೊದಲಿಗರಲ್ಲಿ ಸೇರಿದವನಾಗಿರುವನು. ನಮ್ಮ ತಿಳುವಳಿಯಲ್ಲಿ ನಮ್ಮ ಆದಿ ಕವಿಗಳು ಜೈನರು. ಪಂಪ, ರನ್ನ ಮೊದಲಾದವರ ಸೇವೆಗೆ ಬೆಲೆ ಕಟ್ಟಲಾಗದು. ಇವರು ಎಷ್ಟೇ ಕನ್ನಡಿಗರಾದರೂ ಸಂಸ್ಕೃತದ ಬಲೆಗೆ, ಸಂಕೋಲೆಗೆ, ಹೊರಗಾದವರಲ್ಲ. ಕಾಲಕಳೆದಂತೆ, ಸ್ಫೂರ್ತಿ ಕುಂದಿದಂತೆ, ಈ ಬಿಗಿತದಲ್ಲಿ ಕನ್ನಡತನವು ಕುಗ್ಗುತ್ತ ಬಂತು. ಒಟ್ಟಿನಲ್ಲಿ ಕನ್ನಡ ಸಾಹಿತ್ಯದ ಕನ್ನಡತನವನ್ನು ಹೆಚ್ಚಿಸುವ ಬೇಗುದಿಯುಳ್ಳವರಲ್ಲಿ ವೀರಶೈವರೇ ಮೊದಲಿಗರೆನ್ನಬೇಕು. ಮತವನ್ನು ಹಬ್ಬಿಸಲು ಬರವಣಿಗೆ ಬೆಂಬಲವಾಗಬೇಕಾದಲ್ಲಿ, ಜನತೆಯಲ್ಲಿ ತಿಳಿವು ಹಬ್ಬಬೇಕಾದಲ್ಲಿ, ಸಂಸ್ಕೃತದ ಅನುಕರಣವಾದ ಪಂಡಿತಕಾವ್ಯಗಳನ್ನುಳಿದು, ಬಳಕೆಯಲ್ಲಿರುವ ಭಾಷೆ ಕನ್ನಡಮಾತಿಗೆ ಅಗ್ರ ಪೂಜೆಮಾಡುವ ಭಾಷೆಯಲ್ಲೇ ಬರೆಯಬೇಕೆಂದವರು, ಬರೆದವರು ಈ ವೀರಶೈವರು. ಇವರಲ್ಲಿ ರಾಘವಾಂಕನು ಮೇಲಾಳು. ಕನ್ನಡ ಸಾಹಿತ್ಯದ ಮೇಲಣ ಸಂಸ್ಕೃತದ ದಾಳಿಯನ್ನು ಸಹಿಸಲಾರದೆ, ಮುಂದಿನವರಿಗೆ ಮಾದರಿಯಾಗಿರುವಂತೆ, ತನ್ನ ಬರಹದಲ್ಲಿ ಆದಷ್ಟು ಅಚ್ಚಕನ್ನಡ ಮಾತನ್ನು ತುಂಬಿದುದಲ್ಲದೆ, ಸಣ್ಣಪುಟ್ಟ ಕನ್ನಡ ಮಾತಿನ ಕಾವ್ಯಕ್ಕೆ ಬಿಕ್ಕಟ್ಟಿನ, ಉದ್ದುದ್ದ ಸಮಾಸ–ಪದ ಸಂಧಿಪದಗಳಿಲ್ಲದೆ ಕಳೆಕಟ್ಟದ ಸಂಸ್ಕೃತ ವೃತ್ತಗಳು ಸೇರಲಾರವೆಂದರಿತು, ಕನ್ನಡ ಛಂದೋರೂಪವಾದ ಷಟ್ಪದಿಯ ಸಡಿಲ ಮೈಕಟ್ಟಿನ ಷಟ್ಪದಿಯ, ಸೊಬಗನ್ನು ತೋರಿದವನಿವನು. (ಷಟ್ಪದಿ ಬರೆದವರಲ್ಲಿ ಇವನು ಮೊಟ್ಟ ಮೊದಲನೆಯವನಲ್ಲದಿದ್ದರೂ ಕುಂದಿಲ್ಲ;) ಸುಮಾರು ೫೦ ವರ್ಷದ ಹಿಂದೆ ಧರ್ಮಾಮೃತವನ್ನು ಬರೆದ ಜೈನಕವಿ ನಯಸೇನನು ಈ ಗುಂಪಿನವನೇ. ಆದರೆ ಸಂಕೋಲೆ ಸಡಿಲಿಸುವಲ್ಲಿ ರಾಘವಾಂಕನ ಆರ್ಪು ಇವನಲ್ಲಿಲ್ಲ. ಇವನ ಕಾವ್ಯದ ರೂಪು ಚಂಪು. ರಾಘವಾಂಕನ ಜೊತೆಗಾರರೆಂದರೆ ವೀರಶೈವ ವಚನಕಾರರು, ಗದುಗಿನ ನಾರಣಪ್ಪ (ಕನ್ನಡ ಭಾರತ ಬರೆದ ಕುಮಾರ ವ್ಯಾಸ), ನಮ್ಮ ಕಾಲದ ನಂದಳಿಕೆ ಲಕ್ಷ್ಮೀನಾರಣಪ್ಪ (ರಾಮಾಶ್ವಮೇಧದ ಮುದ್ದಣ) ಷಟ್ಪದೀ ಕಾವ್ಯಗಳಿಗೆ, ಕನ್ನಡ ಭಾರತ, ಜೈಮಿನಿ ಮುಂತಾದುವುಗಳಿಗೆ ಜನ ಸಾಮಾನ್ಯದಲ್ಲಿರುವ ಬಳಕೆ ಆದರಗಳಿಂದ ಈ ಹಾದಿಯಲ್ಲಿ ಮೊದಲಿಗನಾದ ರಾಘವಾಂಕನ ತಾಯ್ನುಡಿಯ ಸೇವೆಯ ಮಾನವನ್ನು ತಿಳಿಯ ಬಹುದು.

ಇದು ಒಟ್ಟಿನ ಮಾತು. ಇನ್ನು ಕಾವ್ಯದಲ್ಲಿ ಗಮನಿಸಬೇಕಾದುದು, ರಾಘವಾಂಕನ ಕೆಲಸದ ರೀತಿ, ಆತನ ಕೈವಾಡ, ಕಾವ್ಯದ ಆನಂದಕ್ಕೆ ಅಡಿಗಲ್ಲಾದ ಆತನ ಬಗೆ, ಇತರ ಮೇಲ್ಮೆಯ ವಿಚಾರಗಳು.

ಭಾಷೆಯ ಮಾತು ಮುಗಿಯಲಿ. ಕನ್ನಡತನವೇ ರಾಘವಾಂಕನ ಹೆಗ್ಗುರುತೆಂದ ಮೇಲೆ ಈತನ ಕನ್ನಡನುಡಿಯ ಪರಿಚಯ, ಶಬ್ದ ಸಂಚಯಗಳಿಗಾಗಿ ಹುಡುಕಬೇಕಿಲ್ಲ. ತಟ್ಟನೆ ಕೈಗೆ ಸಿಕ್ಕಿದ ಒಂದೆರಡು ಮಾದರಿಗಳಿವು !

ಉರಿವ ಬಿಸಿಲೊಳು ಹಸಿದು ಬಸವಳದು ಬಂದು ಕೆಡ।
ದಿರುತಿಪ್ಪನೋ ಎಂದು, ಕೀಳಿಲೊಳು ಮಿಗೆ ಕಟ್ಟಿ।
ತಿರೆ ಹಸುಗಳಿರಿದು ಕೆಡೆದಿರುತಿಪ್ಪನೆಂದು, ಗೊಂದಣೆ
ಯಲ್ಲಿ ಹುಲು ಹುಳ್ಳಿಯು।

ದೊರಕದಿರೆ ಮನೆಗೆ ಬರಲಂಜಿ ಹೊರಹೊರಗಾಡು।
ತಿರುತಿಪ್ಪನೋ ಎಂದು, ಬೀದಿಯೋಳು ನೋಡಿ ತಡ।
ವರಿಸಿ ಕಾಣದೆ, ಮರುಗುತಳಲಿಂದ ಮನದೊಳಗೊ
ಳಗೆ ಸತ್ತು ಹುಟ್ಟುತ್ತಿರ್ಪಳು ॥ ೧೨–೧೪

[ಕೀಳಿಲ್=ಹಟ್ಟಿ]

ಎಲ್ಲವೂ ಕನ್ನಡ ಮಾತೇ. ಕನ್ನಡ ಮಾತಿನಲ್ಲೇ ಎಷ್ಟು ರಸ ಪುಷ್ಟಿ !

ಮೆಳೆಗಳೊಳು ಬಾಗಿ ಮರದೊಳು ಮುರಿದು ಸಂದಿರುಬಿ
ನೊಳು ಸುತ್ತಿ, ಹೆಗ್ಗುತ್ತುರೊಳು ಕುಸಿದು ಬಳೆದಿಡುಕು
ತೊಳು ನುಸುಳಿ ಹೊದರಿನೊಳು ಹಣುಗಿ ಕಪ್ಪಿನೊಳ
ಡಗಿ ನಾಳದೊಳು ಹೊಕ್ಕುಮಿಕ್ಕು ॥

ಗುಳಿಯೊಳದ್ದುರಿ ಡೊಂಗರನನೇರಿ ಹರಹುಗಳೊ
ಳಿಳಿದಘಟ್ಟಗೆಟ್ಟಿ ಬೆಂಡಾದ ಸುಖಿಗಳನುಗ್ರ
ದಳಲ ಬೇಸರ ಜೇಗೆಗಿಚ್ಚು ವಿಶ್ವಾಮಿತ್ರ ಮುನಿಯ
ನೆಯ್ದದೆ ಮಾಣದು ॥ ೯-೩೪

ಅದೆಷ್ಟೊಂದು ಕನ್ನಡ ಮಾತು!

[ಇರುಬು=ಗುಳಿ, ಕುತ್ತುರ್=ಪೆದೆ, ಹಣುಗು=ಹೊಂಚು, ಕಪ್ರು=ತಗ್ಗು ಗುಳಿ]

ಕನ್ನಡ ಮಾತೇ ಉಪಯೋಗಿಸಬೇಕೆಂಬ ಹುಚ್ಚಿನಲ್ಲಿ ಸಂಸ್ಕೃತಕ್ಕಿಂತ ಕ್ಲಿಷ್ಟನಾದ ಕನ್ನಡ ಶಬ್ದಗಳನ್ನು ಈ ಕವಿ ಬಳಸಿಕೊಂಡಿಲ್ಲ. ಸಾಮಾನ್ಯವಾಗಿ ರೂಢಿಯಲ್ಲಿರುವ ಶಬ್ದಗಳ ಸುಯೂದ, ಘನವಾದ ಅರ್ಥಭಾವಗಳನ್ನರಿತು, ಅಂತಹವುಗಳನ್ನೇ ಸೇರಿಸಿಕೊಂಡಿರುವನು. ಈ ಹೊಸ ಹಾದಿಗಳ ಕಾಲದಲ್ಲಿಯೂ-ಹಲವರ ಎಣಿಕೆಯಲ್ಲಿ ಪದ್ಯಕ್ಕೆ ಸಲ್ಲದ-ಅನುಭವಿಸಬೇಕು, ಹೋಗಿ ಆಗಬೇಕು, ಮುಂತಾದ ರೂಢಿಗನ್ನಡ ಪ್ರಯೋಗಗಳನ್ನೂ ಈ ೧೩ನೆಯ ಶತಮಾನದಲ್ಲಿ ಕಾಣಬಹುದು. ಈ ಪದ್ಯ ನೋಡಿ. ನಮ್ಮ ಮಾತನ್ನು ಎಷ್ಟು ಮಟ್ಟಿಗೆ ಹೋಲುವುದು !

ಪಾಪವಂ ಮಾಡಧ್ವರವ ತೊಡಗಿದ ಪಾಪ
ಲೇಪವುತ್ತರಿಸಬಹುದಿಂ ನೀವು ಪೇಳ್ವುದಿದ
ರೊಃಪಾದಿಯಲ್ಲನಾಮಿಕಸತಿಯುತಂ ಕೂಡಿ ಚಂಡಾಲ
ನಾಗಿಹೋಗು ॥

ಭೂಪ ಎಂದೆಂಬುದಿದು ನೀತಿಯೇನಾನದ
ಕ್ಕಾಪನೇ ಎನಲೆನ್ನ ಮಾತ ಮೀರಿದೆ ನಿನ್ನ
ನೀವೊತ್ತು ಚಂಡಾಲನಂ ಮಾಡದಿನ್ನು ಬಿಡುವೆನೆ ನೋಡು
ನೋಡೆಂದನು ॥ ೮-೪೦

ಗುದ್ದಣನಲ್ಲಿ ಹೇರಳವಾಗಿ ಕಾಣಬರುವ ಸಂಸ್ಕೃತ ಪದಗಳ ಅರ್ಥಕೊಡುವ ಕನ್ನಡ ಪದಗಳೂ ಇಲ್ಲಿ ಕಾಣಬಹುದು; ಹಲವು ಕಣ್ಣಾದವ (ಸಹಸ್ರಾಕ್ಷ) ಸಾವುಗೆಟ್ಟರ (ಅಮರರ) ಸಾವನೀಡಾಡಿದವರೊಡೆಯ (ಅಮರಾಧಿಪ), ನನ್ನಿಯುಳ್ಳರ ದೇವ (ಸತ್ಯಸಂಧಾಗ್ರೇಸರ) ನನ್ನಿಕಾರ (ಸತ್ಯ ಸಂಧ).

ಬಳಕೆಯಲ್ಲಿರುವ ಸಣ್ಣಪುಟ್ಟ ಕನ್ನಡ ಮಾತಿಗೇ ಗೌರವ ಕೊಟ್ಟಿರುವನೆಂದ ಮೇಲೆ ರಾಘವಾಂಕನ ಶೈಲಿ ಹೇಗೆಂಬುದು ತಿಳಿದಂತೆಯೆ. ಕವಿಯ ಭಾವ ತೀರ ತಿಳಿ. ಈ ಭಾವವು ರೂಪುಗೊಂಡಿರುವುದು ಬಳಕೆಯ ಮಾತಿನಲ್ಲಿ. ಇನ್ನು ಕವನವೋ ಲೀಲಾಜಾಲ ! ಹಾಗಲ್ಲದೆ ಬೇರೇನು ? ಕವಿಯ ಬಗೆಯಲ್ಲಿ ಭಾವ ತೆಳ್ಳಗೆ ಮೂಡಿ, ಅಭಾವ ಹೊರಟು ಬೇಕು ಬೇಕಾದ ಮಾತಿನ ಬೆಟ್ಟವೇ ಇರುವಲ್ಲಿ ಕವನದಲ್ಲಿ ತೊಡಕಿನ ಸುಳಿವುಂಟೆ! ರಾಘವಾಂಕನ ಕವನವು ವರ್ಣನೆಯಲ್ಲಿ ಹೇಗೆ ಬೆಳಗುವುದೊ, ಭಾವ ಪ್ರಪಂಚದಲ್ಲಿ ಹೇಗೆ ಒಸರುವುದೊ, ಸಂಭಾಷಣೆಯಲ್ಲಿ ಹಾಗೆ ಓಡುವುದು.

ವರ್ಣನೆ, ರಸಪುಷ್ಟಿಗಳ ವಿಚಾರ ಮುಂದೆ. ಸಂಭಾಷಣೆಯ ವಿಚಾರಕ್ಕೆ ಇದೇ ಸಮಯ. ಸಂಭಾಷಣೆಯಲ್ಲಿನ ಉಕ್ತಿ ಪ್ರತ್ಯುಕ್ತಿಗಳಲ್ಲಿ ಪ್ರಶ್ನೆ ಉತ್ತರಗಳಲ್ಲಿ, ರಾಘವಾಂಕನ ಜಾಣ್ಮೆ ಸೌಲಭ್ಯ ಬೇರೆ ಕನ್ನಡ ಕವಿಯಲ್ಲಿ ಇಲ್ಲವೆನ್ನಬಹುದು. ಒಂದೇ ಪದ್ಯದಲ್ಲಿ ಸಣ್ಣ ಸಣ್ಣ ಮಾತಿನ, ಪುಟ್ಟವಾಕ್ಯಗಳ ಸಂಭಾಷಣೆ ಹರಿಶ್ಚಂದ್ರ ಕಾವ್ಯದಲ್ಲಿ ಒಂದು ವಿಶೇಷ. ಸಂಭಾಷಣೆಯು ಸಹಜವಾದ, ರಂಜನೆಯ ರೀತಿಯೋ ಹೀಗಿರುವುದಾಗಿ, ಇದರಿಂದ ಕಾವ್ಯಕ್ಕೆ ಅದೆಷ್ಟೋ ಬೆಡಗು. ಇದೋ ನೋಡಿ.

ನಡೆ ರಥವನೇರಿಕೊಳ್ಳೊಲ್ಲೆಯೇಕೊಲ್ಲೆ ಪರ-।
ರೊಡವೆಯೆನಗಾಗದೇಕಾಗದಾನಿತ್ತೆನಿ-।
ತ್ತೊಡೆ ಕೊಳಲುಬಾರದೇಕಾರಣಂ ಬಾರದೆಮಗುರೆ
ಪ್ರತಿಗ್ರಹಂ ಸಲ್ಲದಾಗಿ ॥

ಕಡೆಗೆ ನಿನ್ನೊಡವೆಯಿಲ್ಲವೆಯಿಲ್ಲವೇಕಲ್ಲ ! ।
ಕೊಡದ ಮುನ್ನೆನ್ನೊಡವೆ ಕೊಟ್ಟ ಬಳಿಕೆಲ್ಲಿಯೆನ
ಗೊಡವೆಯೆಂದರರೆ ! ದಾನಿಗಳ ಬಲ್ಲಹನು ಮುನಿಯೊ
ಡನೆ ಸೊಲ್ಲುಡಿಗೊಟ್ಟನು ॥೮-೬೬

ಮಾತಾಡುವಂತೆ ಬರೆದಲ್ಲಿ ಈ ಸೊಲ್ಲುಡಿ ಹೀಗಿರುವುದು.

ವಿಶ್ವಾಮಿತ್ರ—ನಡೆ, ರಥವನೇರಿಕೊಳ್ಳು
ಹರಿಶ್ಚಂದ್ರ—ಒಲ್ಲೆ.
ವಿಶ್ವಾ—ಏಕೊಲ್ಲೆ ?
ಹರಿ—ಪರರೊಡವೆ ಎನಗಾಗದು.
ವಿಶ್ವಾ—ಏಕಾಗದು ?
ಹರಿ—ಇತ್ತೆಂ ( ದಾನಕೊಟ್ಟೆ )
ವಿಶ್ವಾ—ಇತ್ತೊಡೆ ಕೊಳಲು ಬಾರದೇ ಕಾರಣಂ ?
ಹರಿ—ಬಾರದು, ಎಮಗೆ (ಉರೆ) ಪ್ರತಿಗ್ರಹಂ ಸಲ್ಲದಾಗಿ
ವಿಶ್ವಾ—ಕಡೆಗೆ ನಿನ್ನೊಡವೆಯಿಲ್ಲವೆ ?
ಹರಿ—ಇಲ್ಲ.
ವಿಶ್ವಾ—ಏಕಲ್ಲ ?

ಹರಿ – ಕೊಡದ ಮುನ್ನ ಎನ್ನೊಡವೆ; ಕೊಟ್ಟಬಳಿಕ ಎಲ್ಲಿಯೆನಗೊಡವೆ ?

ಈ ಕಾವ್ಯದ ಬೇರೊಂದು ಮೇಲ್ಮೆಯೆಂದರೆ ಹುಲುಸಾದ ನಾಣ್ಣುಡಿಗಳು; ತಟ್ಟನೆ ಮನಹುಗುವ ಸಹಜವಾದ ಹೋಲಿಕೆಗಳು. ಲೋಕವ್ಯವಹಾರದ ಅರಿವೇ ಈ ಸಿರಿಯ ಅಡಿಗಲ್ಲು. ಅಲ್ಲಲ್ಲಿ ಆರಿಸಿದ ಕೆಲವು ನುಡಿ ಇವು.

ಬಡವರ ಮನೆಯ ಸೊಡರು ಕುಂದುವುದೆ! ೧–೨೧
ಗುಡ್ಡಿಪಶುಕರೆದ ಹಾಲು ಕಹಿಯಪ್ಪುದೆ ? ”
ನಡೆವರೆಡಹದೆ ಕುಳಿತರೆಡಹುವರೆ ? ೧–೨೩
ರೋಗಿ ಹಳಿದೊಡೆ ಹಾಲು ಹುಳಿಯಪ್ಪುದೇ ? ೧–೨೭
ಹಗಲ ಗೂಗೆ ನೋಡದದೊಡೆ ರವಿ ಕುಂದುವನೆ ? ”
ಕಣ್ಗುರುಡನೇಗೈದು ಕಾಣದಿರ್ದೊಡೆ
ಮುಕುರ ಕಿಡುವುದೇ ? ”
ಬೇರ ಬಲ್ಲವರಿಗೆ ಎಲೆದೋರಲೇಕೆ ? ೨–೧೦
ಕೋಣನೆರಡುಂ ಹೋರೆ ಗಿಡುವಿಂಗೆ ಮಿತ್ತು ೨–೧೨

(ವಶಿಷ್ಠವಿಶ್ವಾಮಿತ್ರರ ವಾಗ್ವಾದದಿಂದ ಹರಿಶ್ಚಂದ್ರನಿಗೆ ಕೋಟಲೆ).

ಕುಲವ ನಾಲಗೆಯರುಹಿತು ೨–೩೨
ಕೊಡವಾಲ ಕೆಡಿಸುವೊತೆ ಆನ್ರುವೆನಿತಾಗಬೇಕು? ೨–೨೧
ಮೂಗಂ ಕೊಯ್ದು ಕನ್ನಡಿಯ ತೋರುವಂತೆ ೮–೧೨
ಹೇರನೊಪ್ಪಿಸಿದಬಳಿಕ ಎಲ್ಲಿಯದು ಸುಂಕಂ? ೮–೫೪
ಸಿಡಿಲು ಹೊಡೆವೊಡೆ ಹಿಡಿದ ಕೊಡೆ ಕಾವುದೇ? ೨–೩೧

ಹೊಟ್ಟೆ ನೊಂದೊಡೆ ತುರುಚಕೊಯ್ವವನ, ಪಶು ಕರುವ
ಮೆಟ್ಟಿದೊಡೆ ಗೂಳಿಯುಂ ಸದೆವವನ, ಸೂಳೆ ಮೊರೆ–।
ಯಿಟ್ಟೊಡೆ ನೂರಗುಸೆಯುಂ ಮುರಿವವನ ನಗೆಯ ಕತೆಯುಂ
ಕಾಣಲಾದುದಿಂದು॥ ೨–೨೭

ಬಡತನದ ಹೊತ್ತಾನೆ ದೊರಕಿ ಫಲವೇನು ನೀ ।
ರಡಸಿರ್ದ ಹೊತ್ತಮೃತ ದೊರಕಿ ಫಲವೇನು, ರುಜೆ ।
ಯಡಸಿ ಕೆಡೆದಿಹ ಹೊತ್ತು ರಂಭೆ ದೊರಕೊಂಡಲ್ಲಿ
ಫಲವೇನು, ಸಾವ ಹೊತ್ತು ॥
ಪೊಡವಿಯೊಡೆತನ ದೊರಕಿ ಫಲವೇನು, ಕಡುವಿಸಿಲು ।
ಹೊಡೆದು ಬೆಂಡಾಗಿ ಬೀಳ್ವೆಮಗೆ ನೀನೀಗವುಣಿ ।
ದೊಡಿಗೆಯುಂಕೊಟ್ಟು ಫಲವೇನು ಭೂಪಾಲ ಹೇಳೆನುತ
ಮತ್ತಿಂತೆಂದರು ॥ ೭ ೭

ಈ ಹೋಲಿಕೆ, ನಾಣ್ಣುಡಿ, ಅಂತೇ ಜಾಣ್ಣುಡಿ, ಕೊಂಕು ನುಡಿ, ನುಡಿಯ ತೊಡಕಿನ ಬೆಡಂಗು--ಇವೆಲ್ಲವೂ ವಿಶ್ವಾಮಿತ್ರ ಸೃಷ್ಟಿಯ ಹೊಲತಿಯರು ಹರಿಶ್ಚಂದ್ರನನ್ನು ಮದುವೆಯಾಗೆಂದು ಕಾಡುವಲ್ಲಿ ಬಣ್ಣಗಟ್ಟಿಕೊಂಡು ತೋರುವುವು.

## ಹೊಲತಿಯರ ಜಾಣ್ನುಡಿ

ಪಾವನಕ್ಷೀರಮುಂ ಕುಡುವ ಕೆಚ್ಚಲನಾಂಪ–।
ವಾವಲೇಸಿನಮಳ್ಳಮಧುನನೊಸೆದೀವ ನೊಳ–।
ವಾವಲೇಸಧಿಕ ಕಸ್ತೂರಿಯುಂ ಕುಡುವ ಮೃಗನಾಭಿ
ತಾನಾವಲೇಸು ॥
ದೇವರಿಗೆ ಸಲ್ಲವೇ ಉತ್ತಮಗುಣಂಗಳಿ–।
ರ್ದಾವ ಕುಲವಂ ಕಳೆಯಲಾವವನವನೀಶ, ಕೇಳ್ ।
ಭಾವಿಸುವೊಡಿಂದೆಮ್ಮ ರೂಪಯೌವನವಿರಲು
ಕುಲದ ಮಾತೇಕೆಂದರು ॥ ೭–೧೭

## ಹರಿಶ್ಚಂದ್ರನ ಮಾರ್ನುಡಿ

ಅಕ್ಕಕಕ್ಕು, ಬಚ್ಚಲುದಕಂ ತಿಳಿದೊಡಾರ ಮೀ
ಹಕ್ಕೆ ಯೋಗ್ಯಂ, ನಾಯ್ಗೆ ಹಾಲುಳ್ಳೊಡಾರವೂ
ಟಕ್ಕೆ ಯೋಗ್ಯಂ, ಪ್ರೇತವನದೊಳಗೆ ಬೆಳೆದ ಹೂವಾರ
ಮುಡಿಹಕ್ಕೆಯೋಗ್ಯಂ, ॥
ಮಿಕ್ಕ ಹೊಲತಿಯರು ನೀವಿರೆ, ನಿಮ್ಮ ಜವ್ವನದ
ಸೊಕ್ಕು, ರೂಪಿನ ಗಾಡಿ, ಜಾಣತನದೊಪ್ಪವೇ
ತಕ್ಕೆ ಯೋಗ್ಯಂ, ರಮಿಸಿದವರುಂಟೆ, ಶಿವಶಿವಾ,
ಮಾತುತಾ ಹೊಲೆಯೆಂದನು ॥ ೭–೨೮

ಇಲ್ಲಿಗೆ ಬಿಟ್ಟರೇ ಹೊಲತಿಯರು ?

ಹಾಸನೊರೆದಾಲಿಸಿದ ಕಿವಿಗೆ ಹೊಲೆಯಿಲ್ಲ, ವಾ
ತಾಡಿ ನುಡಿಸಿದ ಬಾಯ್ಗೆ ಹೊಲೆಯಿಲ್ಲ ರೂಪ ನೆರೆ
ನೋಡಿದ ವಿಲೋಚನಕೆ ಹೊಲೆಯಿಲ್ಲ, ಮೆಯ್ಮುದಿಗಳಿಂ
ಸುಳಿವ ತಂಗಾಳಿಯಿಂ ॥
ತೀಡುವ ಸುಗಂಧಮಂ ವಾಸಿಸಿದ ನಾಸಿಕಕೆ
ನಾಡೆ ಹೊಲೆಯಿಲ್ಲ, ಸೋಂಕಿಂಗೆ ಹೊಲೆಯಿರ್ದಪುದೆ,
ಕೂಡಿರ್ದ ಪಂಚೇಂದ್ರಿಯಂಗಳೊಳು ನಾಲ್ಕಧಿಕ
ವೊಂದಧಮವೇನೆಂದರು ॥ ೭–೨೯

ಇತ್ಯಾದಿ.

ಇಂತಹ ಹೊಲತಿಯರಿಗೆ ಕಾರಣನಾದ ವಿಶ್ವಾಮಿತ್ರನ ಮಾತುಗಾರಿಕೆಗಂತೂ ಸಾಟಿಯಿಲ್ಲ. ಕುಟಿಲತೆಯ ಕೋಡುಗ

ಕ್ಷಿದ ಹರಿದ ಹೊನಲು, ಆತನವಾತು, ಆತನ ಸೊಟ್ಟಬಗೆಯು ಹೊರರೂಪು.

ಹೊಲತಿಯರನ್ನು ಮದುವೆಯಾಗೆಂದು ಒತ್ತಾಯಪಡಿಸು ತ್ತಿರುವ ವಿಶ್ವಾಮಿತ್ರನ ಕೋಟಲೆಯಿಂದ ತಪ್ಪಿಸಿಕೊಳ್ಳಲು ಹರಿಶ್ಚಂದ್ರನೆಂದುದಿಷ್ಟೆ !

ಎಡೆವಿಡದೆ ಬೇಡಿ ಕಾಡುವಿರಾದೊಡಿನ್ನುಕೇ—
ಳ್ಪಡೆನ್ನ ಸರ್ವರಾಜ್ಯವನಾವೊಡಂ ನಿಮಗೆ
ಕೊಡಪಡೆವೆನ್ನೈ ಸಲ್ಲದೀಕೆಟ್ಟ ತೇಜನುಂಕೊಡೆಂ... ॥

ಎಂದು ಭೂಪಾಲನು ನುಡಿಯಲು

...ತಥಾಸ್ತು ಪಡೆದೆಂ ಪಡೆದೆನವನೀಶ
ಕೊಡೆಯು ದಾಸಿಗಳರಸ ಸತ್ಯಾವತಂಸ ಎಂ
ದೆಡೆವಿಡದೆ ಹೊಗಳಿಯಾಘೋಷಿಸಿದನೆಂದು ವಿಶ್ವಾಮಿತ್ರ
ಮುನಿನಾಥನು ೮–೩೨

ತನಗುಳ್ಳ ಸರ್ವರಾಜ್ಯವನು ವಿಶ್ವಾಮಿತ್ರ
ಮುನಿಗೆ ಧಾರೆಯನೆರೆದನವನೀಶನೆಂದು ಮೇ
ದಿನಿಯೊಳೆಲ್ಲ ಸಾರೆ ನಮ್ಮಯ ತಪೋವನದೊಳ್ಕೈದೆ
ಗುಡಿ ತೋರಣವನು ॥

ವಿನಯದಿಂ ಕಟ್ಟಿಕೊಟ್ಟಾತನಂ ಮೆರೆಯುದೊಡೆ
ಜನ ನಗುವುದೆಂದು ಚಾರರನಟ್ಟಿ ಕಿಹ ಕೌಶಿ
ಕನ ಬಲಾತ್ಕಾರಕ್ಕೆ ಬೆರಗಾಗುತವನೀಶನಂದು
ಮೂಗಿನ ಬೆರಲೊಳು ॥ ೮–೩೩

ಸುತ್ತಿ ಜಗದೊಳು ಹರಿದು ಸಾರುವಂತಾಗಿ ನಾ
ನಿತ್ತುದೇನಯ್ಯಎನೆ, ನಿನಗುಳ್ಳದೆಲ್ಲವಂ
ವಿತ್ತವಂಚನೆಯಿಲ್ಲದಿತ್ತೆಯದು ಲಕ್ಷ ನಮಗೊಲಿದಿಷ್ಟು
ತಣಿವೆಯ್ದದೆ ॥

ಚಿತ್ತದಲಿ ನೋಯಬೇಡೆನೆ, ಮೊದಲು ತೊಡನಾ
ನಿತ್ತುದೇ ಇಲ್ಲವೆನೆಸಿ, ಸಕಲಮುನಿಜನದ ನಡು
ವಿತ್ತಿಳೆಯನಿತ್ತುದಿಲ್ಲೆಂದು ನುಡಿವಂತಾಗಿ ಹುಸಿಕನೇ
ನೀನೆಂದನು ॥ ೮–೩೪

ಮತ್ತು "ಅರಸುತನದ ಮೇಲೆ ಅಷ್ಟು ಪ್ರೇಮವಿದ್ದಲ್ಲಿ ನನ್ನ ಮಕ್ಕಳನ್ನು ಮದುವೆಯಾಗು; ವಿಶ್ವಾಸದಿಂದ ಎಲ್ಲವನ್ನೂ ಬಳುವಳಿಯಾಗಿ ಕೊಡುವೆನು" ಎನ್ನುವನು. ಇದಕ್ಕೆ ಮಣಿವನೆ ಹರಿಶ್ಚಂದ್ರನು !

ಈ ರಾಜ್ಯದೊಡನೆನ್ನ ದೇಹ, ವೀಸತಿಯೀಕು
ಮಾರರೊಳಗಾಗಿ ಹೋದೊಡೆ ಹೋಹುದಲ್ಲದವಿ
ಚಾರದಿಂ ಚಂಡಾಲಸತಿಯರಂ ನೆರೆದು ನಿರ್ಮಳವಪ್ಪ
ರವಿಕುಲವನು ॥

ನೀರೊಳಗೆ ನೆರಹಲಾಪವನಲ್ಲನೆನ್ನುವ
ನಾರೈದು ನೋಡಲಿಂಬಿಲ್ಲ ನುಡಿನುಡಿದು ನಿ
ಷ್ಕಾರಣಂ ಲಘುವಮಾಡಬೇಡ ಮುನಿನಾಥ ಕೈಮುಗಿದು
ಬೇಡಿದೆನೆಂದನು ॥ ೮–೩೭

ಇಷ್ಟೇ ಅಲ್ಲ.

ಎನಗೆ ಜಗದಪಕೀರ್ತಿ ಮುಟ್ಟದನೃತಂ ಮೊಳೆಯ
ದಿನಕುಲಕೆ ಕುಂದಿಲ್ಲ ನಿನಗೆ ರಾಜ್ಯದಮೇಲೆ
ಮನವಿನಿತು ಘನವಾದೊಡಿನೆಕೋ ಮನಃಪೂರ್ವಕಂ
ಕೊಟ್ಟೆನೆಂದು ನುಡಿವ ॥

ಜನಪತಿಯ ಧೈರ್ಯಕ್ಕೆ ಬೆರಗಾಗಿ ತಲೆದೂಗಿ
ಮುನಿದೊಡಂ ಮುಟ್ಟಿ ನೋಯಿಸಿದೊಡಂ ತೆಕ್ಕ ನೀ
ತನನೆಂತು ಹುಸಿಯನುಡಿಸುವೆನೆನುತ ಚಿಂತಿಸುತ
ನೆನೆದು ಮತ್ತಿಂತೆಂದನು ॥ ೮–೪೩

ಅಂತೇ ವಿಶ್ವಾಮಿತ್ರನು ಮಾತಿರಲಿ, ಧಾರೆಯೆರೆಯೆನ್ನಲು

ಅಡವಿಯಂ ಮೊಗೆದು ಸುಡುವಗ್ನಿಗಾಪೋಶನದ
ಗೊಡವೆಯೇವುದು, ಬಲಾತ್ಕಾರದಿಂ ಕೊಂಬೆಯಾ
ದೊಡೆ ಧಾರೆಯೇಕಯ್ಯ, ಧಾರೆಗೊಡದೊಡೆ ಮರಳಿ
ಬಿಡುವ ಮನವುಂಟೆ ಎನಲು ॥

ಬಿಡುವೆನೆನ್ನಯ ಮಕ್ಕಳಂ ಮದುವೆಯಾಗೆಂದೊ
ಡ, ಡಿಗಡಿಗೆ ಕೆಟ್ಟನುಡಿಯುಂ ನುಡಿಯುತಿರಬೇಡ
ಹಿಡಿಯೆಂದು, ಸರ್ವಸಾಮ್ರಾಜ್ಯಮಂ ಮುನಿಗೆ
ಧಾರೆಯನೆರೆದನವನೀಶನು ॥ ೮–೪೫

ಗುಮ್ಮನೆ ಪಾತ್ರಗಳ ಸ್ವಭಾವದತ್ತ ಜಾರಿದೆವು. ಹೊಲತಿಯರ, ಮತ್ತು ವಿಶ್ವಾಮಿತ್ರನ ಕೊಂಕನ್ನರಿತೆವು. ಹರಿಶ್ಚಂದ್ರನ ಉದಾತ್ತತೆಯನ್ನು ಮನಗಂಡೆವು. ಮುಂದೆ ಸಾಗುವ.

ಎಲ್ಲವನ್ನೂ ತೊರೆದು ಕಾಡಲ್ಲಿ ಅಳಲುತ್ತಿರುವ ಹರಿಶ್ಚಂದ್ರನು ರಾತ್ರಿವೇಳೆ ಮಾತಾಡಲಂಜುವನು. ಏಕೆ? ನುಡಿದೊಡೆ ದನಿಗೆ ಶರಭಶಾರ್ದೂಲವೈತಂದು ಪಿಡಿವುವೊ, ಪಿಡಿದಟ್ಟಳಿಕ ಮುನಿಗೆ ಕುಡುವೊಡವೆ ಸಲ್ಲದೊಡೆ ಅಸತ್ಯನಾದಪೆನೆಂಬ ಕಡು ಚಿಂತೆಯಿಂದ.

ದಳ್ಳುರಿ ಮುಸುಕುತ್ತಿರುವಾಗಲೂ ಇದೇ ಮರುಗ. "ಮುನಿ ರಿಣವ ಕೊಟ್ಟಾತನಲ್ಲ; ದಳ್ಳುರಿಹೊಯ್ದು ದುರ್ಮರಣವಟ್ಟು ಹೋಹಂತಾಯ್ತು"

ಹರಿಶ್ಚಂದ್ರನ ಧರ್ಮಪರಾಯಣತೆ, ಸತ್ಯಸಂಧತೆ ಎಲ್ಲರಿಗೂ ತಿಳಿದುದಾದರೂ, ಈ ವಿಚಾರದಲ್ಲಿ ರಾಘವಾಂಕನ ಕೆಲಸಗಾರಿಕೆ ಇಲ್ಲಿ ಗಮನಿಸಬೇಕಾದುದು.
ಹರಿಶ್ಚಂದ್ರನ ನನ್ನಿಯನ್ನು ವಶಿಷ್ಠನು ಇಂತು ನುಡಿವನು.

ಇಳೆ ತಳಕ್ಕಿಳಿಯೆ, ಸಸಿ ಬಿಸಿಯಾಗೆ, ಮೇರುಗಿರಿ
ಚಳಿಸೆ, ರವಿ ಕಂದೆ ಜಲನಿಧಿ ಬತ್ತೆ, ಶಿಖಿ ಹಿಮಂ
ದಳೆದ ದಿನದೊಳು, ಸತ್ಯನಿಧಿಹರಿಶ್ಚಂದ್ರರಾಯನ ವಾಕ್ಯ
ದೊಳು ಹುಸಿಗಳು ॥
ವೊಳೆಯುವಿದು ನಿರುತವಾನರಿಯಲಾತನ ಸತ್ಯ
ದಳವನರಿವೊಡೆ ನೊಸಲ ಕಣ್ಣುಳ್ಳನಾಗಬೇ
ಕು ಳಿದವರಿಗಳವಡದು, ನೀನೇ ಪರೀಕ್ಷಿಸುವೆಯೆಂದ
ನಾಮುನಿನಾಥನು ॥ ೨-೧೪

ಒಡೆಯನ ಅಪ್ಪಣೆಯಂತೆ ಚಂದ್ರಮತಿಯು ತಲೆವೊಡೆಯಲು ಹರಿಶ್ಚಂದ್ರನು ಅನುವಾಗುತ್ತಲೇ, ವಿಶ್ವಾಮಿತ್ರನು ಗಾಣಹಾಕುವನು.

ಮನದ ಶಂಕೆಯ:ನುಳಿದು ಹೊಡೆಯಲನುವಾದ ಭೂ
ಪನ ಭಾವಮಂ ಕಂಡು ಬೇಡಬೇಡೆನ್ನ ನಂ
ದನೆಯರಂ ಮದುವೆಯಾದೊಡೆ ಸತ್ತ ಮಗನನೆತ್ತುವೆ
ಸತಿಯ ತಲೆಗಾವೆನು ॥
ವಿನಯದಿಂಕೊಂಡ ಧನಮಂಕೊಟ್ಟು ನಿನ್ನ ಬಂ
ಧನವೋಕ್ಷಮಂಮಾಡಿ ರಾಜ್ಯವಂ ಪುಗಿಸಿ ಮು
ನ್ನಿನ ಪರಿಯೋಲಿಸುವೆಂ ಕೇಳೆಂದನಂಬರದೊಳಿದ್ದು
ವಿಶ್ವಾಮಿತ್ರನು ॥ ೧೩-೧೬

ನನ್ನಿಯುಳ್ಳರ ದೇವನನ್ನು ಹುಸಿಕಾರನಾಗಿಸಲು ಇದೂ ವ್ಯರ್ಥವಲ್ಲದೆ ಮತ್ತೇನು?

ತಿರುಗಿ ಮೇಲಂ ನೋಡಿ ಕಂಡಿದೇಂ ಮುನಿ ನಿನ್ನ
ಹಿರಿಯತನಕೀಮಾತು ಯೋಗ್ಯವೇ ಕೇಳೆನ್ನ
ಸಿರಿಹೋದೊಡೇನು ರಾಜ್ಯಂಹೋದೊಡೇನು ನಾನಾರ
ಸಾರಿರ್ದೊಡೇನು ॥
ವನಪುತ್ರನಸುವಳಿದು ಹೋದೊಡಂ ನಾನೆನ್ನ
ತರುಣಿಯಂ ಕೊಂದೊಡಂ ಕುಂದೆ ಸತ್ಯವನು ಬಿ
ಟ್ಟರನೆನಿಸಿದೊಡೆ ಸಾಕು ಯೆಂದೆತ್ತಿಹಿಡಿದ ಖಡ್ಗವ
ಜಡಿಯುತಿಂತೆಂದನು ॥ ೧೩-೧೭

ಮರುಕ್ಷಣದಲ್ಲೇ ಹರಿಶ್ಚಂದ್ರನ ನನ್ನಿ ನ್ನೃಡನನೆಳತಂದುದು ಹೊಡೆದ ಕಡುಗದ ಬಾಯು ಕಡೆಯ ಹೊಯ್ಗಳನಾಂತು ಮಡದಿಯೆಡೆಗೊರಳನಡುವಡಸಿ ಮೂಡಿ ನಿಜವ ತೋರಿದನಾ ವಿಶ್ವನಾಥ. ಸಡಗರದ ಸಂಭ್ರಮಾಡಂಬರದ ನಡುವೆ ಹರಿಶ್ಚಂದ್ರನ ತೆಗೆದಪ್ಪಿಕೊಂಡನು.

ಈ ಸರಣಿಗೆ ಹೊಂದುವುದರಲ್ಲಿ ವಿಶ್ವಾಮಿತ್ರನ ಕೋಪವೊಂದು ಕಾಯಿತು. ಕೌಶಿಕ ಕುಪಿತನಾದುದಂ ಆವ ಕವಿ ಬಣ್ಣಿಸುವನು? ಆದರೆ ರಾಘವಾಂಕ ಬಿಟ್ಟಿಲ್ಲ.

ನುಡಿಯುರಿಯುಗುಳೆ, ಕಣ್ ಕಿಡಿಗೆದರೆ ವದನಂ ಕೆಂ
ಪಡರೆ, ನಿಟಿಲಂ ಬಿಸಿಯ ಬಿಂದುವಂ ತಳೆಯೆ, ಕೈ
ನಡುಗೆ ಪುರ್ಬುಲುಗೆ, ಮಿಸುಪಧರ ಸಿಡಿಯಲಾಕುಳ
ಹೊಗೆಯೆ, ಕಾಲ್ಮುಂಬಿಡೆ ॥
ತೊಡೆದ ಭಸಿತಂ ಧೂಮವಿಡೆ, ಮೆಯ್ಯ ರೋಮಕಾ
ರಿಡೆ, ಕಮಂಡಲುಜಲಂ ತಕ್ಕ ತೆಕ್ಕನೆ ಕುದಿಯೆ
**ನೃಪನ ಪಣೆಗಣ್ಣ ಮುನಿಯಾದಂತೆ ಕೌಶಿಕಂ**
**ಮುನಿದನು** ವಶಿಷ್ಠಮುನಿಗೆ ॥ ೨-೩೩

[ ಕುಂಬಿಡು=ಬಾಗು ]

ಇನ್ನೊಂದೆಡೆ

ವನಬಾಗ್ನಿ ಜಡೆವೊತ್ತುದೋ, ಸಿಡಿಲು ಭಸಿತವ
ನ್ನಿಡಕಲಿತುದೇ, ಕಾಡ ಕಿಚ್ಚು ಹರಿಣಾಜಿನವ
ನುಡಕಲಿತುದೋ ಪ್ರಳಯವಹ್ನಿ ತಪವೊತ್ತುದೋ,
ಭಾಳಲೋಚನನ ಕೋಪ ॥
**ಕಡೆಗೆ ಮುನಿಯಾಯ್ತೊ** ಹೇಳೆನೆ, ಕಣ್ಣ ಕಡೆ ತೋರ
ಗಿಡಿಗೆದರೆ, ಮೀಸೆಗೊಂದಲು ಹೊತ್ತಿ ಹೊಗೆಯೆ ಬಿರು
ನುಡಿಗಳುರಿಯುಗುಳೆ, ವಿಶ್ವಾಮಿತ್ರನುರವಣಿಸಿ ಬಂದ
ನವನೀಶನೆಡೆಗೆ ॥ ೮-೧

ಇಲ್ಲಿಗೊಂದು ಸರಪಣಿಯ ಕೊನೆ.

( ಮುಂದುವರಿವುದು )

# ಶ್ರೀ ವಿದ್ಯಾರಣ್ಯ

ಲೇ—ಶ್ರೀ. ಎ. ದೊರೆಸ್ವಾಮಿ ಐಯ್ಯಂಗಾರ್ ಎಂ. ಎ. ಬಿ. ಎಲ್ ಮೈಸೂರು.

## ೧

ಇಂದು ಕರ್ನಾಟಕರಿಗೆ ಸಂಭ್ರಮದ ದಿವಸವು. ಈ ದಿನಸ ಕರ್ನಾಟಕದ ಮುಖ್ಯ ಕೇಂದ್ರಗಳೆಲ್ಲವು ವಿದ್ಯಾರಣ್ಯರನ್ನು ಯಥಾಶಕ್ತಿ ಆರಾಧಿಸುವುವು. ಈಗ ಹತ್ತುವರ್ಷಕ್ಕೆ ಹಿಂದೆ ಇಂಥಾ ಉತ್ಸವಗಳು ಇಡೀ ಕರ್ನಾಟಕದಲ್ಲಿ ಇಷ್ಟು ಶೀಘ್ರವಲ್ಲೇ ನಡೆಯಲು ಮೊದಲಾಗುವುವೆಂದು ಯಾರಾದರೂ ಹೇಳಿದ್ದರೆ ನಂಬುವ ಹಾಗಿದ್ದಿತೇ ? ನಾವು ಶಾಲೆಗಳಲ್ಲಿ ಓದುವಾಗ ವಿದ್ಯಾರಣ್ಯನೆಂಬ ಮಹಾಶಯನೊಬ್ಬನು ಭರತ ಖಂಡದಲ್ಲಿ ಹುಟ್ಟಿ ಅದರ ಇತಿಹಾಸರಂಗವನ್ನು ಬೆಳಗುತ್ತಿರುವನೆಂಬ ಸಂಗತಿಯೇ ನಮಗೆ ಗೋಚರಿಸಲಿಲ್ಲ. ಈಗಿನ ಶಾಲಾ ಚರಿತ್ರ ಪುಸ್ತಕಗಳಲ್ಲಿ ಸಹ ನೂರರಲ್ಲಿ ತೊಂಭತ್ತೊಂಭತ್ತು ಪುಸ್ತಕಗಳಲ್ಲಿ ಈತನ ಹೆಸರೇ ಬರುವುದಿಲ್ಲ. ಮಹಾಪುರುಷರು ಪಕ್ವವಾದ ಸನ್ನಿವೇಶವು ಹುಟ್ಟಿದಲ್ಲದೆ ಅವತರಿಸುವುದಿಲ್ಲನೆಂದು ನಾಣ್ಣುಡಿಯುಂಟು. ಹೀಗೆಯೇ, ಅವರ ಮಹಿಮೆ ಪ್ರಕಾಶಪಡುವುದಕ್ಕೆ ಸಹ ಸುಯೋಗವು ಪ್ರಾಪ್ತಿಸಬೇಕೆಂದು ಹೇಳಬೇಕು. ಎಷ್ಟೋ ಮಹಾಪುರುಷರು ತಾವು ಬದುಕಿರುವಾಗ ಜನರ ತಿರಸ್ಕಾರಕ್ಕೂ ಅವಹೇಳನಕ್ಕೂ ಹಿಂಸೆಗೂ ಗುರಿಯಾಗಿ ದಾರಿದ್ರ್ಯಾದಿ ಪರಿಪರಿಯ ಕಷ್ಟಗಳನ್ನನುಭವಿಸಿರುವರು. ಇವರ ಮಹಿಮೆಯೂ ಉಪಕಾರವೂ ಅನೇಕ ವರ್ಷಗಳಮೇಲೆ ಯಾವುದೋ ಒಂದು ಸುಯೋಗವು ಒದಗಿದಾಗ ಮಾತ್ರ ಗೋಚರಕ್ಕೆ ಬಂದಿರುವುವು. ವಿದ್ಯಾರಣ್ಯರ ವಿಚಾರದಲ್ಲೂ ಈಗ ಮತ್ತೊಂದು ವಿಧವಾಗಿ ಹೀಗೆಯೇ ಸಂಭವಿಸಿರುವುದು.

ಕ್ರಿ. ಶ. ೧೬ನೆಯ ಶತಮಾನಾನಂತರ—ವಿಜಯನಗರದ ಸಾಮ್ರಾಜ್ಯವು ಮುಗಿದಮೇಲೆ—ವಿದ್ಯಾರಣ್ಯರ ಹೆಸರೇ ಭಾರತ ಇತಿಹಾಸದಿಂದ ವಿಲುಪ್ತವಾಗಿದ್ದಿತೆಂದು ಧಾರಾಳವಾಗಿ ಹೇಳಬಹುದು. ಎಲ್ಲೋ ಕೆಲಪುಸ್ತಕಪಿಶಾಚಿಗಳೂ ಶೃಂಗೇರಿಮಠೀಯರೂ, ಇವರ ಹೆಸರನ್ನೂ ಕೆಲ ಗ್ರಂಥಗಳ ಹೆಸರನ್ನೂ ಚಿನ್ನದಮಳೆಯ ಕಥೆಯೇ ಮೊದಲಾದ ಒಂದೆರಡು ಕಥೆಗಳನ್ನೂ ಮಾತ್ರ ಅರಿತಿದ್ದರೇ ಹೊರತು ಮತ್ತೇನನ್ನೂ ತಿಳಿದಿರಲಿಲ್ಲ. ಕರ್ನಾಟಕ ಗತವೈಭವವನ್ನು ಸ್ಮರಿಸುವ ಪದ್ಧತಿ ಹುಟ್ಟಿದುದು ೧೫ ವರ್ಷಗಳ ಈಚಿನದು. ಆದರೆ ಈ ಕಾಲದಲ್ಲಿ ಸಹ ಈ ವೈಭವಗಳಲ್ಲಿ ವಿದ್ಯಾರಣ್ಯರ ವೈಭವವು ಪ್ರಸ್ತಾಪಿಸಲ್ಪಡುವುದು ಅಪರೂಪವಾಗಿತ್ತು. ಮಹಾತ್ಮಾಗಾಂಧಿಯವರ ಸತ್ಯಾಗ್ರಹದ ಚಳವಳಿಯಿಂದ ಈಚೆಗೆ ಮಾತ್ರವೇ ಕರ್ನಾಟಕವು ಎಚ್ಚತ್ತು, ಸ್ವಸ್ವರೂಪಾನುಸಂಧಾನವನ್ನು ನೋಡಲು ಬಗೆದು, ವಿದ್ಯಾರಣ್ಯವೈಭವವನ್ನು ಸರಿಯಾಗಿ ತಿಳಿದು ಅನುಭವಿಸಲು ಆರಂಭಿಸಿರುವುದು. ಇದಕ್ಕೆ ಮಹಾತ್ಮಾಗಾಂಧಿಯವರ ಮೂರ್ತಿಪ್ರಭಾವವೇ ಬಹುದೂರ ಕಾರಣವಾಗಿದೆ ಎಂದು ಸಹ ಒಪ್ಪಬಹುದು. ಗಾಂಧಿಯವರಂಥಾ ಅಲೌಕಿಕವಿಭೂತಿ ಮತ್ತಾರುಂಟು ಎಂದು ಅರಸುವಾಗ ಕನ್ನಡಿಗರು ಹಠಾತ್ತಾಗಿ ತಮ್ಮ ವಿದ್ಯಾರಣ್ಯರ ಪ್ರಭಾವವನ್ನು ಕಂಡುಹಿಡಿದುಕೊಂಡರು. ಅಂದಿನಿಂದ ಈಚೆಗೆ ವಿದ್ಯಾರಣ್ಯರ ವಿಚಾರವಾಗಿ ೧೦—೨೦ ಗ್ರಂಥಗಳು ಹುಟ್ಟಿವೆ. ದೇಶದಲ್ಲಿ ಎಲ್ಲಾ ಕಡೆಯೂ ಇವರ ಪ್ರಶಂಸೆ ಹೆಚ್ಚುತ್ತಿದೆ.

ಆದರೂ ಸಹ ಏನಾದ ಹಾಗಾಯಿತು ? ವಿದ್ಯಾವಂತರಾದ ಕನ್ನಡಿಗರಲ್ಲಿ ಕೂಡ ಇವರ ವಿಚಾರವನ್ನು ನೂರಕ್ಕೆ ಒಬ್ಬರು ಸರಿಯಾಗಿ ತಿಳಿದಿಲ್ಲ. ಎಷ್ಟೋಲಕ್ಷಮಂದಿ ಕನ್ನಡಿಗರು ಇವರ ಹೆಸರನ್ನೇ ಅದ್ಯಾಪಿ ಕೇಳಿಲ್ಲ. ಹೀಗಿರುವಾಗ ಮಗ್ಗುಲುಪ್ರಾಂತ್ಯಗಳವರು, ಕೊನೆಗೆ ಪ್ರಪಂಚದವರು—ಇವರ ಪ್ರಭಾವವನ್ನು ತಿಳಿವುದು ಎಂತು? ಹೀಗೆ ತಿಳಿಸತಕ್ಕ ಕರ್ತವ್ಯವು ಯಾರದು ? ಈ ಪ್ರಕಾರವಾದ ಅಜ್ಞತೆಯಿಂದ ನಮಗಲ್ಲದೆ ಮತ್ತಾರಿಗೆ ನಷ್ಟವು ? ಇವರನ್ನು ಕುರಿತ ಲೋಕದ ಅಜ್ಞತೆ ಅತಿವಿಪರೀತವಾಗಿರುವುದು. ಉದಾಹರಣೆಗಾಗಿ, ಸಂಸ್ಕೃತದಲ್ಲಿ ಅಷ್ಟಿಷ್ಟಲ್ಲದ ಪಾಂಡಿತ್ಯವನ್ನು ಪಡೆದು, ಕಲಕತ್ತಾ ಸಂಸ್ಕೃತಮಹಾಪಾಠಶಾಲೆಯ ಅಧ್ಯಕ್ಷರಾಗಿದ್ದು, ನಮ್ಮ ತತ್ವಶಾಸ್ತ್ರದ ವಿಚಾರವಾಗಿ ಉದ್ದಾಮಗ್ರಂಥಗಳನ್ನು ರಚಿಸಿ, ಜಗತ್ಪ್ರಸಿದ್ಧಿಯನ್ನು ಪಡೆದಿದ್ದ ದಿವಂಗತ ಮಹಾಮಹೋಪಾಧ್ಯಾಯ ಸತೀಶ

ಚಂದ್ರ ವಿದ್ಯಾಭೂಷಣ ಎಂ. ಏ, ಪಿ. ಎಚ್‌ಡಿ, ಎಂಬವರು ಪ್ರಾಥೆರೋ ಎಂಬುವನೊಡನೆ ಸೇರಿ ವಿದ್ಯಾರ್ಥಿಗಳಿಗಾಗಿ ಬರೆದಿರುವ ಹಿಂದೂದೇಶದ ಚರಿತ್ರೆಯ ಪುಸ್ತಕದಲ್ಲಿ ದ್ವೈತಮತ ಸ್ಥಾಪಕರಾದ ಮಧ್ವಾಚಾರ್ಯರೇ ವಿದ್ಯಾರಣ್ಯರೆಂದು ಹೇಳಿರುವರು !!! ಇಂಥಾ ಭಾರತ ಪಂಡಿತವರ್ಯನ ಪಾಡೇ ಹೀಗಾದರೆ ಉಳಿದವರು ವಿದ್ಯಾರಣ್ಯರ ಸಂಗತಿಯನ್ನೇ ಕೇಳ್ಪರಿಯದೆ ಇರುವುದು ಅಚ್ಚರಿಯೇ ?

ಮೊದಲು ಹೇಳಿದಂತೆ ಇದು ವಿದ್ಯಾರಣ್ಯರ ಪುನರವತಾರ ಯುಗವು. ವಿದ್ಯಾರಣ್ಯರು ಈಗ ಕರ್ನಾಟಕದಲ್ಲಿ ಪುನಃ ಅವತಾರಮಾಡಿದ್ದಾರೆ. ಆದರೆ ಈಗಿನ ಅವತಾರವು ಬರಿಯ ಕಾಯಿಕವಾದುದಲ್ಲ. ವಿದ್ಯಾರಣ್ಯರು ಈಗ ಅಶರೀರಿಗಳಾಗಿ ನಮ್ಮ ಸುತ್ತಮುತ್ತಲೂ ನಮ್ಮ ಪರಿಸ್ಥಿತಿಯಂತೆ ವ್ಯಾಪಿಸಿಕೊಂಡಿದ್ದಾರೆ ; ನಮ್ಮ ಧ್ಯೇಯದಂತೆ ನಮ್ಮ ಮನಸ್ಸನ್ನು ಆವರಿಸಿಕೊಂಡಿದ್ದಾರೆ. ಈಗಿನ ವಿದ್ಯಾರಣ್ಯರು ಬರಿಯ ಪುರುಷಮಾತ್ರ ವ್ಯಕ್ತಿಯಲ್ಲ. ಅವರು ಒಂದು ಪ್ರಕಾರವಾದ ಭಾವನೆ, ಒಂದುತರದ ಧ್ಯೇಯ, ಒಂದು ಬಗೆಯಾದ ಸಂಸ್ಥೆ ಆಗಿರುತ್ತಾರೆ. ಹಿಂದಲ ವಿದ್ಯಾರಣ್ಯರನ್ನು ಪ್ರತಿಮಾಪೂಜೆ ಸ್ತೋತ್ರಪಠನಾದಿಗಳಿಂದ ಭಜಿಸಬಹುದಾಗಿತ್ತು. ಈಗಿನ ವಿದ್ಯಾರಣ್ಯರ ಆರಾಧನೆಯ ಕ್ರಮವು ಬೇರೆಯಾಗಿರಬೇಕಾಗಿದೆ. ಇದನ್ನು ತಿಳಿಯದೆ ಇದ್ದರೆ ವಿದ್ಯಾರಣ್ಯೋತ್ಸವದ ರಹಸ್ಯವು ಸ್ಪಷ್ಟ ಪಡುವದಿಲ್ಲ.

೨

ವಿದ್ಯಾರಣ್ಯರ ಮಹಿಮೆಯೂ ಜೀವನ ವೃತ್ತಾಂತಗಳೂ ಜನಸ್ತೋಮದಲ್ಲಿ ಪ್ರಚಾರದಲ್ಲಿರುವ ಐತಿಹ್ಯಗಳಪ್ರಕಾರ ಅತ್ಯಗಾಧವಾಗಿವೆ. ಅದು ಇಂತಿದೆ. “ವಿದ್ಯಾರಣ್ಯರು ಪೂರ್ವಾಶ್ರಮದಲ್ಲಿ ಮಾಯಣನ ಪುತ್ರರಾದ ಮಾಧವಾಚಾರ್ಯರು. ಇವರು ಕ್ರಿ. ಶ. ೧೨೬೭ರಲ್ಲಿ ಜನಿಸಿದರು. ಇವರಿಗೆ ಸಾಯಣನೂ ಸೋಮನಾಥನೂ ತಮ್ಮಂದಿರು. ಇವರಿಗೆ ಕಾಂಚಿಯ ವಿದ್ಯಾತೀರ್ಥರೂ ತಚ್ಛಿಷ್ಯರಾದ ಶಂಕರಾನಂದರೂ ಗುರುಗಳು. ವೈಷ್ಣವರ ಗುರುವರ್ಯರಾದ ವೇದಾಂತದೇಶಿಕರು ಸಹಾಧ್ಯಾಯಿಗಳು. ಮಾಧವಾಚಾರ್ಯರು ಅತ್ಯಂತ ದೊಡ್ಡ ಪಂಡಿತರಾಗಿ, ತಾವೂ ತಮ್ಮ ಮನೆಯವರೂ ಲೆಕ್ಕವಿಲ್ಲದಷ್ಟು ಮಹಾಗ್ರಂಥಗಳನ್ನು ರಚಿಸಿದರು. ಇವರು ೧೦೮ ಗ್ರಂಥಗಳನ್ನು ಬರೆದರೆಂದು ಪ್ರತೀತಿಯಿದ್ದರೂ ಇವರ ಹೆಸರನ್ನು ಹೇಳಿಕೊಳ್ಳುವ ಗ್ರಂಥಗಳು ಇದಕ್ಕೆ ಎರಡಷ್ಟು ದೊರೆವುವು.

ಮಾಧವರು ವಿದ್ಯಾಪೀಠದ ಆಚಾರ್ಯರಂತೆ ಸುಮ್ಮನೆ ಗ್ರಂಥವ್ಯಾಸಂಗ ಗ್ರಂಥನಿರ್ಮಾಣಗಳಲ್ಲಿ ಮಾತ್ರವೇ ತಮ್ಮ ಜೀವನವನ್ನು ಕಳೆಯಿಸಲಿಲ್ಲ. ಇವರು ಸಂಗಮವಂಶೀಯರಿಗೆ ಕುಲಪುರೋಹಿತರೂ ಮಂತ್ರಿಗಳೂ ಆಗಿದ್ದರು. ಅಲ್ಲದೆ ಅಖಂಡೈಶ್ವರ್ಯ ಪ್ರಾಪ್ತಿಗಾಗಿ ಹಂಪೆಯಲ್ಲಿ ಭುವನೇಶ್ವರಿಯನ್ನು ಕುರಿತು ತಪಸ್ಸುಮಾಡಿದರು. ದೇವಿ ಪ್ರತ್ಯಕ್ಷಳಾಗಿ ಅವರಿಗೆ ಆ ಜನ್ಮದಲ್ಲಿ ಸಿರಿ ಲಭ್ಯವಿಲ್ಲವೆಂದೂ ಮುಂದಲ ಜನ್ಮದಲ್ಲಿ ಅಪೇಕ್ಷಿಸಿದರೆ ಅನುಗ್ರಹಿಸುವೆನೆಂದೂ ಹೇಳಿಬಿಟ್ಟಳು.

ಇಷ್ಟರಲ್ಲಿ ಮುಸಲ್ಮಾನರ ಹಾವಳಿ ದಕ್ಷಿಣ ದೇಶವನ್ನು ಅಲ್ಲೋಲಕಲ್ಲೋಲ ಮಾಡಿಬಿಟ್ಟಿತು. ಹತ್ತಾರು ಶತಮಾನಗಳಿಂದ ಮೆರೆಯುತ್ತಿದ್ದ ಪಾಂಡ್ಯ ಚೋಳರಾಜ್ಯಗಳು ನಿಮಿಷಮಾತ್ರದಲ್ಲಿ ಉರುಳಿಬಿದ್ದುವು. ಹೊಯ್ಸಳಸಾಮ್ರಾಜ್ಯವು ಒಂದೇ ಪೆಟ್ಟಿಗೆ ಧೂಳಿಪಾಲಾಯಿತು. ದೇವಗಿರಿರಾಜ್ಯವು ಛಿನ್ನಭಿನ್ನವಾಯಿತು. ಮಲ್ಲಿಕಾಫರನು ಲೀಲಾಜಾಲವಾಗಿ ರಾಮೇಶ್ವರದ ವರೆಗೂ ಹಿಂದೂರಾಜ್ಯಗಳನ್ನು ಧ್ವಂಸಮಾಡಿದನು. ದೇಶದ ಸಕಲ ಗುರುಪೀಠಗಳೂ ಧರ್ಮಸ್ಥಾನಗಳೂ ಆಶ್ರಯವಿಹೀನವಾದುವಲ್ಲದೆ ಸಾಕ್ಷಾತ್ತಾದ ಪೀಡನೆಗೂ ಗುರಿಯಾಗಿ ಭಂಗಪಟ್ಟುವು. ರಾಮಾನುಜಾಚಾರ್ಯರಿಂದ ನಿರ್ಮಿತವಾಗಿದ್ದ ಮೇಲುಗೋಟೆ ಭಂಗವನ್ನು ಪಡೆದು ಮುಂದಲ ಶತಮಾನದಲ್ಲಿ ನಾಗಮಂಗಲದ ತಿಮ್ಮಣ್ಣ ದಂಡನಾಯಕ ( ತಿರುಮಲಾಚಾರ್ಯ ) ನಿಂದ ಜೀರ್ಣೋದ್ಧಾರವನ್ನು ಪಡೆಯಬೇಕಾಯ್ತು. ಮುಸಲ್ಮಾನರು ಶ್ರೀರಂಗವನ್ನು ಮುತ್ತಿ ಬಹುಜನರನ್ನು ಕೊಂದು ಹಿಂದೂ ಗ್ರಂಥಗಳನ್ನೆಲ್ಲಾ ಸುಡಿಸಿ ಧಾಂದಲೆ ಮಾಡಿದರು. ಆಗ ಅಲ್ಲಿದ್ದ ವೇದಾಂತ ದೇಶಿಕರು ಸಹ ಪೆಟ್ಟುತಿಂದು ಹೆಣಗಳಮಧ್ಯೆ ಸಿಕ್ಕಿದ್ದು ಇವರು ಮೃತರಾದರೆಂಬ ಶತ್ರುಗಳ ಭ್ರಮೆಯಿಂದ ಗಂಡವನ್ನು ದಾಟಿದರು. ಅಲ್ಲಿ ಬಿದ್ದಿದ್ದಾಗ ಇವರು ರಾಮಾನುಜಭಾಷ್ಯದ ಸುಪ್ರಸಿದ್ಧ ಟೀಕೆಯಾದ ಶ್ರುತಪ್ರಕಾಶಿಕೆ ಎಂಬ ಗ್ರಂಥವನ್ನು ಮೇಲೆ ಮಲಗಿ ಮರೆಸಿ ಸಂರಕ್ಷಿಸಿದರು. ಮುಸಲ್ಮಾನರ ಈ ಬಗೆಯಾದ ಧಾಂದಲೆಯಿಂದ ಮಾಧವಸಾಯಣರ ವಿದ್ಯಾಪೀಠವೂ ಸಹ ಧ್ವಂಸವಾಯಿತಲ್ಲದೆ ಅವರ ಪೋಷಕರಾದ ಸಂಗಮವಂಶೀಯರೂ ಆನೆಗುಂದಿ ಮೊದಲಾದ ಸಂಸ್ಥಾನಗಳ ಪ್ರಭುಗಳೂ ಪದಭ್ರಷ್ಟರಾದರು.

ಆದರೆ ದುರ್ಘಟರಾಜನೀತಿವಿಶಾರದರಾಗಿದ್ದ ಮಾಧವರು ಇವನ್ನು ಸಹಿಸಿ ಸುಮ್ಮನಾಗಲಿಲ್ಲ. ಇದುವರೆಗೆ ಆರ್ಯ ವಿದ್ಯಾರಾಶಿಯ ಕ್ರೋಡೀಕರಣದಲ್ಲಿ ನಿರತವಾಗಿದ್ದ ಇವರ ಬುದ್ಧಿಪ್ರತಿಭೆ ಈಗ ರಾಜಕೀಯ ರಂಗದಲ್ಲಿ ವಿಕಾಸಯುಕ್ತವಾಗಿ ಕೆಲಸಮಾಡಲಾರಂಭಿಸಿತು. ಮುಸಲ್ಮಾನರು ದಕ್ಷಿಣದೇಶದ ರಾಜಕೀಯ ವ್ಯವಸ್ಥೆಯನ್ನು ನಾಶಮಾಡಿದ್ದರಷ್ಟೆ. ವಿದ್ಯಾರಣ್ಯರು ಕ್ಷಣಾರ್ಧದಲ್ಲಿ ಆಸೇತುಕೃಷ್ಣಾವರ್ತಿಯಾದ ವಿಜಯನಗರಸಾಮ್ರಾಜ್ಯವನ್ನು ಸ್ಥಾಪಿಸಿದರು. ಮಾಧವರು ಸನ್ಯಾಸವನ್ನು ತಳೆದು ವಿದ್ಯಾರಣ್ಯರೆಂದು ಪ್ರಸಿದ್ಧರಾಗಿ, ಆಶ್ರಮಭೇದದಿಂದ ಹೊಸಜನ್ಮವು ಬಂದಂತಾಯಿತೆಂದು ಭುವನೇಶ್ವರಿಯನ್ನು ಪ್ರಾರ್ಥಿಸಿ ಮೂರೂಮುಕ್ಕಾಲುಗಳಿಗೆ ಸುವರ್ಣವೃಷ್ಟಿಸುರಿಸಿ ಅಖಂಡಧನವನ್ನು ಶೇಖರಿಸಿ, ಜಗತ್ಪ್ರಸಿದ್ಧ ವಿದ್ಯಾನಗರಿಯನ್ನು ತಮ್ಮ ಅಂಕಿತದಿಂದ ಪ್ರತಿಷ್ಠಿಸಿದರು. ಮತ್ತು ತಾವೇ ಪ್ರಧಾನಶಸ್ತ್ರವನ್ನು ಧರಿಸಿ ಮಂತ್ರಿಗಳಾಗಿ ರಾಜ್ಯಪರಿಪಾಲನೆಗೆ ತೊಡಗಿದರು. ಸ್ವಲ್ಪದರಲ್ಲೇ ಮುಸಲ್ಮಾನರ ಹಾವಳಿ ಹೆಚ್ಚಾದುದರಿಂದ ತಾವೇ ದಂಡೆತ್ತಿ ಹೋಗಿ ಗೋಪಕಪುರವನ್ನು ಮುತ್ತಿ ಮುಸಲ್ಮಾನರನ್ನು ಭೂಮಿಯ ಮೇಲೂ ನೌಕಾಯುದ್ಧದಲ್ಲೂ ಸೋಲಿಸಿ ಓಡಿಸಿದರು.

ಇದಲ್ಲದೆ, ಆಗಿನ ಕಾಲದಲ್ಲಿ ಉದ್ದಾಮಪಂಡಿತರಾಗಿದ್ದ ಕ್ರಿಯಾಶಕ್ತಿ ಮೊದಲಾದವರನ್ನು ಕರೆಯಿಸಿ ತಮ್ಮ ಸಹಾಯಕ್ಕೆ ಇರಿಸಿಕೊಂಡರು. ವೇದಾಂತದೇಶಿಕರು ವಿರಕ್ತಿಯನ್ನೇ ಮುಖ್ಯವೆಂದು ಭಾವಿಸಿ ರಾಜಕೀಯ ಪಥಕ್ಕೆ ಬರಲು ಇಚ್ಛಿಸಲಿಲ್ಲ. ಸಾಯಣನೂ ಆತನ ಮಗ ಮಾಧವನೂ ಮಂತ್ರಿಗಳಾಗಿ ಕೆಲಸಮಾಡಿದರು. ವಿದ್ಯಾರಣ್ಯರು ತಮ್ಮ ಗುರುಗಳಾದ ವಿದ್ಯಾತೀರ್ಥರನ್ನು ಶೃಂಗೇರಿಗೆ ಕರೆತಂದು ಅದನ್ನು ಜೀರ್ಣೋದ್ಧಾರ ಮಾಡಿಸಿ, ಪ್ರಸಿದ್ಧ ಶಿಲ್ಪಚಮತ್ಕಾರವುಳ್ಳ ವಿದ್ಯಾಶಂಕರ ದೇವಾಲಯವನ್ನು ತಮ್ಮ ಗುರುಗಳ ಹೆಸರಿನಲ್ಲಿ ಕಟ್ಟಿಸಿದರು. ವಿದ್ಯಾರಣ್ಯಪುರವೆಂಬ ಅಗ್ರಹಾರವು ಸಹ ಸ್ಥಾಪಿತವಾಯಿತು.

ವಿದ್ಯಾರಣ್ಯರು ಹಾಗೆಯೇ ಕ್ರಿ. ಶ. ೧೩೮೬ರ ವರೆಗೂ ಮಂತ್ರಿಗಳಾಗಿದ್ದು ಪರಂಧಾಮವನ್ನೈದಿದರು. ಇದರ ಜತೆಗೆ ಶೃಂಗೇರಿಮಠದ ಗುರುಪದವಿಯಲ್ಲೂ ಅಭಿಷಿಕ್ತರಾಗಿ ಮತಧರ್ಮದ ಪ್ರಸಾರಕ್ಕೆ ಸಹಾಯಕರಾಗಿದ್ದರು.

ಮಣಿಮಂಜರಿ ಭೇದಿನಿ, ವಿದ್ಯಾರಣ್ಯಕಾಲಜ್ಞಾನ ಮೊದಲಾದ ಗ್ರಂಥಗಳು ಇವರ ಧಾರ್ಮಿಕಜೀವನದ ಮಹಿಮೆಯನ್ನು ವಿವರಿಸುವುವು. ಶಂಕರಾಚಾರ್ಯರ ಅವತಾರಾನಂತರ ಕಾಮಕ್ರೋಧಾದಿ ಅರಿಷಡ್ವರ್ಗಗಳು ರಾಮಾನುಜಮಧ್ವಾದಿ ಆಚಾರ್ಯರಾಗಿ ಹುಟ್ಟಿ ಗಲಭೆಮಾಡಿದ್ದರಿಂದ ಶಂಕರನು ಪುನಃ ವಿದ್ಯಾರಣ್ಯರಾಗಿ ಅವತರಿಸಿ ನೂರಾರು ಗ್ರಂಥಗಳನ್ನು ರಚಿಸಿ ಸತ್ಯವಾದ ಧರ್ಮವನ್ನು ಪುನರುಸ್ಥಾಪಿಸಿದನು. ವಿದ್ಯಾರಣ್ಯರು ವೇದವ್ಯಾಸರನ್ನೇ ಸಂದರ್ಶಿಸಿ ಅವರ ಅನುಗ್ರಹದಿಂದ ವೇದಭಾಷ್ಯವನ್ನು ರಚಿಸಿದನು. ಇವರ ಯೋಗಸಿದ್ಧಿಯ ಮಹಿಮೆ ವರ್ಣನಾತೀತವಾಗಿತ್ತು. ಇವರ ತಮ್ಮ ಭೋಗನಾಥನು ಶೃಗೇರಿ ಪೀಠದಲ್ಲಿ ಪದಾಭಿಷಿಕ್ತನಾಗಿದ್ದನು. ಆ ತರುವಾಯ ವಿದ್ಯಾರಣ್ಯರು ತಾವೇ ಅಲ್ಲಿ ಪೀಠಾರೋಹಣ ಮಾಡಿ ಶಿಷ್ಯಕೋಟಿಗೆ ಅನುಗ್ರಹಮಾಡಿ ಶೃಂಗೇರಿಮಠಕ್ಕೆ ಜಪದ್ಮುರುತ್ವಾದಿ ಮರ್ಯಾದೆಯನ್ನೂ ಪ್ರಸಿದ್ಧಿಯನ್ನೂ ಕಲ್ಪಿಸಿದರು. ಇವರು ವೇದಾಂತದೇಶಿಕರನ್ನೂ ಅಕ್ಷೋಭ್ಯತೀರ್ಥರನ್ನೂ ವಾದದಲ್ಲಿ ಸೋಲಿಸಿ ಅವರ ಮುದ್ರಾಧಾರಣದ ಪದ್ಧತಿಯನ್ನು ಖಂಡಿಸಿದರು.

ಶಂಕರಮತೀಯರಿಗೆ ಆದಿಶಂಕರರನ್ನು ಬಿಟ್ಟರೆ ವಿದ್ಯಾರಣ್ಯರೇ ಅತ್ಯಂತದೊಡ್ಡ ಆಚಾರ್ಯರಾಗಿ ಇರುವುದರಿಂದ ಇವರಲ್ಲಿ ಸಮಸ್ತ ಜಾತಿಯವರೂ—ಕಮ್ಮೆಗಳು, ಹೊಯ್ಸಳಕರ್ನಾಟಕರು, ದ್ರಾವಿಡರು, ಆಂಧ್ರರು ಇವರೆಲ್ಲರೂ—ವಿದ್ಯಾರಣ್ಯರು ತಮ್ಮ ಜಾತಿಯಲ್ಲಿ ಹುಟ್ಟಿದವರೆಂದು ವಿವಾದಮಾಡುತ್ತಿರುವರು." ಪುರಾಣಕಥೆಯ ವಿದ್ಯಾರಣ್ಯರು ಹೀಗೆ ಅಲೌಕಿಕ ಪ್ರತಿಭಾಸಂಪನ್ನರಾದ ಮಹಾಪುರುಷರಾಗಿರುವರು. ಇವರನ್ನು ಪಾಂಡಿತ್ಯ, ಗ್ರಂಥಕಲ್ಪನೆ, ಯೋಗಸಿದ್ಧಿ, ಧರ್ಮವ್ಯವಸ್ಥೆ, ರಾಜನೀತಿ, ಕಲಾಪ್ರೋತ್ಸಾಹ, ನಗರನಿರ್ಮಾಣ, ಸಾಮ್ರಾಜ್ಯಸ್ಥಾಪನೆ ಮೊದಲಾದ ಅಂಶಗಳಲ್ಲೆಲ್ಲಾ ಒಂದೊಂದು ಮಾರ್ಗದಲ್ಲೂ ಮೀರಿಸಿದವರು ದೊರೆವರಾದರೂ ಇವುಗಳೆಲ್ಲದರಲ್ಲೂ ಇವರಂತೆ ಸರ್ವತೋಮುಖವಾದ ಪ್ರತಿಭಾಶಕ್ತಿಯನ್ನು ಪಡೆದಿರತಕ್ಕವರು ಇಲ್ಲವೇ ಇಲ್ಲವೆನ್ನಬಹುದು.

೩

ಮೇಲ್ಕಂಡ ಪುರಾಣಕಥೆಯ ವಿದ್ಯಾರಣ್ಯರನ್ನು ಇತಿಹಾಸವಿದರೇನೋ ಒಪ್ಪರು. ಇವರ ಶೋಧನೆಯ ಪ್ರಕಾರ ವಿದ್ಯಾರಣ್ಯರೆಂಬವರು ಸುಮಾರು ಕ್ರಿ. ಶ. ೧೩೭೮ರಲ್ಲಿ ಪಟ್ಟವೇರಿ ೧೩೮೬ರಲ್ಲಿ ದಿವಂಗತರಾದ ಒಬ್ಬ ಶೃಂಗೇರಿಮಠಾಧಿಪತಿಗಳು

ಗಿದ್ದರು. ಇವರು ಸಾಧಾರಣಜಾತಿಯ ಮನುಷ್ಯರೇ ಹೊರತು ಇವರಲ್ಲಿ ಅತಿಶಯ ಪ್ರತಿಭೆಯಾವುದೂ ಇರಲಿಲ್ಲ. ಇವರು ಒಂದೆರಡು ಗ್ರಂಥಗಳನ್ನು ಮಾತ್ರ ರಚಿಸಿರುವಂತೆ ತೋರುವುದು. ಆದರೆ ಅವು ಯಾವುವೆಂದು ಗೊತ್ತುಹಚ್ಚು ವುದು ಸಹ ಕಷ್ಟವಾಗಿದೆ. ಈ ವಿದ್ಯಾರಣ್ಯರು ಯಾರು ? ಇವರ ಪೂರ್ವೋತ್ತರವೇನು ?. ಇವರ ಪೂರ್ವಾಶ್ರಮದ ಹೆಸರೇನು ? ಇವರು ಯಾವಾಗ ಹುಟ್ಟಿದರು ? ಎಂದು ಕಂಡು ಹಿಡಿವುದು ದುಸ್ಸಾಧ್ಯವಾಗಿದೆ. ವಿಜಯನಗರದ ಅರಸರು ಶೃಂಗೇರಿಮಠವನ್ನು ಮರ್ಯಾದಿಸುತ್ತಿದ್ದರು. ವಿದ್ಯಾರಣ್ಯರಿಗೆ ಇವರು ಸಲ್ಲಿಸಿದ ಮರ್ಯಾದೆಗೆ ಇದು ಕಾರಣವಾಗಿದ್ದಿತೇ ಹೊರತು ಅವರ ಸ್ವಂತ ಪ್ರಭಾವವಲ್ಲ. ವಿದ್ಯಾತೀರ್ಥರ ಸ್ಮಾರಕವಾಗಿ ಹಿಂದಲಿಂದಲೂ ಕಟ್ಟುತ್ತಿದ್ದ ವಿದ್ಯಾಶಂಕರ ದೇವಾಲಯವು ಕ್ರಿ. ಶ. ೧೩೩೮ರಲ್ಲಿ ಮುಗಿದು ವಿದ್ಯಾರಣ್ಯರು ಗುರುವಾಗಿದ್ದಾಗ ಪ್ರತಿಷ್ಠೆಯಾಯಿತು. ಅದರ ನಿರ್ಮಾಣಕ್ಕೆ ಇವರು ಕಾರಣರೆಂದು ಹೇಳಲು ಯಾವ ಆಧಾರವೂ ಇಲ್ಲ. ವಿದ್ಯಾರಣ್ಯ ಅಗ್ರಹಾರವನ್ನು ಇಮ್ಮಡಿ ಹರಿಹರನು ಇವರ ಮರಣಕಾಲದಲ್ಲಿ ಶೃಂಗೇರಿಯ ಬ್ರಾಹ್ಮಣರಿಗೆ ದಾನರೂಪವಾಗಿ ಕಟ್ಟಿಸಿಕೊಟ್ಟನು.

ಹೀಗೆ ಸಾಧಾರಣ ವ್ಯಕ್ತಿಯಾಗಿದ್ದ ವಿದ್ಯಾರಣ್ಯರು ಆಗಿನ ಕಾಲದಲ್ಲಿ ಅತ್ಯಂತ ಪ್ರಸಿದ್ಧರಾಗಿದ್ದ ವಿದ್ಯಾತೀರ್ಥ, ಭಾರತಿ ತೀರ್ಥ, ಮಾಯಣಪುತ್ರ ಮಾಧವ, ಸಾಯಣ, ಸಾಯಣ ಪುತ್ರ ಮಾಧವ, ಮಾಧವ ಮಂತ್ರಿ, ಭೋಗನಾಥ ಮೊದಲಾದ ಅನೇಕ ಮಹನೀಯರ ಗ್ರಂಥಗಳನ್ನೂ ಸಾಹಸಕಾರ್ಯಗಳನ್ನೂ ಜೀವನವೃತ್ತಾಂತಗಳನ್ನೂ ಜನರ ಆರೋಪಿತತ್ವದಿಂದ ತಾವೊಬ್ಬರೇ ಮಾಡಿದವರೆಂದು ಪ್ರಸಿದ್ಧಿಯನ್ನು ಪಡೆದರು. ಅನೇಕ ಶತಮಾನದಹಿಂದೆ ಇದ್ದ ಮಾಧವನ ಚಿಕಿತ್ಸಾ ನಿದಾನವೂ, ಗಂಗರಾಜಮಾಧವನ ದತ್ತಕ ಚಂದ್ರಿಕೆಯೂ ವಿದ್ಯಾರಣ್ಯರ ಹೆಸರನ್ನು ಪಡೆದಿರುವುವು.

ವಿಜಯನಗರದ ಸಾಮ್ರಾಜ್ಯದ ಸ್ಥಾಪನೆ ಹರಿಹರಬುಕ್ಕರ ಸಾಹಸದಿಂದಲ್ಲದೆ ವಿದ್ಯಾತೀರ್ಥ ವಿದ್ಯಾರಣ್ಯಾದಿಗಳ ರಾಜನೀತಿ ಕೌಶಲ ತಪಸ್ಸಿದ್ಧಿಗಳಿಂದಲ್ಲ. ಈ ಸಂಗಮವಂಶದವರು ಓರಂಗಲ್ಲಿನ ಆಂಧ್ರರೆಂದೂ, ಚಿತ್ರದುರ್ಗದ ಜಿಲ್ಲೆಯ ಕುರುಬರೆಂದೂ, ಹೊಯ್ಸಳರಾಜ್ಯದ ಆಶ್ರಿತರೆಂದೂ, ಆನೆಗೊಂದಿಯ ಸಂಸ್ಥಾನದವರೆಂದೂ ಹಲವು ಕಥೆಗಳುಂಟು. ಇವರು ಹೊಯ್ಸಳರಾಜ್ಯದವರೆಂಬ ಕಥೆಯಲ್ಲಿ ಹೆಚ್ಚು ನಿಜಾಂಶವಿದ್ದಂತೆ ತೋರುವುದು. ಸಂಗಮವಂಶೀಯರಿಗೆ ಮಾಯಣಪುತ್ರರಾದ ಮಾಧವಾದಿಗಳು ಕುಲಪುರೋಹಿತರಾಗಿದ್ದರು. ಈ ಮಾಧವರಿಗೆ ಕಾಂಚೀ ಕಾಮಕೋಟಿಮಠದ ವಿದ್ಯಾತೀರ್ಥರು ಗುರುಗಳಾದುದರಿಂದ ಹರಿಹರನ ಪಟ್ಟಾಭಿಷೇಕಕಾಲದಲ್ಲಿ ಮಾಧವರು ತಮ್ಮ ಗುರುಗಳನ್ನು ಕರೆಯಿಸಿರುವುದರಲ್ಲಿ ಸಂಶಯವಿಲ್ಲ. ವಿದ್ಯಾನಗರಿ ಈ ಕಾರಣದಿಂದಲೇ ವಿದ್ಯಾತೀರ್ಥರ ಅಂಕಿತದಿಂದ ಪ್ರತಿಷ್ಠಿತವಾಗಿರಬೇಕು. ಮಾಧವನೂ ಹರಿಹರನೂ ವಿದ್ಯಾತೀರ್ಥರನ್ನು ತಮಗೆ ಸಮೀಪದಲ್ಲಿರುವಂತೆ ಮಾಡಲು ಶೃಂಗೇರಿಯಲ್ಲಿ ಒಂದು ಶಾಖಾಮಠವನ್ನು ಕಟ್ಟಿಸಿ ಅವರನ್ನು ಅಲ್ಲಿ ನೆಲೆಗೊಳಿಸಿರಬೇಕು. ವಿದ್ಯಾತೀರ್ಥರ ಕಾಲದವರೆಗೂ ಶೃಂಗೇರಿಯಲ್ಲಿ ಮಠವಿದ್ದಿತೆಂದು ಹೇಳಲಾಗುವುದಿಲ್ಲ. ಕೂಡಲಿಮಠದ ಐತಿಹ್ಯಗಳೂ ಕಾಮಕೋಟಿಮಠದ ಸಾಕ್ಷ್ಯವೂ ಇದಕ್ಕೆ ವಿರುದ್ಧವಾಗಿವೆ. ಅಲ್ಲದೆ ಶೃಂಗೇರಿಯೂ ಕಾಂಚಿಯೂ ಸುರೇಶ್ವರಾಚಾರ್ಯರ ಪೀಠವೆಂದೂ, ಇವೆರಡಕ್ಕೂ ವಿದ್ಯಾತೀರ್ಥರು ಸಮಾನವಾಗಿ ಗುರುಗಳಾಗಿದ್ದರೆಂದೂ, ವಿದ್ಯಾತೀರ್ಥರ ಕಾಲದೊಳಗೆ ಶೃಂಗೇರಿ ಪಾಳಾಗಿದ್ದುದರಿಂದ ಅವರ ಕಾಲದಲ್ಲಿ ಅದು ಹೊಸದಾಗಿ ಕಟ್ಟಲ್ಪಟ್ಟಿತೆಂದೂ ಸಕಲರೂ ಒಪ್ಪುವರು. ಎಂದರೆ ಶೃಂಗೇರಿ ಇವರ ಕಾಲದಲ್ಲಿ ಸ್ಥಾಪಿತವಾಗಿದ್ದಿರಬೇಕು.

ಮಾಯಣಮಾಧವನು ರಾಜಕೀಯ ರಂಗದಲ್ಲಿ ವಿಶೇಷವಾಗಿ ಕೈಹಾಕಿರುವಂತೆ ತೋರುವುದಿಲ್ಲ. ಇವನ ತಮ್ಮ ಭೋಗನಾಥನೇ ಶೃಂಗೇರಿಯ ಭಾರತೀತೀರ್ಥರೆನ್ನುವುದೂ ನಿರಾಧಾರವಾದುದು. ಗೋಪಕ ಪುರವನ್ನು ಜಯಿಸಿ ತುರುಕರನ್ನು ಬಡಿದಟ್ಟಿದವನು ಕ್ರಿಯಾಶಕ್ತಿಯ ಶಿಷ್ಯನಾದ ಭುವನೈಕವೀರ ಮಾಧವಮಂತ್ರಿಯಲ್ಲದೆ ಮಾಯಣಮಾಧವನಲ್ಲ. ಈ ಮಾಧವಮಂತ್ರಿ ಇಮ್ಮಡಿ ಹರಿಹರನ ಮುಖ್ಯಮಂತ್ರಿಯಾಗಿದ್ದಂತೆ ಶಾಸನಗಳು ಸಾರುವುವು.

ಮಾಯಣಮಾಧವನು ಹೊಯ್ಸಳಕರ್ಣಾಟಕ ಜಾತಿಯವನೆಂದು ಗೊತ್ತಾಗುತ್ತದೆ. ವಿದ್ಯಾರಣ್ಯರೂ ಬಹುಶಃ ಕರ್ಣಾಟಕರಿರಬಹುದು. ವಿದ್ಯಾತೀರ್ಥರೂ ಭಾರತೀತೀರ್ಥರೂ ತಮಿಳರೆಂದು ತೋರುವುದು. ಆದುದರಿಂದಲೇ ಶೃಂಗೇರಿಯ ಕರ್ಣಾಟಕರು ಇವರಿಬ್ಬರ ವೈಭವವನ್ನೂ ವಿದ್ಯಾರಣ್ಯರಿಗೆ ಆರೋಪಿಸಿಕೊಂಡಿರಬಹುದು.

ಇತಿಹಾಸವಿದರೆಲ್ಲರೂ ಮೇಲ್ಕಂಡ ಅಂಶಗಳನ್ನು ನಿರ್ವಿವಾದವಾಗಿ ಏಕಮತದಿಂದ ಒಪ್ಪುತ್ತಾರೆಂದು ತಿಳಿಯಕೂಡದು. ಪ್ರತಿಯೊಂದು ಅಂಶವಲ್ಲೂ ಅವರಲ್ಲಿ ಭಿನ್ನಾಭಿಪ್ರಾಯವುಂಟು. ಕೆಲವರು ಪುರಾಣಕಥೆಯ ಸಕಲಾಂಶಗಳನ್ನೂ ಒಪ್ಪಿಗೆವರು. ಇನ್ನು ಕೆಲವರು ಅವುಗಳನ್ನು ಸಾಧ್ಯವಾದಷ್ಟು ದೂರ ಸಮರ್ಥನೆಮಾಡಲು ಹೋಗುವರು.

೪

ಅಂತೂ ಪುರಾಣಕಥೆಯ ವಿದ್ಯಾರಣ್ಯನೂ ಒಂದು ವಿಪರೀತ; ಇತಿಹಾಸವಿದರ ವಿದ್ಯಾರಣ್ಯನೂ ಒಂದು ವಿಪರೀತ. ಎರಡೂ ವಿಪರೀತಗಳೇ. ನಮಗೆ ಈ ಎರಡು ಮೂರ್ತಿಗಳೂ ಬೇಡ. ನಾವು ಈಗ ಉಪಾಸನೆಮಾಡಲು ಉದ್ಯುಕ್ತರಾಗಿರುವ ಮೂರ್ತಿ ಈ ಎರಡರಿಂದಲೂ ಭಿನ್ನವಾಗಿದೆ.

ಈ ಹೊಸ ಅವತಾರದ ವಿದ್ಯಾರಣ್ಯರು ಕರ್ಣಾಟಕ ಜನಾಂಗದ ನಾಯಕರು. ಕರ್ನಾಟಕದ ಏಕೀಕರಣ ಪ್ರಯತ್ನಕ್ಕೆ ಪ್ರಾಣಸ್ವರೂಪರು. ಕರ್ಣಾಟಕದ ರಾಜಕೀಯ ಪ್ರಜ್ಞೆಗೂ ಜೀವನಕ್ಕೂ ಆಧಾರಸ್ವರೂಪರು. ಸ್ವರಾಜ್ಯ ಪ್ರೇಮಕ್ಕೂ ಸ್ವದೇಶಾಭಿಮಾನಕ್ಕೂ ಅಸ್ತಿಭಾರ ಪ್ರಾಯರು. ಇವರು ಕೇವಲ ಲಿಂಗಾಯತ ಮಾಧ್ವ ಶ್ರೀ ವೈಷ್ಣವಾದಿ ಪರಮತೀಯರೆಲ್ಲಾ ಒಕ್ಕಲಿಕ್ಕಲು ಹೋಗುವ ಬರಿಯ ಶೃಂಗೇರಿ ಮಠದ ಗುರುಮಾತ್ರನಲ್ಲ. ಇವರಿಗೆ ಜಾತಿದ್ವೇಷ ಮತದ್ವೇಷಾದಿಗಳಾವುವೂ ಇಲ್ಲ. ಇವರು ಕರ್ಣಾಟಕವನ್ನು ಒಂದು ಜನಾಂಗವಾಗಿ ಕಟ್ಟಲು ಪ್ರಯತ್ನಿಸುತ್ತಿರುವರು. ಇವರ ಕಾರ್ಯಕ್ಕೆ ಮುಸಲ್ಮಾನರೂ ಅಂತ್ಯಜರೂ ವೀರಶೈವರೂ ಸಹ ನೆರವಾಗಿರುವರು. ಹಸನ್ ಗಂಗುವು ಸಹ ವಿದ್ಯಾರಣ್ಯರನ್ನು ಸಂದರ್ಶಿಸಿ ಅವರ ಆಶೀರ್ವಾದಕ್ಕೆ ಪ್ರತಿಯಾಗಿ ತನ್ನ ರಾಜ್ಯವನ್ನು ಬಹಮನಿ ಎಂದು ಕರೆದನಂತೆ. ಈ ವಿದ್ಯಾರಣ್ಯರು ಮುಸಲ್ಮಾನ ಮತಗ್ರಂಥಗಳನ್ನು ಸಹ ಆನೆ ಮೇಲೆ ಮೆರವಣಿಗೆ ಮಾಡಿಸಿರುವರು.

ವಿದ್ಯಾರಣ್ಯರ ಈ ಹೊಸ ಅವತಾರಕ್ಕೆ ಕಾರಣವೇನು? ಈ ಅವತಾರದ ಪ್ರಯೋಜನವೇನು? ನದೀಮೂಲ, ಋಷಿಮೂಲ, ದೇವಮೂಲಗಳನ್ನು ತಿಳಿಯಲು ಯತ್ನಿಸಬಾರದೆನು ಹೇಳುವುದುಂಟು. ಆದರೆ ಈ ಹೊಸ ಅವತಾರದ ವಿದ್ಯಾರಣ್ಯರು ಋಷಿಯೂ ಅಲ್ಲ, ದೇವರೂ ಅಲ್ಲ, ಯಾವುದೊಂದು ಪುರುಷವ್ಯಕ್ತಿಯೂ ಅಲ್ಲ. ಅವರ ಅವತಾರವು ಅಮೂರ್ತವಾದ ಧ್ಯೇಯ ರೂಪದ್ದಾಗಿದೆ. ಇದರ ಮೂಲವು ತಿಳಿದಲ್ಲದೆ ಇದರ ಸ್ವರೂಪಾನುಸಂಧಾನವನ್ನು ಮಾಡಲಾಗುವುದಿಲ್ಲ.

೫

ಮಹಾಪುರುಷರ ಮಾಹಾತ್ಮ್ಯವು ಅವರ ಶಕ್ತಿ (Capacity) ಶೀಲ ( Character ) ಉಪಕಾರ (Contribution)ಗಳೆಂಬ ಮೂರು ಗುಣಗಳನ್ನನುಸರಿಸಿ ಹುಟ್ಟುವುದು. ಈ ಮೂರು ಗುಣಗಳೂ ಎಲ್ಲಾ ಮಹಾಪುರುಷರಲ್ಲೂ ಒಂದೇ ಪ್ರಮಾಣದಲ್ಲಿರುವುದಿಲ್ಲ. ಅಸಾಧಾರಣಶಕ್ತಿಸಂಪನ್ನರಾದ ಎಷ್ಟೋ ಪುರುಷರು ಶೀಲವರ್ಜಿತರಾಗಿ ಇರುವರು, ಕಡು ಸಾಹಸಿಯಾದ ಕಳ್ಳನೂ ನೂರಾರು ಯುದ್ಧಗಳನ್ನು ಗೆಲ್ಲುವ ಶೂರನೂ ಮಹಾಶಕ್ತಿಸಂಪನ್ನರಾದರೂ ಅವರಿಂದ ಲೋಕಕ್ಕೆ ಉಪಕಾರಕ್ಕೆ ಪ್ರತಿಯಾಗಿ ಅಪಕಾರವೇ ಸಂಭವಿಸುವುದು. ಲೋಕವು ಶಕ್ತಿಯೊಂದನ್ನು ಮಾತ್ರ ಗಮನಿಸಿ ಮಹಾಪುರುಷನನ್ನು ಪೂಜಿಸುತ್ತಿರುವುದು.

ವಿಶ್ವದಲ್ಲಿರುವ ಅದ್ಭುತವಾದ ದೃಶ್ಯಗಳನ್ನು ನೋಡಿದರೆ ಒಂದು ಬಗೆಯ ಮೋಹವೂ ಆನಂದವೂ ಹುಟ್ಟುವುವು. ಮಹಾಪುರುಷರ ಪ್ರತಿಭೆಯನ್ನೂ ಸಾಹಸವನ್ನೂ ಸಾಮರ್ಥ್ಯವನ್ನೂ ನೋಡಿದಾಗಲೂ ಇದೇ ಬಗೆಯ ಭಾವನೆ ಉದಯಿಸುವುದು. ಮಹಾಪುರುಷರಲ್ಲಿ ಮೋಹಜನಕವಾದ ಪೂಜಾಕರ್ಷಕವಾದ ಒಂದು ಶಕ್ತಿವಿಶೇಷವುಂಟು. ಅವರ ವೃತ್ತಾಂತವನ್ನು ಕೇಳಿದರೆ ಮನಸ್ಸು ಅರಳುವುದು; ಹೃದಯವು ಉಬ್ಬುವುದು, ಚಿತ್ತವು ಹರ್ಷಿತವಾಗುವುದು.

ಹೀಗೆ ಮಹಾಪುರುಷರ ಗುಣಗಳನ್ನು ಅನುಭವಿಸಿ ಆನಂದಿಸಬೇಕೆಂಬ ಇಚ್ಛೆ ಜನಗಳಲ್ಲಿ ಅತ್ಯುತ್ಕಟವಾಗಿಯೂ ಅಳಿಸಲ–ಸಾಧ್ಯವಾಗಿಯೂ ಇರುವುದರಿಂದ ಜನರು ತಮ್ಮ ಪ್ರಿಯ ನಾಯಕಮಣಿಗಳ ಪುರಾಣ ಕಥೆಯನ್ನು ಕಟ್ಟುವರು. ಹಿಂದೆ ಕ್ರಿ. ಪೂ. ೧೩ನೆಯ ಶತಮಾನದಲ್ಲಿ ಈಗುಪ್ತದೇಶದಲ್ಲಿ ಇಮ್ಮಡಿ ರಾಮಸೀಸ್ (Ramses II) ಎಂಬ ಸಮ್ರಾಜನೊಬ್ಬನು ಇದ್ದನು. ಇವನು ಅಸಾಧಾರಣ ಮಹಿಮಾಸಂಪನ್ನನಾಗಿದ್ದುದರಿಂದಲೂ ತನ್ನ ದೇಶದ ಕೀರ್ತಿ ವೈಭವಗಳನ್ನು ವಿಶೇಷವಾಗಿ ಹೆಚ್ಚಿಸಿದುದರಿಂದಲೂ ಅವನ ದೇಶೀಯರು ಇವನನ್ನು ದೇವರಿಗಿಂತಲೂ ಅತಿಶಯವಾಗಿ ಹಾಡಿ ಹರಸಿ ಪೂಜಿಸಲಾರಂಭಿಸಿದರು. ಈ ದೇಶೀಯರಲ್ಲೇ ಇವನಿಗಿಂ

ತಲೂ ಅಧಿಕ ಸಮರ್ಥರಾಗಿದ್ದ ಮುಮ್ಮಡಿ ಥಾಥಮೀಸ್ (Thothmes) ಅಖಿನೇಟನ್ (Akhonaton) ಮೊದಲಾದ ಮಹಾಪುರುಷರೆಲ್ಲರೂ ಮಹಿಮೆಯಲ್ಲಿ ಇವನಿಗೆ ಹಿಂದು ಬಿದ್ದದು. ಅಷ್ಟೇಕೆ, ಅದುವರೆಗೆ ಈಗುಪ್ತರಿಗೆ ತಿಳಿದಿದ್ದ ಸಮಸ್ತ ದೇವರುಗಳ ಅದ್ಭುತ ಕೃತ್ಯಗಳೂ ಜೀವನ ವೃತ್ತಾಂತಗಳೂ ಸಾಹಸಗಳೂ ಈತನಿಗೆ ಆರೋಪಿಸಲ್ಪಟ್ಟು, ಈತನು ಇವರೆಲ್ಲರ ಸಮಷ್ಟಿಯ ಅವತಾರವಾಗಿ, ಅವರೆಲ್ಲರನ್ನೂ ಮರಿಸಿದ ದೇವರೇ ಆದನು! ಇದೇ ರೀತಿ ಇವನ ದಿಗ್ವಿಜಯದ ಕಥೆಯೂ ಕೈಕಾಲುಪಡೆದು ಬಳೆಯಿತು. ಇವನು ಭರತಖಂಡವನ್ನು ಜಯಿಸಿದನಂತೆ! ಮುಂದೆ ಗ್ರೀಕರ ಅಲೆಕ್ಸಾಂದರನ ಕಾಲದವರೆಗೂ ಭೂಮಧ್ಯಸಮುದ್ರವರ್ತಿಯಾದ ಪ್ರಪಂಚದಲ್ಲಿ ಈತನು ಅತ್ಯಂತ ಪ್ರಸಿದ್ಧನಾದ ಮಹಾಪುರುಷನಾಗಿದ್ದನು. ಅಲೆಕ್ಸಾಂದರನು, ಇವನ ಸಮಸ್ತ ಪುರಾಣವನ್ನೂ, ಗ್ರೀಕರ ದೇವತೆಗಳ ಮತ್ತು ಮಹಾಪುರುಷರ ಪುರಾಣವನ್ನೂ ಹೀರಿಬಿಟ್ಟು ಲೋಕವಿಸ್ಮಯಕರವಾದ ಮಾಹಾತ್ಮ್ಯವನ್ನು ಪಡೆದನು. ಇವರಷ್ಟಲ್ಲದಿದ್ದರೂ ಇದೇ ಕ್ರಮದಲ್ಲಿ ನಮ್ಮ ವಿಕ್ರಮಾದಿತ್ಯ, ಅರಬರ ಹರೂನ್‌ಅಲ್ ರಾಶ್ಶಿದ, ಜರ್ಮನಿಯ ಫ್ರೆಡರಿಕ ಬಾರ್ಬರೋಸ, ಇಂಗ್ಲೆಂಡಿನ ಮುಮ್ಮಡಿ ರಿಚರ್ಡ, ಸ್ಪೇಯಿನಿನ ಸಿಡ್ (Cid) ಮೊದಲಾದವರೆಲ್ಲರೂ ಜನಕಲ್ಪಿತವಾದ ಪುರಾಣಗಳನ್ನು ಪಡೆದು ಮೆರೆಯುತ್ತಿರುವರು,

ಇಷ್ಟೇ ಅಲ್ಲದೆ, ಯಥಾರ್ಥವಾಗಿ ಮಾಹಾತ್ಮ್ಯವುಳ್ಳ ಪುರುಷಶ್ರೇಷ್ಠರನ್ನು ಪಡೆಯದೆ ಇರತಕ್ಕ ದೇಶಗಳಲ್ಲಿ ಜನಕೋಟಿ ತಮಗೆ ಲಭಿಸಿರತಕ್ಕ ಪ್ರಾಕೃತನಾಯಕರನ್ನೇ ಅನ್ಯಾದೃಶರೆಂದು ಅಟ್ಟಕ್ಕೇರಿಸಿ, ಕೃತಕವಾಗಿ ಮಹಿಮೆಯನ್ನು ಆರೋಪಿಸಿ, ಆನಂದಾನುಭವಮಾಡುತ್ತಿರುವುದು. ಇದನ್ನು ಈಗ ಅಮೇರಿಕದಲ್ಲಿ ದಿನವಹಿ ನೋಡಬಹುದು. ಯಾವನಾದರೂ ಎರಡು ಪದ್ಯ ಬರೆದನೆಂದರೆ ಅವನು ಷೇಕ್ಸಪಿಯರಿಗಿಂತಲೂ ಅತಿಶಯನೆಂದು ಇಲ್ಲಿನವರು ಸಾರಲು ಹೊರಡುವರು. ಇವರ ವಾಷಿಂಗಟನ್ನನು ಬಹು ಸಾಧಾರಣ ತರದ ಮನುಷ್ಯನಾಗಿರುವನು. ಆದರೆ ಇವರ ಭಾವನೆಯಲ್ಲಿ ಅವನು ಅಲೆಕ್ಸಾಂದರ, ಸೀಜರ ಮೊದಲಾದವರಿಗೆ ಸಮಾನವಾಗಿರುವನು!

ಈ ರೀತಿ ಮಹಾಪುರುಷರನ್ನು ಕುರಿತು ಪುರಾಣಾವಳಿಯನ್ನು ಕಲ್ಪಿಸುವ ಪ್ರವೃತ್ತಿ ಅತಿ ಸಹಜವೂ ಲೋಕವ್ಯಾಪಿಯೂ ಆನಂದದಾಯಕವೂ ಆಗಿರುವುದು. ಇತಿಹಾಸ ಒಂದನ್ನೇ ನಂಬಿ ಕುಳಿತರೆ ಜೀವನವು ಅಸಾರವಾಗುವುದು. ಜೀವನದ ಪರಿಪೂರ್ಣತೆಗೆ ಹಲವು ಪಂಥಗಳೂ ಬೇಕು. ಇತಿಹಾಸವು ಇವುಗಳಲ್ಲಿ ಒಂದು ಮಾತ್ರವಾಗಿದೆ. ಅದುದರಿಂದ ಪುರಾಣಕಥೆಯ ವಿದ್ಯಾರ್ಣ್ಯವು ನಮಗೆ ಶುದ್ಧವಾಗಿ ತ್ಯಾಜ್ಯರಾಗುವುದಿಲ್ಲ. ಅವರಿಂದ ನಮಗೆ ಇನ್ನೇನಾದರೂ ಪ್ರಯೋಜನವಿದ್ದರೆ ಆವಶ್ಯಕವಾಗಿ ಅವರಲ್ಲಿ ಭಕ್ತಿಯನ್ನು ಮಾಡಬೇಕು. ಅಂಥಾ ಪ್ರಯೋಜನವು ಇದೆ ಎನ್ನುವುದಕ್ಕೆ ಈಗಿನ ಉತ್ಸವವೇ ನಿದರ್ಶನವಾಗಿದೆ. ಈ ಪ್ರಯೋಜನವು ಮುಂದಟ್ಟಾಗಬೇಕಾದರೆ ನಮ್ಮ ಕರ್ಣಾಟಕದೇಶದ ಸ್ಥಿತಿಯನ್ನು ಪರೀಕ್ಷಿಸಬೇಕು.

೬

ಮಹನೀಯರೇ, ಕರ್ನಾಟಕ ದೇಶದ ಮಹಿಮೆಯನ್ನು ಸ್ವಲ್ಪ ಚಿಂತಿಸಿ ನೋಡಿರಿ. ಈ ದೇಶವು ಗಂಡು ಭೂಮಿ, ಸ್ವಾತಂತ್ರ್ಯದ ಬೀಡು ಎಂದು ಅನಾದಿಯಾಗಿ ಪ್ರಸಿದ್ಧಿಯನ್ನು ಪಡೆದಿತ್ತು. ಇದನ್ನು ಜನಕಥೆಯೂ ಪುರಾಣಕಥೆಯೂ ಇತಿಹಾಸವೂ ಸಮಾನವಾಗಿ ಸಮರ್ಥಿಸುವುವು. ಮೊಲವು ಬೇಟೆನಾಯಿ ಮೊದಲಾದ ಪ್ರಬಲ ಮೃಗಗಳ ಮೇಲೆ ತಿರುಗಿಬಿದ್ದು ಸೋಲಿಸಿತೆನ್ನುವ ಕಥೆ ಕರ್ನಾಟಕ ದೇಶದ ಎಷ್ಟೊಂದು ಸ್ಥಳಗಳನ್ನು ಕುರಿತು ಹುಟ್ಟಿರುವುದು! ಮತ್ತಾವ ದೇಶದಲ್ಲೂ ಭೂಮಿಯ ಗಂಡತನವನ್ನು ತೋರಿಸುವ ಈ ಬಗೆಯ ಕಥೆ ಇಲ್ಲಿನಷ್ಟು ವ್ಯಾಪಕತೆಯನ್ನು ಪಡೆದು ಗೋಚರಿಸುವುದಿಲ್ಲ. ಸಾಧಾರಣ ಜನರ ಚಿತ್ತದಲ್ಲಿ ಕರ್ನಾಟಕ ದೇಶವು ಗಂಡು ಭೂಮಿ ಎಂದು ದೃಢವಾಗಿ ಭಾವನೆ ಹುಟ್ಟಿದ್ದಿತು.

ನಮ್ಮ ಆರ್ಯ ಸಂಸ್ಕೃತಿಗೆ ಒಡಲಾದ ಇತಿಹಾಸಪುರಾಣಗಳೂ ತದಾಧಾರವಾಗಿ ಹುಟ್ಟಿರುವ ಸ್ಥಳಪುರಾಣಗಳೂ ಇದೇ ಸುದ್ದಿಯನ್ನೇ ಮತ್ತೊಂದು ವಿಧವಾಗಿ ಸಾರುತ್ತಿರುವುವು. ರಾಮಾಯಣಕಾಲದಲ್ಲಿ ತ್ರಿಲೋಕಾಧಿಪತಿಯಾದ ರಾವಣನನ್ನು ನಡುಗಿಸಿದ ವಾಲಿ ಕರ್ಣಾಟಕದ ರಾಜನಾಗಿದ್ದನು. ಜೈನರ ರಾಮಾಯಣದ ಪ್ರಕಾರ ಹನುಮಂತನು ಹುನುವರ (ಹೊನ್ನಾವರ)ದ ರಾಜನಾಗಿ ಸುಗ್ರೀವನ ಸಾಮಂತನಾಗಿದ್ದನು. ವೀರರೆಲ್ಲರಿಗೂ ನಾಯಕನಾದ ಸಾಕ್ಷಾತ್ತು ಅಂಜನೇಯನನ್ನೇ ಪುತ್ರನನ್ನಾಗಿ ಪಡೆದಿದ್ದ ಕರ್ಣಾಟಕ ಮಾತೆ ಎಂಥಾ ವೀರಮಾತೆಯಾಗಿರಬೇಕು!

ಮಹಾಭಾರತಕಾಲದಲ್ಲಿ ಹಿಡಂಬಬಕಾಸುರಾದಿಗಳೆಲ್ಲರೂ ಕರ್ಣಾಟಕ ದೇಶದಲ್ಲೇ ಬೀಡು ಮಾಡಿಕೊಂಡಿದ್ದರೆಂದು

ಸ್ಥಳ ಪುರಾಣಗಳು ತಿಳಿಸುವುವು. ಆಗಲೂ ಅಲ್ಲಿಂದ ಮುಂದ ಕ್ಕೂ ಕರ್ಣಾಟಕವು ಹೈಹಯ ರಾಜರ ವಸತಿಯಾಗಿತ್ತು. ವೇದಕಾಲದಿಂದಲೂ ಹೈಹಯರು ಸ್ವಾತಂತ್ರ್ಯ ಪ್ರವೃತ್ತಿ ಯುಳ್ಳ ಜನರಾಗಿದ್ದರು. ಕಡೆಗೆ ಇವರು ಅಖಿಲಭಾರತೀಯ ಸಾಮ್ರಾಜ್ಯಾಧಿಪತ್ಯವನ್ನೂ ಪಡೆದು ಅಸಮಾನ ವೈಭವದಿಂದ ಮೆರೆದರು. ಇವರ ವೈರಿಗಳು ಪರಶುರಾಮನನ್ನು ಮುಂದಿಟ್ಟು ಕೊಂಡು ಇವರನ್ನು ಸುಗ್ಗುಬಡಿದರು. ಹೈಹಯರು ಪರಾ ಧೀನತೆಯಲ್ಲಿರಲು ಒಡಂಬಡದೆ ದಕ್ಷಿಣಕ್ಕೆ ಬಂದು ಕರ್ಣಾಟಕ ದೇಶದಲ್ಲಿ ರಾಜ್ಯವನ್ನು ಕಟ್ಟಿಕೊಂಡರು. ನರ್ಮದಾನದಿ ಸಮುದ್ರಕ್ಕೆ ಕೂಡುವ ಸ್ಥಳದಲ್ಲಿ ಕಾವೇರಿ ಎಂಬ ಸಣ್ಣ ಉಪ ನದಿ ಅದನ್ನು ಬಂದು ಸೇರುವುದು. ಈ ಸಂಗಮ ಸ್ಥಾನದಲ್ಲಿ ಹೈಹಯರ ರಾಜಧಾನಿಯಾದ ಮಾಹಿಷ್ಮತೀ ನಗರವು ಇದ್ದಿತು. ದಕ್ಷಿಣಕ್ಕೆ ವಲಸೆಬಂದ ಹೈಹಯರು ಈ ಹೆಸರುಗಳನ್ನೂ ಅಲ್ಲಿಗೆ ತಂದು ಅಲ್ಲಿನ ಒಂದು ನದಿಗೆ ತಮ್ಮ ದೇಶದ ಹೆಸ ರನ್ನು ಕಲ್ಪಿಸಿದರಲ್ಲದೆ, ಆ ದೇಶಕ್ಕೆ ಸಹ ಮಾಹಿಷ್ಮತಿ—ಮಾಹಿಷ ಎಂದು ಹೆಸರನ್ನು ಹುಟ್ಟಿಸಿದರು. ಈ ಹೈಹಯರ ದಕ್ಷಿಣ ರಾಜ್ಯಗಳ ವಿಚಾರವನ್ನು ಜೈಮಿನಿ ಭಾರತವು ತಿಳಿಸುವುದು. ಇದು ಹೇಳುವ ಮಾಹಿಷ್ಮತಿಯ ನೀಲಧ್ವಜ, ಚಂಪಕಾಪುರಿಯ ಹಂಸಧ್ವಜ, ರತ್ನಪುರದ ಮಯೂರಧ್ವಜ, ಇವರೆಲ್ಲರೂ ಹೈಹ ಯರೆಂದು ಐತಿಹ್ಯವುಂಟು. (ರೈಸ್—ಮೈಸೂರು ಗೆಜೆಟಿಯರ್ ೧ ಪುಟ ೨೮೦—೨೮೩) ಈ ನಗರಗಳೆಲ್ಲವೂ ಕರ್ನಾಟಕ ದಲ್ಲೇ ಇದ್ದುವು. ಬಭ್ರುವಾಹನನ ಮಣಿಪುರವೂ ಚಂದ್ರ ಹಾಸನ ಕುಂತಳನಗರಿಯೂ ಇಲ್ಲೇ ಇದ್ದುವು. ಬಕನ ಮಗ ನಾದ ಭೀಷಣನೂ ಇಲ್ಲಿಯವನೇ ಆಗಬೇಕು. ಇವನ ರಾಜ್ಯಕ್ಕೂ ಮಣಿಪುರಕ್ಕೂ ಮಧ್ಯೆ ಇದ್ದ ಪ್ರಮೀಳೆಯೂ ಸಹ ಕನ್ನಡಿತಿಯೇ ಸರಿ. ಜೈಮಿನಿ ಭಾರತವು ಶುದ್ಧವಾಗಿ ಕರ್ಣಾ ಟಕ ಹೈಹಯರ ಪ್ರಶಸ್ತಿಯಾಗಿದೆ. ಹೈಹಯರ ಶತ್ರುವಾದ ಪರಶುರಾಮನು ಸಹ ಆರ್ಯ ಸಾಮ್ರಾಜ್ಯದಿಂದ ಬಹಿಷ್ಕೃತ ನಾಗಿ ಕರ್ಣಾಟಕಕ್ಕೆ ಬಂದು ಪಶ್ಚಿಮ ಸಮುದ್ರವನ್ನು ಯಾಚಿಸಿ ಕರಾಟ, ವಿರಾಟ, ಮಹಾರಾವ, ಕೊಂಕಣ, ಹೈಗ, ತುಳುವ, ಕೇರಳ ಎಂಬ ಸಪ್ತ ಕೊಂಕಣಗಳನ್ನು ಕಲ್ಪಿಸಿ ಅಲ್ಲಿ ನೆಲೆಸಿ ದನು. ಇವುಗಳಲ್ಲಿ ಐದು ವಸತಿಗಳನ್ನು ಕರ್ಣಾಟಕರು ಆಕ್ರಮಿಸಿ ತಮ್ಮದಾಗಿ ಮಾಡಿಕೊಂಡಿರುವರು.

ಇತಿಹಾಸವು ಸಹ ಕರ್ಣಾಟಕರ ವೀರ್ಯ ಪ್ರಭಾವಗಳನ್ನು ಪ್ರಕಟಿಸುತ್ತಿರುವುದು. ಕದಂಬರ ಮಯೂರಶರ್ಮನು ಮಯೂರವರ್ಮನಾದ ಕಥೆ ಎಲ್ಲರಿಗೂ ತಿಳಿದೇ ಇದೆ. ಕದಂಬರೂ ಗಂಗರೂ ಮೊದಲು ಕರ್ಣಾಟಕರ ಸ್ವಾತಂತ್ರ್ಯ ಧ್ವಜವನ್ನು ಎತ್ತಿ ಹಿಡಿದು ಪಲ್ಲವರೇ ಮೊದಲಾದ ಪರಕೀ ಯರ ಆಳ್ವಿಕೆಯನ್ನು ಉಡುಗಿಸಿದರು. ಅನಂತರ ಚಾಲುಕ್ಯರು ವಿಜೃಂಭಿಸಿ ಪಲ್ಲವರನ್ನೂ ತಮಿಳರನ್ನೂ ಹಿಂದಕ್ಕಟ್ಟಿ ಆಂಧ್ರ ಮಹಾರಾಷ್ಟ್ರ ದೇಶಗಳನ್ನು ಪಾದಾಕ್ರಾಂತಮಾಡಿಕೊಂಡು ಉತ್ತರದೇಶದ ಹರ್ಷವರ್ಧನನ ಉರವಣೆಯನ್ನು ತಡೆದು ಅಸಮಾನಸಾಹಸದಿಂದ ಮೆರೆದರು. ಅವರ ತರುವಾಯ ರಾಷ್ಟ್ರಕೂಟರು ನಾಳವದಿಂದ ದ್ರಾವಿಡ ದೇಶದವರೆಗೂ ಸಾಮ್ರಾಜ್ಯವನ್ನು ಕಟ್ಟಿ ಅತ್ಯದ್ಭುತ ಶಿಲ್ಪಗಳನ್ನು ಕಲ್ಪಿಸಿ ಬಾಳಿದರು. ಮತ್ತೆ ಚಾಲುಕ್ಯರು ಇದೇ ಪದವಿಯಲ್ಲಿ ರೂಢ ಮೂಲರಾಗಿ ಆಳಿದರು. ಕಡೆಕಡೆಗೆ ಸೇವುಣರೂ ಚೋಳರೂ ಪ್ರಬಲಿಸಿ ಕರ್ಣಾಟಕವನ್ನು ಕಬಳಿಸಿ ಬಿಡಬೇಕೆಂದು ಸರ್ವ ಸಾಹಸಮಾಡಿದರು. ಆದರೆ ಹೊಯ್ಸಳರು ಆ ಗಂಡವನ್ನು ತಪ್ಪಿಸಿ, ಕಡೆಗೆ ಚೋಳರು ದೀನರಾಗಲು ಅವರನ್ನು ತಾವೇ ರಾಜ್ಯದಲ್ಲಿ ಪ್ರತಿಷ್ಠಾಪನೆ ಮಾಡಿ, ಶ್ರೀರಂಗದವರೆಗೂ ಅರ್ಧ ತಮಿಳು ದೇಶವನ್ನು ತಮ್ಮ ರಾಜ್ಯಕ್ಕೆ ಸೇರಿಸಿಕೊಂಡು ಆಳಿ ದರು. ಮುಸಲ್ಮಾನರ ಬಾಧೆಯಿಂದ ಈ ರಾಜ್ಯವು ಅಸ್ತವಾಗಲು ವಿಜಯ ನಗರವು ಗಂಧರ್ವ ನಗರದಂತೆ ಹುಟ್ಟಿ ದ್ರಾವಿಡ ಕರ್ಣಾಟ ಕೇರಳಾಂಧ್ರ ಓಡ್ರ ದೇಶಗಳನ್ನೆಲ್ಲಾ ಕರ್ಣಾಟಕ ಸಾಮ್ರಾಜ್ಯವಾಗಿ ಕಟ್ಟಿ ಆಳಿತು. ಒಂದು ಕರ್ಣಾಟಕ ವಂಶವು ದೂರ ನೇಪಾಳ ದೇಶದಲ್ಲಿ ರಾಜ್ಯವಾಳಿತು.

ಕನ್ನಡಿಗರ ಸ್ವಾತಂತ್ರ್ಯ ವೈಭವದಂತೆಯೇ ಅವರ ಭಾಷಾ ಮಹಿಮೆಯೂ ಅತ್ಯುನ್ನತವಾಗಿರುವುದು. ಸಂಸ್ಕೃತ ತಮಿಳು ಭಾಷೆಗಳನ್ನು ಬಿಟ್ಟರೆ ಪ್ರಾಚೀನತೆಯಲ್ಲೂ ಸೊಂಪಿನಲ್ಲಿಯೂ ಕನ್ನಡವನ್ನು ಈಗಿನವರೆಗೂ ಮತ್ತಾವ ಭಾಷೆಯೂ ಸರಿಗಟ್ಟ ಲಾಗುತ್ತಿರಲಿಲ್ಲ. ಈಗ ಹೆಮ್ಮೆಯಿಂದ ಮೆರೆಯುತ್ತಿರುವ ಬಂಗಾಳಿ, ಹಿಂದಿ, ಗುಜರಾತಿ, ಮರಾಠಿ, ತೆಲುಗು ಮೊದಲಾದ ಭಾಷೆಗಳಲ್ಲಿ ಕ್ರಿ. ಶ. ೧೨ನೇಯ ಶತಮಾನಕ್ಕೆ ಪೂರ್ವ ಕಾವ್ಯ ಮಾಲೆಯೇ ಇರಲಿಲ್ಲ. ಆದರೆ ಆ ವೇಳೆಗೆ ಕನ್ನಡದಲ್ಲಿ ಎರಡು ಹಳೆಗನ್ನಡದ ಯುಗಗಳು ಮುಗಿದಿದ್ದುವು! ಕನ್ನಡವು ಕಾವೇರಿ ಯಿಂದ ಗೋದಾವರಿಯವರೆಗೂ ವ್ಯಾಪಿಸಿದ್ದಿತು. ಬರಬರುತ್ತ ಕನ್ನಡವು ಕೊಂಕಣ ದೇಶಗಳನ್ನೂ ಕೊಡಗು ವೈನಾಡು ನೀಲಗಿರಿ ಕೊಯಿಮುತ್ತೂರ ಪ್ರಾಂತಗಳನ್ನೂ ಆಕ್ರಮಿಸಿ ಕೊಂಡಿತು.

ಕರ್ನಾಟಕದ ಪ್ರಕೃತಿಯ ರಾಮಣೀಯಕತೆ, ಶಿಲ್ಪ ಮಹಿಮೆ, ಕಲಾಸಂಪತ್ತು, ಮತ, ಸಂಸ್ಕೃತಿಯ ವೈಭವಗಳು ಸರ್ವ ವೇದ್ಯವೇ ಆಗಿವೆ. ಭರತಖಂಡದ ಪ್ರಧಾನ ಮತಾ ಚಾರ್ಯರುಗಳಲ್ಲಿ ಬಹುಮಂದಿ ಕರ್ನಾಟಕದ ಒಡಲಿನಲ್ಲಿ ಪ್ರವರ್ಧಮಾನರಾಗಿರುವರು.

ಇದಿಷ್ಟೂ ಕರ್ನಾಟಕದ ಗತವೈಭವದ ಮಾತಾಯ್ತು. ನಮ್ಮ ಈಗಿನ ಸ್ಥಿತಿ ಹೇಗಿದೆ? ಸ್ವಲ್ಪ ನೋಡಿ. ವಿಜಯನಗರದ ಸೂರ್ಯನು ಅಸ್ತನಾದಮೇಲೆ ಕರ್ನಾಟಕವು ರಾಜಕೀಯ ಅಂಧತಮಸ್ಸಿನಲ್ಲಿ ಬಿದ್ದು ತೊಳಲುತ್ತ, ಮರಾಠರು ಬಿಜಾಪೂರದವರು ಮೊಗಲರು ಹೈದರಾಬಾದಿನವರು ಅರ್ಕಾಡಿನವರು ಫ್ರೆಂಚರು ಇಂಗ್ಲಿಷರು ಮೊದಲಾಗಿ ಪರಂಪರೆಯಾಗಿ ಮೇಲೆ ಬಿದ್ದು ಕೊಳ್ಳೆಹೊಡೆಯಲಾರಂಭಿಸಿದ ಪರಕೀಯರ ದಾಂಧಲೆಯಿಂದ ಜೀವಚ್ಛವಪ್ರಾಯವಾಗಿ ಬಿಟ್ಟಿತು. ಕರ್ನಾಟಕವನ್ನು ಮತ್ತೆ ಚೇತರಿಸಲು ನಡೆಸಿದ್ದ ಹೈದರನ ಪ್ರಯತ್ನವು ಇಂಗ್ಲಿಷರಿಂದ ಭಂಗವಾಯಿತು. ಅಂದಿನಿಂದ ಕನ್ನಡಿಗರ ದೌರ್ಭಾಗ್ಯಕ್ಕೆ ಮೇರೆಯೇ ಇಲ್ಲದೆ ಹೆಚ್ಚುತ್ತ ಬಂದಿದೆ. ಮೂರುವರೆ ಶತಮಾನದ ಪರಾಧೀನತೆಯಿಂದಲೂ ಕೊಳ್ಳೆಯಿಂದಲೂ ಅನಾಯಕತೆಯಿಂದಲೂ ಕನ್ನಡಿಗರು ದೀನರಾಗಿ, ದೆಸೆಗೆಟ್ಟು, ಉತ್ಸಾಹ ಶೂನ್ಯರಾಗಿ, ಹರ್ಷವರ್ಜಿತರಾಗಿ, ಧ್ಯೇಯವಿಹೀನರಾಗಿ, ಜಡರಾಗಿ, ಒಗ್ಗಟ್ಟಿಲ್ಲದೆ, ಅಹನ್ಯಹನಿ ಕಾಲಕ್ಷೇಪಮಾಡುತ್ತ ಬರುತ್ತಿರುವರು. ಮರಾಠರೂ ಆಂಧ್ರರೂ ತಮಿಳರೂ ಕ್ರಮವಾಗಿ ಕನ್ನಡಸೀಮೆಯನ್ನು ಒತ್ತರಿಸಿ ತಳ್ಳುತ್ತ ತಮ್ಮ ಭಾಷೆಗಳನ್ನು ವಿಸ್ತರಿಸುತ್ತ ಬಂದಿರುವರು. ಆಗಲೇ ಕೃಷ್ಣಾ ಗೋದಾವರಿ ಮಧ್ಯಸ್ಥವಾದ ದೇಶವು ಕನ್ನಡನಾಡಿನ ಒಡಲಿಂದ ಹರಿದು ಬಿದ್ದಿರುವುದು. ಮರಾಠಿಯೂ ತೆಲುಗೂ ಕೃಷ್ಣಾ ತುಂಗಭದ್ರಾ ಮಧ್ಯಸ್ಥಪ್ರದೇಶವನ್ನು ಸಹ ಕಬಳಿಸಲು ಪ್ರಯತ್ನಿಸುತ್ತಿವೆ. ಕ್ರಿ. ಶ. ೧೭೦೦ ರಿಂದ ಈಚೆಗೆ ಕರ್ನಾಟಕದಲ್ಲಿ ಒಂದು ಪ್ರೌಢ ಕಾವ್ಯವಾಗಲಿ, ಉತ್ತಮಕಲಾಚಮತ್ಕೃತಿಯಾಗಲಿ, ಒಬ್ಬ ಮಹಾಪುರುಷನಾಗಲಿ ಹುಟ್ಟಿಲ್ಲ. ಈಗಿನ ಕಾಲದ ಭಾರತೀಯ ಮುಖ್ಯರಲ್ಲಿ ಕರ್ನಾಟಕವು ಒಬ್ಬರನ್ನಾದರೂ ಹುಟ್ಟಿಸಬೇಡವೆ? ಇತರ ಭಾರತೀಯ ಭಾಷೆಗಳೆಲ್ಲವೂ ಕನ್ನಡವನ್ನು ಹಿಂದೆಹಾಕಿ ಮೆರೆಯುತ್ತಿವೆ. ಕರ್ನಾಟಕವು ಈಗ ಎಂಟು ಆಶ್ರಿತಸಂಸ್ಥಾನಗಳಲ್ಲೂ ಎರಡೂ ಬ್ರಿಟಿಷು ಪ್ರಾಂತ್ಯಗಳಲ್ಲೂ ಸೇರಿ ಹೋಗಿ ಮೃತಪ್ರಾಯವಾಗಿರುವುದು. ಹೀಗೆ ಅತಿದೀನವಾಗಿ ಪರಿತಪಿಸುತ್ತಿರುವ ಕರ್ನಾಟಕಕ್ಕೆ ಅವರ ಏಕಮಾತ್ರ ಜೀವನಾಧಾರವಾಗಿರುವ ಗತವೈಭವವನ್ನು ಸಹ ತಪ್ಪಿಸಲು ದೃಢವಾದ ಪ್ರಯತ್ನಗಳು ನಡೆಯುತ್ತಿವೆ. ಕರ್ನಾಟಕರು ಚರಿತ್ರೆಯ ಆದಿಯಿಂದಲೂ ಯಾವುದೊಂದು ಕಾಲದಲ್ಲೂ ಸ್ವಾತಂತ್ರ್ಯವೆಂಬುದನ್ನೇ ಕೇಳಿ ಅರಿಯರಂತೆ! ಕದಂಬರು ಕರ್ನಾಟಕ ರಾಜರಲ್ಲನಂತೆ! ಗಂಗರು ಯಾವಾಗಲೂ ಮಾಂಡಳಿಕರೇ ಆಗಿದ್ದರಂತೆ! ಚಾಳುಕ್ಯರೂ ರಾಷ್ಟ್ರಕೂಟರೂ ಮರಾಠರಂತೆ! ವಿಜಯನಗರದವರು ಆಂಧ್ರರಂತೆ! ಹೊಯ್ಸಳ ಅಥವಾ ಬಲ್ಲಾಳರು ತಮಿಳರೇ ಸರಿ! ಇನ್ನು ನಮಗೆ ಮಹಿಮೆಗೆ ಕಾರಣವೆಲ್ಲಿಯದು?

೭

ಹಾಗಾದರೆ ನಮಗೆ ನಿಸ್ತಾರವೇನು? ಭಾರತವರ್ಷಕ್ಕೆ ಸ್ವರಾಜ್ಯವು ಬಂದರೆ ನಮ್ಮ ಕಷ್ಟಗಳೆಲ್ಲವೂ ಪರಿಹಾರವಾಗುವುವೆಂದು ಅನೇಕರು ಹೇಳುವರು. ಆದರೆ ಕನ್ನಡಿಗರು ಮೇಲೆ ಹೇಳಿದಂತೆ ದೀನದೆಸೆಯಲ್ಲಿ ತೊಳಲುತ್ತಿದ್ದರೆ ಭರತಖಂಡಕ್ಕೆ ಸ್ವರಾಜ್ಯವು ಬರುವುದೂ ಇಲ್ಲ; ಬಂದರೂ ನಮ್ಮ ನೆರೆಯವರು ನಮ್ಮನ್ನು ಮತ್ತಷ್ಟು ಸುಲಭವಾಗಿ ಕಬಳಿಸಲು ಅವಕಾಶವಾಗುವುದು. ಇದು ತಪ್ಪಬೇಕಾದರೆ ಕರ್ನಾಟಕದೇಶವು ಒಂದು ಪ್ರಾಂತಿಕ ಜನಾಂಗವಾಗಬೇಕು. ಭರತಖಂಡವು ಅನಾದಿಕಾಲದಿಂದಲೂ ಒಂದೇ ಒಂದು ಜನಾಂಗವಾಗಿ ಬಳೆಯಲು ಪ್ರಯತ್ನಿಸುತ್ತಿರುವುದು. ಆದರೆ ಇಲ್ಲಿ ಅಚ್ಚುಕಟ್ಟಾದ ಒಂದು ಅವಿಭಕ್ತ ಜನಾಂಗವು ಬಳೆವುದು ಅಸಾಧ್ಯವು. ಆದುದರಿಂದ ಅಚ್ಚುಕಟ್ಟಾದ ವ್ಯವಸ್ಥೆಯುಳ್ಳ ಹಲವು ಪ್ರಾಂತಿಕ ಜನಾಂಗಗಳು ಹುಟ್ಟಿ ಒಂದು ಸಂಯುಕ್ತ ಜನಾಂಗವಾಗಲು ಪ್ರಯತ್ನಿಸುತ್ತಿವೆ. ಇವುಗಳಲ್ಲಿ ಕರ್ನಾಟಕವೂ ಒಂದು ಪ್ರಾಂತಿಕ ಜನಾಂಗವಾಗಿ ಬಳೆಯ ಬೇಕಾಗಿದೆ.

ಇದು ಹೇಗೆ ಸಾಧ್ಯವು? ಕರ್ನಾಟಕದ ಒಡಲಿನಲ್ಲಿ ಮತ್ತೆ ಪ್ರಾಣಸಂಚಾರವುಂಟಾಗಿ, ಚದರಿರುವ ಕರ್ನಾಟಕವು ಒಂದುಗೂಡಿ ಒಂದು ಪ್ರಾಂತ್ಯವಾಗಿ ಸೇರಿ, ತನ್ನದೇ ಆಗಿರತಕ್ಕ ವಿದ್ಯಾಪೀಠವನ್ನು ಪಡೆದು, ತನ್ನ ಭಾಷೆಯನ್ನು ಸಮನ್ವಯ ಮಾಡಿಕೊಂಡು ತನ್ನ ಸಂಸ್ಕೃತಿಯನ್ನು ಅಭಿವೃದ್ಧಿಪಡಿಸಿಕೊಳ್ಳಬೇಕಾದರೆ ಕರ್ನಾಟಕವೆಲ್ಲಾ ಒಂದೇ ಒಂದು ಎಂಬ ಐಕ್ಯಭಾವನೆ ಮೊದಲು ಹುಟ್ಟಿ ಬಳೆಯಬೇಕು. ಸದ್ಯದ ಸನ್ನಿವೇಶದಲ್ಲಿ ಕರ್ನಾಟಕಕ್ಕೆ ಇಂಥಾ ಭಾವನೆ ಹುಟ್ಟಬೇಕಾದರೆ

ಇಂತಹ ಭಾವದ್ಯೋತಕವಾದ ಮೂರ್ತಿಯೊಂದರ ಮನನದಿಂದ ಮಾತ್ರವೇ ಸಾಧ್ಯವು.

ಈ ಮೂರ್ತಿ "ಕರ್ಣಾಟಕಮಾತೆ" ಎಂಬರೂಪದಲ್ಲಿ ದ್ದರೆ ಸಾಲದು. ಆಧುನಿಕ ಕಾಲದಲ್ಲಿ ದೇವತೆ ಮಹಾಪುರುಷರಷ್ಟು ಹೆಚ್ಚಾಗಿ ಚಿತ್ತಾಕರ್ಷಕವಾಗಿ ಇರುವುದಿಲ್ಲ. ಹಿಂದಿನಿಂದಲೂ ಬಂದ ದೇವತೆಗಳೇ ಪ್ರಾಬಲ್ಯವನ್ನು ಕಳೆದುಕೊಳ್ಳುತ್ತ ಬರುತ್ತಿರುವಾಗ ಹೊಸ ದೇವತೆ ಜನರ ಹೃದಯದಲ್ಲಿ ಮೂಡಿಸುವುದು ಅಸಾಧ್ಯ. ಆದುದರಿಂದ ನಾವು ಈ ಕಾರ್ಯಕ್ಕೆ ಯಾರಾದರೂ ಒಬ್ಬ ಐತಿಹಾಸಿಕ ಮಹಾಪುರುಷನನ್ನು ಹುಡುಕಬೇಕು.

ಭರತಖಂಡದಲ್ಲಿ ಮಹಾಪುರುಷರಿಗೇನೂ ಕೊರತೆಯಿಲ್ಲವಾದರೂ ಅಖಿಲಭರತಖಂಡಕ್ಕೂ ಸಾಮಾನ್ಯವಾಗಿ ನಾಯಕಮಣಿಗಳಾಗಿ ರಾರಾಜಿಸುವ ಶ್ರೀರಾಮ, ಶ್ರೀಕೃಷ್ಣ, ಬುದ್ಧದೇವ, ವಿಕ್ರಮಾರ್ಕ, ಸಮುದ್ರಗುಪ್ತ, ಹರ್ಷವರ್ಧನ, ಅಕಬರ ಮೊದಲಾದವರನ್ನು ಕರ್ಣಾಟಕ ಸಂಸ್ಕೃತಿಯ ಮೂರ್ತಸ್ವರೂಪರನ್ನಾಗಿ ನಾವು ಪರಿಗ್ರಹಿಸಲಾಗುವುದಿಲ್ಲ. ಕರ್ಣಾಟಕ ರಂಗದಲ್ಲೇ ಎಷ್ಟೋ ಮಂದಿ ಪೂಜ್ಯಪುರುಷರು ಹೆಸರುಗೊಂಡಿರುವರು. ಪುಲಕೇಶಿ, ಶ್ರೀಪುರುಷ, ರಾಷ್ಟ್ರಕೂಟದ ಗೋವಿಂದ, ದುರ್ವಿನೀತ, ಶೂದ್ರಕ, ಗಂಗ, ಚಾವುಂಡರಾಯ, ಪಂಪ, ವಿಷ್ಣುವರ್ಧನ, ವೀರಬಲ್ಲಾಳ, ಬಸವೇಶ್ವರ, ವ್ಯಾಸರಾಯ, ಪುರಂದರ, ಕೃಷ್ಣದೇವರಾಯ, ಶಿವಪ್ಪನಾಯಕ, ಹೈದರ್ ಇವರುಗಳು ಸಾಮಾನ್ಯರಲ್ಲ. ಕರ್ಣಾಟಕವು ಈ ಮಹನೀಯರನ್ನು ಧ್ಯಾನಿಸಿ ಪೂಜಿಸಿದಷ್ಟು ಅದರ ಧ್ಯೇಯವು ಸಿದ್ಧಿಸುವುದು. ಆದರೆ ಇವರಾರೂ ಸಂಪೂರ್ಣ ಕರ್ಣಾಟಕ ಜನಾಂಗದ ಆತ್ಮಸ್ವರೂಪಿಗಳೂ ಅದರ ಧ್ಯೇಯರಾಶಿಗೆ ಏಕಮಾತ್ರ ಪ್ರತಿನಿಧಿಗಳೂ ಆಗಲು ಶಕ್ತರಾಗಿಲ್ಲ.

ಎಲ್ಲೋ ಕೆಲದೇಶಗಳಲ್ಲಿ ಮಾತ್ರ ಸಂಪೂರ್ಣ ಜನಾಂಗಕ್ಕೆ ಪ್ರಾಣಪ್ರಾಯರಾದ "ಜನಾಂಗನಾಯಕ"ರು ದೊರೆವರು. ಶಿವಾಜಿ ಮರಾಠರಿಗೆ ಇಂಥಾ ಜನಾಂಗನಾಯಕನಾಗಿರುವನು. ಮರಾಠರಲ್ಲಿ ಶಿವಾಜಿಯನ್ನೂ ಮೀರಿಸಿರುವ ಮಹನೀಯರು ಎಷ್ಟೋಜನ ಹುಟ್ಟಿದ್ದರೂ ಶಿವಾಜಿಯೊಬ್ಬನು ಮಾತ್ರ ಅವರ ಸಂಪೂರ್ಣ ಜನಾಂಗಾತ್ಮವನ್ನೂ ಪ್ರತಿಬಿಂಬಿಸುತ್ತಿರುವನು ; ಅವರ ಜನಾಂಗಧ್ಯೇಯರಾಶಿಗೆ ಸಂಜ್ಞಾಸ್ವರೂಪನಾಗಿ ಇರುವನು. ಹೀಗೆಯೇ ರಾಜಪುತ್ರರಿಗೆ ಪ್ರತಾಪನೂ ಸೀಖರಿಗೆ ಗುರುಗೋವಿಂದನೂ "ಜನಾಂಗನಾಯಕ"ರಾಗಿರುವರು. ಅಮೇರಿಕದ ಸಂಯುಕ್ತರಾಜ್ಯದಲ್ಲಿ ಈಚೆಗೆ ವಾಷಿಂಗಟನ್ನನನ್ನು ಈ ರೀತಿ ಮಾಡಿಕೊಂಡಿರುವರು. ಸ್ವಿಸ್ಸರು ವಿಲಿಯಂ ಟೆಲ್ ಎಂಬಾತನನ್ನು ಹಿಂದೆ ಹೀಗೆ ಮಾಡಿಕೊಂಡಿದ್ದರು. ಭರತಖಂಡಲ್ಲಿ ಈಗ ಕನ್ನಡಿಗರಿಗಿಂತಲೂ ಮುಂದುವರಿದಿರುವ ಬಂಗಾಳಿಗಳು, ಗುಜರಾತಿಗಳು, ಆಂಧ್ರರು, ಕೇರಳರು, ಉತ್ಕಲರು ಇವರಾರೂ ಎಷ್ಟೇ ಬಯಸಿದರೂ ಇಂತಹ "ಜನಾಂಗನಾಯಕ"ರಾದ ಪುರುಷಶ್ರೇಷ್ಠರನ್ನು ಪಡೆದಿಲ್ಲ.

ಕನ್ನಡಿಗರ ಅದೃಷ್ಟವಿಶೇಷದಿಂದ ವಿದ್ಯಾರಣ್ಯರು ಇಂತಹ ಪದವಿಯನ್ನಲಂಕರಿಸಲು ಯೋಗ್ಯರಾಗಿ ಲಭಿಸಿರುವರು. ಪುರಾಣಕಥೆಯು ವಿದ್ಯಾರಣ್ಯರು ಈಗಿನ ಕಾಲದಲ್ಲಿ ಅವತರಿಸಿರುವರಾದರೆ ಅವರು ಕರ್ಣಾಟಕ ಜನಾಂಗನಾಯಕರಾಗದೆ ಮತ್ತೇನೂ ಆಗಿರಲಾರರು. ಈ ಹೊಸ ಅವತಾರದ ವಿದ್ಯಾರಣ್ಯರು ಕರ್ಣಾಟಕ ಸಂಸ್ಕೃತಿಯ ಮೂಲಸ್ತಂಭವೂ, ಕರ್ಣಾಟಕ ಧ್ಯೇಯಗಳ ಮತ್ತು ಆಶೋತ್ತರಗಳ ಪ್ರತಿಬಿಂಬವೂ, ಕರ್ಣಾಟಕಮಾತೆಯ ಅಪರಾವತಾರಿಯೂ, ಕರ್ಣಾಟಕ ಐಕ್ಯಭಾವನೆಯ ಮೂರ್ತಸ್ವರೂಪರೂ ಆಗಿರುವರು. ಕರ್ಣಾಟಕದ ಧ್ಯೇಯಗಳೇ ರೂಪುಗೊಂಡು ಈ ವಿದ್ಯಾರಣ್ಯರಾಗಿ ಅವತರಿಸಿವೆ.

ಆದುದರಿಂದ ವಿದ್ಯಾರಣ್ಯರ ಆರಾಧನೆ ಎಂದರೆ ಕರ್ಣಾಟಕದ ಧ್ಯೇಯಗಳು, ಆಶೋತ್ತರಗಳು, ಸಂಸ್ಕೃತಿ, ವಿದ್ಯೆಗಳು, ಜನಾಂಗತ್ವ ಇವುಗಳೆಲ್ಲದರ ಆರಾಧನೆಯೇ ಆಗುವುದು. ಇಂದು ನಾವು ಮಾಡುತ್ತಿರುವ ಉತ್ಸವವು ಕರ್ಣಾಟಕ ಜನಾಂಗದೇವಿಯ ಹಬ್ಬವಾಗಿರುವುದು.*

---

* ಈ ನಿಬಂಧವು ಧಾರವಾಡದಲ್ಲಿ ಶಾಂತೇಶವಾಚನಾಲಯದಿಂದ ಜರುಗಿದ ವಿದ್ಯಾರಣ್ಯಮಹೋತ್ಸವದಲ್ಲಿ ಓದಲ್ಪಟ್ಟಿತು. —ಸಂ.




॥ नाहं कर्ता हरिः कर्ता तत्पूजा कर्म चाखिलम् ॥

## ಬಾರ್ಡೋಲಿಯ ರಣಕ್ಷೇತ್ರ

ಬಾರ್ಡೋಲಿಯ ರೈತರು ಆಳರಸರ ವಿರುದ್ಧವಾಗಿ ಹೂಡಿದ ಧರ್ಮಯುದ್ಧದಲ್ಲಿ, ಆಳರಸರು ರಾಕ್ಷಸ ಉಪಾಯಗಳನ್ನು ಕೈಕೊಂಡು ಬಡರೈತರನ್ನು ಪೀಡಿಸುತ್ತಿರುವ ಹೃದಯದ್ರಾವಕ ಸಂಗತಿಗಳು ಈಗ ಸರ್ವತೋಮುಖವಾದ ವಿಷಯಗಳಾಗಿವೆ. ಅವರು ಜಪ್ತಿಯನ್ನು ಮಾಡುವ ರೀತಿಯೇನು? ಪಠಾಣರನ್ನು ತಂದಿರಿಸಿ, ಹೆಂಗುಸರನ್ನು ಅಪಮಾನಗೊಳಿಸುವುದೇನು ? ಸುಳ್ಳುನೆವಹೇಳಿ ಖಟ್ಲೆಗಳನ್ನು ಮಾಡುವುದೇನು ? ಬೀದಿ ಕೇರಿಗಳಲ್ಲಿ ಸಾಮಾನುಗಳನ್ನೆಸೆದು ಒತ್ತಾಯಪಡಿಸುವುದೇನು ? ಎಲ್ಲವೂ ಆಸುರಕೃತ್ಯಗಳೇ. ಇಷ್ಟೆಲ್ಲ ಕೃತ್ಯಗಳನ್ನು ಮಾಡುವುದು ಏತಕ್ಕೆ ? ಸರಕಾರದವರು ಏರಿಸಿದ ಭೂಕಂದಾಯವು ಸರಿಯಾಗಿರುವುದಿಲ್ಲವಾದುದರಿಂದ, ಪುನಃ ಚವಕಶಿಮಾಡಿ ನ್ಯಾಯಕೊಡಿರೆಂದು ಬಡರೈತರು ಬೇಡಿಕೊಂಡ ಮಹಾಪರಾಧ ಕ್ಕೋಸ್ಕರ! ನಿಃಶಸ್ತ್ರರಾದ ಶಾಂತಪ್ರಜೆಗಳನ್ನು ರೊಚ್ಚಿಗೇರಿಸುವುದಕ್ಕೆ ಎಷ್ಟೆಷ್ಟು ಪೀಡಿಸುವರೋ ಅಷ್ಟಷ್ಟು ಅವರು ಶಾಂತ ವೀರರಾದುದನ್ನು ನೋಡಿ, ಆಳರಸರ ತಲೆ ತಿರುಗಿದೆ. ಕೇಸರನ ಜಗದ ..ಪಿಯಾದ ಸಾಮರ್ಥ್ಯವನ್ನು ಮಣ್ಣುಕೂಡಿಸಿದ ನಮ್ಮಂಥ . ಬಾಢ್ಯರನ್ನು ಈ ಮಶಕಗಳು ಮ . ಗು ತಿಕ್ಕಲಿಕ್ಕೆ ಹಚ್ಚುವುವೆ? ಇದು ಸರ್ವಥಾ ಆಗದು—ಎಂದು ..ವ. ಹಮ್ಮು. ಹೀಗೆ ಇವರು ಇಷ್ಟು ಉದ್ದಾಮರಾಗುವುದಕ್ಕೆ ಕಾರಣವೇನೆಂಬುದರ ಮೀಮಾಂಸೆಯನ್ನು ತುಸು ಮಾಡುವ. ಆಳರಸರಿಗೆ ರೈತರು ಬೇಡಿದುದು ನ್ಯಾಯವೆಂಬುದು ಗೊತ್ತಾಗದಷ್ಟು ಅವರು ಬುದ್ಧಿಹೀನರಿರುವರೊ ? ಇಲ್ಲ. ಅಂದಬಳಿಕ, ಅವರು ರೈತರ ಬೇಡಿಕೆಯನ್ನು ಏಕೆ ಪೂರೈಸಲೊಲ್ಲರು ಎಂದು ಕೇಳಬಹುದು. ಅದಕ್ಕೆ ಕಾರಣವೆಂದರೆ ಬಡರೈತರ ಈ ಬೇಡಿಕೆ ತಮ್ಮ ಅನಿಯಂತ್ರಿತವಾದ ಹಕ್ಕಿಗೆ ಕುಠಾರವನ್ನಿಡುತ್ತದೆಂದು ಅವರ ತಪ್ಪು ತಿಳವಳಿಕೆಯುಂಟಾಗಿರುವುದರಿಂದ ಅವರು ಹೀಗೆ ಬಿಗಿಹಿಡದಿರುವರು. ಭೂಕಂದಾಯವನ್ನು ಏರಿಸುವ ಹಕ್ಕು ನಮ್ಮದು, ಭೂಮಿಯೆಲ್ಲವೂ ನಮ್ಮ ಸ್ವಾಮಿತ್ವದಲ್ಲಿ ಇರುವುದು. ಅದಕ್ಕೆ ನಾವು ಒಡೆಯರು, ರೈತರು ನಮ್ಮ ಆಳುಗಳು. ನಾವು ಕೊಟ್ಟ ಕರಾರಿಗೆ ಒಪ್ಪಿ, ಬೇಕಾದರೆ ಭೂಮಿಯನ್ನು ಅನುಭವಿಸಬೇಕು, ಇಲ್ಲದಿದ್ದರೆ ಬಿಟ್ಟುಹೋಗಬೇಕು. ಹೀಗೆ ಮಾಡುವುದನ್ನು ಬಿಟ್ಟು, ಅವರು ನಮ್ಮ ವಿರುದ್ಧ 'ಬ್ರ' ತೆಗೆವರೆ ನಾವು ತಾಳತಕ್ಕವರಲ್ಲ—ಎಂಬುದೇ ಅವರ ಮನಸ್ಸಿನೊಳಗಿನ ವಿಚಾರಗಳು. ಈ ತರಹದ ಮನೋವೃತ್ತಿಯೇ ಅವರ ಆಸುರಕೃತ್ಯಗಳಿಗೆ ಕಾರಣ. ಸ್ವಲ್ಪದರಲ್ಲಿ ಹೇಳುವುದೆಂದರೆ—ಅವರ ಮನೋವೃತ್ತಿ ದುರ್ಯೋಧನನ ಮನೋವೃತ್ತಿಯಂತಿರುತ್ತದೆ. ಶ್ರೀಕೃಷ್ಣಪರಮಾತ್ಮನಿಗೆ ದುರ್ಯೋಧನನು ಸೂಜಿಯ ಮೊನೆಯಷ್ಟು ಮಣ್ಣನ್ನು ಕೂಡ ಪಾಂಡವರಿಗೆ ಕೊಡುವುದಿಲ್ಲವೆಂದು ಹೇಳಲಿಲ್ಲವೆ ? ಅದರ ಇಂಗಿತವೇನು? ಅಷ್ಟು ಮಣ್ಣ ಹೋಗಿದ್ದರೆ ಅವನಿಗೆ ಬಹಳ ಹಾನಿಯಾಗುತ್ತಿತ್ತೊ ? ಇಲ್ಲ! ಅದು ಆತನಿಗೆ ಗೊತ್ತಿರಲಿಲ್ಲವೆಂತಲ್ಲ. ಆದರೆ, ಹಾಗೆ ಕೊಡುವುದರಿಂದ, ತಾನು ಪಾಂಡವರೆದುರಿಗೆ ಮೂಗುತಿಕ್ಕಿದಂತಾಗುತ್ತದೆಂಬ ಭಾವನೆಯಿಂದ ದುರ್ಯೋಧನನು ಶ್ರೀಕೃಷ್ಣನಿಗೆ ಹಾಗೆ ಹೇಳಿದನು. ನಮ್ಮ ಆಳರಸರ ಮನಃಸ್ಥಿತಿಯೂ ಹಾಗೆಯೇ ಆಗಿರುತ್ತದೆ. ಬಾರ್ಡೋಲಿಯ ಬಡರೈತರಿಂದ ಬರತಕ್ಕ ಭೂಕಂದಾಯದಲ್ಲಿ ಅಲ್ಪಸ್ವಲ್ಪ ಕಡಿಮೆಯಾದರೆ, ಅವರಿಗೇನು ಬಹಳ ಹಾನಿಯಾಗುತ್ತದೆಂತಲ್ಲ, ಮತ್ತು ಆಳರಸ

ಗೆ ಈ ಮಾತು ಗೊತ್ತಿಲ್ಲವೆಂತಲೂ ಅಲ್ಲ. ಆದರೆ, ಪ್ರಜೆಗಳ ಬೇಡಿಕೆಗೆ ಬಗ್ಗುವುದೆಂದರೆ ದೊಡ್ಡ ಅಪಮಾನವೆಂದೂ ಪ್ರಜೆಗಳಿಗೆ ಹಾಗೆ ಬೇಡಲು ಅಧಿಕಾರವಿಲ್ಲವೆಂದೂ ಅವರ ಭಾವನೆಯಿದ್ದ ಕಾರಣ, ಅವರು ಹೀಗೆ ಬಿಗಿಹಿಡಿದಿರುತ್ತಾರೆಂಬುದನ್ನು ಪ್ರಜೆಗಳು ಚೆನ್ನಾಗಿ ಲಕ್ಷ್ಯದಲ್ಲಿ ಇಡಬೇಕು. ಮತ್ತು ಬಾರ್ಡೋಲಿಯ ಪ್ರಜೆಗಳಾದರೂ ಕೇವಲ ತಮ್ಮವೆರಡು ದುಡ್ಡು ಉಳಿಯಬೇಕೆಂಬ ಉದ್ದೇಶದಿಂದ ಈ ಸಂಗ್ರಾಮವನ್ನು ಹೂಡಿರುವುದಿಲ್ಲ. ಆಳರಸರಿಗೆ ತಮ್ಮ ಮನಬಂದಂತೆ ತೆರಿಗೆಯನ್ನೇರಿಸುವ ಹಕ್ಕು ಇಲ್ಲವೇ ಇಲ್ಲವೆಂಬುದನ್ನು ಅವರಿಗೆ ಪ್ರಸ್ಥಾಪಿಸಬೇಕಾಗಿದೆ. ಆದುದರಿಂದಲೇ ಈ ಸಂಗ್ರಾಮಕ್ಕೆ ಇಷ್ಟು ಕಳೆ ಕಟ್ಟಿದೆ. ಈ ಮುಖ್ಯ ಪ್ರಶ್ನೆಯನ್ನು ನಾವು ನಮ್ಮ ಕಣ್ಮರೆಮಾಡಿ ಪ್ರಯೋಜನವಿಲ್ಲ, ಅದನ್ನು ಬಚ್ಚಿಟ್ಟೂ ಪ್ರಯೋಜನವಿಲ್ಲ. ಹಾಗಿಲ್ಲದಿದ್ದರೆ, ಈಗ ಬಾರ್ಡೋಲಿಗಾಗಿ ಕೂಡಿಸುವ ಫಂಡಿನ ಬಡ್ಡಿಯಲ್ಲಿ ಆ ಏರಿಸಿದ ಹಣವು ಮುಟ್ಟಿ ಹೋಗುತ್ತಿತ್ತು. ಅನ್ಯಾಯ ಮಾಡಲಿಕ್ಕೆ ಪ್ರವೃತ್ತನಾದ ಮನುಷ್ಯನು, ಒಮ್ಮೆ ಅನ್ಯಾಯ ಮಾಡುವುದನ್ನು ನಿಶ್ಚಯಮಾಡಿದನೆಂದರೆ ಅವನು ಎಲ್ಲಿಯವರೆಗೆ ಮದಾಂಧನಾಗುತ್ತಾನೆಂಬುವಕ್ಕೆ ದುರ್ಯೋಧನನು ಪಾಂಡವರಿಗೆ ಸೂಜಿಯ ಮೊನೆಯಷ್ಟು ಮಣ್ಣನ್ನು ಕೂಡ ಕೊಡುವುದಿಲ್ಲವೆಂದು ಹೇಳಿದ್ದು ಹೇಗೆ ಉದಾಹರಣೆಯೋ ಹಾಗೆಯೇ ಬಾರ್ಡೋಲಿಯ ಪ್ರಜೆಗಳಿಗೆ, ಪುನಃ ಚವಕಶಿ ಮಾಡುವಂಥ ಅತ್ಯಲ್ಪ ಉದಾರಬುದ್ಧಿಯನ್ನು ತೋರಿಸದಿರುವುದೂ ಉತ್ಕೃಷ್ಟವಾದ ಉದಾಹರಣೆ. ಒಟ್ಟಿನಲ್ಲಿ, ಬಾರ್ಡೋಲಿಯ ಈ ಪ್ರಕರಣವೆಂದರೆ ಆಳರಸರ ಅನ್ಯಾಯವು ಎಷ್ಟು ಅಂಶಗಳವರೆಗೆ ಏರಿರುತ್ತದೆಂಬುದನ್ನು ಅಳೆಯುವ ಅನ್ಯಾಯ ಮಾಪಕ ಯಂತ್ರ.

ಬಾರ್ಡೋಲಿಯ ಪ್ರಜೆಗಳ ಬೇಡಿಕೆಯನ್ನು ಮಾನ್ಯಮಾಡಿದರೆ, ಅದರ ಸುಂಕವು ಮಿಕ್ಕಕಡೆಗೆ ಹಬ್ಬಿ, ತಾವು ಅನೇಕ ಕಡೆಗೆ ಸಂಕಟಗಳಿಗೀಡಾಗಬಹುದೆಂದು ಆಳರಸರಿಗೆ ಅಂಜಿಕೆ. ಆಹುದು. ಆ ಸುಂಕವು ಎಲ್ಲೆಡೆಗೆ ಹಬ್ಬಬೇಕೆಂದು ನಮ್ಮದೂ ಇಚ್ಛೆಯಿರುತ್ತದೆ. ಅದನ್ನು ನಾವು ಅಲ್ಲಗಳೆದು ಪ್ರಯೋಜನವಿಲ್ಲ. ಬಾರ್ಡೋಲಿಯ ನೆರವಿಗೆ ನಾವು ಧಾವಿಸಿ ಹೋಗುವುದಾದರೂ ಈ ಕಾರಣಕ್ಕೋಸ್ಕರವೇ. ಇದು ಕೇವಲ ಬಾರ್ಡೋಲಿ ಮತ್ತು ಮುಂಬಯಿ ಸರಕಾರ ಇವರೊಳಗಿನ ಸಂಗ್ರಾಮವಾಗಿದ್ದರೆ, ಮಿಕ್ಕ ಹಿಂದುಸ್ಥಾನವು ಅದರೊಳಗೆ ಕೈಹಾಕುವ ಕಾರಣವಿದ್ದಿಲ್ಲ. ಆದರೆ, ಇದು ಕೇವಲ ಬಾರ್ಡೋಲಿಯ ಪ್ರಶ್ನೆಯಲ್ಲ. ಬಾರ್ಡೋಲಿಯ ಪ್ರಜೆಗಳು ಈ ವಿಷಯದಲ್ಲಿ ಹಿಂದುಸ್ಥಾನದ ಧುರೀಣರು, ಅತಿರಥಿಗಳು ಮಹಾರಥಿಗಳು. ದೇ. ಪಟೇಲ ಇವರೇ ಮುಂತಾದ ಚಳವಳಗಾರರು ಬಾರ್ಡೋಲಿಯ ಜನರಿಗೆ ಚುಚ್ಚಿಕೊಟ್ಟು ಈ ಚಳವಳವನ್ನೆಬ್ಬಿಸಿದ್ದಾರೆಂದು ಆಳರಸರ ಅಂಬೋಣ. ಇದು ಮಾತ್ರ ಸರ್ವಥಾ ತಪ್ಪು. ಬಾರ್ಡೋಲಿಯ ರೈತರ ಬೇಡಿಕೆಯು ನ್ಯಾಯದ್ದೆಂದು ಮನವರಿಕೆಯಾದ ಕಾರಣವೇ ದೇ. ಪಟೇಲರು ಅವರ ಚಳವಳದ ಧುರೀಣತ್ವವನ್ನು ಅಂಗೀಕರಿಸಿದರು. ಹಾಗಿಲ್ಲದೆ ಕೇವಲ ಚಳವಳಗಾರರು ಚುಚ್ಚಿದ ಮಾತ್ರಕ್ಕೆ ಜನರು ತಮ್ಮ ಮನೆಮಾರು ಹೆಂಡಿರುಮಕ್ಕಳುಗಳಿಗೆಲ್ಲ ಎರವಾಗಲಿಕ್ಕೆ ಸಿದ್ಧರಾಗುವರೊ ? ಮನುಷ್ಯನು ಸಿಟ್ಟಿನ ಭರದಲ್ಲಿ ಜೀವವನ್ನು ಕೊಡಬಹುದು ಆದರೆ ಒಂದೇ ಸವನೆ ಶಾಂತರೀತಿಯಿಂದ ಕಷ್ಟಪಡುವುದು ಕಠಿನ. ಆಳರಸರಿಗೆ ಇಷ್ಟು ತಿಳಿಯಬಾರದೆಂದ ಬಳಿಕ ಅವರು ವಿವೇಕಭ್ರಷ್ಟರಾಗಿರುವರೆಂದು ನಿಃಸಂದೇಹವಾಗಿ ಹೇಳಬಹುದು. ಮಾನಾಪಮಾನದ ಸುಳ್ಳು ಆಡಂಬರವನ್ನು ಬಿಟ್ಟುಕೊಟ್ಟರೆ, ಈ ಪ್ರಶ್ನೆಯ ನಿರ್ಣಯವು ಕ್ಷಣಾರ್ಧದಲ್ಲಿ ಆಗುವುದು. ಹಾಗೆ ಮಾಡುವುದನ್ನು ಬಿಟ್ಟು ಆಳರಸರು ದಬ್ಬಾಳಿಕೆಯನ್ನವಲಂಬಿಸಿ ಮತ್ತಿಷ್ಟು ಅಡ್ಡ ಮಾರ್ಗ ಹಿಡಿಯುತ್ತಿರುವುದರಿಂದ, विवेकभ्रष्टानां भवति विनिपातः शतमुखः ವಿವೇಕಭ್ರಷ್ಟರಾದರೆಂದರೆ ಅವರ ವಿನಾಶವು ನೂರಾರು ತರಹದಿಂದಾಗುತ್ತದೆಂಬ ವಾಕ್ಯವು ಸ್ಮರಣೆಗೆ ಬರುತ್ತದೆ. ಬಾರ್ಡೋಲಿಯು ಆಳರಸರ ಡೋಲಿಯು ಎಷ್ಟು ಪೊಳ್ಳು ಇರುತ್ತದೆಂಬುದನ್ನು ತೋರಿಸುವುದೆಂಬುದನ್ನು ಅವರು ಸರ್ವಥಾ ಮರೆಯಬಾರದು.

---

## ಶ್ರೀ ವಿದ್ಯಾರಣ್ಯರೂ ಶ್ರೀ ಶಿವಾಜಿಯೂ

ಹೋದ ತಿಂಗಳಿನಲ್ಲಿ ಈ ಎರಡು ಮಹಾಪುರುಷರ ಸ್ಮರಣೆಯಾಗುವ ಎರಡು ಪ್ರಸಂಗಗಳೊದಗಿದವು. ಜ್ಯೇಷ್ಠ ವದ್ಯ ತ್ರಯೋದಶಿಯು ಶ್ರೀ ವಿದ್ಯಾರಣ್ಯರ ಪುಣ್ಯತಿಥಿ. ಜೂನ ೧೬ನೆಯ ತಾರೀಖಿನ ದಿವಸ, ಶ್ರೀ ಶಿವಾಜಿಯ ಉತ್ಕೃಷ್ಟವಾದ ಕಂಚಿನ ಪುತ್ಥಳಿಯ ಅನಾವರಣ ಸಮಾರಂಭವು ಪುಣೆಯಲ್ಲಿ ಮುಂಬಯಿ ಗವ್ಹರ್ನರರ ಇವರ ಹಸ್ತದಿಂದ ನೆರವೇರಿಸಲ್ಪಟ್ಟಿತು. ಈ ಕಂಚಿನ ಪುತ್ಥಳಿಯನ್ನು ಶ್ರೀ. ಆರ್. ಪಿ. ಕರಮ

ರಕರ ಎಂಬ ಅತ್ಯಂತ ಕುಶಲ ಶಿಲ್ಪಿಗರು ತಯಾರು ಮಾಡಿರುವರು. ಈ ಕಂಚಿನ ಮೂರ್ತಿಯು ೧೪ ಫೂಟು ಎತ್ತರವಿದ್ದು ಅದು ೧೮ ಫೂಟು ಎತ್ತರವಾದದ್ದೊಂದು ಚೌಕಿಯ ಮೇಲೆ ನಿಲ್ಲಿಸಲ್ಪಟ್ಟಿದೆ. ಈ ಕಂಚಿನ ಮೂರ್ತಿಯು, ಹಿಂದೀ ಮನುಷ್ಯನಿಂದಲೇ ತಯಾರಿಸಲ್ಪಟ್ಟಿರುವುದೆಂಬುದೊಂದು ಇದರ ವಿಶೇಷ. ಎರಕ ಹೊಯ್ಯಲ್ಪಟ್ಟ ಇಷ್ಟು ದೊಡ್ಡ ಕಂಚಿನ ಮೂರ್ತಿಯು ಹಿಂದುಸ್ಥಾನದಲ್ಲಿ ಬೇರೊಂದಿಲ್ಲ. ಶಿಲ್ಪಿಗನ ಕುಶಲತೆಯು ಬೊಟ್ಟುಕಚ್ಚುವಂಥದಿರುತ್ತದೆ. ಅಮೇರಿಕೆ ಮುಂತಾದ ಸ್ಥಳಗಳಿಂದಲೂ ಜನರು ಶ್ರೀ. ಕರಮರಕರರವರ ಕಡೆಯಿಂದ ಮೂರ್ತಿಗಳನ್ನು ಸಿದ್ಧಪಡಿಸಿಕೊಂಡು ತಮ್ಮ ದೇಶಕ್ಕೆ ಒಯ್ದಿರುವರು. ಶ್ರೀ ಶಿವಾಜಿಯ ಈ ಮೂರ್ತಿಯು ಭವ್ಯವಾದುದೂ ಗಂಭೀರವಾದುದೂ ಇರುತ್ತದೆ. ಅದನ್ನು ನೋಡಿದೊಡನೆಯೆ, ಶ್ರೀ ಶಿವಾಜಿಯು ಕೇವಲ ಒಬ್ಬ ವೀರಪುರುಷನಾಗಿರದೆ, ಉಚ್ಚತರ ಗತಿಯ ರಾಜಕಾರಣಧುರಂಧರನೂ ಆಗಿರುವನೆಂಬುದು ಗೊತ್ತಾಗುತ್ತದೆ. ಯಾವ ಶಿವಾಜಿಗೆ ಇಂಗ್ಲಿಷರು "ಗುಡ್ಡದ ಇಲಿ" ಎಂದು ಹೀಯಾಳಿಸುತ್ತಿದ್ದರೋ ಅದೇ ಶಿವಾಜಿಯ ಮೂರ್ತಿಯ ಅನಾವರಣ ಸಮಾರಂಭವನ್ನು ಗವ್ಹರ್ನರ ಸಾಹೇಬರು ಮಾಡುವುದೂ ಇಂಗ್ಲಂಡಿನ ಯುವರಾಜರು, ಆತನು ಒಳ್ಳೇ ಮುತ್ಸದ್ದಿಯೆಂದು ಹೊಗಳುವುದೂ ವಿಚಿತ್ರವೇ ಅಲ್ಲವೆ ? ಅಥವಾ ವಿಚಿತ್ರವೇನು ? ರಾಜಕಾರಣದಲ್ಲಿ ದ್ವಿಜಿಹ್ವೆಯುಳ್ಳವರೇ ಬಹಳ ಮಂದಿ. ಕಾರ್ಯಸಾಧುತ್ವವೇ ಅವರ ಮುಖ್ಯಗುಣ. ಆಗ, ಶಿವಾಜಿಯ ಹೆಸರಿನಿಂದ ಜನರಲ್ಲಿ ರಾಷ್ಟ್ರಾಭಿಮಾನವು ಉದಯವಾಗುವುದೆಂದು ಅದಕ್ಕೆ ಅಡ್ಡಬಂದರು. ಆದರೆ, ಆ ಪ್ರವಾಹಕ್ಕೆ ಒಡ್ಡು ಹಾಕುವುದಾಗುವುದಿಲ್ಲವೆಂದು !ತಿಳಿದೊಡನೆಯೆ, ಹಿಂದೀ ಜನರಲ್ಲಿಯ ಅಜ್ಞಜನರ ಮೋರೆಗೆ ಮಂಕುಬೂದಿಯನ್ನು ಬಡೆಯುವುದಕ್ಕೋಸ್ಕರ ಈಗ ಶಿವಾಜಿಯನ್ನು ಎತ್ತಿ ಹಿಡಿಯುತ್ತಿರುವರು. ಏನೇ ಇರಲಿ, ಶ್ರೀ ಶಿವಾಜಿಯ ಈ ಸುಂದರವಾದ ಮೂರ್ತಿಯು ತರುಣ ಹಿಂದುಸ್ಥಾನದ ಹೃದಯದಲ್ಲಿ ಸ್ವಾಭಿಮಾನದ ಲಹರಿಗಳನ್ನು ಹುಟ್ಟಿಸುವುದೆಂಬುದಕ್ಕೆ ಸಂದೇಹವಿಲ್ಲ.



ಶ್ರೀ ಶಿವಾಜಿ ಮಹಾರಾಜರು.

ಮಹಾಪುರುಷರು ಮುಂದೆ ಬರುವುದಕ್ಕೆ ಅವರ ವಂಶಜರಲ್ಲಿಯೂ ಸ್ವಾಭಿಮಾನವು ಉಂಟಾಗಿರಬೇಕಾಗುತ್ತದೆ. ಮಹಾರಾಷ್ಟ್ರದ ಜನರಲ್ಲಿ ತಮ್ಮ ಐತಿಹಾಸಿಕ ಮಹಾಪುರುಷರ ವಿಷಯವಾಗಿ ಅಭಿಮಾನ ಹುಟ್ಟಿರದಿದ್ದರೆ, ಆ ಮಹಾಪುರುಷರು ಇದ್ದೂ ಇಲ್ಲದಂತೆಯೇ ಸರಿ. ಆದಕಾರಣ, ಈ ವಿಷಯದಲ್ಲಿ, ಮಹಾರಾಷ್ಟ್ರದ ಜನರೂ ಸ್ತುತಿಗೆ ಪಾತ್ರರಿರುವರು. ಅವರು ಹಗಲಿರಳು ತಮ್ಮ ಈ ರಾಷ್ಟ್ರಪುರುಷನ ಗುಣಮಹಿಮೆಯನ್ನು ಹೊಗಳಿ, ಆತನ ಉತ್ಸವಗಳನ್ನು ಎಡೆಬಿಡದೆ ಮಾಡದಿದ್ದರೆ, ಶ್ರೀ. ಶಿವಾಜಿಯು ಇಂದಿಗೆ ಹೀಗೆ ಇಡೀ ಹಿಂದುಸ್ಥಾನದ ಪೂಜ್ಯಬುದ್ಧಿಗೆ ಪಾತ್ರನಾಗುತ್ತಿರಲಿಲ್ಲ. ಮಹಾರಾಷ್ಟ್ರದವರ ಈ ಸ್ವಾಭಿಮಾನವನ್ನು ನೋಡಿ, ನಮ್ಮ ಕನ್ನಡಿಗರು ನಾಚಬೇಕು. ವಸ್ತುತಃ ನೋಡಿದರೆ, ಶ್ರೀ ವಿದ್ಯಾರಣ್ಯ, ಹುಕ್ಕ, ಬುಕ್ಕ, ಇವರೇ ಮುಂತಾದವರು ಶ್ರೀ ರಾಮದಾಸ, ಶ್ರೀ ಶಿವಾಜಿ, ಇವರಿಗಿಂತಲೂ ತಿಲಪ್ರಾಯವೂ ಕಡಿಮೆಯವರಲ್ಲ. ಇಷ್ಟೇ ಅಲ್ಲ. ಶ್ರೀ ವಿದ್ಯಾರಣ್ಯರೂ ಹುಕ್ಕ ಬುಕ್ಕರೂ ಹಾಕಿಕೊಟ್ಟ ಮೇಲುಪಙ್ಕ್ತಿಯನ್ನೇ ಮುಂದೆ ಮರಾಟರು ತೀಡಿದ್ದಾರೆ. ಅಲ್ಲದೆ, ಇಡೀ ಹಿಂದುಸ್ಥಾನದಲ್ಲಿ ಪರಚಕ್ರದ ದಾಳಿಯನ್ನು ಎಲ್ಲಕ್ಕೂ ಮುಂಚೆ ತಡೆದು ಹಿಡಿದ ಮಾನವು ಯಾರಿಗಾದರೂ ಸಲ್ಲತಕ್ಕದ್ದಿದ್ದರೆ ಅದು ಈ ಶ್ರೀ ವಿದ್ಯಾರಣ್ಯ ಹುಕ್ಕ, ಬುಕ್ಕ ಇವ

ಗೇ ಸಲ್ಲತಕ್ಕದ್ದುಂಟು. ಈ ರೀತಿಯಿಂದ ನೋಡಿದರೆ, ಶ್ರೀ. ವಿದ್ಯಾರಣ್ಯರು ಶ್ರೀ. ರಾಮದಾಸರಂತೆಯೇ ಶ್ರೀ. ಶಿವಾಜಿಯ ಗುರುಗಳೆಂದರೂ ಸಲ್ಲುವುದು. ಈ ಪ್ರಕಾರವಾಗಿ ಅಸಾಮಾನ್ಯ ಪುರುಷರಾದ ಶ್ರೀ. ವಿದ್ಯಾರಣ್ಯರು ಕನ್ನಡಿಗರ ದುರ್ಲಕ್ಷ್ಯದಿಂದ, ಅಖಿಲ ರಾಷ್ಟ್ರಪುರುಷರ ಪಙ್ಕ್ತಿಯಲ್ಲಿ ಇನ್ನೂ ವರೆಗೆ ಬಂದಿಲ್ಲವೆಂಬುದು ನಮ್ಮ ದುರ್ದೈವವಲ್ಲವೆ ? ಇದಕ್ಕೆ ಕನ್ನಡಿಗರ ಸ್ವಾಭಿಮಾನಶೂನ್ಯತೆಯೂ ಔದಾಸೀನ್ಯವೂ, ಕಾರಣವಲ್ಲದೆ ಮತ್ತೇನು ?

ಆದರೆ, ಮತ್ತೊಂದು ದೃಷ್ಟಿಯಿಂದ ನೋಡಲು, ಕನ್ನಡಿಗರೇ ಸುದೈವಿಗಳೆಂದು ಹೇಳಬೇಕು. ಏಕೆಂದರೆ ಅವರಿಗೆ ಮಿಕ್ಕವರನ್ನು ಬಿಟ್ಟು ಶ್ರೀ ವಿದ್ಯಾರಣ್ಯರ ಉತ್ಸವವನ್ನೇ ಮಾಡಬೇಕೆಂಬ ಸ್ಫೂರ್ತಿಯು ಮುಂಚೆ ಹುಟ್ಟಿದೆ. ಶ್ರೀ ವಿದ್ಯಾರಣ್ಯರ ಉತ್ಸವವನ್ನು ಮಾಡುವುದು ಆಧ್ಯಾತ್ಮಿಕ ರಾಷ್ಟ್ರವಾದ ಹಿಂದೀ ರಾಷ್ಟ್ರದ ಮೂಲಸ್ವಭಾವಕ್ಕೆ ಹೆಚ್ಚು ಅನುಗುಣವಾದುದು. ಅಲ್ಲದೆ, ಕರ್ನಾಟಕಕ್ಕೆ ಶ್ರೀ ವಿದ್ಯಾರಣ್ಯರ ಉತ್ಸವವನ್ನು ಮಾಡುವ ಸ್ಫೂರ್ತಿಯಾಗಿರುವುದು ಕರ್ನಾಟಕದ ಆಧ್ಯಾತ್ಮಿಕ ಶ್ರೇಷ್ಠತೆಗೆ ಹೆಚ್ಚು ಒಪ್ಪುತ್ತದೆ. ಹಿಂದುಸ್ಥಾನವು ಕೇವಲ ಆಧ್ಯಾತ್ಮಿಕ ವಿಚಾರದಲ್ಲಿ ಮಗ್ನವಾದ ದೇಶವು, ಆದಕ್ಕೆ ಭೌತಿಕ ಜಗತ್ತಿನ ವಿಚಾರವೇ ಇಲ್ಲವೆಂಬುದಕ್ಕೆ ಶ್ರೀ ವಿದ್ಯಾರಣ್ಯರ ಚರಿತೆಯು ನಿರುತ್ತರವಾದ ಉತ್ತರವಾಗಿದೆ. ಶ್ರೀ ವಿದ್ಯಾರಣ್ಯರು ಸ್ವತಃ ಸನ್ಯಾಸಿಗಳು, ಜಗದ್ಗುರುಪೀಠಸ್ಥರು, ಮೇಲಾಗಿ ಅದ್ವೈತವೇದಾಂತದ ಪುನರುದ್ಧಾರಕರು. ಹೀಗಿದ್ದು, ಹಿಂದುಸ್ಥಾನವು ಹಿಂದೂಧರ್ಮವು ಶತ್ರುಗಳ ದವಡೆಯಲ್ಲಿ ಸಿಕ್ಕಾಗ, ಅವರು 'ಸೋಽಹಂ ಬ್ರಹ್ಮ' 'ಸೋಽಹಂ ಬ್ರಹ್ಮ' ವೆಂದು ಸ್ವಸ್ಥವಾಗಿ ಕುಳಿತುಕೊಳ್ಳದೆ, ಹುಕ್ಕಬುಕ್ಕರಂಥ ಸಾಹಸ ಪುರುಷರಿಗೆ ಪ್ರೇರಣೆಮಾಡಿ ವಿಜಯನಗರದಲ್ಲಿ ಸ್ವರಾಜ್ಯವನ್ನು ಸ್ಥಾಪಿಸಿ, ಕರ್ನಾಟಕಸಿಂಹಾಸನಸ್ಥಾಪನಾಚಾರ್ಯರೆಂದು ಕರೆಯಿಸಿಕೊಂಡರು. ಹಿಂದುಸ್ಥಾನವು ಅವರ ಉಜ್ವಲ ಚರಿತ್ರೆಯ ಅಭ್ಯಾಸವನ್ನು ಮಾಡಿದರೆ, ರಾಜಕಾರಣದಲ್ಲಿಯ ಅನೇಕ ತೊಡಕಿನ ಪ್ರಶ್ನೆಗಳು ಬಿಡಲ್ಪಡುವವೆಂದು ನಮಗೆ ಭರವಸವುಂಟು. ಇಂಥ ಶ್ರೀ ವಿದ್ಯಾರಣ್ಯರ ಪುಣ್ಯತಿಥಿಯು ಕರ್ನಾಟಕದ ಪ್ರಮುಖಸ್ಥಳಗಳಲ್ಲಿ ಜರುಗಹತ್ತಿರುವುದು ಜಾಗೃತಿಯ ಪೂರ್ವಚಿಹ್ನವು. ಬರಬರುತ್ತ ಇಡೀ ಹಿಂದುಸ್ಥಾನದಲ್ಲಿ ಅವರ ಉತ್ಸವವು ಪ್ರತಿಯೊಂದು ಕಡೆಗೆ ಜರುಗಿ, ಕರ್ನಾಟಕ ಮಾತ್ರವೇ ಅಲ್ಲ, ಇಡೀ ಹಿಂದುಸ್ಥಾನವು ಕೂಡಿ, ಅವರ ಸ್ಮಾರಕವನ್ನು ಮಾಡುವ ಸುದಿವಸಗಳು ಬರಲೆಂದು ನಾವು ಹಾರೈಸುತ್ತೇವೆ. ನಮ್ಮ ಪುಣ್ಯ ಬಲದಿಂದ, ಶ್ರೀ ವಿದ್ಯಾರಣ್ಯರ ಬಣ್ಣದ ಪ್ರತ್ಯಕ್ಷ ಚಿತ್ರವೂ ಹಂಪೆಯ ವಿರೂಪಾಕ್ಷದೇವರ ಗುಡಿಯಲ್ಲಿ ನಮಗೆ ದೊರೆತಿದೆ. ಅದು ಮಾಸಿದ್ದರೂ, ಅವರ ಹೋಲಿಕೆಯ ಮೇಲೆ, ಯಾವನೊಬ್ಬ ಕುಶಲ ಚಿತ್ರಗಾರನು ಅವರ ಉತ್ಕೃಷ್ಟವಾದ ಚಿತ್ರವನ್ನು ಬರೆದರೆ ಇಡೀ ಹಿಂದುಸ್ಥಾನದ ಮೇಲೆ ಬಹಳ ಉಪಕಾರಮಾಡಿದಂತಾಗುವುದು.

ಕರ್ನಾಟಕದಲ್ಲಿ ಶ್ರೀ ವಿದ್ಯಾರಣ್ಯರಲ್ಲದೆ ಅನೇಕ ಮಹಾಪುರುಷರು ಹುಟ್ಟಿ ಕಾರ್ಯಮಾಡಿರಲಿಲ್ಲವೆ ? ಅವರೆಲ್ಲರನ್ನು ಬಿಟ್ಟು, ಮುಂಚೆ ಶ್ರೀ ವಿದ್ಯಾರಣ್ಯರ ಉತ್ಸವವನ್ನೇ ಹೂಡಲು ಕಾರಣವೇನು—ಎಂಬದಾಗಿ ಕೆಲವರು ಶಂಕಿಸಬಹುದು. ಅವರಿಗೆ ನಮ್ಮ ಉತ್ತರವೇನೆಂದರೆ—ಅಹುದು, ಕರ್ನಾಟಕದಲ್ಲಿ ಅನೇಕ ವೀರರೂ ಧಾರ್ಮಿಕ ಪುರುಷರೂ ಆಗಿಹೋಗಿರುವರು. ಆದರೂ ಮುಂಚೆ ಶ್ರೀ ವಿದ್ಯಾರಣ್ಯರೇ ಕರ್ನಾಟಕದ ಕಣ್ಣ ಮುಂದೆ ಬಂದು ನಿಲ್ಲುವುದಕ್ಕೆ ಹಾಗೆ ವಿಶೇಷ ಕಾರಣಗಳುಂಟು. ಈಗ ನಾವು ಪರರಾಜರ ಆಳುಕಿನಲ್ಲಿ ಸಿಕ್ಕಿರುತ್ತೇವೆ. ಅವರ ಆಳುಕಿನಿಂದ ಪಾರಾಗಬೇಕೆಂಬ ಲವಲವಿಕೆಯು ಮಿಕ್ಕ ಎಲ್ಲ ಲವಲವಿಕೆಗಳಿಗಿಂತ ತೀಕ್ಷ್ಣವಾಗಿರುತ್ತದೆ. ಆದುದರಿಂದಲೇ, ನಮಗೆ ಎಲ್ಲಕ್ಕೂ ಮುಂಚೆ ಶ್ರೀ ವಿದ್ಯಾರಣ್ಯರ ನೆನಪಾಯಿತು. ಪಾರತಂತ್ರ್ಯದಿಂದ ಹಿಂದುಸ್ಥಾನವನ್ನು ಮೊಟ್ಟಮೊದಲು ಪಾರುಮಾಡಿದ ಧೀರನೆಂದರೆ ಶ್ರೀ ವಿದ್ಯಾರಣ್ಯನೇ, ರಾಷ್ಟ್ರೀಯ ಉತ್ಸವಗಳನ್ನು ಮಾಡುವ ಮುಖ್ಯ ಉದ್ದೇಶವು ಆಯಾಕಾಲಕ್ಕೆ ತಕ್ಕಂತೆ ಸಮಾಜದಲ್ಲಿ ಚೈತನ್ಯವನ್ನುಂಟು ಮಾಡುವುದೇ ಇರುತ್ತದೆ. ಆ ದೃಷ್ಟಿಯಿಂದ, ಈಗಿನ ದಿನಗಳಲ್ಲಿ ಶ್ರೀ. ವಿದ್ಯಾರಣ್ಯರ ಉತ್ಸವದಿಂದ ದೊರೆಯುವಷ್ಟು ಸ್ಫೂರ್ತಿಯು ಮತ್ತಾರ ಉತ್ಸವದಿಂದಲೂ ಉಂಟಾಗುವುದಿಲ್ಲವೆಂದು ನಿಃಸಂದೇಹವಾಗಿ ಹೇಳಬಹುದು. ಶ್ರೀ ವಿದ್ಯಾರಣ್ಯರಲ್ಲಿ ಆಧ್ಯಾತ್ಮಿಕಶಕ್ತಿಯು ಪ್ರಾಧಾನ್ಯವಾಗಿರುವುದರಿಂದ ವಜ್ರಕ್ಕೆ ಕುಂದಣಕೂಡಿಸಿದಂತಾಗಿರುತ್ತದೆ. ಶ್ರೀ ವಿದ್ಯಾರಣ್ಯರ ಈ ಉತ್ಸವವನ್ನು ಮಾಡುವುದು ಅವರು ಕೇವಲ ಅದ್ವೈತಿಗಳಿರುತ್ತಾರೆಂದಲ್ಲ, ಅಥವಾ ಅವರು ವೇದಕ್ಕೆ ಪ್ರಚಂಡವಾದ ಭಾಷ್ಯ ಬರೆದರೆಂದಲ್ಲ, ಅಥವಾ, ಅವರು ಆರಿಸ್ಟಾಟಲನಂತೆ ವಿವಿಧ ವಿಷಯಗಳಲ್ಲಿ ಅದ್ವಿತೀಯವಾದ ಗ್ರಂಥಗಳನ್ನು ಬರೆದರೆಂತಲ್ಲ, ಆದರೆ ಅವರು ಮುಖ್ಯವಾಗಿ, ಪಾರತಂತ್ರ್ಯಪಂಕದಲ್ಲಿ ಬಿದ್ದ

ಹಿಂದುಸ್ಥಾನವನ್ನು ಎತ್ತಿ ತೆಗೆದರೆಂಬ ಕಾರಣದಿಂದ. ಆದ ಕಾರಣ, ಶ್ರೀ ವಿದ್ಯಾರಣ್ಯರ ಈ ಉತ್ಸವವು ಜಾತಿ ಮತಗಳಿಗೆ ಸಂಬಂಧಿಸಿದ್ದಲ್ಲ, ಇದರಲ್ಲಿ ದ್ವೈತಾದ್ವೈತವು ಅಡ್ಡಬರುವ ಕಾರಣವಿಲ್ಲ. ಆಯಾಮತದ ಅಥವಾ ಧರ್ಮದ ಜನರು ಅವರ ಧಾರ್ಮಿಕ ಅಥವಾ ಗ್ರಾಂಥಿಕ ಕಾರ್ಯಕ್ಕೋಸ್ಕರ ಹೆಚ್ಚಿನ ಅಭಿಮಾನವನ್ನು ಪಡೆದರೆ ಪಡೆಯಲಿ. ಬೇಡವೆಂತಲ್ಲ. ಕರ್ನಾಟಕವು ಈ ಉತ್ಸವವನ್ನು ಯಾವ ದೃಷ್ಟಿಯಿಂದ ಮಾಡುತ್ತದೆಂಬುದನ್ನು ಹೇಳುವುದೇ ನಮ್ಮ ಮುಖ್ಯ ಉದ್ದೇಶವು. ಶ್ರೀ ಶಂಕರ, ಶ್ರೀ ಮಧ್ವ ಶ್ರೀ ಬಸವೇಶ್ವರ ಇವರೇ ಮುಂತಾದ ಧಾರ್ಮಿಕ ಪುರುಷರ ಉತ್ಸವಗಳನ್ನು ಆಯಾಮತದವರು ಅಥವಾ ಸಂಗಡದವರು ಮಾಡೇ ಮಾಡುತ್ತಾರೆ, ಅವರೆಲ್ಲರೂ ಕರ್ನಾಟಕದ ವಿಭೂತಿಗಳೆಂಬ ದೃಷ್ಟಿಯಿಂದ ಆ ಉತ್ಸವಗಳಲ್ಲಿ ಆದಷ್ಟುಮಟ್ಟಿಗೆ ಭಾಗತೆಗೆದುಕೊಳ್ಳುವುದು ಪ್ರತಿಯೊಬ್ಬ ಕನ್ನಡಿಗನ ಕರ್ತವ್ಯವೇ ಆಗಿದೆ. ಆದರೆ, ಶ್ರೀ ವಿದ್ಯಾರಣ್ಯರ ಉತ ವವು ಜಾತಿ ಮತ ಪಂಥಗಳ ಮರ್ಯಾದೆಯನ್ನು ಮೀರಿದ್ದಿರುತ್ತದೆ. ಇನ್ನು ರಾಜಕಾರಣದಲ್ಲಿಯೇ ಕಾರ್ಯಮಾಡಿದ ಮಿಕ್ಕ ಅನೇಕ ವೀರವಿಭೂತಿಗಳೂ ಉಂಟು. ಇಲ್ಲವೆಂತಿಲ್ಲ. ಇಷ್ಟೇ ಅಲ್ಲ, ಹುಕ್ಕಬುಕ್ಕ ಪುಲಿಕೇಶಿ, ಗೋವಿಂದ, ವಿಕ್ರಮಾಂಕ ಕೃಷ್ಣದೇವರಾಯ ಮುಂತಾದ ಅನೇಕ ವೀರಪುರುಷರೂ ಕರ್ನಾಟಕಕ್ಕೆ ಉಂಟು. ಅದೇಮೇರೆಗೆ ಶ್ರೀ ವ್ಯಾಸರಾಯ ಸ್ವಾಮಿಗಳಂಥವರು ವಿದ್ಯಾರಣ್ಯರಂತೆಯೇ ಧರ್ಮ ಮತ್ತು ರಾಜಕಾರಣ-ಹೀಗೆ ಉಭಯ ವಿಷಯಗಳಲ್ಲಿ ಕಾರ್ಯಮಾಡಿ ಖ್ಯಾತಿಪಡೆದವರೂ ಉಂಟು. ಆದಿಪಂಪ ಜೈಮಿನಿಷಡಕ್ಷರಿಯಂಥ ಸಾಹಿತ್ಯಚಕ್ರವರ್ತಿಗಳೂ ಉಂಟು. ಇಂಥ ರಾಷ್ಟ್ರಿಯ ಪುರುಷರ ಉತ್ಸವಗಳು ಎಷ್ಟು ಹೆಚ್ಚಿಗೆ ಆಗುವುವೋ ಅಷ್ಟು ದೇಶಕ್ಕೆ ಕಲ್ಯಾಣಕರವೇ. ಆದರೆ, ಎಲ್ಲ ದೃಷ್ಟಿಯಿಂದ ವಿಚಾರಮಾಡಿ ನೋಡಿದರೆ, ಈಗಿನ ಕಾಲದಲ್ಲಿ, ಕರ್ನಾಟಕವು ಎಲ್ಲಕ್ಕೂ ಮುಂಚೆ ಶ್ರೀ ವಿದ್ಯಾರಣ್ಯರ ಉತ್ಸವವನ್ನೇ ಪ್ರಾರಂಭ ಮಾಡಿದುದು ವಿಹಿತವಾದುದೆಂಬ ಯಾರೂ ಒಪ್ಪಲಿದಿರಕ್ಕಿಲ್ಲ. ಲೋಕಮಾನ್ಯರು ಶ್ರೀ ಶಿವಾಜಿಯ ಉತ್ಸವವನ್ನು ಪ್ರಾರಂಭಮಾಡಿದುದು ಆತನು ಮರಾಠಿ ಜಾತಿಯವನೆಂದಲ್ಲ, ಮಹಾರಾಷ್ಟ್ರದ ಉದ್ಧಾರಕನೆಂದು ಕೇವಲ ಭೇದಭಾವಗಳನ್ನೆಣಿಸುತ್ತ ಹೋದರೆ ಯಾವ ರಾಷ್ಟ್ರಕ್ಕೂ ಸರ್ವಮತಗಳಿಗೂ ಪಂಥಗಳಿಗೂ ಸಂಗಡಗಳಿಗೂ ಸಮಾನನಾಗಿರುವ ಯಾವನೂ ರಾಷ್ಟ್ರೀಯ ವಿಭೂತಿಯು ದೊರಕಲಾರನು. ಆದುದರಿಂದ, ಸರ್ವರೂ ಯಾವ ತರಹದ ಭೇದ ಭಾವವನ್ನೂ ಲಕ್ಷದಲ್ಲಿ ತಾರದೆ ಶ್ರೀ ವಿದ್ಯಾರಣ್ಯರ ಉತ್ಸವವನ್ನು ಪ್ರತಿವರ್ಷ ಜರುಗಿಸಿ ತರುಣರಲ್ಲಿ ಚೈತನ್ಯವನ್ನು ತುಂಬುವರೆಂದು ನಂಬುತ್ತೇವೆ.

---

## ಹಿಂದುಸ್ಥಾನೀ ಸೇವಾದಲವೂ ಕರ್ನಾಟಕವೂ

ಡಾ॥ ನಾರಾಯಣ ಸುಬ್ಬರಾವ ಹರ್ಡೀಕರ ಇವರು ಕರ್ನಾಟಕದ ತರುಣರಲ್ಲಿ ಹೊಸ ಹುರುಪನ್ನು ಹುಟ್ಟಿಸುತ್ತಿರುವುದು ಈಗ ಎಲ್ಲರಿಗೂ ತಿಳಿದ ವಿಷಯವೇ ಆಗಿದೆ. ಡಾ॥ ಹರ್ಡೀಕರರವರ ಮುಖ್ಯ ಧ್ಯೇಯವು ಹಿಂದುಸ್ಥಾನದ ತರುಣರಲ್ಲಿಯ ತೇಜವನ್ನು ಬೆಳಿಸುವುದು. ಹಿಂದುಸ್ಥಾನದ ಭವಿತವ್ಯತೆಯು ತರುಣರನ್ನೇ ಅವಲಂಬಿಸಿರುತ್ತದೆಂಬುದು ನಿರ್ವಿವಾದವಿದೆ. ಆದಕಾರಣ, ಡಾ॥ ಹರ್ಡೀಕರರವರು ಕೈಕೊಂಡ ಕಾರ್ಯಕ್ಕೆ ಸಹಾಯ ಮಾಡುವುದು ಪ್ರತಿಯೊಬ್ಬರ ಕರ್ತವ್ಯವಾಗಿದೆ. ಅವರ ಕರ್ನಾಟಕದ ಸೇವಾದಳದ ಸ್ವಯಂಸೇವಕರು ದಿನ ದಿನಕ್ಕೆ ಹೆಚ್ಚಿಗೆ ಚಟುವಟಿಕೆಯನ್ನು ತೋರಿಸ ಹತ್ತಿ, ಕರ್ನಾಟಕದ ಸೇವೆಯನ್ನೂ ಹಿಂದುಸ್ಥಾನದ ಸೇವೆಯನ್ನೂ ದಿನ ದಿನಕ್ಕೆ ಹೆಚ್ಚು ಹೆಚ್ಚಿಗೆ ಹುರುಪಿನಿಂದ ಮಾಡುತ್ತಿರುವುದು ಆನಂದದ ಮಾತು. ಕರ್ನಾಟಕದ ಏಕೀಕರಣದ ಪತ್ರಿಕೆಗೆ ಸಹಿತೆಗೆದುಕೊಳ್ಳುವುದು, ರಾಷ್ಟ್ರೀಯ ಸಭೆಗೆ ಸದಸ್ಯರನ್ನು ಕೂಡಿಸುವುದು ಇವೇ ಮುಂತಾದ ಕಾರ್ಯಗಳನ್ನು ಕರ್ನಾಟಕ ಸೇವಾದಲದವರು ಎಷ್ಟು ಉತ್ಸಾಹದಿಂದ ಮಾಡಿದರೆಂಬುದು ಯಾರಿಗೆ ಗೊತ್ತಿಲ್ಲ? ಮೇ ತಿಂಗಳ ಕೊನೆಗೆ ಈ ಸೇವಾದಳದವರು ತೀರ್ಥಹಳ್ಳಿಯಲ್ಲಿ ಪರಶುರಾಮ ಸ್ವಯಂಸೇವಕ ಶಿಕ್ಷಣ ಶಿಬಿರವನ್ನು, ಪಂಡಿತ ತಾರಾನಾಥರವರ ಹಸ್ತದಿಂದ ಪ್ರಾರಂಭಮಾಡಿಸಿದರು. ಆ ಶಿಬಿರದಲ್ಲಿ, ಸ್ವಯಂಸೇವಕರಿಗೆ ಕಿರಿಗತ್ತಿ ಛಲ್ಲೆ, ದೊಣ್ಣೆ, ಲೇಝಿಮ್, ಆಸನ, ಮಲ್ಲಕಂಬ ಮೊದಲಾದ ಶಾರೀರಿಕ ವ್ಯಾಯಾಮಗಳೂ ಕಾಂಗ್ರೆಸದ ಇತಿಹಾಸ ಹಿಂದುಸ್ಥಾನದ ಇತಿಹಾಸ, ಕರ್ನಾಟಕದ ಇತಿಹಾಸ ಭೂಗೋಲು ಬ್ರಹ್ಮಚರ್ಯ ಮುಂತಾದ ಮಾನಸಿಕ ವಿಷಯಗಳೂ ಕಲಿಸಲ್ಪಟ್ಟವು. ಶ್ರಿಂಗೇರಿ ಮುಂತಾದ ಐತಿಹಾಸಿಕ ಸ್ಥಳಗಳನ್ನು ನೋಡಲಿಕ್ಕೆ ಸ್ವಯಂಸೇವಕರು ಹೋಗಿ ಬಂದರು; ಈ ಶಿಕ್ಷಣದ ಉಪಸಂಹಾರದ ಉತ್ಸವಕ್ಕೆ ವಿಶ್ವಕರ್ನಾಟಕದ ಸಂಪಾದಕರಾದ ಶ್ರೀ. ತಾತ್ಯಾಚಾರ್ಯಶರ್ಮರವರು ಹೋಗಿದ್ದರು. ಸೇವಾದಲದವರ ಈ ಚಳವಳವು ಮುಗಿಯುವಷ್ಟರಲ್ಲಿಯೇ ಬಾಗಲಕೋಟೆಯಲ್ಲಿ ಸೇವಾದಲದ ಭವ್ಯವಾದ ಕಟ್ಟಡ

...ನ್ನು ಕಟ್ಟುವುದು ಮುಗಿದಿರುವುದರಿಂದ, ಬರುವ ಆಗಸ್ಟ ...ಗಳ ಪ್ರಾರಂಭಕ್ಕೆ ಆ ಕಟ್ಟಡದ ಪ್ರಾರಂಭೋತ್ಸವವನ್ನು ...ಗಿಸುವುದನ್ನು ಅವರು ಗೊತ್ತುಮಾಡಿರುವರು. ಆ ...ಲಕ್ಕೆ ಸುಮಾರು ೪-೫ ನೂರು ಸ್ವಯಂಸೇವಕರ ...ಳವು ಅಲ್ಲಿ ಕೂಡತಕ್ಕದ್ದಿದ್ದು ವಿವಿಧ ಗರಡೀ ಆಟಗಳು ...ಯುವುವು. ಅಲ್ಲದೆ, ಗರಡೀಸಾಧನಗಳ ಪ್ರದರ್ಶನ, ...ಕ ಪ್ರದರ್ಶನ, ಒಕ್ಕಲತನದ ಪ್ರದರ್ಶನ, ಪತ್ರಿಕೆ ...ರ್ಶನ ಇವೇ ಮುಂತಾದ ಅನೇಕ ಪ್ರದರ್ಶನಗಳನ್ನೂ ...ರ ಪರಿಷತ್ತೇ ಮುಂತಾದ ಸಭೆಗಳನ್ನೂ ಕೂಡಿಸುವ ...ಮಾಡಲ್ಪಟ್ಟದೆ. ಮುಂದಿನ ತಿಂಗಳಿನಲ್ಲಿ ಅಲ್ಲಿ ದೊಡ್ಡ ...ಯೇ ಕೂಡತಕ್ಕದ್ದಿದೆ. ಕುಸ್ತಿಗಳ ಏರ್ಪಾಡೂ ಮಾಡ ...ದೆ. ಹೀಗೆ, ಕರ್ನಾಟಕ ಸೇವಾದಲದವರು ಅನೇಕ ಬಗೆ ...ಗಿ ರಾಷ್ಟ್ರೀ ಕಾರ್ಯಗಳನ್ನು ಕೈಕೊಂಡು ಜನರಲ್ಲಿ ಜಾಗ್ರ ...ನ್ನುಂಟು ಮಾಡುತ್ತಿರುವುದು ಅಭಿನಂದನೀಯವೇ ಸರಿ.

---

## ಕರ್ನಾಟಕದ ಚಳವಳಗಳು

ಹೋದ ತಿಂಗಳಿನ ಇಡೀ ಕರ್ನಾಟಕದ ಹಿತಕ್ಕೆ ಸಂಬಂಧಿ...ದ ಮಹತ್ವದ ಸಂಗತಿಗಳ ಎರಡು (೧) ನೀಲಗಿರಿಯಲ್ಲಿ ಶ್ರೀ ...ನಿವಾಸರಾವ ಮಂಗಳವೇಡೆ ಮತ್ತು ಶ್ರೀ. ಯು. ರಾಮ...ನ ಮದ್ರಾಸ ಇವರು ಅಲ್ಲಿಯ ಕನ್ನಡಿಗರನ್ನು ಎಚ್ಚರ...ಸಲಿಕ್ಕೆ ಮಾಡಿದ ಚಳವಳವು. (೨) ಶ್ರೀ. ದಿವಾಕರ...ವರು ಯಾವತ್ತೂ ಪಂಗಡಗಳ ಪರಿಷತ್ತಿನೆದುರಿಗೆ ಕರ್ನಾ...ಕ ಏಕೀಕರಣದ ಪ್ರಶ್ನೆಯನ್ನಿಟ್ಟು ಕರ್ನಾಟಕದ ಏಕೀಕರ...ಕ್ಕೆ ಆ ಪರಿಷತ್ತನ್ನು ಅನುಕೂಲಪಡಿಸಿಕೊಂಡಿರುವುದು. ...ಲಗಿರಿ, ಸೇಲಂ, ಕೊಯಿಮುತ್ತೂರ ಮುಂತಾದ ಜಿಲ್ಹೆಗಳಲ್ಲಿ ...ನ ಕನ್ನಡಿಗರು ಒಳ್ಳೇ ಕಠಿನ ಪರಿಸ್ಥಿತಿಯಲ್ಲಿರುವರು. ಅವ...ಲ್ಲಿ ಸ್ವಾಭಿಮಾನವನ್ನು ಜಾಗ್ರತಗೊಳಿಸಿ, ಅವರಿಗೆ ನೆರವಾಗು...ದು. ಕನ್ನಡಿಗರ ಕರ್ತವ್ಯವು. ಶ್ರೀ. ಶ್ರೀನಿವಾಸರಾವ ...ಗಳವೇಡೆ ಮತ್ತು ನಾಮದಾರ ಯು. ರಾಮರಾವ ಇವರು ...ಳ ಪರಿಶ್ರಮಪಟ್ಟು ಅಲ್ಲಿ ಜಾಗ್ರತೆಯನ್ನುಂಟು ಮಾಡಿರು...ರು ಅವರ ಪ್ರಯತ್ನಕ್ಕೆ ಅಲ್ಲಿಯ ಅನೇಕ ಮುಖಂಡರ ...ಬಲವಿಲ್ಲದಿದ್ದರೆ, ಇವರಿಂದ ಕಾರ್ಯವಾಗುವುದು ಅಸಾ...ವೇ ಆಗುತ್ತಿತ್ತು. ಆದಕಾರಣ, ನಾವು ಇವರಿಗೆ ಸಹಾಯ ...ಮಾಡಿದ ಅಲ್ಲಿಯ ಯಾವತ್ತು ಸದ್ಗೃಹಸ್ಥರನ್ನು ಅಂತಃಕರಣ ಪೂರ್ವಕವಾಗಿ ಅಭಿನಂದಿಸುತ್ತೇವೆ. ಇನ್ನು ಎರಡನೆಯ ಚಳ ವಳವೆಂದರೆ ಕರ್ನಾಟಕ ಏಕೀಕರಣದ ಚಳವಳವು. ಮುಂಬಯಿ ಯಲ್ಲಿ ಕೂಡಿದ ಸರ್ವಪಕ್ಷೀಯ ಪರಿಷತ್ತಿನವರು ಒಂದು ಉಪಮಂಡಲವನ್ನು ನೇಮಿಸಿದ್ದರು. ಆ ಉಪಮಂಡಳದ ಸಭೆ ಅಲ್ಹಾಬಾದಿನಲ್ಲಿ ಕೂಡಿತ್ತು. ಕರ್ನಾಟಕ ಪ್ರಾಂತಿಕ ಕಾಂಗ್ರೆಸ ಕಮೀಟಿಯವರೂ ಕರ್ನಾಟಕ ಏಕೀಕರಣ ಸಂಘ ದವರೂ ತಮ್ಮ ಪ್ರತಿನಿಧಿಗಳನ್ನಾರಿಸಿದ್ದರು. ಆದರೆ, ಅನಾನು ಕೂಲತೆಯ ಮೂಲಕ ಶ್ರೀ. ರಂಗರಾವ ದಿವಾಕರ ಇವರ ಹೊರ್ತಾಗಿ ಮತ್ತಾರಿಗೂ ಪ್ರತ್ಯಕ್ಷ ಹೋಗುವುದು ಆಗಲಿಲ್ಲ. ಭಾವೀ ಅಖಂಡ ಕರ್ನಾಟಕದ ನಕಾಶೆಯೂ ಕರ್ನಾಟಕದ ಏಕೀಕರಣದ ಪ್ರಶ್ನೆಯನ್ನು ತಿಳಿದುಕೊಳ್ಳುವುದಕ್ಕೆ ಬೇಕಾಗಿ ರುವ ಅನ್ಯ ಸಾಮಗ್ರಿಗಳೂ ಮುಂಚಿತವಾಗಿಯೇ ಕಳುಹಲ್ಪ ಟ್ಟಿದ್ದುವು. ಕರ್ನಾಟಕ ಏಕೀಕರಣವೆಂದರೆ ಬ್ರಿಟಿಶ್ ಕರ್ನಾಟ ಕದ ಭಾಗವನ್ನಷ್ಟೇ ಒಂದುಗೂಡಿಸುವುದು. ಇದು ಕರ್ನಾ ಟಕದಲ್ಲಿ ಎಲ್ಲರಿಗೂ ಬೇಕಾಗಿದೆ. ಈ ವಿಷಯದಲ್ಲಿ ಕರ್ನಾಟಕ ದಲ್ಲಿ ಐಕಮತ್ಯವಿರುತ್ತದೆಂಬುದನ್ನು ಶ್ರೀ. ದಿವಾಕರರವರು ಉಪಮಂಡಲಕ್ಕೆ ಸ್ಪಷ್ಟವಾಗಿ ತಿಳಿಸಿ ಹೇಳಿದರು. ಅದೇ ಮೇರೆಗೆ ಭಾವೀ ಕರ್ನಾಟಕ ಪ್ರಾಂತದ ಉತ್ಪನ್ನವು ಸಾಕಷ್ಟು ಇರುವುದೇದೂ ಅದರಿಂದ ಆಡಳಿತದ ವೆಚ್ಚವು ಹೊರಟು ಹೋಗುವುದಲ್ಲದೆ ಉಳಿತಾಯವಾಗುವುದೆಂದೂ ಅವರು ಸರ ಕಾರದ ಅಂಕಿಗಳಿಂದಲೇ ಚೆನ್ನಾಗಿ ಸಿದ್ಧಪಡಿಸಿ ತೋರಿಸಿದರು. ಕರ್ನಾಟಕದ ಇತಿಹಾಸವನ್ನು ಹೇಳಿ, ಕರ್ನಾಟಕವು ತನ್ನನ್ನು ತಾನು ಆಳುವುದಕ್ಕೆ ಹೇಗೆ ಯೋಗ್ಯವಿರುತ್ತದೆಂಬುದನ್ನೂ ಕರ್ನಾಟಕವು ಛಿನ್ನವಿಚ್ಛಿನ್ನವಾಗಿದ್ದರಿಂದ, ಕರ್ನಾಟಕಕ್ಕೆ ಹೇಗೆ ಹಾನಿ ತಗಲುತ್ತಿರುತ್ತದೆಂಬುದನ್ನೂ ತಿಳಿಸಿದರು. ಉಪ ಮಂಡಳದವರು ಸಮಾಧಾನ ಪಟ್ಟು, ಹಿಂದುಸ್ಥಾನದ ಭಾವೀ ರಾಜ್ಯಘಟನೆಯನ್ನು ಸಿದ್ಧಪಡಿಸುವ ಯೋಜನೆಯಲ್ಲಿ ಕರ್ನಾ ಟಕಕ್ಕೆ ಪ್ರತ್ಯೇಕ ಪ್ರಾಂತದ ಅವಶ್ಯಕತೆಯಿರುತ್ತದೆಂಬುದನ್ನು ಶ್ರೀ ದಿವಾಕರರವರು ಚೆನ್ನಾಗಿಯೇ ಸಿದ್ಧಮಾಡಿ ತೋರಿಸಿರುವು ದರಿಂದ, ಆ ಬಗ್ಗೆ ಅವಶ್ಯವಿಚಾರಮಾಡಲಾದೀತೆಂದು ಬರೆದು ಇಟ್ಟುಕೊಂಡಿರುವರು. ಈ ಮಹತ್ವದ ಕಾರ್ಯವನ್ನು ಮಾಡಿದ ಬಗ್ಗೆ ನಾವು ಶ್ರೀ. ದಿವಾಕರರವರನ್ನು ಅಭಿನಂದಿಸುತ್ತೇವೆ. ಭಾವೀ ಕರ್ನಾಟಕ ಪ್ರಾಂತದ ಸಾಂಪತ್ತಿಕ ಮುಂತಾದ ಸ್ಥಿತಿ ಗಳು ಕೆಳಗಿನ ಅಂಕಿಗಳಿಂದ ಗೊತ್ತಾಗುವವು.

## ಭಾವೀಕರ್ನಾಟಕದ ಕ್ಷೇತ್ರ ಹಾಗೂ ಜನಸಂಖ್ಯೆ

### ೧೯೨೧ರ ಜನಗಣನೆಯಂತೆ

| ಜಿಲ್ಲೆ | ಚೌ. ಮೈ. ಕ್ಷೇತ್ರ | ಪಟ್ಟಣಗಳ ಸಂಖ್ಯೆ | ಹಳ್ಳಿಗಳ ಸಂಖ್ಯೆ | ಜನಸಂಖ್ಯೆ |
|---|---|---|---|---|
| ಬೆಳಗಾಂವಿ | ೪೬೦೦ | ೭ | ೧೦೬೨ | ೯೫೨೯೯೬ |
| ವಿಜಾಪುರ | ೫೭೦೭ | ೮ | ೧೧೨೦ | ೭೯೬೪೭೬ |
| ಧಾರವಾಡ | ೪೬೦೬ | ೧೭ | ೧೨೬೦ | ೧೦೩೬೯೩೪ |
| ಉ-ಕನ್ನಡ | ೩೯೪೬ | ೭ | ೧೨೫೭ | ೪೦೧೭೨೭ |
| ದ-ಕನ್ನಡ | ೪೦೨೧ | ೭ | ೭೯೮ | ೧೨೪೭೩೬೮ |
| ಬಳ್ಳಾರಿ | ೧೫೮೨ | ೨ | ೩೭೭ | ೧೬೩೮೩೮೦ |
| ನೀಲಗಿರಿ | ೯೮೨ | ೩ | ೫೪ | ೧೨!೫`೯ |
| | ೩೧೧೬೮ | ೬೧ | ೬೮೩೯ | ೫೪೮೮೬೧೧೮ |

| ತಾಲೂಕ | ಚೌ. ಮೈ. ಕ್ಷೇತ್ರ | ಪಟ್ಟಣಗಳ ಸಂಖ್ಯೆ | ಹಳ್ಳಿಗಳ ಸಂಖ್ಯೆ | ಜನಸಂಖ್ಯೆ |
|---|---|---|---|---|
| ಮಡಿಗಶಿರಾ ( ಜಿ ಅನಂತಪೂರ ) | ೪೪೩ | ೧ | ೫೭ | ೮೫೫೯೮ |
| ಹೊಸೂರ (ಜಿ. ಸೇಲಂ) | ೧೨೧೭ | ೧ | ೪೩೭ | ೧೮೬೪೩೦ |
| ಕೃಷ್ಣಗಿರಿ (ಜಿ ಸೇಲಂ) | ೬೫೬ | ೨ | ೧೮೩ | ೧೬೭೩೦೨ |
| ಕೊಳ್ಳೆಗಾಲ (ಜಿ. ಕೊ(ಯಮತ್ತೂರ) | ೧೦೭೬ | ೧ | ೮೪ | ೯೫೪೫೬ |
| ಸೊಲ್ಲಾಪುರ (ಜಿ, ಸೊಲ್ಲಾಪುರ) | ,೪೮ | ೧ | ೯೧೧ | ೨೩೪೩೬೧ |
| | ೪೨೪೦ | ೬ | ೯೧೧ | ೭೬೯೧೪೪ |
| ಒಂಶೊ | ೩೫೪೦೮ | ೬೭ | ೭೭೩೦ | ೬೩೫೪೭೭೬೨ |

## ಕರ್ನಾಟಕದ ೮ ಜಿಲ್ಹೆಗಳ ಆದಾಯ

| ಜಿಲ್ಹೆ | ಮಧ್ಯವರ್ತಿ ಬಾಬುಗಳಿಂದ ಉತ್ಪನ್ನ | ಪ್ರಾಂತಿಕ ಬ. ಬಾಬುಗಳಿಂದ ಉತ್ಪನ್ನ | ಒಟ್ಟು ಉತ್ಪನ್ನ |
|---|---|---|---|
| ಬೆಳಗಾಂವಿ | ೧೪೦೦೦೦೦ | ೩೯೧೦೦೦೦ | ೪೦೫೦೦೦೦ |
| ವಿಜಾಪೂರ | ೧೫೦೦೦೦೧ | ೨೭೦೦೦೦೦ | ೨೮೫೦೦೦೦ |
| ಧಾರವಾಡ | ೨೨೦೦೦೦೦ | ೪೯೮೦೦೦೦ | ೫೨೦೦೦೦೦ |
| ಉ. ಕನ್ನಡ | ೪೦೬೦೦ | ೧೭೪೦೦೦೦ | ೧೩೮೨೦೦೦ |
| ದ. ಕನ್ನಡ | ೧೫೯೮೬೭ | ೪೯೯೦೩೪೧ | ೫೧೫೨೧೬೪ |
| ಬಳ್ಳಾರಿ | ೧೯೭೧೨೬ | ೩೮೪೪೬೯೩ | ೪೦೪೫೮೧೯ |
| ಕೊಡಗು | ತಿಳಿದಿಲ್ಲ | ತಿಳಿದಿಲ್ಲ | ೧೩೦೦೦೦೦ |
| ನೀಲಗಿರಿ | ೨೮೫೪೮೪ | ೧೧೩೭೫೦೭ | ೧೪೨೩೩೯೬ |
| | | | ೨೫೭೯೯೩೮೩ |

ಇವೆರಡು ಮುಖ್ಯಸಂಗತಿಗಳಲ್ಲದೆ ಕರ್ನಾಟಕಕ್ಕೆ ಸಂಬಂಧಿಸಿದ ಮತ್ತೆ ಕೆಲವು ವಿಷಯಗಳೆಂದರೆ ಧಾರವಾಡದಲ್ಲಿ ಎಪ್ರೆಲ ತಿಂಗಳಿನಲ್ಲಿ ಹಿಂದುಳಿದ ಸಮಾಜೋನ್ನತಿ ಸಂಘವೆಂಬುದೊಂದು ಸಂಘವು ಸ್ಥಾಪಿತವಾದದ್ದು. ಹಿಂದುಳಿದ ' ಎಂಬುದೊಂದು ಕಾರ್ಯಸಾಧಕರಿಗೆ ಅನುಕೂಲವಾದ ಶಬ್ದ. ಇಷ್ಟುದಿವಸ ವೀರಶೈವರು ತಮಗೆ ಹಿಂದುಳಿದ ಸಮಾಜವೆಂದು ತಿಳಿಯುತ್ತಿದ್ದರು. ಈಗ ಹೊರಟಿರುವ ಹಿಂದುಳಿದ ಸಂಘದಲ್ಲಿ ಅವರ ಸೇರ್ಪಡೆಯಾದಂತೆ ತೋರಲಿಲ್ಲ. ಅದು ಏಕೋ ಅವರಿಗೇ ಗೊತ್ತು. ಆದರೆ, ಅದು ಏನೇ ಇರಲಿ, ಈ ಸಂಘವು ಶಿಕ್ಷಣ ಪ್ರಸಾರವನ್ನು ಹೆಚ್ಚಿಗೆ ಮಾಡುವುದನ್ನು ತನ್ನ ಒಂದು ಉದ್ದೇಶವನ್ನಾಗಿ ಇಟ್ಟುಕೊಂಡಿರುವುದರಿಂದ, ಆ ಉದ್ದೇಶವನ್ನು ಸಾಧಿಸಿದಷ್ಟು ಕರ್ನಾಟಕಕ್ಕೆ ಹಿತವೇ ಆಗುತ್ತದೆ. ಅತಿ ಹಿಂದುಳಿದ ಸಮಾಜಗಳಿಗೆ ಮೊದಲಿಗೆ ಹಾಗು ಹೆಚ್ಚೆಚ್ಚು ಸವಲತ್ತು ತೋರಿಸುವ ಧೋರಣದಿಂದ ಈ ಸಂಘವು ಕೆಲಸಮಾಡತಕ್ಕದ್ದೆಂದು ಇಟ್ಟುಕೊಂಡಿರುವುದೊಂದು ಈ ಸಂಘದ ವಿಶೇಷ. ಇದರಂತೆ ವರ್ತಿಸಿದರೆ, ಈ ಸಂಘದ ಚಾಲಕರ ಮೇಲೆ ಮಿಕ್ಕುಳಿದ ಸಮಾಜಗಳ ವಿಶ್ವಾಸವು ನಿಶ್ಚಿತವಾಗಿ ಕೂಡುವುದೆಂದು ಹೇಳಬಹುದು. ವೀರಶೈವರು ಮೊದಲು ತಾವು ಹಿಂದುಳಿದ ಸಮಾಜದ ಹಿತಕರ್ತರೆಂದು ಮೆರಿದರೆಂದೂ ಈಗ ವೀರಶೈವ ಸಮಾಜದ ಹಿತವೊಂದನ್ನೇ ನೋಡಿ, ಮಿಕ್ಕವರ ಹಿತವನ್ನು ದುರ್ಲಕ್ಷಿಸುತ್ತಾರೆಂದೂ ರಡ್ಡೀ ಮುಂತಾದ ಸಮಾಜಗಳ ಆಕ್ಷೇಪವುಂಟು. ಅಲ್ಲದೆ, ಇದೆಲ್ಲ ಕಾರಸ್ಥಾನವು ಕಾಯದೆ ಮಂಡಳಗಳಲ್ಲಿ ಮತಗಳನ್ನು ಸಂಪಾದಿಸಿ ತಾವು ಮುಂದೆ ಬರಬೇಕೆಂಬ ಉದ್ದೇಶದಿಂದ ನಡೆದಿರುವುದೆಂದು ಅವರು ವೀರಶೈವರ ಸಂಬಂಧದಿಂದ ಗುಣಗುಟ್ಟುತ್ತಿರುವರು. ಆ ಆಕ್ಷೇಪಕ್ಕೆ ತಾವೂ ಗುರಿಯಾಗದಿರಬೇಕಾದರೆ, ಈ ಸಂಘವು ಇಟ್ಟುಕೊಂಡ ಮೇಲ್ಕಾಣಿಸಿದ ಧೋರಣದಂತೆ ಅವರು ನಡೆಯಬೇಕು. ಅದರಿಂದ ಸ್ವಾರ್ಥತ್ಯಾಗ ಬುದ್ಧಿಯು ಬೆಳೆದು, ಜನರ ವಿಶ್ವಾಸವು ಮುಖಂಡರ ಮೇಲೆ ಕೂಡುವುದು. ಈ ಸಂಘದವರು ಒಕ್ಕಲತನ ವ್ಯಾಪಾರ ಉದ್ಯೋಗಗಳನ್ನು ಮರೆಯದಿರುವುದೂ ಒಳಿತೇ ಸರಿ. ಕರ್ನಾಟಕದ ವ್ಯಾಪಾರ ಮತ್ತು ಉದ್ಯೋಗಗಳನ್ನು ಬೆಳಿಸುವ ಕಡೆಗೆ ಕನ್ನಡಿಗರ ಲಕ್ಷವು ಹೋಗತಕ್ಕಷ್ಟು ಹೋಗಿಲ್ಲ. ಇದರಿಂದ, ಇಲ್ಲಿಯ ಉದ್ಯೋಗಗಳೆಲ್ಲವೂ ಪರಕೀಯರ ಪಾಲಾಗಹತ್ತಿವೆ. ಇದಕ್ಕೆ ತಡೆ ಹಾಕುವುದು ಅವಶ್ಯ. ಕರ್ನಾಟಕದ ಭಾಗವಾದ ಮೈಸೂರು ಪ್ರಾಂತದಲ್ಲಿ ರೇಷ್ಮೆಯು

ಹುಟ್ಟುತ್ತದೆ. ಹಿಂದುಸ್ಥಾನ ದೇಶದಲ್ಲಿ ಹುಟ್ಟುವ ರೇಷ್ಮೆಯಲ್ಲಿ ಸುಮಾರು ೩ ರಷ್ಟು ರೇಷ್ಮೆಯು ಮೈಸೂರ ಸೀಮೆಯಲ್ಲಿ ಹುಟ್ಟುತ್ತದೆ. ಈ ಕೈಗಾರಿಕೆಯಿಂದ ಅಲ್ಲಿ ಸುಮಾರು ೨ ಲಕ್ಷ ಕುಟುಂಬಗಳ ಜೀವನ ಮಾಡುತ್ತಿರುವವು. ಅದರ ಮಾರಾಟ ದಿಂದ ಮೈಸೂರಿಗೆ ಸುಮಾರು ೧ ಕೋಟಿ ರೂಪಾಯಿಗಳ ಉತ್ಪನ್ನವುಂಟು. ಇಷ್ಟೇ ಅಲ್ಲ. ಈ ವ್ಯವಸಾಯದ ಕಡೆಗೆ ಹೆಚ್ಚು ಲಕ್ಷ್ಯ ಪೂರೈಸಿದರೆ, ಈಗಿನ ಉತ್ಪನ್ನವನ್ನು ಇಮ್ಮಡಿ ಮುಮ್ಮಡಿ ಬೆಳಿಸಿ, ಯಾವತ್ತೂ ಹಿಂದುಸ್ಥಾನಕ್ಕೆ ಮೈಸೂರು ಪ್ರಾಂತವು ರೇಷ್ಮೆಯನ್ನು ಪೂರೈಸಬಹುದು. ಅಲ್ಲಿಯ ರೇಷ್ಮೆ ಇಲಾಖೆಯ ಸುಪರಿಂಟೆಂಡೆಂಟರಾದ ಶ್ರೀ. ಎಚ್. ಎಸ್. ಗೋವಿಂದ ರಾಯರು ಈ ಉತ್ಪನ್ನವನ್ನು ಹೆಚ್ಚು ಮಾಡುವುದಕ್ಕೆ ಪ್ರಯತ್ನಿಸುತ್ತಿರುವುದು ಸಂತೋಷದ ಸಂಗತಿ. ಅವರ ಪ್ರಯತ್ನದಿಂದ, ಬೆಂಗಳೂರಿನಲ್ಲಿ "ಮೈಸೂರು ರೇಷ್ಮೆಸಂಘ"ವೆಂಬುದೊಂದು ಸಂಘವು ಸ್ಥಾಪಿತವಾಗಿದೆ. ಇದರಲ್ಲಿ ಅನೇಕ ದೊಡ್ಡ ಮನುಷ್ಯರೂ ವರ್ತಕರೂ ಸದಸ್ಯರಾಗಿರುವರು. ಈ ಸಂಘವು ತೀವ್ರವೇ ಅಭಿವೃದ್ಧಿಗೆ ಬಂದು ಮೈಸೂರು ಪ್ರಾಂತವು ಇಡೀ ಹಿಂದುಸ್ಥಾನಕ್ಕೆ ರೇಷ್ಮೆಯನ್ನು ಪೂರೈಸಲೆಂದು ನಾವು ಹಾರೈಸುತ್ತೇವೆ. ನಮ್ಮ ಮೈಸೂರ ಮಹಾರಾಜರು ಕನ್ನಡಿಗರು, ಕರ್ನಾಟಕದ ಅಭಿಮಾನಿಗಳು. ಆದಕಾರಣ ಅವರು ಕರ್ನಾಟಕವು ಮುಂದೆ ಬರುವುದಕ್ಕೆ ಬೇಕಾಗುವ ಪ್ರತಿಯೊಂದು ಉದ್ಯೋಗಕ್ಕೆ ಸಹಾಯ ಮಾಡೇಮಾಡುವರೆಂದೂ ನಂಬಿಗೆ. ಆ ಪ್ರಕಾರ ಈ ರೇಷ್ಮೆಸಂಘಕ್ಕೂ ಸಹಾಯ ಮಾಡುವರೆಂದೂ ನಮಗೆ ನಂಬಿಕೆಯುಂಟು. ನಮ್ಮ ಸುದೈವದಿಂದ ಸೊಂಡೂರ ಸಂಸ್ಥಾನದ ಪಟ್ಟಕ್ಕೆ ಕನ್ನಡಿಗರಾದ ಶ್ರೀಮಂತ ಯಶವಂತರಾವ ಘೋರಪಡೆಯವರು ಅರಸರಾದರೆಂದು ತಿಳುಹಲಿಕ್ಕೆ ನಮಗೆ ಆನಂದವಾಗುತ್ತದೆ. ಇವರು ಗಜೇಂದ್ರಗಡದವರು. ಸೊಂಡೂರಿನ ಮಹಾರಾಜರು ಮಕ್ಕಳಿಲ್ಲದೆ ತೀರಿದ್ದರಿಂದ, ಆ ಪಟ್ಟಕ್ಕೆ ಮುಂದೆ ಯಾರು ಕುಳಿತುಕೊಳ್ಳಬೇಕೆಂಬ ಪ್ರಶ್ನೆಯು ಹೊರಟಿತ್ತು. ಗತಿಸಿದ ಮಹಾರಾಜರ ಮಗಳು ಮತ್ತು ಬಡೋದೆ ಕೊಲ್ಹಾಪುರ ಮುಂತಾದ ಸ್ಥಳಗಳಲ್ಲಿಯ ಕೆಲವು ದೂರಿನ ಆಪ್ತರು ತಾವು ಹಕ್ಕದಾರರೆಂದು ಹೇಳಿಕೊಂಡು, ಆ ಗಾದಿಗೆ ಕುಳಿತುಕೊಳ್ಳಲಿಕ್ಕೆ ಪ್ರಯತ್ನಿಸಿದರು. ಆದರೆ, ರೋಣ ತಾಲೂಕು ಗಜೇಂದ್ರಗಡದಲ್ಲಿರುವ ಶ್ರೀಮಂತ ಘೋರಪಡೆಯವರು ಸೊಂಡೂರಿನ ಮಹಾರಾಜರಿಗೆ ಸಮೀಪದವರಾದ್ದರಿಂದ ಅವರನ್ನೇ ಪಟ್ಟಕ್ಕೆ ಕುಳ್ಳಿರಿಸಬೇಕೆಂದು ನಾವು ಜಯಕರ್ನಾಟಕದ ಹೋದ ವರ್ಷದ ಕೊನೆಯ ಸಂಚಿಕೆಯಲ್ಲಿ ಪ್ರತಿಪಾದಿಸಿದ್ದೆವು. ಆ ಪ್ರಕಾರ ಈಗ ಸರಕಾರದವರು ಆ ಗಜೇಂದ್ರಗಡ ಮನೆತನದವರಾದ ಶ್ರೀಮಂತ ಯಶವಂತರಾಯರನ್ನು ಪಟ್ಟಕ್ಕೆ ಕುಳ್ಳಿರಿಸಿದ್ದಕ್ಕಾಗಿ ನಾವು ಆ ಮಹಾರಾಜರನ್ನು ಅಂತಃಕರಣಪೂರ್ವಕವಾಗಿ ಅಭಿನಂದಿಸುತ್ತೇವೆ. ಶ್ರೀಮಂತ ಯಶವಂತರಾವ ಅಣ್ಣಾಸಾಹೇಬ ಇವರು ಗಜೇಂದ್ರಗಡದ ಶ್ರೀಮಂತ ಭುಜಂಗರಾಯರ ಹಿರಿಯ ಮಕ್ಕಳು, ಗತಿಸಿ ಹೋದ ಸೊಂಡೂರ ಮಹಾರಾಜರ ಚಿಕ್ಕಪ್ಪನ ಮಕ್ಕಳು. ಅವರು ೧೩–೧೧–೧೯೦೮ರಲ್ಲಿ ಜನಿಸಿದರು. ಬೆಂಗಳೂರಿನಲ್ಲಿಯೂ ಇಂದೂರಿನ ಹೊಳಕರ ಕಾಲೇಜಿನಲ್ಲಿಯೂ ಚೆನ್ನಾಗಿ ಅಭ್ಯಾಸಮಾಡಿರುವರು. ಅವರು ಕರ್ನಾಟಕ ದೇಶ ಮತ್ತು ಭಾಷೆ ಇವುಗಳ ಅಭಿಮಾನವನ್ನು ಹಿಡಿದು ಸೊಂಡೂರ ಸಂಸ್ಥಾನವನ್ನು ಎಲ್ಲ ಬಗೆಯಿಂದಲೂ ಮುಂದೆ ತರಲಿಕ್ಕೆ ಪ್ರಯತ್ನಿಸುವರೆಂದು ಆಶಿಸುತ್ತೇವೆ.



ಶ್ರೀಮಂತ ಯಶವಂತರಾವ ಉರ್ಫ ಅಣ್ಣಾಸಾಹೇಬರವರು.
( ಸೊಂಡೂರ ಸಂಸ್ಥಾನದ ಹೊಸ ಅರಸರು )

## ಶ್ರೀ. ಬೆನಗಲ್ಲ ಮಂಜುನಾಥಯ್ಯನವರ ಮರಣ

ಶ್ರೀ. ಬೆನಗಲ್ಲ ಮಂಜುನಾಥಯ್ಯನವರು ಶ್ರೀ. ಬೆನಗಲ್ಲ ರಾಮರಾಯರ ತಂದೆಯವರು. ಇವರು ಮೇ ತಿಂಗಳ ೨೮ನೆಯ ತಾರೀಖಿನ ದಿವಸ ಮೃತಪಟ್ಟರೆಂದು ತಿಳುಹಲಿಕ್ಕೆ ನಮಗೆ ವಿಷಾದವೆನಿಸುತ್ತದೆ. ಶ್ರೀ. ಮಂಜುನಾಥಯ್ಯನವರು ಅತ್ಯಂತ ಸದಾಚಾರಿಗಳು, ವೇದಾಂತ ಮತ್ತು ಮಂತ್ರಶಾಸ್ತ್ರದಲ್ಲಿ ಘನ ವಿದ್ವಾಂಸರು, ಉತ್ಕೃಷ್ಟ ವೈದ್ಯರು, ಉತ್ತಮವಾದ ನಟರು, ಒಳ್ಳೇ ಕನ್ನಡಗ್ರಂಥಕರ್ತರು. ಅವರು ಮುಂಬಯಿಯಲ್ಲಿ "ಬಿ. ಎಂ. ನಾಥ ಆ್ಯಂಡ ಕೋ" ಎಂಬ ಹೆಸರಿನ ಆಯುರ್ವೇದ ವೈದ್ಯಾಲಯವನ್ನು ಸ್ಥಾಪಿಸಿದರು. ಅಲ್ಲಿದ್ದಾಗ ಸಾಧಾರಣದ ಕಾರಖಾನೆಯನ್ನೂ ಹೊರಡಿಸಿದ್ದರು. ಆದರೆ ಅದು ಬಹಳ ದಿವಸ ಬಾಳಲಿಲ್ಲ. ಚಿಕ್ಕಂದಿನಲ್ಲಿ ಅವರು ಅವೇಚ್ಯುರ ಕಂಪನಿಗಳಲ್ಲಿ ನಟರಾಗಿರುತ್ತಿದ್ದರು. ಅವರು ಜಾತಿಯಿಂದ ಸಾರಸ್ವತ ಬ್ರಾಹ್ಮಣರು. ಕೊಂಕಣಿ ಭಾಷೆಯು ಅವರ ಮಾತೃಭಾಷೆಯಾಗಿದ್ದರೂ, ದೇಶಭಾಷೆಯಾದ ಕರ್ನಾಟಕ ಭಾಷೆಯನ್ನು ಪ್ರೋತ್ಸಾಹಿಸುವುದು ಪ್ರತಿಯೊಬ್ಬ ರಾಷ್ಟ್ರಭಕ್ತನ ಆದ್ಯಕರ್ತವ್ಯವೆಂಬು ಬಗೆದು ಅವರು ಕನ್ನಡದಲ್ಲಿ ಸ್ವತಃ ಗ್ರಂಥಕರ್ತರಾದರು. ಅವರು ಅನೇಕ ಕಾದಂಬರಿಗಳನ್ನೂ ವೈದ್ಯಗ್ರಂಥಗಳನ್ನೂ ಕನ್ನಡಿಸಿರುವರು. ಅವುಗಳಲ್ಲಿ "ಲಾವಣ್ಯಮಯೀ" ಎಂಬ ಕಾದಂಬರಿಯೊಂದು ಮಾತ್ರ ಪ್ರಸಿದ್ಧವಾಗಿದೆ. ಮಿಕ್ಕವುಗಳನ್ನು ಅಚ್ಚುಹಾಕುವ ಏರ್ಪಾಡು ನಡೆದಿರುವುದು. "ಶಿವತತ್ವ ರತ್ನಾಕರ" ವೆಂಬ ಪ್ರಚಂಡ ಗ್ರಂಥವನ್ನು ಪ್ರಸಿದ್ಧಿಸಿದವರು ಇವರೇ. ಶ್ರೀ. ಮಂಜುನಾಥಯ್ಯನವರು ಕರ್ನಾಟಕ ಏಕೀಕರಣದ ಭಕ್ತರು. ಆ ದೃಷ್ಟಿಯಿಂದ ಕರ್ನಾಟಕದ ನಕಾಶೆಯನ್ನು ಅವರ ಬಹಳ ಪರಿಶ್ರಮಪಟ್ಟು ಮುದ್ರಿಸಿರುವರು. ಈ ಮೇರೆಗೆ ಅನೇಕ ಬಗೆಯಿಂದ ಕರ್ನಾಟಕದ ಸೇವೆಯನ್ನು ಮಾಡಿದ ಈ ಗೃಹಸ್ಥರು ಮರಣ ಹೊಂದಿದ ಬಗ್ಗೆ ಯಾರಿಗೆ ದುಃಖವಾಗಲಿಕ್ಕಿಲ್ಲ? ದೇವರು ಅವರ ಆತ್ಮಕ್ಕೆ ಶಾಂತಿಕೊಡಲಿ!

## ಶ್ರೀ. ಕರ್ಕಿಯವರ ಶೋಚನೀಯ ಮೃತ್ಯು

ಶ್ರೀ. ಗಣೇಶ ರಾಮಚಂದ್ರ ಕರ್ಕಿಯವರು ಹೊನ್ನಾವರದಲ್ಲಿ ೧೪-೬-೨೮ನೆಯ ದಿವಸ ಮಡಿದರೆಂಬುದು ದುಃಖಕಾರಕವಾದ ಮತ್ತೊಂದು ಸುದ್ದಿ !

ಶ್ರೀ. ಕರ್ಕಿಯವರು ಕಾರವಾರ ಜಿಲ್ಹೆಯವರು. ಅವರು ಅತ್ಯಂತ ಸಾಹಸಿಗಳು. ಅವರು ಮುಂಬಯಿ ಪಟ್ಟಣದಲ್ಲಿ ಔಷಧಾಲಯವನ್ನು ಹಾಕಿಯೂ ಅನೇಕ ವಿಧವಾದ ಚಳವಳಗಳನ್ನು ಮಾಡಿಯೂ ಹೆಸರುವಾಸಿಯಾಗಿದ್ದರು. ಅವರು ದೀರ್ಘೋದ್ಯೋಗಿಗಳು, ಬಹಳ ಪ್ರಾಮಾಣಿಕರು. ಕರ್ನಾಟಕದವರೆಲ್ಲರಿಗೂ ಕರ್ಕಿಕಂಪನಿಯೆಂದರೆ ತಮ್ಮ ಮನೆಯೊಂದೇ ಎನಿಸುತ್ತಿತ್ತು. ಅವರ ಮರಣದಿಂದ ಕರ್ನಾಟಕವು ಒಬ್ಬ ಸಾಹಸಿಗನನ್ನು ಕಳೆದುಕೊಂಡಿತೆಂದು ನಿಃಸಂದೇಹವಾಗಿ ಹೇಳಬಹುದು. ಪರಮಾತ್ಮನು ಅವರ ಆತ್ಮಕ್ಕೆ ಶಾಂತಿ ಕೊಡಲಿ !

**ಮುಂದಿನ ತಿಂಗಳು ಅಧಿಕಮಾಸವಿರುವುದರಿಂದ ಜಯಕರ್ನಾಟಕದ ೧೧ನೆಯ ಸಂಚಿಕೆ ನಮ್ಮ ಪದ್ಧತಿಯ ಪ್ರಕಾರ ನಿಜಶ್ರಾವಣ ಶುದ್ಧ ೧೫ಕ್ಕೆ ಹೊರಡುವುದು.**

—ಸಂಪಾದಕ.



ಶ್ರೀ. ವಲ್ಲಭಭಾಯಿ ಪಟೇಲರವರು




ॐ सह नाववतु ॥ सह नौ भुनक्तु ॥ सह वीर्यं करवावहै ॥
तेजस्विनावधीतमस्तु मा विद्विषावहै ॥ ॐ शान्तिः ॥३॥

—श्रुतिः


| ಸಂಪುಟ ೬ | ವಿಭವನಾಮ ಸಂವತ್ಸರ ನೂಲ ಹುಣ್ಣಿವೆ<br>ಶಕ ೧೮೫೦, ೩೧ನೆಯ ಅಗಷ್ಟ, ೧೯೨೮ | ಸಂಚಿಕೆ ೧೦ |
|---|---|---|


# ವೈದಿಕಧರ್ಮಗ್ಲಾನಿಯೂ ಕ್ರಮೋನ್ನತಿಯೂ

( ಶ್ರೀಮಚ್ಛೃಂಗೇರಿಮಠದ ಶ್ರೀನರಸಿಂಹಭಾರತಿಸ್ವಾಮಿಗಳವರ ವ್ಯಾಖ್ಯಾನಗಳ ಸಾರವು )

ಅನುವಾದಕ:—ಶ್ರೀ. ಮಹಾಬಲೇಶ್ವರಭಟ್ಟ ಹೋಬಳಿ

[ ೯ನೆಯ ಸಂಚಿಕೆಯಿಂದ ಮುಂದುವರಿದುದು ]

**ಪಾಶ್ಚಾತ್ಯ ಶಿಕ್ಷಣ :**—ನಮ್ಮ ಭರತಖಂಡವು ಅತಿ ಪುಣ್ಯಭೂಮಿ. ಮಹಾ ನದಿಗಳೂ, ಮಹಾ ಕ್ಷೇತ್ರಗಳೂ, ಈ ಭೂಮಿಯಲ್ಲಿ ಸ್ವಭಾವಸಿದ್ಧವಾಗಿವೆ. ಮಹರ್ಷಿಗಳ ವಾಸಕ್ಕೆ ಇದು ಪ್ರಧಾನಸ್ಥಾನ. ಪರಮಾತ್ಮನ ಅವತಾರಗಳ ಅಡಿದಾವರೆಗಳಿಂದ ಹಲವು ಸಾರಿ ಪವಿತ್ರವಾಗುತ್ತಿರುವಂತ ಹದು. ಪವಿತ್ರ ವೇದೋಕ್ತಧರ್ಮವೇ ಮುಖ್ಯವಾಗಿ ಇದರ ಪೋಷಕವಾಗಿರುವದು. ಇಲ್ಲಿ ಹಲವು ಮತಗಳಿದ್ದರೂ, ವೇದವನ್ನೂ ವೇದಧರ್ಮವನ್ನೂ ಯಾವ ಮತವೂ ನಿಂದಿಸುತ್ತಿರಲಿಲ್ಲ. ಬಹುಕಾಲದ ಹಿಂದೆ ಬೌದ್ಧಮತವು ವೇದ ಮತ್ತು ವೇದಧರ್ಮ ಇತ್ಯಾದಿಗಳನ್ನು ನಿಂದಿಸಲಿಕ್ಕೆ ಆರಂಭಿಸಿತು. ಜೈನಮತವು ಇದನ್ನೇ ಅನುಕರಿಸಿತು. ಇಂತಹ ಧರ್ಮಗ್ಲಾನಿಯ ಸಮಯದಲ್ಲಿ ಪರಮೇಶ್ವರನು ಶಂಕರಾಚಾರ್ಯ-ರೂಪದಿಂದ ಅವತರಿಸಿ ವೈದಿಕ ಧರ್ಮದ ಪುನರುದ್ಧಾರವನ್ನು ಮಾಡಿದನು. ಆಗ ಬೌದ್ಧ ಜೈನ ಧರ್ಮಗಳ ಸತ್ವವೂ ಕಡಿಮೆಯಾಗಿ ವೈದಿಕ ಸಾಮ್ರಾಜ್ಯವು ನೆಲೆಗೊಂಡಿತು. ಬಳಿಕ ಮಹಮ್ಮದೀಯರ ಭಯಂಕರ ರಕ್ತಪಾತದ ಧರ್ಮಪ್ರಚಾರದ ಒತ್ತಡವು ವೈದಿಕಧರ್ಮದ ಮೇಲೆ ಬಿದ್ದಿತು. ಇದರಿಂದ ಈ ಧರ್ಮವು ಸ್ವಲ್ಪ ಸ್ವಲ್ಪ ಹೀನವಾದಂತೆ ಆದರೂ, ಅದರ ಅನುಯಾಯಿ

ಗಳಾದ ನಮ್ಮವರು ಪರಿಶುದ್ಧವಾದ ಭಾವನೆಯಿಂದ ಆನುವಂಶಿಕ ಪದ್ಧತಿಯಂತೆ ಷಟ್ಕರ್ಮ, ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥಾಶ್ರಮ, ಸನ್ಯಾಸಾಶ್ರಮ, ಗುರುಕುಲವಾಸ, ಗುರುಶಿಷ್ಯಧರ್ಮ, ಪತಿವ್ರತಾಧರ್ಮ, ದಂಪತೀಧರ್ಮ, ಮೊದಲಾದ ಸದಾಚಾರಗಳನ್ನು ಪ್ರಯತ್ನಪೂರ್ವಕವಾಗಿ ಮಹಮದೀಯರ ಕಣ್ಣುತಪ್ಪಿಸಿ ಪರಿಪಾಲಿಸುತ್ತ ಧರ್ಮದ ಉಜ್ಜೀವನ ಮಾಡುತ್ತಿದ್ದರು. ಸಮಯಾನುಸಾರ ಧರ್ಮಪ್ರೇಮದಿಂದ ಅಗ್ನಿಪ್ರವೇಶ, ಮೊದಲಾದುವುಗಳನ್ನೂ ಆಗಿನವರು ಮಾಡಿ 'ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ॥ ಎಂಬ ಭಗವದುಕ್ತಿಯನ್ನು ಸಾರ್ಥಕ ಪಡಿಸಿದರೆಂಬುದನ್ನು ಇತಿಹಾಸದಿಂದ ತಿಳಿಯಬಹುದು. ಧರ್ಮಪ್ರೇಮದಿಂದ ಅವರ ಭಾವನೆ ಎಂದೂ ವ್ಯಭಿಚರಿತವಾಗುತ್ತಿರಲಿಲ್ಲ. ವರ್ಣದ್ವೇಷ ಜಾತಿದ್ವೇಷಗಳನ್ನು ಅವರು ಎಂದೂ, ಎಣಿಸಿದವರಲ್ಲ. ವರ್ಣಗಳಲ್ಲಿಯೂ, ಜಾತಿಗಳಲ್ಲಿಯೂ, ಜ್ಞಾತಿಗಳಲ್ಲಿಯೂ, ಪರಸ್ಪರಪ್ರೇಮಭಾವವು ತುಂಬಿತುಳುಕುತ್ತಲಿದ್ದಿತು. ಗುರುಶಿಷ್ಯಭಾವವು ಹೆಚ್ಚಾಗಿ ಇದ್ದಿತು. ಇಂಥ ಪರಿಶುದ್ಧ ನಡತೆಗಳಿಂದ ಸಮಾಜವು ಶಾಂತಿಸಮುದ್ರವಾಗಿ, ಪರಿಣಮಿಸಿತ್ತೆಂದು ಹೇಳಲಿಕ್ಕೆ ಏನೂ ಸಂಶಯವಿಲ್ಲ.

ಮಹಮದೀಯ ಸಾಮ್ರಾಜ್ಯದ ಕಾಲದಲ್ಲಿ ಮುಸಲ್ಮಾನರು ನಮ್ಮ ಧರ್ಮದವರನ್ನು ತಮ್ಮ ಧರ್ಮಕ್ಕೆ ಸೇರಿಸಿ ನಮ್ಮ ಸಮಾಜದ ಕಸುವನ್ನು ಕಡಿಮೆ ಮಾಡಬೇಕೆಂಬ ಒಂದೇ ಉದ್ದೇಶವನ್ನು ಹೃದಯದಲ್ಲಿಟ್ಟು ಕೊಲೆಪಾತಗಳನ್ನು ನಡಿಸುತ್ತ ಬಂದರೇ ಹೊರತು ವಿದ್ಯಾಬುದ್ಧಿಗಳನ್ನು ಸುಧಾರಿಸುವ ವಿಷಯದಲ್ಲಿಯೂ, ಶಿಕ್ಷಣವನ್ನು ಕೊಡುವ ವಿಷಯದಲ್ಲಿಯೂ, ಲಕ್ಷ್ಯವಿಟ್ಟು ಯಾವುದೊಂದೂ ವಿಶ್ವವ್ಯಾಪಕ ಸಂಸ್ಥೆಯನ್ನು ಸ್ಥಾಪಿಸಿದಂತೆ ಕಂಡುಬರಲಿಲ್ಲ. ಇದರಿಂದಲೇ ಈಗಿನಷ್ಟು ವ್ಯಾವಹಾರಿಕಚತುರತೆಯೂ, ಉದಾತ್ತಭಾವನೆಯೂ, ವಿಶಾಲದೃಷ್ಟಿಯೂ, ಆಗಿನ ಎಲ್ಲರಲ್ಲಿಯೂ, ಇರಲಿಲ್ಲ. ಸ್ತ್ರೀಯರಿಗೂ ಪುರುಷರಂತೆ ತಕ್ಕಮಟ್ಟಿಗೆ ಅಕ್ಷರಜ್ಞಾನ ಮಾಡಿಕೊಡುತ್ತಿದ್ದುದರಿಂದ ಸ್ತ್ರೀಯರು ಸ್ವಕರ್ತವ್ಯದಕ್ಷರಾಗಿ ಮನೆಗೆಲಸಗಳಲ್ಲಿ ಯಾವ ತುಚ್ಛ ಬುದ್ಧಿಯನ್ನೂ ಎಣಿಸದೆ ಪ್ರೇಮದಿಂದ ಅವುಗಳನ್ನು ನಡಿಸುತ್ತ ತಮ್ಮ ತಮ್ಮ ಪತಿದೇವತೆಯನ್ನು ಸಂತೋಷಪಡಿಸಿ ಕೃತಕೃತ್ಯರಾಗುತ್ತಿದ್ದರು. ಸದುಪದೇಶಕರು ಆ ಕಾಲದಲ್ಲಿ ಅಧಿಕವಾಗಿದ್ದುದರಿಂದ ಗೃಹಸ್ಥರಲ್ಲಿಯೂ, ಸಮಾಜದಲ್ಲಿಯೂ, ಐಕಮತ್ಯವೂ, ಕರ್ತವ್ಯಜಾಗರೂಕತೆಯೂ ಚೆನ್ನಾಗಿದ್ದಿತು. ಲೋಕಾಂತರ, ಪುನರ್ಜನ್ಮ, ಪುಣ್ಯ, ಗುರುವರ್ಗ, ಇತ್ಯಾದಿಗಳಲ್ಲಿ ಅವರಿಗೆ ಅತ್ಯಂತ ವಿಶ್ವಾಸವಿದ್ದುದರಿಂದ ಹವ್ಯಕವ್ಯ ಅಂದರೆ ಯಜ್ಞಯಾಗಾದಿಗಳು, ಉತ್ತರಕ್ರಿಯೆ, ಶ್ರಾದ್ಧ ಮುಂತಾದುವುಗಳು ಪ್ರೀತಿಯಿಂದ ಜರುಗಿಸಲ್ಪಡುತ್ತಿದ್ದುವು. ಇದರಿಂದ ಲೋಕದ ಕಲ್ಯಾಣವಾಗುತ್ತಿದ್ದಿತು. ಕನ್ಯಾವಿಕ್ರಯಮಾಡುವುದು, ವರವಿಕ್ರಯವನ್ನು ಮಾಡುವುದು, ಇತ್ಯಾದಿಗಳನ್ನು ಕನಸಿನಲ್ಲಿಯೂ, ಎಣಿಸಲಿಲ್ಲ. ಪತಿಪತ್ನಿಯರ ಏಕತ್ರವಸತಿಯ ನಿರ್ಬಂಧವು ಅಪತ್ಯಸಂಪಾದನೆಗಲ್ಲದೆ ಕಾಮವಾಸನೆಯ ಪೂರ್ತಿಗಲ್ಲವೆಂಬ ಕರ್ದಮನು ದೇವಹೂತಿಗೆ ಹೇಳಿದ ತತ್ವವನ್ನೇ ಅನುಸರಿಸುತ್ತಿದ್ದರು. ಉತ್ಸವ, ವಿವಾಹ, ಮೊದಲಾದ ಮಂಗಲಕಾರ್ಯಗಳಲ್ಲಿ ಸಂಗೀತ, ನೃತ್ಯ, ವೇಶ್ಯಾನರ್ತನ ಇವೇ ಮೊದಲಾದ ಆಡಂಬರಗಳ ಕಡೆಗೆ ಅವರು ಲಕ್ಷ್ಯವನ್ನು ಕೊಡದೆ ಅಚ್ಚುಗಟ್ಟನ್ನು ಕಾಪಾಡುತ್ತಿದ್ದರು. ಈ ಪ್ರಕಾರದ ಸದ್ವರ್ತನಕ್ಕೆ ನಮ್ಮವರಿಗೆ ನಮ್ಮ ಧರ್ಮದಲ್ಲಿದ್ದ ಶುದ್ಧಸದ್ಭಾವನೆಯೇ ಕಾರಣವಲ್ಲದೆ, ಬೇರೆ ಯಾವುದೂ ಇಲ್ಲ. ಈ ಮೇಲೆ ವಿವರಿಸಿದಂತಹ ಸದ್ಭಾವನೆಗಳೂ ಸದ್ವರ್ತನೆಗಳೂ ವರ್ತಮಾನಕಾಲದಲ್ಲಿ ಮುಕ್ಕಾಲು ಪಾಲು ನಷ್ಟವಾಗಿ ಹೋಗಿವೆ. ಇವುಗಳ ಅವನತಿಯ ಆರಂಭವು ಪಾಶ್ಚಿಮಾತ್ಯ ಶಿಕ್ಷಣಪದ್ಧತಿಯ ಪ್ರಚಾರದ ಕಾಲದಿಂದಲೇ ಆಯಿತು. ಪಾಶ್ಚಿಮಾತ್ಯ ಶಿಕ್ಷಣದ ವಾಙ್ಮಯಗ್ರಂಥಗಳಲ್ಲಿ ಪಾಶ್ಚಾತ್ಯ ನಾಗರಿಕತೆಯ ಸಂಸ್ಕಾರಗಳೇ ವಿದ್ಯಾರ್ಥಿಗಳಿಗೆ ಹೆಚ್ಚಾಗಿ ದೊರೆವಂತೆಯೂ, ಹಿಂದೂ ಧರ್ಮದ ಸಾಮಾಜಿಕ ವ್ಯವಸ್ಥೆಯಲ್ಲಿ ಅವಿಶ್ವಾಸ ಉಂಟಾಗುವಂತೆಯೂ, ವಿಷಯಗಳನ್ನು ಪಾಶ್ಚಾತ್ಯ ಗ್ರಂಥಕಾರರು ಯಥೇಚ್ಛವಾಗಿ ತುಂಬಿದ್ದಾರೆ. ಇಷ್ಟೇ ಅಲ್ಲ. ದೇಶೀ ಮಾಧ್ಯಮಿಕ, ಪ್ರಾಥಮಿಕ ಶಿಕ್ಷಣಗ್ರಂಥಗಳಲ್ಲಿಯೂ ಪಾಶ್ಚಾತ್ಯ ಅನುಕರಣ! ದೇಶೀ ಗ್ರಂಥಕಾರರು ಹಿಂದೂಧರ್ಮದ ವಿಷಯಗಳನ್ನೂ ಉಪೇಕ್ಷಿಸಿದ್ದು ಕಂಡುಬರುತ್ತದೆ. (೧) ಪ್ರೌಢವಿವಾಹವನ್ನು ಮಾಡಬೇಕು, (೨) ವರ್ಣಭೇದ ಜಾತಿಭೇದಗಳು ಕಲ್ಪಿತವಾದುವುಗಳಿದ್ದು ಅವುಗಳನ್ನು ತೆಗೆದುಹಾಕಬೇಕು, (೩) ಸ್ಪೃಶ್ಯಾಸ್ಪೃಶ್ಯ ವ್ಯವಹಾರವನ್ನು ದೂರಪಡಿಸಬೇಕು, (೪) Barrister ಬ್ಯಾರೀಷ್ಟರನಾಗಲಿಕ್ಕೂ, ಇತರ ಪ್ರಧಾನಾಧಿಕಾರವನ್ನು ಪಡೆ

ಸಲಿಕ್ಕೂ, ಯುರೋಪಖಂಡಕ್ಕೆ ಬರಬೇಕು, (೫) ವೇದವು ಬ್ರಾಹ್ಮಣರ ಉದರಪೋಷಕ ಗ್ರಂಥವು, (೬) ಹಿಂದುಸ್ತಾನದಲ್ಲಿ ಇತರರನ್ನು ಹೀನಸ್ಥಿತಿಗೆ ಮುಟ್ಟಿಸಿದವರು ಬ್ರಾಹ್ಮಣರು, (೭) ಹಿಂದೂಸಮಾಜವು ಕಲ್ಪಿತ ನಿಬಂಧನೆಗಳಿಂದ ದೂರವಾಗಿ ಒಂದೇ ವಿಧವಾಗಿರಲಿಕ್ಕೆ ಚಳವಳಿ ನಡಿಸಲು ಬ್ರಾಹ್ಮಣೇತರರು ಜಾಗರೂಕರಾಗಬೇಕು, (೮) ಸಾಮಾಜಿಕ ವ್ಯವಹಾರ, ರಾಜಕೀಯ ವ್ಯವಹಾರ ಮತ್ತು ಅಧಿಕಾರ ಇವುಗಳಲ್ಲಿ ಎಲ್ಲರಿಗೂ, ಸಮವಾದ ಹಕ್ಕು ದೊರೆಯಬೇಕು, (೯) ಸ್ತ್ರೀಯರಿಗೆ ಪುರುಷರಂತೆಯೇ ಸ್ವಾತಂತ್ರ್ಯವಿರಬೇಕು, (೧೦) ಮುಂದೆ ಇರುವವರು ಹಿಂದೆ ಹೋಗಬೇಕು, ಹಿಂದುಳಿದವರು ಮುಂದೆ ಬರಬೇಕು, (೧೧) ಸ್ತ್ರೀ ಪುನರ್ವಿವಾಹವನ್ನೂ ಸ್ವಯಂವರ ಪದ್ಧತಿಯನ್ನೂ ಪ್ರಚಾರದಲ್ಲಿ ತರಬೇಕು. (೧೨) ಜಾತಿಯ ಸ್ತ್ರೀ ಪುರುಷರಲ್ಲಿಯೇ ವಿವಾಹವು ನಡಿಯಬೇಕೆಂಬ ನಿರ್ಬಂಧವು ಇರಕೂಡದು, ಇತ್ಯಾದಿ ವಿಷಯಗಳಮೇಲೆ, ವಿಸ್ತಾರದ ವ್ಯಾಖ್ಯಾನಗಳನ್ನು ಆ ವಾಙ್ಮಯದಲ್ಲಿ ನೋಡಬಹುದು. ಯುನಿವ್ಹರ್‌ಸಿಟಿಯ (University) ಕಾಲೇಜುಗಳ ಗುಣದೋಷ ವಿಮರ್ಶಕರಾದ ಪ್ರೋಫೇಸರು ( Proffessor ) ಗಳ ಉಪನ್ಯಾಸಗಳೇ ಆ ವ್ಯಾಖ್ಯಾನಗಳ ಸಾರಭೂತವಾದುವುಗಳಾಗಿರುವವೆಂದು ಹೇಳಬಹುದು. ಈ ಉಪನ್ಯಾಸಗಳನ್ನು ಕೇಳಿ ಅವುಗಳ ಸಂಸ್ಕಾರಗಳನ್ನು ತುಂಬಿಕೊಂಡ ಈಗಿನ ವಿದ್ಯಾರ್ಥಿಗಳ ಚಿತ್ತದಲ್ಲಿ ಸ್ವಧರ್ಮ ಸಂಸ್ಕಾರಕ್ಕೆ ಸ್ಥಾನವು ದೊರೆಯಲಾರದು. ಕದಾಚಿತ್ ಸ್ವಧರ್ಮಸಂಸ್ಕಾರವು ಅಂಶತಃ ಚಿತ್ತದಲ್ಲಿ ಸೇರಿದರೆ ಅದೊಂದು ಬದಿಯಲ್ಲಿರಬೇಕು; ಇಲ್ಲವಾದರೆ ಸಂಚಿತ ಪ್ರಬಲ ಸಂಸ್ಕಾರಗಳು ಅದನ್ನು ಹೊರಗೆ ನೂಕಿಬಿಡುವುವು.

ಈ ತರದ ಪಾಶ್ಚಾತ್ಯ ಶಿಕ್ಷಣದ ಉಚ್ಚತರಗತಿಯಲ್ಲಿ ತೇರ್ಗಡೆ ಹೊಂದಿದ ಕೆಲವರಲ್ಲಿ ಸ್ವಧರ್ಮಸಂಸ್ಕಾರವು ನಾಮಶೇಷವಾದುದರಿಂದ ಅವರಿಗೆ ಹಿಂದೂ ಸಾಮಾಜಿಕ ವ್ಯವಸ್ಥೆಯಲ್ಲಿಯೂ, ವೇದೋಕ್ತವಾದ ಸ್ವಧರ್ಮದಲ್ಲಿಯೂ, ತೃಪ್ತಿ ಇಲ್ಲದೇ ಹೋಯಿತು. ಈ ಸಂಧಿಯಲ್ಲಿಯೇ ದಯಾನಂದರ ಆರ್ಯಸಮಾಜವು ಹುಟ್ಟಿತು. ಈ ಸಂಸ್ಥೆ ಯಾವ ಜಾತಿಯವರನ್ನಾದರೂ, ಸಂಸ್ಕಾರದಿಂದ ಶುದ್ಧೀಕರಿಸುತ್ತದೆ. ಯಾವಜಾತಿಯವರಿಗಾದರೂ, ಪಂಗ್ತಿಯನ್ನು ಕೊಡುತ್ತದೆ, ಮೂರ್ತಿಪೂಜೆಯನ್ನು ನಿಷೇಧಿಸುತ್ತದೆ. ಅವರಲ್ಲಿ ಕೆಲವರು ಈ ಮತವನ್ನು ಮೆಚ್ಚಿ ಆ ಸಮಾಜ ಸಂಘಟಕರಾದರು. ಇದೂ ರುಚಿಸದ ಇನ್ನುಳಿದ ಕೆಲವರು ಪ್ರಾರ್ಥನಾ ಸಮಾಜವನ್ನು ಕಲ್ಪಿಸಿದರು. ಹಿಂದೂ ಮತ್ತು ಖ್ರಿಸ್ತೀ ಈ ಉಭಯಾತ್ಮಕ ಪದ್ಧತಿಯನ್ನು ಈ ಸಮಾಜವು ಅಂಗೀಕರಿಸುತ್ತದೆ ಎಂದು ತೋರುತ್ತದೆ. ಬಳಿಕ ಸತ್ಯವೇದ ಸಮಾಜದ ಮತಪ್ರವರ್ತಕ ಸಂಸ್ಥೆಯ ಉಪದೇಶದ ಬಲೆಗೆ ಕೆಲವರು ಬಿದ್ದರು. ಇಷ್ಟಕ್ಕೂ ತೃಪ್ತರಾಗದವರ ದೆಶೆಯಿಂದ ಬ್ರಹ್ಮಜ್ಞಾನ ಸಮಾಜವು ಅವತರಿಸಿತು. ಈ ಎಲ್ಲ ಸಮಾಜಗಳಲ್ಲಿ ಸತ್ಯವೇದಸಮಾಜಸಂಸ್ಥೆ ಮಾತ್ರ ಹಿಂದೂಸಮಾಜದ ಒಂದೊಂದೇ ಘಟಕವನ್ನು ಎಳೆದು ಅದರ ಶಕ್ತಿಯನ್ನು ಕಡಿಮೆ ಮಾಡುವುದಕ್ಕೂ ತನ್ನ ಸಾಮಾಜಿಕ ಕ್ಷೇತ್ರವನ್ನು ಬೆಳಿಸಲಿಕ್ಕೂ ಉದ್ಯೋಗವನ್ನು ನಡಿಸುತ್ತದೆ. ಇತರ ಸಮಾಜಗಳು ಹಿಂದೂ ಸಮಾಜದ ಸಂಘಶಕ್ತಿಯೊಡನೆ ವಿರೋಧ ಬೆಳಿಸದಿದ್ದರೂ, ವರ್ಣ-ಜಾತಿ-ಪಂಥ, ಇವುಗಳ ವೇದೋಕ್ತ ಕ್ರಮ ವ್ಯವಹಾರಗಳಿಗೆ ಅಡ್ಡಬರುತ್ತವೆ. ಪಾಶ್ಚಾತ್ಯ ಶಿಕ್ಷಣವನ್ನು ಹೊಂದಿದ ಸ್ತ್ರೀಯರು ಸ್ವತಂತ್ರರೆಂಬ ಭಾವನೆಯನ್ನು ಬಲವಾಗಿ ಹಿಡಿಯುತ್ತಾರೆ. ಕೇವಲ ಸಂಸ್ಕೃತ ಕಲಿತ ವಿದ್ಯಾರ್ಥಿಗೆ ಅಧ್ಯಯನ-ಪ್ರಯೋಗಗಳ ಪರಿಚಯವು ಹೇಗೆ ಇರುವುದಿಲ್ಲವೋ, ಹಾಗೆ ಆಂಗ್ಲವಿದ್ಯಾ ಸುಶಿಕ್ಷಿತ ಮಹಿಳೆಯರಿಗೆ ಮನೆಗೆಲಸಗಳ ಪರಿಚಯವಿರುವುದಿಲ್ಲ. ಇದ್ದರೂ, ಅವುಗಳನ್ನು ಮಾಡುವದು ಆಂಗ್ಲಸುಧಾರಿಣಿಯರು ತಮ್ಮ ಗಾಂಭೀರ್ಯಕ್ಕೆ ಸರಿಯಲ್ಲವೆಂದು ಭಾವಿಸುತ್ತಾರೆ. ಅವರಿಗಾಗಿ ಇನ್ನೊಬ್ಬಳು ದಾಸವ್ಯಕ್ತಿ ಬೇಕು. ಪತಿವ್ರತಾಧರ್ಮವನ್ನಷ್ಟು ಚನ್ನಾಗಿ ತಿಳಿದಿರುತ್ತಾರೆ. ಆದರೆ ಪತಿ ಎಷ್ಟಕ್ಕೋ ಅಷ್ಟಕ್ಕೇ ಸರಿ. “ಪತಿದೇವತಾ ಭವ” ಎಂಬ ವಾಕ್ಯಾರ್ಥಕ್ಕಿಂತಲೂ, “ಪತ್ನಿದೇವೋ ಭವ” ಎಂಬ ವಾಕ್ಯಾರ್ಥವೇ ಇವರಿಗೆ ಧರ್ಮಸೂತ್ರವೆನಿಸುತ್ತದೆ. ಸುಶಿಕ್ಷಿತ ಸ್ತ್ರೀಯರಲ್ಲಿ ಕೆಲವರು ತಮ್ಮ ಉಚ್ಚ ಶಿಕ್ಷಣದ ಪ್ರೌಢತೆಯನ್ನು ಕೋತಿಯ ಕೈಗೆ ಸಿಕ್ಕಿದ ಮಾಣಿಕ್ಯದಂತೆ ದುರುಪಯೋಗಮಾಡಿದುದು ತಿಳಿದುಬರುತ್ತದೆ. ಏವಂಚ ಪಾಶ್ಚಾತ್ಯ ಶಿಕ್ಷಣವು ರಾಷ್ಟ್ರೀಯ ಕ್ಷೇಮಕ್ಕೆ ವಿರೋಧಿ ಎಂಬುದು ಹಲವು ಕಾರಣಗಳಿಂದಲೂ, ನಮ್ಮೆಲ್ಲರ ಆಧುನಿಕ ಅನುಭವಗಳಿಂದಲೂ ಸಿದ್ಧವಾಗುತ್ತದೆ.

**ಸುಧಾರಣೆ:—**“ಹೇಳಿಕೊಟ್ಟ ಮಾತೂ, ಕಟ್ಟಿಕೊಟ್ಟ ಬುತ್ತಿಯೂ, ಎಲ್ಲಿಯವರೆಗೆ ಬರುವುವು?” ಎಂಬ ನುಡಿಯು

ರಹಸ್ಯವನ್ನು ತಿಳಿದುಕೊಂಡರೆ ಮನುಷ್ಯನು ಧಾರ್ಮಿಕ ರೀತಿಯಿಂದ ಸುಧಾರಿಸದೆ ಎಂದೂ ಇರಲಾರನು. ಅಥವಾ ಧಾರ್ಮಿಕ ಕ್ಷೇತ್ರವನ್ನು ಅತಿಕ್ರಮಿಸಲಾರನು. ಭಾಷಾವ್ಯವಹಾರದಲ್ಲಿ ಸ್ವಾತಂತ್ರ್ಯವಿರಬೇಕೆಂತಲೂ, ಇತರರು ಹೇಳುವ ಕಾಲ್ಪನಿಕ ವಿಷಯುಗಳನ್ನು ಕೇಳಬಾರದೆಂತಲೂ, ಇತರ ವೃತ್ತಿಯಿಂದ ಸಂಪಾದಿಸಬಹುದಾದ ಅನ್ನವು ಸ್ಥಿರವಲ್ಲವೆಂತಲೂ, ಕುಲೀನವೃತ್ತಿಯ ಅನ್ನವೇ ಸ್ಥಿರವೆಂತಲೂ, ಆ ನುಡಿಯ ಪರಮರಹಸ್ಯವು. ಆದುದರಿಂದ ಇತರ ಸಮಾಜದವರ ಉಪದೇಶಗಳ ಮಾತುಗಳನ್ನು ಕೇಳಬಾರದು. ವರ್ಣದ್ವೇಷ, ಮತದ್ವೇಷ, ಜಾತಿದ್ವೇಷ, ಧರ್ಮದ್ವೇಷ, ಸಮಾಜದ್ವೇಷ, ಇತ್ಯಾದಿ ದ್ವೇಷಗಳನ್ನು ಬಿಟ್ಟು ಮೊದಲಿನ ಸಹೋದರಪ್ರೇಮಭಾವನೆಯ ತತ್ವವನ್ನು ಅವಲಂಬಿಸಬೇಕು. ಪರಸ್ಪರ ಸಹಕಾರಿತ್ವದ ಪುನರುಜ್ಜೀವನ ಮಾಡಬೇಕು. ಧರ್ಮವಿರೋಧವಾದ ಯಾವ ಭಾವನೆಗಳಿಗೂ ಅವಕಾಶವನ್ನು ಕೊಡಬಾರದು. ರಾಜಕೀಯ ಪದವೀಧರರಲ್ಲಿ ರಾಷ್ಟ್ರೀಯ ಹಿತಚಿಂತನೆ ಇರಬೇಕು. ರಾಜಕೀಯ ಅಧಿಕಾರದಿಂದ ನಿವೃತ್ತರಾಗಿ ವಿಶ್ರಾಂತಿಯನ್ನನುಭವಿಸುವ ಮುಖಂಡರು ಧಾರ್ಮಿಕ ಚಳವಳವನ್ನು ನಡಿಸಬೇಕು. ಸ್ವತಂತ್ರ ವರ್ಗದವರಾದ ವಕೀಲರೂ, ಆ ಚಳವಳಿಗೆ ಭಾಗಿಗಳಾಗಬೇಕು. ಇವರ ಧಾರ್ಮಿಕ ಕಾರ್ಯಕ್ರಮಕ್ಕೆ ಮಠಾಧಿಪರೂ, ದೇಶೀಯ ರಾಜರೂ ಧನ್ಯವಾದವನ್ನು ಕೊಡಬೇಕು. ಮಹಾದೋಷಾಸ್ಪದವಾದ ವರವಿಕ್ರಯ, ಕನ್ಯಾವಿಕ್ರಯ, ಪದ್ಧತಿಯನ್ನು ನಿಲ್ಲಿಸಬೇಕು. ಪುನರ್ವಿವಾಹವು ಕಲಿಯುಗದಲ್ಲಿ ನಿಷಿದ್ಧವಾದುದರಿಂದ ಶಿಷ್ಯರು ಅದಕ್ಕೆ ಅನುಮತಿಯನ್ನು ಕೊಡಬಾರದು. ಪ್ರೌಢ ಸ್ತ್ರೀವಿವಾಹವು ಉತ್ತಮ ಪರಿಣಾಮಕಾರಿಯಲ್ಲವಾದುದರಿಂದ ಅದಕ್ಕೂ ಅವಕಾಶವಿರಬಾರದು. ಆರ್ಯಸಮಾಜ, ಪ್ರಾರ್ಥನಾಸಮಾಜ, ಸತ್ಯವೇದಸಮಾಜ, ಬ್ರಹ್ಮಜ್ಞಾನಸಮಾಜ ಇವುಗಳಿಂದ ನಮ್ಮ ಪ್ರಾಚೀನ ಪದ್ಧತಿಯಮೇಲೆ ಬರುವ ವಿರೋಧಸಿದ್ಧಾಂತವನ್ನು ನಿಷೇಧಿಸಬೇಕು. ಹಾಯಸ್ಕೂಲು ಕಾಲೇಜುಗಳಲ್ಲಿ ಹಿಂದೂ ವಿದ್ಯಾರ್ಥಿ—ವಿದ್ಯಾರ್ಥಿನಿಯರಿಗೆ ಅರ್ವಾಚೀನ ಸಂಸ್ಕಾರಗಳ ಸಂಬಂಧವಿಲ್ಲದಂಥ ಪ್ರಾಚೀನ ವಾರ್ಣಿಕ, ಧಾರ್ಮಿಕ ಶಿಕ್ಷಣವನ್ನು ಕೊಡುವ ಪದ್ಧತಿ ಏರ್ಪಡಬೇಕು. ಹಾಯಸ್ಕೂಲು ಕಾಲೇಜುಗಳ ಹಿಂದೂ ವಿದ್ಯಾರ್ಥಿ-ವಿದ್ಯಾರ್ಥಿನಿಯರು ಕೇವಲ ಪಾಶ್ಚಾತ್ಯ ಶಿಕ್ಷಣವನ್ನೊಂದನ್ನೇ ಸ್ವೀಕರಿಸದೆ ಹಿಂದೂ ಧರ್ಮತತ್ವದ ಶಿಕ್ಷಣದ ಭಾಗವನ್ನೂ ತೆಗೆದುಕೊಂಡು ಸ್ವಧರ್ಮವನ್ನು ಕಾಪಾಡಬೇಕು. ಧರ್ಮಕ್ಕೂ ರಾಷ್ಟ್ರಕ್ಕೂ, ಸಮಾಜಕ್ಕೂ ಕೇಡುಬಗೆಯಬಾರದು.

ಬ್ರಾಹ್ಮಣೇತರರು ತಮ್ಮ ಹೀನಸ್ಥಿತಿಗೆ ಬ್ರಾಹ್ಮಣರೇ ಕಾರಣೀಭೂತರು, ತಮ್ಮನ್ನು ಸುಧಾರಿಸಲಿಕ್ಕೆ ಅವರು ಬಿಡುವುದಿಲ್ಲ ಎಂಬ ಆಕ್ಷೇಪವನ್ನೂ, ಇವರಲ್ಲಿ ಅತಿಶೂದ್ರರೂ ಪಂಚಮರೂ, ಉಚ್ಚವರ್ಣದವರು ತಮ್ಮನ್ನು ಕೇವಲ ಅಸ್ಪೃಶ್ಯರನ್ನಾಗಿ ಮಾಡಿದ್ದಾರೆ. ನಮ್ಮ ಹೀನ ಸ್ಥಿತಿಯೂ, ಅಸ್ಪೃಶ್ಯತೆಯೂ ಯಾವಕಾಲಕ್ಕೂ ದೂರವಾಗುವ ಹಾಗೆ ಕಾಣುವುದಿಲ್ಲ. ಎಂಬ ಆಕ್ಷೇಪವನ್ನೂ, ತಂದು ವರ್ಗಬದ್ಧ ಸಮಾಜದವರ ಉಪದೇಶಕ್ಕೆ ಬದ್ಧರಾಗಿ ಒಬ್ಬೊಬ್ಬರಂತೆ ಎಷ್ಟೋ ಜನರು ಕ್ರಿಸ್ತೀ ಮತಕ್ಕೂ, ಮಹಮ್ಮದೀಯ ಮತಕ್ಕೂ ಸೇರಿಕೊಂಡರು ಮತ್ತು ಸೇರುತ್ತಲಿರುವರು. ಹೀಗಾಗುವುದರಿಂದ ನಮ್ಮ ಹಿಂದೂ ಸಮಾಜ ಪ್ರತೀಕವು ನಿರ್ಬಲವಾಗುತ್ತ ಬರಹತ್ತಿದೆ. ತ್ರಿದೋಷಗಳು ವಿಕೋಪಾವಸ್ಥೆಯನ್ನು ಹೊಂದಿದರೆ ಶರೀರವು ಹಲವು ರೋಗಗಳಿಗೆ ಆಸ್ಪದವಾಗಿ ಕೊನೆಗೆ ಕ್ಷಯರೋಗವನ್ನೂ, ಪಡೆದು ಕ್ಷೀಣವಾಗುವಂತೆ ಸಮಾಜ ಶರೀರಕ್ಕೂ ಸದ್ಯಕ್ಕೆ ವರ್ಣದ್ವೇಷ, ಜಾತಿದ್ವೇಷ, ಮೊದಲಾದುವುಗಳ ವಿಕೋಪ ಸ್ಥಿತಿಯಿಂದ ಕ್ಷಯರೋಗವು ಹಿಡದಿದೆ. ಕ್ಷಯರೋಗಿಯ ಅಂಗವು ಸಂಕುಚಿತವಾಗಿ ದಿನೆ ದಿನೇ ಶಕ್ತಿ ಕಡಿಮೆಯಾಗುತ್ತಬರುವಂತೆ ಸಮಾಜ ಶರೀರದ ಆಕಾರವು ಕಡಿಮೆ ಯಾಗುತ್ತ ಸಂಘ ಶಕ್ತಿ ನಷ್ಟವಾಗುತ್ತಲಿರುವುದು. ಕ್ಷಯರೋಗಿಯ ಆರೋಗ್ಯ ಭಾಗ್ಯಕ್ಕೆ ಒಂದು ಸಿದ್ಧೌಷಧದ ಆವಶ್ಯಕತೆ ಉಂಟಾಗುವಂತೆ ಸಮಾಜ ಪ್ರತೀಕದ, ಕ್ಷಯರೋಗದ ಶಾಂತಿಗೆ ಅನಾದಿಯಿಂದಲೂ, ಸಿದ್ಧವಾಗಿ ಬಂದ ಪರಸ್ಪರ ಪ್ರೇಮವ್ಯವಹಾರವೆಂಬ ಮಹೌಷಧವನ್ನು ಕೊಡಬೇಕು. ಸಿದ್ಧೌಷದವನ್ನು ಸ್ವೀಕರಿಸಿದ ಕ್ಷಯರೋಗಿ ಆರೋಗ್ಯ ವಿಶಿಷ್ಟನಾದ ಬಳಿಕ ಅಪಥ್ಯ ಪದಾರ್ಥಗಳ ಸೇವನೆಯನ್ನು ಮಾಡದೆ ಹಿತ ಪದಾರ್ಥಗಳನ್ನೇ ಉಪಯೋಗಿಸುತ್ತ ಬರುವುದರಿಂದ ಪುನಃ ಅವನ ಶರೀರವು ಪ್ರಾಯಃ ರೋಗಮಯವು ಹೇಗೆ ಆಗಲಿಕ್ಕಿಲ್ಲವೋ ಹಾಗೆ ಪ್ರೇಮ ವ್ಯವಹಾರ ಮಹೌಷಧವನ್ನು ಸ್ವೀಕರಿಸಿ ಶಾಂತಿಯನ್ನು ಪಡೆದ ಸಮಾಜದ ಶರೀರವು ಪರಕೀಯಧರ್ಮಸಂಸ್ಕಾರವೆಂಬ ಅಪಥ್ಯ ಸೇವನೆಯನ್ನು

ಪ್ಪು ಸ್ವಧರ್ಮ ಸಂಸ್ಕಾರವೆಂಬ ಪಥ್ಯವ ಸೇವನೆಯನ್ನೇ ಮಾಡುತ್ತ ಬಂದರೆ ರೋಗಮಯವಾಗಲಾರದು. ರೋಗಿಯಾ ದವನಿಗೆ ಔಷಧವನ್ನು ಕೊಡಲಿಕ್ಕೆ ಒಬ್ಬ ವೈದ್ಯನೇ ಸಾಕು. ಆದರೆ ಸಮಾಜ ಶರೀರಕ್ಕೆ ಪರಸ್ಪರ ಪ್ರೇಮ ವ್ಯವಹಾರರೂಪ ವಾದ ಮಹೌಷಧವನ್ನು ಕೊಡುವಾಗ ಸಾಮಾಜಿಕರೆಲ್ಲರೂ, ವೈದ್ಯರಾಗಬೇಕಾಗುತ್ತದೆ. ವೈದ್ಯರು ಹಲವರಾದರೂ, ಪರಸ್ಪರ ಪ್ರೇಮರೂಪವಾದ ಮಹೌಷಧವು ಒಂದೇ ಸರಿ. ಎಲ್ಲರ ಪ್ರೇಮವು ಏಕತ್ರವಾಯಿತೆಂದರೆ ಸಮಾಜವು ನಿಜವಾದ ಆನಂದವನ್ನು ಅನುಭವಿಸುವುದೆಂಬುದರಲ್ಲಿ ಸಂಶಯವಿಲ್ಲ.

ವಿದ್ಯಾಬುದ್ಧಿಗಳಿಂದಲೂ, ಉಡಿಗೆತೊಡಿಗೆಗಳಿಂದಲೂ, ನಡೆ ನುಡಿಗಳಿಂದಲೂ, ಆಚಾರವಿಚಾರಗಳಿಂದಲೂ, ಹಿಂದುಳಿದ ವರನ್ನು ಸುಧಾರಕವರ್ಗವು ಮುಂದಕ್ಕೆ ತರಬೇಕಾದುದು ಮುಖ್ಯವು. ಅತಿಶೂದ್ರರೂ, ಪಂಚಮರೂ, ಅತಿಶಯವಾಗಿ ಹಿಂದುಳಿದವರಾಗಿದ್ದಾರೆ. ವಿದ್ಯಾಬುದ್ಧಿಗಳ ಬಗ್ಗೆ ಸಂಸ್ಥೆ ಗಳನ್ನು ಕಟ್ಟಿಸಿ ಕೊಡಬೇಕು. ವರ್ಣತತ್ವ-ಜಾತಿತತ್ವಗಳ ಶಿಕ್ಷಣವನ್ನು ಶಾಸ್ತ್ರೀಯ ರೀತಿಯಿಂದ ಕೊಡುವ ಏರ್ಪಾಡು ಮಾಡಬೇಕು. ವೇದವೇ ಹಿಂದುಗಳ ಜ್ಞಾನ ಭಂಡಾರವೆಂಬ ಅನುಭವವನ್ನು ಅವರಿಗೆ ತಂದುಕೊಡಬೇಕು. ಮದ್ಯ ಮಾಂಸ ಗಳ ಪಾನಭಕ್ಷಣಗಳನ್ನು ಬಿಡುವಂತೆ ವ್ಯವಸ್ಥೆಯಾಗಬೇಕು. ಅಂತ್ಯಜರು ಈ ತತ್ವವನ್ನು ಅಂಗೀಕರಿಸಿ ಆ ವಿಷಯದಲ್ಲಿ ಪ್ರಯತ್ನವನ್ನು ಮಾಡಬೇಕು. ಅತಿಶೂದ್ರರ ಮತ್ತು ಪಂಚ ಮರ ಅಸ್ಪೃಶ್ಯತೆ ಅನಾದಿ ಕಾಲದಿಂದ ಸಿದ್ಧವಾಗಿ ಬಂದಿ ದ್ದಿತ್ತು. ಅತಿಶೂದ್ರರು ಮೇಲಿನ ಸುಧಾರಣೆಗಳನ್ನು ಪಡೆದು ಮುಂದೆ ಬಂದರೆ ಆಗ ಅವರನ್ನು ಸಚ್ಛೂದ್ರರಲ್ಲಿ ಸೇರಿಸಿ ಅಸ್ಪೃಶ್ಯತೆಯನ್ನು ಕದಾಚಿತ್ ಪರಿಹರಿಸಬಹುದಾದರೂ, ಪಂಚಮರ ಅಸ್ಪೃಶ್ಯತೆ ಮಾತ್ರ ಯಾವಾಗಲೂ, ಅಪರಿ ಹಾರ್ಯವಾದುದೇ ಇರುತ್ತದೆ. ವೇದಧರ್ಮಿಗಳೆಲ್ಲರೂ, ಈ ವಿಷಯವನ್ನು ಅಂಗೀಕರಿಸತಕ್ಕದ್ದು. ಇದು ಪರಿಹಾರ್ಯ ವೆಂದು ಕೆಲವರು ವಾದಿಸುವುದೂ, ಈ ವಾದವನ್ನು ಪಂಚ ಮರು ಅಂಗೀಕರಿಸಿ ಪ್ರಯತ್ನನಡಿಸುವುದೂ, ಶಾಸ್ತ್ರದೃಷ್ಟಿ ಯಿಂದ ಅಧರ್ಮವೇ ಎಂದು ನಿಃಸಂಶಯವಾಗಿ ಹೇಳ ಬಹುದು. ಮೇಲುಜನಾಂಗದವರು ಅವರನ್ನು ಪ್ರೇಮದಿಂದ ನೋಡಬೇಕಾದುದು ಮುಖ್ಯ. ತಕ್ಕ ವ್ಯವಸ್ಥೆಗಳಿಂದ ಅವರ ದಾರಿದ್ರ್ಯವನ್ನು ಪರಿಹರಿಸಿ ಕೊಡುವುದು ಯುಕ್ತವಾ ದುದು. ಏವಂಚ ಪರಸ್ಪರ ಪ್ರೇಮಭಾವನೆಯೂ, ಸಹಕಾರಿ ತ್ವವೂ, ಪೂರ್ವದಂತೆ ಪ್ರಚಾರಕ್ಕೆ ಬಂದರೆ ಎಲ್ಲ ಸುಧಾರಣೆ ಗಳನ್ನೂ ಪಡೆದು ಹಿಂದೂ ಸಮಾಜವು ಶಾಂತಿಸಮೃದ್ಧ ವಾಗುವುದು.

## ( ಉಪಸಂಹಾರ )

ಸಂಪೂರ್ಣ ಹಿಂದೂ ಸಮಾಜವು ಒಂದೇ ವಿಧವಾದ ಜಾಗರೂಕತೆಯನ್ನು ಪಡೆಯಬೇಕು. ಪೂರ್ವದಲ್ಲೊಂದು ಕಾಲ ದಲ್ಲಿ ಈ ವಿಧವಾದ ಜಾಗರೂಕತೆ ಇದ್ದಿತೆಂದು ಪುರಾಣ ಗಳಿಂದ ತಿಳಿದುಬರುತ್ತದೆ. ಮಾತೃಸ್ಥಾನವೆಂದರೆ ಪ್ರಾಣಿ ಮಾತ್ರಕ್ಕೆ ಪ್ರಿಯಸ್ಥಾನವು. ಇತರ ಪ್ರಾಣಿಗಳು ತಮಗೆ ಜನ್ಮ ವನ್ನು ಕೊಟ್ಟ ಮಾತೃಸ್ಥಾನವನ್ನೊಂದನ್ನೆ ಪ್ರೀತಿಸುತ್ತವೆ. ಮನುಷ್ಯರು ಹಾಗಲ್ಲ. ಇವರು ಅನೇಕ ಮಾತೃಸ್ಥಾನಗ ಳನ್ನು ಪ್ರೀತಿಸಬೇಕಾಗುತ್ತದೆ. (೧)ಜನನಿ (೨) ಜನ್ಮ ಭೂಮಿ, (೩) ವರ್ಣ, (೪) ವಿದ್ಯೆ, (೫) ಜಾತಿ, (೬) ವೃತ್ತಿ, (೭) ರಾಷ್ಟ್ರ, (೮) ಸಮಾಜ, (೯) ಧರ್ಮ, (ಆಚಾರ) ಇತ್ಯಾದಿಗಳೆಲ್ಲ ಇವರ ಮಾತೃಸ್ಥಾನಗಳು. ಇವುಗಳಲ್ಲಿ ಕೆಲವುಗಳನ್ನು ಬಿಟ್ಟು, ಕೆಲವುಗಳನ್ನೇ ಪರಕೀಯ ರಾಷ್ಟ್ರದವರು ಅಂಗೀಕರಿಸಿದ್ದರೂ, ನಮ್ಮ ಹಿಂದೂ ಸಮಾ ಜವು ಆ ಎಲ್ಲ ಸ್ಥಾನಗಳನ್ನೂ, ಪ್ರೀತಿಸುತ್ತದೆ. ಹಾಗೆ ಪ್ರೀತಿಸಬೇಕಾದುದು ಇದರ ಪರಮಧರ್ಮ. ಆ ಎಲ್ಲ ಮಾತೃ ಸ್ಥಾನಗಳಲ್ಲಿ ಯಾವ ಸ್ಥಾನಕ್ಕೆ ಕೇಡು ಬಗೆದರೂ, ಮಾತೃ ಹಿಂಸಾ ದೋಷವು ಬರುತ್ತದೆ. ಭಿನ್ನ ಭಾವವನ್ನೆಣಿಸದೆ ಆ ಎಲ್ಲ ಸ್ಥಾನಗಳಲ್ಲಿಯೂ, ಏಕರೂಪವಾದ ಪ್ರೇಮವನ್ನು ಮಾ ಡುತ್ತ ಬಂದರೆ ಮಾತೃಭಕ್ತಿಯನ್ನು ಕಾಪಾಡಿಕೊಂಡಂತಾಗು ತ್ತದೆ. "न मातुः परदैवतं," "मातृदेवो भव" ಇತ್ಯಾದಿ ವಾಕ್ಯ ಗಳಿಂದ ಮಾತೃಸ್ಥಾನೋಪಾಸನೆ ಪರದೇವತೋಪಾಸನೆ ಯೆಂದೂ, ಆ ಉಪಾಸನೆಯನ್ನು ಮನುಷ್ಯನು ಏಕಪ್ರಕಾರ ಮಾಡುತ್ತಿರಬೇಕೆಂದೂ, ತಿಳಿದುಬರುತ್ತದೆ. ಆದುದರಿಂದಲೇ ರಾಷ್ಟ್ರಭಕ್ತರು ಪರದೇವತೋಪಾಸನೆಯನ್ನು ಮಾಡಿ ಧನ್ಯರಾ ಗುತ್ತಾರೆಂದು ಹೇಳಬಹುದು. ಅದರಂತೆ ನಾವೆಲ್ಲರೂ, ಆ ಎಲ್ಲ ಮಾತೃಸ್ಥಾನಗಳನ್ನೂ, ಏಕಭಾವನೆಯಿಂದ ಆರಾಧಿಸಿ ಕೃತ ಕೃತ್ಯರಾಗೋಣ. ಈ ವಿಷಯದಲ್ಲಿ ಸರ್ವೇಶ್ವರನು ಸರ್ವ ರಿಗೂ ಸದ್ಬುದ್ಧಿಯನ್ನು ಕೊಟ್ಟು ಎಲ್ಲರನ್ನೂ ರಕ್ಷಿಸಿ ಭಾರತ ಭೂಮಿಯನ್ನು ಮುಂದಕ್ಕೆ ತಂದು ವೈದಿಕ ಧರ್ಮವನ್ನು ಕಾಪಾಡಲಿ.!

[ ಸಂಪೂರ್ಣ ]

---

# ವಿದೇಶಿ ಭಾಂಡವಲವು ನಮ್ಮ ಕೊರಳಿಗೆ ಉರುಲು

ಲೇ :—ಶ್ರೀ. ಗುರುರಾವ ವಾಳವೇಕರ ಬಿ. ಎ., ಎಲ್‌ಎಲ್. ಬಿ. ಹುಬ್ಬಳ್ಳಿ.

ವಿದೇಶಿ ಭಾಂಡವಲದ ಪ್ರಶ್ನೆ ಹಿಂದೀಜನರನ್ನು ಬಹು ದಿವಸದಿಂದ ಪೀಡಿಸುತ್ತದೆ. ಪರಕೀಯರು ಹಿಂದುಸ್ಥಾನದಲ್ಲಿ ಭಾಂಡವಲವನ್ನು ಬಿತ್ತುತ್ತಾರೆಂಬುದು ಎಲ್ಲರಿಗೂ ಗೊತ್ತಿದ್ದ ಮಾತು. ಎಷ್ಟರಮಟ್ಟಿಗೆ ವಿದೇಶಿ ಭಾಂಡವಲಕ್ಕೆ ನಾವು (ಅಥವಾ ನಮ್ಮ ಆಳರಸರು (ಯಾಕಂದರೆ ನಮಗೆ ರಾಜಕೀಯ ಅಸ್ತಿತ್ವವೇ ಇಲ್ಲ.) ಅಸುವು ಕೊಡಬೇಕು, ವಿದೇಶಿ ಭಾಂಡವಲದಿಂದ ಎಷ್ಟರ ಮಟ್ಟಿಗೆ ಹಿಂದುಸ್ಥಾನದ ಹಿತವಾಗುತ್ತದೆ, ವಿದೇಶಿಭಾಂಡವಲವು ಯಾವ ಯಾವ ರೂಪಗಳನ್ನು ತಾಳಿ ಹಿಂದುಸ್ಥಾನದಲ್ಲಿ ಸೇರುತ್ತದೆಂಬುದನ್ನು ವಿಚಾರಿಸುವುದು ಅತ್ಯವಶ್ಯವಿದೆ.

ಭಾಂಡವಲವು ಎಲ್ಲ ಉದ್ಯೋಗ ವ್ಯವಸಾಯಗಳ ತಳಹದಿ. ಭಾಂಡವಲದ ವಿಪುಲತೆ ಅಥವಾ ಕೊರತೆಯ ಮೇಲೆ ರಾಷ್ಟ್ರದ ಆರ್ಥಿಕ ಉನ್ನತಿ ಅವಲಂಭಿಸಿದೆ. ನಮ್ಮಲ್ಲಿ ಭಾಂಡವಲದ ಕೊರತೆಯಿದೆ. ನಮ್ಮಲ್ಲಿ ಅಲ್ಪಸ್ವಲ್ಪ ಭಾಂಡವಲವಿದ್ದರೆ ಅದನ್ನು ನಾವು ಉದ್ಯೋಗ ವ್ಯವಸಾಯಗಳಲ್ಲಿ ತೊಡಕಿಸುವುದಿಲ್ಲ. ಪರಕೀಯರು ತಮ್ಮ ಭಾಂಡವಲವನ್ನು ನಿರ್ಭಯದಿಂದ ನಮ್ಮ ದೇಶದಲ್ಲಿ ಬಿತ್ತುತ್ತಾರೆ. ಹಿಂದೀಭಾಂಡವಲವು ಹೊರಗೆ ಬರಲಿಕ್ಕೆ ನಾಚುತ್ತದೆ. ಪರಕೀಯ ಭಾಂಡವಲವು ಕುಣಿಯುತ್ತ ಹೊರಗೆ ಬರುತ್ತದೆ. ಇದರ ಇಂಗಿತವೇನು ?

ಹಿಂದುಸ್ಥಾನದಲ್ಲಿ ವಿದೇಶಿ ಭಾಂಡವಲವು ಬರುವುದರಿಂದ ಅನೇಕ ಹೊಸ ಉದ್ಯೋಗಗಳು ಹೊರಟಿರುತ್ತವೆ, ಅನೇಕ ಜನರಿಗೆ ಹೊಟ್ಟೆತುಂಬಿಕೊಳ್ಳಲಿಕ್ಕೆ ಅದರಿಂದ ಸಹಾಯವಾಗಿದೆ, ಹಿಂದುಸ್ಥಾನದಲ್ಲಿ ಒಂದು ತರದ ಔದ್ಯೋಗಿಕ ವಾತಾವರಣವು ಉಂಟಾಗಿದೆ, ನಮ್ಮ ಜನರಿಗೆ ಉದ್ಯೋಗ ವ್ಯವಸಾಯಗಳಲ್ಲಿ ಅಭಿರುಚಿಯುಂಟಾಗಿದೆ ಎಂದು ವಿದೇಶಿಭಾಂಡವಲವನ್ನು ಹಾಡಿ ಹರಿಸಿ ಅದನ್ನು ಆತುರತೆಯಿಂದ ಬರಮಾಡಿಕೊಳ್ಳಬೇಕೆಂದು ಕೆಲವರು ಅಭಿಪ್ರಾಯ ಪಡುತ್ತಾರೆ. ವಿದೇಶಿ ಭಾಂಡವಲದ ಆಗಮನದಿಂದಾದ ಅಪರಿಮಿತ ಹಾನಿಯ ಕಡೆಗೆ ಅವರ ಲಕ್ಷ್ಯವಿಲ್ಲ.

(೧) ಪರಕೀಯರು, ಮುಖ್ಯವಾಗಿ ಬ್ರಿಟಿಶರು, ಹಿಂದುಸ್ಥಾನದಲ್ಲಿ ಭಾಂಡವಲವನ್ನು ಹಾಕಿ ಕಾರಖಾನೆಗಳನ್ನು ತೆಗೆದು, ಗಿರಣಿಗಳನ್ನು ಸ್ಥಾಪಿಸಿ, ಚಹಾ ಕಾಫಿ ತೋಟಗಳನ್ನು ಮಾಡಿ ಅಡತಿಗಳನ್ನು ನಡಿಸಿ, ಮತ್ತು ಬ್ಯಾಂಕುಗಳನ್ನು ಸ್ಥಾಪಿಸಿ ಸತ್ತಾಧೀಶರಾಗಿರುತ್ತಾರೆ. ಸಜಾತೀಯರ ಕೈಯಲ್ಲಿ ರಾಜಸತ್ತೆ ಎಷ್ಟು ಹೆಚ್ಚು ಇದ್ದೀತು ಅಷ್ಟು ಹೆಚ್ಚು ತಮ್ಮ ವ್ಯವಹಾರವು ಬೆಳೆವುದೆಂದು ಬ್ರಿಟಿಶಭಾಂಡವಲಿಗರು ಅನುಭವದಿಂದ ಕಂಡುಕೊಂಡಿದ್ದಾರೆ. ಆದುದರಿಂದ ಅವರು ರಾಜಕೀಯ ಸತ್ತೆ ಆಳರಸರ ಕೈಬಿಡಬಾರದೆಂದು ಹೆಣಗಾಡುತ್ತಾರೆ. ಹಿಂದೀಜನರಿಗೆ ಸ್ವರಾಜ್ಯದ ತುಣುಕು ದೊರೆತರೂ ಕೂಡ ಅಷ್ಟರಮಟ್ಟಿಗೆ ತಮಗಿರುವ ಸವಲತ್ತುಗಳು ಕಡಿಮೆಯಾಗುವುವು, ಮತ್ತು ತಮ್ಮ ಭಾಂಡವಲದಿಂದ ಬರುವಷ್ಟು ಲಾಭವು ಬರುವುದಿಲ್ಲೆಂದು ಅವರು ತಿಳಿದಿರುತ್ತಾರೆ. ಬ್ರಿಟಿಶ ಭಾಂಡವಲವು ಹೆಚ್ಚಿದಷ್ಟು ಸ್ವರಾಜ್ಯದ ಸುದಿನವು ದೂರಹೋಗುವುದು. ಬ್ರಿಟಿಶ ವ್ಯಾಪಾರಸ್ಥರ ಚೇಂಬರ ಆಫ ಕಾಮರ್ಸ ಎಂಬ ಸಂಘಗಳ ಚಟವಟಿಕೆಗಳನ್ನು ನೋಡಿದರೆ ಅವು ಹಿಂದೀಜನರ ರಾಜಕೀಯ ಆಕಾಂಕ್ಷೆಗೆ ಎಷ್ಟು ಸಹಾನಭೂತಿಯನ್ನು ತೋರಿಸುತ್ತವೆಂಬುದು ಒಡೆದು ಕಾಣುತ್ತದೆ.

(೨) ಪರಕೀಯ ಭಾಂಡವಲವು ಹಿಂದುಸ್ಥಾನದಿಂದ ಲಾಭದ ರೂಪದಿಂದ ಅಗಣಿತ ದ್ರವ್ಯವನ್ನು ಹೊತ್ತುಕೊಂಡು ಹೋಗುತ್ತದೆ. ಮುಂಬಯಿ ವಿಶ್ವವಿದ್ಯಾಲಯದ ಪ್ರೊಫೇಸರರೂ ಹಾಗೂ ಹೆಸರಾದ ತಜ್ಞರೂ ಆದ ಶ್ರೀಯುತ ಕೇ. ಟಿ. ಶಹಾ ಇವರು ಪ್ರತಿವರ್ಷ ಹಿಂದುಸ್ಥಾನದಿಂದ ೭೪ ಕೋಟಿ ರೂಪಾಯಿಗಳು ಪರಕೀಯ ಭಾಂಡವಲಿಗರಿಗೆ ಲಾಭರೂಪದಿಂದ ಸಲ್ಲುತ್ತದೆಂದು ನಿರ್ಣಯಿಸಿದ್ದಾರೆ. ೭೪ ಕೋಟಿಯಲ್ಲಿ ಲೆಕ್ಕಕ್ಕೆ ಹತ್ತದ ಕಣ್ಣಿಗೆ ಕಾಣದ (Invisible) ಭಾಂಡವಲದ ಬಡ್ಡಿ ಅಥವಾ ಲಾಭವು ಸೇರಿಲ್ಲವಂತೆ ! ಹಾಗಾದರೆ ಲೆಕ್ಕಕ್ಕೆ ಹತ್ತದ ಕಣ್ಣಿಗೆ ಕಾಣದ ಲಾಭವು ಯಾವುದು? ಪರದೇಶಗಳಲ್ಲಿ ಸ್ಥಾಪಿತವಾದ ಹಾಗೂ ಅಲ್ಲಿಯೇ ಮುಖ್ಯ ಕಚೇರಿಗಳಿದ್ದ (Head Office) ಇನ್ಸುಅರನ್ಸ ಕಂಪನಿಗಳಿಗೆ, ಎಕ್ಸಚೇಂಜ ಬ್ಯಾಂಕುಗಳಿಗೆ, ಮತ್ತು ಸ್ಟೀಮರ ಕಂಪನಿಗಳಿಗೆ ಹಿಂದುಸ್ಥಾನದಿಂದ ಎಷ್ಟು ಬಡ್ಡಿ ಅಥವಾ ಲಾಭವು ದೊರೆಯುತ್ತದೆಂಬುದು ತಿಳಿವ

ಲ್ಲಿ. ಇದಲ್ಲದೆ ಹಿಂದುಸ್ಥಾನದಲ್ಲಿಯ ಕಾರಖಾನೆಗಳಲ್ಲಿ ಮತ್ತು ನಿಗಳಲ್ಲಿ ಬ್ರಿಟಿಶ ಜನರ ಪಾಲುಗಳು (ಶೇರುಗಳು) ಎಷ್ಟು ಕವೆ, ಆ ಬಗ್ಗೆ ಅವರಿಗೆ ಎಷ್ಟು ಲಾಭವು ಮುಟ್ಟುತ್ತದೆ ಎಂಬು ನ್ನು ಅರಿತುಕೊಳ್ಳಲಿಕ್ಕೆ ಮಾರ್ಗವಿಲ್ಲ. ವಿದೇಶಿ ಭಾಂಡ ಲವು ಹಿಂದುಸ್ಥಾನದಲ್ಲಿ ಬರದಿದ್ದರೆ ಪ್ರತಿವರ್ಷ ಹಿಂದು ಸ್ಥಾನದಿಂದ ಹರಿದುಹೋಗುವ ಲಾಭದ ಪ್ರವಾಹವು ಹಿಂದು ಸ್ಥಾನದಲ್ಲಿಯೇ ಉಳಿದು ಅದರಿಂದ ಹಿಂದೀ ಉದ್ಯೋಗ ವ್ಯವ ಸಾಯಗಳಿಗೆ ಸಹಾಯವಾಗುತ್ತಿತ್ತು. ಭಾಂಡವಲವನ್ನು ಬಿತ್ತಿ ಭಾಂಡವಲವನ್ನು ಬೆಳೆಯಬೇಕು. ಭಾಂಡವಲದ ಉತ್ಪತ್ತಿ ಮುಖ್ಯವಾಗಿ ಎರಡರಿಂದಾಗುತ್ತದೆ. (ಅ) ಉದ್ಯೋಗ ವ್ಯವ ಸಾಯಗಳಲ್ಲಿ, ವ್ಯಾಪಾರ ಉದ್ಯಮಗಳಲ್ಲಿ ತೊಡಕಿಸಿದ ಭಾಂಡ ವಲದಿಂದ ಆಗುವ ಲಾಭ (ಆ) ಜನರು ಗಳಿಸಿದ ಹಣದಿಂದ ತಮ್ಮ ಖರ್ಚು ಕಳೆದಾದ ಉಳಿತಾಯ. ಉದ್ಯೋಗ ವ್ಯವ ಸಾಯಗಳಲ್ಲಿಯ ಮತ್ತು ವ್ಯಾಪಾರ ಉದ್ದಿಮಗಳಲ್ಲಿಯ ಲಾಭ ದ ದೊಡ್ಡ ಅಂಶವು ದೇಶದ ಹೊರಗೆ ಹೋದರೆ ಹೊಸ ಭಾಂಡವಲವು ಹೇಗೆ ದೊರೆಯಬೇಕು? ಮುಖ್ಯವಾಗಿ ಭಾಂಡ ವಲದ ಸಂಚಯವಾಗುವುದು ಈ ತರದ ಲಾಭದಿಂದಲೇ. ಜನರ ಉಳಿತಾಯದಿಂದ ದೊರಕುವ ಭಾಂಡವಲವು ತೀರ ಕಡಿಮೆ. ಅದರಲ್ಲಿ ಹಿಂದುಸ್ಥಾನದಲ್ಲಿಯ ಜನರ ಉತ್ಪನ್ನವು ಅತ್ಯಲ್ಪವಾಗಿರುತ್ತದೆ. ಅದರಿಂದ ಹೊಟ್ಟೆ ಹೊರಕೊಳ್ಳಬೇಕಾ ದರೆ ಸಾಕುಬೇಕಾಗುತ್ತದೆ. ಹಿಂದೀಜನರ ಉಳಿತಾಯದಿಂದ ಭಾಂಡವಲವು ಕೂಡಿಬಿದ್ದೀತೆಂಬುದನ್ನು ನಾವು ಮರೆಯಬೇಕು.

(ಇ) ಪರಕೀಯ ಭಾಂಡವಲವು ಹಿಂದುಸ್ಥಾನಕ್ಕೆ ಬರದಿ ದ್ದರೆ ನಿಸರ್ಗದೇವತೆ ಕೊಟ್ಟ ಸಂಪತ್ತಿಯ ಉಪಯೋಗವು ನಮಗೆ ಆಗುತ್ತಿದ್ದಿಲ್ಲವೆಂದೂ, ಪರಕೀಯ ಭಾಂಡವಲವು ನಮ್ಮಲ್ಲಿ ಕಚ್ಚಾಸ್ಥಿತಿಯಲ್ಲಿದ್ದ (Crude form) ಸಂಪತ್ತು ಗಿರಾಯಿಕಿಗೆ ಬೇಕಾದ ಸ್ವರೂಪಕ್ಕೆ ತರಲಿಕ್ಕೆ ಅನುಕೂಲವಾ ಗಿದೆಂದೂ, ಪರಕೀಯ ಭಾಂಡವಲದ ಪುರಸ್ಕರ್ತರು ಜಂಭ ದಿಂದ ಹೇಳುತ್ತಾರೆ. ನಿಸರ್ಗದ ಹೊಟ್ಟೆಯಲ್ಲಿದ್ದ ಸಂಪತ್ತು ಹಳಿಸುವುದಿಲ್ಲ. ಹಿಂದುಸ್ಥಾನದಲ್ಲಿ ಭಾಂಡವಲವು ಕೂಡಿದ ಬಳಿಕ ಅದನ್ನು ಹೊರಗೆ ತೆಗೆಯಲಿಕ್ಕೆ ಬರುವುದಿಲ್ಲವೋ? ಹಾಗೆ ಮಾಡುವುದರಿಂದ ಎಲ್ಲ ಲಾಭವು ಹಿಂದುಸ್ಥಾನದ ಲ್ಲಿಯೇ ಉಳಿದು ಅದರಿಂದ ಹೆಚ್ಚಿನ ಕಾರಖಾನೆಗಳನ್ನು ತೆಗೆಯ ಬಹುದು. ಕಚ್ಚಾಮಾಲು ಮಾರಿ ರೈತರ ಪದರಿನಲ್ಲಿ ಹಣ ಬಿದ್ದರೆ ಒಳಿತು. ಆದರೆ ಬ್ರಿಟಿಶಜನರು ಆಳರಸರ ಸಹಾಯ ದಿಂದ ಹಿಂದೀಜನರ ರಾಜಕೀಯಪರವಶತೆಯ ಮೂಲಕ ಕಚ್ಚಾಮಾಲಿನಿಂದ ಪಕ್ಕಾಮಾಲು ಮಾಡುವುದರಲ್ಲಿ ಆದ ಎಲ್ಲ ಲಾಭವನ್ನು ತಮ್ಮ ಪಾಲಿಗಿಟ್ಟುಕೊಳ್ಳುತ್ತಿರುವರು. ಇದರಿಂದ ಹಿಂದೀ ರೈತರಿಗೆ ಅಪರಿಮಿತ ಹಾನಿಯೆಂಬುದು ಕೂಸಿಗೆ ತಿಳಿವ ಮಾತು. ಭಂಗಾರ, ಕಬ್ಬಿಣ, ಕಲ್ಲಿದ್ದಲಿ, ಚಿಮಣಿ ಎಣ್ಣೆ ಮುಂತಾದುವುಗಳು ಹಿಂದುಸ್ಥಾನದಲ್ಲಿ ಭಾಂಡವಲವು ಕೂಡು ವವರೆಗೆ ಖಣಿಗಳಲ್ಲಿದ್ದರೆ ಅದರಿಂದಾಗುವ ಹಾನಿಯೇನು? ನಮ್ಮಲ್ಲಿದ್ದ ಖನಿಜಪದಾರ್ಥಗಳನ್ನು ಅಗಿದು ಬಳಕೊಂಡು ಹೋಗಗೊಡುವುದರಿಂದ ಆದ ಹಾನಿ ಎಂದೂ ತುಂಬಿಬರು ವುದಿಲ್ಲ. ಬ್ರಿಟಿಶರು ಕೂಡ ತಮ್ಮಲ್ಲಿದ್ದ ಕಲ್ಲಿದ್ದಲಿಯ ಖಣ್ಣೆ ಗಳ ಉಪಯೋಗವನ್ನು ಬಹಳ ಜಾಗ್ರತೆಯಿಂದ ಮಾಡಬೇ ಕೆಂದು ಅರ್ಥಶಾಸ್ತ್ರಜ್ಞರು ಹೇಳತೊಡಗಿದ್ದಾರೆ. ಸ್ವರಾಜ್ಯದ ಘನತೆಗೇರಿದ ಯಾವ ದೇಶವೂ ಪರಕೀಯರಿಗೆ ತನ್ನ ನಿಸರ್ಗ ದೇವತೆ ದಯಪಾಲಿಸಿದ ಸಂಪತ್ತಿಯನ್ನು ಉಪಯೋಗಿಸಿಕೊ ಳ್ಳಲಿಕ್ಕೆ ಕೊಡುವುದಿಲ್ಲ.

(ಳ) ಹಿಂದುಸ್ಥಾನದಲ್ಲಿಯ ಯುರೋಪೀಯ ಕಾರಖಾನೆ ದಾರರು ಹಿಂದೀ ಕೂಲಿಕಾರರನ್ನು ಹೇಗೆ ನಡಿಸಿಕೊಳ್ಳುತ್ತಾ ರೆಂಬುದು ಸರ್ವಶ್ರುತವಾದ ಮಾತು. ಹಿಂದೀಜನರ ಮೇಲೆ ಅಮಲು ನಡಿಸುವುದು ತಮ್ಮ ಹಕ್ಕೆಂದು ಇವರು ತಿಳಿಯುತ್ತಾರೆ. ಪ್ಲೀಹ (Spleen) ಬೆಳಿಸಿಕೊಂಡು ಯುರೋಪಿಯ ಜನರ ಒದಿಕೆಗಳನ್ನು ತಿಂದು ಪ್ರಾಣಕ್ಕೆ ಎರವಾಗುವ ಹಿಂದೀಜನರ ಸಂಖ್ಯೆ ಕಡಿಮೆ ಇಲ್ಲ. ಬ್ರಿಟಿಶ ಜನರ ಚಹಾದ ತೋಟಗ ಳಲ್ಲಿ ಕೆಲಸ ಮಾಡಲಿಕ್ಕೆ ಹೋದ ಕೂಲಿಕಾರರ ಸ್ಥಿತಿ ತೀರ ಶೋಚನೀಯವಾಗಿದೆ. ಈತರದ ರೋಗಗ್ರಸ್ಥ ಜನರ ಮಕ್ಕಳು ನಿರೋಗಿಗಳೂ ಸದೃಢರೂ ಇರುವುದು ಶಕ್ಯವಿಲ್ಲ. ಈ ಸ್ಥಿತಿಯಲ್ಲಿ ನಮ್ಮ ಕೂಲಿಕಾರರಿಗೆ ಹೊಟ್ಟೆಗೆ ದೊರೆಯು ತ್ತದೆಂದು ಸಂತೋಷ ಬಡುವುದು ತೀರ ತಪ್ಪು. ಸ್ವಲ್ಪಕಾಲ ದಲ್ಲಿಯೇ ಇವರು ದುರ್ಬಲರಾಗಿ ತಮ್ಮ ಉಪಜೀವನಕ್ಕಾಗಿ ಸಮಾಜದ ಮೇಲೆ ಅವಲಂಬಿಸುತ್ತಾರೆ. ತಮಗೆ ಲಾಭವು ಕಡಿಮೆಯಾದರೂ ಚಿಂತೆಯಿಲ್ಲ, ಕೂಲಿಕಾರರ ಸ್ಥಿತಿ ಕೆಡಬಾ ರದು, ಅದರಿಂದ ಎಲ್ಲ ಸಮಾಜದ ಹಾನಿಯಾಗುತ್ತದೆ, ಎಂಬ ಭಾವನೆ ಯುರೋಪಿಯನರಲ್ಲಿ ಹುಟ್ಟುವುದು ಶಕ್ಯವಿಲ್ಲ. ಆಳರ ಸರು ನಿಯಮನಿರ್ಬಂಧನೆಗಳನ್ನು ಮಾಡಿ ಕೂಲಿಕಾರರ

ಹಿತರಕ್ಷಣೆ ಮಾಡುವಂತೆ ಕಾಣುವುದಿಲ್ಲ. ರೇಲ್ವೆಗಳಲ್ಲಿಯ ಕೂಲಿಕಾರರ ಸಂಘಗಳು (ಮುಷ್ಕರಗಳು) ಅವರ ದುಸ್ಥಿತಿಯ ನಿದರ್ಶನವಾಗಿವೆ.

(೫) ಯುರೋಪಿಯುರ ಕಾರಖಾನೆಗಳಲ್ಲಿ ಜವಾಬದಾರಿಯ ಹಾಗೂ ಮೇಲುತರಗತಿಯ ಸ್ಥಳಗಳ ಮೇಲೆ ಹಿಂದೀ ಜನರ ನೇಮಣೂಕು ಆಗುವುದಿಲ್ಲ. ಹಿಂದೀಜನರಿಗೆ ಹೊಸ ಕಲೆಗಳನ್ನು ಕಲಿತುಕೊಳ್ಳುವ ಅನುವು ದೊರೆವುದಿಲ್ಲ. ಹೇಳಿದಷ್ಟು ಕೆಲಸವನ್ನು ಮಾಡಿಕೊಂಡು ಕೂಲಿಕಾರರಂತೆ ಇರುವುದು ಹಿಂದೀಜನರ ಪಾಲಿಗೆ ಕಟ್ಟಿಟ್ಟದ್ದಾಗಿದೆ. ಈ ತರದ ಪರಿಸ್ಥಿತಿ ಇದ್ದರೂ ಉದ್ಯೋಗ ವ್ಯವಸಾಯದ ವಾತಾವರಣವು ಹಬ್ಬುತ್ತದೆಂಬ ವಿಚಾರದಿಂದ ನಮ್ಮ ಜನರು ಹೋಗುತ್ತಾರಲ್ಲ! ರೇಲ್ವೆಗಳು ಹಿಂದುಸ್ಥಾನದಲ್ಲಿ ಬಂದು ೫೦-೬೦ ವರ್ಷಗಳ ಕಿಂತ ಹೆಚ್ಚಾಯಿತು. ಆದರೆ ೫೦-೬೦ ವರ್ಷಗಳಲ್ಲಿ ರೇಲ್ವೆ ವರ್ಕಶಾಪುಗಳಲ್ಲಿ ಎಷ್ಟು ಹಿಂದೀಜನರು ಹೆಚ್ಚಿನ ತರಗತಿಯ ಶಾಸ್ತ್ರೀಯ ಜ್ಞಾನವನ್ನು ಸಂಪಾದಿಸಿದ್ದಾರೆ? ಹಿಂದೀಜನರಿಗೆ ಆತರದ ಜ್ಞಾನವಾಗಬೇಕೆಂದು ಯಾವ ಅನುಕೂಲತೆಗಳನ್ನು ರೇಲ್ವೆಯವರು ಏರ್ಪಾಡು ಮಾಡಿದ್ದಾರೆ? ಪರರಾಷ್ಟ್ರಗಳಿಗೆ ಹೋಗಿ ಶಿಕ್ಷಣ ಹೊಂದಿ ಬಂದ ಹಿಂದೀಜನರಿಗೆ ಕೂಡ ಕಾದಿಟ್ಟ ನೌಕರಿಗಳು ದೊರೆವುದಿಲ್ಲ. ಎಷ್ಟು ವರ್ಕಶಾಪುಗಳಲ್ಲಿ ಹಿಂದೀ ಕೂಲಿಕಾರರಿಗೆ ಶಾಸ್ತ್ರೀಯ ಜ್ಞಾನವನ್ನು ಕೊಡುವ ವರ್ಗಗಳು ಅವೆ? ಇದೆಲ್ಲ ಬದಿಗಿರಲಿ; ಕೂಲಿಕಾರರಲ್ಲಿ ಮತ್ತು ಬೇರೆ ನೌಕರರಲ್ಲಿ ಬ್ರಿಟಿಶ ಮತ್ತು ಹಿಂದೀ ಎಂಬ ಭೇದಭಾವವು ಸ್ಥಿರವಾಗಿದೆ. ಅರ್ಧಶತಮಾನದಕಿಂತ ಹೆಚ್ಚಿನ ಕಾಲಾವಧಿಯಲ್ಲಿ ಹಿಂದುಸ್ಥಾನದಲ್ಲಿಯ ಬ್ರಿಟಿಶ ಜನರಿಂದ ನಡಿಸಲ್ಪಟ್ಟ ಒಂದು ರೇಲ್ವೆಯಲ್ಲಾದರೂ ಟ್ರ್ಯಾಫಿಕ ಮ್ಯಾನೇಜರ ಅಥವಾ ವರ್ಕ್ಸ ಮ್ಯಾನೇಜರ ಆಗುವ ಯೋಗ್ಯತೆಯುಳ್ಳ ಹಿಂದಿ ಮನುಷ್ಯನು ಸಿಕ್ಕಬಾರದೇ! ಅನೇಕ ಹಿಂದೀ ರೇಲ್ವೆಗಳ ಮಾಲೀಕರು ಸರಕಾರದವರಿದ್ದರೂ ಅವುಗಳನ್ನು ನಡಿಸುವ ಕೆಲಸವನ್ನು ಯುರೋಪೀಯ ಕಂಪನಿಗಳಿಗೆ ಕೂಡಬೇಕೆಂದು ಬ್ರಿಟಿಶ ಆಳರಸರ ಹಾಗೂ ಬ್ರಿಟಿಶ ವರ್ತಕರ ಹಟ! ಕಾಯದೆ ಮಂಡಳಗಳಲ್ಲಿ ಈ ತರದ ಕಾರಭಾರದ ಮೇಲೆ ಟೀಕೆಯಾದರೆ ಅಥವಾ ಈ ತರದ ಪಂಕ್ತಿ ಪ್ರಪಂಚದ ಬಗ್ಗೆ ನಿಷೇಧ ಪ್ರದರ್ಶಕ ಠರಾವುಗಳು ಪಾಸಾದರೆ ಅದರ ಬಗ್ಗೆ ರೇಲ್ವೆ ಕಂಪನಿಗಳನ್ನು ವಿಚಾರಿಸುತ್ತೇವೆಂದು ಹೇಳಲು ಆಳರಸರು ಸಿದ್ಧರಿರುತ್ತಾರೆ. ಒಂದೇ ಉದಾಹರಣೆಯನ್ನು ಇಲ್ಲಿ ಮಾದರಿಗಾಗಿ ಕೊಡುತ್ತೇವೆ. ಕಾಗದ ಮಾಡುವ ಕೆಲವು ಕಾರಖಾನೆಗಳು ೫೦ ವರ್ಷಗಳಿಂದ ಹಿಂದುಸ್ಥಾನದಲ್ಲಿ ನಡಿದಿವೆ. ಈ ಕಾರಖಾನೆಗಳಲ್ಲಿ ಫೋರಮನ ಜಾಗೆಗಿಂತ ಹೆಚ್ಚಿನ ಜಾಗೆ ಹಿಂದೀಜನರಿಗೆ ದೊರೆತಿಲ್ಲ. ರಾಣೀಗಂಜದ ಕಾಗದಕಾರಖಾನೆಯಲ್ಲಿ ೧೨ ಯುರೋಪೀಯರಿದ್ದರು. ಕಳೆದ ೨೦ ವರ್ಷಗಳಲ್ಲಿ ಆರು ಜನ ಯುರೋಪೀಯರು ಹೆಚ್ಚಾಗಿದ್ದಾರೆ. ಹೆಚ್ಚಿನ ಯಂತ್ರಗಳು ಬಂದವೆ. ಆದರೂ ಯುರೋಪೀಯನ ಸ್ಥಳದಲ್ಲಿ ಹಿಂದೀ ಮನುಷ್ಯನ ನೇಮಣೂಕು ಆಗಿಲ್ಲ. ಯುರೋಪೀಯನನಿಗಿಂತ ಕಡಿಮೆ ಪಗಾರದ ಮೇಲೆ ಹಿಂದೀ ಮನುಷ್ಯನು ಎಷ್ಟೇ ಚಲೋ ಕೆಲಸ ಮಾಡಲಿಕ್ಕೆ ಸಿದ್ಧನಿರುತ್ತಾನೆ. ಆದರೂ ಸಜಾತೀಯನ ಮೇಲಿನ ಮಮತೆಯಿಂದ ಯುರೋಪೀಯ ಕಾರಖಾನೆದಾರರು ಯುರೋಪೀಯನರ ನೇಮಣೂಕು ಮಾಡುತ್ತಾರಲ್ಲದೆ ಹಿಂದೀಜನರನ್ನು ನೇಮಿಸಿಕೊಳ್ಳುವ ಗೋಜಿಗೆ ಹೋಗುವುದಿಲ್ಲ. ೧೯೧೩ ರಲ್ಲಿ ಯುರೋಪೀಯ ಅಧಿಕಾರಸ್ಥರಿಂದ ತುಂಬಿದ ರಾಣಿಗಂಜದ ಕಾಗದ ಕಾರಖಾನೆ ೨೯ ರೂ. ಗಳಿಗೆ ಒಂದು ಟನ್ ದರದಿಂದ ಕಾಗದ ಮಾರುತ್ತಿತ್ತು. ಅದೇ ಕಾರಖಾನೆ ಹಿಂದೀ ಅಧಿಕಾರಸ್ಥರನ್ನು ನೇಮಿಸಿಕೊಂಡಿದ್ದರೆ ೧೭ ರೂ. ಗಳಿಗೆ ಒಂದು ಟನ್ನ ಕಾಗದ ಮಾರಬಹುದಾಗಿತ್ತು. ಟ್ಯಾರಿಫ್ ಬೋರ್ಡಿನವರು ಕಾಗದದ ಉದ್ಯೋಗದ ಚೌಕಶಿ ಮಾಡಿ ತಮ್ಮ ಮತ ಕೊಟ್ಟದೇನಂದರೆ:— "An industry in which Indians could never expect to fill the higher appointments would have scant claim to assistance from the State;" ಸಾರಾಂಶ ಯಾವ ಕಾರಖಾನೆಯಲ್ಲಿ ಹಿಂದೀ ಜನರಿಗೆ ಮೇಲುತರಗತಿಯ ನೌಕರಿಗಳು ದೊರೆವುದಿಲ್ಲವೋ ಆ ಕಾರಖಾನೆದಾರರಿಗೆ ಸರಕಾರದ ಸಹಾಯ ಬೇಡುವ ಹಕ್ಕು ಇಲ್ಲ.

(೬) ಪರಕೀಯ ಭಾಂಡವಲದಿಂದ ಪರಕೀಯರಿಂದ ನಡಿಸಲ್ಪಟ್ಟ ಕಾರಖಾನೆಗಳು ನಮ್ಮ ಕಾರಖಾನೆಗಳೆಂಬ ತಪ್ಪು ತಿಳವಳಿಕೆಯನ್ನು ಮಾಡಿಕೊಂಡು ಅವುಗಳಲ್ಲಿ ತಯಾರಾಗುವ ಮಾಲಿಗೆ ಉತ್ತೇಜನ ದೊರೆಯಬೇಕೆಂದೂ ಪರದೇಶದಿಂದ ಬರುವ ಮಾಲಿನ ಮೇಲೆ ಜಕಾತಿಯನ್ನು ಹೇರಬೇಕೆಂದೂ ಕೆಲವರು ಅಭಿಪ್ರಾಯಪಡುತ್ತಾರೆ. ಹಾಗೆ ಮಾಡುವುದರಿಂದ

ಸ್ಪರ್ಧೆ ಇಲ್ಲದಂತಾಗಿ ಹಿಂದುಸ್ಥಾನದಲ್ಲಿ ಪರಕೀಯ ಕಾರಖಾನೆದಾರರಿಗೆ ತಮ್ಮ ಹುಟ್ಟುವಳಿಯನ್ನು ಹೆಚ್ಚಿನ ಕ್ರಯಕ್ಕೆ ಮಾರಲಿಕ್ಕೆ ಅನುಕೂಲವಾಗುತ್ತದೆ. ಪರದೇಶಗಳಲ್ಲಿ ತಯಾರಾಗಿ ಬರುವ ಮಾಲು ಹಾಗೂ ಹಿಂದುಸ್ಥಾನದಲ್ಲಿ ಪರಕೀಯ ಭಾಂಡವಲದಿಂದ ಪರಕೀಯರ ನೇತೃತ್ವದಲ್ಲಿ ನಡೆದ ಕಾರಖಾನೆಗಳಲ್ಲಿ ತಯಾರಾಗುವ ಮಾಲಿನಲ್ಲಿಯ ಭೇದವು ಏನೆಂದರೆ, ಎರಡನೆಯ ತರದ ಮಾಲನ್ನು ತಯಾರಿಸಲಿಕ್ಕೆ ಬೇಕಾಗುವ ಕನಿಷ್ಠ ತರದ ಕೂಲಿಕಾರರ ಕೂಲಿ ಹಿಂದೀಜನರ ಪದರಿನಲ್ಲಿ ಬೀಳುತ್ತದೆ. ಆದರೆ ಈ ಕಾರಖಾನೆಗಳ ಲಾಭದಿಂದ ಪುಷ್ಟರಾದ ಬ್ರಿಟಿಶ ಭಾಂಡವಲಿಗರು ಹಿಂದೀ ಜನರ ರಾಜಕೀಯ ಪ್ರಗತಿಗೆ ತಡೆಹಾಕಲಿಕ್ಕೆ ಯಾವಾಗಲೂ ಹಾತೊರೆಯುತ್ತಿರುವದರಿಂದ ಅಸ್ಪೃಜನ ರಾಜಕೀಯ ಹಿತಶತ್ರುಗಳನ್ನು ನಾವಾಗಿಯೇ ಹುಟ್ಟಿಸಿಕೊಂಡಂತಾಗುತ್ತದೆ. ಸ್ಪರ್ಧೆ ಇರುವುದರಿಂದ ಯೋಗ್ಯ ಮಾಲು ದೊರೆಯುತ್ತದೆ. ಕೂಲಿಯ ಆಶೆಗೆ ಬಿದ್ದು ತುಟ್ಟಿಯ ಮಾಲು ಕೊಂಡುಕೊಳ್ಳುವುದಲ್ಲದೆ ರಾಜಕೀಯ ಹಕ್ಕುಗಳ ಮೇಲೆ ತಿಲಾಂಜಲಿಯನ್ನು ಬಿಡಬೇಕಾಗುತ್ತದೆ. ಒಂದೇ ಹೊಸ ಉದಾಹರಣೆಯನ್ನು ಕೊಡುತ್ತೇವೆ. ಹಿಂದುಸ್ಥಾನ ಹಾಗು ಬ್ರಹ್ಮದೇಶದ ಖಣಿಗಳೊಳಗಿಂದ ಚಿಮಣಿಎಣ್ಣೆಯನ್ನು ತೆಗೆವ ಬ್ರಿಟಿಶ ಕಂಪನಿಗಳ ಮತ್ತು ಪರದೇಶಿ ಎಣ್ಣೆಯನ್ನು ತಂದು ಹಿಂದುಸ್ಥಾನದಲ್ಲಿ ಮಾರುವ ಅಮೇರಿಕನ ಕಂಪನಿಗಳ ನಡುವಿನ ಸ್ಪರ್ಧೆಯಿಂದ ಎಣ್ಣೆಯ ದರದಮೇಲಾದ ಪರಿಣಾಮವು ತೀರಹೊಸದು. ಸ್ಟ್ಯಾಂಡರ್ಡ ಆಯಿಲ್ ಕಂಪನಿಯವರು ಎಣ್ಣೆಯ ದರವನ್ನು ಇಳಿಸಿದೊಡನೆ ಬ್ರಿಟಿಶ ಕಂಪನಿಗೆ ತನ್ನ ಲಾಭವು ಕಡಿಮೆಯಾಗುವುದೆಂಬ ಭಯವುಂಟಾಯಿತು, ಕೂಡಲೆ ಅವರಿಗೆ ಸ್ವದೇಶಿವ್ರತದ, ಹಿಂದೀ ಉದ್ಯೋಗ ದಂಧೆಯ ಸಂರಕ್ಷಣೆಯ, ಹಿಂದೀಜನರ ಹಿತದ ನೆನಪಾಯಿತು. ಬ್ರಿಟಿಶ ಕಂಪನಿಯವರು ಈ ಸ್ವದೇಶಿ ಉದ್ಯೋಗವನ್ನು ಕಾಪಾಡುವ ಯೋಜನೆಯನ್ನು ಮಾಡಬೇಕೆಂದು ಸರಕಾರಕ್ಕೆ ಅರಿಕೆ ಮಾಡಿಕೊಂಡರು. ಕೂಡಲೆ ಸರಕಾರದವರು ಈ ವಿಷಯವನ್ನು ವಿಚಾರಿಸುವ ಕೆಲಸವನ್ನು ಟ್ಯಾರಿಫ ಬೋರ್ಡಿಗೆ (ಅಂದರೆ ಪರಕೀಯ ಮಾಲಿನ ಮೇಲೆ ಜಕಾತಿಯನ್ನು ಕೂಡಿಸಬೇಕೊ ಇಲ್ಲೊ ಎಂಬುದನ್ನು ವಿಚಾರಿಸುವ ಕಮಿಟಿಗೆ) ಒಪ್ಪಿಸಿದರು. ಚಿಮಣಿಎಣ್ಣೆಯನ್ನು ತೆಗೆವ ಕಂಪನಿಗಳು ದೇಶಿಕಂಪನಿಗಳೆಂದು ಎಣಿಸಬಾರದು. ಅವುಗಳಿಗೆ ಮೊದಲಿನಂತೆ ಅಪರಿಮಿತ ಲಾಭವಾಗುವುದಕ್ಕಾಗಿ ಪರದೇಶಗಳಿಂದ ಬರುವ ಚಿಮಣಿ ಎಣ್ಣೆಯ ಮೇಲೆ ಜಕಾತಿಯನ್ನು ಹೇರುವುದರಿಂದ ಎಣ್ಣೆಯ ದರ ಹೆಚ್ಚುವುದು. ಬಡಬಗ್ಗರಿಗೆ ದಿನಾಲು ಅವಶ್ಯವಾಗಿ ಬೇಕಾಗುವ ಒಡವೆಯ ಕ್ರಯ ಬೆಳೆಸುವುದು ತೀರ ಅನ್ಯಾಯ್ಯವು. ಈ ಕಂಪನಿಗಳಿಗೆ ಆದ ಲಾಭ ನೋಡಿರಿ! ಹಿಂದುಸ್ಥಾನದಲ್ಲಿ ಎಣ್ಣೆಯನ್ನು ತೆಗೆವ ಒಂದು ಬ್ರಿಟಿಶ್ ಕಂಪನಿಯ ಒಂದು ನೂರು ರೂಪಾಯಿಯ ಶೇರಿಗೆ ಒಂದು ವರ್ಷ ೧೨೨೧೪೮ ಡಿವ್ಹಿಡಂಡ ದೊರೆಯಿತು. ೧೯೧೦ ರಿಂದ ೧೯೨೩ ರ ವರೆಗಿನ ಕಾಲದಲ್ಲಿ ಒಂದು ನೂರು ರೂಪಾಯಿ ಶೇರಿಗೆ ೬೭ ರೂಪಾಯಿ ಡಿವ್ಹಿಡಂಡ ದೊರೆಯಿತು. ಆದರೂ ತೃಪ್ತಿಯಿಲ್ಲ. ಬೇರೆ ಅನೇಕ ಕಾರಖಾನೆದಾರರು ತಮ್ಮ ಉದ್ಯೋಗಗಳನ್ನು ಟ್ಯಾರಿಫ್ ಬೋರ್ಡಿಗೆ ವಿಚಾರಕ್ಕಾಗಿ ಕಳಿಸಬೇಕೆಂದು ಕೂಗಿಕೊಳ್ಳುತ್ತಾರೆ. ಆದರೆ ಅವರನ್ನು ಕೇಳುವವರಾರು? ಸಾರಾಂಶ, ಯುರೋಪೀಯರಿಂದಲೇ ನಡಿಸಲ್ಪಡುವ ಉದ್ಯೋಗಗಳಿಗೆ ಸಂರಕ್ಷಣಪದ್ಧತಿಯ ತತ್ವವನ್ನು ಹಚ್ಚಬಾರದು. ವ್ಯವಹಾರದಲ್ಲಿ ಹಾಗೆ ಮಾಡುವುದು ಬಹಳ ಕಠಿಣವಾಗುತ್ತದೆ. ಅದು ಕಾರಣ ಹಿಂದೀ ಜನರಿಗೆ ಜವಾಬದಾರಿಯ, ಮೇಲುತರಗತಿಯ ನೌಕರಿಗಳನ್ನು ಕೊಡಬೇಕು, ಅವರಿಗೆ ವ್ಯಾವಹಾರಿಕ ಶಾಸ್ತ್ರೀಯ ಜ್ಞಾನವನ್ನು ಕೊಡುವ ವ್ಯವಸ್ಥೆ ಮಾಡಬೇಕು, ಕೂಲಿಕಾರರ ಹಿತವಾಗುವಂತೆ ವ್ಯವಸ್ಥೆ ಮಾಡಬೇಕು, ಎಂಬ ಶರ್ತುಗಳಿಗೆ ಒಪ್ಪಿ ಅವರಂತೆ ನಡೆಕೊಳ್ಳುವ ಕಾರಖಾನೆದಾರರಿಗೆ ಮಾತ್ರ ಸಂರಕ್ಷಕ ಜಕಾತಿಯ ಸವಲತ್ತು ದೊರೆಯ ಬೇಕು.

(೭) ವಿದೇಶಿ ಭಾಂಡವಲದಿಂದ ನಮ್ಮ ರಾಜಕೀಯ ಪ್ರಗತಿಗೆ ತಡೆಯುಂಟಾಗುತ್ತದೆ, ಮತ್ತು ನಮ್ಮ ಆರ್ಥಿಕ ಅವನತಿಗೆ ಉತ್ತೇಜನವು ದೊರೆಯುತ್ತದೆ ಎಂದು ಮೇಲೆ ಹೇಳಿದ್ದೇವಷ್ಟೇ. ಇವಲ್ಲದೆ ನಮ್ಮ ನೈತಿಕ ಅಧೋಗತಿಗೆ ಪರಕೀಯ ಭಾಂಡವಲವು ಬಹುಮಟ್ಟಿಗೆ ಕಾರಣವಾಗುತ್ತದೆ. ಪರಕೀಯರು ನಡಿಸುವ ಕಾರಖಾನೆಗಳ ಏರಿಕೆಯನ್ನೂ ಸ್ವದೇಶೀಯರು ನಡಿಸುವ ಕಾರಖಾನೆಗಳ ಇಳಿಕೆಯನ್ನೂ ನೋಡಿ ಸಾಮಾನ್ಯಜನರಲ್ಲಿ ಹಿಂದೀಜನರು ಹೇಡಿಗಳೆಂಬ ತಿಳವಳಿಕೆ ದೃಢವಾಗುತ್ತ ಹೋಗುತ್ತದೆ. ಕಾರಖಾನೆಗಳನ್ನು ನಡಿಸುವ ಸಾಮರ್ಥ್ಯವು ನಮ್ಮಲ್ಲಿ ಇಲ್ಲ, ಮತ್ತು ಆ ಕೆಲಸಕ್ಕೆ ನಾವು ಅಯೋಗ್ಯರು ಎಂಬ ಕಲ್ಪನೆ ನೆಲೆಗೊಂಡರೆ ನಮಗೆ ಆರ್ಥಿಕ ಸ್ವರಾಜ್ಯವು

ದೊರೆವುದಿಲ್ಲ, ದೊರೆತರೂ ಅದು ಬಹುದಿವಸ ತಾಳುವುದಿಲ್ಲ. ಸ್ವಾವಲಂಬನದ ಭಾವನೆ ಅಳಿದು ಹೋಗುವುದರಿಂದಾಗುವ ಅನರ್ಥಪರಂಪರೆಗೆ ಕೊನೆಯಿಲ್ಲ.

ಸ್ವಜನರ ಕೂಡ ಹೋರಾಡಿ, ತಮ್ಮ ನೆತ್ತರವನ್ನು ಸುರಿದು, ಪ್ರಾಣಕ್ಕೆರವಾಗಿ, ಬ್ರಿಟಿಶ ಜನರಿಗೆ ಸಾಮ್ರಾಜ್ಯವನ್ನು ಕಟ್ಟಲು ಪರಿಪರಿಯಿಂದ ಸಹಾಯಮಾಡಿದವರು ಹಿಂದೀ ಸಿಪಾಯಿಗಳು. ಅದರಂತೆ ಬ್ರಿಟಿಶ ಜನರನ್ನು ಸಂಪತ್ತಿಯ ಶಿಖರಕ್ಕೇರಿಸಿದುದು ಹಿಂದೀಧನವು. ೧೮ ನೆಯ ಶತಮಾನದಲ್ಲಿ ಬ್ರಿಟಿಶ ಜನರ ಸಂಪತ್ತಿಗೆ ಸಾಧನಗಳೆಂದರೆ ಕಲ್ಲಿದ್ದಲಿ, ಕಬ್ಬಿಣ, ನೂಲಿನ ಬಟ್ಟೆಗಳು. ೧೭೬೦ರ ಮೊದಲು ಬ್ರಿಟಿಶ್ ನಡುಗಡ್ಡೆಯಲ್ಲಿ ಉಪಯೋಗಿಸಲ್ಪಡುತ್ತಿದ್ದ ಕಬ್ಬಿಣದ ⅘ ಕಬ್ಬಿಣವು ಸ್ವೀಡನಿನಿಂದ ಬರುತ್ತಿತ್ತು. ಈಗ ಹತ್ತಿಯನ್ನು ನೂಲುವ ಮತ್ತು ಬಟ್ಟೆಗಳನ್ನು ನೇಯುವ ಗಿರಣಿಗಳ ಕೇಂದ್ರವಾದ ಲ್ಯಾಂಕೆಶ್ಯಾಯರದಲ್ಲಿ ಆಗ ಹತ್ತಿಯಿಂದ ನೂಲುತೆಗೆದು ಬಟ್ಟೆಗಳನ್ನು ಮಾಡುವ ಪದ್ಧತಿ ಹಿಂದುಸ್ಥಾನದ ಪದ್ಧತಿಯಂತೆಯೇ ಇತ್ತು. ೧೭೫೭ರಲ್ಲಿ ಪ್ಲಾಸಿ ಕಾಳಗವಾಯಿತು. ಅಲ್ಲಿಂದಲೇ ಉದ್ಯೋಗ ವ್ಯವಸಾಯದಲ್ಲಿಯ ಕ್ರಾಂತಿಯ ಯುಗವು ಪ್ರಾರಂಭವಾಯಿತು. ೧೭೬೦ರಲ್ಲಿ Flying shuttle—ಹಾರುವ ಲಾಳಿಯ-ಜನನವಾಯಿತು. ಕಟ್ಟಿಗೆಯ ಬದಲು ಕಲ್ಲಿದ್ದಲಿಯಿಂದ ಕಬ್ಬಿಣಕರಗಿಸುವ ಕೆಲಸ ನಡೆಯಿತು. ೧೭೬೪ ರಲ್ಲಿ (Hargreaves) ಹಾರಗ್ರೀವ್ಹಜ್‌ನು (Spinning-genny) ನೂಲಿನ ಅನೇಕ ಎಳೆಗಳನ್ನು ಒಮ್ಮೆಲೆ ನೂಲುವ ಯಂತ್ರವನ್ನು ತಿರುಗಿಸುವ ಗಾಲಿಯನ್ನೂ, ೧೭೭೬ ರಲ್ಲಿ Crompton ಕ್ರಾಮ್ಪ್ಟನ್ನನು ( mule ) ಅರಳಿ ಹಿಂಜುವ ಯಂತ್ರವನ್ನೂ, ೧೭೮೫ರಲ್ಲಿ ಉಗೆಯಿಂದ ನಡೆವ ಮಗ್ಗವನೂ, ತಯಾರಿಸಿದರು. ಇದೇ ಸುಮಾರಕ್ಕೆ ಉಗೆಯಿಂದ ನಡೆವ ಎಂಜಿನು ಪೂರ್ಣಾವಸ್ಥೆಗೆ ಮುಟ್ಟಿತು. ಮೇಜರ ಬಸು ಇವರು ತಮ್ಮ "Ruin of Industries" ಎಂಬ ಗ್ರಂಥದಲ್ಲಿ ಮಿಸ್ಟರ ಬ್ರೂಕ್ಸ ಎಡಾಮ್ಸ ( Brooks Adams ) ಇವರ "The Law of civilization" ಎಂಬ ಗ್ರಂಥದಲ್ಲಿಯ ಅವತರಣಿಕೆಯನ್ನು ಕೊಟ್ಟಿದ್ದಾರೆ. ಅದರಲ್ಲಿಯ ಕೆಲವು ಅಂಶವನ್ನು ಇಲ್ಲಿ ಕೊಡುತ್ತೇವೆ.

"Very soon after Plessey. the Bengal plunder began to arrive in London......"......"Before the influx of Indian treasure, and the expansion of credit which followed, no force sufficient for this purpose existed and had Watt lived fifty years earlier, he and his invention must have perished together......Possibly since the world began no investment has ever yielded the profit reaped from the Indian plunder, because for nearly fifty years Great Britain stood without a competitor. From 1694 to Plassey (1757) the growth has been relatively slow. Between 1760 to 1815 the growth was very rapid and prodigious....... The arrival of Bengal silver and gold enabled the Bank of England, which had been unable to issue smaller note than for £ 20, to easily issue £ 10 and £ 15 notes, and private firms to pour forth a flood of paper."

ಸಾರಾಂಶ, ಪ್ಲಾಸಿ ಕಾಳಗದ ನಂತರ ಬಂಗಾಲದ ಸುಲಿಗೆ ಲಂಡನಿಗೆ ಬಂದು ಬೀಳಹತ್ತಿತು...ಹಿಂದುಸ್ಥಾನದ ಸಂಪತ್ತು ವಿಲಾಯತಿಯಲ್ಲಿ ಪ್ರವಹಿಸುವ ಮೊದಲು ಮತ್ತು ಆ ಸಂಪತ್ತಿನಿಂದುಂಟಾದ ಪತ್ತಿನ ಬೆಳವಣಿಗೆಯ ಮೊದಲು ಔದ್ಯೋಗಿಕ ಪ್ರಗತಿಗೆ ಬೇಕಾದ ಬಲವು ದೊರೆತಿದ್ದಿಲ್ಲ. ವಾಟ (Watt) ನು ( ಉಗೆಬಂಡೆಯ ಶೋಧಕನು ) ೫೦ ವರ್ಷ ಮೊದಲು ಹುಟ್ಟಿದ್ದರೆ ಅವನ ಶೋಧವು ಹುಟ್ಟುತ್ತಲೇ ಸಾಯುತ್ತಿತ್ತು. ಸೃಷ್ಟಿಯ ಉತ್ಪತ್ತಿಯಾದಂದಿನಿಂದ ಹಿಂದುಸ್ಥಾನದ ಸುಲಿಗೆಯಿಂದಾದಷ್ಟು ಲಾಭವನ್ನೀಯುವಂತಹ ಭಾಂಡವಲವು ಯಾರಿಗೂ ದೊರೆತಿಲ್ಲ. ಇದಲ್ಲದೆ ೫೦ ವರ್ಷಗಳ ವರೆಗೆ ಬ್ರಿಟಿಶರಿಗೆ ಸ್ಪರ್ಧೆಮಾಡುವವರಾರೂ ಇರಲಿಲ್ಲ. ೧೬೯೪ ರಿಂದ ಪ್ಲಾಸಿ ಕಾಳಗದ ವರೆಗೆ ಬ್ರಿಟಿಶರ ಔದ್ಯೋಗಿಕಪ್ರಗತಿ ಮಂದವಾಗಿತ್ತು. ೧೭೬೦ರಿಂದ ೧೮೧೫ರ ವರೆಗಿನ ಪ್ರಗತಿ ಚಿಗರಿಯ ಓಟದಂತಾಗಿ, ಬಹು ಅದ್ಭುತವಾಗಿತ್ತು...ಬಂಗಾಲದ ಬೆಳ್ಳಿ ಬಂಗಾರ ಬರುವುದರಿಂದ ಬ್ಯಾಂಕ ಆಫ ಇಂಗ್ಲಂಡಿಗೆ ೨೦ ಪೌಂಡಿಗಿಂತ ಕಡಿಮೆ ನೋಟುಗಳನ್ನು ತೆಗೆಯಲಿಕ್ಕೆ ಅನಕೂಲವಾಯಿತು. ಮತ್ತು ಖಾಸಗಿ ಅಂಗಡಿಗಳಿಗೆ ತಮ್ಮ ಹುಂಡಿಗಳ ಮಳೆಗರೆವ ಸುಯೋಗವು ಪ್ರಾಪ್ತವಾಯಿತು.

೧೮೩೨ರಲ್ಲಿ ಪಾರ್ಲಮೆಂಟಿನ ಕಮಿಟಿಯ ಇದುರಿಗೆ ಅದ ತಮ್ಮ ಸಾಕ್ಷಿಯಲ್ಲಿ (Captain T. Macan) ಕ್ಯಾಪ್ಟನ್ ಟಿ. ಮಾಕನ ಎಂಬವರು ಹೀಗೆ ಹೇಳಿದ್ದಾರೆ:—

I scarcely anticipate so much enterprise and ... as to take capital from England to invest ... such speculations; in truth, capital is, I be... never taken from England to India; it is ... the their and remitted home."

ಸಾರಾಂಶ,—ಇಂಗ್ಲಂಡಿನಿಂದ ಭಾಂಡವಲವನ್ನು ತೆಗೆದು ಕೊಂಡು ಹೋಗಿ ಜೂಜಿನ ವ್ಯಾಪಾರದಲ್ಲಿ (Speculation) ...ವನ್ನು ಸಹಾಸವೂ ನಷ್ಟವನ್ನು ಲೆಕ್ಕಿಸದಿರುವ ಧೈರ್ಯ ... ಬ್ರಿಟಿಶರಲ್ಲಿತ್ತೆಂದು ನಾನು ಗ್ರಹಿಸಲಾರೆ. ನಿಜವಾಗಿ ಭಾಂಡವಲವನ್ನು ಬ್ರಿಟಿಶರು ಇಂಗ್ಲಂಡಿನಿಂದ ತೆಗೆದುಕೊಂಡು ಹೋಗಿಲ್ಲ. ಭಾಂಡವಲದ ಉತ್ಪತ್ತಿ ಹಿಂದುಸ್ಥಾನದಲ್ಲಿ, ಅದರ ...ಡೆಯುವು ಮಾತ್ರ ಇಂಗ್ಲಂಡಿನಲ್ಲಿ

೧೮೩೦ ರಲ್ಲಿ ಕಾಮನ್ಸ ಕಮೀಟಿಯ ಮುಂದೆ ಆದ ತಮ್ಮ ಸಾಕ್ಷಿಯಲ್ಲಿ ಮಿಸ್ಟರ ರಿಚರಡ್ಸ ( Richards ) ಇವರು ಹೀಗೆ ಹೇಳಿದ್ದಾರೆ:—

"India requires capital to bring forth her resources, but the fittest capital for this purpose would be one of native growth, and such a capital would be created if our institutions did not obstruct it."

ಸಾರಾಂಶ: ತನ್ನ ನಿಸರ್ಗ ಸಂಪತ್ತನ್ನು ಅರಳುವಂತೆ ಮಾಡ ಬೇಕಾದರೆ ಹಿಂದುಸ್ಥಾನಕ್ಕೆ ಭಾಂಡವಲದ ಅವಶ್ಯಕತೆಯದೆ. ಈ ಕೆಲಸಕ್ಕೆ ಹಿಂದೀ ಭಾಂಡವಲವೇ ಉತ್ತಮವಾದುದು. ನಮ್ಮ ಸಂಸ್ಥೆಗಳು ಅಡ್ಡಬರದಿದ್ದರೆ ಹಿಂದೀ ಭಾಂಡವಲವು ಹುಟ್ಟಿಯೇ ಹುಟ್ಟುತ್ತದೆ.

ತಮ್ಮ ಸ್ವರಾಜ್ಯವನ್ನು ಕಳಕೊಂಡು ಬ್ರಿಟಿಶಜನರಿಗೆ ಸಾಮ್ರಾಜ್ಯವನ್ನು ಸಂಪಾದಿಸಿಕೊಟ್ಟ ನಮ್ಮ ಪೂರ್ವಜರ ವಂಶ ...ದ ನಾವು ಸ್ವರಾಜ್ಯವು ನಮ್ಮ ಮಕ್ಕಳುಮರಿಮಕ್ಕಳಿಗ ...ಡ ಸಿಕ್ಕದಂತೆ ಮಾಡಹತ್ತಿದ್ದೇವೆ. ಪ್ಲಾಸಿಯನಂತರ ಇಂಗ್ಲಂಡಿಗೆ ಹೋದ ಅಗಣಿತ ಸಂಪತ್ತನ್ನು ಮರೆತರೂ ಹಿಂದು ಸ್ಥಾನದಲ್ಲಿ ಸದ್ಯಕ್ಕೆ ನಾವು ಬ್ರಿಟಿಶ ಜನರಿಗೆ ನಮ್ಮಲ್ಲಿದ್ದ ಅಲ್ಪ ಸ್ವಲ್ಪ ಧನದಿಂದಲೂ ಅವರ ಉದ್ಯೋಗವ್ಯಾಪಾರಗಳನ್ನು ...ಸಿ ನಮ್ಮ ದಾಸ್ಯದ ಶೃಂಖಲೆಗಳನ್ನು ದೃಢಪಡಿಸುತ್ತೇವೆಂ ...ದರ ಅರಿವು ನಮಗಿಲ್ಲ! "ಸೂರ್ಯ ಚಂದ್ರರಿರುವವರೆಗೆ ...ವ" ಸರಕಾರದ ಪ್ರಾಮಿಸರಿ ನೋಟುಗಳನ್ನೂ ಬಾಂಡು ಗಳನ್ನೂ ನಾವು ಅತಿ ಉತ್ಸುಕತೆಯಿಂದ ಕೊಳ್ಳುತ್ತೇವೆ. ಸರ ಕಾರವು ಪ್ರಾಮಿಸರಿ ನೋಟುಗಳ ಹಾಗೂ ಬಾಂಡುಗಳ ಆಧಾ ರದಿಂದ ತೆಗೆದ ಸಾಲವನ್ನು ಬಾಂಬೆ ಡೆವ್ಹಲಪ್‌ಮೆಂಟ ಡಿಪಾ ರ್ಟಮೆಂಟ, ಸಕ್ಕರಬರಾಜ ಮೊದಲಾದ ಕೆಲಸಗಳಿಗೆ ಉಪ ಯೋಗಿಸುತ್ತದೆ. ಇಂತಹ ಕೆಲಸಗಳಿಗೆ ಬೇಕಾಗುವ ಸಾಧನ ಸಾಮುಗ್ರಿಯನ್ನು ಪೂರೈಸಿಕೊಡುವ ಕೆಲಸವು ಬ್ರಿಟಿಶ ಕಾರ ಖಾನೆದಾರರದು ಮತ್ತು ಬ್ರಿಟಿಶ ವರ್ತಕರದು. ಇಂತಹ ಕೆಲ ಸವನ್ನು ಕಡೆಗಾಣಿಸುವವರು ಬ್ರಿಟಿಶ ಹುದ್ದೇದಾರರು. ನಮ್ಮ ಸರಕಾರವು ತನ್ನ ಶಿಲ್ಕನ್ನು ಇಂಪೀರಿಯಲ್ ಬ್ಯಾಂಕಿನಲ್ಲಿಡು ತ್ತದೆ. ಈ ಬ್ಯಾಂಕಿನ ಸೂತ್ರಗಳು ಯುರೋಪೀಯರ ಕೈಯ್ಯಲ್ಲಿ. ಬ್ಯಾಂಕುಗಳು ಭಾಂಡವಲದ ಆಗರಗಳು. ಯುರೋ ಪೀಯರ ಹಿಡಿತದಲ್ಲಿದ್ದ ಬ್ಯಾಂಕುಗಳಿಂದ ಹಿಂದೀ ಉದ್ಯೋಗ ಗಳಿಗೆ ಸಹಾಯವು ದೊರೆವುದೆಂದು ಅಪೇಕ್ಷಿಸುವುದಕ್ಕಿಂತ ಹೆಚ್ಚಿನ ಮೂರ್ಖತನವಿಲ್ಲ. ಯುರೋಪೀಯ ಬ್ಯಾಂಕುಗಳಲ್ಲಿ ಜವಾಬದಾರಿಯ ಸ್ಥಳಗಳು ಹಿಂದೀಜನರಿಗಿಲ್ಲ. ಅಂತಹ ಬ್ಯಾಂಕುಗಳಲ್ಲಿ ಬ್ರಿಟಿಶ ಜನರಿಗೆ ಸಿಕ್ಕುವಷ್ಟು ಸವಲತ್ತು ಗಳು ಹಿಂದೀಜನರಿಗೆ ಸಿಕ್ಕುವುದಿಲ್ಲ. ಹಗಲಿರುಳು ನಮ್ಮ ಹಿತಕ್ಕಾಗಿ ಹೆಣಗಾಡುವ ( ! ) ಸರಕಾರಕ್ಕೆ ಹಿಂದೀಜನರಿಗೆ ಬ್ಯಾಂಕಿನ ಶಿಕ್ಷಣವನ್ನು ಕೊಟ್ಟು ಅವರನ್ನು ವರಿಷ್ಠ ಅಧಿಕಾರಿ ಗಳನ್ನಾಗಿ ನೇಮಿಸಲೇಬೇಕೆಂದು ಹೇಳುವ ಇಚ್ಛೆ ಇರಬಾರದೇ? ಸರಕಾರಿ ಪ್ರಾಮಿಸರಿ ನೋಟುಗಳಿಗೆ ಮತ್ತು ಬಾಂಡುಗಳಿಗೆ ಇರುವ ಪತ್ತು ಬೇರೆ ಯಾವ ಕಾಗದಕ್ಕೂ ಇಲ್ಲ. ಅವುಗಳನ್ನು ಸಹಜವಾಗಿ ರೋಖಡಿಗೆ ಬೇಕಾದಾಗ ಪರಿವರ್ತಿಸಬಹುದು. ಅವುಗಳಿಂದ ವ್ಯಾಪಾರಸ್ಥರಿಗೆ ದೊರೆವಷ್ಟು ಸವಲತ್ತು ಬೇರೆಕಾ ಗದಗಳಿಂದ ದೊರೆವುದಿಲ್ಲ. ಅದುಕಾರಣ ಸರಕಾರದಸಾಲವು ಹೊರಡುವುದರಲ್ಲಿಯೇ ಅದಕ್ಕೆ ಗಿರಾಕಿಗಳು ದೊರೆಯುತ್ತವೆ. ಹಿಂದುಸ್ಥಾನದಲ್ಲಿಯ ಬ್ರಿಟಿಶ ಬ್ಯಾಂಕುಗಳಲ್ಲಿ ಡಿಪಾಜಿಟ ಇಟ್ಟು ಮತ್ತು ಶೇರುಗಳನ್ನು ಕೊಂಡು ಹಿಂದುಸ್ಥಾನದಲ್ಲಿಯ ಬ್ರಿಟಿಶ ವರ್ತಕರಿಗೆ ಭಾಂಡವಲವನ್ನು ಪೂರೈಸಿಕೊಡುವುದಲ್ಲದೆ ನಾವು ಇಂಗ್ಲಂಡಿನಲ್ಲಿಯ ಬ್ರಿಟಿಶ ವ್ಯಾಪಾರಸ್ಥರಿಗೆ ಕೂಡ ಭಾಂಡವ ಲದ ಅನುಕೂಲತೆಯನ್ನು ಮಾಡಿ ಕೊಡುತ್ತೇವೆ. ಹಿಂದುಸ್ಥಾನದ ಬಂಗಾರದ ನಿಧಿ (Gold Standard Reserve) ಕಾಗದ ಚಲನ ನಿಧಿ (Paper-currency Reserve) ಇವುಗಳ ನ್ನು ಇಂಗ್ಲಂಡಿನಲ್ಲಿ ಇಟ್ಟದ್ದೇವೆ. ಭೂತಲದ ಮೇಲೆ ತನ್ನ ದ್ರವ್ಯ ನಿಧಿಯನ್ನು ಪರಕೀಯರ ಸ್ವಾಧೀನಕ್ಕೆ ಕೊಟ್ಟ ಜಾಣತನವು

ಹಿಂದೀಜನರಿಗೆ ಮಾತ್ರ ಉಂಟು. ಮೇಲಿನ ದ್ರವ್ಯನಿಧಿಗಳನ್ನು ಇಂಗ್ಲಂಡಿನಲ್ಲಿ ಇಡುವುದರಿಂದ ಇಂಗ್ಲೀಷ ವರ್ತಕರಿಗೆ ಹೇಗೆ ಸಹಾಯವಾಗುತ್ತದೆಂಬುದನ್ನು ಈ ಮೊದಲಿನ ಲೇಖಗಳಲ್ಲಿ ಜಯಕರ್ನಾಟಕದ ವಾಚಕರಿಗೆ ತಿಳಿಸಿದ್ದೇವೆ.

ಮೇಲಿನ ವಿವೇಚನದಿಂದ ವಿದೇಶಿ ಭಾಂಡವಲವನ್ನು ಸಂಪೂರ್ಣವಾಗಿ ಬಹಿಷ್ಕರಿಸಬೇಕೆಂದು ನಮ್ಮ ಅಭಿಪ್ರಾಯವೆಂದು ತಿಳಿಯಕೂಡದು. ಸುಧಾರಿಸಿದ ರಾಷ್ಟ್ರಗಳಲ್ಲಿ ಸಾಲವಿಲ್ಲದ ರಾಷ್ಟ್ರಗಳು ತೀರ ಕಡಿಮೆ. ಆದರೆ ಸಾಲವನ್ನು ಯಾತಕ್ಕಾಗಿ ತೆಗೆಯಬೇಕು, ಯಾರಿಂದ ತೆಗೆಯಬೇಕು, ಎಷ್ಟರಮಟ್ಟಿಗೆ ತೆಗೆಯಬೇಕು, ಅವನ್ನು ಹೇಗೆ ಉಪಯೋಗಿಸಬೇಕು, ಅದನ್ನು ತೀರಿಸಲಿಕ್ಕೆ ಯಾವ ಉಪಾಯವನ್ನು ಯೋಜಿಸಬೇಕು ಎಂಬುದೇ ಮುಖ್ಯ ಪ್ರಶ್ನೆ. ಈ ತೊಡಕಿನ ಪ್ರಶ್ನೆಯನ್ನು ತನ್ನ ದೇಶಕ್ಕೆ ಹಿತವಾಗುವಂತೆ ಬಿಡಿಸಿದವನೇ ಕುಶಲಕೋಶಾಧಿಕಾರಿ, ನಿಪುಣ ರಾಜಕಾರಣದುರಂಧರನು, ಉಜ್ವಲ ದೇಶಭಕ್ತನು, ದೂರದೃಷ್ಟಿಯ ಅರ್ಥಶಾಸ್ತ್ರಜ್ಞನು.

ಹಿಂದುಸ್ಥಾನದಲ್ಲಿ ಸೇರಿದ ಪರಕೀಯ ಭಾಂಡವಲವು ಮೂರು ವಿಧದ್ದೆಂದು ಹೇಳಬಹುದು.

(೧) ಸರಕಾರದವರು ವಿದೇಶಗಳಲ್ಲಿ ತೆಗೆದ ಸಾಲ.

(೨) ತಮ್ಮ ದೇಶಗಳಲ್ಲಿ ಅಲ್ಲಿಯ ಕಾಯದೆಗಳಿಗನುಸರಿಸಿ ಕಂಪನಿಗಳನ್ನು ಸ್ಥಾಪಿಸಿ ಭಾಂಡವಲವನ್ನು ಕೂಡಿಸಿ ಅದರ ಉಪಯೋಗವನ್ನು ಹಿಂದುಸ್ಥಾನದಲ್ಲಿ ಮಾಡುವುದು.

(೩) ತಮ್ಮ ತಮ್ಮ ದೇಶಗಳನ್ನು ತಮ್ಮ ಕಾರ್ಯಕ್ಷೇತ್ರಗಳನ್ನಾಗಿಟ್ಟುಕೊಂಡ ಕಂಪನಿಗಳು ತಮ್ಮ ಭಾಂಡವಲದ ಕೆಲವೊಂದು ಭಾಗವನ್ನು ಹಿಂದುಸ್ಥಾನದಲ್ಲಿ ತಮ್ಮ ಕಂಪನಿಯ ಶಾಖೆಗಳ ಮುಖಾಂತರ ಉಪಯೋಗಿಸುವುದು.

(೧) ಸರಕಾರಕ್ಕೆ ಸಾಲತೆಗೆವ ಪ್ರಸಂಗವು ಬಂದೇಬರುತ್ತದೆ. ಹಿಂದುಸ್ಥಾನದ ಸರಕಾರಕ್ಕೆ ಇರುವ ಸಾಲದ ಇತಿಹಾಸದ ಪರಿಚಯವನ್ನು ಜಯಕರ್ನಾಟಕದ ವಾಚಕರಿಗೆ ಹಿಂದಿನ ಒಂದು ಲೇಖದಲ್ಲಿ ಮಾಡಿಕೊಟ್ಟಿದ್ದೇವೆ. ಉತ್ಪಾದಕಕೆಲಸಕ್ಕಾಗಿ ಸರಕಾರದವರು ಸಾಲ ತೆಗೆವುದು ಯುಕ್ತವದೆ. ಹಿಂದುಸ್ಥಾನ ಸರಕಾರದ ಮೇಲೆ ಅನುತ್ಪಾದಕ ಸಾಲದ ಹೊರೆ ಕಡಿಮೆಯಿಲ್ಲ. ಇದಲ್ಲದೆ ಉತ್ಪಾದಕ ಸಾಲದೊಳಗೆ ಸಮಾವೇಶವಾದ ಕೆಲವು ಸಾಲಗಳು ನಿಜವಾಗಿ ಅನುತ್ಪಾದಕ ಸಾಲಗಳಿರುತ್ತವೆ. ಮುಂಬಯಿ ಡೆವ್ಹಲಪಮೆಂಟಿನ ಕೆಲಸಕ್ಕಾಗಿ ತೆಗೆದ ಸಾಲವು ಉತ್ಪಾದಕ ಸಾಲವೆಂದೆಣಿಸಲ್ಪಡುತ್ತದೆ. ಆದರೆ ಡೆವ್ಹಲಪಮೆಂಟ ಡಿಪಾರ್ಟಮೆಂಟಿನಲ್ಲಿ ಆದ ಗೊಂದಲವನ್ನು ನೋಡಿದರೆ ಅದರಿಂದ ಉತ್ಪನ್ನವು ಎಷ್ಟಾಗಬಹುದೆಂಬುದು ತಿಳಿವುದು ಕಠಿಣ. ಸರಕಾರದವರು ಇಂಗ್ಲಂಡಿನಲ್ಲಿ ಸಾಲವನ್ನು ತೆಗೆವಾಗ ಬಡ್ಡಿಯ ಬಗ್ಗೆ ಮತ್ತು ಬೇರೆ ಶರ್ತುಗಳ ಬಗ್ಗೆ ಹೆಚ್ಚು ಜಾಣತನವನ್ನು ತೋರಿಸಬೇಕು. ಕೆಲವು ಸಾಲಗಳಿಂದ ಹಿಂದುಸ್ಥಾನಕ್ಕೆ ಹಾನಿಯಾಗಿದೆಂದು ಅರ್ಥಶಾಸ್ತ್ರಜ್ಞರ ಮತವದೆ. ಸ್ಟೇಟಸೆಕ್ರೆಟರಿಯವರು ತೆಗೆವಹುಂಡಿಗಳ ಬಗ್ಗೆಯೂ ಬಹಳ ತಕರಾರುಗಳುಂಟು. ತಮಗೆ ಹಣ ಬೇಕಾಗದೆ ಇದ್ದಾಗಲೂ ಸ್ಟೇಟಸೆಕ್ರೆಟರಿಯವರು ಬ್ರಿಟಿಶ ವರ್ತಕರ ಅನುಕೂಲತೆಗಾಗಿ ಹುಂಡಿಗಳನ್ನು ತೆಗೆದು ಅವರಿಗೆ ಸಹಾಯ ಮಾಡುತ್ತಾರೆ. ಹಿಂದೀ ಭಾಂಡವಲದ ಉಪಯೋಗವು ಹೀಗಾಗುತ್ತದೆ. ಸರಕಾರದವರು ಸಾಲತೆಗೆಯಬೇಕಾದರೆ ಹೆಚ್ಚು ದಕ್ಷತೆಯನ್ನು ತೋರಿಸಬೇಕು. ಕೇವಲ ಉತ್ಪಾದಕ ಕೆಲಸಕ್ಕಾಗಿಯೇ ಸಾಲ ತೆಗೆಯಬೇಕು.

(೨) ೨ನೆಯ ವಿಧದ ಸಾಲವು ಎಲ್ಲಕ್ಕೂ ಹೆಚ್ಚು ಬಾಧಕವಾದುದಾಗಿರುತ್ತದೆ! ಈ ಮಾದರಿಯ ಭಾಂಡವಲಿಗರು ತಮ್ಮ ಲಾಭದ ಹೊರ್ತು ಬೇರೆ ಯಾತರಕಡೆಗೂ ನೋಡುವುದಿಲ್ಲ. ಕೂಲಿಕಾರರ ಹಿತದ ಕಡೆಗೂ ಇವರ ದೃಷ್ಟಿಯಿರುವುದಿಲ್ಲ. ಈ ದೇಶದ ಸಂಪತ್ತಿಯ ಹರಣ (exploitation) ಮಾಡುವುದೊಂದೇ ಅವರ ಕೆಲಸ. ಈ ಕಾರಖಾನೆಗಳಲ್ಲಿ ಮೇಲಿನ ತರಗತಿಯ ಯುರೋಪಿಯ ಶಾಸ್ತ್ರಜ್ಞರಿಗೆ ಕೆಲಸವು ದೊರೆಯುತ್ತದೆ. ಹಿಂದೀ ಜನರಿಗೆ ಅಯೋಗ್ಯತೆಯ ಕಿತಾಬು ಆಳರಸದಿಂದ ದೊರೆವುದಲ್ಲದೆ ಈ ಪರಕೀಯ ಭಾಂಡವಲಿಗರಿಂದಲೂ ಈ ಬಗೆಯಿಂದ ದೊರೆಯುತ್ತದೆ. ಆದುದರಿಂದ ನಾವು ಈ ತರದ ಭಾಂಡವಲವನ್ನು ಸಂಪೂರ್ಣ ಬಹಿಷ್ಕರಿಸಬೇಕು. ಇಂಥ ಕಂಪನಿಗಳು ಹಿಂದುಸ್ಥಾನದಲ್ಲಿ ಕೆಲಸ ಮಾಡುವುದಾದರೆ ಅವುಗಳ ಉತ್ಪನ್ನದ ಮೇಲೆ ಹೆಚ್ಚಿನ ಕರ ಕೂಡಿಸಬೇಕು. ಹಿಂದೀ ಜನರಿಗೆ ಶಾಸ್ತ್ರೀಯಶಿಕ್ಷಣವನ್ನು ಕೊಡಬೇಕೆಂದೂ ಕೂಲಿಕಾರರಿಗೆ ನ್ಯಾಯ್ಯವಾದ ಸವಲತ್ತುಗಳನ್ನು ಕೊಡಬೇಕೆಂದೂ ನಿರ್ಬಂಧನೆಯನ್ನು ಮಾಡಬೇಕು. ಈ ಮಾದರಿಯ ಕರಾರುಗಳಿಗೆ ಒಪ್ಪದೆ ಇದ್ದವರಿಗೆ ಹಿಂದುಸ್ಥಾನದಲ್ಲಿ ನಿಲ್ಲಲು ಕೂಡ ಸ್ಥಳವು ದೊರೆಯಬಾರದು.

(೩) ಹಿಂದುಸ್ಥಾನವು ಬೇಕಾದವರು ಬಂದು ಮೇದು ಹೋಗುವ ಹುಲ್ಲುಬನ್ನಿಯಂತಿದೆಂದು ಹಿಂದುಸ್ಥಾನದ ಇತ್ತ

ಲಾಗಿನ ಇತಿಹಾಸದ ಮೇಲಿಂದ ಕಂಡುಬರುತ್ತದೆ. ಇನ್ಸುಅರನ್ಸ ಕಂಪನಿಗಳು, ಎಕ್ಸಚೇಂಜ ಬ್ಯಾಂಕುಗಳು, ಬೇರೆ ಬ್ಯಾಂಕುಗಳು ಮತ್ತು ಇತರ ಕಂಪನಿಗಳು ಹಿಂದುಸ್ಥಾನದಲ್ಲಿ ತಮ್ಮ ಶಾಖೆಗಳನ್ನು ಸ್ಥಾಪಿಸಿ ಅಪರಿಮಿತ ಲಾಭವನ್ನು ಮಾಡಿಕೊಳ್ಳುತ್ತವೆ. ಇಂತಹ ಕಂಪನಿಗಳೂ ಬ್ಯಾಂಕುಗಳೂ ನಮಗೆ ಬೇಕಾಗಿಲ್ಲ. ಅವುಗಳಿಂದ ಹಿಂದುಸ್ಥಾನಕ್ಕೆ ಯಾವತರದ ಲಾಭವಿಲ್ಲ. ಈಗಿದ್ದವುಗಳು ಹಿಂದುಸ್ಥಾನದಲ್ಲಿರುವುದಾದರೆ ಅವುಗಳ ಲೆಕ್ಕಗಳನ್ನು ಬಲ್ಲವರಿಂದ ಪರೀಕ್ಷಿಸಿ ಅವರು ಹಿಂದುಸ್ಥಾನದಲ್ಲಿ ಮಾಡಿಕೊಂಡ ಲಾಭದ ಮೇಲೆ ಹೆಚ್ಚಿನ ಇನಕಮ್‌ಟ್ಯಾಕ್ಸ ಹಾಕಬೇಕು. ಸ್ವಿಟ್ಝರಲಂಡಿನಲ್ಲಿ ಪ್ರತಿಯೊಂದು ಪರಕೀಯ ಇನ್ಸುಅರನ್ಸ ಕಂಪನಿ ಒಬ್ಬ ಸ್ವಿಸ್ಸನನ್ನು ಏಜಂಟನನ್ನಾಗಿ ನೇಮಿಸಬೇಕು ಮತ್ತು ಅವನು ಸಿಟ್ಝರಲಂಡನಲ್ಲಿರುವವನಿರಬೇಕೆಂಬ ನಿಯಮವುಂಟು.

ವಿದೇಶಿ ಭಾಂಡವಲದ ಮಹಿಮೆಯನ್ನು ಇಲ್ಲಿಯವರೆಗೆ ತಕ್ಕಮಟ್ಟಿಗೆ ವರ್ಣಿಸಿದ್ದೇವೆ. ವಿದೇಶಿ ಭಾಂಡವಲದ ಪರಿಣಾಮವನ್ನು ನ್ಯಾಯಮೂರ್ತಿ ಮಹಾದೇವ ಗೋವಿಂದ ರಾನಡೆಯವರು "Essays on Indian Economics" ಎಂಬ ಗ್ರಂಥದಲ್ಲಿ ಹೀಗೆ ವರ್ಣಿಸಿದ್ದಾರೆ.

"The political domination of one country by another attracts far more attention than the more formidable though more unfelt domination, which the capital, enterprise, and skill of one country exercise on the trade and manufactures of another. The latter domination has an insidious influence which paralyses the springs of various activities which together make up the life of the nation."

ಸಾರಾಂಶ:— ಒಂದು ದೇಶದ ಮತ್ತೊಂದು ದೇಶದ ಮೇಲಿರುವ ರಾಜಕೀಯ ಆಧಿಪತ್ಯವು, ಅದಕ್ಕೂ ಹೆಚ್ಚು ಭಯಂಕರವಾದ ಆದರೆ ಅಷ್ಟು ಭಾಸವಾಗದ ಆರ್ಥಿಕ ಪ್ರಭುತ್ವಕ್ಕಿಂತ ಹೆಚ್ಚಿಗೆ ನಮ್ಮ ಲಕ್ಷ್ಯವನ್ನು ಎಳೆಯುತ್ತದೆ. ಆದರೆ ಆರ್ಥಿಕ ದಾಸ್ಯವು ರಾಷ್ಟ್ರದ ಜೀವಿತದ ಝರಿಯನ್ನೇ ಬತ್ತಿಸುತ್ತದೆ.

ಪ್ರೊಫೆಸರ ಡಬ್ಲ್ಯು. ಆರ. ಸ್ಕಾಟ (Prof W. R. Scott) ಎಂಬವರು ತಮ್ಮ "Economic Problems of the peace after the War" ಎಂಬ ಗ್ರಂಥದಲ್ಲಿ ಹೀಗೆ ಬರೆದಿದ್ದಾರೆ.

"The compulsory and economic dependence on foreign capital and economic subserviency is a more subtle evil than political subserviency.

ಸಾರಾಂಶ:— ವಿದೇಶಿ ಭಾಂಡವಲದ ಮೇಲೆ ನಿರ್ವಾಹವಿಲ್ಲದೆ ಅವಲಂಬಿಸಬೇಕಾಗಿ ಬಂದ ದುಸ್ಥಿತಿಯೂ ಆರ್ಥಿಕ ಪರವಶತೆಯೂ ರಾಜಕೀಯ ಪರವಶತೆಗಿಂತ ಹೆಚ್ಚು ಅನರ್ಥಾವಹಗಳು.

---

# ದೇವರ ವಿಚಾರ

ಲೇಖಕ:—ಶ್ರೀ. ಬಿ. ಚಂದ್ರಶೇಖರಯ್ಯ. ಬಿ. ಎ.,

(೯ನೆಯ ಸಂಚಿಕೆಯಿಂದ ಮುಂದುವರಿದುದು)

೨

## ಇರಬೇಕಾದ ಭಾವನೆ

ದೇವರ ವಿಷಯದಲ್ಲಿ ಜನಗಳ ಭಾವನೆ ತಪ್ಪಾದರೂ ದೇವರಿರುವನೆಂಬ ಭಾವನೆ ಸುಳ್ಳಲ್ಲ. ಆ ಭಾವನೆ ಪ್ರತಿಯೊಬ್ಬ ಮನುಷ್ಯನಿಗೂ ಸಾಮಾನ್ಯವಾದುದು. ಅದರಲ್ಲಿ ಕ್ರಿಶ್ಚಿಯನನೆಂದೂ, ಹಿಂದುವೆಂದೂ, ಮಹಮ್ಮದೀಯನೆಂದೂ ಅಮೇರಿಕದ ರೆಡ್ ಇಂಡಿಯನನೆಂದೂ ಜಾತಿಭೇದವಾಗಲಿ ಕುಲಭೇದವಾಗಲಿ ಇಲ್ಲ. ಮನುಷ್ಯನು ದೇವರೆಂಬ ಪದಾರ್ಥವನ್ನು ಕಲ್ಪಿಸಿಕೊಂಡುದು ಆಶ್ಚರ್ಯವನ್ನುಂಟು ಮಾಡುವುದು. ನಾವು ಮಕ್ಕಳಾಗಿದ್ದಾಗ ನಮಗೆ ಆತನ ಯೋಚನೆಯಿರಲಿಲ್ಲ. ಆಟಪಾಟಗಳಲ್ಲಿ ಕಾಲವನ್ನು ಕಳೆವವರಿಗೆ ದೇವರು ಅನಾವಶ್ಯಕವಾದ ವಸ್ತು. ಆಗಿನ ಹವ್ಯಾಸವೇ ಬೇರೆ. ಮಗುವಿಗೆ ಒಂದು ವಸ್ತು ಬೇಕಾಗಿ ಗೀಳುಂಟಾದ ಪಕ್ಷದಲ್ಲಿ ಅದು ಅದರ ಕೈಸೇರಿದರೆ ಸಾಕಾಗಿದ್ದಿತು. ಅದನ್ನು ತಂದೆತಾಯಿಗಳು ಹೊಂದಿಸಿ ಕೊಟ್ಟರೋ ಅಥವಾ ದೇವರೇ ಮುಂದೆ ತಂದಿಟ್ಟನೋ ಅದು ಮಕ್ಕಳಿಗೆ ಪೂರ್ಣವಾಗಿ ಅಪ್ರಕೃತವಾದುದು. ಆದರೆ ಸ್ಥಿತಿ ಒಂದೇ ಸಮವಾಗಿರುವುದಿಲ್ಲ. ಮಕ್ಕಳು ಬೆಳೆದು ದೊಡ್ಡವರಾಗುತ್ತಾರೆ. ದೃಷ್ಟಿ ಕಣ್ಣೆದುರಿಗಿದ್ದ ವಸ್ತುವಿನ ಮೇಲೆ ಹೇಗೋ ಹಾಗೆ ಕಾಣದಿರುವ ವಸ್ತುವಿನ ಮೇಲೂ ತಿರುಗುತ್ತದೆ. ಬುದ್ಧಿ ಬಾಹ್ಯ ವಸ್ತುಗಳನ್ನು ಹೇಗೋ ಹಾಗೆ ಆಂತರಿಕ ವಸ್ತುಗಳನ್ನೂ ಕಲ್ಪಿಸಿಕೊಳ್ಳಲು ಶಕ್ತಿಹೊಂದುತ್ತದೆ. ಹಕ್ಕಿ ಬೆಳೆದಹಾಗೆ ಹೆಚ್ಚು ದೂರಕ್ಕೆ ಹಾರಲಾರಿಂತೆ ಮನಸ್ಸು ದೂರ ದೂರಕ್ಕೆ ವ್ಯಾಪಿಸಿ ಅಗ್ರಾಹ್ಯ ವಸ್ತುಗಳನ್ನು ಗ್ರಹಿಸಲು ಪ್ರಯತ್ನಿಸುವುದು. ಬೆಟ್ಟವನ್ನೂ ಗುಡ್ಡವನ್ನೂ ನೋಡಿದರೆ, ಮನುಷ್ಯನಗಿಂತ ಅಷ್ಟು ದೊಡ್ಡದೂ ಸ್ಥಿರತರವೂ ಆದ ಭೂತವನ್ನು ಯಾರು ಮಾಡಿರಬಹುದೆಂದು ವಿಚಾರವು ಹುಟ್ಟುವುದು. ಏಕೆಂದರೆ ಅಂತಹದನ್ನು ಮನುಷ್ಯನು ಯಾವನೂ ಇದೂ ವರೆಗೆ ನಿರ್ಮಿಸಿಲ್ಲ. ಅಲ್ಲದೆ ಮನುಷ್ಯನಿಂದ ನಿರ್ಮಿತವಾದ ವಸ್ತುಗಳು ಬಹುಕಾಲದ ವರೆಗೆ ಯಾವುದೂ ತೃಪ್ತಿಯನ್ನುಂಟುಮಾಡಿಲ್ಲ. ಈ ರೀತಿಯಲ್ಲಿ ಮನಸ್ಸು ಕಣ್ಣೆದುರಿಗಿರುವ ಪ್ರಪಂಚದಲ್ಲಿ, ಅಲ್ಪತೆಯನ್ನೂ ಅಶಾಶ್ವತತೆಯನ್ನೂ ಅತೃಪ್ತಿಯನ್ನೂ ಕಂಡು ಅದರ ಹಾಗೆ ಅಲ್ಪವೂ ನಶ್ವರವೂ ಅತೃಪ್ತಿಕರವೂ ಅಲ್ಲದ ಮತ್ತೊಂದು ಪ್ರಪಂಚವನ್ನು ಊಹಿಸಿಕೊಳ್ಳಲು ಹೊರಡುವುದು. ಇದಕ್ಕೆ ಒಂದು ಉದಾಹರಣೆಯನ್ನೂ ಹೇಳಬಹುದು. ಒಬ್ಬ ಮನುಷ್ಯನ ಮುಂದೆ ಒಂದು ಚಿತ್ರವನ್ನಿಟ್ಟು ಅದು ಚೆನ್ನಾಗಿದೆಯೇ ಎಂದು ಕೇಳಿರಿ. ಅದರಲ್ಲಿ ಕೆಲವು ನ್ಯೂನತೆಗಳಿವೆಯೆಂದೂ ಇಂತಿಂತಹ ಗುಣಗಳಿರಬೇಕಾಗಿದ್ದಿತೆಂದೂ ಆತನು ಹೇಳುತ್ತಾನೆ. ಹೀಗೆ ಹೇಳಲು ಕಾರಣವೇನು? ಅವನ ಮನಸ್ಸಿನಲ್ಲಿ ನ್ಯೂನತೆಯೂ ಅತಿರಿಕ್ತತೆಯೂ ಕಾಣದಿರಬೇಕಾದರೆ ಚಿತ್ರವು ಹೇಗಿರಬೇಕೆಂಬ ಅದರ ಅನ್ಯೂನಭಾವವೂ ಕಲೆಯಲ್ಲಿ ತೋರಬೇಕಾದ ತತ್ವಗಳು ಇಂತಿಂತಹವೆಂಬ ತಿಳಿವಳಿಕೆಯೂ ಸ್ಫೂರ್ತಿ ಹೊಂದಿರುವುದೇ ಕಾರಣ. ಮನೆಯಲ್ಲಿ ಬೆಳ್ಳಿಯ ಪಾತ್ರೆಯನ್ನಾಗಲೀ ವಿಗ್ರಹವನ್ನಾಗಲೀ ಯಾವುದಾದರೂ ಒಡವೆಯನ್ನಾಗಲೀ ಮಾಡಿಸಿದರೆ, ಅವುಗಳಲ್ಲಿ, ಇದನ್ನು ಇಲ್ಲಿ ತಿದ್ದಬೇಕಾಗಿತ್ತೆಂದೂ ಈ ಸಾಮಾನಿನಲ್ಲಿ, ಈಕಡೆ ಲೋಹವು ಹೆಚ್ಚಾಗಿ ಬಿದ್ದು ಹೋಯಿತೆಂದೂ ಹೆಂಗುಸರು ಹೇಳುವುದನ್ನು ಕಂಡಿಲ್ಲದವರು ಯಾರು? ಅವರು ಹಾಗೆ ಹೇಳುವುದು ನೋಡುವವರಿಗೆ ದುರಾರಾಧ್ಯತೆಯೆಂದು ತೋರಿದರೂ, ವಸ್ತುರಚನೆಯಲ್ಲಿರಬೇಕಾದ ಗುಣಗಳನ್ನು ನಿಷ್ಕರ್ಷಿಸಿಟ್ಟಿರುವುದೇ ಕಾರಣ. ನ್ಯೂನವಾದ ವಸ್ತುಗಳನ್ನು ಕಂಡು ನಮ್ಮ ಬುದ್ಧಿ ಅವುಗಳ ಅನ್ಯೂನ ರೂಪವನ್ನು ಕಲ್ಪಿಸಿಕೊಳ್ಳುತ್ತದೆ. ಪ್ರಪಂಚದಲ್ಲಿ ಪದಾರ್ಥಗಳು ಅರ್ಧ ಅರ್ಧವಾಗಿ ಕಾಣುತ್ತವೆ. ಅವುಗಳಿಗೆ ಪೂರ್ಣ ರೂಪವನ್ನು ಹೊಂದಿಸಿ ತೃಪ್ತಿಯನ್ನು ಪಡೆಯದಿರುವುದಕ್ಕಾಗುವದಿಲ್ಲ. ಅವುಗಳಿಗೆ ನೆಲೆಯಾದ ಪ್ರಪಂಚವೂ ಕೂಡ ಅಪೂರ್ಣವಾಗಿ ದೋಷಯುಕ್ತವಾಗಿರುವಂತೆ ತೋರು

ತ್ತದೆ. ಅದನ್ನೂ ತಿದ್ದಬೇಕು. ಅದರ ವಿಷಯದಲ್ಲಿಯೂ ಪರಿಪೂರ್ಣಭಾವನವನ್ನು ನಿರ್ಧರಿಸಿ ತಿಳಿಯಬೇಕು. ಆದರೆ ಪ್ರಪಂಚಕ್ಕೆ ತನ್ನನ್ನು ತಾನು ತಿದ್ದಿಕೊಳ್ಳುವ ಅಥವಾ ಪರಿಪೂರ್ಣ ಮಾಡಿಕೊಳ್ಳುವ ಶಕ್ತಿಯಿಲ್ಲ. ಆದುದರಿಂದ ಮಡಕೆಯನ್ನು ಮಾಡಲು ಕುಂಬಾರನು ಬೇಕಾಗುವಂತೆ, ಪ್ರಪಂಚವನ್ನು ನಿರ್ಮಿಸಿದ, ಮತ್ತು ಪ್ರಪಂಚವು ಅಸಂಪೂರ್ಣವಾಗಲಾಗಿ, ಸಂಪೂರ್ಣವೂ ಸರ್ವಗುಣೋಪೇತವೂ ಆದ ಮತ್ತೊಂದು ವಸ್ತುವಿರಬೇಕೆಂದು ಊಹೆಯುಂಟಾಗಿ ಅದನ್ನೂ ತಿಳಿಯಲು ಅಪೇಕ್ಷೆ ಹುಟ್ಟುವುದು. ಪ್ರಪಂಚವು ದೋಷದಿಂದ ತುಂಬಿರುವ ಹಾಗೆ ಆ ತತ್ವವು ದೋಷರಹಿತವಾದುದು. ಪ್ರಪಂಚದಲ್ಲಿ ಗುಣವು ಕಡಿಮೆಯಾದಷ್ಟು ಅದರಲ್ಲಿ ಗುಣ ಹೆಚ್ಚು ಹೆಚ್ಚಾಗಿ ತೋರಿಬರುವುದು. ಪ್ರಪಂಚವು ಅಸಂಪೂರ್ಣವಾದಷ್ಟೂ ಅದರಲ್ಲಿ ಸಂಪೂರ್ಣತೆ ಪ್ರತ್ಯಕ್ಷವಾಗುವುದು. ಪ್ರಪಂಚವು ಶಕ್ತಿಶೂನ್ಯವಾದಷ್ಟೂ ಆ ವಸ್ತು ಶಕ್ತಿಸಹಿತವಾಗುವುದು. ಆದರೆ ಆ ವಸ್ತು ಇತರ ವಸ್ತುಗಳ ಹಾಗೆ ಇಂದ್ರಿಯಗೋಚರವಲ್ಲ. ಹಾಗೆ ಗೋಚರವಾಗುವುದಾದರೆ ಪ್ರಪಂಚದ ಒಂದು ಭಾಗವೇ ಆದೀತು. ಅದರ ರೂಪವನ್ನೂ ಹೀಗೆಂದು ಊಹಿಸುವುದು ಅಸಾಧ್ಯ.*

"ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ" ಆದರೂ ಅಂತಹ ಪದಾರ್ಥವೊಂದಿರುವುದು ಮಾತ್ರ ಎಂದಿಗೂ ಸುಳ್ಳಾಗಿ ತೋರುವುದಿಲ್ಲ. ಅದು ಮೇಜುಕುರ್ಚಿಗಳಂತೆ ಬಾಹ್ಯವಲ್ಲ. ಅಂತರಿಂದ್ರಿಯಗೋಚರವಾದುದು. ಅಥವಾ ಅದರ ಗ್ರಹಣಗೋಚರವನ್ನೂ ಮೀರಿಸಿದುದು. ಆದುದರಿಂದಲೇ ಅದನ್ನು ತತ್ವವೆಂದು ಕರೆಯುತ್ತೇವೆ. ಆ ತತ್ವವು ಎಲ್ಲಾ ವಿಷಯಗಳನ್ನೂ ವಿವರಿಸಬಲ್ಲುದು. ಎಲ್ಲಕ್ಕೂ ಏಕ ಆಧಾರ. ಅದಕ್ಕೆ ಬಾಹ್ಯವಾದ ವಿಷಯವಿಲ್ಲ. ಅದನ್ನು ನಾವು ಎಷ್ಟು ರೀತಿಯಾಗಿ ಕೊಂಡಾಡಿದರೂ ಸಾಲದು; ಹೇಳಬೇಕಾದುದೆಲ್ಲವನ್ನೂ ಹೇಳಿದಂತಾಗುವುದಿಲ್ಲ. ಅಂತಹ ಅದ್ಭುತ ತತ್ವವನ್ನು ನಾವು ದೇವರೆಂದೂ ಭಗವಂತನೆಂದೂ ಪರಮಾತ್ಮನೆಂದೂ ಹೇಳಿಕೊಂಡು ಪೂಜಿಸುತ್ತೇವೆ. ದೇವರೆಂಬ ಭಾವನೆ ನಮ್ಮ ಅಂತರಂಗದಲ್ಲಿ ಉತ್ಪನ್ನವಾದುದು ಹೀಗೆ.

ಮಕ್ಕಳ ಬುದ್ಧಿಶಕ್ತಿ, ಹೇಗೋ ನಾಗರಿಕತೆಯಿಂದಲಾಗಲೀ ವಿದ್ಯೆಯಿಂದಲಾಗಲೀ ಸಂಸ್ಕಾರವನ್ನು ಪಡೆಯದ ಅರಣ್ಯವಾಸಿಯ ವಿಚಾರವೂ ಹಾಗೆಯೇ. ಈ ಅನಾಗರಿಕನಿಗೆ ಇಂದ್ರಿಯಸನ್ನಿಕೃಷ್ಟವಾದ ವಸ್ತುಗಳ ಹೊರತು ಇಂದ್ರಿಯಗಳಿಂದ ಅನಾಖ್ಯಾತವಾದ ತತ್ವಗಳನ್ನು ಗ್ರಹಿಸಲು ಶಕ್ತಿಯಿಲ್ಲ. ಆದರೆ ಅವನ ಬುದ್ಧಿ ಆ ಕಡೆಗೆ ಹೆಚ್ಚು ಹೆಚ್ಚಾಗಿ ತಿರುಗುತ್ತ ಅವನು ತತ್ವವನ್ನು ಗ್ರಹಿಸಲು ಕಲಿಯುತ್ತಾನೆ. ಮರದಲ್ಲಿಯೂ ಗಿಡದಲ್ಲಿಯೂ ನದಿಯಲ್ಲಿಯೂ ಬೆಟ್ಟದಲ್ಲಿಯೂ ದೇವತೆಗಳನ್ನು ಕಾಣಲಾರಂಭವಾಗುವುದು. ಪ್ರತಿಯೊಂದು ವಸ್ತುವಿನಲ್ಲಿಯೂ ಒಂದೊಂದು ಅಧಿದೇವತೆಯನ್ನು ಆವಾಹನೆ ಮಾಡಿ ಆಯಾ ವಸ್ತುವಿನ ಸ್ವರೂಪವನ್ನು ನಿರ್ಧರ ಮಾಡಲು ಪ್ರಯತ್ನಿಸುವನು. ಆದರೆ ಅಧಿದೇವತೆಗಳು ಅತಿಯಾಗಿ ಅವನ ಮನಸ್ಸು ಬದಲಾಯಿಸುವುದು. ಎಲ್ಲಾ ದೇವತೆಗಳೂ ಸರಿಸಾಟಿಯಲ್ಲ. ಎಲ್ಲರಲ್ಲಿಯೂ ಒಳ್ಳೆಯ ಗುಣವಿಲ್ಲ. ಅಥವಾ ಎಲ್ಲರಲ್ಲಿಯೂ ಒಂದೇಸಮನಾಗಿ ಸದ್ಗುಣಗಳಿಲ್ಲ. ಆದುದರಿಂದ ಹೆಚ್ಚು ಕಡಿಮೆಯ ಭಾವನೆಯುಂಟಾಗಿ, ಎಲ್ಲರಿಗೂ ಮುಂದಾಗಿ, ಅಂದರೆ, ಅಧಿದೇವತೆಗಳಿಗೆ ಅಧಿದೇವತೆಯಾಗಿ ನಿಲ್ಲಬಲ್ಲ ದೈವವನ್ನು ಅವನು ಧ್ಯಾನಿಸುವನು. ಋಗ್ವೇದದಲ್ಲಿ ಈ ವಿಧವಾದ ಬದಲಾವಣೆ (ಭಾವಪರಿಣಾಮವು) ಕಾಣಬರುವುದು. ನಮ್ಮ ಪೂರ್ವಿಕರು ಇಲ್ಲಿಗೆ ಬಂದಾಗ, ಹೊಸಮನೆಗೂ ಹೊಸದೇಶಕ್ಕೂ ಹೋದಾಗ ಹುಟ್ಟುವ ಸಂತೋಷವು ಅವರ ಮನಸ್ಸಿನಲ್ಲಿಯೂ ಉಕ್ಕುತ್ತಿರಲಾಗಿ ಅವರು, ಮೊದಲು ಮೊದಲು ಕಂಡುದನ್ನೆಲ್ಲಾ ದೇವತೆಯನ್ನಾಗಿ ಭಾವಿಸಿ ನಲಿದರು. ಆದರೆ ಬರುತ ಬರುತ ಆ ಭಾವನೆಗಳು ಮಾರ್ಪಟ್ಟುವು. ಕೆಲವು ದೇವತೆಗಳು ಮಾತ್ರವೇ ಮುಖ್ಯವಾಗಿ ನಿಂತುವು. ಇಂದ್ರನೂ ವರುಣನೂ ಸವಿತೃವೂ ಅಗ್ನಿಯೂ ಪ್ರಮುಖ ದೇವತೆಗಳಾದುವು. ಆದರೆ ಋಗ್ವೇದದ ದಶಮ ಮಂಡಲದಲ್ಲಿ ತೊಂಭತ್ತನೆಯ ಅಧ್ಯಾಯದಲ್ಲಿ ಕೆಲವು ಮಂತ್ರಗಳಿವೆ. ಅವುಗಳಲ್ಲಿ ಪೂರ್ವದ ಮಂತ್ರದ್ರಷ್ಟೃಗಳು, "ನಾವು ಯಾರನ್ನು ಪೂಜಿಸುತ್ತಿದ್ದೇವೆ ? ಉಳಿದ ದೇವತೆಗಳೆಲ್ಲರಿಗಿಂತಲೂ ಹೆಚ್ಚಿನ ಬಲುಮೆಯುಳ್ಳವನಾಗಿ ಎಲ್ಲರಿಗೂ ಸ್ವಾಮಿಯಾಗಿರುವ ಯಾವ ದೇವನಿಗೆ ನಮ್ಮ ಆರಾಧನೆಗಳು ಸಲ್ಲುತ್ತಿರುವುವು ? ಆ ದೇವನು ಯಾರು ? ನಾವು ಅವನನ್ನು ತಿಳಿವುದು ಹೇಗೆ? "

* ಈ ವಿಧವಾದ ಅಖಂಡವೂ ಅಖಿಲಾಧಾರವೂ ಆದ ಪರಮತತ್ವವು ಏಕಾಏಕಿಯಾಗಿ ದೊರೆಯಲಿಲ್ಲ. ಅನೇಕ ತತ್ವಗಳನ್ನೂ ರೂಪಗಳನ್ನೂ ಸರಿಸಿರಿಸಿ ಕೊನೆಗೆ ಅವುಗಳನ್ನೆಲ್ಲಾ ತ್ಯಜಿಸಿ ಒಂದೇ ಒಂದಾದ ತತ್ವವೊಂದನ್ನು ಗ್ರಹಿಸಬೇಕಾಯಿತು. ಇದನ್ನು ಮುಂದೆ ವಿವರಿಸಿದೆ.

ಎಂದು ಮೊದಲಾಗಿ ವಿಚಾರಮಾಡಿದ್ದಾರೆ. ಈ ಪ್ರಶ್ನೆಗಳಿಗೆ ಉತ್ತರವೋ ಎಂಬ ಹಾಗೆ ಅದೇಮಂಡಲದ ೧೨೪ಲ ನೆಯ ಅಧ್ಯಾಯದಲ್ಲಿ, ಮಂತ್ರಗಳು "ಸಹಸ್ರ ಶೀರ್ಷಾ ಪುರುಷಃ ಸಹಸ್ರಾಕ್ಷಸ್ಸಹಸ್ರಪಾತ್" ಎಂದು ಮೊದಲಾಗಿ ಮೊಳಗುತ್ತವೆ. ಯಾವ ದೇವಾಧಿದೇವನನ್ನು ಅವರು ಮೊದಲು ತಿಳಿಯಲೆಳಸಿದರೋ ಆ ದೇವನಿಗೆ ಸಾವಿರ ತಲೆಗಳೆಂದೂ ಸಾವಿರ ಕಣ್ಣುಗಳೆಂದೂ ಸಾವಿರ ಕಾಲುಗಳೆಂದೂ ಮಂತ್ರದ್ರಷ್ಟೃಗಳು ವಿವರಿಸಿದರು. ಮನುಷ್ಯನ ಶಕ್ತಿಗೆ ಕೋಟಿಪಾಲು ಮೀರಿದ ವ್ಯಕ್ತಿ ಅಥವಾ ತತ್ವವೊಂದುಂಟೆಂಬುದನ್ನು ಈ ಮಂತ್ರಗಳು ಪ್ರತಿಪಾದಿಸುತ್ತವೆ. ಆದರೆ ಈ ಭಾವನೆಯೂ ಆಗಿನ ಜ್ಞಾನಿಗಳಿಗೆ ತೃಪ್ತಿಯನ್ನುಂಟುಮಾಡಲಿಲ್ಲ. ಅವರು ಇನ್ನೂ ಸೂಕ್ಷ್ಮವಾಗಿ ಚಿಂತನೆಮಾಡಿ ಪರಮಾತ್ಮನ ಸ್ವರೂಪವನ್ನು ಮತ್ತಷ್ಟು ಸ್ಪಷ್ಟವಾಗಿ ತಿಳಿದರು. ಈ ಪ್ರಯತ್ನವು, ಈಶ, ಕೇನ, ಬೃಹದಾರಣ್ಯಕ, ಛಾಂದೋಗ್ಯ ಮುಂತಾದ ಉಪನಿಷತ್ತುಗಳಲ್ಲಿ ವಿಸ್ತಾರದಿಂದ ವರ್ಣಿತವಾಗಿದೆ. ಅಲ್ಲಿ ದೇವರು ಪರಮಾತ್ಮನೆಂದು ಭಾವಿಸಲ್ಪಟ್ಟಿದ್ದಾನೆ. ಆದರೆ ಮೂರ್ತಿವಂತನಲ್ಲ. ಪರಮಾತ್ಮನಿಗೆ ನಮ್ಮ ಹಾಗೆ ಆಕಾರವಿಲ್ಲ. ಆಗಿನ ಋಷಿಗಳು ಪರಮಾತ್ಮನನ್ನೂ ಭೂತಶರೀರವಿಲ್ಲದ ರೀತಿಯಲ್ಲಿಯೇ ಆಕಾರಗೊಳಿಸಿದ್ದಾರೆ. ಪ್ರಪಂಚದಲ್ಲಿ ಪದಾರ್ಥಗಳು ಉಂಟಷ್ಟೆ. ಆದರೆ ಅವು ಪದಾರ್ಥ ಮಾತ್ರವಲ್ಲ. ಅವುಗಳ ಮುಖ್ಯ ಗುಣವು ಯಾವುದುಂಟೋ ಅವುಗಳ ಸ್ವರೂಪವೂ ಅಂತಃಸತ್ವವೂ ಯಾವುದುಂಟೋ ಅದು ಬ್ರಹ್ಮ. ಅದು ಸತ್ಯ. ಅಂತಹ ಸತ್ಯವಿಲ್ಲದ ವಸ್ತುವಿಲ್ಲ. ಆದರೆ ಅಂತಹ ವಸ್ತುವನ್ನು ಆ ಕಾರಣದಿಂದ ಬ್ರಹ್ಮನೆಂದಾಗಲೀ ಸತ್ಯದ ಮೂರ್ತಿಯೆಂದಾಗಲೀ ಹೇಳಕೂಡದು. ಆ ಪದಾರ್ಥದಲ್ಲಿ ಬ್ರಹ್ಮನಿರಲೇಕೆ? ಬ್ರಹ್ಮನು ಸತ್ಯಸ್ವರೂಪನಾದುದರಿಂದ ಸತ್ಯವು ಅದರೊಳಗಿಲ್ಲದಿರಲಾಗಿ ಆ ಪದಾರ್ಥವು ಒಂದುಕ್ಷಣವೂ ಉಳಿಯಲಾರದು. ಜಗತ್ತು ಪರಮಾತ್ಮನ ಅವತಾರ. ಆದರೆ ಪರಮಾತ್ಮನ ನಿಜರೂಪವು ಆಕಾರಣದಿಂದ ವ್ಯಯವಾಗಿಲ್ಲ. ಅಥವಾ ಅರೆಯೂ ಆಗುವುದಿಲ್ಲ. "ಪೂರ್ಣಾತ್ ಪೂರ್ಣಮುದಚ್ಯತೇ । ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೇ ॥" ಆ ಗ್ರಂಥಗಳಲ್ಲಿಯೂ ವೇದಾಂತದರ್ಶನದಲ್ಲಿಯೂ ವಿಸ್ತೃತವಾದ ತತ್ವವು ಇಷ್ಟು.

ಈ ವಿಧವಾದ ಭಾವನೆಯಲ್ಲಿ ಒಂದು ವಿಶೇಷವುಂಟು. ದೇವರೆಂಬ ವಿಷಯವು ಹೇಗೆ ಜನರ ಮನಸ್ಸಿನಲ್ಲಿ ಹುಟ್ಟುವುದೆಂಬ ಚರಿತ್ರೆಯನ್ನು ಮೇಲೆ ಹೇಳಿದಹಾಗಾಯಿತು. ಆದರೆ ಆ ಭಾವನೆಯನ್ನು ಕಲ್ಪಿಸಿಕೊಂಡು ಅದರ ಅರ್ಥವನ್ನೂ ಸ್ವಾರಸ್ಯವನ್ನೂ ತಿಳಿಯಲು ಹವಣಿಸಿದವರು ತತ್ವಜ್ಞಾನಿಗಳು, "ಮುಮುಕ್ಷುಗಳು;" ಸಾಮಾನ್ಯ ಜನರಲ್ಲ. ತತ್ವಜ್ಞಾನಿಗಳು ಪರಮಾತ್ಮನ ಸ್ವರೂಪವನ್ನು ಬಾಹ್ಯ ವಸ್ತುಗಳ ಸಹಾಯವಿಲ್ಲದೆಯೇ ತಿಳಿದರು. ಅಧ್ಯಾತ್ಮ ವಿಚಾರವನ್ನು ವಿವರಿಸಲು ಅನಾತ್ಮವಾದ ವಸ್ತು ಅವಶ್ಯಕವಾಗಲಿಲ್ಲ. ಅನಾಖ್ಯೇಯವಾದ ತತ್ವವು ಆಖ್ಯಾತ ಪದಾರ್ಥದ ಸಹಾಯವಿಲ್ಲದೆಯೇ ಅರಿವಾಯಿತು. ಮರವನ್ನೂ ಗಿಡವನ್ನೂ ನೋಡಿ ಆ ಮಹಾತ್ಮರು ಪರಮಾತ್ಮನನ್ನು ಕಾಣಲಿಲ್ಲ. ಅವರ ಬುದ್ಧಿ ಪರಿಪಕ್ವವಾಗಿದ್ದಕಾರಣ ಒಂದೇ ಹಾರಿಗೆ ಸತ್ವವನ್ನು ಗ್ರಹಿಸಿತು. ಆದರೆ ಈ ಸಾಹಸವೂ ಇಷ್ಟು ಮಟ್ಟಿನ ಫಲವೂ ಇತರರಿಗೆ ಸಾಧ್ಯವಲ್ಲ. ಪಂಡಿತರಿಂದಾಗುವುದು ಪಾಮರರಿಂದಾಗಲಾರದು. ಉದಾಹರಣೆಗಳಿಲ್ಲದೆ ಒಳಗಿನ ತತ್ವವನ್ನು ತಿಳಿವುದು ಹೇಗೆ ಕಷ್ಟವಾದೀತೋ ಹಾಗೆ. ಆದುದರಿಂದ ಸಾಮಾನ್ಯ ಜನರು ಪರಮಾತ್ಮನ ಸ್ವರೂಪವನ್ನು ತತ್ವಜ್ಞಾನಿಗಳು ವರ್ಣಿಸುವುದನ್ನು ಕೇಳಿ, ರಾತ್ರಿಯೆಲ್ಲಾ ರಾಮಾಯಣವನ್ನು ಕೇಳಿ ಕುರುಬನು ಮಾಡಿದಹಾಗೆ, "ಆ ಪರಮಾತ್ಮನೆಲ್ಲಿದ್ದಾನೆ, ಅವನು ಹೇಗಿದ್ದಾನೆ ?" ಎಂದು ಮೊದಲಾಗಿ ಪ್ರಶ್ನೆಗಳನ್ನು ಕೇಳಿರಬೇಕೆಂದು ತೋರುತ್ತದೆ. ಅವರ ಈ ಕಷ್ಟವನ್ನು ಪರಿಹರಿಸುವುದಕ್ಕೋಸ್ಕರ, ಪರಮಾತ್ಮನಲ್ಲಿ, ಇಂತಿಂತಹ ಗುಣಗಳುಂಟೆಂದು ವರ್ಣಿಸಿರಬಹುದೆಂತಲೂ ತೋರುತ್ತದೆ. ನಿರ್ಗುಣನೆಂದು ಆಖ್ಯಾತವಾದ ತತ್ವವನ್ನು ಗುಣವುಳ್ಳದೆಂದು ವ್ಯಾಖ್ಯಾನ ಮಾಡಿರಬಹುದು. ಆ ಗುಣಗಳು ಯಾವುವು ? ಮನುಷ್ಯಜಾತಿಗೆ ಸಾಮಾನ್ಯವಾದುವಾಗಿ ಕಂಡುಬರುವಂತಹವು. ಗುಣರಹಿತನಾದ ಪರಮಾತ್ಮನಲ್ಲಿ ಶಕ್ತಿಯೂ ತಿಳುವಳಿಕೆಯೂ ಇತರ ಗುಣಗಳೂ ಆರೋಪಿತವಾದುವು. ಪರಮಾತ್ಮನು ಗುಣರಹಿತನೆಂದು ಉಪನಿಷತ್ತುಗಳು ಉದ್ಘೋಷಿಸುವುವು. ಅವನಲ್ಲಿ, ಸದ್ಗುಣವೂ ಇಲ್ಲ, ದುರ್ಗುಣವೂ ಇಲ್ಲ. ಶಕ್ತಿ ಇಲ್ಲ, ಶಕ್ತಿ ಇಲ್ಲದೆಯೂ ಇಲ್ಲ, ಇತ್ಯಾದಿ, ಇತ್ಯಾದಿ. ಈ ವಿಧವಾದ ವರ್ಣನೆಯನ್ನು ಅರ್ಥಮಾಡಿಕೊಳ್ಳುವುದು ಹೇಗೆ ? ಜನರು ಗುಣಗಳ ಮೂಲಕ ಪರಮ ತತ್ವವನ್ನು ಅರ್ಥಮಾಡಿಕೊಳ್ಳಲಾರಂಭಿಸಿದರು. ಆ ಗುಣಗಳು ಮನುಷ್ಯನಿಗೆ ಸಹಜವಾದುವುಗಳಾದುದರಿಂದ ಅವುಗಳಿಗೆ ಆಸರೆಯಾದುದು ಮನುಷ್ಯನ

ರೂಪವನ್ನು ಹೊಂದಿತು. ಬ್ರಹ್ಮವೆಂದು ಲಿಂಗರಹಿತವಾದ ತತ್ವವು ಬ್ರಹ್ಮನೆಂದು ಪುಲ್ಲಿಂಗವನ್ನು ಹೊಂದಿತು. ತತ್ವವು ಜೀವನನ್ನು ಪಡೆದು ಮನುಷ್ಯನೆಂದು ಭಾವಿಸಲ್ಪಟ್ಟಿತು. ಪರಮತತ್ವವು ದೇವರಾಯಿತು. ಆ ದೇವರಲ್ಲಿ, ಜನರು ತಮ್ಮಲ್ಲಿಲ್ಲದ ಸದ್ಗುಣಗಳನ್ನೆಲ್ಲಾ ಬೆಳೆಯಿಸಿದರು. ತಮ್ಮಲ್ಲಿ ದೋಷಮಿಶ್ರವಾದ ಗುಣಗಳನ್ನು ಶುದ್ಧಿಗೊಳಿಸಿ ಆ ದೇವರಿಗೆ ಲೇಪಿಸಿದರು. ಹೀಗೆ ಪರಮತತ್ವವು ದೇವರಾದುದನ್ನು ವೇದಾಂತವು ನಿರ್ಗುಣಬ್ರಹ್ಮನು ಮಾಯಾ ಅಥವಾ ಶಕ್ತಿಯೊಡನೆ ಬೆರೆದು ಸಗುಣವಾಯಿತೆಂದೂ, ಪ್ರಜಾಪತಿಯೆಂದು ಹೆಸರನ್ನು ಪಡೆಯಿತೆಂದೂ ಹೇಳುವುದು. ಆದರೆ "ಸತ್ಯ"ವು ಭಗವಂತನೆಂದು ಬದಲಾಯಿಸಲಾಗಿ ದರ್ಶನವು ಧರ್ಮವಾಯಿತು. ಶಾಸ್ತ್ರ (philosophy) ವು ಮತವಾಗಿ ಮಾರ್ಪಟ್ಟಿತು.

ದೇವರ ಗುಣಗಳನ್ನು ಶೋಧಿಸಿಯಾಯಿತು. ರೂಪ ಅಥವಾ ಆಕಾರವೆಂತಹದು ? ಮನುಷ್ಯನದು. ಮನುಷ್ಯನಂತೆ ಮಾಡಿ ದೇವರನ್ನು ನಿಲ್ಲಿಸದಿದ್ದ ದೇವಸ್ಥಾನವಿಲ್ಲ. ಮನುಷ್ಯನ ರೂಪದಲ್ಲಿ ದೇವರನ್ನು ಧ್ಯಾನಮಾಡಿ ಆರಾಧಿಸದಾತನಿಲ್ಲ. ಜಗನ್ನಾಥದಲ್ಲಿ ದೇವರ ವಿಗ್ರಹವನ್ನು ಸರಿಯಾಗಿ ಕೆತ್ತಿಲ್ಲದಿರಬಹುದು. ಆದರೆ ಅದಕ್ಕೂ ಮನುಷ್ಯನ ಹಾಗೆ ಎರಡು ಕಣ್ಣು; ಎರಡು ಕೈ; ಅವಕ್ಕೂ ಮನುಷ್ಯನ ಹಾಗೆ ಎರಡು ಕೊತ್ತೂ ನೈವೇದ್ಯ. ನಿತ್ಯವೂ ಸ್ನಾನವೇ ಮೊದಲಾದ ಉಪಚಾರ. ನಾವು ಮನೆಯಲ್ಲಿ ವಿಗ್ರಹವು ಹೇಗೋ ಹಾಗೆ ಮನುಷ್ಯನ ಆಕಾರವಿಲ್ಲದಿರುವ ಸಾಲಗ್ರಾಮವನ್ನು ಪೂಜಿಸುತ್ತೇವೆಂದು ಕೆಲವರು ಹೇಳಬಹುದು. ಆದರೆ ಸಾಲಗ್ರಾಮಕ್ಕೆ ಅಭಿಷೇಕವಿಲ್ಲವೇನು ? ಆಹಾರದಾನವಿಲ್ಲವೇನು ? ಗಂಧಬಳಿಪುದಿಲ್ಲವೇನು ; "ಮಧ್ಯೇ ಮಧ್ಯೇ ಸ್ವಾದೋದಕ" ವನ್ನು ಸಮರ್ಪಿಸುವದಿಲ್ಲವೇನು ?

ಮಣ್ಣಿನ ಬೊಂಬೆಯನ್ನು ಮಾಡಿದ ಮೇಲೆ ಅದಕ್ಕೆ ಪೀಠವನ್ನು ಮಾಡುತ್ತೇವೆ. ದೇವರನ್ನು ಮಾಡಿದಮೇಲೆ ಆತನಿಗೆ ಮನೆಯನ್ನೂ ಊರನ್ನೂ ಕಲ್ಪಿಸಬೇಕು. ಗುಣವನ್ನೂ ಉಪಚಾರವನ್ನೂ ಏರ್ಪಡಿಸಿದ ಜನರಿಗೆ ಆತನ ವಾಸದ ಮೇಲೆ ದೃಷ್ಟಿಯಿಲ್ಲದಿರಲಿಲ್ಲ. ಈ ವಿಷಯದಲ್ಲಿ ಜನಗಳು ಯುಕ್ತಿಯನ್ನು ಹೇಗೆ ಉಪಯೋಗಿಸಿ, ಒಂದು ಅಂಶವಿದ್ದ ಮೇಲೆ ಕಾರ್ಯಕಾರಣ ಭಾವದಿಂದ ಮತ್ತೊಂದು ಅಂಶವಿರಬೇಕೆಂದು ನಿಶ್ಚಯಿಸಿದರೋ ಅದೇ ರೀತಿಯಲ್ಲಿ ಕಲ್ಪನೆಯನ್ನುಪಯೋಗಿಸಿ ಇತರ ಅವಶ್ಯಕವಾದ ವೈಶದ್ಯವನ್ನೂ ನಿರ್ಮಿಸಿದರು. ವಿಷ್ಣುವಿಗೆ ಜಯವಿಜಯರು ದ್ವಾರಪಾಲಕರಾದುದೂ ಶೇಷನು ಶಯನನಾದುದೂ ಗರುಡನು ವಾಹನನಾದುದೂ ಶ್ರೀದೇವಿ ಭೂದೇವಿಯರು ಪತ್ನಿಯರಾದುದೂ ಈ ಕಲ್ಪನೆಯ ಫಲಿತಾಂಶ. ಇದೇ ಪ್ರಕಾರದಲ್ಲಿ ಇತರ ದೇವತೆಗಳೂ ಕೂಡ ಸಂಸಾರವನ್ನಾರಂಭಿಸಿದರು. ವಿಷ್ಣುವಿಗೂ ಸನ್ಯಾಸಿಯಾದ ಈಶ್ವರನಿಗೂ ಬ್ರಹ್ಮನಿಗೂ ಪ್ರಮುಖರಾದ ಇತರ ದೇವತೆಗಳಿಗೂ ಮಕ್ಕಳು ಮರಿಗಳು ಉತ್ಪನ್ನವಾದುವು. ಊರ್ಧ್ವಲೋಕಗಳಲ್ಲಿ ಮತ್ತೊಂದು ಜನಾಂಗವೇ ಮೊದಲಾಯಿತು. ಸ್ವರ್ಗವು ಭೂಮಿಯ ಪ್ರತಿರೂಪವಾಯಿತು. ಇಲ್ಲಿ ಸತ್ತವರು ಅಲ್ಲಿಗೆ ಹೋದರು. ಕೆಲವರು ಪುಣ್ಯಾತ್ಮರು ಸತ್ಯಲೋಕಕ್ಕೂ ವೈಕುಂಠಕ್ಕೂ ಹೋದರು. ಇದರ ಹಾಗೆ ಸಾವಿರ ಇತರ ಕಲ್ಪನೆಗಳು. ಆದರೆ ಕಲ್ಪನಾವೃಕ್ಷದಲ್ಲಿ ಫಲವು ಹೆಚ್ಚಿದ ಹಾಗೆಲ್ಲಾ ಭಕ್ತಿವೃಕ್ಷದ ಸಾರವು ಕ್ಷೀಣವಾಯಿತು. ಜನರು ಶಿಲ್ಪಿಗಳಾದಷ್ಟು ಭಕ್ತರಾಗುವುದು ಕಡಿಮೆಯಾಯಿತು. ಅವರ ಹೃತ್ಕಮಲವು ಪರಮಾತ್ಮಧ್ಯಾನವೆಂಬ ಸೂರ್ಯರಶ್ಮಿಯಿಲ್ಲದಿರಲಾಗಿ ಸಂಕುಚಿತವಾಯಿತು. ಅದಕ್ಕೆ ಬದಲಾಗಿ ಮನೋರಾಜ್ಯವು ವಿಸ್ತರಿಸಿತು. ಜನರು ದೇವರನ್ನು ಪೂಜಿಸುವುದನ್ನು ಮರೆತರು. ಬದಲಾಗಿ ದೇವರಿಗೆ ಅಲಂಕಾರವು ಹೆಚ್ಚಾಗಿ ಮುಖ್ಯವಾಯಿತು. ದೇವಸ್ಥಾನದಿಂದ ದೇವರ ವಿಗ್ರಹವು ಉತ್ಸವಹೊರಟರೆ ನಾವು ಬೆರಗಾಗುವುದು ದೇವರ ಮಹಿಮೆಯನ್ನು ನೋಡಿ ಅಲ್ಲ; ದೇವರ ಅಲಂಕಾರವನ್ನು ನೋಡಿ ಜನಗಳು ದೇವರನ್ನು ಒಂದು ಬೊಂಬೆಯನ್ನಾಗಿ ಮಾಡಿ ಅದಕ್ಕೆ ಅಲಂಕಾರಮಾಡಿ ಮಂಟಪಕಟ್ಟಿ ಉಪಚರಿಸಿದರು. ವಿನಾಯಕನಿಗೆ ವರ್ಷಕ್ಕೊಂದಾವೃತ್ತಿ ಉಪಚಾರಮಾಡುವ ಹಾಗೆ ಭಗವಂತನು ನಮ್ಮ ಆತ್ಮಕ್ಕೆ ಆತ್ಮಸ್ವರೂಪನಾಗಿರುವುದಕ್ಕೆ ಬದಲಾಗಿ ಆಗಾಗ ಬರುವ ಅತಿಥಿಯಾದನು. ಹೀಗೆಲ್ಲಾ ವಿಚಾರಮಾಡಿ ದೇವರೆಂಬ ಹೆಸರಿಗೇ ಅವಮಾನತಂದೆವು. ದೇವರಿಗೆ ವರ್ಷವರ್ಷಕ್ಕೂ ಮದುವೆಮಾಡಬೇಕು. ಅದೂ ಶಾಸ್ತ್ರೋಕ್ತವಾಗಿ ಐದುದಿನದ ಮದುವೆ. ಇವನ್ನು ನೋಡಿದಾಗಲೆಲ್ಲಾ ನನಗೆ ನಾಚಿಕೆಯಾಗುತ್ತದೆ. ದೇವರ ವಿಷಯದಲ್ಲಿ ಎಲ್ಲೆಲ್ಲಿ ನೋಡಿದರೂ ಅಜ್ಞಾನ, ಉತ್ಪ್ರೇಕ್ಷೆ, ಅಧರ್ಮ, ಅನ್ಯಾಯ! ನಾವು ಮಕ್ಕಳಿಗಿಂತ ಸ್ವಲ್ಪವೂ ಉತ್ತಮರಾಗಿಲ್ಲ. ದೇವರೆಂಬ ಬೊಂಬೆಯನ್ನಿಟ್ಟುಕೊಂಡು ನಾನಾರೂಪದಲ್ಲಿ ಆಡುತ್ತಿದೇವೆ.

ಆದರೆ ದೇವರ ಈ ಅಲಂಕಾರವನ್ನೆಲ್ಲಾ ಕಿತ್ತು ಒಗೆದು ಆತನ ನಿಜರೂಪವನ್ನು ಯೋಚಿಸಹೋದರೆ ನಮ್ಮ ಹುಚ್ಚು ನಮಗೇ ಅರಿವಾದೀತು. ಹಾಗೆ ಪರಿಶೀಲಿಸಲಾಗಿ ನಾವು ಪರಮಾತ್ಮನ ಕೇವಲ ಇರುವಿಕೆಯನ್ನು ಮಾತ್ರ ಚಿಂತಿಸುವೆವು. ಮಹಾಮಹಿಮರಾದ ಋಷಿಗಳೂ ಉಪನಿಷತ್ತುಗಳಲ್ಲಿ ಹೇಳಿರುವ ಮಂತ್ರದ್ರಷ್ಟೃಗಳೂ ಈ ಪ್ರಯತ್ನ ಮಾಡಿದರು. ಪರಮಾತ್ಮನು ಹೇಗೆ ಇದ್ದಾನೆಂದಾಗಲೀ ಹೇಗೆ ಇರಬೇಕೆಂದಾಗಲೀ ಅವರು ಅಪೇಕ್ಷಿಸಲಿಲ್ಲ. ಅವನ ಮೂಗನ್ನು ಅವರು ತಿದ್ದಲಿಲ್ಲ. ಅವನಿಗೆ ನಾಲ್ಕು ಕೈಗಳನ್ನು ಕೊಟ್ಟು ಮನುಷ್ಯನಿಗಿಂತ ಬೇರೆಯಾದವನೆಂಬುದನ್ನೂ ತೋರ್ಪಡಿಸಲಿಲ್ಲ. ಹೀಗೆಲ್ಲಾ ಮಾಡಹೋದರೆ ಸ್ವತಂತ್ರಿಸಿ ಆಚರಿಸಿದ ಹಾಗೂ ಸುಳ್ಳು ಹೇಳಿದ ಹಾಗೂ ಆದೀತೆಂದು ಅವರು ಹೆದರಿದರು. ಅಂತಹ ವ್ಯರ್ಥಸಾಹಸಗಳನ್ನು ಬಿಟ್ಟು ಅವರು ಅವನ ಸ್ವರೂಪವನ್ನು ತಿಳಿಯಲಾತುರರಾದರು. ಆ ಘನವಾದ ಉದ್ದೇಶದಿಂದಲೇ ಅವರು ಪರಮಾತ್ಮನನ್ನು ಅಲಿಂಗವಾದ ತತ್ವವೆಂದು ಕರೆದರು. ಪರಮಾತ್ಮನನ್ನು ಗಂಡುಸೆಂದಾಗಲೀ ಹೆಂಗುಸೆಂದಾಗಲೀ ಕರೆದರೆ ತಪ್ಪೆಂದು ಭಾವನೆಯುಂಟಾಯಿತು. ಪರಮಾತ್ಮನನ್ನು 'ಅದು' ಎಂದು ಕರೆದರು. ಆದರೆ 'ಅದು' (ತತ್) ಎಂಬ ಶಬ್ದದಿಂದ ಪುಲ್ಲಿಂಗ ಸ್ತ್ರೀಲಿಂಗಗಳಿಂದ ಭಿನ್ನವಾದ ಮತ್ತೊಂದು ಲಿಂಗದ ವಸ್ತುವೆಂದು ಅರ್ಥವಲ್ಲ. ಲಿಂಗರಹಿತವಾದುದೆಂದು ನಿಷ್ಕರ್ಷಿಸಿದರು. ಆ ಶಬ್ದದಲ್ಲಿ ವಸ್ತುವನ್ನು ನಿರ್ದೇಶಿಸಿ ಗುರುತು ಹಿಡಿಯಲು ಮಾಡಿದ ಏರ್ಪಾಡು ಮಾತ್ರವೇ ಗೋಚರವಾದೀತು. ಅದಕ್ಕಿಂತ ಹೆಚ್ಚಾಗಿ ಮತ್ತೆ ಯಾವ ಅರ್ಥ ಮಾಡಿದರೂ ನಾವು ಆ ಶಬ್ದದಿಂದ ತೋರಿಬರದಿರುವುದನ್ನು ಆರೋಪಿಸಿದ ಹಾಗಾದೀತು. ಯಾವ ಲಿಂಗವನ್ನು ಆರೋಪಿಸಿದರೂ ಪರಮಾತ್ಮ ಅಥವಾ ಅದರಲ್ಲಿ ಬಂದ ಗುಣವನ್ನು ಹೇಳಿದಂತಾಗುವುದು.* ಆದುದರಿಂದಲೇ ಪೂರ್ವಿಕರು ಜನಗಳು ಪರಮಾತ್ಮನಲ್ಲಿ ಆರೋಪಿಸಿದ್ದ ಗುಣಗಳನ್ನೆಲ್ಲಾ ಒಂದೊಂದಾಗಿ ಕಿತ್ತುಹಾಕಿದರು. ಇಷ್ಟೆಲ್ಲಾ ಮಾಡಿದರೂ ಆತನ ಸ್ವರೂಪವನ್ನು ನಿರ್ಧರಿಸಲಾಗಲಿಲ್ಲ. ಈ ಈ ಗುಣವು ಪರಮಾತ್ಮನಲ್ಲಿಲ್ಲವೆಂದು ( ನೇತಿ, ನೇತಿ ) ವರ್ಣಿಸುವುದೊಂದೇ ಉಪಾಯವಾಯಿತು. ಆತನು ಕಲ್ಪನಾತೀತನೆಂದೂ ನಿರ್ಗುಣನೆಂದೂ, ಅನುಭವದಿಂದ ಆತನನ್ನು ಪ್ರತ್ಯಕ್ಷಮಾಡಿಕೊಂಡು ಆತನ ಇರುವಿಕೆಯನ್ನೂ ತಿಳಿದು ತೃಪ್ತರಾಗಬೇಕೆಂದೂ ಹೇಳಿದರು. ಆ ಮಹಾತ್ಮರು ಆ ರೀತಿ ಪ್ರಯತ್ನಮಾಡಿದರು. ನೋಡಲಾಗಿ ಅವರ ಸ್ವಂತ ಜೀವಾತ್ಮವೂ ಪರಮಾತ್ಮವೂ ಐಕ್ಯವಾದುವು. ನಮ್ಮಲ್ಲಿದ್ದ ಅಜ್ಞಾನವನ್ನು ಬೇರುಸಹಿತ ಕಿತ್ತುಹಾಕಲಾಗಿ ಜೀವಾತ್ಮನೇ ಪರಮಾತ್ಮನೂ ಪರಮಾತ್ಮನೇ ಜೀವಾತ್ಮನೂ ಆಗಿರುವುವೆಂದು ಅನುಭವವನ್ನೂ ನಿರ್ಧರವನ್ನೂ ಪಡೆದರು. ಆದುದರಿಂದಲೇ " ಅಹಂ ಬ್ರಹ್ಮ " ( ನಾನು ಬ್ರಹ್ಮನೇ ) ಎಂಬ ಸಿದ್ಧಾಂತವು ಅವರ ಬಾಯಿಂದ ಹೊರಟಿತು. "ಬ್ರಹ್ಮವಿದ್ ಬ್ರಹ್ಮೈವ ಭವತಿ" ಎಂದು ಮತ್ತೊಂದು ಕಡೆ ಹೇಳಿದ್ದಾರೆ. ಯಾರು ಸತ್ವಸ್ವರೂಪನಾದ ಬ್ರಹ್ಮವನ್ನು ತಿಳಿವರೋ ಅವರಿಗೂ ಬ್ರಹ್ಮಕ್ಕೂ ಭೇದವಿಲ್ಲ. ತತ್ಪೂರ್ವವಾದ ಯಾವ ಭೇದವಿದ್ದರೂ ಅಳಿಸಿ ಹೋಗುತ್ತದೆ. ಇದೇ ಬ್ರಹ್ಮಾನುಭವ. ಹೀಗೆ ಬ್ರಹ್ಮವನ್ನು ತಿಳಿಯಬೇಕಾ

---

* ಗುಣವು ಯಾವುದೂ ಪರಮಾತ್ಮನಲ್ಲಿ ಏಕೆ ಇರಕೂಡದೆಂದು ಕೇಳಬಹುದು. ಅದಕ್ಕೆ ಉತ್ತರವು ಈ ರೀತಿಯಾಗಿರುವುದು. ನಾವು ಯಾವ ಗುಣವನ್ನು ಭಾವಿಸಿಕೊಂಡರೂ ಅದಕ್ಕೆ ವ್ಯತಿರಿಕ್ತವಾದ ಮತ್ತೊಂದು ಗುಣವನ್ನು ಭಾವಿಸಿಕೊಳ್ಳಬಹುದು. ಯಾವುದೊಂದು ಗುಣಕ್ಕೂ ಅದರ ವಿರುದ್ಧ ರೂಪವು ಇದ್ದೇ ಇರುವುದು. ಒಂದು ಉದಾಹರಣೆಯನ್ನು ತೆಗೆದುಕೊಳ್ಳಬಹುದು. ಪರಮಾತ್ಮನಲ್ಲಿ ಸೌಂದರ್ಯ ಮಾತ್ರವಿದೆಯೆಂದು ಭಾವಿಸೋಣ. ಆಗ ಕುರೂಪವು ಯಾರಿಗೆ ಸೇರಿದುದಾದೀತು? ಆ ಗುಣವು ಪರಮಾತ್ಮನಲ್ಲಿಲ್ಲ. ಅವನನ್ನು ಕುರೂಪಿಯೆಂದು ಹೇಗೆ ಕರೆಯಲಾದೀತು. ಇಲ್ಲದಿದ್ದ ಪಕ್ಷದಲ್ಲಿ ಕುರೂಪವನ್ನು ಒಳಗೊಳ್ಳುವಷ್ಟು ಮಾಹಾತ್ಮ್ಯವು ಆತನಲ್ಲಿಲ್ಲವೆಂದು ಅರ್ಥವಾಗುವುದು. ಪರಮಾತ್ಮನನ್ನು ಎಲ್ಲಕ್ಕಿಂತ ಹೆಚ್ಚಿನ ವಸ್ತುವೆಂದು ಕರೆದು ಮನುಷ್ಯರಲ್ಲಿ ಕಂಡುಬರುವದೊಂದು ಸಾಮಾನ್ಯಗುಣವು ಆತನಲ್ಲಿಲ್ಲವೆಂದರೆ ಆ ಅಂಶದಲ್ಲಿ ಆತನನ್ನು ಮನುಷ್ಯರಿಗಿಂತ ಕಡಿಮೆಮಾಡಿದ ಹಾಗಾಗಲಿಲ್ಲವೆ? ಹೀಗೆ ಬೇಡ, ಸೌಂದರ್ಯವೂ ಇದೆ, ಕುರೂಪವೂ ಇದೆಯೆಂದು ಹೇಳೋಣ. ಆದರೆ ಅದು ಎಂದಿಗೂ ಸಾಧ್ಯವಲ್ಲ. ಅವೆರಡೂ ಪರಸ್ಪರ ವಿರುದ್ಧ ಗುಣಗಳು. ಒಂದಿದ್ದ ಕಡೆ ಮತ್ತೊಂದು ಇರುವುದಿಲ್ಲ. ಬೆಳಕಿರುವ ಕಡೆ ಕತ್ತಲೆ ಇರಲಾದೀತೆ? ಆದುದರಿಂದ ಪರಸ್ಪರವಿರುದ್ಧಗುಣಗಳು ಪರಮಾತ್ಮನಲ್ಲಿವೆಯೆಂಬುದು ಸಾಗದ ಮಾತು. ಪಾಶ್ಚಿಮಾತ್ಯ ತತ್ವಜ್ಞಾನಿಗಳಲ್ಲಿ ಕೆಲವರು ವ್ಯತ್ಯಸ್ತಗುಣಗಳು ಪರಮಾತ್ಮನಲ್ಲಿ ಏಕಕಾಲದಲ್ಲಿ ಗೋಚರಿಸುವುವೆಂದೂ ಆ ಗುಣಗಳನ್ನು ಪಡೆದಿರುವುದೇ ಆತನ ಮಹಿಮೆಯೆಂತಲೂ ಹೇಳುತ್ತಾರೆ. ಆದರೆ ಹೇಗೆ ಈ ಅಂಶವು ಸಾಧ್ಯವೆಂಬುದನ್ನು ಸ್ಪಷ್ಟಪಡಿಸಿಲ್ಲ. ಆದುಕಾರಣವೇ ನಾವು ಯಾವುದನ್ನೂ ಹೇಳುವುದಕ್ಕೆ ತೋರದೆ, ಬ್ರಹ್ಮನಲ್ಲಿ ಮನುಷ್ಯನಲ್ಲಿ ಕಾಣುವ ಗುಣಗಳು ಯಾವುವೂ ಇಲ್ಲವೆಂದು ಹೇಳಬೇಕಾಗುವುದು.

ವೆ, ಹಣ್ಣನ್ನು ತಿನ್ನಬೇಕಾದ ಪಕ್ಷದಲ್ಲಿ ಸಿಪ್ಪೆಯನ್ನು ಮೊದಲು ಸುಲಿವುದು ಹೇಗೆ ಅವಶ್ಯಕವೋ ಹಾಗೆ, ಸಾಮಾನ್ಯವಾಗಿ ಆರೋಪಿತವಾದ ಗುಣಗಳನ್ನೆಲ್ಲಾ ಮೊದಲು ಸುಲಿದು ಹಾಕಬೇಕು. ಆದರೆ ಹೀಗೆ ಸುಲಿವುದು ನೀರುಳ್ಳಿಯ ಸಿಪ್ಪೆಯನ್ನು ಸುಲಿದ ಹಾಗಲ್ಲ. ಸಿಪ್ಪೆಯನ್ನು ಸುಲಿಯುತ್ತ ಹೋದರೆ ನೀರುಳ್ಳಿಯೇ ಮಾಯವಾಗುವುದಾದರೂ ಗುಣಗಳನ್ನು ಸುಲಿಯುತ್ತ ಹೋದರೆ ಬ್ರಹ್ಮವು ನಷ್ಟವಾಗದು. ಏಕೆಂದರೆ, ಗುಣವೇ ಬೇರೆ, ಸತ್ವ (being)ವೇ ಬೇರೆ, ಅವೆರಡೂ ಬಹು ಅನ್ಯೋನ್ಯವಾಗಿ ಹೊಂದಿಕೊಂಡರೂ ಅವೆರಡೂ ಒಂದೇ ಎಂದು ಎಂದಿಗೂ ಹೇಳಲಾಗುವುದಿಲ್ಲ. ಗುಣಗಳನ್ನು ವಿಂಗಡಿಸಿದ ಮೇಲೆ ಉಳಿವುದೇ ಸತ್ವ ಅಥವಾ ಸತ್ಯವೆನ್ನಿಸಿಕೊಳ್ಳುವುದು. ಈ ಸತ್ಯವನ್ನು ಬ್ರಹ್ಮ ಮೊದಲೂ ಕರೆಯುಬಹುದು. ಆದರೆ ದೇವರೆಂದು ಕರೆದೇ ಕರೆಯುತ್ತೇವೆ. ಆದುದರಿಂದ ದೇವರೆಂಬ ಶಬ್ದಕ್ಕೆ ದೇವಾಲಯದಲ್ಲಿ ಅಥವಾ ಮನೆಯಲ್ಲಿ ಮಂದಾಸನದ ಮೇಲೆ ಇರುವ ವಿಗ್ರಹವೆಂದರ್ಥವಲ್ಲ. ಪ್ರತಿಯೊಂದು ವಸ್ತುವಿನಲ್ಲಿಯೂ ಸ್ಥಾವರ ಜಂಗಮವೆಲ್ಲದರಲ್ಲಿಯೂ ಅಂತಃಸತ್ವವಾಗಿ, ಆ ವಸ್ತುವಿನ ಇರುವಿಕೆಗೆ ಕಾರಣವಾಗಿರುವ ತತ್ವ ಅಥವಾ ಶಕ್ತಿ ಯಾವುದುಂಟೋ ಅದು ದೇವರು.* ಆ ತತ್ವವು ನಮ್ಮಲ್ಲಿಯೂ ಉಂಟು. ಹೃದಯಾಂತರಾಳದಲ್ಲಿ ಯಾವುದು ಆತ್ಮವೆಂದೆನ್ನಿಸಿಕೊಂಡು ಅಡಗಿ ಪ್ರತಿಯೊಬ್ಬನಲ್ಲಿಯೂ ಇರುವುದೋ ಅದು ದೇವರು. ಆ ಆತ್ಮವನ್ನು ನಮ್ಮದೆಂದು ಮಮತೆಯಿಂದೆಣಿಸಿದರೆ ಅದು ಜೀವವಾಗುವುದು. ಆ ದೋಷ ಗಣನೆಯಾಗದೆ ನಿರ್ಮಲವಾಗಿದ್ದರೆ ಅದೇ ಆತ್ಮವು ದೇವರೆನ್ನಿಸಿಕೊಳ್ಳುವುದು. ಹೀಗೆ ಸತ್ಯವು ಪ್ರತಿಯೊಂದರಲ್ಲಿಯೂ ಇರುವುದರಿಂದಲೇ ಭಗವಂತನು ಸರ್ವಾಂತರಯಾಮಿಯೆನ್ನಿಸಿಕೊಳ್ಳುವನು. ನಮಗೆ ಹೆಸರು ಮುಖ್ಯವಲ್ಲ. ಸಿದ್ಧಾಂತವು ಮುಖ್ಯವಾದುದು. ಇತರ ತತ್ವಜ್ಞಾನಿಗಳೂ ಪರಮಾತ್ಮನನ್ನು ಇದೇ ರೀತಿಯಲ್ಲಿ ಪದಾರ್ಥವೆಲ್ಲದರ ಅಂತಸ್ಸತ್ವವೆಂದು ಭಾವನೆ ಮಾಡಿಕೊಂಡಿದಾರೆ. ಬುದ್ಧನು ಅದನ್ನು ತಥಾತ್ವವೆಂದು ಕರೆದನು † ಬರ್ಗ್‌ಸಾನ್ (Bergson) ಎಂಬ ಫ್ರೆಂಚ ತತ್ವಜ್ಞಾನಿ ಅದನ್ನು ಆಧಾರಶಕ್ತಿ [ಅಥವಾ ಅಂತಶ್ಶಕ್ತಿ—Elan vital] ಎಂದು ಕರೆದನು. ಪ್ಲೇಟೊ [Plato] ಎಂಬಾತನು ಭಾವ [Idea] ಎಂದು ಕರೆದನು. ಹೆಗೆಲ್ [Hegel] ಎಂಬ ಪ್ರಸಿದ್ಧ ತತ್ವಜ್ಞಾನಿ ಅದಕ್ಕೆ ಪ್ರಜ್ಞಾನ [Reason] ಎಂದು ಹೆಸರಿಟ್ಟನು. ‡ ನಮ್ಮವರು ಅದನ್ನು ಬ್ರಹ್ಮವೆಂದು ಕರೆದರು. ಅಖಿಲಾಧಾರವೆಂದು ಹೊಗಳಿದರು. ಒಂದು ಹೆಸರಾದರೆ ಸಾಲದೋ ಎಂಬಂತೆ ವಿಜ್ಞಾನವೆಂದು ಮತ್ತೊಂದು ಹೆಸರಿಟ್ಟರು. § ಆದರೆ, ಮೇಲೆ ಹೇಳಿರುವಂತೆ, ಹೆಸರು ಮುಖ್ಯವಲ್ಲ.

ಪರಮಾತ್ಮನ ನಿಜರೂಪವು ಇದೇ. ಪರಮಾತ್ಮನು ಯಾವುದೊಂದು ಪದಾರ್ಥದಲ್ಲಿಯೂ ಅದರ ಒಳಗುಟ್ಟಾಗಿ ನಿಲ್ಲುವನು. ಹಾಗೆ ಅಂತಸ್ಸಾರವಾಗಿ ನಿಲ್ಲದಿದ್ದರೆ ಅದು ಆ ಪದಾರ್ಥವಾಗಿ ನಿಲ್ಲುವುದಿಲ್ಲ. ಪ್ರತಿಯೊಂದು ಪದಾರ್ಥಕ್ಕೂ ಜೀವನಕ್ಕೂ ಪರಮಾತ್ಮನು ಬೆಂಬಲ +. ಇಷ್ಟಾದರೂ, ಪ್ರತಿಯೊಂದು ವಸ್ತುವಿಗೂ ಬೇರೆ ಬೇರೆಯ ಹೆಸರಿದೆಯಲ್ಲ, ಪರಮಾತ್ಮನು ಒಬ್ಬನಾಗಿ, ಎಲ್ಲದರಲ್ಲಿಯೂ ಇದ್ದರೂ ಕೂಡ ವಸ್ತುಗಳು ಪರಸ್ಪರ ವ್ಯತ್ಯಸ್ತವಾಗಿವೆಯಲ್ಲ, ಎಂದು ಕೇಳಬಹುದು, ಹೀಗೆ ಭಿನ್ನವಾಗಿರುವುದು ಬಾಧಕವೂ ಅಲ್ಲ, ಅಸಾಧ್ಯವೂ ಅಲ್ಲ. ಮಣ್ಣು ಒಂದೇ ಆದರೂ ಬೇರೆ ಬೇರೆ ಪದಾರ್ಥಗಳನ್ನು ಮಾಡುವುದಕ್ಕಾಗುವುದಿಲ್ಲವೇನು? ಚಿನ್ನವು ಒಂದೇ ಧಾತುವಾದರೂ ವಿಧವಿಧವಾದ ಒಡವೆಗಳನ್ನು

* ಆ ಶಕ್ತಿ ಅಚೇತನ ಅಥವಾ ಮೂಢವಾದುದಲ್ಲವೆಂದು ಹೇಳಬೇಕಾಗಿಲ್ಲ.

† ಅಂತಹ ತತ್ವವುಂಟೆಂದು ಬುದ್ಧನು ಬಾಯಿಬಿಟ್ಟು ಹೇಳದಿದ್ದರೂ ಆ ಶಬ್ದವನ್ನು ಉಪಯೋಗಿಸಿ ಒಂದು ಭಾವನೆಯನ್ನು ನಿರ್ದೇಶಿಸಿರುವುದರಿಂದ ನಾವು ಹೇಳಿದುದನ್ನು ಅಂಗೀಕರಿಸಬಹುದೆಂದು ತೋರುತ್ತದೆ.

‡ ಐತರೇಯೋಪನಿಷತ್ತನ್ನು ನೋಡಿ.

§ "ವಿಜ್ಞಾನಂ ಬ್ರಹ್ಮ" ತೈತ್ತಿರೀಯೋಪನಿಷತ್.

+ ಈಗಿನ ಕಾಲದಲ್ಲಿ ಶಾಸ್ತ್ರಜ್ಞರು ಪ್ರಪಂಚದಲ್ಲಿ ಅಣುಮೊದಲಾಗಿ ಪರ್ವತಪರ್ಯಂತವಾದ ಪ್ರತಿಯೊಂದು ಪದಾರ್ಥವೂ Electrons ಎಂಬ ವಸ್ತುವಿಶೇಷದ ವಿಕಾರವೆಂದು ವರ್ಣಿಸುತ್ತಾರೆ. ಅದನ್ನು Energy (ಶಕ್ತಿ) ಮೊದಲಾಗಿ ಕರೆಯುತ್ತಾರೆ. ಹೆಸರು ಬೇರೆ ಬೇರೆಯಾದರೂ ಪದಾರ್ಥಗಳಲ್ಲಿ ಅಡಗಿರುವ ಸತ್ವವು ಬೇರೆಯಲ್ಲ.

ಮಾಡಲಾಗುವುದಿಲ್ಲವೇನು ? ಈ ಪೂರ್ವಪಕ್ಷವು ಉಪನಿಷತ್ತುಗಳಲ್ಲಿ ಚರ್ಚಿಸಲ್ಪಟ್ಟು ಸಿದ್ಧಾಂತವಾಗಿದೆ. * ಆತ್ಮವು ಎಲ್ಲರಲ್ಲಿಯೂ ಒಂದೇ ಆದರೂ ಮನುಷ್ಯನು ಬೇರೆ ಬೇರೆಯಾಗಿರುತ್ತಾರೆ. ಎಲ್ಲಾ ವಂಶಗಳಲ್ಲಿಯೂ ಒಂದೇ ಸಮವಾಗಿ ಅಭಿನ್ನರಾಗಿರುವ ಇಬ್ಬರು ಮನುಷ್ಯರನ್ನು ಕಾಣುವುದು ಎಂದಿಗೂ ಸಾಧ್ಯವಲ್ಲ. ಆದರೆ ಈ ಭೇದವನ್ನು ನೋಡಿ ಮೂಲವು ಬೇರೆಯೆಂದು ಹೇಳಿದರೆ ತಪ್ಪಾಗುವುದು. ಕಣ್ಣಿಗೆದುರಾಗಿ ನಿಲ್ಲುವ ಭೇದವು ಆಯಾ ಸನ್ನಿವೇಶದ ಫಲ. ಸನ್ನಿವೇಶದ ದೆಸೆಯಿಂದ ಅದ್ವೈತ ಭಾವವು ತಪ್ಪಿ ಹೋಗುವುದು.

ಇಂತಹ ದೇವರಿಗೆ, ನಮ್ಮ ನಿತ್ಯದ ಭಾವನೆಯಲ್ಲಿ ಸಲ್ಲುವಂತೆ ಕಣ್ಣು ಕೈಕಾಲುಗಳಿಲ್ಲ; ನೈವೇದ್ಯವಿಲ್ಲ; ಫಲಮಂತ್ರಾಕ್ಷತೆಗಳ ಪೂಜೆಯಿಲ್ಲ. ಇಂತಹ ದೇವರಿಗೆ ಮನುಷ್ಯನದಾಗಲೀ ಮೃಗದ್ದಾಗಲೀ ಮರದ್ದಾಗಲೀ ಹಕ್ಕಿಯದಾಗಲೀ ರೂಪವಿಲ್ಲ. ಆದರೆ ಕಣ್ಣು ಕೈಕಾಲುಗಳಿಲ್ಲದಿದ್ದರೂ ಅವುಗಳು ತಮ್ಮ ತಮ್ಮ ಕೆಲಸವನ್ನು ಮಾಡಲು ಪರಮಾತ್ಮನೇ ಕಾರಣನಾದನು. † ಯಾವ ಭೌತಿಕರೂಪವಿಲ್ಲದಿದ್ದರೂ ಆ ರೂಪಗಳಿಗೂ ಆ ವಸ್ತುಗಳಿಗೂ ನೆಲೆಯಾದವನು. ಇಂತಹ ಪರಮಾತ್ಮನನ್ನು ಪ್ರತ್ಯಕ್ಷ ಮಾಡಿಕೊಂಡಾತನಿಗೆ—ಅಂದರೆ, ವಸ್ತುಗಳ ಭಿನ್ನರೂಪವನ್ನು ಅಸತ್ಯವೆಂದೂ ಅಂತಸ್ಸತ್ವ ಸ್ವರೂಪನಾದ ಅಂತರಾತ್ಮನ ಮೂಲಕ ಅವು ಏಕೀಭವಿಸುವುದು ಸತ್ಯವೆಂದೂ ‡ ಅರಿತ ಮಹಾತ್ಮನಿಗೆ ಬೇರೆಯ ದೇವರಿಲ್ಲ. ಬೇರೆಯ ದೇವರು ಬೇಕಿಲ್ಲ. ಅಂತಹವನು ಗುಡಿಗೆ ಹೋಗಿ ನಮಸ್ಕಾರಹಾಕುವುದು ಅಪ್ರಕೃತ. ಆಹ್ನಿಕಗಳೂ ಜಪತಪಾದಿಗಳೂ ಅಪ್ರಕೃತ. ಮತಾಚರಣೆಗಳನ್ನು ಅನುಸರಿಸುವುದು ಅಪ್ರಕೃತ. ಈ ಪದ್ಧತಿಗಳೂ ಈ ಆಚರಣೆಗಳೂ ಆತ್ಮಸಂಯಮನಕ್ಕೋಸ್ಕರ ಏರ್ಪಟ್ಟಂತಹವುಗಳು. ಆತ್ಮದ ತತ್ವವನ್ನು ತಿಳಿದವನಿಗೆ ಸಂಯಮನದ ಯೋಚನೆ ಮುಖ್ಯವಲ್ಲ. ದೇಹಾರೋಗ್ಯವುಳ್ಳವನಿಗೆ ಔಷಧವು ಹೇಗೆ ಅನಾವಶ್ಯಕವೋ, ಪಂಡಿತನಾದವನಿಗೆ ಅಕ್ಷರಾಭ್ಯಾಸವು ಹೇಗೆ ಅನಾವಶ್ಯಕವೋ ಹಾಗೆ ಪರಮಾತ್ಮನನ್ನು ಅನುಭವದಿಂದ ತಿಳಿದವನಿಗೆ ಮತಾಚರಣೆಯೂ ಧರ್ಮಕಾರ್ಯಗಳೂ ಬೇಕಿಲ್ಲ. ಆದುದರಿಂದಲೇ ಶಂಕರಾಚಾರ್ಯರು ಜೀವನ್ಮುಕ್ತನು ಜಪತಪಾದಿಗಳನ್ನು ಮಾಡುವುದು ಅಪ್ರಕೃತವೆಂದು ಹೇಳಿದ್ದಾರೆ.

ಭಗವಂತನ ಸ್ವರೂಪವು ಭಗವಂತನನ್ನು ಪ್ರತ್ಯಕ್ಷಮಾಡಿಕೊಳ್ಳುವ ಪ್ರಕಾರವೂ ಮೇಲೆ ಹೇಳಿರುವಂತಾದರೆ ಒಂದ್ಯ ಆಕ್ಷೇಪಣೆ ಹುಟ್ಟುವುದು. ನಾವು ಅನುಸರಿಸುವ ಮತಾಚಾರಗಳು ವ್ಯರ್ಥವೆ ? ಅವು ಅನುಷ್ಠೇಯವೆಂದು ಹೇಳಲು ಕಾರಣವೇನು ? ನಾವು ದೇವರ ಪೂಜೆಯನ್ನು ಮಾಡುವುದು ಸುಳ್ಳೆ ? ಇದೊಂದೂ ಸುಳ್ಳಲ್ಲ. ಆದರೆ ಇದೊಂದರಿಂದಲೂ ಸತ್ಯವನ್ನು ಶೋಧಿಸಿದಂತಾಗುವುದಿಲ್ಲ. ಮತಾಚರಣೆಗಳೂ ಧರ್ಮಕಾರ್ಯಗಳೂ ನಿತ್ಯವಿಧಿಗಳೂ ನಮಗೆ ಶ್ರದ್ಧೆಯನ್ನೂ ಏಕಾಗ್ರಚಿತ್ತತೆಯನ್ನೂ ಕಲಿಸಿ ಅಧ್ಯಾತ್ಮವಿಷಯಗಳಲ್ಲಿ ಅಭಿರುಚಿ ಹುಟ್ಟುವಂತೆ ಮಾಡುವುದಕ್ಕಾಗಿ ಕಲ್ಪಿತವಾದುವುಗಳು. ಯಾವ ಕೆಲಸದಲ್ಲಿ ಕೈ ಹಾಕಿದರೂ ಅದನ್ನು ಒಂದೇ ಮನಸ್ಸಿನಿಂದ ಮಾಡೆಂದೂ ಅದು ಮುಗಿದ ಮೇಲೆ ಕಷ್ಟಕರವೂ ಪ್ರಯೋಜನಕರವೂ ಆದ ಮತ್ತೊಂದನ್ನು ಅಂಗೀಕರಿಸೆಂದೂ ಅವೆಲ್ಲವೂ ಹೇಳುವುವು §. ಕಣ್ಣೆದುರಿಗಿರುವ ವಿಷಯದ ಸ್ವಭಾವವನ್ನು ಅರಿತು ನಿಷ್ಕರ್ಷಿಸುವುದು ಮುಖ್ಯವಾದುದು. ಗುರುಗಳು ಪಾಠ ಹೇಳುತ್ತಿರುವಾಗ, ಇಲಿ ಬಿಲವನ್ನು ಹೊಕ್ಕು ಮರೆಯಾಗುವುದನ್ನು ನೋಡುತ್ತಿರುವುದು ಧೂರ್ತತೆಯೇ ಹೊರತು ಅದರಿಂದ ಸ್ವಲ್ಪವೂ ಪ್ರಯೋಜನವಿಲ್ಲ. ಶ್ರದ್ಧೆಯಿಂದ ಯಾವುದನ್ನಾದರೂ ನಿರ್ವಹಿಸುವುದು ಅಭ್ಯಾಸ

* ಆದರೆ ಒಡವೆಯೊಂದನ್ನು ನೋಡಿ ಅದು ಚಿನ್ನದ ಸ್ವರೂಪವೆಂದು ಹೇಳಲಾಗುವುದಿಲ್ಲ. ಅಥವಾ ಮೊದಲಿನ ಚಿನ್ನವನ್ನು ಒಡವೆಯೆಂದೂ ಕರೆಯಲಾಗುವುದಿಲ್ಲ. ಇದೇ ರೀತಿಯಲ್ಲಿ ಪರಮಾತ್ಮನು ಇಲ್ಲದ ವಸ್ತುವಿಲ್ಲದಿದ್ದರೂ ಪರಮಾತ್ಮನೂ ಆ ವಸ್ತುವೂ ಒಂದೇ ಎಂದಾಗಲೀ ಆ ವಸ್ತುವೇ ಪರಮಾತ್ಮನೆಂದಾಗಲೀ ಹೇಳಲು ಎಂದಿಗೂ ಆಗಲಾರದು. ಸ್ವರೂಪವೂ ವಿಕಾರವೂ ಒಂದೇ ಪದಾರ್ಥವೆಂದು ಹೇಗೆ ಹೇಳಲಾದೀತು ?

† " ಯೇನ ವಾ ಪಶ್ಯತಿ ಯೇನ ವಾ ಶೃಣೋತಿ, ಯೇನ ವಾ ಗಂಧಾನಾಜಿಘ್ರತಿ, ಯೇನ ವಾ ವಾಚಂ ವ್ಯಾಕರೋತಿ......" ಐತರೇಯೋಪನಿಷತ್. ಇದೇ ರೀತಿಯಲ್ಲಿ ಕೇನೋಪನಿಷತ್ತಿನಲ್ಲಿಯೂ ಹೇಳಿದೆ.

‡ " ವಾಚಾರಂಭಣಂ ವಿಕಾರೋ ಮೃತ್ತಿಕೇತ್ಯೇವ ಸತ್ಯಂ. "

§ ಶ್ರಾದ್ಧಕರ್ಮವನ್ನು ನೋಡಿದರೆ ಆ ಅರ್ಥವು ಪತ್ತೆಯಾಗುವುದು." ಶ್ರದ್ಧಯಾ ಕೃತಂ ಶ್ರಾದ್ಧಂ " ಎಂದು ಹೇಳಲ್ಪಟ್ಟಿದೆ.

ವಾಗಲಾಗಿ ಮನಸ್ಸು ಇನ್ನೂ ಕಷ್ಟಕರವೂ ನಿಗೂಢವೂ ಆದ ವಿಷಯಗಳನ್ನು ಪರಾಮರ್ಶಿಸಲು ಹೊರಡುವುದು. ಈ ನಿದಿಧ್ಯಾಸನದಿಂದ ಚಿತ್ತವು ತೊಳೆದ ಕನ್ನಡಿಯಂತೆ ಸ್ಫುಟವೂ ಸೂಕ್ಷ್ಮವೂ ಆಗಿ ಅಧ್ಯಾತ್ಮವಿಷಯವನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸುವುದು. ಆದುದರಿಂದ ಶಮದಮಾದಿಗಳೂ ಇತರ ಅನುಷ್ಠಾನಗಳೂ ಸಾಧನಗಳು. ಇದೇ ಅವುಗಳ ಪ್ರಯೋಜನ. ಇಂತಹವನ್ನು ವ್ಯರ್ಥವೆಂದು ಎಂದಿಗೂ ಹೇಳಲಾಗುವುದಿಲ್ಲ. ನಾವು ಮನೆಯಲ್ಲಿ ವಿಗ್ರಹಗಳನ್ನು ಕೂರಿಸಿ ಪೂಜೆಮಾಡುತ್ತಿದ್ದೇವೆ. ಅವುಗಳಲ್ಲಿ ಭಗವಂತನನ್ನು ಆವಾಹನೆ ಮಾಡಿ, ಅವುಗಳ ಮೇಲೆ ಮನಸ್ಸನ್ನೂ ಇಂದ್ರಿಯಗಳನ್ನೂ ನಿಲ್ಲಿಸಿ ಆರಾಧಿಸುತ್ತೇವೆ. ಸುತ್ತುವುದೇ ಸ್ವಭಾವವಾದ ಮನಸ್ಸನ್ನು ಒಂದು ಸ್ಥಳದಲ್ಲಿ ಆಕರ್ಷಿಸಿ ನಿಲ್ಲಿಸುವುದು ಬಹು ಪ್ರಯಾಸ. ಅಂತಹ ಪ್ರಯತ್ನದಲ್ಲಿ ಸಹಾಯವಾಗಲೆಂಬ ಸದುದ್ದೇಶದಿಂದಲೇ ವಿಗ್ರಹಗಳು ಏರ್ಪಟ್ಟು ಅವುಗಳಲ್ಲಿ ಪರಮಾತ್ಮನು ಆವಾಹಿತನಾಗಬೇಕಾಯಿತು. ಆದರೆ ವಿಗ್ರಹಗಳು ಆವಾಹನೆಗೂ ಏಕಾಗ್ರತೆಗೂ ಮಾತ್ರ ಸಾಧನವೇ ಹೊರತು, ಅವುಗಳಿಗೆ ಅದಕ್ಕಿಂತ ಹೆಚ್ಚಿನ ಬೆಲೆ ಇಲ್ಲ. ಆದುದರಿಂದಲೇ ನಾವು ನಾನಾವಿಧದ ನಾನಾಲೋಹದ ನಾನಾರೂಪದ ಮೂರ್ತಿಗಳನ್ನು ಪೂಜಿಸುವೆವು. ಆದುದರಿಂದಲೇ ಕೆಲವು ವೇಳೆ ಕಲ್ಲೂ ದೇವರಾಗುವುದು. ಪ್ರಾಯಶಃ ಪರಮಾತ್ಮನನ್ನು ಇಂದ್ರಿಯಗೋಚರವನ್ನಾಗಿ ಮಾಡುವ ಪ್ರಯತ್ನದಲ್ಲಿ ಅರ್ಥವಿಲ್ಲವೆಂಬ ಭಾವನೆಯಿಂದಲೇ ಇರಬಹುದು. ಕ್ರಿಸ್ತಮತದಲ್ಲಾಗಲೀ ಮಹಮ್ಮದೀಯ ಮತದಲ್ಲಾಗಲೀ ವಿಗ್ರಹಾರಾಧನೆಯನ್ನು ಹೇಳಿಲ್ಲ. ಮೂರ್ತರೂಪವಿಲ್ಲದಂತೆಯೇ ಪರಮಾತ್ಮನನ್ನು ಪ್ರತ್ಯಕ್ಷ ಮಾಡಿಕೊಳ್ಳುವಷ್ಟು ಶಕ್ತಿಯಿಲ್ಲದವರಿಗೆ ವಿಗ್ರಹಗಳ ಮೂಲಕವಾದರೂ ಉದ್ದೇಶಸಾಧನೆಯಾಗಲೆಂಬ ಕಾರಣದಿಂದಲೇ ಲೋಕದಲ್ಲಿ ಪೂಜೆ ಏರ್ಪಟ್ಟಿತೆಂದು ತೋರುತ್ತದೆ. ಋಷಿಗಳು ತಪಸ್ಸು ಮಾಡುವರೆಂದು ಹೇಳುತ್ತೇವೆ. "ತಪಸ್" ಎಂಬ ಶಬ್ದಕ್ಕೆ ಚಿಂತನ ಅಥವಾ ಧ್ಯಾನವೆಂದರ್ಥ. ಅನೇಕಕಾಲ ಏಕಾಗ್ರತೆಯಿಂದ ಧ್ಯಾನಮಾಡಿ ಪರಮತತ್ವದ ನಿಜರೂಪವನ್ನು ಅವರು ತಿಳಿಯುತ್ತಾರೆ. ದೇವರು ಅವರಿಗೆ ಪ್ರತ್ಯಕ್ಷನಾದನೆಂದರೆ, ಅವರಿಗೆ ಪರಮಾತ್ಮನ ಅನುಭವವು ಲಭಿಸಿತೆಂಬ ಮಾತನ್ನು ತಿರುಗಿಸಿ ಹೇಳಿದ ಹಾಗಾಯಿತು. ಪ್ರಯತ್ನವು ಫಲಹೊಂದಲಾಗಿ ಮನುಷ್ಯನಿಗೆ ಸಾಧನವು ಅಪ್ರಸ್ತುತವಾದುದು. ಊರು ಸೇರಿದ ಮೇಲೆ ಪ್ರಯಾಣ ಮಾಡಿ ಬಂದ ಗಾಡಿ ಬೇಕಿಲ್ಲ. ಪರಮಾತ್ಮನನ್ನು ಪ್ರತ್ಯಕ್ಷಮಾಡಿಕೊಂಡ ಮೇಲೆ ವಿಗ್ರಹಾರಾಧನೆ ಬೇಕಿಲ್ಲ. ಆದರೆ ಆ ಅನಾವಶ್ಯಕತೆ ಪರಾನುಭೂತಿಯಾದ ಮೇಲಿನ ಮಾತೇ ಹೊರತು ಅದಕ್ಕೆ ಮೊದಲಲ್ಲ. ಅದಕ್ಕೆ ಮೊದಲೇ ಆದರೆ ಇದ್ದುದನ್ನೂ ಕಳೆದುಕೊಂಡು ಪೆದ್ದಭಟ್ಟರಾದೇವು!

ಪರಮಾತ್ಮನ ಭಾವವನ್ನು ಮೇಲೆ ವರ್ಣಿಸಿ ಆಗಿದೆ. ಆದರೂ ಒಂದು ಯೋಜನೆ ಕೆಲವರಿಗೆ ತೋರೀತು. ಪ್ರತಿಯೊಬ್ಬನೂ ತನ್ನ ಆತ್ಮವನ್ನು ಪರಿಪಕ್ವಮಾಡಿದ ಹೊರತು ಪರಮಾತ್ಮನು ಗೋಚರನಾಗುವ ಸಂಭವವಿಲ್ಲ. ಪರಿಪಕ್ವನಾದ ಮೇಲೆ ಪರಿಶೀಲಿಸಲಾಗಿ ಜೀವಾತ್ಮಕ್ಕೂ ಪರಮಾತ್ಮಕ್ಕೂ ಭೇದವಿಲ್ಲದ ಏಕರೂಪತೆ ಕಾಣಬರುವುದು. ಆದರೆ ಕೆಲವು ಸಮಯಗಳಲ್ಲಿ ನಾವು ಪರಮಾತ್ಮನನ್ನು ಸಗುಣವನ್ನಾಗಿಯೂ ಭಾವಿಸಿಕೊಳ್ಳುತ್ತೇವೆ. ಈ ಸಗುಣರೂಪವೂ ಮೇಲಿನ ನಿರ್ಗುಣರೂಪವೂ ವ್ಯತ್ಯಸ್ತವಾಗಿ ತೋರುವುವು. ಈ ಭೇದದ ಪರಿಹಾರವೇನು ? ಇವೆರಡು ವರ್ಣನೆಗಳಲ್ಲಿ ಯುಕ್ತವಾದುದು ಯಾವುದು ? ಪರಮಾತ್ಮನಿಗೆ ಸಗುಣರೂಪವು ನಿಜವಾದುದೆ, ನಿರ್ಗುಣರೂಪವು ನಿಜವಾದುದೆ ?

ಮೊದಲು ಸಗುಣರೂಪವನ್ನು ತೆಗೆದುಕೊಂಡು ವಿಚಾರ ಮಾಡಬಹುದು. ನಾವು ಪರಮಾತ್ಮನಲ್ಲಿ ನಾನಾ ವಿಧವಾದ ಗುಣಗಳನ್ನೂ ರೂಪವನ್ನೂ ಆರೋಪಿಸುತ್ತೇವೆ. ದೇವರು ಸರ್ವಜ್ಞನೆಂದೂ ಸರ್ವಶಕ್ತನೆಂದೂ ವರ್ಣಿಸುತ್ತೇವೆ. ಅದೆಲ್ಲಾ ನ್ಯಾಯವೆ ? ಪರಮಾತ್ಮನಲ್ಲಿ ಈ ಗುಣಗಳನ್ನೆಲ್ಲಾ ನಿಜವಾಗಿ ಕಂಡವರು ಯಾರು ? ಈ ಪ್ರಶ್ನೆಗೆ ಉತ್ತರವಿಲ್ಲ. ಪರಮಾತ್ಮನನ್ನು ಮನುಷ್ಯನು ಆಕಾರದಿಂದ ಭಾವಿಸುತ್ತೇವೆಂದೂ ಮನುಷ್ಯನ ಗುಣಗಳನ್ನು ಶೋಧಿಸಿ ಅವುಗಳ ಶ್ರೇಷ್ಠರೂಪವನ್ನು ಆತನಲ್ಲಿ ಕಲ್ಪಿಸುತ್ತೇವೆಂದೂ ಮೇಲೆ ಹೇಳಿದ್ದೇನೆ. ಆದುದರಿಂದಲೇ ಉತ್ತರವಿಲ್ಲ. ಆತನ ರೂಪವೂ ಗುಣಸಮುದಾಯವೂ ನಮ್ಮ ಕಲ್ಪನೆ. ಅವೆಲ್ಲವೂ ನಮ್ಮ ಮನಸ್ಸಿನ ನಿರ್ಮಾಣಮಾತ್ರ. ಕೇವಲ ಭಾವನೆಯಾದುದನ್ನು ಸತ್ಯವನ್ನಾಗಿ ಮಾಡಲು ಎಂದಿಗೂ ಸಾಧ್ಯವಲ್ಲ. ಅದು ಸಾಧ್ಯವಾಗುವುದಾದರೆ, ನಾನು ಇದ್ದ ಕಡೆಯಲ್ಲಿಯೇ ಭಾವನೆಮಾಡಿಕೊಂಡು, ಕೇವಲ ಅಪೇಕ್ಷಾಬಲದಿಂದ ಬೇಕಾದುದನ್ನು ಪಡೆಯಬಹುದು.

ಮಂತ್ರಿಸಿ ಮಾವಿನಕಾಯನ್ನು ನಿರ್ಮಿಸಬಹುದು. ಆದರೆ ಇದೊಂದೂ ಸಾಧ್ಯವಲ್ಲವೆಂಬುದು ಎಲ್ಲರಿಗೂ ತಿಳಿದ ವಿಷಯವೇ. ಆದದುರಿಂದ ದೇವರಲ್ಲಿ ಗುಣಗಳನ್ನು ಕಾಣುವುದಾದರೆ ದೇವರ ಯಥಾರ್ಥರೂಪವನ್ನು ಕಂಡಂತಾಗುವುದಿಲ್ಲ. ಪರಮಾತ್ಮನು ಸತ್ವಮಾತ್ರವೂ ನಿರ್ಗುಣನೂ ಎಂದ ಅಭಿಪ್ರಾಯವೇ ಸತ್ಯವಾದುದು. *

ವಿಗ್ರಹಾರಾಧನೆ ವ್ಯರ್ಥವಲ್ಲವೆಂದೂ ಮೇಲೆ ಹೇಳಿ ಅದರ ಮುಖ್ಯವಾದ ಅರ್ಥವನ್ನೂ ಉದ್ದೇಶವನ್ನೂ ವಿವರಿಸಿದ್ದೇನೆ. ಈಗ ಅಂತಹ ಆರಾಧನೆಯ ಫಲವೇನೆಂಬುದನ್ನು ವಿಚಾರಮಾಡಬಹುದು. ಪರಮಾತ್ಮನು ಪದಾರ್ಥಗಳಲ್ಲಿ ನಾವು ಕಾಣುವ ಸಮಷ್ಟಿಭಾವವುಳ್ಳ ತತ್ವವೆಂದು ನಾವು ಹೇಳುವುದಾದರೆ ದೇವರೆಂಬುದು ಕೇವಲ ಕಲ್ಪನೆಯಾಗುವುದಿಲ್ಲವೆ, ಅಂತಹ ಕಲ್ಪನೆಯನ್ನು ಪೂಜಿಸುವುದು ನಿಷ್ಫಲವಲ್ಲವೆ? ದೇವರು ಕಲ್ಪನೆಯುಲ್ಲವೆಂದು ಈ ಮೊದಲು ಹೇಳಿರುವ ಅಭಿಪ್ರಾಯಗಳಿಂದ ಹೊರಡುವುದು. ವಿಚಾರಚೈತನ್ಯವಿರುವುದರಿಂದ ನಾವು ಪರಮಾತ್ಮನನ್ನು ಎಲ್ಲೆಲ್ಲಿಯೂ ಕಂಡರೆ ಅದು ಕಲ್ಪನೆಯಾದೀತೆ ? ಕೊಲಂಬಸ್‌ನು ಅಮೇರಿಕವನ್ನು ಕಂಡು ಹಿಡಿದನು. ಆದರೆ ಅದನ್ನೂ ಅವನ ಮನಸ್ಸಿನ ಕಲ್ಪನೆಯೆಂದು ಹೇಳಲಾದೀತೆ? ಪರಮಾತ್ಮನು ಕಲ್ಪನೆಯಲ್ಲ. ಕಲ್ಪನೆಯಾದರೆ ನಮ್ಮನ್ನೂ ನಾವು ಕಲ್ಪನೆಯೆಂದು ಕರೆದುಕೊಳ್ಳಬೇಕಾದೀತು. ಅತ್ಯಂತ ಸತ್ಯನಾದ ದೇವರನ್ನು ಪೂಜಿಸುವುದರಿಂದ ಅತ್ಯುತ್ತಮ ಫಲವುಂಟು. ಈ ಪ್ರಪಂಚದಲ್ಲಿ ವ್ಯರ್ಥವಾದ ಪದಾರ್ಥವಿಲ್ಲವೆಂಬ ಮಾತು ಎಷ್ಟರನುಟ್ಟಿಗೆ ನಿಜವಾದುದೋ ಭಗವದಾರಾಧನೆಯಲ್ಲಿಯೂ ಅಷ್ಟು ಫಲವಿದ್ದೇ ಇರುವುದು. ಮನಸ್ಸಿಟ್ಟು ದೇವರನ್ನು ಪೂಜಿಸುವಾಗಲೂ ಸ್ಥಿರಚಿತ್ತದಿಂದ ಧ್ಯಾನಮಾಡುವಾಗಲೂ ಮನಸ್ಸಿನ ಕಲ್ಮಷವು ತೊಲಗಿ ಮನಸ್ಸು ಬೆಳಗುವುದು. ಅಷ್ಟೇ ಅಲ್ಲ. ಒಂದು ವಿಧವಾದ ಹರ್ಷವೂ ಉಂಟಾಗುವುದು. ದೇವರ

---

* ಈ ಅಭಿಪ್ರಾಯದಿಂದ ಎರಡೆರಡು ಸಂಶಯಗಳು ಹೊಮ್ಮುವುವು. ಮೊದಲನೆಯದಾಗಿ, ದೇವರು ನಿರ್ಗುಣನೂ ನಿರಾಕಾರನೂ ಆದರೆ ಜಗತ್ತನ್ನು ಸೃಷ್ಟಿ ಮಾಡಿದವರು ಯಾರು ? ದೇವರು ಪ್ರತಿಯೊಂದು ವಸ್ತುವಿನಲ್ಲಿಯೂ ಇರುವ ಸತ್ವ ( ಅಥವಾ ಅಂತಸ್ಸತ್ವ ) ವಾದರೆ ಅವುಗಳ ನಿರ್ಮಾಣವು ಹೇಗೆ ? ಏಕೆಂದರೆ ಒಂದು ವಸ್ತುವಿನಲ್ಲಿ ಸತ್ವವೊಂದೇ ಅಂಶವಲ್ಲ, ಅದರಲ್ಲಿ ಅದರ ಜನ್ಮವೇ ಮೊದಲಾದ ಇತರ ಅಂಶಗಳೂ ಅಡಕವಾಗಿವೆ. ಇವುಗಳಿಗೆ ಉತ್ತರವಾದಿ ಯಾರು ? ಈ ಪದಾರ್ಥಗಳು ಹುಟ್ಟಿದುದು ಹೇಗೆ ? ಪ್ರಶ್ನೆಗಳು ನ್ಯಾಯವಾದುವು. ಅವಕ್ಕೆ ಈ ರೀತಿ ಉತ್ತರ ಹೇಳಬೇಕಾಗುವುದು. ಸಾಂಖ್ಯ ಮತ್ತು ನ್ಯಾಯ ವೈಶೇಷಿಕ ದರ್ಶನಗಳಲ್ಲಿ ಜಗತ್ತು ಪೂರ್ವದಿಂದ ಇದ್ದಿತೆಂತಲೂ ಅದು ಅನಾದಿಯಾದುದೆಂತಲೂ ತಿಳಿದು ಬರುವುದು. ಬೌದ್ಧಮತದ ಪ್ರಕಾರ, ಜಗತ್ತೆಂಬ ವಸ್ತುವಿಲ್ಲ; ಜಗತ್ತೆಂದು ನಾವು ತಿಳಿವುದು ಕಲ್ಪನೆಯ ಫಲ ಮಾತ್ರ. ಅದರೆ ವೇದಾಂತದರ್ಶನದಲ್ಲಿ ಆ ಕಥೆಯು ಮತ್ತೊಂದು ವಿಧವಾಗಿರುವುದು. ಒಂದು ಕಡೆ ಜಗತ್ತು ಕಲ್ಪನೆಯೆಂತಲೂ ಮಾಯಾನಿರ್ಮಿತವಾದುದೆಂತಲೂ ಅನಿರ್ವಚನೀಯ ಅಂದರೆ ಜಗತ್ತು ಇದೆಯೆಂತಲಾಗಲೀ ಇಲ್ಲವೆಂತಲಾಗಲೀ ಹೇಳಲಾಗುವುದಿಲ್ಲವೆಂತಲೂ ಹೇಳಲ್ಪಟ್ಟಿದೆ. ಮತ್ತೊಂದು ಕಡೆ ಸೃಷ್ಟಿ ಬ್ರಹ್ಮನ ಲೀಲೆಯೆಂತಲೂ ಆತನ ಆನಂದದ ಪ್ರಭಾವವೆಂತಲೂ ವರ್ಣಿತವಾಗಿದೆ. ಈ ಮತವನ್ನನುಸರಿಸಲಾಗಿ ಪರಮಾತ್ಮನು ಆನಂದ ಸ್ವರೂಪನೆಂತಲೂ ಆ ಆನಂದವು ಉಕ್ಕಿ ಜಗದ್ರೂಪವನ್ನು ತಾಳುವುದೆಂತಲೂ ನಾವು ಊಹಿಸಬೇಕಾಗುತ್ತದೆ. ಆದರೆ ಈಗಿನ ಶಾಸ್ತ್ರಜ್ಞರ ಅಭಿಪ್ರಾಯವು ಸಂಪೂರ್ಣವಾಗಿ ವ್ಯತ್ಯಸ್ತವಾದುದು. ಸೃಷ್ಟಿಯ ಈ ಕಥೆಗಳಿಗೂ ಪ್ರಯತ್ನ ಪೂರ್ವಕವಾದ ಪರಿಶೋಧನೆಯ ಫಲಿತಾಂಶವಾಗಿ ನಮಗೆ ತಿಳಿದು ಬಂದಿರುವ ವಿಷಯಗಳಿಗೂ ಹೋಲಿಕೆ ಸ್ವಲ್ಪವೂ ಇಲ್ಲ. ಶಾಸ್ತ್ರಜ್ಞರ ಮತದ ಪ್ರಕಾರ ಜಗತ್ತು ಪ್ರಾರಂಭದಲ್ಲಿ ನಮಗೆ ಕಾಣುವ ನಕ್ಷತ್ರಗಳೂ ಗ್ರಹಗಳೂ ಈಗ ಇರುವಂತೆ ಧೂಮ [gas] ರೂಪದಲ್ಲಿದ್ದಿತೆಂದೂ ಆದಕ್ಕೆ ಘನಾಕಾರವು ಇರಲಿಲ್ಲವೆಂದೂ ಘನಾಕಾರವು ಬಹುಕಾಲದ ಮೇಲೆ ಬಂದಿತೆಂತಲೂ ತಿಳಿದುಬರುವುದು. ಅದರ ಸೃಷ್ಟಿಯಲ್ಲಾಗಲೀ ಸ್ಥಿತಿಯಲ್ಲಾಗಲೀ ಲಯದಲ್ಲಿಯಾಗಲಿ ಅದಕ್ಕೂ ಪರಮಾತ್ಮನಿಗೂ ಯಾವ ಸಂಬಂಧವೂ ಇರುವಂತೆ ತೋರುವುದಿಲ್ಲ. ಜಗತ್ತಿನ ಸೃಷ್ಟಿಗೆ ಪರಮಾತ್ಮನು ಅವಶ್ಯಕವೂ ಇಲ್ಲವೆಂಬ ಅಭಿಪ್ರಾಯವು ಹೊರಡುವುದು. ಆದರೆ ಈ ವಿಷಯದಲ್ಲಿ ನನಗೆ ಹೀಗೆ ತೋರುವುದು. ಈಗಿನ ಕಾಲದಲ್ಲಿ ದ್ರವ್ಯವು (Matter) electrons ಎಂಬ ಶಕ್ತಿ ವಿಶೇಷದ ವಿಕಾರವೆಂದು ಸಿದ್ಧಾಂತವಾಗಿದೆ. ಹಾಗಾದರೆ ಜಗತ್ತಿನ ಪುರಾತನಕಾಲದ ಪ್ರಜ್ವಲಿತ ಧೂಮರೂಪವು ಮೇಲೆ ಹೇಳಿರುವ electrons ಗಳ ಮತ್ತೊಂದು ವಿಕಾರವಿರಬಹುದೆಂಬು ಹೇಳುವುದರಲ್ಲಿ ಯಾವ ಆಕ್ಷೇಪಣೆಯೂ ಇರಲಾರದು. ಆದರೆ ಈ ಶಕ್ತಿವಿಶೇಷದ ಸ್ವಭಾವವು ಇನ್ನೂ ಸಂಶೋಧಿತವಾಗಿಲ್ಲ. ಸಂಶೋಧಿತವಾದರೆ ಇನ್ನೂ ಹೊಸ ವಿಷಯಗಳು ಏನೇನು ಗೋಚರಕ್ಕೆ ಬರುವುವೋ ತಿಳಿಯದು. ಅದು ಹೇಗಾದರೂ ಆಗಲಿ, ಇದುವರೆಗೆ ಲಭ್ಯವಾಗಿರುವ ಈ ಶಕ್ತಿವಿಶೇಷವನ್ನು ನಾವು ಪರಮಾತ್ಮನ ರೂಪವೆಂದು ಧಾರಾಳವಾಗಿ ಕರೆಯಬಹುದೆಂದು ತೋರುತ್ತದೆ. ಇನ್ನು ಸ್ವಲ್ಪಕಾಲದಲ್ಲಿ ಶಾಸ್ತ್ರಜ್ಞರು ಈ ವಿಧವಾದ ನಿರ್ಧಾರಕ್ಕೆ ಬರುವುದು ನಿಶ್ಚಯ. ಈಗಿನ ಕಾಲದ ಅಭಿಪ್ರಾಯಕ್ಕೂ ಪೂರ್ವಿಕರ ಅಭಿಪ್ರಾಯಕ್ಕೂ ಹೋಲಿಕೆಯಿಲ್ಲದಿದ್ದರೂ ವಿರೋಧವಿಲ್ಲ. ದೇವರ ಮಹಿಮೆಯನ್ನು ಬಲ್ಲವರಾರು ?

ಮಹಿಮೆಯನ್ನು ಕೊಂಡಾಡುತ್ತಿದ್ದ ನಮ್ಮ ಮುಖವು ಪ್ರಫುಲ್ಲವಾಗಿ ಮುಗುಳುನಗೆ ನಲಿವುದು. ಈ ವಿಧವಾದ ಆನಂದವನ್ನು ಅನುಭವಿಸದವರಾರು? ಆ ಸಮಯದಲ್ಲಿ ಅಪರಾಧಿಯಾಗಿ ಬಂದವನನ್ನು ಕ್ಷಮಿಸದವರು ಯಾರು ? ಆ ಸಮಯದಲ್ಲಿ ಕೆಟ್ಟ ಯೋಚನೆಗಳನ್ನು ಯೋಚಿಸುವವರು ಯಾರು ? ಸ್ನಾನಮಾಡಿ ಶುಭ್ರವಸ್ತ್ರವನ್ನು ಉಟ್ಟಿರುವುದರಿಂದ ಬಾಹ್ಯವಾದ ನೈರ್ಮಲ್ಯವೂ, ದೇವರನ್ನು ಧ್ಯಾನಮಾಡಿ ಭಗವತ್ಸನ್ನಿಧಿಯಲ್ಲಿದ್ದುದರಿಂದ ಆಂತರಿಕ ನೈರ್ಮಲ್ಯವೂ ಉಂಟಾಗಿ ಮನುಷ್ಯನು ಧನ್ಯನೆನ್ನಿಸಿಕೊಳ್ಳುವನು. ಇದೇ ಫಲ. ಪಾಪಭೂಯಿಷ್ಟವಾದ ಈ ಭೂಮಿಯ ಮೇಲೆ, ದುಷ್ಟಯೋಜನೆಗಳಿಂದ ತುಂಬಿದ ಈ ಮನಸ್ಸಿನೊಳಗೆ, ಇಂತಹ ಪರಿಶುದ್ಧತೆಯ ಭಾವನೆ ಅಪೂರ್ವವಾದುದು, ಅನರ್ಘವಾದುದು. ಅಪೂರ್ವವಾದ ವಸ್ತುವಿಗೆ ಎಷ್ಟು ಬೆಲೆಯೋ ದೇವರನ್ನು ಪೂಜಿಸಿ ಪಾರಿಶುದ್ಧ್ಯವನ್ನು ಹೊಂದಿದ ಮನಸ್ಸಿಗೂ ಅಷ್ಟು ಬೆಲೆ. ಇಂತಹ ಫಲವನ್ನು ಬೇಡವೆಂದು ಕೇಳಿ ಬೀಸಾಡುವವರು ಯಾರು ? ಈ ವಿಧವಾದ ಪೂಜೆಯ ಕಾಲದಲ್ಲಿ ನಾವು ಪರಮಾತ್ಮನಿಗೆ ಶರೀರವನ್ನೂ ರೂಪವನ್ನೂ ಕೊಡಲು ಪ್ರಯತ್ನಿಸುತ್ತೇವೆ. ಇದು ತಪ್ಪಲ್ಲ. ಕೆಲವು ಸಮಯಗಳಲ್ಲಿ ಅವಶ್ಯಕವೂ ಆದುದು. ಮನಸ್ಸನ್ನೆ ಒಂದು ನೆಲೆಗೆ ತಂದು ಚಪಲವಾಗದಂತೆ ಮಾಡಬೇಕಾದರೆ ದೇವರನ್ನು ಮೂರ್ತಿವತ್ತಾಗಿ ಮಾಡಿಕೊಳ್ಳಬೇಕಾಗುತ್ತದೆ. ಆದರೆ ಇದು ಸಾಧನವೇ ಹೊರತು ಸತ್ಯವಲ್ಲ, ಕೊನೆಯ ಮಾತಲ್ಲ. ನಾವು ಈ ವಿಷಯವನ್ನು ಮತ್ತೆ ಚರ್ಚಿಸಬೇಕಾಗಿಲ್ಲ.

ಪರಮಾತ್ಮನು ಸತ್ಯಸ್ವರೂಪನೆಂದೂ ಜಗತ್ತಿನಲ್ಲಿ ಎಲ್ಲೆಲ್ಲಿಯೂ ಆವರಿಸಿರುವನೆಂದೂ ಹೇಳಿ ಆಯಿತು. ಎಂದರೆ, ಇದುವರೆಗೆ ಪರಮಾತ್ಮನು ನಮಗೆ ಬಾಹ್ಯವಾದ ಪ್ರಪಂಚದಲ್ಲಿ ಹೇಗೆ ಪ್ರವರ್ತಿಸುವನೆಂಬುದು ವಿಸ್ತೃತವಾಯಿತು. ಈಗ, ಆ ವಸ್ತು ನಮ್ಮ ಅಂತರಂಗದಲ್ಲಿಯೂ ಇದೆಯೆ, ಭಗವಂತನಿಗೂ ನಮಗೂ ಸಂಬಂಧವುಂಟೆ, ಇದ್ದ ಪಕ್ಷದಲ್ಲಿ ಯಾವ ರೀತಿಯಾಗಿರುವುದು ? ಇವೇ ಮೊದಲಾದ ಅಂಶಗಳನ್ನು ಪರಿಶೀಲಿಸಬಹುದು. ಪರಮಾತ್ಮನು ಜಗತ್ತನ್ನು ಆವರಿಸಿದ್ದ ಪಕ್ಷದಲ್ಲಿ ಜಗತ್ತಿನ ಒಂದು ಅಂಶವಾದ ನಮ್ಮಲ್ಲಿಯೂ ಇದ್ದಾನೆಂಬುದು ಸ್ವತಃ ಸಿದ್ಧವಾದುದು.

"ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ"

ಮತ್ತು, "ಸರ್ವಸ್ಯ ಚಾಹಂ ಹೃದಿ ಸನ್ನಿವಿಷ್ಟಃ" ಎಂದು ಗೀತೆಯಲ್ಲಿ ವರ್ಣಿತವಾಗಿದೆ. ಪರಮಾತ್ಮನು ಜೀವಾತ್ಮನೆನ್ನಿಸಿಕೊಂಡು ನಮ್ಮೆಲ್ಲರ ಹೃದಯದಲ್ಲಿಯೂ ಇದ್ದಾನೆಂದು ಮೇಲೆ ಹೇಳಿದೆ. ಆದರೆ ಹಾಗೆ ಇರುವುದು ಮಾತ್ರವಲ್ಲದೆ ನಮ್ಮ ಮನೋವಾಕ್ಕಾಯಕರ್ಮಗಳನ್ನು ತನ್ನ ಸ್ವಾಧೀನದಲ್ಲಿಟ್ಟುಕೊಂಡಿದ್ದಾನೆ. ಅಥವಾ ನಾವು ಅವನಿರುವುದನ್ನು ಅರಿತು ನಮ್ಮ ಪ್ರತಿಯೊಂದು ಕರ್ಮವನ್ನು ಅವನಲ್ಲಿ ಸಮರ್ಪಿಸಬೇಕು.

"ಮಯಿ ಕರ್ಮಾಣಿ ಸರ್ವಾಣಿ ಸನ್ನ್ಯಸ್ಯಾಧ್ಯಾತ್ಮ ಚೇತಸಾ।
.................... ಯುದ್ಧ್ಯಸ್ವ ...................

ಈ ಮಾತನ್ನು ಈ ರೀತಿಯಲ್ಲಿ ವಿವರಿಸಬಹುದು. ಪರಮಾತ್ಮನನ್ನು ಸತ್ಯವೆಂದು ಕರೆದಿದ್ದೇವೆ. ನಮ್ಮ ತ್ರಿಕರಣಗಳಿಂದಲೂ ಆ ಸತ್ಯವನ್ನು ಕೋರಬೇಕಾಗುವದು. ನಾವು ಮಾಡುವ ಯೋಚನೆಯಾಗಲೀ ಮಾಡುವ ಕೆಲಸವಾಗಲೀ ಅನುಭವಿಸುವ ಸಂವೇದನ ( feeling ) ವಾಗಲೀ ಯಾವುದಕ್ಕೂ ಒಂದು ಪ್ರಮಾಣವು ಬೇಕು. ಇಲ್ಲದಿದ್ದರೆ ಅವುಗಳ ಸ್ಥಿತಿಯನ್ನೂ ಬೆಲೆಯನ್ನೂ ಕಂಡು ಹಿಡಿವುದಕ್ಕಾಗುವುದಿಲ್ಲ. ಪರಮಾತ್ಮ ಅಥವಾ ಸತ್ಯವನ್ನು ಅಳತೆಯಾಗಿಟ್ಟುಕೊಳ್ಳದಿದ್ದರೆ, ವಸ್ತುವೊಂದು ಸುಳ್ಳೆಂತಲಾಗಲೀ ನಿಜವೆಂತಲಾಗಲೀ ನಿರ್ಧರಿಸಲಾಗುವುದಿಲ್ಲ. ಇದೆಯೆಂತಲೂ ಇಲ್ಲವೆಂತಲೂ ಹೇಳಲಾಗುವುದಿಲ್ಲ. ಪರಮಾತ್ಮನು ಜ್ಞಾನಸ್ವರೂಪನು. ನಮ್ಮ ತಿಳುವಳಿಕೆ ತಪ್ಪೋ ಸರಿಯೋ ಅದು ಸತ್ಯದಿಂದ ನಿಶ್ಚಿತವಾಗಬೇಕು. ಈ ಪ್ರಸಂಗದಲ್ಲಿಯೂ ಪರಮಾತ್ಮನು ಪ್ರಮಾಣವಾಗುವನು. ಇದೇ ರೀತಿಯಲ್ಲಿ ಪರಮಾತ್ಮನು ಆನಂದಸ್ವರೂಪನೂ ಆಗಿದ್ದಾನೆ. ಅದರಿಂದ ನಮಗೆ ಬಂದ ಫಲವೇನೆನ್ನಬಹುದು. ಒಂದು ವಸ್ತು ಸುಂದರವಾಗಿದೆಯೆನ್ನುತ್ತೇವೆ. ಅದರ ಸೌಂದರ್ಯವನ್ನು ನೋಡುತ್ತ ನೋಡುತ್ತ ನಮಗೆ ಹರ್ಷಭಾವವುಂಟಾಗುವುದು. ಆದರೆ ಎಷ್ಟು? ಆ ಹರ್ಷದ ಮಿತಿಯಾವುದು? ಎಲ್ಲಕ್ಕಿಂತಲೂ ಹೆಚ್ಚಾಗಿ ಆನಂದವನ್ನು ಕೊಡುವ ವಸ್ತುವೊಂದು ಉಂಟೇ ಉಂಟು. ಆದರೆ ಅಂತಹ ಪದಾರ್ಥವು ಪರಮಾತ್ಮನಲ್ಲ. ಮತ್ತೊಂದು, ಎಂಬದಾಗಿ ಇದುವರಿಗೂ ಗೋಚರವಾಗಿಲ್ಲ.

ಅಲ್ಲದೆ, ಯಾವುದು ಸತ್ಯವಾದುದೋ ಅದು ಸುಂದರವೂ ಆದುದು. ಅದರ ಸೌಂದರ್ಯಕ್ಕೆ ಅದರೊಳಗೆ ಅಡಗಿ ಹೊರ ಪಡುತ್ತಿರುವ ಸತ್ಯವೇ, ಆನಂದವೇ ಕಾರಣ. ಮನಸ್ಸಿನಲ್ಲಿ ಹುಟ್ಟುವ ಸಂತೋಷವು ನಗುವಿನಲ್ಲಿ ಹೊರಹೊಮ್ಮುವುದು. ಸಂತೋಷವಾದಾಗ ನಗುತ್ತೇವೆ. ಅದೇ ರೀತಿಯಲ್ಲಿ ಸೌಂದರ್ಯವು ಒಂದು ವಸ್ತುವಿನೊಳಗೆ ಕಾಣುವ ಸತ್ಯ ಅಥವಾ ಆನಂದದ ಫಲಿತಾಂಶ. ಅದು ಆನಂದದ ಬಾಹ್ಯರೂಪ. ಇದೇ ಸತ್ಯವು ಮನುಷ್ಯನ ಕಾರ್ಯಕ್ಕೂ ಸಂಧಪಟ್ಟು ಅದರಲ್ಲಿಯೂ ಹೊರಪಡುತ್ತದೆ. ಅದು ಹೇಗೆ? ನಾವು ಯಾವ ಕೆಲಸವನ್ನು ಮಾಡಿದರೂ ಅದನ್ನು ನ್ಯಾಯವಾಗಿದೆಯೆಂತಲಾಗಲೀ ಅಥವಾ ನ್ಯಾಯವಾಗಿಲ್ಲವೆಂತಲಾಗಲೀ ನಿಷ್ಕರ್ಷಿಸಬಹುದು. ಯಾವುದರ ಬಲದಿಂದ? ನಮಗಿರುವ ಪ್ರಮಾಣವು ಯಾವುದು? ನಮ್ಮ ಅಂತರಾತ್ಮವೇ ಆ ಪ್ರಮಾಣ. ಕೆಲಸವು ನ್ಯಾಯವಾದರೆ ತೃಪ್ತಿಯುಂಟಾಗುತ್ತದೆ. ನ್ಯಾಯವಾಗಿಲ್ಲದಿದ್ದರೆ ಕೊರಗುಂಟಾಗುತ್ತದೆ. ಇವೆರಡು ಭಾವನೆಗಳಿಗೂ ಅಂತರಾತ್ಮದ ನಿಷ್ಕರ್ಷೆಯೇ ಕಾರಣ. ಆದರೆ ಅಂತರಾತ್ಮವನ್ನು ದೇವರೆಂದು ಹೇಗೆ ಹೇಳಲಾದೀತು? ಯಾವುದು ನ್ಯಾಯವಾದುದೋ ಅದು ಸತ್ಯವೂ ಆದುದೆಂದು ಎಲ್ಲರೂ ಒಪ್ಪಿಕೊಳ್ಳುವರಷ್ಟೆ. ಇದೇ ರೀತಿಯಲ್ಲಿ ನ್ಯಾಯವಾದೊಂದು ಕರ್ಮವು ಸುಂದರವಾದುದೆಂತಲೂ (ಅಥವಾ ವಾಡಿಕೆಯಲ್ಲಿರುವ ಹಾಗೆ ಲಕ್ಷಣವಾದುದೆಂತಲೂ) ಹೇಳಬಹುದು. ನ್ಯಾಯಕರ್ಮಾಚರಣೆಯಿಂದ ತೃಪ್ತಿ ಅಥವಾ ಆನಂದವುಂಟೆಂದು ಈಗಾಗಲೇ ಹೇಳಿದ್ದೇನೆ. ಆದ್ದರಿಂದ, ಖ್ಯಾತಿ ಅಖ್ಯಾತಿಗಳನ್ನೂ ಆನಂದವಿಷಾದಗಳನ್ನೂ ನಿರ್ಣಯಿಸುವ ಪರಮಾತ್ಮನು, ಅವೆರಡು ರೀತಿಯಲ್ಲಿಯೂ ನಿರ್ಧರಿಸಬಹುದಾದ ಕರ್ಮದ ವಿಷಯದಲ್ಲಿಯೂ ಪ್ರಮಾಣವಾಗಿ ನಿಲ್ಲುವನು. ನಿಂತು ಅಂತರಾತ್ಮವೆಂದು ಹೆಸರು ಪಡೆಯುವನು.

ಪರಮಾತ್ಮನು "ಸತ್ಯಂಜ್ಞಾನಮಾನಂದಃ" ಎಂದು ವರ್ಣಿಸಲ್ಪಟ್ಟಿದ್ದಾನೆ. ಆ ಮಾತಿನ ವಾಸ್ತವ್ಯವು ಮೇಲಿನ ತರ್ಕದಿಂದ ಸ್ಪಷ್ಟವಾಗುತ್ತದೆ. ಸತ್ಯನೂ ಸತ್ವನೂ ಆನಂದನೂ ಅಂತರಾತ್ಮನೂ ಆದ ಆತನಿಗೆ ಸಂಬಂಧಪಡದ ಪ್ರಸಂಗವಿಲ್ಲ. ನಾವು ಪ್ರತಿಯೊಂದು ವಿಷಯದಲ್ಲಿಯೂ ಯಾವುದಾದರೊಂದು ಕಾರಣದಿಂದ ಪರಮಾತ್ಮನನ್ನು ಧ್ಯಾನಮಾಡುತ್ತೇವೆ. ಮನೋವಾಕ್ಕಾಯಗಳಿಂದ ಪರಮಾತ್ಮನನ್ನು ಆರಾಧಿಸುತ್ತೇವೆ.

ದೇವರನ್ನು ವಿಗ್ರಹರೂಪದಿಂದ ಭಾವಿಸದೆ ಪರಮಾತ್ಮ ಅಥವಾ ಪರಮತತ್ವವೆಂದು ಭಾವಿಸಿ ಪೂಜಿಸುವುದರಿಂದ ಲಭಿಸುವ ಪ್ರಯೋಜನವೇನೆಂದು ಕೇಳಬಹುದು- ಮನಸ್ಸು ನಿರ್ಮಲವಾಗುವುದೆಂದು ಇದಕ್ಕೆ ಮೊದಲೇ ಹೇಳಿದ್ದೇನೆ. ಹೃದಯವು ಪರಿಶುದ್ಧವಾಗುವುದು ಮಾತ್ರವಲ್ಲದೆ ಪರಿಪಕ್ವವೂ ಆಗುವುದು. ತನ್ನ ಅಂತರಾತ್ಮವೂ ಜಗತ್ತಿನ ವಸ್ತುಗಳಲ್ಲಿ ತೋರಿಬರುವ ಪರಮಾತ್ಮವೂ ಬೇರೆ ಬೇರೆಯಲ್ಲವೆಂಬ ಬುದ್ಧಿಯುಂಟಾಗಿ ಭೇದಭಾವವು ಕಳೆದು ಹೋಗುವುದು.

ಯಸ್ತು ಸರ್ವಾಣಿ ಭೂತಾನಿ ಆತ್ಮನ್ಯೇವಾನುಪಶ್ಯತಿ ।
ಸರ್ವಭೂತೇಷು ಚಾತ್ಮಾನಂ ತತೋ ನ ವಿಜುಗುಪ್ಸತೇ ॥
ಯಸ್ಮಿನ್ ಸರ್ವಾಣಿ ಭೂತಾನಿ ಆತ್ಮೈವಾಭೂದ್ವಿಜಾನತಃ।
ತತ್ರಕೋ ಮೋಹಃ ಕಃ ಶೋಕಃ ಏಕತ್ವಮನುಪಶ್ಯತಃ ॥

ಎಂದು ಈಶಾವಾಸ್ಯೋಪನಿಷತ್ತಿನಲ್ಲಿ ಹೇಳಿದೆ. ನಮ್ಮ ನೆರೆಯವನು ಬೇರೆಯವನಂತೆ ಹೊರಗೆ ತೋರಿದರೂ ಅವನಿಗೂ ನಮಗೂ ಭೇದವಿಲ್ಲವೆಂದು ಹೇಳಿಕೊಂಡು ನಾವು ಪ್ರಯತ್ನ ಮಾಡಬೇಕು. ಎಲ್ಲದರಲ್ಲಿಯೂ ಪರಮಾತ್ಮನು ಒಂದೇ ಆಗಿರುವಾಗ ಭೇದವನ್ನು ಹೇಗೆ ಕಾಣಲಾದೀತು ? "Treat your neighbour as yourself" ಎಂದು ಯೇಸು ಕ್ರಿಸ್ತನು ಹೇಳಿದ್ದಾನೆ. ನಿಮ್ಮ ನೆರೆಯವರೂ ನೀವೂ ಒಂದೇ ಎಂದು ಭಾವಿಸಿ ವ್ಯವಹರಿಸಿದರೆ ಸುಖವಲ್ಲದೆ ಮತ್ತೇನು ಉಂಟಾದೀತು? ಆಗ ಅತ್ಯಾಸೆಯೂ ದ್ವೇಷಾಸೂಯೆಗಳೂ ಎಲ್ಲಿ ನಿಂತಾವು? ಇತರರ ಸುಖವೇ ನಮ್ಮಸುಖವೆಂದೂ ಇತರರ ಕಷ್ಟವೇ ನಮ್ಮ ಕಷ್ಟವೆಂದೂ ಭಾವಿಸಿ ನಡೆಯುವವನು ಧನ್ಯನು. ಸತ್ಯವನ್ನು ಒಲಿಸಿಕೊಂಡವನು ಧನ್ಯನು. ಅಂಥವನು ಸತ್ಯದ ಸ್ವರೂಪನಾಗುತ್ತಾನೆ. ಅವನಿಗೂ ಪರಬ್ರಹ್ಮನಿಗೂ ಭೇದವಿಲ್ಲ. "ಬ್ರಹ್ಮವಿದ್ ಬ್ರಹ್ಮೈವ ಭವತಿ"

---

# ವಿಲಾಯತಿಯ ಪತ್ರಗಳು

ಲೇಖಕ:—ಶ್ರೀ. ಆಸುಂಡಿ ರಂಗರಾಯರು ಬಿ. ಎ., ಎಂ. ಎಸ್. ಸಿ ಲಂಡನ್

(೧)

ಪ್ರಿಯ ಉಪಸಂಪಾದಕರೇ,

ನನ್ನ ಪ್ರವಾಸದ ವೃತ್ತಾಂತವನ್ನು ಬರೆದು ಬಿಟ್ಟರೆ ನನ್ನ ಕೆಲಸವಾಯಿತೆಂದು ತಿಳಿದು ಗಲುಗನ್ನು ಈವರೆಗೆ ಎತ್ತಲಿಲ್ಲ. ತಾಯಿಯ ಕೊರಳಲ್ಲಿ ಹಾಕತಕ್ಕ (ಒಂದು) ಮಾಲೆ "ಸಂಪೂರ್ಣವಾಗಿಯೇ ತಾಯಿಯ ಕೊರಳನ್ನು ಅಲಂಕರಿಸಿ"ತೆಂದು ನಂಬಿದ್ದೆನು. ತಾಯಿಯ ಪೂಜಾರಿಗಳಾದ ನೀವು ಇದಕ್ಕೆ ಒಪ್ಪುವುದಿಲ್ಲವೆಂದು ನಿಚ್ಚಳವಾಗಿ ಹೇಳುತ್ತೀರಿ. ಇಷ್ಟೇ ಅಲ್ಲ, ಪತ್ರರೂಪದಿಂದಲೇ ಲೇಖಗಳನ್ನು ಕಳುಹಿಸಬೇಕೆಂದು ಬರೆದುದರಿಂದ ನೀವು ನನ್ನಿಂದ ಒಂದು ಬಗೆಯ ಕರ್ತವ್ಯವನ್ನೇ ಮಾಡಿಸಲಿಚ್ಛಿಸುವಿರಿ. ಏಕೆಂದರೆ ಜಯಕರ್ನಾಟಕವು ಅನಂತಮುಖಿಯಾದ ಕನ್ನಡ ದೇವಿಯ ಒಂದು ಮುಖ್ಯವಾದ ಮುಖವಿದ್ದುದರಿಂದ, ಉಳಿದ ಆಪ್ತೇಷ್ಟರಿಗೂ ಗೆಳೆಯರಿಗೂ ಬರೆವಂತೆ, ಜಯಕರ್ನಾಟಕಕ್ಕೂ ಪತ್ರ ಬರೆವುದು ದೂರದೇಶದಲ್ಲಿದ್ದ ಕನ್ನಡಿಗನಾದ ನನ್ನ ಕರ್ತವ್ಯವೇ. ಸರಿ. ಕರ್ತವ್ಯವೆಂದು ಒಪ್ಪಿದ ಬಳಿಕ ಬಿಡುಗಡೆಯಿಲ್ಲವಲ್ಲ.

ನಾನು ಇಲ್ಲಿಗೆ ಅಕ್ಟೋಬರ ತಿಂಗಳ ಮೊದಲಿಗೆ ಬಂದೆನಷ್ಟೆ. ಆಗ ಇಲ್ಲಿ ಅದೇ ಚಳಿಗಾಲವು ಹಣಿಕಿಹಾಕುವ ಸಮಯ. ಗಿಡಬಳ್ಳಿಗಳು ತಮ್ಮೆಲ್ಲ ಎಲೆಗಳನ್ನು ಭೂಮಿಗೆ ಬಿಸುಟಹತ್ತಿದ್ದುವು. ಮುಂದೆ ಒಂದು ತಿಂಗಳಲ್ಲಿಯೇ ಯಾವ ಗಿಡವನ್ನು ನೋಡಿದರೂ ಯಾವ ಬಳ್ಳಿಯ ಮೇಲೆ ಕಣ್ಣೊಗೆದರೂ ಒಂದು ಎಲೆಯೂ ನಿಮಗೆ ಕಾಣದು. ಹುಲ್ಲು ಒಂದುಳಿದು ಬೇರೆ ಯಾವ ಗಿಡಗಂಟೆಗಳಲ್ಲಿಯೂ ಹಸುರು ಸಿಕ್ಕದು. ಗಿಡಗಳು, ಬರಲುಬಡೆದು ಕೇವಲ ಕಾಷ್ಠಮಯವಾಗಿರುವುವು. ಬೇಸಿಗೆಯ ಕೇರಲಿನಂತೆ ಗಿಡಗಳು ಸಿಡಿಬಡಿದುವೋ ಎಂಬಂತೆ ಕಾಣುವುವು. ಮುಗಿಲನ್ನು ನೋಡಿದರೆ ಅದು ಕಾಣದು. ತುಂಬ ದಪ್ಪಾದ ಮೋಡಗಳು ಕವಿದಿರುವುವು. ಸೂರ್ಯನು ಕಾಣಹತ್ತಿದ ದಿವಸವೆಂದರೆ ದೊಡ್ಡ ಹಬ್ಬ. ಚಿಕ್ಕೆಗಳೂ ಚಂದಪ್ಪನೂ ಕಾಣುವುದಂತೂ ಕನಸಿನಲ್ಲಿಯೇ ! ಇಲ್ಲಿಯ ಚಳಿಗಾಲವನ್ನು ಯಾವ ಶಬ್ದಗಳಲ್ಲಿ ಬಣ್ಣಿಸಲಿ! ಉಣ್ಣೆಯ ದಿಪ್ಪನ್ನ ಒಳಅಂಗಿ, ಬಳಿಕ ಪೈರಣು, ಆ ಮೇಲೆ ವಾಸ್ಕೋಟು, ಕೋಟು, ಎಲ್ಲಕ್ಕೂ ಹೊರಗೆ ಅಂಗ್ಯೆ, ಅಲ್ಲ, ಅಂಗಾಲು ದಿಪ್ಪಾದ ಹೊರಲಿಕ್ಕೆ ಜಡವಾದ ಉಣ್ಣೆಯ ಮೇಲಂಗಿ, ಕೈಗಳಿಗೆ ತುಪ್ಪಳದ ಕೈಚೀಲ, ಇಷ್ಟೆಲ್ಲ ಸಿಂಗಾರರಾಗಿ ಸೆಟ್ಟೆ ಹೊರಬಿದ್ದರೂ, ಆತನಿಗೆ ನಡುಗು ತಪ್ಪದು. ತಮ್ಮ ದೇಶದಲ್ಲಿ ಚಳಿಗಾಲದೊಳಗೆ ಬೆಳಿಗ್ಗೆ ಬಾಯಿಂದ ಉಗಿ ಹೊರಡುವುದಷ್ಟೆ. ಕವಿಯ ಪದ್ಯವು ನೆನಪಾಗುತ್ತದೆ.

ಸ್ವಾಗತಾ ವೃತ್ತ—ಗೇರ ಪಣ್ಣನಿದು ಕೆಂಡಮೆನುತ್ತುಂ
ಸಾರಿ ಮೇಲೆ ತೃಣವಿಟ್ಟದನೂದಲ್ ।
ಸೇರಿ ಬಾಯಿ ಪೊಗೆತಳ್ತಿರೆ ಕಂಡಾ
ದಾರಿಗಂ ಮುದದಿನೂದುತಮಿರ್ಪಂ ॥

ಇಲ್ಲಿ ಬಾಯಿ ತೆಗೆದು ಊದುವ ಕಾರಣವಿಲ್ಲ. ಮೂಗಿನ ಸೊಳ್ಳೆಗಳಿಂದಲೇ ಹೊಗೆ ಬರುವುದು. ಕನಕದಾಸನ "ಪೋಗದೊ ಚಳಿ ಪೋಗದೊ" ಎಂಬ ಪದ್ಯವು ನೆನಪಾಗದ ದಿವಸವೇ ಇಲ್ಲ.

ಚಳಿ ಹೆಚ್ಚಾದರೆ ಉಷ್ಣತೆ ಇಳಿವುದಲ್ಲವೆ? ನೀರಿನ ಉಷ್ಣತೆ ಇಳಿಯುತ್ತ ಹೋದರೆ ಕೊನೆಗೆ ಒಂದು ಅವಸ್ಥೆಯಲ್ಲಿ ಹರಿವ ಗುಣವುಳ್ಳ ನೀರು ಘನರೂಪವನ್ನು ಹೊಂದುತ್ತದೆಂಬ ಸಂಗತಿ ನಿಮಗೆ ಗೊತ್ತಿರುವುದು. ಆ ಪ್ರಕಾರ ಚಳಿ ಹೆಚ್ಚಲು ಇಲ್ಲಿಯ ಸರೋವರಗಳು ಹೆಪ್ಪುಗಟ್ಟಿ ಜಾರಿಕೆ ಬಂಡೆಗಳಂತಾಗುತ್ತವೆ. ಎರಡೂ ಪಾದಗಳಿಗೆ "Skate" ಇಸ್ಕೇಟ ಎಂಬ ಗಾಲಿಗಳನ್ನು ಬಿಗಿದುಕೊಂಡು ಈ ಜಾರಿಕೆ ಬಂಡೆಗಳ ಮೇಲೆ ಜಾರುವ ಆಟ ಆಡುವ ಸಮಯವಿದೀಗ. ಎಷ್ಟೋ ಜನರು, ಚಿಕ್ಕವರು, ಈ ಆಟವನ್ನು ಮನದಣಿಯೆ ಆಡುತ್ತಾರೆ. ಸರೋವರವು ಹೆಪ್ಪುಗಟ್ಟಿದರೂ ಅದರಲ್ಲಿರುವ ಮೀನುಗಳು ಸಾಯುವುದಿಲ್ಲ. ಇದು ಹೇಗೆ ನೀವು ಬಲ್ಲಿರೋ?

ಈ ದೇಶದಲ್ಲಿ ಮಳೆಗಾಲವು ಹನ್ನೆರಡೂ ತಿಂಗಳು ಪ್ರತಿವಾರ ಒಂದೆರಡು ದಿನ ಮಳೆ ಬೀಳಲೇಬೇಕು. ಒಮ್ಮೊಮ್ಮೆ ಚಳಿಗಾಲದಲ್ಲಿ ಹಿಮ ಬೀಳಹತ್ತುವುದು; ಬರ್ಫವೂ ಅಲ್ಲ; ಆಣೆಕಲ್ಲೂ ಅಲ್ಲ. ನಮ್ಮ ದೇಶದಲ್ಲಿ ಹಿಮಾಲಯವನ್ನು ನೋಡಿದವರು ಮಾತ್ರ ಈ ಹಿಮದ ನೋಟವನ್ನು ಬಲ್ಲರು. ಹಿಮುವು ಆಣೆಕಲ್ಲಿನಂತಾಗಲಿ, ಬರ್ಫಸಂತಾಗಲಿ ಗಟ್ಟಿ ಕಲ್ಲಾಗಿರುವುದಿಲ್ಲ; ಅರಳೆಯಂತೆ ಮಿದುವಾಗಿರುತ್ತದೆ; ಲವಣಗಳಂತೆ ನಾನಾವಿಧವಾದ ಸುಂದರ ಸ್ಫಟಿಕ ರೂಪವುಳ್ಳದ್ದಾಗಿರುತ್ತದೆ. ನೀರು ಗಟ್ಟಿಯಾಗುವಾಗ ನೀರಿನ ಕಣಗಳ ಮಧ್ಯದಲ್ಲಿ ಹವೆ ಅಡಿಗಿದರೆ ಈಪ್ರಕಾರವಾಗುವುದು. ಹಿಮದ ಹತ್ತು ಭಾಗದಲ್ಲಿ ಒಂಬತ್ತು ಭಾಗ ಹವೆಯೂ ಒಂದು ಭಾಗ ನೀರೂ ಇರುತ್ತವೆ. ಹಿಮುವು ಬೀಳತೊಡಗಲು ಚಳಿ ಹಿಮ್ಮೆಟ್ಟುವುದು. ಬರ್ಫಿನ ಬೀದಿಯಲ್ಲಿ ಕಾಲು ಜಾರುವಂತೆ ಹಿಮ ತುಂಬಿದ ಬೀದಿಯಲ್ಲಿ ಜಾರಿಕೆಯ ಸುದ್ದಿಯೇ ಇಲ್ಲ. ಹಿಮುವನ್ನು ಕೈಯಲ್ಲಿ ಒತ್ತೊತ್ತಿ ಉಂಡೆಯನ್ನು ಮಾಡಬಹುದು. ಬೀದಿಯಲ್ಲಿ ಈ ಬಗೆಯ ಉಂಡೆಮಾಡಿ ಹೊಡೆಚಂಡಾಟವನ್ನು ಮನಬಂದಂತೆ ಆಡುವ ಎಷ್ಟೋ ಜನರನ್ನು ನಾವು ನೋಡಬಹುದು. ಹುಡುಗರು ಹಿಮದಿಂದ ದೊಡ್ಡ ದೊಡ್ಡ ಮನುಷ್ಯಾಕೃತಿಗಳನ್ನು ಮಾಡಿ ಆಡುತ್ತಾರೆ; ಹಿಮಾಚ್ಛಾದಿತವಾದ ಮರಡೆಗಳಿಗೆ ಹೋಗಿ ಅಲ್ಲಿ ವಿವಿಧವಾದ ಆಟಗಳನ್ನು ಆಡುತ್ತಾರೆ. ಇವುಗಳಲ್ಲಿ 'Tobogganning' (ತೊಬೋಗನಿಂಗ) ಎಂಬುದೇ ಪ್ರಸಿದ್ಧ. ಈ ಆಟವೆಂದರೆ ದೊಡ್ಡದಾದ ಒಂದು ಕಟ್ಟಿಗೆಯ ಫಳಿಯನ್ನು ತೆಗೆದುಕೊಂಡು ಅದಕ್ಕೆ ಹಗ್ಗ ಹಚ್ಚಿ, ಅದರ ಮೇಲೆ ಮೂವರು ನಾಲ್ವರು ಕುಳಿತುಕೊಂಡು ಮರಡಿಯ ತುದಿಯಿಂದ ಬುಡದ ವರೆಗೆ ಜರ್ರನೇ ಜರಿಯುತ್ತ ಹೋಗುವುದು. ನೋಡಲಿಕ್ಕೆ ಈ ಆಟವು ಬಹಳ ಅಪಘಾತಕಾರಿಯಂತೆ ಕಂಡರೂ, ಅಪಾಯವಾಗುವುದು ಬಹಳ ವಿರಳ.

ಚಳಿಗಾಲದಲ್ಲಿ ಈ ಊರಲ್ಲಿ ಕಾಣಬಹುದಾದ ಮತ್ತೊಂದು ಸೋಜಿಗವೆಂದರೆ ದಟ್ಟವಾದ ಮಂಜು (fog). ಒಮ್ಮೊಮ್ಮೆ ಮಂಜುಗವಿದರೆ ನಾಲ್ಕಡಿ ದೂರದಲ್ಲಿದ್ದ ವಸ್ತುವೂ ಬೀದಿಯಲ್ಲಿ ನಿಮಗೆ ಕಾಣದಾಗುವುದು. ಇದು ಬಹಳ ನಿಬಿಡವಾದರೆ ಹಳದೀ ಬಣ್ಣವನ್ನು ತಾಳುವುದು. ಲಂಡನ್ನಿನ ಈ ಹಳದೀ ಮಂಜು (Yellow fog) ಬಹು ಪ್ರಸಿದ್ಧ. ಕಗ್ಗತ್ತಲೆ ಎಲ್ಲ ಕಡೆಗೂ ಕವಿವುದು. ಕೆಂಪು, ಹಸುರು ಬಣ್ಣದ ದೀಪಗಳು ಬೀದಿಯಲ್ಲಿ ಕಾಣದಾಗುವುವು. ಯಾಕಂದರೆ ಮಂಜು ಈ ಬಣ್ಣಗಳನ್ನೆಲ್ಲ ಹೀರಿಕೊಳ್ಳುತ್ತದೆ (absorbs). ಆದುದರಿಂದ ಬೀದಿಯಲ್ಲಿ ಎಚ್ಚರಿಕೆಗೆಂದು ಕೆಂಪುದೀಪ ಹಚ್ಚಿದರೆ ಅವುಗಳ ಉಪಯೋಗವು ಏನೂ ಆಗದು. ಕಿತ್ತಳೆ ಬಣ್ಣವು ಮಂಜಿನೊಳಗಿಂದ ಪಾರಾಗಿ ಬರುತ್ತದೆಂಬ ಸಂಗತಿಯನ್ನು ಸಂಶೋಧಕರು ಹುಡುಕಿದ ಬಳಿಕ ಇತ್ತೀಚೆಗೆ ಕೆಂಪಿನ ಬದಲು ಕಿತ್ತಳೆ ದೀಪಗಳು ಎಚ್ಚರಿಕೆಗಾಗಿ ಹೆಚ್ಚು ಬಳಕೆಯಲ್ಲಿ ಬಂದಿರುವುವು.

ಇಷ್ಟರಲ್ಲಿ ಇಲ್ಲಿಯ ಚಳಿಗಾಲದ ಕಲ್ಪನೆ ನಿಮಗೆ ಬಂದಿರಬಹುದು. ಇನ್ನು ಲಂಡನಿನಲ್ಲಿ ನನಗೆ ತೋರಿದ ಕೆಲವು ಸೋಜಿಗಗಳನ್ನು ಹೇಳಿ ಈ ಪತ್ರವನ್ನು ಮುಗಿಸುವೆನು. ಈ ಊರು ಅಮೇರಿಕೆಯ ನ್ಯೂಯಾರ್ಕ ಒಂದನ್ನು ಬಿಟ್ಟು ಜಗತ್ತಿನಲ್ಲಿಯೇ ದೊಡ್ಡದು. ಇಲ್ಲಿಯ ಪ್ರತಿಯೊಂದು ಬೀದಿಯನ್ನು ಗೊತ್ತುಮಾಡಿಕೊಳ್ಳಬೇಕಾದರೆ ಒಂದು ಇಡೀ ಆಯುಷ್ಯವೇ ಹಿಡಿವುದೆಂದು ಒಬ್ಬನು ಲೆಕ್ಕ ಹಾಕಿದ್ದಾನೆ. ಇದರಿಂದ ಈ ಊರ ವಿಸ್ತಾರದ ಕಲ್ಪನೆಯಾಗಬಹುದು. ದೊಡ್ಡ ಪಟ್ಟಣವಾದರೂ ಮುಂಬೈಯಂತೆ ಆನಂತ ಮಹಡಿಯ ಮನೆಗಳು ವಿರಳ, ವಾಸದ ಮನೆಗಳು ಎರಡು ಇಲ್ಲವೆ ಮೂರು ಅಂತಸ್ತಿನವಿರುತ್ತವೆ. ಪ್ರತಿಯೊಂದು ಬೀದಿಯ ಇಬ್ಬದಿಗೂ ಚೊಕ್ಕಾಗಿ ಕೊರೆದು ಕಟ್ಟಿದಂತೆ ಮನೆಗಳ ಸಾಲುಗಳಿರುತ್ತವೆ. ಬೀದಿಗಳೆಲ್ಲವೂ ಡಾಂಬರಿನವು. ಹುಡಿ ಸ್ವಲ್ಪವೂ ಆಗದು; ಮಳೆಬಿದ್ದರೆ ಕೆಸರಾಗದು. ಸ್ವಚ್ಛತೆ ವಿಪುಲ. ಬೀದಿಗಳು ಸುಮಾರು ಇಪ್ಪತ್ತು ಅಡಿ ಅಗಲವಿದ್ದು ಅವುಗಳ ಎರಡೂ ಬದಿಗೆ ಆರಾರು ಅಡಿಯ ಕಾಲುಬೀದಿಗಳಿರುತ್ತವೆ. ಇದುರುಬದುರು ಮನೆಗಳ ನಡುವೆ ಸುಮಾರು ೪೫–೫೦ ಅಡಿ ಅಂತರವಿರುತ್ತದೆ.

ಇಲ್ಲಿಯ ಮನೆಗಳ ಬಾಗಿಲುಗಳು ಸದಾ ಮುಚ್ಚಿ ಬೀಗ ಹಾಕಲ್ಪಟ್ಟಿರುತ್ತವೆ. ಒಳಗೆ ಹೋಗಬೇಕಾದರೆ ಬೀಗದ ಕೈಯಾದರೂ ಇರಬೇಕು. ಇಲ್ಲವೆ ಹೊರಗಿನ ಗಂಟೆಯನ್ನು ನುಡಿಸಿ, ಕಬ್ಬಿಣ ಒದೆ (Knocker) ಯಿಂದ ಬಾಗಿಲನ್ನು ಒದೆಯಬೇಕು. ಅಂದರೆ ಒಳಗಿನವರು ಬಂದು ಬಾಗಿಲುತೆರೆವರು. ಮನೆಗಳ ನೆಲದ ಮೇಲೆಲ್ಲವೂ ಜಮಖಾನಿ ಹಾಸಲ್ಪಟ್ಟಿರುತ್ತದೆ; ಗೋಡೆಗಳೆಲ್ಲಕ್ಕೂ ಬಣ್ಣದ ಕಾಗದವು ಒರೆಸಲ್ಪಟ್ಟಿರುತ್ತದೆ. ಕೋಣೆಗಳಲ್ಲಿ ಮೇಜು ಮಂಚ ಮೊದಲಾದ ಕಟ್ಟಿಗೆ ಸಾಮಾನುಗಳೂ (Furniture) ಹೂತುಂಬಿದ ಕಾಜಿನ ಹೂಬುಟ್ಟಿಲು (Flower vase) ಗಳೂ ಇರುತ್ತವೆ. ಗೋಡೆಗಳು ಹಳ

ಕೆಲವು ಸುಂದರವಾದ ಚಿತ್ರಪಟಗಳಿಂದ ಸಿಂಗರಿಸಲ್ಪಟ್ಟಿರುತ್ತವೆ. ಇವುಗಳೆಲ್ಲವೂ ಮನಸ್ಸನ್ನು ಪ್ರಸನ್ನವಾಗಿಯೂ ಉಲ್ಲಾಸಿಯಾಗಿಯೂ ಇಡುವುದಕ್ಕೆ ಸಾಧನಗಳಾಗುತ್ತವೆ. ಖೋಲಿಯು ಒಂದೆಡೆಗೆ ಚಳಿಗಾಲದಲ್ಲಿ ನಿರಂತರವಾಗಿ ಬೇಕಾಗುವ ಬೆಂಕಿಗೆಂದು ಒಂದು ಒಲೆಯೂ ಹೊಗೆಕಿಂಡಿಯೂ ಇರುತ್ತವೆ. ಕಲ್ಲಿದ್ದಲಿಯ ಬದಲು ಇತ್ತೀಚೆಗೆ ಗ್ಯಾಸಿನ ಬೆಂಕಿಗಳು ಬಳಕೆಯಲ್ಲಿ ಬರಹತ್ತಿರುತ್ತವೆ. ಒಟ್ಟಿನ ಮೇಲೆ ಇಲ್ಲಿಯ ಮನೆಗಳು ಬಹಳ ಸ್ವಚ್ಛವಾಗಿಯೂ ಅಂದವಾಗಿಯೂ ಚಂದವಾಗಿಯೂ ಇಡಲ್ಪಟ್ಟಿರುತ್ತವೆ.

ಮುಂಬೈ ನೋಡಿದವರಿಗೆ ಈ ಊರು ಅಷ್ಟೊಂದು ವಿಲಕ್ಷಣವೆಂದು ಕಾಣುವುದಿಲ್ಲ. ಮುಂಬೈ ಕೋಟೆಯೊಳಗಿನ ಅಂಗಡಿಗಳ ಮಾಟವು ಇಲ್ಲಿಯ ಮಾಟದ ಪ್ರತಿಯೇ. ಅಲ್ಲಿಯ ಟ್ರಾಮು, ಬಸ್ಸುಗಳ ವ್ಯವಸ್ಥೆ, ಟಿಕೀಟು ಕತ್ತರಿಸುವ ಪದ್ಧತಿ ಮೊದಲ್ಗೊಂಡು ಎಲ್ಲವೂ ಇಲ್ಲಿಯಂತೆಯೇ. ಅಲ್ಲಿ ಇಲ್ಲದ ಒಂದು ವಿಚಿತ್ರವೆಂದರೆ ನೆಲರೈಲು ( Under ground railway ) ; ಇದಕ್ಕೆ ಇಲ್ಲಿ ವಾಡಿಕೆಯಾಗಿ ಕೊಳವೆ ( Tube ) ಎನ್ನುತ್ತಾರೆ. ಓಹೋ ಇದೊಂದು ಮಾಯದ ಸಂತೆಯೊಂದೇ ಕಾಣುತ್ತದೆ ! ಪೆಟ್ಟಿಗೆಯಲ್ಲಿ ದುಡ್ಡು ಚಲ್ಲಿ ತಿಕೀಟು ಪಡೆಯುಬಹುದು. ಅದನ್ನು ತಕ್ಕೊಂಡು ಮಿಂಚಿನ ಎತ್ತಿ ( Electric Lift ) ನೊಳಗೆ ನಿಂತರೆ ಆಯಿತು. ಸರ್ರನೆ ಎಷ್ಟೋ ಅಡಿ ಕೆಳಗೆ ಒಯ್ಯುತ್ತದೆ. ಆ ಬಳಿಕ ಸರಿಯಾದ ಬೀದಿಯನ್ನು ಕೈಗಂಬಗಳಿಂದ ಕಂಡುಹಿಡಿದು ನಿಮಗೆ ಬೇಕಾದ ಭಾಗಕ್ಕೆ ಹೋಗಬಹುದು. ಅರ್ಧನಿಮಿಷದಲ್ಲಿಯೇ ಮಿಂಚಿನ ಗಾಡಿ (electric train) ಬರುವುದು. ಗಾಡಿಯ ಬಾಗಿಲುಗಳು ತಾವೇ ತೆರೆಯಲ್ಪಡುವುವು. ಒಳಗಿದ್ದ ಜನರು ಇಳಿವವರು ಮೊದಲು ಇಳಿದು ಹೊರಗಿನವರು ಹತ್ತುವುದಕ್ಕೆ ಒಂದು ನಿಮಿಷ, ಕೂಡಲೆ ಗಾಡಿ ಬಿಡುವುದು. ಈ ಪ್ರಕಾರ ಲಂಡಿನ್ನಿನ ಬೇಕಾದ ಭಾಗಕ್ಕೆ ಅರ್ಧ ಗಂಟೆಯಲ್ಲಿ ಹೋಗಬಹುದು. ಕೆಲವು ಕೊಳವೆ ಸ್ಟೇಶನ್ನಿನಲ್ಲಿ ಎತ್ತಿನಬದಲು ಇಸ್ಕೇಲೀಟರು (Escalators) ಇರುತ್ತವೆ; ಇವು ನಿರಂತರವಾಗಿ ತಿರುಗುತ್ತಿರುವ ಪಾವಟಿಗೆಗಳು. ಒಂದು ಪಾವಟಿಗೆಗಳ ಸಾಲು ಮೇಲಕ್ಕೇರುವುದು. ಇದರ ಯಾವದೊಂದು ಪಾವಟಿಗೆಯಮೇಲೆ ನಿಂತುಬಿಟ್ಟರೆ ನಿಮ್ಮನ್ನು ಅದು ತುದಿಗೆ ಒಯ್ಯುವದು. ಅಲ್ಲಿ ಇಳಿದು ನೀವು ಭೂಭಾಗದ ಮೇಲೆ ಹೋಗಬಹುದು. ಮತ್ತೊಂದು ಪಾವಟಿಗೆಗಳ ಸಾಲು ಕೆಳಗಿಳಿಯುತ್ತಿರುತ್ತದೆ. ಅದರ ಒಂದು ಪಾವಟಿಗೆಯ ಮೇಲೆ ನಿಂತರೆ ನಿಮ್ಮನ್ನು ಬುಡಕ್ಕೆ ಒಯ್ಯುವುದು. ಇವು ಬಹಳ ವಿಲಕ್ಷಣವಾಗಿ ನನಗೆ ತೋರಿದುವು.

ಲಂಡನ್ ಶಹರದ ಮಧ್ಯದಲ್ಲಿ ತೇಮ್ಸ ನದಿ ಹರಿಯುತ್ತದಾದಕಾರಣ ನದಿಯ ಒಂದು ಭಾಗದಿಂದ ಮತ್ತೊಂದು ಭಾಗಕ್ಕೆ ಹೋಗಬೇಕಾದರೆ ನದಿಗೆ ಪೂಲು ಕಟ್ಟುವುದಂತೂ ಎಲ್ಲರಿಗೂ ಹೊಳೆವ ವಿಚಾರ. ನದಿಯ ಬುಡದಿಂದ ಈ ಕೊಳವೆಗಳನ್ನು ಒಯ್ದಿರುವರೆಂಬ ಸಂಗತಿ ಕೇಳಿದರೆ ನಿಮಗೆ ಸೋಜಿಗವೆನಿಸಬಹುದಲ್ಲವೆ. ಕೊಳವೆಯೊಳಲ್ಲಿ ಕುಳಿತು ಲಂಡನ್ನಿನ ಉತ್ತರ ಭಾಗದಿಂದ ದಕ್ಷಿಣಭಾಗಕ್ಕೆ ಹೋಗುವಾಗ ನಿಜವಾಗಿಯೂ ಒಂದೆಡೆಗೆ ನಮ್ಮ ತಲೆಯ ಮೇಲೆ ನದಿ ಹರಿಯುತ್ತಿರುತ್ತದೆಂದು ಹೇಳಿದರೆ ನೀವು ನಂಬುವಿರೋ?

ಇರಲಿ; ಬೆಳೆದಿದ್ದ ಈ ಪತ್ರವನ್ನು ಇಲ್ಲಿಯೇ ಈವೊತ್ತು ಮುಗಿಸುವ.

---

# ಹರಿಶ್ಚಂದ್ರಕಾವ್ಯ

( ಲೇಖಕ:— ಶ್ರೀ. ತಿರುಮಲೆ ಶ್ರೀನಿವಾಸಾಚಾರ್ಯ ಬಿ. ಎ., ಎಲ್ಎಲ್. ಬಿ. ಹಾಸನ. )

( ೯ನೆಯ ಸಂಚಿಕೆಯಿಂದ ಮುಂದುವರಿದ ದು. )

ಹರಿಶ್ಚಂದ್ರಕಾವ್ಯದ ಭಾವಪ್ರಪಂಚದಲ್ಲಿ ವಿಧಿಯ ಗೊಡ್ಡಾಟದ ಇರವು ತಾನೇತಾನಾಗಿದೆ. ಇಲ್ಲಿ ರಸವೆಂದರೆ ಕರುಣಾರಸ ಮರುಕ, ಅಳಲು ಎಂದು ತೋರುವುದು ಸಹಜ. ಆದರೆ ಈ ರಸವು ಸ್ಥಿರವಲ್ಲ. ಸ್ಥಿರವಾದುದು ಶಾಂತಿರಸ. ಶಾತಿಯಲ್ಲಿ ಮೊದಲು, ಶಾಂತಿಯಲ್ಲೇ ಕೊನೆ. ನಡುವೆ ಮಾತ್ರ ಕಾಲನ ಮಾಟ. ಒರಿಹಚ್ಚಿ ತಿರುಳನ್ನು ಬೆಳಗಿಸುವ ಕ್ಷೋಭೆ. ಕಾಲನ ಕೈಚಳಕದಿಂದ ಎಂತಹರಿಗೆ ಏನೊದಗಿತು ನೋಡಿ.

ಲಲಿತನಗರದ ನಡುವಣರಮನೆಯ ಕರುಮಾಡ
ದೊಳಗೆ, ಮರಿಹಂಸೆದುಪ್ಪುಳ ಹಾಸಮೇಲೆ ದೆಸೆ
ಗಳ ಸಾಲಭಂಜಿಕೆಯ ಮಣಿವೆಳಗಿನೊಳು, ಸುಖದ
ಸುಗ್ಗಿಯಂ ಸವಿವರಸನು ॥

ಬಳಸಿದಡವಿಯ ನಡುವೆ, ಕವಿವ ಕತ್ತಲೆಯೊಳಗೆ,
ಗುಳಿನೆಲನ ಮೊಳೆಗಲ್ಲ ಮುಳುವಸೆಯ ಮೇಲೆ ಹಸಿ
ದಳವಳಿದು, ಹೊದೆಯಲಿಲ್ಲದೆ, ಹೊಯ್ವ ಹಿಮುವನಾಂತಿ
ರ್ದನದನೇನೆಂಬೆನು ॥ ೯—೪೨

ಹರಿಶ್ಚಂದ್ರನ ಈ ಪರಿ ನೋಡಿ ಒಡನೆ ಮರುಗುವೆವು. ಕಾಳ್ಗಿಚ್ಚು ಕವಿದಿರುವಲ್ಲಿ ಇವನ ಪಾಡು ಅದೆಷ್ಟು ಭಯಾನಕ!

ಕರಿಗೆ ತೊಲಗಿದೊಡೆ ಹುಲಿಮೊರೆವುದೋಸರಿಸಿದಡೆ
ಕರಡಿ ಕೆರೆವುದೊ, ಹಿಂಗಿದಡೆ ಸರ್ಪ ತುಡುಕುವುದೊ,
ತಿರುಗಿದೊಡೆ ಸಿಂಹ ಗರ್ಜಿಪುದೊಲೆದೊಡೆಕ್ಕಲಂ ಟೊಣೆ
ವುದದ ಕಳೆದುಳಿದಡೆ ॥

ಮರೆ ಹೊಯ್ವುದದನುಳಿದೊಡೆಮ್ಮೆಯೆರಗುವುದೊ, ಪರಿ
ಹರಿಸೆ ಸಾವಂಗವಿರಿವುದೊ, ಮುರಿಯೆ ಕೋಣನಿ-।
ಟ್ಟೊರಸುವುದೊ, ಎನುತ ಬಾಯ್ಬಿಟ್ಟು ಮರುಗಿದ
ಭೂಪ ಸತಿಸುತರ್ ಬೆರಗಾಗಲು ॥ ೧೦—೧೦

[ ಓಸರಿಸು=ಸರಿ, ಎಕ್ಕಲ=ಕಾಡುಹಂದಿ, ಟೊಣೆ=ಬಗಿ, ಮರೆ=ಒಂದುಜಾತಿಜಿಂಕೆ ]

ಚಂದ್ರಮತಿಯ ಕಡೆ ತಿರುಗುವ. ಎಂದಿನಂತೆ ಕಾಡಿಗೆ ಹೋದ ಮಗ ಹೊತ್ತುಮೀರಿಯೂ ಬರದಿರಲು ಮನದಲ್ಲೇ ತಳಮಳಿಸುತ್ತಿರುವಳು. ತಳಮಳವು ಹೊರಸೂಸಿತೆಂದರೆ ಮನೆಯವರ ಕೋಟಲೆ. ಈ ವೇಳೆಯಲ್ಲಿ ಆಸತಿಯ ಇರವಿದು.

ಒಳಗುಡಿದ ನಾರಾಚದೇರಿನಂದದಿ ಹೊರಗ
ಬಳಸದೊಳಗೊಳಗೇಗುವಾವಗೆಯ ಶಿಖಿಯಂತೆ
ಕೆಳೆಗೊಂಡ ಹಗೆಗಳೊಳಗಣ ಮುಳಿಸಿನಂದದಿ
ಮನೆಯವರ ಮಾರಿಗಂಜಿ ॥

ಬಳಸಿ ಬೀವೆದೆ, ಬಿಕ್ಕುವಕ್ಕೆ, ಕಣ್ಗಳೊಳೊರೆವ
ಜಲ, ಸೆರೆಗಳೊಡೆದುಬ್ಬಿಬಿಗಿದು ಗಂಟಲಿನ ಮು
ಕ್ಕುಳಿಸಿದಕ್ಕೆಗಳೆಸೆವ ಸತಿಯಳಲು ಸೀಗೆಯೊಳಗಣ
ಬಾಳೆಗೆಣೆಯಾದುದು ॥

೧೨—೧೩

( ಏರು=ಗಾಯ , ಏಗುವ+ಆವಗೆಯ=ಉರಿಯುತ್ತಿರುವ ಒಲೆಯ, ಅಕ್ಕೆ=ಅಳುವು )

ಇದರ ಮೇಲೆ ಸಿಡಿಲು ಬಡಿದೇ ತೀರಿತು.

ಬಂದರಂ ಲೋಹಿತಾಶ್ವಾ ! ಎಂದು, ಬಟ್ಟೆಯೊಳು
ನಿಂದರಂ ಲೋಹಿತಾಶ್ವಾ ! ಎಂದು, ಗಾಳಿ.ಗಿರಿ
ಕೆಂದೊಡಂ ಲೋಹಿತಾಶ್ವಾ! ಎಂದು, ಕರೆಕರೆದು ಬಿಡೆ
ಬೀದಿಗರುವಿನಂತೆ ॥

ಮಂದಮತಿಯಾಗಿರ್ದ ಚಂದ್ರಮತಿಗೊಬ್ಬನೈ
ತಂದಿಂದು ಕೂಡೆ ಹೋಗಿರ್ದ ಕಂಡೆಂ ನಿನ್ನ
ಕಂದನೊಂದುಗ್ರಫಣಿತಿಂದು ಜೀವಂಗಳೆದನೆಂದು
ಹೇಳಿದನಾಗಳು ॥

೧೨—೧೭

ಆಯಿತು; ಮಗ ಕಾಡಲ್ಲಿ ಸತ್ತು ಬಿದ್ದಿರುವನು. ಇಲ್ಲಿ ಮನೆಯಲ್ಲೋ ?

ನುಡಿಯಲರಿದೆನಿಸಿ ಮೇರೆಯು ಮೀರುವಳಲನಳ
ವಡಿಸಿ ಬಂದೊಡೆಯುನಡಿಗಳ ಮೇಲೆ ಕೆಡೆದು ಬಾ
ಯ್ಬಿಡುತಡವಿಯೊಳಗೆನ್ನ ಮಗನುಗ್ರಕಾಳೋರಗಂ
ಕಚ್ಚೆ ಮಡಿದನೆಂದು ।

ನುಡಿಯೆ, ಲೇಸಾಯ್ತು ಮಡಿದರೆ ಮಡಿದನೆಂದು ಕಾ
ಳ್ಗೆಡೆಯೆ, ಬಂಟರನಟ್ಟಯರಸಿರ್ಪೆ ತಂದೆಯೆನೆ,
ನಡುವಿರುಳು ಬಂಟರುಂಟೇ ? ನಿದ್ದೆಗೆಯ್ಯಬೇಕೀಳು
ಕಾಡದಿರೆಂದನು ॥ ೧೨–೧೯

ನರಿಗಳೆಳೆಯದ ಮುನ್ನ ದಹಿಸಬೇಕೈ ತಂದೆ
ಕರುಣಿಸೆನೆ, ದುರ್ಮರಣವಟ್ಟ ಶೂದ್ರನನು ಸಂ
ಸ್ಕರಿಸುವವರಾವಲ್ಲ ನಡೆಯೆಂದೊಡಾನಾದೊಡಂ
ಹೋಗಿ ಕಂಡು ಮಗನ ॥

ಉರಿಗಿತ್ತು ಬಪ್ಪೆನೇ ಎನೆ, ಕೆಲಸಮಂ ಬಿಟ್ಟು
ಹರಿಯದುಳ್ಳುದನೈದೆ ಮಾಡಿ ಹೋಗೆನಲು, ಚೆ
ಚ್ಚರಿದಿ ಮಾಡುವ ಕಜ್ಜವೆಲ್ಲವಂ ಮಾಡಿ ಹೊರವಟ್ಟ
ಳೊಯ್ಯನೆ ಮನೆಯನು ॥ ೧೨–೨೦

ಮಗ ಸತ್ತ ಗೋಳಿನಲ್ಲಿಯೂ ಈ ಕಲ್ಲೆದೆಶನನ ಹೇಗೆ ಹೊತ್ತಳು ! ಶವವನ್ನು ಕಂಡಮೇಲಂತೂ ಚಂದ್ರಮತಿಯ ಬಗೆಯೇ ತಡೆಯಿಲ್ಲದ ಅಳಲಿನ ಹೊನಲಾಗಿ ಹರಿಯಿತು. ಅಲ್ಲಿನ ಕೆಲವು ಬಿಂದುಗಳಿವು:—

ಹಡೆದೊಡಲು ಹುಡಿಯಾಯ್ತು, ಮಗನೆ ! ನೀನುಂಟೆಂದು
ಕಡೆಗೆ ಹೆಚ್ಚಿದ ಮನಂ ಹೊತ್ತಿ ಹೊಗೆಯಿತ್ತು, ಬಿಡ
ದಡರಿ ನಿಟ್ಟಿಸಿ ನಲಿವ ದಿಟ್ಟಿ ಕೆಟ್ಟುವು, ಸೋಂಕಿ ಪುಳಕಿಸು
ವ ಕರಣಂಗಳು ॥

ಕಡಿವಡೆದುವೊಸೆದು ಹೆಸಗೊಳುತಿಪ್ಪ ನಾಲಗೆಯ
ಕುಡಿ ಮುರುಟಿತಡಿಗಡಿಗೆ ನುಡಿಯನಾಲಿಪ ಕಿವಿಯು
ಹಡಿಗೆತ್ತುವೆಲೆ ಕಂದ ! ಎಂದೆನುತ್ತಿಂದುಮುಖಿ ಮರು
ಗಿ ಬಾಯ್ಬಿಟ್ಟಳಂದು ॥ ೧೨–೨೭

(ಹಡಿಗೆತ್ತು=ಬಾಗಿಲು ಮುಚ್ಚಿಹೋಗಿ)

ಅತಿಲಜ್ಜೆಗೆಟ್ಟನ್ಯರಾಳಾಗಿ ದುಡಿದು ದಾ
ನತಿಗೊಂಡು ಧನವನಾರ್ಜಿಸಿ ಹರಿಶ್ಚಂದ್ರ ಭೂ
ಪತಿ ನಮ್ಮ ಬಿಡಿಸುವಾರ್ತದ ಮೋಹದಿಂ ಹಸಿವು
ತೃಷೆನಿದ್ರೆಯಂ ತೊರೆದು ಬಂದು ॥

ಸುತನ ಕರೆಯೆಂದೊಡೇನೆಂಬೆನಾವುದ ನೋಡಿ
ಪತಿಯ ಮುರುಕವನು ಮರೆಯಿಸುವೆನುಗ್ರಾಹಿಗಾ
ಹುತಿಯಾಗಿ ಕೊಟ್ಟೆನೈ ಕಂದನನು ಎಂದಿಂದು ಮುಖಿ–
ಯಳಲಿ ಬಾಯ್ಬಿಟ್ಟಳು ॥ ೧೨–೨೮

ಮುಂದೆ ಸಡಿಲವಾದ ನ್ಯೆಕಟ್ಟುಳ್ಳುದೇ ಆದರೂ ಷಟ್ಪದಿ ತೊಡಕಾಯಿತು. ಅಂತೇ ಕವಿಯು ಸಹಜವಾದ ಅಳಲ ಮಾತನ್ನು ಬಲುಮಟ್ಟಗೆ ಅಳಲ ಧಾಟಿ ಗೊಡುವ ಮಂದಾ ನಿಲ ರಗಳೆಯಲ್ಲಿ ಕೋದಿರುವನು. ಮೇರೆಯಿಲ್ಲದ ಅಳುವಿನ ಮಾತನ್ನು ಇಷ್ಟು ಸಹಜವಾಗಿ ಬರೆದವನೆಂದರೆ ರಾಘವಾಂಕನೇ ಸರಿ. ತನ್ನ ಕೃತಿಕುಶಲತೆಯಿಂದ ನಮ್ಮ ಬಗೆಯನ್ನು ಚಂದ್ರಮತಿಯ ಬಗೆಯೊಡನೆ ಬೆರಸಿಬಿಡುವನು; ನೋಡಿ.

ಏವೆನೇವೆನೆಲೆ ಮಗನೇ ಮಗನೇ
ಸಾವೇಕಾಯಿತ್ತೆಲೆ ಚೆನ್ನಿಗನೇ
ಹಾವು ಹಿಡಿಯೆ ಹಾ ಯೆಂದೆಯೊ, ಕಂದ
ಸಾವಾಗವ್ವಾ ! ಏಂದೆಯೊ ಮಗನೆ
ಪಾಪಿಯೆನ್ನ ನೀನೊಯ್ಯನೆ ನೋಡಾ
ಕೋಪವನುಳಿದೊಯ್ಯನೆ ಮಾತಾಡಾ
ಅಳಲದಿರವ್ವಾ ಎನ್ನೆಲೆ ಮಗನೆ
ಬಳಲಿದೆ ತಾಯೆಂದೆನ್ನೆಲೆ ಮಗನೆ
ನುಡಿದರೆ ಪಾಪವೆ ಹೆತ್ತವರೊಡನೆ ?
ಕಡುಮುನಿಸೇಕೆಲೆ ಮಗ ನನ್ನೊಡನೆ ?
ಅನ್ಯರ ಮನೆಯಲಿ ತೊತ್ತಾಗಿರ್ದು
ನಿನ್ನ ನೋಡಿ ಪರಿಣಾಮದೊಳಿರ್ದು
ಇಪ್ಪೆನ್ನನು ನೀನಿರಿವರೆ ಕಂದಾ
ತಪ್ಪದೆ ಮಗನೇ ವಿಧಿವಶದಿಂದ
ಆರಿಗೆ ಹೇಳುವೆನೀ ಸಂಗಡಿಯ (?)
ಆರೆನಗುಂಟೆಲೆ ಮಗ ನೀ ನುಡಿಯು!
ಎಂತು ಸೈರಿಸಲು ಬಹುದೆಲೆ ದೇವ
ಕಂತು ಹರನೆ ಕರುಣಿಸೆನಗೆ ಸಾವ
ಬಾರೈ ಬಹಳ ಸಿರಿಯ ಸಿಂಗಾರ
ಬಾರೈ ಸುಜನಜನಕ್ಕಾಧಾರ
ಬಾರೈ ಬಳಲಿದೆ ಎಲೆ ಸುಕುಮಾರ
ಬಾರಳಲಿಸದೆನ್ನನು ಸುಕುಮಾರ

ಎನ್ನನೊಯ್ಯಲೇಕೊಲ್ಲೆಯೊ ಮಗನೆ
ನಿನ್ನನಗಲಿ ಯಿರಲಾಪೆನೆ ಮಗನೆ
ತನಯುನನೇಕೆಳೆದುಯ್ವೆಯೊ ಜವನೆ
ಎನಗಿನ್ನಾವುದು ಗತಿಯೆಲೆ ಶಿವನೇ

ಹರಿಶ್ಚಂದ್ರನ ಬಾಳ್ಗಡಲಲ್ಲೆದ್ದ.—ಎಬ್ಬಿಸಲ್ಪಟ್ಟ—ತೆರೆಗಳನ್ನು ಕಂಡೆವಷ್ಟೆ. ಬಿರುಗಾಳಿಯುಡುಗಲು ಅದೇ ಕಡಲು ಶಾಂತಿಯ ಒತ್ತಡವನ್ನು ಹೇಗೆ ಸೂಸುವುದು !

ಕುಡಿದೌಷಧಂಬಾಯ್ಗೆ ನಿಗ್ರಹಂಮಾಡಿ ತಾ
ಳ್ದೊಡಲಿಂಗೆ ಸುಖವನೀವಂತೆ, ಲೋಕದ ಕಣ್ಗೆ
ಕಡುಮುಳಿದನಂತೆ ತೋರಿಸಿ ಸತ್ಯಶುದ್ಧನಪ್ಪನ್ನೆಗಂ ಕಾಡಿ
ನೋಡಿ;

ಕಡೆಯೊಳು ಹರಿಶ್ಚಂದ್ರಭೂಪಂಗೆ ನಿಜವೆರಸಿ
ಮೃಡನನೆಳೆತಂದಿತ್ತು, ಕೀರ್ತಿಯಂ ಮೂಜಗದ
ಕಡೆಯನರುಹಿಸಿದ, ವಿಶ್ವಾಮಿತ್ರನುರವಣಿಸಿ ಬಂದನು
ವಸಿಷ್ಠಸಹಿತ ॥

೧೪—೩

ಅಂಬರದಿ ಸುರರು ಪೂಮಳೆಗರೆಯೆ, ತುರುಗಿದ ಕ
ದಂಬವೆಡೆಗೊಡದೆ ಪೂರೈಪ ಶಂಖದ, ಹೊಯ್ವ
ತಂಬಟದ, ಸೂಳೈಪ ನಿಸ್ಸಾಳ, ಹೊಯ್ವ ಭೇರಿಗಳ,
ಬಿರುದೆತ್ತಿಕರೆವ ॥

ಕೊಂಬುಗಳ, ಬಾರಿಸುವ ಹಲಕೆಲವು ವಾದ್ಯನಿಕು
ರಂಬದ ಮಹಾರವದ, ಸಡಗರದ ಸಂಭ್ರಮಾ
ಡಂಬರದ ನಡುವೆ, ತೆಗೆದಪ್ಪಿಕೊಂಡಂ ಹರಿಶ್ಚಂದ್ರನಂ
ಗಿರಿಜೇಶನು ॥

೧೪—೪

೩.

ಇನ್ನು ವರ್ಣನಾಭಾಗ, ಉಳಿಕೆಯ ವಿಚಾರ. ಈ ಭಾಗ ದಲ್ಲಿ ಗಮನಿಸಬೇಕಾದುದೆಂದರೆ ನಮ್ಮ ಕವಿಯ ಕಥೆಯ ಮೇಲಣ ಗಮನ. ಈ ಸರಣಿ ಅಸಂಬದ್ಧವಾಗಿ ತೋರಬ ಹುದು; ಹಾಗಲ್ಲ. ನಿಯಮಬದ್ಧರಾದ ಕನ್ನಡ ಕವಿಗಳು, ಪ್ರಾಯಶಃ ಎಲ್ಲರೂ, ಹೊಂದಲಿ ಹೊಂದದಿರಲಿ, ಮಹಾ ಕಾವ್ಯಕ್ಕೆ ಅಂಗಗಳೆಂದಿನಿಸಿಕೊಂಡಿರುವ ವರ್ಣನೆಗಳನ್ನು ತಮ್ಮ ಕಾವ್ಯಗಳಲ್ಲಿ ಪ್ರಯತ್ನದಿಂದ ತುಂಬಿರುವರು. ಇಷ್ಟೇ ಆದಲ್ಲಿ ತಪ್ಪೆಣಿಸುವಂತಿಲ್ಲ. ಆದರೆ ವರ್ಣನಾಭಾಗಕ್ಕೆ ಅಳತೆ ಗೆಟ್ಟ ಮರ್ಯಾದೆಕೊಟ್ಟು ಕತೆಯನ್ನು ಅನೇಕರು ಮರೆತು ಬಿಟ್ಟಿರುವರು. ಈ ಅಪವಾದಕ್ಕೆ ಹೊರಗಾದವರಲ್ಲಿ—ಇವರ ಎಣಿಕೆ ಕೈಬೆರಳಲ್ಲೆ—ರಾಘವಾಂಕನೊಬ್ಬ ಗಣ್ಯನಾದವನೂ ಹೌದು, ಎಂದಮಾತ್ರಕ್ಕೆ ಇವನಲ್ಲಿ ತಪ್ಪು ಸಿಕ್ಕದೆಂದಲ್ಲ. ನಾಲ್ಕನೆಯ ಸ್ಥಳದಲ್ಲಿ ಸೂಳೆಗೇರಿಯ ವರ್ಣನೆಯ ಸುರಿಮಳೆ. ನಾಳೆ ಬೇಟೆಗೆ ಬಿಜಯಮಾಡುವುದಕ್ಕೂ, ಇಂದು ನಗರಿಯಲ್ಲಿ ರಾತ್ರಿಯ ವಿನೋದಗಳನ್ನು ನೋಡುವುದಕ್ಕೂ, ಲಾಕ್ಷಣಿಕರ ಸೆಳೆತವಲ್ಲದೆ ಬೇರೆ ಸಂಬಂಧವಿದೆಯೆಂದು ಯಾರೂ—ರಾಘ ವಾಂಕನ ಮೇಲ್ಮೆಗಾಗಿ ಮನಸೋತವರು ಕೂಡ—ಹೇಳುವಂ ತಿಲ್ಲ. ೫, ೬ನೆಯ ಸ್ಥಲದಲ್ಲಿಯ ಕಾಡು, ಬೇಡರು, ಬೇಟೆಗಳ ವರ್ಣನೆ ಇವೂ ಇಷ್ಟು ಹೆಚ್ಚಿಗೆ ಬೇಕಿಲ್ಲವೆನಿಸುವುವು. ಇನ್ನು ಮುಂದೆಯಾದರೊ, ರೀತಿಯೇ ಬೇರೆ. ಮುಖ್ಯ ಕಥಾಭಾಗವು, ಹರಿಶ್ಚಂದ್ರನನ್ನು ನಮ್ಮ ಬಗೆಯಲ್ಲಿ ನಿಲ್ಲಿಸುವ ಕಥಾಭಾಗವು ಮೊದಲಾಗುವುದು ೬ನೆಯ ಸ್ಥಲದಿಂದ. ಹಿಂದಿನದೆಲ್ಲಾ ಪೀಠಿಕೆ ಯೆನ್ನಬಹುದು. ಮುಂದೆಯಾದರೊ, ಕತೆ ಯಾವ ತಡೆಯೂ ಇಲ್ಲದೆ ಸಾಗುವುದು; ಓಡುವುದೆಂದರೂ ಹೆಚ್ಚಲ್ಲ. ಇಂತು ಕತೆಯನ್ನು ಓಡಿಸುವುದು ಕನ್ನಡ ಕವಿಗಳಲ್ಲಿ ಅಪೂರ್ವ. ಇರಲಿ

ರಾಘವಾಂಕನಿಗೆ ಲಾಕ್ಷಣಿಕರ ಬಲೆಯಿಂದ ತಪ್ಪಿಸಿಕೊಳ್ಳ ಲಿಕ್ಕಾಗದಿದ್ದರೂ, ಈಗ ಎಂದಂತೆ ಬಲೆಗೆ ಸಿಕ್ಕರೂ ಒಂದು ರೀತಿ ಹೊರಗಾದವನಂತೆಯೇ ಕೆಲಸ ಮಾಡಿರುವನು. ಪ್ರಾಯಶಃ ವರ್ಣನೆಯೆಲ್ಲವನ್ನೂ ಕಡೆಗೆ ತೊಡಕಾಗದಂತೆ ಮೊದಲೇ ಮುಗಿಸಿರುವನು.

ಇನ್ನು ಈ ವರ್ಣನೆಯ ಇರವು. ಈ ಕವಿ ಕವಿಸಮಯವೇ ನೆಲೆಯುಳ್ಳದ ಹೊಸನಮೂನೆಯ, ಭಾವಗರ್ಭಿತವಾಗಿದ್ದು ಸುಲಭವಾಗಿ ಮನವುಗುವ ಉಪಮಾರೂಪಕಉತ್ಪ್ರೇಕ್ಷೆಗಳನ್ನೇ ಹೆಚ್ಚಾಗಿ ಬಳಸಿಕೊಂಡಿರುವನು. ಸೊಬಗುಬೀರಿ, ಬಗೆಗೆ ಮೋದವೀವ ಕವಿತೆಗಳು ಈತನ ವರ್ಣನೆಯಲ್ಲಿ ಅಲ್ಲಲ್ಲಿಯೇ ಅರಳಿರುವುವು. ಆಯ್ದ ಕೆಲವು ಹೂಗಳಿವು:

**ವಸಂತದ ಬರವು:—**

ಎಳಲತೆಯ ಲಾವಣ್ಯಲಹರಿ, ಮಾವುಗಳ ಮಂ।
ಗಳದ ಮನೆ, ಕೋಗಿಲೆಯ ಕೊರಲ ಪುಣ್ಯಂ, ತುಂಬಿ।
ಗಳ ನಾಸಿಕದ ನಲಿವು, ನವಿಲ ನವನಾಟ್ಯರಂಗಂ, ಜನದ
ಸುಖದ ಸುಗ್ಗಿ।

ಗಿಳಿವಿಂಡುಗಳಿಗೆಸೆವ ಸಾಮ್ರಾಜ್ಯ, ಹಿಮಕರನ ।
ತಳತ ಬೆಳಗಿನ ಬೆಂಬಲಂ, ರತೀಶ್ವರನ ಭುಜ ।
ಬಲವೀರಶ್ರೀಯೆನಿಸಿ, ಬಂದುದು ವಸಂತವವನೀಶ
ಚಿತ್ತೈಸೆಂದನು ॥ ೩-೧೮

**ಸೂರ್ಯಾಸ್ತ:—**

ನಡೆಯುಡುಗಿ, ಮುಪ್ಪಾಗಿ, ಕಾಂತಿ ಮಸುಳಿಸಿ, ತೇಜ ।
ವಡಗಿ, ಹುಟ್ಟಿದ ಠಾವನಗಲ್ದು, ಬೇರೊಂದೆಸೆಯ ।
ಕಡೆಯೊಳಳಿವಂತಾದುದೀಗ, ಹಿಂದೆನ್ನ ಹೆಸರಿಂದೊಡೋ
ಡುವ ಕತ್ತಲೆ ।

ಹೊಡಕರಿಸುತಿರ್ದುದೆನ್ನಾಳಿಕೆಗೆ ಶಶಿಯ ಮುಂ ।
ಗುಡಿದಾಳಿ ಬರುತಿದೆ, ಯಿದಂಕಂಡು ಜೀಪಿಪೆ ।
ನ್ನೊಡಲಾಸೆಯೇಕೆಂದು ಲಜ್ಜೆಯಿಂದಿಳಿವಂತೆ, ಬಿಳ್ದನಿನನಂ
ಬುಧಿಯೊಳು ॥ ೩-೮೨

**ನಕ್ಷತ್ರಗಳು: —**

ಚಾರುಚಂದ್ರಿಕೆಯ ಬೀಜಂಗಳೋ, ಚಂದ್ರಂ ಚ ।
ಕೋರಾವಳಿಗೆ ತಳಿದ ಕುಟುಕುಗಳೊ, ಗಗನರಮ ।
ಣೀರುಚಿರಮಾಲಕವೊ, ರವಿಹಯಾನನ ಫೇನಪುಂಜವೋ,
ದಿವಿಜನದಿಯಾ ॥

ಕೈರವಂಗಳ ಕುಟ್ಮಳಾವಳಿಗಳೋ, ಮಿಸುಪ ।
ತೋರಪುಲ್ಲಿಗೆಯುರಳಿನಿಂ ವಿಷ್ಣುಪದವನೊಲಿ ।
ದಾರಾಧಿಸಿದಳೊ ಯಾಮಿನಿದೇವಿಯೆನೆ ತರಳತಾರಾಳಿ
ಕಣ್ಗೆಸೆದುದು ॥ ೩-೮೯

ಈ ಕವಿಗೆ ತೆಂಗು "ಹಂಗ ಮಗಚುವೆನೆಂದು" (ನೀರೆರೆದ ಹಂಗು) ಭೂಮಿ ಕೈನೀಡಿ ಮೇಘಂಗಳಿಗೆ ಕುಡು—ವಮೃತಕಲಶಸಂಕುಳ" ವೆಂದು ತೋರಿತು. (೩-೩೧) ಜೌವನೆಯ ಚೆಲುವನಾಂತ ಅವಯವದ ಸುಕುಮಾರತೆಯ ಭಾರಕ್ಕೆ ಸರ್ವಾಂಗವೂ ಬಳುಕುತ್ತಿರುವಂತೆ ಕಂಡಿತು ೪-೧೮

ಪ್ರಕೃತಿಸೌಂದರ್ಯವಾಗಲಿ, ಮತ್ತಾವುದಾಗಲಿ ಈ ವರ್ಣನೆಗಳಲ್ಲಿ ಕವಿಯ ಬಗೆಯುಲ್ಲಿ ಮೂಡಿದ ಹೊಸರೀತಿಯಿದೆ; ಆನಂದವೀವ ಬೆಡಗಿದೆ.

ರೂಪುಗೊಂಡ ಗುಣದೊಟ್ಟಿಲಾದ ಈ ಮುನಿಯನ್ನು ನೋಡಿ :

ಈ ಮುನಿಯ ಚಾರಿತ್ರದೊಳು ಗಂಗೆ ಹುಟ್ಟಿದಿರ ।
ಳೀಮುನಿಯ ಶಾಂತಿಯೊಳು ಚಂದ್ರಮಂ ಜನಿಸದಿರ ।
ನೀಮುನಿಯ ವದನದೆ ದಯಾವನಧಿ ಸುರಕುಜಂ ಸುರ
ಧೇನು ಪೂಣ್ಮದಿರವು ।
ಈ ಮುನಿಯ ಸವಿಯನುಡಿಯಿಂದಮೃತವೊಗೆಯದಿರ ।
ದೀಮುನೀಂದ್ರಂ ಮುನಿಯ ವೇಷದೀಶ್ವರನಾಗದಿರನೆನು
ತನಡೆತಂದನು ॥ ೫-೬೧

ಹರಿಶ್ಚಂದ್ರ ಕಾವ್ಯದಲ್ಲಿ ಕತೆಯ ಮೇಲೆ ಗಮನ ಹೆಚ್ಚಾದ ಕಾರಣ ಇಂತಹವು ಹೇರಳವಾಗಿ ಸಿಕ್ಕುವಂತಿಲ್ಲ.

ರಾಘವಾಂಕನ ಕೃತಿಕೌಶಲವನ್ನು ಕುರಿತು ಇನ್ನೊಂದು ಮಾತು. ಈತನಿಗೆ ಶಬ್ದಾಲಂಕಾರಗಳಲ್ಲಿ, ಭಾವ ಪ್ರಧಾನವಲ್ಲದ ಅರ್ಥಚಮತ್ಕಾರಗಳಲ್ಲಿ ಯ ಮ ಕ, ಅನುಪ್ರಾಸ, ಮುಕ್ತಪದ ಗ್ರಾಸ, ಶ್ಲೇಷೆ ಮೊದಲಾದುವುಗಳಲ್ಲಿ ಕೊಂಚ ಪ್ರೇಮ. ಇವುಗಳಲ್ಲಿಯ ತನ್ನ ಪ್ರೌಢಿಯನ್ನು ತೋರಬೇಕೆಂಬ ಲವಲವಿಕೆ. ಕಾವ್ಯದ ಮೊದಲಲ್ಲೇ ಈ ಲವಲವಿಕೆ ಹೊರಬಿದ್ದಿದೆ.

"ಜಡೆಯಿಡುಕುರಿಡೆಯೆಡೆಯೊಳಡಿಯಿಡುವ" ಮೊದಲಾದ ೧ನೆಯ ಸ್ಥಲದ ೨ ನೆಯ ಪದ್ಯದಲ್ಲಿ ೪೪ 'ಡ' ಗಳಿವೆ. ೩ನೆಯ ಪದ್ಯದಲ್ಲಿ ಮುಕ್ತಪದ ಗ್ರಾಸ. ಸೋಮ, ಸೋಮವಿಭೂಷ ಸುರರಾಜ, ರಾಜರಿಪುಭೀಮ, ಭೀಮಪೃಥುಲಭುಜಶಮನ, ಶಮನ," ಕೊನೆವರೆಗೂ ಹೀಗೆಯೇ. ೪ನೆಯ ಪದ್ಯದಲ್ಲಿ ನಿರುಪಮ, ನಿರಾಲಂಬ ಇತ್ಯಾದಿ 'ನಕಾರಾದಿಯಾದ ೨೭ ಪಂಪಾವಿರೂಪಾಕ್ಷನ ನಾಮನಗಳು. ೫ನೆಯುದರಲ್ಲಿ ನುತಕಾಯ ಜಿತಮಾಯ, ಪುರಮಥನ ವರಕಥನ, ಈ ರೀತಿ ಪ್ರಾಸಕೊಡುವ ಪದವೆರಡರ ಗುಂಪು. ೪ನೆಯ ಸ್ಥಲದ ೨೦ ನೆಯ ಪದ್ಯದಲ್ಲಿ "ನಿನ್ನ ಮುಖಕಮಕಲಮಲದೊಳೊಗೆದ ಕಮಲಮಂ ನಿನ್ನಕ್ಷಿಕುವಲಯಂ ಕುವಲಯದ ಕುವಲಯವ ನಗುವುದು" ಮತ್ತು ೫ನೆಯ ಸ್ಥಲದ ೨ ನೆಯ ಪದ್ಯದಲ್ಲಿ 'ಸಲೆ ಶಿವಮಯಂ ಶಿವಮಯಂ ಶಿವಮಯಂ, ಸಮುಜ್ಜ್ವಲ ಶಿಖಿಮಯಂ ಶಿಖಿಮಯಂ...ಆ೧ ಕಾನನಂ ಕಣ್ಗೆಸೆದು' ಈ ಬಗೆಯ ಶಬ್ದಾರ್ಥದ ದಂಭ. ೨೨ರಲ್ಲಿ "ದೇವಸಭೆಯಂತೆ, ಮುನಿಸಭೆಯಂತೆ, ಸರ್ಪೋಪ ಜೀವಿಯಂಬವದೆ, ಕೌಶಿಕಾಧಿಷ್ಠಿತಂ" ಇತ್ಯಾದಿ ಶ್ಲೇಷಮೂಲವಾದ ಅರಣ್ಯವರ್ಣನೆ; ಇವೆಲ್ಲ ಚಮತ್ಕಾರಗಳ ಜಾಣ್ಮೆ ತಲೆದೂಗಿಸದಿರದು.

ಇಷ್ಟರ ಮಟ್ಟಿನ ಶಕ್ತಿಯಿದ್ದರೂ ಕವಿ ಇದರ ಮೇರೆಯ ರಿತ. ವರ್ಣನಾಭಾಗದಲ್ಲಿಂದಮಾತು ಇಲ್ಲಿಯೂ ಕೂಡುವುದು. ಈ ಚಮತ್ಕಾರಗಳಲ್ಲಿ ಬಲವಿದ್ದರೂ, ಭಾವಮಯವಾದ ಕಥಾ ಭಾಗದಲ್ಲಿ ಇವು ತೊಡಕುಗಳೆಂದು ರಾಘವಾಂಕನರಿತ. ಅಂತೇ ಕತೆ ಸರಿಯಾಗಿ ಮೊದಲಾದ ಮೇಲೆ ಇವು ಕಾಣವು.

ಹೀಗೆ ಹರಿಶ್ಚಂದ್ರ ಕಾವ್ಯವನ್ನು ಮೊದಲಿನಿಂದ ಕೊನೆಯ ವರೆಗೂ ನೋಡಲು ಏರ್ಪಡುವುದೇನು ? ರಾಘವಾಂಕನು ಕನ್ನಡ ಕವಿಗಳ ಮೊದಲ ಸಾಲಿಗೆ ಸೇರಿದವನೆಂದು; ಕತೆ ರಸ ವತ್ತಾಗಿ, ಓದುಗರಿಗೆ ಮೋದಬೀರುವುದೆಂದು; ಮೇಲಾಗಿ ಈ ಕವಿ, ಕನ್ನಡಿಗರಲ್ಲಿ ಕನ್ನಡಿಗನೆಂದು; ತನ್ನ ಕಾವ್ಯವು ಕನ್ನಡ ಕಾವ್ಯವಾಗಬೇಕೆಂಬ ಲವಲವಿಕೆಯುಳ್ಳವನೆಂದು;—ಅಂತೇ ಸಂಸ್ಕೃತ ಪದಗಳ ಮೋಹತಪ್ಪಿಸಿ ಕನ್ನಡ ಕಾವ್ಯದಲ್ಲಿ ಕನ್ನಡ ಮಾತಿಗೆ ಮೊದಲ ವೀಳ್ಯೆಯ ಕೊಟ್ಟು, ಕನ್ನಡ ನುಡಿಗೆ ಗೌರವ ತಂದವನೆಂದು.

ಹಾಗೇ ನೋಡಲು ಹರಿಶ್ಚಂದ್ರಕಾವ್ಯವನ್ನೋದಿ, ಕವಿಯ ಬಗೆಯರಿತ ಕನ್ನಡಿಗನು ತಾಯ್ನುಡಿಯ ವಿಷಯದಲ್ಲಿ ತಳ ಮಳಿಸದಿರನು. ನಮ್ಮ ನುಡಿಗಟ್ಟನ್ನು ಕಾಯಲು ತವಕಿಸಿ, ಸಾಧನೆಮಾಡಿ, ಸಿದ್ಧಿಹೊಂದಿದ ರಾಘವಾಂಕನು, ತಾಯ್ನುಡಿ ಯಲ್ಲಿ ಮಮತೆಯುಳ್ಳ, ತಾಯ್ನುಡಿಯ ಏಳ್ಗೆಗಾಗಿ ಟೊಂಕ ಕಟ್ಟಿದ, ನಮ್ಮೆಲ್ಲರ ಮೆಚ್ಚಿಕೆಯ ಗುರಿ, ಅಷ್ಟೇ ಅಲ್ಲದೆ ಅಲ್ಲಿಗೆ ದಾರಿ ತೋರುವವನೂ ಹೌದು. ಹರಿಶ್ಚಂದ್ರ ಕಾವ್ಯನನ್ನೋದಿ, ರಾಘವಾಂಕನಂತೆ ನಾವೆಲ್ಲರೂ ಸರಿಯಾದ ಕನ್ನಡಿಗರಾಗ- ಲೆಳಸುವ.

---

# ತೆರೆ

— ಅಟ್ಟಿ ಬರುವುದು ತಾನು ಹುಲಿಕರಡಿಯಲ್ಲ ।
ಸೊಟ್ಟ ಹಾದಿಯ ನಡೆದು ಹಾವು ತಾನಲ್ಲ ॥ ೧ ॥

—ಉರುಳಿ ಬರುವುದು ನೋಡು ಬರಡುಗುಂಡಲ್ಲ ।
ಅರಿದಿದರ ಕೊನೆಮೊದಲ ಪೇಳುವವರಿಲ್ಲ ॥ ೨ ॥

— ಗುಂಡಿನಿಂ ಕೊಲ್ಲುವೊಡೆ ಮೃಗಜೀವಿಯಲ್ಲ ।
ಕಂಡೋಡಿ ಪೋಗಲಿದು ಮೇಲೆ ಬರಲಿಲ್ಲ ॥ ೩ ॥

—ಕಡಿದ ಮೈ ಕೂಡುವುದು ಗಾಯವಿದಕಿಲ್ಲ ।
ಘುಡಿಘುಡಿಸಿ ಕೂಗುವುದು ಬಾಯಿ ತನಗಿಲ್ಲ ॥ ೪ ॥

—ಮಾಲೆಯಾಗಿಹುದು ಮೇಣ್ ತೊಡವು ತಾನಲ್ಲ ।
ಮೇಲೆ ಧರಿಸುವ ಸತಿಗೆ ತನಗಂಗಮಿಲ್ಲ ॥ ೫ ॥

—ಬಟ್ಟಬಯಲಿಗೆ ಹಂತ ಕಟ್ಟಿದವರುಂಟೆ? ।
ಮೆಟ್ಟ ನಿಂದಿದರಮೇಲುಳಿದ ನರರುಂಟೆ? ॥ ೬ ॥

—ನೋಟಕಿದು ಹೆಬ್ಬೆಳಸು ಹೊಲಗದ್ದೆಯಲ್ಲ ।
ಕೋಟಲೆಯ ಗೈಯದಿದ ಸೇರಲುಳಿವಿಲ್ಲ ॥ ೭ ॥

—ಮೀರಿದಾಶ್ಚರ್ಯದೊಳು, ಕವಿಗಳೇ, ನೋಡಿ ।
ಚಾರುತರ ವಾಣಿಯಿಂ ತೆರೆಯೆಂದು ಪಾಡಿ ॥ ೮ ॥

— ನೃಸಿಂಹ

# ಆರ್ಯರ ನವೀನ ಚರಿತ್ರೆ



ಲೇ:—ಪ್ರೊಫೆಸರ್ ಎಚ್. ವಿ. ಕೃಷ್ಣಸ್ವಾಮಿ ಬಿ. ಎ., ನಿಜಾಂ ಕಾಲೇಜ್ ಹೈದರಾಬಾದ

ಏತದ್ದೇಶಪ್ರಸೂತಸ್ಯ ಸಕಾಶಾದಗ್ರಜನ್ಮನಃ ॥
ಸ್ವಂಸ್ವಂ ಚರಿತ್ರಂ ಶಿಕ್ಷೇರನ್ ಪೃಥಿವ್ಯಾಂ ಸರ್ವಮಾನವಾಃ ॥

ಭೂಖಂಡ ಜಲಖಂಡಗಳಿಂದ ಕೂಡಿದ ಈ ಭೂಮಂಡಲವು ಬಹು ಪುರಾತನವಾದುದು, ಅದು ಹುಟ್ಟಿ ಲಕ್ಷಾನುಲಕ್ಷ ವರ್ಷಗಳಾಗಿರುವುವು. ಇಂತಹ ಪ್ರಪಂಚದ ವಯಸ್ಸನ್ನು ಭೂಗರ್ಭ ಶಾಸ್ತ್ರಜ್ಞರು ( Geologists ) ಈ ರೀತಿಯಲ್ಲಿ ವಿಭಾಗಿಸಿದ್ದಾರೆ.

| ಮನ್ವಂತರಗಳು | ಶಕೆಗಳು |
|---|---|
| Eozoic | ಪ್ರಕಿಷ್ಠಾದಿ Guessis |
| ಪ್ರಥಮ Palaegoic | Permian |
| ದ್ವಿತೀಯ mesozoic | Zurassic |
| ತೃತೀಯ Cainozic | Eocene<br>Miocene (ಋಗ್ವೇದಕಾಲ)<br>Pliocene |
| ಭೂಪ್ರತಿಷ್ಠಾನಂತರ ಅಥವಾ ಚತುರ್ಥ | Pleistocene (ಪ್ರಳಯಕಾಲ)<br>ಪ್ರಳಯಾನಂತರ ಅಥವಾ ನವೀನ |

ಸೃಷ್ಟಿಕರ್ತನು ಮಾನವ ಸೃಷ್ಟಿಯನ್ನು ಯಾವ ಕಾಲದಲ್ಲಿ ಮಾಡಿದನೆಂಬ ವಿಷಯದಲ್ಲಿ ಭಿನ್ನಾಭಿಪ್ರಾಯಗಳಿವೆ. C. Darwin ಸಾಹೇಬರ ಮತವನ್ನು—ಕಪಿಜಾತಿಯಿಂದ ಮನುಷ್ಯನು ಉತ್ಪನ್ನನಾದನೆಂಬುದನ್ನು—ಅನೇಕರು ಒಪ್ಪುವುದಿಲ್ಲ. ೫೫೦ ರಿಂದ ೭೦೦ ಲಕ್ಷ ವರ್ಷಗಳ ಹಿಂದೆ Trilobotes ಜನ್ಮವು, ೩೦೦—೪೦೦ಲಕ್ಷ ವರ್ಷಗಳ ಹಿಂದೆ ಮತ್ಸ್ಯಜನ್ಮವು ೧೫೦ ಲಕ್ಷ ವರ್ಷಗಳ ಪೂರ್ವದಲ್ಲಿ ಪಕ್ಷಿಜಾತಿ ಮತ್ತು ಸ್ತನ್ಯಪಾಯಿ ( mammalia ) ಜಂತುಗಳು ಪಕ್ಷಿವರ್ಗದ ಜತೆಯಲ್ಲಿಯೇ ಹುಟ್ಟಿದುವೆಂದು Haydon ಸಾಹೇಬರು ಹೇಳುತ್ತಾರೆ. ಈ ಸ್ತನ್ಯಪಾಯಿ ತೃತೀಯ ಕಲ್ಪದಲ್ಲಿನ miocene ಅಥವಾ pliocene ಯುಗದಲ್ಲಿ ಅಂದರೆ ೧೦ ಲಕ್ಷ ವರ್ಷಗಳ ಹಿಂದೆ ಉಚ್ಚ ಸ್ಥಿತಿಯನ್ನು ಹೊಂದಿತೆಂದೂ ಅದೇ ಕಾಲವು ಮನುಷ್ಯಾವತಾರದ ಕಾಲವೆಂದೂ ಹೇಳುತ್ತಾರೆ. ಪ್ರಥಮದಲ್ಲಿ ಮಾನವ ಜಾತಿಯ ವರ್ಗವು ಪಂಗಡ ಪಂಗಡವಾಗಿ ಪರಿಣಮಿಸಿ ಒಂದು ಪಂಗಡವು ಒಂದು ಜಾತಿಯ ( ಚತುಷ್ಪಾದದ ) ಸ್ವಭಾವವನ್ನೂ, ಮತ್ತೊಂದು ಪಂಗಡವು ಬೇರೆ ಜಾತಿಯ ಸ್ವಭಾವವನ್ನೂ ಹೊಂದಿ ಈ ಸ್ವಭಾವಗಳನ್ನು ಕಾಲಕ್ರಮದಲ್ಲಿ ವೃದ್ಧಿಪಡಿಸುತ್ತ ಬಂದು ಕೊನೆಗೆ ಮೆಲ್ಲಮೆಲ್ಲಗೆ ಪರಿಪಕ್ವವಾಗಿ ಸಂಪೂರ್ಣ ಮಾನವ ಜನ್ಮವನ್ನು ಪಡೆದುವಂತೆ. H. G. Wells ಎಂಬವನು ತನ್ನದೊಂದು ಕಾದಂಬರಿಯಲ್ಲಿ ವರ್ಣಿಸಿರುವಂತೆ, ಮರಕೋತಿಯಲ್ಲದೆ, ನೆಲಕೋತಿಯ ಜನ್ಮವನ್ನು ಈ ಮೃಗವು ವಹಿಸಿದ್ದಾದರೂ ಇರಬಹುದು. ಮನುಷ್ಯನ ಸ್ವರೂಪವನ್ನೂ ಕೆಲವು ಗುಣಗಳನ್ನೂ ಪರೀಕ್ಷಿಸಿ ನೋಡಿದರೆ ಒಂದೊಂದು ಜಾತಿಯ ಮೃಗದ ಒಂದೊಂದು ವಿಶೇಷವು ಅಭಿವೃದ್ಧಿಯಾಗಿ ಕೊನೆಗೆ ಮಾನವ ಸಂಪೂರ್ಣತೆ ಆದ ಹಾಗೆ ಭಾಸವಾಗುತ್ತದೆ. ಮನುಷ್ಯನೂ Orang, Gorilla, ಮುಂತಾದ ಕಪಿವರ್ಗವೂ ಒಂದೇ ಜಾತಿಯ ಉಪಶಾಖೆಗಳಾಗಿದ್ದು, ಮನುಷ್ಯನು ಮೇಧಾಶಕ್ತಿ, ದೇಹಲವಲವಿಕೆಗಳಿಂದಲೂ, Orang, Gorilla ಮುಂತಾದುವು ತಮ್ಮ ದೇಹದಾರ್ಢ್ಯದಿಂದಲೂ ತಮ್ಮ ತಮ್ಮ ಪ್ರಾಣಗಳನ್ನು ಕಾಪಾಡಿಕೊಂಡು ಬಂದಿರಬಹುದು. ಏವಂಚ ಸಸ್ಯವರ್ಗ ಮೃಗವರ್ಗಗಳಲ್ಲಿ ಅನೇಕ ಜಾತಿಗಳಿರುವಂತೆ ಮನುಷ್ಯವರ್ಗದಲ್ಲಿಯೂ ಐದು ಜಾತಿಗಳಿದ್ದುವೆಂದೂ, ಈ ಐದು ಪ್ರಥಮ ವರ್ಗಗಳಿಂದ ಅನೇಕ ಶಾಖೆಗಳು ಹುಟ್ಟಿದುವೆಂದೂ ಅನೇಕರು ಅಭಿಪ್ರಾಯಪಡುತ್ತಾರೆ. ಈ ಐದು ಪ್ರಥಮ ವರ್ಗಗಳಲ್ಲಿ (೧) ಆಫ್ರಿಕಾ ಜನರು (ನಿಗ್ರೋ) (೨) ಯುವದ್ವೀಪದ ಜನರು (೩) ಅಮೇರಿಕಾದ ಆದಿ ಜನಾಂಗ Red Indians (೪) ಆಸಿಯಾ ಜನಗಳು. ಅಂತು ಮಾನವ ಜಾತಿ ಅನೇಕ ಸ್ಥಳಗಳಲ್ಲಿ ಅನೇಕ ರೂಪಗಳಲ್ಲಿ ಅವತರಿಸಿತೆಂತಲೂ ಆಸ್ಯಾ ಖಂಡದಲ್ಲಿ ಇವರು ಮಯೋಸೀನಿ (miocene) ಕಾಲದಲ್ಲಿ ಇದ್ದಿರಬಹುದೆಂತಲೂ ನವೀನ ಶಾಸ್ತ್ರಜ್ಞರು ಅಭಿಪ್ರಾಯ ಪಡುತ್ತಾರೆ. Maxmuller

ರವರು ಅಭಿಪ್ರಾಯಪಡುವಂತೆ ನಮ್ಮ ಬುದ್ಧಿ ಯಾವಾಗಲೂ ಸರ್ವ ವಿಷಯಗಳಲ್ಲಿಯೂ ಏಕೀಕರಣ ಮಾಡುವ ಸ್ವಭಾವವುಳ್ಳದ್ದಾಗಿರುವುದು. ಈ ಅಭಿಪ್ರಾಯಕ್ಕೆ ಉಪಯುಕ್ತವಾಗಿ Adam and Eve ರ ಒಂದೇ ಪ್ರಥಮ ಅವತಾರವಾಗಿದೆ. ಮಾನವ ಜನ್ಮಾವತಾರವೂ ಬೇರೆ ಬೇರೆ ಸ್ಥಳಗಳಲ್ಲಿ ಬೇರೆ ಬೇರೆ ಸೃಷ್ಟಿಯಾಗಿ ಯಾಕೆ ಇದ್ದಿರಬಾರದು. ಯವದ್ವೀಪದ Pithicene throgons ಜಾತಿಯ ಮನುಷ್ಯನು ಪ್ರಥಮ ಅವತಾರವೆಂದೂ ಪೂರ್ವದಲ್ಲಿ ಆಸ್ಯಾಖಂಡದ ಹೊಂದಿಕೊಂಡಿದ್ದುವೆಂದೂ ದಕ್ಷಿಣಭಾಗವು ಈ ದ್ವೀಪವೂ ತಿಳಿಯಬರುತ್ತದೆ. ಆದರೆ ಮಾನವ ಜನ್ಮಾವತಾರವು miocene ಕಾಲದಲ್ಲಿ ಆಯಿತೆಂದು ಮೇಲೆ ಹೇಳಿರುವೆವು. ಈ ಕಾಲವು ಹಿಮಪ್ರಳಯಕ್ಕೆ ಮುಂಚಿನದೆಂದು ತಿಳಿವುದು. ಋಗ್ವೇದವನ್ನು ವಿಮರ್ಶಿಸಿದರೆ ಹಿಮವತ್ಪರ್ವತದ ತಪ್ಪಲಲ್ಲಿರುವ ಸಪ್ತಸಿಂಧು ಪ್ರದೇಶವೇ ಬಹು ಪುರಾತನವಾದ ಪುಣ್ಯಭೂಮಿಯೆಂತಲೂ ಮತ್ತು ಪುರಾತನ ಆರ್ಯರೊಂದಿಗೆ ಹೊಡೆದಾಡಿದ ದಸ್ಯುಗಳು, ಈ ಯವದ್ವೀಪದ ನಿವಾಸಿಗಳಾಗಿರಬಹುದೆಂತಲೂ ಕೆಲವರು ಅಭಿಪ್ರಾಯಪಡುತ್ತಾರಲ್ಲದೆ ಮನುಷ್ಯನು ಅಲ್ಲಿಯೇ ಅವತರಿಸಿದಂತೆ ಹೇಳುತ್ತಾರೆ. ಆದುದರಿಂದ ಸಪ್ತಸಿಂಧುವೇ ಮಾನವ ಜನ್ಮದ ಮೂಲಸ್ಥಾನದ ಪ್ರಥಮ ರಂಗವೆಂದು ನಿರ್ಧರಿಸಿದಂತೆ ಆಯಿತು. *

## ಪೂರ್ವಕಲ್ಪದ ಜನಾಂಗ

ಪಾಶ್ಚಿಮಾತ್ಯರು ತಮ್ಮ ಗ್ರಂಥಗಳಲ್ಲಿ ಈ ವಿಷಯವಾಗಿ ಬರೆದಿರುವುದೆಲ್ಲವೂ ಬಹುಮಟ್ಟಿಗೆ ಯೂರೋಪ್ ಮತ್ತು ಇಂಗ್ಲೆಂಡಿಗೆ ಅನ್ವಯಿಸುತ್ತದೆ. ಅಲ್ಲದೆ ತಮ್ಮ ದೇಶದ ಪರಿಸ್ಥಿತಿಯನ್ನು ಪರಾಮರ್ಶಿಸಿ ಅದರಂತೆಯೇ ಮಿಕ್ಕ ದೇಶಗಳಲ್ಲಿಯೂ ಇದ್ದಿರಬೇಕೆಂದು ಪಟ್ಟುಹಿಡಿಯುತ್ತಾರೆ. ಹೇಗೆಂದರೆ ಹಿಮಪ್ರಳಯವು ಇಡೀ ಪ್ರಪಂಚವನ್ನು ಒಂದೇ ಕಾಲದಲ್ಲಿ ಆವರಿಸಿತೆಂತಲೂ, ಮಾನವ ಅವತಾರವು ಒಂದೇ ಕಾಲದಲ್ಲಿ ನಡೆಯಿತೆಂತಲೂ Paleothic, Neolithic, Bronze-age, Iron age, ಎಂದು ಜನಾಂಗದ ನಾಗರಿಕತೆಗಳು ಈ ಕ್ರಮವನ್ನು ಅನುಸರಿಸಿದುವೆಂತಲೂ ಹೇಳುತ್ತಾರೆ. ಈ ಬಗ್ಗೆ ಶಾಸ್ತ್ರ ಪರಿಶೋಧಕರು ಪ್ರಳಯಗಳು ಯೂರೋಪಿನಲ್ಲಿ ಐದು ಆಗಿಹೋಗಿರುವೆಂತಲೂ, ಹಿಂದುಸ್ಥಾನದಲ್ಲಿ ಮೂರು ಪ್ರಳಯಗಳು ನಡೆದುವೆಂತಲೂ ನಿಶ್ಚಯಿಸಿದ್ದಾರೆ. ನಮ್ಮ ಸನಾತನ ಧರ್ಮಶಾಸ್ತ್ರಕಾರರು ಅನೇಕ ಪ್ರಳಯಗಳು ಆಗಿಹೋದುವೆಂದು ಮತ್ತು ಬ್ರಹ್ಮನಿಗೆ ಒಂದು ದಿನವಾಗುತ್ತಲೆ ಮತ್ತೊಂದು ಪ್ರಳಯವಾಗುತ್ತದೆಯೆಂತಲೂ ಹೇಳುತ್ತಾರೆ. ಅಲ್ಲದೆ ಬೈಬಲಿ ( Bible ) ನಲ್ಲಿ ಹೇಳಿರುವ ಪ್ರಳಯವು (Egypt ಮತ್ತೂ Babilonia) ಈಜಿಪ್ತ ಮತ್ತೂ ಬಾಬಿಲೋನಿಯಾ ದೇಶದ ಚರಿತ್ರೆಗಳಲ್ಲಿ ಹೇಳಿದ ಪ್ರಳಯಗಳು ಅಥರ್ವವೇದದಲ್ಲಿಯೂ, ಮತ್ಸ್ಯಾದಿ ಪುರಾಣಗಳಲ್ಲಿಯೂ, ಬರೆದಿರುವ ಪ್ರಳಯಗಳು ಒಂದೇ ಕಾಲದಲ್ಲಿ ನಡೆದಂತೆ ನಿರ್ಧರವಾಗಿದ್ದರೂ, ಹಿಂದುಸ್ಥಾನದಲ್ಲಿ ಉಂಟಾದ ಪ್ರಳಯವು ಸಮುದ್ರ ಉಕ್ಕುವುದರಿಂದ ಉಂಟಾದ ಜಲಪ್ರಳಯವೆಂತಲೂ ಈಜಿಪ್ತ ಬಾಬಿಲೋನಿಯಾ, ಪಾಲೆಸ್ಟೈನ್ ದೇಶಗಳಲ್ಲಿ ಹಿಮಪ್ರಳಯ ಪರ್ಜನ್ಯ ಪ್ರಳಯಗಳೆಂತಲೂ ಈಚೀಚೆಗೆ ನಿಶ್ಚಯಿಸಲ್ಪಟ್ಟಿದೆ. [ ಇದರ ಬಗ್ಗೆ ಹೆಚ್ಚಿನ ವಿಚಾರವನ್ನು ಕೆಳಗೆ (appendix ನಲ್ಲಿ) ನೋಡಿ. ]

ಹಿಂದುಸ್ಥಾನದ ಆರ್ಯರ ಸಂಸ್ಕೃತಿ ಬಹು ಪುರಾತನವಾದುದು. ಅದರ ಪುರಾತನತ್ವಕ್ಕೆ ಕ್ರಿಶ್ಚಿಯನ್ ಸಂಸ್ಕೃತಿ ಯಾತಕ್ಕೂ ಹತ್ತದು. ಇದು ಇತ್ತೀಚಿನದು. ಆದರೆ ಈ ಜನರು ತಮ್ಮ ಬುದ್ಧಿಶಕ್ತಿಯೂ ವಿವೇಕವೂ ನಾಗರೀಕತೆಯೂ ಮತವೂ ಉಚ್ಚವಾದುದೆಂದು ಹೇಳಿಕೊಳ್ಳುವುದಲ್ಲದೆ ಇತರ ಜನಗಳ ಮನಸ್ಸನ್ನು ಇದೇ ಅಭಿಪ್ರಾಯಕ್ಕೆ ಒಡಂಬಡಿಸಲು ಯತ್ನಿಸುವರು. ದೇವರು ಆಡಂ (Adam) ಮತ್ತೂ ಈವ್ (Eve) ಅವರನ್ನು ಮೊಟ್ಟಮೊದಲು ಸೃಷ್ಟಿಸಿದನೆಂಬ ಮಾತು ಸತ್ಯವೆಂದು ಅವರು ನಂಬುವುದಲ್ಲದೆ ಎಲ್ಲರೂ ನಂಬುವಂತೆ ಪ್ರಯತ್ನವನ್ನು ಬೆಳೆಯಿಸುತ್ತಾ ಇದ್ದಾರೆ. ಇದರ ಸತ್ಯಾಸತ್ಯಗಳನ್ನು ಚರ್ಚಿಸಿ ನೋಡೋಣ.

ಜನಾಂಗದ ಪಂಗಡಗಳನ್ನು ಪ್ರತ್ಯೇಕಿಸಬೇಕಾದರೆ ಕೆಲವು ತತ್ವಗಳನ್ನು ಲಕ್ಷ್ಯದಲ್ಲಿಡಬೇಕು. ಅವು ಯಾವುವೆಂದರೆ:— ಒಂದೇ ಭಾಷೆಯನ್ನಾಡುವ ಜನಗಳನ್ನು ಒಂದೇ ಪಂಗಡದವರೆಂದು ತಿಳಿಯಕೂಡದು. ಲಕ್ಷಾಂತರ ವರ್ಷಗಳು ಕಳೆದರೂ ಅಳಿಸಿ ಹೋಗದೆ ವಂಶಪರಂಪರೆಯಾಗಿ ಬರುವ ಮೂರು

* [ ದಕ್ಷಿಣ ದ್ರಾವಿಡಕುಲದವರು ಋಗ್ವೇದದ ಆರ್ಯರಿಗಿಂತಲೂ ಪುರಾತನ ಜನಾಂಗವೆಂದೂ ಇಡೀ ಹಿಂದೂಸ್ಥಾನವನ್ನೆಲ್ಲಾ ಇವರೇ ಆಕ್ರಮಿಸಿದರೆಂದೂ ಪಾಶ್ಚಿಮಾತ್ಯರ ಮತವು. ಇದಕ್ಕೆ ಆಕ್ಷೇಪಣೆಗಳು ಇರುತ್ತವೆ. ]

ಗುಣಗಳು ಇರುತ್ತವೆ. (I) ಜನಾಂಗಗಳಲ್ಲಿ ಪರಸ್ಪರ ಸಂಕರವು ಎಷ್ಟೋ ಆವರೂ, ಎಷ್ಟೋ ವರ್ಷಗಳು ಕಳೆದರೂ ತಲೆಬುರುಡೆಯ ಆಕಾರವು ಬದಲಾಗುವುದಿಲ್ಲ. ತಲೆಬುರುಡೆಯ ಆಕಾರವನ್ನು ಕೆಲವು ಅಳತೆಗಳ ಮೇಲೆ ಗೊತ್ತು ಮಾಡುತ್ತಾರೆ. (೧) ತಲೆಬುರುಡೆಯ ಅಗಲವನ್ನು ಅಂದರೆ ಕಿವಿಯಿಂದ ಕಿವಿಯವರೆಗೆ ಅಳತೆ ಮಾಡಿ ಉದ್ದದಿಂದ ಭಾಗಿಸಿ ಬಂದ ಶೇಷವನ್ನು ನೂರರಿಂದ ಗುಣಿಸಿದರೆ ಬರುವ ಲಬ್ಧವು. (೨) ಎತ್ತರವನ್ನು ಉದ್ದದಿಂದ ಭಾಗಿಸಿ ಬರುವ ಶೇಷವು (೩) ಕಣ್ಣು ಗುಂಡಿಯ ಎತ್ತರವನ್ನು ಅದರ ಅಡ್ಡ ಗಲದಿಂದ ಭಾಗಿಸಿದ ಲಬ್ಧವು (Ratio). (೪) ಮುಖಕೋಣದ ನಿರ್ಣಯವು (Facial angle). (೫) ನಾಸಿಕದ ಅನುಪಾತವು. (೬) ಗದ್ದದ ಮೂಳೆ, ಕೈಮೂಳೆ ಮುಂತಾದ ಮೂಳೆಗಳ ಆಕಾರ. ಇವುಗಳ ಶೋಧನೆಯಿಂದ ಜನಾಂಗಗಳು Dolichiocepholic, Brachycepholic, Orthocepholich ಜನಗಳೆಂದು ವಿಭಾಗಿಸಲ್ಪಡುವುದು. (II) ತಲೆಯ ಕೂದಲಿನ ಆಕಾರ, ಎಂದರೆ, ಅದರ ದಪ್ಪವು, ದುಂಡು, ಚಪ್ಪಟೆ, ಆದರ ವರ್ಣವು. (III) ಕಣ್ಣುಬೊಂಬೆಯ ಬಂಣವು. ಈ ರೀತಿಯಾಗಿ ಈ ಮೂರು ವಿಷಯಗಳು, ಯುಗಾಂತರಗಳು ಕಳೆದರೂ ವ್ಯತ್ಯಾಸವನ್ನು ಹೊಂದುವುದಿಲ್ಲ. ಆದರೆ ಗೌರ್ನ್ಮೆಂಟ್ ಆಫ್ ಇಂಡಿಯಾ, ಸೆನ್‌ಸಸ್ ಕಮಿಷನರ್ ಆಗಿದ್ದ, ರಿಸ್ಲಿ (Risly) ಸಾಹೇಬರು ಹಿಂದುಸ್ಥಾನದ ಪೂರ್ವ ಚರಿತ್ರೆಯನ್ನು ಓದಿಕೊಂಡು ಈ ತಾತ್ಕಾಲಿಕ ಜನಗಳ ಬುರುಡೆ ಆಳತೆಯನ್ನು ನೋಡಿ ಈ ಕಪಟ ಮತವನ್ನು ಸ್ವಲ್ಪ ಮಟ್ಟಿಗೆ ಭಿನ್ನಯಿಸಿರುವರು. ಅದಕ್ಕೆ ಅವರು ಕೊಟ್ಟಿರುವ ಕಾರಣವೇನಂದರೆ ದಕ್ಷಿಣ ಹಿಂದುಸ್ಥಾನದ ಬ್ರಾಹ್ಮಣ ದ್ರಾವಿಡರಿಗೂ ಮತ್ತು ಆರ್ಯಪಂಗಡದವರಿಗೂ ರಕ್ತಸಂಬಂಧವಿದ್ದರೂ ತಲೆಯ ಬುರುಡೆಯ ಅಳತೆಯ ಅನುಪಾತದಲ್ಲಿ ಅವರವರಿಗೆ ವ್ಯತ್ಯಾಸ ಉಂಟು. ದಕ್ಷಿಣ ಹಿಂದುಸ್ಥಾನದ ಬ್ರಾಹ್ಮಣ ದ್ರಾವಿಡರ ಅನುಪಾತವು ನೀಲಗಿರಿಯ ಕೋಡರಂತೆಯೂ ಇಲ್ಲ. ಇವೆರಡಕ್ಕೂ ಮಧ್ಯಸ್ಥವಾಗಿದೆ. ಆದುದರಿಂದ ಇವರೀರ್ವರ ಸಂಕರವಾದ ಮೇಲೆ ಅನೇಕ ತಲೆಗಳು ಕಳೆದನಂತರ ಸ್ವಲ್ಪ ವ್ಯತ್ಯಾಸವಾಗಿರಬಹುದೆಂದು ನಿರ್ಧರಿಸಿದ್ದಾರೆ. ನಮ್ಮ ಹಿಂದುಸ್ಥಾನದ ಜನಾಂಗವನ್ನು ಹೀಗೆ ವಿಂಗಡಿಸಬಹುದು.

(೧) ತುರ್ಕಿ–ಇರಾನರು (Turks-Iran) (೨) ಹಿಂದೂ ಆರ್ಯರು (ಯೂರೋಪ್ ಮತ್ತು ಇಂಡಿಯಾ) ಆರ್ಯ ಪಂಗಡದವರು (೩) ಆರ್ಯ ದ್ರಾವಿಡರು (೪) ಸಿಥಿಯಾ ದ್ರಾವಿಡರು (ಮಹಾರಾಷ್ಟ್ರೀಯರು ಮುಂತಾದ ಕೆಂಗಂಣರು) (೫) ದ್ರಾವಿಡರು (ಕೋಡರು ಮುಂತಾದವರು) (೬) ಮಂಗೋಲಿಯಾ ದ್ರಾವಿಡರು (Oriya) (೭) ಮಂಗೋಲಿಯವರು (ಬಂಗಾಳಿಯರು). ಜಿ. ರೆಗ್ಗಿ (G. Ruggy) ಸಾಹೇಬರು ಈ ರೀತಿಯಾಗಿ ವಿಭಾಗಿಸಿದ್ದಾರೆ. (೧) ನೀಗ್ರೊ ಸಂಬಂಧದವರು (negritos). (೨) ಪುರಾತನ ದ್ರಾವಿಡರು (Australian & Vedda) ಆಸ್ಟ್ರೇಲಿಯನ್ ಮತ್ತು ವೆಡ್ಡ ಯಿರ ಜಾತಿ (೩) ದ್ರಾವಿಡರು (ಹಿಂದು ಆಫ್ರಿಕ ಮಿಶ್ರಜಾತಿ) (೪) ನೀಳರಾದ (Dolichocepholic) ಮೆಸಪೊಟೋಮಿಯ ಸಂಬಂಧದವರು) (೫) Dolichocepholic ಆರ್ಯರು ಹಿಂಸೂ ಯೂರೋಪ್ ಜನಗಳು. (೬) (Brachicepholic) ಬಿಳೀ ಚರ್ಮದ ಆರ್ಯರು. ಈ ವಿಭಾಗಗಳಲ್ಲಿ ಕೆಲವು ತೊಡಕುಗಳನ್ನು ಪರಿಶೀಲಿಸಬೇಕು:— (*a*) ತೋಡರು ಯಾವ ಗುಂಪಿಗೂ ಸೇರಿಸಲ್ಪಟ್ಟಿಲ್ಲ. (*b*) ಹಿಂದುಸ್ಥಾನವು ಆದಿ ದ್ರಾವಿಡರು, ಮತ್ತು ತೋಡರು ಇವರಿಂದ ತುಂಬಿದ್ದಾಗ ಇಂಡಿಯಾ ಭೂಪ್ರದೇಶವು ಈಗಿನ ಆಕಾರಗೊಂಡಿರಲಿಲ್ಲ. ದಕ್ಷಿಣ ಹಿಂದುಸ್ಥಾನ, ಆಫ್ರಿಕ್ ಆಸ್ಟ್ರೇಲಿಯಾ ದೇಶಗಳು ಒಂದೇ ಖಂಡವಾಗಿತ್ತಾದುದರಿಂದ ಮೇಲಿನ ೧, ೨, ೩. ಭಾಗಗಳನ್ನು ಒಟ್ಟುಕೂಡಿಸಿ ದಕ್ಷಿಣಾರ್ಯರೆಂದು ಕರೆಯಬಹುದು. (*c*) ಮೆಸೊಪೊಟಮಿಯಾಕ್ಕೂ (Messopotamia) ಇಂಡಿಯಾಕ್ಕೂ ಜನಸಂಬಂಧವನ್ನು ಕಲ್ಪಿಸಿರುವುದು ಅಂದರೆ, ಮೆಸಪೊಟೇಮಿಯಾ ಜನರು ಇಂಡಿಯಾಕ್ಕೆ ಹೊಸ ಜಾತಿಯೆಂದು ಹೇಳುವುದು ಅಕ್ಷೇಪಣೀಯವು. ಮೆಸೊಪೊಟೇಮಿಯಾ ಜನರು ಮತ್ತು ಸಾಲಮನ್ ದೊರೆಯ ಕಾಲದ ನಿವಾಸಿಗಳು ದಕ್ಷಿಣ ಹಿಂದುಸ್ಥಾನದೊಂದಿಗೆ ಬಹಳ ವ್ಯಾಪಾರಮಾಡುತ್ತಿದ್ದರು, ಚಾಲ್ಡನ್ ಜನಗಳು ಫಿನೀಷಿಯನ್ ಜನಗಳು ನಮ್ಮ ದೇಶದ ಪೂರ್ವ ನಿವಾಸಿನಿಗಳಾದ ಚೋಳರು ಮತ್ತು ಋಗ್ವೇದದಲ್ಲಿ ಉಕ್ತರಾದ ವಾಣಿ(ವಾಣೀಕರು ಅಥವಾ ಸೆಟ್ಟರು) ಆಗಿರಬಹುದು.

ಮಿತ್ರರವರು ತಮ್ಮ (Pre-historic India) ಎಂಬ ಪುಸ್ತಕದಲ್ಲಿ ಈ ರೀತಿಯಾಗಿ ಪೂರ್ವಜನರ ಪಟ್ಟಿಯನ್ನು ವೃಕ್ಷ ರೂಪದಿಂದ ಬರೆದಿದ್ದಾರೆ.




ಇವಲ್ಲದೆ ಪುರಾತನ ಜನಾಂಗವನ್ನು ಅವರವರ ಸುಧಾರಣೆಯನ್ನು ಅನುಸರಿಸಿ ವಿಭಾಗಿಸಿದ್ದಾರೆ. ಮನುಷ್ಯಾವತಾರವು ಏಕ ಸೃಷ್ಟಿಯಿಂದಲೋ ಅನೇಕ ಸೃಷ್ಟಿಯಿಂದಲೋ ಪ್ರಾರಂಭಿಸಿದ ನಂತರ ಸೃಷ್ಟಿಕರ್ತನ ಕಟ್ಟಳೆಗೆ ಎಲ್ಲಾ ಜೀವಿಗಳು ಒಳಗಾದುವು. ಇದು ದ್ವಂದ್ವಮುಖವಾದುದು. (೧) ಆತ್ಮರಕ್ಷಣ ಮತ್ತು (೨) ಜಾತಿರಕ್ಷಣ ಮಾಡಿಕೊಳ್ಳುವುದು. ಈ ಮೂಲ ಸ್ವಭಾವಗಳಿಗೆ ಅನುಗುಣವಾಗಿ ಉದರಪೋಷಣೆಯೂ ಸ್ತ್ರೀಜಾತಿ ರಕ್ಷಣೆಯೂ ಪ್ರಥಮ ಧರ್ಮಗಳಾಗಿ ಪರಿವರ್ತಿಸಿದುವು. ಉದರಭರಣಕ್ಕಾಗಿ ಶೂನ್ಯ ಬುದ್ಧಿವುಳ್ಳವರಾಗಿದ್ದ ನಮ್ಮ ಆದಿಪುರುಷರಲ್ಲಿ ಸ್ತ್ರೀಯರು ಗೆಡ್ಡೆಗೆಣಸು ಕಾಡು ಧಾನ್ಯಗಳನ್ನು ಒದಗಿಸುತ್ತಿದ್ದರು, ಪುರುಷರು ಮೃಗಗಳ ಬೇಟೆ ಆಡಿ ಮಾಂಸವನ್ನು ಒದಗಿಸುತ್ತಿದ್ದರು. ಈ ಧಾನ್ಯಗಳನ್ನು ತರುವಾಗ ದಾರಿಯಲ್ಲಿ ಜಾರಿಬಿದ್ದ ಕಾಳುಗಳು ಮಳೆ ಬಿದ್ದನಂತರ, ಮೊಳೆತು ಸಸ್ಯಗಳಾಗಿ ಪುನಃ ಕಾಳುಗಳಾದುದನ್ನು ನೋಡಿ ಅದರಿಂದ ಕೃಷಿಶಾಸ್ತ್ರವನ್ನು ಕಲಿತು ಉಪಯೋಗಕ್ಕೆ ಅನುಗೊಳಿಸಿದರು. ಇವರು ತಮ್ಮ ಆಯುಧಗಳನ್ನು ಮೊದಲು ಕಲ್ಲಿನಿಂದಲೂ ನಂತರ ತಾಮ್ರ, ಕಂಚು, ಕಬ್ಬಿಣ ಈ ಕ್ರಮವನ್ನು ಅನುಸರಿಸಿ ಮಾಡಲಾರಂಭಿಸಿದರು.

(ಸಶೇಷ)

---

# ಚಿತ್ರದುರ್ಗದ ಇತಿಹಾಸ

ಲೇಖಕ:—ಶ್ರೀ. ಶ್ರೀನಿವಾಸ ಜೋಯಿಸ ಪ್ಲೀಡರ ಚಿತ್ರದುರ್ಗ

ಆನೆಯ ಸಂಚಿಕೆಯಿಂದ ಮುಂದುವರಿದುದು

**ಚಂದ್ರವಳ್ಳಿ:—**

ಮೇಲುದುರ್ಗದ ಪಶ್ಚಿಮ ದಿಕ್ಕಿನಲ್ಲಿರುವ ಬೈಲುಪ್ರದೇಶ ವಲ್ಲಿ ಚಂದ್ರವಳ್ಳಿಯೆಂಬ ಪುರಾತನ ಪಟ್ಟಣದ ಗುರುತುಗಳಿವೆ. ಈ ಪಟ್ಟಣವು ಕ್ರಿ. ಪೂ. ೨ ನೆಯ ಶತಮಾನಕ್ಕಿಂತಲೂ ಮುಂಚಿನಿಂದ ಪ್ರಸಿದ್ಧವಾದ ನಗರವಾಗಿತ್ತೆಂದು ತಿಳಿಯಬರುತ್ತದೆ. ಈ ಸ್ಥಳವು ಚಂದ್ರಹಾಸನ ಸಾಕುತಂದೆಯಾದ ಕುಳಿಂದನ ರಾಜಧಾನಿ ಚಂದನಾವತಿಯಾಗಿರಬಹುದೆಂಬುದಕ್ಕೆ ತಕ್ಕ ಆಧಾರಗಳಿರುತ್ತವೆ. * ಈ ಪಟ್ಟಣವು ಉತ್ತರದಲ್ಲಿರುವ ಹನುಮಂತದೇವರ ಗುಡಿಯಿಂದ ದಕ್ಷಿಣದಲ್ಲಿರುವ ಅಂಕಳೀಮಠದವರೆಗೂ ಹಬ್ಬಿತ್ತು. ಪೂರ್ವಕ್ಕೆ ಬೆಟ್ಟವಿದೆ. ಪಶ್ಚಿಮಕ್ಕೆ ಎಷ್ಟು ದೂರದವರೆಗೆ ಹಬ್ಬಿತ್ತೆಂದು ಹೇಳಲು ಸಾಧ್ಯವಿಲ್ಲ. ಆದರೆ ನೇರಲಗೊಂದಿ, ಹುಲಿಗೊಂದಿ ಬಸವನಗೊಂದಿ ಮತ್ತು ಬರಲಗೊಂದಿ ಎಂಬ ನಾಲ್ಕು ಮೂಲೆಗಳವರೆಗೂ ಈ ಪಟ್ಟಣವು ವಿಸ್ತರಿಸಿತ್ತೆಂದು ತಿಳಿಯಬರುತ್ತದೆ. † ಗೊಂದಿ ಎಂದರೆ ಮೂಲೆ, ಸಂದಿ ಅಥವ ಬೀದಿ ಎಂದರ್ಥವಾಗುತ್ತದೆ. ನೇರಲಗೊಂದಿ ಪೂರ್ವದಿಕ್ಕಿನಲ್ಲಿರುವುದು. ಇಲ್ಲಿ ನೇರಲದೊಣೆ ಎಂಬ ಪ್ರಸಿದ್ಧವಾದ ಸಣ್ಣ ಚಿಲುಮೆ ಇರುತ್ತದೆ. ಹುಲಿಗೊಂದಿ ದಕ್ಷಿಣದಲ್ಲಿರುವುದು. ಪ್ರಕೃತದಲ್ಲಿ ಇಲ್ಲಿ ವೀರಶೈವಮಠವೂ, ಒಂದು ಪುರಾತನ ಗವಿಯೂ, ದೇವಸ್ಥಾನಗಳೂ ಇರುವುವು. ಬಸವನಗೊಂದಿ ಚೋಳಘಟ್ಟದ ವಾಯುವ್ಯಮೂಲೆಯಲ್ಲಿ ಎಂದರೆ ಈಗಿನ ಚಿತ್ರದುರ್ಗದ ಸಿಲ್ದಾಣದ ಬಳಿ ಇರುವುದು. ಬರಲಗೊಂದಿ ಬರಗೇರಮ್ಮನ ದೇವಸ್ಥಾನ ಮತ್ತು ಬರಗೆರೆಗಳ ಮಧ್ಯದಲ್ಲಿದ್ದಿರಬಹುದು. ಈ ನಾಲ್ಕು ಸ್ಥಳಗಳವರೆಗೂ ಚಂದ್ರವಳ್ಳಿ ವಿಸ್ತರಿಸಿತ್ತೆಂದು ತಿಳಿಯಬರುತ್ತೆ.

ಈ ಪ್ರದೇಶದಲ್ಲಿ ಹರಿಯುತ್ತಿರುವ ಹಳ್ಳದಲ್ಲಿ ಆಗಾಗ ಬೆಳ್ಳಿ ಮತ್ತು ಸೀಸದ ನಾಣ್ಯಗಳು ದೊರೆತಿರುತ್ತವೆ. ಮೈಸೂರು ಶಾಸನದ ಇಲಾಖೆಯವರು ಕ್ರಿ. ಶ. ೧೯೦೮ರಲ್ಲಿಯೂ ೧೯೨೮ರಲ್ಲಿಯೂ ಈ ಸ್ಥಳವನ್ನು ಶೋಧನೆಮಾಡಿರುವರು. ೨ನೆಯ ಪರಿಶೋಧನೆಯ ಫಲಿತಾಂಶವಿನ್ನೂ ಹೊರಪಟ್ಟಿಲ್ಲ.

ಇಲ್ಲಿ ದೊರೆತಿರುವ ನಾಣ್ಯಗಳಲ್ಲಿ ಒಂದರಲ್ಲಿ ಪೌಲಮಿಯ ಹೆಸರು ಅಂಕಿತವಾಗಿತ್ತು. ಆಂಧ್ರ ಭೃತ್ಯರ ಕಾಲದಲ್ಲಿ ಅವರ ಪ್ರತಿನಿಧಿಯೊಬ್ಬನು ಚಂಪ್ರವಳ್ಳಿಯಲ್ಲಿ ಆಳುತ್ತಿದ್ದಂತೆ ಅಲ್ಲಿ ದೊರೆತ ನಾಣ್ಯಗಳಿಂದ ತಿಳಿದುಬರುತ್ತದೆ. ಈ ನಾಣ್ಯಗಳು ಸೀಸದವು. ಇವುಗಳೊಳಗೆ ರಾಜರ ನಾಣ್ಯಗಳಲ್ಲಿ, ಚೈತ್ಯವೂ ಬೋಧೀವೃಕ್ಷವೂ ಅಂಕಿತವಾಗಿರುವುವಲ್ಲದೆ ಮುಡಾನಂದ ಚೆಟುಕಟಾನಂದ ಎಂಬ ಹೆಸರುಗಳು ದೊರೆಯುತ್ತವೆ. ಪ್ರತಿನಿಧಿಯ ನಾಣ್ಯಗಳಲ್ಲಿ ಅವನ ಹೆಸರೂ, ವೃಷಭವೂ ಕೆತ್ತಲ್ಪಟ್ಟಿವೆ. ಇದೇ ಸ್ಥಳದಲ್ಲಿ ಕ್ರಿ. ಪೂ. ೨ ನೆಯ ಶತಮಾನದಲ್ಲಿ ಆಳಿದ ಹನ್‌ವುತಿ ಎಂಬ ಚೀನದೇಶದ ಚಕ್ರವರ್ತಿಯ ಹಿತ್ತಾಳೆಯ ನಾಣ್ಯವೂ, ಕ್ರಿ. ಶ. ೧೪ರಲ್ಲಿ ಸತ್ತ ಆಗಸ್ಟಸ್ ಎಂಬ ರೋಮನ್ ಚಕ್ರವರ್ತಿಯ ಡಿನೇರಿಯಸ್ ಎಂಬ ಬೆಳ್ಳಿಯ ನಾಣ್ಯಗಳೂ ದೊರೆತುವು. ಇದರಿಂದ ಪೂರ್ವಕಾಲದಲ್ಲಿ ಕನ್ನಡ ನಾಡಿನ ವಾಣಿಜ್ಯವು ಎಷ್ಟರ ಮಟ್ಟಿಗೆ ವ್ಯಾಪಿಸಿದ್ದಿತು ಎಂಬಂಶವು ಸ್ವಲ್ಪ ಮಟ್ಟಿಗೆ ಊಹಿಸಬಹುದಾಗಿದೆ. § ಚೀನಾದೇಶದ ವರ್ತಕರು ಕ್ಯಾಂಟನ್ ರೇವುಪಟ್ಟಣದಿಂದ ಇಂಡಿಯಾ ದೇಶಕ್ಕೂ ಸಿಂಹಳದ್ವೀಪಕ್ಕೂ ವ್ಯಾಪಾರಕ್ಕಾಗಿ ಬರುತ್ತಿದ್ದರು. ಇವರು ಕಮ್ಮಿ ಬೆಲೆಯ ನಾಣ್ಯಗಳನ್ನು ತಮ್ಮ ಸಂಗಡ ತಂದಿರಬಹುದು.

---

* ಈ ಲೇಖಕನ "ಚಿತ್ರದುರ್ಗವೇ ಚಂದ್ರಹಾಸನ ಊರು" ಎಂಬ ಲೇಖನವನ್ನು ನೋಡಿ. ಜಯಕರ್ನಾಟಕ ವರ್ಷ ೫ ಸಂ. ೭ ಪುಟ ೪೦೬-೪೧೨.

† Mysore gazetter by Mr- B. L. Rice. Vol. 1I Page 518. ( revisedtidition )

§ ನಾಲ್ಕನೆಯ ಸಾಹಿತ್ಯಸಮ್ಮೇಲನದ ಅಧ್ಯಕ್ಷರಾಗಿದ್ದ ಶ್ರೀಯುತ ಆರ್. ನರಸಿಂಹಾಚಾರ್ಯರವರ ಭಾಷಣದಿಂದ ಆರಿಸಿದ್ದು.

ಇಲ್ಲಿ ದೊರೆತಿರುವ ನಾಣ್ಯಗಳೂ ಕಲ್ಲಿನ ಆಯುಧಗಳೂ, ಮಡಕೆ ತುಂಡುಗಳೂ, ಮಣಿಗಳೂ, ಇಟ್ಟಿಗೆ, ಹಂಚುಗಳೂ ಮೊದಲಾದುವುಗಳಿಂದ ಚಂದ್ರವಳ್ಳಿ ಪುರಾತನವಾದ ನಾಗರಿಕರ ವಾಸಸ್ಥಳವಾಗಿತ್ತೆಂದೂ, ರಾಜಧಾನಿಯೋ ಅಥವ ಪ್ರತಿನಿಧಿಯ ಸ್ಥಳವೋ ಆಗಿರಬಹುದೆಂದೂ ಊಹಿಸಬಹುದಾಗಿರುತ್ತೆ.

ಚಂದ್ರವಳ್ಳಿಯ ನಾಡಗೌಡರ ವಂಶಿಕರು ಈಗಲೂ ಚಿತ್ರದುರ್ಗದಲ್ಲಿರುವರು. *

**ಸೂಳ್ಗಲ್ಲು:—**

ಕ್ರಿ. ಶ. ಹತ್ತು, ಹನ್ನೊಂದು, ಹನ್ನೆರಡನೆಯ ಶತಮಾನಗಳ ಶಾಸನಗಳಲ್ಲಿ † ಚಿತ್ರದುರ್ಗಕ್ಕೆ ಸೂಳ್ಗಲ್ಲು ಎಂದೂ, ಈ ರಾಜ್ಯಕ್ಕೆ ಸೂಳ್ಗಲ್ಲುನಾಡು ಎಂದೂ ( ಸೂಳ್ಗಲ್ಲೆಪ್ಪತ್ತು ರಾಜ್ಯ ) ಉಲ್ಲೇಖಿಸಲ್ಪಟ್ಟಿರುವುದು. ಇದೇಕಾಲದ ಕೆಲವು ಶಾಸನಗಳಲ್ಲಿ ಬೆಮ್ಮತ್ತನ ಕಲ್ಲುಎಂತಲೂ ಉಕ್ತವಾಗಿರುವುದು. ಬಹುಶಃ ಏಕಕಾಲದಲ್ಲಿ ಈ ಊರಿಗೆ ಈ ಎರಡೂ ಹೆಸರುಗಳು ಇದ್ದಿರಬಹುದು, ಅಥವಾ ಬೆಟ್ಟದ ಸಮೀಪದಲ್ಲಿಯೇ ಈ ಎರಡು ಊರುಗಳು ಇರಬಹುದು. ಹುಲೇಗೊಂದಿಯ ಸಿದ್ಧೇಶ್ವರ ದೇವಸ್ಥಾನದ ಹಿಂಭಾಗದಲ್ಲಿ ಬಿದ್ದಿರುವ ಶಿಲಾಶಾಸನದಲ್ಲಿ " ಸೂಳ್ಗಲ್ಲು ತೀರ್ಥದ ಭೀಮೇಶ್ವರ ಹಿಡಿಂಬೇಶ್ವರವಾದಿಯಾಗಲ್ಲಿ ಯುಳ್ಳ ಸೇವರ್ಗೆಲ್ಲ " ಎಂದು ಮುಂತಾಗಿ ಹೇಳಿರುವುದರಿಂದ ಈ ದೇವಸ್ಥಾನಗಳಿರುವ ಸ್ಥಳವೇ ಸೂಳ್ಗಲ್ಲು ಎಂದು ವಿದಿತವಾಗುತ್ತೆ. ಹಿಡಿಂಬೇಶ್ವರ ದೇವಸ್ಥಾನವು ಮೇಲುದುರ್ಗದಮೇಲೆ ಇರುವುದು. ಭೀಮೇಶ್ವರ § ಮೊದಲಾದ ಪಂಚಲಿಂಗ ದೇವರ ಗುಡಿಯೂ ಈ ಶಾಸನವು ಬಿದ್ದಿರುವ ಸ್ಥಳಕ್ಕೆ ಒಂದು ನೂರು ಗಜದಷ್ಟು ಸಮೀಪದಲ್ಲಿರುವುದು. ಬಹುಶಃ ಈ ಶಾಸನವು ಪಂಚಲಿಂಗದೇವರ ಗುಡಿಯಲ್ಲಿ ಸ್ಥಾಪಿಸಲ್ಪಟ್ಟು ಯಾವ ಕಾರಣದಿಂದಲೋ ಈಗಿರುವ ಸ್ಥಳಕ್ಕೆ ತರಲ್ಪಟ್ಟಿರಬಹುದು.

**ಬೆಮ್ಮತ್ತನೂರು:—**

ಮೇಲುದುರ್ಗದಲ್ಲಿಯೂ, ಮತ್ತು ಇದೇ ಬೆಟ್ಟದ ಸಾಲಿನಲ್ಲಿಯೂ ಇರುವ ಶಿಖರಗಳಿಗೂ, ಕೋಡುಗಲ್ಲುಗಳಿಗೂ, ಒಂದೊಂದು ಹೆಸರು ಇರುವುದು. ಕಲ್ಲು ಎಂಬ ಶಬ್ದದಿಂದಂತ್ಯವಾದ ಹೆಸರುಗಳನೇಕವಿರುವವು. ‡ ಇವುಗಳಲ್ಲೊಂದಾದ ಬೆಮ್ಮಂತನ ಕಲ್ಲು ಎಂಬುದರಿಂದ ಬೆಮ್ಮತ್ತನ ಕಲ್ಲು ನಗರವೆಂದು ಹೆಸರು ಬಂದಿರುತ್ತದೆ. × ಕ್ರಿ. ಶ. ೧೦ನೆಯ ಶತಮಾನದಿಂದೀಚೆಗಿನ ಶಾಸನಗಳಲ್ಲಿ ಚಿತ್ರದುರ್ಗಕ್ಕೆ ಬೆಮ್ಮತ್ತನ ಕಲ್ಲು ಎಂದು ಉಕ್ತವಾಗಿರುತ್ತೆ. + ಕೆಲವೆಡೆಗಳಲ್ಲಿ ಬೆಮ್ಮಚ್ಚನೂರು ಎಂತಲೂ ಹೇಳಲ್ಪಟ್ಟಿರುವುದು. = ಬೆಮ್ಮತ್ತನ ಕಲ್ಲು ನಗರವು ಚಾಲುಕ್ಯ ಮತ್ತು ರಾಷ್ಟ್ರಕೂಟರ ಕಾಲದಲ್ಲಿ ಸಾಮಂತ ರಾಜಧಾನಿಯಾಗಿಯೂ, ಹೊಯಿಸಳರು ಮತ್ತು ವಿಜಯನಗರದರಸರ ಕಾಲದಲ್ಲಿ ದಂಡನಾಯಕರು ಮತ್ತು ಮಂಡಲೇಶ್ವರರಿಗೆ ರಾಜಧಾನಿಯಾಗಿಯೂ ಇತ್ತು. ತಾಳಿಕೋಟೆ ಯುದ್ಧವಾದ ನಂತರ ಕಾಮಗೇರಿ ವಂಶದ ಮತ್ತಿ ತಿಮ್ಮಣ್ಣನಾಯಕನು ಬೆಮ್ಮತ್ತನ ಕಲ್ಲುನಾಡಿಗೆ ನಾಯಕನಾಗಿ ನೇಮಿಸಲ್ಪಟ್ಟನು, ಕೆಲವು ಕಾಲಾನಂತರದಲ್ಲಿ ಈ ವಂಶದ ಪಾಳೆಯಗಾರರು ಸ್ವತಂತ್ರತೆಯನ್ನು ಹೊಂದಿ ರಾಜ ಎಂಬ ಬಿರುದುಪಡೆದು ಚಿತ್ರದುರ್ಗ ರಾಜಧಾನಿಯಲ್ಲಿ ಆಳಿರುತ್ತಾರೆ.

---

* ಚಿತ್ರದುರ್ಗದ ಪೌರಸಭೆಯ ಸದಸ್ಯರಾದ ಮ|| ಹುಚ್ಚ ಹನುಮನಾಯ್ಕರು ಚಂದ್ರವಳ್ಳಿಯ ಗೌಡರ ವಂಶಸ್ಥರೆಂದು ತಿಳಿಯಬರುತ್ತದೆ

† (೧) ಶಿಲಾಶಾಸನಗಳು ಚಿತ್ರದುರ್ಗ ೨೪, ೩೪, ೭೪, ೮೨.

§ (೨) ಪಂಚಲಿಂಗ ದೇವರ ಗುಡಿಯಿಂದ ನೆಟ್ಟನೆಯ ಮಾರ್ಗದಿಂದ ೪ ಮೈಲಿಯೊಳಗೆ ಇರುವ ರಂಗಪ್ಪನ ಗುಡ್ಡದಲ್ಲಿ ಪುರಾತನವಾದ ಭೀಮೇಶ್ವರ ಗುಡಿ ಇರುವುದು. ಇದರ ಬಳಿಯ ಶಿಲಾಶಾಸನದಲ್ಲಿಯೂ ( ಚಿ ೨೪ ) ಸೂಳ್ಗಲ್ಲುನಾಡು ಎಂದು ಉಕ್ತವಾಗಿರುವುದು. ಆದರೆ ಈ ಗುಡ್ಡದ ಸಮೀಪದಲ್ಲಿರುವ ಇತರ ಯಾವ ಸ್ಥಳವೂ ರಾಜಧಾನಿಯಾಗಿದ್ದ ಸಂಗತಿ ಹೊರಪಟ್ಟಿರುವುದಿಲ್ಲ.

‡ ೧ ಸೀಳ್ಗಲ್ಲು, ಹಣತೆಯ ಕಲ್ಲು, ಕಿನ್ನರಿಗಲ್ಲು, ಚಿತ್ತೆ ಕಲ್ಲು, ಈರಣ್ಣನ ಕಲ್ಲು, ಹೆಬ್ಬುಲಿ ಕಲ್ಲು, ಬೆಮ್ಮಂತನ ಕಲ್ಲು, ಹುರುಳಿಬೀಜ ಕಲ್ಲು, ಚೊಟಕದ ಕಲ್ಲು, ಸಣ್ಣಬಿದಿರು ಕಲ್ಲು, ಹೆಬ್ಬಿದಿರು ಕಲ್ಲು, ಕೋಡಿಹನುಮಪ್ಪನ ಕಲ್ಲು, ಭೀಮನ ಕಲ್ಲು, ಹಿಡಿಂಬನ ಕಲ್ಲು ಇತ್ಯಾದಿ.

× ೨ ತಿಮ್ಮಣ್ಣನಾಯ್ಕನಕೆರೆಯ ಬಲ ಭಾಗದ ತೂಬಿನಿಂದ ಪ್ರಾರಂಭವಾಗುವ ಗುಡ್ಡಕ್ಕೆ ಬೆಮ್ಮಂತನ ಕಲ್ಲು, ಎಂದು ಹೆಸರು. ಈಗ ಈ ಗುಡ್ಡಕ್ಕೆ ಅರುಣಬಕೇರಿ ಗುಡ್ಡವೆಂದೂ, ಇದರ ತುದಿಯಲ್ಲಿರುವ ಬಕೇರಿಗೆ ಅರುಣಬಕೇರಿ ಅಥವ ಕೆಂಬಕೇರಿ (ಲಾಲ್ ಬಕೇರಿ) ಎಂದೂ ಹೆಸರು.

+ ೩ ಚಿತ್ರದುರ್ಗ. ೧, ೨, ೩, ೪, ೬ ೧೨, ೧೩, ೧೪, ೩೨, ೩೭, ೪೫ ೫೩, ಮತ್ತು ೬೭.

= ೪ ಚಿತ್ರದುರ್ಗ. ೩೩, ೩೪, ೭೬.

**ಪೆರುಮಾಳಿಪುರ-ಬ್ರಹ್ಮಪುರಿಗಿರಿ:—**

ಹೊಯಿಸಳಚಕ್ರವರ್ತಿ ಶ್ರೀ ವೀರನಾರಸಿಂಹದೇವನು ರಾಜಧಾನಿ ದೋರಸಮುದ್ರದಲ್ಲಿ ರಾಜ್ಯಭಾರ ಮಾಡುತ್ತಿರುವಾಗ ಪೆರುಮಾಳೆ ದೇವದಂಡನಾಯಕನು ಮಹಾ ಪ್ರಧಾನನಾಗಿದ್ದನು. ಈತನು ಬೆಮ್ಮತ್ತನೂರಿನಲ್ಲಿರುವ ದೇವಸ್ಥಾನಗಳಿಗೂ ಬ್ರಾಹ್ಮಣರಿಗೂ ಮುಂತಾಗಿ, ಭೂದಾನಮಾಡಿ ತನ್ನ ಹೆಸರಿನಲ್ಲಿ ಈ ಊರಿಗೆ ಪಿರುಮಾಳೆ ಪುರವೆಂದು ಹೆಸರಿಟ್ಟು, ಬ್ರಾಹ್ಮಣರಿಗೆ ಅಗ್ರಹಾರವನ್ನು ಮಾಡಿ ಬ್ರಹ್ಮಪುರಿ ಎಂತ ಕರೆದನು. ಈ ಪೆರುಮಾಳೆಮಂತ್ರಿ ತಾನು ಕ್ರಯವಾಗಿ ಕೊಂಡ ಕುರುಬರ ಕಾಳೆಯನ ಕೆರೆಯನ್ನು ತನ್ನ ಹೆಸರಿನಲ್ಲಿ ಪೆರುಮಾಳೆ ಸಮುದ್ರವೆಂದು ಹೊಸದಾಗಿ ಕಟ್ಟಿಸಿದನು. *

**ಚಿನ್ನನಗಿರಿ:—**

ಪಾಳೆಯಗಾರರ ಒಂದು ಶಾಸನದಲ್ಲಿ ಮಾತ್ರ ಚಿತ್ರದುರ್ಗಕ್ಕೆ ಚಿನ್ನನಗಿರಿ ದುರ್ಗವೆಂದು ಉಕ್ತವಾಗಿರುವುದು. †

**ಚಿತ್ರದುರ್ಗ:—**

ಪಾಳೆಯಗಾರರ ಕಾಲದಲ್ಲಿ ಈ ಪಟ್ಟಣಕ್ಕೆ ಚಿತ್ರದುರ್ಗವೆಂದು ಹೆಸರು ಬಂದಿರುತ್ತದೆ. ಈ ರೀತಿ ಹೆಸರು ಬರಲು ಸರಿಯಾದ ಕಾರಣವೇನೊ ಗೊತ್ತಿರುವುದಿಲ್ಲ. ಆದರೆ ಕೆಲವು ಊಹೆಗಳನ್ನು ಮಾತ್ರ ಸೂಚಿಸಬಹುದಾಗಿರುತ್ತದೆ.

ಅಂಕಳೀಮಠದ ಸಮೀಪದಲ್ಲಿರುವ ಧವಳೇಶ್ವರನ ಬೆಟ್ಟವು ದೂರಕ್ಕೆ ಸರಿಸಿದ ಛತ್ರಿಯಂತೆ ಕಾಣುವುದು. ಈ ಬೆಟ್ಟಕ್ಕೆ ಛತ್ರಕಲ್ಲು ಎಂತ ಹೆಸರಿದ್ದು ಇದರಿಂದ ಚಿತ್ರಕಲ್ಲುದುರ್ಗವೆಂತ ಹೆಸರು ಬಂದಿರಬಹುದು.

ಪಾಳೆಯಗಾರರ ಮನೆಯ ದೇವರುಗಳಲ್ಲಿ ಚಿತ್ರದೇವರೆಂಬುದು ಮುಖ್ಯವಾದುದು; ಮತ್ತು ಈ ವಂಶದ ಮೂಲಪುರುಷನ ಹೆಸರು ಚಿತ್ರನಾಯಕನು; ಆದುದರಿಂದ ಪಾಳೆಯಗಾರರು ತಮ್ಮ ಮನೆಯದೇವರ ಮತ್ತು ಮೂಲಪುರುಷನ ಹೆಸರಿನಲ್ಲಿ ಚಿತ್ರಕಲ್‌ದುರ್ಗವೆಂದು ಕರೆದಿರಬಹುದು.

ಎರಡನೇ ಬುಕ್ಕರಾಯನ ಮಗನಾದ ಮಲ್ಲಣ್ಣವಡೆಯರು ಚಿತ್ರದುರ್ಗದಲ್ಲಿ ಮಾಂಡಲೀಕರಾಗಿರುವಾಗ ಈ ಹೆಸರು ಬಂತೆಂದೂ, ಭಂಗಿನೀರು(?) ಕಲ್ಲುಗಳ ಮೇಲೆ ಚೆಲ್ಲಿ ಕರೆಹತ್ತಿದ್ದರಿಂದ ಚಿತ್ರಕಲ್ಲು ಎಂತ ಹೆಸರಾಯಿತೆಂದೂ, ಇದರಿಂದ ಚಿತ್ರಕಲ್ಲು ದುರ್ಗವೆಂದು ಕರೆಯಲ್ಪಟ್ಟಿರುವುದಾಗಿ ಚಿತ್ರದುರ್ಗದ ಪಾಳೆಯಗಾರರ, ಒಂದು ಕೈಬರಹದ ಇತಿಹಾಸದಿಂದ, ತಿಳಿದು ಬರುತ್ತದೆ.

ಕಾಲಾನಂತರದಲ್ಲಿ ಕಲ್ಲು ಎಂಬ ಪದವು ಲೋಪವಾಗಿ ಚಿತ್ರದುರ್ಗವಾಗಿರುತ್ತದೆ. ಇದು ಅಪಭ್ರಂಶವಾಗಿ ಈಗ ಚಿಟ್ಟಲ್‌ಡ್ರುಗ್ (Chitaldrug) ಎಂತ ಆಗಿರುವುದು.

The present name of the place is derived either from Sital or Chitrakal-durga meaning spotted or picturesque castle, or Chatrakal, umbrella rock, the umbrella being the ensign of royalty ‡

ಈ ಸ್ಥಳದ ಈಗಿನ ಹೆಸರು ಸಿತಲ ಅಥವ ಚಿತ್ರಕಲ್‌ದುರ್ಗ, ಅಂದರೆ ಗುರುತು ಗುರುತಾದ ಅಥವಾ ಚಿತ್ರವಾದ ದುರ್ಗ. ಅಥವ ಛತ್ರಕಲ್ ಅಂದರೆ ರಾಜಮರ್ಯಾದೆಯ ಗುರುತಾದ ಛತ್ರಿಯಕಲ್ಲು ಎಂಬುದರಿಂದ ಬಂದಿರುವುದು.

**ಫರಕ್ಕಾಬಾದ್:—**

ಚಿತ್ರದುರ್ಗದ ಪಾಳೆಯಗಾರನನ್ನು ಸೋಲಿಸಿ ಚಿತ್ರದುರ್ಗವನ್ನು ಸ್ವಾಧೀನಮಾಡಿಕೊಳ್ಳುವುದಕ್ಕೋಸ್ಕರ ನವಾಬ ಹೈದರಲ್ಲಿಖಾನನು ಶಾ. ಶ. ೧೬೯೯ ( A. D. 1777 ) ರಲ್ಲಿ ಟಿಪ್ಪೂಸುಲ್ತಾನನನ್ನು ಕಳಿಹಿಸಿದನು. ಆದರೆ ಟೀಪು ಒಂದು ವರ್ಷ ಪರಿಯಂತರ ಚಿತ್ರದುರ್ಗಕ್ಕೆ ಮುತ್ತಿಗೆಹಾಕಿ ಭಗ್ನಮನೋರಥನಾಗಲು, ಹೈದರಾಲಿ ತನ್ನ ಮಗನಮೇಲೆ ಕುಪಿತನಾಗಿ ಅವನಿಗೆ ಕೊಟ್ಟಿದ್ದ ಮಳವಳ್ಳಿಯ ಜಹಗೀರನ್ನು ಮನ್ನಾ ಮಾಡಿದನು. ಚಿತ್ರದುರ್ಗವು ಬಲವಾದ ಕೋಟೆಯೆಂದು ತಿಳಿದ ಟೀಪು ಸುಲ್ತಾನನಾದಮೇಲೆ, ಕೋಟೆಯನ್ನು ಬಲಪಡಿಸಿ, ಒಂದು ಅರಮನೆಯನ್ನೂ ಕಟ್ಟಿಸಿ, ಚಿತ್ರದುರ್ಗಕ್ಕೆ ಫರಕ್ಕಾಬಾದ್ ಎಂದು ಹೆಸರಿಟ್ಟನು. ಟೀಪುವಿನ ದುರದೃಷ್ಟದಿಂದಲೂ, ಕರ್ನಾಟಕದ ದುರ್ದೈವದಿಂದಲೂ, ವಿಸ್ತಾರವಾದ ಕರ್ನಾಟಕರಾಜ್ಯವು ಸಂಕುಚಿತವಾಗಲು ಫರಕ್ಕಾಬಾದ್ ಎಂಬ ಹೆಸರೂ ನಾಮಾವಶೇಷವಾಯಿತು. (ಸಂಪೂರ್ಣ)

* ಚಿತ್ರದುರ್ಗ ೭, ೧೨, ೩೨.

† ಚಿತ್ರದುರ್ಗ ೩೧.

‡ Mysore gazetter by Mr. B. L. Rice, Vol II Page 51 ( Revised Edition )

# ಜೀವನದಲ್ಲೇನಿಹುದು ?

ಜೀವನವು ಬರಿ ನೊರೆಯ ತೊರೆಯಂತೆ ಇರುತಿಹುದು
ಬಂಡೆಗಳು ಎರಡು ಮಾತ್ರ—
ಅಲುಗದೆಯೆ, ನಡುಗದೆಯೆ, ಸ್ಥಿರವಾಗಿ ಇರುವುವವು
ಬಂಡೆಗಳು ಎರಡು ಮಾತ್ರ ॥ ೧ ॥

ಜೀವನದ ಸಾರವದು ಹರಡಿಹುದು ನೊರೆಯಂತೆ
ತೊರೆಯ ಮೇಲ್ ತೇಲಿಬಂದು—
ತಿರುಳಿಲ್ಲ, ಹುರುಳಿಲ್ಲ, ಬರಿಯ ನೊರೆ ಹರಡಿಹುದು
ತೊರೆಯ ಮೇಲ್ ತೇಲಿ ಬಂದು ॥ ೨ ॥

ಯಾವುವವು ಬಂಡೆಗಳು ಸ್ಥಿರವಾಗಿ ನಿಂತಿಹುವು
ಚಲಿಸದಲೆ ಕಂಭದಂತೆ—
ಘನ ಮಹಿಮನಾ ದಿವ್ಯ ದೇಗುಲವ ಪೊತ್ತಿರುವ
ಕಡೆದಿಟ್ಟ ಕಂಭದಂತೆ ? ॥ ೩ ॥

ಪರರ ಸಂಕಟದೊಳಗೆ ದಯೆಯು ಗುಣ ತಾನೊಂದು,
ಹೃದಯದಿಂ ಬಸಿದು ಬಂದ—
ತನ್ನ ಸಂಕಟದೊಳಗೆ ಬೆನ್ನ ತಟ್ಟುತ ಬರುವ
ಧೈರ್ಯದಾ ಭಾಗ್ಯ ವೊಂದು ॥ ೪ ॥

ಈ ಎರಡು ಬಂಡೆಗಳು ಸ್ಥಿರವಾಗಿ ನಿಂತಿಹುವು
ಆ ತೊರೆಯ ಮಡುವಿನಲ್ಲಿ—
ಪರಮೇಶನಾಜ್ಞೆಯನು ಶಿರದಲ್ಲಿ ಶಾಂ ಧರಿಸಿ
ಆ ತೊರೆಯ ಮಡುವಿನಲ್ಲಿ ॥ ೫ ॥

ಆ ಧೈರ್ಯದಯೆಗಳಿಂ ಜೀವನವು ಸವಿಯೂಟ,
ಅಲ್ಲದಿರೆ ನರಕ ತಾನು—
ಇವುಗಳನು ನಮಗಿತ್ತ ಪರಮೇಶನೊಲುಮೆಯನು
ಸ್ಮರಿಸುತ್ತ ನಲಿವೆ ನಾನು ॥ ೬ ॥

—ಕೆ. ಎಸ್. ಶ್ರೀನಾಥ




## ನೇಪಾಳದ ಬಗ್ಗೆ ಸ್ವಲ್ಪ ಮಾಹಿತಿ

**ನೇಪಾಳದ ರಾಜ್ಯಘಟನೆ ಮತ್ತು ರಾಜ್ಯ-ವ್ಯವಸ್ಥೆ** :—ನೇಪಾಳದ ಮಹಾರಾಜರು ರಾಜ್ಯಕಾರಭಾರದ ಕಾರ್ಯದಲ್ಲಿ ಪ್ರತ್ಯಕ್ಷವಾಗಿ ಬರುವುದಿಲ್ಲ. ಇಂಗ್ಲಂಡಿನ ಬಾದಶಹರಿಗೆ ಅಲ್ಲಿಯ ರಾಜ್ಯಘಟನೆಯಲ್ಲಿ ಇದ್ದ ಸ್ಥಾನದಂತೆ ನೇಪಾಳದ ಮಹಾರಾಜರಿಗೆ ಅಲ್ಲಿಯ ರಾಜಘಟನೆಯಲ್ಲಿರುವುದು. ಮುಖ್ಯಪ್ರಧಾನರೇ ರಾಜ್ಯಕಾರಭಾರದ ಸೂತ್ರಧಾರಿರುವರು. ಈಗಿನ ಮಹಾರಾಜರ ಮುತ್ತಾದಿರೊ ಅವರ ಹಿಂದಿನವರೊ ಮುಖ್ಯ ಪ್ರಧಾನಪದವು ಈಗಿನ ಮುಖ್ಯ ಪ್ರಧಾನರ ಮನೆತನದವರಲ್ಲಿಯೇ ನಡೆಯುಬೇಕೆಂದು ನಿಶ್ಚೈಸಿದರು. ಈಗಿನ ಪ್ರಧಾನರು ವಯೋವೃದ್ಧರಿರುವರು. ಇವರ ಅನಂತರ ನೇಪಾಳೀ ಕಾಯ್ದೆಯಂತೆ ಅವರ ಬಂಧುವೇ ಅವರ ಪದದಲ್ಲಿ ಬರತಕ್ಕವರು. ಮುಖ್ಯ ಪ್ರಧಾನರಿಗೆ ಇಬ್ಬರು ಬಂಧುಗಳಿದ್ದು ಒಬ್ಬರು ನೇಪಾಳದ ಸೇನಾಪತಿಯಾಗಿರುವರು. ಇನ್ನೊಬ್ಬರು ನ್ಯಾಯ ಮತ್ತು ಪೋಲಿಸ ವಿಭಾಗದ ಮಂತ್ರಿಯಾಗಿರುವರು. ಈ ಮೂವರು ಬಂಧುಗಳು ಒಬ್ಬರೊಬ್ಬರ ಸಲಹೆಯಿಂದ ನಡೆಯುತ್ತಿದ್ದರೂ ಮುಖ್ಯ ಪ್ರಧಾನರೇ ಸರ್ವಾಧಿಕಾರಿಯಾಗಿರುವರು. ನೇಪಾಳದ ಸೈನ್ಯದ ದೊಡ್ಡ ದೊಡ್ಡ ಅಧಿಕಾರಗಳ ಸ್ಥಳಗಳಲ್ಲಿ ಮುಖ್ಯ ಪ್ರಧಾನರ ಆರೇಳು ಜನ ಮಕ್ಕಳಿರುವರು.

**ನೇಪಾಳದ ಸೈನಿಕ ಸಿದ್ಧತೆ**:-ನೇಪಾಳದಲ್ಲಿ ಸುಮಾರು ಮೂವತ್ತು ನಾಲ್ವತ್ತು ಸಾವಿರ ಸೈನಿಕರ ಸೈನ್ಯವಿರಬಹುದು. ಈ ಸೈನ್ಯದಲ್ಲಿ ಬಹಳವಾದರೆ ೫೦೦ ಅಶ್ವಾರೋಹಿ ಸೈನಿಕರಿರುವರು. ಪ್ರತಿಯೊಬ್ಬ ಗುರಖಾಸೈನಿಕನ ಬಳಿಯಲ್ಲಿ "ಕುಕರಿ" ಎಂಬ ಕುಡುಗೋಲಿನಂತಹ ಶಸ್ತ್ರವೊಂದಿರುವುದು. ಸೈನ್ಯದ ಶಿಕ್ಷಣವೂ ಶಿಸ್ತೂ ಮಾತ್ರ ಆಧುನಿಕ ಪದ್ಧತಿಯನ್ನನುಸರಿಸಿರುವುದು. ಸೈನ್ಯದಲ್ಲಿಯ ಒಬ್ಬ ದೊಡ್ಡ ಅಧಿಕಾರಿಯೂ ಪರದೇಶಕ್ಕೆ ಹೋಗಿ ಯುದ್ಧ ಶಿಕ್ಷಣವನ್ನು ಪಡೆದು ಬಂದಿರುವುದಿಲ್ಲ. ನೇಪಾಳದಲ್ಲಿ ಮನುಷ್ಯನಿರ್ಮಿತ ಕೋಟೆಗಳಿಲ್ಲ, ಏಕೆಂದರೆ ಹಿಮಾಲಯದ ಪ್ರಚಂಡವಾದ ಗಿರಿಗಳೂ ಕೂಟಗಳೂ ಆಂಟವರ್ಪ ಕೋಟೆಯ ಅಭೇದ್ಯವಾದ ಗೋಡೆಗಳಿಗಿಂತಲೂ ಅಭೇದ್ಯವಾಗಿರುವುವು. ಬ್ರಿಟಿಶರ ವಕೀಲನಿಗೆ ಸ್ವಲ್ಪ ಭೂಮಿ ಕೊಡಲ್ಪಟ್ಟಿರುವುದು. ಅಲ್ಲಿ ಮಾತ್ರ ಅವನ ಕಾಯ್ದೆ. ಈ ವಕೀಲನ ಸಂರಕ್ಷಣೆಗೋಸುಗ ೧೦೦ ಸಶಸ್ತ್ರ ಸೈನ್ಯವೂ ೫ ಜನ ಅಶ್ವಾರೋಹಿಗಳೂ ಇರುವರು.

**ನೇಪಾಳದಲ್ಲಿಯ ಔದ್ಯೋಗಿಕ ಕಾರಖಾನೆಗಳು**:—ನೇಪಾಳದಲ್ಲಿ ಹಳೆಯ ಪದ್ಧತಿಯಿಂದ ತೋಫುಗಳನ್ನು (Guns) ಎರಕಹೊಯ್ಯುವ ಕಾರಖಾನೆಯೊಂದುಂಟು. ಇತ್ತೀಚೆಗೆಯೇ ನೇಪಾಳ ಸರಕಾರದವರು ಜರ್ಮನ್ ಇಂಜೆನಿಯರನೊಬ್ಬನನ್ನು ತಂದು ಈ ಕಾರಖಾನೆಯಲ್ಲಿ ಆಧುನಿಕ ಸುಧಾರಣೆಗಳನ್ನೂ ಮಾಡಿಸಬೇಕೆಂದು ವಿಚಾರಮಾಡುತ್ತಿರುವುದರಿಂದ ಇಂಗ್ಲಿಶರಿಗೆ ಸ್ವಲ್ಪ ಸಿಟ್ಟು ಬಂದಿದೆ. ಕಾಗದದೊಂದು ಹಳೆಯ ಕಾರಖಾನೆಯುಂಟು. ನೇಪಾಳ ಸರಕಾ

ರವು ಇಲ್ಲಿ ತಯಾರಾಗುವ ಕಾಗದವನ್ನೇ ಉಪಯೋಗಿಸುತ್ತದೆ. ಇವೆರಡರ ಹೊರತು ಮತ್ತಾವ ಕಾರಖಾನೆ ಇಲ್ಲಿರುವುದಿಲ್ಲ.

**ನೇಪಾಳದಲ್ಲಿಯ ತಂತಿ ಮತ್ತು ಟಪ್ಪಾಲು:—** ಕೇವಲ ಟೆಲಿಫೋನು ಮಾತ್ರ ನೇಪಾಳ ಸರಕಾರದ್ದಿರುವುದು. ತಂತಿ ಮತ್ತು ಟಪ್ಪಾಲುಗಳ ವಿಷಯದಲ್ಲಿ ನೇಪಾಳ ಸರಕಾರದವರು ಬ್ರಿಟಿಶ್ ಸರಕಾರದವರೊಂದಿಗೆ ಕರಾರುಗಳನ್ನು ಮಾಡಿಕೊಂಡಿದ್ದಾರೆ.

**ನೇಪಾಳದಲ್ಲಿಯ ಶಿಕ್ಷಣಪ್ರಗತಿ:** – ನೇಪಾಳದ ರಾಜಧಾನಿಯಾದ 'ಕಾಟಮಾಂಡು'ವಿನಲ್ಲಿ ಒಂದು ಕಾಲೇಜು ಇರುವುದು. ಬಹುಶಃ ಎಲ್ಲ ಪ್ರೊಫೆಸರರು ಬಂಗಾಲಿಗಳು. ಇದಲ್ಲದೆ ಅನೇಕ ಹೈಸ್ಕೂಲುಗಳಿರುವುವು. ಈ ಕಾಲೇಜೂ ಹೈಸ್ಕೂಲುಗಳೂ ಪಾಟಣಾ ವಿಶ್ವವಿದ್ಯಾಲಯಕ್ಕೆ ಜೋಡಿಸಲ್ಪಟ್ಟವೆ. ಆಯುರ್ವೇದದ ಬಗ್ಗೆ ಮುಖ್ಯ ಪ್ರಧಾನರಿಗೆ ವಿಶೇಷ ಆಸ್ಥೆಯಿರುವುವರಿಂದ ಅವರು ಮೊನ್ನೆ ಮೊನ್ನೆ ಬನಾರಸ ಹಿಂದು ವಿಶ್ವವಿದ್ಯಾಲಯಕ್ಕೆ ಒಂದು ಲಕ್ಷರೂಪಾಯಿಯ ಕಾಣಿಕೆಯನ್ನಿತ್ತಿರುವರು. ರುಗ್ಣಾಲಯಗಳೂ ವ್ಯವಸ್ಥಿತವಾಗಿರುವುವು. ಮಹಾರಾಜರಿಗೆಯೇ ಸಂಸ್ಕೃತಭಾಷೆಯ ಅಭಿರುಚಿಯಿರುವುದರಿಂದ ಅದಕ್ಕೆ ವಿಶೇಷ ಉತ್ತೇಜನವು ದೊರೆಯುತ್ತದೆ.

—ಕೇಸರಿ

---

## ಕನ್ನಡ ರಾಜ್ಯದ ಕೆಲವು ತೆರಿಗೆಗಳು

ಈ ಕೆಳಗಿನ ತೆರಿಗೆಗಳ ಉಲ್ಲೇಖವು ಕೃಷ್ಣರಾಜಪೇಟೆ ತಾಲ್ಲೂಕಿನ ಕಸಬಾ ಹೋಬಳಿ ಕಪ್ಪಹಳ್ಳಿಯಲ್ಲಿರುವ ಇನಾಂದಾರ್ರ ಕೇಶವಮೂರ್ತಿಯವರು ಹಾಜರ್ಮಾಡಿದ ಒಂದು ಸನದಿನಲ್ಲಿ ಇರುತ್ತದೆ. **ಮೈಸೂರ ಆರ್ಕಿಆಲಾಜಿಕಲ್ ಡಿಪಾರ್ಟಮೆಂಟಿನ ೧೯೨೭ ನೆಯ ಇಸ್ವಿಯ ವಾರ್ಷಿಕ ವರದಿಯಲ್ಲಿ ಈ ಸನದು ಸಂಪೂರ್ಣವಾಗಿ ಮುದ್ರಿಸಲ್ಪಟ್ಟಿದೆ.**

ಗದ್ದೆ (assessment on wet lands, ಬೆದ್ದಲು (assessment on dry lands), ತೋಟ (garden tax), ತುಡುಕೆ (tax on small gardens), ಕಾಡಾರಂಬ (taxes on lands which depend on rain or streams), ನೀರಾರಂಬ (taxes on lands which are irrigated by artificial reservoirs), ಮಗ್ಗ (tax on looms), ಮನೆಹಣ (tax on houses), ಕೆಂಪುನೂಲು (tax on red yarn), ಉಪ್ಪಿನಮೊಳೆ (tax on salt-pans), ಈಚಲುಪೈರು tax on date groves), ಪುರವರ್ಗ (municipal taxes), ನೇಗಿಲುಕಾಣಿಕೆ (plough tax), ನಾಮಕಾಣಿಕೆ (tax on religious symbols painted on the forehead), ಗುರುಕಾಣಿಕೆ (tax on money received by Gurus), ಕಾಣಿಕೆ (presents), ಬೇಡಿಕೆ (benevolences), ಕಬ್ಬಿಣದ ಪೊಮ್ಮು (tax on iron-smelting), ಆಲೆಪೊಮ್ಮು (tax on sugar-cane mill), ಹತ್ತಿಪೊಮ್ಮು (tax on cotton), ಮಾರ್ಗ (road-tax), ಕರಗಪಡಿ (tax on the smelting of precious metals), ಸುಂಕಪೊಮ್ಮು (customs duties), ಜಾತಿಕೂಟ (tax on caste councils), ಸಮಯಾಚಾರ (tax on the settlement of dispute on local usage), ಹುಲ್ಲುಹಣ (tax on fodder), ಚರಾದಾಯ (tax on movables), ಹೊರಾದಾಯ (tax on money earned abroad), ಸೀಗೆ (tax on soap-nut), ಮಡ್ಡಿ (tax on incense), ಪತಂಗಪೊಪ್ಪಳಿ (tax on some barks of wood), ಗಿಡಗಾವಲು (tax on jungle and pastures), ಬ್ರಾಹ್ಮಣನಿವೇಶನ (tax on house-sites of Brahman's), ಶೂದ್ರನಿವೇಶನ (tax on house-sites of Sudras), ಸೊಪ್ಪಿನತೋಟ (tax on pot-herbs), ತಿಪ್ಪೆಹಳ್ಳ (tax on heaps of refuse stored for manure and on water-courses), ಶ್ರೀಗಂಧ (tax on Sandal-wood); ಮದ್ದಿಕ (tax on village commons ?).

---

## ಗಿಡಗಳನ್ನು ಬೆಳೆಯಿಸುವ ಒಂದು ವಿಧಾನ

ಗಿಡಗಳ ರೆಂಬೆಗಳನ್ನು ತೆಗೆದು ನೆಡುವುದರಿಂದ ಆ ರೆಂಬೆಗಳು ಖಂಡಿತವಾಗಿಯೂ ಬೇರುಬಿಟ್ಟು ಸಜೀವವಾಗುತ್ತದೆಂದಾಗಲಿ, ಅವು ಬೇಗ ಫಲಕೊಡುತ್ತವೆಂದಾಗಲಿ ಭರವಸೆಯಿರುವುದಿಲ್ಲವಾದುದರಿಂದ ಅವುಗಳನ್ನು ಬೆಳೆಯಿಸುವ ಬೇರೆ ವಿಧಾನಗಳನ್ನೂ ಅವಲಂಬಿಸಬೇಕು.

ಯಾವುದಾದರೊಂದು ಒಳ್ಳೆಯ ಮರವನ್ನು ಆರಿಸಿ ಅದರ ಬಲಿತ ಕೊಂಬೆಯ ಒಂದು ಭಾಗದಲ್ಲಿ ಎರಡು ಅಂಗಲದಷ್ಟಕ್ಕೆ ಸುತ್ತಲೂ ಅದರ ಸಿಪ್ಪೆ ( ಚೆಕ್ಕೆ ಅಥವಾ ತೊಗಟೆ ) ಯನ್ನು ಜಾಗರೂಕತೆಯಿಂದ ಕತ್ತರಿಸಿ ತೆಗೆದು ಅಲ್ಲಿಗೆ ಮಣ್ಣು ಮತ್ತು ಗೊಬ್ಬರ ಮಿಶ್ರಿತವಾದ ಮಿಶ್ರಣವನ್ನು ಮೆತ್ತಿ, ಕಟ್ಟಿ, ಅಲ್ಲಿಗೆ ಹನಿಹನಿಗಳಾಗಿ ನೀರು ಬರುವಂತೆ ಮಾಡುವುದಕ್ಕೆ ಒಂದು ಮಡಕೆಗೆ ಒಂದು ತೂತನ್ನು ಮಾಡಿ, ಒಂದು ಸಪೂರ ನಳಿಗೆ ಮನ್ನಾಗಲಿ ಹುರಿಯನ್ನಾಗಲಿ ಆ ತೂತಿನಿಂದ ತಂದು, ಗಿಡವಾಗಿ ಮಾಡುವುದಕ್ಕೆ ಸಿದ್ಧಪಡಿಸಿದ ಮಿಶ್ರಣವನ್ನು ಮೆತ್ತಿದ ಕೊಂಬೆಗೆ ಕಟ್ಟಬೇಕು. ಹೀಗೆ ಮಾಡಿದರೆ ಕೆಲವು ದಿನಗಳಲ್ಲಿ ಕೊಂಬೆಯ ತೊಗಟೆ ತೆಗೆದ ಭಾಗದ ಮೇಲ್ಭಾಗದಲ್ಲಿ ಬೇರುಗಳೆಳೆಯುತ್ತವೆ. ಆಗ ಆ ಕೊಂಬೆಯನ್ನು ಕತ್ತರಿಸಿ ತೆಗೆದು ನೆಡಬೇಕು.

—ಲೋಕರಹಸ್ಯ

---

## ಜೇನತುಪ್ಪದಲ್ಲಿರುವ ಗುಣವಿಶೇಷಗಳು

ತೂಕದ ಒಂದು ಪೌಂಡು ಜೇನತುಪ್ಪವನ್ನು ಕೂಡಹಾಕಬೇಕಾದರೆ, ೮೮೦೦೦ ಕ್ಕೆ ಕಡಿಮೆಯಲ್ಲದಷ್ಟು ಜೇನುನೊಣಗಳು ಸುಮಾರು ಒಂದು ತಿಂಗಳು ಕಾಲ ಎಡೆಬಿಡದೆ ಕೆಲಸ ಮಾಡುತ್ತದೆ. ಪ್ರಕೃತಿ ಸಿದ್ಧವಾಗಿ ದೊರೆದ ಆಹಾರ ಪದಾರ್ಥಗಳಲ್ಲಿ ಜೇನುತುಪ್ಪವು ಸರ್ವೋತ್ತಮವೂ ಅಮೂಲ್ಯವೂ ಆಗಿರುವದು. ಇದರಲ್ಲಿ ಉತ್ತಮವಾದ ಆರೋಗ್ಯ ಗುಣಗಳನ್ನು ಕೊಡತಕ್ಕ ಕಬ್ಬಿಣ, ಸುಣ್ಣ, ಸೋಡಿಯಂ, ಗಂಧಕ, ಮೆಗ್ನೀಸಿಯಂ, ಫಾಸ್ಫರಿಕ, ಆಸಿಡ್, ಮತ್ತು ಪಿಟ್ಯೂಯಿನ್ ಎಂಬ ಪದಾರ್ಥಗಳು ಇರುವವು. ಜೇನತುಪ್ಪದಲ್ಲಿ ಗುಳ್ಳೆಲು ಎದೆ ಹೃದಯ ಮುಂತಾದ ಅವಯವಗಳಲ್ಲಿ ಉಂಟಾಗುವ ರೋಗಗಳನ್ನು ತಪ್ಪಿಸುವ ಶಕ್ತಿಯಿರುತ್ತದೆ. ಇದು ರಕ್ತದ ಹೆಚ್ಚುವಿಕೆಯನ್ನೂ ನರಗಳಿಗೆ ಗಟ್ಟಿತನವನ್ನೂ ಉಂಟುಮಾಡತಕ್ಕ ದೊಡ್ಡ ಔಷಧವಾಗಿದೆ.

—ಸುಧಾರಕ.

---

## ಅಕ್ಬರನ ಕಾಲದಲ್ಲಿ " ಲೋಹಗಳ ವಿಶಿಷ್ಟ ಗುರುತ್ವದ " (SPECITIC GRANITY) ಸಮಾಲೋಚನೆ ಹೇಗಿತ್ತು ?

ಅಕ್ಬರನ ಕಾಲದಲ್ಲಿ ವಿಶಿಷ್ಟ ಗುರುತ್ವದ ವಿಷಯವಾಗಿ ಯಾವ ರೀತಿ ಅಭಿಪ್ರಾಯವಿತ್ತೆಂಬುದನ್ನು ಅವನ ಆಪ್ತಸ್ನೇಹಿತ, ಸಚಿನ ಮತ್ತು ಅನುಯಾಯಿಯಾದ ಅಬುಲ್‌ಫಸಲ್ ಎಂಬುವನ 'ಐನಿ ಅಕ್ಬರಿ' ಎಂಬ ಗ್ರಂಥದಿಂದ ನಮಗೆ ಸ್ವಲ್ಪ ಮಟ್ಟಿಗೆ ತಿಳಿಯುತ್ತದೆ. ಅದನ್ನು ಆ ಗ್ರಂಥದಲ್ಲಿದ್ದಂತೆಯೇ ಕನ್ನಡಿಸಿ ಈ ಕೆಳಗೆ ಕೊಟ್ಟಿರುತ್ತೇನೆ.

### ಪದಾರ್ಥಗಳ ವಿಶಿಷ್ಟ ಗುರುತ್ವ

"ಎಲ್ಲ ಪದಾರ್ಥಗಳೂ ನಾಲ್ಕು ಧಾತುಗಳ (elements) ನ್ನೊಳಕೊಂಡ ಆವಿ ಮತ್ತು ಉಗಿ ( Vapair and exhalations) ಯಿಂದ ಕಲಿಸಲ್ಪಟ್ಟವೆ. ಅದರಿಂದಲೇ ಬೆಂಕಿ ಮತ್ತು ಗಾಳಿಯ ಸಂಮಿಶ್ರಣವು ಹೆಚ್ಚಾಗಿರುತ್ತ ವ ಪದಾರ್ಥಗಳು ನೀರು ಮತ್ತು ಭೂ ಸಂಬಂಧವಾದ ಪದಾರ್ಥಗಳಿಂದ ಮಿಶ್ರವಾದ ವಸ್ತುಗಳಿಗಿಂತಲೂ ಹಗುರವಾಗಿರುತ್ತವೆ. ಬೇರೆ ಬೇರೆ ವಸ್ತುಗಳ ಸಮಪರಿಮಾಣವುಳ್ಳ ಘನಮೂಲಗಳು (cubes) ಈ ಕೆಳಗಿನ ಪಟ್ಟಿಯಂತೆ ಪರಸ್ಪರ ಭೇದವನ್ನು ಹೊಂದಿರುತ್ತವೆ.

| | | | | | |
|---|---|---|---|---|---|
| ಚಿನ್ನ | ೧೦೦ | ತವರ | ೩೮ | ತಾಮ್ರ | ೪೫ |
| ಪಾದರಸ | ೭೧ | ಬೆಳ್ಳಿ | ೫೪ | ಹಿತ್ತಾಳೆ | ೪೫ |
| ಸೀಸ | ೫೯ | ಕಬ್ಬಿಣ | ೪೦ | ಇತ್ಯಾದಿ. | |

ಇದಕ್ಕೆ ವಿಶಿಷ್ಟ ವ್ಯತ್ಯಾಸ ( specific defference ) ವೆಂತಲೂ ಹೆಸರು. ಕೆಲವರು ಇದನ್ನು ನೀರಿನಿಂದ ಈ ರೀತಿ ಕಂಡು ಹಿಡಿಯುತ್ತಾರೆ:—

ಒಂದು ಪಾತ್ರೆಯನ್ನು ನೀರಿನಿಂದ ತುಂಬಿ ಅದರಲ್ಲಿ ೧೦೦ ಮಿಶ್ಕಲ (ಒಂದು ತೂಕ) ಗಳ ತೂಕದ ವಸ್ತುಗಳನ್ನು ಬೇರೆ ಬೇರೆಯಾಗಿ ಹಾಕುತ್ತಾರೆ. ಲೋಹಗಳನ್ನು ನೀರಿನಲ್ಲಿ ಹಾಕಿದ ನಂತರ ಹೊರಗೆ ಚೆಲ್ಲಿ ಹೋದ ನೀರಿನ ಲೆಕ್ಕದಿಂದ ವಿಶಿಷ್ಟ ವ್ಯತ್ಯಾಸವನ್ನು ಕಂಡು ಹಿಡಿಯುತ್ತಾರೆ. ಯಾವ ವಸ್ತು

ವನ್ನು ನೀರಿನಲ್ಲಿ ಬಿಡುವುದರಿಂದ ಹೆಚ್ಚು ನೀರು ಪಾತ್ರೆಯಲ್ಲಿ ಉಳಿಯುತ್ತದೋ ಅದೇ ಬಹಳ ತೂಕವುಳ್ಳದ್ದು. ಮತ್ತು ಯಾವ ವಸ್ತುವಿನಿಂದ ಹೆಚ್ಚು ನೀರು ಹೊರಗೆ ಚೆಲ್ಲಿ ಹೋಗುತ್ತದೋ ಅದೇ ಬಹಳ ಹಗುರವಾದದ್ದು.

ಮೇಲೆ ಹೇಳಿದಂತೆ ಬೆಳ್ಳಿಯು ೯ಕ್ಕಿ ಮಿಶ್ಕಲ ಮತ್ತು ಚಿನ್ನವು ೫ಕ್ಕಿ ಮಿಶ್ಕಲ ತೂಕದ ನೀರನ್ನು ಹೊರಗೆ ಹೋಗಗೊಡಿಸುತ್ತದೆ. ಲೋಹದ ಗಾಳಿಯಲ್ಲಿನ ತೂಕದಿಂದ ( weight in air ) ಚೆಲ್ಲಿ ಹೋದ ನೀರಿನ ತೂಕವನ್ನು ಕಳೆಯುವುದರಿಂದ ಉಳಿಯುವುದೇ ಜಲ ಸಂಬಂಧ ( hydrostatic ) ತೂಕ.

ತ್ರಾಸಿನ ( balance ) ಚಿಂತಾಲಗಳನ್ನು ( scales ) ನೀರಿನಿಂದ ಹೊರಗೆ ಅಂದರೆ ಗಾಳಿಯಲ್ಲಿ ತೂಗ ಹಾಕುತ್ತಾರೆ. ಜಲಸಂಬಂಧ ತ್ರಾಸುಗಳ ( hydrostatic balance ) ಚಿಂತಾಲಗಳನ್ನು ನೀರಿನ ಮೇಲೆ ( surface of the water ) ತೂಗ ಹಾಕುತ್ತಾರೆ. ಇವುಗಳಲ್ಲಿ ಇಡಲ್ಪಡುವ ವಸ್ತುಗಳಲ್ಲಿ ಯಾವುದು ಭಾರವಾಗಿರುತ್ತದೋ ಅದು ತಕ್ಷಣವೇ ದಂಡೆಯನ್ನು ( beam ) ಒತ್ತಿಸುತ್ತದೆ. ಒಂದು ಚಿಂತಾಲವನ್ನು ನೀರಿನ ಮೇಲೆ ಮತ್ತೊಂದನ್ನು ಗಾಳಿಯಲ್ಲಿಟ್ಟರೆ, ಗಾಳಿಯಲ್ಲಿರುವ ಚಿಂತಾಲವು ಕೆಳಗೆ ಹೋಗುತ್ತದೆ; ಏಕೆಂದರೆ ಗಾಳಿಯು ನೀರಿಗಿಂತ ಹಗುರವಾಗಿರುವುದರಿಂದ ಅದರ ಚಿಂತಾಲವನ್ನು ಎತ್ತಿ ಹಿಡಿಯಲಾರದು.

ಹೊರಗೆ ಚೆಲ್ಲಿ ಹೋದ ನೀರಿನ ತೂಕವು ನೀರಿನಲ್ಲಿ ಅದ್ದಲ್ಪಟ್ಟಂಥ (immersed) ಪದಾರ್ಥದ ತೂಕಕ್ಕಿಂತ ಕಡಿಮೆಯಿದ್ದರೆ ಆ ಲೋಹವು ನೀರಿನಲ್ಲಿ ಮುಳುಗುತ್ತದೆ. ಮತ್ತು ನೀರಿನ ತೂಕವು ಹೆಚ್ಚಿದ್ದರೆ ಆ ಪದಾರ್ಥವು ನೀರಿನ ಮೇಲೆ ತೇಲುತ್ತದೆ. ಆದರೆ ಎರಡರ ತೂಕವು ಸಮವಾಗಿದರೆ ಆ ವಸ್ತುವು ಅದರ ಮೆಲ್ಭಾಗವು ನೀರಿನ ಮೇಲ್ಭಾಗಕ್ಕೆ ಸಮವಾಗುವವರೆಗೆ ಮುಳುಗುತ್ತದೆ.

ಹೆಚ್ಚು ಉದಾಹರಣೆಗಾಗಿ ಅಬುರಿಹಾನ್-ಅಲ್- ಬಿಕಾನಿಯು ಈ ಕೆಳಗಿನ ಮೂರು ಪಟ್ಟಿಗಳನ್ನು ಕೊಟ್ಟಿರುತ್ತಾನೆ.

### ೧ನೆಯ ಪಟ್ಟಿ

ಈ ಕೆಳಗಿನ ಧಾತುಗಳ ಪ್ರತಿಯೊಂದರ ೧೦೦ ಮಿಶ್ಕಲಗಳನ್ನು ನೀರಿನಲ್ಲಿ ಹಾಕಿದುದರಿಂದ ಹೊರಗೆ ಚೆಲ್ಲಲ್ಪಟ್ಟ ನೀರಿನ ಪರಿಮಾಣ.

| ಪದಾರ್ಥ. | ಮಿಶ್ಕಲ. | ದಾಂಗ್. | ಟಸ್ಸಜ್. |
|---|---|---|---|
| ಚಿನ್ನ | ೫ | ೧ | ೨ |
| ಪಾದರಸ | ೭ | ೨ | ೧ |
| ಸೀಸ | ೮ | ೫ | ೮ |
| ಬೆಳ್ಳಿ | ೯ | ೪ | ೧ |
| ತಾಮ್ರ | ೧೧ | ೩ | ೮ |
| ಹಿತ್ತಾಳೆ | ೧೧ | ೪ | ೧ |
| ಕಬ್ಬಿಣ | ೧೨ | ೫ | ೨ |
| ತವರ | ೧೩ | ೪ | ೮ |
| ನೀಲ | ೨೫ | ೧ | ೨ |
| ವೈಢೂರ್ಯ | ೨೬ | ೮ | ೮ |
| ಕೆಂಪು | ೨೭ | ೫ | ೨ |
| ಪಚ್ಚೆ | ೩೧ | ೨ | ೮ |
| ಮುತ್ತು | ೨೨ | ೧ | ೮ |

ಇತ್ಯಾದಿ.

### ೨ನೆಯ ಪಟ್ಟಿ

ಗಾಳಿಯಲ್ಲಿ ೧೦೦ ಮಿಶ್ಕಲಗಳ ತೂಕವಿದ್ದರೆ ನೀರಿನಲ್ಲಿನ ತೂಕವನ್ನು (weight in water ) ತೋರಿಸುವ ಪಟ್ಟಿ.

| ಪದಾರ್ಥ | ಮಿ. | ದಾ. | ಟ. |
|---|---|---|---|
| ಚಿನ್ನ | ೯೫ | ೪ | ೨ |
| ಪಾದರಸ | ೯೨ | ೮ | ೩ |
| ಸೀಸ | ೯೧ | ೧ | ೮ |
| ಬೆಳ್ಳಿ | ೯೦ | ೧ | ೮ |
| ತಾಮ್ರ | ೮೮ | ೩ | ೮ |
| ಹಿತ್ತಾಳೆ | ೮೮ | ೨ | ೮ |
| ಕಬ್ಬಿಣ | ೮೭ | ೮ | ೨ |
| ತವರ | ೮೬ | ೨ | ೮ |
| ನೀಲ | ೭೪ | ೪ | ೨ |
| ವೈಡೂರ್ಯ | ೭೪ | ೮ | ೮ |
| ಕೆಂಪು | ೭೨ | ೮ | ೨ |
| ಪಚ್ಚೆ | ೬೮ | ೪ | ೮ |
| ಮುತ್ತು | ೬೨ | ೫ | ೮ |

ಇತ್ಯಾದಿ

### ೩ನೆಯ ಪಟ್ಟಿ

ಗಾಳಿಯಲ್ಲಿ ೧೦೦ ಮಿಶ್ಕಲ ತೂಕವುಳ್ಳ, ಚಿನ್ನದ ಪರಿಮಾಣಕ್ಕೆ ಸಮವುಳ್ಳ ಬೇರೆ ಬೇರೆ ವಸ್ತುಗಳ ತೂಕ.

| ಪದಾರ್ಥ | ಮಿ. | ದಾಂ. | ಟೆ. |
|---|---|---|---|
| ಚಿನ್ನ | ೧೦೦ | ೦ | ೦ |
| ಪಾದರಸ | ೭೧ | ೧ | ೧ |
| ಸೀಸ | ೫೯ | ೨ | ೨ |
| ಬೆಳ್ಳಿ | ೫೪ | ೮ | ೮ |
| ತಾಮ್ರ | ೪೫ | ೩ | ೮ |
| ಹಿತ್ತಾಳೆ | ೪೫ | ೮ | ೫ |
| ಕಬ್ಬಿಣ | ೪೦ | ೩ | ೩ |
| ತವರ | ೩೮ | ೨ | ೨ |
| | ಇತ್ಯಾದಿ | ,, | |

ತೂಕ:— ೬ ಮಾಷ ೧ ಧಾನ್ಯ
೬ ಧಾನ್ಯ ೧ ಹೆಬ್ಬೆ
೨ ಹೆಬ್ಬೆ ೧ ಟೆಸ್ಸೂಜ್
೪ ಟೆಸ್ಸೂಜ್ ೧ ದಾಂಗ್
೬ ದಾಂಗ್ ೧ ಮಿಶ್ಕಲ

ಇದನ್ನು ನಾವು ಚೆನ್ನಾಗಿ ಪರಿಶೀಲಿಸಿ ನೋಡಿದರೆ ೧೬ನೆಯ ಶತಮಾನದಲ್ಲಿನ ವಿಶಿಷ್ಟ ಗುರುತ್ವದ ವಿಷಯುವು ಈಗ ನಮಗೆ ತಿಳಿದಿರುವಂತೆಯೇ ಇತ್ತು. ಆದರೆ ಅಭಿಪ್ರಾಯು ಮತ್ತು ಆಗಿನಕಾಲದ ಸಾಮಾನುಗಳೂ ( ideas & instruments ) ಸ್ವಲ್ಪಮಟ್ಟಿಗೆ ನಾಜೂಕಾಗಿರಲಿಲ್ಲವೆಂದು ( refined ) ತಿಳಿಯುಬರುವದು.

N. N. C.

---

## ಕರ್ನಾಟಕದಲ್ಲಿ ಕಳೆದ ಜುಲೈ ತಿಂಗಳಲ್ಲಿ ಆದ ಖಾದಿಯ ಹುಟ್ಟುವಳಿ ಮತ್ತು ಮಾರಾಟ

| ಅ. ಸ. | ಕೇಂದ್ರಗಳು. | ಹುಟ್ಟುವಳಿ. | ಮಾರಾಟ. | |
|---|---|---|---|---|
| | (ಅ) ಹುಟ್ಟುವಳಿಯ ಕೇಂದಗಳು. | | ಪರಪ್ರಾಂತದಲ್ಲಿ | ಕಿರುಕಳ ಮಾರಾಟ |
| ೧. | ಬದನವಾಳ (ಮೈಸೂರ ಸರಕಾರ | ೧೯೦೦ | | ೧೭೮೮ |
| ೨. | ಭಾಗೋಜಿಕೊಪ್ಪ | ೭೮೬ | | ೧೯ |
| ೩. | ಉಪ್ಪಿನಬೆಟಗೇರಿ | ೧೦೯೧ | | ೬೪ |
| ೪. | ಗಲಗಲಿ | ೧೧೧೭ | | ೧೧೬ |
| ೫. | ನೀಲೇಶ್ವರ | ೩೦೧ | | ೧೧೩ |
| ೬. | ಕಲಾದಗಿ | ೧೬೨೯ | | |
| ೭. | ಹುದ್ಲಿ | ೧೩೮೭ | ೨೭ | ೪೫ |
| | ಒಟ್ಟುಹುಟ್ಟುವಳಿ | ೮೨೧೧ | | |
| | (ಆ) ಮಾರಾಟದ ಕೇಂದ್ರಗಳು. | | | |
| ೧. | ಬೆಳಗಾವಿ | | ( ೨೫ | ೧೧೭೮ |
| ೨. | ಧಾರವಾಡ | | | ೫೯೪ |
| ೩. | ಹುಬ್ಬಳ್ಳಿ | | | ೭೩೬ |

| ಅ. ಸ. | ಕೇಂದ್ರಗಳು. | ಹುಟ್ಟುವಳಿ. | ಮಾರಾಟ. | |
|---|---|---|---|---|
| | (ಅ) ಹುಟ್ಟುವಳಿಯ ಕೇಂದ್ರಗಳು. | | ಪರಪ್ರಾಂತದಲ್ಲಿ | ಕಿರುಕಳ- ಮಾರಾಟ |
| ೪. | ಗದಗ | | | ೪೩೧ |
| ೫. | ವಿಜಾಪುರ | | | ೪೬೨ |
| ೬. | ಬಾಗಲಕೋಟ | | ೧೫೬ | ೪೨೨ |
| ೭. | ಬಳ್ಳಾರಿ | | | ೧೬೭ |
| ೮. | ಸಿರ್ಸಿ | | | ೧೮೫ |
| ೯. | ಮಂಗಳೂರು | | | ೨೬೫ |
| ೧೦. | ದಾವಣಗೆರಿ | | | ೩೪೩ |
| ೧೧. | ಶಿವಮೊಗ್ಗೆ | | | ೩೯೦ |
| ೧೨. | ನಿಪ್ಪಾಣಿ | | | ೨೧೮ |
| ೧೩. | ಖಾದಿ ಕೋ.ಆಪರೇಟಿವ್- ಸೊಸೈಟಿ ಮೈಸೂರ | | | ೧೦೯೪ |
| ೧೪. | ಖಾದಿ ಕೋ-ಆಪರೇಟಿವ್- ಸೊಸೈಟಿ ಅಕ್ಕಿಹೆಬ್ಬಾಳ | | | ೧೫೮ |
| ೧೫. | ಬೆಂಗಳೂರು | | | ೪೫೬೧ |
| ೧೬. | ಬಾಗಲಕೋಟ, ಬೆಳಗಾವಿ, ಧಾರವಾಡ ಭಾಗಗಳಲ್ಲಿ ಮನೆಮನೆ ಮಾರಾಟ | | | ೧೯೫೦ |
| | ಒಟ್ಟು | | ೩೦೮ | ೧೫೨೬೦ |




॥ नाहं कर्ता हरिः कर्ता तत्पूजा कर्म चाखिलम् ॥

## ಬಾರ್ಡೋಲಿಯ ಸತ್ಯಾಗ್ರಹದ ರಹಸ್ಯ

ಬಾರ್ಡೋಲಿಯ ಸತ್ಯಾಗ್ರಹವು ಆಳರಸರ ಮೂಗನ್ನು ಮಣಿಸಿ ಹಳಿಯ ಮಾತಾಯಿತು. ನಿಃಶಸ್ತ್ರರೂ ನಿರಪರಾಧಿಗಳೂ ಆದ ಬಾರ್ಡೋಲಿಯ ರೈತರನ್ನು ತಮ್ಮ ಅತುಲ ಸಾಮರ್ಥ್ಯದಿಂದ ನುಚ್ಚುನುರಿಮಾಡುವೆವೆಂದು ಆರ್ಭಟಿಸಿ, ಕತ್ತಿಯನ್ನು ಹಿರಿದಿದ್ದ ಸರಕಾರವು, ಮೆಲ್ಲನೆ ಸಪ್ಪಳಿಲ್ಲದೆ, ಆ ಕತ್ತಿಯನ್ನು ಒರೆಯಲ್ಲಿ ಮುಚ್ಚಿಕೊಂಡಿತು. ಬಾರ್ಡೋಲಿಯ ಬಡ ಆಕಳ ಚೆಂಡು ಮುರಿದು ತುಂಡುಮಾಡುವೆನೆಂದು ಪ್ರಚಂಡ ಗುಡುಗನ್ನು ಹಾಕಿದ ಹದಿನಾರು ಮೆಟ್ಟಿನ ಹುಲಿಯು ಹೇಳಕೇಳದೆ ಗವಿಹೊಕ್ಕಿತು. ಈ ಸುದ್ದಿಯನ್ನು ಕೇಳಿ ಅನೇಕರಿಗೆ ಆಶ್ಚರ್ಯವಾಗಿರುವುದು. ಇಡೀ ಜಗತ್ತನ್ನೇ ಪಾದಾಕ್ರಾಂತವಾಗಿ ಮಾಡಿದ ಭುಜಬಲಪರಾಕ್ರಮವುಳ್ಳ ಸರಕಾರವೆಲ್ಲಿ? ಮನೆಯ ಬಿಟ್ಟು ಹೋಗಲು ಕೂಡ ಸಾಮರ್ಥ್ಯವಿಲ್ಲದ ಮೂಕ ಪ್ರಜೆಗಳೆಲ್ಲಿ? ಇವರಿಬ್ಬರ ಕದನದಲ್ಲಿ ಪ್ರಜೆಗಳಿಗೆ ಗೆಲುವು ಸಿಕ್ಕೀತೆಂದು ಸಾಮಾನ್ಯ ಜನರ ಕಲ್ಪನೆಯಾಗುವುದೆಂತು? ಆದರೆ ಜಗತ್ತಿನಲ್ಲಿ ಭೌತಿಕ ಬಲಕ್ಕಿಂತಲೂ ನೈತಿಕ ಬಲಕ್ಕೆ ಬೆಲೆ ಹೆಚ್ಚಿದೆ. ಬ್ರಹ್ಮತೇಜೋಬಲವು ಕ್ಷತ್ರಿಯ ಬಲವನ್ನು ಮೀರಿದ ಬಲವು. ಬಾರ್ಡೋಲಿಯ ಪ್ರಜೆಗಳಿಗೆ ಸಿಕ್ಕ ಜಯವೆಂದರೆ ಬ್ರಹ್ಮತೇಜದ ಜಯವು. ಒಬ್ಬಿಬ್ಬರಲ್ಲಿ ಆ ಬಲವು ವ್ಯಕ್ತವಾದರೆ ಅದು ಅಗಾಧವಾದ ಕೃತ್ಯಗಳನ್ನು ಮಾಡಿಸಬಹುದು. ಇಡೀ ಒಂದು ತಾಲೂಕಿನ ಸುಮಾರು ೧ ಲಕ್ಷ ಜನರಲ್ಲಿ ಅದು ಪ್ರಕಟವಾದ ಬಳಿಕ ಕೇಳುವುದೇನು!

ನಾವು ಈ ಸಂದರ್ಭದಲ್ಲಿ ನಮಗೆ ಜಯಸಿಕ್ಕಿತೆಂದು ಮೈಮರೆತುಹೋಗಿ ಪ್ರಯೋಜನವಿಲ್ಲ. ಬಾರ್ಡೋಲಿಯ ಸತ್ಯಾಗ್ರಹಕ್ಕೆ ಏಕೆ ಜಯಸಿಕ್ಕಿತೆಂಬುದನ್ನು ಚೆನ್ನಾಗಿ ಮನವರಿಕೆ ಮಾಡಿಕೊಂಡು ಮುಂದಿನ ಹೆಜ್ಜೆಯನ್ನಿಡಬೇಕಾಗಿದೆ. ಬಾರ್ಡೋಲಿಯ ಸತ್ಯಾಗ್ರಹಕ್ಕೆ ಗೆಲವು ದೊರೆಯಲಿಕ್ಕೆ ಮುಖ್ಯಕಾರಣಗಳೆಂದರೆ (೧) ಮಹಾತ್ಮರಂಥವರ ನಿಯಾಮಕತ್ವವು (೨) ಶ್ರೀ. ವಲ್ಲಭಭಾಯಿ ಪಟೇಲರಂಥವರ ಮುಂದಾಳುತನವು. (೩) ಬಾರ್ಡೋಲಿಯ ಪ್ರಜೆಗಳು ತಮ್ಮ ಮನೆಮಾರು ಹೆಂಡರುಮಕ್ಕಳುಗಳ ಮೇಲೆ ಸರ್ವಸ್ವೀ ಧಾರೆ ಎರೆದು ನಿಂತುಕೊಂಡ ಅಸಾಮಾನ್ಯ ಸ್ವಾರ್ಥತ್ಯಾಗವು. (೪) ಪ್ರಜೆಗಳು ಸರಕಾರದವರನ್ನು ಕೇವಲ ಸಣ್ಣ ಬೇಡಿಕೆಯನ್ನು ಬೇಡಿ ಹಣ್ಣುಮಾಡಲಿಕ್ಕೆ ಪ್ರಯತ್ನಿಸಿದ್ದು. (೫) ಸರಕಾರದವರ ಮೊದಲಿನ ದುರಾಗ್ರಹವು (೬) ಕೊನೆಗೆ ಸರಕಾರದವರು ನಿರ್ಲಜ್ಜರಾಗದೆ, ಮಾನಾಪಮಾನವನ್ನು ಬದಿಗಿಟ್ಟು ಸತ್ಯಕ್ಕೆ ಶರಣುಹೋಗುವಷ್ಟು ಉದಾರಬುದ್ಧಿಯನ್ನು ತೋರಿಸಿದ್ದು. ಇಷ್ಟೆಲ್ಲ ಕಾರಣಗಳು ಒಂದುಗೂಡಿದ್ದರಿಂದ, ಬಾರ್ಡೋಲಿಯ ಸತ್ಯಾಗ್ರಹಕ್ಕೆ ಜಯವು ಸಿಕ್ಕಿತು. ಮಹಾತ್ಮರಂಥ ತಪಸ್ವಿಗಳ ಅಂತಃಪ್ರೇರಣೆಯಿಲ್ಲದಿದ್ದರೆ ಶ್ರೀ ವಲ್ಲಭಭಾಯಿಯವರೊಬ್ಬರಿಂದ ಈ ಮಹಾಕಾರ್ಯವು ನೆರವೇರುತ್ತಿರಲಿಲ್ಲ. ಅವರೇ ಈ ಸತ್ಯಾಗ್ರಹದ ಅಧಿಷ್ಠಾತೃದೇವತೆಗಳು. ದೇವರು ಗುಡಿಯಲ್ಲಿಯೇ ಕುಳಿತಿದ್ದರೂ ಅದು ಸರ್ವರ ಹೃದಯದಲ್ಲಿ ತೇಜವನ್ನು ಪ್ರಕಟಿಸಬಹುದು. ಆದರೆ, ಮಹಾತ್ಮರಂಥವರೊಬ್ಬರಿಂದಲೂ ಈ ಕಾರ್ಯವು ನೆರವೇರುತ್ತಿರಲಿಲ್ಲ. ಏಕೆಂದರೆ ಅರಸನಿಗೆ ಒಬ್ಬ ಸೇನಾಪತಿಯು ಬೇಕೇ ಬೇಕಾಗುತ್ತಾನೆ.

ಅರಸನು ಮಾಡಲಿಕ್ಕೆ ಬಾರದ ಅನೇಕ ಸಂಗತಿಗಳನ್ನು ಸೇನಾಪತಿಯು ಮಾಡಬಲ್ಲನು. ನಮ್ಮ ಸುದೈವದಿಂದ ಶ್ರೀ. ವಲ್ಲಭಭಾಯಿಯಂಥ ಯೋಗ್ಯ ಸೇನಾಪತಿಗಳು ಈ ಸತ್ಯಾಗ್ರಹದ ಸೂತ್ರಧಾರಗಳನ್ನು ಎಳೆದುದರಿಂದ, ಸೈನ್ಯವೆಲ್ಲವೂ ಶಿಸ್ತಿನಿಂದ ಸಾಗಿತು. ಅರಸನು ಆದನು, ಸೇನಾಪತಿಯು ಆದನು. ಆದರೆ ಸೈನ್ಯವಿಲ್ಲದಿದ್ದರೆ ಅವರೇನು ಮಾಡಲಾಪರು? ಯುದ್ಧದ ಗೆಲುವಿಕೆಗೆ ಸೈನ್ಯದ ಶಿಪಾಯಿಗಳ ಪರಾಕ್ರಮವೇ ಮುಖ್ಯ ಕಾರಣವೆಂಬುದನ್ನು ಹೇಳಬೇಕಾಗಿಲ್ಲ.

ಮಹಾಯುದ್ಧದಲ್ಲಿಯು ಸೈನ್ಯವು ಉತ್ಸಾಹದ ಭರದಲ್ಲಿ ಜೀವದ ಹಂಗುದೊರೆದು ಕಾದುತ್ತಿರುತ್ತದೆ. ಆದರೆ, ಸತ್ಯಾಗ್ರಹಯುದ್ಧದ ಪ್ರಕಾರವು ಹಾಗಲ್ಲ. ಇದರಲ್ಲಿ ಶಿಪಾಯಿಗಳು ಮೈಮರಿತು ಪ್ರಯೋಜನವಿಲ್ಲ. ಯಾವಾಗಲೂ ಕಣ್ಣುತೆರೆದು ಯುದ್ಧಮಾಡಬೇಕಾಗುತ್ತದೆ. ಮನೋವಿಕಾರಗಳ ಮಳೆಗರೆಯುವುದಕ್ಕೆ ಇದರಲ್ಲಿ ಅವಕಾಶವಿರುವುದಿಲ್ಲ, ಕ್ಷಣಕ್ಷಣಕ್ಕೆ ಅವರು ಆತ್ಮಸಂಯಮನವನ್ನು ಮಾಡಿಕೊಳ್ಳಬೇಕಾಗುತ್ತದೆ. ಆದುಕಾರಣ, ಇದರಲ್ಲಿಯ ವೀರರು ಮಹಾಯುದ್ಧದ ವೀರರಿಗಿಂತಲೂ ಸಾವಿರಾರು ಪಾಲು ಸಂಯಮನಶೀಲವುಳ್ಳವರಾಗಿರಬೇಕಾಗುತ್ತದೆ. ಬಾರ್ಡೋಲಿಯ ಸತ್ಯಾಗ್ರಹದ ವೀರರನ್ನು ನೋಡಿದರೆ ಇವರೇನು ಸಾಮಾನ್ಯ ಮನುಷ್ಯರಾಗಿರದೆ ಪ್ರತ್ಯಕ್ಷ ದೇವದೂತರೋ ಏನೋ ಎಂಬಂತೆ ಭಾಸವಾಗುತ್ತದೆ. ಮನುಷ್ಯನು ಜೀವಕೊಡಲಿಕ್ಕೆ ಸಿದ್ಧನಾಗಬಹುದು, ಆದರೆ ಮನೆಮಾರು ಕಳೆದುಕೊಂಡು ಹೆಂಡರು ಮಕ್ಕಳನ್ನು ವನವಾಸಕ್ಕಟ್ಟುವುದಕ್ಕೆ ಸಿದ್ಧನಾಗುವುದು ಬಹಳ ಕಠಿಣ. ಆದುದರಿಂದ, ಬಾರ್ಡೋಲಿಯ ಪ್ರಜೆಗಳ ಸ್ವಾರ್ಥತ್ಯಾಗವನ್ನು ಎಷ್ಟು ಕೊಂಡಾಡಿದರೂ ತೀರದು. ಬಾರ್ಡೋಲಿಯ ಸತ್ಯಾಗ್ರಹದ ಮತ್ತೊಂದು ವಿಶೇಷವೇನೆಂದರೆ, ಪ್ರಜೆಗಳು ಕೇವಲ ಸಣ್ಣ ಮಾತಿಗೋಸ್ಕರ ಹಟಹಿಡಿದಿದ್ದರೆಂಬುದು. ಅವರು ತಮ್ಮ ಬೇಡಿಕೆಯ ಪ್ರಮಾಣವನ್ನು ಮಿತಿಮೀರಿ ಹೆಚ್ಚಿಸಿದ್ದರೆ ಅವರಿಗೆ ಈಗ ದೊರೆತಂತೆ ಇಡೀ ಹಿಂದುಸ್ಥಾನದ ಸಹಾನುಭೂತಿಯು ಸಿಕ್ಕುತ್ತಿರಲಿಲ್ಲ. "ಸರಕಾರದವರು ಏರಿಸಿದ ಈ ಭೂಕಂದಾಯವು ಮಿತಿಮೀರಿರುತ್ತದೆಂದು ನಮ್ಮ ವಿಶ್ವಾಸವಿದೆ. ಆದಕಾರಣ, ನಾವು ಹಳೆಯ ಕಂದಾಯವನ್ನು ಮಾತ್ರವೇ ಕೊಡುವೆವಲ್ಲದೆ ಒಂದು ಕಾಸು ಕೂಡ ಹೆಚ್ಚಿಗೆ ಕೊಡುವವರಲ್ಲ; ನಮಗೆ ಹೊಸ ಚವಕಶಿ ಬೇಡ, ಏನೂ ಬೇಡ" ಎಂಬದಾಗಿ ಅವರು ಹಟಹಿಡಿದಿದ್ದರೆ ಒಳಿತಾಗುತ್ತಿರಲಿಲ್ಲ. ಹೀಗೆ ಅತ್ಯಂತ ಕಡಿಮೆ ಬೇಡಿಕೆಯ ಮೇಲೆ ಯುದ್ಧಹೂಡುವುದು ಲೋಕಮಾನ್ಯ ಟಿಳಕರ ಯುದ್ಧಪದ್ಧತಿಯು. ಈ ಸಲ, ಈ ಸತ್ಯಾಗ್ರಹ ಯುದ್ಧದಲ್ಲಿ ಆ ಪದ್ಧತಿಯನ್ನು ಕೈಕೊಂಡ ಕಾರಣದಿಂದಲೇ ಜಯವು ಸಿಕ್ಕಲಿಕ್ಕೆ ಮಾರ್ಗವಾಯಿತು. "ಇಷ್ಟೆಲ್ಲ ಸ್ವಾರ್ಥತ್ಯಾಗಮಾಡಿ, ಇಷ್ಟು ದಿವಸ ಕಷ್ಟ ಅನುಭವಿಸಿ, ಬಾರ್ಡೋಲಿಯ ರೈತರು ಗಳಿಸಿದ್ದೇನು? ನಾಳೆ ಚವಕಶಿ ಮಾಡತಕ್ಕ ಅಧಿಕಾರಿಯು ಭೂಕಂದಾಯವನ್ನೇರಿಸಿದ್ದು ನ್ಯಾಯವೆಂದು ತೀರ್ಪುಕೊಟ್ಟರೆ ಇವರು ತೆರಿಗೆಯನ್ನು ತೆತ್ತಬೇಕಲ್ಲವೇ? ಇದು ಗುಡ್ಡ ಅಗಿದು ಇಲಿಯನ್ನು ತೆಗೆದಂತಾಯಿತಲ್ಲವೇ?" ಎಂಬದಾಗಿ ಈ ಬಾರ್ಡೋಲಿಯ ಜಯದ ಮಹತ್ವವನ್ನು ಕಡಿಮೆಮಾಡುವ ಜನರೂ ಹಲವರಿರುವರು. ಅವರಿಗೆ ಇವರ ಇಂಗಿತವೇ ತಿಳಿದಿಲ್ಲವೆಂದು ಹೇಳಬಹುದು. ಪ್ರಜೆಗಳು ತಮ್ಮ ಇಷ್ಟದಂತೆ ಕರಕೊಡಬೇಕೋ ಹೇಗೆ ಎಂಬದು ಮುಖ್ಯ ಪ್ರಶ್ನೆಯಿದ್ದಿಲ್ಲ, ಪ್ರಜೆಗಳು ಈ ವಿಷಯವನ್ನು ಪುನಃ ಚವಕಶಿ ಮಾಡಬೇಕೆಂದು ಒಂದು ಸಣ್ಣ ಮಾತನ್ನು ಕೇಳಿದರೂ ಒಪ್ಪದಿದ್ದಾಗ ಬಲಾಢ್ಯ ಸರಕಾರವನ್ನು ಸತ್ಯಾಗ್ರಹದಿಂದ ಬಗ್ಗಿಸಲು ಸಾಧ್ಯವೋ ಎಂಬುದು ಪ್ರಶ್ನೆಯಿತ್ತು. ಹಾಗೆ ಮಾಡುವುದು ಸಾಧ್ಯವೆಂಬುದನ್ನು ಬಾರ್ಡೋಲಿಯ ಪ್ರಜೆಗಳು ತಮ್ಮ ಅದ್ವಿತೀಯತ್ಯಾಗದಿಂದ ತೋರಿಸಿಕೊಟ್ಟಿರುವರು. ಇಷ್ಟೆಲ್ಲ ಕಾರಣಗಳು ಕೂಡಿದ್ದರೂ ಸರಕಾರದವರು ನಿರಪರಾಧಿಗಳನ್ನು ಏನೂ ತಪ್ಪಿಲ್ಲದೆ ತುಳಿದುಬಿಡುವಷ್ಟು ನಿರ್ಲಜ್ಜರಾಗಿದ್ದರೆ ಮಾಡುವುದೇನು? ಆದುದರಿಂದ, ಈ ಜಯದಲ್ಲಿ ಅವರಿಗೂ ಒಂದು ಅಣುವಿನಷ್ಟು ಅಂಶವನ್ನು ಕೊಡಲೇಬೇಕು ಇರಲಿ.

ಈ ರೀತಿಯಾಗಿ, ಸರ್ವರಿಗೂ ತೃಪ್ತಿಕರವಾಗುವಂತೆ ಕೊನೆಗಂಡದ್ದು ವಿಹಿತವೇ ಆಯಿತು. ಮಹಾತ್ಮರು ಹಿಂದಕ್ಕೆ ಬಾರ್ಡೋಲಿಯ ಯುದ್ಧವನ್ನು ನಿಲ್ಲಿಸಿದ್ದು ಆಗಿನ ಪರಿಸ್ಥಿತಿಗೆ ಅನುರೂಪವಾಗಿಯೇ ಇತ್ತೆಂದು ಅವರಿಗೆ ಆ ವಿಷಯವಾಗಿ ದೋಷಕೊಡುವ ಕಾರಣವಿಲ್ಲವೆಂದು ನಾವು ಅಭಿಪ್ರಾಯಪಟ್ಟಿದ್ದೆವು. ಆದರೂ ಅನೇಕರು ಅವರಿಗೆ ನಿಷ್ಕಾರಣವಾಗಿ ದೋಷಕೊಡುತ್ತಿದ್ದರು. ಈ ಜಯದಿಂದ ಆ ದೋಷವು ಕೂಡ ತೊಳೆದು ಹೋಯಿತು. ಸರಕಾರವು ಎಷ್ಟೋ ಬಲಾ

ಕ್ಷವಿದ್ದರೂ ಸಶಸ್ತ್ರವಿದ್ದರೂ ಹೆದರುವ ಕಾರಣವಿಲ್ಲವೆಂಬ ಮಾತು ಪ್ರಸ್ತಾಪಿತವಾಯಿತು. ಈ ಬಾರ್ಡೋಲಿಯ ಪ್ರಕರಣದ ವಿಷಯದಲ್ಲಿ ಒಂದು ಮಾತನ್ನು ಮಾತ್ರ ಲಕ್ಷ್ಯದಲ್ಲಿಡಬೇಕು. ಒಂದೇ ದೋಷವಿರುತ್ತದೆ. ಅದೇನೆಂದರೆ ಅದು ಬಾಣನ ಕಾದಂಬರಿಯ ಭಾಷೆಯಂತೆ ಅನುಕರಣಮಾಡುವುದಕ್ಕೆ ಬಹಳ ಕಠಿಣವಾಗಿನೆಂಬುದು. ಆದರೆ ಬಾರ್ಡೋಲಿಯ ಜನರೇನು ಆಕಾಶದಿಂದ ಬಿದ್ದವರಲ್ಲ! ಅವರೂ ನಮ್ಮಂತೆಯೇ ಗುಣದೋಷಗಳುಳ್ಳ ಪ್ರಾಣಿಗಳು ಎಂಬುದನ್ನು ನೆನಪಿಗೆ ತಂದರೆ, ನಾವು ನಿರುತ್ಸಾಹಿಗಳಾಗಲಿಕ್ಕೆ ಏನೂ ಕಾರಣವಿಲ್ಲೆಂದೂ ಪ್ರಸಂಗ ಒದಗಿದರೆ, ಹಿಂದುಸ್ಥಾನದಲ್ಲಿ ಸಾವಿರಾರು ಬಾರ್ಡೋಲಿಗಳನ್ನು ಹುಟ್ಟಿಸಬಹುದೆಂದೂ ಹುರುಪಿನಿಂದ ಕಾರ್ಯಕ್ಕೆ ಪ್ರವರ್ತರಾಗಬೇಕು.

## ಸ್ವರಾಜ್ಯಘಟನೆ

ಸಾಯಮನ್ನ ಕಮಿಶನ್ನದ ಮೇಲೆ ಬಹಿಷ್ಕಾರ ಹಾಕಿದಾಗ, ಹಿಂದುಸ್ಥಾನವು ತನ್ನದೊಂದು ಸ್ವರಾಜ್ಯದ ಘಟನೆಯನ್ನು ಸಿದ್ಧಪಡಿಸುವುದನ್ನು ಗೊತ್ತು ಮಾಡಿತ್ತು. ಅದಕ್ಕೋಸ್ಕರ, ಯಾವತ್ತು ಪಕ್ಷಗಳದೊಂದು ಸಭೆ ಸೇರಿತ್ತು. ಈ ಸಭೆಯು ಕೇವಲ ಕಾಂಗ್ರೆಸ್ಸಿನ ಸಭೆಯಾಗಿದ್ದಿಲ್ಲ. ಬ್ರಾಹ್ಮಣೇತರು, ಮುಸಲ್ಮಾನರು, ಕ್ರಿಶ್ಚಿಯನ್ನರು ಇವರೇ ಮುಂತಾದ, ರಾಷ್ಟ್ರೀಯ ಸಭೆಗೆ ಸೇರದಿದ್ದವರಿಗೆಲ್ಲರಿಗೂ ಆ ಸಭೆಯಲ್ಲಿ ಸೇರಲಿಕ್ಕೆ ಅವಕಾಶವಿತ್ತು. ಈ ಸಭೆಯು ಸ್ವರಾಜ್ಯಘಟನೆಯನ್ನು ಸಿದ್ಧಪಡಿಸುವುದಕ್ಕೆ ಶ್ರೀ. ಮೋತಿಲಾಲ ನೆಹರು ಇವರ ಅಧ್ಯಕ್ಷತೆಯಲ್ಲಿ ಒಂದು ಉಪಮಂಡಳವನ್ನು ನೇಮಿಸಿತ್ತು. ಆ ಉಪಮಂಡಳದವರು ಈಗ ಸ್ವರಾಜ್ಯಘಟನೆಯನ್ನು ಸಿದ್ಧಪಡಿಸಿರುವರು. ಇದನ್ನು ಇವರು ಇಂಗ್ಲಂಡದ ಸಾಮ್ರಾಜ್ಯ ಸತ್ತೆಯ ಕೆಳಗೆ ಈಗ ಸ್ವರಾಜ್ಯವನ್ನು ಅನುಭವಿಸುತ್ತಿರುವ ಆಸ್ಟ್ರೇಲಿಯಾ ಕಾನಡಾ ನ್ಯೂಝಿಲಂಡ ಮುಂತಾದ ಪ್ರಾಂತಗಳ ಸ್ವರಾಜ್ಯಘಟನೆಯ ಮಾದರಿಯ ಮೇಲೆ ಇದನ್ನು ತಯಾರಿಸಿರುವರು. ಹಿಂದುಸ್ಥಾನಕ್ಕೂ ಆ ದೇಶಗಳಿಗೆ ದೊರೆತಂಥ ಸ್ವರಾಜ್ಯವನ್ನು ಬ್ರಿಟಿಶರು ಕೊಡಲೇಬೇಕೆಂದು ಇದರಲ್ಲಿ ಹೇಳಿದೆ. ಅದರ ಸಾರಾಂಶವು ಹೀಗೆ:—

(೧) ಕಾಯದೆ ಮಾಡುವ ಹಕ್ಕು (೨) ನ್ಯಾಯ ಕೊಡುವ ಹಕ್ಕು ಮತ್ತು (೩) ಕಾಯದೆಗಳನ್ನು ಜ್ಯಾರಿಯಲ್ಲಿ ತರುವ ಹಕ್ಕು. ಇವು ಮೂರು ಸ್ವರಾಜ್ಯದ ಮುಖ್ಯ ಹಕ್ಕುಗಳು. ಭಾವೀ ಸ್ವರಾಜ್ಯದಲ್ಲಿ ಇವು ಮೂರೂ ಹಕ್ಕುಗಳು ಹಿಂದುಸ್ಥಾನದ ಪ್ರಜೆಗಳ ಕೈಯಲ್ಲಿ ಇರತಕ್ಕದ್ದು. ಸಾರ್ವಜನಿಕ ನೀತಿ ಮತ್ತು ಸುವ್ಯವಸ್ಥೆ ಇವುಗಳಿಗೆ ಬಾಧೆ ಬರದಂತೆ, ಪ್ರತಿಯೊಬ್ಬನಿಗೆ ಮತ ಸ್ವಾತಂತ್ರ್ಯದ ಅಥವಾ ಧರ್ಮಸ್ವಾತಂತ್ರ್ಯದ ಹಕ್ಕು ಇರತಕ್ಕದ್ದು. ಪ್ರಾಥಮಿಕ ಶಿಕ್ಷಣವನ್ನು ದೊರಕಿಸುವ ಹಕ್ಕು ಪ್ರತಿಯೊಬ್ಬ ನಾಗರಿಕನಿಗೆ ಇರತಕ್ಕದ್ದು. ಕಾಯದೆಯ ದೃಷ್ಟಿಯಿಂದ ಯಾವತ್ತು ಧರ್ಮ ಮತ್ತು ಜಾತಿಗಳು ಸಮಸಮಾನವಾದವುಗಳು. ಸಾರ್ವಜನಿಕ ರಸ್ತೆ, ಸಾರ್ವಜನಿಕ ಭಾವಿ ಮತ್ತು ಸಾರ್ವಜನಿಕ ಆರಾಮ ಸ್ಥಾನಗಳ ಉಪಯೋಗವನ್ನು ಮಾಡುವ ಹಕ್ಕು ಸರ್ವರಿಗೂ ಇರುತ್ತದೆ. ನಾಗರಿಕತೆಯ ಹಕ್ಕು ಸ್ತ್ರೀ ಮತ್ತು ಪುರುಷರಿಗಿಬ್ಬರಿಗೂ ಸಮಾನವಾಗಿದೆ.

(೨) ಕಾಯದೆಗಳನ್ನು ಮಾಡುವ ಹಕ್ಕು ಪಾರ್ಲಮೆಂಟಿನ ಕಡೆಗೆ ಉಳಿಯುವುದು. ಅರಸನು, ಸಿನೇಟ ಸಭೆ, ಮತ್ತು ಪ್ರತಿನಿಧಿ ಸಭೆ ಇವು ಮೂರು ಕೂಡಿ ಪಾರ್ಲಮೆಂಟ ಎಂದು ಹೆಸರು. ಹಿಂದುಸ್ಥಾನಕ್ಕೆ ಗವ್ಹರ್ನರ ಜನರಲ್ಲರನು ನೇಮಿಸುವ ಅಧಿಕಾರ ಅರಸನದು. ಸಿನೇಟ ಸಭೆಯಲ್ಲಿ ೨೦೦ ಸದಸ್ಯರಿರತಕ್ಕದ್ದು. ಆ ಸದಸ್ಯರುಗಳನ್ನು ಪ್ರಾಂತಿಕ ಕಾಯದೆ ಮಂಡಳಗಳು ಲೋಕ ಸಂಖ್ಯೆಯ ಪ್ರಮಾಣದಲ್ಲಿ ಆರಿಸಿ ಕಳುಹಿಸತಕ್ಕದ್ದು. ಪ್ರತಿನಿಧಿ ಸಭೆಯಲ್ಲಿ ೫೦೦ ಸದಸ್ಯರಿರತಕ್ಕದ್ದು. ಜನತೆಯು ಈ ಸದಸ್ಯರನ್ನು ಆರಿಸತಕ್ಕದ್ದು. ಈ ಪ್ರಕಾರ ಅರಸನ ಪ್ರತಿನಿಧಿಯಾದ ಗವರ್ನರ ಜನರಲ್ಲ ೨೦೦ ಸಿನೇಟಿನ ಸದಸ್ಯರು ಮತ್ತು ೫೦೦ ಪ್ರತಿನಿಧಿ ಸಭೆಯ ಸದಸ್ಯರು ಇವರಿಂದ ಕೂಡಿದ ಈ ಪಾರ್ಲಮೆಂಟಿನ ಸಭೆಗೆ, ಹಿಂದುಸ್ಥಾನದ ಅಂತರ್ವ್ಯವಸ್ಥೆಯ ಬಗ್ಗೆ ಇಲ್ಲಿಯ ಸೈನ್ಯ, ಹಡಗುಪಡೆ ಮುಂತಾದುವುಗಳ ಸಂಬಂಧದಿಂದ ಯಾವ ಬೇಕಾದ ಕಾಯದೆಯನ್ನು ಮಾಡುವ ಅಧಿಕಾರ ಇರತಕ್ಕದ್ದು. ಪರರಾಷ್ಟ್ರಗಳ ಸಂಬಂಧದಿಂದ, ಕಾನಡಾ ಮುಂತಾದ ದೇಶಗಳಿಗೆ ಎಷ್ಟು ಹಕ್ಕು ಇರುತ್ತದೆಯೋ ಅಷ್ಟು ಈ ಪಾರ್ಲಮೆಂಟಿಗೆ ಇರತಕ್ಕದ್ದು.

(೩) ಇಡೀ ಹಿಂದುಸ್ಥಾನದ ಅಧಿಕಾರವನ್ನು ನಡೆಯಿಸುವ ಅಧಿಕಾರವು ಗವರ್ನರ ಜನರಲ್ಲನಿಗೂ ಮತ್ತು ಅವನ ಕೈಕೆಳಗಿನ ಒಬ್ಬ ಮುಖ್ಯ ಪ್ರಧಾನ ಮತ್ತು ಆರುಜನ ಮಂತ್ರಿಗಳಿಗೂ ಇತರಕ್ಕದ್ದು ಪ್ರಾಂತಗಳ ಅಧಿಕಾರವು ಗವರ್ನರ

ಮತ್ತು ಪ್ರಾಂತಗಳಿಗೋಸ್ಕರ ಕಾಯದೆಗಳನ್ನು ಮಾಡುವ ಅಧಿಕಾರವು ಅಲ್ಲಿಯ ಕಾಯದೆ ಮಂಡಳಗಳಿಗೆ ಇರತಕ್ಕದ್ದು. ಒಂದು ಲಕ್ಷಕ್ಕೆ ಒಬ್ಬನಂತೆ ಕಾಯದೆ ಮಂಡಳದಲ್ಲಿ ಪ್ರತಿನಿಧಿಯಿರಬೇಕು. ಒಂದು ಕೋಟಿಗಿಂತ ಕಡಿಮೆ ಜನಸಂಖ್ಯೆಯುಳ್ಳ ಪ್ರಾಂತದ ಕಾಯದೆ ಮಂಡಳದಲ್ಲಿ ೧೦೦ ಜನ ಸದಸ್ಯರಿರತಕ್ಕದ್ದು. ಪ್ರಾಂತಗಳನ್ನು ಭಾಷಾನ್ವಯವಾಗಿ ವಿಭಾಗಿಸತಕ್ಕದ್ದು. ಯಾವ ಪ್ರಾಂತದ ಜನಸಮೂಹವು ಬಹುಮತದಿಂದ ಆ ಪ್ರಕಾರದ ಪ್ರಾಂತವನ್ನು ಬೇಡುತ್ತದೆಯೋ ಮತ್ತು ಯಾವ ಪ್ರಾಂತವು ತನ್ನ ಖರ್ಚನ್ನು ತಾನು ತೂಗಿಸಿಕೊಳ್ಳಲು ಸಮರ್ಥವಿರುತ್ತದೆಯೋ ಅದಕ್ಕೆ ಪ್ರತ್ಯೇಕ ಪ್ರಾಂತವನ್ನು ಕೊಡಬೇಕು. ಈ ಪ್ರಕಾರದ ಸ್ಥಿತಿಯು ಕರ್ನಾಟಕ ಮತ್ತು ಸಿಂಧಪ್ರಾಂತಗಳದಿರುವುದರಿಂದ ಅವುಗಳಿಗೆ ಪ್ರತ್ಯೇಕ ಪ್ರಾಂತವನ್ನು ಕೊಡತಕ್ಕದ್ದು.

(೪) ನ್ಯಾಯವನ್ನು ಕೊಡುವ ಮುಖ್ಯ ಅಧಿಕಾರವು "ಸುಪ್ರೀಮು ಕೋರ್ಟ" ಎಂಬ ಕೋರ್ಟಿನ ಕಡೆಗೆ ಇರತಕ್ಕದ್ದು.

ಈ ಪ್ರಕಾರ ಅದರ ಸಂಕ್ಷೇಪ ಸ್ವರೂಪವಿರುತ್ತದೆ. ಭಾಷಾನ್ವಯ ಪ್ರಾಂತರಚನೆಯ ತತ್ವವು ಮಾನ್ಯಮಾಡಲ್ಪಟ್ಟದ್ದಲ್ಲದೆ ಕರ್ನಾಟಕಕ್ಕೆ ಈ ಕಮೀಟಿಯವರು ಬೇರೆ ಪ್ರಾಂತವನ್ನು ಕೊಟ್ಟುಬಿಡಬೇಕೆಂದು ಹೇಳಿರುವರೆಂಬುದು ಸಂತೋಷದ ಸಂಗತಿ; ಈಗಿನ ಸಮಾಜಸ್ಥಿತಿಯಲ್ಲಿ ಸ್ಪೃಶ್ಯಾಸ್ಪೃಶ್ಯರೆಂಬ ಭೇದವನ್ನು ಪರಿಗಣಿಸದೆ, ಸಾರ್ವಜನಿಕ ಸಂಸ್ಥೆಗಳಲ್ಲೆಲ್ಲ ಪ್ರತಿಯೊಬ್ಬರ ಪ್ರವೇಶಕ್ಕೆ ಅನುಕೂಲಮಾಡಿಕೊಟ್ಟದ್ದು ವಿಹಿತವೇ ಆಯಿತು. ಸ್ತ್ರೀಯರಿಗೆ ಇಷ್ಟು ಬೇಗನೇ ಪುರುಷರಷ್ಟೇ ಹಕ್ಕು ಕೊಟ್ಟದ್ದುದರ ಪರಿಣಾಮವು ಈ ದೇಶದಲ್ಲಿ ಹಿತದಾಯಕವಾಗುವುದಿಲ್ಲವೆಂದು ನಮಗೆ ತೋರುತ್ತದೆ. ಪಾಶ್ಚಿಮಾತ್ಯ ದೇಶಗಳಂಥ ಸ್ತ್ರೀಪುರುಷರ ಸಮತೆಯನ್ನು ಮುಂದರಿಸುವ ದೇಶಗಳಲ್ಲಿ ಕೂಡ ಸ್ತ್ರೀಯರಿಗೆ ಕೂಡ ಈ ಹಕ್ಕುಗಳನ್ನು ಪಡೆದುಕೊಳ್ಳುವುದಕ್ಕೆ ಕುರಿಕೋಣಗಳು ಬಿದ್ದವು. ಆದರೆ ನಮ್ಮ ಹಿಂದುಸ್ಥಾನ ದೇಶದ ಸ್ತ್ರೀಯರು ಧನ್ಯರು, ಪುರುಷರು ಅತ್ಯಂತ ಉದಾರ ಮತವಾದಿಗಳು! ಅವರು ತಮ್ಮ ಸ್ತ್ರೀಯರ ಸಲುವಾಗಿ ಹಕ್ಕುಗಳನ್ನು ತೂರಿ ಒಗೆಯುತ್ತಾರೆ! ಇದರಲ್ಲಿ ನಮ್ಮ ಸಮಾಜದ ಬಂಧನಗಳು ಎಷ್ಟು ಸಿಥಿಲವಾಗಿರುವುವೆಂಬುದೂ ನಮ್ಮ ರಾಜಕಾರಣಧುರಂಧರರು ಸದ್ಯದ ಸಮಾಜಸ್ಥಿತಿಯನ್ನು ದುರ್ಲಕ್ಷಿಸಿ, ಹೇಗೆ ತಮ್ಮ ಮನಸ್ಸಿನ ಒಲವಿಗನುಸಾರವಾಗಿ ವರ್ತಿಸುತ್ತಾರೆಂಬುದೂ ಮಾತ್ರ ಗೊತ್ತಾಗುತ್ತದೆ. ಮತ್ತೇನೂ ಇಲ್ಲ. ಆಗಲಿ, ಒಮ್ಮೆ ಈ ಸ್ವಚ್ಛಂದವೃತ್ತಿಯು ಕೊನೆ ಮುಟ್ಟಲಿ.

ಹಿಂದು ಮುಸಲ್ಮಾನರ ಜಗಳವನ್ನು ಈ ಕಮಿಟಿಯವರು ಒಳ್ಳೇ ಚತುರತೆಯಿಂದ ತೀರಿಸಿರುವರು. ಮುಸಲ್ಮಾನರಿಗೆ ೧೦ ವರ್ಷಗಳ ಪರ್ಯಂತ ಮಾತ್ರ ಕೆಲವು ಹೆಚ್ಚಿನ ಹಕ್ಕುಗಳನ್ನು ಕೊಟ್ಟಿರುವರು. ಮುಸಲ್ಮಾನರಿಗೆ ಇದರಿಂದಲಾದರೂ ಸಮಾಧಾನವಾದರೆ, ಐಕ್ಯವನ್ನು ಗಳಿಸಿದ ಲಾಭವಾದರೂ ನಮಗೆ ಆಗಬಹುದು. ಹಿಂದುಸ್ಥಾನಕ್ಕೆ ಪೂರ್ಣಸ್ವಾತಂತ್ರ್ಯವೇ ಇರಬೇಕೆಂಬುದೊಂದು ಪಕ್ಷವಿರುತ್ತದೆ. ಮತ್ತು ಅದು ದಿನದಿನಕ್ಕೆ ಪ್ರಬಲವಾಗುತ್ತದೆ. ಆದರೆ, ಪೂರ್ಣಸ್ವತಂತ್ರ್ಯವು ಸ್ವರಾಜ್ಯಘಟನೆಗಳ ಮೂಲಕ ದೊರೆಯತಕ್ಕ ಪದಾರ್ಥವಲ್ಲ, ಆದಕಾರಣ, ಅದರ ವಿಚಾರವು ಈಗ ಬೇಡ.

---

## ಬಾಗಲಕೋಟೆಯ ಪರಿಷತ್ತುಗಳು

ಜುಲೈತಿಂಗಳ ಕೊನೆಯಲ್ಲಿಯೂ ಆಗಸ್ಟತಿಂಗಳ ಪ್ರಾರಂಭದಲ್ಲಿಯೂ ಬಾಗಲಕೋಟೆಯು ಅನೇಕ ಚಳವಳಿಗಳ ಕೇಂದ್ರವಾಗಿತ್ತು. ಡಾ॥ ಹರ್ಡೀಕರ ಇವರು ಕರ್ನಾಟಕ ಸೇವಾದಲದ ವ್ಯಾಯಾಮಮಂದಿರವನ್ನು ಕಟ್ಟಿಸಿರುವರು. ೧ನೆಯ ಆಗಸ್ಟ ದಿವಸ ಹೈದ್ರಾಬಾದದ ಪ್ರಸಿದ್ಧ ಕೋಟ್ಯಾಧೀಶರಾದ ಧನರಾಜರಿಂದ ಆ ಕಟ್ಟಡದ ವಾಸ್ತುಸಮಾರಂಭವು ಜರುಗತಕ್ಕದ್ದು ಗೊತ್ತಾಗಿತ್ತು. ಆ ಸಂಧಿಯನ್ನು ಸಾಧಿಸಿ, ಆಯುರ್ವೇದ ಪ್ರದರ್ಶನ, ಖಾದೀಪ್ರದರ್ಶನ, ಸ್ವದೇಶ ವಸ್ತುಪ್ರದರ್ಶನ, ಒಕ್ಕಲತನ ಪ್ರದರ್ಶನ, ಐತಿಹಾಸಿಕ ಪ್ರದರ್ಶನ, ಪತ್ರಿಕೆಗಳ ಪ್ರದರ್ಶನ ಮುಂತಾದ ಪ್ರದರ್ಶನಗಳನ್ನು ಬಾಗಲಕೋಟೆಯವರು ಏರ್ಪಡಿಸಿದ್ದರು. ಅಲ್ಲದೆ, ರೈತರ ಸಭೆ, ಹಿಂದುಸ್ಥಾನೀ ಸೇವಾದಲದ ಪರಿಷತ್ತು, ಸಂಪಾದಕರ ಪರಿಷತ್ತು, ಭಗಿನಿಯರ ಪರಿಷತ್ತು, ಕರ್ನಾಟಕ ವರ್ತಕರ ಪರಿಷತ್ತು, ಗೋರಕ್ಷಣ ಪರಿಷತ್ತು ಮುಂತಾದ ಅನೇಕ ಸಭೆಗಳನ್ನೂ ಕೂಡಿಸಿದ್ದರು. ಅಲ್ಲದೆ, ತರುಣರ ಆಟನೋಟಗಳು ನಡೆದುವು. ಇದರಿಂದ ಹೋದ ತಿಂಗಳಿನಲ್ಲಿ ಇಡೀ ಕರ್ನಾಟಕವೇ ಬಾಗಲಕೋಟೆಯಲ್ಲಿ ಸೇರಿತ್ತೆಂದು ಹೇಳಬಹುದು. ಒಂದೇಸಮಯದಲ್ಲಿ ಅನೇಕ ಪರಿಷತ್ತು ಪ್ರದರ್ಶನಗಳನ್ನು ಕೂಡಿಸುವುದರಿಂದ ಕಾರ್ಯಕ್ಕೆ ತುಸು ತೊಂದರೆಯುಂಟಾ

ನರೂ ಒಟ್ಟಿನಲ್ಲಿ ಹೀಗೆ ಒಂದೆಡೆಗೆ ಅನೇಕ ತರಹದ ಜನರು ಕೂಡುವುದರಿಂದ ಲಾಭವೇ ಆಗುತ್ತಿದೆ. ಸೂರ್ಯನ ಕಿರಣಗಳನ್ನು ಒಂದೆಡೆಗೆ ತರುವುದರಿಂದ ಅದ್ಭುತಕಾರ್ಯಗಳಾಗುತ್ತವೆಂಬುದು ಗೊತ್ತಿದ್ದವರಿಗೆ ಇಂಥ ಚಳವಳಗಳ ಮಹತ್ವವನ್ನು ಹೇಳುವ ಕಾರಣವಿಲ್ಲ. ಆದರೆ, ಕಾರ್ಯದ ದೃಷ್ಟಿಯಿಂದ ಇಂಥ ಚಳವಳಗಳನ್ನು ಒಂದು ವಾರದ ವರೆಗೆ ನಡೆಯಿಸುವುದು ಹಿತವು. ಬಾಗಲಕೋಟೆಯ ಆದರ್ಶನಾಟಕಮಂಡಲದವರು ಪ್ರಸಿದ್ಧ ವಾಙ್ಮಯಭಕ್ತರಾದ ವೈ. ಕೆರೂರ ವಾಸುದೇವಾಚಾರ್ಯವಿರಚಿತವಾದ ಪತಿವಶೀಕರಣವೆಂಬ ನಾಟಕವನ್ನು ಆಡಿ ತೋರಿಸಿ, ಜನರ ದಣುವನ್ನು ಆರಿಸಿದರು. ಇಷ್ಟೆಲ್ಲ ಪರಿಷತ್ತುಗಳಲ್ಲಿ ನಡೆದ ಸಂಗತಿಗಳನ್ನು ವಿಸ್ತಾರವಾಗಿ ಕೊಡುವುದು ಈ ಚಿಕ್ಕ ಮಾಸಪತ್ರಿಕೆ ಸಾಧ್ಯವಿಲ್ಲ. ಆದಕಾರಣ ನಮ್ಮ ಪದ್ಧತಿಯನ್ನನುಸರಿಸಿ, ಇವೆಲ್ಲವುಗಳ ಸಮಾಲೋಚನೆಯನ್ನಷ್ಟೇ ಮಾಡುತ್ತೇವೆ. ಈ ಚಳವಳಗಳಲ್ಲಿ ಬಾಲಕರಿಂದ ಮೊದಲ್ಗೊಂಡು ಮುದುಕರವರೆಗೆ ಎಲ್ಲರಿಗೂ ಬೋಧ ತೆಗೆದುಕೊಳ್ಳಲಿಕ್ಕೆ ಬರುವಂತಿತ್ತೆಂಬುದು ಈ ಚಳವಳಗಳ ವಿಶೇಷ. ಬಾಲಕರಿಗೆ ಆಟನೋಟಗಳು ನಾಟಕಪ್ರದರ್ಶನಗಳು ರುಚಿಕರವಾಗಿದ್ದವು, ಸ್ತ್ರೀಯರಿಗೋಸ್ಕರ ಭಗಿನಿಯರಸಭೆ ಮತ್ತು ಪ್ರದರ್ಶನಗಳಿದ್ದವು. ಜ್ಞಾನಸಂಪಾದನೆಯ ಸಲುವಾಗಿ ಸಂಪಾದಕ ಪರಿಷತ್ತು ಇದ್ದರೆ, ವರ್ತಕರ ಸಲುವಾಗಿ ವರ್ತಕ ಸಭೆಯಿತ್ತು. ಸಮಾಜಸೇವಕರು ಗೋರಕ್ಷಣೆಯಿಂದ ಬೋಧತೆಗೆದುಕೊಳ್ಳುವಂತಿತ್ತು. ಹಳ್ಳಿಯ ಜನರ ಸಲುವಾಗಿ ರೈತರಸಭೆ ಪ್ರದರ್ಶನಗಳಿದ್ದವು. ಒಟ್ಟಿನಲ್ಲಿ, ಪ್ರತಿಯೊಬ್ಬನಿಗೂ ಒಂದಿಲ್ಲೊಂದು ರೀತಿಯಿಂದ ಮನೋರಂಜಕವಾಗುವಂತೆಯೂ ಬೋಧಪ್ರದವಾಗುವಂತೆಯೂ ಈ ಚಳವಳಗಳ ಏರ್ಪಾಟವಾಗಿತ್ತು. ಇವೆಲ್ಲವುಗಳಿಗೆ ಸೂತ್ರಧಾರರಾಗಿದ್ದ ಶ್ರೀ. ಹರ್ಡೀಕರ ಇವರ ಶಿಸ್ತಿನ ಜೀವಿಯ ಮೂಲಕ ಈ ಚಳವಳಗಳಿಗೆ ಹೆಚ್ಚು ಶೋಭೆಯುಂಟಾಗಿತ್ತು. ಧಾರವಾಡದಲ್ಲಿ ಮೇ ತಿಂಗಳಿನಲ್ಲಿ ಕೂಡಿದ ಸಭೆಗಳು ಬೇರೆ ಮಾದರಿಯವು, ಇವು ಬೇರೆ ಮಾದರಿಯವು. ಆದಕಾರಣ ಯಾರಿಗೂ ಈ ಚಳವಳದಿಂದ ಬೇಸರವಾಗಲಿಲ್ಲ. ಸಂಪಾದಕರ ಪರಿಷತ್ತು ವರ್ತಕರ ಪರಿಷತ್ತು ಇವೇ ಮುಂತಾದ ಕೆಲವುಗಳನ್ನು ಬಾಗಲಕೋಟೆಯವರೂ ಹೊಸದಾಗಿಯೇ ಪ್ರಾರಂಭಮಾಡಿ ಯಶಸ್ವಿಯಾಗಿ ಜರುಗಿಸಿದ್ದರಿಂದ ಅವರು ಕರ್ನಾಟಕಕ್ಕೆ ಹೊಸ ಹಾದಿಯನ್ನು ತೋರಿಸಿರುವರು. ಅವುಗಳನ್ನು ಮುಂದೆ ನಡಿಸುವ ಕರ್ತವ್ಯವು ಕರ್ನಾಟಕರದು.

ಕರ್ನಾಟಕದಲ್ಲಿ ಹೀಗೆ ಚಳವಳಗಳು ನಡೆದ ಕಾಲಕ್ಕೆಯೆ ಆಂಧ್ರದೇಶದಲ್ಲಿ ಗುಂತೂರಿನಲ್ಲಿಯೂ ಆ ಪ್ರಾಂತದ ಚಳವಳಗಳು ನಡೆದಿದ್ದವು. ಅವರು ಅಲ್ಲಿ ೧೩ ಪರಿಷತ್ತುಗಳನ್ನು ಕೂಡಿಸಿದ್ದರು. ಅವು ಯಾವುವೆಂದರೆ (೧) ಕೋ-ಆಪರೇಟಿವ್ಹ ಪರಿಷತ್ತು (೨) ಲೋಕಲಬೋರ್ಡುಗಳ ಪರಿಷತ್ತು (೩) ರೈತರ ಪರಿಷತ್ತು (೪) ವಾಚನಾಲಯಗಳ ಪರಿಷತ್ತು (೫) ನಿಸರ್ಗವೈದ್ಯಪದ್ಧತಿಯ ಪರಿಷತ್ತು (೬) ಸಮಾಜಸೇವಾ ಪರಿಷತ್ತು (೭) ರೇಲ್ವೆಪ್ರವಾಸಿಕರ ಪರಿಷತ್ತು (೮) ಇನಕಮ್ ಟ್ಯಾಕ್ಸ ಪರಿಷತ್ತು (೯) ಅಸ್ಪೃಶ್ಯರ ಪರಿಷತ್ತು. (೧೦) ಆದಿ ಆಂಧ್ರರ ಪರಿಷತ್ತು (೧೧) ಕಲಾವಂತಿಣಿಯರ ಪರಿಷತ್ತು (೧೨) ಕಾಯದೆ ಕ್ಷಣ ಪರಿಷತ್ತು (೧೩) ಅರ್ಚಕರ ಪರಿಷತ್ತು. ಆಂಧ್ರದೇಶದಲ್ಲಿಯ ಮುಖ್ಯ ದೊಡ್ಡಸಂಸ್ಥೆಗಳು ಎರಡು (೧) ಆಂಧ್ರಪ್ರಾಂತಿಕಸಭೆ (೨) ಆಂಧ್ರಮಹಾಸಭೆ. ಆಂಧ್ರಪ್ರಾಂತಿಕಸಭೆಯು ಕಾಂಗ್ರೆಸ್ಸಿನ ಚಳವಳಗಳನ್ನು ನಡಿಸುತ್ತದೆ, ಆಂಧ್ರಮಹಾಸಭೆಯು ಆಂಧ್ರದೇಶಕ್ಕೆ ಸಂಬಂಧಿಸಿದ ಚಳವಳಗಳನ್ನು ನಡಿಸುತ್ತದೆ. ಗುಂತೂರಿನಲ್ಲಿ ನಡೆದ ಮೇಲ್ಕಾಣಿಸಿದ ಚಳವಳಗಳು ಆಂಧ್ರದೇಶಕ್ಕೆ ಸಂಬಂಧಿಸಿದ ಚಳವಳಗಳು. ಇವುಗಳ ಹೆಸರುಗಳನ್ನು ನಾವು ವಿಸ್ತಾರವಾಗಿ ಕೊಡುವ ಕಾರಣವೇನೆಂದರೆ ನೆರೆ ಪ್ರಾಂತದವರು ಮಾಡುತ್ತಿರುವ ಚಳವಳಗಳ ಜ್ಞಾನವು ನಮಗೆ ಇಡುವುದು ಅವಶ್ಯವೆಂದು ನಮಗೆ ತೋರುತ್ತದೆ. ಈಗ ಕಾಂಗ್ರೆಸ್ಸಿನವರಿಂದ ಭಾಷಾನ್ವಯವಾಗಿ ಪ್ರಾಂತಗಳು ವಿಭಾಗಿಸಲ್ಪಟ್ಟಿರುವುದರಿಂದಂತೂ ಈ ಪ್ರಕಾರವಾದ ಅಂತಪ್ರಾಂತೀಯ ಕೊಂಡೆಗಳನ್ನು ಜೋಡಿಸುವುದು ನಮಗೆ ಹೆಚ್ಚು ಅವಶ್ಯವಾಗಿ ತೋರುತ್ತದೆ. ಆದಕಾರಣ ನಮ್ಮ ಚಳವಳಗಳಿಗೆ ನೆರೆಪ್ರಾಂತೀಯರನ್ನು ಆಮಂತ್ರಣ ಕೊಟ್ಟು ಕರಿಸಿಕೊಳ್ಳುವ ಪರಿಪಾಠವನ್ನು ಹೆಚ್ಚಿಗೆ ಬೆಳಿಸಬೇಕೆಂದು, ಕೆಲವು ಅಂತಪ್ರಾಂತೀಯ ರಾಜಕೀಯ ಸಾಮಾಜಿಕ ಐತಿಹಾಸಿಕ ಸಂಸ್ಥೆಗಳನ್ನು ಏರ್ಪಡಿಸಬೇಕೆಂದೂ ನಾವು ಈ ಸಂದರ್ಭದಲ್ಲಿ ಸೂಚಿಸಿರುತ್ತೇವೆ. ಪ್ರಾಂತಿಕ ಅಭಿಮಾನವು ಅತಿರೇಕವಾಗದಿರುವುದಕ್ಕೆ ಇದೊಂದು ಮಾರ್ಗವು ಇರಲಿ. ಬಾಗಲಕೋಟೆಯವರು ಈ ಚಳವಳದಿಂದ ಸ್ಫೂರ್ತಿಗೊಂಡು ಆ ಚಳವಳಗಳಿಗೆ ತಮ್ಮ ಪಟ್ಟಣದಲ್ಲಿ ಸ್ಥಾಯಿಕ ಸ್ವರೂಪವನ್ನು ಕೊಡಲು ಯತ್ನಿಸುವುದು ಅವಶ್ಯವಿದೆಯೆಂದು ನಾವು ಇಲ್ಲಿ ಸೂಚಿಸದೆ ಇರಲಾರೆವು.

---

## ಬೆಂಗಳೂರಿನ ಗಣಪತಿಯ ಗಲಭೆ

ಬೆಂಗಳೂರಿನಲ್ಲಿ ಗಣಪತಿಯ ಸಂಬಂಧದಿಂದ ಅಲ್ಲಿ ಉಂಟಾಗಿರುವ ಅನಾಹುತಗಳನ್ನು ಈಗ ಎಲ್ಲರೂ ವೃತ್ತಪತ್ರಿಕೆಗಳಲ್ಲಿ ಓದಿರಬಹುದು. ಈ ಗಣಪತಿಯ ಉದರದಿಂದ ಅನೇಕ ಮುಷ್ಟಿಮೋದಕಗಳು ಹೊರಬಿದ್ದಿವೆ. ಶಾಲೆಯ ಹುಡುಗರು ಆ ಗಣಪತಿಯನ್ನು ಪೂಜಿಸುತ್ತಿದ್ದುದೇನೂ ಸುಳ್ಳಲ್ಲ. ಅದನ್ನು ಅವರ ಇಚ್ಛೆಯ ವಿರುದ್ಧವಾಗಿ ಎತ್ತಿಟ್ಟುದುದೂ ಸುಳ್ಳಲ್ಲ. ಅದಕ್ಕಾಗಿ ಅವರಿಗೆ ಕೋಪವುಂಟಾಗುವುದೂ ಸ್ವಾಭಾವಿಕವೇ. ಆ ಕೋಪವು ತರುಣರಲ್ಲಿ ಮೇರೆ ತಪ್ಪುವುದೂ ಶೋಚನೀಯ ಸಂಗತಿಯಾದರೂ ಅಸ್ವಾಭಾವಿಕವಾದದೇನೂ ಅಲ್ಲ. ಇವಿಷ್ಟು ಮಾತುಗಳನ್ನು ಎಲ್ಲರೂ ಒಪ್ಪಿದ ಬಳಿಕ, ಇದರಲ್ಲಿ, ಜನತೆಯ ಮುಖಂಡರ ಭಾಗವೆಷ್ಟು ಸರಕಾರದವರ ಭಾಗವೆಷ್ಟು, ಮತ್ತು ಈ ಗಣಪತಿಯ ಮೇಲೆ ಕಣ್ಣಿಟ್ಟವರ ಭಾಗವೆಷ್ಟು, ಇವೇ ಮುಂತಾದ ಸಂಗತಿಗಳು. ಅತ್ತಕಡೆಯ ವೃತ್ತಪತ್ರಗಳಲ್ಲಿ ಮುಂಚೆ ಮುಂಚೆ ಅನೇಕ ಸಂಗತಿಗಳು ಬರುತ್ತಿದ್ದವು. ಆದರೆ, ಅಲ್ಲಿಯ ನಿರಂಕುಶ ಸರಕಾರವು ಅನ್ಯಾಯದಿಂದ ಅನೇಕ ವೃತ್ತಪತ್ರಗಳನ್ನು ನಿಲ್ಲಿಸಿಬಿಟ್ಟಿತು. ಮತ್ತು ತಾನೇ ವಾರ್ತೆಗಳನ್ನು ಕೊಡುವ ಉದ್ಯೋಗವನ್ನು ಕೈಕೊಂಡಿತು. ಸರಕಾರದ ವಿರುದ್ಧವಾಗಿದ್ದ ಸುದ್ದಿಗಳಿಗೆ ಆಸ್ಪದವೇ ಉಳಿಯಲಿಲ್ಲ. ಇದರಿಂದ ಸರಕಾರವು ಏನು ಸಾಧಿಸಿತು? ಪತ್ರಿಕೆಗಳು ಸುಳ್ಳು ಸುದ್ದಿಯನ್ನು ಕೊಡುತ್ತಿದ್ದರೆ ಅವುಗಳನ್ನು ಸರಿಪಡಿಸುವುದು ತಮ್ಮ ಕೈಯ್ಯಲ್ಲಿಯೇ ಇತ್ತು. ಅವರು ದ್ವೇಷಾಸೂಯೆಗಳಿಗೆ ಪುಟಕೊಡುವ ಲೇಖಗಳನ್ನು ಬರೆಯುತ್ತಿದ್ದರೆ, ಅಂಥ ಲೇಖಗಳನ್ನು ಬರೆಯಬಾರದೆಂದು ಮಾತ್ರ ಅಪ್ಪಣೆಯಿತ್ತಿದ್ದರೆ ಸಾಕಾಗಿತ್ತು. ಈ ವಿವೇಕವನ್ನು ತೊರೆದು ಪತ್ರಿಕೆಗಳನ್ನು ನಿಲ್ಲಿಸಿ, ಅಲ್ಲಿ ಕತ್ತಲೆ ಕೆಡಹಿದ್ದು ಧೂರ್ತತನವಾಗಲಿಲ್ಲವೆಂದು ನಾವು ಹೇಳದೆ ಇರಲಾರೆವು. ಅನೇಕ ದಿವಸಗಳ ವರೆಗೆ ಸರಕಾರವು ಕೊಟ್ಟ ಸುದ್ದಿಗಳೇ ಸುದ್ದಿಗಳು. ಅವುಗಳ ಮೇಲೆ ಸರ್ವಸ್ವೀ ವಿಶ್ವಾಸವಿಡಲಿಕ್ಕೆ ನಾವು ಸಿದ್ಧರಿಲ್ಲ. ಅವರು ತೆಗೆದ ಪ್ರಕಟನಾಪತ್ರಿಕೆಗಳನ್ನು ಓದಿದರೂ ಅವರು ಎಲ್ಲ ಸಂಗತಿಗಳನ್ನು ಬಹಿರಂಗಪಡಿಸದೆ, ಇರುವರೆಂಬುದು ಸ್ಪಷ್ಟವಾಗಿ ಕಾಣುತ್ತದೆ. ಇಲ್ಲದೆ ಗುಂಡುಗಳು ಹಾರಿಲ್ಲವೆಂದು ಅವರು ಹೇಳುತ್ತಿದ್ದರೂ ಅಲ್ಲಿಂದ ಬರುವ ಸುದ್ದಿಗಳೇನೋ ಅದಕ್ಕೆ ವಿರುದ್ಧವಾಗಿವೆ. ಇದಲ್ಲದೆ, ಈಗ ಚವಕಶಿಯು ಪ್ರಾರಂಭವಾಗಿರುವುದರಿಂದ, ಈ ವಿಷಯಕ್ಕೆ ನಾವು ಹೆಚ್ಚಿಗೆ ಬರೆಯಲು ಇಚ್ಛಿಸುವುದಿಲ್ಲ. ಆದರೆ, ಈ ಪ್ರಸಂಗದಲ್ಲಿ ಸರಕಾರವು ಎಷ್ಟು ಧೂರ್ತತನದಿಂದ ನಡೆಯಲಿಲ್ಲವೆಂದು ಹೊರಗಿನವರ ಅಭಿಪ್ರಾಯವಾಗದೆ ಇರಲಾರದೆಂದು ಮಾತ್ರ ಸ್ಪಷ್ಟವಾಗಿ ಹೇಳುತ್ತೇವೆ. ನಮಗೆ ಈ ಗಣಪತಿಯ ಗೊಂದಲವು ಕೇವಲ ಕ್ಷುದ್ರಸಂಗತಿಯಾಗಿ ತೋರುವುದಿಲ್ಲ. ಇದರ ಬುಡಕ್ಕೆ ಆಳವಾದ ಅಸಂತೋಷವು ಹಬ್ಬಿರಬೇಕು. ಇಲ್ಲದಿದ್ದರೆ, ಇಬ್ಬರು ಮೂವರು ಹೇಳಿದ ಮಾತ್ರಕ್ಕೆ ಹುಡುಗರು ಇಷ್ಟು ಉದ್ದ ನೀರಿಗೆ ಹೋಗುವುದಕ್ಕೆ ಸಿದ್ಧರಾಗುತ್ತಿರಲಿಲ್ಲ. ಆದಕಾರಣ, ಹುಡುಗರ ತಪ್ಪನ್ನು ಜೈಲಿಗೆಳೆದು ಅಥವಾ ಒಬ್ಬ ಮುಖಂಡರ ಮಾನಹಾನಿಯನ್ನು ಮಾಡಿದ ಮಾತ್ರಕ್ಕೆ ನ್ಯಾಯವಾಯಿತೆಂದು ನಾವು ತಿಳಿಯುವುದಿಲ್ಲ. ಜನರಲ್ಲಿ ಈ ಪ್ರಕಾರವಾದ ಅಸಂತೋಷದ ಬೇರುಗಳು ಹುಟ್ಟಲಿಕ್ಕೆ ಕಾರಣಗಳೇನೆಂಬುದನ್ನು ಶೋಧಿಸಿ, ಸ್ವತಃ ಮಹಾರಾಜರು ಧೂರ್ತಬುದ್ಧಿಯಿಂದ ಆ ಕಾರಣಗಳನ್ನು ಬೇರುಸಹಿತವಾಗಿ ಕಿತ್ತೊಗೆದರೆ ಮಾತ್ರವೇ ಜನತೆಗೆ ನ್ಯಾಯದೊರೆತಂತಾಗುವುದೆಂದು ನಮ್ಮ ಅಭಿಪ್ರಾಯ.

---

## ಕಾರ್ಯಧುರಂಧರ ಶ್ರೀ ಗುರುನಾಥರಾವ ಘಾಟಕ ಇವರ ಶೋಚನೀಯ ಮೃತ್ಯು

ಧಾರವಾಡದ ಪ್ರಸಿದ್ಧ ವಕೀಲರಾಗಿದ್ದ ಶ್ರೀ. ಗುರುನಾಥ ರಾಯರು ೨೧ ವರ್ಷ ಅರ್ಧಾಂಗವಾಯುವಿನಿಂದ ಮಲಗಿದ್ದ ಕಾರಣ ಇವರ ಹೆಸರು ಈ ಪ್ರಾಂತದಲ್ಲಿ ಇತ್ತೀಚಿನ ತರುಣರಿಗೆ ಅಷ್ಟು ಗೊತ್ತಿಲ್ಲದಿದ್ದರೂ ಅವರ ಹೆಸರು ಪ್ರತಿಯೊಬ್ಬ ಹಿರಿಯರಿಗೆ ಗೊತ್ತಿರುವುದು. ಅವರು ಧಾರವಾಡದಲ್ಲಿಯ ಶ್ರೀ ಜಗದ್ಗುರು ಶಂಕರಾಚಾರ್ಯ ಪಾಠಶಾಲೆಯ ಜನಕರು; ಅನೇಕ ವರ್ಷ, ಅವರು ಕರ್ನಾಟಕ ವಿದ್ಯಾವರ್ಧಕ ಸಂಘದ ಅಧ್ಯಕ್ಷರಾಗಿದ್ದರು; ಪ್ರತಿಯೊಂದು ಸಾರ್ವಜನಿಕ ಕಾರ್ಯದಲ್ಲಿ ಭಾಗತೆಗೆದುಕೊಳ್ಳುತ್ತಿದ್ದರು. ಅವರು ತೀರ ಬಡಸ್ಥಿತಿಯಲ್ಲಿ ಇದ್ದವರು ಈ ಊರಲ್ಲಿ ಅತ್ಯಂತ ಪ್ರಮುಖ ವಕೀಲರಾಗಿ ತಿಂಗಳೊಂದಕ್ಕೆ ಸಾವಿರಾರು ರೂಪಾಯಿ ಗಳಿಸಿ, ಸಾವಿರಾರು ರೂಪಾಯಿ ದಾನವಮಾಡಿದರು. ಇವರು ತಾ॥ ೩೩–೮–೧೯೩೪ನೆಯ ದಿವಸ ಮೃತಹೊಂದಿದಾಗ ಕೂಡಿದ ಜನಸಮೂಹದಿಂದ ಅವರ ಲೋಕಪ್ರಿಯತೆಯು ಗೊತ್ತಾಗುತ್ತದೆ. ಆದರೆ, ಅವರು ಪ್ರಸಿದ್ಧಿಹೊಂದಿದಕ್ಕಿಂತ ಅತಿಶಯ ಹೆಚ್ಚಿಗೆ ಕತೃತ್ವವಂತರಿದ್ದರು. ಅವರಲ್ಲಿಯ ಕೆಲವು ಅಲೌಕಿಕ ಗುಣಗಳು ನಾನೀ ಎಂದೆನ್ನುವ ಅನೇಕ ಮುಖಂಡರಲ್ಲಿಯೂ ಕಂಡುಬರುವುದಿಲ್ಲ. ನಮ್ಮ ತರುಣರು ಅವುಗಳನ್ನು ಅನುಕರಣಮಾಡಬೇಕೆಂಬ ಉದ್ದೇಶದಿಂದಲೇ ನಾವು ಇಲ್ಲಿ ಕೆಲವುಗಳನ್ನು ವಿವರಿಸುವೆವು. ಅವರ ಎಲ್ಲಕ್ಕೂ ಹೆಚ್ಚಿನ ಗುಣವೆಂದರೆ ಕಾರ್ಯಧುರಂಧರತೆ. ಇಲ್ಲಿಯ ಪಾಠಶಾಲೆಗೆ ಅವರು ಒಬ್ಬರೇ ಸುಮಾರು ೫೦ ಸಾವಿರ ರೂಪಾಯಿಗಳವರೆಗೆ ಫಂಡು ಕೂಡಿಸಿದರೆನ್ನೋ ಸರಿ. ಆದರೆ, ಅದರಲ್ಲಿಯ ಮತ್ತು ಒಂದು ವಿಶೇಷವೇನೆಂದರೆ ಅವರು ಆ ಹಣವನ್ನು ಯಾರಿಗೂ ಬೇಸರವಾಗದಂತೆ ಕೂಡಿಸಿದರೆಂಬುದು. ಈ ಫಂಡಿಗೆ ಬಹುಶಃ ನಾಲ್ಕಾರು ರೂಪಾಯಿಗಿಂತ ಹೆಚ್ಚಿನ ವರ್ಗಣಿಕೊಟ್ಟವರು ಕಡಿಮೆ. ಅಂದಬಳಿಕ, ಇಷ್ಟು ಧನವನ್ನು ಕೂಡಿಸಲಿಕ್ಕೆ ಎಷ್ಟು ಶ್ರಮವಾದೀತೆಂಬದನ್ನು ಊಹಿಸಬಹುದು. ಅವರು ಸಂಸ್ಕೃತವಿದ್ಯೆಯ ಭಕ್ತರು. ಪಾಶ್ಚಾತ್ಯ ಸಂಸ್ಕೃತಿಯಿಂದ ಜನರನ್ನು ಆರ್ಯಸಂಸ್ಕೃತಿಯ ಕಡೆಗೆ ಪರಾವೃತ್ತರನ್ನಾಗಿ ಮಾಡುವ ಕುರಿತು ಅವರು ಈ ಪಾಠಶಾಲೆಯನ್ನು ಈಗ ೪೦ ವರ್ಷಗಳ ಹಿಂದೆ ಹೊರಟಿಸಿದರು. ಸುದೈವದಿಂದ ಅವರಿಗೆ ಉಪ್ಪಿನಬೆಟಗೇರಿ ಕೃಷ್ಣಶಾಸ್ತ್ರಿಗಳಂಥ ವೈರಾಗ್ಯಶೀಲರೂ ಅಧ್ವಿತೀಯ ಪಂಡಿತರೂ ದೊರೆತದ್ದರಿಂದ ಈ ಪಾಠಶಾಲೆಯು ಯಶಸ್ವಿಯಾಯಿತು. ಅವರು ಮರಾಠಿಗರಾದರೂ ಕರ್ನಾಟಕದ ನಿಃಸೀಮ ಭಕ್ತರು, ಕನ್ನಡನುಡಿಯು ಅಭಿವೃದ್ಧಿ ಹೊಂದಬೇಕೆಂದು ಸತತ ಪ್ರಯತ್ನಮಾಡಿದರು. ಅವರ ವಾಚನಾಭಿರುಚಿಯು ವಿಲಕ್ಷಣವಾಗಿತ್ತು. ಅವರು ಈ ಊರಲ್ಲಿ ಓದಲಿಕ್ಕೆ ಪುಸ್ತಕಗಳನ್ನು ಬಿತ್ತಿದರೆಂದು ಹೇಳಿದರೆ ಅತಿಶಯೋಕ್ತಿಯಾಗದು. ಅವರ ಧೈರ್ಯವೂ ಸ್ವಾಭಿಮಾನವೂ ಹೊಗಳುವಂಥದಾಗಿತ್ತು. ಒಂದು ಪ್ರಸಂಗದಲ್ಲಿ ಸಬಜಡ್ಜರು ಸ್ವಲ್ಪ ತಿರಸ್ಕಾರಯುಕ್ತ ಮಾತನಾಡಿದೊಡನೆಯೆ ಇವರು ಆ ಕೋರ್ಟಿನಲ್ಲಿಯ ಖಟ್ಲೆಗಳನ್ನೆಲ್ಲ ತಿರಿಗಿಕೊಟ್ಟು ಆ ಕೋರ್ಟಿನಲ್ಲಿ ಮುಂದೆ ಕಾಲನ್ನೇ ಇಡಲಿಲ್ಲ. ಅವರು ಕಾರ್ಯಮಾಡುವ ಪದ್ಧತಿಯು ಅನುಕರಣೀಯವಾಗಿದೆ. ಸ್ವದೇಶಿಯ ಚಳವಳದ ಕಾಲಕ್ಕೆ ವಕೀಲರೆಲ್ಲರೂ ಸ್ವದೇಶಿಯ ಅಂಗಡಿಯನ್ನು ಹೊರಡಿಸಬೇಕೆಂದು ಗುದ್ದಂಥ ಮಾತುಗಳನ್ನಾಡಿದಾಕ್ಷಣಕ್ಕೆ, ಯಾರಿಗೆ ಆಗಿಂದಾಗ ಹಣಕೊಡಲಿಕ್ಕೆ ಅನುಕೂಲವಿದ್ದಿಲ್ಲವೋ ಅಂಥವರಿಗೆ ತಮ್ಮ ಕೈಯಿಂದ ಸುಮಾರು ೨–೩ ಸಾವಿರ ರೂಪಾಯಿ ಬಡ್ಡಿಯಿಲ್ಲನೆ ಕಡಕೊಟ್ಟು, ತತ್‍ಕ್ಷಣವೇ ಅಂಗಡಿಯನ್ನು ಹೊರಡಿಸಿದರು. ಅವರು ಮ್ಯುನಸಿಪಾಲಟಿಯ ಸೂತ್ರಚಾಲಕರಾಗಿದ್ದರೂ ಸ್ವತಃ ಆ ಸಭಾಸದರಾಗಲಿಚ್ಛಿಸಲಿಲ್ಲ. ತಮ್ಮ ಪಾಠಶಾಲೆಗೆ ಸರಕಾರದವರು ಗ್ರಾಂಟಕೊಡಲಿಕ್ಕೆ ಸಿದ್ಧರಿದ್ದರೂ ಅದನ್ನು ತೆಗೆದುಕೊಳ್ಳುವ ಮೋಹಕ್ಕೆ ಬಲಿಬೀಳಲಿಲ್ಲ. ೧೯೧೭ನೆಯ ಇಸ್ವಿಯಲ್ಲಿ ಅವರು ಪಕ್ಷಘಾತ ಮಲಗಿಕೊಂಡದ್ದರಿಂದ, ಅವರ ಸಾರ್ವಜನಿಕ ಆಯುಷ್ಯವು ನಮ್ಮ ದುರ್ದೈವದಿಂದ ನಿಂತುಹೋಯಿತು. ಆದರೂ, ಅವರು ಅಂಥ ಸ್ಥಿತಿಯಲ್ಲಿಯೂ, ತನ್ನ ಶರೀರತಾಪವನ್ನು ಲೆಕ್ಕಿಸದೆ, ಪ್ರತಿನಿತ್ಯ ಸಾರ್ವಜನಿಕ ವಿಚಾರಗಳನ್ನು ಮಾಡುವುದರಲ್ಲಿಯೂ ವಾಚನದಲ್ಲಿಯೂ ಕಾಲಕಳೆದರೆಂಬ ಸಂಗತಿಯು, ಅವರ ಸಾರ್ವಜನಕ ಹಿತಬುದ್ಧಿಯನ್ನೂ ಧೈರ್ಯವನ್ನೂ ತೋರಿಸುತ್ತಿದೆ. ಅವರು ವಿನೋದ ಸ್ವಭಾವದವರು ಅವರ ಸಂಬಂಧದ ಕಥೆಗಳು ಸಂಗ್ರಹಿಸಲ್ಪಟ್ಟವೆ. ಅವು ತರುಣರಲ್ಲಿ ನಿಃಸಂದೇಹವಾಗಿ ಸ್ಫೂರ್ತಿಹುಟ್ಟಿಸುತ್ತವೆ. ಅವರ ಸ್ಮಾರಕವನ್ನು ಮಾಡುವುದಕ್ಕೆ ಒಂದು ಕಮೀಟಿಯು ನೇಮಿಸಲ್ಪಟ್ಟಿದೆ. ದೇವರು ಅವರ ಆತ್ಮಕ್ಕೆ ಶಾಂತಿಯನ್ನು ಕೊಡಲಿ, ಮತ್ತು ಅವರಂಥ ಕಾರ್ಯಧುರಂಧರರನ್ನು ನಮ್ಮ ಕರ್ನಾಟಕವು ಪಡೆಯಲಿ.




**ಗೀತಾರ್ಥಬೋಧಿನಿ ( ಭಾಗ ೧ )** (ಲೇ:— ಸವಣೂರ ಗೋವಿಂದರಾಯರು ಬೆಲೆ. ೩ ರೂಪಾಯಿ. ಫುಟ ಸುಮಾರು ೩೦೦ ಸಿಗತಕ್ಕ ಸ್ಥಳ ಆನಂದತೀರ್ಥಗ್ರಂಥಾಲಯ, ಧಾರವಾಡ). ಈ ಗ್ರಂಥದಲ್ಲಿ ಗ್ರಂಥಕರ್ತರು ಗೀತೆಯ ಮೊದಲಿನ ಆರು ಅಧ್ಯಾಯಗಳ ಅರ್ಥ, ವಿಶೇಷಾರ್ಥ ಮುಂತಾದವುಗಳನ್ನು ಶ್ರೀ ಮಧ್ವಾಚಾರ್ಯರ ಮತಕ್ಕನು ಸಾರವಾಗಿ ವಿವರವಾಗಿ ಕೊಡಲ್ಪಟ್ಟಿದೆ. ಗೀತೆಯ ಮೇಲೆ ಎಷ್ಟು ಗ್ರಂಥಗಳು ಎಷ್ಟು ವಿವಿಧ ದೃಷ್ಟಿಯಿಂದ ಹೊರಟರೂ ಬೇರೆ ಆಗಿದೆ. ಅದರಲ್ಲಿಯೂ ಮಧ್ವಸಂಪ್ರದಾಯಕ್ಕನುಸರಿಸಿ ಬರೆದ ಗ್ರಂಥಗಳು ಕನ್ನಡದಲ್ಲಿ ತೀರ ಕಡಿಮೆ. ಈ ಗ್ರಂಥದಲ್ಲಿ ಕೇವಲ ಶ್ಲೋಕಗಳ ಅರ್ಥವನ್ನು ಕೊಡದೆ ಭಾಷ್ಯ, ಪ್ರಮೇಯ ದೀಪಿಕೆ, ನಿವೃತ್ತಿ ಮುಂತಾದವುಗಳ ಸಾರವೂ ಕೊಡಲ್ಪಟ್ಟಿರುವದರಿಂದ ಈ ಪುಸ್ತಕವು ಹೆಚ್ಚು ವಾಚನೀಯವಾಗಿದೆ. ಮಧ್ವಾಚಾರ್ಯರು ಶ್ರೀ. ಶಂಕರಾಚಾರ್ಯ ಮತ್ತು ಶ್ರೀರಾಮಾನುಜಾಚಾರ್ಯ ಇವರ ತರುವಾಯದಲ್ಲಿ ಆಗಿ ಹೋಗಿರುವುದರಿಂದ, ಶ್ರೀಮಧ್ವಾಚಾರ್ಯರು ಹಿಂದಿನ ಟೀಕಾಕಾರರ ಮೇಲೆ ಎತ್ತಿದ ಆಕ್ಷೇಪಗಳು ಕೇವಲ ಮಧ್ವಮತಾನುಯಾಯಿಗಳಷ್ಟೇ ವಿಚಾರಮಾಡತಕ್ಕವುಗಳಾಗಿರದೆ, ಯಾವತ್ತರೂ ವಿಚಾರಮಾಡುವಂಥವಿರುತ್ತವೆ. ಆದುದರಿಂದ, ಈ ಗ್ರಂಥವನ್ನು ಎಲ್ಲರೂ ಅವಶ್ಯವಾಗಿ ಓದಿ ಮನನಮಾಡಬೇಕು. ಈ ಪುಸ್ತಕದಲ್ಲಿ ಗೀತೆಯ ವಿಷಯವಾಗಿ ಅರ್ವಾಚೀನರ ಆಕ್ಷೇಪಗಳಿಗೆ ಉತ್ತರ ಕೊಡುವ ಪ್ರಯತ್ನವೂ ಸ್ವಲ್ಪಮಟ್ಟಿಗೆ ಮಾಡಲ್ಪಟ್ಟಿದೆ. ಆದರೆ ಅದು ಸಾಲದೆಂದು ನಮ್ಮ ಅಭಿಪ್ರಾಯ. ವಿಚಾರಪದ್ಧತಿಯ ವಿಷಯವಾಗಿಯೇ ಮೂಲತಃ ದೊಡ್ಡ ಮತಭೇದವಿರುತ್ತದೆ. ಆದರೆ ಆ ಮತಭೇದವನ್ನು ಬಿಟ್ಟರೂ, ಗೀತೆಯೊಳಗಿನ ಅನೇಕ ಪ್ರಮೇಯಗಳ ಸಂಬಂಧವಾಗಿ ಅನೇಕ ತರಹದ ಹೊಸ ಆಕ್ಷೇಪಗಳು ಕಂಡುಬರುತ್ತಿವೆ.

ಶ್ರೀ. ಸವಣೂರ ಗೋವಿಂದರಾಯರು ಈ ಪುಸ್ತಕದಲ್ಲಿ ತಮ್ಮ ವಿಚಾರಗಳನ್ನು ವಿಶೇಷವಾಗಿ ಬೆರಿಸದೆ, ಪುರಾತನ ಪದ್ಧತಿಯನ್ನೇ ಅವಲಂಬಿಸಿರುವದರಿಂದ ಅರ್ಥಾತ್, ಈ ಹೊಸ ಆಕ್ಷೇಪಗಳಿಗೆ ಉತ್ತರವು ಸ್ಪಷ್ಟವಾಗಿ ದೊರೆಯದಿದ್ದರೂ, ಸೂಕ್ಷ್ಮವಾಗಿ ಇದನ್ನು ಓದುವವರಿಗೆ ಅನೇಕ ಆಕ್ಷೇಪಗಳಿಗೆ ಉತ್ತರವು ದೊರೆಯುವುದೆಂದು ನಾವು ಹೇಳುತ್ತೇವೆ. ಶ್ರೀ. ಗೋವಿಂದರಾಯರು ಪರಮ ಸಾಹಸಿಗಳು. ಇಂಥ ಮುಪ್ಪಿನ ಕಾಲದಲ್ಲಿ ಕೂಡ ಇವರು ತಮ್ಮ ಮತಕ್ಕೋಸ್ಕರ ಇಷ್ಟು ಪ್ರಯತ್ನಮಾಡುವದನ್ನು ನೋಡಿ ಪ್ರತಿಯೊಬ್ಬನಿಗೂ ಆನಂದವಾಗದಿರದು. ಜನರು ಅವರಿಗೆ ಆಶ್ರಯಕೊಟ್ಟು ಗೀತೆಯ ಮಿಕ್ಕ ಭಾಗವೂ ತೀವ್ರವೇ ಹೊರಡುವಂತೆ ಪ್ರೋತ್ಸಾಹಿಸುವರೆಂದು ನಂಬುತ್ತೇವೆ.

**ಶ್ರೀಗುರುಚರಿತ್ರ:**– ( ಲೇಖಕ:—ಶ್ರೀ. ರಾಘವೇಂದ್ರ ಸುಬ್ಬರಾವ ಮೂಡಗಟ್ಟಿ ಬಿ. ಎ. ಮಾಮಲೇದಾರ ಖಾನಾಪುರ, ತಾಲೂಕ ಬೆಳಗಾಂವಿ ) ಮರಾಠಿಯಲ್ಲಿ ಶ್ರೀಗುರುಚರಿತ್ರವೆಂಬುದೊಂದು ಗ್ರಂಥವಿರುವುದು. ಅದನ್ನು ಮಹಾರಾಷ್ಟ್ರದವರೂ ಕರ್ನಾಟಕದಲ್ಲಿಯ ಅನೇಕರೂ ಅತ್ಯಂತ ಭಕ್ತಿಪುರಃಸರವಾಗಿ ಪಾರಾಯಣಮಾಡುತ್ತಿರುವರು. ಕನ್ನಡಿಗರಿಗೆ ಆ ಗುರುಚರಿತ್ರದ ಅರ್ಥವು ತಿಳಿಯದಿದ್ದರೂ, ಅದರ ಮೇಲಿನ ಭಕ್ತಿಯಿಂದ ಸಾವಿರಾರು ಜನರು ಭಕ್ತಿಪುರಃಸರವಾಗಿ ಓದುತ್ತಿರುವರು. ಆದರೆ, ಈಗ ಶ್ರೀ. ಮೂಡಗಟ್ಟಿಯವರು ಕೇವಲ ತಮ್ಮ ಗುರುಗಳ ಪ್ರೇರಣೆಯಿಂದ ಇದನ್ನು ಪ್ರಸಾದವಾಣಿಯಿಂದ ಸುಲಭವಾದ ಕನ್ನಡದಲ್ಲಿ ಪರಿವರ್ತಿಸಿರುವುದರಿಂದ, ಕನ್ನಡಿಗರಿಗೆ ದೊಡ್ಡದೊಂದು ಲಾಭವಾಗಿದೆ. ಇನ್ನು ಈ ಗುರುಚರಿತ್ರವನ್ನು ಪಾರಾಯಣಮಾಡುವ ಜನರು ಈ ಕನ್ನಡ ಗ್ರಂಥದಿಂದಲೇ ಪಾರಾಯಣಮಾಡಲು ಅವಕಾಶವಾಗಿದೆ. ಆ ಪ್ರಕಾರ ಅನೇಕರು ಹಾಗೆ ಮಾಡುತ್ತಿರುವರು. ಗ್ರಂಥಕರ್ತರು ಗ್ರಂಥವೊಂದನ್ನು ಬರೆಯಬೇಕೆಂದು ಬರೆ

ಮತ್ತೆ, ಕೇವಲ ಗುರುಸೇವೆಯೆಂದು ಇದನ್ನು ಬರೆದಿರುವುದರಿಂದ ಈ ಪುಸ್ತಕಕ್ಕೆ ಅತ್ಯಂತ ಮಹತ್ವವುಂಟಾಗಿದೆ. ಇದೇ ಕಾರಣದ ಸಲುವಾಗಿ ಇದರಲ್ಲಿ ಕೆಲವು ಮರಾಠಿಯ ಶಬ್ದಗಳೂ ಪ್ರಯೋಗ-ಳೂ ಸೇರಿದ್ದರೂ ಆ ಗ್ರಂಥಕ್ಕೆ ಅದರಿಂದ ವಿಶೇಷ ಕುಂದು ಉಂಟಾಗಿಲ್ಲ. ಶ್ರೀ. ಮೂಡಗಟ್ಟಿಯವರು ಈಗ ಜ್ಞಾನೇಶ್ವರಿಯೆಂಬ ಮಹಾಗ್ರಂಥವನ್ನು ಇದೇ ಪ್ರಕಾರ ಸುಲಭವಾದ ಪದ್ಯದಲ್ಲಿ ಭಾಷಾಂತರಿಸಿ ಕನ್ನಡಿಗರ ಮೇಲೆ ಮಹದುಪಕಾರಮಾಡಿದ್ದಾರೆ. ಎಲ್ಲರೂ ಈ ಗ್ರಂಥಕ್ಕೆ ಅವಶ್ಯವಾಗಿ ಸ್ವಾಗತವನ್ನು ಕೊಡಬೇಕು.

**ಭಗವಾನ್ ಬಸವೇಶ್ವರನ ಜಯಂತಿಯು :—** ಲೇಖಕರು:-ಯಾದಗಿರಿ ಶಂಕರ ಸಂಸ್ಕೃತಕಾಲೇಜಿನ ಪ್ರಿನ್ಸಿಪಾಲರಾದ ಶ್ರೀ. ಚಂದ್ರಶೇಖರಶಾಸ್ತ್ರಿ, ಹೊಳಲು ಹಿರೇಮಠ, ವ್ಯಾಕರಣತೀರ್ಥರವರು. ೩೩ ಪುಟಗಳ ಈ ಚಿಕ್ಕ ಪುಸ್ತಕದಲ್ಲಿ ಶ್ರೀ. ಬಸವೇಶ್ವರರ ಚರಿತ್ರೆಯನ್ನು ಅನೇಕ ಮಹನೀಯರ ಚರಿತ್ರೆಗಳೊಡನೆ ತುಲನೆಯನ್ನೂ ಮಾಡಿ ಶ್ರೀ. ಬಸವೇಶ್ವರ ಜಯಂತಿಯ ಆವಶ್ಯಕತೆಯನ್ನು ಲೇಖಕರು ತೋರಿಸಿರುವರು. ಬಸವೇಶ್ವರರು ಮಾಡಿದ ಅದ್ಭುತ ಕೃತಿಗಳೂ ಅವರ ನಿಸ್ಪೃಹತೆಯೂ ಅವರ ಈಶ್ವರನಿಷ್ಠೆಯೂ ಅವರ ಮನಃಪಾವಿತ್ರ್ಯವೂ ಈ ಪುಸ್ತಕದಲ್ಲಿ ಸ್ವಲ್ಪದರಲ್ಲಿ ಹೃದಯಂಗಮವಾಗಿ ವರ್ಣಿಸಲ್ಪಟ್ಟಿವೆ.

**ಆಕಳು ಪವಿತ್ರವೇಕೆ? :—** ಲೇಖಕರು: ಶ್ರೀ. ಪಾಂಡುರಂಗ ತಮ್ಮಾಜಿ ಕುಲಕರ್ಣಿ, ಮೆಣಶಿಗಿ ಸಂಸ್ಥಾನ ರಾಮದುರ್ಗ. ಬೆಲೆ ೦-೧-೦. ಈ ಚಿಕ್ಕ ಪುಸ್ತಕದಲ್ಲಿ ಶ್ರೀ. ಕುಲಕರ್ಣಿಯವರು ಪೌರಾಣಿಕ ಕಥೆಯೊಂದನ್ನು ಉದಾಹರಿಸಿ ಆಕಳಿನ ಮಹತ್ವವನ್ನು ತೋರಿಸಿರುವರು. ಕಥೆ ಬಹು ಮನೋಹರವಾಗಿ ಬರೆಯಲ್ಪಟ್ಟಿದೆ. ಕೇವಲ ೧೩ ಚಿಕ್ಕ ಪುಟಗಳ ಪುಸ್ತಕಿಗೆ ಒಂದು ಆಣೆ ಬೆಲೆ ಹೆಚ್ಚೆಂದು ನಮಗೆ ತೋರುತ್ತದೆ.

**ಶ್ರೀ ಮಲ್ಲಾರಿ ಕೀರ್ತನ :—** ಲೇಖಕ: ಶ್ರೀ. ರಾಮದಾಸ ತೋಸೀಖಾನಿ, ಹಾನಗಲ್ಲ. ಬೆಲೆ ೫ ಆಣೆ:-ಇದೊಂದು ಮಲ್ಲಾರಿ ಮಾಹಾತ್ಮ್ಯರೂಪದ ಕೀರ್ತನವು. ಕರ್ನಾಟಕದಲ್ಲಿಯೂ ಮಹಾರಾಷ್ಟ್ರದಲ್ಲಿಯೂ ಶ್ರೀ ಮಲ್ಲಾರಿ ದೇವರ ಭಕ್ತರು ಅನೇಕರಾಗಿರುವರು. ಅವರು ತಮ್ಮ ಇಷ್ಟದೇವತೆಯ ಮಾಹಾತ್ಮ್ಯವನ್ನು ತಿಳಿದುಕೊಳ್ಳುವುದಿಷ್ಟವು. ಶ್ರೀ. ತೋಸೀಖಾನಿಯವರು ಶ್ರೀ ಮಲ್ಲಾರಿ ದೇವರ ಮಾಹಾತ್ಮ್ಯವನ್ನು ಈ ಕೀರ್ತನದಲ್ಲಿ ಸರಸವಾಗಿ ವರ್ಣಿಸಿರುವರು. ಭಕ್ತರು ಒಮ್ಮೆ ಅವಶ್ಯವಾಗಿ ಓದಬೇಕು.

**ಶ್ರೀ. ರಾಮಕೃಷ್ಣಸದ್ಬೋಧಸುಧಾ:-** ಲೇಖಕರು:- ಶ್ರೀ. ಗೋವಿಂದ ಹಣಮಂತ ಹೊಸೂರ, ಕರ್ನಾಟಕ ವಿದ್ಯಾವಿನೋದ, ಬೆಲೆ ೩ ಆಣೆ. ಈ ಪುಸ್ತಕದಲ್ಲಿ ಶ್ರೀರಾಮಕೃಷ್ಣ ಪರಮಹಂಸರ ಜೀವನಚರಿತ್ರೆಯ ಅಲ್ಪ ಪರಿಚಯವೂ ೧೧ ಸದ್ಬೋಧಗಳೂ ಅವರ ಕೆಲವು ವಿಚಾರತರಂಗಗಳೂ ಕೊಡಲ್ಪಟ್ಟಿವೆ. ಬೆಲೆ ಹೆಚ್ಚೆಂದು ನಮಗೆ ಎನಿಸುತ್ತದೆ.

**ಪತಿವಶೀಕರಣ :—** ಇದೊಂದು ನಾಟಕವು. ಕನ್ನಡ ವಾಙ್ಮಯಾಕಾಶದಲ್ಲಿ ಉಜ್ವಲ ನಕ್ಷತ್ರದಂತೆ ಹೊಳೆಯುತ್ತಿರುವ ವೈ. ವಾ. ಕೆರೂರ ವಾಸುದೇವಾಚಾರ್ಯರು ಈ ನಾಟಕವನ್ನು ಬರೆದವರು. ಅದು ಇಷ್ಟು ದಿನ ಕೈಬರೆಹದಲ್ಲಿಯೇ ಇದ್ದಿತು. ಈಗ ಅದನ್ನು ಅವರ ಮಕ್ಕಳಾದ ಶ್ರೀ. ಸ್ವಾಮಿರಾಯಾಚಾರ್ಯರು ಅಚ್ಚುಹಾಕಿಸಿರುವರು. ಈ ನಾಟಕವು ಆಂಗ್ಲ ಕವಿಯಾದ ಗೋಲ್ಡ್‌ಸ್ಮಿಥ್‌ನ She stoops to conquer ಎಂಬ ಚಿಕ್ಕನಾಟಕದ ಕನ್ನಡ ರೂಪಾಂತರವು. ರೂಪಾಂತರವಾಗಿದ್ದರೂ ಇದರಲ್ಲಿ ಶ್ರೀ. ವಾಸುದೇವಾಚಾರ್ಯರವರ ಪ್ರತಿಭೆ ಪ್ರತಿಪದದಲ್ಲಿಯೂ ಎದ್ದು ಕಾಣುತ್ತದೆ. “ಪರಕೀಯ ಕೃತಿಯನ್ನು ಅನುವಾದಿಸಿ ಅದು ಸ್ವತಂತ್ರವಾದ ಕೃತಿಯಿರುವನೆಂಬ ಭ್ರಾಂತಿಯನ್ನುಂಟು ಮಾಡುವದರಲ್ಲಿ ವಾಸುದೇವಾಚಾರ್ಯರ ಪ್ರತಿಭೆಯೂ ಜಾಣ್ಮೆಯೂ ಸಹಜವಾಗಿ ವ್ಯಕ್ತವಾಗುವವು” ಎಂದು ಈ ಪುಸ್ತಕದ ಪ್ರಸ್ತಾವನಾ ಲೇಖಕರಾದ ಶ್ರೀ. ಮಹಿಷಿ ರಾಮಚಂದ್ರರಾಯರು ಹೇಳುವುದು ಸರ್ವಾಂಶಗಳಲ್ಲಿಯೂ ಸತ್ಯವಾಗಿರುವುದು. ನಿತ್ಯದ ವ್ಯವಹಾರದಲ್ಲಿ ಜರುಗುತ್ತಿರುವ ಸರ್ವಸಾಧಾರಣವಾದ ಸಂಗತಿಗಳೇ ಪ್ರಸಂಗಾನುಸಾರವಾಗಿ ಈ ನಾಟಕದಲ್ಲಿ ಚಿತ್ರಿಸಲ್ಪಟ್ಟಿರುತ್ತವೆ. ಆದರೆ ಶ್ರೀ. ವಾಸುದೇವಾಚಾರ್ಯರ ಚಿತ್ರನಿರ್ಮಾಣಚಾತುರ್ಯವು ಅನನ್ಯ ಸದೃಶವಾದುದು. ಅವರ ಚಿತ್ರಗಳಲ್ಲಿ ಅದ್ಭುತವಾದ ನಾವೀನ್ಯವೂ ರಸಿಕತೆಯೂ ಇರುವುದರಿಂದ ಅವು ಚಿತ್ತಾಕರ್ಷಕವಾಗಿರುವುವು. ಹಾಸ್ಯರಸವು ‘ಪತಿವಶೀಕರಣ’ ನಾಟಕದ ಆತ್ಮವು. ಶ್ರೀ. ವಾಸುದೇವಾಚಾರ್ಯರು ಸ್ವಭಾವತಃ ವಿನೋದಪ್ರಿಯರು ಮತ್ತು ವಿನೋದವನ್ನು ಹೊರಸೂಸುವ ಚಿತ್ರಗಳನ್ನು ಚಿತ್ರಿಸಲು ಅತ್ಯಂತ ಕುಶಲರು. ಪ್ರಸ್ತುತ ನಾಟಕದಲ್ಲಿ ಅವರ ಕೌಶಲ್ಯದ ಪರಮಾವಧಿಯಾಗಿರುವುದು. ಈ ಪುಸ್ತಕವನ್ನು ಅಚ್ಚುಹಾಕಿಸಿ ಕನ್ನಡಿಗರಿಗೆ ಸುಲಭ ಬೆಲೆ ದೊರೆಯುವಂತೆ ಮಾಡಿದ ಶ್ರೀ. ಸ್ವಾಮಿರಾಯಾಚಾರ್ಯರು ಕನ್ನಡ ನುಡಿಯ ಪ್ರೇಮಿಗಳ ಅಭಿನಂದನಕ್ಕೂ ಕೃತಜ್ಞತೆಗೂ ಅರ್ಹರಾಗಿರುವರು.



ಬಾಗಲಕೋಟೆಯ ವ್ಯಾಯಾಮ ಮಂದಿರದ ವಾಸ್ತುಸಮಾರಂಭೋತ್ಸವವನ್ನು ನೆರವೇರಿಸಿದ

**ಶ್ರೀ. ಧನರಾಜ ಗಿರಜಿ ಬಹಾದ್ದೂರರವರು.**




ॐ सह नाववतु ॥ सह नौ भुनक्तु ॥ सह वीर्यं करवावहै ॥

तेजस्विनावधीतमस्तु मा विद्विषावहै ॥ ॐ शान्तिः ॥३॥

—श्रुतिः


ಸಂಪುಟ ೬ | ವಿಭವನಾಮ ಸಂವತ್ಸರ ಅನಂತನ ಹುಣ್ಣಿವೆ ಶಕ ೧೮೫೦, ೨೯ನೆಯ, ಸಪ್ಟಂಬರ ೧೯೨೮ | ಸಂಚಿಕೆ ೧೧


# ಅತಿವರ್ಣ ಷಡಾಶ್ರಮ ಧರ್ಮ

ಲೇ:—ಶ್ರೀ ಸಿದ್ಧರಾಮಪ್ಪಾ ಪಾವಟೆ ಬಿ. ಎ., ಎಲ್‌ಎಲ್‌ಬಿ. ವಕೀಲ ಹುಬ್ಬಳ್ಳಿ.

## ಪ್ರಸಾದಿ ಸ್ಥಲವು

ಭಕ್ತಮಾಹೇಶ್ವರ ಸ್ಥಳಗಳಲ್ಲಿ ಕ್ರಿಯಾಜ್ಞಾನ ಶಕ್ತಿಗಳ ಸಂಪಾದನವಾದುದನ್ನು ಕಂಡೆವು. ಈ ಶಕ್ತಿಯಿಂದ ಲಭಿಸಿದ ಪದಾರ್ಥಗಳನ್ನು ಶಿವಾರ್ಥವಾಗಿ ಬಳಸುವ ಗುಟ್ಟನ್ನರಿತು ನಡೆವುದೆ ಪ್ರಸಾದಿ ಸ್ಥಳವು. ಒಂದು ಪದಾರ್ಥವಾವುದನ್ನು ದೊರಕಿಸಿ ಅದನ್ನು ಆತ್ಮನು ತನ್ನದೆಂಬಭಿಮಾನದಿಂದ ಉಪಭೋಗಿಸಲು ಅದು ಬಂಧನ ಬೇರು. ಆ ಅಭಿಮಾನದಿಂದ ಒಡವೆಗಳನ್ನು ಒದಗಿಸುವಲ್ಲಿ ಕಾಮಾದಿ ಷಡ್ವರ್ಗದ ಉರ್ಬು. ತಾಳಿದ ಪದಾರ್ಥಗಳೆಲ್ಲ ಶಿವನೊಡೆತನವು. ಅವು ತನಗೆ ಶಿವನು ಇಕ್ಕಿದ ಭಿಕ್ಷೆಯು ಎಂಬ ಬುದ್ಧಿಯಿಂದ ದೊರೆತುದನ್ನೆಲ್ಲ ಶರೀರಾದಿಗಳ ಪ್ರಾಕೃತ ಸುಖಕ್ಕೆ ಎರೆಯದೆ ಒಡವೆಗಳ ಉಂಬುವಲ್ಲಿ ಶಿವನನುಗ್ರಹವನ್ನು ಕಾಣುತ್ತಿರುವುದು ಪ್ರಸಾದಿ ಸ್ಥಳದ ಮೆಟ್ಟು.

## ಜೀವನ ಮರ್ಯಾದೆಯಲ್ಲಿದರ ಕಾಲ

ಯೌವನವು ಪ್ರಸಾದಿ ಸ್ಥಳದ ಕಾಲವು. ವಿಷಯಗಳು ಆತ್ಮನನ್ನು ಸೆಳೆದು ಕಟ್ಟುವಡೆಯಿಸುವ ಹೊತ್ತಿದು. ಕಾಮಾದಿಗಳು ಕಡುವಾಗಿ ಆತ್ಮನನ್ನು ಕಂಗೆಡಿಸುವುದೀಗಲೆ. ಮನವು ವಿಷಯಾಶೆಯ ಭರದಲ್ಲಿ ಎಚ್ಚರಗೆಟ್ಟು ಅಡ್ಡಹಾದಿಯನ್ನು ತುಳಿಯಿಸುವುದಿದೇ ಸಮಯವು. ಇಂತಾದ ಕಾಲಪಾಶದಿಂದ ತಪ್ಪಿಸಿಕೊಳ್ಳಲು ಪ್ರಸಾದಿ ಧರ್ಮವು ಒಂದಲ್ಲದೆ ಹೊಲಬಿಲ್ಲ.

## ಪ್ರಸಾದಿಸ್ಥಳಸ್ವರೂಪ

ಮಾಹೇಶ್ವರ ಸ್ಥಳದಲ್ಲಿ ಮಾಡಿಕೊಂಡ ಜ್ಞಾನಸಂಪತ್ತಿಯಿಂದ ವಿಶ್ವವನ್ನೆಲ್ಲ ವ್ಯಾಪಿಸಿ ಶಿವನಿರುವನೆಂತಲೂ; ಆತನು ನಿರಾಕಾರನೂ ನಿರವಯವನೂ ಇರುವುದರಿಂದ ಪ್ರಕಾಶವು ಹಸನಾದ ಕನ್ನಡಿಯಲ್ಲಿ ಹೊಳೆವಂತೆ ಸದಾಚಾರರತವಾದ

ಹೃದಯುದಲ್ಲಲ್ಲದೆ ಹೊಳೆಯನೆಂತಲೂ ತಿಳಿದು ಬಂದಿತು. ಒಳಗೆ ಹೊಳೆವ ಶಿವಪ್ರಕಾಶದ ಬೆಳಗು ಹೊರಮೆಯ್ಯಲ್ಲಿ ಒಡೆದು ಮೂಡುವುದೆ ಅಂಗದ ಸದಾಚಾರವು. ಈ ಅಂಗದ ಸದಾಚಾರದ ಒಬ್ಬುಳಿಯೆ ಆಚಾರ ಲಿಂಗವು. ಆಚಾರ ಲಿಂಗದ ಅರಿವೆ ಗುರುಲಿಂಗವು. ಆ ಅರಿವೆಯ ಸಾರವೆ ಮಂತ್ರವು. ಮಂತ್ರದ ಗಟ್ಟಿಯೆ ಇಷ್ಟಲಿಂಗವು. ಅದರಲ್ಲಿ ಅವಧಾನವು ತಪ್ಪದನೇ ಪ್ರಸ ದಿಯು. ಇದನ್ನೊಳಕೊಂಡ ಸಿದ್ಧಾಂತಶಿಖಾಮಣಿಯ ವಚನವು—

अन्यत्रशंभो रतिमात्रशून्यऽनिजेष्टलिंगे नियतांतरात्मा ॥ शिवात्मकं विश्वमिदं विबुध्यन् माहेश्वरोऽसौ भवति प्रसादी ೧೧ನೆಯ ಪರಿಚ್ಛೇದ ' ನೆಯ ಶ್ಲೋಕವು.

ಶಂಭುವಲ್ಲವೆ ಉಳಿದೆಡೆಯಲ್ಲಿ ಏನೊಂದು ಅಕ್ಕರವಿಲ್ಲದವನಾಗಿ ತನ್ನ ಹೃದಯುವನ್ನು ಇಷ್ಟಲಿಂಗದಲ್ಲಿ ನಟ್ಟು ಈ ವಿಶ್ವವನ್ನೆಲ್ಲ ಶಿವಮಯವಾಗಿ ತಿಳಿವುದರಿಂದ ಮಾಹೇಶ್ವರನೆ ಪ್ರಸಾದಿಯಾದಪನು.

## ವಿಶ್ವಪದಾರ್ಥವು

शिवात्मकं विश्वमिदं विबुध्यन्— ಎಂಬ ನುಡಿಯು (Phrase) ಸಾರವನ್ನುಳ್ಳುದು. ವಿಶ್ವವು ಇಂದ್ರಿಯುಗಳಿಂದಲೂ ಅಂತಃಕರಣದಿಂದಲೂ ತೋರುವುದು ಅದರ ಅರಿಕೆಯೂ ವ್ಯವಹಾರವೂ ಇವುಗಳಿಂದಲೆ विबुध्यन् ಎಂಬ ಪದವು ವಿಶೇಷದಿಂದ ಅಂದರೆ ಎಡೆಬಿಡದೆ ಹರಿಯುತ್ತಿರುವ ಅನುಸಂಧಾನದಿಂದಲ್ಲದೆ ಶಿವಾತ್ಮಕ ಬೋಧವಾಗದೆಂದು ಹೇಳುವುದು. ಇಂತಪ್ಪ ಅನುಸಂಧಾನದಿಂದ ವಿಶ್ವವು ಶಿವಾತ್ಮಕವಾಗಿ ತೋರುವುದೆಂದು ಈ ನುಡಿಯು ಬೋಧಿಸುವುದು. ಈ ಅನುಸಂಧಾನಕ್ಕೆ ಶಿವನಲ್ಲದ ಪದಾರ್ಥಗಳಲ್ಲಿ ಏನೊಂದು ಅಕ್ಕರವಿಲ್ಲದಿರುವುದೂ ಇಷ್ಟಲಿಂಗದಲ್ಲಿ ಅಂತಃಕರಣದ ನಿಯಮನವೂ ಅವಶ್ಯವಾದುವೆಂದು ಶ್ಲೋಕವು ಹೇಳುತ್ತಿದೆ. ಆದುದರಿಂದ ವಿಶ್ವವೆಂದರೆ ಲಿಂಗಧ್ಯಾನದಿಂದ ಪರಿಶುದ್ಧವಾದ ಅಂತಃಕರಣಕ್ಕೂ ಇಂದ್ರಿಯುಗಳಿಗೂ ಸೋಸಿತೋರುವ ಪದಾರ್ಥಗಳೆಂಬರ್ಥವು. ಈ ಸೋಸಿದ ಪದಾರ್ಥಗಳಲ್ಲಿ ಶಿವನನ್ನು ಕಾಣುವುದು ಸುಲಭವು. ಅಂತಪ್ಪ ಪದಾರ್ಥಗಳಿಂದ ಪೂಜೆಗೊಂಬುದೆ ಇಷ್ಟಲಿಂಗವು.

ಪ್ರಶ್ನೋಪನಿಷತ್ತಿನಲ್ಲಿ अरा इव रथनाभौ प्राणे सर्वं प्रतिष्ठितं ऋचो यजूंषि सामानि क्षत्रं ब्रह्म च ॥ ಪ್ರ ೨–೬ ಎಂದು ಹೇಳಿರುವದು. ಅಂದರೆ ಸರ್ವೇಂದ್ರಿಯಗಳೂ ಅವುಗಳ ಅರ್ಥಗಳೂ ಪ್ರಾಣದಲ್ಲಿ ಗಾಲಿಯ ಗಡ್ಡಿಯಲ್ಲಿ ಹಲ್ಲುಗಳಂತೆ ಹೊಂದಿಕೊಂಡಿರುವುವು. ಪ್ರಾಣದ ಪ್ರೇರಣದಿಂದಲೆ ಸರ್ವ ಇಂದ್ರಿಯಗಳು ಚರಿಸುವುವು. ಆದುದರಿಂದಲೆ स प्राणस्तश्चक्षुः । सव्यानस्तच्छ्रोत्रम् । सोऽपानः सा वाक्स समानस्तन्मतः ಎಂಬ ಶ್ರುತಿಯು ಪ್ರಾಣವಾಯುವೆ ಚಕ್ಷುರಿಂದ್ರಿಯವೆಂದೂ ವ್ಯಾನವಾಯುವೆ ಕರ್ಣೇಂದ್ರಿಯವೆಂದೂ ಅಪಾನವಾಯುವೆ ವಾಗಿಂದ್ರಿಯುವೆಂದೂ ಸಮಾನವಾಯುವೆ ಮನ ಇಂದ್ರಿಯುವೆಂದೂ ಹೇಳುತ್ತಿದೆ.

ಪ್ರಾಣವಾಯುವಿನಲ್ಲಿ ಇಂದ್ರಿಯುಗಳೂ ಇಂದ್ರಿಯುಗಳಲ್ಲಿ ಪದಾರ್ಥಗಳೂ ಸಿಲುಕಿರುವುವು. यथा वा अरा नाभौ समर्पिता एवं मास्मिन् प्राणे सर्वं समर्पितम् तद्यथा रथस्यारेषु ಛಾಂದೋಗ್ಯ ೭–೧೫ नेमिरर्पितो नाभावरा अर्पिता एवमेवैता भूतमात्राः प्रज्ञामात्रास्वर्पिताः प्रज्ञामात्राः प्राणेऽर्पिताः ॥ ಕೌಷೀತಕ್ಯುಪನಿಷದ್ ೧–೮–೮ ಗಾಲಿಯ ದುಂಡು ಹಲ್ಲುಗಳಲ್ಲಿಯೂ ಹಲ್ಲುಗಳು ಗಡ್ಡೆಯಲ್ಲಿಯೂ ತೊಡಕಿರುವಂತೆ ವಿಷಯುಗಳು ಇಂದ್ರಿಯುಗಳಲ್ಲಿಯೂ ಇಂದ್ರಿಯುಗಳು ಪ್ರಾಣದಲ್ಲಿಯೂ ತೊಡಕಿರುವುವು.

## ಪರಿಶುದ್ಧಿ

ಪ್ರಶ್ನೋಪನಿಷತ್ತಿನಲ್ಲಿಯೂ ಕೌಷೀತಕ್ಯುಪನಿಷತ್ತಿನಲ್ಲಿಯೂ ಹೇಳಿದ ಉಪಮೆಗಳಿಂದ ಈ ಸಂಸಾರಚಕ್ರದ ಕಲ್ಪನವು ನಮಗೆ ಹೊಳೆಯಿತು. ಪ್ರಾಣದಿಂದ ಇಂದ್ರಿಯುಗಳೂ ಇಂದ್ರಿಯುಗಳಿಂದ ವಿಷಯುಗಳೂ ತಿರುಗುತ್ತ ಭವದ ಗಾಲಿಯು ಸಾಗುವುವು. ಆ ಚಕ್ರದಲ್ಲಿ ಮನಃಸಹಿತ ಜೀವನು ತೊಳಲುವನು. ವಿಷಯುಗಳೊಡನೆ ತಿರುಗುತ್ತಿರುವುದು ನಿಂತು ಹೋದುದೆ ಅನಾಯಾಸವಾದ ಮುಕ್ತಿಯು. ಸಂಸೃತಿಯೆ ಅಶುದ್ಧಿ, ಅದನ್ನು ನೀಗಿದುದೆ ಶುದ್ಧಿಯು. ತಾನು ತಿರುಗದೆ ಗಾಲಿಯನ್ನು ತಿರುಗಿಸುವುದು ಗಾಲಿಯ ಮೊಳೆಯು. ಗಾಲಿಯನ್ನು ತೊಲಗಿ ಮೊಳೆಯನ್ನು ನೆಮ್ಮಿದರೆ ಗಾಲಿಯ ಸುಳಿಯಲ್ಲಿ ಸಿಲುಕುವುದಿಲ್ಲ. ಪ್ರಾಣಾದಿ ಚಕ್ರಕ್ಕೆ ಮೊಳೆಯಂತೆ ಶಿವಶಕ್ತಿಯು ಶಿವನನ್ನಾಶ್ರಯಿಸಿದರೆ ಪ್ರಾಣಾದಿಗಳ ಸುಳಿಯಿಲ್ಲ. अशरीरं शरीरेषु अनवस्थेष्ववस्थितम् । महांतं विभुमात्मानं मत्वा धीरो न शोचति॥ ಕಾಠಕೋಪನಿಷದ್

೧-೨-೨೧ ಎಂಬ ಶ್ರುತಿಯು ತೊಳಲುತ್ತಿರುವ ಇಂದ್ರಿಯ ಗಳಲ್ಲಿ ಪರಶಿವಾತ್ಮನು ತೊಳಲುವನಲ್ಲವೆಂದು ತೋರಿಸುತ್ತಿದೆ.

## ಲಿಂಗವ್ಯಾಪ್ತಿ

ಪರಶಿವಾತ್ಮನನ್ನು ಆಶ್ರಯಿಸಿ ಗಾಳಿಯ ಸುಳಿಯನ್ನು ನೀಗುವ ಉಪಾಯವು ಪ್ರಸಾದಸ್ವೀಕಾರವು. ಅದನ್ನು ವೀರಶೈವ ಕ್ರಮದಿಂದ ಮುಂದೆ ವಿವರಿಸುವೆನು. ಅದಕ್ಕೆ ಮೊದಲು ಲಿಂಗವ್ಯಾಪ್ತಿಯನ್ನರಿವ. ಪ್ರಾಣವನ್ನೂ ಮನವನ್ನೂ ಇಂದ್ರಿಯಗಳನ್ನೂ ಅರ್ಥಗಳನ್ನೂ ತುಂಬಿ ಶಿವಚೈತನ್ಯವಿಪ್ಪುದು. ಶಿವನನ್ನು ಮರೆತರೆ ಪದಾರ್ಥಗಳು ವಿಷಯಗಳೆನಿಪವು. ಅವನ ನೆನವು ಹಿಂಗದಿದ್ದರೆ ಅವೆ ಪದಾರ್ಥಗಳು ಪ್ರಸಾದಗಳಾಗಿ ಆಯಾ ಇಂದ್ರಿಯಗಳಲ್ಲಿರುವ ಶಿವಲಿಂಗಕ್ಕೆ ಅರ್ಪಿತವಾಗಿ ಜೀವಶುದ್ಧಿಗೆ ಕಾರಣವಾದಪ್ಪುವು. ನಾಸಿಕೆಯಲ್ಲಿಯೂ ಗುದದಲ್ಲಿಯೂ ಆಚಾರಲಿಂಗವಿಪ್ಪುದು. ಮಲವೆಂದರೆಯೂ ಅನಾಚಾರವೆಂದರೆಯೂ ಒಂದೆ. ಸದಾಚಾರವು ಸುವಾಸನವು. ಮಲತ್ಯಾಗವೂ ಸುಗಂಧಗ್ರಹಣವೂ ಗುದನಾಸಿಕೆಗಳಲ್ಲಿರುವುದರಿಂದ ಆಚಾರಲಿಂಗಸ್ಥಾನವೆನಿಸಿತು. ಜಿಹ್ವೆಯಲ್ಲಿಯೂ ಗುಹ್ಯದಲ್ಲಿಯೂ ಗುರುಲಿಂಗವಿಪ್ಪುದು. ಶಿವಸ್ವರೂಪವನ್ನು ಪ್ರಕಾಶಿಸುವ ಶಿವಮಂತ್ರವು ಗುರುರೂಪವು. ಅದು ಜಿಹ್ವೆಯಲ್ಲುಂಟು. ಅಂತಪ್ಪ ಜಿಹ್ವೆಯು ಸ್ವೀಕರಿಸಿದ ಅನ್ನಸಾರವೆ ರೇತಸ್ಸು. ಅದು ಗುಹ್ಯದಲ್ಲುಂಟು. ನೇತ್ರಪಾದಗಳು ಶಿವಲಿಂಗಸ್ಥಾನವು. ವಿಶ್ವಪ್ರಕಾಶಕನೂ ವಿಶ್ವವ್ಯಾಪಕನೂ ಶಿವನು. ನೇತ್ರವು ಸರ್ವವನ್ನೂ ಪ್ರಕಾಶಿಸುವುದು. ಪಾದವು ಗಮನದಿಂದ ಸರ್ವವನ್ನೂ ವ್ಯಾಪಿಸುವುದು. ಅದರಿಂದ ಇವೆರಡರಲ್ಲಿಯೂ ಶಿವಲಿಂಗವು. ಸ್ಪರ್ಶದಲ್ಲಿಯೂ ಪಾಣಿಯಲ್ಲಿಯೂ ಜಂಗಮಲಿಂಗವು. ಶಿವನ ಜ್ಞಾನದಲ್ಲಿಯೆ ಸರ್ವವು ಸಂಗ್ರಹವಾಗಿದೆ. ಸ್ಪರ್ಶದಲ್ಲಿ ಸರ್ವ ಇಂದ್ರಿಯಗಳೂ ಏಕವಾಗಿವೆ. ಇಂದ್ರಿಯಗಳೆಲ್ಲವೂ ಪದಾರ್ಥಗಳನ್ನು ಮುಟ್ಟಿ ಅವುಗಳ ಅರಿವನ್ನುಂಟುಮಾಡುತ್ತಿವೆ. ಆದುದರಿಂದ ಅವೆಲ್ಲ ಸ್ಪರ್ಶರೂಪವಾಗಿವೆ. ಎಲ್ಲ ಪದಾರ್ಥಗಳನ್ನು ಮುಟ್ಟುವುದು ಪಾಣಿಯು. ಅದರಿಂದ ಸ್ಪರ್ಶಪಾಣಿಗಳಲ್ಲಿ ಜಂಗಮಲಿಂಗವು ಶ್ರೋತ್ರವಾಕ್ಕುಗಳಲ್ಲಿ ಪ್ರಸಾದಲಿಂಗವು ಶಿವನ ನಿರ್ಮಲಸ್ವರೂಪದಲ್ಲಿ ಎಲ್ಲವೂ ಕಾಂಬುದು ಪ್ರಕಾಶವಾದ ದರ್ಪಣವು ಪದಾರ್ಥಗಳನ್ನು ತೋರಿಸಿ ತಾನು ಅಚ್ಛಳಿಯದಿರುವುದು. ನೇತ್ರಾದಿ ಸಕಲೇಂದ್ರಿಯಗಳ ಅರ್ಥಗಳನ್ನು ಶಬ್ದವು ಬೆಳಗುವುದು ಅದರಿಂದ ಪ್ರಸಾದಲಿಂಗವೆಂಬ ಶಿವಪ್ರಸನ್ನತೆಗೆ ಶ್ರವಣವಾಕ್ಕುಗಳು ಸ್ಥಾನವು. ಇವರಂತೆಯೆ ಆಕಾಶಾದಿ ಪಂಚಭೂತಗಳಲ್ಲಿಯೂ ಪ್ರಾಣಾದಿ ಪಂಚವಾಯುಗಳಲ್ಲಿಯೂ, ಚಿತ್ತಾದಿ ಅಂತಃಕರಣ ಪಂಚಕದಲ್ಲಿಯೂ ಲಿಂಗವ್ಯಾಪ್ತಿಯುಂಟು. ಅದನ್ನು ಲೇಖವು ಹಬ್ಬುವುದೆಂಬ ಹೆದರಿಕೆಯಿಂದ, ಹೇಳಿದೆವಲ್ಲದೆ ವಿಸ್ತರಿಸುವುದಿಲ್ಲ. ಮೇಲೆ ಹೇಳಿದುದಕ್ಕೆ ಆಗಮ ಪ್ರಮಾಣಗಳು.

इष्टलिंगं तु बाह्यांगे प्राणलिंगं तथांतरे । आत्मनिष्ठं भावलिंग मेवं ज्ञेयं नगात्मजे ॥ जिव्हांगे ॥ गुरुलिंगं स्यादाचारो नासिकांगके । प्रसादलिंगं श्रोत्रांगेत्वगंगे चरलिंगकं ॥ द्रुगंगे शिवलिंगं स्यान्महालिंगं हृदि स्थितंम् ॥ एवं कर्मेंद्रियांगेषु लिंगयोगं विदुर्बुधाः ॥ ಸೂಕ್ಷ್ಮಾಗಮ ೯-ಪಟಲ ೮೩-೮೬ ಶ್ಲೋಕಗಳು.

## ಪ್ರಸಾದ ಸದ್ಭಾವ

ಈ ಬಗೆಯಲ್ಲಿ ಸರ್ವಾಂಗದಲ್ಲಿ, ಸರ್ವಕರಣಗಳಲ್ಲಿ ಸರ್ವಭಾವದಲ್ಲಿ ಲಿಂಗಯೋಗವನ್ನರಿತ ಬಳಿಕ ಪ್ರಸಾದ ಸದ್ಭಾವವು ಗೋಚರವಾಗುವುದು. ಇಂದ್ರಿಯಗಳ ಸ್ವಾಭಾವಿಕ ಪ್ರವೃತ್ತಿಯಿಂದ ಜೀವಾತ್ಮನು ವಿಷಯಗಳಲ್ಲಿ ನಾನು ನನ್ನದೆಂಬ ಭಿಮಾನವನ್ನು ಹೊಂದಿ ಅನರ್ಥಕ್ಕೀಡಾಗುವನು.

परां चि खानिव्यतृणत्स्वयं भूस्तस्मात्पराङ्पश्यति नांतरात्मन् । कश्चिद्धीरः प्रत्यगात्मांनमैक्षदावृत्तचक्षु स्मृतत्वमिच्छन् ॥

।ಕಠ ೨ ಅಧ್ಯಾಯ ೧ ವಲ್ಲೀ॥ ೧ ಮಂತ್ರ. ಎಂಬೀ ಉಪನಿಷತ್ತು ಬ್ರಹ್ಮನು ಇಂದ್ರಿಯಗಳನ್ನು ಹೊರಮೊಗವಾಗಿಸಿ ಅನರ್ಥಕ್ಕೀಡುಮಾಡಿದನೆಂದು ಹೇಳುವುದು. ವಾತೂಲಾಗಮವು ಹೊರಮೊಗವನ್ನು ಹಿಂದಿರುಗಿಸಲಿಕ್ಕೆ

न ममेदं जगत्सर्वं शिवायेति शिवार्पणम् ।
अभिधत्ते विमात्राद्यो मंतो लुप्तमकारकः ॥

(ವಾತೂಲಾಗಮವು. ಅನುಭವಸೂತ್ರದ ೭ನೇ ಅಧಿಕರಣದಲ್ಲುದಾಹೃತವಾದುದು.) ಈ ಜಗತ್ತೆಲ್ಲ ಶಿವನದೆ ನನ್ನದಲ್ಲ ಎಂದಿಂತು ಅರ್ಥವುಳ್ಳ ಷಡಕ್ಷರ ಜಪವನ್ನು ಮಾಡುವುದೆ ಉಪಾಯವು. ಈ ಜಪವನ್ನರಿತರೆ ಪ್ರಸಾದದ ಸ್ವರೂಪವು ತಿಳಿದು ಬರುವುದು. ಅಂದರೆ ಶಿವನಿಗರ್ಪಿತವಾದುದೆ

ಪ್ರಸಾದವು. ಅನರ್ಪಿತವಾದುದೆ ವಿಷಯವು. ಅರ್ಪಿತಭೋಗವೆ ನೈರ್ಮಲ್ಯವು. ಅನರ್ಪಿತ ಸ್ವೀಕಾರವೆ ವಿಷಯಭೋಗವು. ಉಚ್ಚಿಷ್ಟ ಸೇವನೆಯು.

**शरीरादिजगद्रूपमुच्छिष्टं भ्रांतिलक्षणम् । अन्नंतदभिमानीस्यात्जीवः संसारलक्षणः ॥**

ವಾತೂಲಾಗಮವು ( ವಿಶೇಷಾರ್ಥಪ್ರಕಾಶಿಕೆಯು ಮೂರನೆಯಧಿಕಾರಣದಲ್ಲುದಾಹರಿಸಿದುದು. ) ಶರೀರೇಂದ್ರಿಯವೂ ಅದಕ್ಕೆ ಗೋಚರಿಸುವ ವಿಷಯಗಳೂ ಇಂತಿವೆಲ್ಲ ಅನ್ನವು ಅಥವಾ ಉಚ್ಚಿಷ್ಟವು. ಇದನ್ನು ನಾನು ನನ್ನದೆಂದು ಅಭಿಮಾನಿಸುವನೆ ಸಂಸಾರದಲ್ಲಿ ಮಗ್ನನಾದ ಜೀವನು. ಎಂಬ ವಾತೂಲಾಗಮ ಶ್ರುತಿಯು ಪ್ರಮಾಣವಾಗಿದೆ.

## ಪ್ರಸಾದ ಸ್ವೀಕಾರ

ನಿರಹಂಭಾವದಿಂದ ಇಷ್ಟಲಿಂಗಕ್ಕೆ ಪದಾರ್ಥಗಳನ್ನು ಸಮರ್ಪಿಸಿ ಶುದ್ಧಭಾವದಿಂದ ಸ್ವೀಕರಿಸುವುದೆ ಪ್ರಸಾದ ಸ್ವೀಕಾರವು. ನಿಷಿದ್ಧವಾದ ದುರ್ಗಂಧಾದಿಗಳನ್ನು ಪರಿಹರಿಸಿ ಸುಗಂಧಾದಿ ಪದಾರ್ಥಗಳನ್ನು ಇಷ್ಟಲಿಂಗಕ್ಕರ್ಪಿಸುವುದರಿಂದ ಅವುಗಳ ರೂಪವು ಶುದ್ಧವಾಯ್ತು. ಆ ಪದಾರ್ಥಗಳ ರುಚಿಗಳನ್ನು ಆಯಾ ಇಂದ್ರಿಯಗಳಲ್ಲಿರುವ ಆಚಾರಾದಿ ಲಿಂಗಗಳಿಗೆ ಅರ್ಪಿಸುವುದರಿಂದ ಅವುಗಳ ರುಚಿಗಳು ಶುದ್ಧವಾದುವು. ಹಾಗು ಅದರಿಂದಾದ ತೃಪ್ತಿಯನ್ನು ಭಾವಲಿಂಗಕ್ಕರ್ಪಿಸುವುದರಿಂದ ತೃಪ್ತಿಯು ಶುದ್ಧವಾಯ್ತು. ವಿಷಯಗಳನ್ನು ಭೋಗಿಸುವುದರಿಂದ ಮತ್ತೆ ವಿಷಯವಾಸನವೂ ಆ ವಿಷಯವಾಸನದಿಂದ ಅಂತಃಕರಣಮಾಲಿನ್ಯವೂ ಆ ಮಾಲಿನ್ಯದಿಂದ ಶಿವಸ್ವರೂಪದ ಮರವೆಯೂ ಆ ಮರವೆಯಿಂದ ಮತ್ತೆ ಮತ್ತೆ ವಿಷಯಾಭಿರತಿಯೂ ಉಂಟಾಗುವುವು. ಇದೆಲ್ಲ ಪ್ರಸಾದಸ್ವೀಕಾರದಿಂದ ತಪ್ಪಿಹೋಗಿ ನಿತ್ಯೋತ್ಸಾಹವಾದಪುದು.

## ಪ್ರಸಾದಿಯ ಧರ್ಮಗಳು

ಇದನ್ನೆಲ್ಲಾಚರಿಸಲು ಗುರುಲಿಂಗಜಂಗಮದ ಮಾಹಾತ್ಮ್ಯವೂ ಭಕ್ತಮಾಹಾತ್ಮ್ಯವೂ ತಿಳಿದಿರಬೇಕು. ಪ್ರಸಾದಿ ಮಾಹಾತ್ಮ್ಯವು ಮನವರಿಕೆಯಾಗಿರಬೇಕು. ಎಲ್ಲಕ್ಕೂ ಮೊದಲು ಪ್ರಸಾದಿ ಸ್ಥಳದ ದೊಡ್ಡಸ್ತಿಕೆಯು ಗೊತ್ತಾಗಿರಬೇಕು. ಆಯಾಸ್ಥಳದ ಮಹಿಮುವು ತಿಳಿದಲ್ಲದೆ ಅದರಲ್ಲಿ ವಿಶ್ವಾಸದಿಂದ ನಡೆವುದಾಗದು. ಅದರಿಂದ ವೀರಶೈವ ಷಟ್ಸ್ಥಳ ವಿವರಣದಲ್ಲಿ ಆಯಾ ಸ್ಥಳಧರ್ಮಗಳನ್ನು ವಿವರಿಸುವಲ್ಲಿ ಆ ಸ್ಥಳದ ಪ್ರಶಂಸೆಯು ಹೇಳಲ್ಪಡುತ್ತದೆ. ಗುರುಲಿಂಗಜಂಗಮ ಭಕ್ತಶರಣರ ಯೋಗ್ಯತೆಯು ಗೊತ್ತಾಗದವನು ಎಂದೆಂದಿಗೂ ನಿರ್ವಂಚಕತ್ವದಿಂದ ಪದಾರ್ಥಗಳನ್ನು ಅವರಿಗರ್ಪಿಸಿ ಪ್ರಸಾದವನ್ನು ಪಡೆಯಲಾರನು. ತನ್ನ ಅಂಗೇಂದ್ರಿಯಗಳಲ್ಲಿ ಅಡಕವಾದ ಲಿಂಗಸಂಧಾನದಿಂದ ಪ್ರಸಾದವನ್ನು ಪಡೆವುದು ಸಿದ್ಧ ಅಥವಾ ಲಿಂಗಪ್ರಸಾದವು. ಗುರುವು ಲಿಂಗಸ್ವರೂಪನೆಂದು ಗುರುವಿಗೆ ಪದಾರ್ಥಗಳನ್ನಿತ್ತು ನಂತರ ತಾನು ಅವುಗಳನ್ನು ಸ್ವೀಕರಿಸುವುದೆ ಶುದ್ಧ ಅಥವಾ ಗುರುಪ್ರಸಾದವು. ಶಿವಯೋಗಿ ಅಥವಾ ಜಂಗಮನು ಶಿವನಲ್ಲದೆ ಬೇರಲ್ಲವೆಂದು ಬಗೆದು ಜಂಗಮನಿಗಿತ್ತಬಳಿಕ ತಾನು ಸ್ವೀಕರಿಪುದೆ ಪ್ರಸಿದ್ಧ ಅಥವಾ ಜಂಗಮಪ್ರಸಾದ. ಶಿವಭಕ್ತ ಶಿವಶರಣರನ್ನು ಶಿವಭಾವದಿಂದ ಕಂಡು ಅವರಿಗೆ ಸೇಡಿಮಾಡಿ ತೃಪ್ತನಾಗುವುದೆ ಸಮಯಪ್ರಸಾದ. ಹೀಗೆ ಅನವರತವೂ ಪ್ರಸಾದಭೋಗಿಯಾದವನಿಗೆ ಇಂದ್ರಿಯಗಳ ಕಾಟವಿಲ್ಲ.

## ಪ್ರಾಣಲಿಂಗಿ ಸ್ಥಳವು

**शिवप्रसादे सति योगभाजि सर्वं शिवैकात्मतया विभाति॥ स्वकर्मसुक्तः शिवभावितात्मास प्राणलिंगीति निगद्यते । सः ॥**

ಸಿದ್ಧಾಂತ ಶಿಖಾಮಣಿ ಪರಿಚ್ಛೇದ ೧೦-ಶ್ಲೋಕ ೧೧

ಪ್ರಸಾದಿ ಸ್ಥಳದ ಧರ್ಮಗಳಿಂದ ಶರೀರೇಂದ್ರಿಯಾದಿಗಳ ಉಪಾಧಿಯು ಕರಗುವುವು. ನಿತ್ಯಶಿವಸ್ವರೂಪಾಭಿವ್ಯಕ್ತಿಯಾಗುವುದು. ಜೀವಕರ್ಮವಳಿವುದು. ಶಿವಭಾವನಳವಡುವುದು ಇಂತಾದ ಪ್ರಸಾದಿಯೆ ಪ್ರಾಣಲಿಂಗಿಯಾದವನು.

## ಈ ಸ್ಥಳದ ಗುಟ್ಟು

**लिंगं चिदात्मकं ब्रह्म तच्छक्तिः प्राणरूपिणी । तद्रूपलिंगविज्ञानी प्राणलिंगीतिकथ्यते ॥**

ವೀರಶೈವ ಪ್ರದೀಪಿಕಾ ೪ನೆ ನಿರೂಪಣ ಶ್ಲೋಕ ೩

ನಮ್ಮಲ್ಲಿ ಅರಿವು ಇಪ್ಪುದು. ಆ ಅರಿವನ್ನೆ ನೆಮ್ಮಿ ಮರವೆಯುಂಟು. ಮರವೆಯು ಅರುಹಿನಂದಲ್ಲದೆ ಕಾಣದು. ನಮ್ಮ ನಿದ್ದೆಯಲ್ಲಿ ಮರವೆಯು ಒಡೆದು ತೋರುವುದು. ಸ್ವಪ್ನದಲ್ಲಿ ಮರವೆಯು ಹಲವು ಬಗೆಯ ವಿಕಾರಗಳನ್ನು ತಾಳಿ ಮುಂದೆ ನಿಲುವುದು. ಜಾಗರದಲ್ಲಿ ಮರವೆಯನ್ನು ಹಿಂದೊತ್ತಿ ಅರಿವು

ಮುಂದುವರಿವುದು. ಆದರೆ ಈ ಮೂರು ಸ್ಥಿತಿಗಳಲ್ಲಿಯು ಅರಿವು ಮರವುಗಳೆರಡೂ ಜವಳಿಯಾಗಿಯೆ ಇರುವುವು. ಈ ಜವಳಿಯಲ್ಲಿ ಮರವೆಯನ್ನು ಬಿಟ್ಟು ಅರಿವನ್ನಷ್ಟೆ ಲಕ್ಷಿಸುತ್ತ ಪ್ರಸಾದಿಯು ನಡೆದಿರುವನು. ಪ್ರಸಾದಿಗೆ ಅವಧಾನಭಕ್ತಿಯು. ವಿಷಯ ಗಳಾಶೆಯಿಂದ ಮನವು ಹೊರವೊಗವಾಗುವುದು. ಹೊರ ವೊಗವೆಂಬುದೆ ಮರವೆ. ಹೊರವೊಗವು ಹಿಂಗಿ ಒಳವೊಗ ವಾಗಲು ಚಿದಾತ್ಮಕವಾದ ಲಿಂಗಸ್ವರೂಪಾನುಭವವು ಬರು ವುದು. ಆ ಲಿಂಗಕ್ಕೆ ತನ್ನ ಅಚ್ಚಳಿಯದ ನೆನಹೆ ಶಕ್ತಿಯು. ಆದೇ ಅದಕ್ಕೆ ಪ್ರಾಣವು=ಅದರ ಪೀಠವು=ಶಿವಲಿಂಗ ಶಕ್ತಿಯು ಛಾಂದೋಗ್ಯದಲ್ಲಿ स भगवः कस्मिन् प्रतिष्ठितः ಎಂಬ ನಾರದ ಪ್ರಶ್ನೆಕ್ಕೆ स्वेमहिम्नि ಎಂಬ ಉತ್ತರದಲ್ಲಿ ಇದೇ ಮಾತು ಅಡಗಿದೆ. ಈ ಶಕ್ತಿಯೆ ವಿಶ್ವಕ್ಕಾಧಾರವು. ಇದರ ಬಲದಿಂದಲೆ ಪ್ರಾಣಸ್ಪಂದವು. ಅದರಿಂದ ಶಕ್ತಿಯೆ ಪ್ರಾಣ ವೆಂದರಿತು, ಸರ್ವಸ್ಪಂದಗಳಲ್ಲಿಯೂ ಶಕ್ತಿಯನ್ನು ಕಾಣ್ಬನು ಭಕ್ತನು. ಮೊದಲು ಪ್ರಾಣವಾಯುವಿನ ಉಪಾಧಿಯಿಂದ ಆತ್ಮನು ಜೀವವೆನಿಸಿದನು. जीव प्राणधारणे ಎಂಬ ಧಾತುವಿ ನಿಂದ ಜೀವ ಶಬ್ದವು ಹೊರಟದೆ. ಈಗ ಪ್ರಾಣದ ಮೊದ ಲಲ್ಲಿರುವ ಶಕ್ತಿಯು ಗುರುತು ಹತ್ತಿತು. ಆ ಶಕ್ತಿಗೆ ಮೂಲ ವಾದ ಆತ್ಮನೆ ಲಿಂಗವು. ಈ ಅನುಸಂಧಾನದಿಂದ ಪ್ರಸಾ ದಿಯು ಪ್ರಾಣಲಿಂಗಿಯಾದನು.

## ಜೀವನಮರ್ಯಾದೆಯಲ್ಲಿದರ ಕಾಲವು

ಭಕ್ತಮಾಹೇಶ್ವರಪ್ರಸಾದಿಯೆಂಬ ಮೂರು ಸ್ಥಳಗಳಲ್ಲಿ ಶ್ರದ್ಧಾನಿಷ್ಠಾಅವಧಾನಗಳು ಭಕ್ತಿಗಳಾಗಿದ್ದುವು. ಈ ಮೂರ ರಿಂದ ಶಿವತತ್ವಾನುಭವವಾದುದೆ ಪ್ರಾಣಲಿಂಗಿ ಸ್ಥಳವು. ಇಲ್ಲಿ ಅನುಭವಭಕ್ತಿಯು. ಇದು ಮಾನಸಶಾಸ್ತ್ರಕ್ಕೂ ಒಡಂಬಡ ತಕ್ಕ ಮಾತಾಗಿದೆ. ಎಲ್ಲ ತರದ ಜ್ಞಾನಕ್ಕೂ ಇವೇ ಮೆಟ್ಟಿ ಗಳು. ಮೊದಲು ಕಲಿಯತಕ್ಕ ವಿಷಯದಲ್ಲಿ ನಂಬುಗೆ. ನಂಬಿ ದುದರಲ್ಲಿ ಗಟ್ಟಿ. ಗಟ್ಟಿಯಾದುದರಲ್ಲಿ ಎಂದೆಂದಿಗು ಎಚ್ಚರಿಕೆ ಯಾಗಿರುವುದು. ಎಂಬಿವಿಲ್ಲದೆ ಪದಾರ್ಥಜ್ಞಾನವಾಗದು. ಇಂ ತದ ಜ್ಞಾನವೆ ಅನುಭವವು. ಪದಾರ್ಥಗಳ ಅನುಭವಜ್ಞಾ ನಕ್ಕೆ ಯೌವನದ ಪ್ರೌಢತೆಯು ಕಾಲವು. ಪ್ರಾಣಲಿಂಗಿ ಸ್ಥಳ ಕೊತ್ತಿದು.

## ಪ್ರಾಣಲಿಂಗಿಯ ಇರುವು

माया विकल्पजं विश्वं हेयं संचिन्त्य निस्पृशः ।
चिदानंदमये लिंगे विलीनः प्राणलिंगवान् ॥

ಇಂದ್ರಿಯಗಳಿಗೆ ಹವಣಾಗಿ ಬರುವುವೆಲ್ಲ ವಿಶ್ವವು. ಅದನ್ನು ಬಿಚ್ಚಿಬಗೆಯಲು ತಾನೆಂಬ ಆತ್ಮನಿಲ್ಲದೆ ತೋರದಾಗಿದೆ. ಕಾಣು ವ ಮಡಕೆಯು ಮಣ್ಣಿಲ್ಲದೆ ತೋರದು ಒಡೆದು ಕಾಣದಾದ ಮಡಕೆಯು ಮಣ್ಣುಪಾಲಾಗಿ ಅಡಗುವುದು. ತೋರುವ ವಿಶ್ವವು ತಾನಿಲ್ಲದೆ ತೋರದು. ಅದರ ತೋರಿಕೆಯಳಿವುದಾ ದರು ತನ್ನಲ್ಲಿಯೆ. ಅದರಿಂದ ತಾನಲ್ಲದೆ ಉಳಿದುದೆಲ್ಲ ಮಾಯಾ ಮಯವಾದ ವಿಶ್ವವು ಅಳಿಯಲು ಉಳಿವ ತನ್ನಲ್ಲಿ ಜೀವನೆಂಬ ಭ್ರಾಂತಿಯಿಲ್ಲ ತಾನೆ ಲಿಂಗವು. ಈ ಪರಿಯಲ್ಲಿ ವಿಶ್ವವು ಅಳಿದು ಹೋದುದು. ಉಳಿದ ತಾನು ಉಳಿವೆ, ಆಂದರೆ ಸದ್ರೂಪನು. ಈ ಸದ್ರೂಪವು ಮತ್ತೊಂದರಿಂದ ತೋರದು. ತನ್ನಿಂದ ತಾನೆ ಬೆಳಗುವುದು. ಅದರಿಂದ ಅದು ಚಿದ್ರೂಪವು. ಈ ಚಿದ್ರೂ ಪಕ್ಕೆ ಎದುರು ಪ್ರತಿಭಟಸುವುದು ಬೇರೊಂದಿಳಿದಿಲ್ಲ. ಅದ ರಿಂದದು ಆನಂದರೂಪವು. ಇಂದ್ರಿಯದ ಹೇಯವೆಂದು ವಿಷ ಯಗಳನ್ನು ದಾಟಿ ಸಚ್ಚಿದಾನಂದರೂಪವಾದ ಲಿಂಗದಲ್ಲಿ ಅಡ ಗಿದವನೆ ಪ್ರಾಣಲಿಂಗಿಯು.

## ವ್ಯವಹಾರದಲ್ಲಿದರ ಪರಿಣಾಮವು

ಈ ತೆರನಾದ ಅರಿವೆಯಿಂದ ಬುದ್ಧಿಯಲ್ಲಿ ಸ್ಥಿರತೆಯು ಬರು ವುದು. ಸ್ಥಿರಬುದ್ಧಿಯು ಸಕಲಕಾರ್ಯಗಳೆಲ್ಲ ಉತ್ಸಾಹಕಾರ ಣವಾಗಿಹುದು. ವೀರಶೈವನಾವಾಗಲು ಸ್ವಭಾವದಿಂದ ಉತ್ಸಾ ಹಿಯಾಗಿರುವನು. शिवभक्ता महोत्साहाः शिवार्चनपरा यणाः ( ವೀರಶೈವ ಧರ್ಮಶಿರೋಮಣಿ ೭೪ನೆಯ ಶ್ಲೋಕದ ಅವತರಣಿಕೆಯಲ್ಲಿ ) ಕಾರ್ಯಲಾಭಹಾನಿಗಳಲ್ಲಿ ಹೆಚ್ಚು ಕುಂದು ಗಳಿರದಿರುವನು. ದರ್ಪವಿಲ್ಲದೆ ಮುಂದೆಯನ್ನು ಸರಿಗಟ್ಟಿ ಕುದಿ ವರಲ್ಲ ತನಗೆ ದೊರೆತುದರಲ್ಲಿ ಪಾಲುಗೂಡಿಸಿಕೊಂಬರು. शांताः । स्मितमुखाभद्रानित्यं स्वागतवादिनः । शौचाचारण संपन्ना दयादाक्षिण्यगोचराः । दक्षाः मात्सर्योन्मुक्ता याथा तथ्यं च भाषिणः ॥ संविभागपराः प्राज्ञा अशठाश्चाप्यकु त्सिताः ಇತ್ಯಾದಿ (ಅಲ್ಲಿಯೆ). ಇದೆಲ್ಲ ಸ್ವಾಭಾವಿಕವು. ಶಿವ ನಿಂದ ತಾನೆಂದೆಂದಿಗೂ ಅಗಲಲಾರೆನು ಶಿವನು ತನ್ನಲ್ಲಿ ಕಬ್ಬಿನಲ್ಲಿ ತನಿರಸದಂತೆ ಬೆರೆತಿಹನು ಎಂಬ ಅರಿವನ್ನು ಹೊಂ

ದಿದ ಪ್ರಾಣಲಿಂಗಿಗೆ ಅನುತ್ಸಾಹವೆಲ್ಲಿರುವುದು! तेस्वा भग प्रविशानि स्वाहा । समाभग प्रविश स्वाहा ॥ (ತೈತ್ತಿರೀಯ ಶಿಕ್ಷಾಧ್ಯಾಯ ೪ನೆಯ ನುವಂಕ) रसो वै सः । रसं ह्येवाय लब्धाऽऽनंदी भवति । (ತೈತ್ತಿರೀಯ ಬ್ರಹ್ಮವಲ್ಲಿ ಅಧ್ಯಾಯ ೬ನೆ ಅನುವಾಕ) ಎಂದು ಪರಶಿವನಿಗೂ ಆತ್ಮನಿಗೂ ಸಾಮರಸ್ಯವನ್ನೂ ಆನಾಮುಸ್ಯದಿಂದ ಸದಾನಂದವೆಂಬ ಉತ್ಸಾಹ ಬೀಜವನ್ನೂ ಬೀರುವ ಶ್ರುತಿವಾಕ್ಯಕ್ಕೆ ವೀರಶೈವಾಗಮಗಳು ಹೇಳುವ ಷಟ್ಸ್ಥಳವಲ್ಲದೆ ಪ್ರಯೋಗಶಾಲೆಯನ್ನು ಕಾಣೆನು.

## ಪ್ರಾಣಲಿಂಗಿಯ ಧರ್ಮವಿವರ

प्राणलिंगिस्थलं चैतत्पंच स्थलसमन्वितम् ।
प्राणलिंगिस्थलं चादौ प्राणलिंगार्चनंततः ॥
शिवयोगसमाधिश्च ततोलिंगनिजस्थलं ।
अंगलिंगिस्थलं चाथ क्रमादेषांभिदोच्यते ॥

ಸಿದ್ಧಾಂತ ಶಿಖಾಮಣಿ ೧೨ ಪರಿಚ್ಛೇದ ಶ್ಲೋಕ ೪–೫.

ತಾನು ಪೂಜಿಸುವ ಇಷ್ಟಲಿಂಗವು ಅಂತರಂಗದಲ್ಲಿರುವ ಪ್ರಾಣಲಿಂಗವಲ್ಲದೆ ಬೇರಲ್ಲವೆಂದರಿತು ಬಾಹ್ಯಪೂಜೆಯಂತೆ ಅಂತರಂಗದಲ್ಲಿ ಚಿಂತಿಸುವುದೆ ಪ್ರಾಣಲಿಂಗಾನುಸಂಧಾನವು. ಬಾಹ್ಯಕರಸ್ಥಲದೊಡನೆ ಹೃತ್ಸ್ಥಳದಲ್ಲಿ ಲಿಂಗಕ್ಕಾಸನವಿಡಬೇಕು. ಹೊರಗೆ ಪುಷ್ಪಾದಿಗಳಿಂದ ಪೂಜಿಸಿದಂತೆ ಅಂತರಂಗ ಭಾವಪುಷ್ಪಗಳಿಂದ ಪೂಜಿಸತಕ್ಕುದು. कुरुष्व वत्सोपचारान् षोडश स्नानपूर्वकान् बाह्यानभ्यंतरांश्चैव समाहितमनाः सदा–ಶಂಕರಸಂಹಿತಾ ೮೧ ಅಧ್ಯಾಯ ೩೮ ಶ್ಲೋಕ. ಈ ಅಂತರಂಗ ಪೂಜಾಸಾಮಗ್ರಿಯನ್ನು स्नानं समत्व सलिलेन हि पूर्णभाव वस्त्रं त्रिशक्ति गुणसंयुत यज्ञ सूत्रं ॥ विद्या सुगंधचयभूतदयाक्षतांश्च शब्दादिपुष्पचयमर्पय नित्यमंग ॥ प्रज्ञामनोहंकृति चित्तधूपं श्रोत्रादिपंचेंद्रियदीपमंग । तद्वासनातैलयुतं च देहि जीवोपहारं सुखदुःखबाह्यम् ॥ गुणत्रयाख्य तांबूलं प्राणार्पणमस्कृति शांतिपुष्पांजलिं देहि चैक भावविसर्जनम् ॥ ಅಲ್ಲಿಯೇ ೩೯–೪೨

ಇಂತಾದ ಒಳಹೊರಗಣ ಪೂಜೆಯಿಂದ ಎಡೆಬಿಡದ ಶಿವ ಧ್ಯಾನಮಾಡಲು ಅದೇ ಶಿವಯೋಗಸಮಾಧಿ. ಇದು ಯೋಗ ಸಾಧಕರು ಹೇಳುವ ಇಂದ್ರಿಯ ವ್ಯಾಪಾರಗಳನ್ನು ಕೆಳವುದಲ್ಲಿ ಮೇಲೆ ಬಿಚ್ಚಿ ಹೇಳಿದ ಬಗೆಯಿಂದ ಇಂದ್ರಿಯಗಳಲ್ಲೆಲ್ಲ ಶಿವಲಿಂಗ ವ್ಯಾಪ್ತಿಯನ್ನು ಲಕ್ಷಿಸಿ ಆ ವ್ಯಾಪಾರಗಳನ್ನು ಶಿವಮಯವನ್ನಾಗಿ ಮಾಡುವುದು.

ಈ ಶಿವಯೋಗಸಮಾಧಿಯಿಂದ ಒಳಗಣ ಲಿಂಗಶಕ್ತಿಯು ಶರೀರವನ್ನೆಲ್ಲ ಪಟುವಾಗಿಪುದು. ಅದರಿಂದ ಲಿಂಗಮಯ ಶರೀರವಾಗಿ ಲಿಂಗ ನಿಜಸ್ಥಳವಾಗುವುದು. ಅದರಿಂದ ಅಂಗದಲ್ಲಿ ಲಿಂಗವೂ ಲಿಂಗದಲ್ಲಿ ಅಂಗವೂ ತೊಡಕಿದ ಅನುಭವವಾದಪುದು. ಆತ್ಮನಶಕ್ತಿಯು ಶಿವಶಕ್ತಿಯಲ್ಲಡಗಿ ಶಿವಶಕ್ತಿಯು ಆತ್ಮಶಕ್ತಿಯಲ್ಲಿ ಒಡೆದು ತೋರುವುದೇ ಅಂಗಲಿಂಗಸ್ಥಳವು.

## ಗಾರ್ಹಸ್ಥ್ಯವೂ ಪ್ರಸಾದಿ ಪ್ರಾಣಲಿಂಗ ಸ್ಥಳಗಳೂ

ಚಾತುರಾಶ್ರಮ್ಯ ಧರ್ಮದ ಗೃಹಸ್ಥ ಧರ್ಮಗಳನ್ನು ಸ್ಮೃತಿಕಾರರು ವಿವರಿಸಿರುವರು. ಅದು ಬ್ರಹ್ಮಚರ್ಯಕ್ಕೆ ಮುಂದಿನದು ಅದರಲ್ಲಿಯ ಧರ್ಮಗಳು ಪ್ರಸಾದಿ ಪ್ರಾಣಲಿಂಗ ಸ್ಥಳಗಳ ಧರ್ಮಗಳನ್ನು ಕೆಲವು ಮಟ್ಟಿಗೆ ಹೋಲುವವು. ಪ್ರಸಾದಿ ಸ್ಥಳದಲ್ಲಿಯ ಮುಖ್ಯ ಧರ್ಮವು ತನಗೆ ದೊರಿತುದೆಲ್ಲ ಶಿವನದೆಂದು ನಂಬುವುದು; ಅದನ್ನು ಶಿವನ ಕಾರ್ಯಕ್ಕೆ ಬಳಸುವುದು. ಗುರುಲಿಂಗಜಂಗಮದ ಸೇವೆಯಲ್ಲಿ ಅದನ್ನು ನುರಿಸುವುದು.

ಗೃಹಸ್ಥನಾದರು ತನಗೆ ಬಂದುದನ್ನು ಸಮಾಜಕ್ಕಾಗಿ ವಿನಿಯೋಗಿಸತಕ್ಕುದೆಂದು ಸ್ಮಾರ್ತ ಧರ್ಮವು.

गृहस्थो ब्रह्मचारी च वानप्रस्थोऽथभिक्षुकः ।
चत्वार आश्रमाः प्रोक्ताः सर्वे गार्हस्थमूलकाः ॥

ಮಹಾಭಾರತ ಆಶ್ವಮೇಧಿಕ ಪರ್ವ ೪೫ ಅಧ್ಯಾಯ ೧೩ ಶ್ಲೋಕ. ಗೃಹಸ್ಥ ಬ್ರಹ್ಮಚಾರಿ ವಾನಪ್ರಸ್ಥ ಭಿಕ್ಷುಕರೆಂಬ ನಾಲ್ಕು ಆಶ್ರಮಗಳವರಿಗೂ ಗೃಹಸ್ಥನೇ ಬೊಡ್ಡಿಯು—

बलिकर्मस्वधा होमः स्वाध्यातिथि सत्क्रियाः ।
भूतपित्रमरब्रह्म मनुष्याणां महा मखाः ॥

ಯಾಜ್ಞವಲ್ಕ್ಯ ಸ್ಮೃತಿ ಆಚಾರಾಧ್ಯಾಯ— ಬಲಿಕರ್ಮವೆಂದರೆ ಭೂತಯಜ್ಞವು. ಸ್ವಧಾ ಎಂದರೆ ಪಿತೃಯಜ್ಞವು. ಹೋಮವೆಂದರೆ ದೇವಯಜ್ಞವು. ಸ್ವಾಧ್ಯಾಯವೆಂದರೆ ಬ್ರಹ್ಮಯಜ್ಞವು. ಅತಿಥಿ ಸತ್ಕ್ರಿಯವೆಂದರೆ ಮನುಷ್ಯ ಯಜ್ಞವು. ಇವುಗಳಿಂದ ಗೃಹಸ್ಥನು ವಿಶ್ವಕುಟುಂಬಿಯಾಗುವನು. ಭೂತಯಜ್ಞದಿಂದ ನಾಯಿ ಕಾಗೆ ಮುಂತಾದ ಪ್ರಾಣಿಗಳಿಗೂ

ಚಾಂಡಾಲಾದಿಗಳಿಗೂ ಅನ್ನವು ದೊರೆವುದು. ಸ್ವಧೆಯಿಂದ ಪಿತೃರರು ಸಂತೋಷಪಡೆವರು. ಹೋಮದಿಂದ ದೇವತೆಗಳ ತೃಪ್ತಿಯಹುದು– ಸ್ವಾಧ್ಯಾಯದಿಂದ ವಿದ್ಯಾಪಾಲನವಾಗುವುದು. ಅತಿಥಿಸತ್ಕಾರದಿಂದ ಅತಿಥಿಗಳ ತೃಪ್ತಿಯು. ಇವುಗಳ ಫಲನ್ನು **महायज्ञैश्च यज्ञैश्च ब्राह्मीय क्रियते तनुः** ಮನು ೨೮–೨೯ ಶ್ಲೋಕ. ಶರೀರವು ಬ್ರಹ್ಮಮಯವಾಗುವುದೆಂದು ಹೇಳಿರುವರು.

ಪ್ರಸಾದಿ ಪ್ರಾಣಲಿಂಗಿ ಸ್ಥಳಗಳ ಮತ್ತು ಗಾರ್ಹಸ್ಥ್ಯದ ಗುಟ್ಟು ಒಂದೇ.

ಶರೀರವು ಎಂಬ ಮನುವಿನ ಉಕ್ತಿಯಲ್ಲಿ ಶರೀರದಲ್ಲಿ ಇಂದ್ರಿಯಗಳನ್ನೂ ಅಂತಃಕರಣವನ್ನೂ ಸೇರಿಸಿಯೆ ಹೇಳಿರುವನೆಂದು ತಿಳಿಯಬೇಕು. ಅದರಿಂದ ತ್ರಿಕರಣಶುದ್ಧಿಯೆ ಗೃಹಸ್ಥಾಶ್ರಮದ ಫಲವು. ಅಂದರೆ ಬ್ರಹ್ಮಚರ್ಯದಲ್ಲಿ ಒಟ್ಟಯಿಸಿದ ಜ್ಞಾನಬಲಗಳನ್ನು ವಿಶ್ವಹಿತಾರ್ಥವಾಗಿ ವಿನಿಯೋಗಿಸುತ್ತ ಬೆಳೆಯಿಸುವುದು ಗೃಹಸ್ಥನ ಮೆಟ್ಟು ಇದೇ ಅವನ ಕರ್ತವ್ಯ. ವೀರಶೈವ ಪರಿಭಾಷೆಯಲ್ಲಿ ಮಾಟ.

## ಭಗವದ್ಗೀತೆಯ ಗಾರ್ಹಸ್ಥ್ಯವು

ಈ ಸ್ಮಾರ್ತಗಾರ್ಹಸ್ಥ್ಯವು ಸ್ಥಳಗಳಿಂದ ಉಳಿದ ಬಗೆಯಲ್ಲಿ ಬೇರಾಗಿದೆ. ಇದು ಭಕ್ತಿಯ ಮಾರ್ಗವಲ್ಲ. **स्नात्वादेवान्पितृंश्चैव तर्पयेदर्चयेत्तथा** ಯಾಜ್ಞವಲ್ಕ್ಯ ಆಚಾರಾಧ್ಯಾಯ ಗೃಹಸ್ಥಧರ್ಮ ಪ್ರಕರಣ ೧೦೦ ಮುಂತಾದ ಸ್ಮೃತಿವಚನಗಳಿಂದ ಗೃಹಸ್ಥನು ಸ್ವಗೃಹ್ಯೋಕ್ತ ದೇವತೆಗಳನ್ನು ಉಪಾಸಿಸಬೇಕಾಗಿರುವುದು ಆದರೆ ನಿರೀಶ್ವರನಾದ ಜೈಮಿನಿಗೂ ಈ ಗಾರ್ಹಸ್ಥ್ಯ ಧರ್ಮಗಳು ಕರ್ತವ್ಯವಾಗಿವೆ. ಹಾಗಲ್ಲದೆ ಒಬ್ಬನೆ ಈಶ್ವರನಿಗೆ ಶರಣಾಗತನಿರುವುದೆಂಬ ಭಕ್ತಿ ತತ್ವವು ಅನೇಕ ದೇವಾರ್ಚನದಲ್ಲಿ ಬರಲಾರದು. ಅಥವಾ **एकं सद्विप्रा बहुधा वदंति** ಎಂಬಂತೆ ಹಲವು ದೇವತೆಗಳಾದರು ಒಬ್ಬ ಈಶ್ವರನ ವ್ಯಕ್ತರೂಪಗಳಾಗಿವೆ. ಹೀಗಾದರು ದೇವತಾರ್ಚನವು ಗೃಹಸ್ಥಧರ್ಮಕ್ಕೆ ಅಂಗವಾಗಿದೆ. ಭಕ್ತಿ ಪ್ರಧಾನವಾದ ಮಾರ್ಗವಲ್ಲ. ಮತ್ತು ಈಶ್ವರನಲ್ಲಿ ತಾನು ಸೇರಿ ತನ್ನಲ್ಲಿ ಈಶ್ವರನು ಸೇರಿದ ಹೊಲಬನ್ನು ಇದರಿಂದ ತಿಳಿವುದು ಕಷ್ಟ.

ಭಗವದ್ಗೀತೆಯು ತತ್ವಗಳಾದರೊ ವೀರಶೈವ ತತ್ವಗಳೊಡನೆ ಏಕರೂಪವಾಗಿವೆ.

**कामैस्तैस्तैर्हृतज्ञानाः प्रपद्यंतेन्यदेवताः ।**

**तं तं नियममास्थाय प्रकृत्या नियताः स्वया ॥**

ಅ. ೭–೨೦

ಹಲವು ತೆರನಾದ ಬಯಕೆಗಳಿಂದ ತಿಳಿಗೇಡಿಗಳಾದವರೆ ಈಶ್ವರನನ್ನುಳಿದು ಅನ್ಯ ದೇವತೆಗಳನ್ನು ಭಜಿಸುವರು.

**अंतवत्तु फलं तेषां तद्भवत्यल्पमेधसां ।**

**देवान् देवयजो यांति मद्भक्ता यांतिमामपि ॥**

ಅ. ೭–೨೩

ಆದರೆ ಆ ತಿಳಿಗೇಡಿಗಳಿಗೆ ಶಾಶ್ವತ ಫಲವು ದೊರೆಯದು. ದೇವತೆಗಳನ್ನು ಭಜಿಸುವರು ದೇವತೆಗಳಲ್ಲಿ ಸಾರ್ವರು. ನನ್ನಲ್ಲಿ ಭಕ್ತರಾದವರು ನನ್ನನ್ನು ಹೊಂದುವರು. ಎಂದು ಮುಂತಾಗಿ ಒಬ್ಬ ಪರಮೇಶ್ವರ ಭಕ್ತಿಯು ಮುಖ್ಯವಾಗಿ ಹೇಳಲ್ಪಡುತ್ತದೆ.

ಅದರಂತೆಯೆ ಗೃಹಸ್ಥನು ಮಾಡುವ ಸರ್ವಯಜ್ಞಾದಿ ಕರ್ಮಗಳು ಈಶ್ವರಪ್ರಾಪ್ತಗಾಗಿಯೆ ಎಂದು ಶ್ರೀಕೃಷ್ಣನು ಹೇಳಿದುದು ಪ್ರಸಾದಿಸ್ಥಳದ ಮರ್ಮವೆ.

**ब्रह्मार्पणं ब्रह्महविर्ब्रह्माग्नौब्रह्मणा हुतं ।**

**ब्रह्मैव तेन गंतव्यं ब्रह्मकर्मसमाधिना ॥**

ಎಂಬ ತತ್ವವು ಯಜ್ಞವೂ ಯಜಮಾನನೂ ಯಜ್ಞಕರಣಗಳೂ ಯಜ್ಞಹವಿಸ್ಸೂ ಯಜ್ಞಫಲವೂ ಬ್ರಹ್ಮವೆ ಆಗಿದೆ. ಎಂಬುದು ಪ್ರಸಾದಿಯಕಾರಣಗಳಲ್ಲೆಲ್ಲ ಲಿಂಗವೆ ತುಂಬಿದೆ. ಪ್ರಸಾದಿಯ ಕ್ರಿಯೆಗಳೆಲ್ಲ ಲಿಂಗಕ್ರಿಯೆಗಳೆ ಎಂಬ ತತ್ವಕ್ಕೆ ಬೇರಿಲ್ಲ.

**यज्ञशिष्टाशिनः संतोमुच्यंते सर्वकिल्बिषैः ।**

**भुंजते तेत्वघं पापा ये पचंत्यात्मकारणात् ॥**

ಭ. ೪–೧೩ ಯಜ್ಞಶೇಷವನ್ನು ಉಣ್ಣುವನು ಎಲ್ಲ ಪಾಪಗಳಿಂದ ಬಿಡುಗಡೆಯನ್ನು ಹೊಂದುವರು. ಆರು ತಮಗಾಗಿ ಕುದಿಸುವರೊ ಅವರು ಉಣ್ಣುವುದು ಪಾಪವು. ಎಂಬಿದು **शिवार्पित विना भुक्ते सद्यो हि किल्बिषम् ॥** (ಬಸವರಾಜೀಯ ಪ್ರಸಾದಸ್ಥಲ ಪುಟ ೩೭ರಲ್ಲಿ ಉದಾಹರಿಸಿದ ಆಗಮ) ಶಿವಾರ್ಪಣವಿಲ್ಲದೆ ಉಣ್ಬನು ಪಾಪವನ್ನು ಉಣ್ಬನು ಎಂಬುದಕ್ಕೆ ಬೇರಿಲ್ಲ.

## ಪ್ರಾಣಲಿಂಗಿಸ್ಥಳವೂ ಗಾರ್ಹಸ್ಥ್ಯವೂ

ಪ್ರಾಣಲಿಂಗಿಸ್ಥಳವು ಪ್ರಸಾದಿಸ್ಥಳದ ಅವಸಾನದಿಂದ ಒದಗಿದ ಶಿವಾನುಭವಸ್ವರೂಪವಾದುವೆಂದು ಹೇಳಿದೆನು. ಭಗವದ್ಗೀತೆಯಲ್ಲಿ ब्रह्मार्पणं ब्रह्म हविर्ब्रह्माग्नौ ब्रह्मणाहुतम् । ब्रह्मैव तेन गंतव्यं ब्रह्मकर्म समाधिना: ೪–೨೪ ಎಂದುಂಟು. ಬ್ರಹ್ಮವಿದನು ಆವಕಾರಣದಿಂದ ಹವಿಸ್ಸನ್ನರ್ಪಿಸುವನೊ ಆ ಕಾರಣವೂ ಆ ಹವಿಸ್ಸು ಆ ಅಗ್ನಿಯೂ ಆ ಕರ್ತನೂ ಬ್ರಹ್ಮವೆ ಮತ್ತು ಅಗತಕ್ಕ ಗತಿಯೂದರು ಬ್ರಹ್ಮವೆ ಎಂಬುದಿದರ ಅರ್ಥವು. ಅಂದರೆ ಸರ್ವಕರ್ಮಗಳನ್ನೂ ಬ್ರಹ್ಮನು ಸಂಧಾನದಿಂದ ಮಾಡಿದುದಾದರೆ ಬ್ರಹ್ಮಾನುಭವವು ಪ್ರಕಟವಾದಪುದು. ಇದೇ ಗುಟ್ಟು ಪ್ರಾಣಲಿಂಗಿಯ ಸ್ಥಳದಲ್ಲುಂಟು. सर्व मन्यत्परित्यज्य मामेकं शरणं व्रज ಎಂಬ ಗೀತೋಕ್ತಿಯು ವೀರಶೈವದ ಅನನ್ಯಶಿವಭಕ್ತಿ ಮಾರ್ಗವನ್ನು ಹೋಲುವುದು. ಆದರೆ ವೀರಶೈವವು ಗೀತಾಧರ್ಮಕ್ಕಿಂತ ಅಂತರಂಗಿಕವಾಗಿಹುದು.

---

## ಕುರುಡನ ದುಃಖ

ಭಾ ॥ ಷ ॥

ಎಂತು ನೋಡಲಿ ಜಗವನಾನಿ– ।
ನ್ನೆಂತು ತಿರುಗಲಿ ಧರೆಯು ಮೇಲಿ–।
ನ್ನೆಂತು ಸಹಿಸಲಿ ಬಧಿರ ಜೀವವ ಪೊತ್ತು ಕಾಣದಲೆ ! ॥
ಚಿಂತೆಯಿಂದಲಿ ಬಳಲಿಬೆಂದೆನು, ।
ಸಂತದರುಶನವಿಲ್ಲವೆನಗಿ– ।
ನ್ನೆಂತು ಹರಿಪದಕಮಲ ಕಾಂಬುಸು ? ಅಂಧತನದೊಳಗೆ ॥ ೧ ॥

ಕಾಣಲಿಲ್ಲವು ರವಿಯು ತೇಜವ; ।
ಕಾಣೆ ನಾನೀ ಧರೆಯು ಚೆಲುವನು; ।
ಕ್ಷೋಣಿಯೊಳು ಜನ, ವಿಹಗ, ಮೃಗಗಳ ರೂಪುಗಳನರಿಯೆ ॥
ಜಾಣ ಕವಿಗಳ, ಸಾಧುಸಂತರ–।
ಕಾಣೆ ಭಕ್ತರ ಪದಸರೋಜವ, ।
ಮಾಡಲಹುದೇನಿನ್ನು ಜಗದೊಳು ವ್ಯರ್ಥನಾದೆನುನಾ ॥ ೨॥

ಚಿಕ್ಕ ಮಗುವಿನ ಚೆಲುವ ನಗುವನು, ।
ಅಕ್ಕರಿಂದಲಿ ನುಡಿವ, ಕುಣಿಯುವ, ।
ಮಕ್ಕಳಾಟವ ನೋಡದಿರುತಿಹ ಪಾಪಿನಾನಾದೆ ॥
ಮಿಕ್ಕ ಮಾತುಗಳೇಕೆ, ಜಗದೊಳು ।
ಹೊಕ್ಕು ತಿರುಗಲು ತಿಳಿಯದಾದೆನು ।
ಬಿಕ್ಕಿ ಬೇಡುವ ನಯನವಿಲ್ಲದ ಜನುಮವೇತಕ್ಕೆ!! ॥ ೩

ಅಂಧನಾಗಲು ನೊಂದೆ ಮನದೊಳು ।
ತಂದೆ ಶ್ರೀಹರಿ ನಿನ್ನ ಚರಣವ ।
ಬಂದು ತೋರೆಲೊ ನೀಡಿ ಕಂಗಳ ನಿನ್ನ ದರುಶನಕೆ ॥
ಚಂದವಾಗಿಹ ನಿನ್ನ ದರುಶನ–।
ದಿಂದ ಹರುಷವನಾಂತು ನಲಿವೆನು, ।
ಮಂದಭಾಗ್ಯನು ನಾನು, ದೇವಾ। ಕರುಣಿಸೈ ದಯದೆ ॥೪॥

—ಕೊಡಗಿನ ಗೆಳೆಯ.

---

# ಅಚ್ಯುತರಾಯ

( ಕಥೆ )

ಲೇಖಕ:—ಬಿ. ಚಂದ್ರಶೇಖರಯ್ಯ

ದುಡ್ಡಿನ ವಿಷಯ ಬಂದಿತೆಂದರೆ ಅನೇಕ ವೇಳೆ ಸ್ನೇಹವು ಕಡಿಮೆಯಾಗುತ್ತದೆ. ರಕ್ತಸಂಬಂಧವೂ ಮರೆತು ಹೋಗುತ್ತದೆ.

ಅಚ್ಯುತರಾಯನಿಗೂ ಅವನ ಮಾವನವರಿಗೂ ಜಗಳವು ಹತ್ತಿತ್ತು. ಕುಶಲಪ್ರಶ್ನೆಯೇ ಮೊದಲಾದ ಮೊದಲನೆಯ ಅಂಕವು ಕಳೆಸು ಎರಡನೆಯದಾದ ದುಡ್ಡಿನ ವಿಚಾರವು ಪ್ರಾರಂಭಿಸಿದ್ದಿತು. ಅಳಿಯನು ಕಾಲೇಜಿನ ವಿದ್ಯಾರ್ಥಿ. ಆಗ ನವರಾತ್ರಿಯ ರಜ. ಅಚ್ಯುತರಾಯನು ಮಾವನ ಮನೆಗೆ ಹೋಗಿದ್ದನು.

“ ಈಗ ಮೂರು ತಿಂಗಳದಿಂದಲೂ ನೀವು ದುಡ್ಡನ್ನು ಕಳುಹಿಸಲೇ ಇಲ್ಲ. ನಾನು ೮–೧೦ ಕಾಗದಗಳನ್ನು ಬರದೆನಲ್ಲ, ಒಂದೂ ತಲಪಲಿಲ್ಲವೇನು ? ”

ಕೊನೆಯ ಮಾತಿನ ಧ್ವನಿಯು ವಿಚಿತ್ರವಾಗಿದ್ದಿತು. ಮಾವನವರು ಇಲ್ಲವೆಂದಿದ್ದರೆ, ಬ್ರಿಟಿಷ್ ಜನರು ಇಂಡಿಯದಲ್ಲಿ ಏರ್ಪಡಿಸಿದ್ದ ಟಪಾಲ ಇಲಾಖೆಯು ಸಮರ್ಪಕವಾಗಿ ಕೆಲಸಮಾಡುತ್ತಿದ್ದಿಲ್ಲವೆನ್ನುವಷ್ಟು ಯೋಚಿಸಲು ಅಳಿಯನು ಸಿದ್ಧವಾಗಿದ್ದನು.

“ ತಲುಪದೇ ಏನು ? ನಿನ್ನ ಕಾಗದವೆಲ್ಲಾ ಬಂದಿತು ”

“ ಮತ್ತೇಕೆ ದುಡ್ಡನ್ನು ಕಳುಹಿಸಲೇ ಇಲ್ಲ ? ನಾನು ಕಷ್ಟಕ್ಕೆ ಗುರಿಯಾದೇನೆಂಬುದು ನಿಮ್ಮ ಮನಸ್ಸಿಗೆ ಹೊಳೆಯಲೇ ಇಲ್ಲವೇನೋ. ಸೀತೆಗೆ ಈ ವಿಚಾರವಾಗಿ ಬರೆದೆ. ಅವಳು ನಿಮ್ಮ ಮಗಳು, ತನ್ನ ಜವಾಬಿನಲ್ಲಿ ನಿಮ್ಮ ಮಾತನ್ನೆ ಎತ್ತುತ್ತಿರಲಿಲ್ಲ. ನನಗೆ ಸಹಿಸಿ ಸಹಿಸಿ ಸಾಕಾಗಿದೆ. ಒಂದಾವೃತ್ತಿ ಬಾಯಿಂದ ಹೇಳಿ ಹೋಗೋಣವೆಂತ ಬಂದೆ. ಇದೇ ಕೊನೆಯಾವೃತ್ತಿ. ”

ಮಳೆಯಾಗುವುದಕ್ಕೆ ಮುಂಚೆ ಆಕಾಶದಲ್ಲಿ ಮೋಡಗಟ್ಟಿ ಸೆಕೆಯುಂಟಾಗುವಂತೆ ಮಾವನವರಿಗೆ ಕೋಪವು ಕಾಣಿಸಿಕೊಂಡು ಹಣೆಯು ಬಿಸಿಯಾಗುತ್ತಿದ್ದಿತು. ಅಳಿಯನ ಮಾತು ಯೋಗ್ಯವಾದುದಾಗಿರಲಿಲ್ಲ. ತನ್ನ ಹೆಂಡತಿಯನ್ನು ಸಾವಿರ ವಿಧವಾಗಿ ಬೈಯಲಿ, ಆದರೆ ಈ ಅಸಭ್ಯನು ಆ ಮೂಲಕ ನನ್ನನ್ನೂ ಬೈಯುತ್ತಿದ್ದಾನೆಂದು ಅವರಿಗೆ ತೋರಿತು. ಅವರು ಸ್ವಲ್ಪ ಹೊತ್ತು ಯೋಚಿಸಿದರು. ಮಿಂಚು ಹೊಳೆದ ಹಾಗೆ ಒಂದಾವೃತ್ತಿ ಅವರ ದೃಷ್ಟಿಯು ಅಳಿಯನ ಕಡೆಗೆ ತಿರುಗಿತು. ಅವನ ಅಸಭ್ಯತೆಯು ಹುಡುಗತನದ ದುರುಳು ಮಾತ್ರವೆಂದುಕೊಂಡು ಸಮಾಧಾನಮಾಡಿಕೊಳ್ಳುತ್ತ ಒಳ್ಳೆಯ ಮಾತಿನಿಂದ ಹೀಗೆಂದರು:

“ ಅಚ್ಯುತರಾಯ, ಕೋಪಮಾಡಬೇಡ. ನಿನಗೆ ಸ್ಕಾಲರ್‌ಷಿಪ್ಪಿನ ಹಣ ಐನೂರು ರೂಪಾಯಿ ಎರಡು ವರ್ಷದ್ದೂ ಒಟ್ಟಿಗೆ ಬಂದಿತಲ್ಲ ಎಂದು ಸುಮ್ಮನಾದೆ. ಅದು ಬಂದ ಮೇಲೆ ಇನ್ನು ನನ್ನ ಸಹಾಯವು ಅನಾವಶ್ಯಕ. ಇನ್ನೂ ಒಂದು ವರ್ಷ ಓದಿದರೆ ಆಯಿತು. ಬಿ. ಎ. ಪ್ಯಾಸ್ ಮಾಡುತ್ತೀಯೆ, ಆಮೇಲೆ ನಿನ್ನ ಜೀವನ ನೀನು ಎಲ್ಲಾದರೂ ಸಂಪಾದಿಸಿಕೊಳ್ಳುತ್ತೀ. ಬುದ್ಧಿವಂತರಿಗೇನು ಎಲ್ಲಿ ಹೋದರೂ ಅವರ ದಾರಿ ಅವರು ಏರ್ಪಡಿಸಿಕೊಳ್ಳುತ್ತಾರೆ. ”

“ಅದೆಲ್ಲಾ ಇರಲಿ; ನಿಮ್ಮ ಹೊಗಳಿಕೆಯು ಬೇಕಿಲ್ಲ. ಸಧ್ಯ ನಿಮ್ಮನ್ನು ದುಡ್ಡಿಗೆ ಗೋಗರಿಯುತ್ತಿರುವ ಹಾಗೆ ಬುದ್ಧಿಗೂ ಗೋಗರಿಯುವಹಾಗೆ ಆಗಲಿಲ್ಲನಲ್ಲ. ಅದೇ ಒಂದು ದೊಡ್ಡ ಸಂತೋಷ. ಆದರೆ ಪ್ರಕೃತ, ನಿಮ್ಮಿಂದ ಏನು ಸಹಾಯವಾದ ಹಾಗಾಯಿತು? ”

“ ಏನಯ್ಯಾ, ಹಾಗಾದರೆ ಇದುವರೆಗೆ ಏನೂ ಸಹಾಯ ಮಾಡಲಿಲ್ಲವೆ? ”

“ ಮಾಡಿದಿರಿ. ಇಲ್ಲವೆನ್ನುವಂಥ ಭಂಡನಲ್ಲ. ಆದರೆ ಈಗೇಕೆ ಆ ಸಹಾಯವನ್ನು ತಪ್ಪಿಸಿದಿರಿ? ”

ಅಳಿಯ ಹಾಡಿದ್ದೇ ಹಾಡುತ್ತಾನೆಂದು ಮಾವನವರು ಬೇಜಾರುಪಟ್ಟುಕೊಂಡರೂ ಬಾಹ್ಯವಾಗಿ, “ ನಿನಗೆ ಸ್ಕಾಲರ್‌ಷಿಪ್ ಬಂದದ್ದರಿಂದ, ” ಎಂದರು.

“ಪುನಃ ಅದೇಮಾತು ಆಡುತ್ತೀರಲ್ಲ!” ಅಳಿಯನಿಗೆ ರೇಗಿತು.

ಮಾವನವರು ಜಂಭ ಮಾಡಿದರೆ ಅವರೊಡನೆ ಜಗಳವಾಡಿಬಿಡೋಣವೆಂದೇ ರಾಯನು ನಿಶ್ಚಯಮಾಡಿಕೊಂಡು ಬಂದಿ

ದ್ದನು. ತಾನು ಯಾರಿಗೂ ಹೆದರಬೇಕಾಗಿರಲಿಲ್ಲ—ಅದೆಲ್ಲಾ ಗೊಡ್ಡು ಬೆದರಿಕೆ. ಅದರೊಳಗೂ ಹೆಣ್ಣು ಹೆತ್ತ ಮಾವನಿಗೆ ! ನಾಚಿಕೆಗೇಡು ! ಯಾರ ಬಣ್ಣಾಬಣ್ಣಿಗೆಗೂ ಮೋಸಹೋಗುವವನಲ್ಲ—ಅದೆಲ್ಲಾ ಹಳ್ಳಿಯ ಗೌಡರಿಗೆ ಹೇಳುವಮಾತು. ಸ್ಕಾಲರ್‌ಷಿಪ್ಪಿನ ವಿಚಾರವನ್ನೆತ್ತಿ ಮಾತನಾಡಲಾಗಿ ಅವನಿಗೆ ಮೈ ಹುಣ್ಣನ್ನು ಮುಟ್ಟಿದಂತಾಯಿತು.

ಮಾವನವರಿಗೆ ಅಳಿಯನ ಧ್ವನಿಯಲ್ಲಿ ಅಷ್ಟುಮಟ್ಟಿನ ಉದಾತ್ತವು ಅಪ್ರಕೃತವಾಗಿ ತೋರಿತು. ಅವನನ್ನು ಸಮಾಧಾನಪಡಿಸುವ ಆಶಯದಿಂದಲೂ ಅಳಿಯನ ಕಟುವಚನದಿಂದುಂಟಾದ ನೋವಿನಿಂದಲೂ ಹೀಗೆ ಹೇಳಿದರು. "ಅಯ್ಯಾ, ನನಗೆ ಬರುವುದು ಐವತ್ತು ರೂಪಾಯಿ. ಅದರಲ್ಲಿ ಸಂಸಾರ ನಿರ್ವಹಿಸಬೇಕು. ಬ್ಯಾಂಕಿಗೆ ಕಂತು ಕಟ್ಟಬೇಕು. ಮಗಳ ಮದುವೆಗೆ ಸಾಮಾನನ್ನೂ ಒದಗಿಸಬೇಕು. ನನ್ನ ಕಷ್ಟ ದೇವರಿಗೇ ಗೊತ್ತು."

"ಹಾಗಾದರೆ ನನಗೆ ಇಪ್ಪತ್ತುರೂಪಾಯಿ ಕಳುಹಿಸುತ್ತಿದ್ದದ್ದು ಹೇಗೆ?"

ಅದನ್ನೆಲ್ಲಾ ಅವನಿಗೇಕೆ ಹೇಳಬೇಕೆಂದು ಸಂಸಾರದಲ್ಲಿ ಸುಖವೆಂಬುದನ್ನು ಅರಿಯದಿರುವವರಿಗೆ ಇರುವ ಧಿಕ್ಕಾರ ಬುದ್ಧಿಯು ಮಾವನವರ ಮನಸ್ಸಿನಲ್ಲಿ ಕ್ಷಣಕಾಲ ಉಂಟಾದರೂ ಅವರು ಕಷ್ಟ ಜೀವನದಿಂದ ಉದ್ಭವಿಸುವ ತಾಳ್ಮೆಯನ್ನು ಹೊಂದಿ, "ಅದರ ವಿವರ ಹೇಳುತ್ತೇನೆ ಕೇಳು. ಮೂರು ಖಂಡುಗ ಭತ್ತಮಾರಿ ನಲವತ್ತೈದು ರೂಪಾಯನ್ನೂ ಜೊತೆಗೆ ಐದುರೂಪಾಯನ್ನೂ ಸೇರಿಸಿ ಐವತ್ತುರೂಪಾಯಿ ಮಾಡಿ ನಿನಗೆ ಕಳುಹಿಸಿದೆ. ಮೂರನೆಯ ತಿಂಗಳಲ್ಲಿ ಮತ್ತೆ ಭತ್ತಮಾರಬೇಕೆಂದಿದ್ದೆ. ಆಮೇಲೆ ಕೊಳ್ಳುವ ಅಕ್ಕಿಯೇ ಗತಿಯಾಗುತ್ತಿತ್ತು. ಅದು ಹೊರತಾಗಿ ಬೇರೆ ನಿರ್ವಾಹವಿರಲಿಲ್ಲ. ದೇವರ ದಯದಿಂದ ಆ ಸಮಯಕ್ಕೆ ಸರಿಯಾಗಿ ಸ್ಕಾಲರ್‌ಷಿಪ್ ಬಂದಿತೆಂದು ನಿನ್ನಿಂದ ಕಾಗದ ಬಂತು. ಪರಮಾತ್ಮನ ಕೃಪೆಯೆಂದುಕೊಂಡೆ." ಎಂದರು.

ಸ್ಕಾಲರ್‌ಷಿಪ್,! ಸ್ಕಾಲರ್‌ಷಿಪ್! ಸ್ಕಾಲರ್‌ಷಿಪ್ ! ಮಾವನವರಿಗೆ ಅದರ ಹುಚ್ಚು ಹಿಡಿಯಿತೆಂದು ಅಚ್ಯುತರಾಯನಿಗೆ ತೋರಿತು. ಅವರು ಎಂಥ ಅಸೂಯೆಗಾರರೆಂದುಕೊಂಡನು. ಅದರ ವಿಷಯವಾಗಿ ಕಾಗದ ಬರೆದುದು ಹೆಡ್ಡತನವಾಯಿತು. ಹೆಂಡತಿಯಲ್ಲಿ ತನಗೆ ವಿಶೇಷ ಪ್ರೇಮವಿರಬಹುದು. ಆದರೆ ಆ ಪ್ರೇಮಕ್ಕೆ ಮಿತಿಯುಂಟೆಂಬುದನ್ನು ತಾನು ಅರಿಯಬೇಕಾಗಿದ್ದಿತೆಂದುಕೊಂಡನು. ಹೆಂಗಸರ ಬಾಯಲ್ಲಿ ಗುಟ್ಟು ನಿಲ್ಲಲಾರದೆಂಬುದು ಏಕೆ ಮರೆತು ಹೋಯಿತು? ಆದರೂ ಕೊನೆಯಲ್ಲಿ, ಸೀತೆಯೇಕೆ ಅದನ್ನು ಮಾವನವರಿಗೆ ಹೇಳಿದಳೆಂದು ಅವಳ ಮೇಲೆ ಅಸಮಾಧಾನವೂ ಅವಿವೇಕವೂ ಉಂಟಾದುವು.

"ಸ್ಕಾಲರ್‌ಷಿಪ್, ಬಂದರೇನು ? ಅದನ್ನು ಸೇವಿಂಗ್ಸ್ ಬ್ಯಾಂಕಿನಲ್ಲಿಡುತ್ತೇನೆ. ಒಂದು ಗಂಟಾಗಿರುತ್ತದೆ. ಅದನ್ನು ಎಂದಿಗೂ ಬಳಸುವುದಿಲ್ಲ. ನೀವು ನಾನೂ ನಿಮ್ಮವನೆಂದು ಭಾವಿಸಿ ರೂಪಾಯನ್ನು ಕಳುಹಿಸಬೇಕಾಗಿತ್ತು. ನಿಮ್ಮ ಮಗನಾಗಿದ್ದರೆ ಆಗ ಕಳುಹಿಸುತ್ತಿರಲಿಲ್ಲವೆ?"

ಮಗನಾಗಿದ್ದರೆ ಹೀಗೆಲ್ಲಾ ಮಾತನಾಡಿ ವ್ಯಥೆಪಡಿಸುತ್ತಿರಲಿಲ್ಲವೆಂದೆಂದುಕೊಂಡು ಮಾವನವರು "ಹೌದಪ್ಪಾ, ಹೌದು, ಈಗಲೂ ನೀನು ಮಗನೇ. ನನಗೆ ನೀನಲ್ಲದೆ ಬೇರೆ ಗಂಡುಮಕ್ಕಳಿಲ್ಲವೆಂತಲೇ ಭಾವನೆ ನನಗೆ. ಆದ್ದರಿಂದಲೇ ನಿನಗೆ ಈ ಮೂರು ತಿಂಗಳು ದುಡ್ಡನ್ನು ಕಳುಹಿಸಲಿಲ್ಲ. ನನ್ನ ಕಷ್ಟವನ್ನು ನಿನ್ನ ಕಷ್ಟವೆಂದು ಭಾವಿಸಿ ಮರುಗುತ್ತೀಯೆಂತಲೇ ನಿರೀಕ್ಷಿಸಿದೆನು. ನಾನು ಹಾಗೆ ಅನುಕೂಲದ ಸ್ಥಿತಿಯಲ್ಲಿದ್ದರೆ ಸ್ಕಾಲರ್‌ಷಿಪ್ಪನ್ನು ಖರ್ಚುಮಾಡಬೇಡವೆಂದು ನಾನೇ ಹೇಳುತ್ತಿದ್ದೆ."

ಮಾವನವರು ಸ್ವಲ್ಪ ಸಿಟ್ಟಿನಿಂದ ಮಾತನಾಡಿದರು. ಅಳಿಯನ ಮೊಂಡತನವೂ ಇತರರ ಕಷ್ಟಕ್ಕಾಗಿ ಮರುಗದಿದ್ದುದೂ ಯುಕ್ತವಾಗಿರಲಿಲ್ಲ. ಪರಸ್ಪರ ಪ್ರೀತಿಯನ್ನಾಗಲಿ ಸೌಹಾರ್ದವನ್ನಾಗಲಿ ಹೆಚ್ಚಿಸುವಂಥದಲ್ಲ.

ಅಳಿಯನ ಸಾಹಸವೇ ಸಾಹಸ. "ನೀವು ನನ್ನದೊಂದು ಮಾತಿಗೆ ನಿಮ್ಮದೊಂದು ಮಾತನ್ನು ಜೋಡಿಸುತ್ತೀರಾ ಹೊರತು ಇನ್ನೇನೂ ಇಲ್ಲ. ಇದರಿಂದ ಯಾವ ಪ್ರಯೋಜನವೂ ಆಗಲಾರದು. ನಾನು ಖಂಡಿತವಾಗಿ ಹೇಳಿಬಿಡುತ್ತೇನೆ—ಆ ಹಣದಲ್ಲಿ ಒಂದು ಕಾಸನ್ನೂ ಖರ್ಚುಮಾಡುವುದಿಲ್ಲ. ನೀವು ನನಗೆ ಪ್ರತಿತಿಂಗಳೂ ನಿಮ್ಮ ಹಿಂದಿನ ವಾಗ್ದಾನದಂತೆ ಇಪ್ಪತ್ತು ರೂಪಾಯಿಗಳನ್ನು ಕಳುಹಿಸಿ ಕೊಡಬೇಕು. ಇಲ್ಲದಿದ್ದರೆ ತೊಂದರೆಗೆ ಕಾರಣವಾಗುತ್ತದೆ" ಎಂದನು.

ಮಾವನವರು ಅದು ಮುಂದೆ ತಮ್ಮಿಂದ ಸಾಧ್ಯವಿಲ್ಲವೆಂದರು. ಅಳಿಯನು ಸಾಧ್ಯವಾಗಲೇ ಬೇಕೆಂದನು. ಮಾವನವರು ನಿಶ್ಚಿತ ಮನಸ್ಸಿನಿಂದ ಮತ್ತೆ ಸಾಧ್ಯವಿಲ್ಲವೆಂದರು.

"ಹಾಗಾದರೆ ನೀವು ಮಾತುಕೊಟ್ಟು ತಪ್ಪುವಿರಷ್ಟೆ?"

"ನಾನು ಮಾತು ಕೊಟ್ಟರೂ ಕೂಡ, ನೀನು ಸ್ವತಃ ಉಪಪನ್ನನಾದ ಮೇಲೆ ನನ್ನ ಸಹಾಯವು ಅಪ್ರಸ್ತುತ. ಆ ಮಾತನ್ನು ನ್ಯಾಯವಾಗಿ ನೀನು ಹೇಳಬೇಕು."

"ಆಡಿದ ಮಾತಿಗೆ ತಪ್ಪಿದಿರಿ. ಹಾಗೆ ತಪ್ಪಿದಮೇಲೆ ಬದುಕಿ-" ಮಾವನವರಿಗೆ ರೇಗಿತು. "ಏನಯ್ಯಾ, ಯಾವುದನ್ನೂ ಕಾಣದೆ ಮಾತನಾಡುತ್ತೀಯೆ! ವಾಗ್ದಾನಮಾಡುವುದಕ್ಕೆ ನಾನೇನು ವ್ಯಾಪಾರ ಮಾಡುತ್ತಿದ್ದೇನೆಯೆ? ನಿನಗೆ ನನ್ನ ಮಗಳಿಗಿಂತಲೂ ನನ್ನ ದುಡ್ಡೇ ಮುಖ್ಯವಾಗಿ ತೋರುತ್ತದೆ. ನಾಚಿಕೆ ಬೇಡವೆ!" ಎನ್ನುತ್ತ ಅವರು ಅದೇ ಧ್ವನಿಯಲ್ಲಿ ಇನ್ನೂ ಮಾತೆತ್ತಿದರು.

ಅಚ್ಯುತರಾಯನು ಅವರನ್ನು ಅರ್ಧದಲ್ಲಿ ತಡೆದು, ಅವರ ಮಾತು ಕೆಲಸಕ್ಕೆ ಬಾರದ ಕಗ್ಗವೆಂದು ಗೌಣವಿಸಿ, "ಹಣ ಕಳುಹಿಸುತ್ತೀರೋ ಇಲ್ಲವೋ ಅಷ್ಟು ಹೇಳಿ; ಸುಮ್ಮನೆ ಮಾತೇಕೆ!" ಎಂದನು.

"ಖಂಡಿತವಾಗಿ— ನಮ್ಮಪ್ಪನಾಣೆಗೂ ಇಲ್ಲ. ಬೇಕಾದ್ದು ಮಾಡಿಕೊ, ಹೋಗಯ್ಯ. ಹತ್ತಿರ ದುಡ್ಡಿಟ್ಟುಕೊಂಡೂ ಇನ್ನೊಬ್ಬರನ್ನೂ ತಿರುಪೆ ಬೇಡುವುದೆಂಥ ಭಂಡತನ!"

"ಹಾಗಾದರೆ ನೀವು ಮಾವನೂ ಅಲ್ಲ, ನಾನು ಅಳಿಯನೂ ಅಲ್ಲ!"

ಮಾವನವರು ಮೊದಲೇ ಕೋಪದ ಮನುಷ್ಯರು. ಈಗ ಅವರ ಕೋಪವು ಲಗಾಮು ಕಿತ್ತ ಕುದುರೆಯ ಹಾಗಾಯಿತು. ಅದನ್ನು ಹಿಡಿಯುವವರು ಯಾರು? "ಅಲ್ಲದೇ ಇದ್ದರೆ ಬೇಡ; ಹೋಗು......ಹೊಟ್ಟೆಗಿಲ್ಲದೆ ಅನಾಥಾಲಯದಲ್ಲಿ ಸೇರಿಕೊಂಡಿದ್ದವೆಲ್ಲಾ ಮದುವೆಯಾಯಿತೆಂದರೆ ಎಲ್ಲೂ ಹಿಡಿಯದ ಹಾಗೆ ಮೆರೆಯುತ್ತವೆ! ಅವಕ್ಕೆಲ್ಲಾ ಹೆಣ್ಣುಕೊಟ್ಟ ಮಾವನೆಂದರೆ ಕಾಲಕೆಳಗಿನ ಕಸವೆಂತಲೇನೋ!" ಎಂದರು.

"ಆಡಿದ ಮಾತಿಗೆ ಕದಿಯುವುದಲ್ಲದೆ ಮನೆಗೆ ಬಂದರೆ ಅವಮಾನವನ್ನೂ ಮಾಡಿ ಕಳುಹಿಸುತ್ತೀರಲ್ಲ!" ಎನ್ನುತ್ತ ಅಳಿಯನು ಗಂಟು ಕಟ್ಟಿದನು. "ನಮಗೂ ನಿಮಗೂ ಒಂದು ಹೊತ್ತಿನ ಅನ್ನದ ಋಣವಿತ್ತು. ತೀರಿತು. ಇನ್ನು ನನಗೂ ನಿಮಗೂ ಯಾವ ಸಂಬಂಧವೂ ಇಲ್ಲ" ಎಂದು ಮಾವನವರೊಬ್ಬರಲ್ಲದೆ ಮನೆಯವರೆಲ್ಲರ ಪ್ರಯೋಜನಾರ್ಥವಾಗಿ ಕೂಗಿ ಹೇಳುತ್ತ ಅಚ್ಯುತರಾಯನು ಆಕ್ಷಣವೇ ಮಾವನ ಮನೆಯಿಂದ ಹೊರಟು ಹೋದನು.

ಮಾವನವರು ಒಂದೈದು ನಿಮಿಷ ಕೊಠಡಿಯಲ್ಲೇ ನಿಂತರು. ಅವರ ಕೋಪವಿಳಿಯಿತು. ಅವರಿಗೆ ದುಃಖವು ಬಂದಿತು. ಹೆಣ್ಣು ಹೆತ್ತವರ ಜನ್ಮವು ದುರದೃಷ್ಟಮಯವಾದುದೆಂದುಕೊಂಡರು. ಒಂದೆರಡು ಬಟ್ಟು ಕಣ್ಣೀರು ಹರಿಯಿತು. ಅವರು ಅದನ್ನು ಒರಸಿ ತಮ್ಮ ಕೊರಗನ್ನು ಶಮನಮಾಡಿಕೊಂಡು ಸೀತೆಯಿದ್ದ ಬಳಿಗೆ ಹೋದರು.

ಕೊಠಡಿಯಲ್ಲಿ ನಡೆದ ಜಗಳವು ಸೀತೆಯ ಕಿವಿಗೆ ಬೀಳದಿರಲಿಲ್ಲ. ಅವಳಿಗೆ ತಲೆಬಗ್ಗಿಸುವ ಹಾಗಾಯಿತು. "ಸೀತೆ, ಇದು ನಮ್ಮ ಗ್ರಹಚಾರ. ಅಚ್ಯುತರಾಯನು ಕೋಪದಿಂದ ಅಬ್ಬರಿಸಿಕೊಂಡು ಹೊರಟು ಹೋದ. ಅವನಿಗೆ ಸ್ವಲ್ಪವೂ ಬುದ್ಧಿಯಿಲ್ಲ. ದುಡ್ಡಿನಾಸೆಮಾತ್ರ ವಿಪರೀತ. ಕಾಲೇಜಲ್ಲಿ ಓದಿದ ಮಾತ್ರಕ್ಕೆ ತಿಳುವಳಿಕೆ ಬಂದೀತೆ. ಮುಂದೆ ಏನು ಮಾಡುತ್ತಾನೋ ತಿಳಿಯದು. ನಮ್ಮ ಹಣೆಯಲ್ಲಿ ಬರೆದಿದ್ದಂತಾಗಲಿ... ಎಷ್ಟೆಷ್ಟೋ ಹೇಳಿದೆ...ದೇವರು ಕಾಪಾಡಬೇಕು...ಅವನು ಹೀಗೆಲ್ಲಾ ಆಡಿದರೆ ಮುಂದೆ ನಿನಗೆ ಬಹು ಕಷ್ಟ." ಎಂದು ಹೇಳಿ ಸ್ವಲ್ಪ ಹೊತ್ತು ಅನ್ಯಮನಸ್ಕರಾಗಿ ಯೋಚಿಸುತ್ತ ನಿಂತಿದ್ದು ಹೊರಟುಹೋದರು. ಹೋಗುತ್ತ ದಾರಿಯಲ್ಲಿ "ನಾನು ದುಡುಕಿ ಮಾತನಾಡಿ ಬಿಟ್ಟೆನೆ?" ಎಂಬ ಪ್ರಶ್ನೆಯು ಅವರ ಮನಸ್ಸಿನಲ್ಲಿ ಉದಯಿಸಿ, ಹಾಗೇ ಕಾಣುತ್ತದೆಂಬ ಅನುಮಾನವು ತೋರಿತು.

ಕಾಲೇಜಿನಲ್ಲಿ ಓದಬೇಕಾದರೆ, ಅಸಾಧಾರಣವಾದ ಬುದ್ಧಿಯಿರಬೇಕೆಂದು ನಿರ್ಧರಿಸಿಕೊಂಡು ಸೀತೆಗೆ ಗಂಡನಲ್ಲಿ ಅತ್ಯಂತ ಪ್ರೀತಿ, ಗೌರವ, ಉತ್ಸಾಹ. ತನ್ನ ಗಂಡನು ಇತರರ ಗಂಡಂದಿರಿಗಿಂತ ಅತಿಶಯಿತನೆಂದು ಅವಳಿಗೆ ಅತ್ಯಂತ ಅಭಿಮಾನ. ಈಗ ಅವನು ಅವಿವೇಕವನ್ನೂ ಮೊಂಡತನವನ್ನೂ ನೋಡಿ ಅವೆಲ್ಲಾ ಭಗ್ನವಾದಂತೆ ಅನುಭವವಾಯಿತು.

ಆ ದಿನ, ಆ ದಿನ ಪತಿಯು ಬಂದುದಕ್ಕಾಗಿ ಅವಳ ಸಂತೋಷವೆಷ್ಟು! ತನ್ನ ಸರ್ವಸೌಭಾಗ್ಯವೂ ಆದಿನ ಉದಯಿಸಿತೆಂದುಕೊಂಡಳು. ಆಗಮನದಿಂದ ಪತಿಯು ಅವಳನ್ನೂ ಆನಂದದ ಶಿಖರದಲ್ಲಿ ಕೂರಿಸಿದನು. ಈಗ ಅಲ್ಲಿಂದ ಅವನೇ ಕೆಳಕ್ಕೆ ತಳ್ಳಿಬಿಟ್ಟನು.

ತೀರ ನಿರಾಶೆ.

ಸೀತೆಯು ಅತ್ತಳು.

೨

ಹುರಿಯನ್ನು ಅತಿಯಾಗಿ ಎಳೆದು ಬಿಲ್ಲು ಮುರಿದು ಹೋದ ಮೇಲೆ ಅಲ್ಲಿಗೆ ಮುಗಿಯಿತು.

ಅಚ್ಯುತರಾಯನಿಗೆ ಮಾವನಮೇಲೆ ತಡೆಯಲಾಗದಷ್ಟು ಕೋಪಬಂದಿತು. ಅದರ ಮುಂದೆ ದೂರ್ವಾಸರ ಕೋಪವು ಅಲ್ಪವಿಷಯ. ಮಾವನವರು ಕೊನೆಯಲ್ಲಿ ಅವನ ಹಿಂದಿನ ಚರಿತ್ರೆಯನ್ನು ಜ್ಞಾಪಿಸಿಕೊಟ್ಟದ್ದನ್ನು ಸ್ಮರಿಸಿಕೊಂಡು ಅವನು ಉರಿದುರಿದು ಬಿದ್ದನು. ಅಲ್ಲದೆ, ತನ್ನ ಮಾತನ್ನು ತಾನೇ ಮೀರಿ ಸ್ಕಾಲರ್‌ಷಿಪ್ಪಿನ ಹಣವನ್ನು ಮುಂದೆ ಬಳಸಬೇಕಾಗು ತ್ತಿದ್ದಿತು. ಅವನಿಗೆ ಈ ಅಂಶವು ಮೊದಲೇ ಹೊಳೆಯಿತು. ಆದರೆ ಅವನ ಕೋಪವು ಧೈರ್ಯ ಹೇಳಿತು. ಆ ಹಣವನ್ನು ಬಳಸಲಾರಂಭಿಸಿದ ಮೇಲೆ ಮಾವನವರನ್ನು ಲಕ್ಷಿಸಬೇಕಾದು ದೇನು? ಇನ್ನೂ ಇತರ ಯೋಚನೆಗಳು ಬಂದುವು. ಅವಕ್ಕೂ ಅವನ ಕೋಪವು ಪರಿಹಾರಗಳನ್ನು ಸೂಚಿಸಿತು. ಅಚ್ಯುತ ರಾಯನು ಮನಸ್ಸನ್ನು ಗಟ್ಟಿಮಾಡಿದನು.

ಒಂದು ತಿಂಗಳ ಹೊತ್ತಿಗೆ ಆ ಕೋಪವು ಕಡಿಮೆಯಾಗಿ ಕಾಲಕ್ರಮದಲ್ಲಿ ಮರೆಯಾಯಿತು. ಮಾವನವರ ಮಾತಿನಲ್ಲಿ ಒಂದೆರಡು ನಿಜವಿದೆಯೆಂದುಕೊಂಡನು. ಆದರೆ ಅತ್ತೆಯ ಮೇಲಿನ ಕೋಪವನ್ನು ತೊತ್ತಿಯ ಮೇಲೆ ತೆಗೆದನು. ನೋಡ ಲಾಗಿ ತಪ್ಪೆಲ್ಲಾ ಸೀತೆಯದೇ ಎಂದೂ ಅವಳ ಅವಿವೇಕವೇ ಈ ಅನಾಹುತವನ್ನೂ ಆರಂಭಿಸಿತೆಂದೂ ತೋರಿತು. ಅವಳೇಕೆ ತನ್ನ ತಂದೆಯೊಡನೆ ಹೇಳಬೇಕಾಗಿತ್ತು? ತಪ್ಪು ಎರಡು ವಿಧ ವಾದುದು. ಮೊದಲನೆಯದಾಗಿ, ಗಂಡನು ಹೆಂಡತಿಗೆ ಕಾಗದ ವನ್ನು ಬರೆದರೆ ಅದರ ಸಂಗತಿಯನ್ನೆಲ್ಲಾ ಆ ಹುಡುಗಿ ತನ್ನ ಅಪ್ಪನ ಸಂಗಡಲೂ ಅಮ್ಮನ ಸಂಗಡಲೂ ಹೇಳಿಕೊಳ್ಳುವು ದೆಂದರೇನು? ಎಂತಹ ಆಭಾಸ! ಅಲ್ಲದೆ, ಗಂಡನ ಆದಾಯ ವನ್ನು ಆಲೋಚಿಸದ ಹೆಂಡತಿ ಎಂತಹ ಹೆಂಡತಿ! ಕೇವಲ ಅಯೋಗ್ಯತೆ. ಆದರೆ ಮುಖ್ಯವಾಗಿ ಅಚ್ಯುತರಾಯನು ಯಾರ ಮೇಲಾದರೂ ಕೋಪವನ್ನು ತೆಗೆಯಬೇಕಾಗಿದ್ದಿತು. ಅವನ (ಅಂದರೆ ಮನೆಯ ಅಳಿಯನ) ಕೋಪವು ಹಿಂದಿನಕಾಲದ ತಾಪಸರ ಶಾಪದಂತೆ ಎಂದಿಗೂ ವ್ಯರ್ಥವಾಗಕೂಡದು. "ವಿಷವೃಕ್ಷೋಽಪಿ ಸಂವರ್ಧ್ಯ ಸ್ವಯಂಛೇತ್ತುಮಸಾಂಪ್ರತಃ" ಈ ಪ್ರಸಂಗದಲ್ಲಿ ತನ್ನದೂ ತಪ್ಪಿರುವಂತೆ ತೋರಿತು. ಆದರೆ ಒಂದೆರಡು ವಿಧವಾಗಿ ಪರಿಶೀಲಿಸಲಾಗಿ ತಾನು ಮಾಡಿದುದು ಅಯುಕ್ತವಲ್ಲವೆಂದು ಸಿದ್ಧಾಂತವಾಯಿತು. ಸೀತೆಯ ಪಾಲಿ ನಲ್ಲಿ ಮಾತ್ರ ಹೇಗೆ ಹೇಗೆ ತಿರುಗಿಸಿ ನೋಡಿದರೂ ನ್ಯಾಯವು ಕಾಣಿಸಲಿಲ್ಲ.

ಮಾತು ಕಥೆಗಳೂ ಕಾಗದ ಪತ್ರಗಳೂ ನಿಂತುಹೋದವು. ಅಚ್ಯುತರಾಯನು ಮಾವನ ಮನೆಯವರನ್ನು ಅಪರಿಚಿತರಂತೆ ಭಾವಿಸಿದನು. ಗಂಡನಿಂದ ತನಗಾದರೂ ಕಾಗದ ಬರುವು ದೆಂದು ಕೆಲವು ಕಾಲದವರೆಗೆ ಸೀತೆ ನಿರೀಕ್ಷಿಸಿದಳು. ಆ ಮೇಲೆ ಗಂಡನ ಕಾಗದಕ್ಕೆ ಜವಾಬು ಬರೆಯುವುದು ಹೊರತು ನೀನಾ ಗಿಯೇ ಮೊದಲು ಕಾಗದ ಬರೆಯಬಾರದೆಂದು ತಂಗಿ ಗೌರಿಯು ಹೇಳಿದರೂ ಲಕ್ಷಿಸದೆ, ಅವಳು ಧೈರ್ಯಮಾಡಿ ಗಂಡನಿಗೆ ಕಾಗದ ಹಾಕಿದಳು. ಉತ್ತರವೇ ಬರಲಿಲ್ಲ. ಎರಡನೆಯದು ವ್ಯತ್ತಿ ಬರೆದಳು. ಅದರಲ್ಲಿ, ತಾನು ತಂದೆಗೆ ಸ್ಕಾಲರ್‌ಷಿಪ್ಪಿನ ವೃತ್ತಾಂತವನ್ನು ಹೇಳದೇ ಇದ್ದರೆ ಚೆನ್ನಾಗಿದ್ದಿತೆಂದೂ ತಪ್ಪು ತನ್ನದೆಂದೂ ಅವಳು ಕಾಣಿಸಿದ್ದಳು. ಆ ಮಾತು ಸಾವಿರ ಸಾರಿ ಹೇಳು ಎಂದುಕೊಂಡು ಅಚ್ಯುತರಾಯನು ಸುಮ್ಮನಾ ದನು. ಸೀತೆಯಿಂದ ಮೂರನೆಯ ಕಾಗದವು ಬಂದಿತು. ತನ್ನ ತಪ್ಪಿಗೆ ತನ್ನನ್ನು ಬೇಕಾದ ಹಾಗೆ ಶಿಕ್ಷಿಸಬಹುದೆಂದೂ ಇತರರ ಮೇಲೆ ಆಕ್ರೋಶಮಾಡಕೂಡದೆಂದೂ ಗಂಡನನ್ನು ಪ್ರಾರ್ಥಿ ಸಿದಳು. ತಪ್ಪು ನಿನ್ನದಾದ್ದರಿಂದಲೇ ಹೀಗೆ ಮಾಡುತ್ತಿರುವುದು ಎನ್ನುತ್ತ ಅದಕ್ಕೂ ರಾಯನು ಸುಮ್ಮನಾದನು.

ಮತ್ತೆ ಸೀತೆಯ ಕಾಗದವು ಬರಲಿಲ್ಲ. ಗಂಡನು ಕೋಪ ಗೊಂಡಿರುವಾಗ ತಾನೇಕೆ ಪತ್ರವ್ಯವಹಾರದಿಂದ ಅವನನ್ನು ಮತ್ತಷ್ಟು ಕೆಣಕಲೆಂದುಕೊಂಡು ಅವಳೂ ಸುಮ್ಮನಾದಳು. ಅದರಿಂದ ಅಚ್ಯುತರಾಯನ ಕೋಪವು ಹೆಚ್ಚದಿರಲಿಲ್ಲ.

೩.

ದೊಡ್ಡ ಜಾತ್ರೆಯಾದ್ದರಿಂದ ನಂಜನಗೂಡಿನಲ್ಲಿ ವಿಶೇಷ ಗದ್ದಲ; ಅತಿಶಯ ಜನಸ್ತೋಮ. ಕಿರಿದಾದ ಅಲ್ಲಿಯ ಬೀದಿ ಗಳಲ್ಲಿ ಜನಗಳು ಕಿಕ್ಕಿರಿದು ತುಂಬಿದ್ದರು. ಆವೂರು ಆಕಾಲ ದಲ್ಲಿ ಇರುವೆಯ ಗೂಡಿನ ಹಾಗಿದ್ದಿತು. ಆ ಸಮಯದಲ್ಲಿ ರಂಗಣ್ಣನವರು ಹೊಳೆಯಿಂದ ಸ್ನಾನಮಾಡಿಕೊಂಡು ಬಂಧು

ದೇವರ ದರ್ಶನಕ್ಕಾಗಿ ಗುಡಿಯ ಕಡೆ ಹೋಗುತ್ತಿದ್ದರು. ಜೊತೆಯಲ್ಲಿ ಹೆಂಡತಿಯೂ ಇಬ್ಬರು ಹೆಣ್ಣುಮಕ್ಕಳೂ ಇದ್ದರು. ಆ ವೇಳೆಗೆ ದೇವರ ದರ್ಶನವನ್ನು ಪೂರೈಸಿಕೊಂಡು ಗುಡಿಯ ಕಡೆಯಿಂದ ಹುಡುಗರ ಪಡೆಯೊಂದು ಬರುತ್ತಿದ್ದಿತು. ಅವರೆಲ್ಲರೂ ಪ್ರಾಪ್ತವಯಸ್ಕರು. ವಿದ್ಯಾವಂತರೆಂದು ವೇಷಭಾಷಣಗಳಿಂದ ಗೊತ್ತಾಗುತ್ತಿದ್ದಿತು.

ಅವರು ಸಮೀಪಿಸುತ್ತಿರಲಾಗಿ ಗೌರಿಯು ಇದ್ದಕ್ಕಿದ್ದ ಹಾಗೆ ಸೀತೆಯ ಸೆರಗನ್ನು ಹಿಡಿದೆಳೆದು, "ಅಕ್ಕಾ, ಅಲ್ಲಿ ನೋಡು, ಭಾವ ಬರುತ್ತಿದ್ದಾರೆ" ಎಂದು ಹೇಳಿದಳು. ಎಲ್ಲರೂ ಹುಡುಗರ ಕಡೆಗೆ ನೋಡಿದರು. ಅವರೊಳಗೆ ಅಚ್ಯುತರಾಯನೂ ಸೇರಿದ್ದನು. ಅವನ ದೃಷ್ಟಿಯೂ ಎದುರಿಗೆ ಬರುತ್ತಿದ್ದವರ ಮೇಲೆ ಬಿದ್ದಿತು. ಮೊದಲು ಅವನು ಸೀತೆಯನ್ನು ಗುರುತು ಹಿಡಿದು ಸ್ವಲ್ಪ ಬೆಚ್ಚಿದನು. ಆದರೆ ಕೂಡಲೇ ಎಚ್ಚತ್ತುಕೊಂಡು ಸ್ತ್ರೀಯರಗೋಷ್ಟಿಯೇ ತನಗೆ ಬೇಡವೆಂದು ಹೇಳುವವನಂತೆ ಎದುರಾಗಿ ಬರುತ್ತಿದ್ದವರ ಪಕ್ಕದ ಕೊನೆಯಲ್ಲಿ ನಡೆಯುತ್ತಿದ್ದವನು ಮತ್ತೊಂದು ಕೊನೆಗೆ ಹೋದನು. ಅವನು ಮಾಡಿದುದು ರಂಗಣ್ಣನವರಿಗಾಗಲೀ ಅವರ ಮನೆಯವರಿಗಾಗಲೀ ಅರ್ಥವಾಗದಿರಲಿಲ್ಲ. ಗೌರಿಗೆ ಪರಮಾಶ್ಚರ್ಯವಾಯಿತು. ಸೀತೆಯು ಎರಡಾವೃತ್ತಿ ಹಿಂದಿರುಗಿ ನೋಡಿದಳು. ಆದರೆ ಅಚ್ಯುತರಾಯನು ತನ್ನ ದಾರಿಹಿಡಿದು ಹೋಗುತ್ತಿದ್ದನು. ಅವಳ ಮನಸ್ಸಿನ ಸಂಕಟವನ್ನು ಹೇಳಿತೀರದು.

ಅವರೊಡನೆ ಮಾತನಾಡದಿದ್ದು ಅಪರಿಚಿತನಂತೆ ನಟಿಸಿದರೂ ಕೂಡ ಅಚ್ಯುತರಾಯನಿಗೆ ಅವರನ್ನು ಅಲ್ಲಿ ನೋಡಲಾಗಿ ಮನಸ್ಸು ಕಲಕಿ ಹೋಯಿತು. ಸೀತೆಯನ್ನು ನೋಡಲಾಗಿ ಅವನಿಗೆ ತನ್ನ ಪೂರ್ವವೃತ್ತಾಂತವು ನೆನಪಿಗೆ ಬಂದಿತು. ಆದರೆ ಅವನ ಚಿತ್ತವೃತ್ತಿಯು ವಿಚಿತ್ರವಾಯಿತು. ಒಂದು ಕಡೆ ಅವಳಲ್ಲಿ ಮರುಕ ಹೋಗಿ ಆ ಜನರೆಲ್ಲರನ್ನೂ ಮಾತನಾಡಿಸಿ ಪೂರ್ವದಂತೆ ಇದ್ದುಬಿಡೋಣವೆಂದು ಮನಸ್ಸು ಬಹಳ ಎಳೆಯಿತು. ಆದರೆ ಅಷ್ಟರಲ್ಲಿ ತನ್ನಲ್ಲಿ ತನಗೆ ಮರುಕವುಂಟಾಯಿತು. ಅವರ ದೆಸೆಯಿಂದ ಅವನು ಅವರಲ್ಲಿ ಬಹಳ ಬಿಸಿಯಾದನು. ಹಿಂದಿನ ಚಳವಳವನ್ನು ಸ್ಮರಿಸಿಕೊಂಡನು. ತಪ್ಪು ಮುಖ್ಯವಾಗಿ ಸೀತೆಯದೂ ಮಾವನವರದೂ ಎಂದು ತೀರ್ಮಾನಮಾಡಿದ್ದನಷ್ಟೆ. ಅವರಾಗಿ ಬಂದು ಕಾಲಿಗೆ ಬೀಳುವವರೆಗೆ ತಾನು ಅವರ ಸಂಬಂಧವನ್ನೂ ತ್ಯಾಗಮಾಡುವೆನೆಂದು ಹೇಳಿಕೊಂಡನು. ಹಾಗೆ ಕಾಲಿಗೆ ಬೀಳಬಹುದೆಂಬ ಭರವಸೆಯೂ ತೋರಿತು. ಅವನಿಗೆ ಸ್ನೇಹಿತರ ಸಲ್ಲಾಪದಲ್ಲಿ ಆಸಕ್ತಿ ತಪ್ಪಿತು. ಅವರು ಹೇಳಿದ ಒಂದು ಮಾತು ಮಾತ್ರ ಮುಖ್ಯವಾಗಿರುವಂತೆ ಭಾಸವಾಯಿತು. ಮಾವನ ಮನೆಯವರು ಹತ್ತಿರಲೇ ಹೋಗುತ್ತಿದ್ದಾಗ ಸ್ನೇಹಿತರು ಮುಂದೆಲ್ಲಿ ಹೋಗೋಣವೆಂದು ಪ್ರಶ್ನೆಮಾಡಿದರು. ಅವರೊಳಗೆ ಒಬ್ಬನು "ಇನ್ನೆಲ್ಲಿಗೆ—ಛತ್ರಕ್ಕೆ ಹೋಗೋಣ. ಊಟದ ಹೊತ್ತಾಯಿತು. ಹಸಿವಾಗುತ್ತಿದೆ" ಎಂದನು. ಅದು ಮಾವನವರಿಗೂ ಸೀತೆಗೂ ಕೇಳಿಸಿದ್ದಿತೆಂಬುದರಲ್ಲಿ, ಅಚ್ಯುತರಾಯನಿಗೆ ಸ್ವಲ್ಪವೂ ಸಂದೇಹವಿರಲಿಲ್ಲ. ಈಗ ಆ ಪ್ರಶ್ನೋತ್ತರಗಳ ಆಧಾರದಿಂದ ಒಂದು ಆಶೋತ್ತರವು ತಲೆದೋರಿತು. ಕೆಲವು ಕಾಲದ ಮೇಲೆ ಮಾವನವರು ಹುಡುಕಿಕೊಂಡು ಬರುವರೆಂದೂ ಒಂದಲ್ಲದಿದ್ದರೆ ಇನ್ನೊಂದು ಛತ್ರದಲ್ಲಿ ತನ್ನನ್ನು ಪತ್ತೆಮಾಡುವರೆಂದೂ ನಿರೀಕ್ಷಿಸಿದನು. ಮುಂದೆ ನಡೆಯಬಹುದಾದ ಸಲ್ಲಾಪಗಳನ್ನೆಲ್ಲಾ ಮನಸ್ಸಿನಲ್ಲಿಯೇ ತಿರುವಿಹಾಕಿದನು. ತಾನು ಸಡಿಲವಾಗಿ ಅವರಲ್ಲಿ ಕ್ಷಮೆಯನ್ನು ತೋರಿಸುವುದು ಯುಕ್ತವೇ ಅಥವಾ ಮೊದಲಿನಂತೆಯೇ ಬಿಗಿಯಾಗಿದ್ದು ನಾಟಕವು ಎಷ್ಟು ದೂರ ನಡೆಯುವುದೆಂಬುದನ್ನು ಪರೀಕ್ಷಿಸುವುದು ಯುಕ್ತವೇ ಎಂದು ಯೋಚಿಸಿದನು. ಉತ್ತರವು ಹೊಳೆಯಲಿಲ್ಲ. ಅವರು ಒಂದು ಮಾತನಾಡುವ ಸಮಯದಲ್ಲಿ ಅದು ಗೊತ್ತಾಗಬೇಕೆಂದೂ ಅವರ ಮಾತಿನ ಧ್ವನಿಯು ಉತ್ತರವನ್ನೂ ನಿರ್ಧರ ಮಾಡುವುದೆಂದೂ ಹೇಳಿಕೊಂಡು ಸುಮ್ಮನಾದನು. ಆದರೂ ಸೀತೆಯ ಮೇಲಿನ ಯೋಚನೆಯು ತಪ್ಪಲಿಲ್ಲ.

ಸೀತೆ ಎಷ್ಟೇ ಆಗಲಿ "ಹೆಣ್ಣು ಜೀವ" ಭ್ರಾಂತಿಯೇ ಸ್ವಲ್ಪ ಹೆಚ್ಚು. ತಾನು ಹಿಂದಿರುಗಿ ನೋಡಿದಾಗ ಗಂಡನು ತನ್ನಂತೆಯೇ ಹಿಂದಿರುಗಿ ನೋಡದಿದ್ದರೂ ಭರವಸೆಯು ಕುಗ್ಗಲಿಲ್ಲ. ತಾನು ನೋಡದಿದ್ದಾಗ ಆತನು ನೋಡಿರಬಹುದೆಂದುಕೊಂಡಳು. ಆದರೆ ಗಂಡನಾದವನು ಹೀಗೆ ಪ್ರವರ್ತಿಸಿದುದು ಅವಳಿಗೆ ವಿಸ್ಮಯವನ್ನುಂಟು ಮಾಡದಿರಲಿಲ್ಲ. ಸಂಕಟವುಂಟಾಯಿತು. ಸ್ನೇಹಿತರೆಲ್ಲಾ ಜೊತೆಯಲ್ಲಿದ್ದುದರಿಂದ ಸಂಕೋಚಪಟ್ಟು ತಮ್ಮವರೊಡನೆ ಮಾತನಾಡಲಿಲ್ಲವೆಂದೂ ಅವರನ್ನೆಲ್ಲಾ ಛತ್ರಕ್ಕೆ ಕಳುಹಿಸಿದ ಮೇಲೆ ದಡಬಡ ಓಡಿಬರುತ್ತಾನೆಂದೂ ನಂಬಿಕೆಹೇಳಿಕೊಂಡಳು. ಆದರೂ ಅನಿರ್ವಚನೀಯವಾದೊಂದು

ಕೊರಗು ತಪ್ಪಲಿಲ್ಲ. ದೇವಾಲಯಕ್ಕೆ ಹೋಗಿ ದೇವರ ಮುಂದೆ ನಿಂತು ಭಕ್ತಿರಸದಿಂದ ತುಂಬಿದ ಹೃದಯದಿಂದ ಪ್ರಾರ್ಥಿಸಿದಳು. ಗಂಡನಿಗೆ ಸದ್ಬುದ್ಧಿಯುಂಟಾದರೆ ತನಗೆ ಅದಕ್ಕಿಂತ ಹೆಚ್ಚಿನ ಐಶ್ವರ್ಯವು ಸರ್ವಥಾ ಬೇಕಿಲ್ಲವೆಂದು ಅರಿಕೆಮಾಡಿದಳು. ಅವಳ ಆ ಪ್ರಾರ್ಥನೆಯು ಆ ದೇವರಿಗೆ ತಲಪಿತೋ ಇಲ್ಲವೋ ತಿಳಿಯದು. ಸೀತೆಯು ಮಾತ್ರ ತಲಪದಿರಲಾರದೆಂದು ಧೈರ್ಯ ಹೇಳಿಕೊಂಡಳು.

ಅಚ್ಯುತರಾಯನು ಆಗಲೂ ಬರಲಿಲ್ಲ; ಆ ಮೇಲೂ ಬರಲಿಲ್ಲ. ಮಧ್ಯಾಹ್ನ ಊಟಉಪಚಾರಗಳಾದ ಮೇಲೂ ಬರಲಿಲ್ಲ. ಗಂಡನಿಗೆ ಮನೆಯು ಗೊತ್ತಿಲ್ಲವಾದ್ದರಿಂದ ಸ್ವಲ್ಪ ಸಹಾಯವಾಗಲೆಂದು ಆಶಿಸಿ ಅವಳು ಗೌರಿಯನ್ನೂ ಕರೆದುಕೊಂಡು ಮಾತನಾಡುತ್ತ ಬೀದಿಯ ಬಾಗಿಲ ಜಗುಲಿಯ ಮೇಲೂ ಒಳಬಾಗಿಲಲ್ಲೂ ನಿಂತು ನಿಂತು ನೋಡಿದಳು. ಬೀದಿಯಲ್ಲಿ ಜನವಿಲ್ಲದಿರಲಿಲ್ಲ. ಆದರೆ ಪತಿಯು ಮಾತ್ರ ಬರಲಿಲ್ಲ. ನಿರಾಶೆಹೊಂದಿ ಒಳಕ್ಕೆ ಹೋಗಿ ಅತ್ತಳು. ಗಂಡಹೆಂಡಿರ ಜಗಳದಲ್ಲಿ ಕೂಸು ಮೆತ್ತಗಾದಂತೆ ಮಾವ ಅಳಿಯಂದಿರ ಜಗಳದಲ್ಲಿ ತನಗೆ ದುಃಖವೇ ಫಲವೆಂದು ಹೇಳಿಕೊಂಡಳು. ಹಾಳು ದುಡ್ಡೆನ್ನಿಸಿತು. ಮದುವೆಯ ಕಾಲದಲ್ಲಿ ತನಗಿಟ್ಟ ಬಂದಿಯನ್ನೂ ಮಾರಿ ಗಂಡನು ಕೇಳುವ ಆ ದುಡ್ಡನ್ನು ಕೊಡಿಸಿಬಿಡೋಣವೇ ಎಂದು ಯೋಚಿಸಿದಳು. ಆದರೆ ಆ ಯೋಚನೆಯು ಸಾಗುವ ಹಾಗಿರಲಿಲ್ಲ. ಯಾವುದನ್ನೂ ಹೇಳುವುದಕ್ಕೂ ಯಾವುದನ್ನೂ ಮಾಡುವುದಕ್ಕೂ ಅವಳಿಗೆ ದಾರಿಯಿರಲಿಲ್ಲ. ತಂದೆಯ ಮನಸ್ಸನ್ನು ತಿರುಗಿಸುವಹಾಗಿರಲಿಲ್ಲ. ಅವರ ಮನಸ್ಸು ಕಲ್ಲು. ಅಳಿಯನು ತಾನಾಗಿಯೇ ಬಂದು ಕ್ಷಮೆಯನ್ನು ಬೇಡುವವರೆಗೂ ತಾನು ಅವನ ವಿಚಾರಕ್ಕೆ ಹೋಗುವುದಿಲ್ಲವೆಂದು ಅವರು ಪ್ರತಿಜ್ಞೆಮಾಡಿದ್ದರು. ಹೆತ್ತ ಮಗಳನ್ನು ಸಾಕುವುದು ತಂದೆಗೆ ಕಷ್ಟವಲ್ಲ.

ಅವರ ಈ ಸಂಕಲ್ಪವು ಅಚ್ಯುತರಾಯನಿಗೆ ಹೇಗೆ ಗೊತ್ತಾಗಬೇಕು ? ಅವನು ಮಾವನವರ ಆಗಮನವನ್ನು ಮಧ್ಯಾಹ್ನವೆಲ್ಲಾ ನಿರೀಕ್ಷಿಸಿದನು. ಸಂಜೆಯೆಲ್ಲಾ ನಿರೀಕ್ಷಿಸಿದನು. ಮಾವನವರ ಆಗಮನವೂ ಸೀತೆಯ ಮುಖವೂ ಕಣ್ಣಮುಂದೆ ಕಟ್ಟಿದಂತಾಗಿದ್ದುವು. ಹೆಂಡತಿಯ ದೈನ್ಯದ ದೃಷ್ಟಿಯು ಸಂಕೋಲೆಯಂತೆ ಅವನನ್ನೂ ಎಳೆಯುತ್ತಿದ್ದುವು. ಆದರೆ ಎಲ್ಲವನ್ನೂ ಮರೆತು ಅವರೆಲ್ಲರ ಬಳಿಗೆ ಹೋಗುವಹಾಗಿಲ್ಲ. ಮುಖಕ್ಕೆ ಚಿಂತೆಹತ್ತಿತು. ಅವನ ಚಿಂತಾಪರತೆಯನ್ನು ನೋಡಿ ಸ್ನೇಹಿತರು ಹಲವುಬಗೆಯಾಗಿ ಹಾಸ್ಯಮಾಡಿದರು. ಅಚ್ಯುತರಾಯನು ಅದೊಂದನ್ನೂ ಲೆಕ್ಕಕ್ಕೆ ತರಲಿಲ್ಲ. ಊರೊಳಗಿದ್ದಾಗ ತನ್ನನ್ನೂ ಹುಡುಕಿಕೊಂಡು ಯಾರೂ ಬರದಿರಲಾಗಿ ಸ್ಟೇಷನ್ನಿಗೆ ಖಂಡಿತಬಂದು ಕಾಯುವರೆಂದು ನಂಬಿದನು. ರೈಲು ಗಾಡಿಯನ್ನೂ ಹತ್ತಿಕುಳಿತಾಗಲೂ ಕೂಡ ಮಾವನವರು ಬರುವುದನ್ನು ನೋಡುತ್ತ ರಾಯನು ಒಂದು ಕಿಡಕಿಯನ್ನಾಶ್ರಯಿಸಿ ಕುಳಿತನು. ದೃಷ್ಟಿಯು ಸ್ಟೇಷನ್ ಗೇಟನ್ನೂ ಬಿಟ್ಟು ಅಲುಗಲಿಲ್ಲ. ರೈಲು ಹೊರಟಿತು. ಹತ್ತುಹೆಜ್ಜೆ ಮುಂದಾಯಿತು. ಆದರೂ ಯಾರೂ ಬರಲಿಲ್ಲ. ಮಾವನವರ ಪರವಾಗಿ ಒಂದು ಪಿಳ್ಳೆಯೂ ಅಲ್ಲಿಗೆ ಬಂದಿರಲಿಲ್ಲ. ರೈಲು ಹೊರಟು ಬಿಟ್ಟಿತೆಂದು ಕೊಳ್ಳುತ್ತ ಮಾವನವರು ಯಾವದಿಕ್ಕಿನಲ್ಲಿಯೂ ಸ್ಟೇಷನ್ನಿನಕಡೆಗೆ ಓಡಿ ಬರುತ್ತಿರಲಿಲ್ಲ.

ಅಚ್ಯುತರಾಯನಿಗೆ ಬರಿಯೆಳೆದಂತಾಯಿತು. ಅವನು ಮಂಕುಬಡಿದು ಕುಳಿತನು. ಜೊತೆಗಾರರು ಅರಿಯದೆ ಅವನನ್ನೂ ಕರೆದುಕೊಂಡು ಬಂದೆವೆಂದೂ ತಪ್ಪಾಯಿತೆಂದೂ ದೂರಿದರು. ಅವನು ಇವೆಲ್ಲಕ್ಕೂ ಮಾವನವರಿಂದ ದಂಡವನ್ನೂ ತೆಗೆಯುವೆನೆಂದು ಕೊಂಡನು. ಈ ಕಥೆಯನ್ನೂ ಸ್ಮರಿಸಿಕೊಂಡ ಹಾಗೆ ಅವರ ವಿಷಯದಲ್ಲಿ ಮನಸ್ಸು ನಿರ್ದಯವಾಯಿತು.

ಸೀತೆಯು ಮಧ್ಯಾನ್ಹ, ಸಂಜೆ, ರಾತ್ರಿಯೆಲ್ಲಾ ಗಂಡನನ್ನು ಕಾಯ್ದಳು. ಅವನಿಗೋಸ್ಕರ ಆ ದಿನದ ಪ್ರಯಾಣವನ್ನು ಮಾರನೆಯ ದಿನಕ್ಕೆ ಹಾಕಿಸಿದಳು. ಆ ರಾತ್ರಿ ನಿದ್ದೆಯೆಲ್ಲಾ ಕನಸಿನಿಂದ ತುಂಬಿತು. ಕನಸೆಲ್ಲಾ ಗಂಡನ ಕಥೆಯಿಂದಲೂ ಮೂರ್ತಿಯಿಂದಲೂ ತುಂಬಿತು. ಆದರೂ ಅಚ್ಯುತರಾಯನು ಬರಲೇ ಇಲ್ಲ. ಸೀತೆಗೋಸ್ಕರ ಆ ಊರಿನ ಬೀದಿಯನ್ನೂ ಸುತ್ತಲಿಲ್ಲ. ಅವನ ಅಂತರಾತ್ಮವು ಸೀತೆ ಸೀತೆಯೆಂದು ಜಪಿಸುತ್ತ ಸೀತೆಯ ಅಂತರಾತ್ಮಕ್ಕಾಗಿ ಹಂಬಲಿಸುತ್ತಿದ್ದಿತು. ಆದರೆ ಅವನ ಅಹಂಕಾರವು ಅವನನ್ನು ಚಲಿಸಗೊಡುತ್ತಿರಲಿಲ್ಲ.

ಗೌರಿಯು ಸ್ಕೂಲಿನಿಂದ ದಡಬಡನೆ ಓಡಿಬಂದಳು. ಬಂದವಳು ಯಾರಿಗೂ ತಿಳಿಯದ ಹಾಗೆ ಸೀತೆಯ ಬಳಿಗೆ ಹೋಗಿ ಅವಳ ಮುಖವನ್ನು ದುರದುರನೆ ನೋಡುತ್ತ ನಿಂತಳು. ಮಾತನಾಡಲು ತೋರಲಿಲ್ಲ. ಅಳುಬಂದು ಬಿಟ್ಟಿತು. ಸ್ವಲ್ಪ

ಕೊತ್ತಾದ ಮೇಲೆ ಅಳುವನ್ನು ಹಿಡಿತಕ್ಕೆ ತಂದುಕೊಂಡು ಕ್ಕನ ಪ್ರಶ್ನೆಗಳಿಗೆ ಉತ್ತರ ಹೇಳಲಾರಂಭಿಸಿದಳು.

"ಅಕ್ಕಾ, ಸ್ಕೂಲಿನಲ್ಲಿ ಆಚೆ ಬೀದಿ ರಂಗು ಸಿಕ್ಕಿದ್ದಳು. ನಿನ್ನ ದುರದೃಷ್ಟವನ್ನು ಏನು ಹೇಳಲಿ, ಅಕ್ಕಾ—"

"ನನ್ನ ದುರದೃಷ್ಟವೇನೆ? " ಎಂದು ಸೀತೆಯು ಗಾಬರಿ ಕೊಂಡು ಕೇಳಿದಳು. ಆ ಬಳಿಕ ಅಡಗಿದ ಧ್ವನಿಯಿಂದ "ಏನಾಯಿತೆ, ಗೌರು? " ಎಂದಳು.

"ರಂಗು ಹೇಳಿದಳು— ನಮ್ಮ ಭಾವಯ್ಯನಿಗೆ—ಅಯ್ಯೊ, ಹಾಳು ಸೊಳ್ಳೆಯೆ! ಕಣ್ಣಿಗೆಲ್ಲಾ ಮುತ್ತುತ್ತದೆ! " ಎಂದು ರೇಗುತ್ತ ಗೌರಿಯು ತಾನು ಹೇಳುತ್ತಿದ್ದುದನ್ನು ನಿಲ್ಲಿಸಿ ಸೊಳ್ಳೆ ಯನ್ನು ನಿವಾರಿಸಿಕೊಂಡಳು. ಈ ನಡುವೆ, ಅವಳು "ಭಾವ ಯ್ಯನಿಗೆ-" ಎಂದು ನಿಲ್ಲಿಸಲಾಗಿ ಸೀತೆಗೆ ಕೈಕಾಲು ನಡುಗ ಹತ್ತಿತು. ಅವಳು ಕಾತರಿಸುತ್ತಿದ್ದ ಹೃದಯದ ಮೇಲೆ ಕೈಯಿಟ್ಟು ಧೈರ್ಯ ಹೇಳಿಕೊಳ್ಳುತ್ತ "ಏನಾಯಿತೆ, ಗೌರು? " ಎಂದು ತಂಗಿಯನ್ನು ಪ್ರಾರ್ಥಿಸಿದಳು. ಧ್ವನಿಯ ದೈನ್ಯವನ್ನು ವರ್ಣಿಸಲು ಸಾಧ್ಯವಲ್ಲ.

"ನಮ್ಮ ಭಾವಯ್ಯ ಇನ್ನೊಂದು ಹುಡುಗಿಯನ್ನು ಮದುವೆ ಮಾಡಿಕೊಳ್ಳುತ್ತಾರಂತೆ."

ಸೀತೆಗೆ ತಲೆತಿರುಗಿದಂತಾಯಿತು. ಅವಳು ಅತ್ಯಂತ ಸಂಕಟದಿಂದ "ನಾರಾಯಣ " ಎಂದುಕೊಳ್ಳುತ್ತ, ನಿಂತಿರ ಲಾರದೆ ಒಂದು ಬಳಿಯಲ್ಲಿ ಕೂತುಕೊಂಡಳು. ದೇಹದ ಸಂಕಟವೂ ಜೀವದ ಸಂಕಟವೂ ಬೆರೆದು ಒಂದನ್ನೊಂದು ಹೆಚ್ಚಿಸಿದುವು. ಮನಸ್ಸಿನ ಆ ಬಯುವೆಲ್ಲಾ ಅಂದು ಪರಿಪೂರ್ಣ ವಾದುದಕ್ಕಾಗಿ ಒಂದು ನಿಟ್ಟುಸಿರು ಹೊರಟಿತು.

ಅವಳ ಸ್ಥಿತಿಯನ್ನು ನೋಡಿ ಗೌರಿಯು ಪುನಃ ಅತ್ತಳು. ಅಳುತ್ತ ಅಳುತ್ತ ನಡೆದುದೆಲ್ಲವನ್ನೂ ತಿಳಿಸಿದಳು. ರಂಗುವಿನ ತಂದೆ ಮನೆಗೆ ಬಂದು ಯಜಮಾನತಿಯೊಡನೆ ಹೇಳಿದ ಈ ವಿಶೇಷ ಸಂಗತಿಯು ರಂಗುವಿನ ಕಿವಿಗೆ ಬಿದ್ದು ಅವಳು ಅದನ್ನು ಗೌರಿಯೊಡನೆ ಪ್ರಸ್ತಾಪಮಾಡಿದ್ದಳು. "ಅದರಲ್ಲಿ, ಅಕ್ಕಾ, ಇಲ್ಲಿ ನೋಡು. ಅವರು ಮತ್ತೆ ಒಂದಲ್ಲದಿದ್ದರೆ ಮೂರು ಮದುವೆಮಾಡಿಕೊಳ್ಳಲಿ. ಆದರೆ ನಿನಗೆ ಹುಚ್ಚು ಹಿಡಿದಿದೆ ಯಂತೆ. ಆದ್ದರಿಂದ ಪುನಃ ವಿವಾಹವಂತೆ. ಏನು ಸುಳ್ಳು, ಏನು ಅನ್ಯಾಯ! " ಎಂದಳು.

ಸುಳ್ಳೋ, ಅನ್ಯಾಯವೋ, ಅಂತೂ ಸೀತೆಗೆ ಲೋಕವೇ ಮುಳುಗಿದಹಾಗಾಯಿತು. ಅರಿಯದ ಹುಡುಗಿ, ಪತಿಯು ಆಡಿದುದನ್ನೂ ಇನ್ನು ಯಾವ ವಿಧದಲ್ಲಿಯೂ ನಿರ್ಣಯಿಸಲು ತಿಳಿಯದೆ, ಆತನು ತನಗೆ ಹುಚ್ಚೆಂದು ಹೇಳಿದುದು ಸರಿಯಾಗ ಲಿಲ್ಲವೆಂದುಕೊಂಡಳು. ಆದರೂ ಪತಿಯು ಎದುರಿಗೇ ಇದ್ದು ಹಾಗೆಂದಿದ್ದರೆ, ತನ್ನ ತಪ್ಪನ್ನೂ ಮನ್ನಿಸೆಂದು ಆತನ ಪಾದ ದಲ್ಲಿ ಬಿದ್ದು ಬೇಡುತ್ತಿದ್ದಳು. ಬಹಳ ಯೋಚಿಸಿದಳು. ಆದರೆ ಯಾವ ಯೋಚನೆಯೂ ಸ್ಪಷ್ಟವಾಗಿ ಕಾಣಿಸಿಕೊಳ್ಳುತ್ತಿರ ಲಿಲ್ಲ. ಶೂನ್ಯ ದೃಷ್ಟಿಯಿಂದ ನೆಲವನ್ನೂ ನೋಡುತ್ತಿದ್ದಳು. ಒಂದು ಪ್ರಶ್ನೆಯು ಪುನಃ ಪುನಃ ಉದಯಿಸುತ್ತಿದ್ದಿತು— ಪತಿಯು ಮತ್ತೆ ಮದುವೆಯಾದರೂ ಚಿಂತೆಯಿಲ್ಲ. ಪುನಃ ತನ್ನನ್ನೂ ಮನೆಯ ಕೆಲಸದವಳನ್ನಾಗಿಯಾದರೂ ಅಂಗೀಕರಿ ಸುತ್ತಾನೆಯೇ ಎಂಬುದು. ಪ್ರಶ್ನೆಗೆ ಉತ್ತರವು ದೊರೆಯಲೇ ಇಲ್ಲ. ಅವಳು ಸ್ವಲ್ಪ ಹೊತ್ತು ಪ್ರಯತ್ನಿಸಿ, ನಿಟ್ಟುಸಿರೆಳೆದು ಗೋಡೆಯನ್ನೂ ಒರಗಿಕೊಂಡಳು. ಕಣ್ಣು ಮುಚ್ಚಿತು. ಮೂರ್ಛೆಹೋದಳು.

ಈ ವರ್ತಮಾನವು ತಂದೆತಾಯಿಗಳಿಗೆ ತಿಳಿಯಿತು. ಅವರು ಓಡಿ ಬಂದು ಉಪಚಾರಮಾಡಿ ಸೀತೆಯನ್ನು ಎಚ್ಚರಗೊಳಿಸಿ ಸಮಾಧಾನಹೇಳಿದರು. ಆದರೆ ಅವಳ ದುಃಖದಲ್ಲಿ ಜನರ ಸಮಾಧಾನವೂ ಉಪಚಾರವೂ ಹಿತವಾಗಲಿಲ್ಲ. ಯಾವ ದೈವವೂ ಅವಳ ಕಷ್ಟವನ್ನು ಮನಸ್ಸಿಗೆ ತಂದುಕೊಂಡಿರಲಿಲ್ಲ. ಪತಿಯು ತನ್ನನ್ನು ಪರಿತ್ಯಾಗಮಾಡಿದನೆಂದು ಸೀತೆಯು ಚಿಂತಿ ಸಲಾರಂಭಿಸಿದಳು. ಕಾಲಕ್ರಮದಲ್ಲಿ ಆ ಯೋಚನೆಯೇ ದೃಢ ಪಟ್ಟಿತು.

ಪ್ರಾಯದ ಸೊಕ್ಕೆಂದು ನಮ್ಮ ಸುಬ್ಬತ್ತೆ ಹೇಳುವುದು ನಿಜ. ಆ ಸೊಕ್ಕಿನಲ್ಲಿ ಮಾಡಿದ ಅವಿವೇಕಕ್ಕೆ ಎಷ್ಟು ಜನ ಆ ಬಳಿಕ ಅನುತಾಪಪಟ್ಟಿಲ್ಲ ?

ಪಶ್ಚಿಮ ವಾಹಿನಿಯಲ್ಲಿ ಸ್ನಾನಮಂಟಪ. ಅದರ ಮುಂದಿನ ಸೋಪಾನದ ಮೇಲೆ ಕುಳಿತು ಸೀತೆಯು ಅಗಾಧವಾಗಿ ಚಿಂತಿ ಸುತ್ತಿದ್ದಳು. ನಾಲ್ಕು ಮೆಟ್ಟಿಲ ಕೆಳಗೆ ತಿಳಿನೀರಿನಲ್ಲಿ ಮೀನು ಗಳು ವಿಹರಿಸುತ್ತಿದ್ದುವು. ಒಂದನ್ನೊಂದು ಅನುಸರಿಸು ತ್ತಲೂ ನೀರ ಮೇಲಕ್ಕೆ ಎಗುರುತ್ತಲೂ ಮೈಹೊರಳಿಸಿ ಮಿಂಚುತ್ತಲೂ ಇದ್ದುವು. ಅವುಗಳ ಆ ವಿಹಾರವನ್ನು ನೋಡಿಯೇ ಸೀತೆಗೆ ಚಿಂತೆಗಾರಂಭವಾಗಿದ್ದಿತು. ಆ ಜಂತು ಗಳಿಗಿದ್ದ ಸುಖವು ತನಗಿಲ್ಲವೆಂದು ಕೊರಗಿದಳು.

ಹೊಳೆಯಲ್ಲಿ ಜನರು ಯಾರೂ ಇರಲಿಲ್ಲ. ಮಧ್ಯಾಹ್ನವು ಕಳೆದು ಸಂಜೆಯಾಗುತ್ತ ಬಂದಿದ್ದುದರಿಂದ ಆ ಸ್ನಾನಪ್ರದೇಶವು ನಿರ್ಜನವಾಗಿದ್ದಿತು. ಯೋಚನೆಯಲ್ಲಿ ಮುಳುಗಿದ್ದವಳಿಗೆ "ಸೀತಾ!" ಎಂದು ಯಾರೋ ಕೂಗಿದ ಹಾಗಾಯಿತು. ಝುಂ ಎಂದಿತು. ಅವಳು ಎಚ್ಚತ್ತಳು. ಧ್ವನಿಯು ಯಾರದೆಂಬುದು ಸ್ಫೂರ್ತಿಗೆ ಬಂದಿತು. ಒಂದಾವೃತ್ತಿ ಹಿಂದಿರುಗಿ ನೋಡಿ ಅಚ್ಯುತರಾಯನನ್ನು ಕಂಡು ಎದ್ದುನಿಂತುಕೊಂಡಳು.

"ಸೀತಾ!" ಎಂದು ರಾಯನು ಮತ್ತೆ ಕೂಗಿದನು. ಆ ಕೂಗಿನ ಧ್ವನಿಯಲ್ಲಿ ಎಷ್ಟು ಅರ್ಥವಿದ್ದಿತು! ಪ್ರೀತಿಯೂ ದೈನ್ಯವೂ ಪಶ್ಚಾತ್ತಾಪವೂ ಅದರಲ್ಲಿ ಉಕ್ಕುತ್ತಿದ್ದುವು. ಆ ಧ್ವನಿಯಲ್ಲಿ ಉಚ್ಚರಿಸಿದ ಅದೊಂದು ಮಾತಿಗೆ ರಾಮಾಯಣಕ್ಕಿಂತ ಉದ್ದವಾದ ವ್ಯಾಖ್ಯಾನವನ್ನು ಬರೆದು ಗರ್ಭಿತಭಾವಪ್ರಸಾರವನ್ನೂ ಹೊರಗೆಡವಬಹುದಾಗಿದ್ದಿತು. ನಾವು ಅದನ್ನೆಲ್ಲಾ ಬರೆಯುವುದಿರಲಿ, ಸೀತೆಯು ಅವುಗಳನ್ನೆಲ್ಲಾ ಆ ಹೊತ್ತಿನಲ್ಲಿ ಅನುಭವಿಸಿ ತಿಳಿದಳು. ಉದ್ವೇಗವು ಮಿತಿಮೀರಿ ಬಂದಿತು. ಬಿಕ್ಕಿ ಬಿಕ್ಕಿ ಅತ್ತಳು.

ಹಿಂದೆ ಸೋಪಾನದ ಮೇಲುಗಡೆಯಿಂದ ಸೀತೆಯನ್ನು ನೋಡಿದ ಕೂಡಲೇ ಅಚ್ಯುತರಾಯನಿಗೆ ಕಾಲುಗಳು ನಡುಗಲಾರಂಭಿಸಿದವು. ಆ ನಡುಕವು ಅವನು ಹೆಂಡತಿಯನ್ನು ಹೆಸರು ಹಿಡಿದು ಕೂಗಿದಾಗ ಧ್ವನಿಯಲ್ಲಿ ತೋರುತ್ತಿದ್ದಿತು. ಆದರೆ ಆ ಬಳಿಕ ಅವಳ ಮುಖವನ್ನು ನೋಡಲಾಗಿ ದುಃಖವು ಹತ್ತಿ ಬಂದಿತು. ಎರಡನೆಯಾವೃತ್ತಿ ಕೂಗಿದಾಗ ಧ್ವನಿಯಲ್ಲಿ ದುಃಖವು ತುಂಬಿದ್ದಿತು. ಅಚ್ಯುತರಾಯನಿಗೆ ಮಾತನಾಡಲಾಗದಂತಾಯಿತು. ಕ್ಷಣಕಾಲ ಮಂಕು ಹಿಡಿದು ನಿಂತನು ಆ ಬಳಿಕ ಅವಳ ಬಳಿಗೆ ಹೋಗಿ ಅವಳದೆರಡು ಕೈಗಳನ್ನು ತನ್ನದರೊಳಗೆ ಹಿಡಿದುಕೊಂಡು, ಸೀತೆಯ ದುಃಖದಿಂದ ತನ್ನ ಹಿಂದಿನ ಪ್ರವರ್ತನೆಯು ನೆನಪಿಗೆ ಬರಲಾಗಿ "ಅಯ್ಯೋ, ನಾನು ಎಂತಹ ಕೆಲಸ ಮಾಡಿದೆ!" ಎಂದು ಕೊರಗಿಕೊಂಡನು. ಬಳಿಕ, "ಸೀತೆ, ಹಿಂದಿನದನ್ನೆಲ್ಲಾ ಮರೆತು ನನ್ನನ್ನು ಕ್ಷಮಿಸುವೆಯಾ?" ಎಂದು ಪ್ರಶ್ನೆ ಮಾಡಿದನು.

ಪತಿಯು ತನ್ನ ವಿಷಯದಲ್ಲಿ ಅತಿ ದೊಡ್ಡ ಮಾತುಗಳನ್ನೂ ಆಡುತ್ತಿರುವನೆಂದು ಸೀತೆಯು ಭಾವಿಸಿದಳು. "ನನ್ನನ್ನು ಕೇಳಬೇಕೆ? " ಎಂದು ಉತ್ತರ ಹೇಳಿದಳು.

ಅವರಿಬ್ಬರೂ ಮೆಟ್ಟಿಲ ಮೇಲೆ ಕುಳಿತುಕೊಂಡರು. ಅಷ್ಟು ಹೊತ್ತಿಗೆ "ನಮ್ಮ ತಪ್ಪು ಮನ್ನಿಸುತ್ತೀರಾ?" ಎನ್ನುತ್ತ ಗೌರಿಯು ಅಲ್ಲಿಗೆ ಬಂದಳು. ಅಕ್ಕನ ಹೆಸರನ್ನು ಯಾರೋ ಕೂಗಿದುದನ್ನು ಕೇಳಿ, ನೋಡೋಣವೆಂದು ಸೋಪಾನದ ಬಳಿಗೆ ಬಂದವಳು ಭಾವಯ್ಯನನ್ನು ಕಂಡು ಕುತೂಹಲದಿಂದಲೂ ಕರ್ತವ್ಯಾನುಷ್ಠಾನಬುದ್ಧಿಯಿಂದಲೂ ಅವರ ಬಳಿಯನ್ನು ತಲಪಿದಳು.

ಅವಳ ಪ್ರಶ್ನೆಗೆ ಉತ್ತರವನ್ನು ಹೇಳಲು ತಿಳಿಯದೆ ರಾಯನು ಸುಮ್ಮನಿದ್ದನು. "ಹಣತೆಗೆದುಕೊಂಡು ಹೋಗಲು ಬಂದಿರಾ, ಅಸಲೂ ಬಡ್ಡಿಯೂ ಎರಡೂ ಬೇಕೆ?" ಇವೇ ಮೊದಲಾದ ಪ್ರಶ್ನೆಗಳನ್ನು ಕೇಳಿ ಭಾವಯ್ಯನ ಮೂಗು ಮುರಿಯಲು ಅವಳಿಗೆ ಬಹಳ ಮನಸ್ಸಾಯಿತು. ಅದರೂ ಗೌರಿಯು ಈಗ ಮದುವೆಯಾದವಳು, ಯಜಮಾನಿ ಆದ್ದರಿಂದ ಹಾಗೆಲ್ಲಾ ಕೇಳಲು ಆಸ್ಪದವಿರಲಿಲ್ಲ. ಆದರೂ, 'ನಾಯಿಯ ಬಾಲ ನೆಟ್ಟಗೆ ಮಾಡಿದ ಹಾಗೆ' ಎಂದು ನಮ್ಮ ಅಜ್ಜಿ ಮೊನ್ನೆ ಹೇಳಿದ ರೀತಿಯಲ್ಲಿ ಅವಳು ಡೊಂಕು ಬುದ್ಧಿಯ ದೆಸೆಯಿಂದ, "ಏನು ಭಾವಯ್ಯ, ಕ್ಷೇಮವೆ? ನಿಮ್ಮನ್ನು ನೋಡಿ ಮೂರು ವರ್ಷವಾಯಿತು. ಆರೋಗ್ಯವಷ್ಟೆ. ಏನು ಅಪೂರ್ವವಾಗಿ ಬಂದದು? " ಎಂದು ಕುಶಲಪ್ರಶ್ನೆಮಾಡಿದಳು.

ನೋಡುವುದಕ್ಕೆ ಗಿಣಿಯ ಮಾತಿನಂತೆ ಮುದ್ದಾದರೂ ಈ ಪ್ರಶ್ನೆಗಳ ಅಂತರ್ಭಾವವು ಅಚ್ಯುತರಾಯನಿಗೆ ಅರ್ಥವಾಗದಿರಲಿಲ್ಲ. ಅವನು ಮೌನದಿಂದ ಕೆಲವು ಹೊತ್ತನ್ನು ಕಳೆದು ಆ ಮೇಲೆ "ಸೀತೆಗೋಸ್ಕರ ಬಂದೆ" ಎಂದು ಅಂಜುತ್ತಲೂ ನಗುತ್ತಲೂ ಉತ್ತರ ಹೇಳಿದನು.

ಸೀತೆಗೆ ಬಲು ಸಂತೋಷವಾಯಿತು. ಅವಳು ಹಿಗ್ಗಿದಳು. ಆದರೆ, "ಏಕೆ, ನಿಮ್ಮ ಆ ಹೊಸ ಹೆಂಡತಿಯು ಹತ್ತಿರ ಊಳಿಗಕ್ಕಿದ್ದು ಕೆಲಸ ಕಲಿಯಲೆಂತಲೆ? ನಮ್ಮ ಅಕ್ಕ ಅಷ್ಟೇನೂ ಅಗ್ಗವಲ್ಲ," ಎಂದು ಗೌರಿಯು ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿದಳು.

ಅಚ್ಯುತರಾಯನು ತನ್ನ ವಿಧಿಯನ್ನು ಸ್ಮರಿಸಿಕೊಂಡು ಸ್ವಲ್ಪ ನಕ್ಕನು. ಆ ನಗುವು ಮೇಘಾಚ್ಛಾದಿತವಾದ ದಿನ ಒಂದಾವೃತ್ತಿ ಹೊಳೆದು ಮರೆಯಾಗುವ ಸೂರ್ಯಕಿರಣದ ಹಾಗಿದ್ದಿತು. ಅವನು ಹೀಗೆಂದನು. "ನನ್ನ ಹೊಸ ಹೆಂಡತಿ ಯಾರು? "

ಅಕ್ಕತಂಗಿಯರಿಬ್ಬರೂ ಬೆಚ್ಚಿದರು. ಸೀತೆಯು ಗಂಡನ ಕಡೆ ನೋಡಿದಳು. ಮುಖದಲ್ಲಿ ಗೆಲುವಾಗಲೀ ದೇಹದಲ್ಲಿ ಆರೋಗ್ಯವಾಗಲೀ ಇದ್ದಂತೆ ತೋರಲಿಲ್ಲ. ಪತಿಯು ಕೃಶವಾಗಿದ್ದನು. ಪತಿಯೆ ಹೌದೆ ? ಎನ್ನುವಂತಾಗಿದ್ದನು. ಸುತ್ತಲೂ ಹಬ್ಬಿ ಬಿಗಿದು ಶೋಷಿಸುವ ಬಳ್ಳಿಯ ದೆಸೆಯಿಂದ ಒಣಗಿಹೋದ ಮರದ ಜ್ಞಾಪಕ ಬಂದಿತು.

"ನಮ್ಮ ಭಾವಯ್ಯ ನನಗೆ ಇನ್ನೊಬ್ಬ ಅಕ್ಕನನ್ನು ಮಾಡಿಸಿ ಕೊಟ್ಟ ಹಾಗೆ ವರ್ತಮಾನ ಕೇಳಿದೆ!" ಎಂದು ಗೌರಿಯು ನುಡಿದಳು.

"ಹಾಗೆಂದರೆ!" ಎಂದು ಅಚ್ಯುತರಾಯನು ಗೌರಿಯ ಮಾತು ಅರ್ಥವಾಗದಿರಲಾಗಿ ಪ್ರಶ್ನೆ ಹಾಕಿ, ಆ ಬಳಿಕ ಅರ್ಥವಾಗಲಾಗಿ, "ಓಹೋ, ಅದೇ .........ನನಗೆ ಹೆಣ್ಣುಕೊಡಲು ಕೆಲವರು ಯೋಚಿಸಿದರು. ನಾನೇ ಹಿಂದೆಗೆದೆ." ಎಂದು ಉತ್ತರ ಕೊಟ್ಟನು.

ಮತ್ತೆ " ಹೇಳಲು ನಾಚಿಕೆಯಾಗುತ್ತದೆ— ನಿಮ್ಮೆಲ್ಲರ ಮೇಲಿನ ಕೋಪದಿಂದ ಹಾಗೆ ಮಾಡಿದೆ. ಮತ್ತೊಂದು ಮದುವೆ ಮಾಡಿಕೊಳ್ಳುತ್ತೇನೆಂದು ನಿಮ್ಮನ್ನೆಲ್ಲಾ ಬೆದರಿಸಲು ಪ್ರಯತ್ನಿಸಿದೆ. ಅಷ್ಟೇ "

" ಈಗ ಅಕ್ಕ ಬೇಕಾದಳೋ! "

" ಗೌರು, ಹಾಗಲ್ಲ. ನನ್ನ ತಪ್ಪು ನನಗೇ ತಿಳಿಯಿತು. ಆದ್ದರಿಂದ ನಿಮ್ಮನ್ನೆಲ್ಲಾ ಕ್ಷಮಾಪಣೆ ಕೇಳಿಕೊಳ್ಳುವುದಕ್ಕೋಸ್ಕರ ಬಂದೆ. ನೀವು ಮನ್ನಿಸಿದರೆ ಸರಿ. ಇಲ್ಲವಾದರೆ ಈಗಲೇ ಹೊರಟು ಹೋಗುತ್ತೇನೆ. ನಿಮಗೆ ಇನ್ನೆಂದಿಗೂ ತೊಂದರೆ ಕೊಡುವುದಿಲ್ಲ. ನನ್ನಿಂದ ನಿಮಗೆ ಸೌಖ್ಯವುಂಟಾಗದಿದ್ದರೂ ದುಃಖವಿಲ್ಲದಿರಲಿ."

ಅವನು ಇಷ್ಟು ಹೇಳಿ ಮುಗಿಸುವಷ್ಟರಲ್ಲಿ ಸೀತೆಯ ಕೈಯು ಅವನ ಕೈಯನ್ನು ಹಿಡಿದು ಬೇಡವೆಂಬ ಪ್ರಾರ್ಥನೆಯನ್ನು ಸೂಚಿಸಿತು.

"ಅದೆಲ್ಲಾ ಹೋಗಲಿ, ಭಾವಯ್ಯ, ನೀವು ಇದುವರೆಗೆ ಏನು ಮಾಡುತ್ತಿದ್ದಿರಿ, ಹೇಳಿ" ಎಂದು ಗೌರಿಯಾರಂಭಿಸಿ ಮತ್ತೆ ಹೀಗೆಂದಳು. " ನೀವು ಬಿ. ಎ. ಪ್ಯಾಸ್ ಮಾಡಿ ಬೊಂಬಾಯಿಗೆ ಹೋದದ್ದು ಗೊತ್ತು, ಅಣ್ಣ ಆ ಮೇಲೆ ಯಾರೋ ನಿಮ್ಮ ಸ್ನೇಹಿತರನ್ನು ವಿಚಾರಿಸಿ ತಿಳಿದುಕೊಂಡ ಆಮೇಲೆ? "

" ಆ ಮೇಲೆ ಹಣ ಒಗ್ಗದೆ ಖಾಯಿಲೆ ಬಿದ್ದೆ. ಬಹುಕಷ್ಟಪಟ್ಟೆ, ಬಹುಕಷ್ಟ. ಖಾಯಿಲೆ ವಾಸಿಯಾಗಿ ಚೇತರಿಸಿಕೊಂಡ ಮೇಲೆ ಯಾವುದೋ ಒಂದು ಕಂಪನಿಯಲ್ಲಿ ಕೆಲಸಸಿಕ್ಕಿತು. ವಿಪರೀತಖಾಯಿಲೆ. ಅದರ ಜೋರಿನಲ್ಲಿ ಒಂದು ದಿನ ನಿಮ್ಮ ತಂದೆಗೆ ತಂತಿಕೊಡೋಣವೆಂತಲೂ ಅನ್ನಿಸಿತು—"

"ಆದರೆ ನಿಮ್ಮ ಮಾನಕ್ಕೆ ಕಡಿಮೆಯಾದ್ದರಿಂದ ಹಾಗೆ ಮಾಡಲಿಲ್ಲ. ಪಾಪ! ನಿಮ್ಮ ಸ್ಥಿತಿ ವಿಚಿತ್ರವಾಗಿರಬೇಕು. "

"ಅದರಲ್ಲಿ ಸಂಶಯವೇ ಬೇಡ. ಅದಿರಲಿ, ಕೈಯಲಿ ಒಂದು ಕಾಸೂ ಇರಲಿಲ್ಲ. ಸ್ವಲ್ಪಸ್ವಲ್ಪವಾಗಿ ಕೂಡಿಹಾಕಿದೆ. "

"ಹಾಗೇ ಮಾಡುತ್ತ ಅಲ್ಲೇ ಇರಬಹುದಾಗಿತ್ತಲ್ಲ. ಕಷ್ಟಪಟ್ಟು ನಮ್ಮನ್ನೆಲ್ಲಾ ಏಕೆ ಹುಡುಕಿಕೊಂಡು ಬಂದಿರಿ? "

ಭಾವಯ್ಯನ ಹತ್ತಿರ ಮೊದಲಿನ ಸಲಿಗೆಯೇ ಬಂದುದರಿಂದ ಗೌರಿಗೆ ತಾನು ಮದುವೆಯಾದವಳೆಂಬುದೂ ಪರಸ್ತ್ರೀಯೆಂಬುದೂ ಮರೆತು ಹೋಯಿತೆಂಬ ಅಂಶವು ಸ್ಮರಣೆಯಲ್ಲಿರಲಿ. ಈ ನಡುವೆ, ಪತಿಯ ಸಾನ್ನಿಧ್ಯವೂ ಧ್ವನಿಯೂ ಅನುಪಮಸುಖವನ್ನುಂಟುಮಾಡುತ್ತ ಅದನ್ನು ಅನುಭವಿಸುತ್ತಿದ್ದುದೇ ಸೀತೆಯ ಮೌನಕ್ಕೆ ಕಾರಣವೆಂಬ ಅಂಶವೂ ಸ್ಮರಣೆಯಲ್ಲಿರಲಿ.

"ಸೀತೆಯನ್ನು ಬಿಟ್ಟಿರಲಾಗದೆ ಹೋಯಿತು. ಅವಳು ಕೊರಗುತ್ತಿರಬಹುದೆಂದು ಭಯವುಂಟಾಯಿತು. ಬಂದು ಬಿಟ್ಟೆ. ಸೀತಾ, ನನ್ನ ತಪ್ಪನ್ನು ಮನ್ನಿಸುತ್ತೀಯಾ?" ಅವನು ಸೀತೆಯ ಕೈಯನ್ನು ಹಿಡಿದುಕೊಂಡನು.

ಸೀತೆಯೇನೋ ಮನಸ್ಸಿನಲ್ಲಿ ಬಹಳ ಹಿಂದೆಯೇ ಗಂಡನನ್ನು ಕ್ಷಮಿಸಿದಳು. ಅವಳು ಮೊದಲಿನಿಂದಲೂ ಕ್ಷಮಿಸುತ್ತ, ಪತಿಯು ಬರುವನೆಂದು ನಿರೀಕ್ಷಿಸುತ್ತಲೇ ಬಂದಿದ್ದಳು. ಸ್ತ್ರೀಯರು ಕ್ಷಮೆಯ ನಿಧಿ.

ಆದರೆ ಅದನ್ನು ಗಂಡನೆದುರಿಗೆ ಬಾಯಲ್ಲಿ ಹೇಳಿ ವ್ಯಕ್ತಪಡಿಸುವುದು ಹೇಗೆ? ಅಷ್ಟು ಗಟ್ಟಿಗತನವಿರಲಿಲ್ಲ. ಪತಿಯ ಸಂದರ್ಶನದಿಂದ ಅವಳು ಸುಖದಲ್ಲಿ ಮುಳುಗಿದ್ದಳು. ಮಂದಹಾಸವು ಬಳ್ಳಿಯಮೇಲಿನ ಕುಸುಮದಂತೆ ಅವಳ ಮುಖದಲ್ಲಿ ನಲಿಯುತ್ತಿದ್ದಿತು.

ಅಷ್ಟು ಹೊತ್ತಿಗೆ ರಂಗಣ್ಣನವರು ಸಂಧ್ಯಾವಂದನೆಗಾಗಿ ಮಂಟಪದೊಳಕ್ಕೆ ಬಂದರು. ಗೌರಿಯು ಅವರನ್ನು ಕುರಿತು

"ಅಣ್ಣ, ಕಾಡಾನೆಯನ್ನು ಕಟ್ಟಿ ಆಯಿತು!" ಎಂದು ಹೇಳಿದಳು.

ಎಲ್ಲರೂ ನಕ್ಕರು. ಅವಳ ಮಾತು ತಂದೆಗೆ ಅರ್ಥವಾಗಲಿಲ್ಲ. "ಏನು?" ಎಂದು ಪ್ರಶ್ನೆಮಾಡಿದರು.

"ತೀ|| ಅಚ್ಯುತರಾಯರು ನಿಮ್ಮನ್ನು ಹುಡುಕಿಕೊಂಡು ಬಂದಿದ್ದಾರೆ."

ರಂಗಣ್ಣನವರು ಮಾತನಾಡದೆಯೂ ಅಳಿಯನನ್ನು ಮಾತನಾಡಿಸದೆಯೂ ಸುಮ್ಮನೆ ನಿಂತರು. ಅಳಿಯನು ಮಾಡಿದುದನ್ನೂ ಮರೆತಿರಲಿಲ್ಲ. ದೃಷ್ಟಿಯು ಕಾಲಕೆಳಗೆ ಹರಿಯುತ್ತಿದ್ದ ಹೊಳೆಯ ಮೇಲಿದ್ದಿತು. ಅವರದು ಸ್ವಲ್ಪ ಹಟವೆಂದು ತೋರುತ್ತೆ. ಅಳಿಯನೇ ಪ್ರಾರಂಭಿಸಲೆಂದು ಮೌನವಾಗಿದ್ದರು.

ಎರಡು ಮೂರು ನಿಮಿಷಕಾಲ ಒಬ್ಬರೂ ಮಾತನ್ನಾರಂಭಿಸಲಿಲ್ಲ. ಮಾತನ್ನಾರಂಭಿಸುವುದು ಯಾರಿಗೂ ಸಹಜವಾಗಿ ಕಾಣಲಿಲ್ಲ. ರಂಗಣ್ಣನವರ ದೃಷ್ಟಿಯೂ ಕದಲಲಿಲ್ಲ.

"ಅಣ್ಣ, ನನಗೋಸ್ಕರ ಕ್ಷಮಿಸು" ಎಂದು ಸೀತೆಯು ಪ್ರಾರ್ಥಿಸಿದಳು.

ನಾನಾಗಿದ್ದರೆ ತಪ್ಪು ಮಾಡಿದ ನನ್ನ ಗಂಡನ ಕಡೆಗೆ ವಹಿಸಿಕೊಂಡು ಹೀಗೆ ಮಾತಿಗೆ ಬರುತ್ತಲೇ ಇರಲಿಲ್ಲವೆಂದು ಗೌರಿಯು ಆವಿಧವಾದ ಸನ್ನಿವೇಶದಲ್ಲಿ ತನ್ನ ಕರ್ತವ್ಯವನ್ನು ನಿಶ್ಚಯಿಸಿಕೊಂಡಳು.

"ಅಮ್ಮ, ಕ್ಷಮಿಸುವವನೂ ಬಿಡುವವನೂ ದೇವರು; ನನ್ನಿಂದ ಏನಾದೀತು!" ಎಂದು ರಂಗಣ್ಣನವರು ಉತ್ತರ ಹೇಳಿದರು.

ಅದನ್ನು ಕೇಳಿ ನಿರಾಶೆಹೊಂದಿದವನಂತೆ ಅಚ್ಯುತರಾಯನು ಹೆಂಡತಿಯ ಮುಖವನ್ನು ನೋಡಿದನು. ಸೀತೆಯು ಒಂದು ಕ್ಷಣದ ಮೇಲೆ "ಅಣ್ಣ!" ಎಂದಳು. ಅವಳ ಆ ಮಾತಿನ ಧ್ವನಿಯು ಪತಿಯನ್ನು ಕ್ಷಮಿಸಬೇಕೆಂದೂ ಅದರಿಂದ ತನ್ನ ಮನಸ್ಸಿಗೆ ಹಿತವಾಗುವುದೆಂದೂ ಅಭಿಪ್ರಾಯವನ್ನು ಸೂಚಿಸಿತು.

ರಂಗಣ್ಣನವರು ಅಳಿಯನ ಕಡೆಗೆ ತಿರುಗಿ, "ಅಚ್ಯುತರಾಯ, ಹಿಂದಿನದನ್ನು ಮರೆತು ಬಿಡು. ಈ ಭಾವನೆಯು ಮೊದಲೇ ಇದ್ದಿದ್ದರೆ ಯಾರಿಗೂ ಕೊರಗಿರುತ್ತಿರಲಿಲ್ಲ." ಎಂದರು.

"ಅಟ್ಟ ಮೇಲೆ ತಾನೇ ಒಲೆ ಉರಿಯಬೇಕು," ಎಂದು ಗೌರಿಯು ವ್ಯಾಖ್ಯಾನಮಾಡಿಕೊಂಡಳು.

\+ \+ \+

ಊಟಉಪಚಾರಗಳಾದುವು. ಅಚ್ಯುತರಾಯನೂ ಗೌರಿಯೂ ಸೀತೆಯೂ ಬೆಳದಿಂಗಳಲ್ಲಿ ಹೊಳೆಯ ಸೋಪಾನದ ಮೇಲೆ ಕುಳಿತು ಮಾತನಾಡುತ್ತಿದ್ದರು. ಚಂದ್ರನು ನೀರಿನ ತೆರೆಗಳೊಡನೆ ಆಟವಾಡುತ್ತಿದ್ದನು. ಹೆಂಡತಿಯಮೇಲೆ ಉಕ್ಕಿ ಬರುತ್ತಿದ್ದ ಪ್ರೇಮದಿಂದ ರಾಯನು, "ಸೀತ, ನೀನು ಎಷ್ಟು ಕಂಗೆಟ್ಟು ಹೋಗಿದ್ದೀಯೆ!" ಎಂದನು.

"ಹೌದು, ಬೇರನ್ನು ಕುಯಿಸು ಬಿಡಿ—ಬಳ್ಳಿ ಕಂಗೆಡುತ್ತೋ ಇಲ್ಲವೋ ನೋಡೋಣ" ಎಂದು ಗೌರಿಯು ವ್ಯಾಖ್ಯಾನ ಮಾಡಿದಳು.

"ಗೌರಿಯ ಎದುರಿಗೆ ಮಾತನಾಡುವುದು ಕಷ್ಟವೇ" ಎಂದು ಸೀತೆಯು ಗಂಡನನ್ನು ಸಂತೈಸಿದಳು.

# 'ನೋಬೆಲ್ಲ' ಪಾರಿತೋಷಿಕದ ಪರಿಚಯುವು.

(ಗೆಳೆಯರ ಗುಂಪಿನಿಂದ)

ನೋಬೆಲ್‌ಪ್ರೈಜ್ (Noble Prize) ಎಂಬ ಹೆಸರನ್ನು ಕೆಲವು ಕನ್ನಡಿಗರಾದರೂ ಕೇಳಿರಬೇಕು. ೧೯೧೩ರಲ್ಲಿ ನಮ್ಮ ಕವೀಂದ್ರ ರವೀಂದ್ರನಾಥರಿಗೆ ಈ ಪಾರಿತೋಷಿಕವು ಪ್ರಾಪ್ತವಾದಕೂಡಲೆ ಹಿಂದುಸ್ಥಾನದವರ ಲಕ್ಷ್ಯವು ಇತ್ತ ಕಡೆಗೆ ಹೋಗಹತ್ತಿದೆ. ಅದರಂತೆಯೇ ರವೀಂದ್ರರನ್ನು ಬಲ್ಲ ಕೆಲ ಕನ್ನಡಿಗರಿಗಾದರೂ ಇದರ ಬಗ್ಗೆ ತುಸುತುಸು ಗೊತ್ತಿರುವದುಂಟು. ಇದರ ಬಗ್ಗೆ ಸಮಗ್ರವೃತ್ತಾಂತವನ್ನು ಕನ್ನಡಿಗರಿಗಾಗಿ—ಅದರಲ್ಲಿಯೂ ಕಲಿತ ಹಾಗೂ ಕಲಿಯುವ ಕನ್ನಡಿಗರಿಗಾಗಿ ಇಲ್ಲಿ ಕೊಡಲು ಬಯಸುತ್ತೇವೆ. ನಮ್ಮ ಕಾಲೇಜಿನ ವಿದ್ಯಾರ್ಥಿಗಳು ಈ ಪಾರಿತೋಷಿಕಪುರುಷ ಶ್ರೀಷ್ಮರನ್ನು ಅಭ್ಯಸಿಸಬೇಕೆಂದು ಪ್ರಾರ್ಥನೆ.

ಈ ಪಾರಿತೋಷಿಕದ ಪ್ರತಿಷ್ಠಾಪಕರು ಆಲ್ಫ್ರೆಡ್ ಬೆರ್ನಾರ್ಡ ನೋಬೆಲ್ (Alfred Bernhard Noble) ಎಂಬವರು; ಇವರು ಯುರೋಪದ ಸ್ವೀಡನ್ ದೇಶದ ಸದ್ಗೃಹಸ್ಥರು. ಇವರು ೧೮೬೭ರಲ್ಲಿ 'Dynamite' ಎಂಬ ವಸ್ತುವನ್ನು ಉಂಟುಮಾಡಿ ವಿಜ್ಞಾನದಲ್ಲಿ ತಮಗೊಂದು ಸ್ಥಾನವನ್ನು ಪಡೆದಿರುವರು. ಈ ವಸ್ತು ನಿರ್ಮಾಣದಿಂದಲೇ ಅವರು ಕೋಟಿಗಟ್ಟಲೆ ಹಣಗಳನ್ನು ಗಳಿಸಿದರು. ಇದೇ ಹೊತ್ತಿನಲ್ಲಿ ಈ ವಸ್ತುವಿನ ಪರಿಚಯುವನ್ನು ಸ್ವಲ್ಪದರಲ್ಲಿ ಹೇಳಿದರೆ ತಪ್ಪಾಗಲಿಕ್ಕಿಲ್ಲ.

ಈ Dynamite ವು ಎರಡು ಒಡವೆಗಳ ಬೆರಿಕೆಯಿಂದಾದ ಒಡವೆಯು. ಜರ್ಮನಿಯ ಹ್ಯಾನೋವರ ಪಟ್ಟಣದಲ್ಲಿ ಓಬೆರ್ಲೋ ಎಂಬ ಸ್ಥಳದಲ್ಲಿ ಸಿಕ್ಕ Kieselguhr ಎಂಬ ಹೆಸರಿನ ಬೆಣಚುಗಲ್ಲಿನ ಮಣ್ಣೊಳಗೆ Nitro-Glycerine ವನ್ನು ೭೫% ಪ್ರಮಾಣದಂತೆ ಕೂಡಿಸಿ ಈ ವಸ್ತುವನ್ನು ನೋಬೆಲ್ಲರು ನಿರ್ಮಿಸಿದರು. ಮೋಟಾರದಂಥ ಯಾಂತ್ರಿಕ ವಾಹನಗಳು, ಉರಿಯು ಹೆಚ್ಚಾಗಿ ಒಡೆದು ಹೋಗಬಾರದೆಂದು ಈ ವಸ್ತುವಿನ ಉಪಯೋಗವಿರುವದು. ನೀರೊಳಗೆ ಹಾಕದ ಹೊರತು ಇದು ಎಂದೂ ರೂಪಗೆಡುವದಿಲ್ಲ. ಇದಕ್ಕೆ ಉರಿಹಚ್ಚಿದರೆ ಬಹು ಶಾಂತವಾಗಿ ಉರಿಯುವದು. ಕಡು ಕಾವನ್ನು ಕೊಟ್ಟರೆ ಹುರಪಳಿಸಿ ಹೋಗುವದು. ಇದರಿಂದಾದ ಉರಿಯನ್ನು ನೊಂದಿಸಲಿಕ್ಕೆ ಇದಕ್ಕಾಗಿ ಬೇರೊಂದು ಟೊಪ್ಪಿಗೆಯನ್ನು ಮಾಡುತ್ತಾರೆ. ಇದರ ಉರಿಯ ಶಕ್ತಿಯು ಮದ್ದಿನಕಿಂತ ಎಷ್ಟೋ ಪಾಲು ಮಿಗಿಲಾದದ್ದು. ಇದರ ವ್ಯಾಖ್ಯೆಯು ಶಾಸ್ತ್ರೀಯವಾಗಿ ತಿಳಿಯಬೇಕಾದರೆ ಕೆಳಗಿನ ಇಂಗ್ಲಿಷ ಅವತರಣಿಕೆಯನ್ನು ನೋಡಬೇಕಾಗುವದು:—

**Dynamite:**--An explosive substance patented by A. Nobel in 1867. As originally made it consists of a silicieous earth obtained at Oberlohe in Hanover and known as Kieselguhr inpregnated with 75% of nitro-Glycirine-the object of the mixture being to facilitate the carriage and use of the substance by diminishing its succeptibility to explode by shock while not destroying its explosive force. The silicieous matter is of diatomaceous origin; it is extremely friable and porous and has a considerable absorbent power. Dynamite thus prepared has the appearance of raw sugar. Diatomite a substance superior to Kieselguhr is now also employed and various other substances have been used to mix with the nitronglycerine such as charcoal, sand, sawdust, etc. The mixture remains without change for any length of time unless exposed to water. It burns away quietly if a

light is applied to it but explodes if heated to a high temperature. Usually it is exploded by a specially arranged fulminating cap. Its explosive force is several times that of gunpowder, which it has largely superseded for blasting.

ಈ ದಾನವೀರನು ೧೮೯೬ರಲ್ಲಿ ತೀರಿಕೊಂಡನು. ಸಾಯುವ ಸಮಯಕ್ಕಿದ್ದ ಸುಮಾರು ೨,೦೦೦,೦೦೦ ಪೌಂಡುಗಳ ಆಸ್ತಿಯನ್ನು ಕೆಳಗೆ ಬರೆದಂತೆ ೫ ಪಾರಿತೋಷಿಕಗಳನ್ನು ವರ್ಷಾ ಕೊಡಬೇಕೆಂಬ ಸದುದ್ದೇಶದಿಂದ ಒಂದು ವಿಶ್ವಾಸಮಂಡಲ (Trustee's Committee) ಕ್ಕೆ ಅರ್ಪಿಸಿದನು. ಪ್ರತಿಯೊಂದು ಪಾರಿತೋಷಿಕವು ಸು. ೮೦೦೦ ಪೌ (= ಸು. ೧। ಲಕ್ಷ ರೂಪಾಯಿ) ಬೆಲೆಯುಳ್ಳದ್ದಿರುವದು. ಆತನು ಮಾಡಿದ ಮೃತ್ಯುಪತ್ರವು ೧೮೯೫ನೇ ಇಸ್ವಿಯ ನವ್ಹೆಂಬರ ೨೭ನೇ ತಾರೀಖಿನದಿದ್ದು ೧೯೦೦ ನೇ ಜೂನ ೨೯ಕ್ಕೆ ಸ್ವೀಡನ್ ದೇಶದ ರಾಜನಿಂದ ಸರಕಾರದ ರೀತ್ಯಾ ಅಂಗೀಕೃತವಾಯ್ತು. ಈ ಪಾರಿತೋಷಿಕಗಳಲ್ಲದೆ ಎಷ್ಟೋ ವಿದ್ಯಾಭವನ (Research Institutions) ಗಳೂ ಸ್ಥಾಪಿಸಲ್ಪಟ್ಟಿವೆ. ಆತನ ಉದ್ದಿಷ್ಟ ಕಾರ್ಯವನ್ನು ಮಾಡುವ ಬೇರೆ ಬೇರೆ ಸಂಸ್ಥೆಗಳಿಗೆ ವರ್ಷಾಶನಗಳು ಕೊಡಲ್ಪಡುತ್ತವೆ. ಇನ್ನು ಈ ಮೆಚ್ಚುಗಳನ್ನು ಹೇಗೆ ಹೇಗೆ ಹಂಚಬೇಕೆಂಬದನ್ನು ಆ ಮಹಾರಾಯನ ಮೃತ್ಯುಪತ್ರದೊಳಗಿಂದಲೇ ಉದ್ಧರಿಸಿ ಬರೆಯುತ್ತೇವೆ.

"The residue of my realizable property left after my death shall be disposed of as follows: The Capital, invested in safe investments by the executors of my will, shall constitute a fund of which the interest shall be distributed annually as a reward to such persons as have rendered to humanity the greatest services during the preceding year. The total amount shall be divided into five equal parts, and allotted, one (part) to the person who has made the most important discovery or invention in the physical sciences; another (part) to the person who has made the most important discovery or the greatest improvement in chemistry; the third to the another of the most important discovery in the domain of physiology or medicine; the fourth to the person who has produced the most remarkable literary work of an idealist tendency; and finally the fifth to the person who has done most or laboured best for the cause of fraternity among different peoples, for the suppression or reduction of standing armies, or for the formation and promotion of peace congress.

"The prizes shall be awarded as follows: For physics and chemistry by the Swedish Academy of Sciences; for work in physiology and medicine by the Caroliline Institute of Stockholm; for literature by the Stockholm Academy, and finally, for the cause of peace, by a commission of five members elected by the Norwegian Storthing. *It is may express desire that in the award of the prizes no account shall be taken of sex or nationality, so that each prize may go to the most worthy, whether he or she be Scandinavian or not* "

(*Italicks are ours*)

" ನಾನು ತೀರಿಕೊಂಡ ತರುವಾಯು ನನ್ನ ಆಸ್ತಿಯ ಏರ್ಪಾಡು ಹೇಗಾಗಬೇಕೆಂದರೆ: ನನ್ನ ಮೃತ್ಯುಪತ್ರ ಮಾಡಿದ

ನರು ನನ್ನ ಭಾಂಡವಲವನ್ನೆಲ್ಲಾ ಭದ್ರವಾದ ರೀತಿಯಲ್ಲಿ ಬಡ್ಡಿಗೆ ಹಚ್ಚಬೇಕು. ವರ್ಷದ ಬಡ್ಡಿಯನ್ನು ಆ ವರ್ಷ ಮಾನವ್ಯಕ್ಕೆ ಅತ್ಯುಚ್ಚ ಸೇವೆಯನ್ನು ಮಾಡಿದ ಮಹಾಪುರುಷ ನಿಗೆ ಪಾರಿತೋಷಿಕವೆಂದು ಬಳಿಸಬೇಕು. ಒಟ್ಟು ಹಣದಲ್ಲಿ ಐದು ಸರಿಯಾದ ಭಾಗಗಳನ್ನು ಮಾಡಬೇಕು. ೧. ಶಾರೀರ ಶಾಸ್ತ್ರಗಳಲ್ಲಿ ಮಹತ್ತ್ವವಾದ ಸಂಶೋಧನೆಯನ್ನಾಗಲಿ ನಿರ್ಮಾಣವನ್ನಾಗಲಿ ಮಾಡಿದವನಿಗೂ ೨. ರಸಾಯನ ಶಾಸ್ತ್ರದಲ್ಲಿ ಉಚ್ಚ ಸುಧಾರಣೆ ಇಲ್ಲವೆ ಸಂಶೋಧನೆಯನ್ನು ಮಾಡಿದವನಿಗೂ ೩. ಪ್ರಾಣಿಗುಣಧರ್ಮಶಾಸ್ತ್ರದಲ್ಲಾಗಲಿ ಔಷಧಶಾಸ್ತ್ರದಲ್ಲಾಗಲಿ ಶ್ರೇಷ್ಠಸಂಶೋಧನೆ ಮಾಡಿದವನಿಗೂ ೪. ವಾಙ್ಮಯದಲ್ಲಿ ಆದರ್ಶಪ್ರಾಯವಾದ ಗ್ರಂಥವನ್ನು ಬರೆದವನಿಗೂ ೫. ಸ್ಥಿರಸೈನ್ಯವನ್ನು ಕಡಿಮೆಮಾಡಿಯಾಗಲಿ ಶಾಂತಿಸಭೆಯನ್ನುಂಟುಮಾಡಿಯಾಗಲಿ ಈ ಬಗೆಯಿಂದ ರಾಷ್ಟ್ರರಾಷ್ಟ್ರಗಳಲ್ಲಿ ಶಾಂತಿಯನ್ನು ಸ್ಥಾಪಿಸಲಿಕ್ಕೆ ಅತ್ಯಂತ ಶ್ರಮಪಟ್ಟವನಿಗೂ ಒಂದೊಂದು ಪಾರಿತೋಷಕವು ಸಲ್ಲಬೇಕು.

"ಶಾರೀರಶಾಸ್ತ್ರ ರಸಾಯನ ಶಾಸ್ತ್ರಗಳ ಮೆಚ್ಚುಗಳನ್ನು 'ಸ್ವೀಡನದ ವಿಜ್ಞಾನಸಂಸ್ಥೆ'ಯವರೂ, ಪ್ರಾಣಿಗುಣಧರ್ಮ ಶಾಸ್ತ್ರ ಔಷಧಶಾಸ್ತ್ರದ ಮೆಚ್ಚನ್ನು ಸ್ಟಾಕ್‌ಹಾಮದ ಕ್ಯಾರೋಲಾಯನ್ ಸಂಸ್ಥೆಯವರೂ, ವಾಙ್ಮಯದ ಮೆಚ್ಚನ್ನೂ ಸ್ಟಾಕ್‌ಹಾಮದ ವಾಙ್ಮಯ ಸಂಸ್ಥೆಯವರೂ, ಕಡೆಯದನ್ನು ನಾರ್ವೇಸ್ಟಾರ್ಡಿಂಗದವರಿಂದ ನಿಯಮಿತರಾದ ಐದು ಪಂಚ ಜನರೂ ನಿರ್ಣಯಿಸಿಕೊಡಬೇಕು. **ಸ್ತ್ರೀಪುರುಷಭೇದವಿಲ್ಲದೆಯೂ ರಾಷ್ಟ್ರಭೇದವಿಲ್ಲದೆಯೂ ಯೋಗ್ಯ ಪುರುಷನಿಗೇ ಮೆಚ್ಚು ಸಲ್ಲಬೇಕೆಂದು ನನ್ನ ಹೃದಯದ ಹಂಬಲ"**

( ದೊಡ್ಡಕ್ಷರಗಳು ಮೂಲದಲ್ಲಿಯವಲ್ಲ ).

## ಕೆಲವು ನಿಯಮಗಳು

೧. ಮೆಚ್ಚುಗಳನ್ನು ಪ್ರತಿವರ್ಷವೂ ಕೊಡಬೇಕು.

೨. ಪುಸ್ತಕವು ಯಾವದೇ ಭಾಷೆಯದಿರಬಹುದು ಇಂಗ್ಲಿಷ ಜರ್ಮನ ಇಲ್ಲದೆ ಫ್ರೆಂಚ ಭಾಷೆಯಲ್ಲಿ ತರ್ಜುಮೆಯು ಸೂಚಿತವಾಗಬೇಕು. ಮೆಚ್ಚಿಗಾಗಿ ಬಂದ ಪುಸ್ತಕವು ಅಚ್ಚಾಗಿ ಪ್ರಕಟಿಸಲ್ಪಟ್ಟಿರಬೇಕು.

೩. ಯಾವ ಗ್ರಂಥಕಾರನೂ ತನ್ನ ಪುಸ್ತಕವನ್ನು ತಾನೇ ಸೂಚಿಸಲಿಕ್ಕಾಗದು. ಬೇರೊಬ್ಬ ವಿಶಿಷ್ಟವ್ಯಕ್ತಿಯಾಗಲಿ ವ್ಯಕ್ತಿಗಳಾಗಲಿ ಸೂಚಿಸಿ ಬರೆದು ಕಳಿಸಬೇಕು.

೪. ಮೆಚ್ಚು ಒಬ್ಬನಿಗೆಂದೇ ಅಲ್ಲ ಎರಡು ಇಲ್ಲವೆ ಎರಡಕ್ಕಿಂತ ಹೆಚ್ಚು ಜನರಿಗೆ ಕೂಡಿ ಕೊಡಲಿಕ್ಕೂ ಬರುವದು.

೫. ಒಂದು ವರ್ಷ ಮೆಚ್ಚಿಗೆ ತಕ್ಕವರು ಸಿಗದಿದ್ದರೆ ಅದನ್ನು ಮುಂದಿನ ವರ್ಷದತನಕ ಕಾಯ್ದಿಡಲಾಗುವದು. ಆ ಮೇಲೂ ಜನರು ಸಿಗದಿದ್ದರೆ ಮೂಲ ಹಣದಲ್ಲಿ ಅದನ್ನು ಕೂಡಿಸಿಸುತ್ತ ಬಡ್ಡಿಗೆ ಹಚ್ಚಬೇಕು.

೬. ಇಂಥವರಿಗೆ ಕೊಡುವದೆಂದು ಮಂಡಲದವರು ನಿಶ್ಚಯಿಸಿದರೆಂದರೆ ಯಾರು ವಿರೋಧಿಸಿದರೂ ಕೇಳಲಾಗುವದಿಲ್ಲ.

೭. ಮಂಡಲದಲ್ಲುಂಟಾದ ಮತಭೇದವನ್ನು ಎಂದೂ ಹೊರಗೆಡವಲಾಗದು.

೮. ಪ್ರತಿವರ್ಷ ಡಿಸೆಂಬರ ೧೦ (ಸಂಸ್ಥಾಪಕನ ಪುಣ್ಯದಿನ) ನೇ ದಿನ ಮೆಚ್ಚುಗಳನ್ನು ಪ್ರಕಟಿಸಲಾಗುವದು.

೯. ಮೆಚ್ಚಿಗೆ ತಕ್ಕವರಾದವರಿಗೆ ಅವರಿಗೊದಗುವ ಹಣವನ್ನೂ, ಯೋಗ್ಯತಾಪತ್ರವನ್ನೂ ಸುವರ್ಣಪದಕವನ್ನೂ ಕೊಡಲಾಗುವದು.

೧೦. ಮೆಚ್ಚು ಪಡೆದವರು ತಮ್ಮ ತಮ್ಮ ವಿಷಯದ ಬಗ್ಗೆ ಒಂದು ವ್ಯಾಖ್ಯಾನವನ್ನು ಸ್ಟಾಕಹಾಮದಲ್ಲಿ ಕೊಡಬೇಕು. ಬರುವದು ಅಸಾಧ್ಯವಿದ್ದರೆ ಬಿಡಬಹುದು. ಶಾಂತಿಯ ವ್ಯಾಖ್ಯಾನವು ಕ್ರಿಶ್ಚಾನಿಯಾ ಪಟ್ಟಣದಲ್ಲಿ ಆಗಬೇಕು.

ಇನ್ನು ೧೯೦೧ರಿಂದ ಇಲ್ಲಿಯವರೆಗೆ ಯಾರಾರಿಗೆ ಈ ಮೆಚ್ಚುಗಳು ಸಿಕ್ಕಿವೆಯೆಂಬದನ್ನು ನೋಡುವಾ. ೫ ವಿಷಯಗಳಿದ್ದರೂ ವಾಙ್ಮಯಪುರುಷರ ಬಗ್ಗೆಯೇ ಈಗ ನಾವಿಲ್ಲಿ ಬರೆಯುವದು. ಉಳಿದ ಪುರುಷರನ್ನು ಕುರಿತು ಮತ್ತೊಮ್ಮೆ ನೋಡೋಣಂತೆ. ಕೆಳಗೆ ಬರೆದ ಜನರಿಗೆ ಆ ಆ ವರ್ಷ ವಾಙ್ಮಯ ಪಾರಿತೋಷಕವು ಪ್ರಾಪ್ತವಾಗಿದೆ.

# ೧೯೦೧-೨೬ರ ವಾಙ್ಮಯ-ಪಾರಿತೋಷಿಕ-ಪುರುಷರು

| ಅಂಕಿ. | | ಹೆಸರು. | ಯಾವ ನಾಡಿನವರು ? | ಮೆಚ್ಚು ದೊರೆತ ವರ್ಷ |
|---|---|---|---|---|
| ೧ | ಮಿಸ್ಟರ್ | ಸುಲೀಪ್ರುಧೋವ್ | ಫ್ರಾನ್ಸ | ೧೯೦೧ |
| ೨ | ,, | ಥಿಓಡೋರ್ ಮಾಮ್ಸೇನ್ | ಜರ್ಮನಿ | ೧೯೦೨ |
| ೩ | ,, | ಬಾರ್ನ್‌ಸ್ಟೇರ್ನ್ ಬಾರ್ನಸನ್ | ನಾರ್ವೇ | ೧೯೦೩ |
| ೪ (ಅ) | ,, | ಫ್ರೆಡ್ರಿಕ್ ಮಿಸ್ಟ್ರೆಲ್ | ಪ್ರಾವೆನ್ಸಾಲ್ | ೧೯೦೪ |
| (ಆ) | ,, | ಜೋಸ್ ಎಶೆಗಾರಿ | ಸ್ಪೇನ್ | |
| ೫ | ,, | ಹೆನ್ರೀ ಸಿಎನ್‌ಕ್ವಿಜ್ | ಪೋಲಂಡ | ೧೯೦೫ |
| ೬ | ,, | ಕಾರ್ಡೂಚಿ | ಇತಾಲಿ | ೧೯೦೬ |
| ೭ | ,, | ರುಡ್‌ಯಾರ್ಡ್ ಕಿಪ್ಲಿಂಗ | ಇಂಗ್ಲಂಡ | ೧೯೦೭ |
| ೮ | ,, | ರುಡೋಲ್ಫ ಯೂಕೇನ್ | ಜರ್ಮನಿ | ೧೯೦೮ |
| ೯ | ,, | ಸೇಲ್ಮಾ ಲ್ಯಾಗರ್‌ಲೋಫ | ಸ್ವೀಡನ್ | ೧೯೦೯ |
| ೧೦ | ,, | ಪಾಲ ಹೆಸೇ | ಜರ್ಮನಿ | ೧೯೧೦ |
| ೧೧ | ,, | ಮಾರಿಶ್ ಮೇತರಲಿಂಕ | ಬೆಲ್ಜಮ್ | ೧೯೧೧ |
| ೧೨ | ,, | ಗೆರ್‌ಹಾರ್ಟ ಹೋಪ್ಪಮನ್ | ಜರ್ಮನಿ | ೧೯೧೨ |
| ೧೩ | ಶ್ರೀಯುತ | ರವೀಂದ್ರನಾಥ ಠಾಕೂರ | ಹಿಂದುಸ್ಥಾನ | ೧೯೧೩ |
| ೧೪ | | ( ಯಾರಿಗೂ ಕೊಡಲಿಲ್ಲ ) | | |
| ೧೫ | ಮಿಸ್ಟರ್ | ರೋಮೇನ್ ರೋಲಾ | ಫ್ರಾನ್ಸ | ೧೯೧೫ |
| ೧೬ | ,, | ವ್ಹಿವ್ಹಾನ್ ಹೆಸೆನ್‌ಸ್ಟಾನ್ | ಸ್ವೀಡನ್ | ೧೯೧೬ |
| ೧೭ (ಅ) | ,, | ಕಾರ್ಲ ಆ್ಯದೋಲ್ಫ ಝೆಲುಪ್ | ಡೆನ್ಮಾರ್ಕ್ | ೧೯೧೭ |
| (ಆ) | ,, | ಹೆನ್ರಿಕ್ ಪೊಂಥೋಪಿದನ್ | ,, | |
| ೧೮ | | ( ಯಾರಿಗೂ ಕೊಡಲಿಲ್ಲ ) | | |
| ೧೯ | ,, | ಕಾರ್ಲ ಸ್ಪಿಟ್ಲರ್ | ಸ್ವೀಡನ್ | ೧೯೧೯ |
| ೨೦ | ,, | ಹ್ಯಾಮ್ಸನ್ ಕುತ್ | ನಾರ್ವೇ | ೧೯೨೦ |
| ೨೧ | ,, | ಆ್ಯನೋಟೋಲ್ ಫ್ರಾನ್ಸ | ಫ್ರಾನ್ಸ | ೧೯೨೧ |
| ೨೨ | ಮಿಸೆಸ್ | ಸಿಗ್ರಿದ್ ಉಂದ್‌ಸೇತ್ | ನಾರ್ವೇ | ೧೯೨೨ |
| ೨೩ | ಮಿಸ್ಟರ್ | ಡಬ್ಲ್ಯು. ಬಿ. ಯೀಟ್ಸ | ಆಯರ್ಲಂಡ | ೧೯೨೩ |
| ೨೪ | ,, | ರೇಮಂಟ್. ಎಮ್. ವ್ಲಾಡಿಸಲಾ | ಪೋಲಂಡ | ೧೯೨೪ |
| ೨೫ | ,, | ಬೆರ್ನಾರ್ಡ್ ಶಾ | ಆಯರ್ಲಂಡ (ಇಂಗ್ಲಂಡ) | ೧೯೨೫ |
| ೨೬ | ,, | ಓಲ್ಯಾವ್ಹ ಡುನ್ | ನಾರ್ವೇ | ೧೯೨೬ |

## ಲಘುಪರಿಚಯು

೧. ಮಿ. ಸೂಲೀ ಪ್ರೊಥೋಮ್ (Mr. Sully Prodhomme) :— ಇವರು ಫ್ರಾನ್ಸಿನಲ್ಲಿ ೧೮೩೯ನೇ ಮಾರ್ಚ ೧೬ನೇ ದಿವಸ ಜನ್ಮಹೊಂದಿ, ೧೯೦೭ ಸಪ್ಟೆಂಬರ ೭ಕ್ಕೆ ಮೃತರಾದರು. ಇವರು ಕವಿಗಳೂ ಗ್ರಂಥಕಾರರೂ ಆಗಿದ್ದರು. ಇವರ ಗ್ರಂಥಗಳು ಇಂಗ್ಲೀಷದಲ್ಲಿ ತರ್ಜುಮೆಯಾಗಿಲ್ಲ.

( ಫ್ರೆಂಚ್ ಭಾಷೆಯುಲ್ಲಿದ್ದ ಮುಖ್ಯ ಗ್ರಂಥಗಳು:— )

1 Stances et Poems. 2 Les eprenves 3 Les Destins. 4 Vaines tendresses. 5 Justice. 6 Le Bonhens. 7 Que Saisje ? Examen de Conscience.

೨. ಮಿ. ಥಿಓಡೋರ್ ಮೂಮ್ಸೇನ್ (Mr. Theodor Mommsen):— ಇವರು ಜರ್ಮನಿಯಲ್ಲಿ ೧೮೧೭ನೇ ನವ್ಹೆಂಬರ ೩೦ಕ್ಕೆ ಜನ್ಮಹೊಂದಿ ೧೯೦೩ನೇ ನವ್ಹೆಂಬರ ೧ಕ್ಕೆ ಮೃತರಾದರು. 'ರೋಮನ್ ಪ್ರಜಾಸತ್ತಾತ್ಮಕ ಚರಿತ್ರೆ' ಎಂಬ ಗ್ರಂಥದ ಕುರಿತು ಬಹುಮಾನ ದೊರಿತಿದೆ. ರೋಮದೇಶದ ಬಗ್ಗೆ ಅನೇಕ ಗ್ರಂಥಗಳನ್ನು ಬರೆದಿರುವರು.

( ಜರ್ಮನ್ ಭಾಷೆಯುಲ್ಲಿಯ ಮುಖ್ಯ ಗ್ರಂಥಗಳು:— )

1 Rom. Geschichte ( 4 Baude ) 2 Geschichte des rom ( Munzweseus ). 3 Rom forschunger (2 volumes). 4 Rom Staatsrecht (3 vols). 5 Rom Strafrecht. 6 Reden. U. Anfestze. 7 Copus inscritionem Latinarum.

( ಇಂಗ್ಲಿಷದಲ್ಲಿ ಪರಿವರ್ತಿತ ಗ್ರಂಥಗಳು )

1. The History of the Roman Republic (Tr. by A. Freeman ).

2. Abridged Edition of the above (By. C. Brayans F. I. R. Hud ).

೩. ಮಿ. ಬಾರ್ನಸ್ತೇರ್ನ್ ಬಾರ್ನಸನ್ (Mr. Bjornstjerne Bjornson ):—ಇವರು ನಾರ್ವೇದೇಶದಲ್ಲಿ ೧೮೩೨ರಲ್ಲಿ ಹುಟ್ಟಿ ೧೯೧೦ರಲ್ಲಿ ತೀರಿಕೊಂಡರು. ಕವಿಗಳೂ ನಾಟಕಕಾರರೂ ಕತೆಗಾರರೂ ಆಗಿದ್ದರು.

( ಇಂಗ್ಲಿಷದಲ್ಲಿ ಪರಿವರ್ತಿತ ಮುಖ್ಯ ಗ್ರಂಥಗಳು )

(1) Plays ( With an introduction by Edwin Bjodkman ). (2) Pastor song over ævne ( Tr. by W. Wilson ). (3)Synnove Solba Khan (Tr. by Jullic Sutter). (4) Arne ( Tr. by Waller Low ). (5) A happy boy ( Tr. by Mrs. W. Archer ). (6) The Fisher Lass ( Tr. by Mrs. W. Archer ). (7) The Bridal March and other stories. (8) Magnhield. (9) Captain Mansana. (10) The Heritage of the Kurts. (11) In God's Way ( Tr. by E. Carmichael) (12) Absalmom's Hair and a painful Memory. (13) Mary ( Tr. by Mery Morison.

೪. ಮಿ. ಫ್ರೆಡ್ರಿಕ್ ಮಿಸ್ತ್ರೆಲ್ ಮತ್ತು ಜೋಸ್ ಎಕೆಗಾರೀ :—(Messrs Fredric Mistrel and Jose Echegary ), ೧೯೦೪ರಲ್ಲಿ ಇವರಿಬ್ಬರಿಗೂ ಕೂಡಿ ಬಹುಮಾನವು ಕೊಡಲ್ಪಟ್ಟಿತು. ಫ್ರೆಡ್ರಿಕ್ ಮಿಸ್ಟ್ರೆಲ್ ಇವರು ಫ್ರಾನ್ಸದೇಶದ ದಕ್ಷಿಣಕ್ಕಿರುವ ಪ್ರಾವೆನ್ಸಾಲ್ ಎಂಬ ಪ್ರಾಂತದಲ್ಲಿ ೧೮೩೦ನೇ ಸಪ್ಟೆಂಬರ ೭ಕ್ಕೆ ಜನಿಸಿದರು. ಪ್ರಾವೆನ್ಸಾಲ್ ಭಾಷೆಯು ಲಿಪಿಯಿಲ್ಲದ ಭಾಷೆ. ಈ ಭಾಷೆಯನ್ನು ಪುನರುಜ್ಜೀವಿಸಬೇಕೆಂಬುದೇ ಇವರ ಮನೀಷೆ, ಅನೇಕ ಗ್ರಂಥಗಳನ್ನು ಆ ಭಾಷೆಯಲ್ಲಿ ಬರೆದಿದ್ದಾರೆ. ಕವಿಗಳೂ ನಾಟಕಕಾರರೂ ಆಗಿದ್ದರು.

( ಫ್ರೆಂಚರಲ್ಲಿಯ ಮುಖ್ಯಗ್ರಂಥಗಳು )

(1) Œuores. (2) Calendau. (3) Nerto (4) La Poemo du Rtiow. (5) Lis iscdodor ( Poems). (6) Lareiue Jeanne ( Trgedy ).

ಜೋಸ್ ಎಕೆಗಾರಿಯುವರು :—೧೮೩೩ರಲ್ಲಿ ಸ್ಪೇನ್‌ದಲ್ಲಿ ಹುಟ್ಟಿದವರು. ಪ್ರಬುದ್ಧರಾದ ಮೇಲೆ ೧೮೫೪ರ ವರೆಗೆ

ತಮ್ಮ ಜನ್ಮಸ್ಥಾನವಾದ ಸ್ಪೇನದ ರಾಜಧಾನಿಯಾದ ಮ್ಯಾಡ್ರಿಡ್‌ಪಟ್ಟಣದ ವಿಶ್ವವಿದ್ಯಾಲಯದಲ್ಲಿ ವಾಙ್ಮಯದ ಪ್ರೊಫೆಸರರಾಗಿದ್ದರು. ೧೮೭೩-೭೪ ರಲ್ಲಿ ಶಿಕ್ಷಣ ಮತ್ತು ವ್ಯಾಪಾರ ಖಾತೆಗಳ ಮಂತ್ರಿಗಳಾಗಿದ್ದರು ೧೯೦೮ರಲ್ಲಿ ತಂಬಾಕದ ಕಂಪನಿಯ ಡೈರೆಕ್ಟರರೂ ಇದ್ದರು. ಪ್ರಸಿದ್ಧ ನಾಟಕ ಕರ್ತರು. ಸ್ಪೇನ ಭಾಷೆಯಲ್ಲಿ ಅನೇಕ ಶಾಸ್ತ್ರೀಯ ಗ್ರಂಥಗಳನ್ನೂ ಬರೆದಿದ್ದಾರೆ.

( ಸ್ಪೇನಭಾಷೆಯ ಮುಖ್ಯ ಗ್ರಂಥಗಳು )

(1) La esposadel Vengador. (2) El gran Galesto.

೬. **ಮಿ. ಹೆನ್ರಿ ಸಿಎನ್‌ಕ್ವಿಜ್ (Mr. Henry Sienkiewioz):—** ಪೋಲಂಡದಲ್ಲಿ ೧೮೪೬ರಲ್ಲಿ ಹುಟ್ಟಿದರು. ಪೋಲಿಸ್ ಭಾಷೆಯಲ್ಲಿ ಪ್ರಸಿದ್ಧ ಕಾದಂಬರೀ ಕರ್ತರು. ಅಮೇರಿಕಾ, ಆಫ್ರಿಕಾ ದೇಶಗಳಲ್ಲಿ ಸಂಚಾರಮಾಡಿ ... ವಾರ್ಸನ್, ಕ್ರ್ಯಾಶೋ ನಗರಗಳಲ್ಲಿ ಇರುತ್ತಿದ್ದರು. ...ರಲ್ಲಿ ಇವರಿಗೆ ದಲ್ಲಿ Fiction ದಲ್ಲಿ ಮೆಚ್ಚು ದೊರೆ...

( ಇಂಗ್ಲಿಷದಲ್ಲಿ ಪರಿವರ್ತಿತ ಗ್ರಂಥಗಳು )

In Vain ( Tr. by Jeremich cur. (2) With Fire and Sword. Deluge. (4) Pan-michael (5) Without Dogma (a novel Tr by Iza Voung). (6) Lillian Morris and other Stories. (7) Children of the soil (a novel by J. Curtam). (8) Quo Vodas ? a narrative of the time of Nero (Tr. by J. Curtam). (9) Hemia and other Stories. (10) Sielanka, a forest ficture and other Stories ( Tr. by J. C ). (11) In Monte Carlo (Tr. by count S. C, ae Soisson ). (12) Tales ( Tr. by Court. S. C. Le Soisson. (13) In the new Promised Land (Tr. by C. S. S.) (14) The Knight of the Cross ( an historical Romance of Poland and Germany) Tr. by J. C. (15) On the Field of Glory ( Tr. by Henry Britton. (16) Whirl-pools, a novel of Modern Poland.

ಇವರ ಚರಿತ್ರೆಯನ್ನು Chnielowski ಎಂಬವರು ೧೯೦೦ರಲ್ಲಿ ಬರೆದಿರುವರು.

೭. **ಸೈನರ್ ಕಾರ್ಡೂಚಿ Signor Carducci :—** ಇಟಾಲೀ ದೇಶದಲ್ಲಿ ೧೮೩೫ನೇ ಜುಲೈ ೨೭ಕ್ಕೆ ಹುಟ್ಟಿ ೧೯೦೭ನೇ ಫೆಬ್ರುವರಿ ೧೬ಕ್ಕೆ ತೀರಿಕೊಂಡರು. ಇಟಾಲೀ ಭಾಷೆಯಲ್ಲಿಯ ಪ್ರಸಿದ್ಧ ಕವಿಗಳು. ಬೊಲೊಗ್ನಾ ವಿಶ್ವವಿದ್ಯಾಲಯದಲ್ಲಿ ವಾಙ್ಮಯದ ಪ್ರೊಪೆಸರರಾಗಿದ್ದರು.

(ಇಟಾಲೀ ಭಾಷೆಯಲ್ಲಿ ಮುಖ್ಯ ಗ್ರಂಥಗಳು)

(1) Inno a Satana (1865). (2) Poesie (1871). (3) Nuovo Poesie (1881).

೮. **ಮಿ. ರುಡ್‌ಯಾರ್ಡ ಕಿಪ್ಲಿಂಗ** (Mr. Rudyard Kipling):— ಇಗ್ಲಂಡದೇಶದ ಪ್ರಸಿದ್ಧ ವರ್ತಮಾನ ಗ್ರಂಥಕಾರರು. ೧೮೬೫ರಲ್ಲಿ ಜನಿಸಿದರು.

( ಇಂಗ್ಲಿಷದಲ್ಲಿಯ ಮುಖ್ಯ ಗ್ರಂಥಗಳು )

(1) Plain Tales from the Hills. (2) Soldiers Three. (3) The Light that failed (4) Wee wilhi Winkee and other Stories. (5) Life's Handicap ( Being stories of mine own people). (6) Many Inventions (7) Jungle book. (8) The Second Jungle Book. (9) The day's work. (10) Captains Courageous. (11) Stalky & Co. (12) Kim (13) Just so. (stories for little children.) (14) Traffics and Discoveries. (15) Puck and Pook's Hilles. (16) Actions & Reactions. (17) Rewards and Fairies. (18) Departmental Deities. (19) In the Black and White. (20) Story of Gadsbys. (21) Under the Deodars. (22) The Phantom of Rickshaw. (23) The Barrack room

Ballads. (24) The Seven Seas. (25) From Sea to Sea. (26) The five Nations. (27) Songs from Books. (28) France at War. (29) The Harbour Watch. (30) Eyes of Asia. (31) Fringes on the Fleet. (32) Letters of Travel. (33) A diversity of Creatures. (34) The years between. (35) The Irish Guards. (36) Land and sea Tales. (37) In Collab with C. R. Flatcher.

೯. ಮಿ. ರೂಡೋಲ್ಫ ಯುಕೇನ್ (Mr. Rudolf Eucken) :—ಜರ್ಮನಿಯಲ್ಲಿ ೧೮೪೬ನೇ ಜಾನೇವರಿ ೫ಕ್ಕೆ ಜನಿಸಿದರು. ೧೮೭೪ರಲ್ಲಿ ಜೇನಾಸಿನ್ನದಲ್ಲಿ ಪ್ರೊಫೆಸರರಾಗಿದ್ದರು.

(ಜರ್ಮನ್ ಭಾಷೆಯಲ್ಲಿ ಮುಖ್ಯ ಗ್ರಂಥಗಳು)

(1) Geistige Strommugen der Gegenwart.

(2) Lebensanschammugen der Grosson Deuller.

(ಇಂಗ್ಲಿಷದಲ್ಲಿ ಪರಿವರ್ತಿತ ಗ್ರಂಥವು)

(1) The Meaning & Value of life (Tr. by Gibson L. J. & Gibson W. R. Boyee.)

೧೦. ಮಿ. ಸೆಲ್ಮಾ ಲ್ಯಾಗರಲೋಫ್ (Selma Lagerlof):— ಇವರು ಸ್ವೀಡನ್‌ದೇಶದಲ್ಲಿ ೧೮೫೮ರಲ್ಲಿ ಹುಟ್ಟಿದರು. ಪ್ರಸಿದ್ಧ ಸ್ವಿಸ್ ಗ್ರಂಥಕಾರರು.

(ಇಂಗ್ಲಿಷದಲ್ಲಿ ಪರಿವರ್ತಿತ ಮುಖ್ಯ ಗ್ರಂಥಗಳು)

1 The Story of Gosta Berling (Tr. by P. B. Flesh 2 The Miracles of Anti-Christ (Tr. by P. B. F.) 3 Invisible Links (Tr. by P. B. F.) 4 From a Swedish Homestead (Tr. by Jessie Brochuer) 5 Jeruslem (Tr. by J. Brochuer) 6 The Wonderful Adventures of Nils (Tr. by Valma Swanston Howard.) 7 The Girl from the Marsh Croft.

೧೧ ಮಿ. ಪಾಲ ಹೆಸೇ (*Paul Heyse*):—ಜರ್ಮನಿಯಲ್ಲಿ ಮಾರ್ಚ ೧೫ನೇ ೧೮೩೦ರಲ್ಲಿ ಜನಿಸಿದರು. ಪ್ರಸಿದ್ಧಕವಿಗಳು ; ಅನೇಕ ಕಥೆಕಾದಂಬರಿಗಳನ್ನೂ ಬರೆದಿರುವರು.

(ಇಂಗ್ಲಿಷದಲ್ಲಿ ಪರಿವರ್ತಿತ ಮುಖ್ಯ ಗ್ರಂಥಗಳು)

1 The Dead Lake and other tales (Tr. by Tauchnitz Leipzig) 2 The Children of the World, (a novel) 3 In Paradise 4 Tales from the German 5 La Marchesa, a story of the Riviera; and other tales (Tr. by John Phyllips) 6 Incurable (Tr. by Mrs. W. H. Eve).

೧೨ ಮಿ. ಮಾರಿಶ ಮೇತರಲಿಂಕ (*Maurice Maeterlink*):—೧೮೬೨ರಲ್ಲಿ ಜನ್ಮವಾಯಿತು. ಬೆಲ್ಜಮ ದೇಶದ ಫ್ರೆಂಚ ಗ್ರಂಥಕಾರರು, ಜಗತ್ತಿನಲ್ಲಿ ಈಗಿದ್ದ ಹೆಸರಾದ ಬಗೆವಳರು. ಕವಿಗಳು; ಅನುಭಾವಿಗಳು (Mystic), ನಾಟಕಕರ್ತರು.

(ಫ್ರೆಂಚ ಭಾಷೆಯಲ್ಲಿಯ ಮುಖ್ಯ ಗ್ರಂಥಗಳು)

1 Serreschaudes 2 La Princesse Maleine 3 Heinemann 4 Pelleas 5 Ruys Brack 6 Aglavaine & Selysette. 7 Barbe Bleue 8 Les sentiers dans ca Moutayne. 9 La Mort. 10 Le Temple ensveli. 11 Le Tresor des Humbles.

(ಇಂಗ್ಲಿಷದಲ್ಲಿ ಪರಿವರ್ತಿತ ಗ್ರಂಥಗಳು)

1 Wisdom & Destiny (Tr. by A. Sutro Allen) 2 The Life of the Bee. 3 The Buried Temple (Tr. by A. S. A.) 4 The Double G a r d e n. 5 Essays (Priests, Women, Families) Tr. by C. Crooks 6 Mary Magadalene. 7 News of Spring and other Nature Studies. (Tr. by Allex Teixcirade Matho. 8 Treasure of the Humble (Tr. A. S. A. with an introduc-

tion by B Walkley 9 The Blue Bird, (a fairy play in 5 acts) Tr. by A. T. M. 10 M o n n o Vanna ( Tr. by A. S. A. 11 The Princess Maline (a drama, Tr. by G. Hardy. 12 The Intruder, a drama in one act with an introduction by Hall Caine. 13 Life and flowers ( Tr. by A. T. M.) 14 The Massacre of the Innocent, Tr. by Rinder Edith Wingate. 12 Sister Beatrice & Ariane. 16 The Blur. 17 The Wrack of the Storm. 18 The Death of Tintagiles (play). 19 Betrothal. 20 The Burgomaster of Stilemonde.

**೧೩. ಮಿ. ಗೆರ್‌ಹಾರ್ಟ ಹೋಪ್ಟಮನ್** ( Gerhert Hauptman ):— ಜರ್ಮನಿಯಲ್ಲಿ ೧೮೬೨ನೇ ನವ್ಹೆಂಬರ ೧೫ಕ್ಕೆ ಜನಿಸಿದರು. ಪ್ರಸಿದ್ಧ ಕವಿಗಳು, ನಾಟಕ ಕರ್ತರು.

( ಇಂಗ್ಲಿಷದಲ್ಲಿ ಪರಿವರ್ತಿತ ಗ್ರಂಥಗಳು )

(1) Hannell cadream poem Tr. by w. Archur. (2) Rose Bernd Drama.

**೧೪. ಶ್ರೀ. ರವೀಂದ್ರನಾಥ ಠಾಕೂರರು:**—ಹಿಂದುಸ್ಥಾನದವರಿಗೆ ರವೀಂದ್ರನಾರೆಂದು ಹೇಳಬೇಕೇ ? ಈ ಭಾರತ ಪುತ್ರನು ವಂಗದೇಶದಲ್ಲಿ ೧೮೬೧ನೇ ಮೇ ೬ನೇದಿವಸ ಜನ್ಮ ಹೊಂದಿದನು. ಜಗತ್ತಿನ ಶಾಂತಿಯ ಉಪಾಸಕನು. ಇವನ ಶಾಂತಿನಿಕೇತನ, ವಿಶ್ವಭಾರತಿಗಳನ್ನು ಕೇಳದವರಾರು ? ಈ, ಋಷಿಯು—ಈ ತತ್ತ್ವಜ್ಞಾನಿಯು ಬರೆದ ' ಗೀತಾಂಜಲಿ ' ಯೆಂಬ ಭಾವಗೀತೆಗಳ ಪುಸ್ತಕಕ್ಕೆ ೧೯೧೩ರಲ್ಲಿ ಈ ಮೆಚ್ಚು ದೊರೆಯಿತು. ಬಂಗಭಾಷೆಯಲ್ಲಿ ಬರೆದುದಕ್ಕೇ ಮೆಚ್ಚುದೊರೆತಿದೆ. ಈತನ ಹೃದಯವನ್ನು ನೋಡುವರೆ ಬಂಗಾಲಿಯನ್ನು ಕಲಿಯದೆ ಗತ್ಯಂತರವಿಲ್ಲ. ಇಂಗ್ಲಿಷದಲ್ಲಿ ಪರಿವರ್ತಿತವಾಗದ ಗ್ರಂಥಗಳು ಬಂಗಾಲಿಯಲ್ಲಿ ಅನೇಕ ಇವೆ.

( ಬಂಗಾಲೀ ಭಾಷೆಯಲ್ಲಿಯ ಮುಖ್ಯ ಗ್ರಂಥಗಳು )

೧. ಗೀತಾಂಜಲಿ, ೨. ಗೀತಾಲಿ, ೩. ಗೀತಿಮಾಲ್ಯ, ೪. ಶಿಶು, ೫. ನೈವೇದ್ಯ, ೬. ಕೇಕಾ, ೭. ಚಿತ್ರಾ, ೮. ಪ್ರಭಾತ ಸಂಗೀತ, ೯. ರಿತುರಂಗ, (ಮೊದಲಾದ ಕಾವ್ಯಗಳು). ೧೦. ರಾಜಾ ಓರಾನೀ, ೧೧. ವಿಸರ್ಜನ, ೧೨. ಪ್ರಕೃತೀರ್ ಪ್ರತಿಶೋಧ, ೧೩. ಮುಕ್ತಧಾರಾ, ೧೪. ಡಾಕಘರ, ೧೫. ರಕ್ತಕರಬಿ, ೧೬ ಚಿತ್ರಾಂಗದಾ, ೧೭. ವಾಲ್ಮೀಕೀರ, ಪ್ರತಿಭಾ (ಮೊದಲಾದ ನಾಟಕಗಳು). ೧೮. ಗೋರಾ, ೧೯. ನೌಕಾಡೋಬಿ, ೨೦. ಘರೇ ಬಾಹಿರೇ, ೨೧. ರಾಜರ್ಷಿ (ಮೊದಲಾದ ಕಾದಂಬರಿಗಳು). ೨೨. ಸಾಹಿತ್ಯ, ೨೩. ಪ್ರಾಚೀನ ಸಾಹಿತ್ಯ, ೨೪. ಸ್ವದೇಶಿ, ೨೫. ಸಮಾಜ, ೨೬. ಛುಟೀರಪಡಾ, ೨೭. ಸಂಕಲನ, ೨೮. ಜೀವನಸ್ಮೃತಿ ( ಮೊದಲಾದ ಇನ್ನಿತರ ಗ್ರಂಥಗಳು ).

( ಇಂಗ್ಲಿಷದಲ್ಲಿ ಪರಿವರ್ತಿತ ಗ್ರಂಥಗಳು )

(1) Gitanjali. (2) Sadhana. (3) Personality. (4) Creative Unity. (5) Gardener (6) Nationalism. (7) Greater India. (8) Fruit-Gathering. (9) Crescent Moon (10) Stray Birds. (11) The king of the Dark Chamber (play). (12) Chitra, (a play). (13) Post office (play). (14) The Cycle of Spring (play). (15) Sacrifice & other plays. (16) Hungry Stones & other Stories. (17) Broken Ties & other Stories. (18) Mashi & other Stories. (19) Stories from Tagore. (20) My Reminiscences. (21) One hundred Pomes from Kabir. (22) Gora (Novel). (23) Wreck (Novel). (24) The Home & the World (Novel). (25) Lover's Gift & Crossing. (26) Glimpses of Bengal. (27) Letters from Abroad (to C. F. Andrews). (28) Red Olenders. (29) Lectures in China. (30) Lectures in Japan. (31) Thoughts & Relics. (32) Parrot's Training (with 8 drawings by Abanindranath Tagore & a cover-design by Nandalal Bose. (33) The centre of the Indian Culture.

( ಸಶೇಷ ).

—ಪ್ರಹ್ಲಾದ.

# ಬೊಕ್ಕಸದ ಅಧಿಕಾರ

ಲೇಖಕ:—ಶ್ರೀ. ಎಂ. ರಾಘವೇಂದ್ರರಾವ ಬಿ. ಎ., ಹರಪನಹಳ್ಳಿ.

ನಮ್ಮ ಹಿಂದೂದೇಶದ ರಾಜ್ಯಾಂಗವಿಧಾನದಲ್ಲಿ ಶಾಸನ ಮತ್ತು ಬೊಕ್ಕಸದ ಅಧಿಕಾರವೆಲ್ಲಿರುವುದೆಂದು ವಿಚಾರಿಸುವುದು ನಮ್ಮ ಮುಖ್ಯ ಕರ್ತೃವ್ಯವಾಗಿರುತ್ತದೆ. ಇವೆರಡನ್ನು ಪರಿಶೋಧಿಸದೇ ಇರುವದರಿಂದ, ನಮ್ಮಲ್ಲಿ ಕೆಲವರು ನವೀನ ಸುಧಾರಣೆಯಿಂದ ನಮಗೆ ಸ್ವರಾಜ್ಯವು ಕರತಲಾಮಲಕವಾಗಿರುವುದೆಂದು, ಕುಟಿಲ ರಾಜನೀತಿಯಲ್ಲಿ ನುರಿತ ಆಂಗ್ಲೇಯರ ಮಾತಿಗೆ ಮರುಳಾಗಿ, ಅವರಂತೆ ಸಸೇಮಿರಾ ಅನ್ನುತ್ತಾರೆ. ಸಯಿಮನ್ ಅಧ್ಯಕ್ಷತೆಯಲ್ಲಿ ಬಾದಶಾಹಿ ಆಲೋಚನಾಮಂಡಳಿ ಬಂದು ಹೋದಮೇಲೆ ಈ ಜನರ ಸಂಖ್ಯೆ ಕ್ಷೀಣಿಸುತ್ತಾ ಬಂದಿದೆ. ಆದರೂ ನಾವು ನಮ್ಮ ನೈಜಸ್ಥಿತಿಯನ್ನು ಚನ್ನಾಗಿ ಅರಿತವರಾಗಿ ಸ್ವರಾಜ್ಯಸಂಪಾದನೆಯ ಚಳವಳಿಯಲ್ಲಿ ಒಮ್ಮನಸ್ಸಿನಿಂದ ಸೇರುವದಕ್ಕಿಂತ ಹೆಚ್ಚಿನ ಕೆಲಸವು ಯಾವದೂ ಇಲ್ಲ.

ನಮ್ಮ ಸರಕಾರದವರು ಕಂದಾಯುವನ್ನು ಹೆಚ್ಚಿಸುತ್ತಾರೆ. ಅಲ್ಲದೆ ಅವರು ತಮಗೆ ತೀಳದಹಾಗೆ ವೆಚ್ಚಮಾಡುತ್ತಾರೆ. ಕಾಯಿದೆಮಂಡಳಿಯವರು ಸಹ ತಮ್ಮಲ್ಲಿ ಅಧಿಕಾರವಿರುವದೆಂದು ತೋರಿಸುತ್ತಾರೆ. ಯಾರಲ್ಲಿ ನಿಜವಾದ ಅಧಿಕಾರವಿರುವುದು? ಕಾಯಿದೆಮಂಡಳಿಯಲ್ಲಿ ಸಂಪೂರ್ಣ ಅಧಿಕಾರವಿದ್ದಲ್ಲಿ ನಮಗೆ ಸ್ವರಾಜ್ಯಪ್ರಾಪ್ತಿಯಾಗಿರುವುದೆಂದು ಹೇಳಲಿಕ್ಕೆ ಸಂಕೋಚವಿರುವುದಿಲ್ಲ. ಇದನ್ನು ಸ್ವಲ್ಪ ವಿಚಾರ ಮಾಡೋಣ.

Government of India Act Section 2 and 20 ಹೀಗೆ ಹೇಳುತ್ತವೆ.

" Properties revenues debts and other assets of the Government of India though vested in His Majesty are really to be dealt with by the Secretary of State-in-Council, in the name of His Majesty for the purposes of the Government of India "

**ಸಾರಾಂಶ** :— ಸರಕಾರದ ಆದಾಯ ಸಾಲ ವಗೈರೆ ಇಂಗ್ಲಂಡು ರಾಜನವು. ಆತನ ಹೆಸರಿಲೆ ರಾಜಪ್ರಧಾನ ತನ್ನ ಆಲೋಚನಾಮಂಡಳಿಯನ್ನು ಸೇರಿ ವೆಚ್ಚಮಾಡುವದಕ್ಕೆ ಅಧಿಕಾರವಿರುತ್ತದೆ.

ರಾಜಪ್ರಧಾನ (Secretary of State) ಇಂಗ್ಲಂಡು ದೇಶದ ಮಂತ್ರಿವರ್ಗದ ಪೈಕಿ ಒಬ್ಬನು. ಆದರೂ ಅವನಿಗೆ ತನ್ನ ಆಲೋಚನಾಮಂಡಲಿಯನ್ನು ಧಿಕ್ಕರಿಸಿ ಹಿಂದೂ ದೇಶದ ಆಡಳಿತದ ಬಗ್ಗೆ ಖರ್ಚು ಮಂಜೂರು ಮಾಡುವ ಸ್ವತಂತ್ರವಿಲ್ಲ. ಆದಕಾರಣ ಪ್ರಕೃತದಲ್ಲಿ ನಮ್ಮ ಸರಕಾರದವರು ತಮಗೆ ತಿಳಿದಂತೆ ಖರ್ಚು ಮಾಡದಲೆ ಸದರಿ ರಾಜಪ್ರಧಾನ, ಆತನ ಆಲೋಚನಾಸಭೆಯ ಪ್ರತಿನಿಧಿಗಳಾಗಿ ಕೆಲಸ ನೆರವೇರಿಸುತ್ತಾರೆ.

ಹಿಂದೂ ದೇಶದ ಸರಕಾರದವರಿಗೆ ಸ್ವತಂತ್ರವಿಲ್ಲವೆಂತಲೂ ಮೇಲೆ ಕಾಣಿಸಿದ ಅಧಿಕಾರಿಗಳ ಪ್ರತಿನಿಧಿಗಳಾಗಿ ಅವರ ಅಧಿಕಾರ ಚಲಾಯಿಸುತ್ತಾರೆಂತಲೂ Lord Morley's financial Despatch 1907,ನಲ್ಲಿ ವಿದಿತವಾಗುವದು

ಈ ಅಧಿಕಾರ ಮಾಂಟೆಗ್ಯು ಚೆಮ್ಸ್ಫರ್ಡ್ ಸುಧಾರಣೆಯಲ್ಲಿ ಎಷ್ಟು ಮಾತ್ರ ಬದಲಾವಣೆ ಆಗಿರುವದೋ ನೋಡೋಣ. ಸದರಿ ಕಾನೂನಿನ 67-A ಮತ್ತು 72-D ಶೆಕ್ಷನ್‌ಗಳ ಪ್ರಕಾರ ಕೇಂದ್ರ ಮತ್ತು ಪ್ರಾಂತಿಕ ಕಾಯಿದೆ ಸಭೆಗಳಿಗೆ ಫಲಾನಿ ವೆಚ್ಚಗಳನ್ನು ಮಾಡುವದಕ್ಕೆ ಅಧಿಕಾರ ಇರುತ್ತದೆ. ಆದರೆ ಹಿಂದೂ ದೇಶದ ಆಡಳಿತಬಗ್ಗೆ ಆಗುವ ವೆಚ್ಚದಲ್ಲಿ ¼ ಭಾಗ ಮಾತ್ರ ಇವರ ಅಧಿಕಾರಕ್ಕೆ ಒಳಪಟ್ಟಿರುತ್ತದೆ. ಉಳಿದ ¾ ಭಾಗ ನಾನ್‌ವೋಟಬಲ್ ಅನ್ನುತ್ತಾರೆ.

ಈ ಅಧಿಕಾರವು ಎಷ್ಟುಮಾತ್ರ ಫಲೋತ್ಪಾದಕವಾಗಿರುವದೆಂದು ವಿಚಾರಮಾಡೋಣ. ಈ ಕಾಯಿದೆ ಸಭೆಯವರು ಫಲಾನಿ ವೆಚ್ಚಕ್ಕೆ ಒಪ್ಪಿಗೆ ಕೊಡಬಹುದು, ಕೊಡದೆ ಇರಬಹುದು. ಅಂದಾಜಿನ ಖರ್ಚು ಆದಾಯದಪಟ್ಟಿ ಸರಕಾರದವರು ತಯಾರುಮಾಡುವರು, ಸದರಿ ಸರಕಾರದವರು ( Executive )

ಕಾಯಿದೆ ಸಭೆಗೆ ಜವಾಬ್ದಾರಿ ಅಲ್ಲ. ಆದ್ದರಿಂದ ಗವರ್ನರ್ ಜನರಲ್ ಆಗಲಿ ಗವರ್ನರ್ ಆಗಲಿ ಕಾಯಿದೆ ಸಭೆಯವರು ಒಪ್ಪಿಗೆ ಕೊಡದೆಹೋದ ಅಂಶಗಳನ್ನು ತಮ್ಮ ಸ್ವಂತ ಅಧಿಕಾರದಿಂದ ಮಂಜೂರು ಮಾಡಬಹುದು. ಇದರಿಂದ ನಮ್ಮ ಕಾಯಿದೆಮಂಡಳಿಯಲ್ಲಿ ಎಷ್ಟು ಅಧಿಕಾರವಿರುವದೋ ಚೆನ್ನಾಗಿ ತಿಳಿಯಿತು.

ಈ ರೀತಿ ಕಾಯಿದೆಯವರ ತೀರ್ಮಾನಗಳನ್ನು ಧಿಕ್ಕರಿಸಿದ್ದಕ್ಕೆ ಒಂದು ಉದಾಹರಣೆ ಸಾಕು. ಹಿಂದೂ ದೇಶದ ಸಮಾಚಾರ ಪತ್ರಿಕೆ ( Gazette of India ) ಮಾರ್ಚಿ 31ನೇ ತೇದಿ ಪ್ರಕಟನೆ.

| ನಂಬರು. | ಖಾತೆವಿವರ | ಕಮ್ಮಿಮಾಡಿದ ಮೊತ್ತ. |
|---|---|---|
| ೧ | ಕಸ್ಟಮ್ಸ್ (ಸುಂಕ) | ೧ |
| ೧೮ | ಎಗ್ಜಿಕ್ಯುಟಿವ್ ಕೌನ್ಸಿಲ್ | ೮೦,೯೯೯* |
| ೩೮ | ಸೈನ್ಯದಖಾತೆ | ೫,೭೦,೯೯೯* |
| ೪೮ | ಸೆಂಟ್ರಲ್‌ಬೋರ್ಡು ಆಫ್ ರೆವಿನ್ಯು | ೧೦ |
| ೭೧ | ಮಿಸಲೇನಿಯಸ್ | ೩,೪೦,೦೦೦* |
| | ,, | ೧೦೦ |
| | ,, | ೧೦೦ |
| ೭೪ | ನಾರ್ತ್‌ವೆಸ್ಟ ಫ್ರಾಂಟಿಯರ್ ಪ್ರಾಂತ | ೧೦೦ |
| ೮೪ | ಇಂಗ್ಲಂಡಿನಲ್ಲಿ ವೆಚ್ಚ | ೧೩,೪೪,೯೯೯* |

ಸದರಿ ಪ್ರಕಟನೆ ಈ ರೀತಿಯಿದೆ:— Of these the Governor-general in council has under section 67-A (7) of Government of India Act 1919 decided that the amounts marked with asterisk are essential to the disharge of his responsibilities the rest remain unaffected."

ನಮಗೆ ಶಾಸನ ಸಭೆಗೆ ಕೊಟ್ಟಿದ್ದರಿಂದ ಏನು ಪ್ರಯೋಜನ. ಇದರ ಪೈಕಿ ದೊಡ್ಡ ಖರ್ಚುಗಳನ್ನೆಲ್ಲ ಸ್ವಂತ ಅಧಿಕಾರದಿಂದ ಮಂಜೂರು ಮಾಡೋಣವಾಯಿತು. ಒಂದು ಕೈಲೆ ಅಧಿಕಾರ ಕೊಡುವದು ಇನ್ನೊಂದು ಕೈಲೆ ಬಲಾತ್ಕಾರದಿಂದ ಅದನ್ನೆ ತೆಗೆದುಕೊಳ್ಳುವದು. ಇದೇ ಈ ಸುಧಾರಣೆಯ ಮುಖ್ಯ ಕೆಲಸವಾಗಿರುತ್ತದೆ.

ಇಂಗ್ಲಂಡಿನಲ್ಲಿ ಇದೇ ರೀತಿ ಪ್ರಜಾವರ್ಗದವರು ಖರ್ಚುಗಳಿಗೆ ಒಪ್ಪಿಕೊಡದೆ ಹೋದಲ್ಲಿ ಏನಾಗುವದು. ಸರಕಾರದಲ್ಲಿ ನಂಬಿಕೆಯಿಲ್ಲವೆಂದು ವ್ಯಕ್ತವಾಗುತ್ತದೆ. ಪ್ರಾಗತಿಕ ಪಂಗಡದವರು ಸೈನ್ಯಖಾತೆಯ ಖರ್ಚು ಮಂಜೂರು ಮಾಡದ್ದರಿಂದ ಆ ಪಂಗಡದ ಸರಕಾರವು ರಾಜಿನಾಮೆ ಕೊಡಬೇಕಾಯಿತು. ಏಕೆಂದರೆ ಅಲ್ಲಿ ಸರಕಾರದವರು ಕಾಯಿದೆಮಂಡಳಿಗೆ ಜವಾಬ್ದಾರಿಯಿರುತ್ತಾರೆ. ನಮ್ಮಲ್ಲಿ ಹಾಗೆ ಇಲ್ಲ.

ಈ ದೇಶದಲ್ಲಿ ಖರ್ಚುಗಳಿಗೆ ಒಪ್ಪಿಗೆ ಕೊಡುವ ಅಧಿಕಾರ ನಮ್ಮ ನವೀನ ಸುಧಾರಣೆಯಲ್ಲಿ ಚೆನ್ನಾಗಿ ವಿವರಿಸಿಯಿಲ್ಲ. ಇಂಗ್ಲಂಡು ಮೊದಲಾದ ಪ್ರಜಾಪ್ರಭುತ್ವದ ದೇಶಗಳಲ್ಲಿದ್ದಂತೆ ಕಾಯದೆವಿಧಿಮೇರೆಗೆ ಅಪ್ರೋಪ್ರಿಯೇಶನ್ ಬಿಲ್ ಮೂಲಕ ತಂದ ಒಟ್ಟು ಖರ್ಚಿಗೆ ಒಪ್ಪಿಗೆ ಕೊಡುವ ಅಧಿಕಾರವು ನಮ್ಮಲ್ಲಿ ಇಲ್ಲ. ಮೇಲೆ ಕಾಣಿಸಿದ ಪ್ರಕಾರ ⅓ ಭಾಗ ಮಾತ್ರ ಕಾಯಿದೆ ಸಭೆಗೆ ಚರ್ಚಿಸುವದಕ್ಕೆ ಅಧಿಕಾರ ಉಂಟು. ಮಂತ್ರಿಗಳ ( ಪ್ರಾಂತಿಕ ಸರಕಾರಗಳಲ್ಲಿ ) ಸ್ವಾಧೀನದಲ್ಲಿದ್ದ ವಿಷಯಗಳನ್ನು ಬಿಟ್ಟು ಬೇರೆ ವಿಷಯಗಳಲ್ಲಿ ಮೇಲೆ ವಿವರಿಸಿದಂತೆ ಗವರ್ನರ್ ಪ್ರಜಾಪ್ರತಿನಿಧಿಗಳ ತೀರ್ಮಾನಗಳನ್ನು ತುಚ್ಛೀಕರಿಸಿ ಪುನಃ ಮಂಜೂರು ಮಾಡಬಹುದು.

ಮಂತ್ರಿಗಳ ಸ್ವಾಧೀನದಲ್ಲಿದ್ದ ವಿಷಯಗಳನ್ನು ಕುರಿತು ವಿಚಾರಿಸೋಣ. ಇವಕ್ಕೆ Transferred Subjects ಅನ್ನುತ್ತಾರೆ. ಈ ವಿಷಯಗಳಲ್ಲಿ ಪ್ರಜಾಪ್ರತಿನಿಧಿಗಳು ಒಪ್ಪಿಗೆ ಕೊಡದೆ ಹೋದರೆ ರಾಜಪ್ರಧಾನನಿಗೆ ಆತನ ಆಲೋಚನೆ ಮಂಡಳಿಯಲ್ಲಿ ಸದರಿ ವೆಚ್ಚವನ್ನು ಮಂಜೂರು ಮಾಡುವದಕ್ಕೆ ಅಧಿಕಾರ ಇರುತ್ತದೆ. ಈ ಅಧಿಕಾರಿಯು ತನ್ನ ಆಲೋಚನಾ ಸಭೆಯ ಒಪ್ಪಿಗೆಯಿಂದ ಹಿಂದೂ ದೇಶದ ಆಡಳಿತಕ್ಕೆ ಆಗುವ ವೆಚ್ಚವನ್ನು ಮಂಜೂರು ಮಾಡಬಹುದು. ನಮ್ಮ ಹಿಂದೂ ಕಾಯಿದೆಮಂಡಳಿಗಳು ಈ ಅಧಿಕಾರಿಯು ಪ್ರತಿನಿಧಿ ಪ್ರೇಷಣದಿಂದ ಹೊಸ ಕಂದಾಯಗಳನ್ನು ಹಾಕಿ ಆ ಮೊತ್ತವನ್ನು ಆಡಳಿತಬಗ್ಗೆ ಉಪಯೋಗಿಸುತ್ತಾರೆ. ಅವರಿಗೆ ಸ್ವಂತ ಅಧಿಕಾರವಿಲ್ಲ.

**ಸಾರಾಂಶ:**—ಇದುವರಿಗು ಇದ್ದ Secretary of state in Council ನ ಅಧಿಕಾರವು ೧೯೧೯ನೆ ಸಂವತ್ಸರದ ಸುಧಾರಣೆಯಿಂದ ಕಮ್ಮಿ ಆಗಿಲ್ಲ. ಆತನೇ ನಿರಂಕುಶ ಅಧಿಕಾರಿ. ಆತನು ಒಂದು ವೇಳೆ ಸಂಗ್ರಾಮಕ್ಕಾಗಿ ವೆಚ್ಚವನ್ನು ಮಂಜೂರು ಮಾಡಬಹುದು. ಹಿಂದೂ ದೇಶದ ಸರಕಾರವನ್ನಾಗಲಿ ತನ್ನ ಆಲೋಚನಾ ಸಭೆಯನ್ನಾಗಲಿ ಕೇಳುವ ಅವಶ್ಯಕತೆಯಿಲ್ಲ. ಹೀಗೆಂದು ಮಾರ್ಕ್ವಿಸ್ ಆಫ್ ಸಾಲಿಸ್‌ಬರಿ ಹೇಳಿರುತ್ತಾರೆ.

ಹೀಗಿದ್ದಲ್ಲಿ ನಮಗೆ ಬೊಕ್ಕಸದ ಅಧಿಕಾರವೆಲ್ಲಿಯದು! ಸ್ವರಾಜ್ಯವೆಲ್ಲಿಯದು ?

# ಜ್ಞಾನೇಶ್ವರಿ ಎಂಬ ಮರಾಠೀ ಗ್ರಂಥದ ಮಹತ್ವವು

ಲೇಖಕ:—ವಿಷ್ಣುದಾಸ

ಮಹಾರಾಷ್ಟ್ರ ದೇಶದಲ್ಲಿ ಅಥವಾ ಮರಾಠೀ ಭಾಷೆಯು ಪ್ರಚಾರವಿದ್ದಲ್ಲಿ ಶ್ರೀ ಜ್ಞಾನೇಶ್ವರ ಮಹಾರಾಜರ ಹೆಸರು (ದೊಡ್ಡ ದೊಡ್ಡ ಸಾಧುಸಂತರಿಗೆ ಈ ರೀತಿಯಾಗಿ ಮಹಾರಾಜ ರೆಂದು ಕರೆಯುವುದು ಮಹಾರಾಷ್ಟ್ರ ಪದ್ಧತಿ) ಪ್ರತಿಯೊಬ್ಬರ ಪರಿಚಯದ್ದಿದ್ದರೂ ಕರ್ಣಾಟಕ ಪ್ರಾಂತದಲ್ಲಿ ಅವರ ಬಗ್ಗೆ ಬೇಕಾದಷ್ಟು ಪರಿಚಯವಿಲ್ಲದಿದ್ದರೆ ಆಶ್ಚರ್ಯದ ಮಾತಲ್ಲ. ಇವರ ಬಗ್ಗೆ ಕನ್ನಡ ಗುರುಚರಿತ್ರದ ಕರ್ತರು ಹೀಗೆ ಉದ್ಗಾರ ತೆಗೆದಿರುವರು.

ಜ್ಞಾನಿಗಳು ಮೆಚ್ಚುವ ತೆರದೊಳ— ।
ಜ್ಞಾನಿಗಳು ತಲೆದೂಗುವಂದದಿ ।
ಸಾನುರಾಗದಿ ಗೀತೆಯನು ಪ್ರಾಕೃತ ಮನುಷ್ಯರಿಗೆ ॥
ಪಾನವನು ಮಾಡಿಸಿದ ವೇದವ ।
ಕೋಣಮುಖದಿಂದಲಿ ವದಿಸಿದ ಮ— ।
ಹಾನುಭಾವಶಿರೋಮಣಿ ಜ್ಞಾನೇಶ್ವರಗೆ ವಂದೇ ॥೧॥
ಹತ್ತು ಉಪನಿಷದಗಳು ವೇದವ ।
ಸತ್ವಸಾರವಿದೆಂದು ಬಹು ದ— ।
ರ್ಪೋಕ್ತಿಯಿಂದಲಿ ಮೆರೆಯುತಿದ್ದವು ಜಗದಿ ಜನರರಿಯೆ ॥
ಪೃಥ್ವಿಯಲಿ ತಿರಿತಿರಿಗಿ ಬಂದು ಪ— ।
ವಿತ್ರ ಜ್ಞಾನೋಬನನು ನೋಡಲು ।
ಅಸ್ತವಾಯಿತು ದರ್ಪಗುರುಚರಣದಲಿ ಲಯವಾಯ್ತು ॥೨॥

ಇವರು ಮಹಾರಾಷ್ಟ್ರದ ವಾಙ್ಮಯದಲ್ಲಿ ಆದಿಕವಿಯೆಂದು ಪ್ರಸಿದ್ಧಿ ಹೊಂದಿರುವರು. ಇವರು ಮಹಾರಾಷ್ಟ್ರದಲ್ಲಿ ಭಾಗವತ ಧರ್ಮದ ಆದ್ಯಪ್ರವರ್ತಕರು. ಇವರು ಹಾಕಿದ ತಳಹದಿಯ ಮೇಲೆಯೆ ಭಾಗವತಧರ್ಮದ ಅರ್ಥಾತ್ ಭಕ್ತಿಮಾರ್ಗದ ಭವ್ಯ ಕಟ್ಟೋಣವು ತಯಾರಾಗಿ ಅವರ ಮೇಲೆ ತುಕಾರಾಮ ಮಹಾರಾಜರು ಕಲಶವನ್ನಿಟ್ಟರು. ಮಹಾರಾಷ್ಟ್ರದಲ್ಲಿ ಭಕ್ತಿಮಾರ್ಗದ ಕೇಂದ್ರಸ್ಥಾನವಾದ ಪಂಢರಪುರದಲ್ಲಿ ಪಂಢರಪುರವನ್ನೆ ಭೂವೈಕುಂಠವಾಗಿ ಮಾಡಿದ ಶ್ರೀ ಪಾಂಡುರಂಗನ ಭಾಗವತ ಧರ್ಮಾನುವರ್ತಿಗಳು ಮಾಡುವ ಭಜನದಲ್ಲಿ 'ಜ್ಞಾನದೇವ ತುಕಾರಾಮ, ಜ್ಞಾನೋಬಾ ತುಕಾರಾಮ' ಎಂದು ಘೋಷಮಾಡುವುದನ್ನು ಕೇಳಿದರೆ ಯಾವ ಭಾವಿಕನ ಮನಸ್ಸಿನಲ್ಲಿ ಪರಮಾನಂದವು ಉಂಟಾಗಲಾರದು ?

ಶ್ರೀ ಜ್ಞಾನೇಶ್ವರ ಮಹಾರಾಜರು ತಮ್ಮ ಅಣ್ಣನಾದ ಶ್ರೀ ನಿವೃತ್ತಿ ಮಹಾರಾಜರನ್ನೇ ಗುರುವಮಾಡಿಕೊಂಡು ಅವರ ಸನ್ನಿಧಾನದಲ್ಲಿ ಶ್ರೀಮದ್ಭಗವದ್ಗೀತೆಯ ಮೇಲೆ ಬರೆದ ಟೀಕೆಯೇ ಜ್ಞಾನೇಶ್ವರಿ ಎಂಬ ಹೆಸರಿನಿಂದ ಪ್ರಸಿದ್ಧಿಗೆ ಬಂದಿರುತ್ತದೆ. ಅದರ ಮೂಲ ಹೆಸರು ಭಾವಾರ್ಥ ದೀಪಿಕೆ ಎಂದು ಇದ್ದರೂ ಸಂಕ್ಷಿಪ್ತ ಹೆಸರೇ ಅಂದರೆ ಜ್ಞಾನೇಶ್ವರಿ ಎಂಬ ಹೆಸರೇ ಪ್ರಚಾರಕ್ಕೆ ಬಂದಿರುತ್ತದೆ. ಭಾವಾರ್ಥದೀಪಿಕಾ ಅಂದರೆ ಶ್ರೀಕೃಷ್ಣ ಪರಮಾತ್ಮನ ಭಾವಾರ್ಥವನ್ನು ತಿಳಿಸುವ ಟೀಕೆಯು. ನಾಥ ಸಂಪ್ರದಾಯದಲ್ಲಿ ಅರ್ಥಾತ್ ಮಹಾರಾಷ್ಟ್ರರ ಭಾಗವತಧರ್ಮದಲ್ಲಿ ಈ ಗ್ರಂಥಕ್ಕೆ ಮೂಲಗೀತೆಗಿಂತಲೂ ಹೆಚ್ಚಿಗೆ ಮಹತ್ವವಿರುತ್ತದೆ. ಈ ಗ್ರಂಥದ ೯, ೧೨ ಮತ್ತು ೧೮ ಅಧ್ಯಾಯಗಳಂತೂ ಅನೇಕರಿಗೆ ಬಾಯಿಪಾಠವಿದ್ದು ಅವನ್ನು ನಿತ್ಯ ಪಾರಾಯಣ ಮಾಡುವ ಪರಿಪಾಠವೂ ಇರುತ್ತದೆ.

ಹೀಗೆ ಈ ಗ್ರಂಥಕ್ಕೆ ಮಹತ್ವವು ಯಾಕೆ ಬಂದಿರುವುದು ಎಂಬ ವಿಷಯವು ವಿಚಾರ ಮಾಡತಕ್ಕ ಪ್ರಶ್ನೆಯಾಗಿರುವುದು. ಮೊದಲೇ ಶ್ರೀಕೃಷ್ಣಪರಮಾತ್ಮನು ಹೇಳಿದ ಭಗವದ್ಗೀತೆಯು;

ಅರಳಿರುವ ತಾವರೆಯೆ ಭಾರತ ।
ಹರಿಯು ಪ್ರೇಮದಿ ಪಾರ್ಥಶಿಷ್ಯನಿ— ।
ಗರುಹಿರುವ ಗೀತಾರ್ಥಸಾರ ಪರಾಗವೆನಿಸುವುದು ॥
ವರಮುನೀಶ್ವರ ಬಾದರಾಯಣ ।
ಹರುಷದಿಂ ವೇದಗಳ ಮಂಥಿಸಿ ।
ಧರೆಗೆ ಭಗವದ್ಗೀತೆ ಕೊಟ್ಟನು ಸರಸನವನೀತ ।

ಅಂದ ಮೇಲೆ ಈ ಗ್ರಂಥವು ಇಡೀ ಜಗತ್ತಿನಲ್ಲಿ ಹಿಂದುಸ್ಥಾನದಲ್ಲಿ ಮಾತ್ರವಲ್ಲ, ಅಮೇರಿಕಾ, ಯುರೋಪ, ಜಪಾನ, ಚೀನಾ ಮೊದಲಾದ ಪರದೇಶಗಳಲ್ಲಿ ಪರಸಂಸ್ಕೃತಿಯುಳ್ಳವರಿಗೆ ಸಹ ಮಾನ್ಯವಿರುವುದೆಂದ ಮೇಲೆ—ಹಿಂದುಸ್ಥಾನದಲ್ಲಿ ಅರ್ಥಾತ್ ಹಿಂದುಧರ್ಮದ ಮೂಲ ಕೇಂದ್ರದಲ್ಲಿ ಅದನ್ನು ವೇದಕ್ಕಿಂತ ಹೆಚ್ಚಿನದೆಂದು ನೆನಸಿದರೆ ಅತಿಶಯೋಕ್ತಿಯಾಗ

ಲಾರದು. ವೇದಗಳಿಗೆ ವಿವಕ್ಷಿತ ಅಧಿಕಾರಿಗಳು ಬೇಕು. ವೇದದ ಸಾರವನ್ನೇ ಈ ಅನಧಿಕಾರಿಗಳಿಗೆ ಅಂದರೆ ಸ್ತ್ರೀಶೂದ್ರಾದಿ ಯರಿಗೆ ಬೋಧಿಸುವ ಹೇತುವಿನಿಂದಲೇ ಈ ಗ್ರಂಥವು ನಿರ್ಮಾಣವಾಯಿತೆಂದರೆ ಇದು ಲೋಕದಲ್ಲಿ ವೇದಕ್ಕಿಂತ ಹೆಚ್ಚಿನ ಮಾನ್ಯ ಗ್ರಂಥವೆಂದು ಹೇಳಲಿಕ್ಕೆ ಏನೂ ಅಡ್ಡಿ ತೋರುವುದಿಲ್ಲ. ಇಂಥ ಅಮೂಲ್ಯ ಗ್ರಂಥವು ಸಂಸ್ಕೃತ ಭಾಷೆಯಲ್ಲಿರುವುದು. ಅದರಲ್ಲಿ ೭೦೦ ಏಳುನೂರು ಶ್ಲೋಕಗಳು ಇರುವವು. ಅದನ್ನು ಪ್ರಾಕೃತದಲ್ಲಿ ಅಂದರೆ ಮರಾಠಿಯಲ್ಲಿ ಶ್ರೀ ಜ್ಞಾನೇಶ್ವರ ಮಹಾರಾಜರು ಸುಮಾರು ೯೦೦೦ ಓವಿಗಳೆಂಬ ಮರಾಠಿ ವೃತ್ತಗಳಲ್ಲಿ ವಿಸ್ತಾರಮಾಡಿ ವಿವರಿಸಿರುತ್ತಾರೆ. ಅಂದ ಮೇಲೆ ಅದರ ವಿಸ್ತಾರವು ಸಹಜವಾಗಿ ಲಕ್ಷದಲ್ಲಿ ಬರುವಂತೆ ಅದೆ. ಇದಲ್ಲದೆ, ಇದರಲ್ಲಿಯು ಉಪಮೆಗಳೂ ದೃಷ್ಟಾಂತಗಳೂ ಅತ್ಯಂತ ಸರಸವಾಗಿರುವುದರಿಂದ ಅವು ಮನಸ್ಸಿಗೆ ಬಹಳೇ ಆಲ್ಹಾದವನ್ನು ಕೊಡುತ್ತವೆ. ಗೀತೆಯಂಥ ಒಕ್ಕಟ್ಟಾದ ತತ್ವ ಜ್ಞಾನದ ಗ್ರಂಥವನ್ನು ಪ್ರಾಕೃತದಲ್ಲಿ ಇಷ್ಟು ಕಾವ್ಯಮಯವಾಗಿ ವರ್ಣಿಸಿದ ಈ ಮಾದರಿಯ ಗ್ರಂಥವು ಯಾವ ಭಾಷೆ ಯಲ್ಲಿಯೂ ಇರುವುದಿಲ್ಲವೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು.

ಗೀತೆಯು ಹೇಗೆ ಹುಟ್ಟಿತೆಂಬುದು ಎಲ್ಲರಿಗೂ ಗೊತ್ತಿದೆ. ಭಾರತದ ಯುದ್ಧದಲ್ಲಿ ಕುರುಕ್ಷೇತ್ರದಲ್ಲಿ ಒಂದು ಕಡೆಗೆ ದುರ್ಯೋಧನಾದಿಗಳ ೧೧ ಅಕ್ಷೋಹಿಣಿ ಸೈನ್ಯ ಇನ್ನೊಂದು ಕಡೆಯಲ್ಲಿ ಪಾಂಡವರ ೭ ಅಕ್ಷೋಹಿಣಿ ಸೈನ್ಯ ಇವು ಯುದ್ಧಕ್ಕೆ ಕೂಡಿದಾಗ ಪಾಂಡವರ ಕಡೆಯು ಅರ್ಜುನನಿಗೆ ವಿಷಾದ ಉತ್ಪನ್ನ ಉಂಟಾಗಿ ದುರ್ಯೋಧನಾದಿ ಬಂಧುಗಳನ್ನೂ ಭೀಷ್ಮ ದ್ರೋಣಾದಿಗಳಾದ ಗುರುಹಿರಿಯರನ್ನೂ ಯುದ್ಧದಲ್ಲಿ ಕೊಲ್ಲಲಾರೆ. ಇದಕ್ಕಿಂತ ವನವಾಸವೇ ಲೇಸೆಂದು ಹೇಳಿ ಅರ್ಜುನನು ಸುಮ್ಮನಾದನು. ಆ ಸಂದರ್ಭದಲ್ಲಿ ಅರ್ಜುನನ ಸಾರಥಿಯಾದ ಶ್ರೀಕೃಷ್ಣಪರಮಾತ್ಮನು ತತ್ತ್ವಸಾರವನ್ನು ಬೋಧಿಸಿ ಅರ್ಜುನನಿಗೆ ಹುರಿದುಂಬಿಸಿ ಯುದ್ಧ ಮಾಡಿಸಿದನು. ಮತ್ತು ಶತ್ರುಸಂಹಾರವನ್ನು ಮಾಡಿಸಿದನು. ಈ ತತ್ತ್ವ ಸಾರ ಬೋಧೆಯೇ ಶ್ರೀಮದ್ಭಗವದ್ಗೀತೆಯು. ಇದನ್ನು ಹೇಳುವ ಪ್ರಸಂಗವು ದುರ್ಧರವು. ವಿಸ್ತಾರವಾಗಿ ಹೇಳಲಿಕ್ಕೆ ಅಯೋಗ್ಯವು ಅಂದ ಮೇಲೆ ಈ ಬೋಧೆಯನ್ನು ಸಂಕ್ಷೇಪವಾಗಿಯೇ ಹೇಳಬೇಕಾಯಿತು. ಶ್ರೀಕೃಷ್ಣನಂಥ ಗುರುವು ಅರ್ಜುನನಂಥ ಶಿಷ್ಯನು, ಅಂದಮೇಲೆ ಸಂಕ್ಷೇಪದಿಂದ ಹೇಳಿದರೂ ಸಾಗುವ ಹಾಗಿತ್ತು. ಅದರ ಪರಿಣಾಮವೂ ಆಯಿತು. ಆಗ ಯುದ್ಧ ಮಾಡಲಾರೆ ಎಂದು ಹೇಳುವವನ ಕೈಯಿಂದ ಯುದ್ಧ ಮಾಡಿಸಿಯೇ ಬಿಟ್ಟಿತು. ಅಂಥ ಗೂಢವಾದ ವೇದಾಂತ ತತ್ತ್ವಗಳು ಅರ್ಜುನನಿಗೆ ತಿಳಿದವು. ಅಂದರೂ ಅದರ ತಿರುಳು ಈಗಿನ ಕಲಿಯುಗದ ಅಲ್ಪಮತಿಗಳಿಗೆ ದುರ್ಬೋಧವೆಂದು ತಿಳಿದು ಶ್ರೀಕೃಷ್ಣಪರಮಾತ್ಮನು ಪುನ ಅವತಾರವೆತ್ತಿ ಶ್ರೀ ಜ್ಞಾನೇಶ್ವರ ಮಹಾರಾಜರ ರೂಪದಿಂದ ಅದನ್ನು ವಿಶದ ಪಡಿಸಿ ಲೋಕೋದ್ಧಾರವನ್ನು ಮಾಡಿದನು. ಅಂದ ಮೇಲೆ ಶ್ರೀಜ್ಞಾನೇಶ್ವರ ಮಹಾರಾಜರು ಅಂದರೆ ಶ್ರೀಕೃಷ್ಣ ಸ್ವರೂಪರೇ ಇದ್ದು ತಮ್ಮ ಭಾವಾರ್ಥ ದೀಪಿಕೆಯಲ್ಲಿ ಶ್ರೀಕೃಷ್ಣನ ಭಾವಾರ್ಥವನ್ನೇ ವಿಶದ ಪಡಿಸಿ ಲೋಕೋಪಕಾರವನ್ನು ಮಾಡಿದರು. ಈ ಕಾರಣದಿಂದಲೇ ಈ ಜ್ಞಾನೇಶ್ವರಿ ಕಾವ್ಯಕ್ಕೆ ಅಷ್ಟು ಮಹತ್ವ ಬಂದಿರುತ್ತದೆ.

ಈ ಟೀಕೆಯನ್ನು ಜ್ಞಾನೇಶ್ವರ ಮಹಾರಾಜರು ಮರಾಠಿಯಲ್ಲಿ ಓವಿಬದ್ಧ ಕಾವ್ಯದಲ್ಲಿ ಬರೆದಿರುವರು. ಇವರಂಥ ಪ್ರಾಸಾದಿಕ ಕವಿಗಳು ಮಹಾರಾಷ್ಟ್ರ ವಾಙ್ಮಯದಲ್ಲಿ ಹಿಂದೆ ಆಗಿಲ್ಲ, ಮುಂದೆ ಆಗಲಿಕ್ಕಿಲ್ಲ ಎಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಇವರ ಭಾಷಾಶೈಲಿ, ವಿಚಾರಸರಣಿ, ಕಾವ್ಯಕಲ್ಪನೆ ಮುಂತಾದ ವಿಷಯಗಳನ್ನು ಶಬ್ದದಿಂದ ವಿಸ್ತರಿಸಲಿಕ್ಕೆ ಅಸಾಧ್ಯವೇ. ಸಕ್ಕರೆಯು ಸವಿ ಇರುತ್ತದೆಂದು ಎಷ್ಟು ಹೇಳಿದರೂ ಅದನ್ನು ನಾಲಿಗೆಯ ಮೇಲೆ ಇಟ್ಟು ರುಚಿ ನೋಡಬೇಕಲ್ಲದೆ ಆದರೆ ಕಲ್ಪನೆ, ಶಬ್ದದಿಂದ ಬರುವದು ಅಸಾಧ್ಯ ಮಾತು ಹಾಗೆಯೇ ಜ್ಞಾನೇಶ್ವರಿಯ ಮಹತ್ವವೂ ಕಾವ್ಯದ ಪ್ರಸಾದವೂ ಅದನ್ನು ಓದಿ ನೋಡದೆ ಲೇಖಣಿಯಿಂದ ಬರೆದ ಲೇಖನದಿಂದ ವ್ಯಕ್ತವಾಗಲಾರದು. ಅವರು ಸ್ವತಃ ತಮ್ಮ ಗ್ರಂಥದಲ್ಲಿ ಬರೆದಿರುವುದೇನೆಂದರೆ "ಶ್ರೀಗುರುಮಹಾರಾಜರ ಕೃಪೆಯಿಂದ ಪ್ರಾಕೃತದಲ್ಲಿ ಇದ್ದು ಇದು ಸುಲಭ ಮತ್ತು ಸರಸ ಕಾವ್ಯವಾಯಿತು. ಸ್ವತಃ ಗೀತೆಯೇ ಹಾಡಲಿಕ್ಕೆ ಇಚ್ಛಿಸಿದರೆ ಈ ಪ್ರಾಕೃತ ಓವಿಗಳನ್ನು ಹಾಡಿಕೊಂಡು ಕೂಡಬೇಕು. ಇಂಥ ಯೋಗ್ಯತೆಯು ನನ್ನ ಗ್ರಂಥಕ್ಕೆ ಬಂದಿರುತ್ತದೆ ಅದನ್ನು ಭಾಷಾಂತರ ಮಾಡುವಾಗ ಭಾಷಾಂತರ ಕರ್ತರು ಹೀಗೆ ಕನ್ನಡಿಸುತ್ತಾರೆ.

" ಗೀತೆ ಹಾಡುವ ಕಾವ್ಯವಾಯಿತು "

ಇದರಲ್ಲಿಯು ಎರಡು ಅರ್ಥಗಳನ್ನು ವಾಚಕರೇ ಮಾಡಿ ನೋಡಲಿ.

ಈ ಗ್ರಂಥವು ಇಷ್ಟು ಪ್ರಾಸಾದಿಕವಾಗಿದ್ದರೂ, ಅದು ಹಳೆ ಮರಾಟಿಯಲ್ಲಿ ಬರೆಯಲ್ಪಟ್ಟದ್ದರಿಂದ ಮರಾಟೆ ಮಾತೃಭಾಷೆ ಇದ್ದವರಿಗೆ ಸಹ ಬಹಳೇ ದುರ್ಬೋಧವಾಗಿಯದೆ; ಅಂದ ಮೇಲೆ ಕನ್ನಡಿಗರಿಗೆ ಅಥವಾ ಎರಡನೇ ಮಾತೃಭಾಷೆ ಉಳ್ಳವರಿಗೆ ಅದನ್ನು ತಿಳಕೊಳ್ಳುವುದು ಅಸಾಧ್ಯವೇ. ಇಂಥ ಪಾಸಾದಿಕ ಗ್ರಂಥವು ಕನ್ನಡಿಗರಿಗೆ ಅವಗತವಾಗಬೇಕೆಂದು ಶ್ರೀ॥ ರಾಘವೇಂದ್ರ ಸುಬ್ಬರಾವ್ ಮೂಡಕಟ್ಟಿ ಬಿ. ಎ., ಮಾಮಲೆದಾರ, ಖಾನಾಪುರ ಇವರು ಸರಸವಾಗಿಯೂ ಸರಳವಾಗಿಯೂ ಕನ್ನಡ ಭಾಮಿನಿ ಷಟ್ಪದಿಯಲ್ಲಿ ಕಾವ್ಯಾತ್ಮಕವಾಗಿ ಪರಿವರ್ತಿಸಿರುವರು.

ಈ ಗ್ರಂಥವನ್ನು ಜ್ಞಾನೇಶ್ವರ ಮಹಾರಾಜರು ನೇವಾಸೆ ಎಂಬ ಊರಲ್ಲಿ ಶಾಲಿವಾಹನ ಶಕ ೧೨೧೨ ಅಂದರೆ ತಮ್ಮ ೧೫ನೇ ವರ್ಷದ ಪ್ರಾಯದಲ್ಲಿ ಬರೆದರು. ಇವರ ಜನ್ಮ ಶಾಲಿವಾಹನ ಶಕ ೧೧೯೭ನೇ ಯುವನಾಮ ಸಂವತ್ಸರ ಶ್ರಾವಣ ಮಾಸ ಕೃಷ್ಣಪಕ್ಷ ಅಷ್ಟಮ್ಯಾಂತಿಥಿ ಮಧ್ಯರಾತ್ರಿ. ಶ್ರೀಕೃಷ್ಣಪರಮಾತ್ಮನ ಜನ್ಮವೇಳಕ್ಕನೇ ಜನ್ಮಕ್ಕೆ ಬಂದು ಇಂಥ ಪ್ರಚಂಡ ಮತ್ತು ಅಪ್ರತಿಮ ಗ್ರಂಥವನ್ನು ೧೫ ವರ್ಷ ಪ್ರಾಯದಲ್ಲಿ ಬರೆದರು. ಅಂದಮೇಲೆ ಇದು ಮಾನವಿಕೃತಿಯೆಂದು ಹೇಳಬಹುದೇ ? ಈಗ ಶಾಲಿವಾಹನ ಶಕ ೧೮೫೦ ಇರುವದು ಅಂದರೆ ಈ ಗ್ರಂಥವು ಆಗಿ ೧೮೫೦–೧೨೧೨–೬೩೮ ಅಂದರೆ ಸುಮಾರು ೬½ ಶತಮಾನಗಳು ಆಗಿಹೋದರೂ ಆ ಗ್ರಂಥದ ಮಹತ್ತ್ವವು ಕಡಿಮೆಯಾಗದೆ ದಿನೇ ದಿನೇ ವರ್ಧಿಸುತ್ತದೆ. ಇದೇ ಪ್ರಾಸಾದಿಕ ಗ್ರಂಥದ ಲಕ್ಷಣವು.

ಜ್ಞಾನೇಶ್ವರ ಮಹಾರಾಜರು ಭಾಗವತ ಧರ್ಮದ ಆದ್ಯ ಪ್ರವರ್ತಕರೆಂದು ಮೇಲೆ ಹೇಳಿದ್ದರೂ, ನಿಜವಾಗಿ ಈ ಭಕ್ತಿ ಪಂಥವು ಭಗವದ್ಭಕ್ತ ಪುಂಡರೀಕನ ಕಾಲದಿಂದ ಇತ್ತೆಂದು ಹೇಳಲಿಕ್ಕೆ ಅಡ್ಡಿ ಇಲ್ಲ. ಪುಂಡರೀಕನ ಕಾಲವು ಜ್ಞಾನೇಶ್ವರ ಮಹಾರಾಜರ ಹಿಂದೆ ಎಷ್ಟು ವರ್ಷ ಇತ್ತೆಂಬುದನ್ನು ನಿಶ್ಚಿತ ಹೇಳಲಿಕ್ಕೆ ಬರುವುದಿಲ್ಲ. ಆನರೂ ಪಂಢರಪುರವು ಬಹಳೆ ಪುರಾತನ ಕಾಲದಿಂದ ಮಹಾಕ್ಷೇತ್ರದಲ್ಲಿ ಗಣನೆಯಾಗುತ್ತಿತ್ತು. ಇದಕ್ಕೆ "ಶ್ರೀಮದ್ದಕ್ಷಿಣದ್ವಾರಾವತೀ" ಎಂತ ಪದವಿ ಕೊಡುವಂಥ ಭಾವಿಕ ಭಕ್ತಮಂಡಳಿಯು ಶಾಲಿವಾಹನ ಶಕ ೧೧೯೫–೧೧೯೯ ಇದರ ನಡುವಿನ ಕಾಲದಲ್ಲಿ ಆದರು. ಶ್ರೀಪಾಂಡುರಂಗ ದೇವರ ಪೂಜೆ ಅರ್ಚೆಗಳ ಪ್ರಕಾರವನ್ನು ಹೆಚ್ಚಿನ ಪ್ರಮಾಣದಲ್ಲಿ ಬೆಳೆಸಿದರು. ಇದಕ್ಕೆ ತತ್ಕಾಲೀನ ರಾಜನಾದ ರಾಮದೇವರಾಯನೂ ಅವನ ಮಂತ್ರಿಯಾದ ವಿದ್ವದ್ವರ್ಯ ಹೇಮಾಡಪಂತನೂ ಸಹಾಯಭೂತರಾದರು. ಇದರನಂತರ ಮಹಾರಾಷ್ಟ್ರದಲ್ಲಿ ಅನೇಕ ಪ್ರಕಾರದ ರಾಜಕೀಯ ಕ್ರಾಂತಿಗಳಾದರೂ ಅದರ ಪರಿಣಾಮವು ಪಂಢರಪುರ ಕ್ಷೇತ್ರದ ಮೇಲಾಗಲಿ ಶ್ರೀ ಪಾಂಡುರಂಗನ ಮೇಲಾಗಲಿ ಆಗಲಿಲ್ಲವೆಂದು ಹೇಳಬಹುದು. ನಾಮಶೇಷವಾಗಲಾರಂಭಿಸಿದ ಭಾಗವತ ಧರ್ಮದಸ್ಥಾಪನೆ ಮಾಡುವದಕ್ಕೋಸ್ಕರ ಭಕ್ತರಮೇಲಿನ ಉತ್ಕೃಷ್ಟ ಪ್ರೇಮದಿಂದ ಕರಗಿ ಶ್ರೀಕೃಷ್ಣಪರಮಾತ್ಮನು ಜ್ಞಾನದೇವರ ರೂಪದಲ್ಲಿ ಪ್ರಕಟನಾದನು. ತನ್ನ ಪುರಾತನ ಭಕ್ತರಿಗೆ ಹೊಸ ಹೆಸರು ಕೊಟ್ಟು ಅವತಾರವಮಾಡಿಸಿದನು. ಭಕ್ತರೇ ತತ್ಕಾಲಿನ ಸಾಧುಸಂತರ ಸಮುದಾಯವು. ಚಾಂಗದೇವ, ಜನಾಬಾಯಿ, ಕೂರ್ಮದಾಸ, ಜನಮಿತ್ರ, ವಿಸೋಬಾ ಖೇಚರ, ನಾಮದೇವ, ಗೋರಾಕುಂಭಾರ; ಸಾವಂತಾಮಾಳಾ ನರಹರಿ ಸೋನಾರ, ಬಂಕಾಮಹಾರ ಚೋಖಾಮೇಳಾ ಇವರೇ ಸಮಕಾಲೀನ ಭಕ್ತಸಂತರು. ಭಾಗವತ ಧರ್ಮದ ಅಥವಾ ಭಕ್ತಿಮಾರ್ಗದ ಶಾಟಿಯನ್ನು ಯಶೋಧ್ವಜ ಮಾಡಿದರು, ಪಂಢರಪುರವೇ ಭಕ್ತಿವೃಂದದ ಕೇಂದ್ರಸ್ಥಾನವಾಯಿತು. ಜ್ಞಾನೇಶ್ವರ ಮಹಾರಾಜನು ಕೋಣನ ಬಾಯಿಂದ ವೇದ ನುಡಿಸಿದರು. ಚಾಂಗದೇವನ ಗರ್ವಹರಣ ಮಾಡುವುದಕ್ಕೋಸ್ಕರ ಜಡ ಗೋಡೆಯನ್ನು ನಡಿಸಿದರು. ಸ್ವರ್ಗದ ಪಿತೃಗಳನ್ನು ಆಮಂತ್ರಣ ಮಾಡಿ ಶ್ರಾದ್ಧದ ಭೋಜನಕ್ಕೆ ತರಿಸಿದರು. ಇಂಥ ಅನೇಕ ಅಮಾನುಷ ಕೃತಿಗಳಿಂದ ಪರಮೇಶ್ವರನ ಅವತಾರವೆಂದು ಜಗಕ್ಕೆ ತೋರಿಸಿ ಜ್ಞಾನೇಶ್ವರಿ, ಅಮೃತಾನುಭವ ಮುಂತಾದ ಗ್ರಂಥಗಳನ್ನು ಪ್ರಾಕೃತದಲ್ಲಿ ಬರೆದು ಸಾಮಾನ್ಯ ಜನರಿಗೆ ಮೋಕ್ಷ ಸಾಧನವನ್ನು ಸುಲಭವಾಗಿ ಮಾಡಿದರು.

ಸಾಮಾನ್ಯ ಜನರಿಗೋಸ್ಕರ ಮಾಡಿದ ಈ ಮಹತ್ಕಾರ್ಯದಿಂದಲೇ ಜ್ಞಾನೇಶ್ವರ ಮಹಾರಾಜರ ಹೆಸರು ಚಿರಸ್ಮರಣೀಯವಾಗಿದೆ. ಮಹಾರಾಷ್ಟ್ರದ ವಾಙ್ಮಯದಲ್ಲಿ ಇವರೇ ಆದಿಕವಿಯೆಂದು ಹೇಳಬಹುದು. ಜ್ಞಾನೇಶ್ವರ ಮಹಾರಾಜರಿಗಿಂತ ಹಿಂದೆ ಬ್ರಾಹ್ಮಣರಲ್ಲಿ ಒಂದು ವಿಲಕ್ಷಣ ಕಲ್ಪನೆ ಇತ್ತು. ದೇವರ ಸ್ತೋತ್ರ ಮಾಡಬೇಕಾದರೆ ಸಂಸ್ಕೃತ ಭಾಷೆಯಲ್ಲಿಯೇ ಮಾಡಬೇಕು. ಅದನ್ನು ವೈದಿಕ ಬ್ರಾಹ್ಮಣರ

ಮುಖಾಂತರವೇ ಮಾಡಬೇಕು. ದೇವರಿಗೆ ಮಡಿಯಲ್ಲಿಯೇ ಪೂಜೆಯನ್ನು ವೇದೋಕ್ತ ಮಂತ್ರದಲ್ಲಿ ಮಾಡಬೇಕು. ಮುಂತಾದ ಕಲ್ಪನೆಗಳು ಪ್ರಬಲವಾಗಿದ್ದವು. ಅವನ್ನು ಜ್ಞಾನೇಶ್ವರ ಮಹಾರಾಜರು ಮುರಿದು ಪ್ರಾಕೃತದಲ್ಲಿ ಸಂಸ್ಕೃತಕ್ಕಿಂತಲೂ ಉತ್ತಮವಾದ ಗ್ರಂಥಗಳನ್ನು ಬರೆದು ಸಂಸ್ಕೃತದ ಮಹತಿಯನ್ನು ಕಡಿಮೆ ಮಾಡಿ ಪಾಕೃತ ಭಾಷೆಯ ಮೂಲಕ ಸಾಮಾನ್ಯ ಜನತೆಗೆ ಜ್ಞಾನಪಾನವನ್ನು ಮಾಡಿಸಿದರು ಮತ್ತು ಭಕ್ತಿಮಾರ್ಗದಲ್ಲಿ ಯಾವದೇ ಜಾತಿಯವನಾಗಲಿ, ದೇವರಿಗೆ ಸಮಾನ ಪ್ರೀತಿಯವನೆಂತಲೂ, ದೇವರ ಚರಣದಲ್ಲಿ ಮಡಿ ಮುಂತಾದ್ದು ಏನೂ ಪ್ರಕಾರವಿಲ್ಲದೆ ಆತನ ಮಸ್ತಕವನ್ನು ಚರಣದಲ್ಲಿಡಬಹುದೆಂತಲೂ ಪಂಢರಪುರದಲ್ಲಿ ಈ ವಿಷಯದಲ್ಲಿ ಕ್ರಾಂತಿಯನ್ನು ಮಾಡಿ ತೋರಿಸಿದರು. ಭಕ್ತಿಮಾರ್ಗದ ಆರಾಧ್ಯ ದೇವತೆಯಾದ ಶ್ರೀ ಪಾಂಡುರಂಗನಿಗೆ ಸಂಸ್ಕೃತ ಮಂತ್ರಗಳು ಬೇಡ, ಮಡಿ ಮೈಲಿಗೆಯ ಆಡಂಬರ ಬೇಡ, ವೈದಿಕರ ವಕೀಲಿ ಬೇಡ, ಜಾತಿ ವಿಜಾತಿ ಬೇಡ, ಭಕ್ತ ವಿಠ್ಠಳ ವಿಠಳ ಎಂದು ಭಜನೆಮಾಡಿದರೆ ಸಾಕು. ಇಂಥ ಏಕೀಕರಣಮಾಡುವಂಥ ಭಾಗವತ ಧರ್ಮವನ್ನು ಜ್ಞಾನೇಶ್ವರ ಮಹಾರಾಜರು ಸ್ಥಾಪಿಸಿ ಸಾಮಾನ್ಯಜನರಿಗೆ ಮೋಕ್ಷದ ಮಾರ್ಗವನ್ನು ತೋರಿಸಿದ್ದರಿಂದಲೇ ಭಜನೆಯಲ್ಲಿ ಈಗಲಾದರೂ ಜ್ಞಾನದೇವ ತುಕಾರಾಮ ಎಂದು ನಾಮಘೋಷವನ್ನು ಮಾಡುತ್ತಾರೆ. ಮತ್ತು ಜ್ಞಾನೇಶ್ವರ ಮಹಾರಾಜರು ಹಾಕಿದ ಮೇಲ್ಪಂಕ್ತಿಯನ್ನೇ ಮುಂದಿಟ್ಟು ಅನಂತರದ ಸಾಧುಸಂತರು ಪ್ರಾಕೃತದಲ್ಲೇ ಸಾಮಾನ್ಯ ಜನರಿಗೋಸ್ಕರ ಗ್ರಂಥಗಳನ್ನು ಬರೆದು ಲೋಕೋದ್ಧಾರವನು ಮಾಡಿರುತ್ತಾರೆ.

(ಸಶೇಷ)

---

## ಅನಿರ್ವಚನೀಯ

( ಕಬೀರದಾಸನಿಂದ )

೧

ಅಂತ್ಯವಕಾಣದ ಮೇರೆಯನರಿಯದ ಊರೊಂದಿರುವುದು ಸೋದರನೆ !
ಅಲ್ಲಿಹನೊಬ್ಬನು, ಹೆಸರೇ ಇಲ್ಲದ ಯಾರೂ ಅರಿಯದ ಮಾಯಾವಿ !
ಹೇಳಿದ ಕೇಳಿದವೊಂದೂ ಅಲ್ಲ !
ಊರಿಗೆ ಹೋದವನೊಬ್ಬನೆ ಬಲ್ಲ !

೨

ಉದ್ದವು ಅಗಲವು ಕಾಣುವುದಿಲ್ಲ; ದೇಹಾಕಾರಗಳಲ್ಲಿಲ್ಲ !
ಅದು ಹೀಗಿರುವುದು ಎಂಬುದನಾನು ನಿನಗಂತುಸರಲಿ ಸೋದರನೆ ?
ಬಾಯಿಂದಾಡಲು ಆಗುವುದಿಲ್ಲ !
ಬರೆಯಲು ಓಲೆಯೊಳಾಗುವುದಿಲ್ಲ !

೩

ಸಿಹಿಯನು ತಿಂದಾ ಮೂಕನವೊಲು ಇದೆ; ಗಹನವು ಅದರ ವಿಚಾರ !
ಮಾಯಾಲೋಕವ ಬಣ್ಣಿಪುದೆಂತೈ ? ಎಂಬನು ಭಕ್ತಕಬೀರ !

(ಕಿಶೋರಚಂದ್ರವಾಣಿ).

---

# ವಾದ ಭೂಮಿ

## ಸಿದ್ಧಾಂತಶಿಖಾಮಣಿಗ್ರಂಥಕ್ಕೆ ವ್ಯಾಖ್ಯಾನ

ಲೇಖಕ : —ಶ್ರೀ. ನಿಶಾನಿಮಠದ ಶಾಂತವೀರಾರ್ಯರು. ಕರ್ನಾಟಕ ಇತಿಹಾಸಮಂಡಳದ ಸಂಶೋಧಕರು, ದಾವಣಗೇರೆ.

ಶ್ರೀಮದ್ವೇದವೇದಾಗಮೋಪನಿಷತ್ಪ್ರತಿಪಾದಕವಾದ ವೀರಶೈವ ಧರ್ಮತತ್ವಗಳನ್ನು ಬಹುಸ್ವಾರಸ್ಯವಾಗಿ ಸ್ಪಷ್ಟೀಕರಿಸುವ ವೀರಶೈವ ವೈದಿಕ ಧರ್ಮಗ್ರಂಥಗಳಲ್ಲೆಲ್ಲ ಶ್ರೀ ಶಿವಯೋಗಿ ಶಿವಾಚಾರ್ಯಕೃತ "ಸಿದ್ಧಾಂತಶಿಖಾಮಣಿ" ಎಂಬ ಗ್ರಂಥವೇ ಅಗ್ರಸ್ಥಾನವನ್ನು ಹೊಂದಿರುವುದೆಂದು ಹೇಳಿದರೆ ಏನೂ ಅತಿಶಯೋಕ್ತಿಯಾಗಲಿಕ್ಕಿಲ್ಲ.

ಈ ಗ್ರಂಥದಲ್ಲಿ ಶ್ರೀ ರೇಣುಕಾಚಾರ್ಯರು ಅಗಸ್ತ್ಯ ಮಹಾಮುನಿಗೆ ವೀರಶೈವ ಧರ್ಮತತ್ವಗಳ ರಹಸ್ಯವನ್ನು ಬೋಧಿಸಿರುವ ವಿಷಯವು ಸುಪ್ರಸಿದ್ಧವಾಗಿರುತ್ತದೆಯಷ್ಟೆ?

ಜಗನ್ಮಾನ್ಯವಾದ ಈ ಸಿದ್ಧಾಂತ ಶಿಖಾಮಣಿ ಗ್ರಂಥಕ್ಕೆ ಬಹು ಮನೋಹರವಾದ ಟೀಕೆಯು ಬರೆಯಲ್ಪಟ್ಟಮೇಲಂತೂ ಬಂಗಾರಕ್ಕೆ ಕುಂದಣವನ್ನಿಟ್ಟಹಾಗಾಗಿರುತ್ತದೆ. ಇಂತಹ ಸರ್ವಾಂಗ ಸುಂದರವಾದ ಟೀಕೆಯನ್ನು ನೋಡಿ ಆಹ್ಲಾದಪಟ್ಟು ತಲೆದೂಗದ ಪಂಡಿತರೇ ಇಲ್ಲ. ಇಂತಹ ಅಮೋಘವಾದ ಟೀಕೆಯನ್ನು ಬರೆದು ಜನ್ಮ ಸಾಫಲ್ಯಮಾಡಿಕೊಂಡ ಕೀರ್ತಿಶಾಲಿಯಾದ ವಿದ್ವನ್ಮಣಿಯು ಯಾರಿರಬಹುದು!

ಇಂತಹ ವಿದ್ವನ್ಮಣಿಯಿಂದ ಟೀಕೆಯನ್ನು ಬರೆಯಿಸಲು ಉದಾರಾಶ್ರಯವನ್ನು ಕೊಟ್ಟಿರುವ ಧರ್ಮಾವತಾರ ಪುರುಷನು ಯಾರಿರಬಹುದು ?

ಈ ಎರಡು ವಿಷಯಗಳ ವಿಮರ್ಶನೆಯನ್ನು ಮಾಡುವದೇ ಈ ಶೋಧಕ ಲೇಖಕರ ಮುಖ್ಯ ಉದ್ದೇಶವಾಗಿರುತ್ತದೆ.

ವೀರಶೈವ ಸಾಹಿತ್ಯಪ್ರಪಂಚದಲ್ಲಿ ಶೋಧಕರ ಸಂಖ್ಯೆಯು ಅತಿವಿರಳವಾಗಿರುವದರಿಂದ ಗ್ರಂಥಗಳ ವಿಮರ್ಶನೆಗೆ ಅವಕಾಶವಿಲ್ಲದೆ ಗ್ರಂಥಗಳಲ್ಲಿ ಬರೆದ ವಿಷಯಗಳೆಲ್ಲ ನಿಜವೆಂದು ಜನರು ನಂಬಹತ್ತಿರುವರು. ಇದರಿಂದ ಯಥಾರ್ಥ ವಿಷಯಗಳೆಲ್ಲ ಕುಂಠಿತವಾಗಿ ಸಮಾಜಕ್ಕೆ ಒಂದು ವಿಧವಾದ ಹಾನಿ ಯೊದಗಿದೆಯೆಂದು ಹೇಳಬಹುದು. ಇತಿಹಾಸದೃಷ್ಟಿಶೂನ್ಯರಾದ ಜನರು ಬರೆದ ತಪ್ಪುಗಳನ್ನು ತಿದ್ದಲು ಯಾವ ಅವಕಾಶವನ್ನೂ ಸಮಾಜಸುಧಾರಕರು ಕಲ್ಪಿಸದೆ ಬಿಟ್ಟಿರುವದು, ಅತ್ಯಂತ ವಿಷಾದವಾದ ಸಂಗತಿಯಾಗಿರುತ್ತದೆ.

ಸಿದ್ಧಾಂತ ಶಿಖಾಮಣಿ ಟೀಕಾಕಾರರ ವಿಚಾರದಲ್ಲಿ, ಈಗ ಪ್ರಕಟವಾಗಿರುವ ಗ್ರಂಥದಲ್ಲಿ ಶ್ರೀ ಮರಿತೋಂಟದಾರ್ಯರೇ ಟೀಕೆಯನ್ನು ಬರೆದಿರುವರೆಂದು ಬರೆಯಲ್ಪಟ್ಟಿದೆ. ಆದರೆ ಈ ವಿಷಯವನ್ನು ಶೋಧಕದೃಷ್ಟಿಯಿಂದ ವಿಚಾರಮಾಡಿದರೆ ಶ್ರೀ ಮರಿತೋಂಟದಾರ್ಯರು ಸದರಿ ಗ್ರಂಥಕ್ಕೆ ಟೀಕೆಯನ್ನು ಬರೆದಿರುವ ವಿಷಯವು ಸುಳ್ಳೆಂದು ಸ್ಪಷ್ಟವಾಗಿ ಸಾಧಾರಗಳಿಂದ ಸಿದ್ಧವಾಗುತ್ತದೆ.

ನಮಗೆ ದೊರೆದಿರುವ ತಾಳೆ ಓಲೆ ಪ್ರತಿಯು ಸಿದ್ಧಾಂತಶಿಖಾಮಣಿಯಲ್ಲಿ ಈ ಕೆಳಗೆ ವಿವರಿಸಿರುವ ಆಧಾರವು ಉಲ್ಲೇಖಿಸಲ್ಪಟ್ಟಿದೆ. ಸಿದ್ಧಾಂತಶಿಖಾಮಣಿ ಪ್ರದೀಪಾಖ್ಯ ವ್ಯಾಖ್ಯಾನಸ್,

ಇತ್ಥಂ ಶ್ರೀಕೆಳದೀಶ ಬಸವ ಕ್ಷೋಣೀಶ್ವರೇಣೇಶಿತುರ್ಭಕ್ತೇನಾರಿನಿಷೂದನೇನ ವಿದುಷಾಂ ಭೋಜೋಪಮೇನೇರಿತಃ।

ಶ್ರೀ ಸಿದ್ಧಾಂತ ಶಿಖಾಮಣಿಂ ಸಮುನಯ ಕುಂಭೋದ್ಭವಾಯೇರಿತಂ ಶ್ರೀಮದ್ರೇಣುಕ ದೇಶಿಕೈರ್ವಿವೃತವಾನ್ ವೇದಾನ್ತಸಾರಂ ಹರಿಃ ॥ ಅಥಕೋಽಸೌ ಹರಿರಿತ್ಯತ್ರಾಹ.

ಅತ್ರ ಶ್ರೀ ವರದಾನದೀತಟಲಸತ್ಸತ್ಸಂಗಮಾಖ್ಯೇ ಪುರೇ ವಿದ್ವದ್ಭೂಸುರ ಭಾಸುರೆ ಹರಿರಿತಿ ಹ್ಯಾತ್ರೇಯ ಗೋತ್ರೋದ್ಭವಃ ಶ್ರೀಕಂಠೇಶ ಪದಾಂಬುಜ ದ್ವಯ ರಸ್ವಾಸ್ವಾದನಾಸಕ್ತಧೀರ್ವಿದ್ವಾಂಸಃ ಸುವಿಲೋಕ್ಯ ತತ್ಕೃತಿಮಿಮಾಂ ನಂದಂತು ನಿರ್ಮತ್ಸರಾಃ ॥

ಇತಿ ಶ್ರೀಮದ್ಯಡವ ಮುರಾರಿ ಕೋಲಾಹಲಸ್ಯ ಪರಿಪಂಥಿ ನೃಪ ಹಾಲಾಹಲಸ್ಯ ವಿಶುದ್ಧ ವೈದಿಕಾದ್ವೈತ ಸಿದ್ಧಾನ್ತಪ್ರತಿಷ್ಠಾಪಕ ಇತಿ ಪ್ರಖ್ಯಾತಸ್ಯ ಕೆಳದಿ ಬಸವ ಭೂಪಾಲಸ್ಯ ನಿಯೋಗಾನ್ನಿರ್ಮಿತೋಽಯಂ ಹೆದ್ದಸಿ ಹರಿಣಾ ಶ್ರೀಮದ್ವೀರ ಶೈವಸಿದ್ಧಾನ್ತ ಪ್ರದೀಪಃ ಸಂಪೂರ್ಣಮವಾಪ್ತಸ್ಸನ್ ಸಹೃದಯ ಹೃದಯಾಹ್ಲಾದಕತ್ವೇನ ಪ್ರಕಾಶತ ಇತಿ ಶಿವಂ. ಈ

ವಾಕ್ಯಗಳ ಮೇಲಿಂದ ಶ್ರೀ ಕೆಳದೀ ಬಸವರಾಜರ ಅಪ್ಪಣೆಯ ಮೇರೆಗೆ ವರದಾನದೀತೀರದಲ್ಲಿರುವ ಸಂಗಮಗ್ರಾಮದ ಶಿವ ಭಕ್ತಿ ಪರಾಯಣನಾದ ಹೆದ್ದಸಿ ಹರಿಪಂಡಿತನಿಂದ ಈ ಸಿದ್ಧಾಂತ ಶಿಖಾಮಣಿ ಗ್ರಂಥಕ್ಕೆ ಪ್ರದೀಪಾಖ್ಯವೆಂಬ ಟೀಕೆಯು ಬರೆಯಲ್ಪಟ್ಟಿತೆಂದು ಸ್ಪಷ್ಟವಾಗುತ್ತದೆ. ತಾಳೆಓಲೆ ಗ್ರಂಥದಲ್ಲಿರುವ ವ್ಯಾಖ್ಯಾನಕ್ಕೂ ಈಗ ಪ್ರಸಿದ್ಧವಾಗಿರುವ ವ್ಯಾಖ್ಯಾನಕ್ಕೂ ಏನೂ ವ್ಯತ್ಯಾಸಕಂಡುಬರುವದಿಲ್ಲವಾದಕಾರಣ ಶ್ರೀ ಮರಿತೋಂಟದಾರ್ಯರ ಹೆಸರನ್ನು ಯಾರೋ. ಹೆಚ್ಚಳಕ್ಕೋಸ್ಕರ ಬರೆದಿರಬಹುದೆಂದು ಊಹಿಸಬೇಕಾಗಿದೆ. ಈ ವಿಷಯವನ್ನು ವಿಮರ್ಶನಕಾರರೂ ಸಮಾಜದಲ್ಲಿ ಶಾಸ್ತ್ರಿವರ್ಗದವರೂ ಪಂಡಿತರೂ ಗಮನಿಸಬೇಕಾಗಿ ಕೋರುತ್ತೇನೆ.

---

# ಶ್ರೀ ಭಾಗವತ ಶಿರೋಮಣಿ ಕೇಶವದಾಸರ ಲೇಖನಕ್ಕೆ ಉತ್ತರ

ಲೇಖಕ :— ಶ್ರೀ. ಭೀಮಾಚಾರ್ಯ ಒಡವಿ (ಕಾವ್ಯರತ್ನ) ಮಾಸ್ತರ (ತುಮ್ಮಿನಕಟ್ಟಿ)

ಹಿಂದಿನ ಸಂಚಿಕೆಯಲ್ಲಿ (೬—೩—೧೯೩೮ರಲ್ಲಿ) ವೇ. ಶಾ॥ ರಾ॥ ಹರಿಕಥಾ ವಿದ್ವಾನ್ ಬೇಲೂರ ಕೇಶವದಾಸರು—

"ಮೆ॥ ಆರ್ ನರಶಿಂಹಾಚಾರ್ಯರು ತಮ್ಮ ಕವಿಚರಿತೆಯಲ್ಲಿ—ವೈಕುಂಠದಾಸ, ಅಚ್ಯುತದಾಸರ ಕಾಲವನ್ನು ೧೬೮೦—೯೦ ಎಂದು ಕೊಟ್ಟಿದ್ದು ತಪ್ಪೆಂತಲೂ, ಶ್ರೀವ್ಯಾಸರಾಯರು ವಾದಿರಾಜರು ಇವರ ಕಾಲನಿರ್ಣಯದಲ್ಲಿಯೂ ಹೀಗೆಯೇ ಆಚಾರ್ಯರು ಸಂದೇಹಪಟ್ಟಿರುವರೆಂತಲೂ" ಒಳ್ಳೇ ಆಧ್ಯತೆಯಿಂದ ಹೇಳಿಕೊಂಡು ಇವರೆಲ್ಲರು (ವೈಕುಂಠದಾಸ—ಅಚ್ಯುತದಾಸ, ಕನಕ, ಪುರಂದರ, ಶ್ರೀ ವ್ಯಾಸರಾಯರು ವಾದಿರಾಜರು) ೧೫೦೦ರಲ್ಲಿಯೇ ಇದ್ದರೆಂದು ಊಹಿಸಿರುವರು. ಅಲ್ಲ! ಅಲ್ಲ!! ಊಹಿಸುವುದೇಕೆ ನಿಶ್ಚಯವನ್ನೇ ಮಾಡಿರುವರು. ಊಹಿಸುವದಕ್ಕೆ ಅವರೇನು ಶ್ರೀ. ನರಶಿಂಹಾಚಾರ್ಯರಂತೆ ಸಂದೇಹಜ್ಞಾನವುಳ್ಳವರೇ?

ಅಲ್ಲದೆ—"ತಾವು ಶಿಲಾಶಾಸನ ಇತಿಹಾಸ ಮೊದಲಾದವುಗಳ ಆಧಾರದಿಂದಲೇ ಇಂಥ ಲೇಖಗಳನ್ನು ಬರೆಯುತ್ತಿರುವೆವೆಂದೂ ಸ್ವಯಂ ವಿಜಯದಾಸರ ಶಿಷ್ಯ ಪೀಳಿಗೆಯಲ್ಲಿ ಬಂದ ಹರಿದಾಸರೆಂದೂ—ಆಂಗ್ಲ ಭಾಷಾ ಪಾಂಡಿತ್ಯ ಥೋರಣೆಯಿಂದ ದಾಸರ ಚರಿತ್ರೆಗೆಲ್ಲಾ ಶಕೆಯ ತಲೆಚೀಟಿಯನ್ನು ಮನಸ್ವೀ ಕಟ್ಟಿ ಬರೆಯತಕ್ಕವರಲ್ಲವೆಂದೂ" ಇನ್ನೂ ಏನೇನೋ ಹೇಳಿಕೊಂಡಿರುವರು. ಇದ್ದರೂ ಇರಲಿ ಅದಕ್ಕೆ ಬೇಡೆನ್ನುವವರಾರು?

ಆದರೆ—ಇಂಥ ಮಹನೀಯರು ವೈಕುಂಠದಾಸರ ವಿಷಯದಲ್ಲಿ ಬರೆದ ಲೇಖನದ ಸ್ವಾರಸ್ಯವೆಷ್ಟಿರುವದೋ ಎಂದು ಉತ್ಸುಕತೆಯಿಂದ ಜಯಕರ್ನಾಟಕವನ್ನು ತೆರೆದು ನೋಡಲು, ಅದರಲ್ಲೇನಿದೆ? ಒಕ್ಕಲುಮಕ್ಕಳು ನಾಣ್ಣುಡಿಯೊಂದನ್ನು ಹೇಳುವರಲ್ಲ! 'ಗುಡ್ಡದಂಥ ರಾಗಮಾಡಿ ಕಡ್ಡಿಯಂಥ ಪದ ಹೇಳಿದರು' ಎಂಬ ಸಮಾಚಾರವಾಗಿತ್ತು. ಅದರಲ್ಲಿ ಇವರು ತೋರಿಸಿದ ಪ್ರಮಾಣಗಳು ಎಷ್ಟು ಪೊಳ್ಳು ಜೊಳ್ಳು ಇರುತ್ತವೆಂಬುದನ್ನು ನೋಡಿರಿ.

೧ ಶ್ರೀವಾದಿರಾಜರು ವೈಕುಂಠದಾಸರಲ್ಲಿಗೆ ಬಂದಾಗ್ಗೆ ಅವರ ತೊಡೆಯ ಮೇಲೆ ದೇವರ ಮಗುವಾಗಿ ಆಡುತ್ತಿದ್ದನಂತೆ ಅದನ್ನು ನೋಡಿ ರಾಜರು ಈ ಮಗು ಯಾರದೆಂದು ಕೇಳಲು— 'ಮಗುವು ಕಾಣಯ್ಯ ಮಾಯದ ಮಗುವು ಕಾಣಯ್ಯ' ಎಂಬ ಪದವನ್ನು ಹೇಳಿದರಂತೆ ಇನ್ನೊಮ್ಮೆ— ಮಾತಾಡುವಾಗ್ಗೆ ವೈಕುಂಠದಾಸರ ಉಗುಳು ರಾಜರಿಗೆ ಸಿಡಿಯುತ್ತಿದ್ದರೂ—'ಎಂಜಲೆನ್ನಲಿಬಹುದೆ ಮನುಜರಿರ' ಎಂಬ ಪದದಿಂದ ವಾದಿರಾಜರು ಜನರನ್ನೇ ಸಮಾಧಾನಮಾಡಿದರಂತೆ—

ರಾಜರೂ—ವೈಕುಂಠದಾಸರೂ ಸಮಕಾಲೀನರೆಂಬದಕ್ಕೆ ಇವೇ ಎರಡು ಇವರು ತೋರಿಸಿದ ಪ್ರಮಾಣಗಳು. ಇದರಲ್ಲಿಯೂ ಮೊದಲನೆಯ ಪದವು ಕನಕ ದಾಸನು, ವಾದಿರಾಜ

ರೆ ಹೇಳಿದ್ದೆಂದು ನಮ್ಮ ಕೇಳಿಕೆಯಲ್ಲಿರುವದು. ಎರಡನೆಯು ದಂತೂ ಕೇವಲ ಸಾಂಪ್ರದಾಯ ವಿರುದ್ಧವಾಗಿರುವದು. ಇವೆ ರಡೂ ನಂಬಲಿಕ್ಕೆ ಅರ್ಹವಾಗಿಲ್ಲ. ಈ ಉಭಯತರು ಒಬ್ಬರ ನ್ನೊಬ್ಬರು ಸ್ತೋತ್ರಮಾಡಿದ ಪದಗಳು ಬೇಕಾದಷ್ಟಿವೆಯೆಂದು ಹೇಳುವ ದಾಸರು ಇಂಥ ಸಂದಿಗ್ಧ ಏಡೇ ಎರಡುಪದ ಗಳನ್ನು ಬರೆಯುವದಕ್ಕಿಂತ ಉತ್ಕೃಷ್ಟವಾದ ಇನ್ನೂ ನಾಲ್ಕಾರು ಪ್ರಮಾಣಗಳನ್ನು ಯಾಕೆ ಕೊಡಲಿಲ್ಲವೋ ತಿಳಿ ಯದು. ( ಈ ಸಮಯದಲ್ಲಿ ಪತ್ರವಿಸ್ತಾರವಾಗುವದೆಂಬ ಭಯವನ್ನು ಹಿಡಿಯಕೂಡದು. )

೨ ಇದೇ ರೀತಿ ಪುರಂದರ ದಾಸರು—ವೈಕುಂಠದಾಸರ ತೊಡೆಯಮೇಲಿನ ಕೂಸನ್ನು ಕಂಡಕೂಡಲೆ ಆ ಕೂಸು ( ಚನ್ನಕೇಶವನು ) ಲೋಕದ ಮಕ್ಕಳಂತೆ ಅಳಹತ್ತಿತೆಂದೂ ಆಗ ಪುರಂದರದಾಸರು— 'ಅಳುವದ್ಯಾತಕೊ ರಂಗಾ ಎಂಬ ಪದವನ್ನು ಮಾಡಿದರೆಂದೂ ಬರೆದಿರುವರು.

ಇದಂತೂ ಕೇವಲ ನಗೆಬರುವ ಮಾತಾಗಿರುವದು. ಯಾಕಂದರೆ ಈ ಪದವು ಪುರಂದರ ದಾಸರು ಮಾಡಿದ್ದು ಅಲ್ಲವೇ ಅಲ್ಲ. ಅವರ ಮಕ್ಕಳು ವರದಪ್ಪನವರು ಮಾಡಿ ದ್ದೆಂದು ಅದರ ಮುದ್ರಿಕೆಯೇ ಹೇಳುತ್ತಿರುವದು. ( ಕೇವಲ ಕೃಷ್ಣಲೀಲಾವರ್ಣನದಲ್ಲಿ ಮಗ್ನರಾದಾಗ ಹೇಳಿರಬೇಕು. )

"ಶರಣು ವೇಲಾಪುರದ । ಚಲುವಚನ್ನಿಗರಾಯ ।
ಶರಣರ ಸಂತತ ಕರುಣದಿ ಪೊರೆಯುವ ।
ವರದ ಪುರಂದರ ವಿಠ್ಠಲರಾಯ " ॥

ಹೀಗಿದ್ದು—ಇದನ್ನು ಪುರಂದರ ದಾಸರೇ ಮಾಡಿದರೆಂದೂ ಅದು ಇಂಥ ಸಮಯದಲ್ಲಿಯೇ ಎಂದೂ ಕೇಶವದಾಸರು ಹೇಗೆ ಊಹಿಸಿದರೋ, ಏನೋ ನಮ್ಮ ಸ್ಥೂಲ ಬುದ್ಧಿಗಂತೂ ಹೊಳೆಯದು. ಹೀಗೆ ಊಹಿಸುವುದಾದರೆ— ಇನ್ನವರವೇ ಏಕೆ ನ್ನು ಅನೇಕ ದಾಸರ ಪದಗಳಿಗೂ ಹೀಗೆಯೇ ಊಹಿ ಸಾಡಬಹುದಲ್ಲ! ಅಲ್ಲವೆ ?

'ಕನಕ— ಪುರಂದರ ದಾಸಾದಿಗಳು ಶ್ರೀ ಚನ್ನಕೇಶವನ ಮೇಲೆ ಮಾಡಿರುವ ಪದಗಳಿಂದಲೇ ಬೇಲೂರಿಗೆ ಅವರು ಬಂದಿದ್ದರೆಂಬದಕ್ಕೆ ಆಧಾರ ಸಾಕಾಗದೆ' ಎಂದು ಬರೆದಿರು ವರು. ಬೇಲೂರಿಗೆ ಹೋದ ಮಾತ್ರಕ್ಕೇನೇ ವೈಕುಂಠ ದಾಸರ ಸಮಕಾಲೀನರಾದಂತಾಯಿತೇ ?

ಒಂದು ವೇಳೆ ಜಗನ್ನಾಥ ದಾಸರೂ ಬೇಲೂರಿಗೆ ಹೋಗಿ ಪದಮಾಡಿದ್ದರೆ ಅವರನ್ನು ಇವರ ಜೊತೆಯಲ್ಲಿ ಸೇರಿಸ ಬಹುದೋ ?

೩ ಅಚ್ಯುತ ದಾಸರ ವಿಷಯದಲ್ಲಿಯೂ ಹೀಗೆಯೇ ಒಂದು ಹರಕು ಮುರುಕು ಪದವನ್ನು ಪ್ರಮಾಣವಾಗಿ ಕೊಟ್ಟಿರು ವರು.

'ಪಾಲಿಪುದು ನಯನಗಳ ನಾಲಿಗೆಯು ನೀಗ!......ಅಚ್ಯುತ
ದಾಸಗೆ' ।

ಇಲ್ಲಿ—ಅಚ್ಯುತನ (ದೇವರ) ದಾಸನಾದ ಯಾವನೋ ಒಬ್ಬ ಹರಿಶರಣನಿರಬಹುದೆಂದು ಯಾಕೆ ಹೇಳಬಾರದು ? ಅಚ್ಯುತ ದಾಸನೆಂದೇ (ಅಂಕಿತ ನಾಮ ) ಹೇಳಲು ಇದಿಷ್ಟೇ ಪ್ರಮಾಣವು ಸಾಕಾಗುವದೋ ?

ಅಲ್ಲದೆ ಈ ಅಚ್ಯುತ ದಾಸರು ಹೊಯ್ಸಳ ರಾಜ್ಯಕ್ಕೆ ಬಂದರೆಂದು ಬರೆದಿದ್ದಾರೆ. ಹೊಯ್ಸಳ ರಾಜ್ಯವು ವಿಜಯ ನಗರ ರಾಜ್ಯದ ಸ್ಥಾಪನೆಗಿಂತ ಮುಂಚಿತವಾಗಿಯೇ ಅಂದರೆ ೧೩೩೬ ಕ್ಕಿಂತ ಮೊದಲೇನಾಮ ಶೇಷವಾಗಿ ಹೋಗಿರಲು— ಮತ್ತೆಲ್ಲಿ ( ೧೫೫೦ರಲ್ಲಿ ) ಆ ಹೆಸರು ಬಂದಿತೋ ತಿಳಿಯ ದಾಗಿದೆ.

ಈ ರೀತಿ ಮೂರು ಜನರ ವಿಷಯದಲ್ಲಿಯೂ ಒಂದೊಂದೇ ಪದವನ್ನು ಕೊಟ್ಟು ಇವರು ಸಮಕಾಲೀನರೆಂದು ಹೇಳಲಿಕ್ಕೆ ಹೊರಟಿರುವರು. ಆ ಪದಗಳಾದರೂ ಅಷ್ಟು ನಂಬಿಕೆಗೆ ಅರ್ಹವಾಗಿಲ್ಲ.

'ಇಂಥಾ ಚರಿತ್ರೆಗಳು ವೈಕುಂಠದಾಸರ ವಿಷಯದಲ್ಲಿ ಹೇರ ಳವಾಗಿವೆ' ಎಂದು ಹೇಳಿಕೊಂಡಿರುವ ಕೇಶವದಾಸರು ಚನ್ನಾದ ಹತ್ತೆಂಟು ಪ್ರಮಾಣಗಳನ್ನು ಕೊಟ್ಟು ಬಿಡಬಾರದಾಗಿತ್ತೇ ! ಇದೊತ್ತಟ್ಟಿಗಿರಲಿ.

ಮಾದಮ್ಮನ ವಿಷಯವೇನೆಂಬುದನ್ನು ನೋಡೋಣ.

ಮಾದಮ್ಮನು ಲಿಂಗವಂತ ಜಾತಿಯ ತರುಣ ವಿಧವೆ ಯೆಂದೂ ವೈಕುಂಠದಾಸರು ವೈಶ್ಯ ಶ್ರೀಮಂತನೊಬ್ಬನಿಗೆ ತೆಗೆ ದಿಟ್ಟ ಅಭಿಮಂತ್ರಣ ಫಲವನ್ನು ತಿಂದು, ಮಗನನ್ನು ಹಡೆದ ಳೆಂದೂ ಆ ಹುಡುಗನು ಸರ್ಪಕಚ್ಚಿ ಸಾಯಲು ಇದೇ ದಾಸರು ಬದುಕಿಸಿದರೆಂದೂ ಇತ್ಯಾದಿಯಾಗಿ ಬರೆದಿರುವರು.

ಆದರೆ ಕೆಳಗಿನ ಉಗಾಭೋಗವು ಏನು ಹೇಳುತ್ತದೆ. ನೋಡಿರಿ.

" ಪುರಂದರದಾಸರು ವೈಶ್ಯ ಮಾದಮ್ಮನಾವರ ಕುಮಾರ ಕನ ಬದುಕಿಸಿದರು ಗಡಾ । ಗುರುವ್ಯಾಸ ರಾಯರು ಭೂಪ ತಿಗೆ ಬಂದ ದುಸ್ತರವಾದ ಕುಹೂಯೋಗ ಬಿಡಿಸಿದರುಗಡಾ ।

ಶಿರಿನಾರಾಯಣ ಯೋಗಿ ವ್ಯಾಸಮುನಿಗೆ ಬಂದ ಉರಗಬಾಧೆಯ ಕಳೆದು ಪಾಲಿಸಿದರುಗಡಾ । ಹರಿಯೆ ಈ ಕಲಿಯುಗದೊಳಗೆ ನಿನ್ನ ಶರಣರು ಇಂಥ ಚರಿತೆ ಮಾಡಿಪ್ಪರು......। ಕರುಣಾಕರ ನಮ್ಮ ವಿಜಯ ವಿಠ್ಠಲ ನಿನ್ನ ಚರಣ ಧೇನಿಸು ವರ ಪಿಡಿದೊತ್ತುನಾನಯ್ಯ " ॥

ವೈಶ್ಯ ಜಾತಿಯವಳಾದ ಮಾದಮ್ಮನ ಮಗನು ಸತ್ತಿರಲು ಪುರಂದರದಾಸರು ಬದುಕಿಸಿದರೆಂದು ಸಾಕ್ಷಾತ್ತು ವಿಜಯದಾಸರೇ ಹೇಳುತ್ತಿದ್ದರೂ, ಇದೇ ವಿಜಯದಾಸರ ಶಿಷ್ಯ ಪರಂಪರೆಯ ಕೇಶವದಾಸರು ಹೀಗೆ ಹೇಳುತ್ತಾರೆ. ಇದಕ್ಕೆ ಆಧಾರವೇನೋ ತಿಳಿಯದು.

ವೈಕುಂಠದಾಸರು ಒಮ್ಮೆ ಚನ್ನಕೇಶವ ದೇವರ ಗುಡಿಗೆ ಹೋಗಲು ಅರ್ಚಕರು ಬಾಗಿಲಿಗೆ ಕೀಲಿ ಹಾಕಿದ್ದರೆಂದೂ ಆಗ ದಾಸರು 'ಬಾಗಿಲನು ತೆಗೆದು ಸೇವೆಯನು ಕೊಡು ಹರಿಯೆ'! ಎಂಬ ಪದವನ್ನು ಹೇಳಲು ಕೀಲಿಗಳು ತಮಗೆ ತಾವೇ ಕಳದು ಬಿದ್ದವೆಂದೂ ಬರೆಯುತ್ತಾರೆ.

ಆದರೆ ಈ ಪದವು ಕನಕದಾಸರು ಉಡುಪಿಯಲ್ಲಿ ಹೇಳಿದ್ದೆಂಬದು ಸ್ಪಷ್ಟವಾಗಿರುವದು. ಇದಲ್ಲದೆ ಈ ಹಾಡಿನಲ್ಲಿ ಬೇಲೂರ ಚನ್ನಕೇಶವನ ಪ್ರಸ್ತಾಪವೇ ಇಲ್ಲ. ಹೀಗಿದ್ದರೂ ಇದು ವೈಕುಂಠದಾಸರು ಚನ್ನಕೇಶವನಲ್ಲಿ ಮಾಡಿದ ಪದವೆಂದು ಹೇಳಿದ್ದು ಬಹಳ ಸಾಹಸದ ಮಾತಾಗಿರುವದು.

ಇದರಂತೆ ಪುರಂದರದಾಸರು ೧೫೬೪ ರಲ್ಲಿಯೇ ಮುಕ್ತರಾದರೆಂದೂ ವೈಕುಂಠದಾಸರು. ವಾದಿರಾಜರಿಗಿಂತ ವಯೋವೃದ್ಧರೆಂದೂ ನಿಃಸಂಶಯವಾಗಿ ಗೊತ್ತಾಗಿರುವದೆಂದು ಮನಸ್ಸಿನಲ್ಲಿ ಮುಂದಿಗೆಯನ್ನು ಮಾಡಿರುವರು. ಬರೇ ಹೀಗೆ ಬರೆಯದೆ ಅದಕ್ಕೆ ತಕ್ಕ ಪ್ರಮಾಣಗಳನ್ನು ಕೊಟ್ಟಿದ್ದರೆ ನಮ್ಮಂಥ ಮಂದಮತಿಗಳ ಸಂಶಯ ನಿವಾರಣೆಯಾದರೂ ಆಗುತ್ತಿತ್ತು. ಐತಿಹಾಸಿಕ ಶೋಧಕರ್ಕೂ ಸಹಾಯವಾಗುತ್ತಿತ್ತು.

ಇನ್ನೊಂದೇನಂದರೆ—ಕನಕ, ಪುರಂದರದಾಸ ವ್ಯಾಸರಾಯರಾಗಲಿ ಇವರ ಶಿಷ್ಯಪ್ರಶಿಷ್ಯರಾಗಲಿ, ವೈಕುಂಠದಾಸರನ್ನು ಯಾರೂ ಹೊಗಳಿದ್ದು ಕಂಡುಬರುವದಿಲ್ಲ. ಅದರಂತೆ ವೈಕುಂಠದಾಸರಾದರೂ ಇವರಲ್ಲಿ ಯಾರನ್ನೂ ಸ್ತೋತ್ರ ಮಾಡಿಲ್ಲ.

ಹೀಗಿದ್ದರೂ ಕೇಶವದಾಸರು ಮೊದಲು ಹೇಳಿಕೊಂಡದ್ದೇನು ? ಕಡೆಗೆ ಕೇವಲ ಒಂದೊಂದು ಪದದಿಂದ ( ಅದೂ ಅಪೂರ್ಣ-ಎರಡನೆಯವರವು ) ಕಾಲನಿರ್ಣಯಮಾಡಿದ್ದೇನು? ಇದು ಎಂಥ ಧೈರ್ಯ ! ಎಂಥ ಸಾಹಸ !!

ಇವರು ಹಿಂದಕ್ಕೆ ಅಚಲಾನಂದದಾಸರ ವಿಷಯದಲ್ಲಿಯೂ ಹೀಗೆಯೇ ಬರೆದಿರುವರು. ರಾಷ್ಟ್ರಕೂಟ--ಹೊಯ್ಸಳ ಎಂಬದಾಗಿ ೩—೪ ಅಕ್ಷರಗಳನ್ನು ಬರೆದ ಮಾತ್ರಕ್ಕೇ ಐತಿಹಾಸಿಕ ಸಿದ್ಧತೆಯಾಯಿತೋ ? ಅವರಲ್ಲಿ ಒಂದು ಶ್ಲೋಕ ಮಾತ್ರ ಕೊಟ್ಟಿರುವರು. ರಾಷ್ಟ್ರಕೂಟ ರಾಜರ ಶಾಸನಾಧಾರದಿಂದ ಬರೆಯಲ್ಪಟ್ಟಿದು ಯಾವುದೋ ನಮ್ಮ ಚರ್ಮಚಕ್ಷುವಿಗೆ ಗೋಚರವಾಗಲಿಲ್ಲ. ಈ ಅಚಲಾನಂದದಾಸರು ಶ್ರೀಮಧ್ವಾಚಾರ್ಯರ ಸ್ತೋತ್ರಮಾಡಿರುತ್ತಾರೆಂದು ಹೇಳಿದ ಮಿ. ಬೆಂಗೇರಿಯವರಿಗೆ ಆ ಪದವು ನಂಬಲರ್ಹವೆಂದೂ, ಎಷ್ಟೋ ಜನರು ಹಿಂದಿನವರ ಮುದ್ರಿಕೆ ಹಾಕಿ ಪದಗಳನ್ನು ರಚಿಸಿರುತ್ತಾರೆಂದೂ ಕೇಶವದಾಸರು ಸಮಾಧಾನ ಹೇಳಿರುವರು. ಇದೇ ಉತ್ತರವನ್ನು ನಾವೂ ಕೇಶವದಾಸರಿಗೆ ಅವರು ಬರೆದ ಪದಗಳ ವಿಷಯದಲ್ಲಿ ಹೇಳಿದರೆ ತಪ್ಪೇನು ?

ಈ ರೀತಿ ಅಕಾಂಡತಾಂಡವವಾಗಿ ಏನೇನೋ ಬರೆದು—ಮೊದಲೇ ಮಬ್ಬುಗತ್ತಲೆಯಲ್ಲಿದ್ದ ಕರ್ನಾಟಕ ಸತ್ಪುರುಷ ಮಂಡಲವನ್ನು ಮತ್ತಿಷ್ಟು ಅಂಧಕಾರದಲ್ಲಿ ಕೆಡವಬೇಡಿರೆಂದೂ ಬಲವಾದ ಪ್ರಮಾಣಗಳಿದ್ದರೆ ಅಂಥವುಗಳನ್ನು ಕೊಟ್ಟು ಇತಿಹಾಸಸಂಶೋಧನ, ಹಾಗೂ ವಾಙ್ಮಯಗಳಿಗೆ ಪ್ರಕಾಶವನ್ನುಂಟುಮಾಡಿರೆಂದೂ ಶ್ರೀ. ಕೇಶವದಾಸರಿಗೆ ವಿನಯದಿಂದ ವಿಜ್ಞಾಪಿಸಿಕೊಳ್ಳುವೆನು.

---

# ಶ್ರೀ. ಬೆಂಗೇರಿಯವರ ಲೇಖಕ್ಕೆ ಉತ್ತರ

ಲೇ:—ಶ್ರೀ. ಭೀಮಾಚಾರ್ಯ ಒಡೆವಿ (ಕಾವ್ಯರತ್ನ)

೧ ಯಾವ ದಾಸರ ಹೆಸರಿನ ಹಿಂದೆಯಾದರೂ ಶ್ರೀ ಎಂಬ ಅಕ್ಷರವನ್ನು ಕೆಲವು ಕಡೆಯಲ್ಲಿ ಉಪಯೋಗಿಸಿಗುವರು. ಆದ್ದರಿಂದ ಶ್ರೀಕಾರವುಳ್ಳವರು ಬೇರೆ ದಾಸರೆಂದು ತಿಳಿಯಲಿಕ್ಕೆ ಬರುವದಿಲ್ಲ. ಉದಾ—ಶ್ರೀ ಪುರಂಧರ ವಿಠಲ ಶ್ರೀ ಜಗನ್ನಾಥ ವಿಠಲ ಹೀಗೆ ಇವೆ—ಕಾರಣ ಮಧ್ವೇಶ ವಿಠಲ-ಇಭವರದ-ಇವೆಲ್ಲ ಒಂದೊಂದೇ ಎಂದು ತೋರುವದು—

೨ 'ಮನೋಹರ ವಿಠಲ' ಎಂಬದು ಒಬ್ಬ ದಾಸರ ಮುದ್ರಿಕೆಯೇ ಹೊರತು ಇಬ್ಬರದಾಗಲಾರದು—ಯಾಕಂದರೆ—ಇಲ್ಲಿಯುವರೆಗೆ ಯಾವದಾಸರಾಗಲಿ—ಕವಿಗಳೇ ಆಗಲಿ ಹೀಗೆ ಒಬ್ಬರ ಹೆಸರನ್ನೇ ತಮಗೂ ಇಟ್ಟುಕೊಂಡದ್ದು ಕಂಡುಬರುವದಿಲ್ಲ. ಅವರಲ್ಲ ಏನಾದರೂ ಹೆಚ್ಚು ಕಡಿಮೆ ಮಾಡಿಯೇ ಮಾಡುತ್ತಾರೆ—ಉದಾ—ಗಾರುಪುರಂದರ—ಗುರುಗೋಪಾಲ—ಕುಮಾರವ್ಯಾಸ—ಅಭಿನವಪಂಪ—ಇ.

೩ ಹೆಚ್ಚಿನ ದಾಸರ ಮುದ್ರಿಕೆಗಳು ನಮಗೆ ತಿಳಿದ ಮಟ್ಟಿಗೆ ಕೆಲವಿವೆ

೧ ಹಯಗ್ರೀವ ವಿಠಲ (ವಿಜಯದಾಸರ ತಮ್ಮಂದಿರು)

೨ ವಿರಜಪ್ರಾಣೇಶ್ವರವಿಠಲ (ಮೋಹನ ದಾಸರ ಶಿಷ್ಯರು

೩ ಸೊಬಗು ವಿಠಲ

೪ ಮುಕುಂದ ವಿಠಲ

೫ ದೇವ ವಿಠಲ

೬ ಪದ್ಮನಾಭ ವಿಠಲ

೭ ಗುರುರಾಜವಿಠಲ

೮ ಗುರುಹಯಮುಖ ೯ ವಿದ್ಯಾಕಾಂತ ೧೦ನರಹರಿ ೧೧ ಭಗವದ್ವ್ಯಾಸ ೧೨ ವರಹ ತಿಮ್ಮಪ್ಪ ೧೩ ನಿತಾತ್ಮ—೧೪ ಒಟ್ಟಗಿರಿರಾಮ ೧೫ ಮೂಡಲಗಿರಿಯ ತಿಮ್ಮ. (ಇವರೆಲ್ಲರ—ದೇವರನಾಮುಗಳಿರುವವು)

---

# ದಾಸರಪದ ಅಂಕಿತಗಳು

ಲೇ:—ಶ್ರೀ ಬೇಗೇರಿ ಗುರುರಾಯರು ಹಾವೇರಿ

ಜಯಕರ್ನಾಟಕ ಪುಟ ೩೨೩ ನೇದ್ದರಲ್ಲಿ ವಿಠ್ಠಲವರ ದಾಸರ ಮುದ್ರಿಕೆಗಳನ್ನು ಓದಿ ನೋಡಿದೆ. ಅದರಲ್ಲಿ ಕೆಲವು ಸಂಶಯಗಳು ಸಹ ನೋಡಿದೆ ಅದರ ಉತ್ತರ.

| | |
|---|---|
| ೧ ಶ್ರೀ ಇಭವರದ ವಿಠ್ಠಲಾ<br>ಇಭವರದ ವಿಠ್ಠಲಾ | ಬೇರೆ ಬೇರೆ ದಾಸರಲ್ಲ ಇವರು ಒಬ್ಬರೆ |
| ೨ ಶ್ರೀ ತೀರ್ಥಪಾದ ವಿಠ್ಠಲಾ<br>ಶ್ರೀ ಪಾದತೀರ್ಥವಿಠ್ಠಲಾ | ಇವರು ಬೇರೆ ಬೇರೆ ದಾಸರು |

(೩೪೬೦) ಇವುಗಳ ಬದಲು ಮುಂದೆ ೭೧ ೭೫ ಬರೋಬರಿ ಬಿದ್ದಿವೆ. (ತಮ್ಮ ಮುದ್ರಣದಲ್ಲಿ ನಂಬರ (೫೪) ಶ್ರೀಪಾದ ಹಾಗು (೬೦) ಶ್ರೀತೀರ್ಥ ವಿಠ್ಠಲಾ ಎಂದು ಅದೆ. ವಿಠ್ಠಲಾ ಇದು ತಪ್ಪು ಅದು ಹಸ್ತದೋಷ ಅದೆ.

| | |
|---|---|
| ೩ ಮನೋಹರ ವಿಠ್ಠಲಾ<br>ಮನೋಹರವಾವಿಠ್ಠಲ | ಬೇರೆ ಬೇರೆ ದಾಸರು. ಮನೋಹರವಿಠ್ಠಲಾ ಯರಡಾವರ್ತಿ ಬಿದ್ದಿದೆ ಇದು ಹಸ್ತದೋಷ |

ಮನೋಹರ ವಿಠ್ಠಲಾ ೨ ಆವರ್ತಿ ದೋಷ ಮನೋಹರ ವಿಠ್ಠಲಾ ಎರಡುಸಾರೆ ಬಿದ್ದದೆ ತಪ್ಪು ೨ ಮನೋಹರವಾ ವಿಠ್ಠಲಾ ಎಂದು ಇರಬೇಕು.

| | |
|---|---|
| ೪ ಮಧ್ವೇಶ ವಿಠ್ಠಲಾ<br>ಶ್ರೀ ಮಧ್ವೇಶ ವಿಠ್ಠಲಾ | ಬೇರೆ ಬೇರೆ ದಾಸರಿಲ್ಲ ಇವರು ಒಬ್ಬರೆ |

ಕೆಳಗೆ ಬರೆದ ವಿಠ್ಠಲ ಶಬ್ದಾಂಕಿತ ಹೆಚ್ಚಿನ ಮುದ್ರಿಕೆಗಳ ಹೆಸರುಗಳು.

೧ ಹಯಗ್ರೀವ ವಿಠ್ಠಲಾ ೨ ವಿರಚಿ ಪ್ರಾಣೇಶ ವಿಠ್ಠಲಾ ೩ ಗುರುಶ್ರೀನಿವಾಸ ವಿಠ್ಠಲಾ ೪ ತಂದೆ ಶ್ರೀನಿವಾಸ ವಿಠ್ಠಲಾ ೫ ಶ್ರೀಕೃಷ್ಣ ವಿಠ್ಠಲಾ ೬ ತಂದೆ ವಾಸುದೇವ ವಿಠ್ಠಲಾ ೭ ಗುರು ತಂದೆ ವಾಸುದೇವ ವಿಠ್ಠಲಾ ೮ ವರದೇಶ ವಿಠ್ಠಲಾ ೯ ಮೋದ ವಿಠ್ಠಲಾ ೧೦ ಭಾಗ್ಯನಿಧಿ ವಿಠ್ಠಲಾ ೧೧ ಧನ್ವಂತ್ರಿ ವಿಠ್ಠಲ ೧೨ ನರಹರಿ ವಿಠ್ಠಲಾ ೧೩ ರಾಮ ವಿಠ್ಠಲಾ ೧೪

ಗೋವಿಂದ ವಿಠ್ಠಲಾ ೧೫ ಗುರು ಜಗನ್ನಾಥ ವಿಠ್ಠಲಾ ೧೬ ನರಸಿಂಗ ವಿಠ್ಠಲಾ ೧೭ ಶ್ಯಾಮಸುಂದರ ವಿಠ್ಠಲಾ ೧೮ ಅಚ್ಯುತ ವಿಠ್ಠಲಾ ೧೯ ಕನಕಾದಿ ವಿಠ್ಠಲಾ ೨೦ ಗುರುರಾಮ ವಿಠ್ಠಲ ೨೧ ಗುರುರಂಗ ವಿಠ್ಠಲಾ ೨೨ ಧೀರವೆಂಕಟ ವಿಠ್ಠಲಾ ೨೩ ಧನಾಭಿ ವಿಠ್ಠಲಾ ೨೪ ನಃಕಂಠೀರವ ವಿಠ್ಠಲಾ ೨೫ ಪಾಂಡುರಂಗ ಮುರಪತಿ ವಿಠ್ಠಲಾ ೨೬ ಪ್ರಸನ್ನವೆಂಕಟ ವಿಠ್ಠಲಾ ೨೭ ಶ್ರೀ ವಿಶ್ವ ವಿಠ್ಠಲಾ ೨೮ ಚಂನಕೇಶ ವಿಠ್ಠಲಾ ೨೯ ಪ್ರಸನ್ನ ಕೇಶವ ವಿಠ್ಠಲಾ ೩೦ ಮೇಲಗಿರಿ ವಿಠ್ಠಲಾ ೩೧ ರಾಜ ವಿಠ್ಠಲಾ ೩೨ ರಘುರಾಮ ವಿಠ್ಠಲಾ ೩೩ ವೆಂಕಟಾಧೀಶ ವಿಠ್ಠಲಾ ೩೪ ವಾಮನ ವಿಠ್ಠಲಾ ೩೫ ವೆಂಕಟಾಧಿ ವಿಠ್ಠಲಾ ೩೬ ಸೊಬಗು ವಿಠ್ಠಲಾ ೩೭ ಹನುಮೇಶ ವಿಠ್ಠಲಾ ೩೮ ವರದ ವಿಠ್ಠಲಾ ೩೯ ಶ್ರೀಧರ ವಿಠ್ಠಲಾ ೪೦ ಅಹನ್ನ ವಿಠ್ಠಲಾ ೪೧ ಪ್ರದ್ಯುಮ್ನ ವಿಠ್ಠಲಾ ೪೨ ಆನಂದ ವಿಠ್ಠಲಾ ೪೩ ಮುಕುಂದ ವಿಠ್ಠಲಾ ೪೪ ದೇವ ವಿಠ್ಠಲಾ ೪೫ ಪ್ರಾಣಪತಿ ವಿಠ್ಠಲಾ ೪೬ ಮಾನನಿಧಿ ವಿಠ್ಠಲಾ ೪೭ ಶ್ರೀನಾಥ ವಿಠ್ಠಲಾ ೪೮ ಶ್ರೀ ಪಾಂಡುರಂಗಪತಿ ವಿಠ್ಠಲಾ ೪೯ ಯದುಪತಿ ವಿಠ್ಠಲಾ ೫೦ ಭೂತನಾಥ ವಿಠ್ಠಲಾ ೫೧ ಗಂಡೀಶ ವಿಠ್ಠಲಾ ೫೨ ಹರಿ ವಿಠ್ಠಲಾ ೫೩ ಶ್ರೀರಮಣ ವಿಠ್ಠಲಾ ೫೪ ಜಾನಕಿಪತಿ ವಿಠ್ಠಲಾ ೫೫ ಮಾಧವ ವಿಠ್ಠಲಾ ೫೬ ಗುರು ಕಮಲಾಪತಿ ವಿಠ್ಠಲಾ ೫೭ ವರದ ಕಮಲಾಪತಿ ವಿಠ್ಠಲಾ ೫೮ ಕಪಿಲ ವಿಠ್ಠಲಾ ೫೯ ಪೂತಾತ್ಮ ವಿಠ್ಠಲಾ ೬೦ ಜಯ ವಿಠ್ಠಲಾ ೬೧ ಮಹಾನಿಧಿ ವಿಠ್ಠಲಾ

ವಿಠ್ಠಲ ಮುದ್ರಿಕೆಯಲ್ಲದೆ ಬೇರೆ ಮುದ್ರಿಕೆಗಳ ಹೆಸರುಗಳು

೧ ವೇದವ್ಯಾಸಾ ೨ ಸತ್ಯಾತ್ಮಾ ೩ ಜಟ್ಟಿಗಿರಾಮಾ ೪ ವಿಠ್ಠಲ ವೇದವ್ಯಾಸಾ ೫ ರಾಮಕೃಷ್ಣಾ ೬ ಬೆಟ್ಟದ ಶ್ರೀನಿವಾಸ ೭ ಶ್ರೀರಘುಪತಿ ೮ ಶ್ರೀವೆಂಕಟೇಶ ೯ ವೈಕುಂಠವೆಂಕಟೇಶ ೧೦ ಶ್ರೀನಿವಾಸಾ ೧೧ ಶೇಷಗಿರೀಶ ೧೨ ಶ್ರೀರಾಮ ೧೩ ವರದರಾಜರಂಗಾ ೧೪ ವರದರಾಜರಾಮಾ ೧೫ ವರದರಾಜಕೃಷ್ಣ ೧೬ ವರದಕೇಶ ೧೭ ವರದಕೃಷ್ಣ ೧೮ ವರದರಾಜವೆಂಕಟೇಶ ೧೯ ಶ್ರೀರಂಗ ನಾಯಿಕ ೨೦ ಲಕ್ಷ್ಮೀನಾರಾಯಣ ೨೧ ಅಂಬೆಗಾಲಕೃಷ್ಣ ೨೨ ನರಹರಿಕೃಷ್ಣ ೨೩ ಶ್ರೀಪತಿರಂಗ ೨೪ ವಿಠ್ಠಲವ್ಯಾಸಾ ೨೫ ನಂದನಂದರಾಜಾ ೨೬ ವಿಜಯೀಂದ್ರರಾಮಾ ೨೭ ಗೋಪಿನಾಥ ೨೮ ಗರುಡವಾಹನ ಲಕ್ಷ್ಮೀನಾರಾಯಣ ೨೯ ಗುರು ಮಹಿಪತಿ ೩೦ ಪ್ರಾಣಪತಿ ೩೧ ಗುರು ವೇಣುಗೋಪಾಲ ೩೨ ಧೀರ ವೇಣುಗೋಪಾಲ ೩೩ ಗದುಗಿನ ವೀರನಾರಾಯಣ ೩೪ ಪ್ರಸನ್ನ ಹಯವದನ ೩೫ ಮಧ್ವಗುರು ೩೬ ಮುದ್ದುರಂಗಾ ೩೭ ಮಹಿಪತಿ ೩೮ ರಂಗಧಾಮಾ ೩೯ ವಿಠಲೇಶ ೪೦ ಹನುಮೇಶಾ ೪೧ ಮಧ್ವ ೪೨ ಮಾಧವಾ ೪೩ ಕಮಲೇಶ ೪೪ ಶ್ರೀವೆಂಕಟರಮಣಾ ೪೫ ಶ್ರೀಪತಿ ಪುರಂದರಾ ೪೬ ಗೋಪಾಲಕೃಷ್ಣಾ ೪೭ ವೈಕುಂಠಪತಿ ದಾಸ ೪೮ ಬೇಲೂರ ಚಂನಕೇಶವಾ ೪೯ ಅಚ್ಯುತ ೫೦ ವ್ಯಾಸಪತಿಕೃಷ್ಣ ೫೧ ಲಕ್ಷ್ಮೀಪತಿ ೫೨ ರಾಮಮೂರುತಿ ೫೩ ವೆಂಕಟರಂಗಧಾಮಾ ೫೪ ಶ್ರೀನಾಥ ೫೫ ಬೇಲೂರ ವೆಂಕಟಾ ೫೬ ವೆಂಕಟದಾಸಸ್ತೋತ್ರಂ

ಹರಿಕಥೆಯ ವಿದ್ವಾನರು ವೈಕುಂಠದಾಸರ ಚರಿತ್ರೆ ಜಯಕರ್ನಾಟಕವಲ್ಲಿ ಕೊಟ್ಟಿದ್ದಾರೆ.

ನಂಜುಂಡನನ್ನು ವೈಕುಂಠದಾಸರು ಬದುಕಿಸಿದರೆಂತ ಅದೆ. ವಿಜಯದಾಸರು ಮಾಡಿದ ಸುಳಾದಿಯಲ್ಲಿ ಪುರಂದರದಾಸರು ಬದುಕಿಸಿದರೆಂದು ಅದೆ.

ಈ ಇಬ್ಬರ ಕಾಲಕ್ಕೆ ಕೇಶವದಾಸರು ಅವತರಿಸಿದವರಲ್ಲ. ಸುಳಾದಿನಂಬಬಹುದೊ, ಅಥವಾ ನಂಬಲಾಗದೊ ತಿಳಿಯಲಿಕ್ಕೆ ನನಗಂತು ಬರುವದಿಲ್ಲ. ಬೇಲೂರದಾಸರು ಪ್ರತಿನಬ್ಬಿಗ ಬರಹಕ್ಕೆ ದೋಷಕೊಟ್ಟು ತಪ್ಪೆಣಿಸುತ್ತಾ ಹೋಗುವರು. ನಿಜವಿದ್ದದ್ದನ್ನು ಇಷ್ಟದ್ದು ತಾವು ಬರೆಯುವದೆ ಇಲ್ಲ.

ಪುರಂದರದಾಸ ೮೦ ವರ್ಷ ಬಾಳಿ ಬದುಕಿದರು. ೧೫೬೪ ರಲ್ಲಿ ದೇಹಬಿಟ್ಟರೆಂದು ಬೇಲೂರ ದಾಸರು ಬರೆದಾರೆ. ವಿಜಯರಾಯರ ಸುಳಾದಿಯಲ್ಲಿ (೭೩) ವರ್ಷ ೨೧ ದಿವಸ ಪುರಂದರದಾಸರು ಬದುಕಿದ್ದರೆಂದು. ವಿಜಯದಾಸರದು ನಿಜವೋ ? ಬೇಲೂರ ದಾಸರದು ನಿಜವೋ ? ನನಗೆ ತಿಳಿಯದು.

# ವಿಜಯನಗರದ ನವರಾತ್ರಿಯ ಉತ್ಸವದ ವರ್ಣನೆ

ಅನು:—ಶ್ರೀ. ನಾರಾಯಣ ಕೃಷ್ಣ ಹುಲಗೋಳ, ಬಿ. ಎ. ಎಲ್ಎಲ್. ಬಿ. ಗದಗ

ಸುಮಾರ ೧೫೨೦–೨೨ರಲ್ಲಿ ಡೊಮಿಂಗೋ ಪೇಯಸನೆಂಬವನೊಬ್ಬ ಪೋರ್ತುಗೀಜ ಪ್ರವಾಸಿಯು ವಿಜಯನಗರಕ್ಕೆ ಬಂದಿದ್ದನು. ಆತನು ಪೋರ್ತುಗಾಲದಲ್ಲಿದ್ದ ಬ್ಯಾರೋಸನೆಂಬ ಇತಿಹಾಸಕರ್ತನಿಗೆ ವಿಜಯನಗರದ ಸಂಬಂಧದಿಂದ ಒಂದು ಲೇಖನವನ್ನು ಕಳುಹಿಸಿದ್ದನು. ಅದರೊಳಗೆ ಆತನು ತಾನು ಪ್ರತ್ಯಕ್ಷವಾಗಿ ನೋಡಿ ಮಾಡಿದ ಅಲ್ಲಿಯ ನವರಾತ್ರಿಯ ಉತ್ಸವದ ವರ್ಣನೆಯನ್ನು ಎಲ್ಲ ಇಲ್ಲಿ ನಾವು ಕೊಡುತ್ತೇವೆ.

ಈ ಉತ್ಸವವು ಸಪ್ಟಂಬರತಿಂಗಳ ೧೨ ನೆಯ ತಾರೀಖಿನ ದಿವಸದಿಂದ ಆರಂಭವಾಗಿ ಒಂಭತ್ತು ದಿನಗಳ ವರೆಗೆ ಅರಸನ ಅರಮನೆಯಲ್ಲಿ ನಡೆಯುತ್ತದೆ.

ಅರಮನೆಯ ಮಾಟವು ಹೀಗಿದೆ:—ಇದಕ್ಕೆ ನಾನು ಮೇಲೆ ವರ್ಣಿಸಿದಂತೆ ಬಯಲುಗಳಿಕ್ಕೆ ಇದಿರಾಗುವಂತೆ ಒಂದು ಅಗಸೆಯದೆ; ಈ ಅಗಸೆಯ ಮೇಲೆ ಸಣ್ಣ ಸಣ್ಣ ಬಂಕಗಳುಳ್ಳ ಒಂದು ಸ್ವಲ್ಪ ಎತ್ತರದ ಗೋಪುರವದೆ. ಈ ಅಗಸೆಯ ಹೊರಗೆ ನಾನು ಮೇಲೆ ಹೇಳಿದಂತೆ ಅರಮನೆಯನ್ನು ಸುತ್ತುಗಟ್ಟಿದ ಗೋಡೆಯದೆ. ಬಾಗಿಲಲ್ಲಿ ದ್ವಾರಪಾಲಕರು ಕೆಲವರು ಬಾರುಕೋಲುಗಳನ್ನೂ ಕೆಲವರು ಬಡಿಗೆಗಳನ್ನೂ ಹಿಡಿದುಕೊಂಡು ನಿಂತಿರುತ್ತಾರೆ. ಅವರು ಪಾಳಯಗಾರರು, ಮುಖ್ಯ ಜನರು, ತಮ್ಮ ಮೇಲಧಿಕಾರಿಗಳಿಂದ ಅಪ್ಪಣೆ ಪಡೆಕೊಂಡ ಜನರ ಹೊರತಾಗಿ ಉಳಿದವರನ್ನು ಒಳಗೆ ಬಿಡುವುದಿಲ್ಲ. ಈ ಅಗಸೆಯನ್ನು ದಾಟಿ ಒಳಗೆ ಹೋದಬಳಿಕ ಒಂದು ಬಯಲ ಪ್ರವೇಶವನ್ನು ನೀವು ನೋಡುವಿರಿ. ಮುಂದೆ ಮೇಲಿನಂತೆಯೆ ಮತ್ತೊಂದು ಬಾಗಿಲವಿದ್ದು ಅಲ್ಲಿಯೂ ಕಾವಲುಗಾರರು ಇರುವರು. ನೀವು ಇದನ್ನೂ ದಾಟಿ ಒಳಗೆ ಹೋದ ಕೂಡಲೆ ಒಂದು ವಿಸ್ತಾರವಾದ ಬಯಲಿದ್ದು ಅಲ್ಲಿ ಎರಡೂ ಮಗ್ಗಲಗಳಲ್ಲಿ ಸಣ ಸಣ್ಣ ಬಂಕಗಳಿದ್ದು ಅವುಗಳಲ್ಲಿ ಉತ್ಸವಗಳನ್ನು ನೋಡಲುಬಂದ ಪಾಳಯಗಾರರೂ, ದೊಡ್ಡಸ್ತಿಕೆಯ ಗ್ರಹಸ್ಥರೂ ಕುಳ್ಳಿರುತ್ತಾರೆ; ಮತ್ತು ಈ ಬಯಲಿನ ಉತ್ತರದ ಎಡಮಗ್ಗಲಿನಲ್ಲಿ ಒಂದು ಮಹಡಿಯದೆ; ಉಳಿದವು ಇದರಂತೆಯೆ ಇವೆ. ಈ ಕಟ್ಟಡವು ಆನೆ ಮುಂತಾದ ಪ್ರಾಣಿಗಳ ಆಕಾರ ವಿರುವ ಕಂಬಗಳ ಮೇಲೆ ನಿಂತಿರುತ್ತದೆ; ಮೇಲಕ್ಕೆ ಹೋಗಲಿಕ್ಕೆ ಕಲ್ಲಿನ ಮೆಟ್ಟಲುಗಳವೆ. ಮಹಡಿಯ ಕೆಳಗೆ ಸುತ್ತಲೂ ಕಲ್ಲುಹಾಸಿಗೆಯ ನೆಲವುಳ್ಳ ಪ್ರಾಕಾರವಿದ್ದು ಅಲ್ಲಿ ಜನರು ನಿಂತು ಉತ್ಸವಗಳನ್ನು ನೋಡುತ್ತಾರೆ. ಇದಕ್ಕೆ ವಿಜಯಗ್ರಹವೆಂದು ಹೆಸರು. ಏಕೆಂದರೆ ನಾನು ಈ ಮೊದಲೆ ಹೇಳಿದಂತೆ ಇಲ್ಲಿಯ ಅರಸನು ಓರಿಯಾ ಪ್ರಾಂತದ ಅರಸನಕೂಡ ಯುದ್ಧಮಾಡಿ ಜಯವನ್ನು ಹೊಂದಿ ತಿರುಗಿಬಂದು ಇದನ್ನು ಕಟ್ಟಿಸಿದ್ದಾನೆ. ಈ ಬಯಲಿನ ಬಲಮಗ್ಗಲಿನಲ್ಲಿ ಗೋಡೆಯ ಮೇಲೆ ಹಾಯ್ದು ಕಾಣುವಷ್ಟು ಎತ್ತರವಾಗಿ ಕಟ್ಟಿಗೆಯಿಂದ ಕಟ್ಟಿದ ಅಟ್ಟಗಳಿದ್ದವು. ಇವುಗಳನ್ನು ಬೊಡ್ಡೆಯಿಂದ ತುದಿಯವರೆಗೂ ಸುಂದರವಾದ ಅರಿವೆ ಮತ್ತು ಕೆಂಪು ಹಸರು ಮಖಮಲಿನಿಂದ ಆಚ್ಛಾದಿಸಿದ್ದರು. ಈ ಅರಿವೆಗಳು ಉಣ್ಣೆಯವಿದ್ದವೆಂದು ಯಾರೂ ಕಲ್ಪಿಸಬಾರದು. ಏಕೆಂದರೆ ಈ ರಾಜ್ಯದಲ್ಲಿ ಅಂತಹವು ಇಲ್ಲ. ಮತ್ತೂ, ಇವುಗಳನ್ನು ಬಹು ಜಿನಗು ನೂಲಿನಿಂದ ತಯಾರ ಮಾಡಿರುತ್ತಾರೆ. ಈ ಅಟ್ಟಗಳೂ ಯಾವಾಗಲೂ ಅಲ್ಲಿ ಇರುವುದಿಲ್ಲ. ಈ ಉತ್ಸವದಲ್ಲಿ ಬೇಕಾಗುತ್ತವೆಂದು ಇವುಗಳನ್ನು ಮಾಡಿರುತ್ತಾರೆ; ಅವು ಹನ್ನೊಂದು ಅವೆ. ಈ ಬಾಗಿಲಗಳ ಇದುರಿನಲ್ಲಿ ಎರಡು ದುಂಡನ್ನ ಸ್ಥಳಗಳಿದ್ದು ಅವುಗಳಲ್ಲಿ ನರ್ತಕಿಯರಿದ್ದರು. ಆ ನರ್ತಕಿಯರ ಮೈಮೇಲೆ ಬಂಗಾರ, ವಜ್ರ, ಮುತ್ತುಗಳ ಅಲಂಕಾರಗಳು ತುಂಬಿದ್ದವು. ಈ ಬಯಲಿನ ಮುಂದೆ ಪೂರ್ವಕ್ಕಿರುವ ಬಾಗಿಲ ಇದುರಿನಲ್ಲಿ ಬಯಲಿನ ಮಧ್ಯದಲ್ಲಿ ವಿಜಯಗ್ರಹದಂತಹವೇ ಎರಡು ಗೃಹಗಳವೆ. ಇವುಗಳಿಗೂ ಬಹುಸುಂದರವಾಗಿ ಕೊರೆಯಲ್ಪಟ್ಟಿರುವ ಮೆಟ್ಟಲುಮಾರ್ಗಗಳವೆ. ಒಂದಕ್ಕೆ ನಡುವಿನಲ್ಲಿ ಅದೆ; ಮತ್ತೊಂದು ಕೊನೆಯಲ್ಲಿ ಅದೆ. ಈ ಕಟ್ಟಡಗಳ ಗೋಡೆ, ಕಂಬ, ಮಾಳಿಗೆಗಳೆಲ್ಲವೂ ಬೆಲೆಯುಳ್ಳ ಅರಿವೆಗಳಿಂದ ಆಚ್ಛಾದಿಸಲ್ಪಟ್ಟಿದ್ದವು. ಗೋಡೆಗಳ ಅರಿವೆ

ಗಳು ಕಸೂತಿಯ ಚಿತ್ರಗಳಿಂದ ಭೂಷಿತವಾಗಿದ್ದುವು. ಈ ಕಟ್ಟಡಗಳಲ್ಲಿ ಒಂದರ ಮೇಲೊಂದು ಸುಂದರವಾಗಿ ಕೊರೆಯಲ್ಪಟ್ಟ ಕಟ್ಟೆಗಳಿದ್ದು ಅವುಗಳಲ್ಲಿ ಅರಸನ ಪ್ರೀತ್ಯಾಸ್ಪದ ಹೆಂಗಸರ ಮಕ್ಕಳೂ, ಒಮ್ಮೊಮ್ಮೆ ಅವನ ಅಂತಃಪುರದ ಸೇವಕರೂ ಉತ್ಸವಗಳನ್ನು ನೋಡುವುದಕ್ಕಾಗಿ ಬಂದು ಕುಳಿತುಕೊಳ್ಳುತ್ತಾರೆ. ಅರಸನು ಕುಳಿತ ಸ್ಥಳಕ್ಕೆ ಹತ್ತಿ ಒಂದು ಮೇಲ್ಕಟ್ಟೆಯಲ್ಲಿ ಉತ್ಸವಗಳನ್ನೂ ವೈಭವವನ್ನೂ ಚೆನ್ನಾಗಿ ನೋಡುವುದಕ್ಕಾಗಿಯೆ ಎಂದು ಕ್ರಿಸ್ಟೋವಾವೊಡಿ ಫಿಗ್ವೇರೇಡೋನನ್ನೂ ಅವನ ಸಂಗಡ ಬಂದ ನಮ್ಮೆಲ್ಲರನ್ನೂ ಕುಳ್ಳಿರಿಸಿದ್ದರು. ಅರಮನೆಯಲ್ಲಿಯ ಬೀದಿಗಳನ್ನು ವರ್ಣಿಸಲಿಕ್ಕೆ ಮರೆಯಬಾರದೆಂದು ಅವುಗಳನ್ನು ಹೇಳುತ್ತೇನೆ. ನಾನು ಮೇಲೆ ಹೇಳಿದ ಅರಮನೆಯ ಒಳಮುಗ್ಗಲಿನಲ್ಲಿ ಅರಸನೂ ಅವನ ಹೆಂಡಂದಿರೂ ಅವರ ಹನ್ನೆರಡುಸಾವಿರ ದಾಸಿಯರೂ ಇರುವ ಮನೆಯುದೆ. ಮತ್ತು ಈ ಸಾಲು ಮನೆಗಳಿಗೆ ಒಳಕ್ಕೆ ಹೋಗುವವರ ಸಲುವಾಗಿ ಒಂದು ಬಾಗಿಲವದೆ. ಈ ಅರಮನೆಗೂ ವಿಜಯಗೃಹಕ್ಕೂ ನಡುವೆ ಓಡಾಡಲಿಕ್ಕೆ ಒಂದು ಬಾಗಿಲವದೆ. ಒಳಗೆ ಮೂವತ್ತು ನಾಲ್ಕು ಬೀದಿಗಳಿವೆ.

ಇನ್ನು ಉತ್ಸವಗಳನ್ನು ವರ್ಣಿಸುವೆನು. ಈ ವಿಜಯಗೃಹದಲ್ಲಿ ಅರಿವೆಯಿಂದ ಮಾಡಲ್ಪಟ್ಟದೂ ಬಾಗಲವುಮುಚ್ಚಿದುದೂ ಆದ ಅರಿವೆಯ ಕೋಣೆಯೊಂದನ್ನು ಮಾಡಿಸಿ ಅರಸನು ಮೂರ್ತಿಯನ್ನು ಇಟ್ಟಿರುವನು. ಮತ್ತು ಮತ್ತೊಂದರಲ್ಲಿ ಮಧ್ಯದಲ್ಲಿ ಮೆಟ್ಟಲುಮಾರ್ಗದ ಇದುರಿನಲ್ಲಿ ಒಂದು ಜಗಲಿಯುದೆ. ಈ ಜಗಲಿಯಲ್ಲಿ ಒಂದು ಸಿಂಹಾಸನವನ್ನು ಇಟ್ಟಿರುವರು. ಅದು ಹೇಗೆ ಅದೆಯೆಂದರೆ– ನಾಲ್ಕುಮುಗ್ಗಲುಳ್ಳದೂ, ಸಪಾಟಾದುದೂ, ಮೇಲೆ ದುಂಡನ್ನ ಮಾಳಿಗೆಯುಳ್ಳದೂ ಮಧ್ಯದಲ್ಲಿ ಕುಳಿತುಕೊಳ್ಳಲಿಕ್ಕೆ ಪೊಳ್ಳುಳ್ಳದೂ ಆಗಿದೆ. ಅದರ ಕಟ್ಟಿಗೆ ಕೆಲಸವನೆಲ್ಲ ಸೂಸಿಅರಿವೆಯಿಂದ ಮುಚ್ಚಿರುವರು; ಬಂಗಾರದ ಸಿಂಹಗಳು ಇರುತ್ತವೆ ; ಸೂಸಿಯ ಅರಿವೆಗಳ ನಡುವಿನ ಪ್ರದೇಶದಲ್ಲಿ ಮಾಣಿಕ ಸೀಮೆಮುತ್ತುಗಳನ್ನು ಕೆಚ್ಚಿದ ಬಂಗಾರದ ತಗಡುಗಳವೆ. ಕೆಳಕ್ಕೂ ಮುತ್ತುಗಳವೆ ; ಸುತ್ತಲೂ ಮನುಷ್ಯರ ಬಂಗಾರದ ಮೂರ್ತಿಗಳಿದ್ದು ಆ ಮೂರ್ತಿಗಳನ್ನು ಬೆಲೆಯುಳ್ಳ ಹರಳುಗಳಿಂದ ಕೆಚ್ಚಿರುತ್ತಾರೆ. ಈ ಸಿಂಹಾಸನದಲ್ಲಿ ಬಂಗಾರದ ಮೂರ್ತಿಯನ್ನಿಟ್ಟು ಹೂಗಳನ್ನೇರಿಸಿರುತ್ತಾರೆ. ಈ ಸಿಂಹಾಸನದ ಒಂದು ಪಕ್ಕೆಯಲ್ಲಿ ಕಟ್ಟೆಯ ಕೆಳಗೆ ಮೇಲೆ ಹೇಳಿದಂತೆ ನೆಟ್ಟಗೆ ಒಂದು ಗೇಣು ಎತ್ತರವಾದ, ತಲೆಗೆ ಹಾಕತಕ್ಕ ಉಡುಪು ಇದ್ದು ಅದರ ತುದಿಯು ದುಂಡಾಗಿದೆ. ಅದರ ತುಂಬೆಲ್ಲ ಮಾಣಿಕ, ಮುತ್ತು ರತ್ನ ಮುಂತಾದವುಗಳಿರುತ್ತವೆ, ಅದರ ತುಟ್ಟತುದಿಯಲ್ಲಿ ಒಂದು ಸಣ್ಣ ಕಾಯಿಯಷ್ಟು ಅಷ್ಟುದುಂಡಾಗಿರದ ರತ್ನವಿದೆ. ಮತ್ತೊಂದು ಪಕ್ಕದಲ್ಲಿ ಇದೇ ರೀತಿಯಿಂದ ತಯಾರಿಸಿದ ಕಾಲುಕಡಗವದೆ. ಅದು ಸಂಸ್ಥಾನದ ಎರಡನೆಯ ಅಲಂಕಾರವಿದ್ದು ಅದರಲ್ಲಿ ವಜ್ರ ವೈಡೂರ್ಯ ಮಾಣಿಕ ಪಚ್ಚ ಮುಂತಾದ ಬೆಲೆಯುಳ್ಳ ಹರಳುಗಳವೆ. ಅದು ಮನುಷ್ಯರ ಕೈಯಷ್ಟು ಗಡುತರವಾಗಿದೆ. ಇದರಮುಂದೆ ಕಟ್ಟೆಯ ತುದಿಯಲ್ಲಿ ಕೆಲವು ಲೋಡು (ದಿಂಬು) ಗಳನ್ನು ಇಟ್ಟುಕೊಂಡು ಅರಸನು ಉತ್ಸವಗಳನ್ನು ನೋಡುವುದಕ್ಕೆ ಕುಳಿತುಕೊಂಡಿರುವನು. ಈ ಉತ್ಸವಗಳು ಪ್ರಾರಂಭವಾಗುವ ರೀತಿಯು ಹೇಗೆಂದರೆ :—

ಬೆಳಗಾದ ಬಳಿಕ ಅರಸನು ವಿಜಯಗೃಹಕ್ಕೆ ಬಂದು ಮೂರ್ತಿಯೂ ಬ್ರಾಹ್ಮಣರೂ ಇರುವ ಕೊಠಡಿಗೆಹೋಗಿ ತನ್ನ ಪ್ರಾರ್ಥನೆ ಮುಂತಾದ ವಿಧಿಗಳನ್ನು ಮಾಡುವನು. ಆ ಗ್ರಹದ ಹೊರಗೆ ಅವನ ಪ್ರೀತಿಯ ಹೆಂಗಸರೂ ಇರುವರು ಮತ್ತು ಚೌಕಿನಲ್ಲಿ ನರ್ತಕಿಯರು ಕುಣಿಯುತ್ತಿರುವರು. ಚೌಕಿನಲ್ಲಿ ಸುತ್ತಲೂ ಇರುವ ಬಂಕಗಳಲ್ಲಿ ನೋಡಲಿಕ್ಕೆ ಪಾಳಯಗಾರರೂ ಸಭ್ಯಗ್ರಹಸ್ಥರೂ ಕುಳಿತಿರುವರು. ಗೃಹದ ಕಟ್ಟೆಯ ಹತ್ತಿರ ನೆಲದಮೇಲೆ ಸುವ್ಯವಸ್ಥಿತವಾಗಿ ಪಕ್ಕರಿಕೆಗಳಿಂದಲೂ ಅಲಂಕಾರಗಳಿಂದಲೂ ಭೂಷಿಸಲ್ಪಟ್ಟ ಹನ್ನೊಂದು ಕುದುರೆಗಳು ನಿಂತಿರುತ್ತವೆ. ಅವುಗಳಹಿಂದೆ ಚೆನ್ನಾಗಿ ಅಲಂಕರಿಸಲ್ಪಟ್ಟ ನಾಲ್ಕು ಆನೆಗಳು ನಿಂತಿರುತ್ತವೆ. ಅರಸನು ಒಳಗೆಹೋಗಿ ಹೊರಗೆ ಬಂದಬಳಿಕ, ಒಬ್ಬ ಬ್ರಾಹ್ಮಣನು ಅವನಸಂಗಡಲೆ ಒಂದು ಬುಟ್ಟಿತುಂಬ ಬಿಳಿಯ ಹೂವುಗಳನ್ನು ತೆಗೆದುಕೊಂಡು ಬರುವನು. ಅವುಗಳಲ್ಲಿ ಒಂದು ಬೊಗಸೆತುಂಬ ಹೂವುಗಳನ್ನು ತೆಗೆದುಕೊಂಡು ಅರಸನು ಆ ಕುದುರೆಗಳಮೇಲೆ ತೂರುವನು. ಆಬಳಿಕ ಒಂದು ಬುಟ್ಟಿಯತುಂಬ ಧೂಪಗಳನ್ನು ತೆಗೆದು ಕುದುರೆಗಳಿಗೆ ಮೂಸಿ ತೋರಿಸುವಂತೆ ಮಾಡುವನು ; ಇದೆಲ್ಲವೂ ಆದಬಳಿಕ ಅರಸನು ಆನೆಗಳ ಬಳಿಗೆ ಬಂದು ಇದರಂತೆಯೆ ಮಾಡುವನು. ಅರಸನು ಇದನ್ನು ಮುಗಿಸಿದ ಬಳಿಕ ಬ್ರಾಹ್ಮಣನು ಕಟ್ಟೆಯನ್ನಿಳಿದು ಆ ಬುಟ್ಟಿಯಲ್ಲಿರುವ ಹೂವುಗಳನ್ನು ಕುದುರೆಗಳ ತಲೆಗಳ ಮೇಲೆ ಚಲ್ಲಿ ಅರಸನಿದ್ದಲ್ಲಿಗೆ ಬರುವನು.

ಆ ಬಳಿಕ ಅರಸನು ಮೂರ್ತಿಯು ಇದ್ದ ಸ್ಥಳದೊಳಗೆ ಹೋದ ಕೂಡಲೆ ಆ ಕೊರಡಿಯು ಸುತ್ತಲು (ಡೇರೆಯ ಪಡದೆಯಂತಿರುವ) ಇರುವ ಮರೆಗಳನ್ನು ಮೇಲಕ್ಕೆತ್ತುವರು. ಮತ್ತು ಈ ಮರೆಗಳಿದ್ದಲ್ಲಿ ಅರಸನು ಕುಳಿತ ಬಳಿಕ ಎಲ್ಲ ಮರೆಗಳನ್ನೂ ಮೇಲಕ್ಕೆತ್ತುವರು. ಅಲ್ಲಿಯೆ ಕುಳಿತು ಇಪ್ಪತ್ತುನಾಲ್ಕು ಕೋಣಗಳನ್ನೂ ನೂರೈವತ್ತು ಕುರಿಗಳನ್ನೂ ಕೊಲ್ಲಿಸಿ ಅವುಗಳನ್ನು ಮೂರ್ತಿಗೆ ಬಲಿಕೊಡುವನು. ಈ ಕುರಿಕೋಣಗಳ ತಲೆಗಳನ್ನು ಕೊಲೆಯು ಅಧಿಕಾರಿಯು ತನ್ನ ಕೈಯಲ್ಲಿ ಹಿಡಿದಿರುವ ಕೊಯ್ತದ ಒಂದೇ ಹೊಡೆತದಿಂದ ಹಾರಿಸುವನೆಂಬುದನ್ನು ನೀವು ತಿಳಿಯಬೇಕು. ಅವನಿಗೆ ತನ್ನ ಹೊಡೆತವು ಎಂದೂ ತಪ್ಪುವುದಿಲ್ಲವೆಂದು ಬಹಳ ವಿಶ್ವಾಸವಿರುತ್ತದೆ. ಈ ಕುರಿಕೋಣಗಳನ್ನು ಕಡಿದ ನಂತರ ಅರಸನು ಉಳಿದ ದೊಡ್ಡ ದೊಡ್ಡ ಕಟ್ಟಡಗಳಿಗೆ ಹೋಗುವನು. ಅಲ್ಲಿ ಹೋದ ಕೂಡಲೆ ಅಲ್ಲಿಯೆ ಕಟ್ಟೆಯಮೇಲೆ ನಿಂತಿದ್ದ ಬ್ರಾಹ್ಮಣರು—ಎಂದರೆ ಸಮೀಪದಲ್ಲಿದ್ದವರು—ಅರಸನ ಮೇಲೆ ಹತ್ತುಹನ್ನೆರಡು ಹೂವುಗಳನ್ನು ತೂರುವರು. ಆ ಬಳಿಕ ಅವರು ಎಲ್ಲ ಕಟ್ಟಡಗಳ ಮಾಳಿಗೆಗಳಗುಂಟ ಹಾಯ್ದು ತುದಿಯವರೆಗೆ ಹೋಗಿ ತನ್ನ ತಲೆಯ ಮೇಲಿನ ಟೊಪ್ಪಿಗೆಯನ್ನು ತೆಗೆದು ನೆಲದ ಮೇಲಿಟ್ಟು ಮೂರ್ತಿಯು ಇದ್ದ ಸ್ಥಳದ ಕಡೆಗೆ ತಿರುಗುವನು. ಇಲ್ಲಿ ಅವನು ನೆಲದ ಮೇಲೆ ಸಾಗರ ಬೀಳುವನು. ಅವನು ಎದ್ದು ಮನೆಯೊಳಗೆ ಹೋದ ಬಳಿಕ ಒಂದು ತೋಟದಲ್ಲಿ (ಇಲ್ಲವೆ ಸುತ್ತ ಗೋಡೆಗಳುಳ್ಳ ಸ್ಥಳದಲ್ಲಿ) ಹೋಗುವನು. ಅಲ್ಲಿ ಸ್ವಲ್ಪ ಬೆಂಕೆಯನ್ನು ಹೊತ್ತಿಸಿ ಅದರಲ್ಲಿ ಮುತ್ತು ಮಾಣಿಕ್ಯ ಮುಂತಾದ ಬೆಲೆಯುಳ್ಳ ವಸ್ತುಗಳಿಂದ ಮಾಡಿದ ಹಿಟ್ಟನ್ನೂ ಸುಗಂಧ ಧೂಪಗಳಿಂದ ಮಾಡಿದ ಹಿಟ್ಟನ್ನೂ ಚಲ್ಲುವನಂತೆ; ಇದಾದ ಬಳಿಕ ಅವನು ದೇವಾಲಯಕ್ಕೆ ತಿರುಗಿ ಬಂದು ಒಳಗೆ ಹೋಗಿ ಸ್ವಲ್ಪ ಮಟ್ಟಿಗೆ ಕಾಯ್ದಿದ್ದಂಲು ಅವನ ಪ್ರೀತಿಯ ಹೆಂಗಸರು ಎರಡನೆ ದ್ವಾರದಿಂದ ಒಳಕ್ಕೆ ಹೋಗಿ ಅವನಿಗೆ ಸಲಾಮು ಮಾಡುವರು. ಅನಂತರ ತಾನು ಕುದುರೆಗಳ ಮೇಲೆ ಹೂವುಗಳನ್ನು ಚಲ್ಲಿದ ಸ್ಥಳಕ್ಕೆ ಹೋಗಿ ನಿಲ್ಲುವನು. ಆಮೇಲೆ ಪಾಳೆಯಗಾರರು—ದೊಡ್ಡ ಗೃಹಸ್ಥರು ಬಂದು ಅವನಿಗೆ ಸಲಾಮು ಮಾಡುವರು. ಕೆಲವರು ಅವನಿಗೆ ಕಾಣಿಕೆಗಳನ್ನು ಕೊಡುವರು. ಬಳಿಕ ತಾವು ಬಂದಂತೆಯೆ ತಿರುಗಿ ಹೋಗಿ ತಮ್ಮ ತಮ್ಮ ಮನೆಗಳಿಗೆ ತೆರಳುವರು. ಮತ್ತೆ ಅರಸನು ಮೇಲೆ ನಾನು ಹೇಳಿದ ಅಗಸೆಯಿಂದ ಎಂದರೆ ಪಟಾಂಗಣದಲ್ಲಿಪ್ಪ ಎರಡು ಮನೆಗಳ ನಡುವೆ ಇರುವ ಅಗಸೆಯಿಂದ ತನ್ನ ಅರಮನೆಯ ಒಳಕ್ಕೆ ಹೋಗುವನು. ಆ ಗುಡಿಯ ಮುಂದೆಯೂ ಮೂರ್ತಿಯ ಮುಂದೆಯೂ ಎಷ್ಟೋ ಹೊತ್ತಿನವರೆಗೆ ನರ್ತಕಿಯರೂ ಕುಣಿಯುತ್ತಿರುವರು. ಇದೇ ಪ್ರಕಾರವಾಗಿ ಈ ಒಂಭತ್ತು ದಿನಗಳಲ್ಲಿಯೂ ಪ್ರತಿ ದಿವಸ ಮುಂಜಾವಿನಲ್ಲಿ ವಿಧಾನ ಪೂರ್ವಕವಾಗಿ ಮಾಡುವರು. ಮತ್ತು ದಿನ ದಿನಕ್ಕೂ ವಿಜೃಂಭಣೆಯು ಹೆಚ್ಚಾಗುವುದು.

ಮತ್ತೆ ಉತ್ಸವಗಳ ಕಡೆಗೆ ತಿರುಗುವ. ಮಧ್ಯಾಹ್ನದ ಮೂರು ಘಂಟೆಗೆ ಪ್ರತಿಯೊಬ್ಬನು ಅರಮನೆಗೆ ಬರುವನು. ಎಲ್ಲರನ್ನೂ ಒಮ್ಮೆಲೆ ಒಳಗೆ ಬಿಡುವುದಿಲ್ಲ. (ನಮ್ಮನ್ನು ಮಾತ್ರ ಎರಡೂ ಅಗಸೆಗಳ ನಡುವೆ ಇರುವ ಬಯಲಲ್ಲಿ ಹೋಗಗೊಟ್ಟರು.) ಆದರೆ ಒಳಗೆ ಕುಸ್ತಿಯಾಡುವ ಮಲ್ಲರನ್ನೂ ನರ್ತಕಿಯರನ್ನೂ, ಪಕ್ಕರಿಕೆ ಮುಂತಾದ ಅಲಂಕಾರಗಳುಳ್ಳ ಆನೆಗಳನ್ನೂ ಒಳಗೆ ಹೋಗಗೊಟ್ಟರು. ಆನೆಗಳ ಮೇಲೆ ಕುಳಿತಿರುವ ಜನರು ಕವುದಿಯ ಅಂಗಿಯನ್ನು ತೊಟ್ಟುಕೊಂಡು ಕೈಯಲ್ಲಿ ಭಲ್ಲೆ ಢಾಲು (ಗುರಾಣಿ)ಗಳನ್ನು ಹಿಡಿದುಕೊಂಡಿದ್ದರು. ಅವರು ಒಳಕ್ಕೆ ಬಂದ ಕೂಡಲೆ ಪಟಾಂಗಣದಲ್ಲಿ ದುಂಡಾಗಿ ಸಾಲುಗಟ್ಟಿ ನಿಲ್ಲುವರು. ಆ ಬಳಿಕ ಆ ಗೃಹದ ನಡುವೆಯಿರುವ ಮೆಟ್ಟಲುಗಳ ಸಮೀಪಕ್ಕೆ ಮಲ್ಲರು ಹೋಗುವರು. ಮೆಟ್ಟಲುಗಳ ಸಮೀಪದಲ್ಲಿ ನರ್ತಕಿಯರು ಕುಸ್ತಿಯಾಡುವದಕ್ಕಾಗಿ ಒಂದು ದೊಡ್ಡ ಸ್ಥಳವನ್ನು ತಯಾರು ಮಾಡಿರುವರು. ಗೃಹದ ಇದುರಿನಲ್ಲಿರುವ ಪ್ರವೇಶ ದ್ವಾರದ ಬಳಿಯಲ್ಲಿ ಬಹಳ ಜನರು ಎಂದರೆ ಬ್ರಾಹ್ಮಣರು ಅರಸನ ಪ್ರೀತಿಯ ಹೆಂಗುಸರ ಮಕ್ಕಳೂ ಅವರ ಆಪ್ತೇಷ್ಟರೂ ಇರುತ್ತಾರೆ. ಈ ಮಕ್ಕಳು ಅರಸನ ಸೇವೆಗಾಗಿಯೆ ಇರುವ ತರುಣರು ಇರುತ್ತಾರೆ. ಮನೆಯ ಅಧಿಕಾರಿಗಳು ಜನರಲ್ಲಿ ವ್ಯವಸ್ಥೆಯನ್ನಿಡುತ್ತ ಅವರವರನ್ನು ಯೋಗ್ಯ ಸ್ಥಳದಲ್ಲಿ ನಿಲ್ಲಿಸುತ್ತಲೂ ಅಲೆಯುತ್ತಿರುವರು. ಬೇರೆ ಬೇರೆ ಮಂಟಪಗಳಿಗೆ ಬೇರೆ ಬೇರೆ ಬಾಗಿಲಗಳಿವೆ ಏಕೆಂದರೆ ಕರೆಯುವ ಹೊರತು ಒಬ್ಬರೂ ಅಲ್ಲಿಗೆ ಹೋಗಬಾರದಂತೆ.

ಟಿಸಾಲ್ವತಿನೀಕ (ಸಾಳ್ವತಿಮ್ಮರಸು,) ಅರಸನ ಮಂತ್ರಿಯೂ; ಈ ಗೃಹದಲ್ಲಿ ಪ್ರವೇಶಮಾಡುವ ಮುಖ್ಯ ಮನುಷ್ಯನು. ಅವನೇ ಎಲ್ಲವನ್ನು ನೋಡಿಕೊಳ್ಳುವನು; ಏಕೆಂದರೆ ಅವನೇ ಅರಸನನ್ನು ದೊಡ್ಡವನನ್ನುಮಾಡಿ ಅರಸನನ್ನು ಮಾಡಿದನು. ಆದುದರಿಂದ

ಅರಸನು ಅವನನ್ನೆ ತನ್ನ ತಂದೆಯಂತೆ ತಿಳಿಯುವನು. ಅರಸನು ಅವನನ್ನು ಸಾಲ್ವತಿನೀಕದೊರೆಯೆ ಎಂದು ಕರೆಯುತ್ತಾನೆ. ಪಾಳಯಗಾರರೂ ಸರದಾರರೂ ಅವನಿಗೆ ಸಲಾಮು ಮಾಡುವರು. ಈ ಸಾಲ್ವತಿನೀಕನು ಈ ಉತ್ಸವಗಳು ನಡೆಯುವ ಪಟಾಂಗಣದಲ್ಲಿ ಒಂದು ಬಾಗಿಲಹತ್ತಿರ ನಿಲ್ಲುವನು; ಮತ್ತು ಉತ್ಸವಕ್ಕೆ ಬೇಕಾಗುವ ಪದಾರ್ಥಗಳನ್ನು ಒಳಗೆ ಕಳುಹಿಸುವುದಕ್ಕೆ ಅಪ್ಪಣೆಮಾಡುವನು.

ಇವೆಲ್ಲವೂ ವ್ಯವಸ್ಥೆಯಿಂದ ಸಿದ್ಧವಾದಬಳಿಕ ಅರಸನು ನಾನು ಮೇಲೆಹೇಳಿದ ಕಟ್ಟೆಯಮೇಲೆ ಹೋಗಿ ಸಿಂಹಾಸನದಲ್ಲಿ ಕುಳಿತುಕೊಳ್ಳುವನು. ಅಲ್ಲಿ ಒಳಗಿದ್ದವರೆಲ್ಲರೂ ಅವನಿಗೆ ಸಲಾಮುಮಾಡುವರು. ಇದಾದಬಳಿಕ ಮಲ್ಲರೆಲ್ಲರೂ ನೆಲದ ಮೇಲೆ ಕುಳಿತುಕೊಳ್ಳುವರು. ಉಳಿದವರಿಗೆ ಅವರು ಎಷ್ಟು ದೊಡ್ಡದೊರೆಯಿದ್ದರೂ ಅರಸನ ಅಪ್ಪಣೆಯಹೊರತು ಕುಳಿತುಕೊಳ್ಳಲಿಕ್ಕೆ ಅಪ್ಪಣೆಯಿಲ್ಲ. ಅರಸನ ಸಮಕ್ಷದಲ್ಲಿ ಯಾರಿಗೂ ವೀಳ್ಯೆಯನ್ನು ಸವಿಯಲಿಕ್ಕೆ ಅಪ್ಪಣೆಯಿರದೇ ಇದ್ದರೂ, ಇವರಿಗೂ ಗಣಿಕೆಯರಿಗೂ ಎಲೆಅಡಿಕೆಯನ್ನು ತಿನ್ನಲಿಕ್ಕೆ ಬರುವುದು. ಅರಸನು ತನ್ನ ಸಿಂಹಾಸನದಲ್ಲಿ ಕುಳಿತಬಳಿಕ ತನ್ನ ವಂಶದ ಮೂರುನಾಲ್ಕುಜನರಿಗೂ ತನ್ನಬಳಿಯಲ್ಲಿ ಕುಳಿತುಕೊಳ್ಳಲಿಕ್ಕೆ ಹೇಳುವನು. ಅವರು ಅರಸರಾಗಲಿ ಅರಸನ ಹೆಂಡಂದಿರ ತಂದೆಗಳಾಗಲಿ ಇರುವರು. ಇವರಲ್ಲಿ ಮುಖ್ಯನಾದವನು ಮಲಬಾರದ ದಂಡೆಯಲ್ಲಿರುವ ಯಾವತ್ತು ಪ್ರದೇಶ ಮತ್ತು ಶ್ರೀರಂಗಪಟ್ಟಣದ ಅರಸನಾದ ಮಾರವೀರ್ಯನೆಂಬುವನು. ಅವನು ಅರಸನಿಂದ ಆದಷ್ಟುದೂರದಲ್ಲಿ ಅದೇ ಕಟ್ಟೆಯ ಮೇಲೆ ಕುಳಿತಿರುತ್ತಾನೆ. ಅವನ ಹಿಂದೆ ಉಳಿದವರು ಕುಳಿತಿರುತ್ತಾರೆ.

ಅರಸನು ಜರದ ಹೂವುಗಳುಳ್ಳ ಬೆಳ್ಳನ್ನ ಅರಿವೆಗಳನ್ನೂ ವಜ್ರವೈಡೂರ್ಯಗಳನ್ನೂ ಧರಿಸಿಕೊಂಡು ಅಲ್ಲಿ ಕುಳಿತಿರುವನು. (ನಾನು ಯಾವಾಗಲೂ ಅರಸನನ್ನು ಇದೇ ಪೋಷಾಕಿನಲ್ಲಿಯೆ ನೋಡಿರುವೆನು). ಅವನಸುತ್ತಲೂ ವೀಳೆ, ಖಡ್ಗ ಮುಂತಾದ ರಾಜಚಿಹ್ನಗಳನ್ನು ಹಿಡಿದುಕೊಂಡು ಅವನ ಸೇವಕರು ನಿಂತಿರುವರು. ಮೂರ್ತಿಯು ಕುಳಿತಿದ್ದ ಸಿಂಹಾಸನದ ಹತ್ತಿರ ಬ್ರಾಹ್ಮಣರು ನಿಂತು ಬಂಗಾರದತಗಡಿನ ಹಿಡಿಕೆಗಳುಳ್ಳ ಕುದರೆಯ ಬಾಲದಬಣ್ಣದ ಕೂದಲುಗಳ (ಚೌರಿ) ಗುಚ್ಛವನ್ನು ಬೀಸುತ್ತ ನಿಂತಿರುವರು. ಈ ಗುಂಚ್ಛಗಳು ಬಹಳ ದೊಡ್ಡ ಮರ್ಯಾದೆ ಚಿಹ್ನಗಳು; ಅರಸನನ್ನು ಸಹ ಇಂತಹ ಗುಚ್ಛಗಳಿಂದ ಬೀಸುವರು.

ಅರಸನು ಕುಳಿತಬಳಿಕ ಹೊರಗೆ ಕಾಯುತ್ತಿದ್ದ ಪಾಳಯಗಾರರು ಒಬ್ಬೊಬ್ಬರಂತೆ ತಮ್ಮ ಪರಿವಾರವನ್ನು ತೆಗೆದುಕೊಂಡು ಒಳಕ್ಕೆ ಬರುವರು. ಮತ್ತು ಅರಸನಬಳಿಗೆ ಬಂದು ಸಲಾಮುಮಾಡಿ ನಾನು ಮೇಲೆಹೇಳಿದ ಮಂಡಪಗಳಲ್ಲಿ ತಮ್ಮ ತಮ್ಮ ಸ್ಥಳಗಳಲ್ಲಿ ಕುಳಿತುಕೊಳ್ಳುವರು. ಈ ಪಾಳಯಗಾರರು ಬಂದುಹೋದಬಳಿಕ ಸೇನಾನಾಯಕರು ಭಲ್ಲೆಡಾಲುಗಳನ್ನು ಹಿಡಿದುಕೊಂಡು ಬರುವರು. ಅವರ ಹಿಂದೆ ಬಿಲ್ಲುಗಾರರ ನಾಯಕರು ಬರುವರು. ಇವರು ಆನೆಗಳ ಮುಂದೆ ಪಟಾಂಗಣದಲ್ಲಿ ನೆಲದ ಮೇಲೆ ದುಂಡಗಾಗಿ ನಿಂತು ಅರಸನ ಸಮೀಪಕ್ಕೆ ಆಯುಧಪಾಣಿಗಳಾಗಿ ಯಾರೂ ಹೋಗದಂತೆ ಕಾಯುತ್ತ ನಿಂತಿರುವರು. ಈ ಸೇನಾನಾಯಕರು ತಮ್ಮ ತಮ್ಮ ಸ್ಥಳಗಳಲ್ಲಿ ನಿಂತನಂತರ ಗಣಿಕೆಯರು ಕುಣಿಯುವುದಕ್ಕೆ ಪ್ರಾರಂಭಿಸುವರು. ಕೆಲವರು ಮೇಲೆ ನಾನು ಹೇಳಿದ ಪ್ರವೇಶದ್ವಾರದಲ್ಲಿರುವ ದುಂಡನ್ನ ಮೇಲಹುಸಿಗಳಲ್ಲಿ ಹೋಗಿ ನಿಲ್ಲುವರು. ಈ ಹೆಂಗಸರು ಧರಿಸಿದ ಆಭರಣಗಳನ್ನು ನಿಮ್ಮ ಮುಂದೆ ಯಾರಿಂದ ಯೋಗ್ಯವಾಗಿ ವರ್ಣಿಸಲಾದೀತು ? ವಜ್ರ, ಮುತ್ತು ಮಾಣಿಕಗಳಿಂದ ಕೆಚ್ಚಲ್ಪಟ್ಟ ಬಂಗಾರದ ಕೊರಳಪಟ್ಟಿಗಳೂ, ಮುಂಗೈ ಮತ್ತು ರಟ್ಟೆಗಳಮೇಲಿನ ಬಳೆಗಳೂ, ಸೊಂಟದ ಪಟ್ಟಿಗಳೂ, ಕಾಲ್ಕಡಗಗಳೂ—ಇವುಗಳನ್ನು ಯಾರು ಚನ್ನಾಗಿ ವರ್ಣಿಸುವರು ? ಇಂತಹ ಉದ್ಯೋಗವನ್ನು ಮಾಡುವ ಸ್ತ್ರೀಯರು ಇಂತಹ ದ್ರವ್ಯವನ್ನು ಸಂಪಾದಿಸುವುದೆಂದರೆ ಬಹಳ ಆಶ್ಚರ್ಯ. ಅಲ್ಲದೆ ಅವರಲ್ಲಿ ಕೆಲವರಿಗೆ ಭೂಮಿಗಳವೆ, ಮೇಣೆಗಳವೆ ; ಮತ್ತು ಅವರ ದಾಸಿಯರನ್ನು ಅವರ ವಸ್ತುಗಳನ್ನು ಎಣಿಸುವುದು ಯಾರಿಂದಲೂ ಆಗದು. ಇಲ್ಲಿ ಒಬ್ಬ ಹೆಂಗಸು ಇರುವಳು ; ಅವಳಹತ್ತಿರ ಒಂದು ಲಕ್ಷಪದಾ (ಒಂದು ಬಂಗಾರದ ನಾಣ್ಯ) ಗಳಿವೆಯೆಂದು ಹೇಳುತ್ತಾರೆ ; ನಾನು ನೋಡಿದವುಗಳಿಂದ ಇದು ನಿಜವಿರಬಹುದೆಂದು ನಂಬುತ್ತೇನೆ.

ಬಳಿಕ ಮಲ್ಲರು ಕುಸ್ತಿಗಳನ್ನಾರಂಭಿಸುವರು. ಇವರು ನಮ್ಮವರಂತೆ ಕುಸ್ತಿ ಆಡುವುದಿಲ್ಲ; ಅವರು ಹಲ್ಲುಗಳು ಮುರಿಯುವಂತೆ ಕಣ್ಣುಗಳು ಒಡೆಯುವಂತೆ, ಮುಖಗಳು ಹರಿಯುವಂತೆ, ಹೊಡೆತಗಳನ್ನು ಕೊಡುತ್ತಾರೆ. ಒಮ್ಮೊಮ್ಮೆ

ನು ಎಚ್ಚರತಪ್ಪಿ ಬೀಳಲು ಅವರ ಮಿತ್ರರು ಅವರನ್ನು ತ್ತಿಕೊಂಡು ಹೋಗುತ್ತಾರೆ. ಒಮ್ಮೊಮ್ಮೆ ಚೆನ್ನಾಗಿಯೆ ಸವಲ್ಲಿ ಕೆಡುವುತ್ತಾರೆ. ಅಲ್ಲಿ ನಿರ್ಣಯ ಮಾಡತಕ್ಕವರು ತಮ್ಮ ಅವರು ಮೇಲಿಂದ ಮೇಲೆ ಕಣದಲ್ಲಿ ಯೋಗ್ಯ ಸ್ಥಳ ದಲ್ಲಿ ನಿಲ್ಲಿಸಿ ಕುಸ್ತಿಮಾಡಿಸಿ ಗೆದ್ದವನಿಗೆ ಮರ್ಯಾದೆಯನ್ನು ಕೊಡುತ್ತಾರೆ.

ಹಗಲಿನಲ್ಲಿ ಎಲ್ಲ ಕುಸ್ತಿ ಮತ್ತು ಕುಣಿತಗಳ ಹೊರತಾಗಿ ಕ್ಕಿನ ಕೆಲಸವನ್ನು ಮಾಡುವುದಿಲ್ಲ, ಸೂರ್ಯನು ಕೆಳಗೆ ಹೋದ ಕೂಡಲೆ ದೀವಟಿಗೆಗಳನ್ನು ಧಗಧಗ ಉರಿಯುವ ರಿನೆಯ ಕಕ್ಕಡಗಳನ್ನು ಹಚ್ಚುತ್ತಾರೆ. ಇವುಗಳನ್ನು ಪಟಾಂ ಗಣದಲ್ಲಿ ಎಲ್ಲೆಲ್ಲಿಯೂ ಹಗಲಿನಂತೆ ಬೆಳಕಾಗುವ ಹಾಗೆ ಹಚ್ಚಿ ಡುತ್ತಾರೆ. ಗೋಡೆ ಕೋಟೆ ಕೊತ್ತಳಗಳ ಮೇಲೆ ಸಹ ದೀವಿಗೆಗಳನ್ನು ಹಚ್ಚುತ್ತಾರೆ. ಅರಸನು ಕುಳಿತ ಸ್ಥಳದಲ್ಲೆಲ್ಲ ಸಹ ದೀವಟಿಗೆಗಳಿರುತ್ತವೆ. ದೀವಟಿಗೆಗಳು ಹತ್ತಿದನಂತರ ಚಮತ್ಕಾರದ ಆಟಗಳೂ, ಯಂತ್ರಗಳ ಆಟಗಳೂ, ಬಂದು ಅರಸನ ಹತ್ತಿರ ಸ್ವಲ್ಪ ವೇಳೆ ನಿಂತು ಹೊರಟುಹೋಗುವುವು. ಆ ಮೇಲೆ ಕುದುರೆಗಳ ಮೇಲೆ ಕುಳಿತು ಯುದ್ಧಮಾಡುವವ ರಂತೆ ಕೆಲವರು ಬರುತ್ತಾರೆ. ಈ ಕುದುರೆಗಳು ಪೋರ್ತುಗಾ ಲದಲ್ಲಿ ಕೊರ್ಪೊಡಿ ಡಿಯೋಸನ ಉತ್ಸವದಲ್ಲಿ ಮಾಡುವ ಆಟದ ಕುದುರೆಗಳಂತೆ ಇರುತ್ತವೆ. ಕೆಲವು ಬಲಿಗಳನ್ನು ಬೀಸಿ ಮೀನು ಹಿಡಿಯುವರಂತೆಯೂ, ಪಟಾಂಗಣದಲ್ಲಿರುವ ಜನ ರನ್ನು ಹಿಡಿಯುತ್ತಲೂ ಬರುತ್ತಾರೆ. ಇವೆಲ್ಲ ಆಟನೋಟಗಳು ತೀರಿದ ಬಳಿಕ ಮದ್ದಿನ ಬಾಣ ಬಿರುಸುಗಳನ್ನು ಬಿಡುವರು. ಮತ್ತು ಮದ್ದಿನ ಕೋಟೆಗಳು ಉರಿಯುತ್ತ ಸುತ್ತಲೂ ಅವು ಗಳಿಂದ ಬಾಣಗಳು ಹಾರಿಬರುತ್ತಿರುವುವು.

ಮದ್ದು ಸುಡುವ ಕೆಲಸವು ಮುಗಿದ ಬಳಿಕ ದೂರದೇಶಕ್ಕೆ ಯುದ್ಧದ ಸಲುವಾಗಿ ಕಳುಹಿಸಲ್ಪಟ್ಟ ಪಾಳಯಗಾರರಿಂದ ಕಳುಹಿಸಲ್ಪಟ್ಟ ನಾಯಕರು ರಥಗಳನ್ನು ತೆಗೆದುಕೊಂಡು ಬರುವರು. ಅವರು ಈ ರೀತಿಯಾಗಿ ಬರುವರು — ಮೊದಲ ನೆಯ ರಥವು ಸಾಲ್ವತಿನೀಕನದು. ಅನಂತರ ಒಂದರಹಿಂ ದೊಂದು ಬರುವುವು. ಕೆಲವು ರಥಗಳನ್ನು ಬಹಳ ಬೆಲೆ ಯುಳ್ಳ ಅರಿವೆಗಳಿಂದ ಹೊದಿಸಿರುತ್ತಾರೆ. ಆ ಅರಿವೆಗಳಲ್ಲಿ ಕುಣಿಯುವ ಗೊಂಬೆಗಳೂ ಮನುಷ್ಯರ ಗೊಂಬೆಗಳೂ ಇರು ವುವು. ಅಂತಸ್ತಿನ ಮೇಲೆ ಅಂತಸ್ತುಗಳುಳ್ಳ ರಥಗಳೂ ಕೆಲವು ಬರುವುವು. ಅವು ಎಲ್ಲವೂ ಒಂದೇ ತರದವಿದ್ದು ಅರಸ ನಿದ್ದಲ್ಲಿಗೆ ಒಂದರ ಹಿಂದೆ ಒಂದು ಹೋಗುವುವು. ಇವು ಹಾದುಹೋದ ನಂತರ ಒಳ್ಳೆ ಉತ್ಕೃಷ್ಟವಾದ ಅರಿವೆಗಳ ಜೂಲಗಳನ್ನು ಹಾಕಿಕೊಂಡು ತಲೆಗಳಲ್ಲಿಯೂ ಕೊರಳುಗ ಳಲ್ಲಿಯೂ ಹೂವು ಹಾರಗಳನ್ನು ಹಾಕಿದ ಬಂಗಾರ ಬಣ್ಣದ ಕಡಿವಾಣವುಳ್ಳ ಕುದುರೆಗಳ ಸಾಲು ಬರುವುದು ಈ ಕುದು ರೆಗಳ ಮುಂದೆ ಎರಡು ಛತ್ರಗಳನ್ನು ಹಿಡಿಯಿಸಿಕೊಂಡು ಇವುಗಳಿಗಿಂತ ಹೆಚ್ಚಾಗಿ ಅಲಂಕರಿಸಲ್ಪಟ್ಟ ಅರಸನ ಒಂದು ಕುದುರೆಯು ಹೋಗುತ್ತಿದ್ದು ಅದನ್ನು ಒಬ್ಬ ಸೇವಕನು ಕಡಿ ವಾಣದಿಂದ ಹಿಡಿದಿರುವನು. ಈ ಕುದುರೆಯ ಮುಂದೆಯೂ ಒಂದು ಕುದುರೆಯು ಕುಣಿಯುತ್ತಲೂ ನಡಿಗೆಯಿಂದ ನಡೆ ಯುತ್ತಲೂ ಹೋಗುವುದು. ಈ ಕಲೆಗಳನ್ನು ಇವುಗಳಿಗೆ ಈ ದೇಶದಲ್ಲಿ ಚನ್ನಾಗಿ ಕಲಿಸಿರುವರು. ಇಂತಹ ವೈಭವದಿಂದ ಒಯ್ಯಲ್ಪಡುವ ಕುದುರೆಯು ಅರಸನ ಕುದುರೆಯೆಂದು ನೀವು ತಿಳಿಯತಕ್ಕದ್ದು. ಇವುಗಳಿಗೆ ಅರಸನಷ್ಟು ಮರ್ಯಾದೆ. ಮೊದಲು ಅರಸನು ಈ ಕುದುರೆಯನ್ನು ಕೈಯಿಂದ ಮುಟ್ಟಿ ಪ್ರಣಾಮ ಮಾಡುವನು. ಅನಂತರ ಉಳಿದವರು ಅದರಂತೆಯೇ ಮಾಡುವರು. ಒಂದು ವೇಳೆ ಇದು ಸತ್ತರೆ ಇದರ ಸ್ಥಳದಲ್ಲಿ ಮತ್ತೊಂದನ್ನು ತರುವರು. ಯಾವನಾದ ರೊಬ್ಬ ಅರಸನು ಕುದುರೆಯನ್ನು ಮುಟ್ಟಿ ಪ್ರಣಾಮ ಮಾಡ ಲಿಕ್ಕೆ ಒಪ್ಪದಿದ್ದರೆ ಆನೆಯನ್ನು ಮುಟ್ಟಿಸುವನು. ಈ ಆನೆಗೂ ಆ ಕುದುರೆಯಷ್ಟೇ ಮರ್ಯಾದೆ.

ಈ ಕುದುರೆಗಳು ನಾನು ವಿವರಿಸಿದ ರೀತಿಯಲ್ಲಿ ನಡೆ ಯುತ್ತ ಸುತ್ತಲೂ ತಿರುಗಿಬಂದು ಪಟಾಂಗಣ ಮಧ್ಯದಲ್ಲಿ ಒಂದರ ಹಿಂದೊಂದು ಐದು ಇಲ್ಲವೇ ಆರು ಸಾಲುಗಳಾಗಿ ನಿಲ್ಲುವವು. ಅವು ಅರಸನಿಗೆ ಇದುರಾಗಿಯೂ ಅರಸನ ಕುದುರೆಯು ಎಲ್ಲವುಗಳ ಮುಂದಾಗಿಯೂ ನಿಲ್ಲುವವು; ಅವು ಗಳ ನಡುವೆಯೂ ಮನುಷ್ಯರ ನಡುವೆಯೂ ಪ್ರದೇಶವನ್ನು ಬಿಟ್ಟು ನಿಂತುಕೊಳ್ಳುತ್ತವೆ. ಈ ಪ್ರಕಾರ ಎಲ್ಲ ಕುದುರೆಗ ಳನ್ನು ನಿಲ್ಲಿಸಿದ ಬಳಿಕ ಎಲ್ಲಕಡೆಗಳಲ್ಲಿಯೂ ಶಾಂತವಾದ ನಂತರ ಅರಮನೆಯ ಬ್ರಾಹ್ಮಣನೊಬ್ಬನು— ಇವನು ಅರ ಸನ ಹತ್ತಿರ ಇರುವ ಬ್ರಾಹ್ಮಣರಲ್ಲಿ ಹೆಚ್ಚಿನತರಗತಿಯವನು. ಇನ್ನಿಬ್ಬರು ಬ್ರಾಹ್ಮಣರನ್ನು ಕರೆದುಕೊಂಡು ಅಲ್ಲಿಗೆ ಬರು ತ್ತಾನೆ. ಈ ಮುಖ್ಯ ಬ್ರಾಹ್ಮಣನ ಕೈಯ್ಯಲ್ಲಿ ಒಂದು ತಟ್ಟೆ ಯಲ್ಲಿ ತೆಂಗಿನಕಾಯಿಯೂ ಹೂವುಗಳೂ ಉಳಿದವರ ಕೈಗ

ಳಲ್ಲಿ ನೀರಿನ ಪಾತ್ರೆಗಳೂ ಇರುವವು. ಮತ್ತು ಅರಸನಿಗೆ ಇದಿರಾಗಿ ನಿಂತಿರುವ ಕುದುರೆಗಳ ಹಿಂದಿನಿಂದ ಹಾಯ್ದು ತಾವು ಮಾಡತಕ್ಕ ವಿಧಿಗಳನ್ನು ಮಾಡಿ ಅರಮನೆಗೆ ತಿರುಗಿ ಹೋಗುವರು.

ಇದು ತೀರಿದನಂತರ ಒಳಗಿನಿಂದ ಇಪ್ಪತ್ತೈದು ಇಲ್ಲವೆ ಮೂವತ್ತು ದ್ವಾರಪಾಲಿಕೆಯರು ಕೈಗಳಲ್ಲಿ ಬೆತ್ತವನ್ನೂ ಹೆಗಲಗಳಲ್ಲಿ ಚಬಕವನ್ನು ಧರಿಸಿಕೊಂಡು ಬರುವರು. ಇವರಿಗೆ ಹತ್ತಿ ಕೆಲವು ಷಂಡಸೇವಕರು, ಇವರನಂತರ ಕೋವೆ, ಮದ್ದಳೆ, ತುತೂರಿ, ಪಿಟೀಲು ಮುಂತಾದ ವಾದ್ಯಗಳನ್ನು ಬಾರಿಸುತ್ತ ಬಹಳ ಹೆಂಗಸರು ಬರುವರು. ಅವರ ಹಿಂದಿನಿಂದ ಬೆಳ್ಳಿಯ ಹೊದಿಕೆಯ ಬೆತ್ತಗಳನ್ನು ಕೈಗಳಲ್ಲಿ ಹಿಡಿದುಕೊಂಡು ಇಪ್ಪತ್ತು ಸ್ತ್ರೀ ಸೇವಕರು ಬರುವರು. ಇವರ ಸಂಗಡ ಕೆಳಗೆ ಬರೆದಂತೆ ವಸ್ತ್ರಧಾರಣಮಾಡಿದ ಸ್ತ್ರೀಯರು ಬರುವರು. ಅವರ ಮೈಮೇಲೆ ಒಳ್ಳೆ ಬೆಲೆಯುಳ್ಳ ನಾಜೂಕಾದ ರೇಷಿಮೆಯ ಅರಿವೆಗಳಿರುತ್ತವೆ. ತಲೆಯ ಮೇಲೆ ಎತ್ತರವಾದ ಟೊಪ್ಪಿಗೆಗಳಿರುತ್ತವೆ. ಅವುಗಳಿಗೆ ಕೂಲಾಯಿಗಳೆನ್ನುವರು; ಈ ಟೊಪ್ಪಿಗೆಯ ತುದಿಯಲ್ಲಿ ಮುತ್ತಿನ ಗುಚ್ಛಗಳಿರುತ್ತವೆ. ಕೊರಳುಗಳಲ್ಲಿ ಬಂಗಾರದ ಪಟ್ಟಿಯಿದ್ದು ಅದರಲ್ಲಿ ಪಚ್ಚ ಮುತ್ತು ರತ್ನ ಮಾಣಿಕ ವಜ್ರಗಳನ್ನು ಕೆಚ್ಚಿರುತ್ತಾರೆ. ಇವಲ್ಲದೆ ಎಷ್ಟೋ ರತ್ನಹಾರಗಳೂ ಹೆಗಲಮೇಲೆ ಪಟ್ಟಿಗಳೂ ಇರುವುವು. ಕೈಗಳಲ್ಲಿ ಕಂಕಣಗಳೂ, ತೋಳುಗಳು ಅರ್ಧ ಬರಿಯವಿದ್ದು, ಬೆಲೆಯುಳ್ಳ ಹರಳುಗಳನ್ನು ಕೆಚ್ಚಿದ ಕಂಕಣಗಳೂ ಇರುತ್ತವೆ. ಸೊಂಟದ ಮೇಲೆ ಒಂದರ ಕೆಳಗೆ ಒಂದರಂತೆ ತೊಡೆಯವರೆಗೂ ಪಟ್ಟಿಗಳು ಜೋಲು ಬಿದ್ದಿರುತ್ತವೆ. ಇವಲ್ಲದೆ ಅವರ ಹತ್ತಿರ ಬೇರೆ ರತ್ನಗಳು ಇರುತ್ತವೆ. ಕಾಲ್ಗಳಲ್ಲಿ ಎಷ್ಟೋ ಮುತ್ತಿನ ಸರಗಳಿರುತ್ತವೆ. ಏಕೆಂದರೆ ಉಳಿದವುಗಳಿಗಿಂತ ಹೆಚ್ಚಿನ ಬೆಲೆಯುಳ್ಳ ರತ್ನಗಳುಳ್ಳ ಕಡಗಗಳನ್ನು ಕಾಲುಗಳಲ್ಲಿ ಧರಿಸುತ್ತಾರೆ. ಅವರು ಕೈಗಳಲ್ಲಿ ಸೇರಿನ ಪಾತ್ರೆಯಷ್ಟು ದೊಡ್ಡದಾದ ಬಂಗಾರದ ಪಾತ್ರೆಗಳನ್ನು ಹಿಡಿದಿರುತ್ತಾರೆ. ಇವುಗಳಲ್ಲಿ ಮೇಣದಿಂದ ಕೂಡಿಸಿದ ರತ್ನಗಳ ಮಾಲೆಯಿದ್ದು ಅದರಲ್ಲಿ ಒಂದು ದೀಪವಿರುತ್ತದೆ, ಅವರು ಒಬ್ಬರ ಮುಂದೊಬ್ಬರು ಸಾಲಾಗಿ ಬರುವರು. ಇವರು ಹದಿನಾರರಿಂದ ಇಪ್ಪತ್ತು ವರ್ಷದವರೂ ಆದ ತರುಣಿಯರೂ ಚಲುವೆಯರೂ ಅರವತ್ತು ಜನರಿರುವರು. ಇವರಲ್ಲಿ ಪ್ರತಿಯೊಬ್ಬಳು ಧರಿಸಿದ ಬೆಲೆಯುಳ್ಳ ಪದಾರ್ಥಗಳನ್ನು ಮತ್ತು ಅವುಗಳ ಬೆಲೆಗಳನ್ನು ಹೇಳುವಂತಹ ಮನುಷ್ಯರು ಯಾವನು? ಈ ಕಂಕಣ, ಆಭರಣ, ರತ್ನಗಳ ಭಾರವು ಇಷ್ಟಾಗಿರುವುದಲ್ಲ, ಅವುಗಳನ್ನು ಹೊರವುದು ಅವರಿಂದಾಗುವುದಿಲ್ಲವಾದುದರಿಂದ ಸಂಗಡ ಇದ್ದ ದಾಸಿಯರು ಅವರ ಕೈಗಳನ್ನು ಎತ್ತಿ ಹಿಡಿಯಬೇಕಾಗುತ್ತದೆ. ಈ ರೀತಿಯಿಂದ ಅವರು ಆ ಕುದುರೆಗಳ ಸುತ್ತಲೂ ಮೂರು ಸಾರೆ ತಿರುಗಿ ಅರಮನೆಯಲ್ಲಿ ಹೊರಟು ಹೋಗುವರು. ಇವರು ರಾಣಿಯರ ಮಾನದ ತೊತ್ತುಗಳು, ಇದರಂತೆ ಇವರ ಸಂಗಡ ಇದ್ದ ಹೆಂಗಸರು ಇವರ ಸಖಿಯರು. ಒಂಬತ್ತು ದಿವಸಗಳಲ್ಲಿ ಪ್ರತಿಯೊಂದು ದಿನವೂ ಒಬ್ಬೊಬ್ಬ ರಾಣಿಯು ತನ್ನ ಸಖಿಯರನ್ನು ಅವಳ ಪರಿವಾರವನ್ನು ಇದೇ ರೀತಿಯಾಗಿ ಕಳುಹಿಸುವಳು. ಈ ಉತ್ಸವದ ನಿಮಿತ್ಯವಾಗಿ ಅರಸನ ಹೇಳಿಕೆಯಂತೆ ಮೊದಲೆ ದಿನಗಳನ್ನು ಅಧಿಕಾರಿಗಳು ಪದ್ಧತಿಯಂತೆ ಹಂಚಿಕೊಂಡಿರುತ್ತಾರೆ. ಮತ್ತು ಈ ಹೆಂಗಸರು ಪ್ರತಿದಿನವೂ ತಮ್ಮ ತಮ್ಮ ಆಭರಣಗಳ ವಿಜೃಂಭಣೆಯನ್ನು ತೋರಿಸುವುದಕ್ಕೋಸ್ಕರ ಒಳ್ಳೆ ಬೆಲೆಯುಳ್ಳ ಉಡುಪುಗಳನ್ನು ಧರಿಸಿಕೊಂಡು ಬರುತ್ತಾರೆ.

ಈ ಹೆಂಗಸರು ಬಂದು ಹೋದನಂತರ ಕುದುರೆಗಳೂ ಹೋಗುತ್ತವೆ. ಆಬಳಿಕ ಆನೆಗಳುಬಂದು ಸಲಾಮುಮಾಡಿ ಅವು ಸಹ ಹೋಗುತ್ತವೆ. ಅವು ಹೋದಕೂಡಲೆ ಅರಸನು ಅಲ್ಲಿಯೆ ಗೃಹದ ಸಣ್ಣಬಾಗಿಲದಿಂದ ಒಳಕ್ಕೆ ಹೋಗುವನು. ಅನಂತರ ಬ್ರಾಹ್ಮಣರು ಹೋಗಿ ಆ ಮೂರ್ತಿಯನ್ನು ತೆಗೆದುಕೊಂಡು ವಿಜಯಗೃಹದಲ್ಲಿರುವ ಅರಿವೆಯ ಕೋಣೆಯಲ್ಲಿ ಒಯ್ಯುವರು ; ಮತ್ತು ಕೂಡಲೆ ಅರಸನು ಬಂದು ಕೋಣೆಯೊಳಗೆ ಮೂರ್ತಿಯ ಬಳಿಗೆ ಹೋಗಿ ತನ್ನ ಪ್ರಾರ್ಥನೆ ಮುಂತಾದ ವಿಧಿಗಳನ್ನು ತೀರಿಸುವನು. ಆ ಬಳಿಕ ಎಷ್ಟೋ ಕುರಿಕೋಣಗಳನ್ನು ತಂದು ಮೊದಲಿನಂತೆ ಅವುಗಳನ್ನು ಕೊಯ್ದು ಅನಂತರ ನರ್ತಕಿಯರು ಕುಣಿಯತೊಡಗುವರು. ಕುರಿಕೋಣಗಳ ಕೊಲೆಯಾದಬಳಿಕ ಅರಸನು ತನ್ನ ರಾತ್ರಿ ಊಟಕ್ಕಾಗಿ ಹೋಗುವನು. ಏಕೆಂದರೆ ಈ ಒಂಬತ್ತು ದಿನಗಳವರೆಗೆ ಅರಸನು ಊಟಮಾಡುವುದಿಲ್ಲ. ಮತ್ತು ಪ್ರತಿದಿನದಲ್ಲಿ ಅವರು ಈ ವಿಧಿಯೆಲ್ಲವೂ ತೀರುವವರೆಗೆ ಉಣ್ಣುವುದಿಲ್ಲ ; ಅವನ ಊಟವು ನಡುರಾತ್ರಿಯಲ್ಲಿ. ಇವೆಲ್ಲವೂ ಆದನಂತರ ಬಹಳ ಹೊತ್ತಿನತನಕ ಗಣಿಕೆಯರು ಕುಣಿಯುತ್ತಿರುವರು.

ಈ ಒಂಬತ್ತು ದಿವಸಗಳ ಉತ್ಸವವು ಈ ರೀತಿಯಾಗಿ ಮಾಡಲ್ಪಡುವುದು. ಕಡೆಯ ದಿನದಲ್ಲಿ ಎರಡು ನೂರೈವತ್ತು

ಕೋಣಗಳೂ ನಾಲ್ಕುಸಾವಿರದ ಐನೂರು ಕುರಿಗಳೂ ಕಡಿಯಲ್ಪಡುವುವು.

ಈ ಉತ್ಸವದ ದಿವಸಗಳು ತೀರಿದಬಳಿಕ ಅರಸನು ತನ್ನ ಎಲ್ಲ ಸೈನ್ಯದ ಪರೀಕ್ಷೆ ಮಾಡಲಿಚ್ಛಿಸುವನು. ನೋಡುವ ರೀತಿಯು ಈ ಪ್ರಕಾರವಾಗಿ ಏರ್ಪಾಟುಮಾಡಲ್ಪಡುವುದು. ನಗರದಿಂದ ಒಂದು ಹರದಾರಿಯ ಅಂತರದಲ್ಲಿ ಮೊದಲೇ ಈ ಕೆಲಸದ ಸಲುವಾಗಿ ಆರಿಸಿದಂತಹ ಸ್ಥಳದಲ್ಲಿ ಒಂದು ಮಕ್ಮಾ ಮಖಮಲಿನ ಡೇರೆಯನ್ನು ಹೊಡೆಯಲಿಕ್ಕೆ ಅರಸನು ಅಪ್ಪಣೆ ಮಾಡುವನು; ಈ ಡೇರೆಯಲ್ಲಿ ನಾನು ಮೇಲೆ ಹೇಳಿದ ಉತ್ಸವದ ಮೂರ್ತಿಯನ್ನು ತಂದು ಕುಳ್ಳಿರಿಸುವರು. ಈ ಡೇರೆಯಿಂದ ಅರಮನೆಯ ವರೆಗೆ ಸೇನಾನಾಯಕರು ತಮ್ಮ ತಮ್ಮ ಸೈನ್ಯಗಳನ್ನು ಸಾಲಾಗಿಯೂ ವ್ಯವಸ್ಥೆಯಿಂದಲೂ ತಮ್ಮ ತಮ್ಮ ತರಗತಿಗೆ ಸರಿಯಾದಂತೆ ನಿಂತುಕೊಳ್ಳುವರು. ಈ ಪ್ರಕಾರ ಸೈನಿಕರು ಒಂದೇ ಸಾಲಿನಲ್ಲಿ ನಿಲ್ಲುವರು. ಆದರೆ ಒಂದೊಂದು ಕಡೆಗೆ ಒಬ್ಬರ ಹಿಂದೊಬ್ಬರಂತೆ ಎರಡು ಮೂರು ಸಾಲುಗಳಾಗಿಯೂ ನಿಲ್ಲುವರು. ಕೆರೆಗಳಿದ್ದಲ್ಲಿ ಅವರ ಸುತ್ತಲೂ ಇಕ್ಕಟ್ಟಿನ ಸ್ಥಳವಿದ್ದಲ್ಲಿ ಬಯಲಲ್ಲಿಯೂ ಸೈನ್ಯವು ನಿಂತಿದ್ದಿತು. ಮತ್ತು ಇದರಂತೆಯೆ ಬೆಟ್ಟದ ಒಳು ಕಲು, ದಿನ್ನೆ ಮುಂತಾದ ಸ್ಥಳಗಳಲ್ಲಿ ನಿಂತಿದ್ದಿತು. ಬಯಲು, ದಿನ್ನೆ, ಬೆಟ್ಟಗಳೂ ಕಾಣದಂತೆ ಎಲ್ಲೆಲ್ಲಿಯೂ ಸೈನ್ಯವು ನಿಲ್ಲುವ ಹಾಗೆ ಏರ್ಪಾಟಾಗಿತ್ತು. ಆನೆಗಳ ಸಾಲುಗಳ ಮುಂದೆ ಕುದುರೆಗಳು; ಕುದುರೆಗಳ ಮುಂದೆ ಕಾಲ್ದಳವು, ಈ ರೀತಿ ಯಾಗಿ ಪ್ರತಿಯೊಬ್ಬ ಸೇನಾನಾಯಕನು ತನ್ನ ಸೈನ್ಯವನ್ನು ಹಬ್ಬುಗೊಳಿಸಿಕೊಂಡು ನಿಂತಿದ್ದನು. ಪಟ್ಟಣದ ಒಳಗಿನ ಬೀಳಯದವರು, ಮನೆಗಳ ಮಾಳಿಗೆಗಳ ಮೇಲೆ ನಿಲ್ಲಿಸಲಿಕ್ಕೆ ಬಾರದ್ದರಿಂದ, ಆಯಾ ಓಣಿಗಳ ಬಾಯಿಯಲ್ಲಿ ಅಟ್ಟಗಳನ್ನು ಕಟ್ಟಿ ಅವುಗಳ ಮೇಲೆ ತುಂಬಾ ತಮ್ಮ ದಂಡನ್ನು ನಿಲ್ಲಿಸಿದ್ದರು. ಹಾಗಾಗಿ ದಂಡು ಒಳಗೂ ಹೊರಗೂ ತುಂಬಿ ಹೋಗಿದ್ದಿತು.

ಇನ್ನು ಅವರು ಹೇಗೆ ಆಯುಧಪಾಣಿಗಳಾಗಿದ್ದರು ಅವರ ಅಲಂಕಾರಗಳಾವುವು ಎಂಬದನ್ನು ನಿಮಗೆ ಬಣ್ಣಿಸಿ ಹೇಳುವೆನು. ಕುದುರೆಸವಾರರು ಕುದುರೆಗಳ ಮೇಲೆ ಕುಳಿತಿದ್ದರು. ಕುದುರೆಗಳ ಮೈತುಂಬ ಜೂಲಗೀಲಗಳಿದ್ದುವು. ಅವುಗಳ ಹಣೆಗಳ ಮೇಲೆ ತಟ್ಟೆಗಳು; ಕೆಲವು ಬೆಳ್ಳಿಯವು ಎಷ್ಟೊ ಮುಲಾಮುಮಾಡಿಸಿದುವು. ಇವುಗಳಿಗೆ ಎಲ್ಲ ತರದ ಬಣ್ಣದ ಹುರಿರೇಶಿಮೆಯ ಜಾಲರಿ (ಕರಿ) ಗಳನ್ನು ಕಟ್ಟಿದ್ದರು. ಕಡಿವಾಣಗಳಾದರೂ ಇದೇತರದವೆ. ಕೆಲವುಗಳಿಗೆ ಮಕ್ಮಾದ ತರತರದ ಬಣ್ಣದ ಮಖಮಲಿನ ಜೂಲಗಳು ಅಲಂಕಾರಗಳು ಇದ್ದುವು. ಕೆಲವುಗಳಿಗೆ ಉಳಿದ ತರದ ರೇಶಿಮೆಯ ಹಗ್ಗಗಳೂ, ಸಾಟಿನ ಡಮಾಸ್ಕದ ದಾರಗಳೂ, ಕೆಲವು ಚೀನದೇಶದ ಮತ್ತು ಪರ್ಶಿಯಾದೇಶದ ಕಸೂತಿಯರಿವೆಗಳೂ ಇದ್ದುವು. ಕೆಲವು ಜನರು ತಮ್ಮ ಮೊಲಾಮಿನ ಕವಚಗಳಿಗೆ ದೊಡ್ಡ ರತ್ನಗಳನ್ನು ಹಚ್ಚಿಸಿದ್ದರು. ಅವುಗಳ ಅಂಚಿನಲ್ಲಿ ಸಣ್ಣ ಹರಳುಗಳ ಅಂಚನ್ನು ಮಾಡಿಸಿಕೊಂಡಿದ್ದರು. ಕೆಲವು ಕುದುರೆಗಳ ಹಣೆಗಳ ಮೇರೆ ಹಾವಿನತಲೆ ಮತ್ತು ಉಳಿದ ತರದ ಪ್ರಾಣಿಗಳ ತಲೆಗಳನ್ನು ನಿಜವಾಗಿ ತೋರುತ್ತವೆಂಬಂತೆ ನೋಡಲಿಕ್ಕೆ ಒಳ್ಳೆ ಚಮತ್ಕಾರವಾಗಿರುವಂತೆ ತಯಾರ ಮಾಡಿಸಿ ಇಟ್ಟುಕೊಂಡಿದ್ದರು. ಕುದುರೆಯ ರಾಹುತರು ಕವುದಿ ಮಖಮಲು, ತರತರದ ರೇಶಿಮೆ, ಮತ್ತು ಕಸೂತಿಯ ಅರಿವೆಗಳ ಕವಚಗಳನ್ನು ಹಾಕಿಕೊಂಡಿದ್ದರು. ಈ ಕವಚಗಳನ್ನು ಗಟ್ಟಿಯಾದ ಹಸಿ ತೊಗಲನ್ನು ಒಂದರ ಮೇಲೊಂದು ಇಟ್ಟು ಮಾಡಿರುತ್ತಾರೆ. ಮತ್ತು ಒಳಗೆ ಕಬ್ಬಿಣದ ತಗಡನ್ನು ಹಾಕಿ ಗಟ್ಟಿಯಾಗುವಂತೆ ಮಾಡಿರುತ್ತಾರೆ. ಈ ಕವಚಗಳಿಗೆ ಒಳಗೂ ಹೊರಗೂ ಕೆಲವರು ಬಂಗಾರದ ಮೊಲಾಮುಮಾಡಿಸಿದ್ದಾರೆ, ಕೆಲವರು ಬೆಳ್ಳಿಯ ಕವಚಗಳನ್ನೂ ಮಾಡಿಸಿದ್ದಾರೆ. ಅವರ ಶಿರಸ್ತ್ರಾಣಗಳು ನಮ್ಮಲ್ಲಿಯ ಹೆಲ್ಮೆಟ್ (Helmet= ಶಿರಸ್ತ್ರಾಣ ) ಗಳಂತೆಯೆ ಇದ್ದು ಕುತ್ತಿಗೆಯನ್ನು ರಕ್ಷಿಸುವುದಕ್ಕೆ ಅಂಚುಗಳುಳ್ಳವೂ ಮುಖದ ಮೇಲೆ ತುಂಡುಗಳುಳ್ಳವೂ ಇರುತ್ತವೆ. ಇವುಗಳನ್ನು ಸಹ ಕವಚಗಳನ್ನು ಮಾಡುವಂತೆಯೆ ತಯಾರಮಾಡಿರುತ್ತಾರೆ. ಅವರು ಕಂಠ ಕವಚಗಳನ್ನು ಧರಿಸುತ್ತಾರೆ; ಅವುಗಳಲ್ಲಿ ಕೆಲವು ಬಂಗಾರದ ಮೊಲಾಮಿನವು, ಕೆಲವು ಬೆಳ್ಳಿ, ಇಲ್ಲವೆ ಬಂಗಾರದ ತಗಡುಜೋಡಿಸಿದ ರೇಶಿಮೆಯವು ಕೆಲವು ಕನ್ನಡಿಯಂತೆ ಮಿಂಚುವ ಉಕ್ಕಿನವೂ ಇವೆ. ಅವರು ಸೊಂಟದಲ್ಲಿ ಖಡ್ಗಗಳನ್ನೂ, ಸಣ್ಣ ಚಪ್ಪಕೊಡಲೆಗಳನ್ನೂ ಕೈಗಳಲ್ಲಿ ಭಂಗಾರ ಬೆಳ್ಳಿಗಳ ಹಿಡಿಕೆಗಳುಳ್ಳ ಭಲ್ಲೆಗಳನ್ನು ಧರಿಸುತ್ತಾರೆ. ಎಲ್ಲರ ತಲೆಗಳ ಮೇಲೆ ಕಸೂತಿ ಹಾಕಿದ ಮಲಮಲು, ಮತ್ತು ಡಮಾಸ್ಕು (Domask) ತರದ ತರದ ರೇಶಿಮೆಗಳ ಛತ್ರಗಳನ್ನು ಹಿಡಿದುಕೊಂಡು ಕುದುರೆಗಳ ಮೇಲೆ ಕುಳಿತಿರುತ್ತಾರೆ. ಅವರ ಕೈಯಲ್ಲಿ ಬಿಳಿ, ಮತ್ತು ಬಣ್ಣದ ಬಾಲಗಳುಳ್ಳ ನಿಶಾನೆಗಳು ಇರುತ್ತವೆ. ಆ ಬಾಲಗಳು ಕುದುರೆಯ ಬಾಲಗಳು; ಈ ನಿಶಾನೆಗಳ ಬಗ್ಗೆ ಅವರಲ್ಲಿ

ಬಹಳ ಮರ್ಯಾದೆ. ಇದೇ ರೀತಿಯಲ್ಲಿ ಆನೆಗಳ ಮೇಲೆ ಜಾಲರಿಯುಳ್ಳ ಜರದಕಡ್ಡಿಗಳುಳ್ಳ ಮಖಮಲಿನ ಜೂಲಗಳೂ, ತರತರದ ಬಣ್ಣದ ವಸ್ತ್ರಪರಿಧಾನಗಳೂ. ಅವುಗಳ ಕೊರಳಲ್ಲಿಯ ಗಂಟೆಗಳ ನಾದದಿಂದ ಪೃಥ್ವಿಯು ಸಹ ಅದರುತ್ತದೆ. ಅವುಗಳ ತಲೆಗಳ ಮೇಲೆ ರಾಕ್ಷಸರ ಮತ್ತು ದೊಡ್ಡ ಪಶುಗಳ ಮುಖಗಳನ್ನು ಬಣ್ಣದಿಂದ ಬರೆದಿರುತ್ತಾರೆ. ಒಂದೊಂದರ ಮೇಲೆ ಮೂರು ನಾಲ್ಕು ಜನಗಳು ಕುಳಿತಿದ್ದು ಒಬ್ಬರೊಬ್ಬರ ಮೈಯಲ್ಲಿ ಕವಚ, ಕೈಯಲ್ಲಿ ಢಾಲುಭಲ್ಲೆಗಳು ಇರುವುವು, ಅವರು ಯುದ್ಧಕ್ಕೆ ಸಜ್ಜಾದವರಂತೆಯೇ ಇರುವರು. ಕಾಲುದಳವಂತೂ ಕೊಳ್ಳದಿನ್ನೆ ಬೆಟ್ಟಗಳನ್ನು ಸುತ್ತುಗಟ್ಟಿ ಬಿಟ್ಟಿರುತ್ತದೆ. ಇಂತಹದನ್ನು ಇಡೀ ಪೃಥ್ವಿಯಲ್ಲಿ ಯಾವದೂ ಸರಿಗಟ್ಟಲಾರದು. ಇವರು ಧರಿಸಿದ ಉಡುಪುಗಳು ಬಹಳ ಝುಗಝುಗಿಸುತ್ತವೆ; ಇವುಗಳನ್ನು ಎಲ್ಲಿಂದ ತಂದಿರುವರೊ ನಾನು ಹೇಳಲಾರೆ. ಮತ್ತೆ ಅವುಗಳ ಬಣ್ಣಗಳು ಇಷ್ಟೇ ಅವೆಯೆಂದು ಯಾರೂ ಹೇಳಲಾರರು. ಕೆಲವರ ಢಾಲುಗಳ ಮೇಲೆ ಬಂಗಾರ ಬೆಳ್ಳಿಯ ಹೂವುಗಳೂ, ಕೆಲವುಗಳ ಮೇಲೆ ಹುಲಿ ಸಿಂಹಗಳ ಮುಖಗಳೂ ಕೆಲವುಗಳ ಮೇಲೆ ಸುಂದರವಾಗಿ ಕೊರೆದ ಎಲೆ ಬಳ್ಳಿಗಳ ಸು:ಗಳೂ ಕೆಲವುಗಳ ಮೇಲೆ ಬಣ್ಣದಿಂದ ಬರೆದ ಚಿತ್ರಗಳೂ ಕೆಲವು ಕಪ್ಪಾಗಿ ಕಂತಿಹಿಡಿದಿದ್ದು—ಕನ್ನಡಿಯಲ್ಲಿ ನೋಡಿದಂತೆ ನೀವು ಅವುಗಳಲ್ಲಿ ನೋಡಬಹುದು—ಮಿಂಚುವಂತಹವುಗಳೂ. ಮತ್ತು ಅದರ ಖಡ್ಗಗಳ ಮೇಲಿನ ಅಲಂಕಾರಗಳು ಇನ್ನು ಹೆಚ್ಚಿಗೆ ಹೇಳಲಾರದಷ್ಟು ಸುಂದರವಾಗಿಯೂ ಇರುತ್ತವೆ. ಬಿಲ್ಲಾಳುಗಳ ಬಿಲ್ಲುಗಳು ಬಂಗಾರ ಬೆಳ್ಳಿಯ ತಗಡುಗಳನ್ನು ಹೊದಿಸಿ ಮಾಡಿದುವೂ ಕೆಲವು ಚನ್ನಾಗಿ ಒಪ್ಪುಹಾಕಿದುವೂ ಅವರ ಬಾಣಗಳು ಸರಳವಾಗಿಯೂ ರೆಕ್ಕೆಗಳುಳ್ಳವೂ ಅವೆ. ಇವು ಸಹ ಇದಕ್ಕೂ ಹೆಚ್ಚಿಗೆ ಚನ್ನಾಗಿರಲಾರವು. ಸೊಂಟದ ಕಠಾರಿಗಳು ಮತ್ತು ಚಪ್ಪಕೊಡಲಿಗಳ ಅಲುಗುಗಳೂ ಬಂಗಾರ ಬೆಳ್ಳಿಯವುಗಳವೇ. ಆಮೇಲೆ ವ್ಯವಸ್ಥಿತರಾಗಿ ಕವಚಗಳನ್ನು ಧರಿಸಿ ನಿಂತಿದ್ದ ಜಾವುಗೆಯುವರನ್ನು ನೋಡುವಿರಿ. ಇದು ನೋಡತಕ್ಕಂತಹದು ! ಆ ಬಳಿಕ ಮೂರರು (ಮುಸಲ್ಮಾನರು) ಇವರನ್ನು ಹೇಳಲಿಕ್ಕೆ ಮರಿಯಬಾರದು—ಢಾಲು ಭಲ್ಲೆಗಳನ್ನು ಹಿಡಿದುಕೊಂಡು ಅವರಲ್ಲಿ ನಿಂತಿದ್ದರು; ತುರಕೀ ಧನುಸ್ಸುಗಳು, ಶಿಡಿಮದ್ದು, ಸಣ್ಣ ತೋಫು ಬಂದೂಕುಗಳನ್ನೂ ಹಿಡಿದುಕೊಂಡು ಕೆಲವರು ನಿಂತಿದ್ದರು; ಇವರಲ್ಲಿ ಈ ಅಸ್ತ್ರಗಳನ್ನು ಚನ್ನಾಗಿ ಉಪಯೋಗಿಸಕ್ಕೆ ಬಲ್ಲ ಜನರನ್ನು ಕಂಡು ನನಗೆ ಪರಮ ಆಶ್ಚರ್ಯವಾಯಿತು.

ಅರಸನು ನಾನು ವರ್ಣಿಸಿದಂತಹ ಬಿಳಿಯ ಉಡುಪುಗಳನ್ನು ಧರಿಸಿಕೊಂಡು ನಾನು ಹೇಳಿದ ಕುದುರೆಯನ್ನೇರಿ ಬಂಗಾರದಿಂದ ಹೊಳೆಯುವ ಕೆಂಪು ಮಖಮಲಿನ ಎರಡು ಸಂಸ್ಥಾನ ಛತ್ರಗಳನ್ನು ಹಿಡಿಸಿಕೊಂಡು ಇಂತಹವೇಳೆಯಲ್ಲಿ ಸರಿಯಾದ ಆಭರಣ ರತ್ನಗಳನ್ನು ಹಾಕಿಕೊಂಡು ಅರಮನೆಯಿಂದ ಹೊರಬೀಳುತ್ತಾನೆ. ಇಂತಹ ಆ ರತ್ನಾಲಂಕರಗಳನ್ನು ಧರಿಸುವವನೇ ಇಂತಹ ದೊರೆಯು ಧರಿಸಿದ ವಸ್ತುಗಳನ್ನು ತಿಳಿಯಬಲ್ಲನು. ಸರದಾರರ ಮತ್ತು ಮಾನನೀಯ ಜನರ ವೈಭವವನ್ನು ವರ್ಣಿಸಲಿಕ್ಕೆ ನಾನು ಹೋದರೆ ನನ್ನನ್ನು ಯಾರೂ ನಂಬುವುದಿಲ್ಲವೆಂದು ಅದನ್ನು ವರ್ಣಿಸುವ ಉಸಾಬರಿಗೆ ಹೋಗುವುದಿಲ್ಲ. ಅವರ ಕುದುರೆ, ಕವಚ ಮುಂತಾದವುಗಳನ್ನು ನೋಡಿದರೆ—ನಿಮಗೆ ಕಾಣುವ ವಸ್ತುಗಳನ್ನು ನಾನು ನೋಡಿ ವರ್ಣಿಸಲಿಕ್ಕೆ ಬರುವಂತಹ ಶಬ್ದಗಳೇ ನನಗೆ ದೊರೆಯುವದಿಲ್ಲ. ಕೆಲವು ನನಗೆ ಮರೆಯಾಗಿದ್ದವು. ನಾನು ನೋಡಿದುದನ್ನೆಲ್ಲ ಹೇಳಲಿಕ್ಕೆ ನನ್ನಿಂದಾಗುವುದಿಲ್ಲ. ಏಕೆಂದರೆ ನಾನು ಕುದುರೆಯ ಮೇಲೆ ಕುಳಿತುಕೊಂಡು ಹೋಗುವಾಗ್ಗೆ ಒಂದು ಪಕ್ಕದಿಂದ ಮತ್ತೊಂದು ಪಕ್ಕಕ್ಕೆ ನನ್ನ ತಲೆಯನ್ನು ತಿರುವಿ ತಿರುವಿ ಎಚ್ಚರದಪ್ಪಿ ನಾನು ಕುದುರೆಯಿಂದ ಕೆಳಗೆ ಬೀಳುತ್ತಿದ್ದೆನು ! ಈ ದೇಶದಲ್ಲಿ ದ್ರವ್ಯವು ಬಹಳೇ ಇರುವುದರಿಂದಲೂ ಇಲ್ಲಿಯ ಅರಸರು ಇಷ್ಟು ಶ್ರೀಮಂತರು ಇರುವುದರಿಂದಲೂ ಈ ಮೇಲೆ ಹೇಳಿದವುಗಳ ಬೆಲೆಯು ಎಷ್ಟಿರಬಹುದೆಂದು ಆಶ್ಚರ್ಯಪಡುವ ಕಾರಣವಿಲ್ಲ.

ಅರಸನ ಮುಂದೆ ಎಷ್ಟೋ ಆನೆಗಳು ನಾನು ಮೇಲೆ ಹೇಳಿದಂತೆ ಅಲಂಕಾರ ಹೊದಿಕೆಗಳಿಂದ ಕೂಡಿ ಹೊರಟವು. ಅವನ ಮುಂದೆ ಒಳ್ಳೇ ಬಂಗಾರದ ಕಸೂತಿಯುಳ್ಳ ಅರಿವೆಗಳನ್ನು ಧರಿಸಿದವೂ ರತ್ನಗಳನ್ನು ಧರಿಸಿದವೂ ಆದ ಇಪ್ಪತ್ತು ಕುದುರೆಗಳು ನಡೆದಿದ್ದವು. ಇವೆಲ್ಲವು ತಮ್ಮ ದೊರೆಯ ವೈಭವವನ್ನು ಚನ್ನಾಗಿ ಹೇಳುತ್ತಿದ್ದವು. ಅರಸನಿಗೆ ಹತ್ತಿ ಒಂದು ಪಂಜರವು ಹೋಗುತ್ತಿತ್ತು. ಅದು ಲಿಸ್ಬನ್ನ ಪಟ್ಟಣದಲ್ಲಿ ಕೊರ್ಪೊಡಿಡಿಯೋಸ ಉತ್ಸವದಲ್ಲಿಯ ಪಂಜರದಂತೆ ಇದ್ದು ಅದಕ್ಕೂ ಮೊಲಾಮು ಮಾಡಿದ್ದರು. ಅದು ದೊಡ್ಡದಿದ್ದು ತಾಮ್ರ ಇಲ್ಲವೆ ಬೆಳ್ಳಿಯಿಂದ ಮಾಡಿದ್ದಂತೆ ನನಗೆ ತೋರಿತು. ಅದನ್ನು

ಕವಿನಾರು ಮುಂದಿ ಹೊತ್ತಿನ್ದರು. ಒಂದು ಮಗ್ಗಲಿಗೆ ಎಂಟೆಂಟು ಜನಗಳಂತೆಯೂ ಕೆಲವು ಸರತಿಗಳಿಂದಲೂ ಹೊಬತ್ತ ತೆಗೆದುಕೊಂಡು ನಡೆದಿದ್ದರು. ಅವರಲ್ಲಿ ನಾನು ಮೊದಲು ಹೇಳಿದಮೂರ್ತಿಯನ್ನು ಕುಳ್ಳಿರಿಸಿದ್ದರು. ಈ ಪ್ರಕಾರ ಅರಸನು ತನ್ನ ಸೈನ್ಯವನ್ನು ನೋಡುತ್ತ ನಡೆದಿರಲು ಸೈನಿಕರು ಕೇಕೆ, ಕೂಗುಗಳಿಂದ ಢಾಲುಗಳನ್ನು ಹಿಡಯುತ್ತಿದ್ದರು. ಕುದುರೆಗಳು ಹೇಂಕರಿಸುತ್ತಿದ್ದುವು ಆನೆಗಳು ಘೀಂಕರಿಸುತ್ತಿದ್ದುವು. ಅವುಗಳ ಸಪ್ಪಳದಿಂದ ನಗರವು ತಿರುವಿ ಬೀಳುವದೊ ಎಂಬಂತಾಗಿತ್ತು. ಬೆಟ್ಟ ಕೊಳ್ಳಗಳೂ ಎಲ್ಲ ನೆಲವೂ ಬಂದೂಕುಗಳ ಸಪ್ಪಳದಿಂದ ಗದಗವಿಸಿ ನಡುಗಿದುವು. ಬಯಲುಗಳಲ್ಲಿ ಕೊಂಬು ಸಿಡಿಮದ್ದುಗಳು ಹಾರುವುದನ್ನು ನೋಡಿದರೆ ಆಶ್ಚರ್ಯವಾಗುತ್ತಿತ್ತು. ಇಲ್ಲಿಯೆ ಇಡಿಯ ಪೃಥ್ವಿಯ ಜನರೆಲ್ಲರೂ ಕಲೆತಿರುವರೋ ಏನೋ ಎಂಬಂತಾಗಿತ್ತು. ಇದೇ ರೀತಿಯಾಗಿ ಅರಸನು ನಾನು ಹೇಳಿದ ಡೇರೆಗೆ ಬರುವ ತನಕ ನಡೆದಿದ್ದಿತು. ಅವನು ಅದರೊಳಗೆ ಹೋಗಿ ತನ್ನ ಪ್ರಾರ್ಥನೆ ಮುಂತಾದ ವಿಧಿಗಳನ್ನು ಮಾಡಿದನು. ಅರಸನು ಹಾಯ್ದು ಹೋದ ಬಳಿಕ ದಂಡಾಳುಗಳು ತಮ್ಮ ಸ್ಥಳಗಳನ್ನು ಬಿಟ್ಟು ಹೋದರೆಂದು ತಿಳಿಯಬೇಡಿರಿ. ಅವನು ತಿರುಗಿ ಹೋಗುವ ತನಕ ಅವರು ಹಾಗೆಯೆ ಅಲುಗಾಡದೆ ನಿಂತಿದ್ದರು. ಅರಸನು ತನ್ನ ಪ್ರಾರ್ಥನೆಯನ್ನು ಮುಗಿಸಿಕೊಂಡು ತಾನು ಬಂದದಾರಿಯಿಂದಲೆ ತಿರುಗಿ ಪಟ್ಟಣಕ್ಕೆ ಹೋದನು. ಈವಾಗ ಎಲ್ಲರೂ ಕೂಗಿಕೊಳ್ಳುತ್ತಿದ್ದರೆ ಹೊರತು ಒಬ್ಬರೂ ದಣಿಯಲಿಲ್ಲ. ಅವನು ಹಾಯ್ದು ಹೋದಕೂಡಲೆ ಅವರೂ ಹೊರಟರು. ಬೆಟ್ಟಗಳ ಮೇಲೆಯೂ ಇಳುಕಲಗಳ ಮೇಲೆಯೂ ಇರುವವರನ್ನೂ ಅಲ್ಲಿಂದ ಇಳಿದುಬರುವವರನ್ನು ನೋಡುವುದೂ, ಅವರ ಕೂಗು ಗರ್ಜನೆ ಮುಂತಾದವುಗಳನ್ನು ಕೇಳುವುದು, ಬಿಲ್ಲು, ಬಾಣ, ಖಡ್ಗಗಳನ್ನು ತಿರುವಾಡುವುದನ್ನು ನೋಡುವುದೂ ಮಾಡಿ ಮಾಡಿದಂತೆ ನನಗೆ ಇದೇನು ಕನಸೊ ನೆನಸೋ ಎಂಬಂತಾಗಿ ಭ್ರಾಂತಿಯುಂಟಾಯಿತು. ಆ ಬಳಿಕ ಸೈನ್ಯವು ತಮ್ಮ ತಮ್ಮ ಬೀಡಾರಗಳಿಗೂ ಮಂಡಪಗಳಿಗೂ ಹೊರಟುಹೋಯಿತು. ಸೇನಾನಾಯಕರು ಮಾತ್ರ ಅರಸನನ್ನು ಅರಮನೆಯತನಕ ಕಳುಹಿ ತಿರುಗಿ ತಮ್ಮ ತಮ್ಮ ಮನೆಗೆ ವಿಶ್ರಾಂತಿಗಾಗಿ ಹೊರಟು ಹೋದರು.

---

ಕೈ. ಗುರುನಾಥರಾವ ಇವರ ಮರಣದ ಬಗ್ಗೆ ಕಳೆದ ಸಂಚಿಕೆಯಲ್ಲಿ ಲೇಖವನ್ನು ಬರೆದಿರುವೆವು. ಅವರ ಚಿತ್ರಗಳು ಸಮಯಕ್ಕೆ ಒದಗದ ಕಾರಣ ಅವನ್ನು ಆಗ ಕೊಡಲಿಲ್ಲ. ಈಗ ಕೊಟ್ಟಿರುವೆವು.



೧. ಶ್ರೀ. ಗುರುನಾಥರಾವ ಘಾಟಿಕ
( ಯೌವನದಶೆ )



೧. ಶ್ರೀ. ಗುರುನಾಥರಾವ ಘಾಟಿಕ
( ಸ್ಮಶಾನದಲ್ಲಿ ತೆಗೆದ ಚಿತ್ರ )




॥ नाहं कर्ता हरिः कर्ता तत्पूजा कर्म चाखिलम् ॥

## ಸ್ವರಾಜ್ಯಘಟನೆಯೂ ಸಂಪೂರ್ಣ ಸ್ವಾತಂತ್ರ್ಯವೂ

ಸಾಯುಮನ್ ಕಮಿಶನ್ನಕ್ಕೆ ಉತ್ತರವೆಂದು ಸ್ವರಾಜ್ಯದ ಯೋಜನೆಯಂತೂ ಸಿದ್ಧವಾಯಿತು. ದೇ. ಮೋತಿಲಾಲ ನೆಹರೂ ಕಮೀಟಿಯವರು ಅತ್ಯಂತ ಕುಶಲತೆಯಿಂದ ಸಿದ್ಧಪಡಿಸಿದ ಸ್ವರಾಜ್ಯ ಘಟನೆಯೂ ಸರ್ವ ಪಕ್ಷಗಳಿಂದ ಗ್ರಹಿತತವಾಗಿರುತ್ತದೆಂಬುದೇ ಈ ಘಟನೆಯ ವಿಶೇಷವು. ಏಕೆಂದರೆ, ಹಿಂದುಸ್ಥಾನಕ್ಕೆ ಬೇಕಾಗಿರುವುದು ಐಕ್ಯ. ಈ ಘಟನೆಯಿಂದ ಯಾವದೊಂದು ಪಕ್ಷಕ್ಕೂ ಸರ್ವರೀತಿಯಿಂದ ಸಮಾಧಾನವಾಗದಿದ್ದರೂ ಇಡೀ ಹಿಂದುಸ್ಥಾನಕ್ಕೆ ಈ ಘಟನೆಯಲ್ಲಿ ಕೇಳಿದ್ದಕ್ಕಿಂತ ಕಡಿಮೆ ಕೊಟ್ಟರೆ ಯಾರಿಗೂ ಸಮಾಧಾನವಾಗುವುದಿಲ್ಲವೆಂಬ ಸಂಗತಿಯನ್ನು ಇಡೀ ಹಿಂದುಸ್ಥಾನವು ಈಗ ಒಟ್ಟುಗೂಡಿ ಇಂಗ್ಲಂಡಕ್ಕೆ ಜಾಹೀರು ಮಾಡಿರುವುದರಿಂದ, ಸಾಯುಮನ್ ಕಮಿಶನದವರು ಹಿಂದುಸ್ಥಾನದ ಹಕ್ಕನ್ನು ಅಲ್ಲಗಳೆಯುವ ಮುಂಚೆ ಹತ್ತುಸಲ ವಿಚಾರಮಾಡಬೇಕಾಗುವುದು. ಆದರೆ, ಮುಂದೆ ಜಗ್ಗದವದೊಂದು ಸ್ವಾತಂತ್ರ್ಯಪಕ್ಷವು ಬೇಕೇಬೇಕು. ಸಂಪೂರ್ಣ ಸ್ವಾತಂತ್ರ್ಯದ ಧ್ಯೇಯವನ್ನು ಸಾರುವುದಕ್ಕೆ ಜನರು ಬೆದರಿ ಪ್ರಯೋಜನವಿಲ್ಲ. ಇನ್ನೂ ಜನರಿಗೆ ಆ ಮೈಚಳಿ ಹೋಗಿಲ್ಲ. ಅದನ್ನು ಹೋಗಲಾಡಿಸುವುದು ಅವಶ್ಯವು. ಆಳರಸರು ನಮ್ಮ ತಲೆಯಲ್ಲಿ ಏನೇನೋ ಕಲ್ಪನೆಗಳನ್ನು ತುಂಬಿರುವರು. ಇಂಗ್ಲಂಡವು ಇಂದು ಬಿಟ್ಟುಹೋದರೆ ಹಿಂದುಸ್ಥಾನದ ಗತಿಯೇನಾಗುವುದೆಂಬದರ ಭೀಷಣ ಚಿತ್ರವನ್ನು ನಮ್ಮಲ್ಲಿಯ ಅಳ್ಳೆದೆಯವರ ಮುಂದಿಟ್ಟು ಮನವನ್ನು ದುರ್ಬಲವಾಗಿ ಮಾಡಿರುತ್ತಾರೆ. ಇಂಗ್ಲಂಡದವರು ಬಿಟ್ಟುಹೋದರೆ ನಾವು ಸತ್ತೇ ಹೋಗುವವೆಂದು ಅವರ ತಿಳವಳಿಕೆ, ಹಿಂದುಸ್ಥಾನಕ್ಕೆ ಬಹಳ ದೊಡ್ಡ ಸಮುದ್ರದ ದಂಡೆಯಿದ್ದು ಅದರ ಸಂರಕ್ಷಣೆಯಾಗುವುದಕ್ಕೆ ನಮಗೆ ಇಂಗ್ಲಂಡದ ಬೆಂಬಲವಿಲ್ಲದೆ ಗತಿಯಿಲ್ಲವಂತೆ, ಅದಕ್ಕೋಸ್ಕರ ಇಂಗ್ಲಂಡವು ನಮ್ಮ ತಲೆಯ ಮೇಲೆ ಈಗಿನಂತೆಯೇ ಮೆಣಸನ್ನು ಅರೆಯುತ್ತ ಕುಳಿತುಕೊಳ್ಳಬೇಕಂತೆ" ಇಂಥ ಹುಚ್ಚುಕಲ್ಪನೆಗೆ ಬೆದ



ನ ದಿವಸಗಳು ಹೋದವು ! ನಾವು ಸ್ವತಂತ್ರರಾದರೆ ನಮಗೆ ಸಹಾಯ ಮಾಡುವುದಕ್ಕೆ ಸಾವಿರಾರು ದೇಶಗಳೂ ಸಜ್ಜವಾಗುವವು. ಅಲ್ಲದೆ, ನಾವು ಸಂಪೂರ್ಣಸ್ವಾತಂತ್ರ್ಯವನ್ನು ಗಳಿಸಿದ ಮಾತ್ರಕ್ಕೆ ನಾವು ಇಂಗ್ಲಂಡದ ದ್ವೇಷವನ್ನೇ ಮಾಡಬೇಕೆಂದೂ ಅರ್ಥವಲ್ಲ. ಇಂಗ್ಲಂಡಕ್ಕೆ ನಮ್ಮ ಪ್ರೇಮವು ಬೇಕಾಗಿದ್ದರೆ, ಮತ್ತು ನಮಗೆ ಇಂಗ್ಲಂಡದ ಪ್ರೇಮದ ಅವಶ್ಯಕತೆಯಿದ್ದರೆ ನಮ್ಮಿಬ್ಬರಲ್ಲಿಯೂ ಸ್ನೇಹ ಸಂಬಂಧವು ಕೊನೆಯವರೆಗೆ ಬಾಳಲಿಕ್ಕೆ ಈ ಸ್ವಾತಂತ್ರ್ಯವು ಎಂದಿಗೂ ಅಡ್ಡಬರಲಾರದು. ಸಂಪೂರ್ಣಸ್ವಾತಂತ್ರ್ಯವನ್ನು ಅವರು ಕೊಟ್ಟಾರೇನು ? ಅದು ನಮಗೆ ದೊರಕುವುದೇನು ? ಎಂದು ಕೆಲವರಿಗೆ ಚಿಂತೆ ! ಇಂಥವರಿಗೆ ದೇವರ ಲೀಲೆಗಳಲ್ಲಿ ವಿಶ್ವಾಸ ಇದ್ದಂತೆ ತೋರುವುದಿಲ್ಲ. ಇನ್ನು ಕೆಲವರಿಗೆ ಸಂಪೂರ್ಣ ಸ್ವಾತಂತ್ರ್ಯವು ನಮಗೆ ದೊರೆಯಬೇಕಾದರೆ ನಾವು ಹಿಂಸೆಯನ್ನು ಅವಲಂಬಿಸದೆ ನಿರ್ವಾಹವಿಲ್ಲವೆಂದೂ ಹಿಂಸೆಯನ್ನು ಅವಲಂಬಿಸಿ ಸ್ವಾತಂತ್ರ್ಯವನ್ನು ಗಳಿಸುವ ಕಲ್ಪನೆಯು ಸರ್ವಥಾ ಅಶಕ್ಯವೆಂದೂ ತೋರುತ್ತದೆ. ವಸ್ತುತಃ ಸಂಪೂರ್ಣಸ್ವಾತಂತ್ರ್ಯವು ಬೇಡವೆಂದು ಪ್ರತಿಪಾದಿಸುವವರ ಹೃದಯದಲ್ಲಿ ಈ ಬಗೆಯ ಅಂಜಿಕೆಯು ಇದ್ದ ಮೂಲಕವೇ ಅವರು ಸ್ವಾತಂತ್ರ್ಯಕ್ಕೆ ಅಡ್ಡ ಬರುತ್ತಿರುತ್ತಾರೆ. ಆದರೆ ಅವರ ಮೂಲ ಸಿದ್ಧಾಂತವೇ ತಪ್ಪಿರುತ್ತದೆ. ಹಿಂಸೆಯಿಲ್ಲದೆ ಸ್ವಾತಂತ್ರ್ಯವು ಸಿಗಲಾರದು ಎಂಬ ವಿಧಾನವೇ ಸುಳ್ಳು. ಈಗಿನ ಜಗತ್ತಿನ ರಾಜಕಾರಣವನ್ನು ನಿರೀಕ್ಷಿಸಿದರೆ, ಒಂದು ದೇಶಕ್ಕೆ ಮತ್ತೊಂದು ದೇಶದ ಅಂಜಿಕೆ ಇರುವ ಮೂಲಕವೇ ಅನೇಕ ಅನಾಥದೇಶಗಳಿಗೆ ತಾನಾಗಿಯೇ ಸಂಪೂರ್ಣಸ್ವಾತಂತ್ರ್ಯವು ಸಿಕ್ಕುವ ಕಾಲವು ಹಿಂದೆ ಬಂದಿದೆಯೆಂದೂ ಮುಂದೆ ಬರುವುದೆಂದೂ ಗೊತ್ತಾಗುತ್ತದೆ. ಆದುದರಿಂದ, ನಾವು ನಮ್ಮ ಹೃದಯ ದೌರ್ಬಲ್ಯವನ್ನು ತಳ್ಳಿ ಹಿಂದುಸ್ಥಾನಕ್ಕೆ ಬಲುಬೇಗನೆ ಐಹಿಕ ಮೋಕ್ಷವು ದೊರಕಿಸುವ ದಾರಿಯನ್ನು ಹಿಡಿಯಬೇಕು. ಶ್ರೀಮತಿ ಸರೋಜಿನಿ ನಾಯಡು ಮೊನ್ನೆ ಯುರೋಪದ ಪ್ರವಾಸಕ್ಕೆ ತೆರಳಿರುವರು ಅಲ್ಲಿ ಅವರು ಹಿಂದುಸ್ಥಾನದ ಸಂಸ್ಕೃತಿಯನ್ನು ಕುರಿತು ಅಲ್ಲಿ ವ್ಯಾಖ್ಯಾನ ಕೊಡುವವರಿದ್ದಾರೆ. ಅದೇ ಕಾಲಕ್ಕೆ ಅವರು ಹಿಂದುಸ್ಥಾನದ ಜನರ ತೃಷ್ಣೆಯು ಪೂರ್ಣಸ್ವಾತಂತ್ರ್ಯವು ದೊರೆಯದೆ ಎಂದಿಗೂ ಹಿಂಗದೆಂದು ಸ್ಪಷ್ಟವಾಗಿ ತಿಳಿಸುವರೆಂದು ನಂಬುತ್ತೇವೆ.

---

## ಕಾವುಂಟ ಲಿಯೋ ಟಾಲ್‌ಸ್ಟಾಯ

ಹೋದತಿಂಗಳ ಮಹತ್ವದ ಸಂಗತಿಯೆಂದರೆ ರಸಿಯಾ ದೇಶದ ಸಾಧುವರ್ಯನಾದ ಕಾವುಂಟ ಟಾಲ್‌ಸ್ಟಾಯ್ ಎಂಬವರ ೧೦೦ನೆಯ ವಾರ್ಷಿಕ ಜನ್ಮೋತ್ಸವವು ರಶಿಯಾದೇಶದಲ್ಲಿಯೂ ಇಂಗ್ಲಂಡದೇಶದಲ್ಲಿಯೂ ಬಹಳ ವಿಜೃಂಭಣೆಯಿಂದ ಜರುಗಿಸಲ್ಪಟ್ಟಿತು. ಈ ದೇಶದಲ್ಲಿ ಮಹಾತ್ಮಾ ಗಾಂಧಿಯವರು ಕಾವುಂಟ್ ಟಾಲ್‌ಸ್ಟಾಯ ಇವರ ಭಕ್ತರು. ಮಹಾತ್ಮಾಜಿಯವರ ವಿಚಾರಗಳಲ್ಲಿ ಅನೇಕ ವಿಚಾರಗಳು ಟಾಲ್‌ಸ್ಟಾಯರವರ ವಿಚಾರದ ಪ್ರತಿಬಿಂಬಗಳು. ಆದಕಾರಣ ಅವರ ಆಶ್ರಮದಲ್ಲಿಯೂ ಟಾಲ್‌ಸ್ಟಾಯರವರ ಈ ಉತ್ಸವವು ಸಡಗರದಿಂದ ನೆರವೇರಿಸಲ್ಪಟ್ಟಿತು.

ಟಾಲ್‌ಸ್ಟಾಯ ಇವರು ರಾಜವೈಭವದಲ್ಲಿ ಹುಟ್ಟಿ ಬೆಳೆದಿದ್ದರೂ ದರಿದ್ರರ ದುಃಖಗಳು ಹೇಗೆ ಹಿಂಗಬಹುದೆಂಬ ವಿಚಾರದಲ್ಲಿಯೇ ಆಯುಷ್ಯವನ್ನು ಕಳೆದರು. ಬಡವರಿಗೋಸ್ಕರ ತಮ್ಮ ಆಸ್ತಿಯನ್ನು ಧಾರೆಯೆರೆದರು. ಅವರು ಮುಖ್ಯತಃ ಕಾದಂಬರಿಗಳ ಮೂಲಕವಾಗಿ ರಶಿಯಾದೇಶದಲ್ಲಿ ವಿಚಾರಕ್ರಾಂತಿಯನ್ನುಂಟು ಮಾಡಿದರು. ಅನಾ ಕ್ಯಾರಿಯೇನಾ(Anna Karenina) ಮತ್ತು ವಾರ್ ಆ್ಯಂಡ ಪೀಸ್ (War and Peace) ಇವು ಅವರ ಜಗತ್ಪ್ರಸಿದ್ಧ ಪುಸ್ತಕಗಳು. ಅವರು ಅಹಿಂಸಾವಾದಿಗಳು ಮತ್ತು ಮೌನಪ್ರತೀಕಾರವಾದಿಗಳು. ಮಹಾತ್ಮರ ಆಯುಷ್ಯದ ಮುಖ್ಯತತ್ವಗಳೂ ಇವೇ. ಆದರೆ, ಮಹಾತ್ಮರಲ್ಲಿಯೂ ಟಾಲ್‌ಸ್ಟಾಯ್ ಇವರಲ್ಲಿಯೂ ಒಂದು ದೊಡ್ಡ ಭೇದವಿದೆ. ಅದು ಯಾವುದೆಂದರೆ ಮಹಾತ್ಮರಂತೆ ಟಾಲ್‌ಸ್ಟಾಯ ಇವರು ಕರ್ಮಯೋಗಿಗಳಲ್ಲ. ಟಾಲ್‌ಸ್ಟಾಯ್ ಇವರು ಜಗತ್ತಿಗೆ ಹೊಸ ವಿಚಾರಗಳನ್ನು ಕೊಟ್ಟರು. ಆದರೆ ಅವನ್ನು ಆಚರಣೆಯಲ್ಲಿ ತರುವ ಅದ್ಭುತಸಾಮರ್ಥ್ಯವು ಮಹಾತ್ಮರಂತೆ ಅವರಲ್ಲಿ ಇರಲಿಲ್ಲ. ಟಾಲ್‌ಸ್ಟಾಯ ಇವರಲ್ಲಿ ಸ್ತ್ರೀಜಾತಿಯ ವಿಷಯವಾಗಿ ಅತ್ಯಂತ ತಿರಸ್ಕಾರ ಬುದ್ಧಿಯಿತ್ತು. ಅವರ ಹೃದಯವು ಬುದ್ಧನಂತೆ ಅತ್ಯಂತ ಕೋಮಲವಾಗಿತ್ತು. ಅವರ ಲೇಖನಸಾಮರ್ಥ್ಯವು ಅದ್ಭುತವಾಗಿತ್ತು. ಆದರೆ ಅವರ ವಿಚಾರಗಳ ಪರಿಣಾಮವು ರಶಿಯಾದೇಶದ ಜನರಮೇಲೆ ಬಹಳ ದಿವಸ ಬಾಳಲಿಲ್ಲ. ಇಂದಿನ ರಶಿಯಾದೇಶವೆಂದರೆ ಟಾಲಸ್ಟಾಯ್ ಇವರ ಪ್ರತಿಬಿಂಬವೆನ್ನುವುದಕ್ಕಿಂತಲೂ ಕಾರ್ಲ ಮಾರ್ಕ್ಸ ಇವರ ಪ್ರತಿಬಿಂಬವಾಗಿದೆ. ಆದರೆ, ಟಾಲ್‌ಸ್ಟಾಯ್

ಇವರ ಸಾಧುಶೀಲತೆ, ಮನೌದಾರ್ಯ ಇವುಗಳ ಮೂಲಕ ಅವರು ಜಗತ್ತಿನ ಅದ್ವಿತೀಯ ಪುರುಷರಲ್ಲಿ ಒಬ್ಬರಾಗಿ ಪರಿಗಣಿಸಲ್ಪಟ್ಟಿರುವರು, ಮತ್ತು ಮುಂದೆ ಸಹ ಪರಿಗಣಿಸಲ್ಪಡುವರು.

---

## ಮೈಸೂರಪ್ರಾಂತದ ಮುಸಲ್ಮಾನರು

ಬೆಂಗಳೂರಿನ ಗಣಪತಿಯ ವಿಷಯವಾಗಿ ಎದ್ದ ಗೊಂದಲವು ಇಡೀ ಪ್ರಾಂತದಲ್ಲಿರುವ ಮುಸಲ್ಮಾನರ ಒಳಸಂಚಿನ ಒಂದು ಉದಾಹರಣೆಯೆಂದು ಜನರಿಗೆ ಅಂಜಿಕೆ ಹುಟ್ಟುವಂಥ ಸಂಗತಿಗಳು ಈಗ ಸಂಭವಿಸಿರುತ್ತವೆ. ಮುಸಲ್ಮಾನರು ಮೂರ್ತಿಭಂಜಕರೆಂದು ಖ್ಯಾತಿಗೊಂಡ ದಿವಸಗಳಲ್ಲಿ ಕೂಡ ಇಷ್ಟೊಂದು ಅನಾಹುತಗಳು ಸಂಭವಿಸಿರಲಿಕ್ಕಿಲ್ಲ. ಗುಡಿಬಂಡೆ, ಹೊಳಲಕೇರಿ, ಹೆಸರೂಘಟ್ಟ, ಬಸೆಟ್ಟಹಳ್ಳಿ, ಕೋಲಾರ, ಆನೇಕಲ್ಲು, ದಾದಿನಾಯಕನಹಳ್ಳಿ, ಕೂಂಸಿ, ಎಡತೊರೆ, ಮೇಡಹಳ್ಳಿ, ದಾವಣಗೇರಿ ಮುಂತಾದ ಅನೇಕ ಊರುಗಳಲ್ಲಿ ಹಿಂದೂ ಜನರ ಮೂರ್ತಿಗಳಿಗೂ ಮೆರವಣಿಗೆಗಳಿಗೂ ಹಾನಿತಟ್ಟಿದೆ. ಇಷ್ಟೆಲ್ಲ ಊರುಗಳಲ್ಲಿ ನಡೆದ ಅನಾಹುತಗಳೆಲ್ಲವೂ ಸುಳ್ಳೆಂದು ಹೇಳುವ ಧೈರ್ಯವು ಯಾರಿಗೆ ಉಂಟು ? ಹೀಗೆ, ಅಲ್ಲಿಯ ಮುಸಲ್ಮಾನರು ತಾಳಬಿಟ್ಟಿರುವರೆಂಬದು ನಿರ್ವಿವಾದವಾಗಿ ಸಿದ್ಧವಾದ ಬಳಿಕ, ಅಲ್ಲಿಯ ಸರಕಾರವು ಸುದ್ದಿಗಳಿಗೆ ಇಲ್ಲದ ಮುಸುಕು ಹಾಕಿ ಬಚ್ಚಿಡುವುದರಲ್ಲಿ ಏನು ಪ್ರಯೋಜನವಿದೆ? ಇಂಥ ಪರಿಸ್ಥಿತಿಯಲ್ಲಿ, ಎಲ್ಲಿ ವಿದ್ಯಾರ್ಥಿಗಳ 'ಬಂದೋಬಸ್ತ' ಮಾಡಲಿಕ್ಕೆ ಕಮೀಟಿ ನೇಮಿಸು, ಎಲ್ಲಿ ಮುಸಲ್ಮಾನರನ್ನು ಎತ್ತಿಹಿಡಿಯುವದಕ್ಕೆ ಪ್ರಯತ್ನಿಸು—ಹೀಗೆ ನಿರರ್ಥಕವಾದ ವಿಚಾರಣೆಗಳಲ್ಲಿ ಕಾಲಕಳೆಯದೆ ತೀವ್ರವೇ ತೀಕ್ಷ್ಣ ಉಪಾಯಗಳನ್ನು ಯೋಜಿಸಬೇಕೆಂದು ನಮ್ಮ ಸೂಚನೆ. ಇದೆಲ್ಲ ಸಿದ್ದಿಕನ ಆಟವೆಂದು ಜನರಿಗೆ ಸಂಶಯವುಂಟಾಗಿದೆ. ಆತನನ್ನು ನ್ಯಾಯಾಸನಕ್ಕೆ ಎಳೆದು ತರಬೇಕು. ದಾವಣಗೇರಿಯಲ್ಲಿ ಮುಸಲ್ಮಾನರು ತಮ್ಮ ಬಂಧುಗಳ ತಪ್ಪನ್ನು ಒಪ್ಪಿಕೊಂಡು ಹಿಂದುಗಳೊಡನೆ ಸ್ನೇಹಬೆಳಿಸಿಕೊಂಡಂತೆ, ಮಿಕ್ಕಕಡೆಗೂ ಉದಾರ ಮನಸ್ಕರಾದ ಮುಸಲ್ಮಾನರು ಮಾಡಬಹುದು. ಅಂಥವರ ಬೆಂಬಲದಿಂದ ಸರಕಾರವು ಅಲ್ಲಿಯ ಗೊಂದಲವನ್ನು ತೀವ್ರವೇ ಶಾಂತಗೊಳಿಸಬೇಕು. ಇನ್ನು ವಿಳಂಬಮಾಡಿ ಪ್ರಯೋಜನವಿಲ್ಲ. ಮುಸಲ್ಮಾನರಾದರೂ ತಮ್ಮದೊಂದು ಸಭೆಯನ್ನು ಕರೆದು ದೀರ್ಘ ವಿಚಾರಮಾಡಿ ತೀವ್ರವೇ ದಾರಿತಪ್ಪಿಹೋದ ತಮ್ಮ ಬಂಧುಗಳಿಗೆ ಬುದ್ಧೀ ಕಲಿಸಬೇಕು. ದಿವಾಣರು ಮುಸಲ್ಮಾನರಿರುವರೆಂಬ ಭರವಸೆಯಿಂದ ಅವರು ಹೀಗೆ ಅಡ್ಡದಾರೀ ಹಿಡಿಯುವ ಸಂಭವವುಂಟು. ಆದಕಾರಣ ಸ್ವತಃ ಮಹಾರಾಜರವರೇ ಈ ವಿಷಯದಲ್ಲಿ ಮನಸ್ಸು ಹಾಕಿ, ಕೇವಲ ಸಜ್ಜನರೆಂದು ಕೀರ್ತಿಹೊಂದಿದಂತೆಯೇ ನಿಷ್ಠುರ ನ್ಯಾಯನಿಷ್ಠರೆಂದೂ ಕೀರ್ತಿಯನ್ನು ಪಡೆಯಬೇಕು. ಈಗ ಕಮೀಟಿಗಳ ಚವಕಸಿ, ಸಾಕ್ಷಿ ಪುರಾವೆ ಇವುಗಳ ನಿರ್ಣಯದ ದಾರಿಯನ್ನು ನೋಡುತ್ತ ಕುಳಿತುಕೊಳ್ಳುವ ದಿವಸಗಳು ಇವಲ್ಲ. ಆದ್ದರಿಂದ ತೀವ್ರವೇ ರಾಜದಂಡವನ್ನು ಉಪಯೋಗಿಸಿ ವಿಭ್ರಾಂತರಾದ ಹಿಂದೂಗಳ ಮನಸ್ಸನ್ನು ಶಾಂತಗೊಳಿಸಬೇಕೆಂದು ಸೂಚನೆ.

## ವಾಚಕರಲ್ಲಿ ಪ್ರಾರ್ಥನೆ

ಜಯಕರ್ನಾಟಕಕ್ಕೆ ಹೊಸವರುಷವು ತೀವ್ರವೇ ಪ್ರಾರಂಭವಾಗುವುದು. ಜಯಕರ್ನಾಟಕದ ಧೋರಣದಲ್ಲಿಯೂ ಮುದ್ರಣದಲ್ಲಿಯೂ ಆಕಾರದಲ್ಲಿಯೂ ಯಾವ ಯಾವ ಬದಲಾವಣೆಗಳನ್ನು ಮಾಡುವುದು ಇಷ್ಟವಿದೆ ಎಂಬುದನ್ನು ನಮ್ಮ ವಾಚಕರ ಸಲಹೆಗಳನ್ನು ತೆಗೆದುಕೊಂಡು ಯೋಚನೆಮಾಡಿ ನಿರ್ಣಯಿಸಬೇಕಾಗಿದೆ. ಆದುದರಿಂದ, ಜಯಕರ್ನಾಟಕದ ಅಭಿಮಾನಿಗಳೆಲ್ಲರೂ ನಿರ್ದಾಕ್ಷಿಣ್ಯದಿಂದ ನಮಗೆ ಪತ್ರಮುಖಾಂತರವಾಗಿ ಹಾಗೆ ಸಲಹೆಗಳನ್ನು ಕೊಡಬೇಕೆಂದು ಪ್ರಾರ್ಥಿಸುತ್ತೇವೆ. ಮುಂದಿನ ಸಂಚಿಕೆಯಲ್ಲಿ ನಾವು ನಮ್ಮ ಹಿಂದಿನ ಧೋರಣದ ವಿಷಯವಾಗಿಯೂ ನಮ್ಮ ದೋಷಗಳ ವಿಷಯವಾಗಿಯೂ ಸಮಾಲೋಚನೆಯನ್ನು ಮಾಡಿ ಲೇಖ ಬರೆಯುವೆವು. ಅಷ್ಟರಲ್ಲಿ ಸಲಹೆಗಳು ಬಂದರೆ, ಮುಂದಿನ ನಿರ್ಣಯಕ್ಕೆ ಹೆಚ್ಚಿಗೆ ಅನುಕೂಲವಾಗುವುದು.

**ಮುಂದಿನ ವರುಷ ಈ ವರ್ಷಕ್ಕಿಂತ ಪುಟಗಳನ್ನು ಕಡಿಮೆ ಮಾಡುವುದಿಲ್ಲ, ಶಕ್ಯವಾದರೆ ಹೆಚ್ಚಿಗೆ ಬೆಳಿಸುವೆವು, ಎಂಬುದಂತೂ ನಿಶ್ಚಯ.**

—ಸಂಪಾದಕ



"ಡಂಬೆಲ್ಲು"ಗಳ ಸಾಧನದಿಂದ ಅವಯವಗಳನ್ನು
ಪುಷ್ಟವಾಗಿಯೂ, ಸುಂದರವಾಗಿಯೂ
ಮಾಡಿ ಕೊಂಡ ಸ್ಯಾಂಡೊ ಎಂಬ
ಪಾಶ್ಚಿಮಾತ್ಯ ಮಲ್ಲನು.




ॐ सह नाववतु ॥ सह नौ भुनक्तु ॥ सह वीर्यं करवावहै ॥
तेजस्विनावधीतमस्तु मा विद्विषावहै ॥ ॐ शान्तिः ॥३॥

—श्रुतिः


| ಸಂಪುಟ ೬ | ವಿಭವನಾಮ ಸಂವತ್ಸರ ಶೀಗಿಯ ಹುಣ್ಣಿವೆ<br>ಶಕ ೧೮೫೦, ೨೮ನೆಯ, ಅಕ್ಟೋಬರ ೧೯೨೮ | ಸಂಚಿಕೆ ೧೨ |
|---|---|---|


# ಅತಿವರ್ಣ ಷಡಾಶ್ರಮ ಧರ್ಮ

ಲೇಖಕ:— ಸಿದ್ಧರಾಮಪ್ಪ ದುಂಡಪ್ಪ ಪಾವಟೆ. ಬಿ. ಎ., ಎಲ್ಎಲ್. ಬಿ. ವಕೀಲ ಹುಬ್ಬಳ್ಳಿ.

( ೧೧ನೆಯ ಸಂಚಿಕೆಯಿಂದ ಮುಂದುವರಿದುದು ).

**ಶರಣಸ್ಥಲವು:—** ಪ್ರಸಾದಿ ಪ್ರಾಣಲಿಂಗಿಸ್ಥಳಗಳಲ್ಲಿ ಶಿವ ...ದಲ್ಲಿ ಅವಧಾನವೂ ಅನುಭವವೂ ಒಂದರಹಿಂದೊಂದು ...ದವು. ಇವುಗಳು ಎಡೆಬಿಡದಿರಲು ಅದುವೆ ಶಿವಜ್ಞಾನವು. ...ಜ್ಞಾನದಿಂದೊಗೆದ ಶಾಂತಿಯೆ ಶರಣಸ್ಥಲವು. ಅಂಗಲಿಂಗ ...ತು ಸಾಮರಸ್ಯದಿಂದಿರುವುವು. ಆ ಸಾಮರಸ್ಯವು ಮಲ ...ಮೂ ಕರ್ಮಗಳೆಂಬ ಕಲ್ಮಷಗಳಿಂದ ಮುಚ್ಚಿರುವುದಾಗಿ ...ಸದು. ಈ ತ್ರಿವಿಧವಾದ ದೋಷವನ್ನು ಅಣಗಿಸಲು ...ಲಿಂಗಗಳು ಒಂದರಲ್ಲಿ ಒಂದು ಬೇರಿಲ್ಲದೆ ಹೊಳೆವುವು. ...ದೆ ವೀರಶೈವ ಸಾಮರಸ್ಯ ಸಿದ್ಧಾಂತವು. ಸ್ವರೂಪದರು ...ದ ಅಂಗನು ಕರ್ಮಗಳ ತಡಬಡದಿಂದ ಪಾರಾಗುವನು. ...ವನ್ನು ಮಲವೆಂಬ ಅಜ್ಞಾನವೂ ಮಾಯೆಯೆಂಬ ಹಲವು ...ಕೆಯೂ ಮುಸುಗಿ ಅಪೂರ್ಣತ್ವವೆಂಬ ಕೊರತೆಯು ...ನ್ನು ಕಚ್ಚಿರುವಾಗ ಅದನ್ನು ನೀಗಲಿಕ್ಕೆ ಜೀವನು ತರತರದ ಕರ್ಮಗಳನ್ನು ತೆರಪಿಲ್ಲದೆ ಮಾಡುತ್ತ ಆ ಕರ್ಮಗಳ ಫಲವನ್ನು ಉಣ್ಣುವನು. ಸುಖದುಃಖಗಳನುಭವವೆಂದರಿದೆ—ಸರಿದೊರೆಯಿಲ್ಲದ ತುದಿಮೊದಲಿಲ್ಲದ ಎಂದಿಗೂ ಬರಿದಾಗದ ಮತ್ತೊಂದರ ಹಂಗಿಲ್ಲದ ಶಿವಸ್ವರೂಪಸುಖವು ತಾನಲ್ಲದಿಲ್ಲೆಂಬ ಸಾಮರಸ್ಯವು ಕಣ್ಣುಗಾಣಲು ಕಳವಳವಳಿದು ಕರ್ಮವು ನೀಗಿ ಎಣೆಇಲ್ಲದ ಶಾಂತಿಯು ಮೈದೋರುವುದು. ಆ ಶಾಂತಿಯೆ ಶರಣಸ್ಥಲವು.

## ಜೀವನ ಮರ್ಯಾದೆಯಲ್ಲಿದರ ಕಾಲವು

ಹರೆಯೆಂಬ ಪ್ರೌಢವಯಸ್ಸಿನ ತರುವಾಯದ ಕಾಲವು ಶರಣಸ್ಥಲಕ್ಕೆ ಹದವು. ತನ್ನ ಹರೆಯವನ್ನು ವಿಷಯಗಳತ್ತ ಹರಯಲೀಸದೆ ಎಚ್ಚರದಿಂದ ಬಳಸಿದ ಮನುಜನಿಗೆ ಪರಿಪಾಕವಾದ ಜ್ಞಾನವೂ ಅದರಿಂದ ಶಾಂತಿಯೂ ಕೈಸೇರುವುದನ್ನು

ಲೌಕಿಕದಲ್ಲಿ ಕಾಣ್ಬೆವು. ಶಿವಜ್ಞಾನದ ಹೊಲಬಿದಕ್ಕೆ ಬೇರಿಲ್ಲವು. ಣಹಣ್ಣು ಹರೆಯವು ಶರಸ್ಥಳಕ್ಕಿಂಬು.

## ಶರಣಸ್ಥಲ ಸ್ವರೂಪವು

ಚರಾಚರವೆಂಬ ಸುಳಿದಾಡುವ-ಸುಳಿದಾಡದ ಜಗತ್ತಿಗೆ ಸೂರ್ಯ ತೇಜವು ಕಾರಣವು. ನಮಗೆ ಅನುಭವದಿಂದ ತೋರುವ ಮಾತಿದು. सूर्य आत्मा जगतस्तस्थुषश्च ಎಂಬ ಶ್ರುತಿಯು. ಇದನ್ನು ಹೇಳಿ ಸೂರ್ಯಾಂತರ್ಯಾಮಿಯಾದ ಪರಶಿವನೆಂಬ ಜ್ಞಾನರವಿಯ ಶಕ್ತಿಯಿಂದ ವಿಶ್ವವು ಹುಟ್ಟುವುದೆಂಬುದನ್ನು ತೋರಿಸುವುದು. ಸೂರ್ಯಪ್ರಕಾಶವು ಜ್ಞಾನಕ್ರಿಯಾತ್ಮಕವಾಗಿದೆ. ರವಿಕಿರಣಗಳು ಮಳೆಗರೆದು ಸಸ್ಯಾದಿಗಳನ್ನು ಹುಟ್ಟಿಬೆಳೆಯಿಸುವುವು. ರವಿ ಕಿರಣಗಳೆ ಇಂತು ಹುಟ್ಟಿ ಬೆಳೆದ ಸಸ್ಯಾದಿಗಳನ್ನು ತೊಳಗಿಸುವುವು. ಅದರಂತೆಯೆ ಚಿತ್ಸೂರ್ಯನೆನಿಪ ಶಿವನ ಶಕ್ತಿಯು ಅಥವಾ ಪ್ರಕಾಶವು ಕ್ರಿಯಾಜ್ಞಾನರೂಪವಾಗಿಹುದು. परास्य शक्तिर्विविधैव श्रूयते । स्वाभाविकी ज्ञान बलक्रिया च ॥ श्वेताश्वतर ೬-೮. ಎಂಬ ಶ್ರುತಿಯು ಶಿವ ಶಕ್ತಿಯು ಜ್ಞಾನಕ್ರಿಯಾರೂಪವಾಗಿಹುದೆಂದು ಸಾರುವುದು. ಅದನ್ನೇ ಶಿವಾಗಮುಗಳು ಒತ್ತಿಹೇಳುವವು. दृक्क्रियात्मकमैश्वर्यं यस्य तद्यात्रपूर्वकम् ॥ ईश्वरः सोत्र मंतव्यः शक्तिद्वय युतः प्रभुः ॥ ಶತಸೂತ್ರ ರತ್ನದಲ್ಲುದಾಹರಿಸಿದ ವಿಶ್ವಸಾರೋತ್ತರಾಗಮ ವಾಕ್ಯ ॥ ಆವನೊಬ್ಬಾತ್ಮನ ಜ್ಞಾನಕ್ರಿಯಾತ್ಮಕವಾದ ಐಶ್ವರ್ಯವು, (ಮಲಮಾಯಾ ಕರ್ಮವೆಂಬ ಪಾಶವು ತನ್ನಲಿಲ್ಲದರಿಂದ) ಅವುಗಳನ್ನು ಕತ್ತರಿಸುವನಿಲ್ಲದೆ (ಸ್ವಾಭಾವಿಕವಾಗಿಯೆ) ಉಂಟೊ ಅಂತಪ್ಪಜ್ಞಾನಕ್ರಿಯಾಶಕ್ತಿಗಳೆರಡನ್ನುಳ್ಳವನು ಈ ಶಿವಶಾಸ್ತ್ರದಲ್ಲಿ ಈಶ್ವರನೆಂದು ತಿಳಿಯತಕ್ಕುದು – ಜೀವಾತ್ಮರುಗಳು ಮಲಮಾಯಾ ಕರ್ಮವೆಂಬ ಪಾಶದಿಂದ ಕಟ್ಟುವಡೆದಿರುವರು. ಗುರುಮುಖದಿಂದ ದೀಕ್ಷೆಯಾಗಲು ಶಿವಧರ್ಮಾನುಷ್ಠಾನದಿಂದ ಪಾಶವು ಹರಿದು ಹೋಗಲು ಅವರು ಶಿವನಲ್ಲಿ ಸಾಮರಸ್ಯವನ್ನು ಹೊಂದುವರು. ಶಿವನಿಗೆ ಪಾಶಸಂಬಂಧವೆಂದಿಗೂ ಇಲ್ಲ. ಅದರಿಂದ ಅವನ ಜ್ಞಾನಕ್ರಿಯೆಗಳ ಉಲ್ಲಾಸವು तदः मल म्याकमैत्रयं दातु=छेत्तः अपूर्वकम् ಆಗಿಹುದು.

ಶಿವಾಗಮುಗಳಲ್ಲಿ ಶಕ್ತಿಯು ಕ್ರಿಯಾಜ್ಞಾನರೂಪವೆಂತಲೂ ಆ ಶಕ್ತಿಯೆ ನಿಖಿಲ ಜಗದಂಡನಿರ್ಮಾಣ ಪಟುವೆಂತಲೂ ಹೇಳಿರುವ ಧರ್ಮವನ್ನು ಶಿವಯೋಗೀಶ್ವರನೆಂಬವೀರಶೈವಾಚಾರ್ಯರು ಸಿದ್ಧಾಂತಶಿಖಾಮಣಿಯ ಭಾಂಡಸ್ಥಲದಲ್ಲಿ ब्रह्मांड शतकोटीनाम् सर्गस्थितिलयान्प्रति । स्थानभूतो विमर्शो यस्तद्भांडस्थल मुच्यते ॥ १ ॥ विमर्शख्या पराशक्तिर्विश्वोद्भासनकारिणी॥ साक्षिणी सर्वभूतानां समिन्धे सर्वतामुखी ॥ २ ॥ ಪರಮಾತ್ಮನ ವಿಮರ್ಶ-ಸ್ವಾನುಭವ-ವೆಂಬ ಶಕ್ತಿಯು ಅನಂತ ಬ್ರಹ್ಮಾಂಡ ಕೋಟಿಗಳನ್ನು ಹುಟ್ಟಿಸುತ್ತಲೂ, ಕಾಯುತ್ತಲೂ, ಅಳಿಪುತ್ತಲೂ, ಸರ್ವಭೂತಸಾಕ್ಷಿಣಿಯಾಗಿ ವಿಶ್ವವನ್ನು ಭಾಸಿಸುತ್ತ ಎತ್ತೆತ್ತಲು ಬೆಳಗುತ್ತಿರುವುದೆಂದು ಹೇಳಿರುವನು. ಶಿವಾಗಮಗಳಿಂದಲೆ ಹೊರಟ ಪ್ರತ್ಯಭಿಜ್ಞಾ ಸಂಪ್ರದಾಯದ ಪುಣ್ಯಾನಂದಾಚಾರ್ಯನು ಕಾಮಕಲಾವಿಲಾಸದಲ್ಲಿ सा जयति शक्ति राद्या निजसुखमय नित्यनिरुपमाकारा । भाविचराचरबीजम् ! शिवरूपविमर्श निर्मलादर्शः ॥ २ ॥ ಶಿವನ ಸ್ವರೂಪಾವಲೋಕಕ್ಕೆ ಹಸನಾದ ಕನ್ನಡಿಯಂತೊಪ್ಪುವ ಶಕ್ತಿಯು ತನ್ನೊಡನೆ ಹೋಲಿಸಲು ಮತ್ತೊಂದಿಲ್ಲದ ನಿತ್ಯ ನಿಜಸುಖವಾಗಿಹುದು. ಅದುವೆ ಸೃಷ್ಟವಾಗಲಿರುವ ಚರಾಚರಕ್ಕೆ ಬೀಜವಾಗಿಹುದು. ಎಂದುಪದೇಶಿಸಿರುವನು. भाविचराचरबीजम् ಎಂಬುದರಿಂದ ಸದ್ರೂಪವೂ शिवरूपविमर्श निर्मलादर्शः ಎಂಬುದರಿಂದ ಚಿದ್ರೂಪವೂ निजसुखमयी ಎಂಬುದರಿಂದ ಆನಂದರೂಪವೂ ಹೇಳಲ್ಪಟ್ಟು ಶಕ್ತಿಯು अस्मिप्रकाशो नंदमि ಎಂಬ ಶಿವನ ಸಚ್ಚಿದಾನಂದಾತ್ಮಕ ಸ್ವರೂಪವಿಮರ್ಶವಾಗಿರುವುದೆಂದು ತಿಳಿಯುತ್ತಿದೆ.

ಇಂತಪ್ಪ ಶಿವಶಕ್ತಿಯು ಶಿವೇಚ್ಛೆಯಿಂದ ಪರಿಪೂರ್ಣತೆಯನ್ನು ಮರೆಮಾಡಿಕೊಂಡು ಸಂಕೋಚವನ್ನು ತೋರುಪಡಿಸಿದರೆ ಅದುವೆ ಜೀವನು. ಜೀವನು ಶಿವಾನುಗ್ರಹದಿಂದ ಸಂಕೋಚವನ್ನು ನೀಗಿ ಪರಿಪೂರ್ಣತೆಯ ಪರಾಮರ್ಶವನುಳ್ಳವನಾಗಲು ಅದುವೆ ಶಕ್ತಿರೂಪಾನುಭವವು. ಶಕ್ತಿಯು ಶಿವನಲ್ಲಿ ಗಂಧವು ಹೂವಿನಲ್ಲಿರುವಂತೆಯೂ, ಇಂಪು ಹಾಲಲ್ಲಿರುವಂತೆಯೂ ತಂಪು ಬೆಳದಿಂಗಳಲ್ಲಿರುವಂತೆಯು ಇರುವುದೆಂಬುದೆ ಶಿವನಲ್ಲಿ ಆತ್ಮ ಸಾಮರಸ್ಯವು. ಶಿವನಿಗಿಂತು ಅಂಗನಾದ ಆತ್ಮನು ಪ್ರಸಾದಿಸ್ಥಳದಲ್ಲಿ ವಿವರಿಸಿದಂತೆ ವಿಶ್ವವನ್ನು ಶಕ್ತಿರೂಪವೆಂದು ಬೆಳಗಿ ಸೂರ್ಯರಶ್ಮಿಗಳು ಸೂರ್ಯನತ್ತ ಸರಿವಂತೆ ಶಿವಸ್ವರೂಪದತ್ತ ಹರಿಯಲು ಅದುವೆ ತಾನು ಶಕ್ತಿಯೆಂಬ ಸತಿಯೆಂತಲೂ ಲಿಂಗವು ಶಿವನೆಂಬ ಪತಿಯೆಂತಲೂ ಪರಾಮರ್ಶವುಳ್ಳ ಶರಣಸ್ಥಲವು.

ಸಂಪಾದನ ಸಿದ್ಧವೀರನೆಂಬ ಶಿವಯೋಗಿಯು ಅನಾದಿ ವೀರ ...ನ ಸಾರಸಂಗ್ರಹದ ೨೬ನೆಯ ಪ್ರಕರಣದಲ್ಲಿ ಶರಣಸ್ಥಲದ ...ಕ್ಷಣವನ್ನು ಸಂಪಾದಿಸಿದುದು ಈ ಅರ್ಥವನ್ನೆಲ್ಲ ಒಳಗೊಂಡಿದೆ. ...ಮ ಹೇಗೆಂದರೆ —

...ಚಾತುಲೇ । ಜ್ಞಾನಪ್ರಕಾಶಬಲತಃ ಸ್ವಯಮೇವ ಲಿಂಗ । ದೇಹೇಂದ್ರಿಯಾದಿ ...ನರೂಪಮಿತಿ ಪ್ರಬುಧ್ಯಾ ॥ ಯುಕ್ತೇ ಸಮಸ್ತವಿಷಯೇಽಸತಿ ಯದ್ವಿಶುದ್ಧಂ ...ಹುರಾಗಮವಿದಃ ಶರಣಸ್ಥಲಂ ಹಿ ॥ ಪತಿರ್ಲಿಂಗಂ ಸತೀಚಾಹಂ । ಇತಿ ...ತ್ತೇ ಸದಾ ತಥಾ ॥ ಪಂಚೇಂದ್ರಿಯಸುಖಂ ನಾಸ್ತಿಶರಣಸ್ಥಲ ಮುತ್ತಮಮ್ ॥

## ವಿವರಣವು

...ಹಿಂದಿನ ಸ್ಥಲಗಳಲ್ಲಿ ನಡೆಯಿಸಿದ ಕ್ರಿಯಾಜ್ಞಾನಾನುಷ್ಠಾನ...ದಿಂದ ಸಂಸಾರವಿಷಯುಗಳಲ್ಲಿ ಅಭಿರತಿಯೆಂಬ ದುರ್ಭಾವವು ...ಷ್ಟವಾಗಿರುವುದು. ಭಾವವೆಂದರೆ ಅಂಗನ ಅಂತಃಕರಣದಲ್ಲಿ ...ತವೆಗಳನ್ನು ನೆನೆದು ಕಂಡು ಕೇಳಿ ಮೂಸಿ ಮುಟ್ಟಿಸವಿದು ...ರುವ ಪ್ರವೃತ್ತಿಗಳಿಗೆ ಕಾರಣವಾದ ಮತ್ತು ಆ ಇಂದ್ರಿ...ಯಾನುಭವಗಳಿಂದ ಒಟ್ಟುಗೂಡಿದ ಸೂಕ್ಷ್ಮವಾಸನೆಗಳು. ...ಂದ್ರಿಯಗಳನ್ನು ವಿಷಯದತ್ತ ಎಳಿಸುವ ಭಾವವು ...ರ್ಭಾವವು.

ಇದಕ್ಕೆ ವಿಪರೀತವಾಗಿ ರಾಗಾದ್ಯಗುಣೈರ್ನಿರ್ಮುಕ್ತಾ ನ ಚಾಲ್ಪಾಣಿವಶಂ ...ಗಾಃ । ನ ಚಕ್ಷುಃಶ್ರಾವಣವಶಗಾಃ ॥ ಎಂಬ ಮೊದಲಾದ ಸೂಕ್ಷ್ಮ...ಮ ಒಂಬತ್ತನೆಯ ಪಟಲದಲ್ಲಿ ವಿವರಿಸಿದಂತೆ ರಾಗಾದಿ ಗುಣ...ಳಿಂದ ದೂರನಾಗಿ ಕರ್ಮೇಂದ್ರಿಯುಗಳ ಚಾಪಲ್ಯಕ್ಕೂ ...ಜ್ಞಾನೇಂದ್ರಿಯುಗಳ ಎಳೆದಾಟಕ್ಕೂ ಸಿಲುಕದ ಶಿವಭಕ್ತನು ...ರ್ವತ್ರ ಶಿವಭಾವವನ್ನು ಮಾಡಲು ಶಕ್ತನಾಗುವನು. ಆ ಶಿವ...ಭಾವದ ಬಲದಿಂದ ಶಿವಜ್ಞಾನವು ಹೊಳೆವುದು. ಆಗ ಅಂಗ...ಲಿಂಗಗಳಲ್ಲಿ ತೋರುವ ಭೇದವು ಮಾಯಿಕವೆಂದು ಅಂಗನು ...ಜೀವಶಿವರುಗಳಲ್ಲಿ ಕಾಣುವ ವಿರೋಧಾಂಶಗಳನ್ನು ತ್ಯಜಿಸಿ ಸಚ್ಚಿದಾನಂದಾಂಶದಲ್ಲಿ ಸಾಮರಸ್ಯವನ್ನು ಅಪರೋಕ್ಷೀಕರಿಸು...ವನು. ಇದೆ ಜ್ಞಾನಪ್ರಕಾಶವು. ಆದುದರಿಂದ ಶರಣಸ್ಥಲದ ...ಲಕ್ಷಣವೆಂದುದಾಹರಿಸಿದ ಶ್ಲೋಕಾರ್ಥವಿದು —

ಜ್ಞಾನಪ್ರಕಾಶದ ಬಲದಿಂದ ತಾನು ಲಿಂಗವು. ದೇಹೇಂದ್ರಿ...ಯಾದಿಯು ಆ ಲಿಂಗದ ರೂಪವು ಎಂಬರಿವು ಒಂದೆಸವನೆ ಇರು...ವಲು ವಿಷಯುಗಳೆಲ್ಲ ಇಲ್ಲವಾಗುವುವು. ಉಳಿದ ಶುದ್ಧ ತತ್ವವೆ ಶರಣಸ್ಥಲವು.

ತಾನು ವಿಮರ್ಶರೂಪವಾದ ಶಕ್ತಿಯು ಆದುದರಿಂದ ತಾನು ಸತಿಯು ಲಿಂಗವು ಪತಿಯು ಎಂಬ ಬುದ್ಧಿಯಿಂದ ಪಂಚೇಂದ್ರಿಯ ವಿಷಯಸುಖವನತಿಗಳೆದ ಸ್ಥಿತಿಯು ಶರಣಸ್ಥಲವು.

## ಶಾಂಕರ ಶಿವಾದ್ವೈತ ಮತಗಳು

ಅಂಗಲಿಂಗಗಳ ಸಾಮರಸ್ಯ ಜ್ಞಾನವು ವಿರೋಧಾಂಶವನ್ನು ಕಳೆದು ಸಚ್ಚಿದಾನಂದಾದ್ವಯಸ್ವರೂಪವನ್ನು ಲಕ್ಷಿಸುವುದರಿಂದ ಮೈದೋರುವುದೆಂದು ಹೇಳಿದೆನು. ಇಲ್ಲಿ ಶಂಕರಾಚಾರ್ಯರ ಮತಕ್ಕೂ ವೀರಶೈವಮತಕ್ಕೂ ಇರುವ ಅಂತರವನ್ನು ನಿರವಿಸುವುದು ಅವಶ್ಯವಾಗಿದೆ. ಶಿವಜೀವರು ಏಕತ್ವವನ್ನುಳ್ಳವರೆಂಬ ಸಿದ್ಧಾಂತವು ಉಭಯಮತಗಳಲ್ಲುಂಟು. ರಜ್ಜುಸರ್ಪನ್ಯಾಯದ ಉದಾಹರಣವನ್ನೂ ಬಿಂಬ ಪ್ರತಿಬಿಂಬಭಾವದ ಉದಾಹರಣವನ್ನೂ ಶಕ್ತಿರಜತದ ಉದಾಹರಣವನ್ನೂ ವೀರಶೈವಗ್ರಂಥಗಳಲ್ಲಿಯೂ ಆಚಾರ್ಯರ ಉಕ್ತಿಗಳಲ್ಲಿಯು ಕಾಣುತ್ತೇವೆ. ಆದರೆ ಈ ಹೋಲಿಕೆಗಳಿಂದ ಎರಡೂ ಮತಗಳು ಒಂದೆಯಾಗಿವೆ ಸಂಪ್ರದಾಯವು ಮಾತ್ರ ಬೇರೆಯೆಂದು ತಿಳಿಯಲಾಗದು.

ಶಾಂಕರ ಮತದಲ್ಲಿ ಜೀವನು ಆಭಾಸಮಾತ್ರವಾಗಿರುವನು. ವೀರಶೈವಮತದಲ್ಲಿ ಜೀವನು ಅಥವಾ ಅಂಗನು ಶಿವನ ಸಂಕುಚಿತ ರೂಪನಾಗಿರುವನು. ಶ್ರೀ ತೋಂಟದಾರ್ಯನು ತತ್ವಪ್ರದೀಪಿಕೆಯೆಂಬ ಸಿದ್ಧಾಂತ ಶಿಖಾಮಣಿಯ ಟೀಕೆಯಲ್ಲಿ ಈ ಆಭಾಸವಾದವನ್ನು ಹಲವು ಪರಿಯಿಂದ ಖಂಡಿಸುತ್ತ ಆಭಾಸವು ಮಿಥ್ಯೆಯಾದುದರಿಂದ ಜ್ಞಾನದಿಂದ ಮಿಥ್ಯಾತ್ಮನು ಇಲ್ಲದಾಗುವನು. ಅದರಿಂದ ಆತ್ಮಹಾನಿಯಾಗುವುದು. ಆತ್ಮನನ್ನು ಕಳೆದುಕೊಂಡಂತಾಗುವುದು. ಅದರಿಂದ ಆತ್ಮಹಾನಿಃ ಪುರುಷಾರ್ಥ ಇತಿ ಕಸ್ಯಾಪಿ ಭವತ್ಯಭಿಮತ ಮುಕ್ತಾ ನ ನಿನ್ನ ಮುಕ್ತಿಯಲ್ಲಿ ಯಾರೂ ಕೈಹಾಕಲಿಕ್ಕಿಲ್ಲ. ಯಾಕಂದರೆ ತಾನಿಲ್ಲದಾಗುವಣವು ಪುರುಷಾರ್ಥವಲ್ಲ. ಧರ್ಮಾರ್ಥ ಕಾಮ ಮೋಕ್ಷಗಳು ತಾನು ಇದರಯೆ ಪುರುಷಾರ್ಥಗಳಾಗಬಲ್ಲವು. ತಾನಳಿದರೆ ಪುರುಷಾರ್ಥಗಳಾಗಲರಿಯವೆಂದು ಹೇಳಿರುವನು.

ಶಾಂಕರಮತದಲ್ಲಿ ಜಗತ್ತು ಸಟೆಯೆಂಬ ತಿಳುವಳಿಕೆಯೊಂದೆ ಮುಕ್ತಿಗೆ ಕಾರಣವೆಂದು ಹೇಳಿರುವುದರಿಂದ ಈಶ್ವರಾರ್ಪಿತ ಕರ್ಮಗಳಿಂದ ಚಿತ್ತಶುದ್ಧಿಯುಂಟಾಗಬಹುದಾದರು ಮತ್ತು ಮುಕ್ತಿಗಾಚಿತ್ತಶುದ್ಧಿಯು ಉಪಯುಕ್ತವಾದುದಾದರು ಶರ...

ದಮನಾದಿಗಳೂ ಇಹಪರಭೋಗವಿರಾಗವೂ, ನಿತ್ಯಾನಿತ್ಯ ವಸ್ತು ವಿವೇಕವೂ ಮುಮುಕ್ಷುತ್ವವೂ ನಿಕಟಕಾರಣವೆಂದು ಹೇಳು ತ್ತವೆ. ಈಶ್ವರಭಕ್ತಿಯು ಅಂತಹ ಕಾರಣಗಳಲ್ಲಿ ಎಣಿಕೆಯಾಗು ವುದಿಲ್ಲ. ಶಿವಾದ್ವೈತವೆಂಬ ವೀರಶೈವಮತದಲ್ಲಿ ಸರ್ವದಾ ಶಿವ ನನ್ನು ಶರಣಹೊಗುವ ಓಂನಮಃಶಿವಾಯ ಮಂತ್ರವೆ ಮೂಲವಾ ಗಿದೆ. ಲಿಂಗಾಂಗಸಾಮರಸ್ಯ ವಿಚಾರದಲ್ಲಿ ತತ್ತ್ವಮಸಿ ಮುಂತಾದ ಮಹಾವಾಕ್ಯಗಳ ವಿವೇಚನವಾಗುವುದು. ಆದರೆ ಈ ಮಹಾ ವಾಕ್ಯಗಳು ಷಡಕ್ಷರ ಮಂತ್ರವೆಂಬ ಸೂತ್ರಕ್ಕೆ ವೃತ್ತಿಗಳಾಗಿರು ವುವು. आद्य बीजमिदं देवि विद्या नामप्यशेषतः ॥ ಸೂಕ್ಷ್ಮಾ ಗಮ ೩-೧೪. ಎಲೌ ದೇವಿ ಈ ಷಡಕ್ಷರವು ಎಲ್ಲ ವಿದ್ಯೆಗಳಿಗೆ ಮೊದಲನೆಯ ಬೀಜವಾಗಿದೆ. ಶರೀರೇಂದ್ರಿಯ ಯೋಗದಿಂದ ಸಂಕೋಚವನ್ನು ಹೊಂದಿದ ಆತ್ಮನು ಈ ಮಂತ್ರಜಪಾನು ಧ್ಯಾನದಿಂದಲೂ ಅರ್ಥಚಿಂತನದಿಂದಲೂ ಸಂಕೋಚವನ್ನು ಅಗಲಿ ಶಿವಭಾವವನ್ನು ಹೊಂದುವುದು ವೀರಶೈವದ ಗುಟ್ಟು.

एवं शिवं भजतियः शिव एव सस्यादेवं स्थितेतमपहयकथं शिवान्यम् ॥ इच्छंतिमूढहृदया इति तत्र विप्रो लब्धेनिधौ महति कः कुरुते ऽन्ययाच्ञां ॥ ವೀರಶೈವಧರ್ಮಶಿರೋಮಣಿ ೯೩ ಶರಣಸ್ಥಳ. ಈ ವಿಧದಿಂದಾವನು ಶಿವಪೂಜೆಯನ್ನು ಮಾಡು ವನೊ ಆತನು ಶಿವನೆ ಆಗುವನು. ಹೀಗಿರಲು ತಿಳಿಗೇಡಿಗಳು ಶಿವನನೊಲ್ಲದೆ ಬೇರೆ ದೇವತೆಗಳನ್ನು ಎಂತುಬಯಸುವರೊ ನಮಗೆ ತಿಳಿಯದು. ಶಿವಭಕ್ತಿಯೆಂಬಂಜನದಿಂದ ಶಿವಮಹಾ ನಿಧಿಯು ದೊರಕಿದವನು ಬೇರೆ ಒಡೆವೆಯನ್ನು ಬಯಸನು. ಎಂದು ಶಿವಭಕ್ತಿಯನ್ನೂ,

याता क्व वाथ ममकाम मुखारयस्ते । याताक्व वा ममभिदाजननी अविद्या । ब्रह्मांडबुद्बुदचयाः क्वनुवा विलीनास्तस्मान्मम ह परमातात्कनैवासिद्धा ॥ ವೀ. ಧ. ಶಿ. ೯೪.

ನನ್ನ ಹಗೆಗಾರರು ಕಾಮಾದಿಗಳು ಎತ್ತಲೊ ಅಡಗಿದರು. ಶಿವನಿಗೂ ನನಗೆ ಭೇದವನ್ನುಂಟುಮಾಡಿದ ಅವಿದ್ಯೆಯು ಎಲ್ಲಿ ಯೊ ಹೋಯ್ತು. ಬ್ರಹ್ಮಾಂಡಗಳ ಗುಳ್ಳೆಗಳ ಮೊತ್ತಗಳು ಎಲ್ಲಿಯೊ ಮೈಗರೆದುವು. ಇವೆಲ್ಲ ಸಂಕೋಚಗಳಡಗಿದುದರಿಂದ ಸರ್ವವ್ಯಾಪಕಪರಮಾತ್ಮತ್ವವೆ ನನಗೆ ಸಹಜವಾಯ್ತು.

ಎಂದು ಶಿವಭಕ್ತಿಯಿಂದ ಆತ್ಮವಿಕಾಸವನ್ನೂ ಷಡಕ್ಷರ ಮಂತ್ರಿಯು ಹೇಳಿದುವರು.

ಆತ್ಮನಿಗೆ ಸಂಕೋಚತೆಯನುಂಟುಮಾಡುವ ಶರೀರಾದಿ ಗಳೂ, ಅವುಗಳಿಗೆ ಕಾರಣವೆನಿಪ ಮಲಮಾಯೆನೆಗಳೂ ಎಲ್ಲಿಂದ ಬಂದುವು? ಅಡಗುವಾಗ ಎಲ್ಲಿ ಅಡಗುವುವು? ಸರ್ವವನ್ನೂ ಶಿವತತ್ವವು ವ್ಯಾಪಿಸಿರುವುದರಿಂದ ಶಿವತತ್ವದ ಅಲುಪ್ತಾನಂತ ಶಕ್ತಿಯಿಂದ ಶಿವತತ್ವದಲ್ಲಿ ತೋರಿ ಶಿವತತ್ವದಲ್ಲಡಗುವುವು. ಇದಕ್ಕಾಗಿ ಶಕ್ತಿರಜತಾದಿ ಉದಾಹರಣವಲ್ಲದೆ. ಅವಿದ್ಯೆಯೆಂಬ ಜಡದಿಂದ ಜಗತ್ತು ಬ್ರಹ್ಮಚೈತನ್ಯದಲ್ಲಿ ತೋರಿತೆಂದು ಹೇಳಲಿ ಕ್ಕಲ್ಲ. ಶಿವಸ್ಫುರಣದಿಂದಲ್ಲದೆ ಅವಿದ್ಯಾದಿಗಳು ತೋರವು. ಆದುದರಿಂದ ಅವಿದ್ಯಾದಿಜಡವರ್ಗವು ಸೃಷ್ಟ್ಯಾದಿಕಾರಣವೆಂದು ಹೇಳದೆ ಶಕ್ತಿಯೆ ಕಾರಣವೆನ್ನಬೇಕು. ಶಿವಸ್ಫುರಣ ಅಥವಾ ಶಿವ ಸ್ಪಂದವೆಂಬ ಶಕ್ತಿಯಲ್ಲಿ ಅಡಗಿ ಆ ಶಕ್ತಿಯು ಶಿವನಲ್ಲಿ ಸಮರಸ ದಿಂದಿರುವುದನ್ನು ಲಕ್ಷಿಸಿ ಶಿವಾತ್ಮತೆಯನ್ನು ಹೊಂದುವುದು ಶರ ಣಸ್ಥಲದ ಮರ್ಮವು. ಈ ಮಾರ್ಗದಿಂದಲ್ಲದೆ ಅನ್ಯಥಾ ಅಭೇದ ವಾದವನ್ನು ಹೇಳುವುದು ವೀರಶೈವನಿಗೆ ಇಷ್ಟವಲ್ಲ.

ಇದನ್ನು ಷಡಕ್ಷರ ಮಂತ್ರಿಯು.

सर्गस्थितिप्रलयशालि सहस्रकोटिब्रह्मांडहेतुर निशंममाचित्त पद्मे । विद्या स्फुरत्यघटितं घटितं विधातु शक्ता चिदेकरस शंकर कल्पवल्लि ॥ ವೀ. ಧ. ಶಿ. ೯೫.

ಜ್ಞಾನರಸವೊಂದೆವುಳ್ಳ ಶಂಕರಕಲ್ಪವೃಕ್ಷಕ್ಕೆ ಕಾಮವಲ್ಲಿ ಯಾದ ಶಿವಸ್ಫುರಣವು ನನ್ನ ಹೃದಯದಲ್ಲಿ ಹೊಳೆಯುತ್ತಿದೆ. ಶಿವನನ್ನು ಸದಾ ಅನ್ವಯಿಸಿದ ಆಶಕ್ತಿಯು ಹುಟ್ಟಿ ಬದುಕಿಸಾವ ಸಹಸ್ರಕೋಟಿ ಬ್ರಹ್ಮಾಂಡಗಳಿಗೆ ಹೇತುವಾಗಿದೆ. ಆಗಬಾರದು ದನ್ನು ಆಗಿಸಲಿಕ್ಕೆ ಶಕ್ತವಾಗಿದೆ.

## ಈ ಸ್ಥಲದಲ್ಲಿ ಅನುಷ್ಠಿಸುವ ಧರ್ಮಗಳು

ಇದುವರೆಗೆ ವಿವರಿಸಿದಂತೆ ಶರಣನು ತಾನು ಶಿವಸ್ಫುರಣದಲ್ಲಿ ಸಮಾವೇಶವನ್ನು ಹೊಂದಿರಲು ಶಿವನೇ ಪತಿಯು ತಾನು ಸತಿಯು ಭಾವವು ಗಟ್ಟಿಗೊಂಡಿರಬೇಕು. अंगलिंगी ज्ञानरूपश्चः सती ज्ञेयः शिवः पतिः ॥ यत्सौख्यं तत्समावेश तद्वान् शरण नाम वान् ॥ ಸಿದ್ಧಾಂತಶಿಖಾಮಣಿ ೧೩ನೆಯ ಪರಿಚ್ಛೇದದಲ್ಲಿ ೨ ಅಂಗಲಿಂಗಸಾಮರಸ್ಯವನ್ನುಳ್ಳ ಶಿವಜ್ಞಾನಿಯು ಸತಿಯು ಶಿವನು ಪತಿಯು. ಅಂತಪ್ಪಸತೀಪತಿಸಮಾವೇಶದಿಂದಾದ ಸುಖಾನುಭವ ವುಳ್ಳಾತನು ಶರಣನು. ಸತೀಪತಿ ಸಾಮರಸ್ಯವೆ ಶರಣಸ್ಥಲವು.

ಬುದಕ್ಕೆ ವೀರಶೈವಜ್ಞರು स्त्रिया संपरिष्वक्तो तो बाह्यं किंचन वेदनातरं एवमेवायं पुरुषः प्राज्ञेनात्मना संपरिष्वक्तो न बाह्य किंचन वेद नांतरम् ॥ ಎಂಬ ಬೃಹದಾರಣ್ಯಕವನ್ನುದಾಹರಿಸುವರು. ಅದಕ್ಕಾಗಿ स्त्री ಎಂದರೆ ಶರಣನೆಂತಲೂ पुरुषः ಎಂದರೆ ಲಿಂಗವೆಂತಲೂ ಅರ್ಥವನ್ನು ಮಾಡುವರು. ಮತ್ತು ವೇದಭಾಷ್ಯದಲ್ಲಿ ಹಗಲೆಲ್ಲ ಕಂಡುಬರುವ ವಿಭಕ್ತಿವಿಪರಿಣಾಮವೆಂದರೆ ವಿಭಕ್ತಿಗಳ ವ್ಯತ್ಯಾಸವನ್ನು ಕಲ್ಪಿಸುವರು.

नबाह्यं किंचन वेदनांतरम् ಅಂತರಂಗದ ತಾಪತ್ರಯಗಳನ್ನೂ ಬಹಿರಂಗದ ದುಃಖಕಾರಣಗಳನ್ನೂ ಅದರಂತೆಯೆ ಅಂತರಂಗದ ಸುಖಗಳನ್ನೂ ಬಹಿರಂಗದ ಸುಖವಿಷಯಗಳನ್ನು ತಿಳಿಯನೆಂಬ ಶ್ರುತಿಯು ಶರಣಲಿಂಗಸಮಾವೇಶವು ಶಬ್ದದ ಮತ್ತು ಮನಸಿನ ಅಳತೆಗೆ ಬಾರದ ಸ್ವರೂಪಸುಖದ ನಿಲುವೆಂದು ಸೂಚಿಸುವುದು ಆ ಶಾಂತಿಯನ್ನು ತೋಂಟದಾರ್ಯನು कल्पान्तपवना वांतु यांतु चैकत्वमर्णवाः तपंतु द्वादशादित्या नास्ति निर्मनसः क्षतिः ॥ ಎಂಬ ವಾಸಿಷ್ಠೋಕ್ತಿಯಿಂದ ವರ್ಣಿಸಿರುವನು. ಕೈವಲ್ಯಸಾರ ೫–೫॥ ಕಡೆಗಾಲ ಗಾಳಿಗಳು ಬೀಸಲಿ, ಕಡಲುಗಳೊಂದುಗೂಡಲಿ. ಹನ್ನೆರ್ವರು ಸೂರ್ಯರು ಬೆಂಗದಿರುಗಳನು ಬೀರಲಿ ಲಿಂಗದಲ್ಲೆರಕವಾದ ಕಾರಣ ಮನಸಡಗಿದ ಶರಣನಿಗಾವ ಕೊರತೆಯಿಲ್ಲವು.

ಶರಣಸ್ಥಲಾರೂಢನಾದ ಶಿವಭಕ್ತನು ಸತೀ ಸುಖವನ್ನು ನಿರಾಕರಿಸುವುದು ತಾನಾಗಿ ಒದಗುವುದು. ಇದನ್ನು ಶಾಂಕರಸಂಹಿತಾಕಾರನು. सतीचाहं पतिर्लिंगं हृदि युक्तः स्वयं प्रभुः । प्रापंचिक सुखं नास्ति शरण्स्थ सुचमम् ॥ ಶಾಂ। ಸಂ. ಎಂದು ಮಾರ್ಮಿಕವಾಗಿ ಹೇಳಿರುವನು. ನಾನು ಸತಿಯು. ನನ್ನ ಪತಿಯಾದ ಲಿಂಗದೇವನು ನನ್ನ ಹೃದಯವನ್ನಗಲಿಲ್ಲ. ಆತನ ಕ್ರೀಡೆಯಲ್ಲಿ ಸ್ತ್ರೀ ಭಾವವನ್ನು ಹೊಂದಿದ ನನಗೆ ಸ್ತ್ರೀಸುಖವೆಂಬ ಪ್ರಾಪಂಚಿಕ ಸುಖವಿಲ್ಲ ಎಂದು ಹೇಳಿಹನು.

ಸತೀ ಸುಖವನ್ನು ಬಯಸನೆಂಬುದು ಇತರ ವಿಷಯಗಳನ್ನೂ ಬಯಸನೆಂಬುದಕ್ಕೆ ಉಪಲಕ್ಷಣವಾಗಿದೆ. ವಿಷಯ ಜಾಲದಲ್ಲಿ ಸ್ತ್ರೀಯು ಬಲಿಷ್ಠವು. ತರಗತಿಗಳನ್ನು ತಿನ್ನಲಿ. ಪಂಚಾಗ್ನಿ ಮಧ್ಯದಲ್ಲಿ ತಪಂಗೆಯ್ಯಲಿ. ಗಂಧಾದಿಗಳಲ್ಲಿ ಕಡು ತರವಾದ ವಿರತಿಯನು ತಳೆಯಲಿ, ಹೆಣ್ಣು ಕಂಣ ಮುಂದೆ ಸುಳಿದರೆ ಸುಡದ ಬಲ್ಲಿದವೆಲ್ಲ ಆದುದರಿಂದ ಶಿವಾನುಸಂಧಾನವಲ್ಲದೆ ಸ್ತ್ರೀ ಮೋಹವನ್ನು ಕತ್ತರಿಸುವ ಬೇರೆ ಬಗೆಯಿಲ್ಲ. ಹೆಂಣಾಸೆ ಹರಿದರೆ ಉಳಿದಾಸೆಗಳು ನಿಲ್ಲವು. ಸಿದ್ಧಾಂತ ಶಿಖಾಮಣಿಕಾರನು. शिवानंदं समासाद्य कोवान्यमुपतिष्ठते । गंगा मृतं परि त्यज्य कः कांक्षेन्मृगतृष्णिकाम् ॥ ೧೩–೭ ಎಂದಿರುವನು. ಗಂಗಾಜಲವು ದೊರಕಲು ಬಿಸಿಲುಗುದುರೆಯ ಬೆನ್ನು ಬೀಳಲು ಕಾರಣವಿಲ್ಲದಂತೆ ಶಿವಾನಂದವು ಕೈಸೇರಲು ಮಿಕ್ಕ ಆನಂದಗಳ ಬೆಂಬಳಿಯೇಕೆ !

ಮೇಲೆ ವಿವರಿಸಿದ ವಿಷಯೋಪರತಿಯಿಂದ ಅಂತಃಕರಣದ ತಾಮಸವು ಕಳೆವುದು. ವಿಷಯರಾಗವು ಕಾಮಕ್ರೋಧಾದಿಗಳಿಗೆ ಕಾರಣವು. ಸ್ವರೂಪಾನುಭವವು ವಿಷಯರಾಗಕ್ಕೆ ಕುಠಾರವು. ಕಾಮಾದಿಗಳನ್ನಳಿದ ಸ್ಥಿತಿಗೆ ತಾಮಸನಿರಾಸವೆಂದೂ ತಾಮಸವೆಂಬ ಕಾಳಿಕೆಯಳಿದ ಸ್ವಚ್ಛಜ್ಞಾನ ಪ್ರಕಾಶಕ್ಕೆ ನಿರ್ದೇಶವೆಂದೂ ಆ ನಿರ್ದೇಶದಿಂದುಂಟಾದ ಸದಾಚಾರ ಸಂಪತ್ತಿಗೆ ಶೀಲ ಸಂಪಾದನವೆಂದೂ ಹೆಸರು. ಸದಾಚಾರಕ್ಕೆ ಶಿವಭಕ್ತಿಯೂ ಶಿವಭಕ್ತಿಗೆ ಸದಾಚಾರವೂ ಒಂದಕ್ಕೊಂದು ಅಂಟಿಕೊಂಡಿರುವುವು.

ಆದುದರಿಂದ ವಿವೇಕ ಉಪರತಿ ಸ್ವರೂಪ–ನಿರ್ಮಲಜ್ಞಾನ ಸದಾಚಾರಗಳೆಂಬುವು ಶರಣಸ್ಥಲ ಧರ್ಮಗಳು.

## ವಾನಪ್ರಸ್ಥ–ಶರಣಸ್ಥಲಗಳು

ವಾನಪ್ರಸ್ಥವು ಶರಣಸ್ಥಲವನ್ನು ಎರಡು ಬಗೆಗಳಲ್ಲಿ ಹೋಲುವುದು. ವನಸ್ಥನು ಸಸ್ತ್ರೀಕನಿದ್ದರು ಗ್ರಾಮ್ಯ ಧರ್ಮವನ್ನು ಬಿಡತಕ್ಕುದು. ತಪಶ್ಚರ್ಯ ಧ್ಯಾನಗಳು ವನಸ್ಥನ ಧರ್ಮವಾಗಿವೆ. ವನ್ಯಾಹಾರವನ್ನು ಸೇವಿಸತಕ್ಕುದು. ಫಲಮೂಲ ಶಾಕಗಳಿಂದಲೆ ಅತಿಥಿ ಪೂಜಾದಿಕವನ್ನು ಮಾಡತಕ್ಕುದು ತತ್ವ ಚಿಂತನವನ್ನು ಮಾಡುತ್ತಿರಬೇಕು. ಸುರಾರ್ಚನಾದಿಕವನ್ನು ವನ್ಯ ಆಹಾರದಿಂದಲೆ ಮಾಡತಕ್ಕುದು ಮಾಂಸಾದಿಗಳನ್ನು ವರ್ಜಿಸತಕ್ಕುದು ನಖಲೋಮಾದಿಗಳನ್ನು ತೆಗೆಯಿಸಕೂಡದು ಜಟಾಧಾರಿಯಾಗತಕ್ಕುದು. ಇವೇ ಮೊದಲಾದ ಧರ್ಮಗಳು ಗರುಡ ಪುರಾಣದಲ್ಲಿಯೂ, ಕೂರ್ಮಪುರಾಣದಲ್ಲಿಯೂ ವಿಷ್ಣು ಪುರಾಣದಲ್ಲಿಯೂ ಕಂಡುಬರುತ್ತವೆ. ಸ್ತ್ರೀಸಂಗ ವರ್ಜನವೂ ತತ್ವ ಚಿಂತನವೂ ಇವೆರಡನ್ನುಳಿದು ವಾನಪ್ರಸ್ಥ ಧರ್ಮಗಳು ಶರಣಸ್ಥಲದ ಆಚರಣವ ಜ್ಞಾನಮಾರ್ಗವನ್ನು ಅನುಸರಿ

ಸಿಲ್ಲ. ಶರೀರ ಕ್ಲೇಶಕರವಾದ ಆಯಾ ಸಮಯವಾದ ಅನೇಕ ದೇವತಾರ್ಚನದಲ್ಲಿ ವಾನಪ್ರಸ್ಥನು ತೊಡಕಿ ಏಕೇಶ್ವರ ಭಕ್ತಿಯೂ ಆ ಭಕ್ತಿಯಲ್ಲಿ ಈಶ್ವರನಿಗೆ ಸ್ವಾತ್ಮಾರ್ಪಣವೂ ವನಸ್ಥ ಧರ್ಮದಲ್ಲಿ ಕಂಡು ಬರುವುದಿಲ್ಲ. ಮೊಮ್ಮಕ್ಕಳನ್ನು ಕಂಡಬಳಿಕ ವನವನಾಶ್ರಯಿಸಿ, ಭೂಶಯ್ಯಾ ಅಜಿನಧಾರಣಾದಿ ವ್ರತಗಳನ್ನಾಚರಿಪುದರೊಡನೆ ಶರಣಸ್ಥಲದ ಶಿವಜಿಜ್ಞಾಸೆಯೂ ಶೀಲ ಸಂಪತ್ತೂ ಇಲ್ಲದರಿಂದ ಇದು ಕಷ್ಟಮಯವಾಗಿದೆ.

## ಐಕ್ಯಸ್ಥಳವು

ಶರಣ ಸ್ಥಳದ ಭಕ್ತಿಯು ಆನಂದ ಭಕ್ತಿಯೆನಿಪುದು ವಿಷಯಾನಂದವನ್ನು ತೊರೆದು ಶಿವಾನಂದದಲ್ಲಿ ಮನವು ಎರಕವಾಗಿರುವುದರಿಂದ ಇದು ಆನಂದಭಕ್ತಿಯ ನೆಲೆ ಎನಿಸಿತು ಇನ್ನು ಮುಂದಿನ ಮೆಟ್ಟು ಐಕ್ಯವು. ಐಕ್ಯವೆಂದರೆ ಅಂಗನು ಲಿಂಗದಲ್ಲಿ ಒಂದುಗೂಡಿದುದನ್ನು ಕೂಡ ಜ್ಞಾನಾತಿಶಯದಿಂದ ಮರೆದ-ಅಂಗವಿಕಾರವೇನೂ ತೋರದ ಇರುವು. ಕೈವಲ್ಯಸಾರದ ಆರನೆಯ ಪ್ರಕರಣದಲ್ಲಿ ಶ್ರೀ ತೋಂಟದಾರ್ಯನು. एवं शरणस्थले महाज्ञानेन सकलसंशयं निवर्त्य निजरूपं साक्षात्कृत्य परमानंद-स्वरूप शरणः स्वस्य ज्ञानं विस्मृत्य तद्विस्मरणमपि विनाश्य महालिंगैक्यगतभेदः कथमित्याकांक्षायामनंतर मैक्यस्थलमभिधीयते ॥ ಐಕ್ಯಸ್ಥಳವನ್ನು ಬಣ್ಣಿಸುವನು. ಸಮಸ್ತವಾದ ಜಗತ್ತಿಗೆಮೂಲಕಾರಣವಾದ ಮಲಮಾಯಾ ಕರ್ಮವೆಂಬ ಕಪ್ಪಲವು ತೊಳೆದುದರಿಂದ ಶಿವ ಚೈತನ್ಯವು ತಳತಳಿಸಹತ್ತಿತು. ಅದರಿಂದದಕ್ಕೆ ಪ್ರಸಾದಲಿಂಗವೆಂಬ ಹೆಸರು. ಆ ಪ್ರಸಾದ ಲಿಂಗಾರಾಧಕನಾದ ಶರಣನು ಸದಾನಂದದಲ್ಲಿರುವುದರಿಂದ ಅದನ್ನು ಭಜಿಪ ಭಕ್ತಿಯು ಆನಂದಭಕ್ತಿಯೆನಿಸಿತು " ಶರಣಸ್ಥಲಾಚಾರದಿಂದ ಅಖಂಡ ಜ್ಞಾನದಿಂದ ಸಕಲ ಸಂಶಯವನ್ನು ಕಳೆದು ತನ್ನ ಸ್ವರೂಪವನ್ನು ಅಪರೋಕ್ಷಾನುಭೂತಿಯಿಂದರಿದು ಪರಮಾನಂದತ್ವವನ್ನು ಹೊಂದಿದ ಶರಣನು ಆಜ್ಞಾನವನ್ನು ಮರೆದು ಬಳಿಕಾ ಅ ಮರವೆಯುನ್ನಳಿದು ಮಹಾಲಿಂಗದಲ್ಲಿ ಒಡಗೂಡಿ ಽ ವಿವರವೆಂತು? ಎಂಬಲ್ಲಿ ಐಕ್ಯ ಸ್ಥಳವನ್ನು ತರುವಾಯಿಯಿಂದ ಹೇಳುತ್ತೇವೆ."

## ವಿಚಾರ

ಶಿವಜ್ಞಾನವಾಗಬೇಕಂತೆ ಅದು ಮರೆಯಬೇಕಂತೆ ಆ ಮರವು ನಾಶವಾಗಬೇಕಂತೆ. ಈ ಸರಣಿಯು ಸೋಜಿಗವೆನಿಸಬಹುದು. ಅದು ಸೋಜಿಗವಲ್ಲ ಸಹಜವದೆ. ಅನೇಕ ಭವಗಳಲ್ಲಿ ತಿರುತಿರುಗಿ ಬಳಲಿದ ಜೀವಾತ್ಮನು ಸಾಂಸಾರಿಕ ಬಾಧೆಯನ್ನು ನೀಗುವುದಕ್ಕಾಗಿ, ತಾನಾರು ಎಲ್ಲಿಂದ ಬಂದೆನು ಇನ್ನು ಹೋಗುವುದೆಲ್ಲಿ ಈ ತಾಪವು ಪರಿಹಾರವೆಂತಹುದು ಎಂಬಿವೆ ಮೊದಲಾದ ಹಲವು ಚಿಂತೆಗಳಿಂದ ಬಸವಳಿದು ಗುರುವರನ ಹತ್ತಿಗೈದಿ ಗುರು ಕರುಣವಂ ಪಡೆದು ತನ್ನ ಸ್ವರೂಪವನ್ನರಿದು ಅದನ್ನು ಸಾಕ್ಷಾತ್ಕರಿಸಲಿಕ್ಕಾಗಿ ಗುರುವು ಹೇಳಿದ ಸತ್ಕ್ರಿಯಾನುಷ್ಠಾನವನ್ನೂ ಸುಜ್ಞಾನಾಭ್ಯಾಸವನ್ನೂ ಮಾಡಲು ಶಿವಜ್ಞಾನೋದಯವಾಗುವುದು. ಅರಿವ ತಾನು ಅರುಹಿಸಿಕೊಂಬ ಶಿವನು ಎಂಬಿವು ಅಳಿದರೆ ಆ ಜ್ಞಾನದ ಮರವೆಯು. ಇಂತು ಮರೆದು, ಮರವೆಯಿಂದ ಸಾಂಸಾರಿಕ ಜೀಜೀವನಂತೆ ನಡೆಯದಿಹುದೆ ಮರವೆಯ ನಾಶವು. ಅಂದರೆ ಪ್ರಾಪಂಚಿಕರಾದ ನಾವು ನಮ್ಮ ಹೆಂಡರು ಮಕ್ಕಳನ್ನರಿತು ಅವರೊಳಗೊಂದಾಗಿ ಒಂದಾದ ಅರಿವು ಸಹಜವಾದುದರಿಂದ ಅದನ್ನು ಮರೆದು, ಮರೆದರು ಅವರು ಬೇರೆನ್ನದೆ ಸಹಜವಾಗಿ ಅವರೊಡಗೂಡಿ ಸಾಂಸಾರಿಕ ಕ್ರಿಯೆಗಳನ್ನೆಸಗುವೆವು. ಆಯಾ ವ್ಯವಹಾರದಲ್ಲಿ ಇದು ನನ್ನ ಹೆಂಡರು ಮಕ್ಕಳಿಗೆಂಬ ಎಣಿಕೆಯಿಲ್ಲದೆ ತಾನಾಗಿ ಆ ವ್ಯವಹಾರವನ್ನು ಮಾಡುವೆವು. ಅದರಂತೆಯೆ ಲಿಂಗಾಂಗೈಕ್ಯದ ಸ್ಥಳವು ಜೀವನ ಮರ್ಯಾದೆಯಲ್ಲಿ ದರಕಾಲವು ಶರಣಸ್ಥಳದ ಜ್ಞಾನದ ಸಹಜತ್ವವೆ ಐಕ್ಯ ಸ್ಥಳವಾಗಿದೆ. ಶರಣ ಸ್ಥಲದ ಪರಿಪಾಕ ಕಾಲವಿದು.

## ಐಕ್ಯಸ್ಥಳ ಸ್ವರೂಪವು

नाहं त्वमप्रथित शब्दविभेदवृत्ति न प्राणदेहमन इंद्रिभौतिकानि । सर्वं भ्रमात्मकामद मयिनेति भावादैक्यस्थलं समरसं सुखरूपमाहुः ॥ ವಾತೂಲಾಗಮ ಅನಾದಿ ವೀರಶೈವಸಾರ ಸಂಗ್ರಹೋದಾಹೃತವಾದುದು ॥ ಶಬ್ದ ಭೇದಗಳೂ ಪ್ರತ್ಯಯ ಭೇದಗಳೂ ಇಲ್ಲದರಿಂದ ಐಕ್ಯದಲ್ಲಿ ಅಹಂ ಎಂಬ ಅಂಗನಿಲ್ಲ. ತ್ವಂ ಎಂಬ ಲಿಂಗವಿಲ್ಲ. ದೇಹವಿಲ್ಲ. ಇಂದ್ರಿಯಗಳಿಲ್ಲ. ಮನವಿಲ್ಲ ಭೂತಭೌತಿಕವಿಲ್ಲ ಎಲ್ಲವು ಭ್ರಮವಾಗಿದೆ. ನನ್ನಲ್ಲಿ ಇದಿಲ್ಲ ಸಮರಸ ಸುಖರೂಪವಾಗಿಹುದೆ ಐಕ್ಯಸ್ಥಲವು.

अहमेको न मे कश्चिन्नाहमन्यस्य कस्यचित् न। तं पश्यामि यस्याहं तन्न पश्यामि यो मम ॥ ದೇವೀ ಕಾಲೋತ್ತರ ೫೦ ನಾನೊರ್ವನೆ ನನಗೊಬ್ಬನಿಲ್ಲ. ನಾನೊಬ್ಬನವನಲ್ಲ. ನಾನು ಯಾರವನೊ ಯಾವನು ನನ್ನವನೊ ಅಂತಹ ಬೇರೊರ್ವನನ್ನು

ಕಾಣೆನು. ಎಂಬ ದೇವೀ ಕಾಲೋತ್ತರ ವಚನವಾದರು ಐಕ್ಯಸ್ಥಿತಿಯ ನಿರೂಪಕವಾಗಿಹದು.

ತೋರುವ ಶರೀರಾದಿ ಭೌತಿಕಗಳಿಗೇನುಗತಿ? ಎಂದರೆ, कर्पूरस्याग्नलःक्रांतो काठिन्यं नास्य विद्यते । अहंकारक्षयात्तस्य देहकाठिन्यता कथम् ॥ ಕರ್ಪೂರವನ್ನು ಬೆಂಕಿಯುಂಡ ಬಳಿಕ ಅದರಲ್ಲಿ ಅಗ್ನಿಯಲ್ಲದೆ ಬೇರೆ ಪೃಥ್ವೀ ಗುಣವಿಲ್ಲ. ಅದರಂತೆ ಅಹಂಕಾರವನ್ನು ಶಿವಜ್ಞಾನಾಗ್ನಿಯುಕಃ ಬಳಿಕಾದನಂತರ ಆ ದೇಹದ ಕಾಠಿನ್ಯವು ಅಂದರೆ ಪಶುಧರ್ಮವು ತಿಳಿದು ಹೋಗುವುದು.

## ಐಕ್ಯಸ್ಥಳ ಧರ್ಮಗಳು

ಐಕ್ಯ ಆಚಾರಸಂಪತ್ತಿ, ಏಕಭಾಜನ, ಸಹಭೋಜನ ಎಂಬಿವು ಐಕ್ಯಸ್ಥಳದ ಧರ್ಮವಾಗಿಹವು. मायाशक्तितिरोधानाच्छिवे भेद विकल्पना । आत्मनस्सद्विनाशो तु नोद्धता॥ किंचिदिष्यते ॥ ಸಿದ್ಧಾಂತ ಶಿಖಾಮಣಿ ಸ್ವಾತ್ಮವನ್ನು ಅಡಗಿಸುವ ಜಾಣ್ಮೆಯೆಂಬ ಶಿವನ ಮಾಯಾ ಶಕ್ತಿಯಿಂದ ಶಿವನಲ್ಲಿ ಭೇದ ಕಲ್ಪನವಾಗಿ ನಾನು ನೀನೆಂಬ ಭೇದವು. ಶಿವಭಕ್ತಿ ಸದಾಚಾರಗಳಿಂದ ಶಿವಜ್ಞಾನೋದಯವಾಗಿ ಅದಳಿದ ಶಿವಾದ್ವೈತದಲ್ಲಿ ದೇನೂ ಉಳಿವುದಿಲ್ಲ. ಎಂಬುದೇ ಐಕ್ಯವು.

यद्यश्रितयते योगी मनसा शुद्ध भावनः । तत्तच्छिवमयत्वेन शिवध्यानमुदाहृतम् ॥ ನಿ ಶಿ, ೧೪–೨–೧೧೦ ಶುದ್ಧವಾದ ಶಿವಭಾವದಿಂದ ಐಕ್ಯನು ಏನೇನು ಚಿಂತಿಸುವನೊ ಅದೆಲ್ಲ ಶಿವಮಯವಾಗಿ ಶಿವಧ್ಯಾನವೆನಿಪುದು. ಎಂಬ ಸರ್ವದಾ ಶಿವನು ಸಂಧಾನವೆ ಆಚಾರಸಂಪತ್ತಿಯು.

विश्वं शिवंनयचेतिसदा भावयतो धिया शिवैकभजना त्मत्वादेकभाजनमुच्यते ॥ ಸಿದ್ಧಾಂತಶಿಖಾಮಣಿ ೧೪–೩–೧. ಬುದ್ಧಿಯಿಂದ ವಿಶ್ವವೆಲ್ಲ ಶಿವಮಯವೆಂದು ಭಾವಿಸುತ್ತಿರಲಾಗಿ ವಿಶ್ವಾಧಾರವಾದ ಶಿವನಲ್ಲಿ ಬುದ್ಧಿಯು ನಟ್ಟಿರುವುದರಿಂದ ಏಕಾಭಾಜನವೆನಿಸುವುದು.

गुरोः शिवस्य शिष्यस्य स्वस्वरूपतया स्मृतिः ।
सहभोजनमाख्यातं सर्वग्रासात्मभावतः ॥ ನಿ. ಶಿ. ೧೪–೪

೧. ಗುರುವು ಶಿವನು ಶಿಷ್ಯನು ಎಂಬಿದೆಲ್ಲ ಆತ್ಮರೂಪವಾದ ಶಿವಸ್ವರೂಪವೆಂದು ನೆನೆವುದು ಸಹಭೋಜನವೆನಿಸಿತು. ಏಕೆಂದರೆ ಗುರುಶಿಷ್ಯ ಶಿವಸ್ವರೂಪಗಳನ್ನು ಇದು ತುತ್ತುಗೊಂಬುದು.

## ಐಕ್ಯವೂ ಸನ್ಯಾಸವೂ

ಐಕ್ಯವು ಕೆಲವು ಅಂಶದಲ್ಲಿ ಅದ್ವೈತ ಸನ್ಯಾಸವನ್ನು ಹೋಲುವುದು. ಆದರೆ ಐಕ್ಯಕ್ಕೂ ಸನ್ಯಾಸಕ್ಕೂ ಬಹಳ ವ್ಯತ್ಯಾಸವದೆ. ಸರ್ವವೂ ಬ್ರಹ್ಮಮಯವೆಂಬ ಭಾವನೆಯಲ್ಲಿ ಉಭಯಕ್ಕೂ ಸಮಾನವಾ.ದೆ. ಸನ್ಯಾಸವು ಪೂರ್ವಧರ್ಮದ ಅಂದರೆ ಬ್ರಹ್ಮಚರ್ಯ ಗೃಹಸ್ಥ ವಾ: ಪ್ರಸ್ಥ ಧರ್ಮಗಳನ್ನು ನೀಗಳೆವುದು. ಅಂದರೆ ಶಂಕರಾಚಾರ್ಯರು ಈ ಮೂರು ಆಶ್ರಮಗಳು ಅವಿದ್ಯಾವದ್ವಿಷಯಗಳೆನ್ನುವರು. ದ್ವೈತಾದ್ವೈತಾದಿ ಮತಗಳ ಸನ್ಯಾಸಿಯು ಪೂರ್ವದಿಂದನುಷ್ಠಿಸುತ್ತ ಬಂದ ಧರ್ಮಗಳನ್ನೂ ಆಧರ್ಮ ಸಂಪಾದನಕ್ಕೆ ಸಾಧನವಾದ ಶಿಖಾ ಯಜ್ಞೋಪವೀತಗಳನ್ನೂ ಪರಿತ್ಯಜಿಸಿ ಬ್ರಹ್ಮಚಿಂತನಾದ್ಯನುಷ್ಠಾನಂಗೆಯ್ವನು. ಅಗ್ನಿಹೋತ್ರಾದಿ ಧರ್ಮಗಳನ್ನು ಪರಿತ್ಯಜಿಸುವನು. ಐಕ್ಯನು ಹಾಗಲ್ಲ. ಶಿವಲಿಂಗಧಾರಣಾದಿ ಧರ್ಮವೂ, ಅಷ್ಟಾವರಣ ಪಂಚಾಚಾರ ಪರಾಯಣತೆಯೂ ಹಿಂದಿನ ಐದು ಸ್ಥಳಗಳಂತೆ ಐಕ್ಯದಲ್ಲಿಯೂ ಉಂಟು. ಅದನ್ನು ಒಳ್ಳೇ ಗಟ್ಟಿಯಾಗಿ ಹೇಳುವುದಕ್ಕಾಗಿಯೇ ಸೂಕ್ಷ್ಮಾಗಮದಲ್ಲಿ

इष्टलिंग प्राणलिंगं भावलिंगंच पार्वति ।
एकीकृत्य समभ्यर्चेत् न भेदेन कदाचन ॥

ಎಂದು ಪರಶಿವನು ಪಾರ್ವತಿಗೆ ಹೇಳಿರುವನು. ಮತ್ತು ನಿರಾಭಾರಿ ಎಂಬ ಐಕ್ಯನು ಇಷ್ಟಲಿಂಗವು ಗಲಿತವಾದಲ್ಲಿ ಪ್ರಾಣವನಿಡಕೂಡದೆಂದು ಪಾರಮೇಶ್ವರಾಗಮವು ಹೇಳುವುದು.

## ಚಾತುರಾಶ್ರಮ್ಯ ಷಡಾಶ್ರಮ

ಇದುವರೆಗೆ ವೀರಶೈವವೆಂಬ ಅತಿವರ್ಣದ ಸ್ಥಲಗಳೆಂಬ ಷಡಾಶ್ರಮಗಳನ್ನು ಸಂಕ್ಷೇಪದಿಂದ ವಿವರಿಸಿ ಸ್ಮಾರ್ತಚತುರಾಶ್ರಮಗಳಿಗೆ ಹೋಲುವಲ್ಲಿ ಹೋಲಿಸಿದುದಾಯ್ತು. ಸ್ಮಾರ್ತ ಆಶ್ರಮಗಳು ದೇಹಪರಿಸ್ಥಿತಿಯನ್ನು ಮುಂದಿಟ್ಟು ಆತ್ಮವನ್ನು ಸಂಸ್ಕರಿಸುತ್ತವೆ. ಷಟ್ಸ್ಥಲಗಳು ಆಧ್ಯಾತ್ಮಿಕವನ್ನು ಮುಂದಿಟ್ಟು ಧರ್ಮಬೋಧಕವಾಗಿವೆ. ಆತ್ಮನು ಆಯಾ ವಯೋಮಾನದಿಂದ ಆಯಾ ಸ್ಥಲವನ್ನು ಹೊಂದಲು ಅರ್ಹನಾಗುವನೆಂದು ಪ್ರಾರಂಭದಲ್ಲಿ ನಾನು ಹೇಳಿದುದು ಈಗ ಬರೆದ ಲೇಖದಿಂದ ಪೂರ್ಣವಾಗುತ್ತದೊ ಇಲ್ಲೊ ಎಂಬುದು ಸುಧೀಗಳ ನಿರ್ಣಯದ ಮಾತು ನಾನು ಬರೆಯತಕ್ಕುದಲ್ಲ. ಆದರೆ ವೀರಶೈವ

ಧರ್ಮವು ತತ್ವವಿಚಾರಮಯುವೂ ಆಧ್ಯಾತ್ಮಿಕವೂ ಆಗಿದೆಂಬುದು ಸಾಕಷ್ಟು ಸ್ಪಷ್ಟವಾಗಿದೆಂಬುದನ್ನು ನಾನು ಅಂಜಂಜುತ್ತ ಹೇಳಲು ಎದೆಗೊಳ್ಳಬಹುದು.

ಇದುವರೆಗಿನ ಲೇಖವನ್ನು ನಾನು ಕೇವಲ ಸಂಸ್ಕೃತ ಶಾಸ್ತ್ರ ವಚನಗಳಿಂದ ಉಪಪಾದಿಸಿರುವೆನು. ಆದರೆ ದ್ವಿತೀಯ ಶಂಭುವಾದ ಬಸವಪ್ರಭುವು ಅವತರಿಸಿ ಈ ಧರ್ಮಕ್ಕೆ ನವಚೈತನ್ಯವನ್ನುಂಟು ಮಾಡದಿದ್ದರೆ ಈ ಸಂಸ್ಕೃತ ವಾಙ್ಮಯದಿಂದ ವೀರಶೈವ ಪ್ರತಿಪಾದನೆಯನ್ನು ಮಾಡುವುದು ಆವ ಆಚಾರ್ಯನಿಗೂ ಸಾಧ್ಯವಾಗುತ್ತಿರಲಿಲ್ಲವೆಂಬುದನ್ನು ಮರೆಯಲಾಗದು.

ಜಯಕರ್ನಾಟಕವ ಸಂಪಾದಕರು ಆಗ್ರಹಿಸದಿದ್ದರೆ ಈ ಲೇಖವನ್ನು ಬರೆವ ಗೊಡವಿಗೆ ನಾನು ಹೋಗುತ್ತಿರಲಿಲ್ಲ. ಆಗದ ಕೆಲಸಕ್ಕೆ ನಾನು ಕೈಹಾಕಿದುದರಲ್ಲಿ ನನ್ನ ಪ್ರೇರಕರಾದ ಸಂಪಾದಕರು ಭಾಗಿಗಳಿರುವರು.

ನನ್ನ ಅಕ್ಕರದ ಮುದ್ದು ಮಕ್ಕಳು ಇಬ್ಬರು. ಇಹಲೋಕ ಯಾತ್ರೆಯನ್ನು ತೀರಿಸಿ ಶಿವೈಕ್ಯರಾಗಿರುವರು. ಆ ಮಾಚಂಣ ನಿಜಗುಣರ ನೆವಹಿಗಿದನ್ನು ನೀಡಿರುವೆನು.

---

## ನವಿಲು

—:x:—

೧

ಯಾವ ದೇವಶಿಲ್ಪಿಯಿಂತು
ನಿನ್ನಕೊರೆದನು ?
ಯಾವ ಬಣ್ಣಗಾರನಿಂತು
ರಂಗನೆರೆದನು ?
ಒಲವಿನೊಡೆಯು ಸೊಬಗಿನೊಡೆತಿ-
ಯೊಡನೆ ಕೂಡಿ, ಸಂಚುಮಾಡಿ,
ನಿನ್ನ ಪಡೆದನೆ?
ಮಳೆಯು ಬಿಲ್ಲ ಕರಗಿಸಿಂತು
ನಿನ್ನ ಕಡೆದನೆ ?

೨

ಒಲುಮೆಗಿರುವ ಕಣ್ಣುಗಳನು
ಸುಲಿಗೆ ಮಾಡಿಹೆ ।
ಅವುಗಳನ್ನು ಪುಕ್ಕದಲ್ಲಿ
ಕೆತ್ತಿ ಹೂಡಿಹೆ !
ಸಗ್ಗದಂಗನೆಯರಸಂಗ
ಮಾಡಿ, ಸೆಜ್ಜೆಯಿಂದ ಗೆಜ್ಜೆ
ಗಳನು ಕದ್ದೆಹೆ !
ಅವರ ಹೆಜ್ಜೆಯಿಡುವ ಬಿಜ್ಜೆ
ಗೋಜಳಿದ್ದಿಹೆ !

—ಕಿಶೋರ ಚಂದ್ರವಾಣಿ.

---

# 'ನೋಬೆಲ್ಲು' ಪಾರಿತೋಷಿಕದ ಪರಿಚಯವು

**(ಗೆಳೆಯರ ಗುಂಪಿನಿಂದ)**

[ ೧೧ನೆಯ ಸಂಚಿಕೆಯಿಂದ ಮುಂದುವರಿದುದು ]

**೧೫. ರೋಮೋನ್ ರೋಲಾ (Romain Rolland) :**—ಫ್ರಾನ್ಸದೇಶದಲ್ಲಿ ೧೮೬೬ರಲ್ಲಿ ಜನಿಸಿದರು. ಈಗಿನ ಜಗತ್ತಿನಲ್ಲಿ ಮಹಾಪುರುಷರಲ್ಲೊಬ್ಬರು. ನಮ್ಮ ಮಹಾತ್ಮಾ ಗಾಂಧಿ—ರವೀಂದ್ರರೆಂದರೆ ಇವರು ಜೀವಾ ಕಳ ಕೊಳ್ಳುವರು. ಜಗತ್ತಿನ ಶಾಂತಿಯ ಉಪಾಸಕರಲ್ಲೊಬ್ಬರು. 'Mahatma Gandhi' ಎಂಬ ಇವರ ಪುಸ್ತಕವನ್ನು ಎಲ್ಲರೂ ಓದಬೇಕು.

### ಇಂಗ್ಲಿಷದಲ್ಲಿ ಪರಿವರ್ತಿತ ಗ್ರಂಥಗಳು.

1. Mahatma Gandhi ( a study in Indian Nationalism published by Ganesh and Co. Madras.)

2, People's Theatre (Tr. by B, H. Clerk.)

3. John Christopha ( in 4 Volumes ) Tr. by G. Cannan.

### ಫ್ರೆಂಚ ಭಾಷೆಯಲ್ಲಿಯ ಗ್ರಂಥಗಳು.

1. Jean Christophe. 2. L'anbe—Le Matin La' Solescent. 3. L'revolte la foire sur la peace. 4. Antoinethedans la maison. 5, Le Buisson ardent, la Moulle Journel. 6. Empe_dodesdj Agrigente et L'a ge de la Haine Ginive. 7. L'ame Euchantee. 8. Cleambantt heo toire d'une conscience Libre pendant La Gueral 9. Peierre et Louce. 10. Le' Fe'lim Ge'ant. 11. Liluli : Illustrations dapres des bois de Frans. 12. Aux Peuples Assassines.

**೧೬. ವ್ಹಿ. ವ್ಹಾನ್ ಹೆದೆನ್‌ಸ್ತಾನ್ (V. Von. Heidenstan) :**—ಸ್ವೀಡನ್ ದೇಶದಲ್ಲಿ ೧೮೫೯ನೇ ಜುಲೈ ೬ಕ್ಕೆ ಹುಟ್ಟಿದರು. ಹೆಸರಾದ ಸ್ವೀಡಿಸ್ ಕವಿಗಳೂ ಗ್ರಂಥಕಾರರೂ.

### ಇಂಗ್ಲಿಷದಲ್ಲಿಯ ಗ್ರಂಥಗಳು.

1. A King and His Campaigners. 2. The Keeper of the Caste Stories.

### ಮಾತೃಭಾಷೆಯಲ್ಲಿಯ ಗ್ರಂಥಗಳು.

1. Vall farts och Vandrengsar (Poems).
2. Endimion C. Fiction.

**೧೭–೧೮. ಕಾರ್ಲ ಆ್ಯದೋಲ್ಫ ಝೆಲುಪ್ ಮತ್ತು ಹೆನ್ರಿಕ್ ಪೊಂಥೋಪಿದನ್ (Messrs Care Adolf Gzellhup and Henriek Pontophodin) :**—ಇವರಿಬ್ಬರಿಗೂ ಕೂಡಿ ೧೯೧೭ರಲ್ಲಿ ಬಹುಮಾನ ದೊರೆಯಿತು. ಇವರಿಬ್ಬರೂ ಡೆನ್ಮಾರ್ಕ ದೇಶದವರು ಇವರಿಬ್ಬರೂ ೧೮೫೭ರಲ್ಲಿ ಹುಟ್ಟಿದರು. ಝೆಲುಪರು ಭಗವಾನ್ ಬುದ್ಧದೇವನಿಗೆ ಬಲು ಮೆಚ್ಚಿದವರು.

### ಇಂಗ್ಲಿಷದಲ್ಲಾದ ಝೆಲುಪರ ಗ್ರಂಥ.

1. The Pilgrim Kamanita ( A legendry Romance about Buddha and his teachings. Best interpretition of Buddism).

### ಇಂಗ್ಲಿಷದಲ್ಲಿಯ ಪೊಂಥೋಪಿದನ್‌ರ ಗ್ರಂಥಗಳು.

1. Emanuel or Children of the Soil. 2. The Promised Land ( Tr. by Edgar Lucas.

೧೯. ಕಾರ್ಲ ಸ್ಪಿಟ್ಲರ (Carl Spittler) :— ಸ್ವಿತ್‌ಸರ್ಲ್ಲಂಡದ ಕವಿಯೂ ತತ್ತ್ವಜ್ಞಾನಿಯೂ ಮಾತೃಭಾಷೆ ಜರ್ಮನ್.

## ಜರ್ಮನ್ ಭಾಷೆಯಲ್ಲಿಯ ಮುಖ್ಯ ಗ್ರಂಥಗಳು.

I. Olympischer Fruchling. 2. Prome tuensder Dulbar. 3. Prouethenscend Epimethens eim Glerichues Image.

೨೦. ಹ್ಯಾಮ್ಸನ್ ಕುತ್ (Hamsun Kut):— ನಾರ್ವೇದೇಶದ ಪ್ರಸಿದ್ಧ ಗ್ರಂಥಕರ್ತ.

## ಇಂಗ್ಲಿಷದಲ್ಲಿಯ ಗ್ರಂಥಗಳು.

1. Growth of the Soil ( Tr. by Worster Gylplyda.) 2. Hunger. 3. Mothevise...... Gyldendal (Intro Note bp W. W. Worster. 4. Wanderers ( Autumn and with Music strings.

೨೧. ಅ್ಯನೋಟೋಲ್ ಫ್ರಾನ್ಸ (Anatola France) :—ಫ್ರಾನ್ಸದೇಶದ ಹೆಸರಾದ ಗ್ರಂಥಕರ್ತ. ೧೮೪೪ರಲ್ಲಿ ಹುಟ್ಟಿ ಮೊನ್ನೆ ಮೊನ್ನೆ ೧೯೨೪ರಲ್ಲಿ ತೀರಿ ಕೊಂಡನು.

## ಇಂಗ್ಲಿಷದಲ್ಲಿ ಪರಿವರ್ತಿತ ಗ್ರಂಥಗಳು.

1. The crime of sylvestre Bonnard ( Tr. by Lafca Lio Herm ). 2. Balthazar (Tr. by Mrs. John Lane ). 3. Thais ( Tr. by R. B. Douglas. 4. Mother of Pearl ( Tr. by Allinson ). 5. At' the sign of the Queen Pedanque ( Tr. by A. V. Stritzke ). 6, The Garden of Epicurious ( Tr. by A Allinson ). 7. The Red Lily (Tr. by Winfred Stephens ). 8. The well of Saint clare aud other Stories (Tr. A. Allinson ). 9. The Wicker-Work-Woman ( Tr. by M. P. Willcocks ). 10. The Merril Tales of Jacques Tourne broche ( child-life in town and country ) Tr by A. Attenson. 11. The Elm-Tree on the Mall ( Tr. by M. P. W.). 12. The white-stone ( Tr. by C. E. Roche ). 3. Penguin Island ( Tr. by A. W. Evans ). 14. Little Pierce ( Tr. by J. Lews May ). 15. A murmer's tale ( Tr. by C. E. Roche ). 16. Honey Bee ( Tr. by Mrs. Johndane). 17. The Bloom of Life ( Tr. by J. L. May ). 18. The Revolt of the Angels ( Tr. by Mrs. Wilfred Jackson ). 19. The Amethysist Ring ( Tr. by B. Drithan ). 20. Monsieur Bergerit ( Tr. by B. Drillian ). 21. Jocast at the Famished Cat (Tr. by Agnes Farley ). 22. My Friend's Book ( Tr. by J. Lews May ). 23. Margucrite ( Tr. by J. L. May ). 24. Pierre Noziere ( Tr. by J. L. M. ). 25. The Seven Wives of Bleu Beard. 26. Marvellous Tales ( Tr. by D. B. Stewart ). 27. Count Morin Deputy ( Tr. by J. L. May ). 28. On Life and Letters (Tr. by A. W. Evarvs 29, The Path of the Glory ( Tr. by A. Allinson. 30. A France and his circle (Tabletalk Collected and recorded by Paul Gsell. Tr. by Frederic Lees.

## ಫ್ರೆಂಚಭಾಷೆಯ ಮುಖ್ಯ ಗ್ರಂಥಗಳು.

1. La Vie Lett eraire. 2. L'an neau D'anetuyste. 3. L'anneen A a'mettryste. 4. Bathasar. 5. Crainquebille.

6. Le Crime de Sylvestre Bonnard 7. Dienx Out Soif. 8. Les deux but Soif. 9. Letin de Nacre. 10. Histaire Comique. 11. Jocaste. 12. Jerome Coignard Le Jardan d'epicure Livre de Man Ami. 13. L'ile des Peigonine. 14. Leays Ronge. 15. M. Begaret a Parris. 16. Mannequfn D'oseer. 17 Les opinions de M. Jeroine. 18. Coig'nard Recucillies par Jacques Tournebroche 19. L'orme Du Mail. 20. Pages choisies de France. 21. Pierre Noziere. 22. Le Pints de Sainte Claire. 23. Le Petit Pierre. 24. La Rotisserie de la Reine Pe'deque. 25. Thais.

**೨೨. ಮಿಸೆಸ್ ಸಿಗ್ರೆದ್ ಉಂದ್‌ಸೇತ್ (Mrs. Sigrid Undset)** :— ಇವಳು ನಾರ್ವೇ ದೇಶದ ಸುಪ್ರತ್ರಿಯು. ಈ ೨೬ ವರ್ಷಗಳಲ್ಲಿ ಹೆಣ್ಣುಮಕ್ಕಳಿಗೆ ಬಹುಮಾನ ದೊರೆತಿದುದು ಇವಳೊಬ್ಬಳಿಗೇ. ಇವಳು ಪ್ರಸಿದ್ಧ ಕಥೆ ಕಾದಂಬರಿಕಾರಳು. ಇವಳಿಗೆ Fiction ದ ಸಲುವಾಗಿಯೇ ಮೆಚ್ಚು ಸಲ್ಲಿತು. ಇವಳ ಎಲ್ಲ ಗ್ರಂಥಗಳನ್ನು ಕಥೆಗಳು, ಕಾದಂಬರಗಳು ಎಂಬ ಎರಡು ಭಾಗಗಳನ್ನಾಗಿ ಮಾಡಬಹುದು.

### ಇಂಗ್ಲಿಷಡಲ್ಲಿ ಪರಿವರ್ತಿತ ಗ್ರಂಥಗಳು.

1. Marthe bulie (1907). 2. Clouds of spring (1921). 3. 3 Vols of Kristin Lavrunsdatter. (1920-22.) 4. The Six Handkerchiefs. 5. Little Girls. 6. A. Child. 7. The Garland. 8. Genny.

**೨೩. ಡಬ್ಲ್ಯೂ. ಬಿ. ಯೀಟ್ಸ್ (W. B. Yeats)**:— ಇವರು ಐರ್ಲಂಡ ದೇಶದ ಜಗತ್ ಪ್ರಸಿದ್ಧ ಕವಿಗಳು. ೧೮೬೫ರಲ್ಲಿ ಜನಿಸಿದರು. ಸದ್ಯದ ಐರ್ಲಂಡದ ಪುನರುಜ್ಜೀವನದ ಚಳವಳಿಯನ್ನು ಇವರೂ ಎ. ಈ. ಜಾರ್ಜ ರಸೆಲ್ ಎಂಬ ಮಹಾಪುರುಷನೂ ನಡೆಸುತ್ತಿರುವರು. ಇವರಿಬ್ಬರೂ ಬಾಲಮಿತ್ರರು. ಅನ್ಯತನ ಜಗತ್ತಿನಲ್ಲಿ ಹೆಸರು ಹೊಂದಿದ ಕವಿಗಳಲ್ಲಿ ಇವರಿಬ್ಬರೂ ಬರುತ್ತಾರೆ. ಹೊಸ ಬಗೆಯ ಬಗೆವಳರು.

### ಇಂಗ್ಲಿಷದಲ್ಲಿಯ ಮುಖ್ಯ ಗ್ರಂಥಗಳು.

1. Idea of Good and Evil. 2. Essays. 3. The Cutting of an Agate. 4. Per Amica Silentia Lunca. 5. Celtic Twilights. 6. Poems. 7. Secret Rose. 8. In the Seven Words. 9. Responsibilities. 10. King's Threshhold. 11. Collected Works in 8 Vols. 12. Reveries. 13. Wild Swans at Coola. 14. Trembling of the Veil. 15. Later Poems. 16. Plays. 17. Plays and Controversies. 18. The Green Helmet. 19. The Pot of Broth.

**೨೪. ಮಿ. ರೇಮಂಟ್ ಎಮ್. ವ್ಯಾದಿಸಲಾ (Raymont M. Vadislaw)** :— ಇವರು ೧೮೬೮ರಲ್ಲಿ ಪೋಲಂಡದಲ್ಲಿ ಪಿಟೆತ್ರಕೋ ಎಂಬ ಸ್ಥಳದ ಹತ್ತರ ಹುಟ್ಟಿದರು. ಇವರು, ಪೋಲಂಡದ ಒಬ್ಬ ಒಕ್ಕಲಿಗನ ಮಕ್ಕಳು. ಬಾಲ್ಯದಲ್ಲಿಯೇ ಇವರು ತೇಜಸ್ವಿಗಳಾಗಿದ್ದರು. ಚಿಕ್ಕಂದಿನಲ್ಲಿಯೇ ವಾಙ್ಮಯಾಭ್ಯಾಸವನ್ನು ಮೊದಲು ಮಾಡಿದರು. ಇವರು ಒಂದು ರಸಿಯನ್ ಶಾಲೆಯಲ್ಲಿ ಕಲಿಯುತ್ತಿದ್ದರು. ಆಗ್ಗೆ ಕೆಲವು ವಿಷಯುಗಳನ್ನು ಕುರಿತು ಪೋಲಂಡದ ಸ್ವಾಭಿಮಾನಕ್ಕೆ ಒಪ್ಪುವ ಮತಗಳನ್ನು ನಿರ್ದಾಕ್ಷಿಣ್ಯವಾಗಿ ಹೇಳಿದ್ದಕ್ಕಾಗಿ ಆ ಸಾಲಿಯಿಂದ ಹೊರಬೀಳಬೇಕಾಯ್ತು. ತಂತೀ ಕಚೇರಿಯಲ್ಲಿ ಕೆಲವು ದಿನ ಕೆಲಸಮಾಡಿದರು ಆ ಮೇಲೆ ನಟರಾಗಿ ಕೆಲವು ದಿನ ಜೀವಿಸಿದರು. ರೇಲ್ವೇ ಕಂಪನಿಯಲ್ಲಿ ಕೆಲಸಮಾಡಿದರು. ತರುವಾಯ ಝೆಸ್ತೋಶ್ವಾಪಟ್ಟಣದ ಒಂದು ಧರ್ಮ ಮತದಲ್ಲಿ ಪರಿಚಾರಕರಾಗಿ ಕೆಲಸಮಾಡಿದರು. ಹೀಗೆ ನಾನಾವಿಧವಾಗಿ ಬಡತನದ ಜೀವನವನ್ನುಂಡವರು. ಇವರು ಪ್ರಸಿದ್ಧ ಕಾದಂಬರೀಕಾರರು. ಇವರ 'Peasants' (ಒಕ್ಕಲಿಗ) ಎಂಬ ಕಾದಂಬರಿಗಾಗಿಯೇ ಇವರಿಗೆ ೧೯೨೪ರ ಬಹುಮಾನ ದೊರೆಯಿತು.

ಇಂಗ್ಲಿಷದಲ್ಲಿ ಪರಿವರ್ತಿತ ಗ್ರಂಥಗಳು.

1. The Peasants. 2. The Promised Land. 3. The Comedian. 4. The year 1793. 5. Insurrection.

೨೫. ಜಾರ್ಜ ಬೆರ್ನಾರ್ಡ ಶಾ (George Bernard Shaw):—ಅದ್ಯತನ ಇಂಗ್ಲಂಡದ ವಿಚಾರವಂತರಲ್ಲೊಬ್ಬರು. ೧೮೫೬ರಲ್ಲಿ ಇವರ ಜನ್ಮವಾಯಿತು. ಇವರು ಪ್ರಸಿದ್ಧ ಪತ್ರಿಕಾಚಾಲಕರು, ವಿಮರ್ಶಕರು, ಕಾದಂಬರೀಕಾರರು, ನಾಟಕ ಕರ್ತರು, ಗೊಂದಲಿಗರು (Agitator). ಇವರ ಪ್ರೀತಿಯ ವಿಷಯಗಳೆಂದರೆ ತತ್ತ್ವಜ್ಞಾನ, ದೈವವಿದ್ಯೆ (Theology), ರಾಜಕಾರಣ, ಅರ್ಥಶಾಸ್ತ್ರ, ಗಾಯನ ಮೊದಲಾದ ಲಲಿತ ಕಲೆಗಳು, ತಮ್ಮೆಲ್ಲ ವ್ಯವಸಾಯನನ್ನು ನಡುವಿನವರಾರೂ ಇಲ್ಲದೆ ಸ್ವತಃ ತಾವೇ ನೆರವೇರಸುವರು. ಸ್ಟೆಅಮೇಚೂರ ನಾಟಕ ಕಂಪನಿಗಳನ್ನು ಎಷ್ಟು ಏರ್ಪಡಿಸಿರುವರು. Fiction ದಲ್ಲಿ ಬಲು ಗಟ್ಟಿಗರು. ಮೆಚ್ಚಿನ ಹಣವನ್ನು ಕೊಡಹೋದರೆ ತಮಗೆ ಬೇಕಾಗುವಷ್ಟು ಪ್ರಾಪ್ತಿಯು ತಮ್ಮ ಬರಹದಿಂದ ಈಗಲೇ ಬರುವದೆಂದು ಹೇಳಿ ತಿರುಗಿಬಿಟ್ಟರು. ಮುಂದೆ ಲಲಿತ ಕಲೆಗಳಿಗಾಗಿ ಬಳಿಸಲು ಹೇಳಿದರು.

ಇಂಗ್ಲಿಷದಲ್ಲಿಯ ಇವರ ಮುಖ್ಯ ಗ್ರಂಥಗಳು.

1. The Irrational knot (1905, his second Novel). 2. An unsocial socialist, 3. Love among the artists. 4. Cashel Byrons Profession. 5. The Admirable Bastiville. 6. An essay on Modern prize-writing. 7. Man and Superman. 8. John Bults Other Island. 9. Perfect Wagnerite. 10. Dramatic opinions and Essays in 2 Vols. 11. Plays pleasant and unpleasant in 2 Vols. 12. Three plays for puritans. 13. Collection of Different Passages of B. G. Shaw. 14. Back to Melhnselap.

೨೬. ಓಲ್ಯಾವ್ ಡುನ್ (Olave Dunn):—ಇವರು ನಾರ್ವೇ ದೇಶದಲ್ಲಿ ೧೮೭೬ನೇ ವರ್ಷ ಜನಿಸಿದರು ನಾರ್ವೇ ದೇಶದ ಒಂದು ಸಾಲಿಯಲ್ಲಿ ಶಿಕ್ಷಕರಿರುವರು. ಇವರ ವಿಷಯವಾಗಿ ಇನ್ನೂ ಸಾಕಷ್ಟು ಗೊತ್ತಾಗಿಲ್ಲ.

ಈ ವಿವಿಧ ವಿಚಾರವಂತರ ನವವಾಙ್ಮಯವನ್ನು ನಮ್ಮ ಕಲಿತ—ಕಲಿಯುವ ಕನ್ನಡಿಗರು ಅಭ್ಯಸಿಸುವರೆಂದಾಶಿಸಿ ಇಷ್ಟಕ್ಕೆ ಈ ಪರಿಚಯ ಲೇಖನವನ್ನು ಮುಗಿಸುವಾ.

—ಪ್ರಲ್ಹಾದ.

## ಕಾವ್ಯ

—:x:—

ಭಕ್ತಿಯ ತಾಣಸಂ ।
ಮುಕ್ತಿಯ ಸದನವೈ ।
ರಕ್ತಿಯ ಸೀಮೆ ಮೋಹನದಾ ॥
ಸೂಕ್ತಿಯ ಸಿರಿಸರ— ।
ಸೋಕ್ತಿಯ ನೆಲೆಯಾಗಿ ।
ವ್ಯಕ್ತವಾಗಿಪ್ಪುದೆ ಕಾವ್ಯಂ ॥ ೧ ॥

ಸೊಕ್ಕುಗಲೆಗಳ ಸೋ— ।
ಲಕ್ಕೆ ಮೈಗೊಟ್ಟು ಮ— ।
ಲಕ್ಕಿಲಲ್ಲೆ ನೃಪ ಭಾವಕಿಯಾ ॥
ಚೊಕ್ಕೆಹದನುಭಾವ— ।
ದಕ್ಕರಗಳಿಗೆ ಸಂ— ॥
ವ್ಯಕ್ಕಾಗಿ ತೋರ್ಪುದೆ ಕಾವ್ಯಂ ॥ ೨ ॥

(ಇದನ್ನು ನಂಜುಂಡನೆಂಬ ಕವಿಯು 'ಸಾಸಲ ಭೈರವೇಶ್ವರ ಚರಿತೆ'ಯಲ್ಲಿ ರಚಿಸಿದ್ದಾನೆ. ಕವಿಯ ಕಾಲ ೧೬ನೆಯ ಶತಮಾನ. ಶಾ. ಶ. ೧೫೬೫ರ ಸುಮಾರು. ಈ ಕಾವ್ಯದ ೧೨೪೦ ಪದ್ಯಗಳು. ಲಿಂಗಾಯುತ ಕವಿಯಿವನು. ಮಾದರಿಗಾಗಿ ಆತನ ಎರಡು ನುಡಿಗಳನ್ನು ತಂದಿರಿಸಿದೆ.)

— ಲಿಂಗಪ್ಪ. ಸಿಸಿ

# ಕಾಳಯ್ಯನ ಜೀವನ ಸ್ಮೃತಿಗಳು

( ಕಥೆ )

ಲೇ : — ಶ್ರೀ. ಡಿ. ಎಸ್. ಸಿದ್ಧಲಿಂಗಯ್ಯ, ಮಡಿಕೇರಿ



ನಾಗದಾಳು ಎಂಬದೊಂದು ಗ್ರಾಮ. ಅಲ್ಲಿ ಒಂದು ಕೊಡವರ ಮನೆ ಇತ್ತು. ಆ ಮನೆಯ ಯಜಮಾನನು ಕಾಳೈಯ್ಯನೆಂಬ ಮುದುಕನು. ಈತನು ಆನಂದ ನಾಡ ಮನೆಗೆ ಸೇರಿದವನು. ಛಳಿಗಾಲದ ಒಂದು ಮುಚ್ಚಂಜೆಯಲ್ಲಿ ಆ ಮುದುಕನು ತನ್ನ ಕೋಣೆಯಲ್ಲಿ ಒಂದು ಕೆಂಪು ಶಾಲನ್ನು ಹೊದೆದುಕೊಂಡು ಕುಳಿತಿದ್ದನು. ಅವನ ಬಳಿಯಲ್ಲಿ ಅವನ ಇಬ್ಬರು ಮೊಮ್ಮಕ್ಕಳು ಇದ್ದರು. ಕೋಣೆಯು ಬೆಚ್ಚಗಿದ್ದುದರಿಂದ ಎಲ್ಲರು ಸುಖವಾಗಿ ಸಲ್ಲಾಪನಡಿಸುತಿದ್ದರು.

ಆ ಮುದುಕನು ಒಳ್ಳೆ ಕರುಣಾಳು. ಅವನಿಗೆ ಮಕ್ಕಳಮೇಲೆ ಬಹು ಪ್ರೀತಿ. ಬಡವರಿಗೆ ಬಹಳ ಉಪಕಾರಮಾಡುತಿದ್ದನು. ಒಮ್ಮೊಮ್ಮೆ ತನ್ನ ಜೇಬಿನಲ್ಲಿ ಮಿಠಾಯಿಯನ್ನು ಇಟ್ಟುಕೊಂಡು ಮಕ್ಕಳಿಗೆ ಕೊಡುತಿದ್ದನು. ತನ್ನ ಊರಿನ ಜನರು ಇವನನ್ನು ಬಹಳವಾಗಿ ಮೆಚ್ಚಿದ್ದರು.

ಹಿರಿಯರು ಸಂಪಾದಿಸಿಡ ಒಂದಿಷ್ಟು ಜಮ್ಮದ ಆಸ್ತಿ ಅವನಿಗಿತ್ತು. ಆದರೆ ತಾನೂ ದೊಡ್ಡ ಆಸ್ತಿ ಸಂಪಾದಿಸಿದ್ದನು. ತನ್ನ ಎಳೆತನದಲ್ಲಿ ಅವನು ಬಹಳ ಕಷ್ಟಪಟ್ಟಿದ್ದನು. ಆದುದರಿಂದ ಇಷ್ಟು ಮುದುಕನಾದರೂ ಒಳ್ಳೆ ಆರೋಗ್ಯದಲ್ಲಿದ್ದನು. ಅವನ ಮುಖದ ಮೇಲೆ ನೆರಿಗೆಗಳು ಕಂಡರೂ, ಅವನು ಇನ್ನೂ ಚುರುಕಾಗಿಯೇ ಇದ್ದನು. ಅವನ ಕೂದಲು ಬಿಳುಪೇರಿತ್ತು. ಯಾವಾಗಲೂ ಅವನು ಹಸನ್ಮುಖವುಳ್ಳವನಾಗಿಯೇ ಇದ್ದನು.

ಅವನ ಮೊಮ್ಮಕ್ಕಳಲ್ಲಿ ಒಬ್ಬನು ಹುಡುಗ; ಮತ್ತೊಬ್ಬಳು ಹುಡುಗಿ. ಆ ಹುಡುಗನ ಹೆಸರು ಗಣಪತಿ; ಹುಡುಗಿಯ ಹೆಸರು ತಂಗಮ್ಮ. ಗಣಪತಿಗೆ ಹತ್ತುವರುಷ ಪ್ರಾಯ. ಇವನು ಬಹಳ ಬಡಕನಾಗಿದ್ದನು. ಇವನ ಮುಖವು ರಕ್ತವಿಲ್ಲದೆ ಬಿಳುಪಾಗಿತ್ತು. ಇವನ ತಲೆಕೂದಲು ಕಪ್ಪಾಗಿಯೂ, ಮುಖವು ಕೊಂಚ ಉದ್ದವಾಗಿಯೂ ಇತ್ತು. ಇವನು ಯಾವಾಗಲೂ ಆಲಸ್ಯದಲ್ಲಿಯೇ ಇರುತ್ತಿದ್ದನು.

ಆದರೆ ತಂಗಮ್ಮನು ಚಂದದ ಹುಡುಗಿ. ಇವಳು ಅಣ್ಣನಾದ ಗಣಪತಿಗಿಂತ ಎರಡು ವರುಷಕ್ಕೆ ಕಿರಿಯವಳು. ಇವರಿಬ್ಬರಿಗೂ ಮುಖಛಾಯೆಯು ಒಂದೆ ಆದರೂ, ಬೇರೆ ರೀತಿಯಲ್ಲಿ ವ್ಯತ್ಯಾಸವಿತ್ತು. ಗಣಪತಿಯು ನಿರ್ಬಲ ಹುಡುಗ; ತಂಗಮ್ಮನು ಬಲವುಳ್ಳ ಹುಡುಗಿ. ಗಣಪತಿಯು ಮೌನಿಯಾದರೆ, ತಂಗಮ್ಮನು ಬಲು ಮಾತುಗಾರಿ. ಹೆಣ್ಣುಮಕ್ಕಳು ಯಾವಾಗಲೂ ವಾಚಾಳಿಯರು. ತಂಗಮ್ಮನು ಕ್ಷಣವಾದರೂ ಸುಮ್ಮನಿರುತಿರುಲಿಲ್ಲ. ಮನೆಯವರಿಗೆ ಇವಳ ಮೇಲೆ ಪ್ರೀತಿ ಹೆಚ್ಚಾದ ಕಾರಣ ಅವರು ಇವಳನ್ನೆ ಹೆಚ್ಚುಹೆಚ್ಚಾಗಿ ಮಾತಾಡಿಸುತಿದ್ದರು. ಆದುದರಿಂದ ಮಾತಾಡಿ ಮಾತಾಡಿ ಇವಳು ಮಾತಿನಮಲ್ಲಿಯೇ ಆಗಿದ್ದಳು.

ಕೋಣೆಯಲ್ಲಿ ಬೆಚ್ಚಗೆ ಕೂತಿದ್ದ ಅಜ್ಜನನ್ನು ನೋಡಿ, ತಂಗಮ್ಮನು "ಅಜ್ಜ! ಅಜ್ಜ! ಈಗ ನಮ್ಮಿಬ್ಬರಿಗೂ ಒಂದು ಒಳ್ಳೆ ಕಥೆ ಹೇಳು" ಎಂದಳು. ಆಗ ಅಜ್ಜನು—"ನಿಮ್ಮಿಬ್ಬರಿಗೂ ಯಾವ ಕಥೆ ಬೇಕು, ಹೇಳಿ" ಎಂದನು. ಅದಕ್ಕೆ ತಂಗಮ್ಮನು "ದೇವತೆಗಳ ಕಥೆಗಳನ್ನೂ, ಪ್ರಾಣಿಗಳ ಕಥೆಗಳನ್ನೂ ನಾವು ಕೇಳಿ ಕೇಳಿ ಸಾಕಾಯಿತು. ಬೇರೆ ಏನಾದರೂ ಇದ್ದರೆ ಹೇಳು" ಎಂದಳು.

ಆಗ ಮುದುಕನು "ನನ್ನ ಕಥೆಯನ್ನು ಹೇಳುವೆನು. ನೀವಿಬ್ಬರು ಚೆನ್ನಾಗಿ ಕೇಳಿರಿ" ಎಂದು ಹೇಳಿದನು. ಕಥೆಯು ಆರಂಭವಾಯಿತು.

"ನಾನು ಚಿಕ್ಕವನಾಗಿರುವಾಗ, ನನ್ನ ತಾಯಿತಂದೆಯರು ಬಹಳ ಬಡವರಿದ್ದರು. ನಾನಲ್ಲದೆ ಅವರಿಗೆ ಮತ್ತೂ ಐದು ಮಕ್ಕಳು ಇದ್ದರು. ಈ ಮಕ್ಕಳನ್ನು ಸಾಕಿಸಲಹುವುದು ಅವರಿಗೆ ಕಷ್ಟತೋರಿತ್ತು. ಅವರು ಬಹಳವಾಗಿ ಕೆಲಸಮಾಡುತಿದ್ದರು. ನನ್ನ ಎಂಟನೆಯ ವಯುಸ್ಸಿನಲ್ಲಿ, ನನ್ನ ತಂದೆಯು ಜಮೀನುದಾರನಾದ ಭೀಮಯ್ಯನವರ ಸ್ವಾಧೀನಕ್ಕೆ ಬಿಟ್ಟರು. ಇವನು ನನ್ನ ಖಾಸಾ ಮಾವ. ಇವನು ತುಂಬಾ ಹಣಗಾರ

ನೆನೋ ಹೌದು. ನಾನು ಒಕ್ಕಲತನ ಚನ್ನಾಗಿ ಕಲಿಯಬೇಕೆಂಬುದು ನನ್ನ ಮಾವನ ಇಷ್ಟ.

ನನ್ನ ಮಾವನು ಹುಡುಗರಿಂದ ಕೆಲಸತೆಗೆದುಕೊಳ್ಳುವುದರಲ್ಲಿ ಬುದ್ಧಿವಂತ. ಪ್ರತಿನಿತ್ಯವು ನಾನು ಪ್ರಾಥಃಕಾಲ ಏಳುವುದು. ಎದ್ದನಂತರ ಕೊಟ್ಟಿಗೆಯಿಂದ ಮನೆಯಹತ್ತಿರಕ್ಕೆ ಹಸುಗಳನ್ನು ಅಟ್ಟಿಕೊಂಡು ಬರುವುದು. ಹಸುಗಳ ಹಾಲು ಹಿಂಡಿದನಂತರ, ಅವುಗಳನ್ನು ಹಿಂತಿರುಗಿ ಅಟ್ಟಿಕೊಂಡು ಹೋಗಿ ಮೇವಿಗೆ ಬಿಟ್ಟುಬರುವುದು. ಇದು ನನ್ನ ಕೆಲಸವಾಗಿತ್ತು. ಕೆಲವು ವೇಳೆಗಳಲ್ಲಿ ಪ್ರಾತಃಕಾಲದಲ್ಲಿ ಬಹಳ ಛಳಿಯಾಗಿರುತಿತ್ತು. ಇತರ ಸಮಯದಲ್ಲಿ ಗದ್ದೆ ಉಳುತಿದ್ದೆನು; ಬೆಳೆಗೆ ಪಾರ ಇರುತಿದ್ದೆನು. ಕಳೆ ಸಹ ಕೀಳುತಿದ್ದೆನು. ಇಷ್ಟು ಕಷ್ಟದ ಕೆಲಸ ಮಾಡುತ್ತಿದ್ದೆನಾದುದರಿಂದ, ನನಗೆ ಹೆಚ್ಚು ಹಸಿವು ಆಗುತ್ತಿತ್ತು.

ಎಂತೂ, ನನ್ನ ಕೆಲಸದ ಮೇಲೆ ನನಗೆ ಬಹು ಆಸಕ್ತಿ. ನನ್ನ ದನದ ಹಿಂಡಿನಲ್ಲಿ ಪಟ್ಟತಿ ಎಂಬ ಹಸುವನ್ನು ನಾನು ಹೆಚ್ಚು ಪ್ರೀತಿಸುತಿದ್ದೆನು. ಸೋಮನೆಂಬ ಎತ್ತು ನನ್ನನ್ನು ನೋಡಿದ ಕೂಡಲೆ ಮೂಸುತ್ತಾ, ನನ್ನ ಮೈಯನ್ನು ನೆಕ್ಕಲಿಕ್ಕೆ ಬರುತಿತ್ತು. ನಾನು ಬಾಣತಿಯಿಂದ ದನಗಳನ್ನು ಅಟ್ಟಿಕೊಂಡು ಬರುತಿದ್ದಾಗ, ಆ ಎತ್ತು ನನ್ನ ಪಾದವನ್ನು ಒಮ್ಮೆ ತುಳಿಯಿತು. ಆಗ ನನಗೆ ಗಾಯವುಂಟಾಯಿತು. ಈ ನೋವಿನಿಂದ ನಾನು ಬಹಳ ದಿನಗಳ ವರೆಗೆ ಕುಂಟಿಕೊಂಡು ನಡೆಯುತ್ತಾ ಇದ್ದೆನು.

ನಾನು ಬಾಣತಿಯಲ್ಲಿ ಮರದ ತಂಪಿನಲ್ಲಿ ಕೂತುಕೊಂಡಿದ್ದಾಗ ಹಕ್ಕಿಗಳ ಹಾಡನ್ನು ಕೇಳಿ, ಮತ್ತು ಅಲ್ಲಲ್ಲಿ ಬೆಳೆದಿರುವ ಹೂವುಗಳನ್ನು ನೋಡಿ, ಬಹು ಆನಂದದಲ್ಲಿರುತಿದ್ದೆನು. ಇಷ್ಟಲ್ಲದೆ ನನಗೆ ಬೇರೆ ಯಾವ ತರದ ವಿನೋದವೂ ಇರಲಿಲ್ಲ. ಸಾಲೆಗೆ ಹೋಗುವ ವಿಚಾರವೇ ನನಗಿರಲಿಲ್ಲ. ದುಡ್ಡುದುಗ್ಗಾಣಿಯುಂತೂ ನನ್ನ ಕಣ್ಣಿಗೆ ತೋರದು. ಎಲ್ಲಾದರೂ ನನಗೆ ಮುಕ್ಕಾಲು ಸಿಕ್ಕಿತೆಂದರೆ ಅದೇ ನನಗೆ ದೊಡ್ಡ ಐಶ್ವರ್ಯವಾಗಿತ್ತು. ನಾಲ್ಕಾರು ಮುಕ್ಕಾಲುಳ್ಳವನಾದುದರಿಂದ, ನಾನು ಹಣಗಾರನೆಂದು ಊಹಿಸಿದ್ದೆನು. ನನಗೆ ಹತ್ತನೇ ವರುಷವಾದಾಗ "ದುಡ್ಡು ಹಲಕೆಲವರ ಬದುಕು" ಎಂದು ನನಗೆ ಗೊತ್ತಾಯಿತು. ಆದರೇನು ? ಮಾತ್ರ ಹಣಗಾರನಲ್ಲವೆಂದು ನನಗೆ ತಿಳಿದಿತ್ತು.

ಮಾವನವರ ಮನೆಯಲ್ಲಿ ನಾನಿದ್ದ ಮೂರುವರ್ಷದನಂತರ ನಾಣ್ಯದ ಬೆಲೆ ನನಗೆ ತಿಳಿಯಿತು. ಅಕಸ್ಮಾತ್ತಾಗಿ ಬೆಳ್ಳಿಯ ನಾಣ್ಯದ ಪರಿಚಯವು ನನಗುಂಟಾಯಿತು. ಅದು ಹೇಗೆ ಎಂದು ಹೇಳುತ್ತೇನೆ ಕೇಳಿರಿ.

ಒಂದು ಶನಿವಾರದ ಸಾಯಂಕಾಲ ನನ್ನನ್ನು ನನ್ನ ಮಾವನು ರಾಮಸೆಟ್ಟಿಯರ ಅಂಗಡಿಗೆ, ಕೆಲಸಾಮಾನುಗಳನ್ನು ತರಲಿಕ್ಕೆ ಕಳುಹಿಸಿದನು. ಅವರ ಅಂಗಡಿಯು ಸ್ವಲ್ಪ ದೂರದಲ್ಲಿತ್ತು. ಇವರ ಅಂಗಡಿಗೆ ಬಂದದ್ದು ಇದೇ ಮೊದಲನೆ ಸರ್ತಿ ಅಲ್ಲ; ಹತ್ತಾರು ಪಟ್ಟು ಬಂದಿದ್ದೆನು. ಅವರ ಅಂಗಡಿಯು ದೊಡ್ಡದು. ಅವರಿಗೆ ನನ್ನ ಭಾಷೆ ತಿಳಿಯದು. ಆದರೆ ಕನ್ನಡ ಚೆನ್ನಾಗಿ ತಿಳಿದಿತ್ತು. ಅವರ ಸ್ವಭಾಷೆ ತೆಲುಗು. ಅವರು ಮೈಸೂರಿನವರೆಂದು ನಾನು ತಿಳಿದೆ. ಮಾವನ ಪತ್ರವನ್ನು ಅವರಿಗೆ ಕೊಟ್ಟಕೂಡಲೆ, ಅವರು ಎಲ್ಲ ಸಾಮಾನುಗಳನ್ನು ಸರಿಯಾಗಿ ಕೊಟ್ಟರು. ಆ ಸಾಮಾನುಗಳನ್ನು ತೆಗೆದುಕೊಂಡು ಹಿಂದಕ್ಕೆ ಮನೆಗೆ ಹೋಗುತ್ತಾ ಇದ್ದೆನು.

ಆಗ ಮುಚ್ಚಂಜೆಯಾಗಿತ್ತು. ಮಸುಮಸು ಬೆಳಕಿತ್ತು. ದಾರಿಯಲ್ಲಿ ಹೋಗುತ್ತಾ ಅರಳೀಮರದ ಹತ್ತರ ಒಂದು ಕಾಗದದ ಸಣ್ಣ ಪೊಟ್ಟಣವನ್ನು ಕಂಡೆನು. ನಾನು ಅದನ್ನು ಹೆಕ್ಕಿ ಅದರಲ್ಲೇನಿದೆ ನೋಡೋಣವೆಂದು, ಅದನ್ನು ಬಿಚ್ಚಿದೆನು. ಅಹಾ! ಏನಾಶ್ಚರ್ಯ! ಆತುರದಿಂದ ಪೊಟ್ಟಣವನ್ನು ಬಿಚ್ಚುವಾಗ ಅದರೊಳಗಿನಿಂದ ಒಂದು ಉರುಟಾದ ಬಿಳೀಬಣ್ಣದ ಬಿಲ್ಲೆಯು ಕೆಳಕ್ಕೆ ಬಿತ್ತು. ಅದುಬಿದ್ದಕೂಡಲೆ 'ಟಣ್' ಎಂಬ ಶಬ್ದವು ಸಹ ಕೇಳಿಸಿತು. ನಾನು ಅದನ್ನು ಚನ್ನಾಗಿ ಪರೀಕ್ಷೆಮಾಡಿ ನೋಡಿದೆನು. "ಇದರ ಬಣ್ಣ ಬಿಳುಪು. ಇದು ಉರುಟಾಗಿಯೂ, ಪ್ರಕಾಶವಾಗಿಯೂ ಇದೆ. ಇದು ಮುಕ್ಕಾಲಲ್ಲ. ಮುಕ್ಕಾಲಿನ ಅಂಚಿನ ಸುತ್ತಲೂ ಗೆರೆಗಳಿಲ್ಲ. ಇದಕ್ಕೆ ಗೆರೆಗಳಿವೆ. ಇದೂ ಒಂದು ನಾಣ್ಯವೇ ಆಗಿರಬಹುದು" ಎಂದು ಊಹಿಸಿಕೊಂಡೆನು.

ಅನಂತರ ಅದನ್ನು ನನ್ನ ಬೆರಳುಗಳಿಂದ ಹಿಸುಕಿದೆನು; ಹಲ್ಲಿನಿಂದ ಅಗಿದೆನು. ಅದು ಗಟ್ಟಿಯಾಗಿತ್ತು. ಅದಕ್ಕೆ ಯಾವ ರುಚಿಯೂ ಇರಲಿಲ್ಲ. "ನಾನು ಇದನ್ನು ಹಾಳುಮಾಡಬಾರದು. ಜೋಪಾನವಾಗಿ ಇದನ್ನು ಇಟ್ಟುಕೊಳ್ಳುವೆನು" ಎಂದು ಯೋಚಿಸಿ ಅದನ್ನು ನನ್ನ ಸಣ್ಣ ಕಿಸೆಯಲ್ಲಿ ಹಾಕಿದೆನು. ಅದು ಜೇಬಿಗೆ ಬಿದ್ದು ಹೆಚ್ಚು ಹೊತ್ತೇನು ಆಗಲಿಲ್ಲ. ಪುನಃ ಅದನ್ನು ಹೊರಕ್ಕೆ ತೆಗೆದೆನು. ಮತ್ತೊಂದು ಸಾರಿ ನೋಡಿ, ಪುನಃ ಜೇಬಿ

ನಲ್ಲಿಟ್ಟೆನು. ಆಗಾಗ ಹೀಗೆ ಮಾಡುತಿದ್ದೆನು. ದಾರಿಯಲ್ಲಿ ಯಾವನಾದರು ಪ್ರಯಾಣಿಕನನ್ನು ಕಂಡರೆ, ಕೂಡಲೆ ಅದನ್ನು ಜೇಬಿಗೆ ಹಾಕುತಿದ್ದೆನು. 'ಯಾರಾದರು ಈ ನಾಣ್ಯವು ತನ್ನದೆಂದು ಹೇಳುವರೋ' ಎಂಬ ಭಯ ನನಗಿತ್ತು.

ಈ ನಾಣ್ಯವು ನನಗೆ ಬಿದ್ದು ಸಿಕ್ಕಿದ್ದು. ಆದುದರಿಂದಲೇ ಇದು ನನ್ನದಾಗಬೇಕು. ಎಂಬ ಧೈರ್ಯವು ನನಗಿದ್ದರೂ, ಒಮ್ಮೊಮ್ಮೆ ನನಗೆ ಬೇಸರ ತೋರುತ್ತಿತ್ತು. ಏಕಂದರೆ ಇದು ಯಾರದೆಂದು ವಿಚಾರಿಸಲು, ನಾನು ಪ್ರಯತ್ನಪಡಲಿಲ್ಲ. ಹೀಗಾಗಿ ನಾನು ಮನೆಗೆ ನಾಣ್ಯ ಸಮೇತನಾಗಿ ಹೊರಟು ಹೋದೆನು.

ನನಗೆ ಲಭಿಸಿರುವ ನಾಣ್ಯದ ವಿಚಾರವನ್ನು ನನ್ನ ಯಜಮಾನನ ಆಳುಗಳಿಗ್ಯಾರಿಗೂ ಹೇಳಲಿಲ್ಲ. ನನ್ನ ಕೈಯಿಂದ ನಾಣ್ಯವನ್ನು ಯಾರಾದರೂ ಕಿತ್ತುಕೊಳ್ಳುವರೋ ಎಂಬ ಭಯವು ನನ್ನನ್ನು ಬಿಟ್ಟಿರಲಿಲ್ಲ. ಇಷ್ಟೇ ಅಲ್ಲ. ಯಾರಾದರು ನನ್ನ ಮುಖಮುದ್ರೆಯನ್ನು ನೋಡಿ, ನನ್ನಲ್ಲಿ ಏನೋ ವಿಶೇಷ ಪದಾರ್ಥವಿರಬಹುದೆಂದು ಕಂಡುಹಿಡಿಯುವರೋ ಎಂದು ನನ್ನ ಎದೆ ಬಡೆದುಕೊಳ್ಳುತ್ತಿತ್ತು. ನಾನೊಬ್ಬನೆ ಇರಬೇಕು; ನನ್ನ ಸಮೀಪ ಯಾರು ಇರಬಾರದು ಎಂದು ನಿಶ್ಚೈಸಿಕೊಂಡೆನು. ಆ ದಿನ ಮಧ್ಯರಾತ್ರೆಯವರೆಗೆ ನನಗೆ ನಿದ್ರೆಯೇ ಬರಲಿಲ್ಲ. ಈ ನಾಣ್ಯವನ್ನು ಹೇಗೆ ವ್ಯಯಮಾಡಬೇಕೆಂಬುದೇ ನನ್ನ ಆಲೋಚನೆ.

ಮಾರನೆ ದಿನ ಎದ್ದು ಹೊರಗೆ ಬಂದೆನು. ನನ್ನ ಕಣ್ಣುಗಳು ದಪ್ಪವಾಗಿಯೂ, ಮುಖವು ಬಾಡಿಯೂ ಇರುವುದನ್ನು ನೋಡಿ, ನನಗೆ ಅಸಮಾಧಾನವಾಯಿತು. ನಾನು ನಿರ್ಬಲನಾದೆನು. ಸಾಮಾನ್ಯವಾಗಿ, ನಾನು ಸುಖಿಯಾಗಿಯೇ ಇದ್ದೆನು. ನನಗೆ ಹಸಿವಿರುತ್ತಿತ್ತು. ಆದರೆ ಈ ಹೊತ್ತಾರೆ ನಾನು ಬಹಳ ಸಪ್ಪೆಯಾಗಿದ್ದೆನು. ರೊಟ್ಟಿ ನನಗೆ ರುಚಿಸದು. ಕಾಪಿ ಗಂಟಲಿನಲ್ಲಿ ಇಳಿಯಲಾರದು. ನನ್ನದಲ್ಲವಾದ ನಾಣ್ಯದ ವಿಚಾರವೇ ನನ್ನ ತಲೆಯಲ್ಲಿತ್ತು. ಪುನಃ ಸಾಯಂಕಾಲ ಸಮಯದಲ್ಲಿ ನನ್ನ ಮಾವನ ಮಾತಿನ ಮೇರೆ, ಅರ್ಧ ಮೈಲು ದೂರದಲ್ಲಿದ್ದ ಮಾದಪ್ಪನ ಮನೆಗೆ ಹೋದೆನು. ಆದರೆ ಆ ಹೊತ್ತಿನಲ್ಲಿ ಅವನು ಇದ್ದನು. ಅವನು ಕೆಲಸಮಾಡದೆ ಸುಮ್ಮನಿರಲಿಲ್ಲ. ಕಣದ ಬೇಲಿಗೆ ತೀನುಗಳನ್ನು ಕಡಿದು ಸರಿಮಾಡುತ್ತಿದ್ದನು. ಬೆಳೆ ಕೊಯ್ಯಲಿಕ್ಕೆ ಹೆಚ್ಚೆಂದರೆ ಸುಮಾರು ಒಂದು ತಿಂಗಳೇ.

ನಮ್ಮ ಮನೆಗೂ ಮಾದಪ್ಪನ ಮನೆಗೂ ಹೆಚ್ಚು ಕಡಿಮೆ ಒಂದು ಮೈಲಿಯಾಗಬಹುದು. ನಾಳೆ ಕೆಲಸಕ್ಕೆ ಬರಬೇಕೆಂದು ಮಾದಪ್ಪನಿಗೆ ಹೇಳಿ ನಾನು ಹಿಂತಿರುಗಿದೆನು. ಆದರೆ ಕತ್ತಲೆ ಕವಿದಿತ್ತು. ಈಗ ನನಗೆ ಕಳ್ಳರಭಯ ಇನ್ನೊಂದು. ನನ್ನಲ್ಲಿ ಹಾಳು ನಾಣ್ಯವಿದೆ. ಇದರಿಂದ ನನ್ನ ಪ್ರಾಣಕ್ಕೆ ಅಪಾಯವೇ ನಾದೀತು ಎನ್ನುವ ಭಯತೋರುತ್ತಿತ್ತು.

ಬರಬರುತ್ತ ಅತ್ತಿತ್ತ ನೋಡುತ್ತಿದ್ದೆನು. ಅಲ್ಲಲ್ಲಿ ಕಾಣುವ ಮೆಳೆಗಳಲ್ಲಿಯಾಗಲಿ, ಪೊದರುಗಳಲ್ಲಿಯಾಗಲಿ ಯಾರಾದರೂ ಕಳ್ಳರಿದ್ದಾರೋ ಎಂದು ಕಣ್ಣವರಿಸುತ್ತಿದ್ದೆನು. ಸಿಳ್ಳು ಹಾಕುವುದರಲ್ಲಿ ನಾನು ಸಮರ್ಥನು. ಆದರೆ ಈ ದಿನ ಸಿಳ್ಳಿನ ಮಾತೇ ಇರದು. ನನ್ನಲ್ಲಿರುವ ನಾಣ್ಯವು ನನ್ನ ಸ್ವಂತ ವಸ್ತುವಲ್ಲವಾದ ಕಾರಣ, ಯಾರೇ ಆದರೂ ಅದನ್ನು ನನ್ನಿಂದ ಕಸುಕೊಳ್ಳಲಿಕ್ಕೆ ಹಕ್ಕಿದೆ ಎಂದು ನೆನಸಿದ್ದೆನು.

ನನ್ನ ಮನೆಯ ಹತ್ತಿರ ಹೇಗೂ ತಲಪಿದೆ. ದಾಸ ನಾಯಿಯ ಬೊಗಳು ನನಗೆ ಕೇಳಿಸಿತು. ಆಗ ನನಗೆ ಧೈರ್ಯ ಬಂತು. ನಾಯಿಯ ಯೋಚನೆಯು ನನಗುಂಟಾದೊಡನೆ, ನನಗೆ ಒಂದು ತರದ ಕನಿಕರ ತೋರಿತು. ಬಹಳಕಾಲದಿಂದ ದಾಸು ನಾಯಿಯು ಮತ್ತು ನಾನು ಆಪ್ತರು. ನಮ್ಮಿಬ್ಬರಿಗೆ ಪರಸ್ಪರ ಪ್ರೇಮ ಹೆಚ್ಚು. ಪ್ರತಿದಿನವೂ ಆ ನಾಯಿಗೆ ಗಂಜಿ, ಅನ್ನ ಹಾಕುತ್ತಿದ್ದೆನು. ನಾನು ಅದರ ಬಳಿಗೆ ಹೋದೊಡನೆ, ಅದು ತನ್ನ ಬಾಲವನ್ನು ಆಡಿಸುತ್ತಾ ನನ್ನ ಮೈಮೇಲೆ ಹಾರುತ್ತಿತ್ತು. ಅದರ ಮೈಯನ್ನು ನನ್ನ ಕೈಯಿಂದ ತಟ್ಟುತ್ತಿದ್ದಾಗ, ಅದು ತನ್ನ ತಣ್ಣನೆ ಮೂಗನ್ನು ನನ್ನ ಕೆನ್ನೆಗೆ ಮುಟ್ಟಿಸುತ್ತಿತ್ತು.

ಆದರೆ ಈ ಹೊತ್ತು ಅದರ ಪರವೆಯೇ ನನಗಿಲ್ಲ. ಸಂಪೂರ್ಣವಾಗಿ ಅದನ್ನು ಮರೆತೆನು. ಈ ದಿನ ಬೆಳಿಗ್ಗೆ ಅದಕ್ಕೆ ಗಂಜಿಯೇ ಹಾಕಲಿಲ್ಲ. ಹೀಗೆಂದೂ ನಾನು ಅದನ್ನು ವಂಚಿಸಿರಲಿಲ್ಲ. ಆದಾಗ್ಯೂ ಅದು ನನ್ನನ್ನು ನೋಡಿದ ಕೂಡಲೆ, ಬಹಳ ಸಂತೋಷಪಟ್ಟಿತು. ನಾನಾದರೂ ಈ ದಾಸನಾಣ್ಯದ ದೆಸೆಯಿಂದ ದುಃಖದಲ್ಲಿ ಮುಳುಗಿದ್ದೆನು.

ನಾನು ನಾಯಿಯ ಹತ್ತಿರ ಹೋಗಲೇ ಇಲ್ಲ. ಹೆದರಿಕೆಯಿಂದ ನಡುಗುತ್ತಾ, ಅದರೊಡನೆ ಮಾತಾಡದೆ, ಮನೆಯೊಳಕ್ಕೆ ಹೋಗಿ ನನ್ನ ಹಾಸಿಗೆಯ ಮೇಲೆ ಮಲಗಿಕೊಂಡೆನು.

ಮಾರಣೆ ಬೆಳಿಗ್ಗೆ ಮಾದಪ್ಪನು ನಮ್ಮ ಮನೆಗೆ ಬಂದನು. ಆಗ ನನ್ನ ಮಾವನು ಊಟಮಾಡುತ್ತಿದ್ದನು. ಕೂಡಲೆ ಮಾವನು ಮಾವಪ್ಪನನ್ನು ಒಳಕ್ಕೆ ಕರೆಸಿದನು. ಅತ್ತೆ ಗಂಗಮ್ಮನು ಚೆಂಬಿನಲ್ಲಿ ನೀರು ತಂದುಕೊಟ್ಟಳು. ಮಾದಪ್ಪನು ಕೈ ಕಾಲು ಮುಖ ತೊಳೆದು ಒಳಕ್ಕೆ ಹೋಗಿ, ಊಟಕ್ಕೆ ಕೂತನು.

ಮಾದಪ್ಪ ಬಡವ, ಆದರೆ ಒಳ್ಳೆಗುಣವಂತ. ಅವನಿಗೆ ದೊಡ್ಡ ಸಂಸಾರವಿತ್ತು. ಅವನು ಬಹು ಕಷ್ಟವಾಸಿ. ಎಲ್ಲರೂ ಅವನನ್ನು ಮೆಚ್ಚುತ್ತಿದರು. ಇವನು ಒಳ್ಳೆಯವನಾದುದರಿಂದ, ಇವನಿಗೆ ಕೂಲಿಯಿಲ್ಲದೆ ಹೆಚ್ಚು ಇನಾಮು ಸಹ ಜನರು ಕೊಡುತಿದ್ದರು. ಅಕ್ಕಿ ನುಚ್ಚು ಇವನಿಗೆ ಸಿಕ್ಕುತಿತ್ತು.

ಯಜಮಾನನು ಮತ್ತು ಮಾದಪ್ಪನು ಊಟ ತೀರಿಸಿ ಹೊರಗೆ ಬಂದು ಬಾಡೆಯ ಮೇಲೆ ಕೂತು ಎಲೆ ಅಡಿಕೆ ಸವಿಯುತಿದ್ದನು. ನಾನು ಬೇಗನೆ ಒಳಕ್ಕೆ ಹೋಗಿ ಊಟ ತೀರಿಸಿದೆ. ಗಂಗಮ್ಮನಿಗೆ ನನ್ನ ಮೇಲೆ ಪ್ರೀತಿ ಹೆಚ್ಚು.

ನನ್ನ ಮಾವನು ಕಾಫಿ ಕುಡಿದು ಕೋಣೆಗೆ ಬಂದಕೂಡಲೆ ನನ್ನನ್ನು ಕರೆದು "ಶಾಳು" ಎಂದು ಕೂಗಿದನು. ತಕ್ಷಣವೇ ನಾನು ನಡುಗುತ್ತಾ ಹೊರಟೆನು. "ನಾನು ಇನ್ನು ಜೀವಿಸ ಬಾರದು. ಗುಟ್ಟು ಹೊರಬಿದ್ದಿರಬಹುದು ನಾಣ್ಯದ ಸಂಗತಿ ಯನ್ನು ಕುರಿತು ನನ್ನ ಯಜಮಾನನು ಮಾತಾಡುವನೋ ಏನೋ" ಎಂದು ನಾನು ನೆನಸಿದೆನು. ನನ್ನ ಮುಖದಲ್ಲಿ ರಕ್ತ ವಿಲ್ಲದಂತಾಯಿತು. "ಎಲ್ಲಿ ಆ ರೂಪಾಯಿ ನಾಣ್ಯ ಮಾಲೀಕ ನಿಗೆ ಅದನ್ನು ತಲಪಿಸುವುದರ ಬದಲು ನೀನು ಅದನ್ನು ಕಳ್ಳ ನೋಪಾದಿಯಲ್ಲಿ ಅಡಗಿಸಿಕೊಂಡಿದ್ದೀಯಾ" ಎಂದು ನನ್ನನ್ನು ಕೇಳುವನು ಎಂದು ಯೋಚನೆಮಾಡಿ, ಮಾವನಲ್ಲಿಗೆ ಹೋಗಿ ತಲೆಬಾಗಿಸಿ ನಿಂತುಕೊಂಡೆನು.

ಮಾವನು ನನ್ನನ್ನು ಕುರಿತು "ಶಾಳು, ನೀನು ಮಾದಪ್ಪನ ಮನೆಗೆ ಹೋಗಿ ಅವನನ್ನು ಕೆಲಸಕ್ಕೆ ಬರಹೇಳು. ನಾಳೆ ಖಂಡಿತ ಬರಬೇಕೆಂದು ಹೇಳು" ಎಂದನು.

ಈ ಮಾತನ್ನು ಕೇಳಿ ನನ್ನ ತಲೆಭಾರವು ಅರ್ಧಪಟ್ಟು ಇಳಿ ಯಿತು. ಇದೆಯೋ ನನ್ನ ಮನಸಿಗೆ ಬೇಕಾದದ್ದು. ನನಗೆ ಕೊಂಚ ಮುಂಕು ಇದ್ದುದರಿಂದ ಸ್ವಲ್ಪ ಹೊತ್ತು ಸಿಂತಲ್ಲಿಯೇ ನಿಂತಿದ್ದೆನು. ಯಜಮಾನನು ಮತ್ತೊಂದು ಸಲ ನನ್ನ ಕಡೆಗೆ ದೃಷ್ಟಿಹಾಕಿದೊಡನೆ ಚಕಿತನಾಗಿ ಕೋಣೆಯಿಂದ ಹೊರಕ್ಕೆ ಬಂದೆನು.

ಪುನಃ ನನ್ನ ಜೇಬಿನಿಂದ ಆ ನಾಣ್ಯವನ್ನು ತೆಗೆದು ನೋಡಿ ದೆನು. ನನಗೆ ಹೆಚ್ಚು ಆನಂದವಾಯಿತು. ಇದರಿಂದ ಏನೆಲ್ಲ ಕೊಳ್ಳಬಹುದು ಎಂದು ಯೋಚಿಸಿದೆನು. ಆದರೂ ನನಗೆ ಸಮಾಧಾನವಿರಲಿಲ್ಲ. ನಾಣ್ಯ ಸಿಕ್ಕಿದ ಕಾರಣದಿಂದ ನಾನು ಅದೃಷ್ಟಶಾಲಿಯಾದರೂ, ಈ ವಿಚಾರವು ಯಾರಿಗೂ ಗೊತ್ತಾಗ ಬಾರದೆಂದು ನನ್ನ ಇಷ್ಟ.

ನಾನು ಕಳ್ಳನೇನಲ್ಲ. ಈ ನಾಣ್ಯ ನನಗೇಕೆ ಬೇಕು. ತನ್ನ ದೆಂದು ಯಾರಾದರೂ ಕೇಳಿದರೆ, ಅದನ್ನು ಅವರಿಗೆ ಒಪ್ಪಿಸು ವೆನು ಎಂದು ನಾನು ಸ್ಥಿರಮನಸ್ಸು ಮಾಡಿದೆನು. ಮಾದಪ್ಪನ ಮನೆಗೆ ಹೋಗುವ ಕಾಲುದಾರಿಯಲ್ಲಿ ಹೀಗೆ ಯೋಚಿಸುತ್ತಾ ಹೋಗುತ್ತಿದ್ದೆನು.

ಹಿಂದೆ ಮನೆಯ ಅಂಗಳದಲ್ಲಿ ಒಂದು ಕಾಸು ನನಗೆ ಬಿದ್ದು ಸಿಕ್ಕಿತ್ತು. ಅದನ್ನು ಉಜ್ಜಿ ಹೊಳವು ಬರುವಂತೆ ಮಾಡಿದೆನು. ಅದನ್ನು ನನ್ನ ಮಿತ್ರರೆಷ್ಟೋ ಮಂದಿ ನೋಡಿದ್ದರು. ನನಗೆ ಅದನ್ನು ಇಟ್ಟುಕೊಳ್ಳಬೇಕೆಂಬ ಆಶೆ ಹೆಚ್ಚೇನೂ ಇರಲಿಲ್ಲ. ಆದರೆ ನಾನು ಸಹ ಹಣಗಾರನೆಂಬ ಭಾವನೆ ಇತ್ತು.

ಆದರೆ ಈಗ ಈ ಬೆಳ್ಳಿ ನಾಣ್ಯವನ್ನು ನೋಡಿದರೆ ಅತಿಭಯ ತೋರುತ್ತಿತ್ತು. ಇದರಿಂದ ಏನೇನು ಆಗಲಿಕ್ಕಿದೆಯೋ ಎಂದು ಎಣಿಸಿ, ಅದು ನನ್ನ ಕಣ್ಣುಮುಂದಿರಬಾರದೆಂದು, ಅದನ್ನು ಒಗೆದುಬಿಡಬೇಕೆಂದು ಮನಸ್ಸುಮಾಡಿದೆನು. ನಿಧಾನವಾಗಿ ಮಾದಪ್ಪನವರ ಮನೆ ಸೇರಿದೆನು. ಅಲ್ಲಿಗೆ ಹೋದಕೂಡಲೆ ನನಗೆ ಭೀತಿ ಉಂಟಾಯಿತು. ಏನು ಪ್ರಮಾದ ! ಪೋಲಿಸಿ ನವನೊಬ್ಬನು ಆ ಮನೆಯ ಕೈಯಾಲೆಮೇಲೆ ಕೂತಿದ್ದನು. ಇವನನ್ನು ನೋಡಿದ ತಕ್ಷಣವೇ ಓಹೋ ರುಪಾಯಿಯ ಸಮಾ ಚಾರ ಇವನಿಗೆ ಗೊತ್ತಾಗಿರಬಹುದು. ನನ್ನನ್ನು ಈಗ ಹಿಡಿದು ಕೊಂಡು ಹೋಗಲಿಕ್ಕೆ ಬಂದಿದ್ದಾನೋ ಎಂಬ ಹೆದರಿಕೆ ತೋರಿತು. ನನ್ನ ಮೈ ಕೈಕಾಲು ಇವೆಲ್ಲ ನಡುಗಹತ್ತಿದವು. ನಾನು ಕೂಡಲೆ ಬೇಲಿ ದಾಟ ಹತ್ತಿರದಲ್ಲಿದ್ದ ತರಕಾರಿ ತೋಟ ದಲ್ಲಿ ಅವಿತುಕೊಂಡೆನು.

ಬಹಳ ಹೊತ್ತಿನ ಮೇಲೆ ಪೋಲೀಸಿನವನು ಮಾದಪ್ಪನ ಮನೆ ಯಿಂದ ಹೊರಟು ಹೋಗಿದನು. ಅಗೋ ಅಲ್ಲಿ ದಾರಿಯಲ್ಲಿ ಅವನು ಸಾಗುತ್ತಿರುವುದನ್ನು ನೋಡಿ, ನಾನು ಅಡಗಿದ್ದ ಜಾಗ ದಿಂದ ಹೊರಬಿದ್ದೆನು. ಅನಂತರ ಮನೆಗೆ ಹೋಗಿ 'ಮಾದಪ್ಪನು ಇದ್ದಾನೋ' ಎಂದು ವಿಚಾರಿಸಿದೆನು. ಆದರೆ 'ಮಾದಪ್ಪನು

ಇರಲಿಲ್ಲ;' ಎಲ್ಲಿಯೋ ನೆರೆನಾಡಿನ ನೆಂಟರ ಮನೆಗೆ ಹೋಗಿದ್ದನು. ಪೋಲೀಸಿನವನು ಇಲ್ಲಿಗೆ ಏಕೆ ಬಂದಿದ್ದನೆಂದು ಮಾದಪ್ಪನ ಹೆಂಡತಿಯನ್ನು ಕೇಳಿದೆನು. ಅದಕ್ಕೆ ಅವಳು "ಆತನು ಬೀಟಿಗಾಗಿ ವಾರಕ್ಕೆ ಒಂದೆರಡಾವರ್ತಿ ನಾಡಿಗೆ ಬರುವುದುಂಟು. ಇಲ್ಲಿಗೆ ಬಾಯಾರಿಕೆ ತೀರಿಸಿಕೊಳ್ಳಲಿಕ್ಕೆ ಬಂದಿದ್ದನು. ನಾನು ಅವನಿಗೆ ಕೊಂಚ ಮಜ್ಜಿಗೆ ನೀರು ಕೊಟ್ಟೆ. ಈಗ ಅವನು ಮಡಿಕೇರಿಗೆ ಹೋದನು" ಎಂದಳು. ಅನಂತರ ನಾನು ನನ್ನ ಮನೆಗೆ ಹಿಂತಿರುಗಿದೆನು.

ನಾನು ಮನೆಗೆ ಸೇರುವಾಗ ಬಹಳ ಹೊತ್ತಾಗಿತ್ತು. ನನ್ನ ಮಾವನು ನನ್ನನ್ನು ದುರದುರನೆ ನೋಡಿದನು. ಓಹೋ! ನನ್ನ ಕೆಲಸ ಕೆಟ್ಟಿತು. ನನ್ನ ಪಾಡೇನೋ ತಿಳಿಯದು ಎಂದು ಅಂದುಕೊಂಡೆನು.

ಚಿಂತೆಯಿಲ್ಲ. ಮಾವನಿಗೆ ತೋರಬಂದದ್ದು ನಾನು ತಡವಾಗಿ ಬಂದದಕ್ಕೆ ಇನ್ನೇತಕ್ಕೂ ಅಲ್ಲ. ಅವನು ನನ್ನನ್ನು ಕುರಿತು "ನೀನು ಇಷ್ಟು ಹೊತ್ತು ಏನು ಮಾಡುತಿದ್ದೆ? ಬೇರೆ ಏನು ಕೆಲಸವಿತ್ತು ನಿನಗೆ" ಎಂದು ಮುಂತಾಗಿ ಗದರಿಸಿದನು. ಅದಕ್ಕೆ ನಾನು ಯಾವ ಉತ್ತರವನ್ನು ಕೊಡಲಿಲ್ಲ. ನನ್ನಲ್ಲಿರುವ ನಾಣ್ಯದ ವಿಷಯ ಏನೊಂದು ಮಾತಾಡದಿದ್ದರೆ ಸಾಕೆಂದು ನನ್ನ ಅಭಿಲಾಷೆ. ಆದರೆ ಅವನು ಈ ವಿಷಯ ಪ್ರಸ್ತಾಪಿಸಲೇ ಇಲ್ಲ. ಅನಂತರ ನಾನು ಗದ್ದೆ ಕಡೆಗೆ ಹೊರಟುಹೋದೆನು.

ಗದ್ದೆಯಲ್ಲಿ ಕಳೆ ಕೀಳುತ್ತಾ ಇದ್ದೆನು. ನಾನು ಕೆಲಸ ಮಾಡುತಿದ್ದಾಗ, ಬೆಳ್ಳಿ ರೂಪಾಯಿಯು ನನ್ನ ಜೇಬಿನಲ್ಲೇ ಇತ್ತು. ಆದಕಾರಣ ಆಗಾಗ ಕೆಲಸ ಮಾಡುವುದನ್ನು ನಿಲ್ಲಿಸಿ, ಆ ನಾಣ್ಯವನ್ನು ಮುಟ್ಟಿ ನೋಡಿಕೊಳ್ಳುತಿದ್ದೆನು. ಆದರೇನು? ಇದು ಇದ್ದರೂ ಸಂಕಟ, ಇಲ್ಲದಿದ್ದರೂ ಸಂಕಟ! ಅಯ್ಯೋ! ಈ ಪಾಪಿ ನಾಣ್ಯವು ನನಗೆ ಸಿಕ್ಕದಿದ್ದರೆ ಒಳ್ಳೆದಿತ್ತಲ್ಲವೇ? ಈ ಕೆಟ್ಟ ರುಪಾಯಿಯನ್ನು ಒಂದು ಕಾಗದದ ಚೂರಿನಲ್ಲಿ ಸುತ್ತಿ ಮಾರ್ಗದಲ್ಲಿ ಬಿಸಾಡಲೋ? ಇತರ ಜನರು ತಮ್ಮದಲ್ಲದ ವಸ್ತುಗಳನ್ನು ಹೊಂದಿ, ನನ್ನಂತೆ ದುಃಸ್ಥಿತಿಗೊಳಗಾಗಿದ್ದಾರೋ? ಎಂದು ನಾನಾ ಬಗೆಯಾಗಿ ಯೋಚನೆಗಳು ನನ್ನ ಮನದಲ್ಲಿ ಒಡೆದು ಮೂಡುತಿದ್ದುವು.

ಭೀಮಯ್ಯನವರೇ! ನೋಡಿ, ಮೊನ್ನೆ ನಿಮ್ಮಲ್ಲಿಗೆ ಜೇನು ತಂದುಕೊಟ್ಟದ್ದಕ್ಕೆ ನನಗೆ ಒಂದು ರೂಪಾಯಿ ಕೊಟ್ಟಿರಲ್ಲವೇ? ಅದನ್ನು ಆ ದಿನವೇ ಕಳಕೊಂಡೆನು. ಅದು ಎಲ್ಲಿ ಹೋಯಿತೋ? ಯಾರ ಕೈಗೆ ಸಿಕ್ಕಿತೋ ನಾನರಿಯನು ಎಂದು ಮಾದೈಯ್ಯನು ಹೇಳಿದನು.

ಅದಕ್ಕೆ ಭೀಮೈಯ್ಯನು—"ಆ ದಿನ ನೀನೆಲ್ಲಿಗೆ ಹೋಗಿದ್ದೆ? ಆ ರೂಪಾಯಿಯು ಹೇಗೆ ಬಿದ್ದುಹೋದಿತು? ಯಾರಿಗಾದರೂ ಕೊಟ್ಟಿರಬಹುದು? ಯೋಚಿಸು" ಎಂದನು.

ಇವರಿಬ್ಬರ ಈ ಸಲ್ಲಾಪವನ್ನು ಕೇಳಿ ನಾನು ಚಕಿತನಾದೆನು. ನನ್ನ ಪ್ರಾಣವೇ ಹಾರಿಹೋಯಿತು. ನನ್ನ ಮುಖದ ಬಣ್ಣವು ಬಿಳುಪೇರಿತು. ಮೈ ಬೆವರಿತು. ನನ್ನ ಚೈತನ್ಯವು ಕುಂದಿತು, ನನ್ನ ಶರೀರವು ಕಂದಿತು.

ಮಾದಪ್ಪನು "ನಾನು ಆ ರೂಪಾಯಿಯನ್ನು ಚೀಲದೊಳಗೆ ಸುತ್ತಿ ಜೇಬಿನಲ್ಲಿಟ್ಟಿದ್ದೆನು. ದಾರಿಯಲ್ಲಿ ಹೋಗುತಿದ್ದಾಗ, ಕೈವಸ್ತ್ರವನ್ನು ಮೂಗೊರೆಸಲಿಕ್ಕೆ ಜೇಬಿನಿಂದ ಎತ್ತುವಾಗ ವಸ್ತ್ರದ ಜತೆಯಲ್ಲಿ ಅದು ಹೊರಕ್ಕೆ ಬಿದ್ದು ಹೋಯಿತೋ ಏನೋ. ಆದರೂ ಅದು ಹೇಗೆ ಮಾಯವಾಯಿತೆಂದು ನಾನು ಹೇಳಲಾರೆ" ಎಂದನು.

ಅದಕ್ಕೆ ಭೀಮಯ್ಯನು "ನೀನು ಹೋದ ದಾರಿಯಲ್ಲಿ ಹುಡುಕಬೇಕಿತ್ತು" ಎಂದನು.

ಆಗ ಮಾದಪ್ಪನು "ರೂಪಾಯಿಯನ್ನು ಕಳೆದುಕೊಂಡ ಒಂದೆರಡು ಗಂಟೆಯ ನಂತರ ಈ ಸಂಗತಿಯು ನನ್ನ ಗೋಚರಕ್ಕೆ ಬಂತು. ಆಗ ನಾನು ಹೋದ ದಾರಿಯಲ್ಲೆಲ್ಲಾ ಹುಡುಕಿದೆ. ದೊಡ್ಡ ರಸ್ತೆಯಿಂದ ನಮ್ಮ ನಾಡಿಗೆ ಬರುವ ಅಡ್ಡೆ ಕಾಲುದಾರಿಯ ಅರಳಿ ಮರದ ಬುಡದಲ್ಲಿ ಸ್ವಲ್ಪ ಹೊತ್ತು ಕೂತಿದ್ದೆ. ಅಲ್ಲಿ ಏನಾದರೂ ಬಿತ್ತೇನೋ ತಿಳಿಯದು" ಎಂದನು.

ಈ ಮಾತನ್ನು ಕೇಳಿ ಭೀಮಯ್ಯನಿಗೆ ಕೊಂಚ ವ್ಯಥೆಯುಂಟಾಯಿತು. ಆಗ ಅವನು "ಈ ಸಂಗತಿಯಲ್ಲಿ ನೀನು ಚಿಂತಿಸಬೇಡ. ನೀನು ಕಷ್ಟಪಟ್ಟ ದುಡ್ಡಾದರೆ ಅದು ನಿನಗೆ ಪುನಃ ದೊರಕುವುದು. ನನಗೆ ಬಹಳ ಆಶ್ಚರ್ಯ ತೋರುತ್ತದೆ. ಅಂಥ ಕಳ್ಳನು ಯಾರು" ಎಂದು ಹೇಳಿದನು.

ಅಷ್ಟರಲ್ಲಿ ನಾನು ರೂಪಾಯಿಯನ್ನು ನನ್ನ ಜೇಬಿನಿಂದ ಹೊರಕ್ಕೆ ತೆಗೆದು, ಇದನ್ನು ಯಜಮಾನನಿಗೆ ಕೊಡಲೋ ಎಂದು ಯೋಚಿಸುತಿದ್ದೆನು. ಇದನ್ನು ಮಾಲೀಕನಿಗೆ ಕೊಟ್ಟೇಬಿಡಬೇಕೆಂದು ನಿಶ್ಚಯ ಮಾಡಿಕೊಂಡು ಮುಂದೆ ಹೋಗಿ "ಮಾದಯ್ಯನವರೇ! ಇದು ನಿಮ್ಮ ರೂಪಾಯಿಯೋ ನೋಡಿ" ಎಂದು ಕುಗ್ಗಿದ ಸ್ವರದಿಂದ ಹೇಳಿ ನಿಂತುಕೊಂಡೆನು.

ಮೊದಲು ನನ್ನ ಮಾತು ಅವರಿಬ್ಬರಿಗೂ ಕೇಳಿಸಲಿಲ್ಲ. ಪುನಃ ಜೋರಾಗಿ ಹೇಳಿದೆನು. ಪ್ರತಿಯೊಬ್ಬರೂ ನನ್ನನ್ನೇ ನೋಡಲಾರಂಭಿಸಿದರು. ಮಾವನು ಇದು ನನಗೆ ಹೇಗೆ ಸಿಕ್ಕಿತೆಂದು ಕೇಳಿದನು ಆಗ ನಾನು ಅಳಹತ್ತಿದೆನು. ನನ್ನ ಕಣ್ಣುಗಳಿಂದ ಬೇಕಷ್ಟು ನೀರು ಬಿತ್ತು. ನನ್ನ ಯಜಮಾನನು ನನ್ನನ್ನು ಬಹಳವಾಗಿ ಶಿಕ್ಷಿಸುವುನೆಂಬ ಭೀತಿಯು ನನಗಿತ್ತು. ನನ್ನನ್ನು ಮನೆಯಿಂದ ಹೊರದೂಡುವುದಕ್ಕೆ ಸಹ ಸಾಧ್ಯವೆಂದು ನೆನಸಿದ್ದೆನು. ಆದರೆ ಒಂದು ರೀತಿಯಲ್ಲಿ ನಾನು ನಿಜವನ್ನಾಡಿದೆನೆಂದು ನನಗೆ ಧೈರ್ಯವಿತ್ತು.

ನನ್ನ ಮಾವನು ನನ್ನನ್ನು ಹೊಡೆಯುವುದರ ಬದಲು, ನನ್ನ ಬೆನ್ನು ತಟ್ಟಿ ಅತಿ ಪ್ರೇಮದಿಂದ ನನ್ನನ್ನು ಆಲಿಂಗಿಸಿದನು. "ಕಾಳು, ನೀನು ಅಳಬೇಡ. ನೀನು ಸತ್ಯವಂತ. ನೀನು ಶೀಲವಂತನಾಗಿಯೂ, ನಂಬಿಗಸ್ತನಾಗಿಯೂ ಇದ್ದರೆ ಸಾಕು. ನಿನಗೆ ಐಶ್ವರ್ಯ ಬೇಡ. ನೀನು ಸತ್ಯವಂತನಾದರೆ ಹಣ ಸಿಕ್ಕುವುದು ದೊಡ್ಡದಲ್ಲ" ಎಂದನು.

ಅವನ ಈ ಮಾತು ನನ್ನನ್ನು ಆನಂದದಲ್ಲಿ ಮುಳುಗಿಸಿತು. ನನ್ನ ತಲೆಮೇಲೆ ದೊಡ್ಡ ಭಾರವೇ ಇಳಿಯಿತು.

ಮಾದಪ್ಪನು " ಭೀಮಯ್ಯನವರೇ ! ನಿಮ್ಮ ಹುಡುಗನು ಮಹಾ ಯೋಗ್ಯ. ಪರರ ಸೊತ್ತಿಗೆ ಆಶೆ ಇಲ್ಲದವನು; ಮತ್ತು ಸತ್ಯವಂತನು. ಇವನ ಗುಣಕ್ಕಾಗಿ ನನ್ನ ರೂಪಾಯಿನಲ್ಲಿ ಅರ್ಧ ರೂಪಾಯಿಯನ್ನು ಅವನಿಗೆ ಇನಾಮತಿಯಾಗಿ ಕೊಡಿ? ಎಂದನು.

ಆಗ ನಾನು "ಮಾದಪ್ಪನವರೇ ನೀವು ಬಡವರು. ನಿಮ್ಮ ದುಡ್ಡು ನನಗೆ ಬೇಡ. ನನಗೆ ಹಣ ತಾನೇ ಏಕೆ?" ಎಂದು ಹೇಳಿ ಅವರ ಮತ್ಸಾದೆಯನ್ನು ಹೊಂದಿಕೊಳ್ಳಲಿಲ್ಲ. ಆ ರೂಪಾಯಿಯು ನನಗೆ ದೊಡ್ಡ ರಾಕ್ಷಸನಂತೆ ಇತ್ತು. ಅದರಿಂದ ಬಿಡುಗಡೆಯಾದುದಕ್ಕೆ ನನಗೀಗ ಪರಮ ಸಂತೋಷವಲ್ಲವೇ ?

ಮಾದಪ್ಪನು ಆ ದಿನ ಸಾಯಂಕಾಲ ಕೆಲಸ ತೀರಿಸಿ ತನ್ನ ಮನೆಗೆ ಹೋಗಿ, ಈ ಸಮಾಚಾರವನ್ನೆಲ್ಲಾ ತನ್ನ ಹೆಂಡತಿಗೆ ಹೇಳಿದನು. ಅವಳಿಗೆ ನನ್ನ ಮೇಲೆ ಪ್ರೀತಿ ಹೆಚ್ಚಾಗಿ ಮಾರನೆ ದಿನ ತನ್ನ ಗಂಡನನ್ನೇ ನಮ್ಮ ಮನೆಗೆ ಕಳುಹಿಸಿ ನನ್ನನ್ನು ಬರಮಾಡಿಕೊಂಡಳು. ನಾನು ಅವರಲ್ಲಿಗೆ ಹೋದ ಮೇಲೆ, ಮಾದಪ್ಪನ ಹೆಂಡತಿಯು ಒಳ್ಳೇ ಊಟ ಕೊಟ್ಟಳು.

ನನ್ನ ಕೃತ್ಯದಿಂದ ಮಾವನಿಗೆ ಬಹಳ ಸಂತೋಷ ತೋರಿತು. ದಿನೇದಿನೇ ಅವನಿಗೆ ನನ್ನ ಮೇಲೆ ಪ್ರೇಮ ಹೆಚ್ಚಿತು. ನನಗೆ ಕೊಂಚಮಟ್ಟಿಗಾದರು ಓದುಬರಹವಿದ್ದರೆ ಹಿತವೆಂದು ಅವನು ಯೋಚಿಸಿ, ಅವನ ಮಕ್ಕಳಿಗೂ ನನಗೂ ಪಾಠ ಹೇಳಲಿಕ್ಕೆ ಒಬ್ಬ ಐಗಳನನ್ನು ನೇಮಿಸಿದರು. ಈ ಐಗಳನ ಹೆಸರು ಚೆನ್ನಬಸಪ್ಪ. ಈತನು ಶಿವಾಚಾರದವನು. ಈಗಿಗ ನನಗೆ ಹತ್ತು ವರುಷವಾಗಿವೆಯಷ್ಟೆ. ಅಯ್ಯನವರು ಬೆಳಿಗ್ಗೆ ಸಾಯಂಕಾಲ ಎರಡಾವರ್ತಿ ನಮ್ಮ ಯಜಮಾನರ ಮನೆಗೆ ಬರುತಿದ್ದರು. ನಾನು ಪಾಠವನ್ನು ಕಲಿಯುತಿದ್ದೆನು; ಮನೆ ಚಾಕರಿ ಸಹ ನಡೆಸುತಿದ್ದೆನು. ಆದರೆ ದನಗಳ ವಿಚಾರ ನನಗಿಲ್ಲ.

ಹೀಗೆ ಐದು ವರುಷಗಳು ಕಳೆದುವು. ನನಗೆ ಓದಲಿಕ್ಕೂ ಬರೆಯಲಿಕ್ಕೂ ಸಾಧರಣ ಬಂತು. ಅಯ್ಯನವರು ಯಾವಾಗಲು ಬೆತ್ತ ಹಿಡಿದೆ ಪಾಠ ಹೇಳುತ್ತಿದ್ದರು. ನಾನು ಚುರುಕಾಗಿದ್ದುದರಿಂದ ನನಗೆ ಪೆಟ್ಟು ಕಡಿಮೆ. ನಾವು ಒಟ್ಟಿಗೆ ಆರು ಮಕ್ಕಳು ಓದಲಿಕ್ಕೆ ಆಗ್ಗೆ ಈಗಿನಂತ ಪುಸ್ತಕಗಳಿರಲಿಲ್ಲ. ಅಮರ, ಜೈಮಿನಿ ಇವೆರಡೇ ಪುಸ್ತಕಗಳು. ಇವುಗಳನ್ನು ಬಾಯಿಪಾಠ ಕಲಿಯಬೇಕಿತ್ತು. ಹಾಗ ಮುದ್ದಾಗ ಮಗ್ಗಿ ನಾವು ಚೆನ್ನಾಗಿ ಕಲಿತೆವು. ಬರೆವಣಿಗೆ ಮರಳಿನ ಮೇಲೆ ಇಲ್ಲವೆ ಪಾಟಿಯ ಮೇಲೆ ಆಗಬೇಕಿತ್ತು. ಅಯ್ಯನವರು ರಜೆಯ ಮೇಲೆ ಹೋದವರು ಪುನಃ ಬರಲೆ ಇಲ್ಲ.

ಅನಂತರ ನಮ್ಮ ಮಾವನ ಮೂರು ಹುಡುಗರು ಮಡಿಕೇರಿಗೆ ಓದಲಿಕ್ಕೆ ಹೋದರು. ನನಗೆ ಪ್ರಾಯ ಹದಿನೈದಾಗಿತ್ತು. ಆದುದರಿಂದ ನನ್ನನ್ನು ಯಜಮಾನನು ಮನೆಯಲ್ಲಿ ಇಟ್ಟುಕೊಂಡನು. ಹೀಗೆ ನನ್ನ ಇಪ್ಪತ್ತನೇ ವಯಸ್ಸಿನ ವರೆಗೆ ನನ್ನ ಮಾವನ ಮನೆಯಲ್ಲಿದ್ದೆನು.

ಮಾವನಿಗೆ ತೋವೆ ರೋಗ ಬಂತು. ಅವರು ಜೀವದಿಂದುಳಿಯಬೇಕೆಂದು ಬಹಳವಾಗಿ ಪ್ರೇಚಾಡಿದೆನು. ಹೆಸರುವಾಸಿಯಾದ ರಾಮವೈದ್ಯನನ್ನೇ ಹಿಡಿತಂದು ಔಷಧಿ ಮಾಡಿಸಿದೆನು. ಜ್ವರ ಬಂದ ಏಳನೇ ದಿನಕ್ಕೆ ಆತನು ಕೈಲಾಸವಾಸಿಯಾದನು.

ತನ್ನ ಜೀವಿತಕಾಲದಲ್ಲಿಯೇ ನನ್ನ ಹೆಸರಿನಲ್ಲಿ ನಾನೂರು ಭಟ್ಟಿ ಭೂಮಿಯನ್ನು ನನಗಾಗಿ ಕೊಂಡಿದ್ದನು. ಅವನ ಪತ್ನಿಯ ಅಪ್ಪಣೆಪಡೆದು ನಾನು ನನ್ನ ಸ್ವಂತಮನೆಗೆ ಬಂದೆನು. ಯಜಮಾನನು ಕೊಟ್ಟಿದ್ದ ಭೂಮಿಯನ್ನು ರೂಢಿಸಿದೆನು. ನಾನು

ಬನೆಗೆ ಬರುವ ಹತ್ತುವರುಷಗಳೊಳಗೆ ನನ್ನ ಕೈಯಲ್ಲಿ ಎರಡು ಮೂರುಸಾವಿರ ರುಪಾಯಿ ಉಳಿಯಿತು. ಈ ಹಣದಿಂದ ಆ ಹೊಮಿಗೆ ಸೇರಿದ ತಾಡು ಜಾಗಾದಲ್ಲಿ ಒಂದು ಸಣ್ಣ ಕಾಫಿ ತೋಟಮಾಡಿದೆನು. ಇದರ ವಿಸ್ತೀರ್ಣ ಹತ್ತು ಏಕ್ರೆ ಇತ್ತು. ಈಗ ಅದು ಐನೂರ ಏಕ್ರೆಯಾಗಿದೆ. ನಾನೂ, ನಿಮ್ಮ ತಂದೆಯು ಬಹಳ ಕಷ್ಟಪಟ್ಟು ತೋಟವನ್ನು ಅಬಾದಿಗೆ ತಂದೆವು.

ನಾನು ಹಣಗಾರನಾದರೂ ಪ್ರತಿವರುಷವು ಕಾವೇರಿಜಾತ್ರೆಗೆ ಹೋಗುತಿದ್ದೆನು. ಈ ಜಾತ್ರೆಯು ತುಲಾಮಾಸದಲ್ಲಿ ಬರುತ್ತದೆ. ನನ್ನಂತೆ ಹಲವರು ಈ ವರುಷ ಜಾತ್ರೆಗೆ ಬಂದಿದ್ದರು. ಕಾವೇರಿಗೆ ಹೋಗಲಿಕ್ಕೆ ನನಗೆ ಎರಡು ಉದ್ದೇಶ್ಯಗಳು. ಆಗಿ ಹೋದ ನನ್ನ ತಾಯಿತಂದೆಗಳಿಗೆ ಪಿಂಡ ಹಾಕಲಿಕ್ಕೂ ಅಮ್ಮೆಯಾದ ಕಾವೇರಿಯಲ್ಲಿ ಸ್ನಾನಮಾಡಿ ಅವಳಮೇಲಿನ ನನ್ನ ಭಕ್ತಿಯನ್ನು ಹೆಚ್ಚಿಸಲಿಕ್ಕೂ ಹೋಗುತ್ತಿದ್ದೆನು. ಕೊಡಗರಾದ ನಮಗೆ ಅವಳಲ್ಲಿಯೇ ಗತಿ. ಅವಳನ್ನು ನೆನೆದಷ್ಟು ಕಲ್ಯಾಣವಾಗುತ್ತದೆ.

ಮಕ್ಕಳೇ! ನನ್ನ ಕಥೆಯು ಪೂರೈಸಿತು. ಬರುವವಾರ ಹಟ್ಟಿ ಹಬ್ಬ. ನಿಮಗಿಬ್ಬರಿಗೂ ಒಳ್ಳೇ ಹೊಸಬಟ್ಟೆ ಹೊಲಿಸಿ ಕೊಡಲಿಕ್ಕೆ ತಂದೆಗೆ ಹೇಳಿದ್ದೇನೆ. ಬಹಳದಿನ ಬೇಗನೆ ಎದ್ದು, ಮಿಂದು ಇಗ್ಗುತಪ್ಪನನ್ನು ನೆನೆಯಿರಿನ್ನು. ಸ್ತುತಿಸೋಣಾ ಸಾಯಂಕಾಲಕ್ಕೆ ಬೆಳೆಯುತ್ತಿರುವ ಹಾಲುತುಂಬಿದ ಕದರನ್ನು ತಂದು ಪೂಜಿಸುವ ಹಾಗೆ ಮಾಡಿದರೆ ಹರಸುವಳು.

ಮಕ್ಕಳಿಗೆ ಅಜ್ಜನ ಕಥೆಯನ್ನು ಕೇಳಿ ಉಲ್ಲಾಸವಾಯಿತು. ಕಥೆ ಕೇಳಿದ ಸಮಾಚಾರವನ್ನು ಅವರು ತಮ್ಮ ತಾಯಿಯೊಂದಿಗೆ ಹೇಳಿದರು. ಆಗ ತಾಯಿಯು " ನೀವು ಗುಣವಂತರಾಗಿ ಬದುಕಿ " ಎಂದು ಅವರನ್ನು ಆಶೀರ್ವದಿಸಿದಳು.

---

## ಹೊಳೆ

—೦—

ಚುಮಾಗಿಕ ತೆರೆಗಳ ಸಾಲೆಗಳಿಂ ।
ಜುಳು ಜುಳು ಮಂಜುಳ ಗಾನವನೆಸಗುತ ।
ಇಳೆಯೊಳು ಜೀವಿಗೆ ಜೀವನವೀಯುತೆ ಹರಿಯುವ ಸಲಿಲದೊಳು ॥
ಬಾಳಿಯ ಹೊಯ್ಲೊಳು ರವಿ ಕಿರಣಗಳಿಂ ।
ತೆರೆಗಳ ತುಂತುರ್ವನಿಗಳೊಳು ದಯಿಸಿ ।
ಥಳಥಳಿಸುತೆ ಮೆರೆನಿಂದ್ರ ಧನುವಿನಾ ಸೊಬಗೇಂ ಚಲುವಿನದೋ ॥ ೧ ॥

ಗಿರಿಕಂದರದೊಳು ಹರಿಯುವ ಶ್ರಮವನು ।
ಧರೆಯು ಜನರ ಮಾಲಿನ್ಯದ ದುರಿತವ ।
ತರದೆ ಮನದಿ ಪರರುಪಕಾರಕೆ ಮನವೆಳಿಸುವೆ ಯನುದಿನವೂ॥
ಪರಿಪರಿ ಕಷ್ಟಂಗಳ ನನುಭವಿಸುತೆ ।
ತಿರಿಯುನು ಪಾವನ ಗೈಯ್ಯುತ ಲನುದಿನ ।
ಚರಿಸುವೆ ನಿನ್ನಯು ನಿಸ್ವಾರ್ಥತೆಯದು ಜಗಕೇನದು ಭುತವೋ ॥ ೨ ॥

—ಗು. ಮ. ಪದಕಿ. ಕತಕನಹಳ್ಳಿ

# ಕನಸು (ಉಪಗ್ರಹ)

( ವಿನೋದ )

ಲೇಖಕ:—ಶ್ರೀ. ಕೃಷ್ಣ ಸತ್ತೂರ



ಕನಸು ಕಾಣುವದಕ್ಕೆ, ಬಹಳ ಜನರು, ಬೇರೆ ಬೇರೆ ಬಹಳ ಕಾರಣಗಳನ್ನು ಹೇಳುವರು. ಕೆಲವರು ಕನಸು ಹೆಚ್ಚಾದ ಮಾನಸಿಕ ಶ್ರಮದಿಂದ ಬೀಳುವುದೆಂದೂ, ಹಲವರು ಕನಸು ಬೀಳುವುದು ಮುಂದಾಗುವುದನ್ನು ಮುಂಚಿತವಾಗಿಯೇ ತಿಳಿಸುವ ದೇವರ ಸೂಚನೆಯೆಂದೂ, ಇನ್ನುಳಿದವರು ರೋಗದ ಲಕ್ಷಣವೆಂದೂ ತಿಳಿಯುವರು. ಇವಾದಮೇಲೆ ನನ್ನದು ಬೇಡವೇ! ಇವರೆಲ್ಲರೂ ಸಾಮಾನ್ಯ ಮಾನವ ವರ್ಗದ ಸಂಗತಿಯನ್ನು ಹೇಳುವವರು. ಇವರು ಒಮ್ಮೊಮ್ಮೆ ತಪ್ಪುವದು ಸುಲಭಸಾಧ್ಯ. ನನ್ನದೋ, ಆತ್ಮಸಂಗತಿಯಾದ್ದರಿಂದ ಸಂಪೂರ್ಣ ನಿಶ್ಚಿತ. ಇಲ್ಲದಿದ್ದರೂ, ನನ್ನದು ನನಗೆ ತಿಳಿಯುವಂತೆ, ಬೇರೆಯವರಿಗೆ ತಿಳಿಯುವ ಬಗೆ ಹೇಗೆ ? ನನ್ನದೊಂದು ವ್ಯಕ್ತಿವೈಶಿಷ್ಟ್ಯವಿರುವುದು ಸಹಜ. ಅದಕ್ಕೆ ನೀವು ಸುಳ್ಳೆನ್ನಲಾರಿರಿ. ನಂಬಲೇಬೇಕಾಗುವುದು.

ನನಗೆ ಮಾತ್ರ ಒಮ್ಮೊಮ್ಮೆ ವಿಚಾರ ಮಾಡಿ ಮಾಡಿ ಮಿತಿ ಮೀರಿತೆಂದರೆ ಕನಸು ಬೀಳುವುದು ವಾಡಿಕೆ. ಕನಸಿನ ವಿಷಯು ವಾದರೂ ವಿಚಾರ ಮಾಡಿದ ವಿಷಯವೇ. ಒಮ್ಮೊಮ್ಮೆ ಕನಸು ಮನಸಿನಲ್ಲಿದ್ದದ್ದು ಕೂಡ, ಕನಸಿನಲ್ಲಿ ಬರುವದುಂಟು. ಅದು ಹೇಗೋ ನಾಕಾಣೆ. ಇರಲಿ.

ಈಗೀಗ ಶಾಲೆಯಲ್ಲಿ, "ನಮ್ಮ ಪೃಥ್ವಿಯು ಕೋಳಿಯ ತತ್ತಿಯ ಹಾಗಿದೆ" ಎಂದು ಹೇಳುವರು. ತತ್ತಿಯ ಹಾಗೆ ಬೆಳ್ಳಗೋ, ಇಲ್ಲವೆ ತಿನ್ನಲಿಕ್ಕೆ ಬರುವಂಥದೋ, ಇಲ್ಲವೆ, ಕಾವು ಕೊಟ್ಟರೆ ಕವಚ ಒಡೆದು ಹೊರಗೆ ಬರುವ ಕೋಳಿಯ ಮರಿಯಹಾಗೆ ಇದರ (ಪೃಥ್ವಿಯ) ಹೊಟ್ಟೆಯಲ್ಲಿಯೂ ಬಿಸಿಲಿಗೆ ಕಾದು ಇದನ್ನೊಡೆದು ಹೊರಗೆ ಬರುವ ಪೃಥ್ವಿಯ ಮರಿ ಇದೆಯೋ ? ಎಂಬದೊಂದು ನನಗೆ ದೊಡ್ಡ ಶಂಕೆ. ಇರಲಿ.

ನಿನ್ನೆ ದಿನ ಜೋತಿಃಶಾಸ್ತ್ರ ವಿಶಾರದರು ( Professor of Astronomy ) "ಪೃಥ್ವಿಗೆ ಚಂದ್ರನದೊಂದು ಉಪಗ್ರಹವಿದೆ" ಎಂಬದಾಗಿ ಹೇಳಿದರು. ಇದ್ದರೂ ಇರಬಹುದು ನಮ್ಮ ಹೆಣ್ಣುಮಕ್ಕಳು ಅತ್ತೆ ಮನೆ ಬೇಜಾರ ಬಂದಾಗ ತವರ್ಮನೆ; ಅದು ಬೇಜಾರ ಬಂದಾಗ ಇದು ಹೀಗೆ ಹೋಗುತ್ತಿರುವ ವಾಡಿಕೆಗನುಸರಿಸಿಯೇ ಪೃಥ್ವಿಯು ಕೂಡ ಈಗಿದ್ದ ಮನೆಯು ಬೇಸರಹಾದಾಗ ಆ ಮನೆಗೆ ( ಉಪಗ್ರಹಕ್ಕೆ) ಹೋಗುತ್ತಿರುವ ರೂಢಿ ಇರಬಹುದು. ಅಲ್ಲವೇ ? ಅಂತೇ ನಮ್ಮ ಚಂದ್ರನು ಮುದ್ದಾಗಿರುವದು. ಇಲ್ಲದೇ ಹೋದರೆ ಇದ್ದ ಮನೆ ಬಿಟ್ಟು, ಅಂಥ ಮನೆಗೆ ಹೋಗುವುದಾದರೂ ಏಕೆ !

ಹೀಗೆ ಹೇಳುತ್ತ ಹೇಳುತ್ತ ಅವರು, (ಗುರುಗಳು) "ಚಂದ್ರನ ಮೇಲೆ ಬಲು ಚಳಿ. ಅಲ್ಲಿ ಜನವಸತಿಯಿಲ್ಲ. ಯಾವ ಪ್ರಾಣಿಗಳೂ ಬದುಕಲಾರವು. ಅಲ್ಲಿಯ ಚಳಿಯಿಂದ ನೀರಿದ್ದರೆ ಹೆಪ್ಪುಗಟ್ಟುವದು ಕೂಡ ತೀರ ಸಹಜ. ಇಂಥ ಚಳಿಯ ಪ್ರದೇಶದಲ್ಲಿ ಗಿಡಗಂಟೆಗಳು ಕೂಡ ಬೆಳೆಯಲಾರವು." ಹೀಗೆ ಹೇಳಿದರು. ಆ ಮೇಲೆ "ಚಂದ್ರನ ಮೇಲೆ ಕಾಣುವ ಕಪ್ಪು ಕಲೆಗಳು ಅಲ್ಲಿದ್ದ ಆಳವಾದ ಜ್ವಾಲಾಮುಖಿಯ ಬಾಯಿಗಳಾಗಲೀ ಇಲ್ಲವೇ ಇನ್ನಾವತರದ ಗಿರಿಗುಹೆಗಳಾಗಲೀ ಇರುವವ"ಂದರು. ಚಂದ್ರನು ಕನ್ನಡಿಯಂತೆ ತನ್ನ ಮೇಲೆ ಬಿದ್ದ ಸೂರ್ಯನ ಬೆಳಕನ್ನು ಹಿಂತಿರುಗಿ ಪೃಥ್ವಿಗೆ ಕಳಿಸುವದರಿಂದ ನಮಗೆ ಬೆಳದಿಂಗಳು ಸಿಗುವುದೆಂದಿವರ ಅಭಿಪ್ರಾಯ.

ನಾನು ಮಾತ್ರ ಯಾರೊಪ್ಪಿದರೂ ಇಷ್ಟಕ್ಕೊಪ್ಪಲಾರೆ. ಪೃಥ್ವಿಯು ಇಂಥ ಜ್ವಾಲಾಮುಖಿಯುಳ್ಳ ಗಿರಿಗುಹೆಗಳಲ್ಲಿ ವಾಸವಾಗಿರುವದಕ್ಕೆ ಹೋಗುವಳೇ ? ಇರದು. ಇಷ್ಟು ಮುದ್ದಾದ ಚಂದ್ರನ ಮೇಲೆ ಕತ್ತಲೆಗವಿದ ಗುಹೆಗಳೇ ? ನನಗೆ ಹೀಗೆ ತೋಚದು. ಅದು ಹೀಗಿರಬಹುದು. ತಾನಿರದ ವೇಳೆಯಲ್ಲಿ ಬೇರೆಯವರು ಹೋಗಿ ಸೇರಿಕೊಳ್ಳಕೂಡದೆಂದು ಬಗೆದು, ಪೃಥ್ವಿಯು ತಾನು ಬರುವಾಗ, ಪೃಥ್ವಿಯಾಗಬಾರದೆಂದು ಹೆಂಗಸರು ಅಳಿಯನಿಗೂ ಮದುಮಗಳಿಗೂ ಮುಖಕ್ಕೆ ಕಾಡಿಗೆ ಇಡುವಂತೆ, ಆ ಮನೆಗೆ ( ಚಂದ್ರನಿಗೆ ) ಕಪ್ಪು ಹಚ್ಚಿ ಬಂದಿರಬಹುದು. ಇಲ್ಲದೇ ಹೋದರೆ ಇಷ್ಟು ಮುದ್ದಾದ ಮನೆಯಲ್ಲಿರಲಿಕ್ಕೆ, ಯಾರಾದರೂ ನಾ ಮೊದಲು ನೀ ಮೊದ

ಲೆಂದು ಓಡಿ ಹೋಗಿ ಸೇರಿಕೊಳ್ಳುತ್ತಿದ್ದರು. ಆದರೆ ಇವಳು (ಪೃಥ್ವಿ) ಬೇರೆಯವರನ್ನು ಮೋಸಗೊಳಿಸುವಂತೆ ನನ್ನನ್ನು ಮೋಸಗೊಳಿಸುವದಕ್ಕೆ ಅಷ್ಟೇನೂ ಚತುರೆಯೇ ?. ಇವಳಿಗೆಂದೂ ನಾನು ಮೋಸಹೋಗಲಾರೆ. ಇವಳಿಗಿಂತಲೂ ನಾನು ಜಾಣ. ಮನೆಗೆ ಕಪ್ಪು ಬಳಿದರೇನಾಯಿತು ? ಕಣ್ಣಿಗೆ ಕಪ್ಪು ಬಳಿದಿಲ್ಲವಲ್ಲ ! ಕಣ್ಣಿಗೆ ಕಾಣುವಾಗ ಕೈ ಬೀಸುತ್ತ ಕೂಡ್ರುವ ಹೇಡಿ, ನಾನಲ್ಲ. ಚಂದ್ರನೀಗ ಉಪಗ್ರಹವೆಂದು ತಿಳಿದ ಕೂಡಲೆ, ಅಲ್ಲಿಗೆ ಹೋಗುವದನ್ನು ನಿಶ್ಚೈಸಿದೆ. ಆದರೆ —— ಹೋಗುವದು —— ಹೇಗೆ ? —— ಕೋಟೆಗೆ ಸುತ್ತಲೂ ಕಂದಕವಿರುವಂತೆ, ಆ ಮನೆಗೆ ಸುತ್ತುಮುತ್ತಲೂ ಹೇಳದಷ್ಟು ಆಳವಾದ ಕಂದಕ ತೆಗೆದು ಭದ್ರಪಡಿಸಿಕೊಂಡಿದ್ದಾಳೆ ಇವಳು ಈ ಮನೆಯನ್ನು. ಆದರೆ ನಾನು ಬಿಡುವೆನೇ ? ನೆಗೆ ( ಜಿಗಿ ) ದಾದರೂ ಹೋಗಿಯೇ ತೀರುವೆ.

ಪಾಠ ಮುಗಿಯಿತು. ಆದೇವಿಚಾರ. ಮನೆಗೆ ಬಂದೆ. ತಲೆಯಲ್ಲಿ ಅದೇ. ಉಂಡು ಮಲಗಿದೆ. ಒಂದು —— **ಕನಸು** —— ಅದು. ಕನಸಲ್ಲವೇ ? ಅಹುದು. ಕನಸೇ ಮನಸಿನಲ್ಲಿಯೇ ಇರುವುದಾದರೆ ಕನಸೇ.

ನಾನೆಲ್ಲಿಯೋ ಹೋಗಿದ್ದೆ. ಸಮುದ್ರದ ತೀರವೆಂಬಂತೆ ತೋರುತ್ತದೆ. ಅಲ್ಲಿ ಎಷ್ಟೋ ಜನ ಏನನ್ನೊ ಮಾಡುತ್ತ ನಿಂತಿದ್ದರು. ದೊಡ್ಡದೊಂದು ಪೇರಲಕಾಯಿ. **ಆಕಾರದ**— ಅಲ್ಲ, ನೀವು ಆಡುವ ಕಾಲು ಚಂಡಿನ ಒಳಗಣ ಚೀಲ (Foot ball Bladder )ದಂತೆ ಬಲು ದೊಡ್ಡ ಹೊಟ್ಟೆ. ಕುತ್ತಿಗೆಯೇನೋ ಅವರಂತೆಯೇ (bladder) ಬಲು ಸಣ್ಣ ಸಣ್ಣದಾದರೇನು ಒಂಟೆ ಗೋಣಿನಂತೆ ಬಲು ಉದ್ದ. ಆದರೆ ನಾನು ನೋಡಿದ್ದಕ್ಕೂ - ಕಾಲ್ಚೆಂಡಿನ ಚೀಲಕ್ಕೂ ಸಾಮ್ಯವಿಷ್ಟೇ, ಅದು ದೊಡ್ಡದು ಇದು ಸಣ್ಣದು. **ಅದರ** ( ನಾನು ನೋಡಿದ್ದ ದೊಡ್ಡ ಚಂಡಿನ ) ಮರಿ ಇದ್ದರೂ ಇರಬಹುದು. ಆದರೆ ನಾನು ನೋಡಿದ್ದಕ್ಕೆ ಮಾತ್ರ, ಡೇರೆಗೆ ಹಗ್ಗ ಕಟ್ಟಿದಂತೆ ಮೈಮೈಲ್ಲಾ ಹಗ್ಗಕಟ್ಟಿ ಒಂದು ದೊಡ್ಡ ಬಲಿ ( ಜಾಲ ) ಯಲ್ಲಿ ಹಿಡಿದಂತೆ ಮಾಡಿದ್ದರು. ನೆಲದಲ್ಲಿ ಕಬ್ಬಿಣ ಗೂಟ ನೆಟ್ಟು, ಅವಕ್ಕೆ ಆ ಹಗ್ಗದ ತುದಿಗಳನ್ನು ಗಟ್ಟಿಯಾಗಿ ಕಟ್ಟಿ ಬಿಟ್ಟಿದ್ದರು. ನೋಡಿ. ಜನ ಎಷ್ಟು ಕ್ರೂರ. "ಮಹದಪಿ ಪರದುಃಖಂ ಶೀತಲಂ ಸಮ್ಯಗಾಹುಃ" ಎಂಬದನ್ನು ಇವರಿಗಲ್ಲದೆ ಇನ್ನಾರಿಗೆ ಹೇಳುವುದು? ತಮ್ಮನ್ನೇ ಈ ರೀತಿ ಬಿಗಿದು ಬಿಟ್ಟರೆ, ಕಿರಿಚಿಕೊಂಡು, ಒದರಿ, ಅತ್ತು, ಆಗಿಂದಾಗಲೇ ಪ್ರಾಣವನ್ನೇ ಬಿಡುತ್ತಿದ್ದರು. ಸಾಲದುದಕ್ಕೆ ಭಾರವಾದ ಉಸುಕಿನ ಚೀಲಗಳನ್ನು ಅದಕ್ಕೆ ಹೊರಿಸಿದ್ದರು. ಆ ಮೇಲೆ ಆ ಬ್ಲ್ಯಾಡರಿನಲ್ಲಿಂದ ಕೆಳಗೆ ಬೀಳುವುದನ್ನು ಹಿಡಿಯುವದಕ್ಕೋಸುಗವೋ ಏನೋ, ಒಂದು ದೊಡ್ಡ ಬುಟ್ಟಿಯನ್ನು ಕಟ್ಟಿದ್ದರು. ಆ ಮೇಲೆ ನಾಲ್ಕೆಂಟು ಜನ ಹೋಗಿ ಆ ಬುಟ್ಟಿಯಲ್ಲಿ ಸೇರಿಕೊಂಡರು. ನಾನೂ ಅಲ್ಲಿಗೆ ಹೋದೆ ಗೋದಲೆಯಲ್ಲಿ ಕಟ್ಟಿದ ಎಮ್ಮೆಯು ತಲೆಕೊಡವಿ, ಕಟ್ಟಿದ್ದ ಕಣ್ಣಿಯಿಂದ ಬಿಡಿಸಿಕೊಳ್ಳಲಿಕ್ಕೆ ಪ್ರಯತ್ನಪಡುವಂತೆ ಇದಾದರೂ ಬಹಳ ಹೊಯ್ದಾಡುತ್ತಿತ್ತು. ಇದರ ಸಂಕಟ ನೋಡಲಾರದೇ ನಾನು ಓಡಿಹೋಗಿ ಡೊಳ್ಳುಹೊಟ್ಟೆಯ ಆ ಬ್ಲ್ಯಾಡರಿಗೆ ಕಟ್ಟಿದ ಹಗ್ಗ ಕತ್ತರಿಸಿದೆ.

ಡೊಳ್ಳು ಹೊಟ್ಟೆಯವರ ಗತಿಯೇ ಹೀಗೆ ತಾವು ಹೊಟ್ಟೆಯೊಡೆಯುವಂತೆ ಉಂಡರೆ, ಇವರನ್ನು ಎಬ್ಬಿಸಲಿಕ್ಕೆ ಬೇರೆಯವರ ಸಹಾಯ ಬೇಕೇ ಬೇಕು. ಇಲ್ಲದಿದ್ದರೆ ಇವರಗತಿ ಅಧೋಗತಿಯೇ.

ನಾನು ಹಗ್ಗ ಕತ್ತರಿಸುವದೊಂದೇ ತಡ, ಮೆಲ್ಲನೆ ಮೇಲಕ್ಕೆದ್ದಿತು. ನಾನು ಕಡೇ ಹಗ್ಗ ಕತ್ತರಿಸುವದಕ್ಕೆ ಹೋದೊಡಗಯೇ ಆ ಹಗ್ಗ ಹರಿದು, ಹಗ್ಗದ ಗುಂಟ ನಾನು ಅಂತರದಂತೆ ನಡುವೇ ತೂಗಾಡಹತ್ತಿದೆ ಕೈಬಿಟ್ಟರೆ–ಕೆಳಗೆ ಬಿದ್ದು ಪ್ರಾಣವೇ ಹೋಗುತ್ತಿತ್ತು. ಇನ್ನು, ಮೇಲೆ ಹೋಗಬೇಕೆಂದರೆ ಅದು ಅಸಾಧ್ಯ. ಅತ್ತಲೂ ಇಲ್ಲ. ಇತ್ತಲೂ ಇಲ್ಲ. ಹೀಗೆ ನಡುವೇ ನೇತಾಡುತ್ತಿರುವ ನನ್ನ ಗೋಳು ಯಾರಿಗೆ ಹೇಳುವದು ?

ಹೀಗೇ ಜೋತಾಡುತ್ತ ಸ್ವಲ್ಪ ಹೊತ್ತು ಹೋದಮೇಲೆ ಆ ಬುಟ್ಟಿಯೊಳಗಿನ ಜನರು ನನ್ನನ್ನು ಮೇಲೆ ಎಳಕೊಳ್ಳುವದಕ್ಕೆ ಒಂದು ಹಗ್ಗವನ್ನು ನನ್ನ ಕಡೆಗೆ ಒಗೆದರು. ನೀರಲ್ಲಿ ಮುಣುಗುವವನು ಬದುಕಬೇಕೆಂದು ಹುಲ್ಲುಕಡ್ಡಿಯನ್ನು ಕೂಡ ಹಿಡಿದುಕೊಳ್ಳುವಂತೆ ನಾನು ಹಾರಿ ಆ ಹಗ್ಗ ಹಿಡಿದುಕೊಂಡೆ ಹೇಗೆ ಹಾರಿದೆನೋ, ಹೇಗೆ ಹಿಡಿದೆನೋ ಎಂಬದು ನಿಮಗೆ ಈಗ ತಿಳಿಯದು. ನೀವೂ ನನ್ನಂತೆ ನೇತಾಡುತ್ತಿರುವಾಗ ಮಾತ್ರ ಗೊತ್ತಾಗುವದು. ಇರಲಿ. ಆ ಹಗ್ಗದ ಸಹಾಯದಿಂದ ಅವರು ನನ್ನನ್ನು ಮೇಲಕ್ಕೆಳೆದುಕೊಂಡರು. ಬುಟ್ಟಿಯಲ್ಲಿಳಿದೆ. ಆದರೆ ಹಗ್ಗ ಮಾತ್ರ ಕೈಯಿಂದ ಬಿಟ್ಟಿರಲಿಲ್ಲ. ಈಗ ಮಾತ್ರ ಎದೆ ಇರುವದು ನಿಂತಿತು.

ಆ ಬುಟ್ಟಿಯಲ್ಲೇನೋ ನಾನು ಭದ್ರವಾಗಿದ್ದೆ. ಕೆಳಗೆ ನೋಡಿದೆ. ಒಂದು ಕಡೆಗೆ ಸಮುದ್ರವೂ, ಅದಕ್ಕೆ ಹೊಂದಿ ಭೂಮಿಯೂ ಬಹು ರಮ್ಯವಾಗಿ ಕಾಣುತ್ತಿದ್ದವು. ದೊಡ್ಡ ದೊಡ್ಡ ಗಿಡಗಳೂ ಕೂಡ ಮಸುಮಸುಕಾಗಿಯೂ ಸಣ್ಣವೂ ಕಂಡವು.

ಹಾಗೇ ಮೇಲೆ ಹೋದೆವು. ಪೃಥ್ವಿಯು ಬರಬರುತ್ತ ಸಣ್ಣದಾಗಹತ್ತಿತು. ನಾವು ಅದರ ಮುದ್ದು ಮನೆಗೆ ಹೋಗುವೆವೆಂದೋ ಏನೋ ಸಣ್ಣ ಮೋರೆಯಿಂದ ನಮ್ಮ ಕಡೆಗೆ ನೋಡುತ್ತಿತ್ತು. ಪಾಪ! ನಾವಾದರೂ ಏನು ಮಾಡೋಣ? ಸುಂದರವಾದ ವಸ್ತುವೆಲ್ಲವೂ ನಮ್ಮದಾಗಬೇಕೆಂದು **ಎಲ್ಲರೂ** ಬಯಸುವದು ಮನಸ್ಸಿನ ಧರ್ಮ. ನಾವಾದರೂ ನಿಸರ್ಗಬಾಹ್ಯರೇ ? ಜಗತ್ತಿಗೆ ಹೆಚ್ಚಿನವರೇ ?

ಬರ ಬರುತ್ತ ಪೃಥ್ವಿಯು ಸಣ್ಣದಾಗಹತ್ತಿತು. ದೊಡ್ಡ ದೊಡ್ಡ ನದಿಗಳೂ ಕೂಡ ಬೆಳ್ಳಿಯ ಎಳೆಗಳಂತೆ ಅಲ್ಲಲ್ಲಿ ಹರುಕು ಮುರುಕಾಗಿ ಹಾಯ್ದು ಸಮುದ್ರಕ್ಕೆ ಕೂಡಿದ್ದುವು. ಗುಡ್ಡಗಳೊ ಸಾಲು ಸಾಲಾಗಿ ಹಬ್ಬಿಕೊಂಡಿದ್ದವು. ಆದರೆ ಪಥ್ವಿಯೇನು ಅಷ್ಟುಮನೋಹರ ಕಾಣುತ್ತಿರಲಿಲ್ಲ. ಪೃಥ್ವಿಯು ಕೋಳಿಯ ತತ್ತಿಯ ಹಾಗೆ ಕಾಣುವುದು. ಸುಳ್ಳು. ಪೃಥ್ವಿಯು ಪೃಥ್ವಿಯ ಹಾಗೆಯೇ ಕಾಣುತ್ತಿತ್ತು. ನಾನು ಹೇಳುವುದು ( Definition ) ಸುಳ್ಳೆನ್ನಲಾರಿರಿ. ಸುಳ್ಳೆನ್ನುವವರು ಮುಂದೆ ಬರಲಿ. ಅಂದರೆ ಸುಳ್ಳೋ ಪಳ್ಳೊ ಎಲ್ಲವೂ ತಿಳಿಯುತ್ತೆ.

ಸೂರ್ಯನು ಬರಬರುತ್ತ ಪೃಥ್ವಿಯ ಹಿಂದೆ ಅಡಗಿಕೊಳ್ಳ ಹತ್ತಿದ ಪೃಥ್ವಿಯೆಲ್ಲ ಕತ್ತಲೆಯಿಂದ ಮುಸುಕಿತು. ಪರಾಧೀನರ ಗತಿಯೇ ಹೀಗೆ. ಮೇಲೆ ನೋಡಿದೆ. ಎಷ್ಟೋ ನಕ್ಷತ್ರಗಳೂ, ಚಂದ್ರನೂ ಕಾಣಹತ್ತಿದರು. ಬರಬರುತ್ತ ಚಂದ್ರನು ದೊಡ್ಡವನಾಗ ಹತ್ತಿದ. "ದೂರಿನ ಗುಡ್ಡ ಕಣ್ಣಿಗೆ ನುಣ್ಣಗೆ"ನ್ನುವುದೇನೂ ಸುಳ್ಳಲ್ಲ. ಪೃಥ್ವಿಯಿಂದ ನೋಡಿದರೆ ಬಲು ಮುದ್ದು, ಬೆಳ್ಳಿಯಂತೆ ಹೊಳಪು, ಶೀತಲ, ಶಾಂತ, ಚಿತ್ತಾಕರ್ಷಕ, ಆಲ್ಹಾದ ಕಾರಕ; ಎಲ್ಲವೂ ನಿಜ; ಎಲ್ಲಿ? ಅಲ್ಲಿಯೇ; ಪೃಥ್ವಿಯ ಮೇಲಷ್ಟೇ. ಬರೀ ಗುಡ್ಡವೇಕೆ? ಎಲ್ಲವೂ ದೂರದಿಂದ ಕಣ್ಣಿಗೆ ನುಣ್ಣಗೆ. ಹತ್ತಿರ ಹೋಗಿ ನೋಡಿದರೆ ಹುಳುಕು ಹೊರಬೀಳುವಂತೆ ತಗ್ಗು ದಿಬ್ಬಗಳು ಕಂಡವು. ರೂಪು ಬಲು ರಮ್ಯ. ಕೇಳುವುದೇನು? ಯಾರಾದರೂ ಬಲು ಚಲುವೆಯಾದವಳನ್ನು ಮದುವೆಯಾದರೆ, ಜನರು "ಅವನ ಹೆಂಡತಿ ಲೋಕಸುಂದರಿ, ಶಶಿಮುಖಿ, ಚಂದ್ರಾನನೆ" ಎಂದು ಅನ್ನುವರು. ಆದರೆ ಚಂದ್ರಾನನೆಯು ಲೋಕ ಸುಂದರಿ ಇರುವುದು ಶೂರ್ಪನಖಿಯು ರಂಭೆಯಿದ್ದಂತೆಯೇ ಸರಿ. ಚಂದ್ರಾನನೆಯಂದರೆ ನಾನು ಶೂರ್ಪನಖಿಯೆಂದೇ ತಿಳಿಯುವೆನು. ಒಂದು ವೇಳೆ ನೀವು ನಿಜವಾದ ಶಶಿಮುಖಿಯನ್ನು ಕಂಡರೆ, ಮದುವೆ ಮಾಡಿಕೊಳ್ಳುವದನ್ನು ಬಿಟ್ಟು, ಆ ಗಂಟು ಮೋರೆಯವಳನ್ನು ಒದ್ದೋಡಿಸುವುದೇ ನಿಜ.

ಮತ್ತಿಷ್ಟು ಹತ್ತಿರಹೋಗಿ ನೋಡಿದೆ. ಏನೋ ನೆಲದಲ್ಲಿ ಹೆಗ್ಗಣತೋಡಿದ ಹೋರಿನಂತೆ ಕಂಡಿತು. "ಹಾಂ, ಇದೀಗ ನಿನ್ನೆ ಕೇಳಿದ ಜ್ವಾಲಾಮುಖಿಯಿರಬಹುದು" ಎಂದುಕೊಂಡೆ. ಇಷ್ಟೊತ್ತಿಗೆ ಸೂರ್ಯನು ಮತ್ತೆ ಕಾಣಹತ್ತಿದ. ಬಿಸಿಲು ಕಾಯ ಹತ್ತಿತು. ಉಳಿದವರನ್ನು ಮಾತಾಡಿಸುವದಕ್ಕೋಸುಗ ತಿರುಗಿ ನೋಡಿದೆ. ಅಲ್ಲೇನಿದೆ ? ಬರಿಯ ಬುಟ್ಟಿ. ಅದರಲ್ಲಿ ನಾನೊಬ್ಬನೇ ಒಬ್ಬ. ಎದೆಹಾರಹತ್ತಿತು. ಮೋರೆಗೆ ಬೆವರಿಟ್ಟಿತು. ಕೆಳಗೆ ನೋಡಿದೆ. ಪೃಥ್ವಿಯೂ ಚನ್ನಾಗಿ ಕಾಣುತ್ತಿರಲಿಲ್ಲ, ಮೊದಲೇ ಕತ್ತಲು ಕವಿದಿತ್ತು. ಮೇಲೆ ಮೋಡ ಮುಸುಕಿತ್ತು.

ಮತ್ತೆ ಮೇಲೆ ನೋಡಿದೆ. ಚಂದ್ರನು ದೊಡ್ಡದಾಗಿ ಕಂಡ. ತೀರ ಸಮೀಪ ಬಂದು ಬಿಟ್ಟಿದ್ದೆ. ನಮ್ಮ–ನನ್ನ–ಡೊಳ್ಳು ಹೊಟ್ಟೆಯ ಚಂಡು ಒಮ್ಮೆಲೇ ತಲೆಕೆಳಗಾಯಿತು. ತಲೆಯ ಮೇಲಿನ ಚಂದ್ರ ಕಾಲ್ಕೆಳಗೆ ಬಂದ. ನಾನು ಬೀಳುವವನಿದ್ದೆ. ಬೀಳಲಿಲ್ಲ. ಪೃಥ್ವಿಯು ಕಣ್ಮರೆಯಾಯಿತು. ಸೂರ್ಯನು ಮಾತ್ರ ಬಹಳ ಪ್ರಖರನಿದ್ದ. ಕಾಲ್ಕೆಳಗೆ, ಚಂದ್ರ ಗುಂಡಗೆ. ಪೃಥ್ವಿ ಗುಂಡಗೆ ಸೂರ್ಯನೂ ಗುಂಡಗೆ. ನನ್ನ ವಾಹನ ಕೂಡ ಗುಂಡಗೇ. ಹೀಗೆ ಗುಂಡಿನಂತಿರುವ ವಸ್ತುಗಳೇ ನನ್ನ ಕಣ್ಣಿಗೆ ಬಿದ್ದವು. ಯಾಕಂದರೆ ದೊಡ್ಡವರು ದೊಡ್ಡ ಮನೆಯಲ್ಲಿ, ಸಣ್ಣವರು ಸಣ್ಣ ಮನೆಯಲ್ಲಿ, ಹೀಗೆ ಗುಂಡಗಾಗಿರುವ ನಮ್ಮ ಪೃಥ್ವಿಯ ಮನೆಯೂ (ಉಪಗ್ರಹವಾ) ದರೂ ಗುಂಡಗೆ ಇರುವುದೇ ಯೋಗ್ಯ. **'ಸಮಾನಶೀಲವ್ಯಸನೇಷು ಸಖ್ಯಂ'** ಅಲ್ಲವೇ? ನಾನೊಬ್ಬ ಮಾತ್ರ ಗುಂಡಗಿಲ್ಲವೆನ್ನುವಿರಾ ? ಅದೇಕೆ! ನಾನೂ ವಿದ್ಯಾರ್ಥಿ ಇರುವಾಗ ನನಗೆ, ನನ್ನ ಗೆಳೆಯರು "ರಾವುಂಡ ಹೆಡ್" ಎಂದು ಕರೆಯುವ ರೂಢಿ. ಅಷ್ಟೇ ಏಕೆ ! ನನ್ನ ದೇಹವಾದರೂ ಗುಂಡಗೇ ಇದೆ. ಒಮ್ಮೆ ಫುಟ್‌ಬಾಲ್ ಆಡುವಾಗ ಕಾಲುಜಾರಿ ಬಿದ್ದ ಮೇಲೆ ಉರುಳುತ್ತ ಉರುಳುತ್ತ ಬಂದು, ತಗ್ಗಿನಲ್ಲಿ ಬಿದ್ದ ಅನುಭವ ನನಗಿದೆ. ಅಂದಮೇಲೆ ನಾನು ಗುಂಡಗಲ್ಲವೆಂಬದು ಹೇಗೆ ?

ಆ ಹೆಗ್ಗಣದ ಹೋರಿನಂಥ ಹೋರು ಬಲು ದೊಡ್ಡದಾಯಿತು. ಆಳವೂ ಕಂಡಿತು. ಒಳಗೆ ಕಗ್ಗತ್ತಲೆ. ಅದೊಂದು

ಗುಡ್ಡದ ಒಳಭಾಗ. ಅಲ್ಲಿಂದಲೇ ಒಳಗೆ ಪ್ರವೇಶ. ಇಷ್ಟರಲ್ಲಿ ನಮ್ಮ ಬುಟ್ಟಿ ಬಂದು ಗುಡ್ಡಕ್ಕೆ ತಗಲಿತು. ನಾನಿಳಿದೆ. ಚಂದ್ರನ ಮೇಲೆ ಕಾಲಿಟ್ಟುದು ಅದೇ ಮೊದಲನೆಯದು. ಹಳ್ಳಿಯೂರವನಿಗೆ ಹಡಗಹತ್ತಿದಂತೆ ನನಗಾಯಿತು. ಇನ್ನು ನನ್ನ ವಾಹನವು ನನ್ನನ್ನು ಎಂದೂ ಕಾಲಿಡದ ಪರದೇಶದಲ್ಲಿ ಬಿಟ್ಟುಹೋದರೆ ನಡುನೀರಲ್ಲಿ ಕೈಬಿಟ್ಟಂತೆ ಗತಿಯಾಗುವದೆಂದು, ಒಂದು ದೊಡ್ಡ ಕಲ್ಲನ್ನು ನೋಡಿ ಆ ಕಲ್ಲಿಗದನ್ನು ಗಟ್ಟಿಯಾಗಿ ಕಟ್ಟಿದೆನು.

ಆ ಮೇಲೆ ಸುತ್ತುಮುತ್ತಲಿನ ಪ್ರದೇಶವನ್ನು ನೋಡುವಾಗ, ಭಯ, ವಿಸ್ಮಯ ಆನಂದೋದ್ರೇಕಗಳು ಮನಸ್ಸಿನಲ್ಲಿ ಒಂದರ ಮೇಲೊಂದು ಏಳಹತ್ತಿದವು. ಈ ನಿರ್ಜನವಾದ ಪ್ರದೇಶದಲ್ಲಿ ನಾನೊಬ್ಬನೇ ಬಂದು ಸಿಕ್ಕಿದುದಕ್ಕೆ ಭಯ, ಯಾರೂ ಕಾಲಿಡದ ಪ್ರದೇಶದಲ್ಲಿ ನಾನು ಕಾಲಿಟ್ಟೆನೆಂದು ಆನಂದ; ಅಂತೇ ಹೆಮ್ಮೆ. ಹೀಗೆ ಮನಸ್ಸಿನ ಸ್ಥಿತಿಯಾಯಿತು. ಇನ್ನು ಇಲ್ಲಿದ್ದುದನ್ನಾದರೂ ಶೋಧಿಸಬೇಕೆಂದು ಹೊರಟೆ. ದೂರದಲ್ಲಿ ಏನೋ ಹೊಳೆದಂತೆ ತೋರಿತು. ಏನೆಂದು ನೋಡುವಷ್ಟರಲ್ಲಿ, ವಜ್ರದ ಬಂಡೆಯಂತೆ ಹೊಳೆಯುತ್ತಿತ್ತು. ಹತ್ತರ ಕೆಲವು ಚೂರುಗಳು ಬಿದ್ದಿದ್ದವು, ಒಂದು ಚೂರು ಮೂರು ಬಣ್ಣದ್ದಿದ್ದಿತು. ಒಂದು ಭಾಗ ಪಚ್ಚದಂತೆ ಹಸರು, ಒಂದು ಕೆಂಪು, ಮತ್ತೊಂದು ಕಣ್ಣು ಕುಕ್ಕಿಸುವಂತೆ ಬಿಳಿದು. ಇಂಥದನ್ನು ಎತ್ತಿ ನನ್ನ ಜೇಬಿನಲ್ಲಿರಿಸಿದೆ. ಮುಂದೆ ಏನೋ ಅಲುಗಾಡಿದಂತೆ ತೋರಿತು. ಯಾವದೋ ಒಂದು ಪ್ರಾಣಿ ಕೆಂಪೋ ಕರಿದೋ ಹೇಳಲಾರೆ. ನಾನು ನೋಡ ನೋಡುವಷ್ಟರಲ್ಲಿಯೇ ಮಾಯವಾಯಿತು. ಹಾಗೇ ಮುಂದೆ ಹೋದೆ. ಅಲ್ಲಿ ಒಂದು ಕೆರೆ. ನೀರು ಹೊಂಬಣ್ಣ. ಅದರಲ್ಲಿ ಸೂರ್ಯನ ಕಿರಣಗಳು ಬಿದ್ದು ಬೇರೆ ಬೇರೆ ಬಣ್ಣಗಳು ಕಂಡವು. ನೋಡುತ್ತ ನಿಂತಿರುವಾಗ ಒಮ್ಮೆಲೇ ಸೂರ್ಯ ಕೆಂಪಾದ ಮುಳುಗಿದ ಕೂಡಲೇ ಕತ್ತಲೆ ಕವಿಯಿತು. ನಾನೇನೋ ಮೂರೂಸಂಜೆಯಾದ ಮೇಲೆ ನಮ್ಮ ಬುಟ್ಟಿಯಲ್ಲಿ ಹೋಗಿ ಮಲಗಬೇಕೆಂದವನು. ಆದರೆ ಬಹುಕಾಲ ಅಗಲಿದ ಸತಿ—ಪತಿಯುರು ಒಬ್ಬರನೊಬ್ಬರು ಓಡಿ ಬಂದು ಬಿಗಿದಪ್ಪುವಂತೆ, ಕತ್ತಲೆಯು ಚಂದ್ರನನ್ನಾವರಿಸಿತು. ಆಗ ನನಗೇನೂ ತೋಚದಾಯಿತು. ಸ್ವಲ್ಪ ಭಯವೂ ಆಯಿತು. ಸೂರ್ಯಾಸ್ತವಾದ ಕೂಡಲೇ ಬಲು ಚಳಿ. ನಡುಗು ಹುಟ್ಟಿತು. ಹಲ್ಲು ಗಟಗರಿಯ ಹತ್ತಿದವು. ನನಗಿಲ್ಲಿ ಬಂದುದಕ್ಕೆ ಕೆಡಕೆನಿಸಿತು. ಆದರೆ ಮಾಡುವದೇನು? ಆಗಬಾರದೆಲ್ಲವೂ ಆಗಿ ಹೋಗಿತ್ತು. ಮೊದಲೇ ಬರಬಾರದಾಗಿತ್ತು. ಬಂದ ಮೇಲೆ ಚಿಂತಿಸಿದರೇನು ? ಅದುದನ್ನು ಭೋಗಿಸಲೇಬೇಕಲ್ಲವೇ? ಸಮೀಪದಲ್ಲಿಯೇ ಒಂದು ಗವಿ ಇದ್ದುದು ನನಗೆ ನೆನಪಾಯ್ತು. ಹಾಗೇ ನಡುಗುತ್ತ ನಾನು ಆ ಗವಿಯ ಹತ್ತರ ಉರುಳುತ್ತ ಹೋದೆ. ನಡೆಯಲು ಬರಲಿಲ್ಲ. ಮೈ ಜುಮ್ಮೆಂದಿತು. ಗವಿಯಲ್ಲೇನೋ ಅಷ್ಟು ಚಳಿಯಿರಲಿಲ್ಲ. ಬರಬರುತ್ತ ಆ ನೀರು ಹೆಪ್ಪುಗಟ್ಟಹತ್ತಿತು. ಇಷ್ಟು ಕತ್ತಲಾಗಿದ್ದರೂ ಅದೆಲ್ಲವೂ ನನಗೆ ಹೇಗೆ ಕಾಣುತ್ತಿತ್ತೋ ನಾನು ಹೇಳಲಾರೆ. ಬರಬರುತ್ತ ಬಿಸಿಲುಗಾಲದಲ್ಲಿ ಕೆರೆಯ ನೀರು ಬತ್ತಿ ಹೋದಮೇಲೆ, ಕಾಣುವ ಬಿರುಕುಗಳಂತೆ ಆ ಕೆರೆಯಲ್ಲಿ ಬಿರುಕು ಕಂಡವು. ನನಗೊಂದು ವಿಚಾರ ಹೊಳೆಯಿತು. ಕುಂಬಾರರು ಹೆಂಟೆಎಬ್ಬಿಸಿಕೊಂಡು ಹೋಗುವಂತೆ, ನಾನೂ ಈ ಹೊನ್ನಿನ ಹೆಂಟೆಗಳನ್ನು ಎಬ್ಬಿಸಿಕೊಂಡು ಹೋಗಬಹುದಲ್ಲವೇ? ಎಂದು. ಎಷ್ಟಾದರೂ ಮನುಷ್ಯನಲ್ಲವೆ? ಹೊನ್ನು ಕಂಡರೆ ಯಾರಬಾಯಿಗೆ ನೀರೊಡೆಯುವದಿಲ್ಲ? ಹೇಳಲೆ? ಹಣವೆಂದರೆ ಹೆಣಬಾಯ್ತೆರೆವಂತೆ, ಹೊನ್ನೆಂದರೆ ಹೆಣ್ಣು ಬಾಯ್ತೆರೆವುದು; ಏಕೆ? ಜೀವಕೂಡ ತೊರೆಯುವದು ಗೊತ್ತು. ಹೆಂಗಸು ಬಾಯ್ತೆರೆವಾಗ ಗಂಡಸು ಕಯ್ತೆರೆವುದಾದರೂ ಹೆಚ್ಚೇ? ಅಂತೇ ನಾನು ಆ ಬಂಗಾರದ ಹೆಂಟೆ ತರಬೇಕೆಂದದ್ದು. ಹೆಂಟೆತಂದು ಮನೆಕಟ್ಟುವದಕ್ಕಲ್ಲ. ನನ್ನ ಜಾಣತನ ತೋರುವುದಕ್ಕೆ. ಹೀಗೇ ವಿಚಾರ ಮಾಡುತ್ತ ಕೆಲಹೊತ್ತು, ಅಲ್ಲಿಯೇ ಚಳಿಯಲ್ಲಿ ಸೆಟೆಯುತ್ತ ಬಿದ್ದಿದ್ದು, ಕಡೆಗೆ ಯಾವಾಗ ಬೆಳಗಾಗುವುದೋ ಏನೋ ಎಂದು. ಕಣ್ಣಲ್ಲಿ ಎಣ್ಣೆಹಾಕಿಕೊಂಡು—ಕಣ್ಣಲ್ಲಿ ಎಣ್ಣೆ ಹೇಗೆ ಹಾಕುವರೋ ಅದೆಲ್ಲ ಪರೀಕ್ಷೆಗೆ ಓದುವ ನಿಮ್ಮಗಳಿಗೇ ಗೊತ್ತು.—ಕುಳಿತವರಂತೆ ನಾನೂ ಕುಳಿತಿದ್ದೆ. ನಡುಗಿನಲ್ಲಿಯೇ ಬೆಳಗಾಯಿತು. ಸೂರ್ಯ ಮೂಡಿದ. ಮೈಚಳಿಮುರಿಯಿತು. ಇನ್ನೂ ಬಂಗಾರದ ಆಶೆ ಬಿಟ್ಟದ್ದಿಲ್ಲ. ಎದ್ದು ಹೋದವನೇ ಒಂದು ದೊಡ್ಡ ಹೆಂಟೆ ಎಬ್ಬಿಕೊಂಡು, ಇನ್ನು ಈ ಉಪಗ್ರಹದಲ್ಲಿ ಸಾಕಷ್ಟು ಹಾವಳಿಯನ್ನು—ಹಾವಳಿಯೇನು ತುಡುಗನ್ನೇ—ಮಾಡಿದ್ದೇನೆಂದುಕೊಂಡು ನಮ್ಮ ಡೊಳ್ಳು ಹೊಟ್ಟೆಯ ಗೆಳೆಯನ ಕಡೆಗೆ ಹೊರಟೆ. ಹೋಗುವಾಗ ಮತ್ತೊಂದು ವಿಚಾರ. ಆ ಹೊಳೆಯುವ ಬಂಡೆಯನ್ನೇ ಉರುಳಿಸಿಕೊಂಡು ಪೃಥ್ವಿಗೆ ಒಯ್ದರೆ ನಿಮಗೂ ಒಂದೊಂದು ತುಣುಕು ಕೊಡಬಹುದೆಂದೆಣಿಸಿ, ಬುಟ್ಟಿಯಲ್ಲಿಯ ಹಗ್ಗತಂದು ಅದಕ್ಕೆ ಕಟ್ಟಿದೆ. ಇನ್ನು ಉರುಳಿಸುವುದು. ಬುಟ್ಟಿಯ ತಳಕ್ಕೆ ಹಾಕಿದ ಕಬ್ಬಿಣದ ಹಾರಿ

ಯೊಂದು ಈಗ ನೆನಪಾಯಿತು. ಓಡಿಹೋಗಿದವನೇ ಅದನ್ನು ತೆಗೆದುಕೊಂಡು ಬಂದು ಬಂಡೆಯನ್ನು ಮೀಟ, ಉರುಳಿಸಿ ಒಯ್ದು ನನ್ನ ಬುಟ್ಟಿಯ ಕೆಳಭಾಗಕ್ಕೆ ಕಟ್ಟಿದೆ. ಅದೇನೋ ಅಷ್ಟು ಭಾರವಾಗಿರಲಿಲ್ಲ. ಆ ಮೇಲೆ, ಕಲ್ಲಿಗೆ ಕಟ್ಟಿದ್ದ ಹಗ್ಗ ಬಿಚ್ಚಿ ಬುಟ್ಟಿಯಲ್ಲಿ ಕುಳಿತೆ. ಮೊದಲಿನಂತೆ ಬುಟ್ಟಿ ಮೇಲಕ್ಕೇರಹತ್ತಿತು. ಚಂದ್ರನು ದೂರದೂರ ಸರಿದಹಾಗೆ ಮತ್ತೆ ಸಣ್ಣಾಗಹತ್ತಿದ.

ಗೆಳೆಯರೇ, ಆಗಿನ ಮನಸ್ಸಿನ ಆನಂದ ಏನು ಹೇಳಲಿ? ಮನಸಿಗೆ ಬಂದಂತೆ ಆನಂದದಿಂದ ನಲಿದಾಡಿದೆ. ಬಲವಾಗಿ ನಕ್ಕೆ. ಒದರಿದೆ, ಕೂಗಿದೆ. ಅರ್ಥವಿಲ್ಲದೆ ಬೈದೆ. ಬೈಯ್ಯುವಾಗ ಸ್ವಲ್ಪ ಸಂಕೋಚ. ಆದರೂ ಈ ಉದ್ವೇಗ, ಆನಂದಾತಿರೇಕದ ಭರದ ಮೇಲೆ ಭರ. ಇದರಿಂದ ಹುಚ್ಚನಿಗಿಂತಲೂ ಹುಚ್ಚನಾದೆ. ಹುಚ್ಚನೇ? ಯಾರವರು ಹುಚ್ಚನೆನ್ನುವವರು? ಹುಚ್ಚನೇ ನಾನು? ಹುಚ್ಚನೇ ಆಗಿದ್ದರೆ ನನ್ನಿಂದ ಹೀಗೆ ಅದ್ಭುತಕಾರ್ಯವಾಗುತ್ತಿತ್ತೇ? ಛೇ! ನಾನು ಜಾಣ. ಮಿಗಿಲಾದವ. ಇಷ್ಟು ಪರಾಕ್ರಮಿ. ಅಂತೇ ಇಷ್ಟು ಆನಂದ ನನಗೆ. ನಿಮ್ಮಗಳಮೇಲೆ ತಿರಸ್ಕಾರ. (ಕ್ಷಮಿಸಿರಿ). ಈಗೇ ಹೇಗೆ ತಿಳಿದೀತು. ಬಂಗಾರದ ಹೆಂಟೆ, ವಜ್ರದಪೆಂಟೆ, ನೋಡಿವರೆ ತಿಳಿಯುವದು. ಇಕೋ ಇಲ್ಲೀಗ ಪೃಥ್ವಿ. ಇಲ್ಲೀಗ ಚಂದ್ರ. ಈಗ ನಾನೇ ರಾಜ! ನನ್ನನ್ನಾರು ಹಿಡಿದವರು!! ನಾನೇ ನಾನು!!! ಪೃಥ್ವಿಯು ಸಮೀಪಿಸಿತು. ದೊಡ್ಡದೂ ಆಯಿತು. ನಾನು ಬಂದಹಾಗೆಲ್ಲ ನನ್ನ ವೇಗ ಹೆಚ್ಚು ಹೆಚ್ಚಾಗಹತ್ತಿತು. ಕಣ್ಣು ತಿರುಗಹತ್ತಿದವು. ತಡೆಯಲಾರದೇ ಕಣ್ಣು ಮುಚ್ಚಿಕೊಂಡೆ. ಆದರೂ ವೇಗ ಹೆಚ್ಚಿದ್ದು ತಿಳಿಯುತ್ತಲೇ ಇತ್ತು. ಕಡೆಗೆ ಬುಟ್ಟಿ ಬಂದು ಬಲುಭರದಿಂದ ಭೂಮಿಗೆ ಕುಕ್ಕರಿಸಿತು. "ರಫ್" ಎಂದು ಸಪ್ಪಳವಾಯ್ತು. ಭೂಮಿಗೆಬಿದ್ದೆ! ಬೆಚ್ಚಿಬಿದ್ದೆ! ಕಣ್ತೆರೆದ್ದೆ, ನೋಡಿದೆ. ಅಯ್ಯೋ! ಹಾಸಿಗೆ!! ಮೈಯೆಲ್ಲ ಬೆವರಿತ್ತು-ವಜ್ರದಪೆಂಟೆ ಮಾಯವಾಗಿತ್ತು! ಕಿಟಕಿಯಲ್ಲಿ-ಅಯ್ಯೋ, ಆ ಘಾತುಕಿ-ಚಂದ್ರ-ಉಪಗ್ರಹ,-ಉಪಗ್ರಹವಲ್ಲ ದಶಮಗ್ರಹ,—ನನ್ನನ್ನು ನೋಡಿ ಅವನಿಗೆ ನಗು. ಬಿದ್ದೆನೆಂದೇ? ಅದೇನು ನನ್ನ ತಪ್ಪೇ? ಆ ನ್ಯೂಟನ್, ಅವನೊಬ್ಬ ಘಾತುಕಿ. ಅವನಿಂದಲೇ ನಾನು ಬಿದ್ದದ್ದು. ಅವನಿಲ್ಲದಿದ್ದರೆ ಆ ಗುರುತ್ವಾಕರ್ಷಣವೆಲ್ಲಿಂದ ಬರುತ್ತಿತ್ತು? ಅವನೇ ಅದನ್ನು ಹುಡುಕಿ ತೆಗೆದವನು. ಅದಿಲ್ಲದಿದ್ದರೆ ಭೂಮಿಯಲ್ಲಿ ನನ್ನನ್ನೆಳೆಯುತ್ತಿತ್ತು? ನಾನೆಲ್ಲಿ ಬೀಳುತ್ತಿದ್ದೆ. ನಾನು ಬಿದ್ದೆ. ನನ್ನದೊಬ್ಬನದೇ ಹಾನಿಯಲ್ಲ, ಗೆಳೆಯರೇ, ನಿಮ್ಮದೂ ಇದೆ. ಉಪಗ್ರಹಕ್ಕೆ—ಚಂದ್ರನಿಗೆ—ಹೋಗಿ ಬಂದವನೆಂದು ನನಗೆ ಮಾಲೆಹಾಕಿ ಮಾನಕೊಡುತ್ತಿದ್ದರು. ಅದನ್ನು ನಾನು ಕಳಕೊಂಡೆ. ಹೊನ್ನು, ವಜ್ರ, ಇನ್ನು ನಿಮಗೆಲ್ಲಿ? ನೀವೂ ದುರ್ದೈವಿಗಳು. ನೀವದಕ್ಕೆ ವಂಚಿತರು.

---

# ಸುಧನ್ವ

ಲೇಖಕ :—ದಯಾನಂದಶರ್ಮ ತುಮಕೂರು



ಹಂಸಧ್ವಜಭೂಪತಿಯ ಕುಮಾರನಾದ ಸುಧನ್ವನು ಯುದ್ಧಸನ್ನದ್ಧನಾಗಿ ಬಂದು ಮಾತೆಯ ಚರಣಗಳಿಗೆ ಭಕ್ತಿಯಿಂದ ನಮಸ್ಕರಿಸಿ—" ಜನನಿ ! ಅರ್ಜುನನ ಕುದುರೆಯನ್ನು ಹಿಡಿದು ಕಟ್ಟಿ ಕದನದಲ್ಲಿ ನನ್ನ ಭುಜಬಲ ಶೌರ್ಯವನ್ನು ತೋರಿ ಬರುವೆನು. ದೈವಸ್ವರೂಪಿಣಿಯಾದ ನೀನು ನನಗಾಶೀರ್ವದಿಸು." ಎಂದು ಕೇಳಲಾಗಿ ಅವನ ತಾಯಿಯು ಹೇಳಿದಳು :– ವತ್ಸ ! ನಿನಗಾಕುದುರೆಯ ಗೊಡವೆಯೇ ಬೇಡ. ಸ್ವಾಮಿಯಾದ ಶ್ರೀಕೃಷ್ಣನನ್ನು ದರ್ಶಿಸಿ ಜನ್ಮಸಾಫಲ್ಯಗೊಳಿಸಿಕೊಳ್ಳುವ ಬುದ್ಧಿಯನ್ನು ಹೊಂದು. "

ಸುಧನ್ವ :—ಅಮ್ಮ ! ಕೃಷ್ಣನನ್ನು ಹತ್ತಿರಕ್ಕೆ ಬರಮಾಡಿಕೊಳ್ಳುವ ಯುಕ್ತಿಯನ್ನು ಬಲ್ಲೆನು. ತನ್ನ ಪ್ರೇಮಪಾತ್ರನಾದ ಅರ್ಜುನನ್ನು ನೋಯಿಸಿದರೆ ಕೃಷ್ಣನು ತಾನಾಗಿಯೇ ಬರುವನು. ಆಗಲಾ ಮಹಾತ್ಮನ ಅಭಿಮುಖದಲ್ಲಿ ನನ್ನ ಪೌರುಷವನ್ನು ತೋರಲು ಅವಕಾಶದೊರೆವುದು. ನನ್ನನ್ನಾಶೀರ್ವದಿಸಿ ಬೀಳ್ಕೊಡು.

ತಾಯಿ : — ಕುಮಾರ ! ಅರ್ಜುನನನ್ನು ಬಿಟ್ಟು ಕೃಷ್ಣನಿರನು. ನೀನು ಆ ಕೃಷ್ಣನಿಗೆ ಪ್ರತಿಭಟಿಸಿ ಕಾದುವಷ್ಟು ಶಕ್ತನಲ್ಲ. ನೀನು ಪರಾಜಿತನಾಗಿ ಬಂದುದೇ ಆದರೆ ನಿನ್ನ ವಂಶಕ್ಕೆ ಅಪಕೀರ್ತಿಯುಂಟಾಗುವುದು. ಆದುದರಿಂದ ಎಂದಿಗೂ ಸಮರದಲ್ಲಿ ಹಿಮ್ಮೆಟ್ಟಬೇಡ. ನಿನ್ನಿಚ್ಛೆಗೆ ವಿರೋಧವಾಗಿ ನಿನ್ನನ್ನು ತಡೆದು ನಿಲ್ಲಿಸಲಾರೆನು. ಹೋಗು; ಪುತ್ರವಾತ್ಸಲ್ಯವನ್ನು ತೊರೆದೆನು. ವಿಧಿನಿಯಾಮಕವಿದ್ದಂತಾಗಲಿ. ಪ್ರಭುವಿನಾಜ್ಞೆಯನ್ನು ಪಾಲಿಸು.

ಸುಧನ್ವ :— ಜನನಿ ! ರಣಕ್ಷೇತ್ರದಲ್ಲಿ ಪರಾಕ್ರಮವನ್ನು ತೋರಿ ಅರ್ಜುನನ ಸೈನ್ಯವನ್ನು ಧ್ವಂಸಮಾಡಿ ಬಿಡುವೆನು. ಆದರೆ ಜಯಾಪಜಯುಗಳು ನಮ್ಮಧೀನವಲ್ಲ. ಈಶ್ವರೇಚ್ಛೆ.

ಅಷ್ಟರಲ್ಲಿಯೇ ಸುಧನ್ವನ ಸಹೋದರಿಯು ಬಂದು—" ಅನುಜನೆ ! ನೀನು ಸಮರದಲ್ಲಿ ಸೋತೆಯಾದರೆ ನಾನು ಮಾವನ ಮನೆಯಲ್ಲಿ ತಲೆಯೆತ್ತಸಂತಾಗುವುದು. ಆದುದರಿಂದ ಧೈರ್ಯವಂತನಾಗಿ ಕಾದು. ಕೃಷ್ಣನೆದುರಿಗೆ ನಿನ್ನ ಸಮರಸಾಹಸವನ್ನು ಪ್ರಕಟಿಸು. " ಎಂದು ಉತ್ಸಾಹಗೊಳಿಸಿ ಹಣೆಗೆ ಕುಂಕುಮವನ್ನಿಟ್ಟು ಪರಿಮಳಯುತವಾದ ತಾಂಬೂಲವನ್ನಿತ್ತು ಮಂಗಳಾಕ್ಷತೆಗಳನ್ನು ತಲೆಯಮೇಲೆ ಚೆಲ್ಲಿ ಬೀಳ್ಕೊಟ್ಟಳು.

ಹೀಗೆ ಬೀಳ್ಕೊಂಡ ಸುಧನ್ವನು ತನ್ನ ಮಂದಿರದ ಹೊರಗೆ ಬರುತಿರಲಾಗಿ– " ತನ್ನ ವಿಕಸಿತ ಯೌವನಾನ್ವಿತ ಸುಮಕೋಮಲ ಸುಂದರತಮಶರೀರದ ಕಾನ್ತಿಗೆ ಸಮಾನವಾಗಿ ಶೋಭಿಸುವುವೇ ?–ನೋಡಿ ಹೇಳು !–" ಎಂಬದಾಗಿ ತೋರಿಸುವ ಹಾಗೆ ಪೂರ್ಣ ವಿಕಾಸಮಾದ ಚಂಪಕಪುಷ್ಪಕಗಳನ್ನು ಚಿನ್ನದ ತಟ್ಟೆಯಲ್ಲಿ ಹರವಿ–ಮನೋಹರ ಪರಿಮಳಯುತವಾದ ಗಂಧವನ್ನೂ ಪಚ್ಚಕರ್ಪೂರಸಹಿತಮಾದ ತಾಂಬೂಲವನ್ನೂ ಇಟ್ಟುಕೊಂಡು ಮೃದುತಮಕರಗಳಲ್ಲಾ ತಟ್ಟೆಯನ್ನು ಹಿಡಿದುಕೊಂಡು–ಮನ್ಮಥನ ವಿಜಯಸೌಭಾಗ್ಯಲಕ್ಷ್ಮಿಯಂತೆ ಭುವನಮೋಹಿನಿಯಾದ ಸುಂದರೀಮಣಿ– ಸುಧನ್ವನ ಪ್ರಿಯತಮ ರಾಣಿ– ಪ್ರಭಾವತೀ ರಮಣಿಯು ಬಂದಳು. ಆ ಸಾರಂಗನಯನ ಶೋಭಾನ್ವಿತಳಾದ ಕಾಮಿನಿಯ ಸುಂದರವದನವು ಪೂರ್ಣ ಶಶಿಬಿಂಬದಂತಿದ್ದಿತು. ಆ ಶಶಿಬಿಂಬದಿಂದ ಮಂದಹಾಸದ ಬೆಳದಿಂಗಳು ಹೃದಯಾಹ್ಲಾದಕರಮಾಗಿ ಹೊರಸೂಸುತಲಿದ್ದಿತು. ಹಣೆಯಮೇಲಿದ್ದ ದುಂಡಾದ ಕುಂಕುಮವು ಹೃದಯದಲ್ಲಿನ ಒಲುಮೆಯನ್ನು ಸೂಚಿಸುತಲಿರುವಂತೆ ಥಳಗುಟ್ಟುತಲಿದ್ದಿತು. ತೆಳುವಾದ ಸೀರೆಯು ಮೈಸೊಬಗಿನ ಲಾವಣ್ಯವು ಉಕ್ಕಿಬಾರದಂತೆ ತಡೆಯಲು ಬಂಧಿಸಿದಂತಿದ್ದಿತು. ಸೌಂದರ್ಯದ ಪ್ರಭೆಯು ಆ ಸಮಯದಲ್ಲಿ–ರಾತ್ರಿಯ ಕಾಲದಲ್ಲಿ ಪೂರ್ಣ ಚಂದ್ರಬಿಂಬವು ಪುಷ್ಕರಿಣಿಯ ನಿರ್ಮಲಸಲಿಲದಮೇಲೆ ಬಿದ್ದಾಗ ಮಂದಮಾರುತನ ಲಘುತಾಡನದಿಂದ ಅಲುಗಿಸಲ್ಪಟ್ಟಾಗ ಥಳಗುಟ್ಟುವಂತೆ ಶೋಭನೀಯವಾಗಿದ್ದಿತು. ಚಿನ್ನ ಮುತ್ತು ರತ್ನಗಳಾಭರಣ

ಗಳು ಆ ಸುಂದರಿಯ ಸುಂದರತಮ ಶರೀರಸೌಂದರ್ಯದಿಂದ ತಮ್ಮ ಚೆಲ್ವಿಕೆಯನ್ನು ದರ್ಶನೀಯವಾಗಿ ಪ್ರಸರಿಸಿದ್ದುವು.

ಮುಡಿಯಲ್ಲಿದ್ದ ನವವಿಕಸಿತಮಲ್ಲಿಕಾಪುಷ್ಪಗಳ—, ಮೋಹ ನೀಯ ಮಂದಹಾಸದಿಂದ ಮಿತವಾಗಿ ಮಂದಹಾಸವನ್ನು ಎಸ ಗುವ ರದನಗಳ—, ಹೊಳೆಯುವ ಕಡೆಗಣ್ಣ ಕಟಾಕ್ಷದ—, ಥಳಥಳಿ ಸುವ ಕಂಠಮಾಲೆಯ ಮುತ್ತಿನಾಭರಣಗಳ—, ಪಚ್ಚಕಪ್ಪುರದ ಕಟುಸೌರಭಯುತ ಗಂಧಾನುಲೇಪನದ—, ತೆಳುವಾದ ನಯ ವಾದ ಮೃದುವಾದ ಬಿಳಿಯ ರೇಷಿಮೆಯ ಸೀರೆಯ—, ಶ್ವೇತ ಕಾಂತಿಯು, ಆ ಪ್ರಭಾವತಿಯ ಮೃದು ಕೋಮಲ ವಿಲಾಸ ವಿಭ್ರಮಯುತಮಾದ ಪ್ರೇಮ ಮೋಹ ಶೃಂಗಾರ ಶೋಭಾನ್ವಿತ ಶರೀರದಲ್ಲಿ ಪಸರಿಸಲು ಚಂದ್ರಕಾಂತಶಿಲಾನಿರ್ಮಿತ ಪುತ್ಥಳಿಯಂತೆ ರಾರಾಜಿಸುತಲಿದ್ದಳು.—

ಹೀಗೆ ಭುವನ ಮೋಹಿನಿಯಂತೆ ಎದುರಿಗೆ ಬಂದು ನಿಂತ ರಮಣಿಯನ್ನು ಓರೆನೋಟದಿಂದ ಮೆಲ್ಲನೆ ನೋಡಿ—ಮಂದಸ್ಮಿತ ಯುತನಾಗಿ ಸರಸ ಸೌರಭಸಹಿತಮಾದ ಸುಮುಗಳನ್ನು ತೆಗೆದು ಕೊಂಡು ಗಮಿಸುವಾತುರದಿಂದಲಾಪ್ರಿಯತಮೆಗೆ ಹೇಳಿದನು—

"ಎಲೌ! ಕಾಂತೆ! ನಾನು ಇಂದು ಸಮರದಲ್ಲಿ ಅರ್ಜುನನಿಗೆ ಪ್ರತಿಭಟಿಸಿ ನಿಂತು ಅವನನ್ನು ಪರಾಜಿತನನ್ನಾಗಿ ಮಾಡಲುದ್ಯು ಗಿಸಿರುವೆನು. ನನ್ನಿಚ್ಛೆಯು ಸಫಲಗೊಳ್ಳದೇ—ವಿಷಯಕಾಂಕ್ಷೆ ಯಿಂದ ವಂಚಿತನಾದರೆ ರಣಭೂಮಿಯಲ್ಲೀತನುವನ್ನು ನೀಗಿ ಮೃತವೀರರ ಸ್ಥಾನವನ್ನು ಹೊಂದುವೆನು. ಆ ಸಂಭವದಲ್ಲಿ ನೀನು ವಿಯೋಗದಿಂದ ದುಃಖಗ್ರಸ್ತಳಾಗಬೇಡ."

ಪ್ರಭಾವತಿ:— ಪ್ರಿಯತಮನಾದ ರಮಣನೆ! ಸಮರಕಾಂಕ್ಷಿ ತನಾಗಿ ಶ್ರೀಕೃಷ್ಣನಿಗೆ ಪ್ರತಿಭಟಿಸಿ ನಿಂತರೆ ನಿನ್ನ ಜನ್ಮವು ಮುಕ್ತವಾಗುವುದಲ್ಲದೇ—ನೀನು ಜಯಶಾಲಿಯಾಗಿ ಹಿಂದಿರುಗು ವುದು ಅಸಂಭವನೀಯವೆಂದು ತೋರುವುದು. ಆದ್ದರಿಂದ ನೀನು ಅಪುತ್ರವಂತನಾಗಿಯೇ ತನುವ ನೀಗಿದರೆ ಮುಕ್ತಿ ದೊರೆವುದು ಹೇಗೆ?— ಈ ಸಮಯದಲ್ಲಿ ಋತುಸ್ನಾನಮಾಡಿರು ವೆನ್ನೊಡನೆ ಸುಖಿಸಿ ನಿನ್ನ ಸಹಸುಖ ವಿಲಾಸದ ಸೌಭಾಗ್ಯ ವನ್ನಿತ್ತು ನನಗಿರುವ ಸಂತಾನಕಾಂಕ್ಷೆಯನ್ನು ಈಡೇರಿಸಿ ಅನಂತರ ಗಮಿಸುವುದು ಉಚಿತವಾಗಿರುವುದು. ನನ್ನ ಆಶೆ ಯನ್ನು ಪೂರೈಸಿದ ಮೇಲೆ ನಿನ್ನನ್ನು ಬಿಡುವೆನು.

ಸುಧನ್ವ:— ರಮಣಿ! ನೀನು ಹೇಳುವುದು ಯುಕ್ತವಾದು ದಾದರೂ ಇದು ವಿಲಾಸ ಯೋಗ್ಯವಾದ ಸಮಯವಲ್ಲ—ರಣ ವಾದ್ಯಗಳು ಮೊಳೆಯುತಲಿರುವುವು. ಪ್ರಭುವೂ ಪಿತನೂ ಆದ ಹಂಸಧ್ವಜನೂ ಯುದ್ಧರಂಗಾಭಿಮುಖನಾಗಿ ಹೊರಟಿರುವನು. ನಾನು ಉಳಿದೆನಾದರೆ ಪಿತನ ಉಗ್ರಶಾಸನಕ್ಕೊಳಪಟ್ಟು ನಿಯಾ ಮಕವಾದ ದಂಡನೆಗೆ ಗುರಿಯಾಗಬೇಕಾಗುವುದು. ಇದನ್ನರಿತ ನೀನು ನನ್ನನ್ನು ನಿರೋಧಿಸುವುದು ಅನುಚಿತ.

ಎಂದು ಹೇಳಿ - ಆ ಕಾಮಿನಿಯ ಮೃದುಸ್ನಿಗ್ಧ ಸುಂದರ ತಮ ಕಪೋಲಗಳಿಗೆ ಚುಂಬನವನ್ನಿತ್ತು ಗಮಿಸಲುದ್ಯುಕ್ತನಾ ದನು. ಆಗಲಾ ರಮಣಿಯು ಹೃದಯೇಶನನ್ನು ನೋಡಿ ಕಾತರಗೊಂಡು— "ಅಂಗಜನ ಸಮರ ರಂಗವನ್ನು ಪ್ರವೇಶಿಸಿ ವಿಲಾಸದಿಂದ ಕ್ರೀಡಿಸಲು ಅಂಜುವ ನಿನಗೆ ಅಮಿತ ಪರಾಕ್ರಮಿ ಯಾದ ಅರ್ಜುನನಸಂಗಡ ಘೋರ ಕಾಳಗವಾಡುವೆನೆಂಬ ಕಾಂಕ್ಷೆಯು ಸಲ್ಲದು!— ನಾನು ನಿನ್ನನ್ನು ಬಿಡೆನು" ಎಂದು ಹೇಳುತ ಕೋಮಲಬಾಹುಗಳಿಂದಲಾ ಪ್ರಿಯತಮನನ್ನು ಬಿಗಿ ದಪ್ಪಿ ಗಾಢತರದಾಲಿಂಗನೆಮಾಡಿ ಅವನ ಮುಖದಿಂಗಿತವನ್ನರಿ ಯಲು ಮೋಹನೀಯ ಶೋಭಾಸಹಿತಮಾದ ನೋಟವನ್ನು ಬೀರಿ ಶೃಂಗಾರ ಚೇಷ್ಟೆಯ ಬೆಡಗಿನ ಅಭಿನಯವನ್ನು ವ್ಯಕ್ತ ಗೊಳಿಸಿದಳು. ಆಗ ಅಮಿತಪ್ರೇಮಾನ್ವಿತ ಗಾಢತರದಾಲಿಂಗ ನದ ಭರದಿಂದ ಕಂಠದಲ್ಲಿ ಶೋಭಿಸುತಲಿದ್ದ ಹಾರದ ಮಣಿಗಳು ರಜತ ಕಲಶದೊಳಗಿನಿಂದ ಬೀಳುವ ಸುಧಾರಸ ಬಿಂದುಗಳಂತೆ ಸುರಿಯುತಲಿರಲಾಗಿ ಕಾಂತನ ಶರೀರವೆಂಬ ತರುವಿನಾಶ್ರಯ ದಿಂದ ಸುತ್ತಿಕೊಂಡಿರುವ ಕೋಮಲ ಸುಭರಿತಲತೆಯಂತೆ— ರಮಣನ ಶಾರೀರ ಶಕ್ತಿಯನ್ನು ಬಂಧಿಸಿರುವ ಮದನನ ಮೋಹ ಜಯಪಾಶದಂತೆ ಒಲುಮೆಯ ನಲ್ಮೆಯಿಂದ ನಲ್ಲನನ್ನಪ್ಪಿಕೊಂಡಾ ಕೋಮಲೆಯ ದುಂಡಾದ ನವನೀತಕಾಂತಿಯುತಮಾದ ಮೃದು ಸ್ನಿಗ್ಧ ಬಾಹುಗಳು ರಮ್ಯತೆಯನ್ನು ಹೊರಸೂಸುತ ಶೋಭಿಸು ತಲಿದ್ದುವು.

ಆ ಮೋಹಾವೇಗದ ಸಮಾರಂಭದಲ್ಲಿ ಪ್ರಭಾವತಿಯ ಸಯನ ಸುಮುವು ಸಂಕುಚಿತ ಭಾವವನ್ನು ಹೊಂದಲು ಮುಡಿಸಡಿಲ ವಾಗಿ ಪುಷ್ಪಗಳು ಕಪ್ಪಾದಾಗಸದಿಂದ ಬೀಳುವ ತಾರೆಗಳಂತೆ ಉದುರಲು ಚೆಲುವಾದ ಮುಖವು ಶ್ವೇತವಿಶ್ರಿತ ಅರುಣ ವರ್ಣ ದಿಂದ ಚಿತ್ರತರವಾದ ಕಾಂತಿಯನ್ನು ಹೊಂದಲು ನುಡಿಯು ಪ್ರಣಯಭರದಿಂದ ದೈನ್ಯತೆಯನ್ನು ಹೊಂದಿ ಕುಗ್ಗಿ ಹೋಗಲು ಶರೀರವು ರೋಮಾಂಚನದಿಂದ ಆನಂದಪರಿಪೂರ್ಣವಾಗಲು

ಮೋಹವಿಲಾಸದಾತುರತೆಯು ಅಧಿಕವಾಗಿ, ವಲ್ಲಭನನ್ನು ಮಂಚದ ಮೇಲಿದ್ದ ಹಂಸತೂಲಿಕಾ ತಲ್ಪಕ್ಕೆ ಬಲಾತ್ಕಾರದಿಂದ ಎಳೆದೊಯ್ದಳು.

ಸುಧನ್ವನು ವಿಭ್ರಮಾನ್ವಿತನಾದನು. ಹೃದಯತರಂಗಿಣಿಯಲ್ಲಿ ಯೋಚನಾತರಂಗಗಳುತ್ಪವಿಸಿದುವು. "ತಂದೆಯ ಆಜ್ಞಾಪಾಲನೆ ಮಾಡಿದಂತಾಗುವುದಿಲ್ಲ! ಪಿತನ ಉಗ್ರಶಾಸನವನ್ನು ಮೀರಲಳವಲ್ಲ! ಕೃಷ್ಣನ ದರ್ಶನ ಲಾಭದಿಂದ ಆನಂದಿತನಾಗುವ ಸಮಯವನ್ನು ನೀಗಿಕೊಂಡಂತಾಗುವುದು— ಪುತ್ರಕಾಂಕ್ಷೆಯಿಂದಲೂ ಅನುಪಮ ಮೋಹಾಸಕ್ತಿಯಿಂದಲೂ ಅತಿಶಯವಾದಾತುರದಿಂದ ಕಾತರಿಸುತಲಿರುವೀಕಾಂತೆಯನ್ನೊಡಗೂಡಿ ಇವಳ ಮನೋಭೀಷ್ಟವನ್ನು ಪೂರ್ಣಗೊಳಿಸದಿರುವುದು ಕೇವಲ ಅನುಚಿತವಾಗಿರುವುದು. ಆದುದರಿಂದ ಈ ರಮಣಿಗೆ ಸಹ ಸುಖವನ್ನಿತ್ತು, ಇವಳ ಅಮಿತ ಕುತೂಹಲವನ್ನು ಸಫಲಗೊಳಿಸುವೆನು." ಎಂದು ನಿರ್ಧರಿಸಿಕೊಂಡನು. ಇವನ ನಿರ್ಧರಕ್ಕಾ ಕಾಮಿನಿಯ ವಿಲಾಸವು ಪೂರ್ಣ ಸಹಕಾರಿಯಾಗಿದ್ದಿತು. ರಮಣಿಯ ಮೋಹಪಾಶದಿಂದ ಬಂಧಿಸಲ್ಪಟ್ಟನು. ಕಾಂತೆಯೊಡನೆ ಪ್ರಣಯಲೀಲಾವಚೋವಿಲಾಸಗಳಿಂದ ಆನಂದಪರವಶನಾಗಿ ಸುಖಮಗ್ನನಾದನು.

ಅತಿಶಯವಾದ ಸೊಬಗೆಂಬ ಶೃಂಗಾರ, ಅತ್ಯಾತುರದವೀರ, ಪ್ರಿಯನುಡಿಯ ಕರುಣ, ನಗುಮುಖದ ಹಾಸ್ಯ, ಚುಂಬನದ ರೌದ್ರ, ಕಾತುರದಭಯ, ಬೆಮರುಂಟಾದ ಬಿಭತ್ಸ, ರೋಮಾಂಚನದ ಅದ್ಭುತ, ಮೋಹಾನುರಾಗದೀಕ್ಷೆಯಶಾಂತ, ಹೀಗೆ ನವರಸಗಳ ಸಮ್ಮೇಲನ ಲೀಲಾಬಂಧನದಿಂದ ಬಂಧಿತರಾಗಿ ಪ್ರಣಯಕಲಾಕೋವಿದರಾದಾ ಪ್ರಣಯಿಗಳು ಮೋಹಾವೇಶಭರದಲ್ಲಿ (ಅಭಿನವವಿಕಸಿತ ಮನೋಹರ ಸೌರಭಯುತ ಸುಂದರತಮ ಮಧುಮಯ ಪುಷ್ಪದಲ್ಲಿನ ಮಕರಂದವನ್ನತ್ಯಾತುರದಿಂದ ಪಾನಮಾಡಿ ಆನಂದದಿಂದುನ್ಮತ್ತವಾದ ಭ್ರಮರದಂತೆ) ನಿರುಪಮವಾದ ಪ್ರೇಮೈಕ್ಯಭಾವದಿಂದ ವಿಸ್ಮೃತರಾದರು.

ಸ್ವಲ್ಪಕಾಲದ ತರುವಾಯ ಉಭಯತರೂ ಎದ್ದು ಆ ಮಣಿಮಂಚದ ಶಯ್ಯೆಯ ಮೇಲೆ ಕುಳಿತರು. ಸಾರತಮ ಸುಖಸಾಗರದಲ್ಲಿ ಮದನ ಲೀಲಾವಿಲಾಸ ಮಗ್ನರಾದ ಸತಿ–ಪತಿಯರ ಪ್ರಣಯಮದಾವೇಗವು ಶಾಂತಗೊಂಡಿದ್ದಿತು. ಬಲಗುಂದಿದ ಶರೀರದಲ್ಲಿನ ಬೆಮರು ಆಗ ತಾನೆ ಆರಲುಪಕ್ರಮಿಸಿದ್ದಿತು. ವಿಕಾಸ ಹೊಂದಿದ ಸುಖದ ಮನೋಭಿಲಾಷೆಯಿಂದ ಜನಿಸಿದ ರೋಮಾಂಚಗಳು ಉತ್ಸಾಹರಹಿತವಾಗಿದ್ದುವು. ಕೈಗಳು ನಿಶ್ಚಲವಾಗಿದ್ದುವು. ಕದಪುಗಳು ಕಳೆಗುಂದಿದ್ದುವು. ಕಂಠಸ್ವರವು ಕುಗ್ಗಿಹೋಗಿದ್ದಿತು. ನಯನಗಳಲ್ಲಿ ತೋರುತಲಿದ್ದ ಮನದ ಮೋಹಯುತವಾದ ಕಾಂಕ್ಷೆಯ ಇಂಗಿತವು ಮರೆಯಾಗಿ ಕಣ್ಣುಗಳು ಆಶಾರಹಿತವಾದೀಕ್ಷಣೆಯಿಂದ ಕೂಡಿ ಅರ್ಧ ಮುಚ್ಚಲ್ಪಟ್ಟಿದ್ದುವು. ಹಣೆಯ ಮೇಲಿದ್ದ ರಮ್ಯವಾದ ಕುಂಕುಮದ ಬೊಟ್ಟು ಅಳಿಸಲ್ಪಟ್ಟು ಬೆಮರ್ವನಿಗಳೊಡನೆ ಸೇರಿ ಹೋಗಿದ್ದಿತು. ತಾಂಬೂಲರಾಗದಿಂದ ಶೋಭಿಸುತಲಿದ್ದ ಅಧರವು ರಾಗ ರಹಿತವಾಗಿ ಬಾಡಿಹೋಗಿದ್ದಿತು. ಮುಡಿಯು ಬಿಚ್ಚಿಹೋಗಿ ಕೇಶಗಳು ಕೆದರಿ ಮಾರುತನ ತಾಡನದಿಂದ ಭುಜದ ಮೇಲೂ ಬೆನ್ನಿನ ಮೇಲೂ ನರ್ತಿಸುತಲಿದ್ದವು. ಮೋಹದಾ ವೇಗವು (ಸುಖದಭಿಲಾಷೆಯಿಂದ) ತೃಪ್ತಿಗೊಂಡು ಇಚ್ಛಿತ ಭೋಗಭಾಗ್ಯವನ್ನು ಹೊಂದಿ ಸಮಾಧಾನ ಸ್ಥಿತಿಯಲ್ಲಿದ್ದಿತು.

ಸುಧನ್ವನು (ಋತುಸ್ನಾನಮಾಡಿದ್ದ) ಪ್ರಿಯತಮ ಕಾಂತೆಯ ಮನೋಭೀಷ್ಟವನ್ನು ಸಾಫಲ್ಯಗೊಳಿಸಲೋಸುಗ ಅತಿ ಮುದದಿಂದವಳೊಡನೆ ಸುಖಿಸಿ (ಶಾಂತಿ) ವಿಶ್ರಾಂತಿಯನ್ನು ಹೊಂದಿದ ನಂತರ ಯುದ್ಧರಂಗಾಭಿಮುಖನಾಗಲು ಆ ಮನೋಹರೆಯಿಂದಾಗ ಬೀಳ್ಕೊಂಡನು.

ಹಂಸಧ್ವಜ ಮಹಾರಾಜನು ಅರ್ಜುನನ ಕುದುರೆಯನ್ನು ಬಂಧಿಸಲೋಸುಗ ಸಮರ ಸನ್ನದ್ಧನಾಗಿ ಚತುರಂಗಬಲದೊಡನೆ ಗಮಿಸುತಲಿರುವಾಗ ಅತಿಬಲ ಸಮನ್ವಿತನಾದ ಕುಮಾರನನ್ನು ಸೈನ್ಯ ಸಮೂಹದಲ್ಲಿ ಕಾಣದಾದನು. ವಿಚಾರವನ್ನು ನಿರ್ಧರಪಡಿಸಿಕೊಳ್ಳಲು ಸಮೀಪಸ್ಥರಾಗಿದ್ದ ಸಚಿವರಲ್ಲಿ ಸುಮತಿಯನ್ನು ಕುರಿತು ಕುಮಾರನು ಇಲ್ಲದಿರುವುದರ ಸಂಶಯವನ್ನು ನಿರೂಪಿಸಲಾಗಿ ಮಂತ್ರಿಯು ಕೂಡಲೆ ಚಾರರನ್ನು ಕಳುಹಿಸಿದನು.

ಸೈನ್ಯದಲ್ಲಿ ಸುಧನ್ವನನ್ನು ಕಾಣದೆ ಆ ಚಾರರು ವೇಗದಿಂದ ಪುರಾಭಿಮುಖವಾಗಿ ನಡೆದುಬರುತಲಿರುವಾಗ ರಣ ಸಜ್ಜಿತನಾಗಿ ಗಮಿಸಲುಪಕ್ರಮಿಸಿದ್ದ ರಾಜಕುಮಾರನನ್ನು ನೋಡಿ ಆಜ್ಞೆಯಾಗಿದ್ದಂತೆ ರಜ್ಜುಬಂಧನದಿಂದ ಅವನ ಕರಗಳನ್ನು ಬಿಗಿದು ಕಟ್ಟಿ ಪ್ರಭುಸನ್ನಿಧಿಗೆಳತಂದರು. ಆಗ ಬಂಧನ ಸಹಿತನಾದ ಸುಧನ್ವನು ವಿನಯದಿಂದ ತಲೆವಾಗಿ ಪಿತನಿಗೊಂದಿಸಿ ವಿಧೇಯತೆಯನ್ನು ವ್ಯಕ್ತಗೊಳಿಸಿದನು. ಮಹಾರಾಜನು ಕ್ರೋಧಾನ್ವಿತನಾಗಿ ನಿಷ್ಠುರವಾಣಿಯಿಂದ ಎಲೈ! ಮದಯುತನೆ! ನನ್ನ ಕಟ್ಟಳೆಯನ್ನರಿತ ನೀನು ಸಮರಸನ್ನದ್ಧನಾಗಿ ನನ್ನನ್ನು ಅನು

ವರ್ತಿಸದೆ ಉಪೇಕ್ಷೆಯಿಂದ ಪುರದಲ್ಲಿ ನಿಂತೆಯೇಕೆ?" ಎಂದು ಗರ್ಜಿಸಿದನು.

ಸುಧನ್ವನಾ ಗರ್ಜನೆಯನ್ನು ಆಲಿಸಿ ನಮ್ರತೆಯಿಂದುತ್ತರ ಕೊಟ್ಟನು— "ಪಿತನೆ! ನಾನು ರಾಜಶಾಸನೋಲ್ಲಂಘನೆಯ ಸಲುವಾಗಿ ಉಪೇಕ್ಷೆಯಿಂದ ನಿಂತವನಲ್ಲ! ರಾಜಾಜ್ಞೆಯು ಶಿರೋಧಾರ್ಯವೆಂಬುದನ್ನೀ ಸೇವಕನು ಅರಿಯದವನಲ್ಲ! ಯುದ್ಧ ಸನ್ನದ್ಧನಾಗಿ ಮಾತಾಸೋದರಿಯರನುಮತಿಯನ್ನು ಹೊಂದಿ ನಿಜಮಂದಿರದ ಬಳಿ ಬರುತಲಿರುವಾಗ ಸತೀ ಪ್ರಭಾವತಿಯು ವಸನಭೂಷಣಾಲಂಕೃತಳಾಗಿ ಬಂದು ನನ್ನ ಪ್ರಯಾಣಸಿದ್ಧತೆಯ ಕಾರಣವನ್ನು ತಿಳಿದವಳಾಗಿ ನನ್ನ ಗಮನವನ್ನು ನಿರೋಧಿಸಿ ನನ್ನನ್ನು ಪರ್ಯಂಕದ ಬಳಿಗೆ ಬಲಾತ್ಕಾರದಿಂದೆಳೆದೊಯ್ದು ತಾನು ಸಂತಾನಕಾಂಕ್ಷಿಣಿಯಾಗಿರುವುದರಿಂದಲೂ ಆ ಸಮಯವು ಗರ್ಭಧಾರಣೆಗೆ ಯುಕ್ತಕಾಲವಾದುದರಿಂದಲೂ ತನ್ನ ಮನೋಭಿಲಾಷೆಯನ್ನು ನೆರವೇರಿಸಿಯೇ ತೀರಬೇಕೆಂದು ನಿರ್ಬಂಧಪಡಿಸಿ ಮನೋಭೀಷ್ಟಸಿದ್ಧಿಯ ಸಲುವಾಗಿ ಅಕಲಂಕ ಪ್ರಣಯವನ್ನು ಪ್ರಕಟಗೊಳಿಸಲಾಗಿ ಆ ಸತಿಯ ಅಲಘುತರಮಾದಾಶೆಯನ್ನು ಭಂಗಪಡಿಸಲಸಮರ್ಥನಾಗಿ ಅವಳೊಂದಿಗೆ ಇದ್ದೆನು. ಅನಂತರ ರಣರಂಗಾಭಿಮುಖನಾದೆನು. ಆ ಸಮಯದಲ್ಲಿ ಚಾರರು ಪ್ರಭುವಿನಪ್ಪಣೆಯಂತೆ ನನ್ನನರಸಿಕೊಂಡು ಬಂದು ಬಂಧಿಸಿ ಪ್ರಭು ಸಮ್ಮುಖದಲ್ಲಿ ತಂದು ನಿಲ್ಲಿಸಿದರು. ಅಮಿತ ಆಶಾಕಾಂಕ್ಷಿಣಿಯಾಗಿದ್ದ ಸತಿಯ ಪೂರ್ಣ ಮನೋರಥವನ್ನು ಭಗ್ನಗೊಳಿಸುವಷ್ಟು ನಿರ್ದಯನಾಗಲಾರದೇ ಸ್ವಭಾವಜನಿತ ಮೋಹಪಾಶಕ್ಕೆ ಒಳಗಾಗಿ ಅನತಿಕಾಲ ಕಳೆದೆನಲ್ಲದೇ ಮತ್ತಾವ ಅನುಚಿತ ಕಾರ್ಯದಲ್ಲಾ ಸಕ್ತನಾಗಿನಿಲ್ಲಲಿಲ್ಲ! ಯುಕ್ತವೋ ಅಯುಕ್ತವೋ ಸತಿಯ ಇಚ್ಛೆಯಂತೆ ವಿಲಾಸಮಗ್ನನಾಗಿದ್ದೆನು. ಪ್ರಭುಚಿತ್ತದಂತೆ ಆಜ್ಞೆಯಾಗಲಿ."

ಮಹಾರಾಜ — ಈ ಉತ್ತರವನ್ನು ನಂಬಲಾರೆನು. ಇದು ಕೃತಕವಾಗಿ ತೋರುವುದು. ಈ ವಾಗ್ವಾದದಿಂದ ಕಾಲಕಳೆಯುವುದನುಚಿತ. ಆಚಾರ್ಯರನ್ನು ಬರಮಾಡಿ ಕರ್ಮಕ್ಕೆ ತಕ್ಕ ಫಲವನ್ನು ಕೊಡುವೆನು.

ಅಪ್ಪಣೆಯಂತೆ ಕುಲಪುರೋಹಿತರು ಬಂದರು. ವಿಚಾರವು ವಿವರಿಸಲ್ಪಟ್ಟಿತು. ಆಚಾರ್ಯರು ತೀರ್ಮಾನವನ್ನಿತ್ತರು—"ರಾಜನೆ ರಾಜಾಜ್ಞೆಯು ಈಶ್ವರಾಜ್ಞೆಯ ಸಮಾನವಾದುದು. ಆ ಶಾಸನಕ್ಕೆ ಸತಿಸುತಹಿತರಾಪ್ತರೇ ಆಗಲೀ ಮತ್ತಾರೇ ಆಗಲೀ ಸರ್ವದಾ ಅಧೀನರು. ಹೀಗಿರುವುದರಿಂದ ನೀನು ಪುತ್ರವಾತ್ಸಲ್ಯದಿಂದ ಒಂದು ವೇಳೆ ಕರ್ತವ್ಯವಿಮುಖನಾದರೆ ನಿನ್ನೀ ಪಕ್ಷಪಾತದ ಪ್ರಭುತ್ವದಲ್ಲಿ ಸಾವಿರುವುದಿಲ್ಲ. ಅಲ್ಲದೇ ನಿನ್ನ ಪ್ರಜೆಗಳಿಗಿರುವ ನಿನ್ನ ಮೇಲಿನ ಭಕ್ತಿ ವಿಶ್ವಾಸಗಳಿಗೆ ಚ್ಯುತಿಯುಂಟಾಗುವುದು, ಧರ್ಮಾಚರಣೆಗಾಗಿ ಮಹತ್ತರವಾದ ಅಭಿಮಾನವನ್ನು ತ್ಯಜಿಸಬೇಕಾದುದು ರಾಜಧರ್ಮವಾಗಿರುವುದು. ರಾಜಾಜ್ಞೆಯನ್ನುಲ್ಲಂಘಿಸಿದುದಕ್ಕೆ ತಕ್ಕ ಶಿಕ್ಷೆಯನ್ನೀಯುವ ಇಷ್ಟವುಳ್ಳವನಾಗಿದ್ದರೆ ನಾವು ಹೇಳುವಂತೆ ಶಿಕ್ಷೆಯನ್ನೀ ನಿನ್ನ ಕುಮಾರನಿಗೆ ವಿಧಿಸು!"

ರಾಜನು ಯತ್ನವಿಲ್ಲದೇ ಸಮ್ಮತಿಸಿ—ಶಿಕ್ಷಾಕ್ರಮವನ್ನು ಸುಮತಿಗರುಹಿ ಮುಂದಿನ ಕಾರ್ಯತತ್ಪರನಾಗಲು ಆಜ್ಞೆಯನ್ನಿತ್ತನು.

ಸುಮತಿಯು ಸುಧನ್ವನನ್ನು—ಕುದಿಯುತಲಿರುವ ತೈಲಯುತಮಾದ ಕೊಪ್ಪರಿಗೆಯಲ್ಲಿ ಮುಳುಗಿಸಲು ಕರೆತಂದನು—ಎಣ್ಣೆಯು ತಳಮಳನೆ ಕುದಿಯುತಲಿದ್ದಿತು. ಸುಮತಿಯು ಬಹು ಖತಿಗೊಂಡು—"ಯುವರಾಜ! ಲೋಕವಿಖ್ಯಾತನೂ—ಅಭಿಮಾನಶಾಲಿಯೂ—ಮಾತಾಪಿತೃದೈವಭಕ್ತನೂ— ಸುಂದರಾಂಗನೂ—ವಿದ್ಯಾವಿನಯಕೋವಿದನೂ—ಸುಕುಮಾರಶರೀರನೂ— ಇಚ್ಛಿತ ಸುಖಭೋಗಭಾಗ್ಯವನ್ನನೂ—ನೀತಿವಿದನೂ—ಆಚಾರಶೀಲನೂ—ದಾನವನ್ನನೂ—ಪರಹಿತಚಿಂತಕನೂ—ಆದ ಗುಣಮಯನಾದ ನಿನ್ನನ್ನು ಈ ತಪ್ತತೈಲದಲ್ಲಿ ಹಾಕಿಸುವುದು ಹೇಗೆ? ಪ್ರಭುವಾಜ್ಞೆಯನ್ನತಿಕ್ರಮಿಸುವುದು ಹೇಗೆ? ಈ ಜೀವಹತ್ಯಾ ಕಾರ್ಯಕ್ಕೆ ನಾನು ಮನಗೊಡುವುದು ಹೇಗೆ?—ಅಕಲಂಕ ಗುಣಮಯನಾದ—ಸಿರಿರೂಪ ಯೌವನ ಭಾಗ್ಯಶಾಲಿಯಾದ— ರಾಜಕುವರನನ್ನು ನಿರ್ದಯ ಮನಸ್ಸಿನಿಂದ—ಕಣ್ಣುಗಳೆದುರಲ್ಲಿ— ಭಯಂಕರವಾದೀ ತೈಲದಲ್ಲಿ ಬಿಸುಟುವುದಾದರೂ ಹೇಗೆ?" ಎಂದುಸುರಿ ವಿಷಾದವನ್ನು ವ್ಯಕ್ತಗೊಳಿಸಿದನು.

ಆಗ ಸುಧನ್ವನು—"ಸುಮತಿ! ವಿಷಾದಿಸುವುದೇಕೆ? ಆರಿಗೂ ಈ ವಿಚಿತ್ರತಮವಾದ ಭುವನದಲ್ಲಿ— ಆವುದೂ ಚಿರವಲ್ಲವೆಂಬುದನ್ನು ಮತಿಯುತನಾದ ನೀನರಿಯದವನಲ್ಲ! ಒಂದಾನೊಂದು ಸಮಯದಲ್ಲಿ ಚೈತನ್ಯರಹಿತವಾಗುವೀ ತನುವು ಅಗ್ನಿಯಲ್ಲಿ ದಗ್ಧವಾಗಿ ಜೀವನದ ಅಚಿರತೆಯನ್ನು ಸ್ಪಷ್ಟಗೊಳಿಸುವುದು. ಈಶ್ವರ ನಿಯಾಮಕವಾದ ಕಟ್ಟಳೆಯಿಂದ ವಂಚಿತರಾಗಲು ಆರಿಗೆ ಸಾಧ್ಯವಿರುವುದು? ಇವನ್ನು ವಿವೇಚಿಸದ ಅಲ್ಪಮತಿಗಳು ವಿವಿಧಮದಯುತರಾಗಿ ಹೆಮ್ಮೆಯಿಂದ ತಮ್ಮ ಜೀವನದ ಸಾರತಮ

ಅಮೌಲ್ಯ ಸಮಯವನ್ನು ಆಶಾಪಾಶದ ಸ್ವಾರ್ಥತೆಯ ಅಹಿತ ಕರ್ಮಗಳಲ್ಲಿ ಕಳೆದು ದುಃಖದ ಹೊರೆಯನ್ನಧಿಕಗೊಳಿಸಿಕೊಳ್ಳುವರು.–ನಾನಾದರೋ ಮರಣಕ್ಕಂಜುವವನಲ್ಲ. ನನ್ನೀ ಜೀವನದ ಅಲ್ಪಕಾಲದಲ್ಲಿ ಆವ ಜೀವಿಗೂ ಅಹಿತವನ್ನುಂಟು ಮಾಡಿರುವುದಿಲ್ಲ! ಜಗದೀಶ್ವರನನ್ನು ಆವಾಗಲೂ ಮರೆತಿರುವುದಿಲ್ಲ! ಆದುದರಿಂದ ಕೇವಲ ಸಂತೋಷಚಿತ್ತನಾಗಿಯೇ ನಶ್ವರವಾದೀ ಶರೀರವನ್ನು ತ್ಯಜಿಸಿ–ಸ್ವಾಮಿಯ ಚಿರವಾದ ದಯೆಗೆ ಪಾತ್ರನಾಗಬೇಕೆಂಬುವ ಬಹು ಕುತೂಹಲವನ್ನು ಸಫಲಗೊಳಿಸಿಕೊಳ್ಳುವೆನು. ಆದರೆ–ಸುಮತಿ! ರಣರಂಗದಲ್ಲಿ ಶತ್ರುಗಳೊಡನೆ ಹೋರಾಡುವಾಗ ಮರಣ ಸಂಭವಿಸಿದ್ದರೆ ಧನ್ಯನಾಗುತಲಿದ್ದೆನು. ಆ ತೆರನಾದ ಧನ್ಯತೆಯಿಂದ ವಂಚಿತನಾದುದಕ್ಕಾಗಿ–ಒಂದು ವಿಧವಾದ ಪರಿತಾಪದಿಂದ ಕೂಡಿದವನಾಗಿರುವೆನು. ವಿಧಿಯ ವೈಚಿತ್ರ್ಯದ ವಿಲಾಸವನ್ನರಿತವರಾರು ?–ಪ್ರಭುವಿನಾಜ್ಞೆಯಂತೆ ಕಾರ್ಯವನ್ನು ಸಾಂಗಗೊಳಿಸಿ ರಾಜನಿಗೆ ವಿಜ್ಞಾಪಿಸಿಬಿಡು.–ನಾನು ದೇವನಾದ ಜಗದೊಡೆಯನನ್ನು ಅನನ್ಯ ಭಕ್ತಿಭಾವದಿಂದ ಪ್ರಾರ್ಥಿಸಿ–ಆ ಮಹಾಮಹಿಮನನ್ನು ಮರೆಹೊಗುವೆನು. ಕಾಯುವವನೂ–ಕೊಲ್ಲುವವನೂ ಬೇರೊಬ್ಬನಿರುವಾಗ–ಪಿತನನ್ನು ದೂರಲೇಕೆ?–ಪ್ರಭುವಿಗೆ ಪ್ರಭುವೂ, ಪಿತನಿಗೆ ಪಿತನೂ ಆಗಿರುವ ಈಶ್ವರನು ರಕ್ಷಿಸಲು ಕೃಪೆಮಾಡಿದರೆ–ನಶ್ವರವಾದೀ ನರರೇನು ಮಾಡಬಲ್ಲರು?–ನೀನು ಕಟ್ಟಳೆಯನ್ನು ನೆರವೇರಿಸಿಬಿಡು !–" ಎಂದು ನುಡಿದನು.

ಅನಂತರದಲ್ಲಿ–ಸುಧನ್ವನ ಸುಂದರ ಕೋಮಲ ಶರೀರವು ಆ ಕೊಪ್ಪರಿಗೆಯಲ್ಲಿ ಒಗೆಯಲ್ಪಟ್ಟಿತು. ಅಲ್ಲಿ ನೆರೆದಿದ್ದ ಜನರು ಆ ದೃಶ್ಯವನ್ನು ನೋಡಿ ಮರುಕಗೊಂಡು ರೋದಿಸಲಾರಂಭಿಸಿದರು. ಪರಿವಾರ ಜನರು ಮೂರ್ಛಿತರಾದರು. (ಹೇ! ಪ್ರೇಮಮಯಳಾದ ಪ್ರಭಾವತಿ! ನೀನೆಲ್ಲಿ–ಏನು ಮಾಡುತಿರುವೆ!) ದುಃಖದಿಂದ ಕೂಗಿಕೊಂಡರು.–"ಅಲ್ಪ ಕಾರ್ಯಕ್ಕೆ ಭಯಂಕರ ಶಿಕ್ಷೆಯೆ! ರಾಜನು ಎಷ್ಟು ನಿರ್ದಯಹೃದಯನು?–ಆ ರಾಜನಿಗೆ ಈ ತೆರನಾದ ಶಾಸನವನ್ನು ತೀರ್ಮಾನಿಸಿ ಹೇಳಿದ ಆಚಾರ್ಯನೆಂಥ ಪಾಷಾಣಹೃದಯನು? ಅಯ್ಯೋ ! ಯಮರೂಪಿಗಳಾದಿವರು ಆಚಾರ್ಯರೇ!–ಪ್ರಾಣಘಾತಕಿಗಳು. ಇವರ ಆಚಾರನಿಯಮಕ್ಕೊಳಪಟ್ಟ ಜೀವಿಗಳ ಪರಿತಾಪದ ವಹ್ನಿಯು ಇವರನ್ನು ದಹಿಸಲಿಲ್ಲವೇಕೆ?–"

ಸುಧನ್ವನು ಆ ಸಮಯದಲ್ಲಿ–ಅಘಟನಘಟನಾ ಸಾಮರ್ಥ್ಯವನ್ತವಾದ–ಅದ್ವಿತೀಯ ಮಹಿಮಾಕೌಶಲ್ಯಕಲಾಕೋವಿದನಾದ ಜಗದೀಶನನ್ನು ಚಿತ್ತದಲ್ಲಿ ಧ್ಯಾನಿಸಿ ಮರೆಹೊಕ್ಕನು.

ಆರು ರಕ್ಷಿಸಲು ಮನಮಾಡಿದರೆ ನಾಶಮಾಳ್ಪರಿರುವುದಿಲ್ಲವೋ–, ಆರು ನಾಶಗೊಳಿಸಲಿಚ್ಛಿಸಿದರೆ ರಕ್ಷಣಗೈವರಿರುವುದಿಲ್ಲವೋ–ಆ ಅಖಿಲಭುವನನಾಯಕನಾದ ಸ್ವಾಮಿಯ ಕಾರುಣ್ಯ ಪ್ರಭಾವಿಶೇಷದಿಂದ–ಕುದಿಯುತಲಿದ್ದ ತೈಲದಲ್ಲಿ ಮುಳುಗಿದ ಸುಧನ್ವನು ಆವಬಾಧೆಯಿಂದಲೂ ತಪಿಸದೆ–ಪರಮಾತ್ಮನಲ್ಲಿಯೇ ಲೀನವಾದ ಚಿತ್ತವೃತ್ತಿಯಿಂದಿದ್ದನು. ಈಶ್ವರನ ಮಹಿಮೆಯಿಂದವನ ಮುಖವು ಪ್ರಫುಲ್ಲವಾಗಿದ್ದಿತು.–ಈ ದೃಶ್ಯವನ್ನು ನೋಡಿದ ಜನರು ಅಚ್ಚರಿಗೊಂಡು ದೇವರ ಮಹಿಮೆಯನ್ನೂ ಸುಧನ್ವನ ಭಕ್ತಿಯನ್ನೂ ಕೊಂಡಾಡಿ ಆನಂದಪರವಶರಾದರು. ಮಹಾರಾಜನು ವರ್ತಮಾನವನ್ನು ತಿಳಿದವನಾಗಿ ಪರಿವಾರದೊಡನೆ ಬಂದು ಸುಧನ್ವನನ್ನು ಕೊಪ್ಪರಿಗೆಯಿಂದ ತೆಗೆಯಿಸಿದನು. ಪರಿಮಳಯುತ ಜಲದಲ್ಲಿ ಸ್ನಾನಮಾಡಿಸಿ–ದಿವ್ಯಕರ ವಸ್ತ್ರಾಭರಣಗಳಿಂದ ಶೃಂಗರಿಸಿ–ಪರಮಾದರದಿಂದ ಆಲಿಂಗಿಸಿಕೊಂಡನು. ಕುಮಾರನು ಪಿತನ ಚರಣಗಳಿಗೆ ವಿನಯದಿಂದ ನಮಸ್ಕರಿಸಿದನು. ರಾಜನು ಪ್ರಿಯಕುಮಾರನನ್ನು ಅರಮನೆಗೆ ವೈಭವದಿಂದ ಕರತಂದನು. ಸರ್ವರೂ ಆನಂದಮಗ್ನರಾದರು. ಪ್ರೇಮರಾಜ್ಯ ಚಕ್ರವರ್ತಿನಿಯಾದ ಸತೀ ಪ್ರಭಾವತಿಯು–ಪ್ರೇಮಗುಣಯುತನಾದ–ಪ್ರಿಯತಮ ಕಾನ್ತನನ್ನು ನೋಡಿ ಹೊಂದಿದ ಆನಂದಕ್ಕೆ–ಈ ಭೂಜಲಮಯವಾದ ಭುವನದಲ್ಲಿ ಆವುದಾದರೂ ಉಪಮಾನಾರ್ಹವಾದುದಿರುವುದೇ–ಎಂದು ಯೋಚಿಸಿ ಯೋಚಿಸಿ–ಊಹಿಸಲಾರದೇ–ವಿಚಾರವನ್ನು ಸಮಾಪ್ತಗೊಳಿಸಿರುವೆನು.–

ತಂದೆಯ ಆಜ್ಞೆ!–ಸತಿಯ ಪ್ರೇಮ!–ಈಶ್ವರನ ಕೃಪೆ ! ಇವುಗಳ ಘಟನೆಯಿಂದ ಸುಧನ್ವನ ಚರಿತ್ರೆಯು ಚಿರಸ್ಮರಣೀಯವಾಗಿರುವುದು.

---

# ಸಂಸಾರವು ಸುಖದಾಯಕವೋ? ದುಃಖದಾಯಕವೋ?

ಲೇಖಕ:—ಶ್ರೀ. ರಾಮಚಂದ್ರ ವೆಂಕಟೇಶ ಕರಗುದರಿ, ಹಿಂದುಸ್ಥಾನೀ ಸೇವಾದಲ ಹುಬ್ಬಳ್ಳಿ.



ಜಗತ್ತಿನಲ್ಲಿ ಎತ್ತನೋಡಿದರೂ ಭಿನ್ನತ್ವವೇ ಕಂಡುಬರುತ್ತಿರುವದು. ಒಬ್ಬರ ರೂಪದಂತೆ ಮತ್ತೊಬ್ಬರದಿಲ್ಲ; ಒಬ್ಬರ ವಿಚಾರವು ಇನ್ನೊಬ್ಬರ ವಿಚಾರಕ್ಕೆ ಹೊಂದುವದಿಲ್ಲ. ಓರ್ವನ ಸ್ವಭಾವಕ್ಕೂ ಇನ್ನೋರ್ವನ ಸ್ವಭಾವಕ್ಕೂ ಸರಿಬೀಳುವದಿಲ್ಲ. ಪಶುಪಕ್ಷಿಗಳಲ್ಲದೆ ವನಸ್ಪತಿಗಳಲ್ಲಿಯೂ ಕೂಡ ಈ ಹೆಚ್ಚುಕಡಿಮೆಯು ತಪ್ಪದೆ ತೋರುತ್ತಿರುವುದು. ಹೀಗಿದ್ದರೂ ಒಂದು ಮಾತಿನ ವಿಷಯವಲ್ಲಿ ಮಾತ್ರ ಎಲ್ಲರೂ ಒಂದೇ ಅಭಿಪ್ರಾಯವವರಾಗಿರುವರು. ಇದಕ್ಕಾಗಿ ಪ್ರತಿಯೊಂದು ಪ್ರಾಣಿಯೂ ಹಗಲಿರುಳು ಪ್ರಯತ್ನಿಸುತ್ತಿರುವುದು. ಇದನ್ನು ಇಚ್ಛಿಸದ ಪ್ರಾಣಿಯು ಈ ಭುವನದಲ್ಲಿ ಇಲ್ಲವೇ ಇಲ್ಲ. ಏಕಛತ್ರಾಧಿಪನಿಂದ ಬಡತಿರುಕನವರೆಗೆ ಪ್ರತಿಯೊಬ್ಬನು ನಾನಾತರದ ಉಚ್ಚನೀಚ ಉದ್ಯೋಗಗಳನ್ನು ಗೈಯುತ್ತಿರುವದು ಇದಕ್ಕಾಗಿಯೇ. ಅನೇಕ ಜನರು ಮಾನಮರ್ಯಾದೆಗಳನ್ನು ಬಿಟ್ಟು ಬೇಕಾದಷ್ಟು ಕಷ್ಟಪಡಲು ಕೂಡ ಹಿಂದೆಮುಂದೆ ನೋಡದಿರುವದು ಇದರ ಸಲುವಾಗಿಯೇ. ಹೆಚ್ಚೇನು ? ಈ ಜಗತ್ತು ನಡೆದಿರುವುದಾದರೂ ಇದಕ್ಕೋಸ್ಕರವೇ. ಇದೇನು ಯಾರಿಗೂ ಹೊಸದಲ್ಲ. ಇದರ ಹೆಸರನ್ನು ಹೇಳಿದರೆ ಯಾರಿಗೂ ಆಶ್ಚರ್ಯವಾಗುವುದಿಲ್ಲ. ಇದೆಂದರೆ——ಮತ್ತೇನೂ ಅಲ್ಲ——ಎಲ್ಲರಿಗೂ ಪರಿಚಿತವಾದ ಸುಖವು. ಸುಖವೆಂದರೇನು? ಅದರ ಬೆನ್ನುಹತ್ತಿದವರಿಗೆ ಅದು ಲಭಿಸುವುದೆ? ಲಭಿಸಿದ್ದರೆ, ಅದರ ಪ್ರಾಪ್ತಿಗಾಗಿ ಪ್ರಯತ್ನಿಸುವ ಮಾರ್ಗವಾವುದು ? ದೊರಕುತ್ತಿದ್ದರೆ ಅದಕ್ಕೆ ಕಾರಣವೇನು ? ಇವೇ ಮೊದಲಾದ ಮಾತುಗಳ ಬಗ್ಗೆ ವಿಚಾರಿಸುವುದೇ ಈ ಲೇಖನದ ಉದ್ದೇಶವು.

ಸುಖವೆಂಬುದೊಂದು ವಸ್ತುವಿರುವದಿಲ್ಲ. ಇದು, ಸ್ಪರ್ಶ, ಘ್ರಾಣಾದಿಗಳ ಜ್ಞಾನವುಳ್ಳ ಬಾಹ್ಯೇಂದ್ರಿಯಗಳಿಗೆ ಗೋಚರವಾಗುವದಿಲ್ಲ. ಕೇವಲ ಮನಸ್ಸಿಗೆ ಗೊತ್ತಾಗುವುದು. ಸಿಟ್ಟು, ಹೊಟ್ಟೇಕಿಚ್ಚು, ಅಂತಃಕರಣ, ದುಃಖ ಮೊದಲಾದವುಗಳು ಹೇಗೆ ಮನಸ್ಸಿನಲ್ಲಿ ಹೆಚ್ಚುಕಡಿಮೆಗಳನ್ನುಂಟುಮಾಡುವವೋ ಅದರಂತೆ ಸುಖವಾದಾಗ ಮನಸ್ಸಿನಲ್ಲಿ ಒಂದು ವಿಶಿಷ್ಟವಾದ ಬದಲಾವಣೆಯಾಗುವುದು. ಸುಖವಾಗಬೇಕಾದರೆ ಯಾವದಾದರೊಂದು ಪ್ರಕಾರದ ಲಾಭವಾಗಬೇಕು. ಆದರೆ ಆ ಲಾಭವು ಇಂಥಾದ್ದೇ ಎಂದು ಹೇಳಲಿಕ್ಕೆ ಆಗುವದಿಲ್ಲ. ಯಾಕಂದರೆ " One's food is another's poison " ಎಂಬಂತೆ ಒಬ್ಬನಿಗೆ ಸುಖಕೊಡುವಂಥ ವಸ್ತುವೇ ಇನ್ನೊಬ್ಬನಿಗೆ ದುಃಖ ಕೊಡುವದನ್ನು ನಾವು ನೋಡಬಹುದು. ಅದು ಹೇಗೆಂಬುವದು ಮುಂದಿನ ಮಾತುಗಳಿಂದ ಗೊತ್ತಾಗುವದು. ಜನರು ತಮ್ಮ ಪ್ರಾಣಕ್ಕಿಂತಲೂ ಹೆಚ್ಚಾಗಿ ಪ್ರೀತಿಸುವ ಅನ್ನವನ್ನೇ ರೋಗಿಯಾದ ಮನುಷ್ಯನು ವಿಷಪ್ರಾಯವಾಗಿ ಕಾಣುವನೆಂಬದನ್ನು ಎಲ್ಲರೂ ಬಲ್ಲರು. ಬಹುಜನರನ್ನು ಬಾಯಿಬಿಡಹಚ್ಚಿದ ಬಾಲೆಯನ್ನು ಒಬ್ಬ ಮುದುಕನ ಮುಂದೊಯ್ದು ನಿಲ್ಲಿಸಿದರೆ ಏನಾಗುತ್ತದೆಂಬದನ್ನು " वृद्धस्य तरुणी विषम् " ಎಂಬ ಮಾತನ್ನರಿತವರಿಗೆ ಬೇರೆ ಹೇಳಬೇಕಾಗಿಲ್ಲ. ಕೆಲವರನ್ನು ಆನಂದಸಾಗರದಲ್ಲಿ ತೇಲಾಡಿಸುವ ಗಾಯನವು ಔರಂಗಜೇಬನಂಥವರಿಗೆ ವ್ಯಥೆಯನ್ನುಂಟುಮಾಡುತ್ತಿರುವದನ್ನು ಕಾಣಬಹುದು. ಒಂದು ಸುಲಭವಾದ ಉದಾಹರಣೆಯನ್ನು ಕೊಡಬೇಕೆಂದರೆ, ಎಷ್ಟೋ ಜನರಿಗೆ ಪ್ರೀತ್ಯಾಸ್ಪದವಾದ ಜಿಬುಳು ( ಚಿಕಣಿ ) ಅಡಿಕೆಯನ್ನು ತಂಬಾಕ ತಿನ್ನುವವರು ಕಂಡರೆ ಮೋರೆ ಸೊಟ್ಟಮಾಡುವರೆಂಬದು ಪ್ರತಿಯೊಬ್ಬರೂ ನೋಡಿದ ಮಾತು. ಬಹಳ ಹೇಳುವದೇನು ? ಸಕಲ ಸೃಷ್ಟಿಗೆ ಪೂಜ್ಯವಾದ, ಮತ್ತು ಯಾವದನ್ನು ಕಂಡರೆ ಹೆಣವು ಕೂಡ ಬಾಯಿ ತೆರೆಯುವದೋ ಅಂಥ ಹಣವನ್ನು ಸಹ, ಸರ್ವಸಂಗಪರಿತ್ಯಾಗಮಾಡಿದ ಜ್ಞಾನಿಯು ತಿರಸ್ಕಾರಯುಕ್ತವಾದ ದೃಷ್ಟಿಯಿಂದ ನೋಡುವನೆಂದು ಹೇಳಿದರೆ ಆಶ್ಚರ್ಯವಾಗದಿರದು. ಇನ್ನು ಇಂಥ ಉದಾಹರಣೆಗಳನ್ನು ಲೆಕ್ಕವಿಲ್ಲದಷ್ಟು ಹೇಳಬಹುದು. ಇದೆಲ್ಲವನ್ನು ನೋಡಲಾಗಿ, ಇಂತಿಂಥ ವಸ್ತುಗಳಿಂದಲೇ ಸುಖವಾಗುವದೆಂದು ಹೇಳಿದರೆ ಅದು ತಪ್ಪಾಗುವದೆಂದು ಕೂಡಲೆ ಹೊಳೆಯುವುದು. ಆದ್ದರಿಂದ ಸುಖದ ವ್ಯಾಖ್ಯೆಯು ವಿಲಕ್ಷಣವಾಗಿರುವುದು.

ಇನ್ನು, ಸುಖಕ್ಕಾಗಿ ಹಗಲಿರುಳು ಶ್ರಮಪಡುತ್ತಿರುವ ಜನರು ಎಷ್ಟರಮಟ್ಟಿಗೆ ಜಯಶಾಲಿಗಳಾಗಿರುವರೆಂಬದನ್ನು ನೋಡೋಣ. ಯಾವನಾದರೊಬ್ಬ ಆಗರ್ಭಶ್ರೀಮಂತನು ಸುಖಿಯಾಗಿರ ಬಹುದೆಂದು ನೋಡಿದರೆ, ಅವನು ಮಕ್ಕಳಿಲ್ಲದೆ ದುಃಖಪಡುತ್ತಿ ರುವನೆಂದು ತಿಳಿದು ಬರುವದು. ಬೇಕಾದಷ್ಟು ಮಕ್ಕಳನ್ನು ಪಡೆದವನನ್ನು ಕೇಳಿದರೆ ತಿನ್ನಲಿಕ್ಕೆ ಅನ್ನವಿಲ್ಲೆಂದು ಅಳುವನು. ಕೆಲವರು ಲಗ್ನವಾಗಿಲ್ಲೆಂದು ಮರಗುವರು. ಹಲವು ವಿವಾ ಹಿತರು ತಮ್ಮ ದುರ್ನಡತೆಯ ಅಥವಾ ದುಷ್ಟ ಹೆಂಡಂದಿರ ಮೂಲಕ ಖಿನ್ನರಾಗಿರುವರು. ಎಷ್ಟೋ ಜನರು ವಿದ್ಯೆಯನ್ನು ಗಳಿಸದೆ ವ್ಯಾಕುಲರಾಗಿರುವರು. ವಿದ್ವಾಂಸರು ಆಶ್ರಯವಿಲ್ಲದೆ ಕೊರಗುತ್ತಿರುವರು. ಇವೆಲ್ಲ ಅನುಕೂಲತೆಗಳನ್ನೂ ಪಡೆದವನು ರೋಗದಿಂದ ಬಳಲುತ್ತಿರುವನು. ಆರೋಗ್ಯವ್ರ ಇದ್ದರೆ, ಪುತ್ರ ಶೋಕದಿಂದಲೋ ಪತ್ನಿಶೋಕದಿಂದಲೋ ಅಥವಾ ಇನ್ನಾರಾ ದರೂ ಬಂಧುಗಳು ಇಹಲೋಕದ ಯಾತ್ರೆಯನ್ನು ಮುಗಿಸಿದ ಮೂಲಕವಾಗಿಯೋ ಕ್ಷೀಣರಾಗುತ್ತಿರುವರು. ಇದೇ ರೀತಿ ಯಾಗಿ ಪ್ರತಿಯೊಬ್ಬರು ಒಂದಿಲ್ಲೊಂದು ಕಷ್ಟದಿಂದ ನರಳುತ್ತಿ ರುವದೇ ಕಣ್ಣಿಗೆ ಕಾಣುತ್ತಿರುವರಲ್ಲದೆ ಸುಖಿಗಳ ಸುದ್ದಿಯೇ ಇಲ್ಲ. ಬಹಳ ಮಂದಿಯು ಬಾಯಿಂದ "ನಮ್ಮ ಜೀವನಕ್ಕೆ ಬೆಂಕಿಹಚ್ಚಬೇಕು. ಇರುವದಕ್ಕಿಂತ ಸಾಯುವುದೇ ಲೇಸು. ಜೀವನವು ನಿಜವಾಗಿಯೂ ಸಾಕಾಗಿದೆ" ಎಂಬ ಉದ್ಗಾರಗಳೇ ಹೊರಡುವವು. ಕೆಲವರು ದುಃಖವಾದರೂ ಬಾಯಿಂದ ಮಾತಾ ಡದೆ ಸುಮ್ಮನೆ ಸಹಿಸಿಕೊಳ್ಳುವರು. ಅಂತೂ ಇಂತೂ ಸುಖ ಪಡುವವರೇ ವಿರಳ. ಇಲ್ಲವೇ ಇಲ್ಲವೆನ್ನುವಷ್ಟು ವಿರಳ.

ಸರ್ವರೂ ಸುಖದ ಸಲುವಾಗಿ ಪ್ರಯತ್ನಿಸುತ್ತಿರುವಾಗ, ಒಬ್ಬರಿಗೂ ಅದು ಲಭಿಸಿರುವದಿಲ್ಲವೆಂದಮೇಲೆ, ಅಥವಾ ಕೋಟ್ಯಂತರ ಜನರಲ್ಲಿ ಯಾರಿಗಾದರೊಬ್ಬಿಬ್ಬರಿಗೆ ಸಿಕ್ಕಿರ ಬಹುದೆಂದರೆ ಆಶ್ಚರ್ಯವಾಗದಿರದು. ಇಷ್ಟೊಂದು ದುರ್ಲಭ ವಾದ್ದರಿಂದ ಸುಖವು ಇಲ್ಲವೇ ಇಲ್ಲವೆಂದು ಹೇಳಲಿಕ್ಕಾಗುವದೆ? ಛೆ, ಛೆ, ಹಾಗೆಂದಿಗೂ ಆಗಲಾರದು. ಯಾಕಂದರೆ, ಬಹಳ ಜನರಲ್ಲಿ, ಒಬ್ಬಿಬ್ಬರಿಗೆ ದೊರಕಬೇಕಾದರೂ ಅದು ಇರಲೇ ಬೇಕಷ್ಟೇ? ಅಲ್ಲದೆ ಈ ಮಾತನ್ನು ಬೇರೊಂದು ರೀತಿಯಿಂದಾ ದರೂ ಸಿದ್ಧಮಾಡಬಹುದು. ಅದು ಹೇಗೋ ನೋಡೋಣ. ಯಾವದಾದರೊಂದು ಹೆಸರು ನಿರ್ಮಾಣವಾಗಬೇಕಾದರೆ ಆ ಹೆಸರಿನ ಒಂದು ವಸ್ತುವು ಇರಲಿಕ್ಕೆಬೇಕು. ಅಥವಾ, ಕತ್ತಲೆ ಬೆಳಕು; ಒಳಿತು ಕೆಡಕು; ಎತ್ತರ-ತೆಗ್ಗು ಮೊದಲಾದ, ಪರ ಸ್ಪರ ವಿರುದ್ಧವಾದ ಶಬ್ದಗಳುಂಟಷ್ಟೇ? ಇಂಥ, ಒಂದಕ್ಕೊಂದು ವಿರುದ್ಧವಾದ ಶಬ್ದಗಳಿದ್ದ ಹೊರತು ಕ್ರಿಯೆಯ ಜ್ಞಾನವಾಗು ವುದೇ ಕಷ್ಟ. ಒಂದೇ ಒಂದು ಪ್ರದೇಶವನ್ನು ತೋರಿಸಿ ಅದು ಎತ್ತರವಾಗಿದೆಯೋ ತಗ್ಗಾಗಿದೆಯೋ ಎಂದು ಕೇಳಿದರೆ ಯಾವ ನಿಗೂ ಹೇಳಲಿಕ್ಕಾಗುವದಿಲ್ಲ. ಎರಡು ಪ್ರದೇಶಗಳಿದ್ದರೆ ಮಾತ್ರ ಒಂದಕ್ಕೊಂದನ್ನು ಸರಿಹಚ್ಚಿ ನೋಡುವದರಿಂದ ಅವುಗಳಲ್ಲಿರುವ ಹೆಚ್ಚು ಕಡಿಮೆಯು ತಿಳಿಯುವದು. ನಾವು, ನಮಗೆ ದುಃಖ ವಾಗುವದೆಂದು ಹೇಳಬಲ್ಲೆವು. ಸುಖದ ಕಲ್ಪನೆಯಿಲ್ಲದಿದ್ದರೆ ದುಃಖದ ಕಲ್ಪನೆಯು ಹೇಗಾಗುತ್ತಿತ್ತು? ಆದ್ದರಿಂದ ಸುಖದ ಜ್ಞಾನವು ನಮಗುಂಟು. ಅಂದಬಳಿಕ ಸುಖವು ಇರಲಿಕ್ಕೆ ಬೇಕು. ಸುಖವು ಇದ್ದರೆ ಅದು ಇಷ್ಟೇಕೆ ದುರ್ಲಭವಾಗಿರುವದು? ಹಾಗಾದರೆ, ಅದನ್ನು ದೊರಕಿಸಲು ಹೊರಟಿರುವ ಮಾರ್ಗವು ತಪ್ಪಿರಲಿಕ್ಕೆ ಬೇಕು. ಅಥವಾ ನಾವು ನಿಜವಾದ ಸುಖವನ್ನು ಬಿಟ್ಟು ಸುಖವಲ್ಲದ ಮತ್ತೊಂದು ವಸ್ತುವನ್ನೇ ಸುಖವೆಂದು ತಿಳಿದುಕೊಂಡು ಹೊರಟರಲಿಕ್ಕೆ ಬೇಕು. ನಿಜವಾದ ಸುಖವು ಯಾವದು? ನಾವು ಏತಕ್ಕೆ ಸುಖವೆನ್ನುತ್ತ ನಡೆದಿದ್ದೇವೆ. ಎಂಬ ದನ್ನು ವಿಚಾರಿಸುವಾ.

ನಾವು, ಯಾವ ಕಾಲದಲ್ಲಿ ಸುಖಿಗಳೆಂದು ತಿಳಿದುಕೊಳ್ಳು ತ್ತೇವೆ ? ಲಾಭವಾದಾಗ ನಾವು ಸುಖಪಡುತ್ತೇವಷ್ಟೇ? ಹಾಗಾ ದರೆ ಎಷ್ಟು ಜನರಿಗೆ ಲಾಭವಾಗುವದಿಲ್ಲ? ಅವರು ಸುಖಿಗಳೇ ಆಗಲಿಲ್ಲವೇನು? ಇಲ್ಲ. ಲಾಭದ ಕೂಡ ಹಾನಿಯೂ ಇದ್ದೇ ಇರುತ್ತದೆ. ಹಾನಿಯಾಯಿತೆಂದರೆ ದುಃಖವಾಗುವದಿಷ್ಟೇ ಅಲ್ಲ, ಲಾಭದಿಂದಾದ ಸುಖವೂ ಅಳಿಸಿ ಹೋಗುತ್ತದೆ. ನಾವು, ನಿಜ ವಾದ ಸುಖಿಗಳಾಗಬೇಕೆಂದು ಹಾರೈಸುತ್ತೇವೆ! "ಯಾವಕಾ ಲಕ್ಕೂ ದುಃಖವಾಗಬಾರದು, ಕೇವಲ ಸುಖವೇ ನಿರಂತರವೂ ಲಭಿಸುತ್ತಿರಬೇಕು. ಅಂದರೆ ಮಾತ್ರ ನಾವು ಸುಖಿಗಳು" ಇದು, ಸರ್ವರೂ ಹೇಳಬಲ್ಲ ನಿಜವಾದ ಸುಖದ ವ್ಯಾಖ್ಯೆಯು. ಇನ್ನು, ನಮ್ಮ ವ್ಯವಹಾರವನ್ನು ನೋಡೋಣ. ಈ ಜಗತ್ತಿನಲ್ಲಿರುವ ವಸ್ತುಗಳ ಮೂಲಕ ನಮಗೆ ಸುಖವಾಗಬೇಕಾಗಿದೆ. ಈ ವಸ್ತು ಗಳಾವ ಪ್ರಕಾರದವು? ನಶ್ವರವಾದವುಗಳು. ಒಂದಿಲ್ಲೊಂದು ದಿನ ನಿಶ್ಚಯವಾಗಿಯೂ ನಾಶವಾಗತಕ್ಕಂಥವು. ಇವು ನಾಶ ವಾದರೆ ನಮಗೆ ದುಃಖವಾಗುವುದು. ನಾಶವಾಗುವಂಥ ವಸ್ತು ಗಳ ಸಂಗಡ ವ್ಯವಹಾರ ಮಾಡುವಂಥ ನಾವು, ಯಾವಾಗಲೂ ಸುಖವಾಗಬೇಕೆಂದು ಇಚ್ಛಿಸುತ್ತೇವೆ. ಅಂದರೆ ಆ ವಸ್ತುಗಳು

ಎಂದೂ ನಾಶವಾಗಬಾರದೆಂದು ಇಚ್ಛಿಸುತ್ತೇವೆ. ಇದೆಷ್ಟು, ಪರಸ್ಪರ ವಿರುದ್ಧವಾದ ವಿಚಾರವೆಂಬದನ್ನು ಪುನಃ ಹೇಳಬೇಕಾಗಿಲ್ಲ. ಆದ್ದರಿಂದ ನಾವು ಸುಖದ ಮೂಲಸ್ಥಾನವನ್ನೇ ಅರಿಯದವರಾಗಿದ್ದೇವೆ. ಬೆಂಗಳೂರಿಗೆ ಹೋಗಬೇಕೆಂದು ಹೊರಟ ಗೃಹಸ್ಥನು, ಪುಣೆಯ ಕಡೆಗೆ ಸಾಗಿರುವ ಉಗಿಬಂಡಿಯಲ್ಲಿ ಕುಳಿತಂತಾಗಿದೆ. ಇದಕ್ಕಾಗಿ, ಸುಖದ ದೆಸೆಯಿಂದ ಹಗಲಿರಳು ಶ್ರಮಪಡುತ್ತಿರುವ ಸಕಲರೂ ಕೊನೆಯಲ್ಲಿಯೂ ಕೂಡ ನಿರಾಶೆ ಹೊಂದಿ, ತಮ್ಮ ಜೀವನ ಕ್ರಮವನ್ನು ಮುಗಿಸುತ್ತಿದ್ದಾರೆ.

ಅಂದಬಳಿಕ ಸುಖದ ನಿಜಸ್ಥಾನವು ಬೇರೊಂದೆಡೆಯಲ್ಲಿರಲಿಕ್ಕೇ ಬೇಕು. ನಮಗಾಗುವ ಸುಖದುಃಖಗಳು ನಮ್ಮ ಇಂದ್ರಿಯಗಳ ಮುಖಾಂತರವಾಗಿ ಆಗುವವು. ಬೇರೆ ಬೇರೆ ವಸ್ತುಗಳ ಮೂಲಕ ಬೇರೆ ಬೇರೆ ಇಂದ್ರಿಯಗಳಿಗೆ ಸುಖವೋ ದುಃಖವೋ ಆಗುವದು. ಕೇವಲ ವಸ್ತುಗಳಿಂದಲೇ ಸುಖವಾಗುತ್ತಿದೆಯೇನು ? ಹಾಗಿದ್ದರೆ, ಎಲ್ಲ ವಸ್ತುಗಳಿಂದಲೂ ಸುಖವಾಗಬೇಕಾಗಿತ್ತು. ಒಂದು ಪದಾರ್ಥವನ್ನು ಮತ್ತೊಬ್ಬನು ಪ್ರೀತಿಯಿಂದ ಸೇವಿಸುತ್ತಿದ್ದರೆ, ಅದೇ ವಸ್ತುವನ್ನು ಕಂಡರೆ ನಮಗೆ ಅಸಹ್ಯವಾಗುವದು. ಅಂದಬಳಿಕ, ಸುಖವಾಗುವುದಕ್ಕೆ ಕೇವಲ ವಸ್ತುಗಳಷ್ಟೇ ಕಾರಣವಾಗಿರದೆ, ಅದರಲ್ಲಿ ಮತ್ತೊಂದರ ಸಂಬಂಧವಿರಲಿಕ್ಕೆ ಬೇಕು. ಮದ್ಯದ ವಾಸನೆಯು ಬಂದ ಕೂಡಲೆ ಎಷ್ಟೋ ಜನರು ಮೂಗು ಮುಚ್ಚಿಕೊಳ್ಳುತ್ತಿರುವಾಗ ಕೆಲವರಿಗೆ ಮದ್ಯಸೇವನದಿಂದಲೇ ಪರಮಾನಂದವು ಪ್ರಾಪ್ತಿಯಾಗುವದಲ್ಲ ? ಇದಕ್ಕೆ ಕಾರಣವೇನು ? ಅವರವರಿಗಿರುವ ರೂಢಿಯಲ್ಲದೆ ಮತ್ತಿನ್ನೇನೂ ಅಲ್ಲ. ರೂಢಿಯೆಂದರೆ ಏನು ? ನಮ್ಮ ಮನಸ್ಸಿನ ಮೇಲಾಗುವ ಒಂದು ವಿಶಿಷ್ಟ ಪರಿಣಾಮವು. ಯಾವ ವಸ್ತುವನ್ನು ಉಪಯೋಗಿಸುವ ಚಟವು ನಮ್ಮ ಮನಸ್ಸಿಗಿರುವದೋ ಆ ವಸ್ತುವನ್ನು ಹೊಂದುವದರಿಂದ ನಮಗೆ ಆನಂದವಾಗುವದು. ಇದನ್ನು ನೋಡಲಾಗಿ ಸುಖವಾಗುವದು ಅಥವಾ ದುಃಖವಾಗುವದು ನಮ್ಮ ಮನಸ್ಸಿನಮೇಲೆ ಅವಲಂಬಿಸಿರುವದೆಂದಂತಾಯಿತು. ಅಂದರೆ, ಸುಖಪಡುವದು ಅಥವಾ ದುಃಖಪಡುವದು ನಮ್ಮ ಮನಸ್ಸಿನ ಕೈಯಲ್ಲಿಯೇ ಇರುವದೇನು ? ನಿಜವಾಗಿಯೂ ಹೌದು. ನಮಗೆ, ಲಾಭವಾದಾಗ ಆನಂದವಾಗುವ ರೂಢಿಯಾಗಿದೆ. ಹಾನಿಯಾದ ಕೂಡಲೆ ದುಃಖಪಡುವದಾದರೂ ಚಟವೇ ಅಲ್ಲದೆ ಮತ್ತೇನೂ ಅಲ್ಲ. ನಾವು ಯಾವಾಗಲೂ ಸುಖವನ್ನೇ ಪಡೆಯಬೇಕಾದರೆ ಏನು ಮಾಡಬೇಕು ? ದುಃಖದ ಬೀಜವನ್ನೇ ಕಿತ್ತೊಗೆಯಬೇಕು. ಅದು ಹೇಗಂದರೆ; ನಾವು ನಶ್ವರ ವಸ್ತುಗಳ ಸಂಗಡ ವ್ಯವಹಾರ ಮಾಡುತ್ತಿವಾದ್ದರಿಂದ ಅವು ದೊರಕಿದಾಗ ನಮಗೆ ಆನಂದವಾಗುವುದು. ಅವು ನಷ್ಟವಾದಾಗ ದುಃಖವಾಗುವದು. ಇದಕ್ಕೆ ಕಾರಣವು ನಮ್ಮ ಚಟವೇ. ಈ ಚಟವನ್ನೇ ಕಿತ್ತೂಗೆದರಾಗಲಿಲ್ಲವೇ ? ಅಂದರೆ ಬೇರೊಂದು ಚಟವನ್ನು ಕೆಡವಿಕೊಳ್ಳಬೇಕು. ನಮಗೆ ಲಾಭವಾದರೂ ಆನಂದವೇ ಆಗಬೇಕು. ಹಾನಿಯಾದರೂ ಆನಂದವೇ ಆಗಬೇಕು. ಹೀಗಾದರೆ ನಮಗೆ ದುಃಖವೇ ಆಗುವದಿಲ್ಲ. ಈ ಪ್ರಕಾರವಾದ ಚಟವನ್ನು ಕೆಡವಿಕೊಳ್ಳುವದೆಂದರೆ ನಮ್ಮ ಮನಸ್ಸನ್ನು ನಮ್ಮ ಕೈಯಲ್ಲಿಟ್ಟುಕೊಳ್ಳುವದು. ಆದ್ದರಿಂದ ಸುಖದ ನಿಜಸ್ಥಾನವಾವುದು ? ನಮ್ಮ ಮನಸ್ಸು.

ಜ್ಞಾನಿಗಳು ಎಂಥಪ್ರಸಂಗಬಂದರೂ, ದುಃಖವನ್ನೇ ಪಡದಿರುವದನ್ನು ಕೆಲವರು ಕಂಡಿರಬಹುದು. ಅದರ ಗುಟ್ಟಾದರೂ ಇದೇ. ಅವರು ಆ ಮಾದರಿಯ ಚಟವನ್ನೇ ಕೆಡವಿಕೊಂಡಿರುತ್ತಾರೆ. ಈ ಮಾತನ್ನೇ ಅನೇಕ ಜ್ಞಾನಿಗಳು ಬೇರೆ ಬೇರೆ ತರದ ಮತ್ತು ಸುಲಭವಾದ ರೀತಿಯಿಂದ ಜನರ ಮುಂದಿಟ್ಟದ್ದಾರೆ. ಅವುಗಳಲ್ಲಿ ಕೆಲವನ್ನು ಇಲ್ಲಿ ಬರೆಯುತ್ತೇನೆ:--ಒಬ್ಬ ಕವಿಯು ರಚಿಸಿದ ಒಂದು ಶ್ಲೋಕದ ಕಡೆಯ ಅರ್ಧಭಾಗವಾದ

"सहिभवतु दरिद्रो यस्य तृष्णा विशाला ।
मनसिच परितुष्टे कोर्थवान् को दरिद्रः ॥

ಈ ಎರಡು ಚರಣಗಳನ್ನು ನೋಡಿದರೆ ಮೇಲಿನ ಮಾತೇ ಸಿದ್ಧವಾಗುತ್ತದೆ. ಈ ಶ್ಲೋಕದಲ್ಲಿ ಕವಿಯು "ಯಾವನ ಆಶೆಯು ಎಂದೂ ಮುಗಿಯದಂಥದಿರುತ್ತದೋ ಅವನು ದರಿದ್ರನೇ. ಯಾವನ ಮನಸ್ಸು ತೃಪ್ತವಾಗಿದೆಯೋ ಅವನು ದರಿದ್ರನಿದ್ದರೇನು? ಶ್ರೀಮಂತನಿದ್ದರೇನು?" ಎಂದು ಹೇಳಿದ್ದಾನೆ. ಮನಸ್ಸು ತೃಪ್ತಿಯಾಗುವದೆಂದರೇನು ? ಲಾಭವಾದರೂ ಅವನಿಗೆ ಆನಂದವೇ ಹಾನಿಯಾದರೂ ಆನಂದವೇ. ಅವನು ಬಡವನಿದ್ದರೇನು ? ಬಲ್ಲವನಿದ್ದರೇನು ? ಯಾವಾಗಲೂ ಆನಂದದಲ್ಲಿಯೇ ಮುಳುಗಿರುತ್ತಾನೆ. ಅವನಿಗೆ ಬಡತನದಿಂದ ದುಃಖವಾಗುವದಿಲ್ಲ. ಶ್ರೀಮಂತಿಕೆಯಿಂದ ಆನಂದವಾಗುವದಿಲ್ಲ. ಇನ್ನೊಂದೆಡೆಯಲ್ಲಿ ಸರ್ವಜ್ಞಕವಿಯು" **ಬಂದುದನು ತಾ ಹಾಸಿ ಬಂದುದನು ತಾ ಹೊದೆದು । ಬಂದಿಹುದನೆಲ್ಲ ನುಂಗಿದೊಡೆ ವಿಧಿ ತಾನು । ನಂದಿಹೋಗಿಹುದು ಸರ್ವಜ್ಞ ॥** ಎಂದು ಹೇಳಿದ್ದಾನೆ. ಇದರರ್ಥವಾದರೂ ಅದೇ. ಬಂದದ್ದೆಲ್ಲ

ವನ್ನು ಅನುಭೋಗಿಸಲು ನಾವು ಸಿದ್ಧರಾಗಬೇಕು. ದುಃಖವನ್ನು ಆನಂದದಂತೆಯೇ ಅನುಭೋಗಿಸಲು ಸಿದ್ಧರಾದ ಮೇಲೆ ಸುಖ ದುಃಖಗಳಲ್ಲಿ ಅಂತರವೇ ಉಳಿಯುವದಿಲ್ಲ. ನಮಗೆ ಸರ್ವವೂ ಸುಖಮಯವಾಗಿಯೇ ಪರಿಣಮಿಸುವುದು. ಕನ್ನಡಿಗರಿಗೆ ಚಿರ ಪರಿಚಿತರಾದ ಪುರಂದರದಾಸರು ಇದೇ ಮಾತನ್ನೇ " **ಅನು ಗಾಲವು ಚಿಂತೆ ಚಿಂತೆ ಜೀವಕ್ಕೆ ॥ ಎನ್ನ ॥ ಮನವು ಶ್ರೀರಂಗನೋಳ್ ಮೆಚ್ಚುವತನಕ ॥** ಎಂಬ ತಮ್ಮ ಪದದಲ್ಲಿ ಬಹಳ ಚನ್ನಾಗಿ ಸಿದ್ಧಪಡಿಸಿದ್ದಾರೆ. ಮನಸ್ಸು ರಂಗ ನಲ್ಲಿ ಮೆಚ್ಚುವದೆಂದರೆ, ಸದಾ ಸುಖಿಯಾಗಿರುವದು. ಸದಾ ಸುಖಿ ಯಾಗಿರಬೇಕಾದರೆ ಮನಸ್ಸಿಗೆ ಮೇಲೆ ಬರೆದ ಚಟವನ್ನು ಕಲಿಸ ಬೇಕು. ಇಲ್ಲದಿದ್ದರೆ ಯಾವಾಗಲೂ ದುಃಖದಲ್ಲಿಯೇ ಕೊಳೆಯ ಬೇಕಾಗುವದೆಂಬರ್ಥ.

ಆದ್ದರಿಂದ ಸಂಸಾರವು ಸುಖದಾಯಕವಾಗಲಿಕ್ಕೂ ದುಃಖ ದಾಯಕವಾಗಲಿಕ್ಕೂ ನಮ್ಮ ಮನಸ್ಸೇ ಕಾರಣವು. ಆದ್ದರಿಂದಲೇ

" **मनएवं मनुष्याणां कारणं बंधमाक्षयोः ॥**

ಎಂಬ ಶ್ಲೋಕವು ತತ್ವಜ್ಞಾನಿಗಳ ಮುಖದಿಂದ ಹೊರಬಿದ್ದಿರು ತ್ತದೆ. ಈ ಮೊದಲು ಯಾರಾದರೂ ನಿಜವಾದ ಸುಖವನ್ನು ಹೊಂದಿದ್ದರೆ ಅವರು ಈ ಮಾರ್ಗದಿಂದಲೇ ಹೋಗಿರಬೇಕೆಂಬದು ನಿಃಸಂಶಯವಾದ ಮಾತು ಹಾಗಾದರೆ, ಸುಖವನ್ನು ಹೊಂದು ವದು ನಮ್ಮ ಕೈಯಲ್ಲಿಯೇ ಇರುವಾಗ, ಎಲ್ಲರೂ ಏಕೆ ಸಂಪಾ ದಿಸಿಕೊಳ್ಳುವದಿಲ್ಲ ? ಅದಕ್ಕೆ ಕಾರಣವುಂಟು. ಈ ಮಾರ್ಗದ ವಿಷಯವಾಗಿ ಮಾತಾಡುವದು ಬಹು ಸುಲಭವಾಗಿದ್ದರೂ ಆ ಮಾರ್ಗದಲ್ಲಿ ನಡೆಯುವದು ಮಾತ್ರ ಅತಿಶಯ ಕಠಿಣವಾಗಿರು ವದು. ಆದ್ದರಿಂದ ಈ ಕಾರ್ಯದಲ್ಲಿ ತೀರ ಸ್ವಲ್ಪ ಜನರು ಯಶಸ್ವಿಗಳಾಗುವರು. ಯಶಸ್ವಿಗಳಾದ ಆ ಮಹಾತ್ಮರಿಗೆ ವಂದನೆಗಳು.

---

## ಜಯ ಕರ್ನಾಟಕದ
### ಆರುವರ್ಷದ
# ಸಿಂಹಾವಲೋಕನ

**ಜಯ ಕರ್ನಾಟಕವು** ಹೊರಟು ಇಂದಿಗೆ ಆರು ವರ್ಷಗಳು ಮುಗಿದವು. ಈ ಆರು ವರ್ಷಗಳಲ್ಲಿ ಜಯಕರ್ನಾಟಕವು ಮಾಡಿದ ಕಾರ್ಯವಾವುದು ಎಂಬುದರ ಸಿಂಹಾವಲೋಕನವನ್ನು ಮಾಡಿ, ಮುಂದೆ ಅದು ಯಾವ ತರಹದ ಕಾರ್ಯವನ್ನು ಮಾಡುವ ಸಂಕಲ್ಪವನ್ನು ಮಾಡಿರುತ್ತದೆಂಬದರ ರೂಪರೇಷೆಯನ್ನು ತೆಗೆಯುತ್ತೇವೆ. ಈ ಸಿಂಹಾವಲೋಕನವನ್ನು ಹೋದ ವರುಷವೇ ಮಾಡಬೇಕಾಗಿತ್ತು, ಆದರೆ ಆ ಕಾಲಕ್ಕೆ ನಮಗೆ ಮೈಯಲ್ಲಿ ಸ್ವಾಸ್ಥ್ಯವಿಲ್ಲದ ಮೂಲಕ, ಆ ಕೆಲಸವನ್ನು ಇಂದಿನವರೆಗೆ ಮುಂದಕ್ಕೆ ದೂಡಬೇಕಾಯಿತು.

**ಜಯ ಕರ್ನಾಟಕವು ಹುಟ್ಟುವುದಕ್ಕೆ ಕಾರಣ** – ೧೯೦೫ನೆಯ ಇಸ್ವಿಯಿಂದ ೧೯೨೨ನೆಯ ಇಸ್ವಿಯವರೆಗೆ ಧರ್ಮ, ವಾಙ್ಮಯ, ರಾಷ್ಟ್ರೀಯ ಶಿಕ್ಷಣ, ರಾಜಕಾರಣ, ಇತಿಹಾಸ, ಕರ್ನಾಟಕದ ಏಕೀಕರಣ, ಕರ್ನಾಟಕದ ವೃತ್ತಪತ್ರ ಇವೇ ಮುಂತಾದ ವಿವಿಧ ಕ್ಷೇತ್ರಗಳಲ್ಲಿ ನಾವು ಕಾರ್ಯಮಾಡಿದಾಗ ನಮಗೆ ಒಂದು ಮಾತು ಅತ್ಯಂತ ದೃಢವಾಗಿ ನಿದರ್ಶನಕ್ಕೆ ಬಂದಿತು. ಅದಾವುದೆಂದರೆ– ಕರ್ನಾಟಕವು ಭರತಖಂಡದ ಸಾರ್ವಜನಿಕ ಕಾರ್ಯಕ್ಷೇತ್ರದಲ್ಲಿ ಮಿಕ್ಕಪ್ರಾಂತಗಳೊಡನೆ ಸರಿ ಸಮಾನಸ್ಕಂದವಾಗಿ ಕೆಲಸಮಾಡಬೇಕಾದರೆ ಅದು ತನ್ನ ಕರ್ನಾಟಕತ್ವದ ಭಾವನೆಯನ್ನು ಅತ್ಯುಜ್ವಲವಾಗಿ ಮಾಡಿಕೊಳ್ಳಬೇಕೆಂಬುದು. ವಿಶೇಷತ; ಆಗ ನಾವು ರಾಜಕಾರಣದ ವಿವಿಧ ಅಂಗಗಳಲ್ಲಿ ತೊಡಗಿದ್ದರಿಂದ ಅಲ್ಲಿ ನಮಗೆ ಈ ಮಾತಿನ ಅನುಭವವು ಬಲವಾಗಿ ಬಂದಿತು. ಆದಕಾರಣ, ಕರ್ನಾಟಕಕ್ಕೆ ಬೇರೊಂದು ಮಾರ್ಗದ ಅವಶ್ಯಕತೆಯಿರುತ್ತದೆಂಬುದರ ಅರಿವು ಮಾಡಿಕೊಡಬೇಕೆಂದು ನಿರ್ಧರಿಸಿದೆವು. ಕರ್ನಾಟಕಸ್ಥರಲ್ಲಿ ಮುಖ್ಯತ; ಈ ಬಗೆಯ ಭಾವನೆಯಿಲ್ಲದ ರಿಂದಲೇ ಕರ್ನಾಟಕವು ಹಿಂದೆ ಬಿದ್ದಿದೆಂಬುದು ನಮ್ಮ ಪ್ರತ್ಯಕ್ಷ ಅನುಭವಕ್ಕೆ ಬಂದ ಕಾರಣ, ಮಿಕ್ಕ ಕಾರ್ಯಗಳನ್ನು ಬದಿಗೊತ್ತಿ ಪ್ರಾಧಾನ್ಯದಿಂದ ಈ ಕಾರ್ಯವನ್ನೇ ಮಾಡಬೇಕೆಂದು ನಿಶ್ಚಯಿಸಿದೆವು. ಕರ್ನಾಟಕತ್ವದ ಜಾಗ್ರುತಿ, ಕರ್ನಾಟಕ ಸಂಸ್ಕೃತಿಯ ಜ್ಞಾನ, ಸರ್ವವಿಧದಲ್ಲಿ ಕರ್ನಾಟಕ ಏಕೀಕರಣ ಇವುಗಳನ್ನು ನಮ್ಮ ಮುಖ್ಯ ಧ್ಯೇಯಗಳನ್ನಾಗಿ ಇಟ್ಟುಕೊಂಡು ಅವುಗಳ ಪ್ರಸಾರಕ್ಕೆ ಯಾವುದೊಂದು ಸಾಧನವಿರಬೇಕೆಂಬ ಉದ್ದೇಶದಿಂದ **ಜಯ ಕರ್ನಾಟಕ** ಮಾಸ ಪತ್ರಿಕೆಯನ್ನು ಹೊರಡಿಸಿದೆವು.

**ಜಯ ಕರ್ನಾಟಕದ ಹುಟ್ಟು**— ಈ ಪತ್ರಿಕೆಯು ಹುಟ್ಟುವುದಕ್ಕೆ ಮುಖ್ಯವಾಗಿ ಇಬ್ಬರು ಕಾರಣರಾದರು. (೧) ನಮ್ಮ ಮಿತ್ರರಾದ ಶ್ರೀ. ಬಳವಂತರಾವ ಜಠಾರ ಇವರು ದೊಡ್ಡ ಪ್ರೆಸ್ಸಿನ ಮಾಲಿಕರಾಗಿದ್ದು ಅವರು ವ್ಯವಹಾರ ದೃಷ್ಟಿಯಿಂದ ಮೊದಲು ಪಾಲುಗಾರರಾಗಿ ನಮಗೆ ಈ ಮಹಾಕಾರ್ಯವನ್ನು ಮೈಮೇಲೆ ತೆಗೆದುಕೊಳ್ಳಲಿಕ್ಕೆ ಪ್ರೋತ್ಸಾಹಿಸಿ ನೆರವಾದರು. (೨) ಅಸಹಕಾರದ ಕಾಲದಲ್ಲಿ ನಾವು ವಕೀಲಿಯನ್ನು ಬಿಟ್ಟ ಬಳಿಕ ಆತ್ಮಸಾಧನಕ್ಕೆಂದು ಗೆಳೆಯರ ಚಿಕ್ಕ ಗುಂಪೊಂದು ನಮ್ಮ ಮನೆಯಲ್ಲಿ ಕೂಡುತ್ತಿತ್ತು; ಅದರಲ್ಲಿ ಶಾರದಾಭಕ್ತರೂ ಕೆಲವರಿದ್ದರು. ಅವರು ನಮಗೆ ಬೌದ್ಧಿಕ ಬೆಂಬಲ ಕೊಡಲು ಸಿದ್ಧರಾದರು. ಮುಂದೆ ಜಯಕರ್ನಾಟಕಕ್ಕೆ ಬಹಳ ಹಾನಿ ತಟ್ಟಿದ ಮೂಲಕ ಶ್ರೀ. ಜಠಾರ ಇವರು ಹಿಂದೆ ಸರಿದರೂ ಇಂದಿನವರೆಗೆ ಈ ಪತ್ರಿಕೆಯನ್ನು ಮುದ್ರಿಸಿ ನಮಗೆ ಸಹಾಯಮಾಡುತ್ತಲೇ ಇರುವರು. ಅದೇ ಮೇರೆಗೆ ಶಾರದಾ ಮಂಡಳದವರು ಗೆಳೆಯರ ಗುಂಪಿನ ಹೆಸರಿನಿಂದ ಉತ್ಕಟವಾದ ವಾಙ್ಮಯ ಸೇವೆಯಲ್ಲಿ ತೊಡಗಿದರೂ ಕಾಲಕಾಲಕ್ಕೆ ಅವರು ಲೇಖಗಳನ್ನು ಕೊಟ್ಟು ಇಂದಿನವರೆಗೆ ಸಹಾಯಮಾಡುತ್ತಲೇ ಬಂದಿರುವರೆಂಬುದು ಈ ಆರು ವರ್ಷಗಳಲ್ಲಿ ಅವರಿಂದ ಬಂದ ಲೇಖಗಳಿಂದ ಗೊತ್ತಾಗುವುದು, ಇವರಿಬ್ಬರಿಗೂ ನಾವು ಋಣಿಯಾಗಿರುವೆವು.

**ಜಯ ಕರ್ನಾಟಕದ ಸಾಧ್ಯ** - ಮೇಲೆ ಅತ್ಯಂತ ಸಂಕ್ಷೇಪವಾಗಿ ಹೇಳಿದ್ದರ ಮೇಲಿಂದ, ಜಯಕರ್ನಾಟಕವು ಕೇವಲ ಮಾಸಪತ್ರಿಕೆಯಾಗಿರದೆ, ಅದು ನಮ್ಮ ಮನದಲ್ಲಿ ಬಹಳ ದಿವಸಗಳಿಂದ ಕಟೆಯುತ್ತಿರುವ ಒಂದು ವಿಚಾರದ ಕಳಸವೆಂದೂ ಅದನ್ನು ನಾವು ಆ ವಿಚಾರ ಪ್ರಕಾಶಕ್ಕೆ ಒಂದು ಸಾಧನಮಾತ್ರವಾಗಿ ಸ್ವೀಕರಿಸಿರುವೆವೆಂದೂ ವಾಚಕರಿಗೆ ಗೊತ್ತಾಗದೆ ಇರದು.

ಇದರಿಂದ, ಜಯಕರ್ನಾಟಕದ ಮುಖ್ಯಧ್ಯೇಯವು ಆವುದೆಂಬುದು ವಾಚಕರ ಲಕ್ಷ್ಯದಲ್ಲಿ ಬಂದಿರಬಹುದು. ಕೇವಲ ಉತ್ಕೃಷ್ಟವಾದದ್ದೊಂದು ಮಾಸಪತ್ರಿಕೆಯನ್ನು ಹೊರಡಿಸಿದರೆ ತೀರಿತೆಂದು ನಾವು ತಿಳಿದಿರಲಿಲ್ಲ. ಕರ್ನಾಟಕತ್ವ, ಕರ್ನಾಟಕ ಸಂಸ್ಕೃತಿ ಕರ್ನಾಟಕ ಏಕೀಕರಣ ಇವೇ ಮುಂತಾದ ಭಾವನೆಗಳು ಕನ್ನಡಿಗರಲ್ಲಿ ಬಿತ್ತಲ್ಪಡಬೇಕೆಂಬ ಉದ್ದೇಶದಿಂದ 'ಜಯಕರ್ನಾಟಕ'ವನ್ನು ಸಾಧನರೂಪವಾಗಿ ಕೈಕೊಂಡಿರುವೆವು. ಆದರೆ ಇದರಿಂದ 'ಜಯಕರ್ನಾಟಕ' ವನ್ನು ಸರ್ವಾಂಗಸುಂದರವಾದ ಮಾಸ ಪತ್ರಿಕೆಯನ್ನಾಗಿ ಮಾಡಬಾರದೆಂಬುದು ನಮ್ಮ ಇಚ್ಛೆಯಿಲ್ಲವೆಂತಲ್ಲ. ಆ ಇಚ್ಛೆಯೂ ಇದ್ದೇ ಇರುತ್ತದೆ. ಆದರೆ ಅದು ಮೊದಲಿನ ಉದ್ದೇಶವಲ್ಲ, ಎರಡನೆಯದು. ಕರ್ನಾಟಕತ್ವದ ಭಾವನೆಯು ಬೆಳೆಯುವಂತಿದ್ದರೆ ಮಾದರಿಯ ಮಾಸಪತ್ರಿಕೆಯಲ್ಲಿ ಬರಲಿಕ್ಕೆ ತಕ್ಕದ್ದಲ್ಲದ ಲೇಖಗಳನ್ನೂ ನಾವು ಹಾಕುವದುಂಟು. ಕರ್ನಾಟಕವಾಙ್ಮಯದ ಶುದ್ಧೀಕರಣಕ್ಕಿಂತಲೂ ಕರ್ನಾಟಕ ವಾಙ್ಮಯದ ಏಕೀಕರಣವು ನಮಗೆ ಸದ್ಯಸ್ಥಿತಿಯಲ್ಲಿ ಹೆಚ್ಚಿಗೆ ಮಹತ್ವದ್ದೆನಿಸುತ್ತದೆ. ಹರಿದು ಹಂಚಿಹೋದ ಕನ್ನಡಿಗರಲ್ಲಿ ಪ್ರೇಮಭಾವನೆಯನ್ನು ಹುಟ್ಟಿಸುವುದೇ ನಮ್ಮ ಮುಖ್ಯ ಉದ್ದೇಶವಿರುವುದರಿಂದ ಇಡೀ ಕರ್ನಾಟಕವು ಒಂದೇ ಎಂಬದಾಗಿ ನಮ್ಮ ಕಣ್ಣಿಗೆ ತೋರುತ್ತದೆ. ನಮ್ಮ ದುರ್ದೈವದಿಂದ, ಕರ್ನಾಟಕದಲ್ಲಿ ಈಗ ಇದ್ದಷ್ಟು ಭೇದಗಳು ಮತ್ತಾವ ಪ್ರಾಂತದಲ್ಲಿಯೂ ಕಂಡುಬರುವುದಿಲ್ಲ. ಮೈಸೂರಿನವರು ಎಷ್ಟೋ ಜನರಿಗೆ ಕನ್ನಡಿಗರಾಗಿ ಕಾಣುವುದಿಲ್ಲ; ಕೊಡಗಿನವರು ಅನೇಕರಿಗೆ ಪರಕೀಯರಾಗಿ ತೋರುತ್ತಾರೆ; ಮಂಗಳೂರಿನವರೆಂದರೆ ದೂರ ಎಲ್ಲಿಯವರೋ ಎಂದು ಹಲವರು ತಿಳಿಯುತ್ತಾರೆ; ಹೈದ್ರಾಬಾದಿನವರಿಗೂ ನಮಗೂ ಸಂಬಂಧವೇ ಇಲ್ಲವೆಂದು ಹಲವರ ಭಾವನೆ. ಉತ್ತರ ಕರ್ನಾಟಕದವರು ನಮ್ಮವರು ಅಲ್ಲವೇ ಅಲ್ಲವೆಂದು ಅನೇಕರ ಕಲ್ಪನೆ. ಇವೆಲ್ಲ ತಪ್ಪು ತಿಳವಳಿಕೆಗಳನ್ನು ಕಿತ್ತುಹಾಕಿ ಇವರೆಲ್ಲರಲ್ಲಿಯೂ ಪ್ರೇಮ ಸೂತ್ರವನ್ನು ಪೋಣಿಸುವುದೇ ಮುಖ್ಯ ಗುರಿ. ಇದೊಂದು ಉದ್ದೇಶವು ಸಾಧಿಸಿದರೆ ನಮ್ಮ ಎರಡನೆಯ ಉದ್ದೇಶವು ಅಂದರೆ ನಮ್ಮ ಪತ್ರಿಕೆಯನ್ನು ಮಾದರಿಯ ಪತ್ರಿಕೆಯನ್ನಾಗಿ ಮಾಡುವುದು ಹಾ ಹಾ ! ಎನ್ನುವುದರಲ್ಲಿ ಸಾಧಿಸುತ್ತೆಂದು ನಮಗೆ ತೋರುತ್ತದೆ. ಆದುದರಿಂದ, ಜಯಕರ್ನಾಟಕದ ಬಗ್ಗೆ ಅಭಿಪ್ರಾಯವನ್ನು ನಿರ್ಣಯಿಸುವವರು ಈ ನಮ್ಮ ಗುರಿಗಳನ್ನು ಲಕ್ಷ್ಯದಲ್ಲಿ ತಂದು ಅಭಿಪ್ರಾಯಪಡಬೇಕೆಂದು ನಮ್ಮ ಪ್ರಾರ್ಥನೆ. ಎರಡೂ ಉದ್ದೇಶಗಳು ಸಮನಾಗಿಯೇ ಪೂರ್ಣವಾಗಿ ಸಫಲವಾಗುವ ದಿವಸಗಳು 'ಜಯಕರ್ನಾಟಕ'ಕ್ಕೆ ತೀವ್ರವೇ ಬರಲೆಂದು ಹಾರೈಸುವೆವು.

**ಜಯಕರ್ನಾಟಕದ ಸಾಧನ**—ಮೇಲ್ಕಾಣಿಸಿದ ಸಾಧ್ಯವನ್ನು ಸಾದಿಸುವುದಕ್ಕೆ ನಾವು ಭಿನ್ನ ಭಿನ್ನ ಕಾಲಕ್ಕೆ ಭಿನ್ನ ಭಿನ್ನ ಸಾಧನಗಳನ್ನು ಕೈಕೊಳ್ಳಬೇಕಾಗುವುದು. ಆ ಪ್ರಕಾರ ನಾವು ಮೇಲಿಂದಮೇಲೆ ನಮ್ಮ ಧೋರಣದಲ್ಲಿ ಅಲ್ಪಸ್ವಲ್ಪ ಬದಲು ಮಾಡುತ್ತಲೇ ಬಂದಿರುವೆವು. ಮೊದಲಿನ ಒಂದೆರಡು ವರ್ಷ, ಉತ್ಕೃಷ್ಟವಾದ ಲೇಖಗಳನ್ನು ಬಂಗಾಲೀ ಮರಾಠೀ ಮುಂತಾದ ಭಾಷೆಗಳೊಳಗಿಂದ ಭಾಷಾಂತರಿಸಿದವುಗಳನ್ನು ವಿಶೇಷ ಹಾಕಿದೆವು. ಕನ್ನಡಿಗರಲ್ಲಿ ಲೇಖಕ ವರ್ಗವು ದೊಡ್ಡದಿದ್ದಿಲ್ಲ. ಅವನ್ನು ಬೆಳಿಸುವುದಕ್ಕೋಸ್ಕರ, ಭಾಷೆಯ ಕಡೆಗೆ ವಿಶೇಷ ಲಕ್ಷಕೊಡದೇ (ಏಕೆಂದರೆ ಅನೇಕರಿಗೆ ಬರೆಯುವ ಇಚ್ಛೆ ಮತ್ತು ಶಕ್ತಿಯಿದ್ದರೂ ಭಾಷೆಯ ಸಂಸ್ಕಾರವಿಲ್ಲದ ಮೂಲಕ ಅಷ್ಟು ಶುದ್ಧವಾದ ಭಾಷೆಯಲ್ಲಿ ಬರೆಯಲಿಕ್ಕೆ ಅವರಿಗೆ ಬರುತ್ತಿದ್ದಿಲ್ಲ.) ಅನೇಕ ಲೇಖಗಳನ್ನು ಆದಷ್ಟು ಮಟ್ಟಿಗೆ ನಾವೇ ಸಂಸ್ಕಾರ ಮಾಡಿ ಹಾಕಿದೆವು. ಒಂದು ಕಡೆಯ ಭಾಷೆಯ ಶೈಲಿಯು ಮತ್ತೊಂದು ಕಡೆಯವರಿಗೆ ತಿಳಿದುಕೊಳ್ಳಲಿಕ್ಕೆ ಮೊದಲು ಮೊದಲು ತುಸು ಕಠಿಣವೆನಿಸಿದರೂ ಅದನ್ನು ಇದ್ದಕ್ಕಿದ್ದಂತೆಯೇ ಹಾಕಿ ತಿಳಿದುಕೊಳ್ಳುವ ರೂಢಿಯನ್ನು ಮಾಡಿಸಿದೆವು. ಮೊದಲು ಮೊದಲು ಕೆಲವು ದಿವಸ, "ಮೈಸೂರಿನವರ ಲೇಖಗಳನ್ನೇ ಮುದ್ರಿಸಿ ನೀವು ನಮ್ಮ ತಲೆ ಚಿಟ್ಟನ್ನು ಎಬ್ಬಿಸುತ್ತೀರಿ." ಎಂದು ಇತ್ತ ಕಡೆಯವರು ಗುಣಗುಟ್ಟಿದರು. "ಉತ್ತರ ಕರ್ನಾಟಕದ ಮರಾಠಿ ಮಿಶ್ರಿತ ಭಾಷೆಯನ್ನು ಹಾಕಿ ನೀವು ನಮ್ಮ ಭಾಷೆಯನ್ನು ಕೆಡಿಸಿಬಿಡುತ್ತೀರಿ" ಎಂದು ಮಿಕ್ಕ ಕಡೆಯವರು ನಮ್ಮನ್ನು ದೂರಿದರು. ಆದರೆ, ಈಗ ಅದು ಎಷ್ಟೋ ಮಟ್ಟಿಗೆ ನಿಂತಿದೆ. ಸಾರಾಂಶ, ನಾವು ಇದೇ ಬಗೆಯ ಅನೇಕ ಸಾಧನಗಳನ್ನು ಕೈಕೊಂಡು ನಮ್ಮ ಮುಖ್ಯ ಕಾರ್ಯವನ್ನು ಸಾಧಿಸಬೇಕೆನ್ನುತ್ತೇವೆ. ಅರ್ಥಾತ್ 'ಜಯಕರ್ನಾಟಕ'ದ ಧೋರಣವು ಈ ದೃಷ್ಟಿಯಿಂದ ಕಾಲಕಾಲಕ್ಕೆ ಬದಲಾಗುತ್ತ ಹೋಗುವದೆಂಬದನ್ನು ವಾಚಕರು ಮರೆಯಬಾರದು.

**ಅಂತರಂಗಸೌಂದರ್ಯ**—ನಮ್ಮ ಎರಡನೆಯ ಉದ್ದೇಶವನ್ನು ಸಫಲಗೊಳಿಸುವುದಕ್ಕೋಸ್ಕರ ನಾವು ಕರ್ನಾಟಕದಲ್ಲಿ

ಹೊಸದೊಂದು ಲೇಖಕವರ್ಗವನ್ನೇ ಸಿದ್ಧಪಡಿಸಬೇಕಾಯಿತು. ಏಕೆಂದರೆ, ಮಿಕ್ಕ ಪ್ರಾಂತಗಳಲ್ಲಿ ಇದ್ದಂತೆ, ನಮ್ಮ ದೇಶದಲ್ಲಿ ಲೇಖನ ವ್ಯವಸಾಯವನ್ನುಮಾಡುವ ಲೇಖಕರು ವಿಶೇಷವಾಗಿಲ್ಲ. 'ಜಯಕರ್ನಾಟಕ'ವು ಹೊರಡುವ ಮುಂಚೆ ಇದ್ದ ಮಾಸಪತ್ರಿಕೆಗಳೆಂದರೆ ವಾಗ್ಭೂಷಣ, ಕರ್ನಾಟಕ ಸಾಹಿತ್ಯ ಪರಿಷತ್ ಪತ್ರಿಕೆ ಪ್ರಬುದ್ಧ ಕರ್ನಾಟಕ, ಸದ್ಬೋಧಚಂದ್ರಿಕೆ, ಆರೋಗ್ಯಚಂದ್ರಿಕೆ ಇವೇ ಮುಂತಾದವುಗಳು ಮೊದಲಿನ ಮೂರು ಸಂಸ್ಥೆಗಳಿಂದ ಹೊರಟ ಪತ್ರಿಕೆಗಳು, ಮತ್ತು ವಿಶೇಷವಾಗಿ ವಾಙ್ಮಯವನ್ನು ಮಾತ್ರವೇ ಬೆಳಸುವುದಕ್ಕೋಸ್ಕರ ಹುಟ್ಟಿದ ಪತ್ರಿಕೆಗಳು. ಸದ್ಬೋಧಚಂದ್ರಿಕೆಗೂ ಸಂಸ್ಥೆಯ ಬೆಂಬಲ ಮತ್ತು ಸಾಮಾನ್ಯಜನರಲ್ಲಿ ಅದು ವಾಚನಾಭಿರುಚಿಯನ್ನು ಹುಟ್ಟಿಸುವುದಕ್ಕೆ ಹೊರಟ ಪತ್ರಿಕೆ. ಆರೋಗ್ಯಚಂದ್ರಿಕೆಯು ಮಾತ್ರ ವೈಯಕ್ತಿಕ ಪ್ರಯತ್ನದಿಂದ ಹೊರಟಪತ್ರಿಕೆ. ಆದರೆ ಅದರ ಕ್ಷೇತ್ರವು ವಿಶಿಷ್ಟವಾದದ್ದು. ಈ ಪ್ರಕಾರ ಪತ್ರಿಕೆಗಳ ಸ್ಥಿತಿಯಿತ್ತು. ಸುವಾಸಿನಿ, ಕೃಷ್ಣಸೂಕ್ತಿ ಮಧುರವಾಣಿ, ಸಚಿತ್ರ ಭಾರತ ಮುಂತಾದ ಪತ್ರಿಕೆಗಳು ಉತ್ಕೃಷ್ಟವಾದ ಲೇಖಗಳನ್ನು ಮುದ್ರಿಸಿ ಪ್ರಸಿದ್ಧಿಗೆ ಬಂದಿದ್ದವು. ಆದರೆ ಅವು ಮೃತವಾಗಿದ್ದವು. ಇದಲ್ಲದೆ, ಇವೆಲ್ಲ ವಿಶಿಷ್ಟ ಪ್ರಾಂತಗಳ ಪತ್ರಿಕೆಗಳಾಗಿದ್ದವು. ಆದ ಕಾರಣ ಅಖಂಡ ಕರ್ನಾಟಕದ ಪತ್ರಿಕೆಯೊಂದು ಬೇಕಾಗಿತ್ತು. ಆ ಕೊರತೆಯನ್ನು 'ಜಯಕರ್ನಾಟಕ'ವು ಪೂರೈಸಲೆತ್ನಿಸಿದೆ. ಸರ್ವಭಾಗಗಳ ಲೇಖಕರಿಗೆ ಅವಕಾಶಕೊಡುವ ಉದ್ದೇಶದಿಂದಲೇ ಅದನ್ನು ಎಲ್ಲಕ್ಕೂ ದೊಡ್ಡ ಪತ್ರಿಕೆಯಾಗಿ ಹೊರಡಿಸಿದೆವು. ಅದಕ್ಕೆ ಸಾಕಷ್ಟು ಲೇಖಗಳು ಸಿಕ್ಕುತ್ತವೆಯೋ ಇಲ್ಲವೋ ಎಂದು ಮುಂಚೆ ಬಹಳ ಅಂಜಿಕೆಯಿತ್ತು. ಆದರೆ ಪುನರ್ಜನ್ಮದಲ್ಲಿ ವಿಶ್ವಾಸವಿದ್ದವರು ಮರಣಕ್ಕೆ ಅಂಜುವುದೇಕೆ ? ಎಂದು ಬಗೆದು ನಮ್ಮ ಯೋಗ್ಯತೆಯಿಲ್ಲದಿದ್ದರೂ ಈ ಮಹಾ ಕಾರ್ಯವನ್ನು ಕೈಕೊಂಡೆವು. ಮತ್ತು ನಮ್ಮ ಸುದೈವದಿಂದ ಈಗ ಲೇಖಕ ವರ್ಗವು ಬೆಳೆಯುಹತ್ತಿದೆ. ಆ ವರ್ಗವನ್ನು ದಿನದಿನಕ್ಕೆ ಹೆಚ್ಚಿಗೆ ವ್ಯಾಪಕವಾಗಿ ಮಾಡಬೇಕೆಂದು ನಮ್ಮ ಉದ್ದೇಶವಿರುವುದರಿಂದಲೇ ನಾವು ಯಾವನೊಬ್ಬ ಲೇಖಕನಿಂದ ವರ್ಷದಲ್ಲಿ ಸಾಮಾನ್ಯತಃ ಮೂರು ಲೇಖಗಳಿಗಿಂತ ಹೆಚ್ಚಿಗೆ ಲೇಖಗಳನ್ನು ಅಪೇಕ್ಷಿಸುವುದಿಲ್ಲವೆಂದು ಪ್ರಕಟಿಸಿರುವೆವು. ಇದರಿಂದ ಲೇಖಕರು ಸ್ವಲ್ಪ ಲೇಖಗಳನ್ನು ಬರೆದರೂ ವಿಶೇಷಪರಿಶ್ರಮಪಟ್ಟು ಲೇಖಗಳನ್ನು ಬರೆಯಬೇಕೆಂದೂ, ಜಾಣರಿದ್ದವರು ಹೆಚ್ಚಿಗೆ ಲೇಖಗಳನ್ನು ಬರೆದರೂ, ಅವರ ಲೇಖಗಳಿಂದ ಮಿಕ್ಕ ಮಾಸಪತ್ರಿಕೆಗಳೂ ಪೋಷಿತವಾಗಬೇಕೆಂದೂ ನಮ್ಮ ಉದ್ದೇಶ. 'ಜಯಕರ್ನಾಟಕ'ದ ಲೇಖಕರು ಕೇವಲ 'ಜಯಕರ್ನಾಟಕ'ದಲ್ಲಿ ಬರೆಯುವುದರಿಂದಲೇ ತೃಪ್ತರಾಗದೆ, ಅವರು ಕರ್ನಾಟಕದ ವಿಧವಿಧದ ಸೇವೆಗಳನ್ನು ಸ್ವತಂತ್ರವಾಗಿ ಕೈಕೊಳ್ಳಬೇಕೆಂದೂ ನಮ್ಮ ಇಚ್ಛೆ. ಆ ಪ್ರಕಾರ, 'ಜಯಕರ್ನಾಟಕ'ದಲ್ಲಿಯ ಮುಖ್ಯ ಮುಖ್ಯ ಲೇಖಕರು ವಿಶ್ವಕರ್ನಾಟಕ, ರಾಷ್ಟ್ರಬಂಧು, ಜನ್ಮಭೂಮಿ. ತಾಯಿನಾಡು, ಸ್ವಧರ್ಮ, ರಂಗಭೂಮಿ, ಮಕ್ಕಳ ಪುಸ್ತಕ ಮುಂತಾದ ಹೊಸ ವಾರ ಮತ್ತು ಮಾಸಪತ್ರಿಕೆಗಳ ಸಂಪಾದಕರಾಗಿ ಕರ್ನಾಟಕದ ಸೇವೆಯನ್ನು ಮಾಡುತ್ತಿರುವುದು, ಜಯಕರ್ನಾಟಕಕ್ಕೆ ಅಭಿಮಾನಾಸ್ಪದವಾದ ಸಂಗತಿಯಾಗಿದೆ, ನವಕರ್ನಾಟಕದ ಸಂಪಾದಕರೂ ಸತ್ಯಾಗ್ರಹೀ; ಖಾದಿ ವಿಜಯಗಳ ಸಂಪಾದಕರೂ, ಶಕ್ತಿ ಮತ್ತು ಶಾರದೆಗಳ ಸಂಪಾದಕರೂ ಇದರಲ್ಲಿ ಲೇಖ ಬರೆದಿರುವರು. ಇವರಲ್ಲಿ ಅನೇಕರು ಜಯಕರ್ನಾಟಕದ ಮುಖ್ಯ ಲೇಖಕರಾಗಿದ್ದುದರಿಂದ, ಜಯಕರ್ನಾಟಕಕ್ಕೆ ಅರ್ಥಾತ್, ಕೆಲವು ದಿವಸ ಲೇಖಗಳ ಕೊರತೆಯಾಗುವುದು ಸಹಜ ಏಕೆಂದರೆ, ಉತ್ಕೃಷ್ಟ ಲೇಖಕವರ್ಗವು ಒಮ್ಮೆಲೆ ಹುಟ್ಟುವದಿಲ್ಲ. ಆದರೂ ಮತ್ತೆ ಹೊಸ ವರ್ಗವನ್ನು ಹುಟ್ಟಿಸ ಬಹುದೆಂಬ ಹುರುಪೂ ನಮಗುಂಟು. ಅವರು ಹೊಸ ಪತ್ರಿಕೆಗಳನ್ನು ಹೊರಡಿಸುವುದೂ ನಮ್ಮ ಮೂಲ ಉದ್ದೇಶಕ್ಕೆ ಅನುಗುಣವಾಗಿಯೇ ಇರುವುದು ಅದರಲ್ಲಿಯೇ ನಮಗೆ ಆನಂದ.

**ಬಹಿರಂಗ ಸೌಂದರ್ಯ**——ಬಹಿರಂಗದಲ್ಲಿಯೂ 'ಜಯಕರ್ನಾಟಕ'ವು ಸುಂದರವಾಗಬೇಕೆಂದು ನಮ್ಮ ಮನೀಷೆ. ಆದುದರಿಂದ ನಾವು ಮೊದಲಿನ ಮೂರು ನಾಲ್ಕು ವರ್ಷ ೪-೫ ಸಾವಿರದ ಹಾನಿಯನ್ನು ಸಹಿಸಿಯೂ ಜಯಕರ್ನಾಟಕವನ್ನು ಸುಂದರವಾಗಿ ಮಾಡಲು ಪ್ರಯತ್ನ ಪಟ್ಟೆವು. ಇಡೀ ಕರ್ನಾಟಕದಲ್ಲಿ ಈ ಅವಧಿಯಲ್ಲಿ ಕನಿಷ್ಟ ಎರಡು ಸಾವಿರ ಚಂದಾದಾರರು ಆಗಬಹುದೆಂದು ನಮ್ಮ ಊಹೆಯಿತ್ತು. ಅದು ಸುಳ್ಳಾಯಿತು. ಸಾವಿರದ ಮನೆಗೂ ಪೂರ್ಣ ಮುಟ್ಟಲಿಲ್ಲ. ಆದುದರಿಂದ, ನಮಗೆ ಕಾಲು ಸವರಿಸಿಕೊಳ್ಳಬೇಕಾಯಿತು. ಆದರೂ ಜಯಕರ್ನಾಟಕವು ಈಗ ದಿನದಿನಕ್ಕೆ ಹೆಚ್ಚಿಗೆ ಲೋಕಪ್ರಿಯವಾಗುವುದರಿಂದಲೂ ಅದು ನಮ್ಮ ಪತ್ರಿಕೆಯೆಂದೇ ಅನೇಕರಿಗೆ

ಭಾವನೆಯಿರುವುದರಿಂದಲೂ ಅವರು ಮುಂದಿನ ವರುಷ ನಮಗೆ ಚಂದಾದಾರರನ್ನು ದೊರಕಿಸಿ ನೆರವಾಗಬಹುದೆಂಬ ಆಶೆಯಿಂದ ಮುಂದಿನ ವರುಷ ಪುನಃ ಈ ವರ್ಷಕ್ಕಿಂತ ೧೨ ಪುಟಗಳನ್ನು ಹೆಚ್ಚುಮಾಡಬೇಕೆಂದೂ ದಪ್ಪ ಕಾಗದಗಳನ್ನು ಹಾಕಿ ಸುಂದರ ವಾಗಿ ಮುದ್ರಿಸಬೇಕೆಂದೂ ನಿರ್ಣಯಿಸಿದ್ದೇವೆ.

ಆದರೆ, ಇಲ್ಲಿ ನಾವು ನಮ್ಮ ವಾಚಕರಿಗೆ ಒಂದು ಮಾತು ಮಾತ್ರ ಪುನಃ ಸ್ಪಷ್ಟವಾಗಿ ಹೇಳಿಬಿಡುತ್ತೇವೆ. ಅದೇ ನೆಂದರೆ ಬಾಹ್ಯಸೌಂದರ್ಯದಲ್ಲಿ ಅವರು ಮಿಕ್ಕಪ್ರಾಂತಗಳ ಮುಖ್ಯ ಪತ್ರಿಕೆಗಳೊಡನೆ ಇಷ್ಟರಲ್ಲಿ ಸರ್ವಥಾ ಹೋಲಿಸಿ ನೋಡಬಾರದು. ಕನಿಷ್ಟ ೫ಸಾವಿರದಿಂದ ೧೦–೧೫ ಸಾವಿರದ ವರೆಗೆ ಚಂದಾದಾರರಿರುವ ಪತ್ರಿಕೆಗಳ ಸಾಟಿ ನಮಗೇತಕ್ಕೆ ! ಈಗ ಅದು ನಮಗೆ ಶಕ್ಯವೇ ಇಲ್ಲ. ನನ್ನು ಅಂತರಂಗ ಸೌಂದ ರ್ಯದಲ್ಲಿ ಜಯಕರ್ನಾಟಕವನ್ನು ಮಿಕ್ಕ ಪ್ರಾಂತಗಳ ಮುಖ್ಯ ಪತ್ರಿಕೆಗಳಿಗೆ ಅವಶ್ಯ ಹೋಲಿಸಿ ನೋಡಬಹುದು. ಕಾಶಿಯಲ್ಲಿ ರುವ ಜಯಕರ್ನಾಟಕದ ಅಭಿಮಾನಿಗಳಾದ ಶ್ರೀ. ಚಿದರೆಮಠದ ವೀರಭದ್ರ ಶರ್ಮರವರು ಆಂಧ್ರ ಪತ್ರಿಕೆಗಳು ನಮ್ಮ ಪತ್ರಿ ಕೆಯ ಲೇಖಗಳನ್ನು ಎತ್ತಿ ಪ್ರಸಿದ್ಧಿಸಿರುತ್ತವೆ ಎಂಬ ಸುದ್ದಿ ಯನ್ನು ಮೊನ್ನೆ ತಿಳಿಸಿರುತ್ತಾರೆ. ಈ ಮಾನವು ಯಾರಿಗೆ? ಅರ್ಥಾತ್, ಜಯಕರ್ನಾಟಕದೊಳಗಿನ ಲೇಖಕರಿಗೆ. ಮೊದಮೊದಲು ಪ್ರಸಿದ್ಧಿಸುತ್ತಿದ್ದ ಅನ್ಯ ಭಾಷೆಯ ಉತ್ಕೃಷ್ಟ ಲೇಖಗಳಿಗಿಂತಲೂ, ಸ್ವಲ್ಪ ಕಡಿಮೆ ತರಗತಿಯವಿದ್ದರೂ ಸ್ವತಂತ್ರ ಮತ್ತು ಸಂಶೋಧಕ ಲೇಖಗಳಿಗೆ ನಾವು ಇತ್ತೀಚಿಗೆ ಏಕೆ ಉತ್ತೇಜನಕೊಡುತ್ತೇವೆಂಬುದರ ಮರ್ಮವು ಈಗ ವಾಚಕರ ಲಕ್ಷದಲ್ಲಿ ಬಾರದೆ ಇರಲಾರದೆಂದು ನಾವು ತಿಳಿಯು ತ್ತೇವೆ.

**ಜಯಕರ್ನಾಟಕದ ದೋಷಗಳು**:–ಮೇಲೆ ಬರೆದ ದೆಲ್ಲವೂ ಮನಸ್ಸಿನೊಳಗಿನ ಮಂಡಿಗೆಗಳಲ್ಲದೆ, ಅವುಗಳಲ್ಲೊಂ ದನ್ನೂ ನಾವು ನಮ್ಮ ಸ್ವಂತ ಮನಸ್ಸಿಗೆ ತಕ್ಕಂತೆ ಕೂಡ ನೆರವೇ ರಿಸಿರುವುದಿಲ್ಲ. ಅಂದಬಳಿಕ, ಅನ್ಯರಿಗೆ ತೃಪ್ತಿಯಾಗುವುದಂತೂ ದೂರೇ ಉಳಿಯಿತು. ನಮ್ಮ ಮನಸ್ಸಿಗೆ ತಕ್ಕಂತೆ ಲೇಖಗಳನ್ನು ಹಾಕಿರುವುದಿಲ್ಲ; ಪ್ರಪಂಚಪರಿಚಯವನ್ನು ಆರಿಸಿರುವುದಿಲ್ಲ, ಪುಸ್ತಕಗಳ ವಿಮರ್ಶೆಯನ್ನು ಮಾಡಿರುವುದಿಲ್ಲ, ಅಥವಾ ಬಿಡಿ ಸುದ್ದಿಗಳನ್ನೂ ಬರೆದಿರುವುದಿಲ್ಲ. ಇವರ ದೋಷವು ಸಂಪೂರ್ಣ ವಾಗಿ ನಮ್ಮ ಕಡೆಗೆ. ಪುರಂದರದಾಸರು ತಮ್ಮ ಪದದಲ್ಲಿ ಹೇಳಿ ದ್ದಂತೆ ನಾವೂ ಮೊದಲು ನಮ್ಮ ತಪ್ಪನ್ನು ಅಭಿಮಾನವಿಲ್ಲದೆ ಒಪ್ಪಲಿಕ್ಕೆ ಕಲಿಯಬೇಕು. ನಮ್ಮ ಅಯೋಗ್ಯತೆಯ ಮೂಲಕ ಅನೇಕ ತಪ್ಪುಗಳಾಗುತ್ತವೆ. ಅವಕ್ಕೆ ಉಪಾಯವೇ ಇಲ್ಲ. ನಮ್ಮ ಆಲಸ್ಯದ ಮೂಲಕ ಅಥವಾ ಅಜ್ಞಾನದ ಮೂಲಕವೂ ಅನೇಕ ತಪ್ಪುಗಳಾಗಿರುತ್ತವೆ. ಕಾರ್ಯಬಾಹುಲ್ಯದ ಮೂಲ ಕವೂ ತಪ್ಪುಗಳಾಗಿರುತ್ತವೆ. ಅವೆಲ್ಲ ತಪ್ಪುಗಳನ್ನು ನಮ್ಮ ಮಿತ್ರರು ಹೊಟ್ಟೆಯಲ್ಲಿ ಹಾಕಿಕೊಂಡು ಮರೆತು ಬಿಡಬೇಕೆಂದು ನಾವು ಸೆರಗೊಡ್ಡಿ ಬೇಡಿಕೊಳ್ಳುತ್ತೇವೆ. ಅವರು ನಮ್ಮನ್ನು ಏಕೆ ಕ್ಷಮಿಸಲೇಬೇಕೆಂಬುದಕ್ಕೆ ಒಂದೇ ಕಾರಣವುಂಟು. ಅದೇನೆಂದರೆ–ನಮ್ಮ ತಪ್ಪುಗಳೆಲ್ಲವೂ ಬುದ್ಧಿಪೂರ್ವಕವಾದ ತಪ್ಪುಗಳಲ್ಲವೆಂಬುದನ್ನು ಮಾತ್ರ ನಾವು ಅಂತಃಕರಣಪೂ ರ್ವಕವಾಗಿ ಹೇಳುತ್ತೇವೆ; ಮತ್ತು ಆದಷ್ಟುಮಟ್ಟಿಗೆ ಮುಂದೆ ಆ ತರಹದ ತಪ್ಪುಗಳಾಗದಂತೆ ಪ್ರಯತ್ನಿಸುತ್ತೇವೆಂದು ಆಶ್ವಾ ಸನ ಕೊಡುತ್ತೇವೆ.

**ವಿವಿಧದೃಷ್ಟಿಯಿಂದ ಲೇಖಗಳ ವರ್ಗೀಕರಣ** – ಲೇಖಗಳಲ್ಲಿ ನಮಗೆ ಎಷ್ಟು ವಿವಿಧರೀತಿಯಿಂದ ಸಮನ್ವಯ ಮಾಡಬೇಕಾಗುತ್ತದೆಂಬುದು ಮೇಲಿನ ಲೇಖದಿಂದ ಗೊತ್ತಾ ಗುವುದು. ಆ ಬಗ್ಗೆ ನಾವು ಹೇಗೆ ಪ್ರಯತ್ನಿಸಿರುವುದೆಂಬುದು ಈ ಕೆಳಗಿನ ಸ್ಥೂಲ ವರ್ಗೀಕರಣದಿಂದ ಗೊತ್ತಾಗುವುದು.

೧. ಜಯಕರ್ನಾಟಕದ ಆರುವರ್ಷಗಳಲ್ಲಿ ಸುಮಾರು ೭೦೦–೭೫೫ ಲೇಖಗಳು ಬಂದಿರುವವು. ಜಯಕರ್ನಾಟಕದ ಪುಟಗಳು ಬಹಳ ಇದ್ದಕಾರಣ ಮುಂಚೆ ನಾಲ್ಕುವರ್ಷ ಲೇಖ ಗಳು ಬಹಳ ಬಂದಿವೆ. ಇತ್ತೀಚಿಗೆ ಕೆಲವು ಪುಟಗಳನ್ನು ಕಡಿಮೆಮಾಡಿದ್ದರಿಂದ ಕಡಿಮೆ ಲೇಖಗಳು ಬಂದಿವೆ. ಅದ ರಿಂದ, ಜಯಕರ್ನಾಟಕವು ತುಸು ಕೊರಗಿದಂತೆ ಕಾಣುತ್ತದೆ.

೨. ಉತ್ತರಕರ್ನಾಟಕದ ಲೇಖಗಳು ಸುಮಾರು ೩೦೦-೩೨೫ ಇರುತ್ತವೆ. ಅಂದರೆ ಪ್ರತಿವರ್ಷ ಸರಾಸರಿ ೫೦ ಲೇಖ ಗಳು ಉತ್ತರಕರ್ನಾಟಕದ ಲೇಖಗಳಿರುತ್ತವೆ. ಮೈಸೂರು ೨೦೦ ಇರುತ್ತವೆ ಅಂದರೆ ವರ್ಷಕ್ಕೆ ಸರಾಸರಿ ೩೦ ಇರುತ್ತವೆ. ಮದ್ರಾಸ ಕರ್ನಾಟಕದವರ ಲೇಖಗಳು ಸುಮಾರು ೧೫೦ ಲೇಖಗಳಿರುತ್ತವೆ ಅಂದರೆ ವರ್ಷಕ್ಕೆ ೨೫ ಇರುತ್ತವೆ. ಇದರ ಮೇಲಿಂದ, ನಾವು ಆದಷ್ಟು ಮಟ್ಟಿಗೆ ಯಾವತ್ತು ಕಡೆಯ ಲೇಖಗಳನ್ನು ತರಿಸುತ್ತೇವೆಂಬುದು ಗೊತ್ತಾಗುವುದು. ಹೈದ್ರಾ ಬಾದ ಮತ್ತು ಕೊಡಗುಗಳಿಂದಲೂ ಲೇಖಗಳೂ ಅನೇಕ ಬಂದಿವೆ. ಅವನ್ನು ಬರಬರುತ್ತ ಹೆಚ್ಚಿಗೆ ಹಾಕಬೇಕೆಂದು ಇಚ್ಛೆ. ಸ್ತ್ರೀಯರ ಲೇಖಗಳೂ ಬಂದಿವೆ. ಆದರೆ ಸಾಕಷ್ಟು

ಇಲ್ಲ. ಬಹಳ ಪ್ರಯತ್ನಪಟ್ಟೆವು. ಇನ್ನೂ ಲೇಖಗಳು ಸಿಕ್ಕಲೊಲ್ಲವು. ಸ್ತ್ರೀಯರಿಗೆ ಸಂಬಂಧಿಸಿದ ವಿಷಯಗಳ ಮೇಲೂ ಲೇಖಗಳು ಬೇಕಾಗಿವೆ.

೩. ಧಾರ್ಮಿಕ ಲೇಖಗಳು ಸುಮಾರು ೮೫ ಅಂದರೆ ಸರಾಸರಿ ವರ್ಷಕ್ಕೆ ೧೪ ಇರುತ್ತವೆ. ರಾಜಕಾರಣ ಮತ್ತು ಅರ್ಥಶಾಸ್ತ್ರದ ಲೇಖಗಳು ಸುಮಾರು ೪೦ ಇರುತ್ತವೆ. ಅಂದರೆ ವರ್ಷಕ್ಕೆ ಸರಾಸರಿ ೬ ಇರುತ್ತವೆ. ವಾಙ್ಮಯದ ಲೇಖಗಳು ೬೫ ಅಂದರೆ ಸರಾಸರಿ ೧೧ ಇರುತ್ತವೆ. ಇತಿಹಾಸ ಚರಿತ್ರೆ ಮುಂತಾದ ಲೇಖಗಳು ಸುಮಾರು ಅಷ್ಟೇ ಇರುತ್ತವೆ. ಕಥೆಗಳು ಸುಮಾರು ೪೫ ಅಂದರೆ ಸರಾಸರಿ ವರ್ಷಕ್ಕೆ ೮ ಇರುತ್ತವೆ. ಶಾಸ್ತ್ರೀಯ ಲೇಖಗಳೂ ವಿವಿಧಲೇಖಗಳೂ ಸಾಕಷ್ಟು ಇರುವುದಿಲ್ಲ. ಧರ್ಮಸಂಬಂಧದ ಲೇಖಕರು ತೀರ ಕಡಿಮೆ. ರಾಜಕಾರಣ ಮತ್ತು ಅರ್ಥಶಾಸ್ತ್ರದ ಭಾರವಂತೂ ಬಹುಶಃ ಶ್ರೀ. ಗುರುರಾವ ವಾಳವೇಕರ ಇವರೊಬ್ಬರ ಮೇಲೆಯೇ ಬಿದ್ದಿದೆ. ಮಿಕ್ಕಲೇಖಕರು ಅವರ ಭಾರವನ್ನು ತೀವ್ರ ಹಗುರು ಮಾಡಬೇಕೆಂದು ಪ್ರಾರ್ಥನೆ. ಇನ್ನು ಮುಂದೆ, ರಾಜಕಾರಣದ ಲೇಖಗಳನ್ನು ಹೆಚ್ಚಿಗೆ ಹಾಕುವೆವು. ಶಾಸ್ತ್ರೀಯ ವಿಷಯದ ಮೇಲೆ ಇತ್ತೀಚಿಗೆ ಉತ್ಕೃಷ್ಟ ಲೇಖಕರು ದೊರೆತಿರುವರು. ಸಂಗೀತಶಾಸ್ತ್ರದಮೇಲೂ ಒಬ್ಬಿಬ್ಬರು ದೊರೆತಿರುವರು. ಭಾಷಾಂತರಗಳಿಗಿಂತಲೂ ಮೂಲಲೇಖಗಳಿಗೆ ಮನ್ನಣೆ ಹೆಚ್ಚೆಂಬುದನ್ನು ಮರೆಯಬಾರದು. ಇವಲ್ಲದೆ ೪-೫ಪುಟಗಳಿಗಿಂತ ಲೇಖವು ದೊಡ್ಡದಿರಬಾರದು. ಪ್ರತಿಯೊಬ್ಬರಿಗೂ ತನ್ನ ಲೇಖವು ಎಷ್ಟೇ ದೊಡ್ಡದಿದ್ದರೂ ಒಮ್ಮೆಲೆ ಪೂರ್ಣ ಬರಬೇಕೆಂದೂ ತೀವ್ರವೇ ಬರಲಿಕ್ಕೇಬೇಕೆಂದೂ ಇಚ್ಛೆ. ಅವರು ಸಂಪಾದಕರ ತೊಂದರೆಗಳ ಕಡೆಗೆ ದಯವಿಟ್ಟು ಚಿತ್ತಕೊಡಬೇಕು.

೪. ಯಾವತ್ತು ಮುಖ್ಯ ಮತದವರು ಯಾವತ್ತು ಮುಖ್ಯ ಮತಗಳ ಮೇಲೆ ಲೇಖ ಬರೆದಿರುವರು. ಅದ್ವೈತಮತದಮೇಲೆ ಸುಮಾರು ೨೦, ವಿಶಿಷ್ಟಾದ್ವೈತದ ಬಗ್ಗೆ ೩, ದ್ವೈತಮತದ ಬಗ್ಗೆ ೪, ವೀರಶೈವಮತದ ಬಗ್ಗೆ ೩೫, ಬೌದ್ಧಮತದ ಬಗ್ಗೆ ೮, ಜೈನಮತದಬಗ್ಗೆ ೬ ಕ್ರಿಶ್ಚಿಯನ್ನ ಮತದ ಬಗ್ಗೆ ೭ ಹೀಗೆ ಲೇಖಗಳು ಬಂದಿವೆ. ಇದರಿಂದ ನಮಗೆ ಇನ್ನು ಯಾವತರಹದ ಲೇಖಗಳ ಕೊರತೆಯಿರುವುದೆಂಬುದು ತಾನೇ ಗೊತ್ತಾಗುವುದು.

೫ ಸಾಹಿತ್ಯಲೋಕ— ಪುಸ್ತಕಗಳ ವಿಮರ್ಶೆಯಲ್ಲಿ ನಾವು ಇಂದಿನವರೆಗೆ ಬಹಳ ಉದಾರ ಧೋರಣವನ್ನಿಟ್ಟಿದ್ದೆವು. ಗ್ರಂಥಗಳು ೨ನೇ ಆವೃತ್ತಿಯನ್ನೇ ಕಾಣದಿರುವ ಕಾಲದಲ್ಲಿ ಕಠಿಣ ವಿಮರ್ಶೆಯಿಂದೇನು ಪ್ರಯೋಜನ? ಅಲ್ಲದೆ, ಬೇರೆಬೇರೆ ಭಾಗಗಳ ಲೇಖಗಳಿಗೂ ಗ್ರಂಥಗಳಿಗೂ ನಾವು ಬೇರೆ ಬೇರೆ ಅಳತೆಗಳನ್ನು ಉಪಯೋಗಿಸುತ್ತೇವೆ. ಇನ್ನುಮುಂದೆ, ]ಕೆಲವು ಪುಸ್ತಕಗಳ ವಿಮರ್ಶೆಯನ್ನು ಮಾತ್ರವೇ ವಿಸ್ತಾರವಾಗಿ ಮಾಡಬೇಕೆಂದು ಯೋಚಿಸಿರುವೆವು.

**ಬಿಡಿನುಡಿಗಳು** — ಈ ವಿಷಯದಲ್ಲಿ ನಾವು ಅತಿಶಯ ದೋಷಕ್ಕೆ ಪಾತ್ರರಿದ್ದೇವೆ. ನಮ್ಮ ಬಿಡಿನುಡಿಗಳನ್ನು ಜನರು ಹೆಚ್ಚೆಚ್ಚು ಬಯಸುತ್ತಾರೆಂದು ನಮಗೆ ಅನೇಕರು ಸೂಚಿಸಿರುವರು. ಇದು ಸಂತೋಷ, ನಮ್ಮ ಮನಸ್ಸಿನಲ್ಲಿಯೂ ಹೆಚ್ಚಿಗೆ ಬರೆಯಬೇಕೆಂದಿದೆ ಆದರೆ ಮಾಡುವದೇನು ? ಕೆಲವು ವೇಳೆ ಲೇಖಕರನ್ನು ಸಮಾಧಾನಪಡಿಸುವದಕ್ಕೋಸ್ಕರ ಸಂಕೋಚ ಮಾಡಿದರೆ ಇತ್ತೀಚಿಗೆ ಪುಟಗಳು ಕಡಿಮೆಯಾಗಿರುವ ಕಾರಣ ಉಪಸಂಪಾದಕರೇ ನಮ್ಮನ್ನು ಒತ್ತಿ ಸರಿಸಿರುವರು. ಆದರೆ ಇನ್ನು ಮುಂದೆ, ನಿಜವಾಗಿ ಹೆಚ್ಚಿಗೆ ಬರೆಯುವೆವೆಂದು ಆಶ್ವಾಸನಕೊಡುತ್ತೇವೆ. ನಾವು ಹಿಂದಕ್ಕೆ ಕರ್ಮವೀರ ಪತ್ರದಲ್ಲಿ ಲೇಖಗಳನ್ನು ಬರೆದಂತೆ, ಜಯಕರ್ನಾಟಕದಲ್ಲಿಯೂ ಸ್ವತಂತ್ರ ಲೇಖಗಳನ್ನು ಬರೆಯಬೇಕೆಂದು ಹಲವರು ಒತ್ತಿ ಒತ್ತಿ ಸೂಚಿಸಿರುವರು. ಅವರು ನಮ್ಮನ್ನು ಹೀಗೆ ಗೌರವಿಸಿದಬಗ್ಗೆ ನಾವು ಅವರಿಗೆ ಋಣಿಯಾಗಿರುವೆವು. ಆದರೆ, ಅವರ ಇಚ್ಛೆಯನ್ನು ಪೂರೈಸುವದಾಗುವುದಿಲ್ಲವೆಂದು ಹೇಳುವುದಕ್ಕೆ ವಿಷಾದವಾಗುತ್ತಿದೆ. ಏಕಂದರೆ ಸಂಪಾದಕರು ಹಾಗೆ ಬರೆಯುವದು ಸಂಪ್ರದಾಯಕ್ಕೆ ವಿರುದ್ಧವಾದುದು, ಅಲ್ಲದೆ, ಸಂಪಾದಕರ ಹೊರೆಯೇ ಅತ್ಯಂತ ಭಾರವಾಗಿರುವಾಗ ಹಾಗೆ ಲೇಖಗಳನ್ನು ಬರೆಯಲಿಕ್ಕೆ ಬಿಡುವೆಲ್ಲಿ ?

ಬಿಡಿನುಡಿಗಳಲ್ಲಿ ನಾವು ಮೇಲ್ಕಾಣಿಸಿದ ಉದ್ದೇಶಗಳಿಗನುಸರಿಸಿರುವುದಷ್ಟೇ ಶಾಶ್ವತಭಾಗವು. ಮಿಕ್ಕದೆಲ್ಲವೂ ಬದಲಾವಣೆ ಹೊಂದಬಹುದು.

ಈ ಪ್ರಕಾರ ನಾವು ಸಂಕ್ಷೇಪವಾಗಿ ಸಿಂಹಾವಲೋಕನವನ್ನು ಮಾಡಿರುವೆವು. ಹೋದ ಸಂಚಿಕೆಯಲ್ಲಿ ನಾವು ಸೂಚನೆ ಕೊಟ್ಟ ಮೇರೆಗೆ ಅನೇಕರು ತಮ್ಮ ಸಲಹೆಗಳನ್ನು ಕಳುಹಿಸಿದ್ದಕ್ಕೋಸ್ಕರ ಅವರ ಉಪಕಾರವನ್ನು ಸ್ಮರಿಸುವುದು ಅವಶ್ಯವು. ಎಲ್ಲರೂ ಇದೇ ಪ್ರಕಾರ ಸಲಹೆಗಳನ್ನು ಕೊಟ್ಟು ನಮ್ಮಿಂದ ದೇಶಸೇವೆಯನ್ನು ಮಾಡಿಸಿಕೊಳ್ಳಬೇಕೆಂಬುದೇ ನಮ್ಮ ಕೊನೆಯ ಪ್ರಾರ್ಥನೆ.

ಮೇಲಿನ ವಿವೇಚನೆಯ ಮೇಲಿಂದ ಒಂದು ಮಾತು ಸ್ಪಷ್ಟವಾಗುವದಿಲ್ಲವೆ ? ಅದೇನೆಂದರೆ ನಾವು ನಿಮಿತ್ತಮಾತ್ರರೆಂಬುದು. ಈ ಕರ್ನಾಟಕದ ಜನತೆಯ ಬೆಂಬಲವಿಲ್ಲದೆ ನಾವು ಏನನ್ನೂ ಮಾಡಲು ಅಸಮರ್ಥರಲ್ಲವೆ ? ಆದ್ದರಿಂದಲೇ ನಾವು ಪ್ರತಿನಿತ್ಯದಲ್ಲಿಯೂ नाहंकर्ता हरिः कर्ता ಎಂಬ ವಚನವನ್ನು ಸ್ಮರಿಸುತ್ತೇವೆ. **ಜಯಕರ್ನಾಟಕ**




"**Practical Chemistry**" (For Intermediate Science Students) By N. M. Shah B. Sc, Karnatak College, Dharwar Published by the Student's Own Book Depot, Dharwar.

[ Parts I and II Price Rs. 2-4-0 ]

--ಗ್ರಂಥಕರ್ತರು ರಸಾಯನ ಶಾಸ್ತ್ರಬೋಧಕರು. ಈ ಪುಸ್ತಕವು ವಿದ್ಯಾರ್ಥಿಗಳಿಗೆ ಬಹಳ ಉಪಯೋಗವುಳ್ಳದ್ದಾಗಿದೆ. ಹುಡುಗರು ಸ್ವತಃ ಪ್ರಯೋಗಗಳನ್ನು ನಡಿಸಿ ಮೂಲತತ್ವಗಳನ್ನೂ ಮಂದಟ್ಟು ಮಾಡಿಕೊಳ್ಳುವುದು ಬಹು ಅವಶ್ಯಕ. ಆದರೆ, ಈ ದೃಷ್ಟಿಯಿಂದ ಬರೆದಿರುವ ಪುಸ್ತಕಗಳು ವಿರಳ. ಆದುದರಿಂದ ಪ್ರಯೋಗಭಾಗದ ಮೇಲೆ ವಿಶದವಾಗಿಯೂ, ಶಂಕೆಗೆ ಆಸ್ಪದವಿಲ್ಲದಂತೆಯೂ ಈ ಪುಸ್ತಕವನ್ನು ಬರೆದಿರುವುದಕ್ಕಾಗಿ ಶ್ರೀಯುತ ಶಹಾರವರು ವಿದ್ಯಾರ್ಥಿಗಳ ಕೃತಜ್ಞತೆಗೆ ಪಾತ್ರರು. ಪುಸ್ತಕವು ಸಾಮಾನ್ಯವಾಗಿ ಎಲ್ಲಾ ವಿಶ್ವವಿದ್ಯಾನಿಲಯಗಳ ಇಂಟರ್‌ಮೀಡಿಯಟ್ ದರ್ಜೆಯವರೂ ಧಾರಾಳವಾಗಿ ಉಪಯೋಗಿಸಬಹುದಾಗಿದೆ. ಸಾಮಾನ್ಯವಾಗಿ ಎಲ್ಲ ಪುಸ್ತಕಗಳಲ್ಲಿರುವಂತಹ ವಿವರಣೆಗಳನ್ನಾಗಲೀ, ಲೆಕ್ಕಾಚಾರ (Calculation) ಗಳನ್ನಾಗಲೀ ಕೊಡದಿರುವುದರಿಂದ ಹುಡುಗರು ಗಿಳಿಪಾಠ ಮಾಡುವ ದುರಭ್ಯಾಸವು ತಪ್ಪಿ ಅವರೇ ಸ್ವತಂತ್ರವಾಗಿ ಪ್ರಯೋಗಗಳ ಪರಿಣಾಮಗಳನ್ನೂ ಮನಗೊಟ್ಟು ನೋಡುವದಕ್ಕೂ ಅವುಗಳಿಗೆ ಸಂಬಂಧಪಟ್ಟ ಗಣಿತವನ್ನೂ ತಾವೇ ಮಾಡುವುದಕ್ಕೂ ಅವಕಾಶವಿದೆ.

ಎರಡನೆಯ ಭಾಗವು ಪದಾರ್ಥಗಳ ಪರೀಕ್ಷೆ (Qualitative Analysis) ಯನ್ನು ಕಲಿಸುತ್ತದೆ. ಈ ವಿಷಯವಾಗಿ ಫೆಂಟನ್ (Feuton) ಮುಂತಾದವರು ಬರೆದಿರುವ ದೊಡ್ಡ ಪುಸ್ತಕಗಳನ್ನು ಇಂಟರ್ ಮೀಡಿಯೆಟ್ ತರಗತಿಯವರು ಓದಿ ಅದರಲ್ಲಿ ತಮಗೆ ಬೇಕಾದಷ್ಟು ಆರಿಸಿಕೊಳ್ಳುವುದು ಕಷ್ಟ. ಈ ಪುಸ್ತಕದಲ್ಲಿ ಇವರಿಗೆ ಬೇಕಾದಷ್ಟನ್ನೂ ಮಾತ್ರ ಒಳ್ಳೆಯ ಪಟ್ಟಿ (Table) ಮತ್ತು ಟಿಪ್ಪಣೆಗಳ ಸಮೇತ ಕೊಟ್ಟಿದೆ.

ಬಿ. ನ. ಶ್ರೀ.

**ತುಲಸಿದಾಸರಾಮಾಯಣ**— ( ಬಾಲಕಾಂಡ ) ಬೆಲೆ. ೨-೮-೦. ಬೆಂಗಳೂರಿನಲ್ಲಿರುವ ಶ್ರೀ. ದ. ಕೃ. ಭಾರದ್ವಾಜರು ಮುಂಚೆ ಸಂಕಲ್ಪ ಮಾಡಿದಂತೆ ಈಗ ಈ ರಾಮಾಯಣದ ಬಾಲಕಾಂಡವನ್ನು ಪ್ರಸಿದ್ಧಿಸಿರುವರು. ಹಿಂದೀ ಭಾಷೆಯಲ್ಲಿ ಶ್ರೀ ತುಲಸೀದಾಸರೆಂಬವರು ಅತ್ಯಂತ ಭಗವದ್ಭಕ್ತರು. ಅವರಿಂದ ರಚಿತವಾದ ರಾಮಾಯಣದ ಆಸ್ವಾದವನ್ನು ಶ್ರೀಭಾರದ್ವಾಜರವರು ಕನ್ನಡಿಗರಿಗೆ ಕೊಟ್ಟಿರುವುದು ಕನ್ನಡಿಗರ ಪುಣ್ಯವೆಂದೇ ತಿಳಿಯಬೇಕು. ಇದರಲ್ಲಿ ಅನೇಕ ಚಿತ್ರಗಳಿರುವುದರಿಂದ ಇದು ಮನೋಹರವಾಗಿದೆ. ಕನ್ನಡಿಗರು ಇಂಥ ಪುಸ್ತಕಗಳಿಗಾದರೂ ಉತ್ತೇಜನ ಕೊಡುವರೋ ಅಥವಾ ಗ್ರಂಥಕರ್ತರ ಕೈಯನ್ನು ನಡುನೀರಿನಲ್ಲಿಯೇ ಬಿಡುವರೋ ?

**ಕೀರ್ತನಕಂಠಾಭರಣ**— (ರಾಮಾಯಣ) ಕನ್ನಡಿಗರೆಲ್ಲರಿಗೂ ಪರಿಚಿತರಾಗಿರುವ ಶ್ರೀ. ಹೊಸಕೇರಿ ಚಿದಂಬರಯ್ಯನವರು ಕೀರ್ತನಕಾರರಿಗೆ ಉಪಯೋಗವಾಗುವ ತೆರದಲ್ಲಿ ಅನೇಕ ಪುಸ್ತಕಗಳನ್ನು ರಚಿಸಿರುವುದು ಸರ್ವರಿಗೂ ಗೊತ್ತಿದೆ. ಈಗ ಅದೇ ರೀತಿಯಲ್ಲಿ ಇವರು ಈ ರಾಮಾಯಣವನ್ನು ರಚಿಸಿರುವರು. ಶ್ರೀ. ಚಿದಂಬರಯ್ಯನವರ ಭಾಷಾಪ್ರೌಢಿಮೆಯು ವಿಲಕ್ಷಣವಾಗಿದೆ. ಕೀರ್ತನಕಾರರು ಮಾತ್ರವೇ ಅಲ್ಲ, ಸರ್ವರೂ ಈ ಪುಸ್ತಕವನ್ನೋದಿ ಆನಂದಪಡಬಹುದಾಗಿದೆ.

**ಕಾಳಿದಾಸ ಮಹಾಕವಿಯು** —ಶ್ರೀ. ಸಿ. ಕೆ. ವೆಂಕಟ ರಾಮಯ್ಯರ ಎಂ. ಎ., ಎಲ್‌ಎಲ್. ಬಿ. ಬೆಂಗಳೂರ. ಇವರು ಪ್ರಬುದ್ಧ ಕರ್ಣಾಟಕದಲ್ಲಿ ಪ್ರಸಿದ್ಧವಾದ ಈ ಪ್ರಬಂಧವನ್ನು ಈಗ ಪುಸ್ತಕರೂಪದಲ್ಲಿ ಪ್ರಕಟಿಸಿರುವರು. ಶ್ರೀ. ಸಿ. ಕೆ. ವೆಂಕಟರಾಮಯ್ಯನವರು ಚಿಕಿತ್ಸಕ ಬುದ್ಧಿಯ ಲೇಖಕರು. ಕೇವಲ ಅಂಥ ಪರಂಪರೆಯನ್ನು ಅನುಸರಿಸಿ ಬರೆಯುವ ಲೇಖಕರಲ್ಲ. ಕಾಳಿದಾಸ ಕವಿಯ ಗ್ರಂಥಗಳಲ್ಲಿಯ ಶೃಂಗಾರ ರಸವು ಕೇವಲ ಸಾತ್ವಿಕವಾದದ್ದೆಂಬದನ್ನು ಅವರು ಅನೇಕ ಆಧಾರ ಗಳನ್ನು ಕೊಟ್ಟು ಸಿದ್ಧಪಡಿಸಿರುವರು. ಅವರ ಪದ್ಧತಿಯನ್ನು ನಮ್ಮ ಕನ್ನಡಿಗರು ಅನುಸರಿಸಿ ಸಂಸ್ಕೃತ ಮತ್ತು ಇಂಗ್ಲೀಷ ಮಹಾಗ್ರಂಥಗಳೊಳಗಿನ ಸವಿಯನ್ನು ಕನ್ನಡಿಗರಿಗೆ ಉಣಿಸಬೇಕು.

**ಸತ್ಯಶೋಧನೆ**—(ಮೂರನೇ ಭಾಗ ಬೆಲೆ. ೦—೯—೦ ಪ್ರಕಾಶಕರು ವಿಶ್ವಕರ್ಣಾಟಕ ಬೆಂಗಳೂರ). ಮಹಾತ್ಮಾಗಾಂಧಿಯವರ ಆತ್ಮಚರಿತ್ರೆಯು ಕನ್ನಡದಲ್ಲಿ ಪ್ರಕಟವಾಗುತ್ತಿರುವುದು ಕನ್ನಡಿರ ಸುದೈವವು. ಮಹಾತ್ಮರು ಅದ್ಭುತ ಪ್ರಯೋಗ ಕಾರರೆಂಬದು ಅವರ ಜೀವನ ಚರಿತ್ರದಿಂದ ಗೊತ್ತಾಗುವುದು. ಈ ಪುಸ್ತಕದ ಭಾಷೆಯು ಪ್ರೌಢವಾಗಿದೆ.

**ಲೋಕಮಾನ್ಯ ಟಿಳಕರು**—ಶ್ರೀ. ತುಕಾರಾಮ ಕೋಪರಡೆ (ಬನಹಟ್ಟಿ ಬೆಲೆ. ೦—೨—೦ ಇದರಲ್ಲಿ ಲೋಕಮಾನ್ಯರ ಚರಿತ್ರವು ಸುಲಭವಾದ ಪದ್ಯಗಳಲ್ಲಿ ಗ್ರಥಿತವಾಗಿದೆ.

**ಪ್ರಥಮ ಚಿಕಿತ್ಸೆ**— ( ಲೇ. ಡಾ. ಯು. ರಾಮರಾಯರು ಮದ್ರಾಸ ) ಇದರಲ್ಲಿ ಕರ್ನಾಟಕದ ಸೇವೆಯನ್ನು ಸತತವಾಗಿ ಮಾಡುತ್ತಿರುವ ಡಾಕ್ಟರ ಯು. ರಾಮರಾಯರು ಪ್ರಸವಕಾಲದಲ್ಲಿ ಮಾಡತಕ್ಕ ಯೋಜನೆಗಳನ್ನು ಸುಲಭವಾಗಿ ತಿಳಿಸಿ ಹೇಳಿರುವರು. ಹೆಂಗಸರಂತೂ ಮೊದಲು ಓದಬೇಕು. ಹಳ್ಳಿಯವರು ಇದನ್ನು ಅವಶ್ಯವಾಗಿ ಸಂಗ್ರಿಸತಕ್ಕದ್ದು. ಈ ವಿಷಯದಲ್ಲಿ ಪಟ್ಟಣಿಗರಲ್ಲಿ ಕೂಡ ಡಾಕ್ಟರರ ಮೇಲೆ ಅವಲಂಬಿಸದೆ ಈ ಪುಸ್ತಕವನ್ನು ಮಾರ್ಗದರ್ಶಿಯಾಗಿ ಇಟ್ಟುಕೊಳ್ಳಬಹುದು.

**ರಂಗಭೂಮಿ**—ಈ ಮಾಸಪತ್ರಿಕೆಗೆ ಅನೇವರ್ಷವು ಪ್ರಾರಂಭವಾಗಿದೆ. ದಿನದಿನಕ್ಕೆ ಇದು ಹೆಚ್ಚು ಸುಂದರವಾಗಿಯೂ ಮನೋರಂಜಕವಾಗಿಯೂ ಹೊರಡುತ್ತಿರುವುದು. ನಾಟ್ಯಕಲೆಯ ಹೀನಾವಸ್ಥೆಯನ್ನು ಹೋಗಲಾಡಿಸುವುದು ಎಷ್ಟು ಅವಶ್ಯವಿರುತ್ತತೆಂಬದನ್ನು ಹೇಳುವ ಅವಶ್ಯಕತೆಯಿಲ್ಲ. ಕನ್ನಡದಲ್ಲಿ ಉತ್ಕೃಷ್ಟವಾದ ನಾಟಕಗಳ ಕೊರತೆಯು ಅತಿಶಯವಾಗಿರುವುದು. ಅದು ಈ ಪತ್ರಿಕೆಯಿಂದ ಬಲುಮಟ್ಟಿಗೆ ದೂರಾಗುವುದೆಂದು ಆಶಿಸಲು ಅಡ್ಡಿ ಇಲ್ಲ.

**ಜಗನ್ನಾಥದಾಸರ ಚರಿತ್ರೆ**— ( ಲೇ. ಪಾಂಡುರಂಗ ಕಸ್ಬೆ. ರಾಯಚೂರು ಬೆಲೆ. ೦—೩—೦ ನಿಜಾಂ ಕರ್ನಾಟಕದಲ್ಲಿ ಕನ್ನಡ ಭಾಷಾಭಿಮಾನವು ದಿನದಿನಕ್ಕೆ ಬೆಳೆಯುತ್ತಿರುವುದಕ್ಕೆ ಈ ಪುಸ್ತಕವು ಸಾಕ್ಷಿಯು. ಇದರಲ್ಲಿ ಶ್ರೀ. ಜಗನ್ನಾಥದಾಸರ ಚರಿತ್ರೆಯು ಭಾಮಿನಿಷಟ್ಪದಿಯಲ್ಲಿ ಕಾವ್ಯಮಯವಾಗಿ ವರ್ಣಿಸಲ್ಪಟ್ಟಿದೆ. ಮಿಕ್ಕಭಾಗದ ಕನ್ನಡಿಗರು ಇದಕ್ಕೆ ಪ್ರೋತ್ಸಾಹನ ಕೊಟ್ಟು ಹಿಂದುಳಿದ ಈ ಕರ್ನಾಟಕದ ಭಾಗವನ್ನು ತೀವ್ರವೇ ಮುಂದಕ್ಕೆ ತರಬೇಕು. ಕವಿತ್ವವು ಇಂಥದೊಂದು ಭಾಗದ ಸೊತ್ತಲ್ಲ. ಅಲ್ಲಿಯೂ ಅನೇಕ ಕವಿಗಳು ಹುಟ್ಟೇ ಹುಟ್ಟುವರು. ಅವರಿಗೆ ಯೋಗ್ಯ ಭಾಷಾಸಂಸ್ಕಾರವು ಮಾತ್ರ ಬೇಕಾಗಿದೆ.

**ತೊಳೆದ ಮುತ್ತು**—(ಧಾರವಾಡದ ಕನ್ನಡಿಗರ ಕೂಟದವರು ಮುದ್ರಿಸಿದ ಕಥೆ. ಬೆಲೆ. ೧॥ ಆಣೆ) ವೈ. ಕೆರೂರ ವಾಸುದೇವಾಚಾರ್ಯರು ಬರೆದ ಈ ಸುಂದರ ಕಥೆಯನ್ನು ಈ ಕೂಟದವರು ಮುದ್ರಿಸಿದ್ದಾರೆ. ಚಿಕ್ಕವರಿಗೂ ದೊಡ್ಡವರಿಗೂ ಸರಿಯಾಗಿಯೇ ಮನೋರಂಜಕವಾಗುವ ಕಥೆ. ಈ ಚಿಕ್ಕ ಕೂಟಕ್ಕೆ ಪ್ರೋತ್ಸಾಹನಕೊಡುವುದು ಯಾವತ್ತು ಹಿರಿಯರ ಕರ್ತವ್ಯ.

**ಶ್ರೀಕೃಷ್ಣ**—(ಮಾಸಪತ್ರಿಕೆ ಸಿ. ಬಿ. ಆರ್. ಚಕ್ರವರ್ತಿ ಮೈಸೂರ ವಾ. ಬೆಲೆ. ೨—೪—೦) ಸಂಪಾದಕರ ತಂದೆಯವರು ಹಿಂದಕ್ಕೆ ಹೊರಡಿಸಿದ್ದನ್ನು ಪುನಃ ಹೊರಡಿಸಿ ಭಾಷಾಸೇವೆಯನ್ನೂ ಧರ್ಮಸೇವೆಯನ್ನೂ ಮಾಡಲು ಈ ಸಂಪಾದಕರು ಉದ್ಯುಕ್ತರಾಗಿರುವರು. ಅವರ ಉದ್ದೇಶವನ್ನು ಸಫಲಗೊಳಿಸುವ ಭಾರವು ಕನ್ನಡಿಗರನ್ನೂ ಕೂಡಿದೆ ಎಂಬುದನ್ನು ಮರೆಯಬಾರದು.

**श्री तिलकसूक्ति शतकम्**—( ಲೇ. ಶ್ರೀ. ಚಿಂತಾಮಣಿ ಸಹಸ್ರಬುದ್ಧೆ ಧಾರವಾಡ ಬೆಲೆ. ೦-೪-೦) ಇದರಲ್ಲಿ ಲೋಕಮಾನ್ಯರ ಸೂಕ್ತಿಗಳು ಸಂಸ್ಕೃತ ಪದ್ಯಗಳಲ್ಲಿ ಸುಲಭವಾಗಿ ವಿವರಿಸಲ್ಪಟ್ಟಿವೆ. ಸಂಸ್ಕೃತವೇ ನಮ್ಮ ನಿಜವಾದ ರಾಷ್ಟ್ರೀಯ ಭಾಷೆಯು. ಇದು ಇನ್ನೂ ಜೀವವಂತವಿದೆಂಬುದು ಇಂಥ ಪುಸ್ತಕಗಳಿಂದ ಗೊತ್ತಾಗುತ್ತದೆ.

**ಕರ್ನಾಟಕ ಬಾಲಬೋಧೆ**—(ಲೇ. ಪಿ. ಆರ್. ಕರಿಬಸವಶಾಸ್ತ್ರಿ ಮೈಸೂರು. ಬೆಲೆ. ೦-೪-೦) ಇದು ಮೈಸೂರಿನವರು ಬರೆದ ಬಾಲಬೋಧೆಯ ಪುಸ್ತಕವು. ಅತ್ತಕಡೆಯ ಭಾಷೆಯು ಮಾದರಿಯು ಗೊತ್ತಾಗುವುದು. ಇದರಲ್ಲಿ ದೇಶ ಸೇವೆಯೇ ಮುಂತಾದ ಪಾಠಗಳು ಬಹಳ ನೀರಸವಾಗಿವೆ. ಕರ್ನಾಟಕದ ಬಗ್ಗೆ ಪಾಠಗಳನ್ನು ಹಾಕುವುದು ಈಗಿನ ಕಾಲದಲ್ಲಿ ಅವಶ್ಯ.

**ಗೋಸಂರಕ್ಷಣೆ**—ಲೇ. ಶ್ರೀ. ವಡವಿ ಭೀಮಾಚಾರ್, ತುಮ್ಮಿನಕಟ್ಟಿ ಇದು ಈಗಿನ ಕಾಲದಲ್ಲಿ ಅವಶ್ಯವಾಗಿ ಓದಿ ಮನನ ಮಾಡತಕ್ಕ ಪ್ರಬಂಧ. ಆಕಳ ಮಹತ್ವವು ಸರ್ವವಿಧದಿಂದಲೂ ವಿಚಾರಮಾಡಲ್ಪಟ್ಟಿದೆ. ದಾವಣಗೆರೆಯ ಪ್ರಾಣದಯಾ ಸಂಘವವರು ಭೂತದಯೆಯ ವಿಷಯದಲ್ಲಿ ಮಾಡುತ್ತಿರುವ ಪ್ರಯತ್ನಗಳು ನಿಜವಾಗಿಯೇ ಅಭಿನಂದನೀಯವಾಗಿವೆ. ಅವರೇ ಈ ಪ್ರಬಂಧವನ್ನು ಪ್ರಸಿದ್ಧಿಸಿರುವರು. ಬೇಡಿದವರಿಗೆ ಈ ಪುಸ್ತಕವು ಪುಕ್ಕಟವಾಗಿ ದೊರೆಯುವುದು. ಆದರೂ ನಮ್ಮಲ್ಲಿ ಓದುವವರು ಎಷ್ಟು ಮಂದಿ?

**ವಾಚನ ಪಾಠಮಾಲೆ**—(ಶ್ರೀ. ರಂಗರಾವ ಹಿರೇಕೆರೂರ ಬಿ. ಎ., ವಿಜಾಪುರ. ಬೆ. ೦-೧೨-೦). ಹೊಸಗನ್ನಡದ ಕೆಲವು ಅವತರಣಿಕೆಗಳನ್ನು ಸಂಗ್ರಹಿಸಿದ ಪುಸ್ತಕವಿದು. ವಿಷಯಗಳಲ್ಲಿಯೂ ಭಾಷೆಯಲ್ಲಿಯೂ ವಿವಿಧತೆಯು ಚೆನ್ನಾಗಿಯೇ ಸಾಧಿಸಿದೆ. ಈ ತರಹದ ಪ್ರಯತ್ನಗಳು ಹೆಚ್ಚಿಗೆ ಆಗುವುದು ಅವಶ್ಯ.

**ಸ್ಕಾಂದ ಮಹಾಪುರಾಣ**—(೧ನೆ ಕೇದಾರ ಖಂಡ ಎಂ. ಎಸ್. ಸುಬ್ರಹ್ಮಣ್ಯಶಾಸ್ತ್ರಿ ಬೆಂಗಳೂರ. ಬೆ. ೧-೮-೦). ಇದೊಂದು ಹೊಸ ಮಾದರಿಯ ಪ್ರಯತ್ನ. ಮುಖ್ಯ ಮುಖ್ಯ ಪುರಾಣಗಳು ಕನ್ನಡದಲ್ಲಿ ಭಾಷಾಂತರಿಸಲ್ಪಟ್ಟಿಲ್ಲ. ಇದರ ಭಾಷೆಯು ಸರಳವಾಗಿದೆ. ಮುದ್ರಣವು ಅಂದವಾಗಿದೆ. ಕೆಲವು ಚಿತ್ರಗಳೂ ಸೇರಿಸಲ್ಪಟ್ಟಿವೆ. ಈ ಪುಸ್ತಕವನ್ನು ಮುದ್ರಿಸುವಾಗ ಗ್ರಂಥಕರ್ತರು 'ಪ್ರಕ್ಷಿಪ್ತ'ವೆಂದು ತಮಗೆ ತೋರಿದ ಕೆಲವು ಶ್ಲೋಕಗಳನ್ನು ಭಾಷಾಂತರಿಸದೆ ಬಿಟ್ಟಿರುವರು. ಇದು ಸರಿಯಲ್ಲವೆಂದು ನಮ್ಮ ಅಭಿಪ್ರಾಯ. ಮೂಲವನ್ನು ಇದ್ದದ್ದು ಇದ್ದಂತೆಯೇ ಕೊಟ್ಟು ಅವುಗಳಲ್ಲಿ ತಮಗೆ ಪ್ರಕ್ಷಿಪ್ತವಾಗಿ ತೋರುವ ಭಾಗವನ್ನು, ಕಾರಣಗಳನ್ನು ಕೊಟ್ಟು ಪ್ರಕ್ಷಿಪ್ತವೆಂದು ಹೇಳಬೇಕಲ್ಲದೆ ಬಚ್ಚಿಡಬಾರದು. ಹೀಗೆ ಮಾಡಿದರೆ ವಿದ್ವಜ್ಜನರಿಗೆ ಆ ವಿಷಯವಾಗಿ ಚರ್ಚಿಸಲು ಅನುವು ದೊರೆಯುತ್ತಿದೆ. ಶಾಸ್ತ್ರಿಗಳಿಗೆ ಜನರು ಉತ್ತೇಜನ ಕೊಟ್ಟರೆ ಅವರಿಂದ ಮಿಕ್ಕ ಪುರಾಣಗಳೆಲ್ಲವೂ ಭಾಷಾಂತರಿಸಲ್ಪಡಬಹುದು.

**Therapeutics (Indian)**—ಮುಂಬಯಿಯಲ್ಲಿಯ ಡಾ. ಡಿ. ವ್ಹಿ ಸಾಂಡು ಎಂಬವರು ಆಯುರ್ವೇದದ ಔಷಧಗಳ ಮಾಹಿತಿಯನ್ನು ಇದರಲ್ಲಿ ಇಂಗ್ಲಿಷ ಭಾಷೆಯಲ್ಲಿ ಕೊಟ್ಟಿರುವರು. ಇದು ವೈದ್ಯರಿಗೂ ಡಾಕ್ಟರರಿಗೂ ಮಾತ್ರವೇ ಉಪಯೋಗವಲ್ಲದೆ ಸಾಮಾನ್ಯರಿಗೂ ಉಪಯೋಗವಾದದ್ದು. ತ್ರಿದೋಷದ ಪಥ್ಯ, ಜೀವತ್ವ (Vitamines) ಇವೇ ಮುಂತಾದ ವಿಷಯುಗಳು ಜನರಿಗೆ ಉಪಯೋಗವಾಗುವ ರೀತಿಯಲ್ಲಿ ತಿಳಿಸಲ್ಪಟ್ಟಿವೆ. ಈ ಪುಸ್ತಕದ ಮತ್ತೊಂದು ವಿಶೇಷವೇನೆಂದರೆ ರೋಗಗಳಿಗೆ ಆಯುರ್ವೇದದ ಎರಡು ಮೂರು ಬೇರೆ ಬೇರೆ ಔಷಧಗಳನ್ನು ಕೂಡಿಸಿ ಹೇಗೆ ಕೊಡಬೇಕೆಂಬುದನ್ನು ಇದರಲ್ಲಿ ತಿಳಿಸಿರುವರು. ಬೆ. ೦-೭-೦.

**ಹರಿದಾಸಕೀರ್ತನ ತರಂಗಿಣಿ**—(ಮಾಸಪತ್ರಿಕೆ ವಾರ್ಷಿಕ ಚಂದಾ ೨-೦ ೦). ಸುಬೋಧ ಪ್ರಕಟನಾಲಯದ ಶ್ರೀ. ರಾಮರಾಯರ ಅವ್ಯಾಹತ ಪರಿಶ್ರಮದ ಫಲವಿದು. ಇದರಲ್ಲಿ ಶ್ರೀ. ಪುರಂದರ ದಾಸರ ಪದಗಳು ಶುದ್ಧರೂಪದಲ್ಲಿ ಮುದ್ರಿತವಾಗಿವೆ. ದಾಸ ಪರಂಪರೆಯವರು ಬರೆದುಕೊಂಡು ಇಟ್ಟ ಹಸ್ತಲಿಖಿತ ಪ್ರತಿಯ ಆಧಾರದಿಂದ ಈ ಪದಗಳು ಮುದ್ರಿತವಾದದ್ದೊಂದು ಇದರ ವಿಶೇಷವು. ಬೆಂಗಳೂರ ಸೆಂಟ್ರಲ್ ಕಾಲೇಜಿನ ಇಂಗ್ಲಿಷ ಪ್ರೊಫೆಸರರಾದ ಶ್ರೀ. ಬಿ. ನಾಗೇಶರಾಯರೇ ಮುಂತಾದವರು ಈ ಪತ್ರಿಕೆಗೆ ಬೆಂಬಲವಾಗಿ ನಿಂತಿರುವುದು ಸ್ತುತ್ಯವು.

**ಶ್ರೀಕೃಷ್ಣನಾಮಾಮೃತ**—'ಶಾರದೆ'ಯ ವಿಭವ ಸಂವತ್ಸರದ ಚೈತ್ರ, ವೈಶಾಖ ಮತ್ತು ಜೇಷ್ಠ ಈ ಮಾಸಗಳ ಸಂಚಿಕೆಯೂ ಕಾಣಿಕೆಯ ಪುಸ್ತಕವೂ ಆಗಿದೆ. ಇದರೊಳಗಿನ ಲೇಖಗಳು ಮಹಾರಾಷ್ಟ್ರ ಭಾಷೆಯೊಳಗಿಂದ ಎತ್ತಿದವುಗಳು ಇದ್ದು ಜ್ಞಾನಯುಕ್ತವಾಗಿವೆ.

**ಶ್ರೀ. ಶಿವಲೀಲಾಮೃತ ಕಥೆಗಳು**—(ಲೇ. ಗ. ಹು. ಹೊನ್ನಾಪುರಮಠ, ಧಾರವಾಡ. ಬೆ. ೦-೧೦-೦). ಇದರಲ್ಲಿ ಶಿವಲೀಲೆಯ ಕಥೆಗಳು ಹೇಳಲ್ಪಟ್ಟಿವೆ. ಪುಸ್ತಕದ ಭಾಷೆಯು ಸುಲಭವಾದುದೂ ಲಲಿತವಾದುದೂ ಆಗಿದೆ. ಹೊನ್ನಾಪುರಮಠ ಇವರ ಕನ್ನಡ ವಾಙ್ಮಯ ಸೇವೆಯು ಎಷ್ಟು ವಿಶಾಲವಾದದ್ದೆಂ

ಬುದನ್ನು ಈಗ ಕನ್ನಡಿಗರಿಗೆ ಹೊಸದಾಗಿ ಹೇಳಬೇಕಾಗಿಲ್ಲ ಸರ್ವರೂ ಇದಕ್ಕೆ ಉತ್ತೇಜನ ಕೊಡಬೇಕು.

**ಸುಬ್ಬಣ್ಣ**— (ಲೇ. ಶ್ರೀನಿವಾಸ ಮೈಸೂರು). ಪ್ರಬುದ್ಧ ಕರ್ಣಾಟಕದಲ್ಲಿ ಪ್ರಸಿದ್ಧ ಲೇಖಕರಾದ 'ಶ್ರೀನಿವಾಸ' ಇವರು ಬರೆದ ಕಥೆಯಿದು. ಒಬ್ಬ ವೃದ್ಧ ಗಾಯಕನ ನಿಜವಾದ ಚರಿತ್ರವೇ ಈ ಕಥೆಗೆ ಮೂಲಾಧಾರವು. "ಶ್ರೀನಿವಾಸ" ಇವರು ಕಥೆಯನ್ನು ಬಣ್ಣಿಸುವ ರೀತಿಯಲ್ಲಿ ವಿಶೇಷವಾದ ಚಾತುರ್ಯವಂತರು.

**ನಾರಾಯಣ ವಾಮನ ತಿಲಕ ಇವರ ಚರಿತ್ರೆ**— (ಲೇ. ಶ್ರೀ. ಚನ್ನಪ್ಪಾ ಉತ್ತಂಗಿ ಹಾವೇರಿ. ಕ್ರ. ೦-೧೦-೦). ರೆವ್ಹರಂಡ ತಿಲಕ ಎಂಬವರು ಮರಾಠಿ ಭಾಷೆಯ ಉದ್ದಾಮ ಕವಿಗಳು. ಈ ಪುಸ್ತಕದಲ್ಲಿ ಅವರ ಇಂಗ್ಲಿಷ ಚರಿತ್ರೆಯು ಕನ್ನಡ ಅನುವಾದವುಂಟು. ಶ್ರೀ. ಉತ್ತಂಗಿಯವರು ಪುಸ್ತಕಗಳನ್ನು ಬರೆಯುವ ಪದ್ಧತಿಯು ಹೊಸಮಾದರಿಯದಾಗಿದೆ. ಚಿಕಿತ್ಸಾತ್ಮಕ ಬುದ್ಧಿಯೂ ಅವರ ಬರಹದಲ್ಲಿ ತೋರಿ ಬರುತ್ತಿದೆ.

**ಆಂಡ್ರೂ ಕಾರ್ನೆಗಿ**— (ಲೇ. ಜೋಸ್ಯರ ಜಿ. ಆರ್. ಮೈಸೂರು. ಬೆ. ೦-೬-೦). ಇದರಲ್ಲಿ ಅಮೇರಿಕೆಯ ಕೋಟ್ಯಾಧೀಶನಾದ ಕಾರ್ನೆಗಿಯ ಜೀವನ ಚರಿತ್ರೆಯು ಅಡಕವಾಗಿದೆ. ಅದು ಹಿಂದುಸ್ಥಾನದ ಬಡ ಜನರಿಗೆ ಅಷ್ಟು ಕಟ್ಟು ಕಥೆಯೆಂದೇ ತೋರಬಹುದು ಆದರೆ ಅದು ಕಟ್ಟು ಕಥೆಯಲ್ಲ. ನಮ್ಮ ವ್ಯಾಪಾರಸ್ಥರಿಗೆ ಅದು ಸ್ಫೂರ್ತಿಕೊಡಲಿ. ಶ್ರೀ. ಜೋಸ್ಯರ ಇವರು ವ್ಯಾಪಾರದ ತಮ್ಮ ಜ್ಞಾನವನ್ನು ಕನ್ನಡದಲ್ಲಿ ನಾವಿನ್ಯ ಪುಸ್ತಕರೂಪವಾಗಿ ಕೊಡುತ್ತಿರುವರು.

**ಆಯುರ್ವೇದ ಸಮ್ಮೇಲನ ವರದಿ** ವಿಜಾಪುರದಲ್ಲಿ ಕೂಡಿದ ಈ ಸಮ್ಮೇಲನದ ವರದಿಯು ಇದರಲ್ಲಿ ವಿಸ್ತಾರವಾಗಿ ಪ್ರಕಟವಾಗಿದೆ. ಚಿತ್ರಗಳಿಂದ ಭೂಷಿತವಾಗಿದೆ.

**पैसाफंड अहवाल**— ತಳೆಗಾಂವಿಯಲ್ಲಿರುವ ಕಾಚಿನ ಕಾರಖಾನೆಯ ೨೨ನೇ ವರ್ಷದ ವರದಿ. ಈ ಸಂಸ್ಥೆಯು ಇತ್ತೀಚಿಗೆ ಅಷ್ಟು ಭರದಿಂದ ಬೆಳೆಯುತ್ತಿರುವುದಿಲ್ಲ. ಕರ್ನಾಟಕದ ಹಣವನ್ನು ತಕ್ಕೊಂಡರೂ ಕರ್ನಾಟಕಕ್ಕೆ ಹಿತಮಾಡುವ ಬುದ್ಧಿಯು ಈ ಸಂಸ್ಥೆಗೆ ಇನ್ನೂ ಹುಟ್ಟಿರುವುದಿಲ್ಲ.

**ಮಾಲತೀಶಮಂದಿರದ ವರದಿ**— ದೇವಗಿರಿಯ ಮಲ್ಲಾರಿ ದೇವರ ಭಕ್ತರು ತೆಗೆದ ಸಂಸ್ಥೆಯ ೧೧ನೇ ವರ್ಷದ ವರದಿ ಇದು. ಜನತೆಯ ವಾಚನಾಭಿರುಚಿಯನ್ನು ಹೆಚ್ಚಿಸುವದನ್ನು ಈ ಸಂಸ್ಥೆಯು ಒಂದು ಉದ್ದೇಶವಾಗಿಟ್ಟುಕೊಂಡಿರುವುದು ಸ್ತುತ್ಯವು.

**ಶ್ರೀ. ಅಶ್ವತ್ಥ ನರಸಿಂಹ ಸಂಸ್ಥಾ**— ಶ್ರೀ. ಕಟ್ಟಿ ನರಸಿಂಹರ (ಮುಗುಟಖಾನ ಹುಬ್ಬಳ್ಳಿ)ಯಲ್ಲಿರುವ ಈ ಸಂಸ್ಥೆಯು ದಿನದಿನಕ್ಕೆ ವೃದ್ಧಿಹೊಂದುತ್ತಿರುವುದು ಈ ವರದಿಯಿಂದ ಗೊತ್ತಾಗುವುದು. ೨ನೇ ವರ್ಷದ ವರದಿಯಲ್ಲಿ ಈ ಕ್ಷೇತ್ರದ ವರ್ಣನೆ ಇರುವುದು.

**An appeal**— ತುಳುವು ಮಹಾಸಭೆಯ ವರದಿ. ಇದು ತುಳುವರಲ್ಲಿ ಹೊಸ ಚೈತನ್ಯವು ಹುಟ್ಟಿರುವ ಚಿಹ್ನವು. ಈ ಚೈತನ್ಯಕ್ಕೆ ಯೋಗ್ಯದಿಶೆಯು ಉಂಟಾದರೆ ಇದರಿಂದ ಕರ್ನಾಟಕದ ಉನ್ನತಿಗೆ ಅನುಕೂಲವೇ ಆಗುವುದು. ವ್ಯಾಪಕ ದೃಷ್ಟಿಯಿಂದಲೂ ರಾಷ್ಟ್ರೀಯ ದೃಷ್ಟಿಯಿಂದಲೂ ವಿಚಾರಮಾಡಿ ತುಳುವರು ಮುಂದೆ ಹೆಜ್ಜೆ ಇಡಬೇಕೆಂದು ಸೂಚನೆ.

**कल्याण (भक्तांक)** — ಇದು ಗೋರಖಪುರ (ಉತ್ತರ ಹಿಂದುಸ್ಥಾನ) ದಲ್ಲಿ ಹೊರಡುವ "ಕಲ್ಯಾಣ" ಎಂಬ ಹಿಂದೀ ಮಾಸಪತ್ರಿಕೆಯ ವಿಶೇಷ ಸಂಚಿಕೆಯು. ಈ ಸಂಚಿಕೆಯು ೨೫೦ ಪುಟಗಳುಳ್ಳದ್ದಾಗಿದೆ. ಇದರಲ್ಲಿ ಹಿಂದುಸ್ಥಾನದಲ್ಲಿ ಆಗಿ ಹೋದ ಮುಖ್ಯ ಮುಖ್ಯ ಅನೇಕ ಭಕ್ತರ ಚರಿತ್ರೆಯು ಬಂದಿದೆ. ಕರ್ನಾಟಕದಲ್ಲಿಯ ಶ್ರೀ. ಜಗನ್ನಾಥದಾಸರ ಚರಿತ್ರೆಯನ್ನು ಶ್ರೀ. ಆಲೂರ ವೆಂಕಟರಾಯರೂ ಶ್ರೀ. ವಿದ್ಯಾರಣ್ಯರ ಚರಿತ್ರೆಯನ್ನು ಶ್ರೀ. ದಿವಾಕರ ರಂಗರಾಯರೂ ಶ್ರೀ. ಮಧ್ವಾಚಾರ್ಯರ ಚರಿತ್ರೆಯನ್ನು ಶ್ರೀ. ಹುಕ್ಕೇರಿ ರಾಮರಾಯರೂ ಬರೆದಿರುವರು.

**ನವಜೀವನ** - (ಸಚಿತ್ರ ವಾರಪತ್ರಿಕೆ. ಪ್ರಕಾಶಕರು- ಕೃಷ್ಣಾ ಮತ್ತು ಕಂಪನಿ ಬೆಂಗಳೂರ, ಬೆ. ವರ್ಷಕ್ಕೆ ೧೦ ರು.) ಇದಕ್ಕೆ ಈಗ ಮೂರನೇ ವರ್ಷ, ಇದು ಈಗ ಸಚಿತ್ರ ವಾರಪತ್ರಿಕೆಯಾಗಿದೆ, ಬೆಂಗಳೂರಿನಲ್ಲಿ ನಡೆದಿರುವ ಅನೇಕ ಪತ್ರಿಕಾಸಾಹಸಗಳಲ್ಲಿ ಇದು ಒಂದು, ಬೆಂಗಳೂರಿನಂಥ ದೊಡ್ಡ ಪಟ್ಟಣದಲ್ಲಿ ಪತ್ರಿಕೆಗಳನ್ನು ತೆಗೆಯುವದರಲ್ಲಿ ಅಹಮಹಮಿಕೆಯು ನಡೆದಿರುವದು ಒಳ್ಳೆಯದೇ.

**ಹೂಗೊಂಚಲು** - (ಶ್ರೀ. ಪಾಂಡ್ಯೇಶ್ವರ ಗಣಪತಿರಾಯರು ಬೆ. ೦-೪-೦). ಶ್ರೀ. ಗಣಪತಿರಾಯರ ಕವಿತ್ವದ ಆಸ್ವಾದವು ಜಯಕರ್ನಾಟಕ ವಾಚಕರಿಗೆ ಗೊತ್ತು ಇದೆ. ಈ ಹೂಗೊಂಚಲಿನ ವಾಸನೆಯನ್ನು ರಸಿಕರು ಮೂಸಿ ನೋಡಿ ತೃಪ್ತಿಪಡಲಿ,

**ಕರ್ನಾಟಕ ಸುಕಾವ್ಯರತ್ನಮಾಲಾ**—(ಗುರುಗೀತಾ ಬೆ. ೦-೬-೦). ದೊಡ್ಡಮನೆ, ವಿಶ್ವೇಶ್ವರ ಹೆಗಡೆಯವರು ರಚಿಸಿರುವ ಈ ಗುರುಗೀತೆಯಲ್ಲಿ ಗುರುವಿನ ಮಹತ್ವವು ಹಳೆಯ ಪದ್ಧತಿಯಂತೆ ವರ್ಣಿಸಲ್ಪಟ್ಟಿದೆ. ಗುರುವಿಗಿರುವ ಗೌರವವು ದೇವರಿಗೂ ಕೂಡ ಇಲ್ಲವೆಂಬದಾಗಿ ಇದರಲ್ಲಿ ವರ್ಣನೆಯುಂಟು.

**ಪಬ್ಲಿಕ ಲ್ಯಾಬ್ರರಿ ಕನ್ನಡ ಪುಸ್ತಕಗಳ ಪಟ್ಟಿ**—(ಬೆ. ೦-೪-೦). ಬೆಂಗಳೂರಿನ ಪಬ್ಲಿಕ್ ಲೈಬ್ರೆರಿಯಲ್ಲಿರುವ ಕನ್ನಡ ಪುಸ್ತಕಗಳು ಆಧುನಿಕ ಶಾಸ್ತ್ರೀಯ ರೀತಿ ವಿಭಾಗಮಾಡಲ್ಪಟ್ಟು ಅವುಗಳ ಪಟ್ಟಿಯು ತಯಾರಿಸಲ್ಪಟ್ಟಿದೆ. ಡಾ, ಮೆಲ್ವಿಲ್ ಡ್ಯೂಯಿ (Dr. Melvil Dewey) ಯವರು ದಶಾಂಗ ಗ್ರಂಥವಿಭಾಗ (Decimal Classification) ಎಂಬದೊಂದು ಹೊಸಪದ್ಧತಿಯನ್ನು ತೆಗೆದಿರುವರು. ಈ ಪ್ರಕಾರ ಗ್ರಂಥಾಲಯದ ಪುಸ್ತಕಗಳನ್ನು ವಿಭಾಗಿಸಿದರೆ ಗ್ರಂಥ ವಿಭಾಗವು ಸರಲವೂ ಉಪಯುಕ್ತವಾದುದೂ ಬೆಳೆಸುವದಕ್ಕೆ ಅನುಕೂಲವುಳ್ಳದ್ದೂ ಆಗಿರುತ್ತದೆ. ವಾಚನಾಲಯದವರು ಈ ಪಟ್ಟಿಯನ್ನು ತರಿಸಿಕೊಂಡು ಆ ರೀತಿಯನ್ನನುಸರಿಸಿ ತಮ್ಮ ಪುಸ್ತಕಗಳನ್ನು ವಿಭಾಗಿಸುವದನ್ನು ಕಲಿಯಬೇಕು.

**ಕೋಲಾಹಲ**—(ನಾಟಕ—ಶ್ರೀ. ಅಜಂಪುರದ ಶೇಷಗಿರಿ ರಾಯರಿಂದ ರಚಿತವಾಗಿ ತುಮುಕೂರು ಸೇವಾಸಂಘದಿಂದ ಮುದ್ರಿತವಾದುದು ಬೆ ೦-೪-೦). ಯಾಮುನಾಚಾರ್ಯರಿಗೂ ವಿದ್ವಜ್ಜನ ಕೋಲಾಹಲರಿಗೂ ಆದ ವಾದವಿವಾದದ ಒಂದು ದೃಶ್ಯ. ಓದಲಿಕ್ಕೆ ಮನೋರಂಜಕವಾಗಿದೆ.

**ಬೆಳಗಾಂವ ಸ್ಕೂಲ ಬೋರ್ಡ ಗ್ಯಾಝೆಟ**—ಬೆಳಗಾಂವಿಯ ಸ್ಕೂಲಬೋರ್ಡಿನವರು ತಮ್ಮದೊಂದು ತ್ರೈಮಾಸಿಕ ಪತ್ರಿಕೆ ತೆಗೆದಿರುವರು. ಶಿಕ್ಷಣ ಶಾಸ್ತ್ರದ ಜ್ಞಾನವು ಶಿಕ್ಷಕರಿಗೆ ಆಗುವಂತೆ ಲೇಖಗಳನ್ನು ಬರೆಯಿಸಿದರೆ ಉಪಯೋಗವಾಗುವುದು. ಅಲ್ಲದೆ, ಮದ್ರಾಸ ಇಲಾಖೆಗಳಲ್ಲಿಯ ಸ್ಕೂಲ ಬೋರ್ಡಗಳು ಆ ಬೋರ್ಡಗಳಿಗೆ ಹೊಂದಿಸಿ ವಾಚನಾಲಯಗಳನ್ನು ಸ್ಥಾಪಿಸಿದಂತೆ ಈ ಬೋರ್ಡಿನವರು ಸ್ಥಾಪಿಸಿದರೆ ಕನ್ನಡ ವಾಙ್ಮಯವು ಬೆಳೆಯುವದಕ್ಕೆ ಅವಕಾಶವುಂಟಾಗುವದು.

Sanskrit Inscriptions. (D. B. Diskalkar M. A., Price Rupee 1). ಇದರಲ್ಲಿ ೪ ಸಂಸ್ಕೃತ ಶಾಸನಗಳು ಮುದ್ರಿತವಾಗಿವೆ. ಐಹೊಳಿಯಲ್ಲಿದ್ದ ಸಂಸ್ಕೃತ ಶಾಸನವನ್ನು ವಾಚಕರು ಇದರಲ್ಲಿ ಓದಬಹುದು.

**ಅಳಿಲಸೇವೆ**—(ಮಿತ್ರಮಂಡಳಿ ಮಂಗಳೂರ. ಬೆ. ೨ ಆಣೆ). ಇದರಲ್ಲಿ ಯುಗಾದಿ, ಅತಿಥಿ ಮುಂತಾದ ಸುಂದರ ಕವಿತೆಗಳು ಮುದ್ರಿಸಲ್ಪಟ್ಟಿವೆ, ಈ ಪುಸ್ತಕವು ತರುಣಕರ್ನಾಟಕದ ಜಾಗೃತಿಯ ಕುರುಹು.

**ನೀತಿಮಂಜರಿ**—(ದ್ವಿತೀಯ ಭಾಗ ರಾವ. ರಾ. ನರಸಿಂಹಾಚಾರ್ಯ ಬೆಂಗಳೂರ ಇವರಿಂದ ರಚಿತವಾದದ್ದು ಬೆಲೆ. ೦-೧೨-೦). ತಮಿಳು ದೇಶದಲ್ಲಿ ೨ನೇ ಶತಮಾನದ ಸುಮಾರಕ್ಕೆ ತಿರುವಳ್ಳುವನೆಂಬ ಕವಿಯು ಆಗಿ ಹೋದನು. ಈತನು ಪಂಚಮ ಜಾತಿಯವನು, ಈ ಕವಿಯು ನೀತಿಗ್ರಂಥಕಾರರಲ್ಲಿ ಅಗ್ರಗಣ್ಯನು. ತಮಿಳರು ಈತನನ್ನು ಋಷಿಯೆಂದೂ ಸ್ಮೃತಿಕಾರನೆಂದೂ ಭಾವಿಸುತ್ತಾರೆ, ಈತನ ಕವಿತೆಗಳಲ್ಲಿ ಕೆಲವುಗಳನ್ನು ರಾವ, ನರಸಿಂಹಾಚಾರ್ಯರು ಈ ಪುಸ್ತಕದಲ್ಲಿ ಕನ್ನಡಿಸಿರುವರು. ರಾವ. ರಂಥ ಅಧಿಕಾರಿಗಳು ಬರೆದ ಗ್ರಂಥವೆಂದ ಬಳಿಕ ಹೆಚ್ಚಿಗೆ ಹೇಳುವದೇನು ? ಕನ್ನಡಿಗರೆಲ್ಲರೂ ಓದಿಯೇ ತೀರಬೇಕು.

**ಅಸ್ಪೃಶ್ಯತೆಯು** ಶ್ರೀ. ತುಕಾರಾಮ ಕೋಪರಡೆಯವರು ಅಸ್ಪೃಶ್ಯತೆಯ ವಿಷಯವಾಗಿ ಮಾಡಿದ ಪದ್ಯಗಳು. ಈಗಿನ ಕಾಲದಲ್ಲಿ ಪ್ರಚಲಿತವಿರುವ ವಿಚಾರಗಳು ಸುಲಭವಾಗಿ ವರ್ಣಿಸಲ್ಪಟ್ಟಿವೆ.

**ಶಿರಹಟ್ಟಿಯ ಲೋಕಮಾನ್ಯ ಮೋಫತ ವಾಚನಾಲಯದ ೭ನೆಯ ವರ್ಷದ ವರದಿ**—ಲೋಕಮಾನ್ಯರ ಪುಣ್ಯ ಸ್ಮರಣಾರ್ಥವಾಗಿ ಸ್ಥಾಪಿಸಲ್ಪಟ್ಟ ಈ ಸಂಸ್ಥೆ ದಿನೇದಿನೇ ಏಳ್ಗೆಹೊಂದುತ್ತಿರುವುದು ಸಂತೋಷಕರವು. ಸಾಂಗಲಿ ಸಂಸ್ಥಾನದ ಅಧಿಪತಿಗಳು ಪ್ರತಿವರ್ಷ ೫೦ ರೂ. ಗಳನ್ನು ಸಂಸ್ಥಾನದಿಂದ ಗ್ರ್ಯಾಂಟ ಕೊಡುವುದನ್ನು ಮಂಜೂರು ಮಾಡಿರುವುದು ಅಭಿನಂದನೀಯವೂ ಅನುಕರಣೀಯವೂ ಆಗಿರುವುದು.

**ಬೆಳಗಾಂವಿಯ ರೇಲ್ವೆಮಂಡಳದ ರಿಪೋರ್ಟು**—ಈಗ ನಮ್ಮ ಕೈಯಲ್ಲಿ ಬಂದುದು. ಆ ಮಂಡಳದ ತ್ರೈವಾರ್ಷಿಕ ರಿಪೋರ್ಟು. ಬೇಗನೆ ಎಲ್ಲಕಡೆಗೂ ಅದರ ಶಾಖೆಗಳಾಗಲೆಂದು ಹಾರೈಸುತ್ತೇವೆ.

**ಶ್ರೀ ಕಿತ್ತೂರ ಚನ್ನಮ್ಮನ ಭಾವಚಿತ್ರ ಮತ್ತು ಶ್ರೀ ಮಧ್ವಾಚಾರ್ಯರ ಬಣ್ಣದ ಚಿತ್ರ**—ಇವು ಶ್ರೀ ಜೀರಗೆ ಸೊಲ್ಲಾಪುರ ಇವರು ಪ್ರಕಟಿಸಿದ ಚಿತ್ರಗಳು. ವೀರಮಣಿಯಾದ ಚನ್ನಮ್ಮನ ಸ್ವಂತ ಚಿತ್ರವು ಕಲ್ಪಯದು, ಮಧ್ವಾಚಾರ್ಯರ ಚಿತ್ರವು ಶ್ರೀ ನರಹರರಾವ ಮುದವೇಡಕರ ಇವರ ಮೂಲತಃ ತೆಗೆದ ಚಿತ್ರವನ್ನು ಬಲುಮಟ್ಟಿಗೆ ಹೋಲುತ್ತನೆ. ಬೆ. ೦-೧೦-೦ ; ೦-೪-೦. ಚಿತ್ರಗಳನಲ್ಲಿ ಕರ್ನಾಟಕದ ಚಿತ್ರಕಲೆಯ ವೈಶಿಷ್ಟ್ಯವನ್ನು ತರಲೆತ್ನಿಸಿಬೇಕೆಂದು ಸೂಚನೆ.

# ಯಾದವಾಭ್ಯುದಯನಾಟಕಂ

ಲೇಖಕ :— ಶ್ರೀ ಪರಿಮಿ ಪದ್ಮನಾಭಯ್ಯನವರು

## ಪ್ರಥಮಾಂಕಂ

* ವೃ:— ಶ್ರೀಕರ ಯಾದವಾಂಬುಧಿಯು ಪೆರ್ಚಿಸಿ, ಗೋಪಸತೀ ಮನಶ್ಚಕೋ-।
ರಾಕುಳಮಂ ಕಳಲ್ಚಿ, ವಿಬುಧಾನನ ಕೈರವಮಂ ಮಲರ್ಚಿ, ಮೇಣ್ ।
ಭೀಕರದೈತ್ಯಚಕ್ರಮನಳಲ್ಚಿ ಜಸಂ ಮಿಗೆ ಪರ್ವಲೆತ್ತಲುಂ ।
ಲೋಕಮನಾಳ್ದ ಗೋಪತಿಸುಧಾಕರನೀಗೆಮಗಿಷ್ಟಸಿದ್ಧಿಯಂ ॥ ೧ ॥

( ನಾಂದ್ಯಂತದಲ್ಲಿ ಸೂತ್ರಧಾರನು ಪ್ರವೇಶಿಸುವನು. )

ಸೂತ್ರ: (ತೆರೆಯ ಕಡೆ ನೋಡಿ) ಆರ್ಯೆ! ನಟಿ! ಇತ್ತಬಾ !

ನಟಿ: —(ಪ್ರವೇಶಿಸಿ) ಆರ್ಯನೆ ! ಇದೊ ಬಂದೆನು. ಅಪ್ಪಣೆಯೇನು ?

ಸೂತ್ರ:— ಆರ್ಯೆ! ಆಸ್ತಿಕ ಶಿರೋಮಣಿಗಳ ಮನಸ್ಸು ಆವಾಗಲೂ ಪರಮಾತ್ಮನ ಚರಿತಾಮೃತದಿಂದ ಆನಂದಗೊಳ್ಳಲು ಅಪೇಕ್ಷಿಸುವುದಷ್ಟೆ? ಪೋಲೇಪಲ್ಲಿ ಪರಿಮಿ ಪದ್ಮನಾಭಯ್ಯನವರಿಂದ ಭಕ್ತಿಬೋಧಕವಾಗಿ ವಿರಚಿಸಲ್ಪಟ್ಟಿರುವ "**ಯಾದವಾಭ್ಯುದಯ**" ನಾಟಕದಿಂದ ಈ ಸಭ್ಯರನ್ನು ಸಂತೋಷಪಡಿಸಲು ಆಜ್ಞಾಪಿಸಲ್ಪಟ್ಟಿರುವೆನು.

ನಟಿ:—ಆರ್ಯನೆ ! ಬಹು ಸಂತೋಷ! ಶ್ರೀಕೃಷ್ಣಚರಿತೆಯು ಲೇಖಕರ ಶ್ರೇಯಸ್ಸಾಧನ! ಪಾಠಕರ ಜಿಹ್ವಾಮೃತ! ಶ್ರೋತೃಗಳ ಕರ್ಣರಸಾಯನ! ಅಭಿನೇತೃಗಳ ಆನಂದಾರ್ಣವ! ಪ್ರೇಕ್ಷಕರ ನೇತ್ರಮಂಗಳ! ಭಗವದ್ಭಕ್ತರ ಕೈವಲ್ಯನವನೀತ! ನಮಗೆ ಈ ಸಭ್ಯರ ಮನೋವಿನೋದನಕ್ಕಿಂತಲೂ ಕಾರ್ಯವಾವುದಿರುವುದು ?

ಸೂತ್ರ:—ಆರ್ಯೆ! ಸಮಯೋಚಿತವಾದ ಗಾನದಿಂದ ನಾಟಕವು ಪ್ರಾರಂಭವಾಗಲಿ !

ನಟಿ:—ಆರ್ಯನ ಇಷ್ಟದಂತಾಗಲಿ ! (ಹಾಡುವಳು)

† ।ಕಂದ॥ ಪರಪುಷ್ಟನಾಗಿ ಮುದದಿಂ ।
ಪರಿವರ್ಧಿಸಿ, ಕಾಕಸಮಿತಿಯಂ ಮುರಿದು ಮನೋ-।
ಹರಮಾಕಂದಾಸವಮಂ ।
ಬರೆಪೀರ್ದೇಂ ಗಾನಮೆಸೆವುದೀ ಕಲಕಂಠಂ ॥೨॥

ಆರ್ಯನೆ ! ಆಪನ್ನನಾದ ಮಾಧವನು ವಿಬುಧರ ಇಷ್ಟಾರ್ಥಸಿದ್ಧಿಗೆ ಸಹಕಾರಿಯಾಗಿರುವನು !

ಸೂತ್ರ:— ಆರ್ಯೆ ! ಬಹು ಚೆನ್ನಾಗಿ ಹೇಳಿದೆ !

ಕಂ॥ ಕರುಣಾರಸಾರ್ಣವಂತಿರೆ ।
ಪೊರೆಯಂ ಪರಿಹರಿಸೆ ಪೂರ್ಣ್ದ ನರಲೀಲೆಯೊಳೀ ।
ಧರಣಿ ಯೊಳೆಂದಾ ಕೌಸ್ತುಭ ।
ಧರನೊಗೆದನೊ ವಿಬುಧರಂದೆ ಚರಿತಾರ್ಥದಲೇ ॥೩॥

(ತೆರೆಯಲ್ಲಿ)

ಎಲೆಲೋ ! ಪಾಪಿ ! ನಟಾಧಮ ! ಆ ಮಾಧವನ ಜನ್ಮವನ್ನೂ ವಿಬುಧರ ಏಳ್ಗೆಯನ್ನೂ ಹೊಗಳಿ ಹೊಗಳಿ ನನ್ನ ಹೃದಯವನ್ನು ಚುಚ್ಚಬೇಡ ! ಇನ್ನು ನಿನ್ನ ನಾಲಿಗೆಯನ್ನು ಹಿಡಿ !

---

* ( ಕಾಪ್ರಮುರ ಕರುಣಾಸಾಗರ ) ಎಂಬಂತೆ.

ಶ್ರೀರಮಣ ಪರಮಪಾವನ ಘನ ಶ್ರೀ॥ ಕ್ಷೀರಾಬ್ಧಿಶಯನ ॥ ಪ ॥ ಶ್ರೀರುಚಿರ ಚಾರುತರ ನಿರುಪಮ । ರಾಜಮುಖ ರಜನೀಚರಾಂತಕ ॥ ಅ ॥ ವಾರಿಜಮುಖ । ನಾಕಜನನುತ! ಲೋಕವಿಭುಭವ । ಶೋಕಭಯಹರ ॥ ಶ್ರೀಕರ ದಿವಾಕರ ಕುಲೇಶ್ವರ । ಭೀಕರವ ಕಲಿ । ವ್ಯಾಕುಲವ ಕಳೆ ॥ ೧ ॥ ಮಾನಿಜನ ಘನ । ಮಾನಸಾಂಬುರುಹ । ಶ್ರೀನಿಲಯ ಮೃದು । ಗಾನ ಮಧುಪ್ರಿಯ ॥ ಭಾನುಶತಭಾಸುರ ಮನೋಹರ ॥ ನೀನೊಸೆದು ಪೊರೆ ನೀರಜಾಂಬಕ ॥ ೨ ॥ ಶೇಷಶಯನ ವಿಲಾಸ ನಿರ್ಮಲ । ಪೇಶಲಾಂಗ ಮಹೇಶ ಕೌಸ್ತುಭ! ಭೂಷಣ ಕೃಪಾಸದನ ವಿಗಮನ ॥ ಕೇಶವನೆ! ಕೃಷ್ಣರಾಜ ಪೋಷಕ ॥ ೩ ॥

† ( ಸುಂದರಪ್ಯಾರಿ ) ಎಂಬಂತೆ

ನೋಡಿ: ವಿನೋದವ । ವಾಸಂತ ವೈಭವ ॥ ಪ ॥ ಸುಲಲಿತ ಚೂತ । ಕಳಿಕಾಸ್ವಾದಿತ ಕಲರವ ಗಾನದ । ನೇನೊಬೆ ಸೌಖ್ಯವ ॥ ೧ ॥ ವಕಮಕರುದ । ಮುದಿತ ಮಿಳಿಂದ ॥ ಸುರುಚಿರವಾದಾ । ವಿನೋದ ॥ ೨ ॥

ನಟಿ:— (ಬೆಚ್ಚಿ) ಆರ್ಯನೆ ! ರಕ್ಷಿಸು ! ಇದಾರು ನಮ್ಮ ಮೇಲೆ ಹೀಗೆ ಕೋಪಿಸಿಕೊಳ್ಳುವರು ?

ಸೂತ್ರ:— ಆರ್ಯೆ ! ಹೆದರಬೇಡ ! ಶತ್ರು ಭೀತಿಯಿಂದ ಕಳವಳಗೊಂಡಿರುವ ಕಂಸಾಸುರನು ರಂಗಕ್ಕೆ ಬಂದನು. ಇನ್ನು ನಾವು ಮುಂದಿನ ಪಾತ್ರಗಳನ್ನು ಅನುಗೊಳಿಸುವ !

ನಟಿ:— ಆರ್ಯನ ಅಪ್ಪಣೆಯಂತಾಗಲಿ.

( ಇಬ್ಬರೂ ಹೊರಟು ಹೋಗುವರು. )

( ಇದು ಪ್ರಸ್ತಾವನೆ )

( ಅನಂತರ ಚಿಂತಾಕ್ರಾಂತನಾದ ಕಂಸನು ತನ್ನ ಮಂತ್ರಿಗಳೊಡನೆ ಪ್ರವೇಶಿಸುವನು. )

* ವೃ॥ ಅಕಟಾ! ದುರ್ಗೆಯದೇತಕೆನ್ನ ಮನೆಯೊಳ್ ತಾಂ ಪುಟ್ಟಿದಳ್? ಮೇಣದೇ–।
ತಕೆ ಮದ್ವೈರಿಯದೊಂದು ಕಾಣದೆ ವಲಂ ಪುಟ್ಟಿರ್ದನೆಂದಳ್ ! ವಿಷಾ–।
ದಕೆ ನನ್ನಂ ಗುರಿಗೈದುದೇಕೊ ಹರಿಯೆಂತುಂ ಕೊಲ್ವನೆನ್ನಂಗಡಾ! ।
ಸಕಲೈಶ್ವರ್ಯಮಿದೇತಕಿನ್ನೆನಗೆ ರಾಜ್ಯಂ ಕೋಶದಿಂದೇಂ ಫಲಂ ॥ ೪ ॥

ಮಾಧವನ ಜನ್ಮಗ್ರಹಣದಿಂದ ವಿಬುಧರು ಚರಿತಾರ್ಥರೆಂಬುದನ್ನು ಕೇಳಿ ಹೇಗೆ ಸೈರಿಸಲಿ? ಅಯ್ಯೋ! (ದುಃಖಿಸುತ್ತ)

ಕಂ॥ ಎನ್ನಿಂ ಜಿತರಾದಮರರ್ ।
ಬನ್ನದೆ ಮಾಧವನೊಳೆಯ್ದಿ ಪುಯ್ಯಲ್ಚುವುದುಂ ।
ಎನ್ನಂ ಕೊಲ್ವೊಡೆ ಪೂಣ್ದನ–।
ವಂ, ನಿಕ್ಕುವಮಿನ್ನದೆಂತುಟಾಂ ಬಾಳ್ದಪೆನೋ? ॥ ೫ ॥

ಅಯ್ಯೋ! ದೇವಕೀ ಗರ್ಭದಲ್ಲಿ ನನ್ನ ಹಗೆ ಜನಿಸುವನೆಂದು ಅಶರೀರವಾಣಿಯಿಂದ ಉದ್ಬೋಧಿತನಾದ ನಾನು ಅವಳ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳೆಲ್ಲವನ್ನೂ ಸಂಹರಿಸಲು ಆ ಕುಟಿಲ ಕೃಷ್ಣನು ಹೆದರಿ ಬೇರೊಂದೆಡೆಯಲ್ಲಿ ಹುಟ್ಟಿ ಬಳೆಯುತ್ತಿರುವನಲ್ಲವೆ? (ನಿಟ್ಟುಸಿರ್ ಬಿಡುತ್ತ) ಅಕ್ಕಟಾ ! ದೇವಕೀ ವಸುದೇವರನ್ನು ಸೆರೆಯಲ್ಲಿಟ್ಟು ವ್ಯರ್ಥವಾಗಿ ಕಷ್ಟಪಡಿಸಿದೆನು! ತಂಗಿಯ ಮಕ್ಕಳನ್ನು ನಿಷ್ಕರುಣೆಯಿಂದ ಕೊಂದು ಅಪವಾದಕ್ಕೆಡೆಯಾದೆನು. ನನ್ನ ಶತ್ರು ಬೇರೆ ಸಾಯಲಿಲ್ಲ! ಹಾ! ಹಾ!

( ಮೂರ್ಛಾಕ್ರಾಂತನಾಗುವನು. )

ಸುಬಾಹು:—+ ಮಹಾರಾಜನೆ ! ಸಂತೈಸಿಕೊ ! ಸಂತೈಸಿಕೊ ! ಮುಂದಿನ ಮೃತ್ಯುವಿಗೆ ಈಗಿನಿಂದಲೇ ಚಿಂತಿಸಬಾರದು.

ಕಂಸ:— ಸುಬಾಹುವೆ !

ಕಂದ॥ ಆರೊಳ್ ಸೆಣಸುವೆನೋ ? ಮೇ–।
ಣಾರಂ ಮರೆವೊಕ್ಕು ಬಾಳ್ವೆನೋ ? ನಾಂ ! ಹರಿಯಾ ।
ವೈರಕದೇಂ ಪ್ರತಿಗೆಯ್ವೆನೊ? ।
ಘೋರಂ ಮುಚ್ಚಿಂತೆಯುಂತವೆಂತಿದಕಟಾ ! ॥೬॥

ಕೃಶಾನು:- ಮಹಾಪ್ರಭುವೆ ! ಈ ಅಧೈರ್ಯವು ಸಾಕು ! ಭವದೀಯಾ ಖಂಡದೋರ್ದಂಡ ಪ್ರಚಂಡ ಪ್ರತಾಪಕ್ಕೆ ಆದಂಭೋಳಿಧರನಾದ ಜಂಭಾರಿಯೂ ಕುಂಬಿಡುತ್ತಿರುವನು ! ಚಂಡತರಕೋದಂಡ ಟಂಕೃತಿಗೆ ಆಖಂಡಪರಶುವೂ ಬೆದರಿ ಬೆಂಡಾಗುವನು. ಕಟುತರ ಭ್ರುಕುಟೀಸ್ಪಂದನಮಾತ್ರದಿಂದ ಸುರನರ ಕಿನ್ನರ ವಿದ್ಯಾಧರರು ಗಡ ಗಡನೆ ನಡುಗಿ ಪ್ರಾಣದಾಸೆಯನ್ನೇ ತೊರೆವರು. ಇಂತಹ ಸಾಮರ್ಥ್ಯವನ್ನು ಬಗೆಯದೆ ಹೇಗೆ ಚಿಂತಿಸಬಹುದೆ ?

ಕಂಸ:— ಅಮಾತ್ಯ ಕೃಶಾನುವೆ ! ಆ ಪಾಪಿಗಳಾದ ದೇವತೆಗಳ ಕೈತವದಿಂದ ನನಗೆ ತಡೆಯಲಾರನಷ್ಟು ಕೋಪವು ಬರುವುದು ( ಕೋಪವನ್ನು ಅಭಿನಯಿಸಿ )

ಕಂದ॥ ತಾಳ್ವೆಂ ಕೋದಂಡವನಾಂ ।
ಸೀಳ್ವೆಂ ದಿಗಧೀಶರಿರ್ದೆಯು ರವಿಶಶಿಗಳ ಮೇಣ್ ।

---

* ತಾಳ ( ಎಪುಡು ಕೃಪ ಗಲ್ಗುನೋ )

ಇನಿತು ಚಿಂತೆಯುನಾಂತು । ಬದುಕುವೆನೆಂತು ॥ ಪ ॥ ಮನದೊಳು ಕುಂದಿದೇ । ಮುಂದೇನು ತೋರದೇ ॥ ಅ ॥ ಅಕಟ! ದುರ್ಗಾಂಬಿಕೆ । ಜನಿಸಿದಳೇತಕೆ ॥ ವಿಕಟ ವಿಷಾಂಕುರ । ಬಲಿದುದೆ! ದುಷ್ಕರ ॥ ೧ ॥ ಅರರೇ! ರಮಾಧವಂ । ಧರಣಿಯೊಳ್ ಜನ್ಮವಂ ॥ ಧರಿಸಿದನೆನ್ನಯು । ಮರಣವೆ ನಿಶ್ಚಯು ॥ ೨ ॥ ಏತಕಿದೈ ಸಿರಿ । ಏತಕೀ ರಾಜ್ಯವು ॥ ಪಾತಕಿಯಾದೆನೆ । ಭೂತಲದೊಳು ನಾ ॥ ೩ ॥

+ ( ಸಾ ವಿರಹೀ ತವ ದೀನಾ) ಎಂಬಂತೆ.

ಸೈರಿಸು ನೀಂ । ಜನಪಾಲ ॥ಪ॥ ದುಗುಡವ, ಮನದೊಳು । ತಾಳುವಸೇನೈ ॥ಅ॥ ಮರಣವ ಚಿಂತಿಸಿ, ಮರುಗಲೆ ಬಾರದೈ ॥ ಧರೆಯೊಳು ವೀರರು, ಧೈರ್ಯವ ತೊಳ್ವರೆ ॥೧॥ ನಿನ್ನಯ ಭುಜಬಲ । ವನ್ನು ನೀನರಿಯದೆ ॥ ಬನ್ನವ ಪಡುವೇ । ನ್ಯಾಯವೆ ಪೇಳ್ಕೆ ॥೨॥

ಕೀಳ್ವೆಂ ಕುಲಗಿರಿಗಳ ನಿಂ ।

ತೂಳ್ವೆಂ ಬ್ರಹ್ಮಾಂಡಮುಂ ಫಡ ! ಪೋಳ್ವೆಂ ॥೭॥

ಕೃಶಾನು:—ಮಹಾಪ್ರಭು! ಇದಕ್ಕೆ ಇಷ್ಟು ಆಯಾಸವೇಕೆ? "ಉಗುರಲ್ಲಿ ಹೋಗುವುದಕ್ಕೆ ಕೊಡಲಿಯೇ? ಈ ಭೂಮಂಡಲದಲ್ಲಿ ಈಗಲೀಗ ಹುಟ್ಟಿರುವ ಮಕ್ಕಳಲ್ಲಿ ಅನನ್ಯರೂಪಾವಷ್ಟಂಭ ಸೌಷ್ಠವವಿಶೇಷಗಳಿಂದ ನಿನ್ನ ಶತ್ರುವನ್ನು ಗುರುತಿಸಿ, ಸಂಹರಿಸಿ ಬರಲು ಬಹುಮಾಯಾವಿಗಳಾದ ಪೂತನೆ, ಶಕಟ, ಧೇನುಕ, ಅರಿಷ್ಟ, ಕೇಶಿಯೇ ಮೊದಲಾದ ದೈತ್ಯರನ್ನು ಕಳುಹಿಸಿದರೆ ಆಯಿತು. ನಿನ್ನ ಶತ್ರು ನಿರ್ನಾಮವಾಗುವುದರಲ್ಲಿ ಸಂದೇಹವಿಲ್ಲ.

ಕಂಸ:—* (ಸಂತೋಷವನ್ನು ಸೂಚಿಸಿ) ಭಾಪು ! ಭಾಪು ! ಅಮಾತ್ಯವರ್ಯ ! ಒಳ್ಳೆಯ ಉಪಾಯವನ್ನು ಸೂಚಿಸಿದೆ ! ಇನ್ನು ನನ್ನ ದುಗುಡವು ಪರಿಹಾರವಾಯಿತು. ನೀನು ಮೊದಲು ಆ ದೈತ್ಯನಾಯಕರನ್ನು ಚೆನ್ನಾಗಿ ಎಚ್ಚರಿಸಿ ಕಳುಹಿಸು !

ಕೃಶಾನು:—ಪ್ರಭುಕಾರ್ಯದಲ್ಲಿ ಈಗಲೇ ತೊಡಗುವೆನು.

(ನಮಸ್ಕರಿಸಿ ಹೊರಡುವನು)

ಕಂಸ:—ಸುಬಾಹುವೆ! ನನ್ನಿಂದ ವೃಥಾ ತೊಂದರೆಯನ್ನೂ ದುಃಖವನ್ನೂ, ಅನುಭವಿಸಿದ ದೇವಕೀವಸುದೇವರನ್ನು ಸೆರೆಯಿಂದ ಬಿಡಿಸು ; ಮತ್ತು ದಯೆಯಿಟ್ಟು ಇಲ್ಲಿಯವರೆಗೂ ಬರಬೇಕೆಂದು ನನ್ನ ವಿಜ್ಞಾಪನೆಯನ್ನು ಅರಿಕೆಮಾಡಿ ವಸುದೇವನನ್ನು ಕರೆದುಕೊಂಡು ಬಾ !

ಸುಬಾಹು:—ಮಹಾರಾಜನ ಅಪ್ಪಣೆಯಂತಾಗಲಿ (ಎಂದು ಹೋಗಿ ವಸುದೇವನೊಡನೆ ಪ್ರವೇಶಿಸುವನು)

ವಸು:—ಜಯವಾಗಲಿ ಭೋಜರಾಜನಿಗೆ !

ಕಂಸ:—(ಆಸನದಿಂದೆದ್ದು) ಭಾವನೆ ! ನಮಸ್ಕರಿಸುವೆನು. ಈ ಪೀಠವನ್ನು ಅಲಂಕರಿಸಬೇಕು.

ವಸು:—(ಕುಳಿತುಕೊಳ್ಳುವನು.)

ಕಂಸ:—ಆನಕ ದುಂದುಭಿಯೇ !

+ವೃ॥ ಪಿರಿದುಂ ಶಾತ್ರವ ಭೀತಿಯಿಂದಕಟ! ನಿನ್ನಂ ದೇವಕೀದೇವಿಯುಂ ।

ಸೆರೆಯುಲ್ಲಿಟ್ಟು ದುರಾತ್ಮನೆಂ ಬರಿದೆ ಕೊಂದೆಂ ನಿಮ್ಮ ಸಂತಾನಮಂ ।

ಅರರೇ! ಮದ್ರಿಪು ಬೇರನೊಂದೆಡೆ ಕಣಾ ! ಪುಟ್ಟಿರ್ದಪಂ? ನಿಮ್ಮೊಳೀ ।

ತೆರನುಂ ದೋಷಮದಿಲ್ಲಮೆನ್ನ ಕೃತಮಂ ಭಾವಿಪ್ಪೊಡಾಂ ದುಃಖಿಪೆಂ ॥೮॥

ನನ್ನ ಅಪರಾಧಗಳನ್ನು ಕ್ಷಮಿಸಬೇಕು. (ಕಾಲಿಗೆರಗುವನು.)

ವಸು:—ಭೋಜರಾಜನೆ ! ವಿಧಿಕೃತವನ್ನು ಮೀರುವರಾರು ? ಇದರಲ್ಲಿ ನಿನ್ನ ದೋಷವೇನು ? ನೀನು ನಮ್ಮ ನಿಮಿತ್ತದಿಂದ ಚಿತ್ತದಲ್ಲಿ ಆಯಾಸಪಡಬೇಕಾದುದಿಲ್ಲ. ಪ್ರಭುವಿನ ಕೃಪಾಕಟಾಕ್ಷಕ್ಕೆ ಪಾತ್ರರಾದ ನಾನೂ ದೇವಕಿಯೂ ಧನ್ಯರು!

ಚಾರ:—(ಪ್ರವೇಶಿಸಿ) ಭಟ್ಟಾರಕನು ವಿಜಯಿಸಲಿ ! ಗೋಕುಲದ ಒಡೆಯನಾದ ನಂದಗೋಪನು ಪ್ರಭುವಿನ ಸಮಯವನ್ನು ನಿರೀಕ್ಷಿಸುತ್ತಿರುವನು.

ಕಂಸ:—ಒಳ್ಳೆಯದು; ಆತನನ್ನು ಒಳಕ್ಕೆ ಕರೆದುಕೊಂಡು ಬಾ !

(ಚಾರನು ಹೋಗಿ ನಂದಗೋಪನೊಡನೆ ಪ್ರವೇಶಿಸುವನು.)

ನಂದ:—ಮಹಾರಾಜಾಧಿರಾಜನಾದ ಕಂಸ ಭೂಪಾಲನು ವಿಜಯಿಸಲಿ.

(ಪುಷ್ಪಹಾರಗಳನ್ನೂ ಕಾಣಿಕೆಯನ್ನೂ ಸಮರ್ಪಿಸುವನು)

ಕಂಸ:—(ಉಪಹಾರಗಳನ್ನು ಸ್ವೀಕರಿಸಿ) ಎಲೈ ನಂದನೆ ! ಈ ಪೀಠದಲ್ಲಿ ಕುಳಿತುಕೋ ! ಇವೇನು ? ಈ ಹಾರಗಳು ! ರತ್ನಗಳು ! ಪುಷ್ಪಗುಚ್ಛಗಳು !! ಇಷ್ಟು ವೈಭವಕ್ಕೆ ಕಾರಣವೇನು?

ನಂದ:—ಮಹಾಪ್ರಭು ! ಬಹುಕಾಲದಿಂದ ಮಕ್ಕಳಿಲ್ಲದೆ ಚಿಂತಿಸುತ್ತಿದ್ದ ನನಗೆ ಭಗವಂತನು ಪುತ್ರರತ್ನವನ್ನು ಕರುಣಿಸಿರುವನು; ಈ ಸಂತೋಷವನ್ನು ಸ್ವಾಮಿಯವರಲ್ಲಿ ಅರಿಕೆಮಾಡಿಕೊಂಡಿರುವೆನು ಅಷ್ಟೆ !

---

* (ಹರುಷದೆ ರಾಜ್ಯವನು) ಎಂಬಂತೆ.

ಮೋದವನಾಂತೆನೀಗ, ಮಾನಸದೊಳು ॥ಪ॥ ಮಂತ್ರಿವರ ! ಪಗೆಯಕೊಲ್ವ ತಂತ್ರವನೀಂ ಸೂಚಿಸಿದ್ಧೆ । ಚಿಂತೆಯದೇಕಿನ್ನು ನನಗೆ ॥೧॥ ಮಾಧವನೇಂ ಮಾಳ್ಪನೆನ್ನ । ಭೇದಿಸಿದೆ ಕುಟಿಲನನ್ನು, ಈ ಧರೆಯೊಳೆನ್ನ ಸಮರಾರ್ ॥೨॥

\+ ರಾಗ ತಾಳ (ಶ್ರಮವ ಪಡಿಪರೇ) ಎಂಬಂತೆ

ಕ್ಷಮಿಸು ಭಾವನೇ ! । ಎನ್ನ ॥ಪ॥ ಶ್ರಮೆಗೊಳಿಸಿದೆ ಬರಿದೆ ನಿಮ್ಮನು ॥ಅ॥ ಕೊಂದೆನು ನಿಮ್ಮಯ । ಕಂದರ ನೆಲ್ಲರ । ಮಂದ ಭಾಗ್ಯನ । ದೇಂದುರಿತಾತ್ಮನೋ ॥೧॥ ಎನ್ನಯ ಕಾರ್ಯಕೆ । ಖಿನ್ನನಾಗಿಹೆ । ಸನ್ನುತಾಂಗನೆನ್ನ । ಬನ್ನವನೆಣಿಸದೆ ॥೨॥

ಕಂಸ:—(ತನ್ನಲ್ಲಿ ತಾನು) ಆ !

ವೃ॥ ಸುತನೊಗೆದುತ್ಸವಂ ಕರಮೆ ಪರ್ವಿದುದುರ್ವಿದು
ದಿಂತು ನಂದಗೋ–।
ಪತಿಗೆ; ಮದೀಯ ಮಾನಸಕೆ ಶುತ್ರುಭಯಂ !
ಹಿಮರೋಚಿಯಿಂದೆ ಸಂ ।
ತತಮುದಮಬ್ಧಿಗಾದಪುದು, ದಂದುಗಮಪ್ಪುದು
ಪಂಕಜಾಳಗೀ–।
ಕ್ಷಿತಿಗೆಲಘ ದ್ವಯಂ ಗುಡುವ ಕಾರಣವೊಂದೆ; ಇದೇಂ
ವಿಚಿತ್ರಮೋ ? ॥೯॥

ವಸು:—ಮಿತ್ರ ! ನಂದಗೋಪ ! ನಿನಗೆ ಪುತ್ರೋತ್ಸವ ವಾದುದನ್ನು ಕೇಳಿ ಹರ್ಷಿತನಾದೆನು.

ನಂದ:—ಮಿತ್ರ ! ವಸುದೇವ ! ಇದೆಲ್ಲವೂ ನಿಮ್ಮ ಸಂತೋಷವಲ್ಲವೆ ?

ಕಂಸ:— ನಂದನೆ ! ನಿನ್ನ ಮಗನು ಹೇಗಿರುವನು ?

ನಂದ:— ಪ್ರಭು ! ಶಿಶುವು ಕುಶಲಿಯು !

ಕಂಸ:— ಇರಲಿ ! ಲಕ್ಷಣವಂತನೋ ?

ನಂದ:— ಪ್ರಭು ! ತಕ್ಕಮುಟ್ಟಿಗೆ ಚೆನ್ನಾಗಿಯೇ ಇರುವನು.

ಕಂಸ:— ಮಾತಾಪಿತೃಗಳಿಗೆ ತಮ್ಮ ಮಕ್ಕಳು ಹೇಗಿದ್ದರೂ ಚೆನ್ನಾಗಿಯೇ ಕಾಣುವರು.

॥ಕಂದ॥ ಸುಂದರನಿಂದಿರಚಂದಿರ ।
ನೆಂದು ಕರಂ ಸುತರನೊಲ್ದು ಬಣ್ಣಿಸಿ ಮೇಣಾ ।
ನಂದಿಸುವರ್ ತಾಯ್ತಂದೆಗ- ।
ಳೆಂದುಂ ಪೆತ್ತರ್ಗೆ ಪೆರ್ಗಣಂ ಮುದ್ದಲ್ತೇ ॥೧೦॥

ದೈವಜ್ಞರು ಏನು ಹೇಳಿರುವರು ?

ನಂದ:— ದೈವಜ್ಞರು ಇನ್ನೂ ಜಾತಕಫಲಗಳನ್ನು ವಿವರವಾಗಿ ತಿಳಿಸಲಿಲ್ಲ; ಆದರೂ ಹೀಗೆ ಮಾತ್ರ ಹೇಳಿರುವರು.

ಕಂಸ:— (ಆತುರದಿಂದ) ಹೇಳು ! ಹೇಳು !

ನಂದ:— "ಮಗುವೇನೋ ತಕ್ಕ ಮಟ್ಟಿಗೆ ಲಕ್ಷಣವಂತನೇ ! ಆದರೂ ಬಾಲಾರಿಷ್ಟಗಳು ಅನೇಕವಾಗಿರುವುವು" ಎಂದು

ಕಂಸ:— ಹುಟ್ಟಿದ ಮಕ್ಕಳೆಲ್ಲವೂ ಬದುಕುವುದು ಅಸಂಭವ; ಅನೇಕ ಗಂಡಗಳನ್ನು ದಾಟಬೇಕಾಗಿರುವ ಮಕ್ಕಳ ಅಭಿವೃದ್ಧಿಯೂ ಕಷ್ಟವೇ !

ನಂದ:— ಅರಿಷ್ಟಶಾಂತಿಗಾಗಿ ಪುರೋಹಿತರ ಅಪ್ಪಣೆಯಂತೆ ದೇವತಾರಾಧನೆಗಳನ್ನೂ ಜಪತಪಗಳನ್ನೂ ನಡೆಯಿಸಲು ಏರ್ಪಡಿಸಿರುವೆನು.

ಕಂಸ:— ಅದೆಲ್ಲವೂ ಬರಿಯ ಭ್ರಮೆ! ವೈದಿಕರು ತಮ್ಮ ಉದರವನ್ನು ತುಂಬುವುದಕ್ಕೆ ಇಂತಹ ಉಪದೇಶಗಳನ್ನು ಕೊಡುವರು ಅಷ್ಟೇ !

ನಂದ:— ಮಕ್ಕಳ ಮೇಲಿನ ಪ್ರೀತಿಯು ಯಾರು ಹೇಳಿದುದನ್ನೂ ಮಾಡುವಂತೆ ಪ್ರೇರಿಸುವುದು ! ಆದರಲ್ಲಿಯೂ ಗುರುಗಳ ಅಪ್ಪಣೆಯು ಎಂದೂ ಮೀರತಕ್ಕುದಲ್ಲ!

ಕಂಸ:— (ತನ್ನಲ್ಲಿ ತಾನು) ಎಲೆ ಮನವೆ ! ಶತ್ರುಭೀತಿಯನ್ನು ಎಲ್ಲೆಲ್ಲಿಯೂ ಅನ್ವಯಿಸಿಕೊಂಡು ಮರುಗಬೇಡ ! ದೈತ್ಯಭಟರು ಭಯನಿವಾರಣ ಕಾರ್ಯದಲ್ಲಿ ತೊಡಗುವರು. (ಪ್ರಕಾಶ) ನಂದನೆ ! ಮತ್ತೇನು ವಿಶೇಷ ?

ನಂದ:— ಪ್ರಭುವೆ ! ಇಷ್ಟೇ; ಇನ್ನು ಯಾವ ವಿಶೇಷಗಳೂ ಇಲ್ಲ.

ವಸುದೇವ:— ಮಿತ್ರ ! ನಂದಗೋಪ ! ಗೋಕುಲದಲ್ಲಿ ನನ್ನ ಪತ್ನಿಯಾದ ರೋಹಿಣಿಯು ಗರ್ಭದಲ್ಲಿ ಉದಿಸಿರುವ ಬಲಭದ್ರನನ್ನು ನಿನ್ನ ಕುಮಾರನ ಜತೆಯಲ್ಲಿಯೇ ಪೋಷಿಸುತ್ತಿರಬೇಕೆಂದು ಬೇಡುವೆನು.

ನಂದ:— ಮಿತ್ರ ! ಆನಕದುಂದುಭಿ ! ನಿನ್ನ ಮಗನು ಬೇರೆಯೆ ? ಇಬ್ಬರನ್ನೂ ಎಚ್ಚರದಿಂದ ನೋಡಿಕೊಳ್ಳುವೆನು. (ಕಂಸನೊಡನೆ) ಪ್ರಭುವೆ ! ಅಪ್ಪಣೆಯಾದರೆ ನಾನಿನ್ನು ಹೊರಡುವೆನು.

ಕಂಸ:— ಒಳ್ಳೆಯದು; ನಂದಗೋಪನೆ ? ನೀನಿನ್ನು ಹೊರಡಬಹುದು.

ನಂದ:–– (ಇಬ್ಬರಿಗೂ ನಮಸ್ಕರಿಸಿ ಹೊರಡುವನು)

ಕಂಸ:— (ದುಗುಡದಿಂದ) ವಸುದೇವನೆ ! ಎಷ್ಟು ಧೈರ್ಯವನ್ನು ತಂದುಕೊಂಡರೂ ನನ್ನ ಹೃದಯವು ಭಯದಿಂದ ಕಂಪಿಸುವುದಲ್ಲ !

ವಸು:— ಭೋಜರಾಜ! ಮನದ ಸ್ಥಿತಿಯೇ ಅಂತಹದು.

( ತೆರೆಯಲ್ಲಿ )

*ಕಂದ॥ ಅಹಹ! ವಿಷಪೂರ್ಣವಕ್ಷೋ- ।
ರುಹಮಂ ಕರಮೂಡಿ ಕಾಡಿ ಕೊಲ್ವೆಂ; ಮೆಲ್ವೆಂ; ॥
ಮಹಿಯೊಳ್ ಹಸುಗೂಸುಗಳಂ ।
ಬಹು ಸುಖಮಂ ಸೂರೆಗೊಳ್ವೆನೆನಗಿನ್ನೆಣೆಯಾರ್ ॥ ೧೧ ॥

ಕಂಸ:— (ಕೇಳಿ ಸಂತೋಷದಿಂದ) ಆಹಾ! ಅಮಾತ್ಯ ಪ್ರೇರಿತಳಾದ ಪೂತನೆಯು ಆಗಲೇ ತನ್ನ ಕಾರ್ಯಕ್ಕಾಗಿ ಹೊರಟಿರುವಳು! ರಾಜಭಕ್ತಿಯುತರಾದ ಸಾಹಸಿಗಳಾದ ಸೇವಕರನ್ನು ಪಡೆದಿರುವ ನನಗೆ ಭಯವೇಕೆ? ನಾನೂ ಜಾಗರೂಕನಾಗಿ ಮುಂದೆ ಮುಂದೆ ಯಥೋಚಿತವಾದ ಸಹಾಯುಗಳನ್ನು ಕಲ್ಪಿಸಿಕೊಳ್ಳುವೆನು. (ವಸುದೇವನೊಡನೆ) ಭಾವನೆ! ಬಾ! ಹೋಗುವ! ( ಇಬ್ಬರೂ ಹೊರಡುವರು)

( ಅಹಹ! ವಿಷಪೂರ್ಣ ಇತ್ಯಾದಿ ಹೇಳುತ್ತ ಪೂತನೆಯು ಪ್ರವೇಶಿಸುವಳು )

ಪೂತನೆ:— ಆಹಹ! ಹಬ್ಬ! ಹಬ್ಬ! ಹಸುಳೆಗಳ ಬಿಸಿಬಿಸಿಯಾದ ರಕ್ತವನ್ನು ಮನದಣಿಯೆ ಕುಡಿದು ಕುಣಿದಾಡುವ ದೊಡ್ಡ ಹಬ್ಬ! ಇಂತಹ ಪುಣ್ಯವನ್ನು ನಮಗೆ ಅನುಗೊಳಿಸಿದ ಕಂಸರಾಜನ ಹೆಸರು ಶಾಶ್ವತವಾಗಿರಲಿ!

( ತೆರೆಯಲ್ಲಿ ಕಲಕಲವಾಗುವುದು )

ಪೂತನೆ:— (ನೋಡಿ) ಅದಾರು! ಶಕಟನೇ!

ಶಕಟ:— ನಾನೇ! ನಾನೇ! ಬಂದೆ! (ಪ್ರವೇಶಿಸುವನು)

ಪೂತನೆ:— ಶಕಟನೇ! ಸನ್ನದ್ಧನಾಗಿಯೇ ಹೊರಟಿರುವೆಯಷ್ಟೇ? ಇನ್ನೂ ಬೇಟೆಯಾವುದೂ ಸಿಕ್ಕಲಿಲ್ಲವೋ?

ಶಕಟ:— ಬೇಟೆಯೆ! ತಾನಾಗಿಯೇ ಸಿಕ್ಕುವುದು; ಆದಕ್ಕೆ ಕಷ್ಟವೇನು? ನೀನೇಕೆ ಇಲ್ಲಿಯೇ ಸುಳಿದಾಡುತ್ತಿರುವೆ? ಏನಾದರೂ ವಿಶೇಷವುಂಟೋ?

ಪೂತನೆ:— (ಜನಾಂತಿಕಂ) ಶಕಟನೇ! ಕೂಗಬೇಡ; ಈ ಗೋಕುಲದ ನಂದನ ಹೆಂಡಿತಿಯಾದ ಯಶೋದೆಯು ಗಂಡು ಮಗುವನ್ನು ಹೆತ್ತು ಇಂದಿಗೆ ಎಂಟು ದಿನಗಳು!!

ಶಕಟ:— (ಉತ್ಸಾಹದಿಂದ) ಗಂಡು ಮಗುವೇ! ನಮಗೆ ಬೇಕಾದುದೇ ಗಂಡು ಮಕ್ಕಳು!

ಪೂತನೆ:— ಶಕಟನೇ! ಇನ್ನು ಹೆರುಗೆಯ ಮನೆಯ ಹಸುಗೂಸಿನ ಮೇಲೆ ನಿನ್ನ ಸಾಹಸವು ಕೆಲಸಕ್ಕೆ ಬಾರದು; ನಾನೀಗ ಯಶೋದೆಯ ವೇಷದಿಂದ ಹೋಗಿ ವಿಷವನ್ನು ಉಣ್ಣಿಸಿ, ಆ ಬಾಲಕನನ್ನು ಕೊಲ್ಲುವೆನು.

ಶಕಟ:— ಪೂತನೆ! ಬೇಗನೆ ತೆರಳು! ನಮ್ಮ ರಾಜನ ಹಗೆ ಸಾಯಲಿ! ರಕ್ಕಸರ ಒಡಲು ತುಂಬಲಿ!

(ಪೂತನೆ ಹೊರಟಳು; ಶಕಟನು ಅಲ್ಲಲ್ಲಿ ಸುತ್ತಾಡುತ್ತಿರುವನು)

(ತೆರೆಯಲ್ಲಿ)

ಹೋ! ಹೋ! ಹೋ! ಸತ್ತೆನು! ಸತ್ತೆನು! ಸ್ತನ್ಯಪಾನದ ನೆವದಿಂದ ಈ ಕಪಟ ಬಾಲನು ನನ್ನ ಪ್ರಾಣಗಳನ್ನೇ ಹೀರಿ ಬಿಟ್ಟನು! ಶಕಟನೇ! ಶಕಟನೇ! ನೀನಾದರೂ ನನ್ನ ಹಗೆಯನ್ನು ಕೊಲ್ಲು! ಕೊಲ್ಲು!

ಶಕಟ:— (ಆತುರದಿಂದ) ಹಾ! ಹಾ! ಬಂದೆ ಬಂದೆ! (ಎಂದು ನುಗ್ಗಿ ಹೊರಟು) ಆಹಾ! ಪೂತನೆಯು ಪ್ರಾಣಗಳನ್ನು ಹೀರಿದ ಬಾಲಕನು ಸಾಮಾನ್ಯನಲ್ಲ; (ಆಲೋಚಿಸಿ) ಇರಲಿ! ಸಮಯವನ್ನು ನೋಡಿ, ನಾನು ಹಗೆ ತೀರಿಸಿಕೊಳ್ಳುವೆನು. ( ಮುಂದೆ ನೋಡಿ ) ಯಾರೋ ಬರುವಂತಿದೆ. ನನ್ನ ಗುಟ್ಟು ಬಯಲಾದೀತು; ನಾನು ಈಗಲೇ ಈ ರೂಪವನ್ನು ಬಿಟ್ಟು ಶಕಟರೂಪವನ್ನು ಧಾರಣಮಾಡುವೆನು. ( ಹೊರಡುವನು )

(ಅನಂತರ ಭದ್ರಕೇತುವೆಂಬ ವೈಮಾನಿಕನು ಭೂಮಿಗೆ ಇಳಿದು ಬರುವನು )

ಭದ್ರ:— ಆಹಾ.! ಮಹಾನುಭಾವನಾದ ಶ್ರೀ ಕೃಷ್ಣನ ಮಹಿಮೆಯನ್ನು ಬಲ್ಲವರಾರು? ತೊಟ್ಟಿಲ ಕೂಸಿನ ಪಾದ ಪ್ರಹಾರದಿಂದ ಶಕಟನೂ ಪೂತನೆಯ ದಾರಿಯನ್ನೇ ಹಿಡಿದನು.

---

* ರಾಗ ತಾಳ (ವೀರರು ನಾವೇ ಧಾರಿಣಿಯೊಳಗೆ) ಎಂಬಂತೆ.

ಅಹಹ! ನನ್ನಯ ಸಾಹಸಗಳನೇನೂಹಿಸಲಳವೇ ಮಹಿಯೊಳಗೆ ॥ಪ॥ ಓಹೋಹೋ! ನೋಳ್ಪೊಡೆ ಸರಿಸಮರಿಹರಾರ್ ನೆರೆ ಭುಜಬಲದಿ ಪರಿಕಿಸೆ ಜಗದಿ ॥ಅ॥ ವಿಷವುಣಿಸಿ। ಹಸುಳೆಗಳ । ಘಸ ಘಸ ಕೊಲ್ಲುವೆನಾ ಹಾಹಾ! ॥೧॥ ಹಬ್ಬವಿದೂ ಹಬ್ಬಿದುದೂ। ಉಬ್ಬುವೆ ಕೊಬ್ಬುವೆ ನಾ ಹಾಹಾ! । ಪೊಸ ಪೊಸ ಮಾಂಸದ ಬಿಸಿ ಬಿಸಿ ರಕ್ತದ ಸವಿಯುರಿಯುವೆನು । ಬಲು ಜವದೊಳು ನಾ ॥ ೨ ॥

ಹಸುಳೆಯಾದ ಮಾಧವನ ಸಾಹಸಕ್ಕೆ ಮೆಚ್ಚಿ, ದೇವೇಂದ್ರನು ಹೇಗೂ ದೇವತೆಗಳ ಕಾರ್ಯವು ಸಿದ್ಧಿಸಿತೆಂದು ಸಂತೋಷದಿಂದ ಸರ್ವತ್ರವಿಜಯ ಚಿಹ್ನವಾದ ಈ ವೈಜಯಂತೀ ಮಾಲೆಯನ್ನೂ ಕಟಕ ಮಕುಟ ಕೇಯೂರಗಳನ್ನೂ, ಜಯವಾಸುದೇವನಿಗೆ ಕೊಡಿಸಿ ಬರುವಂತೆ ನನಗಾಜ್ಞಾಪಿಸಿರುವನು. ನಾನಾ ದೇವ ರನ್ನು ಸೇವಿಸಿ ಕೃತಾರ್ಥನಾಗುವೆನು (ನಡೆದು ನೋಡಿ) ಆಹಾ! ಇದೊ! ಯಶೋದೆಯ ಅಂಕದಲ್ಲಿ ಆಡುತ್ತಿರುವ ಗೋವಿಂದನ ಲೀಲೆಯೇ ಲೀಲೆ! ಈ ಮಗುವಿನ ಆಟಗಳಿಂದ ಹಿಗ್ಗುತ್ತಿರುವ ಯಶೋದೆಯ ಪುಣ್ಯವನ್ನೆಷ್ಟೆಂದು ಬಣ್ಣಿಸಲಿ! ಆಹಾ! ಮಕ್ಕ ಳನ್ನು ಪಡೆದವರ ಪುಣ್ಯವೇ ಪುಣ್ಯ!

ಕಂ॥ ತೊದಳನುರ್ದಂ ಸೂಸುವಿನಂ ।
ಹೃದಯಂಗೊಳೆ ಮೊಳೆವ್ಪಪಲ್ಲು ಮುಗುವಾ ಜೊಲ್ಲುಂ!
ಪುದಿದ ತಳರ್ನಡೆ ಬೆಡಗಿನ ।
ಮೃದುಳರತಳ್ಕೆಯಿನದಾವ ಭಾಗ್ಯಂ ಭೋಗ್ಯಂ ॥೧೩॥

ಈ ನೋಟದ ಆನಂದವು ಎಷ್ಟು ಹೊತ್ತಾದರೂ ಅನುಭವಿ ಸತಕ್ಕದ್ದಾಗಿದೆ.

( ನಿಂತುನೋಡುತ್ತಿರುವನು. )

( ಅನಂತರ ಆಡುವ ಗೋವಿಂದನೂ ಯಶೋದೆಯೂ ಪ್ರವೇಶಿಸುವರು )

ಯಶೋ:— ಎಲೆ ಗೋವಿಂದ!

* ಕಂ॥ ಪರಿಪರಿದು ಬೀದಿ ಬೀದಿಯೊ–!
ಳಿರದಲೆ ವೈ; ಚಪಲ! ಬಾಲ! ನಾಂ ನಿನ್ನನದೇ–।
ಪರಿ ಪಿಡಿವುದೊ? ಕಾಣೆನಲೇ ।
ತರಳಾ! ನಿಲ್ ನಿಲ್ಲ! ದಂಡಿಸುವೆನಿಂ ದುರುಳಾ ॥೧೪।

( ಹಿಡಿದು ಕುಳ್ಳಿರಿಸಿಕೊಂಡು )

ಮಗು! ನೀನು ನನ್ನ ಕಣ್ಣಮುಂದೆಯೇ ಆಡಬಾರದೆ? ಬೀದಿಗೆ ಹೋಗುವುದೇಕೆ? ದನಕರುಗಳ ಕಾಲಿಗೆ ಸಿಕ್ಕಿದರೆ ನಿನ್ನ ಗತಿಯೇನು?

ಗೋವಿಂದ:—( ಕೈಬಿಡಿಸಿಕೊಂಡು ) ಅವ್ವಾ! ಅವ್ಮಾ! ಎಲ್ಲಿ ? ನನ್ನನ್ನು ಹಿಡಿದುಕೊ ! ನೋಡೋಣ

( ಓಡಿಹೋಗುವನು. )

ಯಶೋದೆ: —( ಹಿಂದೆಯೇ ಓಡಿ ಹಿಡಿದು ) ನನ್ನ ಮುದ್ದು ಮಗನೆ ! ನಿನ್ನೊಡನೆ ಆಡುತ್ತ ಕುಳಿತರೆ ನನಗೆ ಮನೆಯ ಕೆಲ ಸಗಳು ಹೇಗಾಗುವುವು ? ಹಾಲು ಕರೆಯಬೇಕು; ಕಾಸ ಬೇಕು; ಬೆಣ್ಣೆ ತೆಗೆಯಬೇಕು; ಅಡುಗೆ ಇನ್ನು ಯಾವಾಗ ಆಗುವುದೋ ?

ಗೋವಿಂದ :— ಅವ್ಮಾ ! ನಂದಿನಿಯನ್ನು ಮೇಯಿಸಿ ಕೊಂಡು ಬರುವೆನು ನನ್ನನ್ನು ಬಿಡು.

ಯಶೋದೆ:—ಮಗು; ನೀನು ದೊಡ್ಡವನಾದ ಮೇಲೆ ಮೇ ಯಿಸಿಕೊಂಡು ಬರುವೆಯಂತೆ !

ಗೋವಿಂದ:—(ಓಡಿ ಹೋಗಿ ಒಂದು ಕಾಲುಮಣೆಯ ಮೇಲೆ ನಿಂತು ಕೊಂಡು) ಅವ್ಮಾ ! ಅವ್ಮಾ ! ಇಲ್ಲಿ ನೋಡು; ನಾನು ಎಷ್ಟು ದೊಡ್ಡವನಾಗಿರುವೆನು ?

ಯಶೋದೆ:—(ಎತ್ತಿ ಮುತ್ತಿಟ್ಟು) ಮಗು ! ಬಹು ದೊಡ್ಡ ವನಾಗಿರುವೆ ! ದೊಡ್ಡವರು ತುಂಟತನವನ್ನು ಮಾಡಬಾರದು!

ಗೋವಿಂದ:–ಅವ್ಮಾ ಅಣ್ಣನೂ ನನ್ನ ಹಾಗೆಯೇ ದೊಡ್ಡ ವನಾಗಲಿಲ್ಲವೆ ?

ಯಶೋದೆ:—ಅಪ್ಪಾ! ನೀವಿಬ್ಬರೂ ಬಹು ದೊಡ್ಡವರು ! ನಿಮ್ಮನ್ನು ಹಿಡಿಯುವುದಕ್ಕೆ ಹತ್ತುಮಂದಿ ಕೆಲಸಬಿಟ್ಟು ಕಾದಿ ರಬೇಕು.

ಗೋವಿಂದ:—(ನಿಲುಗನ್ನಡಿಯಲ್ಲಿ ತನ್ನ ಪ್ರತಿಬಿಂಬವನ್ನು ನೋಡಿ) ಅವ್ಮಾ ! ನಮ್ಮ ಮನೆಗೆ ಇನ್ನೊಬ್ಬ ಕೃಷ್ಣನು ಬಂದಿರುವನು; ನಾವಿಬ್ಬರೂ ಆಡಿಕೊಳ್ಳುವೆವು ಬಿಡು.

ಯಶೋದೆ:—ಕೃಷ್ಣ ! ನಿನ್ನಂತೆ ಅವನೂ ತುಂಟನು ! ಇಬ್ಬರೂ ಕಾದಾಡದೆ ಆಡಿಕೊಳ್ಳುವಿರಾ !

ಗೋವಿಂದ: —ಇಲ್ಲವ್ಮಾ ! ನಾನೂ, ಅಣ್ಣನೂ ಎಂದಾ ದರೂ ಜಗಳವಾಡುವೆವೆ ?

(ಕನ್ನಡಿಯನ್ನು ಕುರಿತು)

---

* ರಾಗ……… ತಾಳ ( ಮೈತೋಬದಾರತುಮ್ಮೆ ) ಎಂಬಂತೆ.

ಬೀದಿಗೆ ಪೋಗದಿರ್ಕೈ। ಬಾ! ಬಾಲಕೇಸರಿ॥ ಬಾ! ಶೌರೀ ಮುರಾರೀ ಶ್ರೀ- ಹರಿಯೆ ಬಾ ॥ ಎನ್ನ ಕಣ್ಣಮುಂದಾಡೊ ನೀ। ಮುದ್ದುಚಿಣ್ಣನೆನ್ನನೇ ॥ ಬಾರೆಲೋ। ಕಾಣದೆ ನಿಲ್ಲಲಾರೆನೊ ॥ ಪಿಡಿಯಲಾರೆನೊ ಚಿನ್ನ। ತಡೆಯಲಾರೆನೊ ಚಿನ್ನ। ಬಾ— ಕುಂದ। ಮುಕುಂದ। ಗೋವಿಂದ। ಬಾಬಾ ॥೨॥

ಬಾ ! ಬಾ ! ಗೋವಿಂದ ! ನಾವಿಬ್ಬರೂ ಬೀದಿಯಲ್ಲಿ ಆಡಿಕೊಳ್ಳೋಣ.

( ಕರೆಯುತ್ತಾ ಓಡಿ ಹಿಂದಿರುಗಿ )

ಎಲ್ಲಿ ಅಮ್ಮಾ ! ಕೃಷ್ಣನು ಬರಲೇ ಇಲ್ಲ; ನೀನೇಕೆ ಅವನನ್ನು ಮನೆಯಲ್ಲಿಯೇ ನಿಲ್ಲಿಸಿಬಿಟ್ಟೆ! (ತಾಯನ್ನು ಹೊಡೆಯುವನು )

ಯಶೋದೆ:—ಮಗು ! ಅವನೀಗ ಒಳ್ಳೆಯ ಹುಡುಗ ! ಮನೆಯಲ್ಲಿಯೇ ಆಡುವನು; ನೀನೂ ಅವನ ಜತೆಯಲ್ಲಿಯೇ ಆಡಬಾರದೆ ?

ಗೋವಿಂದ: —ಮನೆಯನ್ನು ಬಿಟ್ಟು ಬಾರದ ಆ ಕೃಷ್ಣನ ಜತೆ ನನಗೆ ಬೇಡ ! (ಓಡುವನು)

ಯಶೋದೆ:—(ಎತ್ತಿಕೊಂಡು) ಮಗು ! ಒಂದು ಕತೆಯನ್ನು ಹೇಳಲೋ !

ಗೋವಿಂದ:–(ಉತ್ಸಾಹದಿಂದ) ಹೇಳು; ಅಮ್ಮಾ ! ಕತೆ ಹೇಳು!

ಯಶೋದ:— ಪೂರ್ವದಲ್ಲಿ ದಶರಥನೆಂಬ ದೊರೆ !

ಗೋವಿಂದ:—ಹುಂ !

ಯಶೋದೆ:—ಆತನಿಗೆ ರಾಮನೆಂಬ ಮಗನು !

ಗೋವಿಂದ:— ಹುಂ !

ಯಶೋದೆ:—ಅವನು ತಂದೆಯ ಮಾತಿನಂತೆ ಕಾಡಿಗೆ ಹೋದನು.

ಗೋವಿಂದ:—ಹುಂ !

ಯಶೋದೆ:—ಜತೆಯಲ್ಲಿ ಹೆಂಡಿತಿಯಾದ ಸೀತೆಯನ್ನೂ, ತಮ್ಮನಾದ ಲಕ್ಷ್ಮಣನನ್ನೂ ಕರೆದು ಕೊಂಡು ಹೋದನು.

ಗೋವಿಂದ:—ಹುಂ !

ಯಶೋ :— ರಾವಣನೆಂಬ ಕೆಟ್ಟ ರಾಕ್ಷಸನು ಸೀತೆಯನ್ನು ಕದ್ದುಕೊಂಡು ಹೋದನು.

ಗೋ :—(ಕಟಕಟನೆ ಹಲ್ಲು ಕಡಿದು) ಹೂಂ! (ಗರ್ಜಿಸುವನು).

ಯಶೋ: –(ತನ್ನಲ್ಲಿ ತಾನು) ಆಃ! ರಾಮಾವತಾರದಿಂದ ದಶಕಂದನನ್ನು ಮರ್ದಿಸಿದ ಮಹಾನುಭಾವನೇ ಈ ಕೃಷ್ಣನು! ಸಂದೇಹವಿಲ್ಲ! (ಪ್ರ) ಮಗು! ಕೋಪಗೊಳ್ಳಬೇಡ! ಆ ಕೆಟ್ಟ ರಾವಣನು ಈಗಿರುವನೇನು? ಮುಂದಿನ ಕಥೆಯನ್ನು ಕೇಳು!

ಗೋ:— ಹೇಳು! (ದರ್ಪದಿಂದ ನುಡಿವನು).

ಯಶೋ:— ಶ್ರೀರಾಮನು ಕಪಿರಾಜನ ಸಹಾಯದಿಂದ ಸಮುದ್ರಕ್ಕೆ ಸೇತುವನ್ನು ಕಟ್ಟಿ, ರಾವಣನನ್ನು ಕೊಂದು ಸೀತೆಯನ್ನು ಬಿಡಿಸಿ ತಂದನು.

ಗೋ: – ಹುಂ! ಸರಿ! ನಾನೀಗಲೇ ಹೋಗಿ, ರಾವಣನಂತಹ ಕೆಟ್ಟ ರಾಕ್ಷಸರು ಎಲ್ಲಿದ್ದರೂ, ತಲೆಯೊಡೆದು ಬರುವೆನು (ಓಡುವನು).

ಯಶೋ:—(ಬಹು ಕಷ್ಟದಿಂದ ಹಿಡಿದು) ಇವನ ತುಂಟತನವು ಕ್ಷಣಕ್ಷಣಕ್ಕೂ ಹೆಚ್ಚುವುದಲ್ಲ! ಏನು ಮಾಡುವುದು? (ಆಲೋಚಿಸಿ) ಎಲೊ ಕೃಷ್ಣಾ! ನಿನಗೆ ತಕ್ಕ ಶಿಕ್ಷೆಯನ್ನು ಕೊಡುವೆನು ತಾಳು!

(ಹೋಗಿ ಒಂದು ಹಗ್ಗವನ್ನು ತಂದು ಒರಳಲ್ಲಿ ಕಟ್ಟಿ ಹಾಕುವಳು)

*ಕಂ॥ ಪೋ ಪೋ ಪೋಗೆಲೆ ಬಾಲಕ!
ಗೋಪಾಲಕ! ತೋರು! ನೋಳ್ಪೆನಿಂ ಚಪಳತೆಯಂ।
ಏ ಪೊಳ್ತುಂ ಬೀದಿಯೊಳೆಲೆ।
ವಾಪರಿಗಿಂತಾಯ್ತು; ನಿನಗೆ ದಂಡನೆ ದುರುಳಾ ॥೧೪॥

ಮೂರ್ಖನೆ! ಬಿದ್ದಿರು ಅಲ್ಲಿ! ಇನ್ನು ನನ್ನ ಕೆಲಸಕ್ಕೆ ನಿರಾತಂಕವಾಗಿ ಹೋಗುವೆನು. (ಕೃಷ್ಣನನ್ನು ನೋಡಿ ನಗುತ್ತಾ ಹೊರಟಳು)

( ಗೋವಿಂದನು ಒರಳನ್ನೂ ಎಳೆದುಕೊಂಡು ಬೀದಿಗೆ ಹೋಗುವನು.)

( ಪ್ರವೇಶಿಸಿ)

ಭದ್ರಕೇತು:— ಉಲೂಖಲನಿಬದ್ಧನಾದ ದಾಮೋದರನು ಎಷ್ಟು ಚೆನ್ನಾಗಿರುವನು! ಇವನೇನು ಸಾಮಾನ್ಯ ಬಾಲನೇ? ಒರಳುಕಲ್ಲು ಇವನಿಗೆ ಲಕ್ಷವೇ? (ಆಶ್ಚರ್ಯದಿಂದ ನೋಡುತ್ತ)

---

* ( ಇಷ್ಟುಮೇ ಜೀ ) ಎಂಬಂತೆ

ತಾಳು ತಾಳೆಂತು ಪೋಗುವೆ ದುರುಳಾ । ನಿನ್ನ । ಲೀಲೆಯ ನೋಡುವೆ ಕರುಳಾ ॥ ಪ ॥ ಎಲೆ ಬಾಲ! ಚಂಚಲಶೀಲ! ಪೇಳಿದರು ಕೇಳದಂತೆ ಓಡಿಯೋಡಿ ಪೋಪೆ ಥೀ ಥೀ! ॥ ಅ ॥ ನೆಟ್ಟನೆಯೊರಳೊಳು । ಕಟ್ಟುವೆನು ನಿನ್ನ । ಬಿಟ್ಟುಪೋಗುವೆನು । ದುಷ್ಟನೇ ॥ ಪೋ ಪೋಗು । ಪೋ ಪೋಗು । ನೋಡುವೆನು ॥ ಕೆಟ್ಟತನಕಿಂತು ನಿನಗೆ ಕೊಟ್ಟಿರುವೆ ಶಿಕ್ಷೆಯ ॥ ತೋರು ತೋರು ಸಾಹಸಾಕ್ಷ । ತೋರು ನಿನ್ನ ಬಲ್ಮೆ ಥೀ ಥೀ ॥ ೧ ॥

ಓಹೋ! ಮತ್ತಿಯ ಮರಗಳ ನಡುವೆ ಒರಳು ಸಿಕ್ಕಿಕೊಂಡಿತು! ಹಿಡಿದು ಎಳೆಯುತ್ತಿರುವನು.

( ಕೆರೆಯಲ್ಲಿ ಕಲಕಲವಾಗುವದು).

( ತಿರುಗಿ ನೋಡಿ )

ಕಂ॥ ಅಮಮಾ! ಗಗನಕೆ ಬೆಳೆದೀ-।
ಯಮಳಾರ್ಜುನ ಸಾಲವಿಂತು ಛಟಛಟರವದಿಂ ।
ಕ್ಷಮೆಗುರುಳ್ಬುವಲೆ ! ಸಮೂಲಂ ।
ಸುಮನೋಹರ ರೂಪನಿವನ ಬಲ್ಮೆಯದೆಂತೋ?॥೧೫॥

( ಕೆರೆಯಲ್ಲಿ )

*ವೃ॥ ಸರೋಜಾತ ನೇತ್ರಾ ! ಸದಾನಂದಪಾತ್ರಾ !
ಪುರಾರಾತಿ ಮಿತ್ರಾ ! ಸುಧಾಸೂತಿವಕ್ತ್ರಾ !।
ಧರಾಧಾರ ಧೀರಾ ! ಚತುರ್ವೇದ ಸಾರಾ ।
ಚಿರಂ ಧರ್ಮವಾರ್ಲ್ಧ್ಯೈ ! ಯಶೋದಾಕಿಶೋರಾ ॥೧೬॥

ಭದ್ರ:— (ಕೇಳಿ) ಇವರಾರು? ಈ ಬಾಲಕೇಸರಿಯನ್ನು ಹೀಗೆ ಹೊಗಳುವರು ? (ನೋಡಿ) ಆಹಾ ! ಕುಬೇರ ಪುತ್ರರಾದ ಮಣಿಗ್ರೀವನಳಕೂಬರರೆಂಬ ಗಂಧರ್ವರು !

( ಅನಂತರ ಸರೋಜಾತ ನೇತ್ರಾ ಎಂದು ಹಾಡುತ್ತ ಗಂಧರ್ವರು ಪ್ರವೇಶಿಸುವರು).

ಗಂಧರ್ವರು:— ಭದ್ರಕೇತುವೇ ! ಮಹಾತ್ಮರಾದ ನಾರದ ಮುನಿಗಳ ಶಾಪದಿಂದ ಬಹು ದಿನಗಳಿಂದಲೂ ಈ ಮತ್ತಿಯ ಮರಗಳಾಗಿದ್ದೆವು; ಇಂದಿಗೆ ಶ್ರೀಹರಿಯ ಚರಣಾನುಗ್ರಹದಿಂದ ಶಾಪವಿಮೋಚನವಾಯಿತು.

ಭದ್ರ:— ಗಂಧರ್ವರಾಜರೆ ! ಪರಮಾತ್ಮನಾದ ಗೋವಿಂದನ ಕೃಪೆಗೆ ಪಾತ್ರರಾದ ನೀವು ಧನ್ಯರು ! ಸಿದ್ಧವಾಗಿರುವ ವಿಮಾನವನ್ನೇರಿ ನಿಮ್ಮ ಲೋಕಕ್ಕೆ ಪ್ರಯಾಣ ಮಾಡಿರಿ! ನಾನೂ ಭಗವಂತನ ಸೇವೆಯಿಂದ ಕೃತಾರ್ಥನಾಗುವೆನು.

( ಗಂಧರ್ವರು ನಮಸ್ಕರಿಸಿ ಹೊರಡುವರು )

ಭದ್ರ:— ( ಗೋವಿಂದನ ಪಾದಕ್ಕೆ ನಮಸ್ಕರಿಸಿ )

+ ಕಂದ॥ ಇದು ಪಲ್ ಸುರವರಪಾದಪ ।
ಮಿದು ದಿವ್ಯ ಕಲಾಪಮುಪಹೃತಾಶ್ರಿತತಾಪಂ ।
ಇದು ಪಾವನಮಖಿಲಾವನ ।
ಮಿದು ಸರ್ವಸಿದಾನ ಮಲ್ತೆ? ಮಾಧವ ಚರಣಂ ॥೧೭॥

( ಹಾರಾದಿಗಳಿಂದ ಅಲಂಕರಿಸಿ )

ವಾಸುದೇವನ ಮಹಿಮೆಯನ್ನು ಇಲ್ಲಿ ನಾನು ಕಂಡಂತೆ ದೇವನಾಥನ ಸನ್ನಿಧಿಯಲ್ಲಿ ವಿಜ್ಞಾಪಿಸುವೆನು.

( ಹೊರಟು ಹೋಗುವನು. )

## ಇದು ಪ್ರಥಮಾಂಕವು

---

* ( ಮೋಹಬತ್ಕರಿಯೊ ಎಂಬಂತೆ )

ಜಯ ಮಾಧವಾ! ಜಯ ಕೇಶವಾ! ಜಯ ಯಾದವಾ! ಕುಲ ವೈಭವಾ ॥ ಪ ॥ ಜಯ ಶ್ರೀಧರ! ಜಯ ಶ್ರೀಕರ । ಜಯ ಮಂದರ। ಧರ ಸುಂದರ ॥ ಅ ॥ ನಂದ ನಂದನಾ । ಚಂದಿರಾನನಾ । ತಂದೆಯೆಮ್ಮಯ । ದುಂದುಗಂಗಳ ॥ ಇಂದು ಕಳೆದಾ । ನುನನಿತ್ತೈ । ವಂದಿತಾ ನುರ । ಬೃಂದಪಾಲಕ ॥

+ ( ಮದನಬಾರೀವಾಂತು ) ಎಂಬಂತೆ.

ಪರಮ ಪಾವನ ಶ್ರೀ । ಧರನ ಪಾದಕಂಡೇ ॥ ಪ ॥ ಇದು ಸರ್ವಲೋಕ ಸುಖಸಾಧನಾ । ಇದು ಸುಂದರ । ಕರುಣಾಕರ ॥ ಅ ॥ ಸರ್ವಲೋಕಭಾಗ್ಯ । ಸರ್ವಮಂಗಳವು । ಶರ್ವಮುಖ್ಯ ದೇವ । ವಂದ್ಯಮಾನವು ॥ ಪರಮ ಮೋಕ್ಷಪ್ರದ । ನಿರತ ಭಕ್ತಮೋದ । ದುರಿತವಾರಣವು । ದುಃಖ ದೂರವೂ ॥ ೧ ॥

# ಯಾದವಾಭ್ಯುದಯನಾಟಕಂ

ಲೇಖಕ :— ಶ್ರೀ ಸರಿಮಿ ಪದ್ಮನಾಭಯ್ಯನವರು

( ಕಳೆದ ಸಂಚಿಕೆಯಿಂದ ಮುಂದೆ ಸಾಗಿದ್ದು )

## ದ್ವಿತೀಯಾಂಕವು.

(ದನಗಳನ್ನು ಮೇಯಿಸುತ್ತ ಗೋವಿಂದನು ಗೋಪಾಲಕರೊಡನೆ ಪ್ರವೇಶಿಸುವನು. )

(ಗೋವಿಂದನು ಕೊಳಲನ್ನು ಬಾಜಿಸುವನು)

ಗೋಪಾಲಕರು:— ಆಃ! ಎಂತಹ ಮನೋಹರವಾದ ಗಾನ !

*ವೃ॥ ಶ್ರೀಕರ ದುಗ್ಧವಾರ್ಧಿಲಹರೀಚಯವೋ?
ವ್ರಜಭಾಮಿನೀ ಮನೋ– ।
ವ್ಯಾಕುಲತಾಪಹಾಮೃತ ರಸೋತ್ಕರ
ವೃಷ್ಟಿಯೊ? ಮೌನಿಹೃತ್ಪ್ರಮೋ– ।
ದಾಕರ ಮುಕ್ತಿಮಂತ್ರದಮೃತಾಕ್ಷರ
ಮಾಲೆಯೊ? ವೇಣುಗಾನವೋ ? ।
ಗೋಕುಲ ಪಾಲನೋತ್ಸವದ ಮಾಧವ!
ನಿನ್ನ ವಿನೋದವೆಂತುಟೋ ? ॥ ೧೮ ॥

ಭಾಪು ! ಭಾಪು ! ಕೃಷ್ಣ !

ಸುದರ್ಶನ:— ಗೋವಿಂದ ! ನಿನ್ನೊಡನೆ ಆಡುವ ನಮಗೆ ಮತ್ತೊಂದರ ಮೇಲೆ ಮನಸ್ಸೇ ಹೋಗುವುದಿಲ್ಲ; ಆದುದರಿಂದ:—

ವೃ॥ ನಿನ್ನೊಡನಾಡಿ, ನಿನ್ನಯ ಸುಲೀಲೆಯ ನೋಡಿ,
ಪೊದಲ್ವ ಸಂತತಂ ।
ನಿನ್ನಯ ಚೆಲ್ವನೇ ಮನದೆ ಭಾವಿಸಿ, ನಿನ್ನ
ಮೃದೂಕ್ತಿಗೇಳ್ವ ಮೇಣ್ ॥
ನಿನ್ನ ಚರಿತ್ರಮಂ ಪದೆದು ಪಾಡಿ,
ಮನೋಹರ ! ನಿನ್ನ ನಣ್ಪಿನಿಂ–।
ದಂ ನೆರೆ ಬಾಳ್ವ ಪುಣ್ಯಮೆಮಗಾವಗಮಕ್ಕೆಮ !
ನಂದ ನಂದನಾ ॥ ೧೯ ॥

ಗೋವಿಂದ:— ಮಿತ್ರರೆ ! ನನ್ನಲ್ಲಿ ನಿಮಗಿರುವ ಪ್ರೀತಿಯು ಅನಿರ್ವಾಚ್ಯವಾದುದೆಂದು ಬಲ್ಲೆನು. ಇದಕ್ಕಾಗಿ ನಿಮಗೆ ಬಹು ಕೃತಜ್ಞನಾಗಿರುವೆನು.

ಬಲಭದ್ರ:—ಕೃಷ್ಣ ! ಈ ಬೃಂದಾವನ ಪ್ರದೇಶವು ಎಷ್ಟು ಮನೋಜ್ಞವಾಗಿರುವುದು ! ಹುಲ್ಲು ಗಾವಲುಗಳು ಮರಕತ ರಂಗದಂತೆ ಶೋಭಿಸುತ್ತಿವೆ.

ಗೋವಿಂದ:— ಆಹುದು ನಿಶ್ಚಯ !

† ಕಂದ॥ ಎಳವುಲ್ಲುಂ, ತಣ್ಣೆಳಲುಂ ।
ತಿಳಿ ನೀರುಂ ನೆರೆ ಸಮೃದ್ಧಮಾಗಿರೆ ಹೃದಯುಂ ॥
ಗೊಳಿಪೀಯೆಡೆ, ತುರುಗಾವೊಡೆ ।
ಕೆಳೆಯರೆ ಸಲೆಯೋಗ್ಯಮೆನಿಸಿ ರಾಜಿಪುವಲ್ತೇ ॥೨೦

ನಂದಕ:— ಗೋವಿಂದ! ನಿನಗೆ ಗೋವುಗಳಲ್ಲಿ ಎಷ್ಟು ಪ್ರೀತಿ !

ಗೋವಿಂದ:— ಮಿತ್ರ ! ನಂದಕ ! ಆವಾಗಲೂ ಪರೋಪಕಾರಿಗಳಾದೀ ಸಾಧು ಪ್ರಾಣಿಗಳಿಗಿಂತ ಪ್ರೀತಿಸತಕ್ಕ ವಸ್ತು ಬೇರೆಯಿರುವುದೇ ?

ಬಲ:— ನಂದಕನೆ! ದೊಡ್ಡವರು ಹೇಳುವುದಿಲ್ಲವೆ? “ ಗೋಸೇವೆಗಿಂತ ಶ್ರೇಷ್ಠವಾದ ವ್ರತವಿಲ್ಲನೆಂದೂ, ಗೋವಿನ

---

* ರಾಗ— ( ಕೊಲುವ ಮೇರಗಾದ ) ಎಂಬಂತೆ

ಕಮಲನಾಭನೆ! ನಿನ್ನ । ಈ ವೇಣುಗಾನ ॥ಪ॥ ಸುಮಧುರ ಸುಖಕರ। ಅಮೃತರಸೋತ್ಕರ ॥ಅ ವಿಮಲ ವ್ರಜಾಂಗನಾ । ಸುಮನೋವಿನೋದನ ॥ ಯಮಿಹೃದಯೋಪ್ಸಿತ । ಮುಕ್ತಿಮಂತ್ರಾಕ್ಷರ ॥೧॥ ಕಲಿಕಲುಷಾಸಹ । ಕಾರುಣ್ಯವೈಭವ॥ ಸುಲಲಿತಗೋಕುಲ । ಬೃಂದಾವನೋತ್ಸವ ॥೨॥

† ರಾಗ— ( ಕೋಮಲೆ ನೋಡಿವನಂಗಪತೀ ) ಎಂಬಂತೆ

ಕಾನನವೇಂ ಸುವಿನೋದನವು । ಮೋಹನವು ಬೃಂದಾವನವು ॥ಪ॥ ಕಂಗೊಳಿಸುವುವೀಪಸುವುಲ್ಲೆಡೆಗಳು । ತಂಗೊಳಗಳು ಬಲು ರಮ್ಯಗಳು ॥ ಹಿಂಗದೆ ನಮ್ಮಯ ಗೋಗಣವಂ । ಪಾಲಿಸುವಂ ಸಲೆ ರಾಲಿಸುವಂ ॥೧॥ ಮರಕತರಂಗವಿದೊಬವೊಳೆಸೆವುದು । ಸುರುಚಿರನಮಾದೀ ಭೂತಲವು ॥ ಹಸುಸದೆಸಳು ಮಿಕೆ ತಣ್ಣೆಳಲೊಳ್ । ನಿರಿಸುಖವನು ನಾವ್ ಪಡೆಯುವೆವು. ॥ ೨ ॥

ಸರ್ವಾವಯವಗಳಲ್ಲಿಯೂ ಸಮಸ್ತ ದೇವತೆಗಳೂ ಅಧಿಷ್ಠಿತರಾಗಿರುವರೆಂದೂ". ಮತ್ತು ಗೋವು ಧರ್ಮ ದೇವತೆಯುಲ್ಲವೆ?

ಸುಧಾ:— ಅಹುದು ! ಸತ್ಯ ಸತ್ಯ ! ತನ್ನನ್ನು ಸಾಕುವವರನ್ನು ಕಾಣುತ್ತಲೆ " ಅಂಬಾ " ಎಂದು ಕರೆದು ಕೊರಳನ್ನು ಚಾಚಿ, ಬಾಲವನ್ನೆತ್ತಿ, ನಾಲಿಗೆಯಿಂದ ನೆಕ್ಕುತ್ತ, ಪ್ರೀತಿಸುವ ಗೋವುಗಳಂತಹ ಕೃತಜ್ಞತೆಯುಳ್ಳ ಪ್ರಾಣಿಗಳು ಲೋಕದಲ್ಲಿಯೇ ಇಲ್ಲ.

ಭದ್ರ:— ಹಸುಗಳ ಮೈತುರಿಸುವುದರಿಂದ ಕೋಟಿಯಜ್ಞಗಳ ಫಲವು ಲಭಿಸುವುದೆಂದೂ, ಗೋದಾನಕ್ಕಿಂತ ಉತ್ತಮವಾದ ದಾನವಿಲ್ಲನೆಂದೂ ತಿಳಿದವರು ಹೇಳುವರು !

ಗೋವಿಂದ:—ಅಣ್ಣ ! ಬಲಭದ್ರ ! ಈ ಗೋವುಗಳಂತಹ, ಆನಂದ ಜೀವಿಗಳು ಲೋಕದಲ್ಲಿಯೇ ಇಲ್ಲ. ಇವುಗಳೊಡನೆ ಆಡಿ, ವಿನೋದಿಸುವ ನಮ್ಮ ಪುಣ್ಯಕ್ಕೆಣೆಯುಂಟೆ ?

ಬಲ:— ಕೃಷ್ಣ ! ಹಸುಗಳಂತೆಯೂ ಹಸುಗೂಸುಗಳಂತೆಯೂ, ನಿರ್ಮಲವಾದ ಮನಸ್ಸುಳ್ಳವರೇ ನಿನ್ನ ಪ್ರೀತಿಗೆ ಪಾತ್ರರು !

ಸುದರ್ಶನ:— ದಾಮೋದರ ! ನಮ್ಮ ಗೋವುಗಳು ಇಲ್ಲಿಯೇ ಎಳೆಯ ಹುಲ್ಲನ್ನು ಮೇದು, ತಿಳಿನೀರು ಕುಡಿದು ತಣ್ಣೆಳಲಲ್ಲಿ ಮೆಲುಕು ಹಾಕುತ್ತಿರಲಿ ! ನಾವು ಈ ವನದ ರಮ್ಯ ಸ್ಥಳಗಳನ್ನು ನೋಡಿಕೊಂಡು ಬರುವ !

ಗೋವಿಂದ:—ಮಿತ್ರ ! ಹಾಗೆಯೇ ಆಗಲಿ !

ಎಲ್ಲರೂ ಹೊರಟು ಬರುವರು

ಸುದರ್ಶನ:—ಶ್ರೀಧರ ! ಇತ್ತನೋಡು ! ಲೋಕಪಾವನೆಯಾದ ಯಮುನಾನದಿ ?

ಗೋವಿಂದ:—

*ವೃ॥ ವಿಮಲತರಂಗಸಂಘಕಲನಾದಮನೋಹರ ।
ಮುಫ್ಛಕಂಜ ಕಾ-
ಸುಮಸುರಭಪ್ರಮೋದಮಮಲಾಸವ
ಮುಕ್ತಿಮಧುವ್ರತಾಳಿಸಂ ।
ಭ್ರಮಮಧುರಾರವಪ್ರಲಸಿತಂ ತಟಜೋದ್ವನ
ಪುಂಜ ಮಂಜುಳಂ ।
ಸಮುದ ವಿಲಾಸ ಸಾರಸ ಸುಖಾಸ್ಪದವೊನದಿಯೇಂ
ಮನೋಜ್ಞನೋ ? ॥೨೧॥

ಬಲ:—

ಕಂದ॥ ನೆನೆದರ್ಗಿಷ್ಟಾರ್ಥಂಗಳ ।
ನನುಗೊಳಿಪಳ್ ಮುದದೆ ದರ್ಶನಂಗೊಂಡವರಾ ।
ಘನದುರಿತಂಗಳ ಕಳೆವಳ್ ।
ಮನವೊಲ್ದವಗಾಹಿಸಲ್ಕೆ ಮುಕ್ತಿಯ ಸಲಿಪಳ್ ॥೨೨॥

ಸೂರ್ಯನಂದಿನಿಯಾದ ಕಾಳಿಂದಿಯು ಇಂತಹ ಮಹಿಮೆಯುಳ್ಳವಳಾಗಿರುವುದೇನೂ ಆಶ್ಚರ್ಯವಲ್ಲ ! ( ಎಂದು ಭಕ್ತಿಯಿಂದ) ಲೋಕಪಾವನೆಯಾದ ಯಮುನೆಯೇ ! ನಿನ್ನನ್ನು ನಮಸ್ಕರಿಸುವೆನು. (ವಂದಿಸುವನು)

ಗೋವಿಂದ:—ಆಹಾ ! ಈ ನದೀತಟದ ವನಗಳು ಎಷ್ಟು ರಮ್ಯವಾಗಿರುವುವು ?

ವೃ॥ ಫಳಭರದಿಂದೆ ಜೋಲ್ದಿಳೆಯ ವಂದಿಸುವಂತಿರೆ
ತೋರ್ಪಪಾದಪಾ- ।
ವಳಿಯಿನನೂನ ಪುಷ್ಪವರ ಮಂಜರಿಯಿಂ, ಜಗದೀಶನಂ ಸುನಿ-॥
ರ್ಮಳತೆಯಿನರ್ಚಿಪಂತೆಸೆವಪೂಲತೆಯಿಂಕಳನಾದದಿಂದೆಮಂ- ।
ಗಳವಿಭುವಂ ಪ್ರಿಯಂ ನುತಿಸುವಂತೆಸೆವೀ ಖಗದಿಂ
ಮನೋಹರಂ ॥೨೩॥

ಮಿತ್ರರೆ ! ಅದೋ ನೋಡಿ ! ಅಲ್ಲಿ ಒಂದು ತಾಳೆಯ ತೋಪಿರುವಂತೆ ಕಾಣುವುದು. ನಾವೆಲ್ಲರೂ ಅಲ್ಲಿಗೆ ಹೋಗಿ ಬೇಕಾದಷ್ಟು ತಾಳೆಯ ಹಣ್ಣುಗಳನ್ನು ತಿಂದು ಬರುವ ಬನ್ನಿರಿ !

ಎಲ್ಲರೂ:—ಹೂ! ಹೂ! ಹೂ!! ಅಲ್ಲಿಗೆ ಹೋಗಬಾರದು; ಹೋಗಬಾರದು.

ಗೋವಿಂದ:— ಏಕೆ ?

---

*ರಾಗ— ತಾಳ ( ನೈಘೊಡೊರೇ ಮಧುವಾಲೊ ) ಎಂಬಂತೆ

ಎಂತಿಹುದೀ ನದಿಯೀಂ ತಾ। ರಮ್ಯಂ ಮನೋಹರಾ।ಪ॥ ಮನೋಹರು । ಮುದಾಕರಂ । ಬಹುಸುಖಾಕರಂ ॥ಅ॥ ಕಂಜ ಕೌಸುಮಾಸವಪ್ರಮತ್ತ ಭೃಂಗರಾವದಿಂ ॥ ಮಂಜುಳವೂ ॥ ಬಣ್ಣಿಸುವೆನೆಂತಿದಂ । ಚಾರುವಿಹಗ ವಿಹಾರ ಕಲುಷವಿದೂರವನುಪಮಂ ॥೧॥

ಸುದರ್ಶನ* ಆ ವನದಲ್ಲಿ ಕತ್ತೆಯ ರೂಪಿನವನಾದ ಧೇನುಕನೆಂಬ ರಾಕ್ಷಸನಿರುವನು; ಅಲ್ಲಿಗೆ ಹೋದವರನ್ನು ಒದೆದು ಕೊಂದುಬಿಡುವನು. ಆದುದರಿಂದ ಆ ದುಷ್ಟ ಸಹವಾಸವು ನಮಗೇಕೆ ? ಬೇಡವಪ್ಪಾ ! ಬೇಡ !

ಗೋವಿಂದ: — ಆ ಕತ್ತೆಗೆ ಅಷ್ಟು ಸಾಮರ್ಥ್ಯವಿರುವುದೆ ?

ಸುದ:— ಅದು ಸಾಮಾನ್ಯವಾದ ಕತ್ತೆಯೆಂದೆಣಿಸಬೇಡ ! ಹಿಂದೆ ಒಂದು ವೇಳೆ ದೇವೇಂದ್ರನು ತಾಳಮಧುವನ್ನು ಕುಡಿಯಲಪೇಕ್ಷಿಸಿ ಆ ವನಕ್ಕೆ ಬಂದು ಧೇನುಕನಿಂದ ಒದೆಯಿಸಿಕೊಂಡು ಪರಿವಾರದೊಡನೆ ಬದುಕಿದರೆ ಸಾಕೆಂದು ಓಡಿದನಂತೆ !

ಗೋವಿಂದ:— ಆಗಲಿ ! ಪರೀಕ್ಷಿಸಿ ನೋಡುವೆನು.

ಸುದ:— ಆ ಪರೀಕ್ಷೆಯಿಂದ ನಮಗಾಗಬೇಕಾದುದೇನು ?

ಗೋವಿಂದ:— ತಾಳೆಯ ಹಣ್ಣುಗಳು !

ಸುದ:— ತಾಳೆಯ ಹಣ್ಣನ್ನು ತಿನ್ನದಿದ್ದರೆ ನಷ್ಟವೇನು !

ಗೋವಿಂದ:— ನಮಗೆ ಮಾತ್ರವಲ್ಲ; ಲೋಕಕ್ಕೇ ನಷ್ಟ !

ಸುದ:— ಅದು ಹೇಗೆ?

ಗೋವಿಂದ:— "ಶ್ಮಶಾನಪುಷ್ಪಗಳಂತೆ" ತಾಳವನವು ಅಸೇವ್ಯವಾಗಿರುವುದಲ್ಲವೆ ?

ಸುದ:— ಇದಕ್ಕೆ ನಾವೇನು ಮಾಡುವುದು?

ಗೋವಿಂದ: — ಆ ರಾಸಭರಾಕ್ಷಸನನ್ನು ಶಿಕ್ಷಿಸುವುದು.

ಸುದ:— ಅಷ್ಟು ದೊಡ್ಡ ಕೆಲಸವು ಬಾಲಕರಾದ ನಮಗೇಕೆ ?

ಗೋವಿಂದ:— ದೊಡ್ಡವರು ಬಾಲಕರ ಪಾಲಿಗೆ ಬಿಟ್ಟುದರಿಂದ !

ಸುದ:— ಅಸಾಧ್ಯವೆಂದು ಭಾವಿಸಿ ಯಾರೂ ಅವನ ಗೋಜಿಗೆ ಹೋಗದೆ ಬಿಟ್ಟುಬಿಟ್ಟರು !

ಗೋವಿಂದ:— ಅಸಾಧ್ಯವಾದರೆ ನಾವೂ ಬಿಟ್ಟುಬಿಡುವ !

ಸುದ:— ಏನನ್ನು ? ಪ್ರಾಣಗಳನ್ನೊ ?

ಗೋವಿಂದ:— ಮಿತ್ರ ! ಲೋಕಸೇವೆಯಲ್ಲಿ ಪ್ರಾಣಗಳನ್ನು ಬಿಡುವುದೂ ಶ್ರೇಯಸ್ಕರವಲ್ಲವೆ ? ದಧೀಚಿಮಹರ್ಷಿಯು ದೇವತೆಗಳ ಕಾರ್ಯಕ್ಕಾಗಿ ಬೆನ್ನು ಮೂಳೆಯನ್ನೇ ಕೊಟ್ಟ ಕಥೆ ನಿಮಗೆ ತಿಳಿಯದೋ ?

ಸುದ:— ಮಾಧವ! ಸುಮ್ಮನೆ ಇರು ? ಹೇಳಿದ ಮಾತನ್ನು ಕೇಳು !

ಗೋವಿಂದ:— ಸುದರ್ಶನ ! ನಾನು ಕೇಳುವ ಮಾತನ್ನು ಹೇಳು.

ಸುದ:— ಮೂರ್ಖನೆ ! ತಲೆಗಟ್ಟಿಯಾಗಿರುವುದೆಂದು ಕಲ್ಲನ್ನು ಹಾಯುವೆಯಾ? ನಿನಗೇನು ಪ್ರಾಣಗಳು ಅಷ್ಟು ಹೊರೆಯಾಗಿರುವುವೋ ?

ಗೋ:— ಹೊರೆಯಾಗಿರುವ ಧೇನುಕನ ಪ್ರಾಣಗಳನ್ನು ಇಳಿಸಿ ಬರುವೆನು; ನೀವು ವಿನೋದವನ್ನು ನೋಡುತ್ತಿರಿ !

(ಹೊರಟು ಹೋಗುವನು)

ಎಲ್ಲರೂ:— ಅಕಟಾ ! ಈ ತುಂಟ ಹುಡುಗನು ಹೊರಟೇ ಹೋದನಲ್ಲಾ ! (ಚಿಂತಿಸುವರು).

(ತೆರೆಯುಲ್ಲಿ)

ಕಂ॥ ಸಿಡಿಲಂತೆ ಗರ್ಜಿಸುತ್ತುವಿೂ ।
ಯೆಡೆಯಿಂ ಬರುತಿರ್ಪನೀಖಿಲಾಧಮನಿವನಂ ।
ಪಿಡಿದಿಕ್ಕಿ ತಾಳೆವಣ್ಗಳ ।
ಕೆಡಪುವೆನೀ ನೀಚನುರ್ಕು ತಾನಳಿವನ್ನಂ ॥ ೨೪ ॥

ಎಲ್ಲರೂ:— ಅಯ್ಯೋ ! ಪ್ರಮಾದವನ್ನು ಕೈಕೊಂಡಿರುವನಲ್ಲ !

---

* ತಾಳ (ವಿಜಯಿಸುನೀಂ ವಿಜಯಿಸುನೀಂ) ಎಂಬಂತೆ

ಗೋಪರು:— ಬೇಡವೋ ನೀಂ ! ಬೇಡವೋ ನೀಂ । ಕೇಳೆಲೊ ನುಡಿಯಾ ॥ಪ॥ ನಾಡೆಖಿಲನೊಳಾಡುವಸರಿ ಬಾಲರಿಗೇಕೈ ।ಅ॥

ಗೋವಿಂದ: — ಫಡ! ಫಡ! ಫಡ! ಬಿಡು! ಬಿಡು! ಬಿಡು! ತುಡುಕುವೆ ಖಳನಾ ॥ ನಡೆದು। ತಡೆದು। ಬಡಿದು। ಜಡಿದ. । ಪೊಡವಿಯು ಪೊರೆವೇ।
ಒಡನೈಯ್ದು ಬರುವೇ। ತಡೆವುದು ತರವೇ ॥೧॥

ಗೋಪರು:— ಧೇನುಕನೆಂಬ। ದಾನವನುರು ಸಾಹಸವರಿಯೈ ॥

ಗೋವಿಂದ: — ಸಾಹಸ। ವಿಲಾಸ। ವಿಲಾಸ ವಿಕಾಸ। ಮೆಲ್ಲನೆನೆರಿವೆ। ಖುಲ್ಲನ ತರಿವೆ। ನಿಲ್ಲದೆ ಬರುವೆಂ ॥೨॥

(ಮತ್ತು ತೆರೆಯಲ್ಲಿ)

ಕಂ॥ ರಭಸಮನುಳಿದೀ ಖಲರಾ- ।
ಸಭನೀಗಳ್ ಸಾರ್ದನಲ್ತೆ ಲೋಕಾಂತರಮಂ ।
ಶುಭಮಾಯ್ತು ನಮಗೆ; ಬನ್ನಿಂ! ।
ಸುಭಗರಿ! ಭಯವೇಕೆ! ತಾಳಿವಣ್ಣಂ ತಿಂಬಂ ॥ ೨೫ ॥

ಎಲ್ಲರೂ:— (ಉತ್ಸಾಹದಿಂದ) ಎಲ್ಲಿ? ಎಲ್ಲಿ? (ಓಡಿಹೋಗುವರು)

(ಮತ್ತು ಸ್ಥಾನಾಂತರದಲ್ಲಿ ಪ್ರವೇಶಿಸಿ).

ಸುದ:—ಮಹಾನುಭಾವನಾದ ಮಾಧವ ! ಧೇನುಕನನ್ನು ಕೊಂದ ನಿನ್ನ ಚರಿತ್ರೆಯು ಅದ್ಭುತವು!

ಗೋ:—ಮಿತ್ರ! ಅಂತಹ ಅದ್ಭುತವೇನೂ ಇಲ್ಲ; ಯಾವುದೊಂದು ಕೆಲಸವನ್ನು ಅಸಾಧ್ಯವೆಂದು ಭಾವಿಸಿ, ಪ್ರಯತ್ನಪರರಾಗದಿರುವುದು ಉತ್ತಮ ಪುರುಷರ ಲಕ್ಷಣವಲ್ಲ; ಪರೀಕ್ಷೆಯಿಂದ ಫಲಾಫಲಗಳನ್ನು ಕಾಣಬೇಕಲ್ಲದೆ, ಯಾರೋ ಹೇಳಿದರೆಂದು ನಂಬಿ ಅಂಧಪರಂಪರೆಯಂತೆ ಕೆಡುವ ಮನುಷ್ಯರಲ್ಲಿ ದಿನದಿನಕ್ಕೆ ಆಲಸ್ಯವೇ ನೆಲೆಗೊಳ್ಳುವುದಲ್ಲದೆ, ದೇವರು ಕೊಟ್ಟಿರುವ ಸ್ವಾಭಾವಿಕ ಶಕ್ತಿಗಳೂ ವ್ಯರ್ಥವಾಗುವುವು; ಇದನ್ನು ನಿದರ್ಶನಪೂರ್ವಕವಾಗಿ ನೀವೇ ತಿಳಿದಿರಲ್ಲವೆ ?

ಎಲ್ಲರೂ:—ಕೃಷ್ಣ! ನಿನ್ನ ಮಾತು ನಿಶ್ಚಯ !

ಗೋ:—

ಕಂ॥ ಸುರಭಿಳಕೌಸುಮ ಸಾರಂ
ಸುರುಚಿರ ಮದಭೃಂಗ ಮಧುರ ಮೃದು ಝುಂಕಾರಂ ।
ಚರಿಕುಂ ಮಂದಸಮೀರಂ ।
ಪರಯಮುನಾ ಜಲವಿಹಾರ ಧೀರಂ ಸಾರಂ ॥ ೨೬ ॥

ಈ ರಮ್ಯಸ್ಥಳದಲ್ಲಿ ನಾವು ಸ್ವಲ್ಪ ಹೊತ್ತು ಚಂಡಾಟವನ್ನು ಆಡುವ !

ಎಲ್ಲರೂ:—ಗೋವಿಂದ ! ನಿನ್ನ ಇಷ್ಟದಂತಾಗಲಿ !

(ಎಲ್ಲರೂ ಆಡುತ್ತಿರುವರು.)

( ತೆರೆಯಲ್ಲಿ )

ಕಂದ॥ ಇದೊ ಇದೊ ಆವಧಿಚೋರಕ-।
ನಿದೊ ಇದೊ ಗೋಪಾಲಕಂ ಸಮಂತೀನನದೊಳ್ ।
ಪದುಳದೊಳಾಡುತನೀಯೆಡೆ ।
ಚದುರೆಯರೇ ಬನ್ನಿಮಿಂದೆ ಪಿಡಿವಂ ಬನ್ನಿಂ ! ॥೨೭॥

ಸುದರ್ಶನ:—ಕೃಷ್ಣ ! ಬೆಣ್ಣೆಕದ್ದ ನಿನ್ನನ್ನು ಹಿಡಿಯಲು ಗೋಪಿಯರು ಇತ್ತಲೇ ಬರುತ್ತಿರುವರು. ನೀನಿವರ ಕೈಗೆ ಸಿಕ್ಕಬೇಡ; ಓಡು ಓಡು.

( ಎಲ್ಲರೂ ಓಡುವರು )

( ಗೋಪಿಕಾಸ್ತ್ರೀಯರು ಪ್ರವೇಶಿಸಿ )

* ಕಂದ। ಮದನನ ಬಲ್‌ಗಣೆಗೆನ್ನುಂ ।
ಮುದದಿಂ ಗುರಿಗೈದ ಬೆಣ್ಣೆಗಳ್ಳನದೆತ್ತಲ್ ।
ಬಿದುಮೊಗದ ಮದನಸುಂದರ ।
ನ ದೆಲ್ಲಿಯಡಗಿರ್ಪನವನ ಪಿಡಿವುದದೆಂತೋ ॥೨೮॥

ಈಗಲಿಲ್ಲಿ ಆಡುತ್ತಿದ್ದ ಕೃಷ್ಣನು ಎಲ್ಲಿಯೋ ಮಾಯವಾಗಿರುವನಲ್ಲ !

ಇಂದುಲೇಖೆ:— ‡ ಸಖಿ ! ಮಂದಾರವಲ್ಲೀ ! ಆ ವಾಸುದೇವನ ಚರಿತ್ರೆಯನ್ನೇನೆಂದು ಹೇಳಲಿ ? ನಾನು ಬೆಣ್ಣೆಯನ್ನು ಒಪ್ಪಮಾಡುತ್ತಿದ್ದಾಗ ಆ ತುಂಟನು ಹಿಂದುಗಡೆಯಿಂದ ಬಂದು “ ಇಂದುಲೇಖೆ ! ನಿನ್ನ ಮಗುವನ್ನು ಹಿಡಿ ” ಎಂದು ಒಂದು ಬೆಕ್ಕಿನ ಮರಿಯನ್ನು ನನ್ನ ಮಡಿಲಲ್ಲಿಟ್ಟನು. ನಾನು ಹೊಡೆಯುವುದಕ್ಕೆ ಕೈಬೀಸಲು ಕೈಯಲ್ಲಿದ್ದ ಬೆಣ್ಣೆಯನ್ನೇ ಕಳಳ್ಳಿಕೊಂಡು ಓಡಿದನು ನೋಡೇ !

---

* ರಾಗ......ತಾಳ ( ಶರಧಿಶಯನ ಪರಮಪಾವನಾ ) ಎಂಬಂತೆ

ಕ್ಷೀರ ಚೋರನೆಲ್ಲಿರುವನೋ ॥ಸಖೀ॥ ಪ॥ ಮಾರ ಮೋಹನಾಂಗ ಶೌರಿ ॥ಎಲ್ಲಿರುವನೋ॥ ಅ॥ ಸೂರೆಯುಗೈದಾ । ಮಾರನಿಗೆನ್ನಾ॥ ಚಾರು ಸುಗುಣ ಪಾರಾವಾರ ॥ ಎಲ್ಲಿರುವನೋ ॥೧॥ ಸಿಲುಕಿಯು ಕೈಗೆ। ಸಿಲುಕದಿರುವನೇ॥ ಜಲರುಹಾಕ್ಷ ನೊಲವದೆಂತೊ ॥ ೨ ॥

‡ ರಾಗ......ತಾಳ (ಎಂತಕೌಗಲಿಂತು ರಾರಾಮು) ಎಂಬಂತೆ

ಇಂದು:—ಎತಹವನೇ । ವಾಸುದೇವ । ಕಾಂತೆ ಕೇಳೇ । ಕೌತುಜನಕ ॥ ಪ ॥

ಮಂದಾ:—ಬೆಣ್ಣೆಯನ್ನು ತಿಂದು ತಾನು । ಚಿಣ್ಣನ ಬಾಯ್ಗೊರಸಿದನೆ ॥ ೧ ॥

ಭದ್ರೆ:—ಮೊಸರುಕುಡಿದು । ನುಸುಳುತಿದ್ದ । ಕುಸುಮಗಾತ್ರ । ನೊಸೆದನೆನ್ನ ॥ ೨ ॥

ರುಚಿರೆ:—ಒಡೆದು ಪಾಲು । ಗಡಿಗೆಯನ್ನು ಕುಡಿದುಪೋದ । ಹುಡುಗನವನು ॥ ೩ ॥

ಮಂದಾರವಲ್ಲಿ:—ಸಖೀ! ಅಳುತ್ತಿದ್ದ ಮಗುವನ್ನು ನಾನು ಸಮಾಧಾನಪಡಿಸುತ್ತಿದ್ದಾಗ ಆ ವಾಸುದೇವನು ಯಾವಾಗಲೋ ಒಳಕ್ಕೆ ಹೋಗಿ ಹಾಲಿನ ಕೆನೆಯನ್ನೆಲ್ಲ ತಿಂದುಬಂದು ಕೈಯನ್ನು ನನ್ನ ಕಂದನ ಬಾಯ್ಗೆ ಒರಸಿ "ಮಗುವಿಗೆ ಕೆನೆ ಬೇಕಂತೆ" ಎಂದು ಓಡಿದನು ನೋಡೇ !

ಭದ್ರೆ:—ಸಖೀ ! ನಾನು ಮೊಸರು ಕಡೆಯುತ್ತಿದ್ದಾಗ ಆ ದಾಮೋದರನು "ಒಲೆಯ ಮೇಲಿನ ಹಾಲು ಬೆಕ್ಕಿನ ಪಾಲಾಯಿತು" ಎಂದು ಕೂಗಿಕೊಂಡನು. ನಾನು ಹೋಗಿ ನೋಡಿ ಬರುವುದರೊಳಗಾಗಿ ಮೊಸರಿನ ಗಡಿಗೆಯನ್ನೇ ಬರಿದುಮಾಡಿದ್ದನಲ್ಲ.

ರುಚಿರೆ:—ನಮ್ಮ ಮನೆಯಲ್ಲಿ ನಿಲುವಿನಮೇಲೆ ತನಗೆ ನಿಲುಕದಿದ್ದ ಹಾಲಿನ ಮಡಕೆಯನ್ನು ದೊಣ್ಣೆಯಿಂದ ಕುಟ್ಟಿ, ಸೋರುತ್ತಿದ್ದ ಹಾಲನ್ನು ಕುಡಿದು ನನ್ನನ್ನು ನಮ್ಮತ್ತೆಯವರ ಬೈಗುಳಿಗೆ ಗುರಿಮಾಡಿದನು.

ಸುಕಲೆ:—ಸಖಿಯರೆ! ನಾನು ನಿನ್ನೆ ನಂದಿನಿಯ ಹಾಲನ್ನು ಕರೆದಿರಿಸಿ, ಕರುವನ್ನು ಕಟ್ಟಿಹಾಕುವುದರೊಳಗಾಗಿಯೇ ಆ ಜಯವಾಸುದೇವನು ಹಾಲಿನ ಪಾತ್ರೆಯನ್ನೇ ಹೊತ್ತುಕೊಂಡು ಹೋಗಿ ಬಿಟ್ಟನಲ್ಲೆ ?

ಮಧುರೆ:—ಕೈಗೆ ಸಿಕ್ಕಿದ ಆ ಚಪಳನನ್ನು ಚೆನ್ನಾಗಿ ದಂಡಿಸಬೇಕೆಂದು ನಾನು ಉಜ್ಜುಗಿಸಲು ಕೂಡಲೆ ಅವನು ನನ್ನನ್ನು ಆಲಿಂಗಿಸಿಕೊಂಡು ಕೋಪವನ್ನು ಕಳೆದನಲ್ಲ !

ಇಂದಿರೆ:—ಆ ಕೃಷ್ಣನು ನಾನು ಪೋಷಿಸುವ "ವಾತ್ಸ್ಯಾಯನ" ವೆಂಬ ಗಿಣಿಯನ್ನು ಸ್ನೇಹಮಾಡಿಕೊಂಡಿರುವನು. ನಾನು ಅವನನ್ನು ಶಿಕ್ಷಿಸುವುದಕ್ಕೆ ಹೋದಾಗಲೆಲ್ಲ ಆ ಗಿಳಿಯು "ಬೇಡ ಬೇಡ! ವಾಸುದೇವನನ್ನು ಪ್ರೀತಿಸು" ಎಂದು ಸಾರುತ್ತಿರುವುದು !!

( ನಾರದಮುನಿಯು ಪ್ರವೇಶಿಸಿ )

ವೃ॥ ವರಶಂಖಸುದರ್ಶನ ನಂದಕ ಭಾ- ।
ಸುರಪದ್ಮಧರಾ! ಖಲದೈತ್ಯಹರಾ !
ಪೊರೆ ದೇವ ! ಭವಾರ್ಣವ ಕುಂಭಭವಾ ।
ಹರಿ ! ನಿತ್ಯಶಿವಾನತಚಿದ್ವಿಭವಾ ॥೨೯॥

ಜಯ! ವಾಸುದೇವ! ಜಯವಾಸುದೇವ ! ( ಗೋಪಿಯರನ್ನು ನೋಡಿ ) ಇವರಲ್ಲವೆ? ಜಗನ್ನಾಥನ ಸೇವೆಗೆ ಗೋಪಿಕೆಯರಾಗಿ ಅವತರಿಸಿರುವ ಅಪ್ಸರೆಯರು !

ಗೋಪಿಯರು :— ಪೂಜ್ಯರಾದ ನಾರದಮಹರ್ಷಿಗಳಿಗೆ ನಮಸ್ಕರಿಸುವೆವು. ( ವಂದಿಸುವರು ).

ನಾರದ:—ಶ್ರೀಕೃಷ್ಣ ಪದಸೇವಾಸಕ್ತರಾದ ಗೋಪಿಯರಿ! ನಿಮಗೆ ಮಂಗಳವಾಗಲಿ !

ಗೋಪಿ:—ಪೂಜ್ಯರೆ ! ಅನುಗ್ರಹಿಸಲ್ಪಟ್ಟೆವು.

ನಾರದ:—ಎಲೌ ಬಾಲೆಯರೆ ! ಗೋವಿಂದನೆಲ್ಲಿ ? ನಿಮ್ಮ ಮಾಧವನ ದರ್ಶನವನ್ನು ನನಗೆ ಸ್ವಲ್ಪ ಮಾಡಿಸುವಿರಾ ?

ಗೋಪಿ:—ಪೂಜ್ಯರೆ ! ಆ ಕ್ಷೀರ ಚೋರನನ್ನೆ ಹುಡುಕುತ್ತಿರುವೆವು.

ನಾರದ:—ಏನು ? ಕ್ಷೀರಚೋರನೆ ! ಕ್ಷೀರಸಮುದ್ರಕ್ಕೆ ಅಧಿಪತಿಯೂ, ಸಾಲದುದಕ್ಕೆ ಗೋಪಾಲಕನೂ ಆದ ಕೃಷ್ಣನಲ್ಲಿ ಚೌರ್ಯ ದೋಷವನ್ನು ಆರೋಪಿಸುವಿರಾ ?

ಇಂದಿರೆ:—ಪೂಜ್ಯರೆ ! "ಲೋಭಿಯಾದ ಧನಿಕನು ಒಂದು ಕವಡೆಗೂ ಆಸೆ ಪಡುವಂತೆ" ಕೃಷ್ಣನು ಹಾಲ್ಗಡಲಿನವನಾದರೂ ನಮ್ಮ ಮನೆಗಳಲ್ಲಿ ಹಾಲನ್ನು ಕದ್ದು ಕುಡಿಯುತ್ತಿರುವನು.

ನಾರದ:—ಭದ್ರೆಯರೆ ! ಈ ಅಪರಾಧವನ್ನು ಶ್ರೀಧರನ ಅನುಗ್ರಹವೆಂದು ಭಾವಿಸಿರಿ !

ಮಂದಾ:—ಸರಿ ! ಸರಿ ! ಅಪರಾಧವು ಅನುಗ್ರಹವಾದರೆ ಶಿಕ್ಷೆಯು ಸೇವೆಯಾಗಬಹುದಷ್ಟೇ ?

ನಾರದ:—ಎಲೆ ಜಾಣೆ ! ಸಂದೇಹವೇಕೆ ? ಭಕ್ತರ ಶಿಕ್ಷಾರೂಪವಾದ ಸೇವೆಗೂ, ಸೇವಾರೂಪವಾದ ಶಿಕ್ಷೆಗೂ ಭಗವಂತನು ತಕ್ಕವನೇ ಸರಿ ! ನೀವು ಯಾವ ಶಿಕ್ಷೆಯನ್ನು ಕೃಷ್ಣನಿಗೆ ಕೊಡಬೇಕೆಂದಿರುವಿರಿ ?

ಎಲ್ಲರೂ :— ಸಿಕ್ಕಿದರೆ ಅವನನ್ನು ಕಟ್ಟಿಹಾಕುವೆವು; ಚೆನ್ನಾಗಿ ನಿಂದಿಸುವೆವು; ದಂಡಿಸುವೆವು;

ನಾರದ:—ಆಹಾ ! ಇದೇ ಪರಮ ಪವಿತ್ರವಾದ ಸೇವಾವಿಧಾನವು ! ಮಹರ್ಷಿಗಳೂ ಇದನ್ನೇ ಅಪೇಕ್ಷಿಸುವರು !

ಭದ್ರೆ:—ಕೃಷ್ಣನು ಋಷಿಗಳಿಗೆ ಏನಪರಾಧವನ್ನು ಮಾಡಿರುವನು ?

ನಾರದ:—ಅವರು ಎಷ್ಟೋಕಾಲ ತಪಸ್ಸುಮಾಡಿದರೂ ಸಿಕ್ಕಿಯೂ ಸಿಕ್ಕದಂತಿರುವನು,

ಎಲ್ಲರೂ:—ಅಹುದಹುದು ! ಅವನು ಅಂತಹನನೇ! ಸಿಕ್ಕಿಯೂ ಸಿಕ್ಕದಂತಿರುವನು.

ನಾರದ:—ನಿಮಗೆ ಮಾತ್ರ ಆ ಗೋಪಾಲನು ಸುಲಭನೇ ! ಆದುದರಿಂದ ಋಷಿಗಳಿಗಿಂತಲೂ ನೀವೇ ಧನ್ಯರು ! ಭಗವಂತನನ್ನು ಸಾಕ್ಷಾತ್ತಾಗಿ ಸೇವಿಸಲು ಅಪೇಕ್ಷಿಸುವಿರಿ !

ಇಂದು:—ಪೂಜ್ಯರೆ ! ಏನು ಮಾಡಿದರೆ ಆ ಹರಿಯು ನಮ್ಮ ಕೈಗೆ ಸಿಕ್ಕುವನು ?

ನಾರದ:—ಬಾಲೆಯರೆ! ಈಗಲೇ ಪ್ರಾಪ್ತವಾಗಿರುವ ಮಾರ್ಗಶೀರ್ಷದಲ್ಲಿ ಭಗವತಿಯಾದ ಕಾತ್ಯಾಯನಿಯನ್ನು ಪೂಜೆ ಮಾಡುವುದರಿಂದ ಆ ಕೃಷ್ಣನ ಸೇವೆಯು ನಿಮಗೆ ನಿರಂತರವಾಗಿ ಲಭಿಸುವುದು.

ಗೋಪಿಯರು:—ಪೂಜ್ಯರ ಅಪ್ಪಣೆಯಂತೆ ಆಚರಿಸುವೆವು. ( ವಂದಿಸುವರು ).

ನಾರದ:—ನಿಮಗೆ ಮಂಗಳವಾಗಲಿ. ( ಹೊರಡುವನು ).

ಇಂದುಲೇಖೆ:—ಸಖಿಯರೆ! ಭವಾನಿಯ ಪೂಜೆಗೆ ತಕ್ಕ ಸ್ಥಳವನ್ನು ನಿರ್ಣಯಿಸಿರಿ!

ಮಂದಾರ:—ಯಮುನಾತಟದ ಈ ವನಭಾಗವೇ ರಮ್ಯ ಸ್ಥಳವಾಗಿರುವುದು. ಇಲ್ಲಿ ಪೂಜೆಗೆ ತಕ್ಕ ಪುಷ್ಪಗಳೂ ಯಥೇಚ್ಛವಾಗಿರುವುವು.

*ಕಂ॥ ಚೆನ್ನಸುಗೆಯ ಸೊಂಪಂ, ಸುರ– ।
ಹೊನ್ನೆಯ ಚೆಲ್ವಂ, ಸುಕೇಸರದ ವೈಭವಮಂ ।
ಉನ್ನತಚಂಪಕದಿಂಪಂ ।
ಚೆನ್ನೆಯೆ! ನೀಂ ನೋಡು! ಕುಂದದೊಂದ್ಯೆ ಸಿರಿಯುಂ ॥ ೨೦ ॥

ಭದ್ರೆ:—

+ಕಂ॥ ಇದು ತುಂಬಿಯ ಪಾನಾಲಯ ।
ವಿದು ವಿಹಗದ ಎನೋಜ್ಞಗಾನ ಮಂದಿರಮರಿಯಲ್ ।
ಇದು ನರುಗಂಪಿನ ಜಾಳಿಗೆ ।
ಯಿದು ಸಂತೋಷದ ನಿವಾಸವೇವಣ್ಣಿವೆನಾಂ ॥೨೧॥

ರುಚಿರೆ:—ಸಖಿ! ನಿರಂತರ ಕಲನಿನಾದಮನೋಹಾರಿಣಿಯಾದ ಈ ಕಾಳಿಂದಿಯು ಇಷ್ಟು ಸಂಭ್ರಮದಿಂದ ಎಲ್ಲಿಗೆ ಹೋಗುತ್ತಿರುವಳು?

ಸುಕಲೆ:—ಸಖಿ! ಇವಳೀಗ ತನ್ನ ಕೆಳದಿಯಾದ ಗಂಗೆಯೊಡಗೂಡಿ, ನಾಥನಾದ ಸರಿತ್ಪತಿಯನ್ನು ಸೇವಿಸಲು ಹೋಗುತ್ತಿರುವಳಲ್ಲವೆ!

ರುಚಿರೆ:—ಎಲೆ ಶೃಂಗಾರಲಹರೀ! ಲಾವಣ್ಯಮಯೀ ! ಕಮಲಮುಖಿ! ಮೀನಾಕ್ಷೀ! ಕಳಹಂಸಗಮನೆ! ಸೈಕತಶ್ರೋಣೀ! ಪತಿಸೇವಾತುರೆಯಾದ ನೀನಲ್ಲವೆ ಧನ್ಯಳು!

ಭದ್ರೆ:—ಸಖಿ! ಇತ್ತನೋಡು! ಸ್ನಾನಾರ್ಥಿಗಳಾದ ದ್ವಿಜರ ಸಂಭ್ರಮವೂ ಸುವಾಸಿನಿಯರ ಸಡಗರವೂ, ಎಷ್ಟು ಆನಂದಕರವು! ಒಂದೆಡೆಯಲ್ಲಿ ಬ್ರಾಹ್ಮಣರು ತಮ್ಮ ನಿತ್ಯನೈಮಿತ್ತಿಕಾನುಷ್ಠಾನಗಳನ್ನು ನೆರವೇರಿಸುತ್ತಿರುವರು! ಒಂದೆಡೆ ವೇದಪಾಠವೂ, ಪುರಾಣಚರಿತಪ್ರಸಂಗವೂ, ನಡೆಯುತ್ತಿರುವುದು! ಸುಮಂಗಳೆಯರು ಹರಿದ್ರಾಕುಂಕುಮಗಂಧಾಕ್ಷತೆಗಳಿಂದ ಗಂಗೆಯನ್ನು ಪೂಜಿಸಿ, ಮೊರದ ಬಾಗಿನಗಳನ್ನು ಸಮರ್ಪಿಸುತ್ತಿರುವರು! ತೀರದ ಉದ್ದಕ್ಕೂ ದೇವಾಲಯಗಳ ಘಂಟಾನಾದವು ಮನೋಜ್ಞವಾಗಿರುವುದು! ಇಂತಹ ಪವಿತ್ರ ಪ್ರದೇಶವು

---

* ರಾಗ ಬೇಹಾಗ್, ಆದಿತಾಳ ( ಫೇವುಸಿಯೇ ಪಂಖಾ ) ಎಂಬಂತೆ

ನೋಡೀಮಲ್ಲಿಗೆಯಾ । ಮಾಲತಿಯಾ । ಪೂಲತೆಯಾ । ಸಖೀ ॥ ಪ ॥ ಸೊಂಪಿನ ಬಕುಳವಶೋಕಂ । ಚಂಪಕವಾ ಪುನ್ನಾಗಂ ॥ ಇಂಪಿನೊಳೀಯರವಿಂದಂ ॥ ಏಂ ಪೊಳೆಗುಂ? ಕರಂ ॥ ೧ ॥ ತುಂಬಿರೆ ನವಮಕರಂದಂ । ತುಂಬಿಗಳೀಂ ಸವಿನೋದಂ ॥ ಅಂಬುಜದೊಳ್ ವಿಹರಿಸುಗುಂ ॥ ಮನೋಜ್ಞಂ ! ರಸಂ ॥ ೨ ॥

+ ರಾಗ ಮೋಹನ; ರೂಪಕತಾಳ ( ಎಂತಟಿಕುಲುಕೇ ) ಎಂಬಂತೆ

ಪಾಲಿಸು ಜನನೀ । ಫಾಲಲೋಚನಾರ್ಧಾಂಗಿಯೆ ॥ ಪ ॥ ಶ್ರೀಲಲಿತೆ ಸದಾನಂದಕಲಿತೆ ಸುರನುತೇ ಹಿತೆ ॥ ಪ ॥ ಸರ್ವಮಂಗಳೇ ವಿಶಾಲಕೀರ್ತಿಲೋಲೆ ಭಕ್ತಪಾಲೇ ॥ ಪಾರ್ವತೀ ಕೃಪಾವತೀ । ಸುಪಾರ್ವಣೇಂದುಸನ್ನಿಭಾನನೆ ॥ ೧ ॥ ಕರುಣಿಸೌ ಕೌಮಾರಿ ಗೌರಿ । ಶಂಕರೀ ನತಾಮರೀ ॥ ಸರಸಿಜಾಕ್ಷವಾಸುದೇವ ಪಾದಸೇವೆಗೈವ ಪುಣ್ಯವ ॥ ೨ ॥

ಕಾತ್ಯಾಯಸೀವ್ರತಕ್ಕೆ ತಕ್ಕುದು! ಪೂಜಾದ್ರವ್ಯಗಳನ್ನು ಒದಗಿಸಿರಿ!

( ಗೌರಿಯನ್ನು ಎಲ್ಲರೂ ಪೂಜಿಸಿ ಸ್ತೋತ್ರಮಾಡುವರು).

ಎಲ್ಲರು:—

ವೃ॥ ಶ್ರೀಕಲ್ಯಾಣಿ! ಸಮಸ್ತಲೋಕಜನನೀ! ಭಕ್ತೇಷ್ಟ ಸಂದಾಯಿನೀ ।
ಲ್ಲೋಕೇಶಾಮರರಾಜಮುಖ್ಯದಿವಿಜಾನೀಕಾರ್ಚಿ ತಾಂಘ್ರಿದ್ವಯೇ ।
ಶ್ರೀಕಂಠಪ್ರಿಯೆ! ಶೈಲರಾಜತನಯೇ! ಸತ್ಯಾಶ್ರಯೇ! ಶ್ರೀಪಿಕೀ ।
ಮಾಕಂದೈಕ ಸುಖಾಸ್ಪದಾಂಘ್ರಿ ವಿಲಸತ್ಸೇವಾ ಪ್ರಮೋದಂಗುಡೌ ॥ ೩೨ ॥

( ಕೆರೆಯಲ್ಲಿ )

ಆಹಾ! ನನ್ನ ಚಂಡು ಪುಟಹಾರಿ ಬಹುದೂರಕ್ಕೆ ಹೋಯಿತು !!!

ಇಂದು:—ಸಖಿಯರೆ! ಬಾಲಕೃಷ್ಣನ ಆಟದ ಚೆಂಡು ಈ ಕಡೆಗೆ ಬಂದಿತು! ನಮ್ಮ ಇಷ್ಟಾರ್ಥಸಿದ್ಧಿಯಲ್ಲಿ ಶರ್ವಾಣೀ ಪ್ರಸಾದರೂಪವಾದ ಈ ಕಂತುಕವನ್ನು ಪರಿಗ್ರಹಿಸಿರಿ !

ಎಲ್ಲರೂ:—( ಸಂತೋಷದಿಂದ) ಇನ್ನೇನು? ಆ ಮಾಧವನ ಸಮಾಗಮವು ತಾನಾಗಿಯೇ ಲಭಿಸುವುದು.

ಮಂದಾ:—(ಚೆಂಡನ್ನು ಕೈಗೆ ತೆಗೆದುಕೊಂಡು)

ಕಂ॥ ಎಲೆ ಎಲೆ! ಕಂತುಕವೇ! ನೀ ।
ಸಲೆ ಧನ್ಯಂ! ಹರಿಯ ಕರದೊಳಾಡುವೆ ನಿರತಂ ।
ಜಲಜಾಕ್ಷ ಸಮಾಗಮನಂ ।
ಸಲೆ ಕಲ್ಪಿಸ! ನಿನ್ನನೊಲ್ದು ಬೇಡುವೆವೀಗಳ್ ॥೨೨॥

ಗೋವಿಂದ:—(ಪ್ರವೇಶಿಸಿ) ನನ್ನ ಚೆಂಡು ಎಲ್ಲಿ ಬಿದ್ದಿತೋ ಕಾಣೆನಲ್ಲ! (ಹುಡುಕುತ್ತಿರುವನು).

ಇಂದುಲೇಖೆ:—(ಜನಾಂತಿಕಂ) ಸಖಿಯರೆ! ಸದ್ದು ಮಾಡಬೇಡಿರಿ! ಆ ಗೋವಿಂದನು ನಾವಿರುವುದನ್ನು ಕಂಡರೆ ಓಡಿ ಹೋಗುವನು. (ಎಲ್ಲರೂ ಮರೆಯಾಗುವರು).

ಗೋವಿಂದ:—ಈ ಹೂಗಿಡುಗಳ ಮರೆಯಲ್ಲೇನಾದರೂ ಇರುವುದೋ ! ನೋಡುವೆನು

(ಹುಡುಕುತ್ತಿರುವನು).

ಗೋಪಿಯರು:—(ಎಲ್ಲರೂ ಆವರಿಸಿ ಕೃಷ್ಣನನ್ನು ಹಿಡಿದುಕೊಂಡು)

*ಕಂ॥ ಸಿಕ್ಕಿದೆ ಸಿಕ್ಕಿದೆ ಯೆಲೆ ಯೆಲೆ ।
ಸೊಕ್ಕಿದ ನವನೀತ ಚೋರ! ಬಾರ! ಕಿಶೋರಾ ।
ತಕ್ಕುವನಲೆ? ನೀಂ ಶಿಕ್ಷೆಗೆ ।
ನಿಕ್ಕುವಮಾನಂದಮಾಯ್ತು; ನೋಡೆಮಗೀಗಳ್ ॥೨೪॥

ಗೋವಿಂದ:—(ಭಯವನ್ನು ನಟಿಸುತ್ತಾ) ಆಃ ! ಇವರ ಕೈಗೆ ಸಿಕ್ಕಿಬಿಟ್ಟೆನಲ್ಲ!

ಗೋಪಿಯರು:—ಶ್ರೀಧರ! ನಿನ್ನ ಚೆಂಡು ನಿನ್ನನ್ನು ಹಿಡಿದು ಕೊಟ್ಟಿತು ನೋಡು!

ಗೋವಿಂದ:—†(ದೈನ್ಯದಿಂದ) ಎಲೌ ಭದ್ರೆಯರೆ! ನಾನಾವಾಗಲೂ, ನಿಮ್ಮ ಅಧೀನನಾಗಿಯೇ ಇರುವೆನು; ಮತ್ತು ನಿಮ್ಮ ರಕ್ಷಣೆಗೆ ಒಳಪಟ್ಟಿರುವೆನು; ದಯೆಯಿಟ್ಟು ನನ್ನ ಚೆಂಡನ್ನು ಕೊಡಿರಿ!

ಮಂದಾರ:—(ಮಂದಹಾಸದಿಂದ) ಎಲೆ ಮಧುಸೂದನ! ಚೆಂಡಿನ ಮಾತು ಹಾಗಿರಲಿ! ಕ್ಷೀರಚೋರನಿಗೆ ಏನು ಶಿಕ್ಷೆಯನ್ನು ವಿಧಿಸಬೇಕು! ಹೇಳು!

ಇಂದು:—ಎಲೆ ಕಳ್ಳ! ಹೇಳು ಹೇಳು! ಬೆಣ್ಣೆಗಳ್ಳನು ಶಿಕ್ಷಾರ್ಹನಲ್ಲವೆ?

ಭದ್ರೆ:—ಎಲೆ ದಾಮೋದರ! ಒಂದು ಗಡಿಗೆಯ ಮೊಸರೂ ನಿನ್ನ ಹೊಟ್ಟೆಗೆ ಹೇಗೆ ಹಿಡಿಯಿತು!

---

* ರಾಗ ನೋಟ್–ಚಾಪುತಾಳ ( ಉಪವನದ ಸೊಬಗ ) ಎಂಬಂತೆ

ಸಿಕ್ಕಿದೆ ಸಿಕ್ಕಿದೆ ಸಿಕ್ಕಿದೆ ಸಿಕ್ಕಿದೆ । ಸೊಕ್ಕಿದ ನವನೀತಚೋರನೆ ಬಾರೋ ನೀ ॥ ಪ ॥ ತಕ್ಕುತನಗಳನ್ನು ಸಾಕಿನ್ನು ಬಿಡು ಉಕ್ಕುವನಾಂತೆವು ನಾವ್ ಚಕ್ರಪಾಣೀ ॥ ಅ ॥ ಎಷ್ಟೋದಿನಗಳಿಂದ ಹೊಂಚುತಲಿದ್ದೆವು । ದುಷ್ಟತನಗಳನ್ನು ನಾವ್ ಸೈರಿಸಿದೆವು ॥ ಚೇಷ್ಟೆಗೆ ತಕ್ಕಂತೆ ಶಿಕ್ಷೆಯಗೈವೆವು । ಕೃಷ್ಣ ನೀನೆಲ್ಲಿಗೆ ಪೋಗುವೆ । ನೋಳ್ಪೆವು ॥ ೧ ॥

+ ರಾಗ ಬೋಹರ್ ತಾಳ ಆದಿ ( ವಾರೆನಾರೀ ) ಎಂಬಂತೆ

ಕೋಪವೇಕೀ । ಪರಿನೊಳು ॥ ಪ ॥ ಮೃದುಳಾಗಿಯರೇ! ನಿಮ್ಮಾಶ್ರಿತನೊಳು ॥ ಅ ॥ ನಿಮ್ಮಾಜ್ಞೆಗಳನು ಮೀರದೆ ನಡೆವೇ । ನಿಮ್ಮಯ ಪೋಷಣೆಗಾಂ ಸಿಕ್ಕಿರುವೆ ॥ ಬಿಡಿಬಿಡಿರೆನ್ನಯ ಕಂತುಕವನೆ ಕೊಡಿ ॥ ೧ ॥

ರುಚಿಕಿ:—ಎಲೆ ಮುಕುಂದ! ಹೇಳು! ನಿನ್ನ ತಪ್ಪುಗಳೆಲ್ಲ ವನ್ನೂ ಒಪ್ಪಿಕೊಳ್ಳುವೆಯೋ ಇಲ್ಲವೋ? ಹಾಲಿನಮಡಕೆ ಯನ್ನು ಒಡೆದು ನನ್ನನ್ನು ಬೈಗಳಿಗೆ ಗುರಿಮಾಡಿದ ನಿನ್ನನ್ನು ಏನು ಮಾಡಬೇಕು? ಹೇಳು!

ಇಂದಿರೆ:— ಎಲೆ ಮಾಧವ! ನಮ್ಮ ಮಗುವಿನ ಹಣೆ ಯಲ್ಲಿ ಸುಣ್ಣದಿಂದ ನಾಮವನ್ನು ಬರೆದು ಓಡಿ ಹೋದೆಯ ಲ್ಲವೆ ? ತಕ್ಕ ಶಿಕ್ಷೆಯನ್ನು ಕಾಣಿಸುವೆನು; ತಾಳು !

ಗೋವಿಂದ:— (ದೈನ್ಯದಿಂದ) ಎಲೌ ಗೋಪಿಯರೆ! ಅಪ ರಾಧಿಯಾದ ನಾನು ನಿಮ್ಮಿಂದ ಯಾವ ಶಿಕ್ಷೆಯನ್ನಾದರೂ ಅನು ಭವಿಸುವುದಕ್ಕೆ ಸಿದ್ಧನಾಗಿಯೇ ಇರುವೆನು; ನನ್ನ ಚೆಂಡನ್ನು ಅನುಗ್ರಹಿಸಿರಿ !

ಗೋಪಿಯರು:— ಶಿಕ್ಷೆಯನ್ನು ವಿಧಿಸಿದ ಮೇಲಲ್ಲವೆ ಚೆಂಡು ! ನಿನ್ನನ್ನು ಏನು ಮಾಡುವ ? ಬೇಗ ಹೇಳು !

ಗೋವಿಂದ:— ಎಲೌ ಮಂಗಳಾಂಗಿಯರೆ! ನೀವು ಪೋಷಿ ಸುವ “ ವಾತ್ಸಾಯನ ” ನೆಂಬ ಶುಕರಾಜನು ಧರ್ಮಜ್ಞನು ! ಆತನು ವಿಧಿಸುವ ಶಿಕ್ಷೆಯನ್ನು ನಾನು ಅನುಭವಿಸುವೆನು.

ಗೋಪಿಯರು:— ಸರಿ ! ಹಾಗೆಯೇ ಆಗಲಿ ! ಬಾ ! ವಾತ್ಸ್ಯಾಯನನ ಬಳಿಗೆ ನ್ಯಾಯವಿಮರ್ಶೆಗೆ ಹೋಗುವ !

ಗೋವಿಂದ:— ಎಲೌ ಸಾಧ್ವಿಯರೆ! ನ್ಯಾಯವಿಮ ರ್ಶೆಯು ಸಂಜೆಗಾಗಲಿ; ನನ್ನ ಸ್ನೇಹಿತರಲ್ಲಿ ಚೆಂಡಾಟದ ಸಾಲಗಾರನಾಗಿರುವೆನು. ಅದನ್ನು ಮೊದಲು ತೀರಿಸಬೇಕು.

( ಒಬ್ಬೊಬ್ಬರನ್ನು ಕುರಿತು )

* ಎಲೌ ಮಂದಾರವಲ್ಲೀ ! ಈ ಪಾಟಲೀ ಪುಷ್ಪವನ್ನು ನಿನಗೆ ಉಪಹಾರವಾಗಿ ಸಮರ್ಪಿಸುವೆನು. ದಯೆಯಿಟ್ಟು ನನ್ನ ಚೆಂಡನ್ನು ಕೊಡು !

ಎಲೌ ಇಂದುಲೇಖೆ ! ಈ ನನ್ನ ವಜ್ರದುಂಗುರವು ನಿನ್ನ ಬೆರಳ ಕಾಂತಿಯನ್ನು ಹೆಚ್ಚಿಸಲಿ ! ನನ್ನ ಕಂತುಕವನ್ನು ಅನು ಗ್ರಹಿಸು !

ಎಲೌ ಭದ್ರೆ ! ಈ ಕೇಸರ ಮಾಲಿಕೆಯು ನಿನ್ನ ಕಂಠ ವನ್ನು ಅಲಂಕರಿಸಲಿ ! ಕಂತುಕವು ಯಾರ ಬಳಿಯಲ್ಲಿರುವುದು ಹೇಳು !

ಎಲೌ ರುಚಿರೆ ! ಈ ಸ್ವರ್ಣಪದಕವು ನಿನಗೆ! ನನ್ನ ಆಟದ ವಸ್ತು ನಿನಗೇಕೆ ?

ಎಲೌ ಸುಕಲೆ ! ಈ ಮುತ್ತಿನ ಸರದ ಬೆಲೆಗೆ ನನ್ನ ಚೆಂ ಡನ್ನು ಮಾರು ?

ಎಲೌ ಚಂದ್ರಮತಿ ! ಈ ರನ್ನ ಗಡಗವು ನಿನ್ನ ಕೈಯ ಚೆಲುವಿಗೆ ತಕ್ಕ ಒಡವೆ ! ಚೆಂಡಿನಿಂದ ಪ್ರಯೋಜನವೇನು ?

ಗೋಪಿಯರು:— (ಸಂತೋಷದಿಂದ) ಆಹಾ ! ಭಗವತಿಯಾದ ಕಾತ್ಯಾಯನೀ ಪ್ರಸಾದದಿಂದ ಶ್ರೀ ಕೃಷ್ಣನ ಅನುಗ್ರಹಕ್ಕೆ ಪಾತ್ರರಾದೆವು. (ಪ್ರಕಾಶ) ಎಲೆ ಗೋವಿಂದ ! ಈ ಚೆಂಡಿನಿಂದ ನಮ್ಮೊಡನೆ ಸ್ವಲ್ಪ ಹೊತ್ತು ಆಡಿ ಗೆದ್ದರೆ ನಿನ್ನ ಚೆಂಡು ನಿನಗೆ ದೊರೆಯುವುದು.

ಗೋವಿಂದ:— ಹಾಗೆಯೇ ಆಗಲಿ.

(ಎಲ್ಲರೂ ಸೇರಿ ಚೆಂಡಾಟವನ್ನು ಆಡುವರು )

ಗೋವಿಂದ:— (ಗೆದ್ದು ಚೆಂಡನ್ನು ಹಿಡಿದು) ಎಲೌ ಮಂಗ ಳಾಂಗಿಯರೆ ! ನಿಮ್ಮ ಉಪಕಾರಕ್ಕೆ ಕೃತಜ್ಞನಾಗಿರುವೆನು; ಇದಕ್ಕೆ ಪ್ರತಿಫಲವನ್ನು ತೋರಬೇಕಾದ ಸಾಲವು ನನ್ನ ಮೇಲಿರುವುದು; ನೀವು ಯಾವ ವೇಳೆಯಲ್ಲಿ ಅಪೇಕ್ಷಿಸಿದರೂ ನನ್ನ ಶಕ್ತ್ಯನುಸಾರವಾಗಿ ಸಾಲವನ್ನು ತೀರಿಸುವೆನು. ಈಗ ನನ್ನನ್ನು ನಿರೀಕ್ಷಿಸುತ್ತಿರುವ ಮಿತ್ರಮಂಡಲಿಯನ್ನು ಸೇರಲು ಅಪ್ಪಣೆ ಕೊಡಿ !

ಗೋಪಿಯರು:— ಕೃಷ್ಣಾ ! ಕ್ರೀಡಾಕಂತುಕದ ಸಾಕ್ಷಿ ಯಾಗಿ ನಮ್ಮಲ್ಲಿ ದಯೆಯಿರಲಿ !

(ಗೋವಿಂದನು ಹೊರಟು ಹೋಗುವನು)

ಇಂದು ಲೇಖೆ:— ಸಖಿಯರೆ! ಬಾಲಚಂದ್ರನ ಪ್ರಸಾದೋ ಕ್ತಿಗಳಿಂದ ಕೃತಾರ್ಥರಾಗಿರುವೆವು; ಇನ್ನು ಮನೆಯನ್ನು ಸೇ ರುವ ತೆರಳಿರಿ.

(ಎಲ್ಲರೂ ಹೊರಟು ಹೋಗುವರು)

## ಇದು ದ್ವಿತೀಯಾಂಕವು.

---

* ರಾಗ ತಾಳ (ಬಮುನಾನೊ ಸಗುನಾಂಬಿಜಾ) ಎಂಬಂತೆ.

ಎಲೆ ಬಾಲೆ । ಪೂಮಾಲೆ । ಧರಿಸೀಗಲೆ ॥ ಪ ॥ ಕಂತುಕವದೇತಕೆ ಕಾಂತಾಮಣಿ ॥ ಅ ॥ ಬೆರಳೊಳು ಧರಿಸೀಗಲೆ । ಈ ವುಂಗರ ॥ ಮದನ ಪತಾಕೆ । ಚೆಂಡೇತಕೆ ॥ ೧ ॥ ರನ್ನದ । ಕಡಗ । ಇದೊ ಮಾನಿನಿ । ಕೊಡುವೆನು ಮುದದೆ ತುಡು ಮೋದದೆ ॥ ೨ ॥ ಸುಂದರಿ । ಕೊರಲೊಳ್ । ಮಣಿ ಮಾಲೆಯು ॥ ನಾನರ್ಪಿಸುವೆ ಛಲವೇಂ । ತರವೆ ॥ ೩ ॥

## ತೃತೀಯಾಂಕವು.

( ಪ್ರಲಂಬನೂ ಪುಷ್ಕರನೂ ಪ್ರವೇಶಿಸುವರು. )

ಪ್ರಲಂಬ— ಪುಷ್ಕರ ! ನಮ್ಮ ಮಹಾರಾಜನಾದ ಕಂಸನ ಆಜ್ಞೆಯನ್ನು ನೆರವೇರಿಸಬೇಕಲ್ಲವೆ ?

ಪುಷ್ಕರ— ಕೈಗೆ ಸಿಲ್ಕಿದ ಮಕ್ಕಳನ್ನು ಕೊಲ್ಲುವುದು ತಾನೆ! ಇಲ್ಲಿ ಯಾರೋ ಬಾಲಕರು ಆಡುತ್ತಿರುವರು ನೋಡು!

ಪ್ರಲಂಬ— ಆಹಾ ! ಇವರಲ್ಲವೆ? ನಂದಗೋಪನ ಮಕ್ಕಳಾದ ರಾಮಕೃಷ್ಣರು ! ಮಹಾಪುರುಷಲಕ್ಷಣವು ಮುಖವನ್ನು ನೋಡುತ್ತಲೇ ಒಂದು ವಿಧವಾದ ಭಯವನ್ನೂ ಭಕ್ತಿಯನ್ನೂ ಹುಟ್ಟಿಸತಕ್ಕುದಾಗಿರುವುದು; ತೇಜಸ್ವಿಗಳಾದ, ದೀರ್ಘಬಾಹುಗಳಾದ, ವಿಶಾಲವಕ್ಷರಾದ ಇವರನ್ನು ಯಮನ ಪುರಿಗೆ ಕಳುಹಿಸುವುದು ನನ್ನಿಂದಾದೀತೆ?

ಪುಷ್ಕರ:— ಪ್ರಲಂಬ ! ಮಾಯಾವಿಯಾದ ನಿನಗೆ ಅಸಾಧ್ಯವಾದುದಾವುದು?

ಪ್ರಲಂಬ:— ಪುಷ್ಕರ ! ಕೃಷ್ಣನ ಅಮಾನುಷಕಾರ್ಯಗಳನ್ನು ತಿಳಿದಿರುವೆನು; ಅವನ ಇದಿರಿಗೆ ನಿಲ್ಲುವುದಕ್ಕೂ ನನಗೇನೋ ಭಯ! ಬಲರಾಮನ ಮೇಲೆ ಕೈ ತೋರಿಸಲೆ? ( ಆಲೋಚಿಸಿ ) ಆದರೆ ಪರಿಣಾಮವು ಹೇಗಾಗುವುದೋ! ನನಗೇನೋ ಎದೆ ಬಡಿದುಕೊಳ್ಳುತ್ತಿರುವುದು !! ಹುಂ! ಇರಲಿ! ನಾನೂ ಇವರಂತೆ ಗೋಪವೇಷಧರನಾಗಿ ಇವರೊಡನೆ ಆಡುತ್ತ, ಮೋಸದಿಂದ ನನ್ನ ಕಾರ್ಯವನ್ನು ನೋಡುವೆನು. ನೀನೂ ನನಗೆ ಸಹಾಯಕನಾಗಿರು !

ಪುಷ್ಕರ— ಹಾಗೆಯೇ ಆಗಲಿ! ನೀನು ತೆರಳು ನಾನು ಮರೆಯಾಗಿದ್ದು ಎಲ್ಲವನ್ನೂ ಎಚ್ಚರದಿಂದ ನೋಡಿಕೊಳ್ಳುವೆನು.

(ಪ್ರಲಂಬನು ಹೊರಡುವನು.)

* (ಗೋವಿಂದನೂ, ಬಲಭದ್ರನೂ, ಗೋಪಾಲಕರೊಡನೆ ಆಡುತ್ತಿರುವರು.)

( ಗೋಪವೇಷಧರನಾಗಿ ಪ್ರಲಂಬನು ಪ್ರವೇಶಿಸಿ )

ಪ್ರಲಂಬ— ಏನೈ ರಾಮಕೃಷ್ಣರೆ! ಕ್ಷೇಮವೆ?

ಗೋವಿಂದ— ಎಲೈ ನೀನಾರು?

ಪ್ರ— ನಾನಲ್ಲವೆ?

ಕೃ— ನಾನೆಂದರೆ?

ಪ್ರ— ಮಗು! ನೀನು ನನ್ನನ್ನು ನೋಡಿರುವೆಯಾದರೂ ಮರೆತಿರುವೆ; ಪಾಪ! ನೀನೂ ಕಾಣೆಯ? ರಾಮ !

ಬಲ— (ನೋಡಿ) ನೀನೊಬ್ಬ ಹೊಸಬನೆಂದು ಬಲ್ಲೆನು!

ಪ್ರ—(ನಗುತ್ತಾ ) ಚೆನ್ನಾಯಿತು; ಚೆನ್ನಾಯಿತು; ಮಕ್ಕಳೇ ನಿಮ್ಮ ಮುದ್ದು ಮಾತುಗಳು ನನಗೆ ಬಹು ಸಂತೋಷಕರಗಳಾಗಿವೆ; ನಾನು ಬಂಧುವೆಂದು ನಿಮಗೆ ತಿಳಿಯಲಿಲ್ಲವೆ?

ಗೋವಿಂದ— ಬಂಧುತ್ವವನ್ನು ಸೂಚಿಸುವ ಗುರುತುಗಳು ನಿನ್ನ ಮುಖದಲ್ಲೇನಾದರೂ ಇರುವುವೇನು?

ಪ್ರ— ನನ್ನ ಪ್ರೀತಿಯ ಮಾತುಗಳೇ.

ಗೋ— ಕೆಲವು ವೇಳೆ ಮಕ್ಕಳನ್ನು ವಂಚಿಸಿ ಒಡವೆಗಳನ್ನು ಕಸುಕೊಳ್ಳುವವರ ಮಾತುಗಳೂ ಹೀಗೆಯೇ ಇರುವುವು. “ ಅತಿವಿನಯವು ಧೂರ್ತಲಕ್ಷಣ ” ವಲ್ಲವೆ?

ಪ್ರ— ಮಕ್ಕಳೆ! ನನ್ನನ್ನು ವಂಚಕನೆಂದು ಎಣಿಸುವಿರಾ?

ಬಲ— ಒಂದು ವೇಳೆ ನೀನು ವಂಚಕನೇ ಆಗಿದ್ದರೂ ನಮಗೇನು ಭಯ? ನಾವು ಮೋಸಗೊಳ್ಳುವವರಲ್ಲ.

ಪ್ರ— ಮಕ್ಕಳೆ! ನಿಮ್ಮ ಜತೆಯಲ್ಲಿ ನಾನೂ ಆಡಬೇಕೆನ್ನಿಸುವುದು; ಸೇರಿಸಿಕೊಳ್ಳುವಿರಾ?

ಗೋವಿಂ— †ಎಲೈ ನೀನಾರೆಂಬುದು ತಿಳಿಯದೆ ಆಟಕ್ಕೆ ಸೇರಿಸಲಾಗುವುದಿಲ್ಲ; ನಡೆ ನಡೆ !

---

* ರಾಗ ... ತಾಳ (ನಕೋ ಟಾಕೋನಿ) ಎಂಬಂತೆ.

ಬನ್ನಿ ಬನ್ನಿರಿ ಬಾಲಕರೆಲ್ಲ ಕೂಡೀ ನಲಿದಾಡಿ ಮೋದಗೊಳ್ಳುವ ॥ ಆಡಿ ಮೋದಗೊಳ್ಳುವ । ಪ॥ ಸಂತೋಷಕಿದುವೇ ಸಮಯವಲ್ಲವೇ ॥ ಕೌತುಕ ದಾಟವನಾಡೆ ಪೋಗುವಾ । ಪೋಗುವಾ।ಪೋಗುವಾ ॥೧॥ ತಂಗಾಳಿ ಕರಂ । ಮನೋಜ್ಞವಾಗಿದೇ । ಪೊಂಗಿ ಕುಣಿಯುತ್ತ ಸಂಗೀತ ಪಾಡುವಾ ॥ ಪಾಡುವಾ ॥೨॥

† ರಾಗ ... ತಾಳ (ಧೂರ್ತಕೀನೀ ವೇಂ ಗೈದಿರಿ ಮಂದಾನವ ) ಎಂಬಂತೆ

ಗೋ+ಬಲ—ಆರೆಲೊ? ನೀಂ ಸಾರೆಲೊ ಛಿ ! ದಾರುಣನೆ ॥ ಪ ॥ ವಿಾರಿ ಬರುವೆ, ಮಾತನಾಡುವೆ, ಬಾಲರ ಕೇಳಿಗೆ ಕ್ರೂರನೆ ಸೇರುವೆ ॥ಅ॥

ಪ್ರ— ಹುಡುಗರೆ! ನಿಮ್ಮ ನುಡಿಗಳ ಕೇಳಿ ಕಡು ಮುದವಾಂತೆ ॥ ತಿಳಿಯದಿರೀ ಖಳನೆನ್ನುತ ಎಳೆಯುದೆ ನೀಲ್ ಪಳಿಯುವರೆ ॥ ೧ ॥

ಗೋ+ಬಲ — ತಕ್ಕನ ನುಡಿಗಳ ತೋರುವ ನೀಂ ಕಾಳ ರಕ್ಕಸನೆ ದಿಟವೂ ॥ ಆಡೆವು ನಾವ್ ಕೂಡಿ ನಿನ್ನ ಮೂಢನೆ ಮಾತಾಡುವೆಯೋ ॥ ೨॥

ಪ್ರ— ನಂಟರ ಜರೆಯುವ ತುಂಟತಿ ಬಿಡಿ ಬಿಡಿ ಕೊಂಟು ಬುದ್ಧಿಯ ನೀವು ॥ ನೀತಿಯಲ್ಲವೀತೆರದೊಳ್ ಪ್ರೀತಿಪನೊಳ್! ಮಾತನಾಡೆ ॥ ೩ ॥

ಬಲ—ಅಯ್ಯಾ! ನೀನು ದೊಡ್ಡವನು; ನಾವು ಚಿಕ್ಕವರು; ನಮ್ಮೊಡನೆ ನಿನಗೆಂತಹ ಆಟ ?

ಗೋ— ಬಲದೇವ! ಈತನ ಕೈಯಲ್ಲಿ ನಮಗೇನು? ನಮ್ಮ ಆಟವನ್ನು ನಾವು ಆಡುವ !

ಪ್ರ— ಮಕ್ಕಳೆ! ನನ್ನ ಹೆಸರಿನಿಂದ ನಿಮಗೆ ಸಂದೇಹವು ತೊಲಗಬಹುದು; ನಾನು ಪ್ರಭಾಕರನಲ್ಲವೆ?

ಗೋ—(ಔದಾಸೀನ್ಯದಿಂದ) ಪ್ರಭಾಕರನೋ? ವಿಭಾಕರನೋ? ನಿಶಾಕರನೋ? ನಿಶಾಚರನೋ? ಯಾರಿಗೆ ತಿಳಿಯುವುದು? ನಮ್ಮ ಆಟಕ್ಕೆ ವಿಘ್ನಮಾಡಬೇಡ; ಹೊರಡು ಹೊರಡು !

ಪ್ರ— ಗೋವಿಂದ! ಬಂಧುಗಳಲ್ಲಿ ಹೀಗೆ ಉದ್ಧತನಾಗುವುದು ನಿನಗೆ ತಕ್ಕುದಲ್ಲ !

ಗೋ— ನಿನ್ನ ಬಂಧುತ್ವವನ್ನು ತಿಳಿಸು; ಆ ಮೇಲೆ ನೋಡೋಣ !

ಪ್ರ— ಮಗು! ನಾನು ನಿಮ್ಮ ಮನೆಗೆ ಬಂದಾಗ ಯಶೋದೆಯೂ ನಂದನೂ, ಬಹು ಸಂಭ್ರಮದಿಂದ ಮಣೆಯಲ್ಲಿ ಕುಳ್ಳಿರಿಸಿ, ಕುಶಲ ಪ್ರಶ್ನೆಯಿಂದ ಸಂತೋಷಗೊಳಿಸಿ ಔತಣವನ್ನು ಮಾಡಿ, ಹೂ, ಗಂಧ ವೀಳೆಯಗಳನ್ನು ಸಮರ್ಪಿಸಿದಾಗ ನಾನು ಎಂತಹ ಬಂಧುವೆಂದು ನಿಮಗೇ ತಿಳಿಯುವುದು.

ಗೋ— ಈಗಲೇ ತಿಳಿಸು; ಮನೆಯಲ್ಲಿ ಆಗುವುದಕ್ಕಿಂತಲೂ ಹೆಚ್ಚಾದ ಗೌರವವು ನಿನಗೆ ಇಲ್ಲಿಯೇ ಸಿಕ್ಕುವುದು.

ಪ್ರ— ಮಕ್ಕಳೆ ! ನಿಮಗೆ ಸಂದೇಹವೇಕೆ ? ಕೇಳಿರಿ!— ನಾನು ನಿಮ್ಮ ತಾ–ಯಿ–ಯ ಅ–ಣ್ಣ–ನ, ಸೋ–ದರಳಿ–ಯನ, ಚಿಕ್ಕ–ಮ್ಮ–ನ ತ–ಮ್ಮನ ಮಗನು.

ಬಲ— ಓಹೋಹೋ! ಬಹು ಸಮೀಪದ ಬಂಧು !

ಗೋ— ಹಾಗಾದರೆ ನೀನೀಗ ಸಂಭಾವ್ಯನು! ಬಾರಯ್ಯ ನಂಟನೆ! (ಕೈ ಹಿಡಿದುಕೊಳ್ಳುವನು.)

ಪ್ರ— ( ತನ್ನಲ್ಲಿ ) ಆಹಾ! ಈತನು ಪ್ರೀತಿಯಿಂದ ಸುಮ್ಮನೆ ಕೈಹಿಡಿದುದನ್ನೂ ತಡೆಯುವುದಾಗುವುದಿಲ್ಲವಲ್ಲ! (ಪ್ರಕಾಶ) ಬಾಲಕರೆ! ಈಗಲೀಗ ತಿಳಿದುಕೊಂಡಿರಿ !

ಬಲ— ಅಹುದಹುದು ! ಬಂಧುವಿಗೆ ತಕ್ಕ ಮನ್ನಣೆಯೊಂದೇ ಉಳಿದಿರುವುದು.

ಗೋ— ಅದೇತಕ್ಕೆ ಉಳಿದಿರಬೇಕು? ತಕ್ಕ ಹಾಗೆ ನಡೆಯಿಸಿ ಬಿಡುವ !

ಪ್ರ— ಮಕ್ಕಳೆ! ನಿಮ್ಮ ಮಾತುಗಳಿಂದಲೇ ನನಗೆ ಸತ್ಕಾರವಾದಂತಾಯಿತು; ನಿಮಗೆ ಬೇರೆ ಆಯಾಸವು ಬೇಡ.

ಗೋ— ನಂಟನು ಬೇಡವೆಂದರೆ ಬಿಡುವುದು ನಮಗೆ ಗೌರವವೆ?

ಬಲ— ಆಟದಲ್ಲಿ ಸೋತರೆ ಆಗುವ ಗೌರವವು ನೆನೆದುಕೊಳ್ಳುವಂತಿರುವುದು.

ಪ್ರ - ಸೋತವರಿಗೇನು ಶಿಕ್ಷೆ?

ಗೋ— ನಾವಾಡುವ “ ಹರಿಣಲಂಘನ ” ವೆಂಬ ಆಟದಲ್ಲಿ ಸೋತವರು ಗೆದ್ದವರನ್ನು ಹೊತ್ತುಕೊಂಡು ನೂರು ಮಾರು ದೂರ ಓಡಬೇಕು.

ಪ್ರ— (ತಲೆದೂಗಿ) ಚೆನ್ನಾಗಿದೆ; ಚೆನ್ನಾಗಿದೆ; ನಿಮ್ಮ ನಿಬಂಧನೆಯಂತೆ ಆಡುವೆನು.

ಗೋ— ಇದರಲ್ಲಿ ನಂಟನ ಪೂಜೆಯು ಚೆನ್ನಾಗಿ ಆಗುವುದು; ಬಾ! ಆಡುವ! ಪ್ರಭಾಕರ! ನೀನು ಯಾರೊಡನೆ ಸ್ಪರ್ಧಿಸುವೆ?

ಪ್ರ—ಯಾರೊಡನೆಯಾದರೂ ಆಡುವೆನು. ನೀವೆಲ್ಲರೂ ತಕ್ಕ ಜತೆಗಳನ್ನು ಆರಿಸಿಕೊಳ್ಳಿರಿ ! ನಾನೂ ಬಲಭದ್ರನೂ ಒಂದು ಜೋಡಿಯಾಗಿರುವೆವು.

ಗೋ—ಸರಿ ! ಹಾಗೆಯೇ ಆಗಲಿ! ಸುದರ್ಶನನೂ ನಂದಕನೂ ಒಂದು ಜೋಡಿ ! ಸುಧಾಕರನೂ ಭದ್ರನೂ ಒಂದು ಜತೆ ! ವಿಜಯನೂ ವಸಂತನೂ ಒಂದು ! ನಾನೂ ಸುಧಾಧಾಮನೂ ಒಂದು ! ವಿಭಾವಸು ಚಂದ್ರಶರ್ಮರು ನೋಡುತ್ತಿರಲಿ ! ಗೆದ್ದವರು ಸೋತವರು ಯಾರೆಂದು ನಿರ್ಣಯಿಸುವ ಭಾರವು ಅವರಿಬ್ಬರದು!

ಎಲ್ಲರೂ—ಹಾಗೆಯೇ ಸರಿ !

ವಿಭಾವಸು:—ಎಲ್ಲರೂ ಜತೆಜತೆಯಾಗಿ ನಿಂತುಕೊಳ್ಳಿರಿ ( ಸರಿಯಾಗಿ ನಿಲ್ಲಿಸಿ ) ನಾನು ಆಜ್ಞೆಯನ್ನು ಕೊಡುವವರೆಗೂ ಪ್ರಾರಂಭಿಸಲಾಗದು; ಎಚ್ಚರಿಕೆ ! ಎಲ್ಲಿ ? ಎಲ್ಲರೂ ಸಿದ್ಧರಾಗಿರುವಿರೋ? ಒಂದು—ಎರಡು—ಮೂರು. (ಆಜ್ಞೆ ಕೊಡುವನು)

( ಎಲ್ಲರೂ ಆಟಕ್ಕೆ ಪ್ರಾರಂಭಿಸುವರು )

ವಿಭಾವಸು—ಚಂದ್ರಶರ್ಮನೆ! ಪ್ರಭಾಕರನು ಸೋತನು.

( ಎಲ್ಲರೂ ಕೈಚಪ್ಪಾಳೆ ಹೊಡೆದು ನಗುವರು )

ಪ್ರ—ಆಃ! ಈ ಹುಡುಗನೊಡನೆ ಆಡಿ, ಸೋತುಬಿಟ್ಟೆನಲ್ಲ ! (ಚಿಂತೆಯನ್ನು ನಟಿಸುವನು )

ಎಲ್ಲರೂ—ಪ್ರಭಾಕರ! ಹೊತ್ತುಕೊ! ಹೊತ್ತುಕೊ? ಬಲರಾಮನನ್ನು!! ನಂಟನಿಗೆ ತಕ್ಕ ಮನ್ನಣೆ ದೊರೆಯಿತಷ್ಟೆ?

ಪ್ರ—ಹುಂ! ಆಗಲಿ! ಸೋಲಿಗೆ ತಕ್ಕ ಫಲವನ್ನು ಅನುಭವಿಸಲೇಬೇಕು.

(ಬಲಭದ್ರನನ್ನು ಹೊತ್ತುಕೊಂಡು ಓಡುವನು)

(ಸ್ವಲ್ಪಹೊತ್ತು ಸಿರೀಕ್ಷಿಸಿ)

ಗೋ—ಏನಿದು! ಬಲಭದ್ರನನ್ನು ಹೊತ್ತುಕೊಂಡು ಹೋದ ಪ್ರಭಾಕರನು ಹಿಂದಿರುಗಲೇ ಇಲ್ಲ.

ಎಲ್ಲರೂ—(ಮಾರ್ಗವನ್ನೇ ಇದಿರು ನೋಡಿ) ಆಹಾ! ಆಶ್ಚರ್ಯವಾಗಿದೆ! ಇಷ್ಟು ಹೊತ್ತು ಪ್ರಭಾಕರನು ಬಾರದೆ ತಡೆದಿರಲು ಕಾರಣವಿಲ್ಲ.

ಗೋ—ಯಾವನಾದರೂ ದೈತ್ಯನು ಹೀಗೆ ಮೋಸಗೊಳಿಸಿರಬಹುದೆ! ಹೇಗಾದರೂ ಆಗಲಿ! ಬಲರಾಮನನ್ನು ಹುಡಿಕಿ ನೋಡುವ ಬನ್ನಿರಿ (ಎಂದು ಹೊರಟು) ಮಿತ್ರರೆ! ಇಲ್ಲಿ ಯಾವುದೊ ಋಷ್ಯಾಶ್ರಮವಿರುವಂತೆ ಕಾಣುವುದು ಅಲ್ಲಿಗೆ ಹೋಗಿ ವಿಚಾರಿಸುವ.

(ಎಲ್ಲರೂ ಹೊರಟರು)

(ಅನಂತರ ಋಷಿವೇಷಧರನಾದ ಪುಷ್ಕರನು ಪ್ರವೇಶಿಸುವನು)

ಋಷಿ—ಶಿಷ್ಯ! ಶಿಷ್ಯ! ವಿಲಂಬಶರ್ಮ!

ಶಿಷ್ಯ—ಬಂದೆ! ಬಂದೆ! ಗುರುಗಳೇ! (ಪ್ರವೇಶಿಸಿ) ಸ್ವಾಮಿ, ಕೃಷ್ಣಾಜಿನವನ್ನು ಹಾಸಿ ತಮ್ಮ ಆಸ್ನಿಕಕ್ಕೆ ಸಿದ್ಧಪಡಿಸಿರುವೆನು. ದಯೆಮಾಡಬೇಕು ! (ಕೈಕೋರುತ್ತ ತನ್ನಷ್ಟಕ್ಕೆ ತಾನೆ) ಒಳ್ಳೆಯ ಗುರು! ಒಳ್ಳೆಯ ಶಿಷ್ಯ! ನಾನಂತೂ ಶರ್ಮನಾಗಿ ಬಿಟ್ಟೆನು! ವೇದಾಧ್ಯಯನಾಧಿಕಾರಿಯಾದ ವಟುವಾಗಿ ಬಿಟ್ಟೆನು!! ಹಹ್ಹ ಹ್ಹ!!! (ಗಟ್ಟಿಯಾಗಿ ನಗುವನು).

ಋಷಿ—ಎಲೈ ಇದೇನು ನಗು? ಸುಮ್ಮನಿರು! ವಿಲಂಬ! ನಿನಗೇನೂ ತಿಳಿಯುವುದಿಲ್ಲ.

ಶಿಷ್ಯ—ಸ್ವಾಮಿ! ಈ ನಿಮ್ಮ ವೇಷವನ್ನು ನೋಡಿದರೆ ಹೊಟ್ಟೆ ಹಿಡಿಯಲಾರದಷ್ಟು ನಗುವು ತಾನೆ ಬಂದು ಬಿಡುತ್ತಿದೆ; ಏನು ಮಾಡಲಿ?

ಋಷಿ—ಎಲೋ ವಿಲಂಬ! ನನ್ನ ಮಿತ್ರನಾದ ಪ್ರಲಂಬನನ್ನು ಕೊಂದ ಆ ಬಲಭದ್ರನ ಮೇಲಿನ ಛಲವನ್ನು ತೀರಿಸುವುದಕ್ಕಾಗಿ ಈ ವೇಷವನ್ನು ಅಳವಡಿಸಿಕೊಂಡುದಾಯಿತು. ಇದರಿಂದ ಆ ಬಲವಾಸುದೇವರನ್ನು ಮೋಸಗೊಳಿಸುವುದು ಸಾಧ್ಯವಾಗಲಾರದೆ?

ಶಿಷ್ಯ—ಸಾಧ್ಯವಾಗದೆ ಏನು! ಸತ್ಪುರುಷರನ್ನು ವಂಚಿಸಲು ಈ ವೇಷವೇ ಸಹಕಾರಿ!

ಋಷಿ—ಇರಲಿ! ನನ್ನ ಕಾರ್ಯಸಾಧನೆಯಲ್ಲಿ ಶಿಷ್ಯನಾದ ನೀನು ಹೇಗೆ ಸಹಾಯಕನಾಗಿರುವೆಯೆಂಬುವನ್ನು ನೋಡುವೆನು. (ಆಸನದಲ್ಲಿ ಮಂಡಿಸುವನು)

ಶಿಷ್ಯ—ಗುರಗಳೇ! ನನಗೆ ಬೇರೆಯ ಕೆಲಸವನ್ನು ನಿಯಮಿಸಿಬಿಡಿ! ನಿಮ್ಮ ಬಳಿಯಲ್ಲಿಯೇ ಇಟ್ಟುಕೊಂಡರೆ ನಿಮ್ಮ ಚರ್ಯೆಗಳನ್ನು ನೋಡಿ ನಗದೆ ಇರುವುದು ನನ್ನಿಂದಾಗದು.

ಋಷಿ—ಎಲೋ! ಮೂರ್ಖ! ಗಂಭೀರಭಾವದಿಂದ ಇರು! ಎಚ್ಚರಿಕೆ! ಹುಚ್ಚುಹುಚ್ಚಾಗಿ ನಕ್ಕು ನನ್ನನ್ನು ಪೊಳ್ಳುಮಾಡೀಯೆ? ಆ ಮೇಲೆ ಸರ್ವನಾಶವು ಸಂಭವಿಸೀತು! ಗುರುವಿನ ಬಳಿಯಲ್ಲಿಯೇ ಶಿಷ್ಯನಿರಬೇಕು! ಶಿಷ್ಯನ ನಡೆವಳಿಕೆಯು ಗುರುಗಳ ಗೌರವವನ್ನು ಕಾಪಾಡತಕ್ಕುದಾಗಿರಬೇಕು; ಇದೆಲ್ಲವೂ ನಿನಗೆ ತಿಳಿದಿರುವುದಷ್ಟೆ?

ಶಿಷ್ಯ—ಸ್ವಾಮಿ! ತಮ್ಮಂತಹ ಮಹನೀಯರ ಶಿಷ್ಯನಾದ ನನಗೆ ಯಾವ ತಿಳಿವಳಿಕೆಯಲ್ಲಿ ತಾನೆ ನ್ಯೂನತೆಯುಂಟಾದೀತು! ತಮ್ಮ ವಿಭೂತಿ ರುದ್ರಾಕ್ಷಿ ಜಟಾಪಟಲಗಳನ್ನು ನೋಡಿದರಷ್ಟೆ? ನಗುಬರುವುದು; ನಾನು ತಲೆವಾಗಿಯೇ ಇದ್ದು ನಿಮಗೆ ಗೌರವವನ್ನು ತೋರಿಸಬಹುದಷ್ಟೆ?

ಋಷಿ—ಸರಿ! ಹಾಗೆಯೇ ಮಾಡು! ಅದೋ ನೋಡು; ಆ ಬಲಭದ್ರನ ಸಹೋದರನಾದ ಗೋವಿಂದನು ಇತ್ತಕಡೆ ಬರುವಂತಿದೆ. ಇವನು ಅನೇಕ ದೈತ್ಯರನ್ನು ಕೊಂದವನು! ಇವನಿಗೆ ತಕ್ಕುದನ್ನು ಈಗಲೇ ಮಾಡಿಬಿಡಬೇಕು.

(ಅನಂತರ ಗೋವಿಂದನೂ ಗೋಪಾಲರೂ ಪ್ರವೇಶಿಸುವರು)

ಗೋ—ಪೂಜ್ಯರಾದ ಋಷಿಪುತ್ರರೆ! ತಪಸ್ವಿಗಳನ್ನು ಕಾಣುವುದಕ್ಕೆ ಸಮಯವೊ?

ಶಿಷ್ಯ—ಎಲೈ ಬಾಲಕರೆ! ಮಹಾನುಭಾವರಾದ ಪುಷ್ಕರಮಹರ್ಷಿಗಳನ್ನು ಕಾಣಲು ಸಮಯವನ್ನು ಕಾಯಬೇಕಾದುದೇ ಇಲ್ಲ; ಅವರು ಯಾವಾಗಲೂ ಲೋಕಾನುಗ್ರಹಕಾರ್ಯದಲ್ಲಿ ಸಿದ್ಧರಾಗಿಯೇ ಇರುವರು.

ಗೋ—(ಸಮೀಪಗತನಾಗಿ) ಪೂಜ್ಯರಾದ ಮಹರ್ಷಿಗಳ ಸನ್ನಿಧಿಯಲ್ಲಿ ನಂದಸೂನುವಾದ ಗೋವಿಂದನು ಮಿತ್ರರೊಡನೆ ನಮಸ್ಕರಿಸುವನು.

ಋಷಿ—(ನಿಟ್ಟುಸಿರ್ ಬಿಡುತ್ತಾ)ವಾಸುದೇವ! ನಿಮ್ಮನ್ನು ಏನೆಂದು ಆಶೀರ್ವದಿಸಲಿ? ನೀವೆಲ್ಲರೂ ಮಹತ್ತರವಾದ ದುಃಖಕ್ಕೆ ಗುರಿಯಾಗಿರುವಿರಿ! ಅಯ್ಯೋ! ಅಯ್ಯೋ! ಕೃಷ್ಣಾ! ನೀನಿನ್ನೆಂತು ಬದುಕುವೆ?

ಗೋ—ಪೂಜ್ಯರೆ! ಅದೇನಾಗಿದ್ದರೂ ಹೇಳಿಬಿಡಿರಿ! ಅಣ್ಣನಾದ ಬಲದೇವನಿಗೆ ಏನೂ ಅರಿಷ್ಟವು ಸಂಘಟಿಸಿರಲಾರದಷ್ಟೆ!

ಋಷಿ—(ಅಳುತ್ತಾ) ಅಯ್ಯೋ! ಅಯ್ಯೋ! ಇನ್ನೆಲ್ಲಿಯ ಬಲರಾಮನಪ್ಪ!! ಕೃಷ್ಣಾ! ನಾನೇನು ಹೇಳಲಪ್ಪ? !!

ಗೋ—(ಕಳವಳದಿಂದ) ಸ್ವಾಮಿ! ಬಲಭದ್ರನಿಗೇನಾಯಿತು? ಪ್ರಭಾಕರನೊಡನೆ ಆಡುತ್ತಹೋದ ಅಣ್ಣನು ಯಾವ ವಿಪತ್ತಿಗೆ ಒಳಗಾಗಿರುವನು?

ಋಷಿ—ಅಯ್ಯೋ! ಪ್ರಭಾಕರನು ಯಾರಪ್ಪಾ!! ಮಾಯಾವಿಯಾದ ಪ್ರಲಂಬನೆಂಬ ದೈತ್ಯನು! ಬಲಭದ್ರನನ್ನು ಆಕಾಶಕ್ಕೆ ಹೊತ್ತುಕೊಂಡು ಹೋಗಿ ಗರಗರನೆ ತಿರುಗಿಸಿ ಆ ಮಡುವಿನಲ್ಲಿ ಎಸೆದು ಬಿಟ್ಟನು !! ಅಯ್ಯೋ! ಆಯ್ಯೋ! ನೆನೆದುಕೊಂಡರೆ ಎದೆ ಒಡೆದು ಹೋಗುವುದಲ್ಲ! ಇನ್ನೇನು ಮಾಡುವೆ? ಕೃಷ್ಣಾ !

ಎಲ್ಲರೂ — ಹಾ! ಹಾ! ಬಲಭದ್ರ! (ಮೂರ್ಛಾಕ್ರಾಂತರಾಗುವರು.)

ಗೋ—(ವಿಷಾದದಿಂದ) ಯಾವ ಮಡುವಿನಲ್ಲಿ? ಸ್ವಾಮಿ! ದಯೆಮಾಡಿ ತೋರಿಸಿರಿ!

ಋಷಿ—ಅದೊ ಅಲ್ಲಿ ಕಾಣುವ ಕಾಳಿಂಗನಮಡುವಿನಲ್ಲಿ !

ಗೋ—(ನೋಡಿ) ಅಕ್ಕಟಾ! ಈ ಮಡುವು ನೋಡುವುದಕ್ಕೇ ಭಯಂಕರವಾಗಿರುವುದಲ್ಲ? ಪೂಜ್ಯರೆ

ಕಂ॥ ಘುಳುಘುಳುರಾವಮದೇಂ ಬೊ- ।
ಬ್ಬುಳಿಯೇಂ?ಸುಳಿಯೇನೊ? ಕುದಿವ ನೀರೇಂ?ನೊರೆಯೇಂ
ಸುಳಿವ ಬಿಸುಗಾಳಿಯೇಂ ? ದು- ।
ರ್ವಿಳಸಿತಮಾಗಿರ್ಪುದದರ ಪರಿಯೇನರಿಯೆಂ ॥೩೫॥

ಋಷಿ— ಶ್ರೀಧರ! ಆ ಮಡುವಿನಲ್ಲಿ ಮಹಾವಿಷಜ್ವಾಲಾಭೀಲನಾದ ಕಾಳೀಯನೆಂಬ ಮಹಾ ಸರ್ಪನಿರುವನು! ಅವನ ವಿಷಾಗ್ನಿಗೆ ಸಿಕ್ಕಿದಮೇಲೆ ಬದುಕುವುದೆಂತರೇನು?

ಗೋಪಿಂದ—ಅಕಟಕಟಾ ! ಎಂತಹ ವಿಪತ್ತು ಪ್ರಾಪ್ತವಾಯಿತು!

* ಕಂ॥ ಎಲೆ ಸಂಕರ್ಷಣ ದೇವನೆ ।
ಕಲುಷಾತ್ಮನ ಮೋಸವರಿಯದಾದೆಯೊ? ಅಕಟಾ ॥
ಸಲೆ ನಿನ್ನ ವೈಮೆ ಕಿರಿದೇಂ ।
ಖಲನಂ ಕೊಂದಿಕ್ಕದಿಂತು ಮರೆದಳಿದೆಯ ಹಾ ! ॥೩೬॥

( ಅಳುತ್ತ ) ಪೂಜ್ಯರೆ ! ಇಂಥ ಅಪಜಯವು ಬಲಭದ್ರನಿಗೇಕಾಯಿತೋ?

ಕಂ॥ ದೇವಗುರು ದ್ವಿಜ ವೃಂದದೊ- ।
ಳಾವಪರಾಧಮನೊಡರ್ಚಿ, ಪಾತಕಿಯಾದಂ ॥
ಈ ವಿಧದಪಜಯಮುಂ ಬಲ ।
ದೇವಂ ತಾನಾಂತನೆಂಬುದಮುಮಾ ಚೋದ್ಯಂ ॥೩೭॥

ಋಷಿ—ಗೋವಿಂದ ! ಅದೆಲ್ಲವನ್ನೂ ವಿಚಾರಿಸಿಕೊಂಡು ಹೊತ್ತುಗಳೆಯಬಾರದು. ಬಲಭದ್ರನನ್ನು ಮಡುವಿನಿಂದ ಮೇಲಕ್ಕೆ ತರುವ ಪ್ರಯತ್ನವನ್ನು ಮಾಡು ! ಒಂದುವೇಳೆ ಕಾಳೀಯನ ವಿಷವೇರಿದ್ದರೂ ಮಣಿಮಂತ್ರಮೂಲಿಕೆಗಳಿಂದ ಬದುಕಿಸಲು ಸಾಧ್ಯವೋ ಏನೋ ನೋಡುವ! ನಡೆ! ನಡೆ! ಮಡುವನ್ನು ಹೊಕ್ಕು ಬಲದೇವನ ಸ್ಥಿತಿಯನ್ನು ಮೊದಲು ಪರೀಕ್ಷಿಸು.

ಗೋವಿಂದಃ—(ಆತುರದಿಂದ) ಪೂಜ್ಯರೆ ! ಇನೋ ಒಂದು ಕ್ಷಣವಾದರೂ ವಿಲಂಬಿಸದೆ ಹೊರಡುವೆನು. (ಹೊರಡುವನು)

ಗೋಪಾಲರು:— ಹಾ ! ಹಾ ! ಕೃಷ್ಣಾ ! ಬಲರಾಮನಂತೂ ನಮ್ಮನ್ನು ಕೈಬಿಟ್ಟನು. ನೀನಾದರೂ ಅಗಲದಿರು.

ಗೋವಿಂದ ಃ— ನನ್ನನ್ನೊಬ್ಬರೂ ತಡೆಯಬೇಡಿರಿ! (ನಡೆಯುವನು)

---

* ರಾಗ... ತಾಳ ( ರಾಮುಸ್ಮರಾ ತಾರಾ )

ಅಕಟಾ! ಬಲದೇವ! ಸುಭಾವ! ॥ಪ॥ ದುರುಳನ ಕೊಲ್ಲದೆ। ಕರೆಕರೆಯಾಂಪುದೆ ? ವರಗುಣಸಾಗರನೇ ॥ ಮನೋಹರ ॥ ೧ ॥ ನಿನ್ನನು ಮಡಿವೆ.ಯ: । ದುನ್ನತವತ್ತೆ ? ॥ ಸನ್ನುತ ! ತಿಳಿಯೆಯು ! ನೀಂ ॥ ಇಂತಾದೆಯು ॥ ೨ ॥ ಆವ ಪಾಪವನು । ಗೈದೆಯೊ ? ಧರೆಯೊಳು ॥ ಈ ವಿಧ ದುಪಹತಿಯು ॥ ಇನ್ನೇಂ ಗತಿ ॥ ೩ ॥

*ಗೋಪಾಲರು—ವೃ॥ ತಡೆ ತಡೆ! ಬಾಲಕೇಸರಿ! ......

ಗೋವಿಂದ—......ಅದೇತಕೆ ಪೇಳ್ವಿರಿ!......

ಗೋಪಾ—......ನಿಲ್ಲ ನಿಲ್ಲ! ಛೀ. ।

ಕಡುಚಲವೇಂ?

ಗೋವಿಂದ—......ಫಡಾ! ಖಲನ ಕೊಲ್ವುದು—

ಮಣ್ಣನ ಕಾವುದುಂ ಛಲಂ॥

ಗೋಪಾ—ದುಡುಕುವುದೇಕೆ? ಪೇಳ್!

ಗೋವಿಂದ— ...... ತಡೆವೊಡಾಗದದಾಗದು ಪೋಪೆ-ನೀಗಳೇ !

ಗೋಪಾಲರು—......ಫಡ ಫಡ ! ದುಷ್ಟ ... ...

ಗೋವಿಂದ — ... ಛೀ ! ದುರುಳ ...

ಗೋಪಾಲರು — ... ಪೇಳ್ವಪೆನಬ್ಬೆಗೆ ...

ಗೋವಿಂದ — ... ಪೋಗು ! ಪೇಳೆಲೋ ! ।೩ಲ॥

( ವೇಗದಿಂದ ಹೊರಟು ಹೋಗುವನು )

ಗೋಪಾಲಕರು — † ಅಕ್ಕಟಾ ! ಅಕ್ಕಟಾ ! ಇನ್ನೇನು ಗತಿ ? ಹಾ ಹಾ ! ಈ ಚಪಳ ಬಾಲನು ಮಡುವಿನಲ್ಲಿ ಧುಮ್ಮಿಕ್ಕಿದನಲ್ಲಾ ! ಅಯ್ಯೋ ! ಕೃಷ್ಣ ! ನೀನು ಸರ್ಪವಿಷಕ್ಕೆ ತುತ್ತಾದೆಯಾ ? ಯಶೋದೆ "ರಾಮಕೃಷ್ಣರೆಲ್ಲಿ" ? ಎಂದು ಕೇಳಿದರೆ ಏನು ಹೇಳುವ ? ಹೇಗೆ ಮನೆಗೆ ಹೋಗುವ ? ಹಾ ! ಮನೋಹರ ! ನಮ್ಮನ್ನು ಕೈ ಬಿಟ್ಟೆಯಾ ? ಹಾ ! ಯಾದವೇಂದ್ರ ! ಮುರಳಿ ನಿನ್ನನ್ನು ಕಾಣುವೆವೇ ? ಅಯ್ಯೋ ! ಬಾಲಚಂದ್ರ ! ಮುರಳಿ ನಿನ್ನನ್ನು ಕಾಣುವೆವೇ ? ಹಾ! ಹಾ! ಹಾ!

( ಮೂರ್ಛಾಕ್ರಾಂತರಾಗುವರು )

ಸುದರ್ಶನ — ಅಯ್ಯೋ ! ನಾವಿನ್ನು ಕಾಲವನ್ನು ಕಳೆಯಬಾರದು ! ಯಶೋದಾನಂದಗೋಪರಿಗೀವಿಷಯವನ್ನು ತಿಳಿಸುವ ( ಎಂದು ಹೊರಡುವರು )

ಋಷಿ — ಭಾಪು ! ಭಾಪು ! ಪುಷ್ಕರ ! ( ಹೊಗಳಿಕೊಂಡು ) ಎಲೈ ವಿಲಂಬ ! ನೋಡಿದೆಯೋ ? ನನ್ನ ಸಾಹಸವನ್ನು ! ಇನ್ನು ಕೃಷ್ಣನ ಮಾತು ಮುಗಿಯಿತು. ಬಲರಾಮನನ್ನು ಕೊನೆಗಾಣಿಸಬೇಕಾದುದೊಂದು ಉಳಿದಿರುವುದು !

ಶಿಷ್ಯ — ಗುರುಗಳೇ ! ತಮಗೆ ಯಾವುದು ತಾನೆ ಅಸಾಧ್ಯ ? ಅದೊ ಆ ಬಲಭದ್ರನು ಇತ್ತಲೇ ಬರುತ್ತಿರುವನು.

ಋಷಿ — ಬರಲಿ ! ಬರಲಿ ! ನಾವಿಬ್ಬರೂ ಈಗ ಕಪಟಚಿಂತೆಯನ್ನು ಅಭಿನಯಿಸಬೇಕು.

( ಇಬ್ಬರೂ ದುಃಖವನ್ನು ನಟಿಸುತ್ತಿರುವರು )

ಬಲಭದ್ರ — ( ಪ್ರವೇಶಿಸಿ ) ಆಹಾ ! ಅಪರಿಚಿತ ವ್ಯಕ್ತಿಗಳ ಅತ್ಯಂತ ಪ್ರಿಯೋಕ್ತಿಗಳು ಅರಿಷ್ಟಹೇತುಗಳೆಂದು ಚೆನ್ನಾಗಿ ಅನುಭವಕ್ಕೆ ಬಂದಿತು ! ನನ್ನನ್ನು ಮೋಸಗೊಳಿಸಲು ಯತ್ನಿಸಿದ್ದ ಆ ದುಷ್ಟ ದೈತ್ಯನನ್ನು ಯಮಪುರಕ್ಕೆ ಕಳುಹಿಸಿಯಾಯಿತು; ಇನ್ನು ನನ್ನ ಸಹಚರರನ್ನು ಸೇರಿಕೊಳ್ಳುವೆನು.

( ಬರುತ್ತಿರುವನು )

ಋಷಿ — (ಗಟ್ಟಿಯಾಗಿ ಅಳುತ್ತಿರುವನು)

---

* ರಾಗ ... ...ತಾಳ ( ಅಳಿಚಿಕುರೇ ಬಾಬಾರೆ ಸೀರೆ ) ಎಂಬಂತೆ

ಗೋಪಾಲರು — ಎಲೆ ತರಳಾ । ಬಾ ಬಾರೊ ಬಾಲ । ಯದುಕುಲಲೋಲ । ಕೀರ್ತಿವಿಶಾಲನೆ ನಿಲ್ ನಿಲ್ ನಿಲ್ ॥ ಪ ॥

ಗೋವಿಂ — ತಡೆವುದದೇತಕೆನ್ನ । ಮುನ್ನ । ನಡೆದಪೆನೀಗಳೆ ಕಡು ಛಲದೊಳು ನಾಂ ॥

ಗೋಪಾಲರು — ಕಾಳಿಂಗನ ಬಳಿ ಪೋಪರೇನೊ ?

ಗೋವಿಂ — ಖೂಳನ ಶಿಕ್ಷಿಸಿ ಬರ್ಪೆ ನಾನು ।

ಗೋಪಾಲರು — ದುಡುಕುವುದೇಂ ?

ಗೋವಿಂ -- ಫಡ ! ಸಹಿಸೆಂ ।

ಗೋಪಾಲರು — ಹುಡುಗನೆ ಛೀ ।

ಗೋವಿಂ — ನಡೆ ಮೂರ್ಖ ॥ ೧ ॥

* ರಾಗ ... ... ... ತಾಳ

ಕಣ್ಮರೆಯಾದ್ಯೆ ಮಾಧವಾ । ಪೊಣ್ಮಿಸಿದ್ಯೆ ಹಾ ! ದುಗುಡವಾ ॥ ಪ ॥ ರಾಮಾ ! ಸುಗುಣಧಾಮನೇ ! ಹಾ । ಸೋಮಾ ! ನಿನ್ನನೇಂ ಕಾಣ್ಬೆವೇ॥ ಅಯ್ಯೋ ॥ ೧ ॥ ಕ್ರೂರವಿಷಕೆ ತುತ್ತಾದಿರೇ । ಹಾ । ದಾರುಣಕಾರ್ಯವ ಗೈದಿರೇ ॥ ೨ ॥ ಅಬ್ಬೆಗೆ ನಾವೇಂ ಪೇಳ್ವೆವೊ । ಹಾ । ಉಬ್ಬುವ ಶೋಕವೇಂ ಸೈಸೆವೊ ॥ ೩ ॥

* ಕಂ॥ ಗೋಕುಲಮಾದುದನಾಥಂ ! ।
ವ್ಯಾಕುಲಮಾದತ್ತು ಯದುಕುಲಕ್ಕಂ ದಿವಿಜಾ ।
ನೀಕದ ಬಗೆ ಬಯಲಾಡುದ ।
ದೇಕಿಂ ಮುನಿಜನದ ಬಾಳ್ತೆ ?
ಹಾಹಾ! ಕೃಷ್ಣಾ! ॥ ೩೯ ॥

ಅಯ್ಯೋ ! ಕೃಷ್ಣ ! ಇಂತಹ ದುಸ್ಥಿತಿಗೆ ಗುರಿಯಾದೆಯಾ? ಹಾ ಮಾಧವ ! ಹಾ ! ವನಜಾಕ್ಷ !

(ಮೂರ್ಛೆಯನ್ನು ನಟಿಸುವರು )

ಬಲ —(ಕೇಳಿ) ಅಕ್ಕಟಾ, ಇದೇನು ? ಗೋವಿಂದನಿಗೇನಾಯ್ತು? ಈ ಋಷಿ ಯಾರು ? ಹೀಗೆ ಹಂಬಲಿಸಲು ಕಾರಣವೇನು ? ಏನೋ ವಿಷಮವು ಪ್ರಾಪ್ತವಾದಂತಿದೆ; ಇರಲಿ ! ವಿಚಾರಿಸಿ ತಿಳಿಯುವೆನು. (ಸಮೀಪಕ್ಕೆ ಹೋಗಿ) ಎಲೈ ಪೂಜ್ಯರೆ! ಬಲಭದ್ರನು ನಮಸ್ಕರಿಸುವನು; ಕೃಷ್ಣನ ವಿಷಯದಲ್ಲಿ ತಾವು ಹೀಗೆ ಗೋಳಾಡಲು ಕಾರಣವೇನು?

ಋಷಿ —ಅಯ್ಯೋ, ಬಲಭದ್ರ ! ಕೃಷ್ಣನು ಇನ್ನೆಲ್ಲಿ ಜೀವಿಸಿರುವನಪ್ಪ? ಅಯ್ಯೋ! ಮುಂದೇನು ಗತಿ? ಬಲರಾಮ !

ಬಲ —ಸ್ವಾಮಿ ! ಕೃಷ್ಣನೇನಾಗಿರುವನು ? ಮೊದಲು ಹೇಳಿರಿ.

ಋಷಿ —ಅಯ್ಯೋ !! ಅಯ್ಯೋ ! ಆ ಕಾಳಿಂಗಮಡುವಿನಲ್ಲಿ ಬಿದ್ದು ಹೋದನಪ್ಪ! ಸಂಕರ್ಷಣ ! ನಾನೇನು ಹೇಳಲಿ ! ನಾನೇ ಕಣ್ಣಾರೆ ಕಂಡೆನಪ್ಪಾ ! ಅಯ್ಯೋ ! ಬಲದೇವ ಇನ್ನು ನೀನು ಹೇಗೆ ಜೀವಿಸುವೆ ?

( ಅಳುವನು )

ಬಲ —ಹಾ ! ಕೃಷ್ಣಾ ! ಇದೇನು ಸರ್ವನಾಶ! (ಎಂದು ಮೂರ್ಛೆ ಬಿದ್ದೆದ್ದು ಅಳುತ್ತಾ ) ಸ್ವಾಮಿ ತಪಸ್ವಿಗಳೆ ! ಗೋಪಾಲನು ಮಡುವಿನಲ್ಲಿ ಬೀಳಲು ಕಾರಣವೇನು ? ಯಾವ ಪಾಪಕ್ಕಾಗಿ ಹೀಗೆ ಪ್ರಾಯಶ್ಚಿತ್ತವನ್ನು ಮಾಡಿಕೊಂಡನು.

ವೃ॥ ಮೇವಾನಂ ಮರೆತೇಂ ನಿವಾರಿಸಿದನೋ ತನ್ನಾಟದೊಂದುರ್ಕಿನಿಂ ।

ಋಷಿ —ಇಲ್ಲ; ಇಲ್ಲ ಅಂತಹ ಅಪರಾಧವೇನನ್ನೂ ಮಾಡಲಿಲ್ಲ !

ಬಲ —ಗೋವಿಂದಂ ದ್ವಿಜವೃಂದಕಾದ ನುಗುಡಂಗಂಡೇಂ ಮನಂನೊಂದನೋ? !

ಋಷಿ —ಇಲ್ಲ; ಬ್ರಾಹ್ಮಣಾಪಮಾನವೂ ನಡೆಯಲಿಲ್ಲ!

ಬಲ —"ನೋವಾಂತಂ ಬಲನಾಪ್ರಲಂಬನಿ" ನೆನುತ್ತಾರಾನುಮೇಂ ಪೇಳ್ದರೋ ?

ಋಷಿ —ಇಲ್ಲ ! ಇಲ್ಲ ! ಹಾಗೆ ಯಾರೂ ಹೇಳಲಿಲ್ಲ.

ಬಲ —ಶ್ರೀವತ್ಸಾಂಕನದೇತಕಯ್ಯೊ । ಮಡುವಂ
ಪೊಕ್ಕಂ ಕಣಾ । ಮೌನಿಯೇ ॥ ೪೦ ॥

ಋಷಿ —ಆ ಪಾಪಿಗಳಾದ ಗೋಪಾಲರು ಕೃಷ್ಣನೊಡನೆ ಆಡುತ್ತ ಕಲಹವನ್ನು ಕಲ್ಪಿಸಿ ಮಡುವಿನೊಳಕ್ಕೆ ತಳ್ಳಿಬಿಟ್ಟರು !

ಬಲ —ಅಯ್ಯೋ! ಅಯ್ಯೋ! ಹೀಗೂ ಉಂಟೇ, ಪೂಜ್ಯರೆ! ಪರಮಸಾಧುಗಳೂ, ಕೃಷ್ಣಪ್ರಿಯರೂ, ಆದ, ಗೋಪಾಲಕರು ಇಂತಹ ಅಕಾರ್ಯವನ್ನು ಗೈಯ್ಯುವರೆ ?

ಋಷಿ —ವತ್ಸ ! ಮೇಲೆ ಸಾಧುಗಳಂತೆ ಕಂಡರೂ ಅಂತರಂಗದಲ್ಲಿ ಕಾಪಟ್ಯವನ್ನುಳ್ಳವರು ಲೋಕದಲ್ಲಿ ಅನೇಕರಿರುವರೆಂಬುದನ್ನು ನೀನರಿಯೆ ! ಪಾಪ !

ಬಲ —ಅಯ್ಯೋ! ಇನ್ನೇನುಗತಿ? ಹಾ! ಗೋವಿಂದ !

( ಅಳುತ್ತ )

† ವೃ॥ ಅದೇಕೆ ಬಿಟ್ಟು ಪೋದೆನೋ ? ಜನಾರ್ದನಾ !
ಶುಭಾನನಾ ।
ಅದೆಂತು ಸಾಧುಗೋಪರಲ್ಲಿ ಭೇದ ಬುದ್ಧಿ
ತೋರಿತೋ !!

---

* ರಾಗ ... ... ...ತಾಳ

ಅಯ್ಯೋ ಮೋಹನಾಕಾರ । ಅಯ್ಯೋ ! ಮನೋಹರ । ಅಯ್ಯೋ ! ಮುರಳೀಧರ । ಶೌರೀ ॥ ಪ ॥ ಗೋಕುಲಕೇಂ ಗತಿ । ಹಾ ಕೃಷ್ಣಾ! ಯಾದವ । ರಾಕುಲಮಾಂತರೆ । ದೇವಾ ॥ ೧ ॥ ಮುಳಿದೆಯೊ ? ಅಳಿದೆಯೊ ಜಲರುಹ ದಳನೇತ್ರ । ಅಳಲದೆಂತು ಸೈಸವು ನಾವು ॥ ೨ ॥

† ರಾಗ ತಾಳ ( ಮೂರ್ತಿಮಂತ ) ಎಂಬಂತೆ.

ಅಹೋ ಮುರಾರೀ! ಶ್ರೀಹರೀ ! ಅದೆಲ್ಲಿ ಪೋದೆ ಶೌರಿ ! ನೀ॥ ಪ॥ ಮಹಾವಿಷಾದಕೀಪರಿ ಗುರಿಗೈದೆಯಾ? ಗುಣಾಕರ ॥ಅ॥ ಮನೋಜಜನಕ ನಿನ್ನನಾ । ನದೇಕೆ ಬಿಟ್ಟುಪೋದೆನೋ ? ಅನಾಥರಾದೆವಕ್ಕಟಾ । ಜನಾರ್ದನಾ ! ಶುಭಾನನಾ ॥ ೧ ॥ ಗೋಪಾಲರಿಂತು ಕ್ರೌರ್ಯವ ! ಶ್ರೀಪತಿ ! ನಿನ್ನೊಳ್ ತೋರ್ದರೆ ! ಪಾಪಾತ್ಮರಾದೆವಕ್ಕಟಾ ಏಪರಿಯಿನ್ನು ಗೈವುದೊ ॥ ೨ ॥

ಉದಾರ! ಧೀರ! ಸುಂದರಾ! ಮನೋಹರಾ !
ಸಹೋದರಾ !।
ಮದೀಯ ಮಾನಸಕ್ಕೆ ತೋರದೊಂದು–
ವಿರಾಗಳಕ್ಕಟಾ ॥ ೪೧ ॥

( ಮೂರ್ಛಾಕ್ರಾಂತನಾಗುವನು ).

ಋಷಿ — ವತ್ಸ! ಏಳು ಏಳು ! (ಸಂತವಿಸಿ) ಲೋಕದಲ್ಲಿ ಅಳಿದವರಿಗೆ ಅಳುವವರು ಅನೇಕರಿರುವರು ! ಅಳಿದವರ ಗತಿಯೇನೆಂದು ಮಾತ್ರ ಯಾರೂ ಆಲೋಚಿಸುವುದಿಲ್ಲ. ಬಲಭದ್ರ ! ಸುಮ್ಮನೆ ಚಿಂತಿಸಿ ಫಲವಿಲ್ಲ; ಗೋವಿಂದನನ್ನು ಮಡುವಿನಿಂದ ಉದ್ಧರಿಸುವ ಪ್ರಯತ್ನ ಮಾಡು ! ಸ್ವಲ್ಪವಾದರೂ ವಿಲಂಬಿಸಬೇಡ! ಕೃಷ್ಣನಲ್ಲಿ ನಿನಗೆ ಪ್ರೀತಿಯಿದ್ದರೆ ಈ ಕೆಲಸವನ್ನು ಮಾಡು! ಮೊದಲು ಹೊರಡು! ಹೊರಡು । ಒಂದುವೇಳೆ ವಿಷವೇರಿದ್ದರೂ, ಮಣಿಮಂತ್ರಮೂಲಿಕೆಗಳಿಂದ ನಾನು ವಾಸಿ–ಮಾಡುವೆನು. ಅಂತಹ ಮೋಹನಾಕಾರನನ್ನು ಕಳೆದುಕೊಂಡು ಬದುಕಿರುವುದು ಹೇಗೆ?!!!

ಬಲ—ಪೂಜ್ಯರೆ! ಇದೊ ಹೊರಟೆನು.

( ಹೊರಟು ಹೋಗುವನು ).

ಋಷಿ —* ಭಲೆ ! ಭಲೆ ! ವಿಲಂಬ ! ಉಪಾಯದಿಂದಲೇ ಬಲಕೃಷ್ಣರಿಗೆ ನಾಶವನ್ನು ಕಲ್ಪಿಸಿದೆನು. ಹಗೆಯನ್ನು ತೀರಿಸಿಕೊಂಡೆನು; ಗೆದ್ದೆನು; ನೋಡಿದೆಯೋ ?

ಶಿಷ್ಯ— ಸ್ವಾಮಿ ! ಈಗ್ಗೆ ತಮ್ಮ ಮಂತ್ರವು ಸಿದ್ಧಿಸಿದಂತೆ ಕಾಣುವುದು; ಒಂದುವೇಳೆ ಈ ಕುತಂತ್ರವೇನಾದರೂ ಭಿನ್ನವಾದರೆ ನಿಮ್ಮ ಗತಿಯೇನಾಗುವುದೋ ?

ಋಷಿ :—ತಂತ್ರವು ಭಿನ್ನಿಸಲು ಕಾರಣವಿಲ್ಲ. ಹೇಗಾದರೂ ಆಗಲಿ ! ಇಲ್ಲಿಂದ ಕಾಲಿಗೆ ಬುದ್ಧಿ ಹೇಳುವುದೇ ಒಳ್ಳೆಯದು.

(ಇಬ್ಬರೂ ಓಡಿಹೋಗುವರು).

( ಗೋಪಾಲಕರು ಪ್ರವೇಶಿಸುವರು ).

ಸುದರ್ಶನ—ಇದೇನು ಬಲಭದ್ರನು ಇತ್ತ ಕಡೆಯಿಂದ ಬರುತ್ತಿರುವನು !! ಆ ಋಷಿಯೇನಾದರೂ ಕೃಷ್ಣನನ್ನು ಮೋಸಗೊಳಿಸಿರಬಹುದೆ ?

ಬಲ—(ಪ್ರವೇಶಿಸಿ) ಛೀ! ಪರಮಪಾಪಿಗಳಾದ ಗೋಪಾಲಕರು ಇಲ್ಲಿಯೇ ಇರುವರು! ಕೃಷ್ಣಘಾತಕರಾದ ಇವರು ಸಂಭಾಷಣೆಗೂ ಅನರ್ಹರು ! ಮೊದಲು ಮಡುವನ್ನು ಪ್ರವೇಶಿಸಿ ಕೃಷ್ಣನ ಸ್ಥಿತಿಯನ್ನು ಪರೀಕ್ಷಿಸುವೆನು. (ಹೋಗುತ್ತಿರುವನು).

ಗೋಪಾಲಕರು— ಬಲಭದ್ರ ! ಅದೇಕೆ ಮಾತಾಡದೆ ಹಾಗೆಯೇ ಹೋಗುತ್ತಿರುವೆ ?

ಬಲः — † ವೃ॥ ಫಡ ಫಡ ! ನಿಮ್ಮ ಮೋರೆಯುಮುನಾ–
ದೊಡವೀಕ್ಷಿಸೆಂ ... ...

ಗೋ॰ಾ ‡ — ... ... ಇಂತು ಕೋಪಮೇಂ? ।

---

* ರಾಗ...... ತಾಳ (ಅರರೇ ! ಎನ್ನಯಸಮಾನರಾರು).

ಭಲರೇ ಸಾಹಸಿಯು॰ೇ ನಾಂ ಜಗದೊಳು ! ಭಳಿ ಭಲೆ ಸಮರಾರು । ಪ ॥ ಛಲವನು ತೀರಿಸಿದೆನಾಂ ಸುಲಭದೆ ಪಗೆಯೊಳು ಬಲಗೋಪಾಲರೊಳು ॥ ಅ ॥ ಧೀರನು ನಾನೇ ಶೂರನು ನಾನೇ ಧೀರುರೆ ಜಗದೊಳಗೆ ॥ ಭೋರನೆ ಸಾರುವೆ ಸಾರುವೆ ಕಂಸಮಹಾರಾಜನೊಳಿದನು ॥೧। ಕೊಂದೆನು ನಾನಾ–ನಂದಸೂನುಗಳ ಚಂದದೊಳಿಂದಿನೊಳು ! ನೆರೆಸುಖದಿಂದ ಬಾಳುವೆ ಮಂದಹಾಸದೆ ಮುಂದೆ ನೃಪಾಲನೊಳು ॥ ೨ ॥

† ರಾಗ ......ತಾಳ ( ದುರುಳ ಈ ತೆರನಾಡುವೆ ) ಎಂಬಂತೆ.

ಫಡಫಡಾ! ಬಿಡಿ ಮೂಢರೇ ! ॥ ಪ ॥ ಮದೋದ್ಧತರೆ ಬಿಡಿ ಬಿಡಿ ನುಡಿಗಳ ॥ ಅ ॥ ಮಡುಗೆ ನೂಂಕಿದರೆ ಗಡ! ದುರಾತ್ಮರೆ ಜಡರೆ ! ಕೃಷ್ಣನಂ ನಡತೆಯೋನಿದು ॥ ೧ । ಸುಂದರಾಂಗನ ! ಕೊಂದಿರಕ್ಕಟ ! ಮಂದಮತಿಗಳೇ ! ಇಂದಿರೇಶನ ॥ ೨ ।

‡ ರಾಗ ......ತಾಳ (ಧನ್ಯಧನ್ಯ ವಿಭುದಮಾನ್ಯ) ಎಂಬಂತೆ.

ಇಂತು ಪೇಳ್ವೆ ರೋಹಿಣೇಯ ! ಎಂತು ಸಹಿಪೆವೈ ॥ ಕು ॥ ವರಯದುಕುಲ । ಶರನಿಧಿಶಶಧರನ ಪರಿಗೆ ಮರುಗುತಿರೆ ॥ ಕರಿಕರಿಗೊಳಿಪರೆ ನರೆದೊರೆ । ಪರಿಕಿಸದಿಪರೆ ॥ ೧ ॥ ಬಿಡು ಬಿಡು ಬಿಡು ಮನದಕೋಪ ಅಡಿಗೆರಗುವೆ? ಪೊಡೆಯುನೆ ನಾವ್॥ ನಡತೆಯನರಿಯದರೆ? ನಾವು ಜಡಜನೇತ್ರನೇ॥೨॥

ಬಲ—ಬಿಡಿರೆಲೆ ! ನನ್ನೊಳೀ ಕವಡುಮಾತುಗಳೇ ?

ಗೋಪಾಲರು— ... ... ಇದನೆಂತು ಪೇಳ್ವೆಯೋ ?

ಬಲ —ಮಡುವೊಳೆ ನೂಂಕಿದಿರ್ ಗಡ ! ಮುರಾರಿಯು ನಕ್ಕಟ ! ... ... ... ...

ಗೋಪಾ—ಅಯ್ಯೋ ! ಅಯ್ಯೋ !

ನಮ್ಮೊಡೆಯನ ಜನ್ನದಿಂ ಮರುಗಿ ಬೇವರಸಿಂತುಟು ಚುರ್ಚಲ ಕ್ಕು ಮೇ ? ॥ ೪೨ ॥

ಬಲ .—ಛೀ ! ಮೂರ್ಖರೆ ! ಗೋವಿಂದನು ಮಡುವನ್ನು ಹೊಗಲು ಕಾರಣರು ಯಾರು ?

ಗೋಪಾ —ಬಲಭದ್ರ ! ನೀನೇ ಕಾರಣನು !

ಬಲ —ಛಡ ! ಪಾಪಿಗಳೇ ! ನಿಮ್ಮ ತಪ್ಪನ್ನು ನನ್ನಲ್ಲಿ ಆರೋಪಿಸುವಿರಾ ? ಲೋಕದಲ್ಲಿ ಈ ದುರ್ಲಕ್ಷಣವು ಬಲವಾಗಿರುವುದು. ನಿಮ್ಮ ನಾಲಗೆಯನ್ನು ಸೀಳಬೇಕು !

ಗೋಪಾ —ಬಲದೇವ ! ಈ ವಿಷಯದಲ್ಲಿ ನಮ್ಮನ್ನು ದೋಷಿಗಳೆಂದು ಹೇಗೆ ಭಾವಿಸುವೆ ?

ಬಲ —ಪುಷ್ಕರ ಮಹರ್ಷಿಗಳಿಂದ ಎಲ್ಲವನ್ನೂ ತಿಳಿದೆನು. ನೀವು ಆಟದಲ್ಲಿ ಹುಟ್ಟಿದ ಕಲಹದಿಂದ ಮಾಧವನನ್ನು ಮಡುವಿನಲ್ಲಿ ತಳ್ಳಿದಿರಲ್ಲವೆ ?

ಗೋಪಾಲರು —ಬಲಭದ್ರ ! ಆ ತಪಸ್ವಿಯು ನಿಜವಾಗಿಯೂ ಮೋಸಗಾರನು.

ಬಲ —ಅಹುದಹುದು ! ಮೋಸಗಾರರಿಗೆ ಎಲ್ಲರೂ ಮೋಸಗಾರರೆಂದೇ ಭಾವನೆ !

ಗೋಪಾ —ಬಲಭದ್ರ ! ಹಾಗಲ್ಲ ! "ಪ್ರಲಂಬನಿಂದ ಬಲದೇವನು ಮಡುವಿಗೆ ಹಾಕಲ್ಪಟ್ಟ"ನೆಂದು ಕೃಷ್ಣನಿಗೆ ಹೇಳಿದವನು ಆ ಋಷಿಯೇ !! ಗೋವಿಂದನು ನಿನ್ನನ್ನು ರಕ್ಷಿಸುವ ಆತುರದಿಂದ ಮಡುವಿನಲ್ಲಿ ಧುಮ್ಮಿಕ್ಕಿದನು. ನಿನ್ನನ್ನು ಕಂಡುದರಿಂದ ನಮ್ಮ ಅರ್ಧ ದುಃಖವು ಪರಿಹಾರವಾಯಿತು !

ಬಲ —( ತನ್ನಲ್ಲಿ ತಾನು) ಆಹ ! ಇದ್ದರೂ ಇರಬಹುದು; ಆ ಋಷಿಯು ನನ್ನನ್ನು ತ್ವರೆಗೊಳಿಸಿದ ಪರಿಯನ್ನು ಆಲೋಚಿಸಿದರೆ ವಂಚಕನೆಂದು ಈಗ ತೋರುತ್ತಿರುವುದು ! ಇದು ಹೇಗಾದರೂ ಇರಲಿ ! ಮೊದಲು ಮಡುವನ್ನು ಹೊಕ್ಕು ಕೃಷ್ಣನ ಸ್ಥಿತಿಯನ್ನು ಪರೀಕ್ಷಿಸುವೆನು. ಆ ಕಪಟ ತಪಸ್ವಿಯ ವಿಷಯವನ್ನು ಅನಂತರ ಆಲೋಚಿಸುವೆನು.

(ಹೊರಡಲು ಅನುವಾಗುವನು)

(ಆಕಾಶದಲ್ಲಿ)

ಬಲಭದ್ರ ! ಈ ಮೌಢ್ಯವು ಸಾಕು ! ಮಹಾನುಭಾವನಾದ ಶ್ರೀಕೃಷ್ಣನ ಮಹತ್ವವನ್ನು ನೆನೆ ! ಆ ಪರಮಪುರುಷನ ಅವತಾರವು ಲೋಕೋಪಕಾರಾರ್ಥವಲ್ಲವೆ ?

ಬಲ —(ಕೇಳಿ) ಆಹ ! ಭಗವಂತನಾದ ಗೋವಿಂದನ ವಿಷಯದಲ್ಲಿ ಚಿಂತೆಯೇತಕ್ಕೆ ? ಮಿತ್ರರಾದ ಗೋಪಾಲಕರೆ ! ಜನನೀಜನಕರು ಕೃಷ್ಣವಿಯೋಗದಿಂದ ದುಃಖಿಸುತ್ತ ಇತ್ತಲೇ ಬರುತ್ತಿರುವರು ಅವರನ್ನು ಸಮಾಧಾನಗೊಳಿಸುವ ಬನ್ನಿರಿ !

(ಹೊರಡುವರು)

(ಯಶೋದಾನಂದರೂ ಗೋಪಿಯರೂ ಅಳುತ್ತಾ ಪ್ರವೇಶಿಸುವರು)

ಯಶೋ—*ಕಂದ॥ ಹಾಹಾ! ಮುರಳೀಲೋಲಾ! !
ಹಾಹಾ! ಸುಗುಣಾಲವಾಲ ! ನೀನೆಲ್ಲಿರ್ಪೈ
ಹಾಹಾ! ಸುಂದರ ಹಲಧರ ।
ಹಾಹಾ! ಬಲದೇವ! ನಿನ್ನ ಕಾಣ್ಬೆನೆ ?
ಕಂದಾ ॥೪೩॥

ಹಾ ಹಾ ! ಕಂದರೆ ! ಹಾ ! ನನ್ನ ದೇವರೆ ! ಹಾ ! ನನ್ನ ರತ್ನಗಳೆ ! ಹಾ ಹಾ ! ಬಾಲರೆ ! ಗೋಪಾಲರೆ ! (ಮೂರ್ಛಾಕ್ರಾಂತಳಾಗುವಳು)

ನಂದ — ( ಅಳುತ್ತಾ ) ಮಕ್ಕಳೆ ! ಸ್ವಭಾವಚಪಲರಾದ ನಿಮ್ಮನ್ನು ನಾನೇಕೆ ವನಗಳನ್ನು ಕಾಯಲು ಕಳುಹಿಸಿದೆನೋ!

ಕಂದ॥ ಸುತರೇ ! ನಿಮ್ಮಂ ಕಾಣದೆ।
ಕ್ಷಿತಿಯೊಳಗುಂ ಬಾಳ್ವುದೆಂತೊ? ಮುಂದೇಂ ಗತಿಯೊ?
ಹತಭಾಗ್ಯನಾದೆ ನಾ ವಿಧಿ ।—
ಹತಕಂ ದುಸ್ಥಿತಿಗದೇಕೆ ? ಗುರಿಗೈದನೊ ತಾಂ ॥೪೪॥

*(ಹೈಸಾಷೆ) ಎಂಬತೆ

ಯಶೊ —ಮುರಾರಿ ನಿನ್ನ ಕಾಣದೆ ನಾನಕಟೆಂತು ಬಾಳ್ವೆನೊ ಹಾ ! ಪ॥ ವ.ನೋಹರಾ ! ಹಲಾಯುಧಾ ! ಅದೆಲ್ಲಿ ಹೇ ಗುಣಾಕರಾ ॥ಅ॥
ನಂದ—ಕಾಳೀಯನ ವಿಷವಕ್ತ್ರಟಾ! ಕೊಲದೆಂತು ನಿಮ್ಮ ಮಾಣ್ಬುದೋ ? ! ತಾಳುವೆನೆಂತು ನಾಶೀವ್ರಥೆಯನಾ ಬಾಲರೆ ! ಏಗೈವುದೋ ? ॥೧॥
ಗೋಪಿಯರು—ಮುರಳೀಧರಾ। ಸ್ಮರಸುಂದರಾ । ಅಕಟಾ ! ಮನೋಜ್ಞಚೇದಿರಾ ॥ ಪರಿಸೀಲಗಾತ್ರಸದಾರುಚಿರಾ ! ಮಾತಾಡು ನೀರಜೋದರಾ ॥೨॥

ಹಾ ! ದಾಮೋದರ ! ಹಾ ! ಹಲಧರ ! ಹಾ ! ಹಾ !

( ಮೂರ್ಛಾಕ್ರಾಂತನಾಗುವನು )

ಗೋಪಿಯರು—

ಕಂದ॥ ಎಲ್ಲಿರ್ಪೈ ? ಮಾರಸುಂದರ !
ಎಲ್ಲಿರ್ಪೈ? ವೇಣುಲೋಲ! ಸುಮಧುರಲೀಲಾ ।
ಎಲ್ಲಿರ್ಪೈ ? ಗೋಕುಲವಿಭು ।
ವಲ್ಲಿ! ನಾಂ ಬರ್ಪೆವಾಳ್ವುದರಸಾ ! ಸರಸಾ ! ॥೪೫॥

ಕಂ॥ ಮದನಾಗ್ನಿಯಿಂದಮೇಂ ಸ ।
ರ್ಪದ ಮುಖವಿಷವಹ್ನಿ ದುಸ್ಸಹಮೆ? ಪೇಳೆರಿಯಾ।
ಹೃದಯದ ಬೇಗೆಯ ಸೈರಿಸಿ ।
ಯದೆಂತುಟೋ? ನಿನ್ನ ಕಾಣದಸುವಿಡಿವುದು?
ಹಾ! ॥೪೬॥

( ಮೂರ್ಛಾಕ್ರಾಂತರಾಗುವರು )

ಯಶೋ— ಹಾ! ಕಂದರೆ! ನಿಮ್ಮನ್ನು ಬಿಟ್ಟು ಬಾಳುವುದು ಹೇಗೆ? ಕೃಷ್ಣಾ! ನಿನ್ನ ಲೀಲೆಗಳನ್ನೆಂತು ಮರೆಯಲಿ? ಮಗು! ಜತೆಯ ಗೋಪಾಲಕರು ಕಾದಿರುವರು ಬೇಗ ಬಾ! ಗೋಪಿಯರು ಕರೆವರು ಏಳು! ಹಸುಗಳು ನಿನ್ನನ್ನು ಕಾಣದೆ ಕಳವಳಿಸುವುವಲ್ಲ; ಮೇವನ್ನು ಕೊಳ್ಳದೆ ಕಣ್ಣೀರನ್ನು ಸುರಿಸುವುವಲ್ಲ! ಗೋವುಗಳು ಹಸಿದಿರುವುದನ್ನು ನೋಡಿ ಹೇಗೆ ಸಹಿಸುವೆ! ಹಾ! ಬಲಭದ್ರ! ನಿನ್ನ ಚೇಷ್ಟೆಗಳಿಗಾಗಿ ಎಷ್ಟೋ ದಂಡಿಸುತ್ತಿದ್ದೆನಲ್ಲ; ಹಾ! ಶ್ರೀಹರಿ! ಇನ್ನು ಬೆಣ್ಣೆಕೊಡೆಂದು ನನ್ನನ್ನು ಪೀಡಿಸುವವರು ಯಾರು? ನಿನ್ನ ಕಾಲಿನ ಬಟ್ಟಲನ್ನು ನೋಡಿ ಎಂತು ಸಹಿಸಲಿ? (ದುಃಖಿಸಿ) ಅಯ್ಯೋ ಇನ್ನು ಕೃಷ್ಣನೆಲ್ಲಿ? ರಾಮನೆಲ್ಲಿ? ( ನಿರಾಶೆಯಿಂದ ) ಗೋಕುಲವು ಅನಾಥವಾಯ್ತು; ಬೃಂದಾವನವು ಶೂನ್ಯವಾಯಿತು; ಹಾ ಹಾ! ನಾನೂ ಈ ಮಡುವಿನಲ್ಲಿಯೇ ಬಿದ್ದು ಪ್ರಾಣಗಳನ್ನು ನೀಗುವೆನು. ( ಎಂದು ಸಿದ್ಧಳಾಗುವಳು )

ಬಲ— (ಪ್ರವೇಶಿಸಿ) ಹೋ! ನಿಲ್ಲಿರಿ ನಿಲ್ಲಿರಿ! (ಎಲ್ಲರನ್ನೂ ತಡೆದು )

ವೃ॥ ತಂದೇ! ದಂದುಗವೇತಕಂಬೆಯೆ! ಬಿಡಾ ಗೋಪಾಳಿಯೇ! ಸ್ಫೈತಿರೆಂ ।
ದೆಂದುಂ ಶಾಶ್ವತನಪ್ಪ ಮಾಧವನಿಪಂ ತಾನಲ್ತೆ! ಲೋಕೇಶ್ವರಂ ।
ಬಂದಪ್ಪಂ ಖಲನಂ ವಿಮರ್ದಿಸಿ ದಿಟಂ! ಗೋವಿಂದನಾಸಚ್ಚಿಗಾ ।
ನಂದಂ ಸಂದೆಯಮೇತಕಿಂ ಬಿಡಿಮಿದೇಂ! ಮೌಢ್ಯಂ ಮನೋದ್ವೇಗಮುಂ ॥೪೭॥

ಎಲ್ಲರೂ— (ಆಶ್ಚರ್ಯದಿಂದ) ಬಲಬದ್ರ! ಇದೇನು? ನೀನು ಎಲ್ಲಿಂದ ಬಂದೆ? ಈ ಅನರ್ಥವೇನು?

ಬಲ— ಇದೆಲ್ಲವೂ ಒಬ್ಬ ಮಾಯಾವಿಯಾದ ದೈತ್ಯನ ಮೋಸದ ಫಲವು! ಆ ಮೇಲೆ ಎಲ್ಲವೂ ವಿದಿತವಾಗುವುದು.

( ಕೃಷ್ಣನನ್ನು ಸ್ತೋತ್ರಮಾಡುವನು )

* ಕಂ॥ ನೀನಲ್ತೇ? ಸರ್ವೇಶ್ವರ- ।
ನೇನಿದು ಮಾನವವಿಡಂಬನಂ ಸಾಲ್ಗುಮಲೇ ।
ಶ್ರೀ ನಿಲಯ! ಬಾರ! ಭಕ್ತಾ. !
ಧೀನನೆ! ಕಾಳಿಯನ ವಿಷಮದೇವುದೊ? ನಿನ್ನಂ ॥೪೮॥

(ಅನಂತರ ಕಾಳೀಯನ ಹೆಡೆಯ ಮೇಲೆ ನರ್ತಿಸುತ್ತ ಕೃಷ್ಣನು ಪ್ರವೇಶಿಸುವನು)
(ಉಭಯ ಪಾರ್ಶ್ವಗಳಲ್ಲಿಯೂ ಕಾಳೀಯಾಂಗನೆಯರು ಸ್ತೋತ್ರಮಾಡುವರು)

ಕು। ಷ॥ ದಯೆದೋರು! ಸರ್ವೇಶ ।
ದಯೆದೋರು! ಭವನಾಶ ।
ದಯೆದೋರು! ಪತಿಯಲ್ಲಿ ಶ್ರೀನಿವಾಸ ।
ಭಯದೂರ ಯದುವೀರ ।
ನಯಸಾರ ನತವಾರ ।
ಜಯ ರಮಾಸತಿಲೋಲ! ನಂದಬಾಲ ॥೪೯॥

ನಾಳೀಕನಯನನೇ ।
ವ್ಯಾಳನೀ ದುರ್ಬಲನು ।
ತಾಳಲಾರ್ಪನೆ? ನಿನ್ನ ಕಂಜನಾಭ ।

---

* ರಾಗ......... ತಾಳ (ಪೇಳುವೆತಾತ) ಎಂಬಂತೆ

ಬಾರೊ ಗೋವಿಂದ ಮುಕುಂದ ಗುಹಾಭಿನಂದ ॥ಪ॥ ಸಕಲಲೋಕಾಧೀಶ್ವರಾ। ಅಕುಟಿಲ ನತವಾರ ಸೌಖ್ಯಮಂದಿರಾ ॥೧॥ ಬಾರೋ ಶ್ರೀ ಗೋಪಾಲನೇ। ನಿರುಪಮ ನಿತ್ಯಾನಂದಶೀಲನೆ ॥೨॥ ಬಾರೊ ಮುರಾರಿ ಶ್ರೀಹರೀ । ವನರುಹದಳನಯನ ಶೌರಿ ನರಹರೀ ॥

ಕಾಳಿಯನ ಸಲಹು ಕರು ।
ಣಾಳುವೇ ಬೇಡುವೆವು
ಪಾಲಿಸೈ ಪತಿಭಿಕ್ಷವಿತ್ತು ನಮ್ಮಂ ॥೫೦॥
ನೀನೆ ನಾರಾಯಣನು ।
ನೀನೆ ಮುರಳೀಧರನು ।
ನೀನಲ್ತೆ ಚಿನ್ಮಯನು ನಿತ್ಯಶಿವನು ।
ನೀನೆ ಸರ್ವಾತ್ಮಕನು ।
ನೀನೆ ಸರ್ವಾಧಿಕನು ।
ನೀನೆ ವಿಶ್ವಂಭರನು ಸಲಹು ಸಲಹು ॥೫೧॥

ಗೋವಿಂದ:— (ಪ್ರಸನ್ನನಾಗಿ) ಎಲೌ ಕಾಳೀಯಾಂಗನೆಯರೇ! ನಿಮ್ಮ ಇಷ್ಟದಂತೆ ಈ ಕ್ಷುದ್ರ ಸರ್ಪವನ್ನು ಕ್ಷಮಿಸಿರುವೆನು! ಎಲೈ ಕಾಳಿಯನೇ! ನೀನು ಇಲ್ಲಿ ಇರಬೇಡ! ನಿನ್ನ ಪತ್ನೀ-ಪುತ್ರಬಂಧುಪರಿವಾರಸಮೇತನಾಗಿ ಹೊರಟು ಹೋಗಿ ಸಾಗರವನ್ನು ಸೇರಿಕೊ! ನಿನ್ನ ಹೆಡೆಯಲ್ಲಿ ನನ್ನ ಹೆಜ್ಜೆಯ ಗುರುತುಗಳು ಆವಾಗಲೂ ವಿರಾಜಿಸಲಿ। ಇಂದಿನಿಂದ ನೀನು ನನ್ನ ಭಕ್ತನಾದೆ.

( ಆಕಾಶದಲ್ಲಿ ದೇವತೆಗಳು ಪುಷ್ಪವೃಷ್ಟಿ ಸುರಿಸಿ ಸ್ತೋತ್ರಮಾಡುವರು )

ವೃ॥ ವಿಜಯಿಸು ಯದುಬಾಲಾ! ವೈಜಯಂತೀ ಸುಮಾಲಾ !
ವಿಜಯಿಸು ನತಬಂಧೂ! ನಿತ್ಯಕಾರುಣ್ಯ ಸಿಂಧೂ ।
ವಿಜಯಿಸು ಖಲಸರ್ಪೋದ್ದರ್ಪಭಂಗಾ! ಶುಭಾಂಗಾ !
ವಿಜಯಿಸು ಸುರಬೃಂದಾನಂದ ಕಂದಾ! ಮುಕುಂದಾ॥೫೨॥

( ಗೋವಿಂದನು ನಂದಾದಿಗಳೊಡನೆ ಪ್ರವೇಶಿಸುವನು )

ಎಲ್ಲರೂ— ವೃ॥ ಬಂದೈ! ಮನ್ಮಥ ಕೋಟಿ ಕೋಟಿ ಸುಭಗಾ! ಬಂದೈಮನೋವಲ್ಲಭಾ।
ಬಂದೈ! ಗೋಕುಲ ಪಾಲನೈಕವಿಭವಾ! ಬಂದೈ ಧರಿ ಶ್ರೀಧವಾ।
ಬಂದೈ! ಪಂಕಜಲೋಚನಾ! ಸದವನಾ! ಬಂದೈ ಮೃಗಾಂ ಕಾನನಾ ।
ಬಂದೈ! ಬಾಲ! ನವಾಬ್ದನೀಲ! ವಿಮಲಾ! ಬಂದೈ ರವಿ ಪ್ರೋಜ್ವಲಾ ॥೫೩॥

ಯಶೋ— * ಕಂ॥ ಬಾಬಾರೆನ್ನಯ ತಂದೆಯ ।
ಬಾಬಾರೆನ್ನ ಮಗ ಬಾರ!
ಚಿಂತಾಮಣಿಯೇ ।
ಬಾಬಾರೆನ್ನಯ ಸಿರಿಯೇ ।
ಬಾಬಾರೈ ಚಿಣ್ಣ! ರನ್ನ! ಬಾರೆನ್ನಣ್ಣಾ ॥೫೪॥

(ಆಲಿಂಗಿಸಿ ಮುತ್ತಿಡುವಳು.)

ನಂದ— ಇನ್ನು ನಾವೆಲ್ಲರೂ ಮನೆಗೆ ಹೋಗಿ ನಮ್ಮ ಸೌಭಾಗ್ಯ ದೈವವನ್ನು ಯಥೇಚ್ಛವಾಗಿ ಆರಾಧಿಸುವ

( ಎಲ್ಲರೂ ಹೊರಡುವರು. )

## ಇದು ತೃತೀಯಾಂಕವು.

---

* ರಾಗ.........ತಾ (ಸದಾ ಇದುವೇ ಆನಂದ, )

ಕಂದಾ! ಬಾಬಾ! ಆನಂದ! ವಿನೋದ, ನಿನ್ನಿಂದಲೊದುವೆ ॥ಪ॥ ನಲಿದೆತ್ತಿ ಮುತ್ತಿಡುವೆ ॥ಅ.॥ ಬಾರೊ ಮೋಹನಾ। ಬಾರೊ ಸುವದನಾ॥ ಎನ್ನ ಭಾಗ್ಯನಿದಾನಾ ॥೧॥ ಪರಮ ಪುರುಷನ ಕರುಣದೆ ನಿನ್ನ। ನೆರೆ। ಹರುಷದೆ ಕಂಡೆ ॥ ನಲಿದೆತ್ತಿ ಮುತ್ತಿಡುವೆ ॥೨॥

## ಚತುರ್ಥಾಂಕವು

ಡಂಗುರದವನು—ಗೊಲ್ಲಗೌಡರೆಲ್ಲರೂ ಕೇಳಿರಿ. ಈ ಶರದೃತುವಿನಲ್ಲಿ ಪ್ರತಿವರ್ಷವೂ ನಡೆಯಿಸುತ್ತಿದ್ದ ಇಂದ್ರನ ಪೂಜೆಯ ಹಬ್ಬವನ್ನು ಇದು ಮೊದಲಾಗಿ ನಿಲ್ಲಿಸಿ, ಅದಕ್ಕೆ ಪ್ರತಿಯಾಗಿ ಗೋವರ್ಧನಪರ್ವತದ ಪೂಜೆಯುನ್ನು ಮಾಡತಕ್ಕುದೆಂದು ಬಾಲಕೃಷ್ಣನ ಅನುಮತಿಯುಂತೆ ಒಡೆಯುನಾದ ನಂದಗೋಪನು ಆಜ್ಞಾಪಿಸಿರುವನು. ಎಲ್ಲರೂ ತಮ್ಮ ತಮ್ಮ ಮನೆಗಳನ್ನು ಸುಣ್ಣಬಣ್ಣಗಳಿಂದಲೂ, ತೋರಣಚಪ್ಪರಗಳಿಂದಲೂ ಅಲಂಕರಿಸಬೇಕು; ಗೋವುಗಳನ್ನು ಸಿಂಗರಿಸಬೇಕು; ಪೂಜೆಗಾಗಿ ಎಲ್ಲವನ್ನೂ ಸಿದ್ಧಪಡಿಸಿಕೊಂಡು ನಾಳೆಯ ಪ್ರಾತಃಕಾಲಕ್ಕೆ ಎಲ್ಲರೂ ಬೆಟ್ಟದ ತಪ್ಪಲಲ್ಲಿ ಸಿದ್ಧರಾಗಿರಬೇಕು.

(ಸಾರುತ್ತಾ ಹೋಗುವನು) ಇದು ಪ್ರವೇಶಕವು.

(ಅನಂತರ ಕರ್ಪೂರ ಕರ್ಣಿಕಾರರೆಂಬ ಗೊಲ್ಲರು ಪ್ರವೇಶಿಸುವರು)

ಕರ್ಣಿಕಾರ—ಚೆನ್ನಾಯಿತು; ಚೆನ್ನಾಯಿತು; ನಮ್ಮ ಹಳ್ಳಿಯಲ್ಲಿ ಇನ್ನೂ ಎಂತೆಂತಹ ವಿಚಿತ್ರಗಳು ನಡೆಯುವುವೋ ಕಾಣೆನು; ಇಂದ್ರನ ಪೂಜೆಯನ್ನು ನಿಲ್ಲಿಸಿ ಗೋವರ್ಧನಪೂಜೆಯೆಂದರೇನು! ಇದರಿಂದ ಗೊಲ್ಲರಿಗೆ ಮೇಲಾದೀತೆ!

ಕರ್ಪೂರ—ಕರ್ಣಿಕಾರಗೌಡ! ನಮ್ಮ ನಂದೇಗೌಡರ ಮಗನಾದ ಗೋವಿಂದನು ಪರ್ವತವನ್ನೇ ಪೂಜೆಮಾಡಬೇಕೆಂದು ಮುಷ್ಕರಹಿಡಿದನಂತೆ.

ಕರ್ಣಿಕಾರ—ಕರ್ಪೂರಗೌಡ! ಹುಡುಗನ ಮಾತಿಗೂ ದೊಡ್ಡವರು ಮಾಡುವ ಪೂಜೆಗೂ ಸಂಬಂಧವೇನು? ಹಬ್ಬದ ರುಚಿಯಾದ ಊಟದಿಂದಲೂ ಅಂದವಾದ ಬಟ್ಟೆಬರೆಗಳಿಂದಲೂ ಮಕ್ಕಳನ್ನು ಸಂತೋಷಪಡಿಸಬೇಕಲ್ಲದೆ ವೃದ್ಧಾಚಾರದ ವಿಷಯದಲ್ಲಿ ಹುಡುಗರ ಸಲಹೆಗಳೇಕೆ!

ಕರ್ಪೂ—ನಮ್ಮ ನಂದಪ್ಪನಿಗೆ ಕೃಷ್ಣನೆಂದರೆ ಪ್ರಾಣ! ಅವನ ಮಾತನ್ನು ಗೆರೆಮೀರದೆ ನಡೆಯಿಸಿ ಕೊಡುವನು.

ಕರ್ಣಿ—ಕಪ್ಪಣ್ಣ! ಮಗನ ಮೇಲೆ ವಿಶ್ವಾಸವಿದ್ದರೆ ಇರಲಿ! ಇದು ಹತ್ತುಜನದ ಮಾತೋ? ನಂದಪ್ಪನೊಬ್ಬನ ಮಾತೋ?

ಕರ್ಪೂ—ಕರ್ಣಪ್ಪ! ನಂದಪ್ಪನೊಬ್ಬನ ಮಾತಲ್ಲ; ದೊಡ್ಡ ದೊಡ್ಡ ಗೌಡರುಗಳೆಲ್ಲರೂ ಸೇರಿ ಇದರಂತೆ ನಿಷ್ಕರ್ಷೆ ಮಾಡಿರುವರಂತೆ.

ಕರ್ಣಿ—ಯಾರು ಯಾರು ಸೇರಿದ್ದರು.

ಕರ್ಪೂ—ಕಟ್ಟೆಮನೆಯ ಭದ್ರೇಗೌಡ; ಕಲಕದ ನಾಗಪ್ಪ; ಕುಂಚಿ ರಾಮಣ್ಣ, ನರುಗಲು ವೆಂಕಟೇಗೌಡ, ಮುದ್ದೆ ಮಲ್ಲಪ್ಪ, ಇವರೆಲ್ಲರೂ ಒಪ್ಪಿಕೊಂಡಿರುವರು.

ಕರ್ಣಿ—ಅದು ಹೇಗೆ ಒಪ್ಪಿಕೊಂಡರು? ಮಾಡಬಾರಧುದನ್ನು ಮಾಡಿ ಆಗಬಾರದುದೇನಾದರೂ ಆದರೆ ಹೇಗೆ? ಎಂಬ ಆಲೋಚನೆಯನ್ನೇ ಯಾರೂ ಮಾಡಲಿಲ್ಲವೋ?

ಕರ್ಪೂ—ಎಲ್ಲವೂ ಚರ್ಚೆಯಾಯಿತು; ಕೃಷ್ಣನು ಎಲ್ಲರನ್ನೂ ತನ್ನ ಮಾತಿನಿಂದ ಸಮ್ಮತಿಪಡಿಸಿದನು.

ಕರ್ಣಿ—ಅದು ಹೇಗೆ? ಆ ತುಂಟಹುಡುಗನು ಮುಷ್ಕರಹಿಡಿದುದಕ್ಕೇ ಎಲ್ಲರೂ "ಏನಾದರೂ ಆಗಿ ಹೋಗಲಿ!" ಎಂದು ಸಮ್ಮತಿಸಿರಬಹುದು.

ಕರ್ಪೂ—ಹಾಗಲ್ಲ; ಯುಕ್ತಿಯುಕ್ತವಾದ ಕೃಷ್ಣನ ಮಾತುಗಳು ಸರ್ವಸಮ್ಮತವಾಗಿದ್ದುವು.

ಕರ್ಣಿ—ಕಪ್ಪಣ್ಣ! ಹೇಳು ಹೇಳು!

ಕರ್ಪೂ—ದನಗಳಿಗೆ ಬೇಕಾದಷ್ಟು ಹುಲ್ಲೂ, ನೀರೂ ಸಮೃದ್ಧಿಯಾಗಿರಲು, ಮಳೆ ಅತ್ಯವಶ್ಯವೆಂದೂ ಮಳೆಗೆ ಇಂದ್ರನು ಅಧಿಪತಿಯಾದುದರಿಂದ ಆತನ ಅನುಗ್ರಹವನ್ನು ಬಯಸಿ, ಪೂಜೆಮಾಡುವ ಪದ್ಧತಿಯು ಪೂರ್ವದಿಂದಲೂ ಆಚರಣೆಗೆ ಬಂದಿರುವುದೆಂದೂ, ನಂದಪ್ಪನೂ ಮತ್ತು ಎಲ್ಲರೂ ಹೇಳಿದರು.

ಕರ್ಣಿ—ಅಹುದಲ್ಲವೆ ? ಮತ್ತೆ ! ಇದಕ್ಕಾಗಿಯೇ ನಾವು ಇಂದ್ರನನ್ನು ಪೂಜಿಸಬೇಕು.

ಕರ್ಪೂ — ಅದಕ್ಕೆ ಕೃಷ್ಣನು ಹೇಳಿದನು.

ಕರ್ಣಿ — ಏನೆಂದು ?

ಕರ್ಪೂ —"ನಾವು ದನಕಾಯುವಾಗ ಹುಲ್ಲುಕಡ್ಡಿಗಳನ್ನು ಕತ್ತರಿಸಿ ಮಾಡಿದ ಅಪರಾಧಗಳಿಂದ ಪರ್ವತರಾಜನು ಕೋಪಿಸಿಕೊಳ್ಳದೆ ನಮ್ಮನ್ನು ಕ್ಷಮಿಸಬೇಕಲ್ಲದೆ, ಹುಲಿ, ಕರಡಿ, ಹಾವು, ಮೊದಲಾದ ದುಷ್ಟಜಂತುಗಳು ಗೊಲ್ಲರನ್ನೂ ದನಗಳನ್ನೂ ಪೀಡಿಸದಂತೆ ರಕ್ಷಿಸಿಕೊಂಡು ಬರಬೇಕಾದುದರಿಂದ ಗೋವರ್ಧನವೇ ನಮಗೆ ದೇವರು."

ಮತ್ತು ಕಂದ॥ ತಡೆತಡೆದಾಕಾರ್ಮುಗಿಲ್ಗಳ ।
ಗಡಣದ ಮಳೆವೊಯ್ಲಿ ಪಿರಿದುಮಿ
ಳಿಯ್ಯೆ ಸಿರಿಯುಂ ॥
ನಡೆವೆರ್ಚಿಪನೀ ಪರ್ವಿವ ।
ಕಡು ಪೆಂಪಿನ ಪರ್ವತೇಂದ್ರನೀತನೆ
ಪೂಜ್ಯಂ ॥ ೫೫ ॥

ಎಂದು.

ಕರ್ಣ — ( ತಲೆದೂಗಿ ) ಆಹಾ ! ಕರ್ಪೂರಗೌಡ ! ಗೋವಿಂದನು ಹುಡುಗನೆಂದು ಅವನ ಮಾತನ್ನು ತಿರಸ್ಕರಿಸುವಂತಿಲ್ಲ; ಎಂತಹವರಾದರೂ ಒಪ್ಪಿಕೊಳ್ಳುವಂತಹ ಯುಕ್ತಿಯಿಂದ ಕೂಡಿದೆ.

ಕರ್ಪೂ — ಕರ್ಣೇಗೌಡ ! ಮತ್ತೆ ದೊಡ್ಡವರೆಲ್ಲರೂ ಸುಮ್ಮನೆ ಒಪ್ಪಿಕೊಳ್ಳುತ್ತಾರೆಯೆ ? ಹೇಳು ! ಆ ಮಾಧವನು ಸಾಮಾನ್ಯನಾದ ಹುಡುಗನೆಂದು ತಿಳಿದಿರುವೆಯೋ ?

( ತೆರೆಯಲ್ಲಿ )

ಕಂದ ॥ ಪೊಸಮಿಸುನಿಯ ವಸನದೊಳಂ ।
ಮಿಸುಪಾ ಕಿರುಗಂಟೆಗೆಜ್ಜೆಕಳಸಂಗಳೊಳಂ ॥
ಹಸುಗಳ್ ಬಗೆವಗೆ ಬಣ್ಣದೊ– ।
ಳೆಸೆಯಲ್ ಗೋಲೋಕಮವನಿಗಿಳಿದಂತಿರ್ಕುಂ॥೫೬॥

ಕರ್ಣ — ( ಕೇಳಿ ) ಗೊಲ್ಲರೆಲ್ಲರೂ ತಮ್ಮ ತಮ್ಮ ಆಕಳುಗಳನ್ನು ಸಿಂಗರಿಸಿ ತಾವೂ ಸರ್ವಾಭರಣ ಭೂಷಿತರಾಗಿ ಪೂಜಾ ಪರಿಕರಣಗಳೊಡನೆ ಬೆಟ್ಟದ ಬಳಿಗೆ ಹೊರಡಲು ಸಿದ್ಧರಾದರು.

ಕಂ॥ ಕೊಂಬು ಕೊಳಲ್ ತಂಬಟೆಯೂ- ।
ಡಂಬರಮೆದೆಗೊಳ್ವ ಮೆತ್ತಲುಂ; ದೀ ಪಸಿಕಾ- ॥
ಯುಂ ಬೆಳಗುವುದಾದೆಸೆಯೆಂ- ।
ಟುಂ ಬೆರಗೊಂದಿಪುದು; ತೋರಣಂಗಳ್
ಪುರದಾ ॥ ೫೭ ॥

ಆದುದರಿಂದ ನಾವೂ ಪೂಜೆಗೆ ಸಿದ್ಧಪಡಿಸಿಕೊಂಡು ನಡೆಯುವಾ. ( ಹೊರಡುವರು. )

( ಅನಂತರ ಗೋವರ್ಧನ ಪರ್ವತದ ಬಳಿಯಲ್ಲಿ ಎಲ್ಲರೂ ಸೇರುವರು.)

ಗೋವಿಂ —( ಪರ್ವತ ಶಿಖರದಲ್ಲಿ ಕುಳಿತು ) ಎಲೈ ಗೋಪಾಲರೆ !

ಕಂ॥ ನವಕುಸುಮಧೂಪದೀಪೋ- ।
ತ್ಸವದಿಂ ಮೇಣ್ ವಿಸುಪದಿವ್ಯಗಂಧಾಕ್ಷತೆಯಿಂ ॥
ತವೆ ಭಕ್ಷ್ಯಭೋಜ್ಯದಿಂ ತಣಿ- ।
ಪುವುದೆನ್ನನೆ ಪರ್ವತಾಧಿದೇವತೆಯಲೆ ನಾಂ ॥ ೫೮ ॥

( ಎಲ್ಲರೂ ಭಕ್ತಿಯಿಂದ ಪೂಜಿಸಿ ಸ್ತೋತ್ರಮಾಡುವರು )

*ಕಂ॥ ಎಲೆ ಗೋವರ್ಧನರಾಜಾ ।
ಸಲೆ ನಮ್ಮಯ ಭಕ್ತಿಪೂಜೆಯಂ ಕೊಳ್ವುದು ನೀಂ ।
ಸುಲಲಿತಗೋಕುಲವುಂ ನಿ– ।
ರ್ಮಳಮೂರ್ತಿಯೆ! ಪೊರೆವುದೊಲ್ದು ಮಣಿದಪೆ
ವೀಶಾ ॥ ೫೯ ॥

( ಎಲ್ಲರೂ ನಮಸ್ಕರಿಸುವರು )

ಗೋವಿಂ—ಎಲೈ ಗೋಪಾಲರೆ! ನಿಮ್ಮ ಪೂಜೆಯಿಂದ ಸಂತುಷ್ಟನಾದೆನು; ಬಗೆಬಗೆಯ ಭಕ್ಷ್ಯಭೋಜ್ಯಗಳನ್ನುಂಡೆನು; ಗೋವರ್ಧನನಾದ ನಾನು ನಿಮ್ಮನ್ನು ಸಲಹುವೆನು.

ಎಲ್ಲರೂ ( ಮಂದಹಾಸದಿಂದ ) ಮಗು! ನೀನೆ ನಮಗೆ ದೇವರು; ಗುರುವು; ನೀನು ಪ್ರೀತನಾದರೆ ನಮ್ಮ ಇಷ್ಟವೆಲ್ಲವೂ ಕೈಸೇರಿದಂತೆಯೇ !

( ತೆರೆಯಲ್ಲಿ )

ಕಂ॥ ಜಗಮೆಲ್ಲವನೊರ್ಮೆಯ ತಾಂ ।
ಮಿಗೆ ನುಂಗುವ ಕಾಳರಕ್ಕಸಂಬೊಲ್ ನೆರೆ ಕ– ।
ರ್ಮುಗಿಲಾವರಿಸಿರ್ದಪುದೀ ।
ಗಗನಾಂಗಣಮೆಲ್ಲಮಂ ಮಹೋಗ್ರತೆಯಿಂದಂ ॥೬೦॥

ದೊಡ್ಡ ಮಳೆ ಬರುವಂತಿದೆ; ಬೇಗನೆ ಏಳಿರಿ ಏಳಿರಿ; ಹೆಂಗಸರು ಮಕ್ಕಳನ್ನು ಮೊದಲು ಮನೆಗೆ ಸೇರಿಸಿರಿ; ದನಕರುಗಳನ್ನು ಬೇಗನೆ ರೊಪ್ಪಕ್ಕೆ ಹೊಡೆಯಿರಿ; ಎಲ್ಲಾ ವಸ್ತುಸಂಭಾರಗಳನ್ನೂ ಬೇಗ ಬೇಗನೆ ಬಂಡಿಗಳಿಗೆ ಹೇರಿ ನಡೆಯಿರಿ;

---

*ರಾಗ……ವಸಂತ. ಆದಿತಾಳ ( ಖ್ಯಾತಶಂಖಚಕ್ರಧರನೆ ) ಎಂಬಂತೆ

ಪಾಲಿಸೈ ಗೋವರ್ಧನೇಂದ್ರ ಪರಮಪಾವನಾ ॥ ಪ ॥ ಶೈಲರಾಜಾಧಿರಾಜ ದಿವ್ಯತೇಜನೇ ॥ ಅ ॥ ಪ್ರವಿಮಲಗೋಪಿಕರ ಪಾಲನೈಕಶ್ರೀಧರಾ । ದಿವಿಜರಾಜಸೇವಿತಪದ ದಾನವಾಂತಕಾ ॥ ೧ ॥ ಶ್ರೀಕರಾಂಗ ದುರಿತಭಂಗ ಸಾಧುಸಂಗನೇ । ವ್ಯಾಕುಲಪ್ರಶಮನ ಶರಣವಿಜಯ ಮಂಗಳಂ ॥ ೨ ॥ ಅಪ್ರಮೇಯ ಮೌನಿಗೇಯ ಶ್ರೀನಿವಾಸಯಾ । ಸುಪ್ರಸನ್ನನಾಗು ದೇವ ನಿತ್ಯವೈಭವಾ ॥ ೩ ॥

ನಂದಾದಿಗಳು:— ಓಹೋ! ಇನ್ನು ತಡಮಾಡಲಾಗದು, ಮಳೆ ಬರುವುದಕ್ಕೆ ಮೊದಲೇ ಮನೆಗಳನ್ನು ಸೇರಿಕೊಳ್ಳೋಣ.

( ಎಲ್ಲರೂ ಹೊರಟರು. )

( ದೊಡ್ಡಮಳೆ ಬರುವುದು—ಗೊಲ್ಲರು ಭೀತರಾಗಿ ಪ್ರವೇಶಿಸುವರು. )

ಗೊಲ್ಲರು:— ಹಾ! * ಮುಂದೇನು ಗತಿ! ಕೃಷ್ಣಾ! ರಕ್ಷಿಸು! ರಕ್ಷಿಸು! ಗೋಕುಲಬೃಂದಾವನವು ಜಲಾರ್ಣವವಾಯಿತು!

ಕಂದ॥ ಮೊಳಗೇಂ! ಮಿಂಚೇಂ! ಗುಡುಗೇಂ! ।
ಪಳ ಪಳನುದಿರ್ವಾಲಿಕಲ್ಗಳೇಂ! ಪೆರ್ಮಳೆಯೇಂ! ।
ಪ್ರಳಯಂ ಬಂದುದಲೇ! ಗೋ— ।
ವಳಪಳ್ಳಿಗೆ ಬಾಳ್ವುದೆಂತೊ! ಗೋಗಣಮಕಟಾ! ॥೬೧॥

ಒಬ್ಬನು:— ಅಕ್ಕಟಾ! ಅಕ್ಕಟಾ! ಇಂದ್ರನ ಪೂಜೆಯನ್ನು ಬಿಡಬೇಡಿರೆಂದು ಎಷ್ಟೋ ವಿಧವಾಗಿ ನಂದಗೋಪನೊಡನೆ ಹೇಳಿಕೊಂಡೆವು; ಮಗನ ಮನಸ್ಸಿಗೆ ಸಂತೋಷವುಂಟು ಮಾಡುವುದಕ್ಕೆ ಗೋವರ್ಧನ ಪೂಜೆಯನ್ನು ಮಾಡಿಸಿದನು; ಆ ದೇವೇಂದ್ರನಿಗೆ ಕೋಪಬಂದು ಗೊಲ್ಲರೂ, ದನಕರುಗಳೂ, ಮನೆಮಠಗಳೂ, ಕೊಚ್ಚಿ ಹೋಗುವಂತೆ ಮಳೆಯನ್ನು ಸುರಿಸಿದನು. ಏನುಮಾಡುವ! ಎಲ್ಲಿ ಹೋಗುವ ?

ಇನ್ನೊಬ್ಬ:— ಅಯ್ಯೋ! ಅಯ್ಯೋ! ದನಗಳೆಲ್ಲವೂ ಬೆದರಿ ದಿಕ್ಕು ದಿಕ್ಕಿಗೆ ಓಡಿದುವಲ್ಲ; ನಮ್ಮ ಮಕ್ಕಳು ಮರಿಗಳ ಗತಿ ಯೇನಾಯಿತೋ! ಹಾ! ದೈವವೇ !

ಒಬ್ಬವೃದ್ಧ:— ಇಂದ್ರನಿಗೆ ಹರಸಿಕೊಳ್ಳಿರಿ; ಇಂದ್ರನಿಗೆ ಹರಸಿಕೊಳ್ಳಿರಿ; "ಈಗ್ಗೆ ತಪ್ಪಾಯಿತು; ಮರಳಿ ವಿಜೃಂಭಣೆಯಿಂದ ನಿನ್ನ ಪೂಜೆಯನ್ನು ಮಾಡುವೆವು" ಎಂದು.

ಮತ್ತೊಬ್ಬ:— ಎಂತಹ ಹೊತ್ತು ಬಂದಿತಪ್ಪಾ? ಆ ನಂದನು ಆ ತುಂಟ ಹುಡುಗನ ಮಾತನ್ನು ಕೇಳಿಕೊಂಡು ಎಲ್ಲರಿಗೂ ಕಷ್ಟವನ್ನು ತಂದಿಟ್ಟನು !!

ಬೇರೊಬ್ಬ:— ಅಯ್ಯಾ! ದೊಡ್ಡ ಮನುಷ್ಯರೆ! ಗಾಬರಿ ಪಡಬೇಡಿರಿ; ಗಾಬರಿಪಡಬೇಡಿರಿ; ಆ ಶ್ರೀಕೃಷ್ಣನನ್ನೇ ಆಶ್ರಯಿಸಿರಿ!

ಎಲ್ಲರೂ:— ( ಕೈ ಜೋಡಿಸಿ ಸ್ತೋತ್ರ ಮಾಡುವರು )

† ವೃ॥ ತಂದೈ ವೇದವನದ್ರಿಪೊತ್ತು ಸುಧೆಯಂ ನಿಂ
ನಿರ್ಜರರ್ಗಿತ್ತೆ; ಮೇಣ್ ।
ತಂದೈ ಭೂಮಿಯ ನಾಳ್ದೆ ದೈತ್ಯ ಸುತನಂ;
ದೈತ್ರೇಂದ್ರನಂ ಮೆಟ್ಟಿ ನ—
ಣ್ಪೆಂದಂ ಸತ್ಪದವಿತ್ತೆ; ದುಷ್ಟನೃಪರಂ ಕೊಂದೈ;
ಮಹೀಜಾತೆಗಾ ।
ನಂದಂ ನೀಡಿದೆ; ತಂದೆ! ಇಂದು ಪೊರೆಯೈ,
ಗೋವೃಂದಮಂ ಗೋಪರಂ ॥

( ಕಿರಿಯಲ್ಲಿ )

ಕಂದ॥ ಕಳವಳಮೇಂ! ಬಿಡಿಬಿಡಿ; ಗೋ— ।
ವಳರೇ! ಗೋವರ್ಧನೇಂದ್ರನನೆ ಮರೆವುಗೆ ನಿ—।
ಮ್ಮಳಲಂ ಕಳೆಗುಂ; ಸುಪಿನಿ— ।
ಶ್ಚಳಮತಿಯಿಂ ಗೈದ ಪೂಜೆ ಫಲಿಸದೆ ಪೇಳಿಂ ॥೬೩॥

ಗೊಲ್ಲರು:— (ಕೇಳಿ) ಇದಾರು! ಗೋವರ್ಧನನನ್ನೇ ಆಶ್ರಯಿಸುವುದೆಂದು ಎಚ್ಚರಿಸುವರು; ( ನಡೆದು ನೋಡಿ ) ಆಹಾ! ನಂದ ನಂದನನಾದ ಗೋವಿಂದನೇ ಹೀಗೆ ಸಾರುವನು. ನಡೆಯಿರಿ; ಆ ಪರ್ವತ ರಾಜನನ್ನೇ ಬೇಡಿಕೊಳ್ಳುವ! ( ಹೊರಟು )

* ......ರಾಗಃ ತಾಳ (ಸನಾಕ್ರಿ ! ಸೀ ಬಹಾ ) ಎಂಬಂತೆ

ಅಹೋಹೊ! ಎಲ್ಲಿ ನಾವೀಗಾ ಪೋಗುವಾ! ಎಲ್ಲಿ ಪೋಗುವಾ ॥ಪ॥ ಮಹೋಗ್ರವಾದ ಈ ಮಳೆಯಿಂ ಗೋಕುಲಂ ನಿಲ್ಲದೀಗೈವ ॥ಅ॥ ಅಕಟಕಟಾ! ಮೊಳಗೇ! ಮಿಂಚೇ! ಸಿಡಿಲ್ಗಳೇಂ ! ಏಕಾರ್ಣವ ಮಾದುದೀ ವ್ರಜಂ॥ ಪ್ರಳಯಂ! ಬಂದುದಕ್ಕಟಾ! ಬಾಳುವುದೆಂತೊ ಕಾಣೆವೈ ॥೭॥

† ರಾಗ... ......ತಾಳ

ಪಾಲಿಸು ತಂದೇ! ವೇದನ ತಂದೇ! ಸುಧೆಯನುಂ ಸುರರ್ಗೊಲಿದೆ ॥ಪ॥ ಲೀಲೆಯೊಳ್ ಧರಣಿಯ ನೀನುದ್ಧರಿಸಿದೆ; ಬಾಲಕನನು ಪೊರೆದೇ ॥ಅ॥ ಬಲಿಯನು ಜಯಿಸಿದೆ ಖಳರನು ತರಿದೇ; ಧರಣಿಜೆಯನು ತಂದೇ! ಸುಲಲಿತ ಗೋಕುಲ ಪಾಲಕನಾದೇ ! ಜಲರುಹ ದಳನಯನಾ ॥೧॥ ಕಾಯ್ಮೆ ಮಾಧವಾ! ಕ್ಷಾಯೊ ಮಹೀಧವಾ! ಕಾಯ್ಮೆ ಸದ್ಭಾವಾ ! ಕಾಯೈ ಮುರಾರೀ ಕಾಯ್ಮೆ ಶೌರೀ ! ಕಾಯ್ಮೆವರ ನೃಪರೀ ಮಾದಿಪವೀಶಾ ಬಂಧುಸಂತೋಷಾ' ಸುಂದರ ಮೃದು ಹಾಸಾ, ವಂದಿಪೆವೈ ಗೋವಿಂದಾ ವರ ಗೋವೃಂದವ ನೀಂಸಲಹೈ ॥೨॥

*

ಆಹಾ! ಮಹಾನುಭಾವನಾದ ಶ್ರೀ ಕೃಷ್ಣನು ಗೋವರ್ಧನವನ್ನೆತ್ತಿ ಕೊಡೆಯಂತೆ ಹಿಡಿದು ಗೋಕುಲವನ್ನು ಪೊರೆಯಲು ನಿಂತಿರುವನು! (ಕೈಮುಗಿದು) ಗೋವಿಂದನೆ! ನಿನ್ನ ಭಕ್ತರಕ್ಷಣ ದಾಕ್ಷಿಣ್ಯವು ಅಮೋಘವಾದುದು! ಎಲೈ ಗೋಪಾಲರೇ! ನಾವು ನಮ್ಮ ನಮ್ಮ ಪರಿವಾರಗೋಧನಗಳೊಡನೆ ಪರಮಾತ್ಮನ ಛತ್ರ ಛಾಯೆಯಲ್ಲಿ ನೆಮ್ಮದಿಯಾಗಿರುವೆವು.

( ಗೋವರ್ಧನ ಧಾರಿಯಾದ ಗೋವಿಂದನೂ ಗೋಪಾಲರೂ ಪ್ರವೇಶಿಸುವರು.

ಗೋಪಾಲರು ಭಕ್ತಿಯಿಂದ ಸ್ತೋತ್ರಮಾಡುವರು. )

*ರಗಳೆ:—

ಶ್ರೀರಮಣೀರಮಣೀಯಹೃದಂಬುಜ— ।
ಸೂರ ! ಸೂರಿನುತ ! ನತಸುರಭೂಜ ।
ವಾರಿಧಿಶಯನ ! ಸರೋರುಹನಯನ ।
ನಾರಾಯಣ ! ದುರ್ಭವಸಂತರಣ ॥೬೪॥
ಚಾರು ಕಟಕ ಕುಂಡಲ ಕೇಯೂರ ।
ಹೀರಮುಕುಟ ಕಾಸ್ತುಭ ಮಣಿಹಾರ !
ರಾರಾಜದ್ಘನ ತನು ಶೃಂಗಾರ ।
ಮಾರಜನಕ ! ಬರ್ಹಾಲಂಕಾರ ॥೬೫॥
ಪರಿವರ್ಜಿತ ಷಡ್ಭಾವವಿಕಾರ
ಪರಮಹಂಸ ಚಿತ್ತಾಬ್ಜವಿಹಾರ !
ನಿರುಪಮ ಕರುಣಾಪಾರಾವಾರ
ದುರಿತ ಹರಣ ಸನ್ಮಹಿಮಾಧಾರ ॥೬೬॥
ಪಾಹಿ ! ಮಹೀಧವ ! ಪಾಹಿ ! ಸುವೈಭವ ।
ಪಾಹಿ ! ರಮಾಧವ ಪಾಹಿ ! ಮನೋಭವ ।
ಪಾಹಿ ! ಜನಾರ್ದನ । ಪಾಹಿ ! ಸನಾತನ ।
ಪಾಹಿ ! ನಿರಂಜನ ! ದೈತ್ಯವಿಭಂಜನ ॥೬೭॥
ಜಯ ಜಯ ! ಚಿನ್ಮಯ ಜಯ ಶುಭಕಾಮ ।
ಜಯ ಜಯ ! ಸುಗುಣಾಶ್ರಯ ! ಭಕ್ತಾಭಯ !
ಜಯ ಜಯ ! ನಿತ್ಯಾನಂದ ! ಮುಕುಂದ !
ಜಯ ! ಜಯ ! ಜಯ! ಗೋವಿಂದ !! ನಮಸ್ತೇ॥೬೮

ಮಹಾನುಭಾವ ! ನಾನಾ ಯೋಜನ ಸಂಕೀರ್ಣವೂ ನಾನಾ ವನ ಸಂಕೀರ್ಣವೂ, ಆದ ಮಹಾಪರ್ವತವನ್ನು ಧ ಸಲು ತಕ್ಕ ಆಕಾರವೂ, ಅತ್ಯದ್ಭುತವಾದ ಸಾಮರ್ಥ್ಯವ ನಿನಗೆಲ್ಲಿ ಬಂತೊ ? ಪ್ರಭು ! ಈ ಮಹಾರೂಪವನ್ನು ಅ ಗಿಸು ! ಅಡಗಿಸು !

ಕಂ॥ಪರಿದುದು ಘನೌಘಮೊಗಳೆ,
ಹರುಷಂದಳೆದತ್ತು ಗೋಕುಲಂ ಜಗದೀಶಾ ।
ನಿರುತಂ ನತರಂ ಪೊರೆವಾ ।
ಬಿರುದಂ ಧರಿಸಿರ್ಪ ದೇವ ! ನಮಿಪೆವು ! ನಿನ್ನಂ ॥೬೯

ಗೋವಿಂದ:—ಗೋಪಬಂಧುಗಳೇ ! ನೀವು ಭಕ್ತಿಯಿಂ ಈ ಪರ್ವತರಾಜನನ್ನು ಪೂಜಿಸಿದ ಕಾರಣ, ಗೋವರ್ಧ ನನು ನಿಮ್ಮನ್ನು ರಕ್ಷಿಸಲು ನನಗೀ ಮಹಾದೇಹವನ್ನು ಕ ಣಿಸಿದನು.

ಗೋಪರು:—ಸ್ವಾಮಿ ! ಪಾಮರರಾದ ನಮ್ಮನ್ನು ಮರು ಗೊಳಿಸುವ ನುಡಿಗಳು ಸಾಕು; ಪರಮಾತ್ಮನಾದ ನಿನ್ನನ ಇದುವರೆಗೂ ಸಾಮಾನ್ಯವೆಂದು ಭಾವಿಸಿ, ಬಂಧು, ಮಿತ್ರ ಪುತ್ರನೆಂಬ ಸಲುಗೆಯಿಂದ ತಿರಸ್ಕರಿಸುತ್ತಿದ್ದ ನಮ್ಮ ಅಪ ರಾಪರಾಧಗಳನ್ನು ಕ್ಷಮಿಸು !

( ತೆರೆಯಲ್ಲಿ )

ಕಂ॥ ಸನ್ನುತನೀ ಕೃಷ್ಣನ ಜಸ—।
ಮಂ ನೆರೆ ಪಾಡುತ್ತೆ ಕಲ್ಪಸುಮ ವೃಷ್ಟಿಗಳಿಂ ।
ಕಿನ್ನರ ವಿದ್ಯಾಧರ ಗಣ ।
ದಿಂ ನಭದೊಳ್ ಬಂದು ನಿಂದನಾ ದಿವಿಜೇಂದ್ರಂ ॥೭೦

( ಅನಂತರ ಎಲ್ಲರೂ ಹೊರಡುವರು )

(ಸಪರಿವಾರನಾದ ದೇವೇಂದ್ರನು ಬೃಹಸ್ಪತಿಯೊಡನೆ ಪ್ರವೇಶಿಸುವನು.)

---

* ರಾಗ......... ತಾಳ ( ರಾಮಾ । ರಘುಕುಲ ಜಲನಿಧಿ ಸೋಮಾ )

ಈಶಾ । ಪೊರೆದೈ ಯದುಕುಲಭೂಷಾ ॥ ಪ॥ ಭಾಸುರಾಂಗ ಕುಸುಮಾಶುಗಪಿತ ಪರಮೇಶ ಕುಶೇಶಯಪೇಶಲನಯನ ॥ ಅ ॥ ಕರು ಕರ ! ಸುರಮುನಿನುತಚರಣಾ ! ನತದುರಿತಾರ್ತಿ ವಿಹರಣಾ ॥ ಶರಣ ಭಕ್ತ ಭರಣ ನಿಪುಣ ! ತರಣಿಕೋಟಿಶತಭಾಸ ಮಾನಘನ ॥ ೧ ॥ ದೇವಾ ದಿವಿಜಾಳಿಸುಖದ ಸದ್ಭಾವಾ । ಖಲದನುಜ ವಿಪಿನದಾವಾ ॥ ಭಾವಜಾರಿವಿಧಿ ಸೇವಿತ ಪದರಾಜೀವಯುಗಳ ನಾರಾಯಣ ನಿರುಪಮ ॥ ೨ ॥ ಪದ್ಮಾ ಯಾಂಬುಜ ಸುರುಚಿರ ಸದ್ಮಾ । ಧೃತ ಚಕ್ರಗದಾಪದ್ಮಾ ॥ ಸದ್ಮನಾಭ ! ಮಣಿಕೌಸ್ತುಭ ಶೋಭಿತ ! ಪದ್ಮಾಪ್ತನಿಶಾಕರ ಮರನಯನಾ ॥ ೩ ॥

ಇಂದ್ರ:— ಬೃಹಸ್ಪತಿಯೆ ! ನೋಡು ! ಭೂಲೋಕವು ಈಗ ವೈಕುಂಠವೆನಿಸಿರುವುದು.

‡ನೃ॥ ಹರಿಪದವಮಾಗಿ, ವಿಷ್ಣುವಿಭವಾಸ್ಪದವಮಾಗಿ,
ಮನೋಜ್ಞ ಭಕ್ತಿ ಬಂ।
ಧುರಗೃಹವಮಾಗಿ, ಚಿತ್ಸುಖ ಸುಧಾಶ್ರಯವಮಾಗಿ,
ಸುಸಾಧುಬೃಂದಸುಂ—।
ದರತರವಮಾಗಿ, ವಮೌನಿಗಣ ಸೇವಿತವಮಾಗಿ, ವಿರಾಜಿ
ಪೀವಸುಂ—।
ಧರೆಯು ವಿನೋದವೈಭವವದೆಂತುಟೊ ? ಭಾವಿಸೆ
ಪುಣ್ಯಮೆಂತುಟೋ ॥೭೧॥

ಬೃಹಸ್ಪತಿ:— ಭೂಲೋಕವಾಸಿಗಳು ಪರಮಾತ್ಮನ ಪಾದ ಸೇವೆಯಿಂದ ಕೃತಾರ್ಥರು !

ಇಂದ್ರನು:— ಆಚಾರ್ಯ ! ಶ್ರೀಕೃಷ್ಣ ಪಮಾತ್ಮನ ಲೀಲೆಗಳು ಅಮರಕಾರ್ಯಸಿದ್ಧಿಯನ್ನು ಸೂಚಿಸುವುವು.

ಬ್ರಹಸ್ಪತಿ:—ಮಹೇಂಪ್ರ ! ಇನ್ನೂ ಸಂದೇಹವಿರುವುದೇನು ?

ವೃ॥ಸಾಲದೆ ? ನೀಚದೈತ್ಯರ ವಿಲಾಸದೆ ಕೊಂದ
ಮನೋಜ್ಞಲೀಲೆ, ಮೇಣ್ ।
ಸಾಲದೆ ? ದುಷ್ಟಕಾಳಿಯನ ಮರ್ದಿಸಿ, ಲೋಕಮ
ನಾಳ್ದ ಲೀಲೆಯೆಂ ।
ಸಾಲದೆ ? ಗೋಕುಲಂಬೊರೆಯಲದ್ರಿಯ ನೆತ್ತಿದ
ದಿವ್ಯಲೀಲೆ ಪೇ—।
ಳಾಲಲಿತಾಂಗನಿಂದಮರಕಾರ್ಯದ ಸಿದ್ಧಿಯನೂ
ಹಿಸಲ್ಕೆ ತಾಂ ॥೭೨॥

ಇಂದ್ರ-ಬೃಹಸ್ಪತಿಯೆ! ಗೋಪಾಲಕರು ನನ್ನ ಪೂಜೆಯನ್ನು ನಿಲ್ಲಿಸಿ, ಗೋವರ್ಧನ ವ್ರತವನ್ನು ಕೈಕೊಂಡುದಕ್ಕಾಗಿ, ದುರಭಿಮಾನಗ್ರಸ್ತನಾದ ನಾನು ಗೋಕುಲದಲ್ಲಿ ಪ್ರಳಯವೃಷ್ಟಿಯನ್ನು ಸುರಿಸಿದೆನಲ್ಲವೆ ? ಇದರಿಂದ ಭಗವಂತನ ಸನ್ನಿಧಿಯಲ್ಲಿ ಅಪರಾಧಿಯಾಗಿರುವೆನಲ್ಲ ?

ಬೃಹ:—ಮಹೇಂದ್ರ ! ಅಪರಾಧವೆಂದರೇನು ? ದೇವಕಾರ್ಯಾರ್ಥವಾಗಿಯೇ ಅವತರಿಸಿದ ಪ್ರಭುವು ದೇವತೆಗಳಲ್ಲಿ ತಪ್ಪನ್ನು ಭಾವಿಸುವನೆ !

ಇಂದ್ರ:—ನನ್ನ ಕಾರ್ಯದಿಂದ ನಾನೇ ನಾಚುತ್ತಿರುವೆನು.

ಬೃಹ:—ದೇವೇಶನೆ ! ಚಿಂತಿಸಬೇಡ ! ಆ ಪರಮ ಪುರುಷನನ್ನೆ ಬೇಡಿಕೊಳ್ಳುವ !

ಇಂದ್ರ:—ಸ್ವಾಮಿಯ ಸಂದರ್ಶನಕ್ಕೆ ಸಮಯವನ್ನು ನಿರೀಕ್ಷಿಸೋಣ!

ಬ್ರಹ:—ದ್ರಾಕ್ಷಾಮಂಟಪದಲ್ಲಿ ತನ್ನ ಮಿತ್ರನೊಡನೆ ಸುಖಸಲ್ಲಾಪದಿಂದ ಇರುವ ಗೋವಿಂದನನ್ನು ನೋಡಿದೆಯಾ ?

ಇಂಪ್ರ:—ನೋಡುತ್ತಲೇ ಇರುವೆನು.

(ದ್ರಾಕ್ಷಾಮಂಟಪದಲ್ಲಿ, ಗೋವಿಂದನು ವಿದೂಷಕನೊಡನೆ ಪ್ರವೇಶಿಸುವನು)

ವಿದೂ—ಗೋವಿಂದ! ನೀನು ಅಷ್ಟು ದೊಡ್ಡ ಗೋವರ್ಧನ ಪರ್ವತವನ್ನು ಹೇಗೆ ಹೊತ್ತುಕೊಂಡಿದ್ದೆ ? ನನಗೆ ಈ ಹೊಟ್ಟೆಯನ್ನು ಹೊತ್ತುಕೊಂಡು ಓಡಾಡುವುದೇ ಕಷ್ಟವಾಗಿರುವುದಲ್ಲ !

ಗೋವಿಂ—ಮಿತ್ರ ! ವೈಶಂಪಾಯನ ! ನಿರಂತರವೂ ಇಂತಹ ಹೊಟ್ಟೆಯನ್ನು ಹೊತ್ತು ಓಡಾಡುವ ನಿನ್ನ ಸಾಹಸವೇ ಹೆಚ್ಚು !

(ಅನಂತರ ರಾಧೆ ಸಖಿಯರೊಡನೆ ಪ್ರವೇಶಿಸಿ )

ರಾಧೆ—*ಸಖಿಯರೆ ! ಗೋವರ್ಧನವನ್ನೆತ್ತಿ ಗೋಕುಲವನುದ್ಧರಿಸಿದ ಮಹಾನುಭಾವನಾದ ಶ್ರೀಹರಿಯನ್ನು ನೋಡುವ ಬನ್ನಿರಿ !

( ಎಂದು ಸಖೀಸಗತಳಾಗಿ )

---

‡ ರಾಗ ತಾಳ ( ಫೀವುನಿಯೇಪಂಕ ) ಎಂಬಂತೆ

ಇದುವೇ ವೈಕುಂಠ । ಸಾಯುಜ್ಯ । ಸಾಮ್ರಾಜ್ಯ । ಪದಂ ॥ ಪ ॥ ಮಾಧವ ಸುಪದವಿಲಾಸಂ । ನಿರುಪಮ ಚಿತ್ಸುಖಾವಾಸಂ ॥ ಸಾಧುಜನಾಶ್ರಯವಮಲಂ ॥ ಸುತೇಜೋ ವಿರಾಜಿತಂ ॥ ೧ ॥ ಸಂತತ ಭಕ್ತಿವಿಚಾರು । ಸಂತೋಷಾಮೃತಸಾರಂ ॥ ಎಂತೀ ಭೂವೈಭವವು । ಬಣ್ಣಿಸುವೆಂ, ಮನೋಹರಂ ॥ ೨ ॥

* ರಾಗ......... ತಾಳ ( ನೋಡೀಸುರನದೀತಟವನವ ) ಎಂಬಂತೆ

ಬಾರೇ ಶುಕವಾಣೀ ಹರುಷದೊಳು | ನೋಡುವ ಶ್ರೀಧರನ ॥ಪಲ್ಲ॥ ಬಾಲಚಂದ್ರನು ತಾಳಿ ಶೈಲವ । ಪಾಲಿಸಿದನೆಲೆ ಗೋಕುಲುವ ॥ ಬಳಲಿದ ಎಳುದನು ನಲವಡಿಸುವ । ೧॥ ಸಂತಸದೆಯದು । ಕಾಂತನಡಿಗಳ । ಕಾಂತೆ ಸೇವಿಸಿ । ನೆರೆಸುಖವ ಪಡೆಯುವ ಒಡೆಯನ । ಅಡಿಗೆಳೆಡೆಗೆ ॥೨॥

ಮಧುಸೂದನ ! ಜಯಶಾಲಿಯಾಗು !

ವೃ॥ ಎನಿತಃ ಬಳಲ್ದೆಯೋ ? ಕುಸುಮಕೋಮಲ! ನೀಂ ತಳೆ ದಾಮುಹಾದ್ರಿಯುಂ । ಮನದೊಳಗಾದೊಡಂ ಬಗೆವೊಡಾಗದ ನಿನ್ನಯ ಮೈಮೆಯೆಂತುಟೋ ॥ ಅನಘನೆ! ಸಾಸಮೆಂತುಟೊ ? ದಯಾರಸಮೆಂತುಟೊ ? ನಲ್ಮೆಯೆಂತುಟೋ॥ ನಿನುತನೆನಿಪ್ಪ ವತ್ಸಲತೆಯೆಂತುಟೊ ? ಪರ್ಬಿದ ಕೀರ್ತಿಯೆಂತುಟೋ ॥ ೭೩ ॥

ಪ್ರಭುವೆ ! ನಿನ್ನ ಮನಸ್ಸಿನ್ನು ವಿನೋದಗೊಳಿಸಲು ನಾನೇನು ಮಾಡಲಿ ?

ವಿದೂ—ಎಲೌ ರಾಧೆ ! ಬೆಟ್ಟವನ್ನೆತ್ತಿದ ಕಾರಣದಿಂದ ಶ್ರೀಹರಿಯು ಬಲು ಮೈನೋವನ್ನು ಪಡೆದಿರುವನು; ಅದು ಪರಿಹಾರವಾಗುವಂತೆ ಚೆನ್ನಾಗಿ ಅಭ್ಯಂಜನವನ್ನು ಮಾಡಿಸು ! ಭಕ್ಷ್ಯಭೋಜ್ಯಗಳಿಂದ ಈತನ ಹಸಿವನ್ನು ಅಡಗಿಸಿ ವಿನೋದಗೊಳಿಸು !

ರಾಧೆ—ಎಲೆ ವೈಶಂಪಾಯನ ! ನಿನ್ನ ಹೊಟ್ಟೆ ಇನ್ನೆಷ್ಟು ಸ್ಥೂಲವಾಗಿ ಬೆಳೆಯಬೇಕೆಂದು ಆಪೇಕ್ಷಿಸುವೆ ? ಹೇಳು !

ವಿದೂ—ಎಲೆ ರಾಧೆ ! ಊಟವಿಲ್ಲದೆ ಶುಶ್ರೂಷೋಪಚಾರದಿಂದ ಪ್ರಯೋಜನವೇನು ?

ಗೋವಿಂದ—ರಾಧೆ ! ಅಕ್ಷಕ್ರೀಡೆಯಿಂದ ವಿನೋದಗೊಳ್ಳಲು ಅಪೇಕ್ಷಿಸುವೆನು.

ವಿದೂ— ಗೋವಿಂದ ! ಆ ಕಾಷ್ಟವ್ಯಸನವೇತಕ್ಕೆ ?

ಗೋವಿಂ—ವಯಸ್ಯ ! ಬುದ್ಧಿಯನ್ನು ಅರಳಿಸಿ ಚಾತುರ್ಯವನ್ನು ಹೆಚ್ಚಿಸುವ ಅಕ್ಷಕ್ರೀಡೆಯನ್ನು ತಿರಸ್ಕರಿಸಬಹುದೆ ?

ರಾಧೆ—ಸಖಿ ! ಮಣಿಮಾತೆ ! ಅಕ್ಷಶತಕ ಪಂಚಕದ ಆಟದ ಸಾಮಗ್ರಿಗಳನ್ನು ತೆಗೆದುಕೊಂಡು ಬಾ !

( ಸಖಿಯು ಹೋಗಿ ತರುವಳು. )

ವಿದೂ—ಎಲೌ ಮಣಿಮಾತೇ ! ಅಕ್ಷಪಟವನ್ನು ಹಾಸು ! ಇವರಲ್ಲಿ ನನಗೂ ಪರಿಚಯವುಂಟು !

( ಸಖಿಯು ಪಟವನ್ನು ಹಾಸುವಳು )

( ನಾರದನು ಪ್ರವೇಶಿಸುವನು

ನಾರದಂ—

ಪ॥ ವಂದೇಹಂ ಗೋವರ್ಧನಚರಣಂ ।
ವಂದೇಹಂ ಸಂಸೃತಿಭಯಹರಣಂ ।
ವಂದೇಹಂ ಪರಸೌಖ್ಯವಿತರಣಂ ।
ವಂದೇಹಂ ನಿಗಮಾಂತವಿಹರಣಂ ॥ ೭೪ ॥

ವಿನೋದೈಕ ಶೀಲನಾದ ಪರಮಾತ್ಮನ ದರ್ಶನದಿಂದ ಆನಂದಗೊಳ್ಳುವೆನು. (ಎಂದು ಸಮೀಪಗತನಾಗುವನು.)

ಎಲ್ಲರೂ — ( ಎದ್ದು ) ಪೂಜ್ಯರಾದ "ನಾರದಮಹರ್ಷಿಗಗೆ ವಂದಿಸುವೆವು.

ನಾರದಂ— ನಿಮಗೆಲ್ಲರಿಗೂ ಮಂಗಳವಾಗಲಿ ( ಕೈಯೆತ್ತಿ ಆಶೀರ್ವದಿಸುವನು. ) ಓಹೋ ಅಕ್ಷಕ್ರೀಡಾ ಪ್ರಸಂಗವೋ? ಸರಿಸರಿ ! ಇದರಿಂದ ನನ್ನ ಮನಸ್ಸಿಗೂ ಸ್ವಲ್ಪ ವಿಶ್ರಾಂತಿ ದೊರೆಯಲಿ ! ( ಎಂದು ಕುಳಿತುಕೊಳ್ಳುವನು )

ರಾಧೆ— ಮುಕುಂದ ನೀನು ಯಾವ ಪಕ್ಷವನ್ನು ವಹಿಸುವೆ! ನೂರು ಕಾಯಿಗಳನ್ನು ನಡೆಯಿಸುವೆಯೋ ? ಐದು ಕಾಯಿಗಳನ್ನು ನಡೆಯಿಸುವೆಯೋ ?

ಗೋವಿಂದ:— ಪಂಚಕ ಪಕ್ಷವೇ ನನಗಿರಲಿ ! ಶತಕವನ್ನು ನೀನೇ ನಡೆಯಿಸು !

ವಿದೂ:—ನಾನು ಈ ಆಟದಲ್ಲಿ ಬಹು ಬುದ್ಧಿವಂತನೆಂಬುದು ನಿಮಗೆಲ್ಲರಿಗೂ ತಿಳಿದಿದೆಯಷ್ಟೆ ? ನನ್ನನ್ನು ಪ್ರತಿನಿಧಿಯನ್ನಾಗಿ ಯಾರು ಅಂಗೀಕರಿಸುವಿರಿ ?

ರಾಧೆ:—ವೈಶಂಪಾಯನ ! ನೀನು ನನ್ನ ಕಡೆ ಇರು ! ಚಾತುರ್ಯವನ್ನು ಉಪಯೋಗಿಸಿ ಗೋವಿಂದನನ್ನು ನಾವು ಸೋಲಿಸಬೇಕು.

ವಿದೂ:— ರಾಧೆ! ಹಾಗೆಯೇ ಆಗಲಿ ! ಆಟವನ್ನು ಜಯಿಸಿದರೆ ನನಗೆ ಹೇರಳವಾದ ಸಂಭಾವನೆ ಕೊಡುವೆಯೋ ?

ರಾಧೆ:— ಆಗಲಿ ! ನಿನ್ನ ಶ್ರಮಕ್ಕೆ ತಕ್ಕ ಪ್ರತಿಸಲವು ಸಿಕ್ಕುವುದು.

ನಾರದ:— ಗೋವಿಂದ ! ನಾನು ನಿನ್ನ ಕಡೆಯವನಾಗಿ ಆಡುವೆನು. ಏಕೆಂದರೆ ? ನೀನು ಧರ್ಮ ಪಕ್ಷವನ್ನು ವಹಿಸಿರುವೆ.

ಗೋವಿಂದ:— ಆಗಲಿ ! ನೀವು ನನ್ನ ಆಟವನ್ನೇ ಆಡಬಹುದು.

( ಆಟಕ್ಕೆ ಪ್ರಾರಂಭಿಸುವರು. )

ವಿದೂ:—ರಾಧೆ ! ನೋಡಿದೆಯೊ ? ಈ ವೀರನಿಂದೆ ನಿನ್ನ ಪ್ರತಿಪಕ್ಷದ ನಾಯಕಿಯನ್ನು ಹಿಡಿಸಿದೆನು.

ರಾಧೆ:—ಭಾಪು! ವೈಶಂಪಾಯನ ! ನನ್ನ ವೀರನು ಆ ನಾಯಕಿಯನ್ನು ಕೇಶಾಕರ್ಷಣ ಮಾಡಿ ತನ್ನ ಶಾಸನಕ್ಕೆ ಒಳ ಪಡಿಸಿಕೊಂಡನು.

ಗೋವಿಂದ:—(ಅಸಹ್ಯದಿಂದ) ಇದೆಂತಹ ಶಾಸನ ? ದುಶ್ಶಾ ಸನ !!

ನಾರದ:— ಅಧರ್ಮ ! ಅಧರ್ಮ ! ಪ್ರಾರಂಭದಲ್ಲಿಯೇ ನಾಯಕನನ್ನು ಬಿಟ್ಟು ನಾಯಕಿಯನ್ನು ಹಿಡಿಯುವು ನ್ಯಾಯ ವಲ್ಲ !

ಗೋವಿಂದ:—ವೀರರು ವೀರರನ್ನು ಜಯಿಸಲಿ ! ಈ ಆಟ ವನ್ನು ಬಿಡು ! ನ್ಯಾಯ್ಯವಾದ ರೀತಿಯಲ್ಲಿ ಆಡು ! ಆದಿಯ ಲ್ಲಿಯೇ ಒಬ್ಬ ಸಾಧ್ವಿಯನ್ನು ಸೆರೆಹಿಡಿದುದು ನಿಮ್ಮ ಆಟಕ್ಕೆ ಅಮಂಗಳವೆಂದು ತಿಳಿಯಿರಿ !

ರಾಧೆ:—ಕೃಷ್ಣಾ ! ಶತ್ರುವಿನ ಕೈವಶಳಾದ ಸಾಧ್ವಿಯನ್ನು ಬಿಡಿಸಿದೆ ! ಇರಲಿ !

( ಮರಳಿ ಆಡುವರು )

ವಿದೂ :—ನೋಡು ! ನೋಡು ! ರಾಧೆ ನಿನ್ನಾಟವು ಗೆದ್ದಿತು ! ನಾಯಕ ಶತಕವೂ ಯಥೇಚ್ಛವಾಗಿ ಪಟದ ಸ್ಥಾನ ಗಳೆಲ್ಲವನ್ನೂ ಆಕ್ರಮಿಸಿತು !

ರಾಧೆ:—ಶ್ರೀಹರಿ ! ಈಗೇನು ಹೇಳುವೆ ? ನಿನ್ನ ಮಿತ್ರರಿಗೆ ವನವಾಸವೇ ಗತಿ !

ನಾರದ:— ಗೋವಿಂದ ! ಈ ಆಟದಲ್ಲಿ ಪರಾಜಯವಾ ಯಿತು ! ಇನ್ನೊಂದು ಆಟವನ್ನು ಹೂಡು; ಆಗಲಾದರೂ ಧರ್ಮಕ್ಕೆ ಜಯವುಂಟೇ ಉಂಟು !

ವಿದೂ:—ನಾರದರೇ ! ಇಷ್ಟೇ ಅಲ್ಲವೆ ನಿಮ್ಮ ಚಾತು ರ್ಯ ? ಕೃಷ್ಣಾ ! ಎಲ್ಲಿ! ನಿನ್ನ ಮಿತ್ರರು ಕಾಣುವುದೇ ಇಲ್ಲ! ಹೊಟ್ಟೆ ಹೊರೆದುಕೊಳ್ಳಲು ವೇಷಾಂತರಗಳನ್ನು ಧರಿಸಿ ಅಜ್ಞಾತವಾಸಿಗಳಾಗಿರುವರಲ್ಲವೆ! ಪಾಪ! ಶತ್ರು ಭೀತಿಯಿಂದ ಇನ್ನೇನು ತಾನೆ ಮಾಡಿಯಾರು ? ರಾಧೆ ! ಎಲ್ಲಿ ನನ್ನ ಬಹು ಮಾನ !

ರಾಧೆ:—ಎಲೈ ಬ್ರಾಹ್ಮಣ ! ಬಹುಮಾನವು ಸಿಕ್ಕುವುದು; ತಾಳು

ಗೋವಿಂದ:—ರಾಧೆ ! ಈ ವಿಜಯದಿಂದ ಹಿಗ್ಗಬೇಡ ! ಇನ್ನೊಂದಾಟವನ್ನು ಆಡು ! ಈ ಸಲ ನಾನೇ ಕಾಯಿಗಳನ್ನು ನಡೆಯಿಸುವೆನು. ವೈಶಂಪಾಯನ ! ನಿನ್ನ ಹೆಮ್ಮೆಯನ್ನು ಮುರಿಯುವೆನು.

ವಿದೂ:—ಆಗಲಿ! ನಿನ್ನ ಮಿತ್ರರಿಗೆ ನೀನೇ ಪಾಲಕನಾಗು ! ನಿನ್ನ ಜಾಣ್ಮೆಯನ್ನೂ ನೋಡುವೆನು !

ಗೋವಿಂದ:—ಇದೋ ನೋಡು! ನನ್ನ ಈ ವೀರನಾಯಕ ನಿಗೆ ವೀರಪಟ್ಟವನ್ನು ಕಟ್ಟಿ ಕಿರೀಟವನ್ನಿಟ್ಟಿರುವೆನು; ಈ ಕಿರೀ ಟಯಿಂದಲೇ ನಿಮ್ಮ ಶತಕದ ಬಲವನ್ನೆಲ್ಲ ಮುರಿಯುವೆನು.

ನಾರದ:—ಭಾಪು! ಭಾಪು! ಗೋವಿಂದ! ಒಳ್ಳೆಯ ಪ್ರತಿಜ್ಞೆ ಯನ್ನು ಮಾಡಿದೆ ! ನಿನ್ನ ಕಿರೀಟಯು ವಿಜಯಿಸಲಿ !

( ಆಡುವರು )

ರಾಧೆ:—( ಸೋಲನ್ನು ನಿರೀಕ್ಷಿಸಿ ) ಅಕಟಾ ! ಬ್ರಾಹ್ಮಣ ! ಮುಂದೇನುಗತಿ? ನನ್ನ ಕಾಯಿಗಳು ಒಂದೊಂದಾಗಿ ಹೋಗು ತ್ತಲಿರುವವಲ್ಲ !

ವಿದೂ:—ರಾಧೆ ! ನಿನ್ನ ಸಂಭಾವನೆಯಲ್ಲಿಯೇ ನಾನು ಮನಸ್ಸನ್ನು ಇಟ್ಟುಕೊಂಡಿದ್ದೆನಾದುದರಿಂದ ಆಟದಕಡೆ ಬುದ್ಧಿ ಓಡಲಿಲ್ಲ; ಈಗಲಾದರೂ ನನ್ನ ಬಹುಮಾನವನ್ನು ಸಲ್ಲಿಸಿ ಬಿಡು; ನಿಶ್ಚಿಂತೆಯಿಂದ ಆಡಿ, ಗೆದ್ದುಕೊಡುವೆನು.

ರಾಧೆ:—ಫಲಿತಾಂಶವನ್ನು ಕಂಡಲ್ಲದೆ ಬಹುಮಾನವು ದೊರೆಯಲಾರದು.

ಗೋವಿಂದ:—ಎಲೆ ರಾಧೆ ! ನನ್ನ ಕಿರೀಟಯಿಂದ ನಿನ್ನ ನೂರ್ವರೂ ಪ ರಾ ಜಿ ತ ರಾ ಗಿ ಅಸುಗಳನ್ನೊಪ್ಪಿಸಿದರು; ನೋಡು.

ನಾರದ:—ಭಾಪು ಜನಾರ್ದನ !! ಎಲೈ ವೈಶಂಪಾಯನ ! ಮೊದಲು ನನ್ನನ್ನು ಪರಿಹಾಸ ಮಾಡಿದೆಯಲ್ಲವೆ ? ಈಗ ನಿನ್ನ ಚಾತುರ್ಯವು ಎಲ್ಲಿ ಅಡಗಿತು ? !

ವಿದೂ:—ಹಾ! ಬಹುಮಾನದ ಮನೋವ್ಯಥೆಯೊಡನೆ ಈ ನಾರದರ ಮಾತುಗಳೂ ನನ್ನನ್ನು ಚುಚ್ಚುತ್ತಿವೆ. ಅಕಟಾ !!

ರಾಧೆ:—ಛೀ ! ಮೂರ್ಖ ! ಬಲವತ್ತರವಾದ ಆಟವನ್ನೂ ಅವಿವೇಕದಿಂದ ಆಡಿ ಸೋಲನ್ನು ಉಂಟು ಮಾಡಿದೆ !

ವಿದೂ:—( ಆತ್ಮ ) ಅಯ್ಯೋ! ನನ್ನ ಬಾಳೇ! (ಪ್ರ) ಎಲಾ ರಾಧೆ ! ಗೆದ್ದವೇಳೆಯಲ್ಲಿ ಸಂಭಾವನೆಯೇ ಇಲ್ಲ; ಸೋತಾಗ ಈ ತಿರಸ್ಕಾರವೋ ?

( ಆಕಾಶದಲ್ಲಿ )

ಇಂದ್ರ:—ಬೃಹಸ್ಪತಿ ! ನಮ್ಮ ಸ್ವಾಮಿಗೆ ಎಲ್ಲೆಲ್ಲಿಯೂ ವಿಜಯವೇ! ಈ ಸಂತೋಷಸಮಯವು ನಾವು ದರ್ಶನವನ್ನು ಪಡೆವುದಕ್ಕೆ ತಕ್ಕುದಾಗಿರುವುದು.

ಬೃಹ:—ದೇವೇಂದ್ರನೆ! ಅಹುದು! ಬಾ! ಸ್ವಾಮಿಯ ಸನ್ನಿಧಿಯನ್ನು ಸೇರುವ.

( ಬರುತ್ತಿರುವರು )

( ಬೆಳಕು ಎಲ್ಲೆಲ್ಲಿಯೂ ವ್ಯಾಪಿಸಿದುದನ್ನು ಕಂಡು )

ವಿದೂ:—ಅಕಟಾ! ಮಾಧವ! ಮುಂದೇನು ಗತಿ! ರಕ್ಷಿಸು! ರಕ್ಷಿಸು ! ಗಗನದಿಂದ ಅಸಂಖ್ಯಾತವಾದ ತೇಜೋರಾಶಿಗಳು ಈ ಭೂಮಿಯ ಕಡೆಗೆ ಇಳಿದಂತೆ ಕಾಣುವುವು. ಅಯ್ಯೋ! ಅಯ್ಯೊ ! ಈ ಪ್ರದೇಶದಲ್ಲಿ ನಿಜವಾಗಿಯೂ ಭೂತಗಳ ಕಾಟವುಂಟು.

ರಾಧೆ:-ಶ್ರೀಹರಿ! ಈ ಅದ್ಭುತವಾದ ದೃಶ್ಯದಿಂದ ಮನಸ್ಸು ಕಳವಳಗೊಂಡಿರುವುದು.

ಗೋವಿಂದ:—ಎಲೌ ಅಬಲೆಯರೆ ! ಭೀರುಗಳಾದ ನೀವು ಮನೆಗೆ ತೆರಳಿರಿ! ಎಲೈ ವೈಶಂಪಾಯನ ! ನೀನೂ ಹೊರಡು !

ವಿದೂ:—ಜನಾರ್ದನ ! ನಾನೇನು ಭೂತಗಳಿಗೆ ಭಯಗೊಂಡಿರುವೆನೆಂದು ತಿಳಿದಿರುವೆಯೋ ?

ಗೋವಿಂದ:—ಮಿತ್ರ ! ನೀನು ಭಯಪಟ್ಟಿರುವೆಯೆಂದು ನಾನು ತಿಳಿದಿಲ್ಲ! ಅಬಲೆಯರ ರಕ್ಷಣೆಗೆ ನೀನು ಹೊರಡಬೇಕು.

ವಿದೂ— ಓಹೋ ! ನಾನು ಜತೆಯಲ್ಲಿದ್ದ ಮೇಲೆ ಭಯವೆಂದರೇನು? ಗೋವಿಂದ ! ಇಂತಹ ಭೂತಗಳಿರುವ ಸ್ಥಳದಲ್ಲಿ ನಿನ್ನನ್ನು ಒಬ್ಬನನ್ನೇ ಹೇಗೆ ಬಿಟ್ಟು ಹೋಗಲಿ ? ನಿನ್ನ ಗತಿಯೇನು ?

ಗೋವಿಂ— ಇಲ್ಲಿ ನಾರದರು ಇರುವರು ; ನನಗೇನೂ ಭಯವಿಲ್ಲ ; ನೀವು ಹೊರಡಿರಿ !

ವಿದೂ— ನಾರದರೇ ! ನಮ್ಮ ಗೋವಿಂದನನ್ನು ಎಚ್ಚರದಿಂದ ನೋಡಿಕೊಳ್ಳಿರಿ!

(ವಿದೂಷಕನೂ ರಾಧೆಮೊದಲಾದವರೂ ಹೊರಟು ಹೋಗುವರು)

( ಇಂದ್ರಾದಿದೇವತೆಗಳು ಪ್ರವೇಶಿಸಿ )

ಕಂ॥ ಇಂದ್ರ— ಈತನೆ ಸಕಲಾಮಯಹರ –
ನೀತನೆ ಪರಿಪೂರ್ಣನಚ್ಯುತಂ ಭಗವಂತಂ ॥
ಈತನೆ ನಿತ್ಯಂ ; ಸತ್ಯ ;
ಶ್ರೀತರುಣೀರಮಣನೀತನಡಿಯಂ ಕಂಡೆಂ
॥ ೭೫ ॥

( ಬಳಿಸಾರಿ )

ಶ್ರೀಮನ್ನಾರಾಯಣನೆ ! ಭವಚ್ಚರಣಸೇವಕನಾದ ದೇವರಾಜನು ನಮಸ್ಕರಿಸುವನು.

ಬೃಹ— ಪರಮಾತ್ಮನ ಚರಣಾರವಿಂದಗಳಲ್ಲಿ ಬೃಹಸ್ಪತಿಯ ವಂದನಗಳು !

ಗೋವಿಂ— ದೇವೇಂದ್ರನೆ! ಕುಶಲವೇ? ಇಲ್ಲಿ ಕುಳಿತುಕೋ! ಬೃಹಸ್ಪತಿಯೆ! ನೀನೂ ಕುಳಿತುಕೊಳ್ಳಬಹುದಲ್ಲ !

ಬೃಹ— ಸ್ವಾಮಿಯ ಚರಣಾನುಗ್ರಹದಿಂದ ಎಲ್ಲರೂ ಸುಖಿಗಳು! ಭಗವಂತನ ಮಹಿಮೆಯನ್ನು ತಿಳಿಯದೆ ದೇವನಾಥನು ಗೋವರ್ಧನ ಪೂಜಾ ವಿಷಯದಲ್ಲಿ ತಾನು ನಡೆಯಿಸಿದ ಅಪರಾಧಕ್ಕಾಗಿ ದೇವರಡಿಯಲ್ಲಿ ಕ್ಷಮಾಪಣೆ ಬೇಡಲು ಸಂಕೋಚ ಪಡುತ್ತಿರುವನು.

ಗೋವಿಂ— ದೇವರಾಜನೆ ! ಆಯಾಸವೇಕೆ ? ನಿನ್ನಲ್ಲಿ ದೋಷವೇನು ?

ಇಂದ್ರ— (ಕೈಜೋಡಿಸಿ) ಮಹಾನುಭಾವ ! ನಿನ್ನ ದಯಾರಸವು ಅಸಾಧಾರಣವು.

ವೃ॥ ನಿನ್ನಯ ಭಕ್ತರಕ್ಷಣಧುರೀಣತೆ, ನಿನ್ನ ವಿಚಿತ್ರಲೀಲೆ,
ಮೋಹ್ ।
ನಿನ್ನಯ ಲೋಕಮೋಹನ ವಿಡಂಬನ ವೇಷ ವಿಲಾ
ಸವುಂ, ಬಲಂ
ನಿನ್ನ ವಿಭುತ್ವದೊಂದು ಸಿರಿ, ನಿನ್ನ ಗುರುತ್ವದ
ಪೆಂಪುಮೆಂತುಟೋ ? ।
ಎನ್ನಳವೇ ! ಮಹಾಮಹಿಮ! ಭಾವಿಸೆ, ಬಣ್ಣಿಸೆ
ನಂದ ನಂದನಾ ॥ ೭೬ ॥

ಬೃಹ— ಮಹಾಪ್ರಭು ! ನಿನ್ನಡಿಗಳೇ ವೇದಗಳು ; ನಿನ್ನೊಡಲೇ ಸಕಲವಿಶ್ವವು ನಿನ್ನ ಕಣ್ಣುಗಳೇ ಸೂರ್ಯಚಂದ್ರರು ನಿನ್ನ ಲೀಲೆಯಾದರೋ–ಸೃಷ್ಟಿ ಸ್ಥಿತಿ ಪ್ರಳಯದ ಕಾರ್ಯವು; ಇಂತಹ ನಿನ್ನ ಮಹಿಮೆಯನ್ನು ಬಲ್ಲವರಾರು ?

ಇಂದ್ರ – ವಿಶ್ವಂಭರ! ನಿನ್ನ ದೀಕ್ಷೆಗೆ ಗೋವಿಂದನೆಂಬ ನಾಮವು ಅನ್ವರ್ಥವಾದುದು ! ಆದುದರಿಂದ ನಿನಗೆ ಗೋವಿಂ

ದಪದವ ಪಟ್ಟವನ್ನು ಕಟ್ಟಲು ಅಪೇಕ್ಷಿಸುವೆನು ; ಸ್ವಾಮಿಯು ಇದನ್ನು ಅಂಗೀಕರಿಸಬೇಕು.

ಗೋವಿಂ— ಮಹೇಂದ್ರ! ನಿನ್ನ ಸಂತೋಷವಿದ್ದಂತಾಗಲಿ!

ಇಂದ್ರ— ಬೃಹಸ್ಪತಿಯೆ! ಕಾಮಧೇನು ಪಯಸ್ಸೇ ಮೊದಲಾದ ಪರಿಕರಗಳು ಎಲ್ಲವೂ ಸಿದ್ಧವಾಗಿರುವುವೋ ?

ಬೃಹ— ಎಲ್ಲವೂ ಸಿದ್ಧವಾಗಿಯೇ ಇರುವುದು.

( ಅಭಿಷೇಕವನ್ನುಮಾಡಿ—ಎಲ್ಲರೂ ಸ್ತುತಿಸುವರು. )

* ॥ಕಃ ಎಂದೆಂದುಂ ವಿಜಯಿಕೆ! ಗೋ—।
ವಿಂದಂ ಸುರಬೃಂದವಂದಿಕಾಂಘ್ರಿಸರೋಜಂ ।
ನಂದನ ಕಂದಂ ಪರಮಾ—
ನಂದಂ ಗೋವರ್ಧನಾಭಿಧಾನಂ ಕೃಷ್ಣಂ ॥ ೭೭ ॥

( ಎಲ್ಲರೂ ತೆರಳುವರು )

— ಇದು ಚತುರ್ಥಾಂಕವು

* ರಾಗ·········ತಾಳ ( ಏಸೆ ಮೋಹೀಸಂಗ ) ಎಂಬಂತೆ

ವಿಜಯಿಸು ಗೋವಿಂದ । ಮುಕುಂದ ಮಾಧವ ॥ ಪ ॥ ಮುಕುಂದ ಮಾಧವನೇ । ಮುಕುಂದ ಮಾಧವ ॥ ಅ ॥
ಶ್ರೀನಾಯಕಾ ಸರೋಜನಯನಾ । ವರಗೋವರ್ಧನಾದ್ರಿಧರ । ಗೋವೃಂದಪಾಲ । ಗೋಪ್ಯಂದಪಾಲ ವಿಭೊ ॥ ೧ ॥
ನಿತ್ಯನಿರಾಮಯ। ಸುರವನೌನಿಗೇಯ ॥ ಪರಮಾನಂದದಾಯಕ ಶ್ರೀ । ಸರಸೀಜನಾಭ । ಸರಸಿಜನಾಭ ವಿಭೂ ! ಸರಸಿಜ ನಾಭ ॥ ೨ ॥

## ಪಂಚಮಾಂಕವು

( ವಿರಹಿಣಿಯರಾದ ಗೋಪಿಕಾಸ್ತ್ರೀಯರು ಪ್ರವೇಶಿಸುವರು )

* ಕಂ। ಎಲ್ಲಿ? ಮನೋಹರಲೀಲನ–।
ದೆಲ್ಲಿ? ಸದಾನಂದಶೀಲನಾ ಗೋಪಾಲಂ ।
ಸಲ್ಲಲಿತಾಂಗನ ಕಾಣದೆ ।
ನಿಲ್ಲದು; ಮನವೀಗಳೆಂತು ಸೈರಿಪೆವಕಟಾ! ॥೭೮॥

ಇಂದುಲೇಖೆ— ಸಖೀ! ಮಂದಾರವಲ್ಲೀ! ಆ ಮದನಮೋಹನಾಂಗನ ಲಾವಣ್ಯದಲ್ಲಿ ಬೇರೂರಿದ ನನ್ನ ಮನವನ್ನು ಹೇಗೆ ಸಮಾಧಾನಪಡಿಸಲಿ ?

ಕಂ ನೋಡಂ ಕೃಪೆಯಿಂ ರಮಣಂ ।
ಬಾಡುವೆನೀಕುಸುಮಬಾಣವಹ್ನಿಯಿನಕಟಾ! ।
ಆಡುವೆನಾರೊಳ್ ನಾನೀ ।
ಮೂಡಿದ ದಂದುಗವನೆಂತು ಸೈಪೆಂ? ಕೇಳದೀ ॥೭೯॥

ಮಂದಾರವಲ್ಲೀ— ಇಂದುಲೇಖೆ! ಆ ಸುಧಾಕರನ ಅಧರಾಮೃತವು ಹೇಗೆ ಲಭಿಸುವದೋ ?

ವೃ॥ ಗಿಳಿನುಡಿಯಿಂದೆ ಬೆರ್ಚಿದೆನಣಂ; ಪಿಕನಾದದೆ ಭೀತಳಾದೆನಿಂ–।
ಪಳಿಗಳ ಗಾನದಿಂ ಬೆದರಿದೆಂ ; ಮಲಯಾನಿಲನಿಂದೆ ತಾರಿದೆಂ; ।
ಕಳವಳಮಾಂತೆನೀಕುಟಿಲ ಚಂದ್ರಮನಿಂ; ಮಧುವಿಂದೆ ಕುಗ್ಗಿದೆಂ;
ನಳಿನದಳಾಕ್ಷನಂಗಸುಖವೊಂದದೆ ಬಾಳ್ವೆನೆ ? ನಾಂ ತಳೋದರೀ ॥೮೦॥

ಮಧುರೆ— ಸಖಿ ! ಆ ಸೌಂದರ್ಯರತ್ನಾಕರನ ಕಡೆಗಣ್ಣ ನೋಟವು ನನ್ನ ಹೃದಯವನ್ನು ಸೂರೆಗೊಂಡಿರುವುದಲ್ಲ !

ಕಂ॥ ಮಾರಜ್ವರ ತಾಪದಿನಾಂ ।
ಚೀರುವೆನಿಂದಕಟ ! ಬಾಡಿ ಬೆಂಡಾಗಿರ್ಪೆಂ ।
ತಾರುಣ್ಯಸಿಂಧುವಂ ಕಗೆ– ।
ತಾರೆಲೆ ಕಂಜಾಕ್ಷಿ ! ಪೋಪುದೆನ್ನಯ ಹರಣಂ ॥೮೧॥

ಇಂದಿರೆ— ಹಾ ! ವಿರಹಸಂತಪ್ತಳಾದ ನನ್ನ ವೃತ್ತಾಂತವನ್ನು ನಾಥನಿಗೆ ಅರಿಕೆಮಾಡುವರಾರು ? (ಮೇಲೆನೋಡಿ)

‡ ವೃ॥ ಮಾರಾ ! ಕ್ರೂರನದೇತಕಪ್ಪೆಯಕಟಾ! ತೋರಾ ! ಸರೋಜಾಕ್ಷನಂ ।
ಧೀರಾ ! ಮಂದಸಮೀರ! ಕಾಡುವುದಿದೇಂ? ಶ್ಯಾಮಾಂಗನಂ ಪ್ರೇರಿಸಾ ।
ನೀರಂಗೆನ್ನೊಳಗಿರ್ಪ ಬಲ್ಮೆಳಿಪನೀಂ ತಿರ್ಚಾ ! ಸುಧಾಸೂತಿಯೇ ।
ನಾರೀದ್ರೋಹಿಯೆನಿಪ್ಪುದೇಕೆ ? ತರವೇ ? ಕಾಪಾಡು ನೀಂ ಮಾಧವಾ ॥೮೨॥

ರುಚಿರೆ— ಸಖಿಯರೆ ! ರಮಣನು ನನ್ನಲ್ಲಿ ಅನುರಾಗವನ್ನು ಪಡೆಯದಿರಲು ಕಾರಣವೇನಿರಬಹುದು ?

ಕಂದ॥ ಕುಟಿಲಾಕ್ಷಿಯೆಂದು ಪಳಿದನೊ ।
ಕಟುವಾಣಿಯೆನ್ನುತ್ತ ತೊರೆದನೋ ? ನಿಜರಮಣಂ ।
ಚಟುಲ ಮತಿಯಲ್ಲವೆಂದನೊ ? ।
ಪಟುತರಮದನಾಗ್ನಿಗೇಕೆ ನೂಕಿದನೆನ್ನಂ ! ॥೮೩॥

ಭದ್ರೆ:— ಅಕ್ಕಟಾ !

ಕಂದ॥ ನರುದಂಬುಲವಿತ್ತು, ಮನೋ ।
ಹರನಂ ಮಗಮಗಿಪ ಗಂದದಿಂ ಲೇಪಿಸಿ, ಕ–।
ಮ್ಮರಲಂ ಸೂಡಿ, ಮೃದೂಕ್ತಿಯಿ।
ನರಸನ ನಣ್ಪೆಸೆಯೆ ಸುಖಿಪ ಪುಣ್ಯಮದೆಂದೋ! ॥೮೪॥

---

* ರಾಗ.............ತಾಳ ( ಮೋದಿನಮೋಮೊರೆಸಯ್ಯಾ ) ಎಂಬಂತೆ

ಮದನಗೋಪಾಲನೆಲ್ಲಿಹನೋ ॥ಪ॥ ಯದುಕುಲಲೋಲ । ಕೀರ್ತಿವಿಶಾಲ ॥ಅ॥ ನವನಿತಚೋರನು, ನತಮಂದಾರನು, ನವನೀರದಾಭಕಾಯಂ। ಸುವಿಲಾಸವೈಭವಂ, ಸುಗುಣಾಭಿರಾಮನಾನಂದಧಾಮಂ ॥ ಕುವಲಯನೇತ್ರನದೆಲ್ಲಿಹನೋ ॥೧॥ ಸ್ಮರತಾಪದಿಂ ಬಳಲ್ದು ಬಾಯಾರಿ ಚೀರುವೆವಕಟಾ ॥ ಕರುಣಾಲವಾಲಕಮನೀಯಶೀಲನಂ ಕಾಣ್ಬೆವೆಂದೊ॥ ವಿರಹವ ಸ್ಮರಿಸಿ ಬದುಕುವೆನೇ ॥೨॥

‡ ರಾಗ.............ತಾಳ ( ಬಾರದಕಾರಣವೇನೊ ) ಎಂಬಂತೆ

ಮಾಧವನೇತಕೆಬಾರಾ । ಮಾರಾ । ವೀರ! ನೀಂ ತೋರಾ ॥ಪ॥ ಮೃದುಸಮೀರಾ । ಮಲೆಯದೆನ್ನೊಳ್ ॥ ಸದಯನಕರೆತಾರಾ ॥೧॥ ಎಲೆ ಮೃಗಾಂಕ । ಕೊಲುವುದೇನ್ನೆ ॥ ಪೇಳುರಮಣಗೇ ಪ್ರಿಯ ॥ ೨ ॥

ಇಂದುಲೇಖೆ:— (ಪೂರ್ವದಿಕ್ಕನ್ನು ತೋರಿ) ಸಖಿಯರಿ ! ಇತ್ತ ನೋಡಿರಿ !

ಕಂದ॥ ಶ್ರೀನಿಲಯಂ, ಸುಕಲಾಧರ ।
ನಾನಂದರಸಪ್ರವಾಹನಿಕೃಷ್ಣಾಂಕಂ
ತಾನಿದೊ ಬಂದಂ; ಮೂಡಲೊ-।
ಳೀನವವನಗೋಪಚಂದ್ರನೀಕ್ಷಿಸು; ಕೆಳದೀ ॥೮೫॥

ಎಲ್ಲರೂ:— (ಆತುರದಿಂದ) ಎಲ್ಲಿ! ಎಲ್ಲಿ !

ಇಂದು:— ಅನುಪಮಜ್ಯೋತ್ಸ್ನಾಪ್ರವಾಹದಿಂದ ಪ್ರಪಂಚವನ್ನು ತುಂಬಿ ತನ್ನ ಮೋಹಜನಕ ಕಿರಣಗಳಿಂದ ವಿರಹಿಗಳನ್ನು ಗೋಳಾಡಿಸುವ ಚಂದ್ರನು ಇದೊ ಇದೊ ಮೂಡುತ್ತಿರುವನು.

ಎಲ್ಲರೂ:— ಆಹಾ ! ಶ್ಲೇಷಾರ್ಥದಿಂದ ಸಂಭ್ರಮಿಸಿದೆವು.

ಭದ್ರೆ:—ಸಕಲ ಗುಣಗಳಿಂದಲೂ ನನ್ನ ಮನೋವಲ್ಲಭನೊಡನೆ ಸ್ಪರ್ಧಿಸಲು ಎಳಸುವ ಚಂದ್ರನು !

ಕಂದ॥ ಸಿಡಿಲಂತೆ ಸುಡುವ ಕಿರಣದ ।
ಗಡಣಮನುಡುಗುಡುಗು ಬಳಿಕವಾ ಸುಂದರನೊಳ್।
ಪಡೆ ಸಾಮ್ಯವನಿಲ್ಲದೊಡೆ-।
ಮೊಡ್ಡೆಯನ ಪೆಸರ್ಗಿಂತು ಯೋಗ್ಯನಪ್ಪೈ!
ದುರುಳಾ! ॥೮೬॥

ಮಂದಾರ:—ಎಲೆ ಕಳಂಕಿ! ಸುವೃತ್ತನೆಂದು ಲೋಗರಿಂದ ಕರೆಯಿಸಿಕೊಳ್ಳಲು ನಿನಗೆ ನಾಚುಗೆಯಾಗುವುದಿಲ್ಲವೆ? ಕೊಲೆ ಪಾತಕನಾದ ನಿನ್ನನ್ನು ಪರಿಹಾಸಗೊಳಿಸುವ ನಾಮದಿಂದ ಹಿಗ್ಗಬೇಡ !

ರುಚಿಕಿ:— ಎಲೆ ದೋಷಾಕರನೇ ! ವಿಷಸಹೋದರನೇ ! ಕಳಂಕಿಯೇ! ಅಬಲೆಯರನ್ನು ಗೋಳಾಡಿಸುವ ನಿನ್ನ ದುರ್ಗುಣವು ಸಹಜವಾದುದು ! ಪಾಪಿಯೆ ! ಈ ತಪ್ಪಿನಿಂದ ನೀನು ಕೃಶಾಂಗನಾಗಿ ಹೋಗು !

ಸುಕಲೆ:—ಸಖಿ! ರುಚಿರೆ ಒಳ್ಳೆಯ ಶಾಪದಿಂದ ಭಯಗೊಳಿಸಿದೆ! ನಾನಾದರೊ ಹೀಗೆ ಸಂಪ್ರಾರ್ಥಿಸುವೆನು. (ಕೈಜೋಡಿಸಿ) ಎಲೈ ಅಮೃತಕರ ! ಇಂದಿರಾಸಹೋದರ ! ಪ್ರತಿವರ್ಷದಲ್ಲಿಯೂ ದೇವತೆಗಳು ನಿನ್ನ ಕಿರಣಗಳನ್ನು ಸೇವಿಸಿ, ತುಷ್ಟರಾಗುವರು. ಎಲೈ ಜಗನ್ಮೋಹನ ಮೂರ್ತಿ! ಆ ಬಾಲ ಚಂದ್ರನ ಸಮಾಗಮವನ್ನು ಕಲ್ಪಿಸು! ಕಲ್ಪಿಸು !

( ತೆರೆಯಲ್ಲಿ ಕೊಳಲಿನ ಶಬ್ದವಾಗುವುದು )

ಇಂದುಲೇಖೆ:—ಸಖಿಯರಿ! ಇದೊ ಇದೊ! ಗೋಪಾಲನ ಮುರಳೀರವವು ? ವಸಂತವನದಲ್ಲಿ ವಿಹರಿಸುತ್ತಿರುವ ಮಾಧವನನ್ನು ಆಶ್ರಯಿಸುವ ತೆರಳಿರಿ !

ಎಲ್ಲರೂ:—(ಆತುರದಿಂದ) ಸಖಿಯರೆ! ನಡೆಯಿರಿ ನಡೆಯಿರಿ! ಹೋಗೋಣ.

( ಎಲ್ಲರೂ ಹೊರಡುವರು. )

(ಮೋಹಿನೀರೂಪಧರನಾದ ಗೋವಿಂದನು ವಸಂತವನದಲ್ಲಿ ಪ್ರವೇಶಿಸುವನು.)

ವಿದೂ:—ಗೋವಿಂದ! ನಿನ್ನನ್ನು ನೋಡಿದರೆ ಸಂದೇಹವಾಗುತ್ತಿದೆ; ನೀನೇನು ಗಂಡೋ? ಹೆಣ್ಣೊ? ಹೇಳು !

ಗೋವಿಂ:— ವೈಶಂಪಾಯನ! ಏಕೆ? ನನಗೆ ಈ ಅಲಂಕಾರವು ಚೆನ್ನಾಗಿ ಒಪ್ಪುವುದಿಲ್ಲವೆ?

ವಿದೂ:—ಕೃಷ್ಣ! ನಿನ್ನ ಈ ಮೋಹಿನೀವೇಷವು ಋಷಿಗಳ ಚಿತ್ತವನ್ನೂ ಆಕರ್ಷಿಸುವಂತಿರುವುದು ! ನನಗಾದರೆ ನಿನ್ನನ್ನೇ ಮದುವೆಯಾಗಿಬಿಡಲೇ ಎನ್ನಿಸುತ್ತಿದೆ! ಇಂದು ನಿನಗೆ ಈ ಅಲಂಕಾರವು ಏಕೆ ಬೇಕಾಯಿತು ?

ಗೋವಿಂ:—ವಯಸ್ಯ ! ನನ್ನ ದೀರ್ಘವಾದ ಕೇಶಪಾಶಗಳನ್ನು ತಿದ್ದಿ ತುರುಬು ಕಟ್ಟಿದರೆ ಚೆನ್ನಾಗಿರುವುದೆಂದು, ರಾಧೆಯು ಈ ಸಿಂಗರವನ್ನು ಅಳವಡಿಸಿರುವಳು.

ವಿದೂ:— ಮಾಧವ! ತಿಳಿದೆನು! ತಿಳಿದೆನು !! ಇತರ ಗೋಪಿಕೆಯರು ಹೆಣ್ಣೆಂಬ ಭಾವನೆಯಿಂದ ನಿನ್ನನ್ನು ಮೋಹಿಸದಿರಲೆಂದು ಸ್ವಾರ್ಥಪರಳಾದ ರಾಧೆಯು ಈ ಕೌಟಿಲ್ಯವನ್ನು ಬಗೆದಿರುವಳು ! ಭಾಪು ! ಭಾಪು !! ಲೋಕದಲ್ಲಿ ಸ್ತ್ರೀಯರ ಜಾಣ್ಮೆಯೇ ಜಾಣ್ಮೆ !

ಗೋವಿಂ:—ವಯಸ್ಯ! ವೈಶಂಪಾಯನ, ಈಗಲೀಗ ಉದಿಸುತ್ತಿರುವ ಪೂರ್ಣಚಂದ್ರನನ್ನು ನೋಡಿದೆಯಾ ?

ವಿದೂ:—ಆಹಾ! ಸೊಗಸಾದ ಹಪ್ಪಳದಂತೆ ಕಾಣುವನು!

ಗೋವಿಂ:— (ನಕ್ಕು) ವೈಶಂಪಾಯನ! ನಿನಗೆ ಪ್ರಿಯವಾದ ಒಳ್ಳೆಯ ವಸ್ತುವಿನ ಸಾಮ್ಯವನ್ನು ಹೇಳಿದೆ ! ಸಮಯೋಚಿತವಲ್ಲದ ವಸ್ತುವಿನ ಬಣ್ಣನೆಯೇಕೆ

ವಿದೂ:— ಮಾಧವ, ಹಾಗಾದರೆ ಸಮಯೋಚಿತವಾಗಿ ನಿನಗೆ ಪ್ರಿಯವಾದುದು ಯಾವುದು? ಚಕ್ಕುಲಿಯೊ ? ಪೂರಣಗಡುಬೋ? ಪುರಿಗಡಲೆಯೋ ?

ಗೋವಿಂ:—ನಿನ್ನ ತಿಂಡಿಯ ಕಥೆ ನಿನಗೇ ಇರಲಿ? ನನಗೆ ಬೇಕಾದುದು ನನ್ನನ್ನು ಪ್ರೀತಿಸುವವರ ಮನಸ್ಸು !

ವಿದೂ:— ನಿನ್ನನ್ನು ಪ್ರೀತಿಸುವವರು ಯಾರು ? ಗೋವುಗಳೂ, ಗೋಪಾಲರೂ ಅಷ್ಟೆ?

ಗೋವಿಂ:— ವೈಶಂಪಾಯನ! ಅಷ್ಟೇ ಏಕೆ! ಇನ್ನೂ ...

ವಿದೂ:— ಇನ್ನೂ......ಯಾರು?

ಗೋವಿಂ:—ಮಿತ್ರ! ನನ್ನ ವಿಷಯದಲ್ಲಿ ಕಾಮನು ಸಾರ್ಥಕನಾಮನಾದುದೂ, ದೋಷಾಕರನು ಸುಧಾಧಾಮನಾದುದೂ, ವನವು ನಂದನವಾದುದೂ, ವೈಶಾಕರನು ಮಧುವಾದುದೂ, ಯಾರ ಅನುಗ್ರಹದಿಂದ?

ವಿದೂ: — ಅಯ್ಯಾ ! ನಿನ್ನ ಒಗಟೆಯನ್ನು ತಿಳಿಯುವಷ್ಟು ಪಾಂಡಿತ್ಯವು ನನಗಿಲ್ಲ.

ಗೋವಿಂ:— ಅರಸಿಕನಾದ ವಟುವೆ!

ಕಂ॥ ಏಕಾಂತದೊಳಾಲಂಗಿಸು ।
ತಾಕಾಮನ ಸುಖಮನಿತ್ತು ಕಿರುನಗೆಯೊಳಗೆ— ।
ನ್ನೀಕುರುಳಂ ನೇವರಿಸುವ ।
ಗೋಕುಲಬಾಲೆಯರನಲ್ತೆ? ನಾಂ ಪ್ರೀತಿಸುವೆಂ ॥೮೭॥

ಮತ್ತು

* ಕಂ॥ ಇಂದಿರೆಯ ನಲ್ಮೆಯಂ ಮೇಣ್ ।
ಸುಂದರಿ ಮಾಧವಿಯ ಕೂರ್ಮೆಯಂ ಶಶಿಕಲೆಯಾ ।
ಮಂದಸ್ಮಿತದೊಂದಿರವನ ।
ಮಂದಾರೆಯ ಮೃದುಳ ಹೃದಯಮಂ ಬಣ್ಣಿಪೆನೇ ॥೮೮॥

ವಿದೂ:— ಮಾಧವ! ಈ ಹೆಣ್ಣುಗಳನ್ನು ನೆನೆನೆನೆದು ಬಡವಾಗುತ್ತಿರುವ ನಿನ್ನನ್ನು ನೋಡಿದರೆ ನನಗೆ ಮರುಕವಾಗುವುದು; ಪಾಪ! ಹಗಲೆಲ್ಲ ಕಾಡುಮೇಡುಗಳನ್ನು ಸುತ್ತಿಸಿ ಹಿಂಸೆಪಡಿಸುವೆ! ಇರುಳಲ್ಲಿ ಹೀಗೆ ಚಿಂತಿಸುತ್ತ ಬೇಸರಗೊಳಿಸುವೆ! ಭಕ್ಷ್ಯಭೋಜ್ಯಗಳಿಂದ ನನ್ನನ್ನು ಸಂತೃಪ್ತಿಗೊಳಿಸಬೇಕೆಂಬ ಆಲೋಚನೆಯೇ ನಿನಗಿಲ್ಲವೋ ?

ಗೋವಿ:— ಛೀ! ಕೃತಘ್ನ! ನಿನಗೆ ಭಕ್ಷ್ಯಗಳನ್ನು ನಾನು ಎಂದೂ ಕೊಡಿಸಲಿಲ್ಲವೆ? ನಮ್ಮ ಅಜ್ಜಿಯು ಕಂಡ ಹಾಗೂ, ಕಾಣದ ಹಾಗೂ ಕೊಟ್ಟ ತಿಂಡಿಗಳನ್ನು ಮರೆತೆಯಾ ?

ವಿದೂ:— ಅಹುದಯ್ಯಾ! ಅಹುದು! ಬೇಕಾದಷ್ಟು ತಿನ್ನಿಸಿರುವೆ! ಕಳ್ಳತನದ ಹಾಲು ಬೆಣ್ಣೆಗಳನ್ನು ಈ ಬ್ರಾಹ್ಮಣನಿಗೆ ದಾನಮಾಡಿ ಪುಣ್ಯವನ್ನು ಸಂಪಾದಿಸಿರುವೆ!

ಗೋವಿಂ:—ಈ ಬೆಳದಿಂಗಳು ಎಷ್ಟು ಆನಂದಕರವಾಗಿರುವುದು? ವಿನೋದವಾಗಿ ಸ್ವಲ್ಪಹೊತ್ತು ಈ ತೋಟದಲ್ಲಿ ಓಡಾಡುವ ಬಾ!

ವಿದೂ:— ಕೃಷ್ಣ! ಬೆಳದಿಂಗಳಲ್ಲಿ ಓಡಾಡಿದರೆ ಮೊಸರನ್ನವನ್ನು ಉಂಡ ಹಾಗಾಯಿತೇನು ?

ಗೋವಿಂ:— ವೈಶಂಪಾಯನ! ನೋಡು!

ವೃ॥ ದೆಸೆಯೆಲ್ಲಂ ನವಚಂದನದ್ರವವಿಲೇಪಂಗೊಂಡವೊಲ್ ಶೋಭಿಕುಂ; ।
ರಸೆಯುಂ ಚಂದ್ರಶಿಲಾವಿನಿರ್ಮಿತಮೆನಲ್ ಕಾಣ್ಗುಂ; ದಲಾಕಾಶಮುಂ ।
ಪೊಸಬೆಳ್ವಟ್ಟೆಯನೆಯ್ದೆ, ಸಿಂಗರಿಸಿದಂತಾರಾಜಕುಂ; ಚಿತ್ತದಾ—
ಯಸಮಂ ನೀಗಿಪ ಜೊನ್ನದೊಳ್ ವಿಹರಿಸಲ್ಕೇಂ ಪೇಳ್! ಮನಂಗೊಳ್ಳದೇ ? ॥೮೯॥

( ಇಬ್ಬರೂ ಸುಳಿದಾಡುತ್ತ )

ವಿದೂ:— ಕೃಷ್ಣ! ಈಗ ತಾನೆ ಅರಳುತ್ತಿರುವ ಈ ಮಲ್ಲಿಗೆಗಳ ಪರಿಚಯವನ್ನು ನಮಗೆ ಉಂಟುಮಾಡಿ ಕೊಡುತ್ತಿರುವ ಈ ಮಂದಾನಿಲನನ್ನು ಗೌರವಿಸು!

ಗೋವಿಂ:— ವಯಸ್ಯ! ಈ ಗಂಧವಹನು ಪುಷ್ಪವಾಟಿಯ ವಿಟನಲ್ಲವೆ ?

ಕಂ॥ ಚುಂಬಿಸಿ ಮಲ್ಲಿಗೆಯಂ, ಮುದ ।
ದಿಂ ಬಲ್ ಬಿಗಿದಪ್ಪಿ ಮಾಲತಿಯ, ಮೇಣ್ ನಯದಿಂ

---

* ರಾಗ......ತಾಳ ( ಪೋಪುದೇಕೆ । ಪ್ರಾಣೇಶನೇ ) ಎಂಬಂತೆ

ಎಂತು ಬಣ್ಣಿಪೆಂ। ಕಾಂತೆಯರ ನಲ್ಮೆ ॥ಪ॥ ಮಂದಹಾಸದಾ! ಸುಂದರಾಸ್ಯದಾ ಇಂದು ಮುಖಿಯರಾ । ಸುದೆಭಾಷಣದ ॥೧॥ ಪ್ರೇಮದಿಂದಲಾ । ವ ನಾಟದೆಸೆಳ್ । ಕಾಮಿನಿಯರಾ । ತಾಮೋದವನಾಂ ॥೨॥

ದಂಬುಜಿನಿಯೊಳಂ ವಿಹರಿಸು— ।
ತೇಂಬರ್ಪನೊ ! ಬೆಡಗಿನಿಂದವಿಾಗಂಧವಹಂ ॥೯೦॥

ವಿದೂ:— ಮಾಧವ! ಲತಾನಿಕುಂಜಗಳ ನಡುವೆ ಭ್ರಮರ ಗಾನವಿನೋದನಾದ ಈ ಪಲ್ಲವಿತ ಮಾಕಂದನು ಗೋಪಿಯರ ನಡುವೆ ಮುರಳೀನಾದದಿಂದ ಆನಂದಿಸುವ ನಿನ್ನನ್ನು ಹೋಲು ತ್ತಿರುವನು; ನೋಡು !

ಗೋವಿಂ:— ಮಿತ್ರ! ನನ್ನನ್ನು ಹೋಲಲು ಸ್ಪರ್ಧಿಸುವ ಈ ಮಾಕಂದರಾಜನನ್ನು ಸಂಭಾವಿಸುವೆನು.

ವಿದೂ:— ಮಾಧವ! ಆ ಸರೋವರದ ಉತ್ಪಳಾವೋದ ವನ್ನು ಪರೀಕ್ಷಿಸುವ ಬಾ!

ಗೋವಿಂ:-- ಮಿತ್ರ! ಆ ಪ್ರದೇಶವು ಪ್ರವೇಶಿಸತಕ್ಕುದಲ್ಲ;

ವಿದೂ:— ಏಕೆ!

ಗೋವಿಂ:— ಮೂಢ! ಸರೋವರದ ತರಂಗಗಳ ಮರೆ ಯಲ್ಲಿ ಪ್ರತಿಬಿಂಬ ವ್ಯಾಜದಿಂದ ಚಂದ್ರನು ಉತ್ಪಳಿನಿಯೊಡನೆ ಕ್ರೀಡಿಸುತ್ತಿರುವನು! ಅಂತಹ ಏಕಾಂತರಂಗಕ್ಕೆ ಹೋಗ ಬಾರದು; ಈ ಕೇಸರ ವೃಕ್ಷರಾಜನು ನಮ್ಮ ಆಗಮನವನ್ನು ಇದಿರು ನೋಡುತ್ತಿರುವನು; ಆತನ ಸತ್ಕಾರವನ್ನು ಪರಿಗ್ರಹಿ ಸುವ ಬಾ! ( ಹೋಗಿ ಇಬ್ಬರೂ ಕುಳಿತುಕೊಳ್ಳುವರು )

ವಿದೂ:— ಮಿತ್ರ! ಎಲ್ಲಿ? ಈಗ ನಿನ್ನ ಮುರಳೀಗಾನದಿಂದ ಆನಂದಗೊಳಿಸು.

ಗೋವಿಂ:— ಮಿತ್ರ! ಹಾಗೆಯೇ ಆಗಲಿ.

( ಎಂದು ಕೊಳಲನ್ನು ಬಾಜಿಸುವನು )

ವಿದೂ:— ( ಕೇಳಿ ಆನಂದಿಸಿ ) ಭಾಪು! ಭಾಪು! ಕೃಷ್ಣ! ಅಮೃತಸ್ರಾವಿಯಾದ ನಿನ್ನ ಗಾನವನ್ನೇನೆಂದು ಬಣ್ಣಿಸಲಿ ?

ಕಂ॥ ತಲೆಯೊಲೆನಂ ಮಾಕಂದಂ ।
ಸಲೆ ಕುಣಿವನಶೋಕನುರ್ಬುವಂ ಪುನ್ನಾಗಂ ।
ನಲಿವಂ ಕರವೀರಂ ಮೇ ।
ಣಿಳೆಯೊಳ್ ಸಂಗೀತಮಾರನಾನಂದಿಸದೋ? ॥೯೧॥

( ತೆರೆಯುಲ್ಲಿ )

ಕಂ॥ ಇದೊ ಇದೊ! ಗೋಪಾಲಂ ತಾ ।
ನಿದೊ ಮುದದಿಂ ಮುರಳಿಯೂದುತಿರ್ದಪನಿತ್ತಲ್ ।
ಹೃದಯದ ಬೇಗೆಯ ನಂದಿಸೆ
ಸೊದೆಸೋನೆಯ ಸೂಸುತಿರ್ಪನೀಯದುಚಂದ್ರಂ ॥೯೨॥

ವಿದೂ:— ಮಧುಸೂದನ ! ಇದೊ ! ನಿನ್ನ ಪ್ರಣಯಿನಿ ಯರು ಇತ್ತಲೇ ಬರುವಂತಿದೆ. ಹಾವಾಡಿಗನು ನಾಗಸ್ವರ ದಿಂದ ಹುತ್ತದಲ್ಲಿನ ಹಾವನ್ನು ಬರಸೆಳೆವಂತೆ ನೀನು ನಿನ್ನ ಕೊಳಲಿನ ಮಂತ್ರವನ್ನು ಪ್ರಯೋಗಿಸಿದೆ.

ಗೋವಿಂ:— ವಯಸ್ಯ! ಅವರು ನನ್ನನ್ನು ಗುರುತಿಸು ವರೋ ಇಲ್ಲವೋ ನೋಡಿ ಸ್ವಲ್ಪ ವಿನೋದವಮಾಡುವ! ನೀನೀ ಮರದ ಮರೆಯಲ್ಲಿ ಅಡಗಿರು !

ವಿದೂ:— ಹಾಗಾಗಲಿ ( ಎಂದು ಮರೆಯಾಗಿರುವನು )

ಗೋವಿಂ:— (ಕೊಳಲನ್ನು ಬಾಜಿಸುತ್ತಿರುವನು.)

(ಗೋಪಿಯರು ಕೊಳಲಿನ ಗಾನಕ್ಕೆ ಸರಿಯಾಗಿ ನರ್ತಿಸುತ್ತ ಪ್ರವೇಶಿಸುವರು)

* ವೃ॥ ಜಯ ಜಯ ಮಾಧವ! ಜಯಜಯ! ಕೇಶವ! ಜಯ
ಜಯ! ನತಜನಚಿದ್ವಿಭವಾ ।
ಜಯ ವಿನತಾಮರ! ಜಯಗುಣಸಾಗರ! ಜಯ ಜಯ!
ಸುರಚಿರ ಚಕ್ರಧರಾ !
ಜಯ ಮದಿರಾಂಬಕ! ಜಯಧೃತನಂದಕ! ಜಯಯದು
ತಿಲಕ ಸರೋಜಮುಖಾ ।
ಜಯ ಜಯ ಸುಂದರ! ಜಯ ಜಯ ಚಂದಿರ! ಜಯ
ಜಯ! ಮುರಹರ ಶೈಲಧರಾ । ॥೯೩॥

( ನರ್ತನಾನಂತರ )

ಕಂ॥ ಕುವಲಯದಳಸುಶ್ಯಾಮನೆ ।
ತವಿಸುವನೀ ಮಾರಹತಕನೆಡೆವಿಡದೆಮ್ಮಂ ।
ಸವಿಮಟಸೊದೆಯಿಂ ಪೋಷಿಸ ।
ನವನೀರಜನಯನ! ಮಧುರ ಮಂಗಳಗಾನಾ ॥೯೪॥

( ಆಲಿಂಗಿಸಲು ಯತ್ನಿಸಿ )

---

* ರಾಗ............... ತಾಳ ( ಉಚ್‌ನಹೀದರೆ ಹ್ಯಾರಿ ಪ್ಯಾರಿ ) ಎಂಬಂತೆ

ಜಯ ವಿನೋದೈಕ ಶೀಲ! ಗಾನಲೋಲ ದೀನಪಾಲ ! ಸ ಶ್ರೀಮುಕುಂದಾ ಸದಾನಂದ । ಭಕ್ತಬೃಂದಾನಂದ ಕಂದ ॥ಅ॥ ಬಾರೊ ಬಾರೊ ಶ್ರೀಹರೀ । ಬಾರೊ ಶ್ರೀ ಮುರಾರೀ! ಬಾ ದಿವ್ಯ ಪೀತಾಂಬರ ! ಬಾರೊ ಮೌನಿಪ್ರಹೃದ್ವಿಹಾರ ॥೧॥ ನವನೀತ ಚೋರ! ನವನೀರಜೋದರಾ । ಸತ್ಯಸಾರಾ ಸದಾ ಧಾರಾ॥ ಚಿದ್ವಿಲಾಸ ಗೋಪವೇಷ ॥೨।

ಆಹಾ! ಇವಳಾರು ? ಭುವನವೋಹನಲಾವಣ್ಯವತಿಯಾದ ಬಾಲಿಕೆ!

( ಆಶ್ಚರ್ಯದಿಂದ ನೋಡುವರು )

ಇಂದುಲೇಖೆ:— ಮುರಳೀಗಾನದಿಂದ ನಮ್ಮನ್ನು ವಂಚಿಸಿ ದಳಲ್ಲ! ಇವಳು ಇಲ್ಲಿಗೇತಕ್ಕೆ ಬಂದಿರಬಹುದು ?

ಮಂದಾರವಲ್ಲಿ:— ಒಳ್ಳೆಯದು ವಿಚಾರಿಸಿ ತಿಳಿಯುವ (ಎಂದು ಬಳಿಸಾರಿ ) ಎಲೌ ನೀನಾರು ?

ಗೋವಿಂದ:— (ಮುಗುಳು ನಗೆಯಿಂದ) ನಾನೊಬ್ಬ ಗಂಧರ್ವ ವೋಹಿನಿ!

ಮಂದಾರ:— (ಆ) ಆಹಾ! ನಿಶ್ಚಯ! ಭೂಲೋಕದಲ್ಲಿ ಇಂತಹ ಚಲುವೆಯರಿರಲಾರರು. ಇವಳನ್ನು ನೋಡಿದರೆ ಸ್ತ್ರೀಯರೂ, ವೋಹಿಸುವಂತಿರುವುದಲ್ಲ! ( ಪ್ರ ) ಎಲೌ ನಿನ್ನ ಹೆಸರೇನು ?

ವೋಹಿನಿ:— ನನ್ನ ಹೆಸರು ಕೃಷ್ಣೆ!

ಇಂದು:— ಆಹಾ! ಇವಳಿಗೆ ಈ ಹೆಸರೂ ಒಪ್ಪುವುದು.

* ಕಂ॥ ಶ್ರೀಕರೆ, ಸುಶ್ಯಾಮಾಂಗಿ, ಸು ।
ಧಾಕರಮುಖಿ, ವಿಮಲಕಮಲಪತ್ರಾಂಬಕೆ, ಶೋ– ।
ಭಾಕರೆ, ಪೀತಾಂಬರೆ, ತಾ–।
ನೀಕನ್ನಿಕೆ ಕೃಷ್ಣಸಾಮ್ಯಮಂ ಪಡೆದೆಸೆವಳ್ ॥೯೫॥

ಸಖಿಯರೆ! ಇವಳೇನಾದರೂ, ಆ ಮಾಧವನ ಕಣ್ಣಿಗೆ ಬಿದ್ದುದೇ ಆದರೆ ಆ ಮೇಲೆ ಆತನು ಮುಂದೆ ಎಂದೂ ನಮ್ಮನ್ನು ಕಣ್ಣಿಂದ ನೋಡನು.

ಮಂದಾ:— ಇಂದುಲೇಖೆ! ನೀನು ಹೇಳಿದುದು ನಿಜವು! ಇವಳು ಕೃಷ್ಣನನ್ನು ಸ್ವಾಧೀನಪಡಿಸಿಕೊಳ್ಳುವುದೂ ನಿಜವು! ಇವರಿಬ್ಬರೂ ಅನುರಕ್ತರಾದ ಬಳಿಕ ನಮ್ಮ ಬಾಳು ವ್ಯರ್ಥವೆನಿಸುವುದು.

ಎಲ್ಲರೂ:— ಅಹುದು ಅಹುದು! ಏನಾದರೂ ಮಾಡಿ ಇವಳನ್ನು ಇಲ್ಲಿಂದ ವೊದಲು ಹೊರಡಿಸಿ ಬಿಡಬೇಕು.

ಮಂದಾ:— ಎಲೌ ವೋಹಿನಿ! ಇಲ್ಲಿಗೇತಕ್ಕೆ ಬಂದೆ?

ವೋಹಿನಿ:— ಎಲೌ ಮಂಗಳಾಂಗಿಯರೆ ! ನಿಮ್ಮಿಂದ ಒಂದು ಸಹಾಯುವಾಗಬೇಕು.

ಮಂದಾ:— ಅದೇನು ?

ವೋಹಿನಿ:— ನಾನಿನ್ನೂ ಅವಿವಾಹಿತಳು; ಅನುರೂಪನಾದ ವರನನ್ನು ಹುಡುಕುವುದಕ್ಕೆ ಬಂದಿರುವೆನು. ಈ ವಿಷಯದಲ್ಲಿ ನೀವು ಸ್ವಲ್ಪ ಸಹಾಯವಮಾಡಬೇಕು.

ಎಲ್ಲರೂ:— (ಒಬ್ಬರನ್ನೊಬ್ಬರು ನೋಡುತ್ತ) ಹಾ! ಮುಂದೇನು ಗತಿ !

ಮಂದಾ:— ಎಲೌ ವೋಹಿನಿ! ಗಂಧರ್ವಲೋಕದಲ್ಲಿ ಇಲ್ಲದ ಸುಂದರನು ಭೂಲೋಕದಲ್ಲಿರುವನೆ ?

ವೋಹಿನಿ:— ಇರುವನೆಂದು ಕೇಳಿಯೇ ಬಂದೆನು.

ಮಂದಾ:— ಇಲ್ಲ ಇಲ್ಲ; ಪಾಪ! ಯಾರೋ ನಿನ್ನನ್ನು ಮರುಳುಗೊಳಿಸಿರಬಹುದು.

ವೋಹಿನಿ:— ಭದ್ರೆ ! ನಾನೇ ವೋಹಿನಿಯಾಗಿರುವಾಗ ನನ್ನನ್ನು ಮರುಳುಗೊಳಿಸುವರುಂಟೇ ? ನನಗೆ ತಕ್ಕ ವರನು ಇದ್ದೇ ಇರುವನು.

ಎಲ್ಲರೂ:—(ತಮ್ಮಲ್ಲಿ ತಾವು) ಅಯ್ಯೋ! ಪ್ರಾಣಕ್ಕೇ ಬಂದಿತಲ್ಲ! ಇವಳು ನಮ್ಮ ನುಡಿಗಳಿಂದ ವೋಸಹೋಗುವಂತಿಲ್ಲ.

ಮಂದಾ:—ವೋಹಿನಿ ! ನೀನು ಉದ್ದೇಶಿಸಿರುವ ವರನನ್ನು ಹೇಳು; ಅವನು ತಕ್ಕವನೇ ಅಲ್ಲವೇ ಎಂಬುದನ್ನು ನಾನು ಹೇಳುವೆನು.

ವೋಹಿನಿ:— ಎಲೌ ಸುಂದರಿ ಕೇಳು—

† ಕಂ॥ ಆವಂ ಮನ್ಮಥಮನ್ಮಥ– ।
ನಾವಂ ಮಂಜುಳಚರಿತ್ರನಾಕಂಜಾಕ್ಷಂ ।
ಆವಂ ಸದ್ಗುಣ ಭರಿತನ– ।
ದಾವಂ ಶ್ರೀಗೋಪಚಂದ್ರನೆಳಸುವೆನವನಂ ॥೯೬॥

---

* ರಾಗ.........ತಾಳ (ಪತಂಗ ವಠಗವನ) ಎಂಬಂತೆ

ರಾಜಿಪಳಿವಳಮವಾ । ಲೋಕೈಕಸುಂದರಿ ॥ಪ॥ ಸುಂದರಿ ಕೌಸುಮಮಂಜರಿ ॥ ಅ ॥ ಶ್ಯಾಮಾಂಗಿ ಸದಾವೋದಿನಿ । ಸೋಮಾನನೆಯೀ ವೋಹಿನಿ ॥ ಶ್ರೀಮಂದಿರೇ ರುಚಿರೆ ॥ ಸಾಮಜನಿಭಮೃದುಗಮನೆ ಸುಪಾವನೆ ॥೧॥ ಕಟಕಮಕುಟಮಣಿಕುಂಡಲಶೋಭಿತೆ ॥ ಪಟುತರ ಕೌಸ್ತುಭ । ದ್ಯುತೆ ! ಹಿತೇರುಪಮ ಪೀತಾಂಬರಧರೆ॥೨॥

† ರಾಗ.........ತಾಳ (ಆರಿಸ್ಮೆಯ್ಯಾ ಎಂಬಂತೆ

ಸುಂದರನಾ । ಆ ಗೋಪಚಂದಿರನಾ ವರಿಪೆ ಮನೋಹರನಾ ॥ ಪ ॥ ಅವನಾವಂ ಸ್ಮರ । ಕೋಟಿ ಶುಭಾ । ಕಾರ ನೀರ ॥ ನವನೀತಚೋರ । ಸತ್ಯಸಾರಾ । ಯದುವೀರ ॥ ಮೆರೆಯುನೆ ಪೇಳ್ ನೆರೆ ಧರೆಯೊಳ ಸರಸಿರುಹೋ । ದರನಮಲಂ

ಎಲ್ಲರೂ:— ಅಕ್ಕಟಾ! ಹತಾಶರಾದೆವು.

ಮೋಹಿನಿ:— ಸುಮುಖಿಯರೆ! ಆ ಗೋವಿಂದನು ಎಲ್ಲಿರುವನೆಂದು ಮಾತ್ರ ತಿಳಿಸಿರಿ; ನಿಮ್ಮ ಸಹಾಯವು ಇಷ್ಟೆ ಸಾಕು! ನಾನೇ ಆತನನ್ನು ಪರಿಚಯಮಾಡಿಕೊಂಡು, ವಿವಾಹಕ್ಕೆ ಒಪ್ಪಿಸುವೆನು.

ಎಲ್ಲರೂ:— ಹಾ! ಇನ್ನು ನಾವು ಬದುಕುವಂತಿಲ್ಲ.

ಮಂದಾರ:— ಎಲೆ ಸುಭಗೆ! ಆ ಕೃಷ್ಣನು ನಿನಗೆ ತಕ್ಕವನಾಗುವನೇ ? ಅವನು ಕೃಷ್ಣಾಂಗನು! ಕುರೂಪಿ! ಕುತ್ಸಿತನು!! ಜಾರನು!! ಚೋರನು !!! ಆ ದನಕಾಯುವವನನ್ನು ವರಿಸಬಹುದೆ ? ನಿನಗೆ ಯಾರು ಹೇಳಿದರು? ಸುಖವನ್ನು ಬಯಸಿದ ವಿವಾಹವು ಕಷ್ಟವನ್ನು ಉಂಟುಮಾಡದೆ ?

ಮೋಹಿನಿ:— ಎಲೌ ತರುಣಿ! ಇದೇನು ಹೀಗೆ ಹೇಳುವೆ? ದೇವಲೋಕವೆಲ್ಲವೂ, ಆ ಮಾಧವನ ಮೂರ್ತಿ ಕೀರ್ತಿ ವೈಭವಗಳನ್ನು ಹೊಗಳುವುದಲ್ಲ!

ಮಂದಾ:— ದೂರದ ಬೆಟ್ಟವು ನುಣ್ಣಗೆ, ಎಂಬ ಗಾದೆಯಂತೆ ಹೊಗಳಿದ್ದರೂ ಹೊಗಳಿರಬಹುದು. ಯಾವಾಗಲೂ ಒಡನಾಟದಲ್ಲಿರುವರಲ್ಲವೆ ವಿಮರ್ಶೆಯಿಂದ ಗುಣದೋಷಗಳೆಲ್ಲವನ್ನೂ ತಿಳಿಯುವರು!

ಮೋಹಿನಿ:— ಹಾಗಾದರೆ ನಾನಾ ಕೃಷ್ಣನ ಮೇಲಿನ ಬಯಕೆಯನ್ನು ಬಿಟ್ಟು ಬಿಡಲೆ ?

ಎಲ್ಲರೂ:— ಬಿಡು ಬಿಡು; ಆಲೋಚನೆಯನ್ನೇ ಬಿಡು!

( ಅಷ್ಟರಲ್ಲಿಯೇ ವಿದೂಷಕನು ಪ್ರವೇಶಿಸಿ )

ವಿದೂ:— ಎಲೌ ಯಾರು ವರಾಪೇಕ್ಷೆಯಿಂದ ಬಂದಿರುವರು ?

ಮೋಹಿನಿ:— ನಾನು ನಾನು! ಎಲೈ ಬ್ರಾಹ್ಮಣ! ನನಗೆ ಕೃಷ್ಣದರ್ಶನವನ್ನು ಸ್ವಲ್ಪ ಮಾಡಿಸುವೆಯಾ ?

ಮಂದಾರ:— ( ವಿದೂಷಕನನ್ನು ನೋಡಿ ) ತನ್ನಲ್ಲಿ ತಾನು ಇದೇನು? ಕೃಷ್ಣನ ಮಿತ್ರನಾದ ವೈಶಂಪಾಯನನು !! ಆ ಗೋವಿಂದನೂ ಬಂದೇ ಬಿಟ್ಟನೋ? ಇನ್ನೇನು ಗತಿ? ! ಮೋಹಿನಿಯು ಇನ್ನೂ ಇಲ್ಲಿಯೇ ಇರುವಳಲ್ಲ! ( ಕಳವಳದಿಂದ ) ಎಲೆ ಮೋಹಿನಿ ಹೊರಡು ಹೊರಡು! ಇನ್ನೇನು ಕೆಲಸವಿದೆ ಇಲ್ಲಿ?

ಮೋಹಿನಿ:— ಎಲೌ ನಾರಿಯರೆ! ಇಷ್ಟು ದೂರ ಬಂದ ನಾನು ಆ ಮಾಧವನನ್ನು ನೋಡಿಯಾದರೂ ಹೋಗುವೆನು.

ಎಲ್ಲರೂ:—ಎಲೌ ಚಪಳೆ ! ಸುಮ್ಮನೆ ಕಾಲಹರಣವೇಕೆ? ಆ ಶ್ರೀಧರನು ಯಾವಾಗ ಬರುವನೊ ಎಲ್ಲಿರುವನೊ? ಅವನಿಗಾಗಿ ಕಾಯುವುದೇಕೆ ? ( ಜನಾಂತಿಕಂ ) ವೈಶಂಪಾಯನ ! ಗೋವಿಂದನೆಲ್ಲಿ ?

ವಿದೂ:— ಅವನೆಲ್ಲಿಯೋ? ದನಗಳೊಡನೆ ಆಡುತ್ತ ಎಲ್ಲಿರುವನೊ? ಯಾರು ಬಲ್ಲರು ?

ಮೋಹಿನಿ:— ಎಲೈ ಬ್ರಾಹ್ಮಣ! ನಿಷ್ಪಕ್ಷಪಾತದಿಂದ ಹೇಳು, ಆ ಗೋಪಾಲಕೃಷ್ಣನನ್ನು ನಾನು ವರಿಸಲೆ? ಬೇಡವೆ ?

ಮಂದಾರ:— (ಹಿಂದೆ ನಿಂತು ಬೇಡವೆಂದು ಹೇಳುವಂತೆ ಸನ್ನೆ ಮಾಡುವಳು. )

ವಿದೂ:— ಎಲೆ ಕಲ್ಯಾಣಿ! ಆ ಕುರೂಪಿಯಾದ, ಸ್ತ್ರೀಘಾತುಕನಾದ ಕೃಷ್ಣನನ್ನೇಕೆ ವರಿಸುವೆ? ತನ್ನನ್ನು ಆಶ್ರಯಿಸಿದವರ ಹುಟ್ಟನ್ನೇ ಅಡಗಿಸಿಬಿಡುವವನ ಮಾತೇಕೆ?

ಮೋಹಿನಿ:— ಅಕಟಾ! ನನಗೀ ಯೌವನವೂ, ಲಾವಣ್ಯವೂ ಕಾನನ ಚಂದ್ರಿಕೆಯಂತೆ ವ್ಯರ್ಥವಾಯಿತಲ್ಲ!

ವಿದೂ:—ಮೋಹಿನಿ, ಏಕೆ ಚಿಂತಿಸುವೆ? ನಿನಗೆ ತಕ್ಕ ವರನು ಇಲ್ಲಿಯೇ ಇರುವನಲ್ಲವೆ ?

ಮೋಹಿನಿ:— (ಆತುರದಿಂದ) ಎಲ್ಲಿ ಎಲ್ಲಿ ?

ವಿದೂ:—ಎಲೌ ಭದ್ರೆ! ನಾನಿನ್ನೂ ಅವಿವಾಹಿತನು ! ನನ್ನನ್ನೇ ವರಿಸಲಾರೆಯ? ನಾನು ನಿನಗೆ ತಕ್ಕ ಸುಂದರನಲ್ಲವೆ?

ಮಂದಾ:— ಆಹಾ! ಸುಂದರನಲ್ಲವೆ ಮತ್ತೆ! ಇಂತಹ ಗುಳಿಗಣ್ಣಿನ, ಬಾಗಿದ ಬೆನ್ನಿನ ದೊಡ್ಡ ಹೊಟ್ಟೆಯ ಸುಂದರಾಂಗನು ಬ್ರಹ್ಮಸೃಷ್ಟಿಯಲ್ಲಿಯೇ ದೊರೆಯಲಾರನು! ಎಲೈ ಬ್ರಾಹ್ಮಣ; ಎಷ್ಟಾದರೂ ನಿನ್ನ ಹೊಟ್ಟೆಗೇ ಸಾಲದು; ನಿನಗೆ ಮದುವೆಯೇಕೆ?

ಮೋಹಿನಿ:—ಎಲೈ ಬ್ರಾಹ್ಮಣವಟುವಾಗಿ, ಪರಾನ್ನಜೀವಿಯಾದ ನೀನು ನನ್ನನ್ನು ಮದುವೆಯಾಗಿ ಏನು ಸುಖಪಡಿಸುವೆ?

ವಿದೂ:—ಎಲೆ ಕಲ್ಯಾಣಿ ! ನನ್ನ ಕೈ ಹಿಡಿದರೆ ನಿನಗೆ ಯಾವ ಸುಖಕ್ಕೆ ಕಡಿಮೆ ? ನಾನು ಸ್ವಸ್ತಿವಾಚನೆ ಮಾಡಿಸುವಡೆಯೆಲ್ಲ ಪುರೋಹಿತರ ಹೆಂಡತಿಯಾದ ನಿನಗೆ ಗೌರವವಿದ್ದೇ ಇದೆ; ಯಾವ ಪೂಜೆಯಲ್ಲಿಯೂ ನಿನ್ನದೇ ಮೊದಲ ಬಾಗಿನ. ಗೃಹಸ್ಥರ ಮನೆಗಳಲ್ಲೆಲ್ಲ ಹೂವೀಳೆಯಕ್ಕೆ ನೀನೇ ಮೊದಲ

*

ಮುತ್ತೈದೆ; ಹಬ್ಬ ಹಾಡಿಮುಗಳಲ್ಲಿ ಮೊದಲ ಮಣೆ ನಿನ್ನದೇ; ಮದುವೆಯ ಸಂಭ್ರಮಗಳಲ್ಲಿ ನೀನೇ ಕಳಸಗಿತ್ತಿ; ನಿನ್ನ ಮಾತೇ ಎಲ್ಲಕ್ಕೂ ಮೊದಲು; ಯಾವಾಗಲೂ ಗೃಹಸ್ಥರ ಮನೆಯ ಪರಮಾನ್ನಗಳಿಂದ ಉಬ್ಬುವ ನಮಗೆ ಎಂತಹ ಕ್ಷಾಮಕಾಲ ಬಂದರೂ ಆಹಾರ ವಸ್ತುಗಳ ಬೆಲೆಯೇ ತಿಳಿಯುವುದಿಲ್ಲ; ಮಧುರಾಹಾರಸ್ವಾರಸ್ಯವು ನಮ್ಮಂತಹ ವೈದಿಕರಿಗೆ ತಿಳಿಯು ವಂತೆ ಇತರರಿಗೇನು ತಿಳಿಯುವದು? ವರಿಸುವುದಾಗಿ ಮಾತು ಕೊಡು! ಸಾಕು! ನಾನೀಗಲೇ ನಮ್ಮ ಗೃಹಸ್ಥರ ಬಳಿಗೆ ಹೋಗಿ ಯಾಚಿಸಿ ಒಡವೆ ವಸ್ತುಗಳಿಗೆ ಅಣಿಮಾಡಿಕೊಳ್ಳು ತ್ತೇನೆ; ಈ ಬ್ರಾಹ್ಮಣನ ಕೈವಿಡಿದು ಪುಣ್ಯವನ್ನು ಸಂಪಾದಿ ಸಿಕೋ; ನೀನು ನನ್ನನ್ನು ತಿರಸ್ಕರಿಸಿದೆಯಾದರೆ ನಾನೀ ಜನ್ಮ ದಲ್ಲಿಯೇ ಮದುವೆಯ ಚಿಂತೆಯನ್ನು ಬಿಟ್ಟು ಬಿಡುತ್ತೇನೆ. ನಿನ್ನಂತಹವಳನ್ನು ನೋಡಿದ ಮೇಲೆ ಇತರ ಕನ್ನೆಯರು ನನ್ನ ಮನಸ್ಸಿಗೆ ಎಂದೂ ಸೇರರು!

ಮಂದಾ:—ಎಲೆ ಬಾಲೆ! ಈ ಬ್ರಾಹ್ಮಣನ ಮಾತುಗಳನ್ನು ಕೇಳುತ್ತ ಏಕೆ ನಿಂತುಕೊಂಡೆ? ನಡೆ ನಡೆ; ಆ ಜಾರಕೃಷ್ಣನು ಒಂದುವೇಳೆ ಇಲ್ಲಿಗೆ ಬಂದು ಬಿಟ್ಟರೆ, ನಿನಗೆ ತೊಂದರೆ ಯಾದೀತು!

ಮೋಹಿನಿ:—ಎಲೌ ತರುಣಿಯರೆ! ಹಾಗಾದರೆ ನಾನು ಹೊರಡುವೆನು.

ಎಲ್ಲರೂ:—ಹೊರಡು ಹೊರಡು! ಮೊದಲು ಹೊರಡು! ನಿನಗೆ ಮಂಗಳವಾಗಲಿ! ಒಳ್ಳೆಯ ವರನನ್ನು ಸೇರಿ ಸುಖಿಸು.

ವಿದೂ:—ಎಲೆ ಮೋಹಿನಿ! ಹೊರಡುವೆಯೊ? ನನ್ನನ್ನಂತೂ ನಿರಾಕರಿಸಿದೆಯಲ್ಲವೆ? ಇನ್ನು ನಿನ್ನನ್ನು ಮದುವೆಯಾಗುವ ಗಂಡು ಯಾವನಿರುವನೊ ನೋಡುವೆನು.

(ಮೋಹಿನಿ ಹೊರಟಳು).

ಮಂದಾರ:—ಆಃ! ನಮ್ಮ ಭಾಗ್ಯವಿಶೇಷದಿಂದ ಮೋಹಿ ನಿಯು ತೊಲಗಿದಳು!

ಇಂದು:—ಸಖಿ! ಮಂದಾರವಲ್ಲೀ! ಅವಳನ್ನು ಕಳುಹಿಸು ವುದಕ್ಕೆ ನಿನ್ನ ಬುದ್ಧಿಸಾಹಸವೆಲ್ಲವೂ ವೆಚ್ಚವಾಯಿತಲ್ಲವೆ?

ಮಂದಾ:—ಸಖಿ! ನನ್ನ ಮಾತುಗಳಿಂದ ಅವಳು ಮರು ಳಾಗಿ ಬಿಟ್ಟಳಲ್ಲವೆ? ಗಂಧರ್ವಲೋಕದವರು ನಮ್ಮಷ್ಟು ಜಾಣ್ಮೆಯುಳ್ಳವರೆಂದು ಕಾಣುವುದಿಲ್ಲ.

ಭದ್ರೆ:—ಸಖಿಯರೆ! ನಾವು ಸಂಪೂರ್ಣವಾಗಿ ಜಯವನ್ನು ಪಡೆದೆವೆಂದು ಭಾವಿಸಬಾರದು; ಅವಳು ಹೋಗುವ ದಾರಿ ಯಲ್ಲಿ ಕೃಷ್ಣನೇನಾದರೂ ಸಂಧಿಸಿದರೆ ನಮ್ಮ ಜಾಣ್ಮೆಯೇತಕ್ಕೆ ಕೆಲಸಕ್ಕೆ ಬರುವುದು?

ಮಂದಾರ:—ಅದೂ ನಿಜವೇ! ನಮ್ಮ ಅದೃಷ್ಟವಿದ್ದಂತಾ ಗಲಿ!

ಇಂದುಲೇ:—ಸಖಿಯರೆ! ಮೋಹಿನಿಯು ಹೋಗುವ ದಾರಿಯಲ್ಲಿ ಕೃಷ್ಣನು ಸಂಧಿಸುವನೆಂಬ ಅನುಮಾನಕ್ಕೆ ಕಾರಣ ವಿಲ್ಲ. ಇದೊ, ಇವು ಆ ಮೋಹನಾಂಗನ ಹೆಜ್ಜೆಯ ಗುರುತು ಗಳಲ್ಲವೆ! ಆ ಮಾಧವನು ಈ ವನದಲ್ಲಿಯೇ ಎಲ್ಲಿಯೋ ಅಡ ಗಿರಬಹುದು.

ರುಚಿರೆ:—ಎಲ್ಲಿಯಾದರೂ ಇರಲಿ! ಆ ಮೋಹಿನಿಯು ಇಲ್ಲಿದ್ದ ವೇಳೆ ಆ ಮನೋಹರನು ಬಾರದೆ ಇದ್ದುದು ನಮ್ಮ ಪುಣ್ಯ!

ಭದ್ರೆ:—ಸಖಿಯರೆ! ಆ ಮಾಧವನನ್ನು ಈ ಲತಾನಿಕುಂಜ ದೆಡೆಗಳಲ್ಲಿ ಹುಡುಕುವ ಬನ್ನಿರಿ!

ಎಲ್ಲರೂ:—

(ಅಲ್ಲಲ್ಲಿ ಹುಡುಕುತ್ತ)

* ಕಂದ ॥ ಅಡಗಿರ್ಪುದೆಲ್ಲಿಯೇನಿದು?।
ನಡೆನೋಳ್ಪವದೆಲ್ಲಿ? ನಿನ್ನ ನೀರಾ! ಚೋರಾ!।
ಬಿಡು ಬಿಂಕಮ ನೀ ಶೌರೀ!।
ಜಡಜಾಕ್ಷ! ಮುರಾರಿ! ಬಾರೊ!
ನೀಂ ದನುಜಾರೀ ॥ ೯೭ ॥

ಮೋಹಿನಿ:—(ಬೇಗನೆ ಪ್ರವೇಶಿಸಿ) ಎಲೌ ವಂಚಕಿಯರೆ! ನಿಮ್ಮ ಮೋಸವನ್ನು ತಿಳಿದೆನು.

ಎಲ್ಲರೂ:—(ಸಂಭ್ರಾಂತರಾಗಿ) ಆಃ ಈ ಚಪಲೆಯು ತಿರುಗಿ ಬಂದು ಬಿಟ್ಟಳಲ್ಲ! (ಪ್ರ) ಸುಂದರಿ! ಇದೇನು ಇಷ್ಟು ಆತುರ ಳಾಗಿ ಮರಳಿ ಬಂದೆ?

---

* ರಾಗ.............ತಾಳ (ಮೆರ ದಿಲ್ ದುಕಾನೆವಾಲಾ) ಎಂಬಂತೆ

ಎಲ್ಲಿರ್ಪನೋ ಮುರಾರಿ। ಎಲ್ಲಿಪೋದನಾತ। ಶೌರೀ ॥ ಪ ॥ ಆನಂದ ಗೋಪಬಾಲ। ಸಾನಂದ ಗಾನಲೋಲ। ಆದಿವ್ಯಮೇಘನೀಲ। ದೀನಾವನೈಕಶೀಲ ॥ ೧ ॥ ಮಾಧವನೆಲ್ಲಿ ಪೋದ। ಮೋದದೆಮೆಳೀವಮುಕುಂದ। ಆ ದಿವ್ಯಕ್ಷೀರಚೋರಾ। ವೇದಾಂತ ಸದ್ವಿಹಾರ ॥ ೨ ॥

ಮೋಹಿನಿ:—† ಎಲೌ ಕುಟಿಲೆಯರಿ ! ನಿಮ್ಮ ಬೆಣ್ಣೆಯಂತಹ ಮಾತುಗಳನ್ನು ಕೇಳಿ ಮೋಸಗೊಂಡಿದ್ದೆನಲ್ಲ.

ಎಲ್ಲರೂ:—ಅದೇನು? ಅದೇನು? ಸಖಿ! ನಿನಗೆ ನಾವೇನೂ ಮೋಸವನ್ನು ಮಾಡಲಿಲ್ಲವಲ್ಲ !

ಮೋಹಿನಿ:—ಎಲೌ ಮಾಯಗಾರ್ತಿಯರಿ ! ಕೃಷ್ಣನಲ್ಲಿ ಇಲ್ಲದ ದೋಷಾರೋಪಣೆಯನ್ನು ಮಾಡಿ ನನ್ನನ್ನು ಕಳುಹಿಸಿದಿರಿ! ನೀವು ಮಾತ್ರ ಅವನನ್ನೇಕೆ ಹುಡುಕುತ್ತಿರುವಿರಿ? ಸ್ವಾರ್ಥಪರತೆಯು ಎಂತಹ ಸುಳ್ಳನ್ನಾದರೂ ಹೇಳಿಸುವುದಲ್ಲವೆ ?

ಇಂದು:—ಎಲೌ ಮುಗ್ಧೆ! ನೀನು ತಪ್ಪಾಗಿ ತಿಳಿದುಕೊಂಡಿರುವೆ ! ಆ ಗೋಪಾಲನ ಮೇಲಿನ ಪ್ರೀತಿಯಿಂದ ನಾವು ಅವನನ್ನು ಹುಡುಕುವುದಿಲ್ಲ; ಆ ಚಪಳನು ನಮ್ಮ ಮನೆಗಳಲ್ಲಿ ಹಾಲುಬೆಣ್ಣೆಗಳನ್ನು ಕದ್ದು ತಿಂದು ಓಡಿಬಂದನು ! ಆದುದರಿಂದ ಅವನನ್ನು ಹಿಡಿದು ಶಿಕ್ಷಿಸಲು ಹುಡುಕುತ್ತಿರುವೆವು ! ಅಷ್ಟೆ!! (ಮರುಕವನ್ನು ನಟಿಸಿ) ಅಯ್ಯೋ ! ಹುಚ್ಚು ಹುಡುಗಿ ! ಇಷ್ಟಕ್ಕಾಗಿ ತಿರುಗಿ ಇಷ್ಟು ಆಯಾಸವನ್ನು ತೆಗೆದುಕೊಂಡೆಯಾ ?

ಮೋಹಿನಿ:—ಸುಳ್ಳಿನ ಜತೆಗೆ ಸುಳ್ಳನ್ನು ಪೋಣಿಸುತ್ತಿರುವಿರೇನೋ?

ಮಂದಾ:—ಎಲೆ ಸಖಿ! ಪಾಪ! ನೀನು ಎಂನೋ ಸುಳ್ಳುಗಾರರಿಂದ ವಂಚಿತಳಾಗಿರುವಂತೆ ಕಾಣುತ್ತದೆ; ನಾವು ಅಂತಹವರಲ್ಲ; ನಂಬು! ಆ ಕಳ್ಳನು ಸಿಕ್ಕಲಿಲ್ಲ; ನಾವೂ ಇನ್ನು ಮನೆಗೆ ಹೋಗುವೆವು.!

ಮೋಹಿನಿ:—ಹಾಗಾದರೆ ನಾನು ಹೊರಡುವೆನು. (ಹೊರಟು ಹೋಗುವಳು)

ಎಲ್ಲರೂ:—ಆಹಾ! ಚಪಳೆ! ಎಂತಹ ಚಪಳೆ! ಈಸಲ ಅವಳನ್ನು ಕಳುಹಿಸಿದುದೇ ಸಾಹಸ !

ರುಚಿರೆ:—ತಿರುಗಿ ಏನನ್ನಾದರೂ ಭಾವಿಸಿಕೊಂಡು ಬರುವಳೋ ?

ಮಂದಾ:—ಇನ್ನು ಬಾರಳು; ಬಲವಾದ ಮಂತ್ರವನ್ನು ಹಾಕಿರುವೆವು !

ಭದ್ರೆ:—ಆ ಮಾಧವನು ಕಾಣಲೇ ಇಲ್ಲವಲ್ಲ !

ಇಂದು:—ಕೃಷ್ಣ! ನಮ್ಮನ್ನು ವಂಚಿಸಿ ಅಡಗಿರುವ ವಿನೋದವು ಸಾಕು.

* ವೃ ॥ ಬಿಗಿದಂ ಕಬ್ಬಿನ ಬಿಲ್ಗೆ ತುಂಬಿವೆದೆಯಂ;
ಮೇಣ್ ಪಂಚಬಾಣಂಗಳಂ ।
ತೆಗೆದಂ; ಪೂಡಿದನಯ್ಯೊ! ಜೇವೊಡೆದು
ಪೊಯ್ದಂ; ಪೊಯ್ದನೀ ಮನ್ಮಥಂ ।
ಬಗೆ ಬೆಂಡಾದುದು ಸೈಪುದೆಂತೊ? ಪರಣಂ
ಪೋಕುಂ ಕಣಾ! ಮಾಧವಾ ।
ಮಿಗೆ ತೀರ್ಚಾಧಿಯು ಬೇಗೆಯಂ ಮಣಿವಪೆಂ;
ಬಾರಾ! ಕೃಪಾಸಾಗರಾ ॥೯೮॥

ಮಂದಾ :—ರಮಣಾ ! ಪ್ರಣಯನಿಯುತಾದ ನಮ್ಮಲ್ಲಿ ಕೋಪವೇಕೆ? ಕಾಪಾಡು! ಕಾಪಾಡು!

ಭದ್ರೆ:—

ವೃ ॥ ಕಿರುನಗೆ ದೋರಿ, ಮುದ್ದುಗಳ ಬೀರಿ,
ತೊದಳ್ನುಡಿ ಚೀರಿ, ಧೈರ್ಯಮಂ ।
ಪರಿಪರಿಸಾರಿ, ದರ್ಪಕನ ವಿಾರಿ,
ಸುಖಶ್ರಮುವೇರಿ, ಬಾಳ್ವವೈ ।

---

† ರಾಗ.............ತಾಳ ( ಏನಗೈದೆ ಯಿಸು ತರವೇ ) ಎಂಬಂತೆ

ಇದು ತರವೆ ನಾರಿಯರಿ ! । ಹರಿಯನ್ನು ಪರಿಪರಿ ಜರಿದಿರಲೆ ॥ಪ॥ ಭಾಸುರಾಂಗನ ನೀವದೇಕಿನಿ । ತಾಶಿಸುವಿರಲೆ ಮೂರ್ಖರೇ ! ಮೋಸಗೊಳಿಸಿದಿರೆನ್ನನಲ್ಲವೆ । ಮಾಯಗಾರ್ತಿಯರೀ ! ಇದೇ ॥ ೧ ॥ ನಿಮಗದೇತಕೆ ಪೇಳಿರೀ ಕಡು ಕುಟಿಲ ಕುತ್ಸಿತ ಜಾರನೂ॥ ರಮಣಿಯರೆ ನಾಂ ಬಲ್ಲೆ ಬಲ್ಲೆನು, ಸೊಲ್ಲದಿಂ ನೀವೆನ್ನೊಳಿಂ ॥ ೨ ॥

* ರಾಗ......... ತಾಳ (ಸುಮೇಷೂ) ಎಂಬತೆ

ಮುರಾರೀ! ಬಾ!...ಬಾ!—ಕ್ರಿ...!ಬೇ...ಡುವೆ! ಸರೋರುಹ ನೇತ್ರ ॥ಪಲ್ಲ॥ ಬಿಗಿದನು ವರೌರ್ವಿಯಂ ! ಬಿಲ್ಲೊಳಗೀಸ್ಮರಂ ॥ ಪೂಡಿದನ್ಕೈ । ಸರಂ...ಗಳಂ... ।... ಮನೊ ।...ಹರಾ...ಧೀರಾ ಸುಧಾಕರ ಬಾರಾ ॥೧॥ ಪೊಯಪೊಯ್ದನೀ ಖಳ । ಸೈರಿಸಲಾರೆಂ । ಉದಾರಾ...ನೀ...ರಾ...ನೀ...ಸೂ...ದರಾ॥ ಸ್ಮರಾಗವು ಸಾರಾ ॥೨॥

ನೆರೆದು ವಿನೋದದಿಂ! ಮುರಿದು
ಚಂದ್ರಮನಂ ಜರಿದೀ ವಸಂತನಂ ।
ತರಿದು ಸಮೀರನಂ ಪೊರೆ! ದಯಾಕರ!
ಶೌರಿ! ಮುರಾರಿ! ಮಾಧವಾ ॥ ೯೯॥

ಸುಕಲೆ :— ಅಕ್ಕಟಾ! ಎಲ್ಲಿ ಹುಡುಕಿದರೂ ಸ್ವಾಮಿಯು ಸಿಕ್ಕಲಿಲ್ಲವಲ್ಲ !

ಮಂದಾ :—ಯಾರನ್ನು ಕೇಳಿದರೆ ಕಾಂತನ ವಿಷಯು ವನ್ನು ಹೇಳಿಯಾರು ?

( ಮುಂದೆ ನೋಡಿ )

ಕು। ಷ॥ ಪಾಡುವ ಮದಾಳಿಯೇ ।
ನೋಡಿದೆಯ? ಮಾಧವನ ।
ಗಾಡಿಕಾರನ ವೇಣುಧರನ ನೀನು ।

ಇಂದು : --ತೀಡುವ ಸಮೀರನೇ ।
ನಾಡೆನವ ಮನ್ಮಥನ ।
ನೋಡಿದೊಡೆ ತಿಳಿಹು। ಎನ್ನಸುವನುಳಿಹು
॥ ೧೦೦ ॥

ಭದ್ರೆ :—ಕಳಹಂಸ! ಪೇಳು.ನಿ·।
ರ್ಮಳ ಮೂರ್ತಿಯೆಲ್ಲಿ ? ಮಂ ।
ಜುಳಚರಿತನಂ ತೋರು ತೋರು ಧೀರಾ ॥

ರುಚಿರೆ :—ಕಳವಳವ, ನೀಗಿಸಾ ।
ತಿಳಕ! ನೀನಾ ಗೋಪ ।
ತಿಳಕನಿರವನು ಪೇಳ್ದು ದಯೆಯೊಳೆನ್ನಾ
॥ ೧೦೧ ॥

ಸುಕಲೆ :—ಎಲೆ ಚೂತರಾಜನೇ !
ಸುಲಲಿತ ಶ್ಯಾಮಾಂಗ ।
ಸಲೆ ವಿನೋದದೊಳಿರ್ಪ ತಾಣವೆತ್ತ ।

ಲಲಿತೆ :— ಕಲಿತ ಮೃದು ಪಲ್ಲವಾ ।
ಲಲಿತ ಸುಭಗಾಶೋಕ ।
ವಿಲಸದಬ್ಜಾಂಬಕನ ತೋರು ತೋರಾ ॥೧೦೨॥

ಇಂದು :—ಆಹಾ! ಇದೇನು? ನನ್ನಿಂದ ಉಪಕಾರವನ್ನು ಪಡೆದ ನೀವಾದರೂ ಹೇಳಬಾರದ ?

( ಎಂದು ವೃಕ್ಷಗಳನ್ನು ಕುರಿತು )

ವೃ॥ ತಿಳಕವೆ! ನಿನ್ನನಾಂ ನಲಿದು ನೋಡಿಯುಲರ್ಚಿದೆನ್ನೈ
ಅಶೋಕ ನೀಂ ।
ತಳಿರ್ಗಳನಾಂತುದೆನ್ನಡಿಯಿನಲ್ಲವೆ ? ನಿನ್ನನು
ಗುಳ್ದನಾಂ ಮುಗು ।
ಳ್ಪಳೆಯಿಸಿದೆಂ ಕಣಾ! ಬಕುಳ! ನನ್ನಯ ನಣ್ಪಿನ
ತಳ್ಕೆಯಿಂದೆ ಪೊಂ ।
ಪುಳಮಿಗಿಲಾಗೆ ನೀಂ ಕುರವಕಾ! ಸುಮಮಂಜರಿ
ಯೊಂದಿ ಬಾಳೆಯಾ ? ॥೧೦೩॥

ಮಂದಾ: —ಸಖಿ! ಕಾಂತನ ಸಮಾಗಮವನ್ನು ಕಲ್ಪಿಸಲು ಪೂಜ್ಯನಾದ ಕಂದರ್ಪನನ್ನೇ ಪೂಜಿಸಿ, ಸಂಪ್ರಾರ್ಥಿಸುವ.

ಎಲ್ಲರೂ :— ಹಾಗಾಗಲಿ ( ಪೂಜಾಪರಿಕರಗಳನ್ನು ಸಿದ್ಧಗೊಳಿಸುವರು )

ವಿದೂ :—( ಪ್ರವೇಶಿಸಿ ) ಎಲೌ ಬಾಲೆಯರೆ! ನೀವುಗಳು ಯಾವುದೊ ವ್ರತವನ್ನು ಕೈಕೊಂಡಿರುವಂತೆ ಕಾಣುವುದು; ನಾನು ಯಥಾವಿಧಿಯಾಗಿ ಮಾಡಿಸಲೆ ?

ಎಲ್ಲರೂ :—ಎಲೈ ವೈಶಂಪಾಯನ! ಹೆಂಗುಸರು ಮಾಡುವ ಪೂಜೆಗಳಲ್ಲಿ ನಿನಗೇನು ಕೆಲಸ ?

ವಿದೂ :—ಬೇರೆ ಕೆಲಸವೇನು? ದಕ್ಷಿಣೆಯ ಮೇಲಿನ ಆಸೆ!

ಮಂದಾ :—ದಕ್ಷಿಣೆಯೋ ದಕ್ಷಿಣಮುಖವಾಗಿ ತಿರುಗಿಕೊ!

ವಿದೂ :—ಹಾಗಾದರೆ ಪೂಜೆಯನ್ನು ಮಾಡಿಸುವರಾರು?

ಇಂದು :—ನಾವೇ ಮಾಡುವೆವು.

ವಿದೂ :—ನಿಜ! ನಿಜ! ನಮ್ಮಲ್ಲಿ ಹೆಂಗುಸರು ಮಂತ್ರಗಳಿಲ್ಲದ ಪೂಜೆಗಳೆಷ್ಟನ್ನೊ ಮಾಡುವರು; ಒಳ್ಳೆಯದು ! ಹಾಗೆಯೇ ಮಾಡಿ! ದಕ್ಷಿಣೆ ತಾಂಬೂಲಗಳನ್ನೂ, ಬಾಮನವನ್ನೂ ಮಾತ್ರ ಕೊಟ್ಟುಬಿಡಿ !

ಭದ್ರೆ :—ಈ ಪೂಜೆಯಲ್ಲಿ ಅದೆಲ್ಲವೂ ಸಿಕ್ಕುವುದಿಲ್ಲ !

ವಿದೂ :— ಹಾಗಾದರೆ ಪೂಜಾಫಲವನ್ನು ಚೆನ್ನಾಗಿಯೇ ಕಾಣುವಿರಿ! ನಾನೀಗಲೇ ನನ್ನ ಮಹಿಮೆಯನ್ನು ತೋರುವೆನು. ( ಹೊರಡಲು ಅನುವಾಗುವನು )

ಮಂದಾ :—ವೈಶಂಪಾಯನ! ಅದೇನು ನಿನ್ನಮಹಿಮೆ ?

ವಿದೂ :—ನನ್ನ ಮಹಿಮೆಯೆ ? ಹಾಗೆಯೆ ನೋಡುತ್ತಿರಿ ! ಮೋಹಿನಿಯು ಸಮೀಪದಲ್ಲಿಯೇ ಹೋಗುತ್ತಿರಬಹುದು; ಅವ

ಳನ್ನು ಕರೆತಂದು ನನ್ನ ಕೆಳೆಯನಾದ ಗೋವಿಂದನಿಗೆ ಈಗಲೇ ಮದುವೆ ಮಾಡುವೆನು. (ಹೊರಡುತ್ತಿರುವನು)

ಎಲ್ಲರೂ :- (ಆತುರದಿಂದ) ಅಯ್ಯಾ! ಬ್ರಾಹ್ಮಣ! ಬೇಡ ಬೇಡ! ಹಾಗೆ ಮಾಡಬೇಡ! ನಿನ್ನ ಇಷ್ಟದಂತೆ ದಕ್ಷಿಣೆಯನ್ನು ಸಮರ್ಪಿಸುವೆವು, ಕುಳಿತುಕೋ!

ವಿದೂ :—ಹಾಗೆಯೇ ಆಗಲಿ (ಕುಳಿತುಕೊಂಡು) ನಿಮ್ಮ ಪದ್ಧತಿಯಂತೆ ಪೂಜೆಯನ್ನು ಮಾಡಿರಿ!

ಎಲ್ಲರೂ :— (ಮನ್ಮಥನನ್ನು ಪೂಜಿಸಿ) ಎಲೌ ಪೂಜ್ಯನಾದ ಪುಷ್ಪಾಯುಧನೆ!

ಕಂ॥ ಇದು ಚೂತಮಿದರವಿಂದಂ ।
ಮೃದುಳಾಶೋಕಂ; ಮನೋಜ್ಞನೀಲೋತ್ಪಲ ಮಿಂ– ।
ತಿದು ಮಲ್ಲಿಗೆ; ಸಲೆಯಿೂ ಪು– ।
ಷ್ಪದ ಪಂಚಕಮಂ ಸಮರ್ಪಿಸುವೆವೆಲೆ ಮಾರಾ ॥೧೦೪॥

ಅಸಮಾಯುಧನೇ! ಪೊರೆ! ವಂ ।
ದಿಸಿ, ಬೇಡುವೆವೈ ಮನೋಜರಾಜ! ಸುತೇಜಾ! ।
ಬಿಸರುಹನೇತ್ರನ ಸಲೆ ತೋ– ।
ರಿಸಿ ದಯೆಯಿಂದಸುವನುಳಿಸು! ಕಾಡದೆ ವಿಭುವೇ ॥೧೦೫॥

(ಪ್ರಾರ್ಥಿಸಿ) ಎಲೈ ಬ್ರಾಹ್ಮಣ! ಈ ತಾಂಬೂಲವನ್ನು ಪರಿಗ್ರಹಿಸಿ ಚೆನ್ನಾಗಿ ಆಶೀರ್ವಾದ ಮಾಡು! (ಎಲ್ಲರೂ ನಮಸ್ಕರಿಸುವರು)

ವಿದೂ :— (ಸಂತೋಷದಿಂದ) ಎಲೌ ಬಾಲೆಯರಿರ! ನಿಮ್ಮ ಇಷ್ಟಾರ್ಥವು ಈಗಲೇ ಸಿದ್ಧಿಸಲಿ! ನಾನಿನ್ನು ಹೊರಡುವೆನು.

(ಹೊರಡುವನು.)

(ಗೋವಿಂದನು ಮೋಹಿನೀರೂಪಿನಿಂದಲೇ ಪ್ರವೇಶಿಸುವನು.)

ಎಲ್ಲರೂ —(ನೋಡಿ ಸಂಭ್ರಾಂತರಾಗಿ) ಅಕ್ಕಟಾ! ಇದೇನು? ಮೋಹಿನಿಯು ತಿರುಗಿ ಬಂದಳಲ್ಲ! ಈ ಸಲ ಇವಳನ್ನು ಮೋಸಗೊಳಿಸುವುದು ಹೇಗೆ ವೈಶಂಪಾಯನ! ರಕ್ಷಿಸು! ರಕ್ಷಿಸು!

ಗೋವಿಂ!—ಮಂಗಳಾಂಗಿಯರೇ! ಹೆದರಬೇಡಿರಿ! ಮೋಹಿನಿಯು ನಿಮ್ಮಿಂದ ಪರಾಜಿತಳಾಗಿ ಓಡಿದಳು! (ಅವಕುಂಠನವನ್ನು ತೆಗೆದು) ಅಬಲೆಯರೇ! ನನ್ನನ್ನು ಕ್ಷಮಿಸಿರಿ!

ಎಲ್ಲರೂ :—(ಆಶ್ಚರ್ಯದಿಂದ) ಆಃ! ಈ ಮಾಧವನೇ ನಮ್ಮನ್ನು ವಂಚಿಸಿದನಲ್ಲ! (ಕೋಪವನ್ನು ನಟಿಸುತ್ತ) ಸಾಕು! ಸಾಕು! ಕೃಷ್ಣ! ವೇಷಧಾರಿಯಾದ ನಿನ್ನ ಗುಣವನ್ನು ಯಾರು ಬಲ್ಲರು?

ಗೋವಿಂದ :—(ಬಿಜ್ಜೊಬ್ಬರನ್ನು ಪ್ರಾರ್ಥಿಸುವನು).

*ವೃ॥ ಮುಳಿಸಿಂತೇಕೆಲೆ ಮಂದಯಾನೆ! ಮಣಿವೆಂ
ನಿನ್ನಂಘ್ರಿಯೊಳ್ ಮಾನಿನೀ! ।
ತೊಳಲುತ್ತುಂ ಬಳಲಿರ್ಪೆಯಲ್ತೆ? ಲಲಿತೇ!
ನೀನೀ ಸುಮೋದ್ಯಾನದೊಳ್ ।
ಲಲನೇ! ನಿನ್ನಡಿಯೊತ್ತಿ, ನೋವ ಕಳೆವೆಂ;
ಕಂಜಾಕ್ಷಿ! ತಂಗಾಳಿಯುಂ।
ನಳಿನೀಪತ್ರದೆ ಬೀಸಿ, ನಿನ್ನ ಬೆಮರಂ ನೀಗಿಪ್ಪೆನೀಗಳ್
ಸಖೀ! ॥೧೦೬॥

(ಎಲ್ಲರೂ ಮೌನದಿಂದ ದೂರ ನಿಲ್ಲುವರು.)

ಗೋವಿಂದ :— ಸಖಿಯರಿ! ಇನ್ನೂ ದಯೆ ಹುಟ್ಟಲಿಲ್ಲವೇ? ನೋಡಿರಿ! ಉಪಭೋಗಾರ್ಹಮಾದೀ ವಸಂತವನ್ನು ವ್ಯರ್ಥ ಮಾಡಬಾರದು; ಈ ಬೆಳದಿಂಗಳು ನನ್ನ ವಿರಹಾಗ್ನಿಯನ್ನು ಹೆಚ್ಚಿಸುತ್ತಿರುವುದು; ಆದುದರಿಂದ :—

ವೃ॥ ತಳಿರ್ವಸೆಯಲ್ಲಿ, ಕಮ್ಮಲರ ಹಾಸಿನೊಳಂ, ಪುಳಿಲೊಟ್ಟಿ
ಲೊಳ್, ಮುದಂ– ।
ದಳೆದು, ಲತಾನಿಕುಂಜದೆಡೆಯಾಡುತೆ, ಪಾಡುತೆ,
ನೋಡಿ, ಕೂಡಿ, ಪೊಂ– ।
ಪುಳಿ ಮಿಗಿಲುರ್ವೆ, ಪೂಸರಲನಾಟದೆ, ಬೇಟದೆ,
ಕುಂಟಜದೊಳ್ ಸುನಿ–।
ಶ್ಚಳಸುಖಮೊಂದುವಂ; ಮುರಿವ ಮಿಾಗಳೆ ಮಾರ
ಸಮಿಾರ ಸೋಮರಂ ॥೧೦೭॥

(ತೆರೆಯಲ್ಲಿ)

ಹಾ! ವಯಸ್ಯ! ಮಾಧವ! ರಕ್ಷಿಸು! ರಕ್ಷಿಸು!

(ಎಲ್ಲರೂ ಸಂಭ್ರಾಂತರಾಗುವರು)

---

* ರಾಗ.........ತಾಳ (ಅಟ್ ಮೈಕ್ಯಾಕರುಂ)
ಮುಳಿಸಿನಿತೇಕೆಲೆ ರಮಣೀ ॥ಪ॥ ಬಳಲಿದೆಯೇಂ ಮಾನಿನಿ । ತೊಳಲುತಲೀ ಸುನಂದನದೊಳ್ ॥ ೧ ॥
ನಿನ್ನಡಿಗೆರಗುವೆ ಕ್ಷಮಿಸಲೆ ಬಾಲೆ । ಚೆನ್ನೆ! ತಂಗಾಳಿಯ । ಬೀಸುವೆ ಹಿತದಿಂ ॥ ೧ ॥

ಗೋವಿಂದ :— ಇದೇನು? ಮಿತ್ರನಾದ ವೈಶಂಪಾಯನನ ಆರ್ತಧ್ವನಿ!

( ಪುನಃ ತೆರೆಯಲ್ಲಿ )

ಹಾ! ಮಿತ್ರನೆ! ಮಹಾಕ್ರೂರವಾದ ಒಂದು ವೃಷಭವು ಶೃಂಗದಿಂದಿರಿದು, ಗಂಟಲನ್ನು ಮೆಟ್ಟಿ ಕೊಲ್ಲುತ್ತಿರುವುದು! ಅಯ್ಯೋ! ಅಯ್ಯೋ!

( ಆಕಾಶದಲ್ಲಿ )

ಮಾಧವ! ಇವನು ವೃಷಭರೂಪಿಯಾದ ಅರಿಷ್ಟನೆಂಬ ರಾಕ್ಷಸನು! ಇವನನ್ನು ಸಂಹರಿಸು!

ಗೋವಿಂದ :— ಮಿತ್ರನೆ! ಹೆದರಬೇಡ! ಬಂದೆ ಬಂದೆ!

(ಹೋಗಿ ಅರಿಷ್ಟನನ್ನು ಸಂಹರಿಸುವನು)

ಗೋಪಿಯರು :— ಆಹಾ! ಮಾಧವನ ಸಾಹಸವು ಅದ್ಭುತವು! ಕಾಲಿನಿಂದ ಮೆಟ್ಟಿಯೆ ಆ ದುಷ್ಟನನ್ನು ಕೊಂದನಲ್ಲ!

(ಗೋವಿಂದನು ವೈಶಂಪಾಯನನೊಡನೆ ಪ್ರವೇಶಿಸಿ)

ವಿದೂ :— ವಯಸ್ಯ! ನನ್ನ ಒಡಲಿನಲ್ಲಿ ಪ್ರಾಣಗಳಿರುವುವೋ ಇಲ್ಲವೋ ನನಗೇ ಸಂದೇಹವಾಗಿದೆ!

ಗೋವಿಂ :— ವಯಸ್ಯ! ಇನ್ನೂ ಭಯವೇಕೆ!

ವಿದೂ :— ಗೋವಿಂದ! ಯಮನ ದಾಡೆಗೆ ಸಿಕ್ಕಿ ಬದುಕಿದೆನು! ಇಲ್ಲಿರುವುದಕ್ಕೇ ನನಗೆ ಭಯ! ನಡೆ, ಮನೆಯನ್ನು ಸೇರುವ.

ಗೋವಿಂ :— ಎಲೌ ಮಂಗಳೆಯರೆ! ನೀವೂ ಕಳವಳಗೊಂರುವಿರಿ; ಮನೆಗೆ ಹೋಗುವ ತೆರಳಿರಿ!

( ಎಲ್ಲರೂ ಹೊರಡುವರು )

## ಇದು ಪಂಚಮಾಂಕವು

---

## ಷಷ್ಠಾಂಕವು

( ಚಿಂತಾಕ್ರಾಂತನಾದ ಕಂಸನು ಮಂತ್ರಿಗಳೊಡನೆ ಪ್ರವೇಶಿಸುವನು )

ಕಂಸ :— * ಮಂತ್ರಿಗಳೆ ! ನನ್ನಂತಹ ದುರದೃಷ್ಟವಂತರು ಲೋಕದಲ್ಲಿಲ್ಲ !

ಅಕ್ರೂರ :—ಪ್ರಭು! ಅದೃಷ್ಟವನ್ನು ಬಲ್ಲವರಾರು ?

ಕಂಸ :—ಅಕ್ರೂರನೆ! ನನ್ನ ಶತ್ರುನಿಗ್ರಹಕ್ಕಾಗಿ ಕಳುಹಲ್ಪಟ್ಟ ಮಹಾವೀರರಾದ ದೈತ್ಯಭಟರೂ ನನ್ನ ನಿರ್ಭಾಗ್ಯತೆಯಿಂದಲೆ ಅಲ್ಲವೆ ಅಲ್ಪಾಯುಗಳಾದುದು!

ಅಕ್ರೂರ :—ಪ್ರಭು! ಆಯುಸ್ಸಿನ ಪರಿಮಾಣವು ಈಶ್ವರಾಧೀನವು! ಇದಕ್ಕೆ ಚಿಂತಿಸಲೇಕೆ ?

ಕಂಸ :—ಕೃಶಾನುವೆ! ಕ್ಷಣಕ್ಷಣಕ್ಕು ನನ್ನ ಮೃತ್ಯು ಸನ್ನಿಹಿತವಾಗುತ್ತಿರುವುದೇನೋ ?

ಕೃಶಾನು :—ಮಹಾರಾಜನೆ! ಶತ್ರು ಭೀತಿಯನ್ನು ಬಿಡು! ನಿನ್ನನ್ನು ಇದಿರಿಸಿದ ವೀರನು ಬದುಕಿಹೋಗುವುದನ್ನು ನಾನು ನೋಡುವೆನು.

ಕಂಸ :—ಕೃಶಾನುವೆ! ನನ್ನ ಹಗೆ ಅಭಿಮುಖನಾಗುವವರೆಗೂ ಹೇಗೆ ನಿಶ್ಚಿಂತನಾಗಿರಲಿ? ನನ್ನ ಶತ್ರು ನನ್ನ ಹೃದಯದಲ್ಲಿಯೇ ನೆಲಸಿ, ಚಿತ್ತವನ್ನು ಶೋಷಣಗೊಳಿಸುತ್ತಿರುವನಲ್ಲ! ಆ ಪಾಪಿಯು ಯಾವಾಗ ಯಾವರೂಪಿನಿಂದ ಕಾಣಿಸಿಕೊಳ್ಳುವನೋ ಕಾಣೆನೇ ? ನನಗಾದರೂ ಆಹಾರವು ಕಹಿಯಾಯ್ತು; ನಿದ್ರೆಯು ದೂರವಾಯ್ತು; ಏನುಮಾಡಲಿ ? ಎಲ್ಲಿ ಹೋಗಲಿ ?

ಅಕ್ರೂರ :- ಪ್ರಭುವೆ! ನೀನು ಹೀಗೆ ಚಿಂತಾಕುಲನಾಗಿದ್ದರೆ ರಾಜಕಾರ್ಯಗಳು ಹೇಗೆ ನಡೆಯುವುವು ?

ಕಂಸ :—ಅಕ್ರೂರನೆ! ರಾಜಕಾರ್ಯಗಳು ಹಾಳಾಗಲಿ! ಆಯವ್ಯಯಗಳ ವಿಚಾರವು ನನಗೆ ಬೇಕಾಗಿರುವುದಿಲ್ಲ; ಬಾಳಿನಲ್ಲಿಯೇ ನನಗೆ ನಂಬಿಕೆಯಿಲ್ಲದಿರುವಾಗ ಪ್ರಜೆಗಳ ಸುಖದುಃಖಗಳು ನನಗೇಕೆ! ಇನ್ನು ದಿಗ್ವಿಜಯಾಕಾಂಕ್ಷೆಯೂ ನನಗಿಲ್ಲ; ಬಂಧು ಮಿತ್ರರ ಸುಖಗೋಷ್ಠಿಗಳು ನನಗೆ ಸೇರವು !

ಕೃಶಾನು :—ಮಹಾರಾಜನೆ ! ಸಮಯಗಳಲ್ಲಿ ಇತಿಕರ್ತವ್ಯತಾಜ್ಞಾನಶೂನ್ಯರಾಗಿ ಚಿಂತಿಸುತ್ತ ಕುಳಿತುಕೊಳ್ಳುವುದು ವೀರಪುರುಷರ ಲಕ್ಷಣವಲ್ಲ. ಯಥೋಚಿತವಾದ ಉಪಾಯಗಳಿಂದ ಕಾರ್ಯವನ್ನು ಸಾಧಿಸಲು ಪ್ರಯತ್ನಿಸಬೇಕಾದುದು ಯುಕ್ತವು; ಹಾಗಲ್ಲದೆ ಮನೋಶೋಕದಿಂದ ನರಳುವುದಾದರೆ ದೇಹಾರೋಗ್ಯವು ಕೆಡುವುದು; ಮೃತ್ಯುವು ತಾನಾಗಿಯೇ ಸಂಘಟಿಸುವುದು.

ಅಕ್ರೂರ :—ಮಹಾಪ್ರಭು! ಕೃಶಾನುವಿನ ಮಾತು ಸತ್ಯ! ದುಶ್ಚಿಂತೆಯೇ ಪ್ರಬಲಶತ್ರು! ಈ ಶತ್ರುವನ್ನು ನಿಗ್ರಹಿಸಬೇಕಾದುದೇ ಮುಖ್ಯ !

ಕಂಸ :—ಮಂತ್ರಿಗಳೆ! ಈ ಸಮಾಧಾನೋಕ್ತಿಗಳು ನಿಜವಾಗಿ ನೋವಿಗೆ ಈಡಾಗದವರ ಬಾಯಿಂದ ಬರತಕ್ಕವುಗಳು ಅಷ್ಟೆ! ಇವುಗಳಿಂದ ಶಾಂತಿಯು ಹೇಗೆ ಲಭಿಸುವುದು.

ಅಕ್ರೂರ :—( ಆತ್ಮ ) ಅಹ! ಮೃತ್ಯುವನ್ನು ಪುರಸ್ಕಾರದಿಂದ ಬರಿಮಾಡಿಕೊಳ್ಳುವವರಿಗೆ ಏನು ಹೇಳುವುದು? (ಚಿಂತಿಸಿ) ಅಜ್ಞಾನವು ವಿವೇಕವೆಂಬ ವನಕ್ಕೆ ಕಾಳ್ಗಿಚ್ಚಲ್ಲವೆ? ಲೋಕದಲ್ಲಿ ದೇಶಾಭಿಮಾನಿಗಳ ವ್ಯಾಪಾರಗಳು ವಿಚಿತ್ರಗಳಾಗಿರುವುವು! (ಪ್ರಕಾಶ) ಮಹಾರಾಜನೆ! ಇತರರ ಸಮಾಧಾನೋಕ್ತಿಗಿಂತಲೂ ತಾನಾಗಿಯೇ ಪಡೆಯುವುದು ಶ್ರೇಯಸ್ಕರವು!

---

* ರಾಗ......... ತಾಳ ( ಆಯಿ ಮುಜೆದರ ದೇಜಿಗರ್ನೆಸಕಾಯ )

ಸ್ವಾಂತವನೆಂತುನಾಂ ಸಂತೈಸೆ ॥ ನಯ್ಯೊ। ಚಿಂತೆಗೆ ಪಾರವನಾಕಾಣೆ ॥ಪ॥ ಅಯ್ಯೊಮಾಧವ ನೆನ್ನಕೊಲ್ಲ ಅಯ್ಯೊ । ಚಿಂತೆಗೆ ಪಾರವನಾಕಾಣೆ ॥ ಅ ॥ ಅಹೋಹೋ ಮಾಯಾವಿಗಳ್ ಮಹಾವೀರರ್‌ಮಡಿದರ್ ಗಡಾ । ಮನ್ನಿಮಿತ್ತಂ । ಮಹಿಯೊಳ್ ನಿರ್ಭಾಗ್ಯನಾಂ ಮಹಾದುಃಖವಾಂತೆಂ ॥ ಎಲ್ಲಿ ಪುಟ್ಟಿರುವನಯ್ಯೊ । ಎನ್ನಪಗೆಯಾದಹರಿ । ಏತು ನಾನು ತಿಳಿಯುವೆನೋ ॥ ಚಿಂತೆಯನ್ನು ನೀಗುವೆನೊ? । ಕಂತು ಜನಕನ । ನೆಂತುಕೊಲ್ವೆ ಬಾಳ್ವೆನಯ್ಯೊ । ಸಂತಸವದೆಂತೊ ॥ ಅಯ್ಯೊ । ಚಿಂತೆಗೆ ಪಾರವನಾಕಾಣೆ ।'

( ನಾರದರು ಪ್ರವೇಶಿಸುವರು. )

*ವೃ॥ ನಿತ್ಯಾನಂದ! ನಿರಾಮಯ! ನಿರುಪಮ!
ಲೀಲಾಮಾನುಷವಿಗ್ರಹ! ಭೋ ।
ಸತ್ಯಾಧಾರ! ಸರೋರುಹಲೋಚನ!
ಸಂತತಭಕ್ತೋದ್ಧಾರ! ವಿಭೋ!॥
ಸ್ತುತ್ಯಾನಂತಗುಣಾರ್ಣವ! ನಿರ್ಮಲ!
ದೇವಪರಾತ್ಪರ! ಪಾಲಯ! ಭೋ।
ನಿತ್ಯೋದ್ಯತ್ಪ್ರಭ! ಧೃತವರಕೌಸ್ತುಭ!
ಶಾಂತಾಕಾರಸನಾತನ! ಭೋ ॥೧೦೮॥

ಕಂಸ:— ( ಆಸನದಿಂದೆದ್ದು ) ಪೂಜ್ಯರಾದ ಮಹರ್ಷಿಗಳಿಗೆ ವಂದಿಸುವೆನು. (ವಂದಿಸಿ) ಈ ಭದ್ರಪೀಠವನ್ನಲಂಕರಿಸಬೇಕು.

ನಾರದ:— ಸಂತೋಷ! ಸಂತೋಷ! ( ಕುಳಿತು ) ಎಲೈ ರಾಜನೇ ಕ್ಷೇಮವೇ!

ಕಂಸ:— ಪೂಜ್ಯರೆ! ಕ್ಷೇಮವೆಂಬುದು ನನಗೆ ಸ್ವಪ್ನದಲ್ಲಿಯೂ ದುರ್ಲಭವಾಗಿರುವುದು.

ನಾರದ:—( ಆತ್ಮ ) ಅಹ! ನಿಶ್ಚಯ ನಿಶ್ಚಯ! ಮುಮುಕ್ಷುಗಳಿಗೆ ಸುಲಭವಾದ ನಿತ್ಯಾನಂದವು ಬದ್ಧಜೀವಿಗಳಿಗೆ ಹೇಗೆ ಲಭಿಸುವುದು ? ಲೋಕವ್ಯವಹಾರದ ಕುಶಲಪ್ರಶ್ನೆಯೇ ಅದು ದುರ್ಲಭವಾದುದೆಂದು ಪ್ರತಿಪಾದಿಸುವುದಕ್ಕೆ ಸಾಕು! (ಪ್ರ) ಎಲೈ ರಾಜನೇ! ಇದೇಕೆ ಹೀಗೆ ಹೇಳುವೆ? ನೀನು ಸಕಲ ವೈಭವಸಂಪನ್ನನಾಗಿರುವೆಯಲ್ಲವೇ ?

ಕಂಸ:—ಮಹಾತ್ಮರೆ! ನನ್ನ ವೈಭವವೇ ನನ್ನನ್ನು ದುಃಖಕ್ಕೀಡುಮಾಡುತ್ತಿರುವುದು!

ನಾರದ:— ( ಆತ್ಮ ) ಸತ್ಯ! ಸತ್ಯ! ಲೌಕಿಕ ವೈಭವಗಳು ದುಃಖರೂಪಗಳೇ ಸರಿ! (ಪ್ರ) ರಾಜನೆ! ಎಲ್ಲೆಲ್ಲಿಯೂ ದಿಗ್ವಿಜಯವನ್ನು ಪಡೆದ ನಿನಗೆ ಇನ್ನು ಯಾವ ಕೊರತೆಯುಂಟು ?

ಕಂಸ:— ಪೂಜ್ಯರೆ! ನನ್ನ ದಿಗ್ವಿಜಯಗಳೇ ನನ್ನ ನಾಶಕ್ಕೆ ಕಾರಣವಾಗಿರುವುವಲ್ಲ!

ನಾರದ: - ಏಕೆ ?

ಕಂಸ:— ದೇವರ್ಷಿಯೆ! ನನ್ನಿಂದ ಜಿತರಾದ ದೇವತೆಗಳ ಮೊರೆಯನ್ನು ಕೇಳಿ ಆ ಮಾಧವನು ನನ್ನನ್ನು ಕೊಲ್ಲಲು ಭೂಮಿಯಲ್ಲಿ ಅವತರಿಸಿರುವನಂತೆ! ನನ್ನ ವಿಪತ್ತನ್ನು ನೆನೆನೆನೆದು ಪರಿತಪಿಸುತ್ತಿರುವೆನು

ನಾರದ:— ಎಲೈ ರಾಜನೆ! ಇದಕ್ಕಾಗಿ ಧೀರರಿಗೆ ಚಿಂತೆಯೇಕೆ ? ಹೇಗೂ ಸಾವು ಸಿದ್ಧವು! ಇದನ್ನು ತಿಳಿದು ಮನುಷ್ಯರು ಜನ್ಮ ಸಾರ್ಥಕ್ಯದ ಮಾರ್ಗವನ್ನು ನೋಡಿಕೊಂಡು ಮೃತ್ಯುವನ್ನು ಪ್ರಿಯವಾದ ಅತಿಥಿಯಂತೆ ಇದಿರುನೋಡುತ್ತಿರಬಹುದಲ್ಲವೆ ?

ಕಂಸ:—ನಾರದರೆ ! ಚೆನ್ನಾಗಿ ಹೇಳಿದಿರಿ! ನನ್ನ ಶತ್ರು ನನ್ನನ್ನು ಕೊಲ್ಲುವನೆಂಬುದನ್ನು ನೆನೆದುಕೊಂಡರೆ ಎದೆ ಬಡಿದುಕೊಳ್ಳುತ್ತಿದೆ.

ನಾರದ:—ಹುಚ್ಚನೆ! ನಿನ್ನ ಅಭಿಮತವನ್ನು ಹೇಳು! ನಿನಗೆ ಎಷ್ಟು ದಿನಗಳು ಬದುಕಬೇಕೆಂಬ ಆಸೆಯಿದೆ ? ಆಮೇಲೆಯಾದರೂ ಮೃತ್ಯು ಸಿದ್ಧವಾಗಿಯೇ ಇರುವುದಲ್ಲವೆ ?

ಕಂಸ:—ಮುನಿಯೆ! ನನ್ನ ಶತ್ರುವಾರೆಂಬುದನ್ನು ಗುರುತಿಸಿ, ಕೊಂದಮೇಲೆ ನನಗೆ ಇನ್ನಾರ ಭಯವಿರುವುದು ?

ನಾರದ:— ಭ್ರಾಂತನೆ! ನಿನ್ನನ್ನು ಕೊಲ್ಲುವವನನ್ನು ನೀನು ಕೊಲ್ಲುವುದು ಸಾಧ್ಯವೆ ? ಹುಟ್ಟಿಸಿದವನು ಕೊಲ್ಲುವುದಕ್ಕೆ ಅಧಿಕಾರಿ! ನಿನಗಾಗಲಿ ಇತರರಿಗಾಗಲಿ ಅಂತಹ ಅಧಿಕಾರವಿಲ್ಲ.

ಕಂಸ:—(ಕೋಪದಿಂದ) ಅದು ಹೇಗಿಲ್ಲವೋ ತಿಳಿಯುವೆನು ನನ್ನ ಶತ್ರುವನ್ನು ತೋರಿಸಿರಿ! ಆಮೇಲೆ ನೀವೇ ಕಾಣುವಿರಿ!

---

* ರಾಗ ... ... ತಾಳ ( ಆನಂದಾಚಾ ಕಂದ ಹರಿಲಾ ) ಎಂಬಂತೆ

ಶ್ರೀಮಾಧವ ಗೋವಿಂದ ನಿರುಪಮ ನಿತ್ಯಾನಂದ ನಿರಾಮಯ ಭೋ ॥ ಪ ॥ ಲೀಲಾ, ಮಾನುಷ, ವಿಗ್ರಹ, ಚಿನ್ಮಯ ಪಾಲಯ ದೇವ ವಿಭೋ! ॥ ಅ ॥ ವೇದವಿನುತಚರಣಾ॥ ವಿದ್ಯಾ, ಮಂಗಲ, ವಿನೋದನ, ಶೀಲ, ಸಂತತವಿಶ್ವಾಕಾರ ವಿಭೋ ॥ ೧ ॥ ಶ್ರೀನಿಲಯ ಶುಭಕಾಯನ । ದೀನದಯಾಪರ ದಾನವಭೀಕರ ಸತ್ಯಾಧಾರ ಸನಾತನ ಭೋ ॥ ೨ ॥

ನಾರ:— ಅಯ್ಯೋ! ಹುಚ್ಚಪ್ಪ! ನಿಮ್ಮ ತಾತ ಮುತ್ತಾತಂದಿರಲ್ಲಿ ಯಾರಾದರೂ ಬದುಕಿರುವವರನ್ನು ತೋರಿಸು! ನಿನ್ನ ಬಾಳಿಗೂ ಅವೇ ಸಾಕ್ಷಿ!

ಕಂಸ:— ನಾರದರೆ! ನನ್ನ ಸಾಮರ್ಥ್ಯವು ಯಾವ ಶತ್ರುವಿಗೂ ಜಗ್ಗುವುದಲ್ಲ!

ಕಂ॥ ಮೃಡನಕ್ಷಿಯು ನಂದಿಸುವೆಂ
ಜಡರುಹ ಸಂಭವನ ನೊಸಲ ತೊಡೆವೆಂ
ಕಡಿವೆಂ ತೋಳಂ ಹರಿಯಾ!
ಘಡ ಘಡ! ಬರ್ದುಕುವನದಾವನೆನ್ನಂ ಕೆಣಕಲ್
॥೧೦೯॥

ಆದರೆ ನನ್ನ ಹಗೆಯಾರೆಂದು ತಿಳಿಯದೆ ಚಿಂತಿಸಬೇಕಾಗಿದೆ.

ನಾರದ:— (ನಗುತ್ತ) ಸರಿಸರಿ! ಅದೇ ಕಷ್ಟ!

ಕಂಸ:— (ಆಶ್ಚರ್ಯದಿಂದ) ನಾರದರೆ! ಏಕೆ ನೀವೂ ಹೀಗೆ ಹೇಳುವಿರಲ್ಲ? ಆ ಮಾಧವನ ವೃತ್ತಾಂತವು ನಿಮಗೂ ಗೊತ್ತಿಲ್ಲವೆ?

ನಾರದ:— (ಸ್ವಲ್ಪ ವಿಲಂಬಿಸಿ) ಹುಂ! ನನಗೆ ಎಲ್ಲಿಯೋ ಸ್ವಲ್ಪಮಟ್ಟಿಗೆ ತಿಳಿದಿರುವುದು. ಅವನನ್ನು ನೀನೂ ತಿಳಿದೆಯಾದರೆ ಕೃತಾರ್ಥನಾಗುವೆ ದಿಟ!

ಕಂಸ:— (ಸಂತೋಷದಿಂದ) ಭಾಪು! ಭಾಪು! ಸುರಮೌನಿ! ನನ್ನ ಸಾಮರ್ಥ್ಯವನ್ನು ನಿಜವಾಗಿಯೂ ಊಹಿಸಿದಿರಿ! ಆ ಹರಿ ಯಾರೆಂದು ತಿಳಿದ ಕೂಡಲೆ ನಾನು ಕೃತಾರ್ಥನೇ ನಿಜ! ದಯೆಯಿಟ್ಟು ನಿಮಗೆ ತಿಳಿದ ಮಟ್ಟಿಗೆ ಅವನ ವಿಷಯವನ್ನು ತಿಳಿಸಿರಿ!

ನಾರದ:— ಕಂಸ! ಕೇಳು! ನಿನ್ನಿಂದ ಕಳುಹಲ್ಪಟ್ಟ ದೈತ್ಯವೀರರನ್ನು ಲೀಲಾಮಾತ್ರದಿಂದ ಸಂಹರಿಸಿದ ಮಹಾನುಭಾವನೇ ನಿನ್ನನ್ನೂ ಸಂಹಾರ ಮಾಡಲಿರುವನು.

ಕಂಸ:— ಅವರು ಕಾಲಾಧೀನರಾದರು!

ನಾರದ:— ನೀನೂ ಅವರಂತೆಯೇ!

ಕಂಸ:— (ಕೋಪದಿಂದ) ಆಕಾಲದ ಮೋರೆಯನ್ನು ತಿಕ್ಕಿ ಬರುವೆನು. (ಎಂದು ಗರ್ಜಿಸಿ ಎದ್ದು) ಎಲ್ಲಿ ನನ್ನ ಧನುಸ್ಸು!

ನಾರದ:— ಭೋಜರಾಜನೆ! ತಾಳು ತಾಳು ಕುಳಿತುಕೊ (ಕೈಹಿಡಿದು ಕುಳ್ಳಿರಿಸಿ) ನೀನು ಮಹಾವೀರನೇ ಆದರೂ ಮಹಾ ನಾಯಕರನ್ನು ಕಳೆದುಕೊಂಡುದರಿಂದ ನಖ ದುಷ್ಟ್ರಾಹೀನವಾದ ಸಿಂಹದಂತಿರುವೆ; ನೋಡು! ಹರ್ಷಿಷ್ಠನಾದ ನಿನ್ನ ಕೇಶಿಯ ವಧೆಯನ್ನು ಈಗ ತಾನೆ ನಾನು ಕಣ್ಣಾರ ನೋಡಿ ಬಂದೆನು.

ಕಂಸ:— ಹಾಹಾ! ಕೇಶಿಯೂ ಮಡಿದನೇ? (ದುಃಖಿಸುವನು)

ನಾರದ:— ಆ ಕೇಶವನ ಮುಷ್ಟಿಪ್ರಹಾರದಿಂದಲೇ ಗತಾಸುವಾದನು!

ಕಂಸ:— (ಅ) ಆಃ! ಆ ಕೇಶಿಯನ್ನು ನಿರಾಯುಧನಾಗಿ ಹೊಂದವೀರನು ಸಾಮಾನ್ಯನಲ್ಲ! (ಚಿಂತಿಸಿ) (ಪ್ರ) ನಾರದರೆ! ಆ ಕೇಶವನೆಲ್ಲಿರುವನು ಹೇಳಿರಿ!

ನಾರದ:— ಅವನಿಲ್ಲದಿರುವುದೆಲ್ಲಿ?

ಕಂದ:— ಅದಿರಲಿ! ನೀವು ಯಾವಸ್ಥಳದಲ್ಲಿ ಆ ಕೇಶವನನ್ನು ನೋಡಿದಿರಿ!

ನಾರದ:— ಭೋಜರಾಜ! ಗೋಕುಲ ಬೃಂದಾವನಕ್ಕೆ ಅಲಂಕಾರನಾದ ಗೋವಿಂದನೇ ನಿನ್ನ ಕೇಶಿಗೆ ಅಂತವನ್ನು ಕಾಣಿಸಿದವನು! ನಿನಗೂ ಅವನೇ!

ಕಂಸ:— ಏನು ಏನು ನಂದನ ಮಗನೇ! (ಆಶ್ಚರ್ಯಗೊಳ್ಳುವನು).

ನಾರದ:— ದೇವಕಿಯ ಮಗನು!

ಕಂಸ:— (ಭ್ರಾಂತನಾಗಿ) ದೇವಕಿಯು ಮಗನು! ಅವಳ ಗಂಡು ಮಕ್ಕಳೆಲ್ಲವನ್ನೂ ನಾನೇ ಕೊಂದೆನಲ್ಲವೆ? ಎಂಟನೆಯ ಮಗಳೇ ದುರ್ಗೆ! ಅವಳನ್ನು ನಾನು ಕೊಲ್ಲಲು ಎತ್ತಿಸಿದಾಗ ಆಕಾಶಕ್ಕೆ ಹಾರಿಹೋದ ವೃತ್ತಾಂತವು ನಿಮಗೆ ತಿಳಿದೇ ಇರುವುದಷ್ಟೆ?

ನಾರದ:— ಕಂಸ! ಇಷ್ಟು ಮಾತ್ರವೇ ನಿನಗೆ ತಿಳಿದಿರುವುದು; ಗುಪ್ತವಿಚಾರವಾಗಿ ನೀನೇನು ಬಲ್ಲೆ? ಪಾಪ!

ಕಂಸ:— ನಾರದರೆ! ನಾನರಿಯದಂತೆ ನಡೆದಿರುವ ರಹಸ್ಯವೇನು? ದಯೆಯಿಟ್ಟು ತಿಳಿಸಿರಿ!

ನಾರ:—

ಕಂ॥ ಆತನೆ ದೇವಕಿಯುಷ್ಟಮ—।
ಜಾತಂ ಶ್ರೀ ಕೃಷ್ಣನವನನಾನಸುದೇವಂ।
ಭೀತಿಯೊಳೊಯ್ದು ಯಶೋದಾ—।
ಜಾತೆಗೆ ಪಲ್ಲಟಿಸಿ ತಂದನಾಕೆಯ ಭರದಿಂ ॥೧೧೦॥

ಅಂದಿನಿಂದಲೂ, ನಂದನೂ ತನ್ನ ಮಗನೆಂದೇ ಆ ವಾಸುದೇವನನ್ನು ಸಲಹುತ್ತಿರುವನು.

ಕಂಸ:— * ( ಮಹಾ ಕೋಪದಿಂದ ) ಆ ಕಪಟಿಯಾದ ವಸುದೇವನೆ! ನಿನ್ನ ಮನವನ್ನು ಮರೆಮಾಡಿ ನನ್ನನ್ನು ವಂಚಿಸಿದೆಯಾ! ನಿಮ್ಮ ವಿವಾಹ ಸಮಯದಲ್ಲಿ ನುಡಿದ ಅಶರೀರವಾಣಿಯನ್ನು ಕೇಳಿ ಆ ನಿರ್ಭಾಗ್ಯಳಾದ ದೇವಕಿಯನ್ನು ಸಂಹರಿಸಲು ಯತ್ನಿಸಿದಾಗ ಬೇಡಿಕೊಂಡು ಅವಳನ್ನು ಬಿಡಿಸಿ, ಹೀಗೆ ಮಾಡಬಹುದೇ ?

ಕಂ॥ ಅಕಟಾ ಕುಟಿಲನೆನಿಪ್ಪಾ ।
ನಕದುಂದುಭಿಯೆನ್ನ ವಂಚಿಸೀ ಪರಿಗೈದಂ ।
ಅಕಳಂಕಿನಿಯುಂತಿರೆ ದೇ– ।
ವಕಿಯುಂ ತಾನುಸಿತನಿರ್ದಳುಸಿರದೆ ನನ್ನೊಳ್ ॥೧೧॥

ಆ ವಸುದೇವನು "ಬೂದಿ ಮುಚ್ಚಿದ ಕೆಂಡವು !! ದೇವಕಿಯ ಹೃದಯವು ಹಾಲಾ ಹಲವು!!" ( ಪುನಃ ಸ್ವಲ್ಪ ಸಮಾಧಾನದಿಂದ ) ಇನ್ನು ಈಗ ಅದನ್ನು ಚಿಂತಿಸಿ ಪ್ರಯೋಜನವೇನು? ಆಗಲಿ! ಕಾಲವು ಮೀರಿ ಹೋಗಲಿಲ್ಲ! ಆ ಕುಟಿಲ ಬಾಲಕನನ್ನು ಹಿಡಿದು ಕೊಲ್ಲುವುದು ನನಗೆಷ್ಟರ ಕೆಲಸವು ? ಹಗೆ ಯಾರೆಂಬುದನ್ನು ತಿಳಿಯದೆ ಈ ವರೆಗೂ ಸುಮ್ಮನೆ ಚಿಂತಿಸಿದೆನು; ಇನ್ನು ಆ ಕೃಷ್ಣನಿಗಾಗಿ ನಾನು ಭಯಪಡಬೇಕಾಗಿಲ್ಲ; ( ಪ್ರ ) ನಾರದರೆ! ತಮ್ಮಿಂದ ನನ್ನ ದುರ್ಭೀತಿಯು ತೊಲಗಿತು ! ಇನ್ನು ಆ ಗೊಲ್ಲರ ಹುಡುಗನ ಮಾತನ್ನು ನಾನು ನೋಡಿಕೊಳ್ಳುವೆನು.

ನಾರದ:— ರಾಜನೆ! ನಿನ್ನ ಇಷ್ಟಬಂದಂತೆ ಮಾಡು; ನಾನು ಹೊರಡುವೆನು ! ( ಹರಿನಾಮವನ್ನು ಪಾಡುತ್ತ ಹೊರಡುವನು. )

ಕಂಸ:— ಕೃಶಾನುವೆ ! ಆ ನನ್ನ ಹಗೆಯನ್ನು ( ಅಷ್ಟಕ್ಕೆ ನಿಲ್ಲಿಸಿ ) ಆ ದನ ಕಾಯುವವನನ್ನು ಹಗೆಯೆಂದು ಹೇಳಿಕೊಳ್ಳಲು ನಾಚಿಕೆಯಾಗುವುದು; ಆ ಹುಡುಗನನ್ನು ಸ್ವಾಧೀನಪಡಿಸಿಕೊಂಡು ಹೇಗೆ ಕೊಲ್ಲಬೇಕು ?

ಕೃಶಾ:— ಮಹಾರಾಜನೆ! ಆ ಗೊಲ್ಲರವನು ನಮ್ಮ ಕಯ್ಯಲ್ಲಿಯೇ ಇರುವನಲ್ಲವೆ ? ಅವನನ್ನು ತೀರಿಸಿಬಿಡುವುದಕ್ಕೆ ಆಲೋಚನೆಯೇಕೆ ?

ಕಂಸ:— ಮಂತ್ರಿಯೆ ! ಅವನನ್ನು ಕೊಲ್ಲುವುದು ಅಸಾಧ್ಯವೆಂದು ನಾನು ಭಾವಿಸಲಿಲ್ಲ; ನನ್ನ ಗೌರವಕ್ಕೆ ತಕ್ಕ ಹಾಗೆ ನಡೆದುಕೊಳ್ಳಬೇಕಲ್ಲವೆ? ಏನಾದರೂ ಸಂಧಿಯನ್ನು ಮಾಡಲೆ? ಇಂದ್ರನನ್ನು ಜಯಿಸಿದ ನಾನು ಆ ಹುಡುಗನೊಡನೆ ಸಂಧಿಮಾಡಿಕೊಳ್ಳುವುದು ಚೆನ್ನಾಗಿಲ್ಲ! ಸೋದರಳಿಯನೆಂಬ ಸಂಬಂಧವನ್ನು ಸೂಚಿಸಿ ಕರೆಯಿಸಲೆ ? ಆ ಹೀನ ಜಾತಿಯಲ್ಲಿ ಬಳೆದವನನ್ನು ಹಾಗೆ ಭಾವಿಸುವುದು ಅಪಮಾನಕರವು ! ಶಸ್ತ್ರಧಾರಿಯಾಗಿ ಹೋಗಿ ನಾನೇ ಅವನನ್ನು ಕೊಲ್ಲಲೆ ? ಯಮನನ್ನೂ ಲಕ್ಷ್ಯಮಾಡದ ನಾನು ಆ ಹುಡುಗನ ಮೇಲೆ ಹೇಗೆ ಹೋಗಲಿ! ಸಾಮೋಪಾಯದಿಂದ ಗೆಲ್ಲಲೆ ? ಹಸುಗೂಸಿನಲ್ಲಿ ಈ ರಾಜನೀತಿ ಏತಕ್ಕೆ ಕೆಲಸಕ್ಕೆ ಬರುವುದು ? ದಾನೋಪಾಯವು ಬೆಣ್ಣೆಯನ್ನು ಕದ್ದು ತಿಂದು ಸಂತುಷ್ಟನಾಗುವವನಲ್ಲಿ ಫಲವಿಲ್ಲ । ಭೇದೋಪಾಯವು ದನಕಾಯುವ ಮಡೆಯನಲ್ಲೇಕೆ? ದಂಡೋಪಾಯಕ್ಕೆ ಆಕಳನ್ನು ಬೆದರಿಸುವ ಕೋಲನ್ನು ಹಿಡಿದಿರುವ ಹುಡುಗನು ತಕ್ಕವನಲ್ಲ ! ಇನ್ನು ಯಾವುದರಿಂದ ಕಾರ್ಯವನ್ನು ಸಾಧಿಸಬೇಕು.

ಕೃಶಾನು :—ಮಹಾರಾಜನೆ ! ಬೇರೆ ಉಪಾಯವೇಕೆ ? ಬಿಲ್ಲು ಹಬ್ಬದ ದಿನಗಳು ಸಮೀಪಿಸಿರುವುವಲ್ಲವೆ ? ಈ ಹಬ್ಬಕ್ಕಾಗಿ ಎಲ್ಲ ಗೊಲ್ಲರನ್ನೂ ಬರಮಾಡಿದರೆ ಆ ಹುಡುಗನೂ ಬರುವನು ? ಆ ಮೇಲೆ ಏನಾದರೂ ಮಾಡಬಹುದು.

ಕಂಸ:— ( ಸಂತೋಷಿಸಿ ) ಭಾಪು ! ಭಾಪು ! ಕೃಶಾನುವೆ ! ಒಳ್ಳೆಯ ಯುಕ್ತಿಯನ್ನು ಸೂಚಿಸಿದೆ! ಇನ್ನು ನನ್ನ ಹಗೆ ಮಡಿದನು.

ಕಂ॥ ಕೊಂದಾ ಕೃಷ್ಣನನಾನಕ ।
ದುಂದುಭಿಯುಂ ದೇವಕಜೆಯುನಾನಂವನಾಮುಂ ।

---

ರಾಗ........ತಾಳ

* ಘಡ ಘಡ! ಕಡುಕಪಟಗಳರವರಿವುದೆಂಕಟಾ ॥ಪ॥ ಅರರೆ! ನಯದೆ ಭಯದೆ ರಮವೆ ನುಡಿಯನೆ ವಸುದೇವಂ । ದುರುಳನ ಮನ । ದವವನು ಕಾಣ । ದಿರುತಿಹೆನಲೆ । ನೆರೆಧರೆಯೊಳು ॥೧॥ ಮೋಸಹೋದೆನೆಲಲೆ ಇದಕೆ ಯೋಚಿಸಿದೊಡೆ ಫಲವೇಂ । ಆ ಸರಸಿಜನಾಭನ ಪಿಡಿದೋ ಸರಿಸದೆ ಕೊಲ್ವೆನಿನ್ನು ॥೨॥

ನಂದಿಸುವೆಂ! ಕೋಪಾಗ್ನಿಯು ।
ನಾಂಡುರುಳರ ರಕ್ತ ಜಲದಿ ನೀನಸುಮತಿಯೊಳ್
॥೧೧೨॥

ಎಲೈ ಅಕ್ರೂರನೆ! ನೀನು ಪ್ರಭುಕಾರ್ಯ ಧುರಂಧರನೆಂಬು ದನ್ನು ಚೆನ್ನಾಗಿ ಬಲ್ಲೆನು; ನೀನು ನಾಳೆಯೇ ಗೋಕುಲಕ್ಕೆ ಹೋಗಿ ಬಿಲ್ಲು ಹಬ್ಬಕ್ಕಾಗಿ ಹಾಲು ಮೊಸರುಗಳನ್ನು ತೆಗೆದು ಕೊಂಡು ಎಲ್ಲಗೊಲ್ಲರೂ ಬರಬೇಕೆಂದು ತಿಳಿಸಿ, ಮುಂದಾ ಗಿಯೇ ರಾಮಕೃಷ್ಣರನ್ನು ರಥದ ಮೇಲೆ ಕುಳ್ಳಿರಿಸಿಕೊಂಡು ಕರೆದುಕೊಂಡು ಬಾ!

ಅಕ್ರೂರ:— ಪ್ರಭುವಿನ ಅಪ್ಪಣೆಯಂತೆ ನಡೆಯುವೆನು.

( ಕಿವಿಯಲ್ಲಿ )

ಕಂ॥ ಮಂಡೇ ಹಾದಿಗಳೀಯರ ।
ವಿಂದಾಪ್ತನ ಪೀಡೆಗುಜ್ಜುಗಿಪುದುಂ ಪಾವಣ್ ।
ಚಂದದೊಳಿತ್ರಘ್ಯಾಂಬುಗ ।
ಳಿಂವಂ ಪರಿಭವನುನಾಂತರೇನೆಂವೆಂತಿತಂ ॥೧೧೩॥

ಕಂಸ:— ಸಂಜೆಯಾಯಿತು; ಪ್ರಕೃತೋಚಿತ ಕಾರ್ಯಗಳಿಗೆ ಹೊರಡುವ.

( ಎಲ್ಲರೂ ಹೊರಡುವರು. )

( ಅನಂತರ ಗೋಕುಲ ಪ್ರಯಾಣನಾದ ಅಕ್ರೂರನು ರಥದೊಡನೆ ಪ್ರವೇಶಿಸಿ )

ಅಕ್ರೂರ *:— ಅಹಾ! ನನ್ನ ಪುಣ್ಯಕ್ಕೆಣೆಯುಂಟೆ?

ವೃ॥ ಹರುಷಂ ಚಿತ್ತದೊಳೇರಿ, ಮೈಗೆ ಪುಳಕಂ
ತಾನೇರಲಾನಂದ ಶೀ ।
ಕರವಿಾ ಕಣ್ಣಳೊಳೇರಿ, ಕಾಂತಿ, ಮೊಗಕಂ
ಸಾರ್ದೇರಿ, ಜಿಹ್ವಾಗ್ರದೊಳ್ ।
ಭರದಿಂದೇರಿ, ಸಸಂಭ್ರಮುಪ್ಪುಲನಯುಕ್ತಾ
ನಂದನಾಮಂಗಳಾ ।
ಹರಿಪಾದಾಬ್ಜವನೀಕ್ಷಿಪೆಂ, ಧರಣಿಯೊಳ್
ಮೇಣಾವುದೆನ್ನೀಪ್ಸಿತಂ ॥೧೧೪॥

ಮಹರ್ಷಿಗಳು ಬಹುಕಾಲ ತಪಸ್ಸು ಮಾಡಿದರೂ ಮನ ದಿಂದ ಕಾಣಲಾರದ ಭಗವಂತನನ್ನು ನಾನು ಈಗ ಈ ಕಣ್ಣು ಗಳಿಂದಲೇ ನೋಡುವೆನಲ್ಲವೆ? ಆ ಪರಮ ಪುರುಷನು ತನ್ನ ಭಕ್ತರಿಗೆ ಎಷ್ಟು ಸುಲಭನಾಗಿರುವನು? ನಿರಾಕಾರನೂ, ನಿರ್ವಿ ಕಾರನೂ, ನಿತ್ಯಧ್ಯಾನೈಕ ಗಮ್ಯನೂ, ಆದ ಪರಮಾತ್ಮನು ಪಾಮರಾನುಗ್ರಹಕ್ಕಾಗಿಯೇ ಆಕಾರವನ್ನು ಧರಿಸಿ, ಶಂಖ ಚಕ್ರಧಾರಿಯಾಗಿ, ದಿವ್ಯ ಕಿರೀಟ ಕುಂಡಲ ಕಟಕಕೇಯೂರ ಹಾರಧರನಾಗಿ, ಪೀತಾಂಬರನಾಗಿ ನೀಲಮೇಘಶ್ಯಾಮನಾಗಿ ವಿರಾಜಿಸುತ್ತಿರುವನಲ್ಲವೆ? ಅಖಂಡ ವಿಶ್ವವ್ಯಾಪಿಯಾದ ಶ್ರೀಮನ್ನಾರಾಯಣನು ಅಶರೀರ ಮೂರ್ತಿಯಾಗಿ ನಂದನ ಅಂಗಳದಲ್ಲಿ ಆಡುವನಲ್ಲ! ಸಕಲಲೋಕಪಾಲಕನಾದ ಪ್ರಭುವು ಆ ಯಶೋದೆಯಿಂದ ಪಾಲಿತನಾಗುತ್ತಿರುವುದು ಎಂತಹ ವಿಚಿತ್ರ!! ನಿಸ್ಸಂಗನಾದ ಪರಬ್ರಹ್ಮನು ನಿರಂತರವೂ ಗೋಪಾ ಲಕರೊಡನೆ ಆಡುವವ ನೋಡವೆಂತಹುದು? !! ಇಂತಹ ಚಿನ್ಮಯನನ್ನು ಕೊಲ್ಲುವೆನೆಂದು ಬಗೆದಿರುವ ಕಂಸನು ಇನ್ನೆಂ ತಹ ಬುದ್ಧಿಹೀನನು?! ( ಆಕಾಶದಲ್ಲಿ ನೋಡಿ ) ಭಗವಂತನೇ! ನಿನ್ನ ಮಾಯೆಯಿಂದ ಮೋಹಿತವಾದ ಪ್ರಪಂಚವನ್ನು ನೀನೇ ಉದ್ಧರಿಸು! ( ಹೊರಟು ಬರುತ್ತ ) ಆಗಲೇ ಗೋಕುಲವು ಸನ್ನಿ ಹಿತವಾಯಿತು! ಮಂಗಳಕರವಾದ ಗೋಗಣದ “ ಡಂಬಾ ” ಎಂಬ ಶಬ್ದಗಳು ಮನೋಹರವಾಗಿವೆ! ಇನ್ನು ಆ ಪರಮ ಪುರುಷನ ಸುಂದರಾಕಾರವನ್ನು ಕಣ್ಣಾರ ನೋಡಿ, ಪಲ್ಲವ ದಂತಿರುವ ಪಾದಗಳನ್ನು ಕೈಯಾರಿ ಒತ್ತಿ ಆಲಿಂಗಿಸಿ, ಮನ ದಣಿಯ ಮಣಿದು, ಮುಂಡಾಡಿ ಕೊಂಡಾಡಿ ಆನಂದಗೊಳ್ಳು ವೆನು. ( ಸ್ವಲ್ಪನಡೆದು ಪುನಃ ಆಲೋಚಿಸಿ ) ಆ ಸ್ವಾಮಿಯು ನನ್ನನ್ನು ಭಕ್ತನೆಂದು ಪ್ರೀತಿಸುವನೋ? ದೈತ್ಯಸೇವಕನೆಂದು ತಿರಸ್ಕರಿ ಸುವನೋ? ( ಮತ್ತೆ ಆಲೋಚಿಸಿ ) ಆ ಮುಕುಂದನ ಅನುಗ್ರ ಹವು ವಿಚಿತ್ರವಾದುದು !

ಸ್ರ॥ ತೊರೆದು ಮಹಾಮುಖಸ್ಥಳವ ಗೋಪರ
ಗೋಹದ ಪಂಕದೊಳ್ ಮುದಂ ।
ಬೆರಸಿರುವಂ; ಬುಧಾವಳಿಯ ಸಂಸ್ತವಕಂ
ಮನನೀಯದಂ ನಿರಂ ।
ತರ ಪಶುಘೋಷಣಂಗಳೊಳೆ ಸಮ್ಮುದಿಪಂ;
ಮುನಿಚಿತ್ತದೊಳ್ ಸಮಂ ।

---

* ರಾಗ ಧನ್ಯಾಸಿ ಆದಿತಾಳ ( ಆರಿದಂ ತಿಳಿಹುವರೂ ) ಎಂಬಂತೆ

ಎನ್ನಯ ಸುಕೃತವನೇಂ ಬಣ್ಣಿಸೆನೊ ॥ಪ॥ ಧ್ಯಾನದೆ ಮುನಿಗಳು । ಕಾಣದೆ ಚಿಂತಿಪ ಶ್ರೀನಿವಾಸನ ನೀಗ, ನಾಕಾಣುವೆ ॥೧॥ ವಿಶ್ವಾಕಾರನ, ಶಾಶ್ವತನೆ ನಿಪನ “ ವಿಶ್ವವಿಧಾಯಕನಾ ” ನಾ ಕಾಣುವೆ ॥೨॥

ತಿರದೆ ಕರಂ ಪ್ರಜಾಂಗನೆಯುರೊಳ್ ಪ್ರವಿನೋದ
ದೊಳಿರ್ಪ ನಾವಗಂ ; ॥ ೧೧೫ ॥

ಪ್ರೀತಿಸುವ ಭಕ್ತರ ಹೃದಯವನ್ನು ಆ ಪ್ರಭು ತಾನೇ ಬಲ್ಲನು! ( ಬರುತ್ತ ) ಇದೆ ನಂದನ ಮನೆಯು! (ಮತ್ತೂ ನೋಡಿ) ಆಹಾ! ಇಲ್ಲಿ ಬಲದೇವ ಸಹಿತನಾದ ವಾಸುದೇವನು ಸುಖ ಸಲ್ಲಾಪಗಳಿಂದ ನಂದನನ್ನು ಆನಂದಗೊಳಿಸುತ್ತಿರುವನು.

ಕಂ॥ ನವನೀಲೋತ್ಪಲ ಮೂಲಂ ।
ಪ್ರವಿಮಲ ಶಿಖಿ ಪಿಂಛವಮೌಳಿ ಘನಲಸಿತಾಂಗಂ ।
ಭವದೂರಂ ಸುಕುಮಾರಂ ।
ಕುವಲಯದಳನೇತ್ರನಿವನ ಕಂಡೆಂ, ಕಂಡೆಂ ॥೧೧೬॥

( ಅನಂತರ ಬಲ ಕೃಷ್ಣರೊಡನೆ ನಂದನು ಪ್ರವೇಶಿಸುವನು ).

ನಂದ:— ವತ್ಸ! ಗೋವಿಂದ! ನಮ್ಮ ಗೋಗಣವು ನೆಮ್ಮದಿಯಾಗಿರುವುದೋ?

ಗೋವಿಂದ:— ತಂದೆಯೆ ! ಗೋವರ್ಧನರಾಜನ ಅನುಗ್ರಹದಿಂದ ನಮ್ಮ ಆಕಳು ಚೆನ್ನಾಗಿ ಮೇದು ಒಂದೊಂದು ಕೊಡ ಹಾಲನ್ನು ಕರೆಯುವುವು !

ನಂದ:— ಕೃಷ್ಣ! ನಿನ್ನ ಆರೈಕೆಗೆ ಸಂತೋಷಿಸುವೆನು; ವತ್ಸ! ಬಲಭದ್ರ! ನೀನು ಸಾಡುವ ವೃಷಭಗಳು ಹೇಗಿವೆ?

ಬಲ:— ತಂದೆಯೆ! ನನ್ನ ಗೂಳಿಗಳು ಸಿಂಹಗಳನ್ನಾದರೂ ಇದಿರಿಸುವಷ್ಟು ಬಲಿಷ್ಠಗಳಾಗಿ ಕಂಗೊಳಿಸುತ್ತಿವೆ. ಇವುಗಳಿಂದ ಪಶುಸಂವರ್ಧನ ಕಾರ್ಯವು ಬಹು ಚೆನ್ನಾಗಿರುವುದು. ಕಷ್ಟಸಹಿಷ್ಣುಗಳಾದ ವೃಷಭಗಳಿಂದ ಭೂಕರ್ಷಣವು ಚೆನ್ನಾಗಿ ನಡೆದು ಲೋಕವು ಸಮಸ್ತ ಆಹಾರ ವಸ್ತುಗಳನ್ನೂ ಸುಖವಾಗಿ ಪಡೆಯುತ್ತಿದೆ.

ನಂದ ಭಾಪು! ಭಾಪು! ಸಂಕರ್ಷಣ! ನಿನ್ನ ವ್ಯವಸಾಯುವು ಚೆನ್ನಾಗಿದೆ; ಲೋಕದಲ್ಲಿ ಪಶುಪಾಲನ ಭೂವ್ಯವಸಾಯುಗಳೇ ಸರ್ವೋತ್ತಮವಾದ ವೃತ್ತಿಗಳು! ಇತರ ವೃತ್ತಿಗಳೆಲ್ಲವೂ ಇವುಗಳನ್ನು ಅನುಸರಿಸಿರುವುವು ! ಆತ್ಮಸೌಖ್ಯಕ್ಕೂ ಪರೋಪಕಾರಕ್ಕೂ ಅರ್ಹವಾದ ಇಂತಹ ವೃತ್ತಿಗಳನ್ನು ತಿರಸ್ಕರಿಸಿ, ಇತರ ವಿಧಗಳಿಂದ ಜೀವನೋಪಾಯಗಳನ್ನು ಅಪೇಕ್ಷಿಸುವವರು ಸುಖವನ್ನು ಪಡೆಯಲಾರರು !

ಸೇವಕ:— (ಪ್ರವೇಶಿಸಿ) ಒಡೆಯನೆ! ಮಧುರಾಪುರದಿಂದ ಮಹಾ ಪ್ರಧಾನನಾದ ಅಕ್ರೂರನು ಬರುತ್ತಿರುವನು.

ನಂದ:— ಏನು ಮಂತ್ರೀಶ್ವರನಾದ ಅಕ್ರೂರನೆ? ( ಆಸನದಿಂದೆದ್ದು ) ವತ್ಸರೆ! ನನ್ನೊಡನೆ ಬನ್ನಿರಿ! ಆ ಮಹಾ ಪ್ರಧಾನನನ್ನು ತಕ್ಕ ಗೌರವದಿಂದ ಕರೆದುಕೊಂಡು ಬರುವ । ( ಸೇವಕನೊಡನೆ ) ಎಲೈ ಚಂದ್ರಸೇನನೇ! ನೀನು ಗೌರವಕ್ಕೆ ತಕ್ಕಂತೆ ಆಸನಗಳನ್ನು ಸಿದ್ಧಪಡಿಸಿರು!

ಸೇವಕ:— ಅಪ್ಪಣೆ! ( ಎಂದು ಹಾಗೆ ಮಾಡುವನು )

( ನಂದ ರಾಮಕೃಷ್ಣರೊಡನೆ ಹೊರಟು ಅಕ್ರೂರನೊಡನೆ ಪ್ರವೇಶಿಸಿ )

ನಂದ:— ಮಂತ್ರೀಂದ್ರನೆ ! ಸೇವಕನಾದ ನನ್ನನ್ನು ಅನುಗ್ರಹಿಸಿ ಇಷ್ಟು ದೂರದವರೆಗೂ ಬಿಜಯಮಾಡಿಸಿದುದಕ್ಕಾಗಿ ಬಹು ಕೃತಜ್ಞನಾಗಿರುವೆನು.

( ವಿನಯದಿಂದೆ ಮಣಿವನು ).

ಅಕ್ರೂರ:— ನಂದಗೋಪನೆ ಉಪಚಾರೋಕ್ತಿಗಳು ಸಾಕು; ಸಕಲ ಜಗದ್ಗುರುವಾದೀಮಹಾನುಭಾವನನ್ನು ಪಡೆದ ನಿನ್ನ ಸಮರಾರು?

( ಎಂದು ಕೈಜೋಡಿಸಿಕೊಂಡು )

* ವೃತ್ತ॥ ಆವನ ಪಾದಮಂ ಭಜಿಸಿ, ಸೌಖ್ಯಮನಾಂಪುದೆ
ದೇವ ಬೃಂದಮಂ ।
ತಾವನ ನಾಮವಂ ಜಪಿಸಿ, ಮುಕ್ತಿಗೆ ಸ್ವಲ್ಪುದೊ
ಮೌನಿಸಂಕುಲಂ; ।
ಆವನೋ ಸೃಷ್ಟಿಗಂ ಸ್ಥಿತಿಗೆ ಮೇಣ್ ವಿಲಯಕ್ಕಧಿ
ಕಾರಿಯಪ್ಪನಾ ।
ದೇವನಿವಂ ಗಡಾ! ಪಡೆದು ಕುಂಬಿಡುವೆಂ! ಪ್ರಭು
ಪಾದ ಯುಗ್ಮಕಾಂ ॥೧೧೭॥

(ಎಂದು ಗೋವಿಂದನ ಚರಣದಲ್ಲಿ ಸಾಷ್ಟಾಂಗ ಪ್ರಣಾಮವನ್ನುಮಾಡುವನು).

ಗೋವಿಂದ:— ಮಂತ್ರೀಂದ್ರನೆ! ಏಳು ಏಳು! ಬಾಲಕನಲ್ಲಿ ಹೀಗೆ ಮಾಡುವುದು ಸರಿಯೇ? ಈ ಪೀಠವನ್ನು ಅಲಂಕರಿಸು!

ಅಕ್ರೂರ:— (ಆನಂದ ಬಾಷ್ಪಗಳನ್ನು ಸುರಿಸಿ ) ಗುರುವೆ ! ನಿನ್ನ ಚರಣಾರವಿಂದ ಸನ್ನಿಧಿಯಲ್ಲಿ ಆವಾಗಲೂ, ನಿಂತಿರುವಷ್ಟು ಪುಣ್ಯವನ್ನು ನನಗೆ ಅನುಗ್ರಹಿಸು !

---

* ರಾಗ ಲಲಿತಾಂಗಿ ರೂಪಕತಾಳ (ಈ ದಿನವೇಸುದಿನಾಮೂ)

ಕುಂಬಿಡುವೇ ! ಹರಿಪದವ ॥ ಸಾದವಾ । ನೋದವಾ । ನೊಂದುವೆ ॥ ಪ ॥ ಇದು ಭವನೋಚನ ಇದು ಭಕ್ತನೋದವ । ಕೈವಲ್ಯಸಾಧನ ॥ಅ॥ ಕಲುಷಾಪಹವೂ । ಕಲಿ ಕಲುಷಾಪಹವೂ ಚಿದ್ವಿಲಾದವು ॥ ಸುಲಲಿತ ಶುಭಕರವಲ್ಲವೇ ॥ ಸಕಲಲೋಕನನ । ಅಕಲುಕನೆನಿಪುದು । ಸುಕೃತನಿದಾನವೂ ॥೧॥

ಗೋವಿಂದ:— ಅಕ್ರೂರನೆ ! ಈ ದೈನ್ಯವು ಸಾಕು ( ಕೈಹಿಡಿದು ಆಸನದಲ್ಲಿ ಕುಳ್ಳಿರಿಸುವನು.

( ಎಲ್ಲರೂ ಕುಳಿತುಕೊಳ್ಳುವರು. )

ಅಕ್ರೂರ:— (ಆತ್ಮ) ನನ್ನ ಸ್ವಾಮಿಯ ಪ್ರಸಾದ ದೃಷ್ಟಿಗೆ ಪಾತ್ರನಾದ ನಾನೀಗ ಧನ್ಯನು! ಎಂದಾದರೊಂದು ವೇಳೆ ಬ್ರಹ್ಮಾದಿಗಳು ಈತನಿಂದ ಪಡೆಯುಬಹುದಾದ ಉಪಚಾರವನ್ನು ಇಂದು ಪಡೆದ ನನ್ನ ಪುಣ್ಯವನ್ನು ಎಷ್ಟೆಂದು ಹೊಗಳಲಿ? (ಪ್ರಕಾಶ) ನಂದನೆ ! ಮಧುರಾಪುರದಲ್ಲಿ ನಡೆಯುವ ಧನುರ್ಮಹೋತ್ಸವಕ್ಕೆ ನೀವೆಲ್ಲರೂ ಬರಬೇಕೆಂದೂ, ರಾಮಕೃಷ್ಣರನ್ನು ಮೊದಲೇ ಕರೆತರಬೇಕೆಂದೂ, ಕಂಸಮಹಾರಾಜರು ಆಜ್ಞಾಪಿಸಿರುವನು.

* ನಂದ:— ( ಚಿಂತಾಕ್ರಾಂತನಾಗಿ ) ಅಕ್ರೂರನೆ! ರಾಮಕೃಷ್ಣರನ್ನು ಬಿಟ್ಟು ಒಂದು ಕ್ಷಣವಾದರೂ ಇರಲಾರೆನಲ್ಲ !

ಅಕ್ರೂ:— ಎಲೈ ನಂದಗೋಪನೆ! ಸರ್ವಜ್ಞಮೂರ್ತಿಗೆ ತಂದೆಯೆನಿಸಿರುವ ನೀನೂ ಹೀಗೆ ಅಜ್ಞಾನಿಯಂತೆ ನಟಿಸುವೆಯಲ್ಲ! ಕ್ರೂರನಾದ ಕಂಸಾಸುರನ ಬಳಿಗೆ ಬಾಲಕರನ್ನು ಹೇಗೆ ಕಳುಹಿಸುವುವೆಂದು ಚಿಂತಿಸಬೇಡ! ಈ ನಿನ್ನ ಕುಮಾರನು ಸಾಮಾನ್ಯನಲ್ಲ!

† ಕಂ॥ ಸಾಸಿರಸೂಳುಂ ನೀರೇ—।
ಜಾಸನರಳಿದಳಿದು ಪುಟ್ಟುತಿರೆಯುಂ ನಿಲ್ವಂ ।
ಈ ಸರಸಿಜನಾಭನೆ ಗಡ।
ಭಾಸುರ ಸಚ್ಚಿತ್ಸುಖಾತ್ಮನೇಂ ಕೇವಳನೇ? ॥೧೧೮॥

ನಂದ:— ಮಂತ್ರೀಂದ್ರನೆ! ಪುತ್ರವ್ಯಾಮೋಹದಿಂದ ಹೀಗೆ ಹೇಳಿದೆನು; ರಾಜಾಜ್ಞೆಗೆ ಪ್ರತಿಯಿರುವುದೇನು? ರಾಮಕೃಷ್ಣರನ್ನು ನಿನ್ನ ಕೈಗೆ ಒಪ್ಪಿಸಿರುವೆನು.

ಅಕ್ರೂ:— ನಂದಗೋಪನೆ! ಸರ್ವತಂತ್ರಸ್ವತಂತ್ರನಾದ ಈ ಬಾಲಕರೂಪನಾದ ಪರಮಾತ್ಮನು ನಿಮಿತ್ತಮಾತ್ರಕ್ಕೆ ನನ್ನನ್ನು ಅನುಸರಿಸುವನಲ್ಲದೆ ಈತನನ್ನು ನಾನು ಕರೆದುಯ್ಯಲು ಶಕ್ತನೆ ?

ಗೋವಿಂ:— ಅಕ್ರೂರನೆ! ನಿನ್ನೊಡನೆ ಬರುವ ನಮಗೆ ಭಯವೇನು?

ಅಕ್ರೂರ:— ಪ್ರಭುವೆ! ನಿನ್ನ ಅನುಗ್ರಹಕ್ಕೆ ಪಾತ್ರನಾದ ನಾನು ಧನ್ಯನು! (ನಮಿಸುವನು)

ನಂದ:— ಮಂತ್ರೀಶ್ವರ! ಈದಿನ ಈ ಸೇವಕನ ಸತ್ಕಾರವನ್ನು ಸಂಗ್ರಹಿಸಿ ನಾಳೆ ರಾಮಕೃಷ್ಣರೊಡನೆ ಪ್ರಯಾಣ ಬೆಳೆಸಬೇಕೆಂದು ಬೇಡುವೆನು.

ಅಕ್ರೂರ:— ನಂದನೆ ನಿನ್ನ ಇಷ್ಟವಿದ್ದಂತಾಗಲಿ!

( ನಂದನೊಡನೆ ಹೋಗುವನು )

( ಅನಂತರ ಗೋವಿಂದನೂ ಗೋಪಿಯರೂ ಪ್ರವೇಶಿಸುವರು )

‡ ಗೋವಿಂ:— ಎಲೌ ಮಂಗಳಾಂಗಿಯರೆ! ಕಾರ್ಮುಕಪೂಜಾ ಮಹೋತ್ಸವವನ್ನು ನೋಡಲು ಮಹಾರಾಜನಾದ ಕಂಸನು, ಆಹ್ವಾನ ಮಾಡಿರುವನು, ನಾನು ಮಧುರೆಗೆ ಹೋಗಿ ಬರಲು ಅನುಜ್ಞೆಯನ್ನು ಕೊಡಿ!

---

* ರಾಗ, ವಸಂತ ಆದಿತಾಳ ( ನಿರಾಶೆವಿಧಿಯೇ ) ಎಂಬಂತೆ

ಈ ಮುದ್ದು ಸುತನಾ । ಕಳುಹುವೆನೇತೊ ॥ಪ॥ ಈ ಮೋಹನಾಂಗ ಬಾಲನಾ ಕಳುಹುವೆನೇತೊ ॥ಅ॥ ಸುಗುಣಾಭಿರಾಮಕೃಷ್ಣನ । ಅಗಲ್ದೆಂತು ಬಾಳ್ವೆ ರಾಮನಾ ॥೧॥ ಮಾನ್ಯಾನಸಾಬ್ಧಿ ಸೋಮನಾ । ಮನ್ಮಥ ಕೋಟಿರೂಪನಾ ॥೨॥

† ರಾಗ........ ತಾಳ ( ಗಿರಿತಟದೊಳ್ ಘೋರಾಟವಿಯೋಗ ) ಎಂಬಂತೆ

ಮರುಗುವುದೇನ್ಕೆ ನಂದಾ । ಸಾಮಾನ್ಯನೆ ನಿನ್ನಯ ಕಂದಾ ॥ಪ॥ ಬಿಡು ಬಿಡು । ದುಗುಡವಾ । ಪ್ರಳಯದೊಳಾ ಬೊಮ್ಮನೇಕರು । ಅಳಿದಳಿದರೊಡ ಮೂಸುಕುಮಾರಂ ॥೧॥ ಆಲದ । ಎಲೆಯೊಳು । ಜಲಮಧ್ಯದೆ ಮಲಗಿಹನೊರ್ವಂ । ಸಲೆ ಶಾಶ್ವತನೀತಂ ॥೨॥ ನುಡಿವೆನೇಂ । ಒಡೆಯನೆನಿಸಲೆ ಸರ್ವಲೋಕಗಳಿಗಾಧಾರಂ । ಸಕಲಾಗಮ ಸನ್ನುತಿ ಪಾತ್ರಂ ॥ ಭಯವದೇಂ । ಕಳುಹಿಸ್ಕೆ ॥೩॥

‡ ರಾಗ ನಾಟಿಕುರಂಜಿ ರೂಪಕತಾಳ ( ಚಲಮೇಲರನಾ ಪೈಜಲಜನೇತ್ರುಡಾ ) ಎಂಬಂತೆ

ಗೋವಿಂ:— ಸರಸೀಜನೇತ್ರಿಯರೇ । ಕಳುಹಿರೆನ್ನನು ॥ಪ॥ ಕರೆಕರೆಗೊಳ್ಳದೆ ನೆರೆ । ವಿಧುಮುಖಿಯರೇ । ಮುದದೆ ನಾನು । ಮಧುರೆಗೀಗ ಪೋಗಿಬರ್ಪೆ ॥ಅ॥ ಬಾ—ಲಿಕೆಯರೆ ಕೌ—ತುಕವಹ ಕಾ—ರ್ಮುಕಮಹವಂ । ನಾಡೆನೋಡೆ ಪೋಗವೇಳ್ಕು ಮಾನ್ಯಪನಾಣತಿಯಿದು ॥೧॥

ಗೋಪಿ:— ಸರಸೀರುಹಲೋಚನಾ । ಅಗಲಲಾರೆವು ॥ಪ॥ ಕಾಂತನೆಮ್ಮನು । ಕಂತುಬಾಣದ । ಚಿಂತೆಗಾಗಿ । ಯಿಂತುಪೋಪರೇ ॥ ಎಂತು ಸಹಿಪೆ । ವಿಂತು ವಿರಹವಾಂತು ಮನವೆ । ಸಂತಪಿಸುತೆ ॥೨॥

ಗೋವಿಂ:— ಕೆಳದಿಯರೇ। ಕಳುಹಿಸಿರೇ । ನಲವಿನೊಳು । ಬಳಲದೆ ನೀಂ ॥ ತಳುವದೈ ಬಳಿಗೆ ಬರ್ಪೆ ಸುಲಲಿತ ಜಲರುಹ ಮುಖಿಯರೆ ॥೩॥

ಗೋಪಿಯರು:—

ಕು । ಷ । ಎಲ್ಲಿ ಕಾರ್ಮುಕಪೂಜೆ ? ।
ಯೆಲ್ಲಿ ಮಧುರಾನಗರ ? ।
ವೆಲ್ಲಿ ಕಂಸನೃಪಾಲನೆಂಬ ದೈತ್ಯ ? ।
ಇಲ್ಲಿ ನಮ್ಮನು ಬಿಟ್ಟು ।
ಸಲ್ಲಲಿತ ನೀಂ ತೆರಳೆ ।
ನಿಲ್ಲಲಾರಿವಗೆಲ್ದ ನಾಥ ! ನಿನ್ನ ॥೧೯॥

ಗೋವಿಂ:—ರಮಣಿಯರೆ ! ಕಾರ್ಯಗೌರವದಿಂದ ನಾನು ಹೊರಡಲೇ ಬೇಕಾಗಿದೆ; ಹಳ್ಳಿಯಲ್ಲಿಯೇ ಹುಟ್ಟಿ ಬಳೆದು ದನಕರುಗಳೊಡನೆ ಆಡುತ್ತಿದ್ದ ನಾವು ಒಮ್ಮೆಯಾದರೂ, ಪಟ್ಟಣದ ಸೊಬಗನ್ನೂ, ನಾಗರಿಕರ ಹಬ್ಬಗಳ ವಿಜೃಂಭಣೆಯನ್ನು ನೋಡಿಬರುವ !

ಗೋಪಿಯರು:—

ಮಧುರಾಪುರಾಂತರದ ।
ವಿಧುವದನೆಯರು ನಿನ್ನ ।
ಮಧುರಾಕೃತಿಯ ನೋಡಿ, ಬಿಡುವರೇನೈ ? ।
ಮಧುವೈರಿ ! ನಿನ್ನ ವಿಧ ।
ವಿಧದೆ ಕೂರ್ತಾಪುರದ ।
ಸುದತಿಯರನುಳಿದೆಮ್ಮ ನೆನೆವೆಯೇನೈ ?
॥೧೨೦॥

ಗೋವಿಂದ:—ಗೋಪಿಯರೆ ! ನಿಮ್ಮ ನಿರ್ಮಲ ಹೃದಯವನ್ನು ಬಲ್ಲೆನು; ಅಕೃತ್ರಿಮವಾದ ವಿಶ್ವಾಸದಿಂದ ನನ್ನ ಅಪರಾಧಗಳೆಷ್ಟನ್ನೋ ಕ್ಷಮಿಸಿ ಕಾಪಾಡಿದಿರಲ್ಲವೆ? ಇದನ್ನು ನಾನು ಎಂದಿಗೂ ಮರೆಯಲಾರೆನು.

ಗೋಪಿಯರು:—

* ನಾಥನೇ ! ವರೂರಾಪ್ರ ।
ಪಾತಕೋಗ್ರಾಗಿಸುತು ।
ವಿೂ ತೆರದೆ ಪೋಪರೇ? ಮೋಹನಾಂಗ! ।
ಭೀತಿಗೊಳಿಸುತಲಾ ಕಿ ।
ರಾತ ವಿಷವಾಶುಗನು ।
ಭೂತಳದೊಳುಳಿಪನೇ ನೆಮ್ಮ ರಂಗ? ॥೧೨೧॥

ಗೋವಿಂದ:—ಭದ್ರೆಯರೆ ! ನಿಮ್ಮನ್ನು ಅಗಲುವುದು ನನಗೂ ದುಸ್ಸಹವು ! ನಾನು ಅಲ್ಲಿ ಬಹು ದಿನಗಳು ನಿಲ್ಲುವುದಿಲ್ಲ; ಹಬ್ಬವಾಗುತ್ತಲೆ ಹೊರಟುಬರುವೆನು; ನಾನು ಅಲ್ಲಿದ್ದರೂ ಮನಸ್ಸೆಲ್ಲವೂ ನಿಮ್ಮ ಮೇಲೆಯೇ ಇರುವುದು.

ಗೋಪಿ:—ಪ್ರಿಯನೆ ! ನಿನ್ನ ಪ್ರೇಮವನ್ನು ಬಲ್ಲೆವು; ನಿನ್ನ ಬಾಲ್ಯ ಚೇಷ್ಟೆಗಳಿಗಾಗಿ ನಾವು.

ವೃ॥ ಕಟುತರದುಕ್ತಿಯಿಂ ಕರಮೆ ನಿಂದಿಸಿ ದಂಡಿಸೆಯುಂ,
ವಲಂ ಮಹೋ ।
ತ್ಕಟದ ಮನಃಪ್ರಕೋಪದೊಳೆ ನಾವಿರೆಯುಂ, ಸಲೆ
ಮುದ್ದುವೀರಿ ನೀಂ ।
ಪಟುಮಧುರೋಕ್ತಿಯಿಂ ಮುಳಿಸುಸೀಗಿಸಿ ಮೆಲ್ಲಗೆ
ದೋರುತಪ್ಪುತುಂ ।
ಕುಟಿಲೆಯರೆಂದು ದೂಷಿಸದೆ ಪಾಲಿಸಿದೈ ! ನಿನತೇಂ
ಪ್ರಸಾದವೋ ? ॥೧೨೨॥

ಗೋವಿಂದ:— ಗೋಪಿಯರೆ! ನನ್ನನ್ನು ಸಂತೋಷದಿಂದ ಕಳುಹಿಸಿರಿ! ಅಕ್ರೂರನು ಪ್ರಯಾಣಸನ್ನದ್ಧನಾಗಿ ರಥದೊಡನೆ ಕಾದಿರುವನು

ಗೋಪಿ:— ಪ್ರಿಯನೆ! ಇವನು ನಿಜವಾಗಿಯೂ ಅಕ್ರೂರನಲ್ಲ; ಅತಿ ಕ್ರೂರನೇ ಸರಿ !

ವೃ॥ ಮಲ್ಲಿಗೆಗಂ ಮದಾಳಿಕುಲಕಂ ಮಧುಗಂ ಮಲಯಾ-
ನಿಲಂಗೆ ಪೇಣ್ ।
ಪಲ್ಲವಕಂ ಕರಂ ಕುಸುಮಮಂಜರಿಗಂ ಕಲಕಂಠ
ಗಾನಕಂ ।
ಸಲ್ಲಲಿತಾಂಗನೇ ಮಿಸುಪ ತಿಂಗಳ ಕಾಂತಿಗೆ ತಂಗೊ-
ಳಕ್ಕಿವಂ ।
ನಿಲ್ಲದೆ ಕಾಯ್ಪುನಿತ್ತನಲೆ ? ನಿನ್ನನಗಲ್ಚುವ ಪೊಲ್ಲವಾ
ನಿಸಂ ॥೧೨೩॥

---

* ಗೋಪಿ:— ಮುರಹರ । ಗಿರಿಧರ । ತಪವರ । ಸುರುಚಿರ । ಮೃದುತರ । ಮದಕರ ॥ ಅಘರ । ಮಧುರ ಸುಧೆಯು । ಪಡೆಯು । ದಿರುವ । ಪರಿಯು । ನರಿಯೆ । ವಮ್ಮವು ॥ ಸರಸೀಜಲೋಚನಾ ॥೪॥

ಗೋವಿಂ— ಮೋಹನಾಂಗಿಯರಿ! ನಾನು ಹೋಗಿಬರಲೆ!

ಗೋಪಿ— ( ತಮ್ಮೊಳಗೆ ) ಕಾರ್ಯಾಂತರಮಗ್ನನಾದ ಸ್ವಾಮಿಯನ್ನು ನಿರ್ಬಂಧಿಸಲು ನಾವು ಶಕ್ತರಲ್ಲ; ತಾಂಬೂಲಗಂಧ ಪುಷ್ಪಾಕ್ಷತೆಗಳಿಂದ ಪ್ರಭುವನ್ನು ಅಲಂಕರಿಸಿ ಪ್ರಯಾಣ ಮಂಗಳವನ್ನು ಬಯಸುವ !

( ಪುಷ್ಪಹಾರಾದಿಗಳಿಂದ ಅಲಂಕರಿಸಿ )

* ನಾಥನೆ! ನಿನಗೆ ಶುಭವಾಗಲಿ! ಪುನರ್ದರ್ಶನವು ಬೇಗನೆ ದೊರೆಯಬೇಕೆಂದು ಸಂಪ್ರಾರ್ಥಿಸುವೆವು.

ಗೋವಿಂ— ರಮಣಿಯರೆ! ನಿಮ್ಮ ಸತ್ಕಾರವನ್ನು ಬಹು ಮಂಗಳಾವಹನೆಂದು ಸಂಭಾವಿಸುವೆನು; ನಿಮ್ಮ ಇಷ್ಟದಂತೆ ಬೇಗನೆ ಹೊರಟು ಬರುವೆನು.

( ಹೊರಟು ಹೋಗುವನು )

ಗೋಪಿ— (ಗೋವಿಂದನನ್ನು ಅನುಸರಿಸಿ ನಡೆಯುತ್ತ)

ಕಂ॥ ದೇವನನೆಮ್ಮಿಂದಗಲಿಸಿ ।
ಯಾವಫಲಂಬಡೆವುದಕಟ! ಕಾಮುರ್ಕಯಜ್ಞಂ ।
ದೇವತೆಗಳುಮೇನುಣ್ಬರೊ ।
ಭಾವಿಸೆ ಫಲವಿದಕೆ ನಮ್ಮ ಮನದಳಲೊಂದೇ ॥೧೨॥

ಸಖಿಯರ! ಗೋಪಾಲನು ಮಾತಾಪಿತೃಗಳಿಗೆ ನಮಸ್ಕರಿಸಿ ಕಾಮಪಾಲನೊಡನೆ ರಥವನ್ನು ಆರೋಹಿಸಿದನು! ಎಲೈ ರಥವೇ ! ನಮ್ಮ ಸ್ವಾಮಿಯನ್ನು ನಮ್ಮಿಂದ ಅಗಲಿಸುವುದೇ ನಿನ್ನ ಮನೋರಥವೋ ? ( ಚಿಂತಿಸಿ ) ಸೂರ್ಯಾಶ್ವಗಳನ್ನು ಮೀರುವ ಕುದುರೆಗಳು ಆಗಲೇ ತೇರನ್ನು ಬಹುದೂರಕ್ಕೆ ಒಯ್ದುವು; ಎಲೆ ತೇರಿನ ಚೀತ್ಕಾರವೇ! ನೀನಾದರೂ ಶ್ರವಣ ವಿಷಯವಾಗಿದ್ದು ನಮ್ಮನ್ನು ಸಂತೋಷಗೊಳಿಸು; (ಪುನಃ) ರಥಚಕ್ರದ ಧೂಳಿಯಾದರೂ ಸ್ವಲ್ಪಹೊತ್ತು ನಮ್ಮ ಕಣ್ಣಿಗೆ ಕಾಣುತ್ತಿರದೆ ಅದೂ ಮಾಯವಾಯಿತಲ್ಲ !

ಅಕ್ಕಟಾ!

ಕಂ॥ ಇನಿಯನಗಲ್ಕೆಯನರಿತೀ ।
ಮನಸಿಜಹತಕಂ ನಿಶಾತವಿಶಿಖದಿನೆಮ್ಮಂ ।
ಕನಿಕರಮಿಲ್ಲದೆ ಕೊಲ್ವಂ
ಘನಪಾಪಿಗೆ ಸಮಯಮಿದುವೆ! ಏವಾಳ್ಪುದೋ!ಹಾ ॥೧೫॥

ಎಲೈ ನಿಷ್ಠುರನಾದ ಕಂದರ್ಪನೆ!

ಕಂ॥ ಸ್ಮರಿಸು! ಸ್ಮರಿಸು! ಸುಮಶರ
ವೀರನೆ! ಅಬಲೆಯರನೇಕೆ ಗೋಳಾಡಿಸುವೈ ।
ನೀರಂ ಸರಸಿಜನಯನಂ
ಬಾರನೆ? ಕೇಳ್ ನಿನ್ನ ಮದವನೇನಡಗಿಸನೇ? ॥೧೬॥

† ಎಲೈ ಪಾಪಿಯೆ! ಸಹಾಯ ಶೂನ್ಯರ ಮೇಲೆ ಕೈ ತೋರಿಸುವುದು ಯಾವ ಧರ್ಮವು ? (ನಿಂದಿಸಿ) ಉನ್ಮತ್ತನಾದ ನಿನಗೆ ಧರ್ಮವೊಂದು ! (ಮೇಲೆ ನೋಡಿ) ಎಲೈ ಚಂದ್ರನೇ! ಮಲಯ ಸಮೀರನೇ! ಇಂತಹ ಕ್ರೂರನ ಜತೆಗೆ ಸೇರುವುದು ನಿಮ್ಮ ಗೌರವಕ್ಕೆ ಹಾನಿಯೆಂದು ಭಾವಿಸಿರಿ! (ನಿರೀಕ್ಷಿಸಿ) ಏನು! ಹೇಳಿದುದು ನಿಮ್ಮ ಕಿವಿಯಲ್ಲಿಯೇ ಬಿಳಲಿಲ್ಲವೋ! ಛಿ! ಛಿ! ಪಾಪಿಗಳೇ! ಮೇಲೆ ಸೌಜನ್ಯದ ವೇಷವನ್ನೂ ಹೃದಯದಲ್ಲಿ ವಿಷವನ್ನೂ ತುಂಬಿಕೊಂಡಿರುವ ನಿಮ್ಮನ್ನು ನಂಬಬಹುದೆ! ಹೀಗೆ ಲೋಕವನ್ನು ಮೋಸಗೊಳಿಸುವುದು ನಿಮಗೆ ನ್ಯಾಯ್ಯವಲ್ಲ ! (ನಿಟ್ಟುಸಿರ್ ಬಿಡುತ್ತ) ಸಖಿಯರೇ !

‡ಕಂ॥ ಇನಿಯನಗಲ್ಕೆಯ ನೋವಂ ।
ಮನಮೆಂತುಟೊ ಸಹಿಪುದಕಟ ! ಚಣಮುಂ ಯುಗಮೆಂ ।
ದೆನೆ ಕಾಣ್ಬುಂ; ರಮಣಂ ಬ ।
ರ್ಪನನೂತನ ಚರಿತೆ ಪಾಡಿ ಕಳೆವಂ ಪೊಳ್ತಂ ॥೧೭॥

( ಎಲ್ಲರೂ ಹೊರಡುವರು. )

## ಇದು ಷಷ್ಠಾಂಕವು

---

* ರಾಗ...... ತಾಳ ( ಮುಖಡಾ ದಿಖಲಾ ಜಾರೆ ) ಎಂಬಂತೆ

ರಮಣಾ! ನೀಂ ಪೋಗಿ ಬಾರಾ ಪ್ರಿಯಾ ॥ಪ॥ ನೀರಾ! ದಯವಿರಲೀ । ನಯಸಾಗರ ದಯದೊಳು ಮುಖವನು ನೀ ತೋರಾ ॥ಮರೆಯದಿರೆಮ್ಮ। ಮುರಳೀಧರ ಸುಖಕಾರಾ ॥ ಅಗಲಿರಲಾರೆವು ನಾವ್ ಪ್ರಿಯಾ! ನಿನ್ನಂ ಅಗಲಿರದಾದೆವು ನಾವ್ ॥

† ( ಮಹಾ ಫಿಲೇ ನಾಜರೀ ) ಎಂಬಂತೆ

ಸಮಯವಿದೇಂ ಕೊಲ್ಲುವೇ ಇದೇಂ ನ್ಯಾಯುವೇನೈ ಮದನಾ ॥ಪ॥ ಅಮಮಾ ಪ್ರಸೂನಾಸ್ತ್ರನೇ ದಯವಿಲ್ಲವೇನೈ ಮದನಾ ॥ಅ॥ ಛೀ ಛೀ ಛೀ! ಪಾಪಿಯೇ! ಬಿಡು ಬಿಡೈ ನೀನೀ ದೌಷ್ಟ್ಯವಂ ॥ ಭೋರೆನ್ನದಿ ಸಾರಸಾಕ್ಷಂ ನಿನ್ನಿಂದು ಗರ್ವಂ ಮುರಿವಂ ॥೧॥

‡ ( ಕರುವಟಿಯಾ ) ಎಂಬಂತೆ

ಸ್ಮರಿಪುದೆಂತೀವಿರಹ ಸಖಿಯರೇ ॥ಪ॥ ಮುರಹರನನುಪಮ ಚರಿತಗಳನ್ನು ಹರಿಸದೆ ನಾವ್ ನೆರೆ ಪಾಡುವ ॥೧॥ ದಿನವನು ಯುಗವೆನೆ ಕಳೆವೆವು ನಾವು । ಇನಿಯನು ತಾಂ ಬರುವನೆಂದೂ ॥೨॥

## ಸಪ್ತಮಾಂಕಂ

......................

( ವಸುಮತೀದೇವಿಯೂ ಮಧುರೆಯೂ ಪ್ರವೇಶಿಸಿ )

ವಸುಮತೀ— ( ದುಃಖದಿಂದ )

*ವೃ॥ ಹಾ! ಮೋಹನೇ! ವಿಜಯಲಕ್ಷ್ಮಿ! ಯಶೋನಿದಾನೇ ।
ಹಾ। ಮಾಧವಪ್ರಣಯಿನೀ ! ಮೃದುಮಂಜು ವಾಣೀ!
ಭಾಮೇ! ದುರಾತ್ಮಕನ ಕಂಸನ ದರ್ಪದಿಂ ನೀ— ।
ನಾಮೋದವಿಲ್ಲದ ಕಟಿಂತು ಬಳಲ್ದು ಬಾಳ್ವೈ ॥೧೨॥

ಹಾ! ಪ್ರಿಯಸಖಿ! ಮಧುರೆ, ಮುದ್ದುಗುವರಿಯಾದ ವಿಜಯೆಯ ಗತಿಯೇನು ?

ಮಧುರೆ— ಭಗವತಿ! ವಸುಮತೀದೇವಿ ! ಸಂತೈಸಿಕೋ ! ಸಂತೈಸಿಕೋ!! ಆ ದುರಾತ್ಮನ ಶಾಸನವು ನಮ್ಮನ್ನು ಎಂತಹ ಗೋಳಿಗೆ ಗುರಿಮಾಡಿರುವುದೆಂಬುದನ್ನು ವಿವರಿಸಲು ಸಾಧ್ಯವೇ?

ವಸುಮತಿ— ಅಕ್ಕಟಾ! ಮಧುರೆ! ಆ ದುಷ್ಟ ಕಂಸನು ಈ ಧನುರ್ಮಹೋತ್ಸವದ ವ್ಯಾಜವನ್ನು ಕಲ್ಪಿಸಿ, ತನ್ನ ಶಸ್ತ್ರ ಶಾಲೆಯಲ್ಲಿ ಸೆರೆಯಿಟ್ಟಿರುವ ವಿಜಯ ಲಕ್ಷ್ಮಿಯನ್ನು ನಿರ್ಬಂಧದಿಂದ ಪರಿಣಯಗೊಳ್ಳಲು ನಿಶ್ಚಯಿಸಿರುವನೆಂದು ಕೇಳಿದೆನು. ನನ್ನ ಪ್ರಿಯಪುತ್ರಿಯು ಆ ದುಷ್ಟರಾಕ್ಷಸನನ್ನು ಸೇರಿ ಹೇಗೆ ತಾನೆ ಜೀವವನ್ನು ಧರಿಸಿರುವಳು ? ಅಯ್ಯೋ ಅಯ್ಯೋ ! ಮಾಧವ! ನಿನ್ನ ದಯೆಯು ಆವಾಗ ಉಂಟಾಗುವುದೋ ? ( ನಿಟ್ಟುಸಿರುಬಿಡುವಳು ).

ಮಧುರೆ— ದೇವಿ! ದುಃಖಿಸಬೇಡ; ಭಕ್ತವತ್ಸಲನಾದ ಪರಮಾತ್ಮನು ಈಗ ಪ್ರಾಪ್ತವಾಗಿರುವ ಕಷ್ಟವನ್ನು ಕಳೆಯದೆ ಬಿಡನು.

( ನಾರದನು ಪ್ರವೇಶಿಸಿ )

ವೃ॥ ಸರಸಿಜದಳನೇತ್ರಾ ! ರಮ್ಯರಾಕೇಂದು ವಕ್ತ್ರಾ ।
ಸುರುಚಿರಘನನೀಲಾ! ವೈಜಯಂತೀಸುಮಾಲಾ ।
ಪರಮ ಸುಖನಿದಾನಾ! ಗೋಪಿಕಾ ಪ್ರೇಮಗಾನಾ ।
ಪೊರೆ! ಯದುಕುಲಮೌಳೀ! ಸ್ತುತ್ಯ ಕಾರುಣ್ಯ ಶಾಲೀ ॥೧೨೫॥

ವಸುಮತೀಮಧುರೆಯರು—ಪೂಜ್ಯರಾದ ನಾರದರಿಗೆ ನಮಸ್ಕಾರವು.

ನಾರದ—ಪೂಜ್ಯಳಾದ ವಸುಮತೀದೇವಿ ! ನಿನಗೆ ಮಂಗಳವಾಗಲಿ ! ಮಧುರೆ ಸಂತೋಷವನ್ನು ಪಡೆ ! ನೀವು ಚಿಂತಾಕ್ರಾಂತರಾಗಿರುವಂತೆ ಕಾಣುವುದು. ಅದೇಕೆ?

ವಸುಮತೀ— ಪೂಜ್ಯರೆ ! ದುರಾತ್ಮನಾದ ಕಂಸನಿಂದ ಪ್ರಿಯಪುತ್ರಿಯಾದ ವಿಜಯಲಕ್ಷ್ಮಿಯು ಅನುಭವಿಸುತ್ತಿರುವ ಕಷ್ಟವು ನಮ್ಮನ್ನು ನಿರಂತರವೂ ದುಃಖಿಸುವಂತೆ ಮಾಡಿರುವುದು.

ನಾರದ— ಪೂಜ್ಯಳಾದ ವಸುಮತೀ ದೇವಿಯೆ! ಚಿಂತೆಯನ್ನು ಬಿಡು. ವಿಶ್ವರೂಪಸಂದರ್ಶನದಿಂದ ಅಕ್ರೂರನನ್ನು ಅನುಗ್ರಹಿಸಿದ ಪುರುಷೋತ್ತಮನಾದ ಜಯವಾಸುದೇವನು ಬಲದೇವನೊಡನೆ ಪುರವನ್ನು ಪ್ರವೇಶ ಮಾಡಿರುವನು. ವಿಜಯಲಕ್ಷ್ಮಿಯನ್ನು ಪಾಣಿಗ್ರಹಣಮಾಡಿ ನಿನ್ನನ್ನು ಸಂತೋಷಗೊಳಿಸುವನು. ಆರ್ಯೆಯಾದ ಮಧುರೆ! ಭಗವಂತನಾದ ಮಾಧವನಿಗೆ ಪುರಾಧಿನಾಯಕಿಯಾದ ನೀನು ಸ್ವಾಗತಸತ್ಕಾರವನ್ನು ಮಾಡದೆ ಇನ್ನೂ ಏಕೆ ವಿಲಂಬಿಸಿರುವೆ? ತೆರಳು ತೆರಳು !

ಮಧುರೆ— (ಉತ್ಸಾಹದಿಂದ) ಭಗವಂತನಾದ ನಾರಾಯಣನು ಬಂದನೆ! ಪುರುಷೋತ್ತಮನಾದ ಕೇಶವನು ದಯಮಾಡಿಸಿದನೆ! ಭಕ್ತವತ್ಸಲನಾದ ಮಾಧವನು ನಮ್ಮನ್ನು ಅನುಗ್ರಹಿಸಿದನೆ!

ನಾರದ— ಎಲೌ ಆರ್ಯೆಯರೆ! ನಿಮ್ಮ ಪುಣ್ಯವೃಕ್ಷವು ಫಲಿಸುವುದು.

ವಸುಮತೀ— ಪೂಜ್ಯರೆ! ಬಾಲನಾದ ಗೋಪಾಲನು ಉಗ್ರನಾದ ಕಂಸನನ್ನು ನಿಗ್ರಹಿಸಿ, ನನ್ನ ವಿಜಯೆಯನ್ನು ಸೆರೆಯಿಂದ ಬಿಡಿಸಿ, ಮದುವೆಯಾಗುವನೆ ?

ನಾರದ— ಭಗವತಿ! ವಸುಮತೀದೇವಿ! ಧನುರ್ಭಂಗ ನಿಯಮದಿಂದ ವಿಜಯ ಲಕ್ಷ್ಮಿಯನ್ನು ವರಿಸುವುದೆಂದು ನಿಯಮಿಸು. ಆ ಪರಮಾತ್ಮನ ಶೌರ್ಯವು ಪ್ರಕಾಶವಾಗುವುದನ್ನು ನೋಡಿ ಸಂತೋಷಿಸುವೆ.

---

* ( ಹಾ ಪ್ರಾಣ ನಾಯಕಿಯೆ ಎಂಬಂತೆ )

ಹಾ! ಮುದ್ದು ಬಾಲಿಕೇ । ಹಾ! ಮದಿರಾಂಬಿಕೆ । ಹಾ! ಮೋಹನಾಂಗೀ ಜಯಭಾಮೇ ॥ಪ॥ ಮಾಧವ ಪ್ರಣಯಿನಿ । ಮೋದ ಸದಾಯಿನಿ । ಶ್ರೀ ದೇವಿ ಕೀರ್ತಿನಿದಾನೇ ॥೧॥ ಅಂತಿರ್ಪ ದುರುಳನ । ಕಂಸನ ಸೆರೆಯುಳು । ಶಾಂತೆ ಗುಣವಂತೆ ಸುಶಾಂತೇ ॥೨॥

ವಸುಮತೀ— ಈ ನಿಯಮಕ್ಕೆ ಕಂಸಾಸುರನು ಒಡಂಬಟ್ಟು ಧನುರ್ಭಂಗಕ್ಕೆ ಸಿದ್ಧನಾದರೆ ನಮ್ಮ ವಿಜಯಯ ಗತಿಯೇನು?

ನಾರದ— ಧನುಃ–ಪೂಜಾ–ಮಹೋತ್ಸವ ನಿರತನಾದ ಕಂಸನು ಧನುರ್ಭಂಗವನ್ನು ಎಂದಿಗೂ ಅನುಮೋದಿಸನು. ವಿಜಯ ಲಕ್ಷ್ಮಿಯು ಸ್ವಯಂವರ–ಪ್ರಯತ್ನವನ್ನು ಕೈಕೊಳ್ಳ ಬಹುದು.

ವಸುಮತೀ— ಪೂಜ್ಯರೆ! ತಮ್ಮ ಅನುಜ್ಞೆಯಂತೆ ನಡೆದು ಕೊಳ್ಳುವೆನು.

ಮಧುರೆ— ನಾನೀಗಲೇ ಹೋಗಿ ನನ್ನ ಪ್ರಿಯ ಪುತ್ರಿಯರಾದ ಸ್ವಸ್ತಿ ಕೀರ್ತಿಯರೆಂಬ ಕನ್ಯಕೆಯರಿಂದ ಭಗವಂತನಾದ ಮಾಧವನಿಗೆ ಮಂಗಳಾಲಂಕಾರವನ್ನು ಮಾಡಿಸುವೆನು (ಹೊರಟು ಹೋಗುವಳು)

ನಾರದ— ವಸುಮತೀ ದೇವಿ! ನಿನ್ನ ನಿಯಮವನ್ನು ಭಗವಂತನಿಗೆ ನಾನೀಗಲೇ ಅರಿಕೆಮಾಡುವೆನು. (ಎಂದು ಹೋಗುವನು)

(ಮಧುರಾಪುರದ ಬೀದಿ–ಗೋವಿಂದನು ಬಲಭದ್ರನೊಡನೆ ಪ್ರವೇಶಿಸುವನು)

ಬಲ— * ಕೃಷ್ಣ! ಈ ಮಧುರಾಪುರದ ವೈಭವವು ಮನವನ್ನಾಕರ್ಷಿಸುತ್ತಿದೆ. ಈ ಬೀದಿಗಳ ಚೆಲುವೂ ದಿಪಗಳ ಸಾಲೂ ಎಷ್ಟು ಮನೋಹರವಾಗಿರುವುದು. ಪೇಟೆಗಳ ಐಶ್ವರ್ಯವೂ, ಅಂಗಡಿಗಳ ಅಂದವೂ ಯಾರನ್ನು ಬೆರಗುಮಾಡದಿರುವುದು? ಕೊಳ್ಳುವವರ ಕಲಕಲವೂ ವ್ಯಾಪಾರಿಗಳ ಚಾತುರ್ಯವೂ ವಿನೋದಕರವಾಗಿರುವುದು. ಕರ್ಮಾಗಾರಗಳಲ್ಲಿಯ ವಿವಿಧ ಯಂತ್ರಗಳ ಕಾರ್ಯದಕ್ಷತೆಯು ಮಾನುಷಬುದ್ಧಿ ಶಕ್ತಿಯನ್ನು ಪ್ರಶಂಸಿಸುತ್ತಿರುವುದು. ಹೋಗುವ ಬರುವ ಬಗೆ ಬಗೆಯ ಬಂಡಿಗಳ ಚೀತ್ಕಾರವು ಒಂದು ವಿಧವಾದ ಹರ್ಷವನ್ನುಂಟು ಮಾಡುತ್ತಿರುವುದು. ಸೌಧ ನಿರ್ಮಾಣವೈಚಿತ್ರ್ಯವನ್ನೂ ವಿಹಾರೋದ್ಯಾನಗಳ ಸೊಬಗನ್ನೂ ವರ್ಣಿಸಲಾದೀತೇ? ಮಂಜುಳಗಾನವೂ ಮಂಗಳವಾದ್ಯಗಳೂ ನಾಗರಿಕರ ಬಾಳ್ವೆಯ ಅತಿ ಸೌಖ್ಯವನ್ನು ಸೂಚಿಸುತ್ತವೆ. ತೋರಣದೋರಣ ಕಲಶಗಳ ಪಂಕ್ತಿ ಇವುಗಳು ನೇತ್ರಾನಂದಕರಗಳಾಗಿವೆ. ಹಳ್ಳಿಯವರಾದ ನಾವು ಇಂತಹ ಸಂತೋಷವನ್ನು ಎಂದೂ ಅನುಭವಿಸಿದುದೇ ಇಲ್ಲ.

ಗೋವಿಂದ— ಅಣ್ಣ ಬಲಭದ್ರ! ಬುದ್ಧಿ ಸಂಸ್ಕಾರ ವಿಶೇಷದಿಂದ ದಿನದಿನಕ್ಕೆ ಏಳ್ಗೆಯನ್ನು ಪಡೆಯುತ್ತಿರುವ ನಾಗರಿಕತೆ ಸ್ತೋತ್ರಾರ್ಹವಾದುದೇ ಸರಿ. ಈ ಕೃತಕ ಸೌಂದರ್ಯದಿಂದಲೇ ಮನಸ್ಸು ಇಷ್ಟು ಆನಂದಗೊಳ್ಳುವುದಾದರೆ ನೈಜವಾದುದರಲ್ಲಿ ಇನ್ನೆಷ್ಟು ಸುಖವಿರಬಹುದು. ಈ ಭಾಗದಲ್ಲಿ ಹಳ್ಳಿಯವರೇ ಪಟ್ಟಣದವರಿಗಿಂತ ಸುಖಿಗಳೆಂದು ಹೇಳಬಹುದು. ಹುಲ್ಲುಬಯಲುಗಳಲ್ಲಿಯ ಸಂತೋಷವು ಈ ಬೀದಿಗಳಲ್ಲಿರುವುದೇ? ನಿರಂತರವೂ ಕಲಕಲನಾದದಿಂದ ಪ್ರವಹಿಸುವ ನದಿಗಳೂ ಸಾಲುಸಾಲಾಗಿ ಹಬ್ಬಿರುವ ಪರ್ವತ ಪಂಕ್ತಿಗಳೂ ದಟ್ಟವಾದ ಕಾಡುಗಳೂ ಎಷ್ಟು ಮನೋಹರಗಳು? ಮಳಲಲ್ಲಿ ಕುಣಿದಾಡುವ ಆನಂದಕ್ಕೆ ಯಾವುದು ಸಾಟಿ? ಅರಣ್ಯಜ ಖಗಮೃಗಗಳಿಗಿಂತಲೂ ಪ್ರೇಕ್ಷಕರನ್ನು ವಿನೋದಗೊಳಿಸುವುವು ಬೇರೆ ಇರುವುವೇ? ಅರಿಯದವರನ್ನು ಮರುಳು ಮಾಡಿ ದ್ರವ್ಯಾಕರ್ಷಣ ಮಾಡುವ ಸ್ವಾರ್ಥಪರರಾದ ನವನಾಗರಿಕ ವ್ಯಾಪಾರಿಗಳ ಚಾತುರ್ಯವು ಸಂತೋಷ ಜನಕವಾಗಲಾರದು.

ಬಲ— ಗೋವಿಂದ! ನಿನ್ನ ಮಾತು ನಿಜ. ಆದರೆ ಹಳ್ಳಿಯವರು ಕೂಪ–ಕೂರ್ಮ – ನ್ಯಾಯದಂತಿರದೆ ಪಟ್ಟಣಗಳಲ್ಲಿ ಓಡಾಡಿ ಉಚಿತವಾದ ಸಂಸ್ಕಾರಗಳಿಂದ ತಮ್ಮ ಅಜ್ಞತೆಯನ್ನು ಕಳೆಯಲು ಪ್ರಯತ್ನಿಸುವುದು ಒಳ್ಳೆಯದಲ್ಲವೆ?

ಗೋವಿಂದ— ಅಹುದು. ಅದು ಬಹು ಪ್ರಯೋಜನಕರವೇ ಸರಿ. ಅದರಿಂದ ಲೋಕ ವ್ಯವಹಾರಜ್ಞಾನವು ಹೆಚ್ಚಿ ಅನೇಕ ವೇಳೆ ನವನಾಗರಿಕರಿಂದ ನಷ್ಟಗಳಿಗೀಡಾಗದಿರಬಹುದು.

(ಅನಂತರದಲ್ಲಿ ನಾರದನು ಪ್ರವೇಶಿಸಿ)

ನಾರದಂ— ಓಹೋ ಇದೇನು? ಗೋಕುಲಾಲಂಕಾರರಾದ ಬಲವಾಸುದೇವರೆ! ಎಲ್ಲಿಯವರೆಗೆ?

ಇಬ್ಬರೂ— ಪೂಜ್ಯರಾದ ನಾರದ ಮಹರ್ಷಿಗಳಿಗೆ ನಮಸ್ಕರಿಸುವೆವು. ಇದೇನು ಎಲ್ಲೆಲ್ಲಿಯೂ ತಾವು ಇರುವಿರಲ್ಲ?

---

(ಖೇಲನದೇವಿಲಖಾ ಎಂಬಂತೆ)

* ಮೆರೆಯುವವುದೀ ಮಧುರಾಪುರ! ಬಲು ಚೋದ್ಯವು । ಪ॥ ತೋರಣ ದೋರಣ ಕಲಶವಿತಾನ ।ಅ॥ ಮಂಗಳ ಧ್ವಜಂಗಳಿತ್ತಂ । ಕಂಗೊಳಿಸುವುವು ಸುಮನೋಹರಂ । ಸುಖಶ್ರೀಕರಂ ಬಲು ಚೋದ್ಯಂ ।೧॥ ಈ ಪುರದ ಗೋಪುರಂಗಳ್ ಏಪರಿ ಕಾಂಬುವು । ಶ್ರೀ ಮಂದಿರಂ । ಬಹುಸುಂದರಂ । ಬಲು ಚೋದ್ಯಂ ॥೨॥

ನಾರದ— ಮಹಾನುಭಾವನಾದ ಮಾಧವ! ಸರ್ವಾಂತರ್ಯಾಮಿಯಾದ ನೀನು ನನ್ನನ್ನು ಹೀಗೆ ಕೇಳುವುದು ಬಲು ಚೆನ್ನಾಗಿದೆ.

ಗೋವಿಂದ—ಪೂಜ್ಯರ ಆಗಮನಕ್ಕೆ ಯಾವುದೋ ಮಹತ್ತರವಾದ ಕಾರಣವಿರಬಹುದು. ಅದನ್ನೇ ತಿಳಿಯಲಪೇಕ್ಷಿಸುವೆವು.

ನಾರದ— ಕಾರಣವೇನು? ಇಲ್ಲಿ ನಡೆಯುವ ವಿಜಯಲಕ್ಷ್ಮಿಯ ಸ್ವಯಂವರ ಮಹೋತ್ಸವವನ್ನು ನೋಡಿ ಆನಂದಗೊಳ್ಳುವುದೇ

ಗೋವಿಂದ— ಪೂಜ್ಯರೆ ! ವಿಜಯಲಕ್ಷ್ಮಿಯ ವೃತ್ತಾಂತವೇನು ?

ನಾರದ— ವಿಜಯಲಕ್ಷ್ಮಿಯು ಪೂಜ್ಯಳಾದ ವಸುಮತೀದೇವಿಯ ಪುತ್ರಿ. ದುರಾತ್ಮನಾದ ಕಂಸನಿಂದ ಶಸ್ತ್ರಶಾಲೆಯಲ್ಲಿ ಸೆರೆಯಿಡಲ್ಪಟ್ಟಿರುವಳು. ಈ ಧನುರ್ಮಹೋತ್ಸವದ ಸಮಯದಲ್ಲಿಯೇ ಆಕೆಯನ್ನು ನಿರ್ಬಂಧದಿಂದ ಪರಿಣಯಗೊಳ್ಳಲು ಯತ್ನಿಸಿರುವ ಆ ಕಂಸನ ಮನೋಗತವನ್ನು ಸಹಿಸಲಾರದೆ ಭಗವತಿಯಾದ ವಸುಮತೀ ದೇವಿಯು ಧನುರ್ಭಂಗದಿಂದ ಸ್ವಯಂವರದಲ್ಲಿ ವಿಜಯಾಂಗನೆಯನ್ನು ವರಿಸಬಹುದೆಂಬ ನಿಯಮವನ್ನು ಕಲ್ಪಿಸಿರುವಳು. ಜಯವಾಸುದೇವನೆ! ಆ ವಿಜಯಲಕ್ಷ್ಮಿಗೆ ತಕ್ಕ ವರನು ನೀನೇ ಅಲ್ಲದೆ ಮತ್ತಾರೂ ಅಲ್ಲ. ನೀನೀಗಲೆ ವಸುಮತೀದೇವಿಗೂ ಮಧುರಾದೇವಿಗೂ ಸಂತೋಷವುಂಟಾಗುವಂತೆ ಆ ವಿಜಯಾಂಗನೆಯ ಕಷ್ಟವನ್ನು ಪರಿಹರಿಸುವುದು ದಯಾಳುವಾದ ನಿನಗೆ ತಕ್ಕುದು.

ಗೋವಿಂದ—

॥ಕಂದ॥ *ಮುರಿವೆಂ ಕಾರ್ಮುಕವಂ ಮೇಣ್
ಮುರಿವೆಂ ದುರಾತ್ಮ ಕಂಸನೀಪ್ಸಿತಮುಂ ನಾಂ |
ವರಿಪೆಂ ವಿಜಯಾಂಗನೆಯಂ
ಹರಿಸಂನೀಡುವೆನಮೋಘಮೆನೆ ವಸುಮತಿಗಂ॥೧೩೦॥

ಬಲ— ಅಬಲೆಯರನ್ನು ಹಿಂಸೆಗೆ ಗುರಿಮಾಡಿರುವ ಆ ಕಂಸಹತಕನು ದಂಡನಾರ್ಹನೇ ಸರಿ.

ನಾರದ—ಒಳ್ಳೆಯದು, ನೀವಿಬ್ಬರೂ ಯಥೋಚಿತ ವಸ್ತ್ರಾಭರಣಗಳಿಂದಲಂಕೃತರಾಗಿ ವಿಜಯಲಕ್ಷ್ಮಿಯನ್ನನುಗ್ರಹಿಸಿ. ನಾನು ಕಂಸನೊಡನೆ ಸ್ವಲ್ಪ ಮಾತನಾಡ ಬೇಕಾಗಿರುವುದರಿಂದ ಹೊರಡುವೆನು. ( ಹೊರಟು ಹೋಗುವನು )

ಗೋವಿಂದ— ಬಲಭದ್ರ ! ಅಗಸರ ಬೀದಿಗೆ ಹೋಗಿ ತಕ್ಕ ಉಡುಗೆಗಳನ್ನು ಸಂಪಾದಿಸಿಕೊಂಡು ಆಮೇಲೆ ಭಗವತಿಯಾದ ವಸುಮತಿಯಾಜ್ಞೆಯನ್ನು ಪರಿಪಾಲಿಸುವ

ಬಲಭದ್ರ— ವಾಸುದೇವನೆ! ಹಾಗೆಯೇ ಆಗಲಿ ( ಇಬ್ಬರೂ ಹೊರಟುವರು. )

( ಅನಂತರ ರಜಕಾಸುರನು ಪ್ರವೇಶಿಸುವನು. )

ರಜಕ: -† ಎಲೆ ಮಾಳಿ! ಮಾಳೀ!! ಒಂದಿಷ್ಟು ಎಲೆ ಅಡಕೆ ತಾರೆ.

ಮಾಳಿ:— ಓಹೊ! ಒಂದೇಸಮಕ್ಕೆ ಕೂಗುವುದೇ? ಬರುವವರೆಗೂ ತಡವಿಲ್ಲವೇ ? (ಒಳಗಿನಿಂದ ಬಂದು) ಇದೊ, ಅಡಕೆ ಎಲೆ ( ಇಡು ಕೊಡುವಳು )

ರಜಕ:—ಎಲ್ಲಿ ದೊರೆಗಳ ಆ ಬಟ್ಟೆಗಂಟನ್ನು ತಾ; ಹೋಗಿ ಕೊಟ್ಟುಬರುವೆನು.

ಮಾಳಿ:—ಅದಕ್ಕೆ ಈಗಲೇ ಅವಸರವೆ ? ನಾಳೆ ಕೊಟ್ಟರೆ ಆಗದೋ ?

ರಜಕ:—( ಕೋಪದಿಂದ ) ತಂದುಕೊಡೆ ಅಂದರೆ ಹೆಚ್ಚು ಮಾತು ನಿನಗೇಕೆ? ಈ ಹಬ್ಬದದಿನ ಬಿಟ್ಟರೆ ನಾಳೆ ಬಹುಮಾನವು ಸಿಕ್ಕುವುದೋ ?

---

( ಕ್ಷೀರಸಾಗರ ಶಯನ ಎಂಬಂತೆ )

* ಕಾರ್ಮುಕವನಾಂ ಮುರಿವೆ । ಹರುಷವನು ಕೊಳ್ಳುವೆ ॥ಪ॥ ಧರ್ಮದೂರನೆನಿಸಿಪ ಕಂಸನ । ದುರ್ಮನವ ಮುರಿವೆ ಬೇಗ ॥ಅ॥ ವಸುಮತೀಯ ಶಾಸನವ । ಒಸೆದು ಮಾನಿಸುವೆನೀಗ ಪಸೆಯನಿಲ್ವೆ ವಿಜಯ ನಾರಿಯೊಳ್ । ಎಸೆವ ಶೌರ್ಯವನ್ನು ತೋರ್ಪೆ ॥೧॥ ಮಲೆವ ಖಲನ ಬಲವ ಛಲವ । ಸಲೆ ನಿರೋಧಿಸಿ ಇಳೆಯ ಮೋದಿಪೆ । ಕಲುಷ ಕಳೆವೆ ಸಕಲಲೋಕಕೆ । ಸುಲಲಿತಾಂಗಿಗೆ ಮೋದವೀವೆ ॥೨॥

( ಪ್ಯಾರ ಪ್ಯಾರಾ ಬನ ಎಂಬಂತೆ )

† ರಜಕ: —ಬಾರೆ ಬಾ ಬಾರೆಲೆ। ತಾರೆ ಅಡಕೀ ಎಲೆ ॥ಪ॥ ಬೇಗ ಬಾ ಬಾರೆ ಬಾರೆಲೆ ಮಾಳಿ, ಕಾಳಿ, ಗಯ್ಯಾಳಿ ಬಾ ಮಾಳಿಯೆ.
ಮಾಳಿ:—ಬಾದೆಸಮಕೆ ನೀಂ । ಒದರುವುದೇಕೆ । ಬಾದುನಿಮಿಷವೂ ನಿಲ್ಲದೆ। ಎಲ್ಲಿ ಪೋಗುವೆ ನಿಲ್ಲದಂತಾಡುವೆ ॥೧॥
ರಜಕ:—ದೊರೆಯಬಳಿಗೆ ಪೋಗುವೆ । ಮಡಿಗಳನ್ನು ನೀಡುವೆ । ಹಬ್ಬವಲ್ಲವೆ ಬಾ ಬಾರೆಲೆ ॥೨॥

ಮಾಳಿ:—( ಹುಬ್ಬನ್ನು ಗಂಟಿಕ್ಕಿ ) ದೊರೆಗಳ ಹತ್ತಿರ ನಿನಗೆ ಬಹುಮಾನ ಬಂದರೆ ನನಗೇನು ಭಾಗ್ಯಬಂದಿತು ? ಮೂರು ತಿಂಗಳಿಂದ ಹಬ್ಬಕ್ಕೆ ಹೊಸಸೇಲೆ ತಂದುಕೊಡೆಂದು ಕೇಳಿದು ದ್ದಾಯಿತು; ಸೀರೆಯೂ ಇಲ್ಲ ಕುಪ್ಪುಸವೂ ಇಲ್ಲ. ಮನೆಯಲ್ಲಿ ಮಾತ್ರ ಕತ್ತೆ ದುಡಿದಂತೆ ದುಡಿಯಬೇಕು. ( ಎಂದು ಗೊಣಗುತ್ತಾ ಬಟ್ಟೆಗಂಟನ್ನು ತಂದು ಬಿಸುಡುವಳು )

ರಜಕ:—ಎಲೆ ! ನಿನಗೆಷ್ಟು ಅಹಂಕಾರ ? ಹಾಗೆ ಬೀಸಾಡುವೆ ( ಎಂದು ಹೊಡೆಯಹೋಗುವನು )

ಮಾಳಿ:—ಓ! ಹೋ !! ಹೋ!!!, ಸಾಕು ಸಾಕು ನಿನ್ನಧಿಕಾರವು. ನಾಳೆ ನಮ್ಮಪ್ಪನು ಬರಲಿ. (ಎಂದು ಒಳಕ್ಕೆ ಹೊಗುವಳು)

ರಜಕ:—ರವೆಯುಷ್ಟು ಹೊಗೆಯಕಡ್ಡಿ ತಾರೆ. ( ಒಳಗಿನಿಂದ ಉತ್ತರವೇ ಬರುವುದಿಲ್ಲ) ಇವಳಿಗಾಗಲೇ ಕೋಪ ಬಂದಿತು. ಎಲ್ಲಿ ಯಾದರೂ ಹೋಗಲಿ ? ( ಎಂದು ಹೊರಡುವನು )

( ಅನಂತರ ಗೋವಿಂದನು ಬಲಭದ್ರನೊಡನೆ ಪ್ರವೇಶಿಸಿ. )

ಗೋವಿಂದ:—ಎಲೈ! ಇದು ಅಗಸರ ಮನೆಯಲ್ಲವೆ ?

ರಜಕ:—ಅಹುದು. ( ಎಂದು ನಡೆಯುತ್ತಿರುವನು )

ಗೋವಿಂದ:— ಎಲೈ ! ನಿಂತುಕೋ ಅಲ್ಲಿ; ನಮ್ಮಿಬ್ಬರಿಗೂ ತಕ್ಕ ಉಡುಗೆತೊಡಿಗೆಗಳು ಬೇಕು.

ರಜಕ:—ಜವಳಿ ಅಂಗಡಿಗೆ ಹೋಗಿ.

ಗೋವಿಂದ:—ಅಂಗಡಿಯ ಮಾತಿರಲಿ; ನಿನ್ನ ಹೆಗಲ ಮೇಲಿರುವುದೇನು ?

ರಜಕ:—ಅದೆಲ್ಲ ನಿಮಗೇಕೆ? ಇವು ಒಗೆದ ಮಡಿಬಟ್ಟೆಗಳು.

ಗೋವಿಂದ:—ಎಲೈ ಅಗಸನೆ! ನಾವು ಗೊಲ್ಲಹಳ್ಳಿಯವರು. ದನಕಾಯುವವರು. ಈ ಊರಿನ ಹಬ್ಬಕ್ಕಾಗಿ ಬಂದಿರುವೆವು.

ರಜಕ:—ನಿಮ್ಮ ಮೋರೆಯನ್ನು ನೋಡುತಲೆ ಹಳ್ಳಿಯವರೆಂದು ಗೊತ್ತಾಗುವುದು ನಿಮ್ಮ ಪುರಾಣವು ಯಾರಿಗೆ ಬೇಕು?

ಬಲ:—(ಕೋಪದಿಂದ) ಕೃಷ್ಣ! ನಮ್ಮನ್ನು ಅನಾಗರಿಕರೆಂದು ತಿರಸ್ಕರಿಸುವನು ನೋಡಿದೆಯಾ.

ಗೋವಿಂದ:—ಇರಲಿ ಇರಲಿ; (ಅಗಸನೊಡನೆ) ನಮ್ಮ ಪುರಾಣವು ನಿನಗೆ ಬೇಡವಾದರೆ ಹೋಗಲಿ; ಆ ಬಟ್ಟೆಯ ಗಂಟನ್ನು ಸ್ವಲ್ಪ ಬಿಚ್ಚು. ನಮಗೆ ಒಪ್ಪುವಂತಹವುಗಳನ್ನು ಆರಿಸಿಕೊಳ್ಳುತ್ತೇವೆ.

ರಜಕ:—ಏನು ನೀವೇ ಆರಿಸಿಕೊಳ್ಳುತ್ತೀರೋ ? ಭಲೆ ! ನಿಮ್ಮಪ್ಪನ ಮನೆಗಂಟನ್ನು ತಂದು ಕೊಟ್ಟಿರುವಂತೆ ಕೇಳುತ್ತೀರಲ್ಲ ? ಹೋಗಿರಿ ! ಹೋಗಿರಿ !! ಹಳ್ಳಿಯ ಕುರುಬರೆ !

ಬಲ:—( ಕೋಪದಿಂದ ) ಎಲೋ ನೀಚನೆ ! ನಾಲಗೆಯನ್ನು ಹಿಡಿದು ಮಾತನಾಡು, ಇಲ್ಲದಿದ್ದರೆ ತಕ್ಕ ದಂಡನೆಯಾದೀತು.

ರಜಕ:—ಎಲೊ ಹುಡುಗ ! ಪರಸ್ಥಳದಲ್ಲಿ ಅಡಗಿರದೆ ಎಷ್ಟು ಕೊಬ್ಬಿ ಮಾತನಾಡುವೆ ?

ಗೋವಿಂದ:—(ಕೋಪವನ್ನಡಗಿಸಿ) ಮೂರ್ಖನೆ ! ಈ ಸಲಕ್ಕೆ ನಿನ್ನನ್ನು ಕ್ಷಮಿಸಿರುವೆನು. ಬಟ್ಟೆಗಳಿಗೆ ಏನು ಹೇಳುವೆ ?

ರಜಕ:—ನಿನಗೇನು ಹೇಳುವುದು ? ನೀನಾವ ದೊಡ್ಡ ಮನುಷ್ಯ ? ( ಎಂದು ಹೊಡಲು ಯತ್ನಿಸುವನು )

ಬಲ:—(ಸಿಡಿದು) ನೀಚನೆ! ಗಂಟನ್ನು ಬಿಚ್ಚುವೆಯೋ ತಕ್ಕ ಫಲವಾಗಬೇಕೋ ?

ರಜಕ:—ತಕ್ಕಫಲ! (ಅನುಕರಿಸಿ) ಕೆನ್ನೆಗೆ ಹೊಡೆದರೆ ಚೆನ್ನಾಗಿ ಅಳುವುದಕ್ಕೆ ಕೂಡ ಬಾರದು. ಇಂತಹವನು ತಕ್ಕ ಫಲವನ್ನು ತೋರಿಸುವವನು !

ಗೋವಿಂದ:— ಅದೆಲ್ಲವೂ ಹಾಗಿರಲಿ; ಗಂಟುಬಿಚ್ಚು ನೋಡುವ.

ರಜಕ:—( ತನ್ನಲ್ಲಿತಾನು ) ಈ ಹುಡುಗರ ಕೈಯಲ್ಲಿ ನನಗೇನು ಆಯಿತು? (ಪ್ರಕಾಶ) ಅಯ್ಯಾ ! ದನಕಾಯುವ ಹುಡುಗರಿಗೆ ತಕ್ಕ ಕಂಬಳಿ, ದುಪಟಿ, ಚಲ್ಲಣ, ಟೊಪ್ಪಿಗೆ ಇಂತಹ ಬಟ್ಟೆಗಳು ನಮ್ಮಲ್ಲಿಲ್ಲವಪ್ಪ.

ಬಲ:—ಇನ್ನೆಂತವಿರುವುವು ? ತೆಗೆ ನೋಡುವ !

ಗೋವಿಂದ:—ಇರುವುದರಲ್ಲಿಯೇ ಕೊಡು; ಇಲ್ಲದುವು ಬೇಡ !

ರಜಕ:—ಎಲಾ ಬುದ್ಧಿಯಿಲ್ಲದ ಹುಡುಗರಿರಾ ! ವಿಜಯಲಕ್ಷ್ಮಿಯನ್ನು ಮದುವೆಯಾಗಲು ಎಳಸಿರುವ ಕಂಸಮಹಾರಾಜನ ಉಡುಗೆತೊಡುಗೆಗಳನ್ನು ಧರಿಸಲು ನೀವು ತಕ್ಕವರೇ ಏನು ?

ಗೋವಿಂದ:— ನಿಮ್ಮ ಕಂಸನಿಗೇನು ತಲೆಯ ಮೇಲೆ ಕೋಡುಗಳು ಮೂಡಿರುವುವೋ ? ನಾವೂ ವಿಜಯಲಕ್ಷ್ಮೀ ಪರಿಣಯೋತ್ಸುಕರಾಗಿಯೇ ಇರುವೆವು.

ರಜಕ:—ಇದೇ ಒರಟುತನದ ಮಾತು ! ನೀವು ಎಂದೂ ಪರಸ್ಥಳದಲ್ಲಿ ಓಡಾಡಿದವರಲ್ಲವೆಂದು ಕಾಣುತ್ತಿದೆ; ತಂದೆ ತಾಯಿಯರ ಪೋಷಣೆಯುಲ್ಲಿಯೇ ಇಷ್ಟಾನುಸಾರ ಬೆಳೆದಿರುವಂತಿದೆ; ನಿಮ್ಮ ತುಂಟತನವೆಲ್ಲ ನಿಮ್ಮ ಮನೆಯುಲ್ಲಿ !

ಗೋವಿಂದ:—( ಕೋಪದಿಂದ ) ಚಿಃ ! ಮೂಢನೆ ! ಕೊಡುವಿಯೋ ಇಲ್ಲವೋ ? ( ಎಂದು ಹೊಡೆಯಲು ಕೈಯೆತ್ತುವನು. )

ರಜಕ:—( ಕೋಪದಿಂದ ) ಆಃ ! ಮೂರ್ಖರಿರೆ ! ಈ ವರೆಗೂ ಹುಡುಗನೆಂದು ಸುಮ್ಮನಿದ್ದೆನು. ಎಲಾ ಎಲಾ! ಕೆಟ್ಟಹುಡುಗರೆ! ನೀವು ಎಡದ ಮಗ್ಗುಲಲ್ಲಿ ಎದ್ದು ಬಂದಿರುವಿರಿ. ಬೆಕ್ಕಿನ ಮೋರೆಯನ್ನು ನೋಡಿರುವಿರಿ. ತಾಳಿರಿ ತಾಳಿರಿ ! ( ಎಂದು ಇಬ್ಬರನ್ನೂ ಹಿಡಿಯುಕೊಳ್ಳಲು ಯತ್ನಿಸುವನು )

ಇಬ್ಬರೂ:–(ಹಿಡಿದುಕೊಂಡು ಬಟ್ಟೆಗಳ ಗಂಟನ್ನು ಕಿತ್ತುಕೊಂಡು.) ಛಿ ! ಮೂರ್ಖನೆ ! ಸಾಯಿ. ( ಎಂದು ಮುಷ್ಟಿಯಿಂದ ಪ್ರಹರಿಸಿ ತಳ್ಳುವರು. )

ರಜಕ:—ಹಾ ! ಹಾ !! (ಎಂದು ನೆಲಕ್ಕೆ ಬೀಳುವನು).

( ಬಲ ವಾಸುದೇವರು ಹೊರಟುಹೋಗುವರು )

( ಅನಂತರ ಕುಬ್ಜೆಯಾದ ಸ್ವಸ್ತಿಕನ್ಯೆಯು ಗಂಧದ ಪಾತ್ರೆಯೊಡನೆ ಪ್ರವೇಶಿಸುವಳು. )

ಸ್ವಸ್ತಿ:—ಅಕ್ಕಟಾ ! ಕುರೂಪಿಣಿಯಾದ ನನ್ನನ್ನು ನೋಡಿ ನಗುವರಲ್ಲ. ರೂಪಿಲ್ಲದ ಸ್ತ್ರೀಯರ ಬಾಳು ವ್ಯರ್ಥ! ಆ ನನ್ನ ಅಂಗವೈಕಲ್ಯಕ್ಕೆ ತಕ್ಕ ಕುಬ್ಜೆಯೆಂಬ ನಾಮವೂ ಆ ದುಷ್ಟ ಕಂಸನ ಅಂತಃಪುರ ದಾಸ್ಯವೂ ನನಗೆ ಸ್ಥಿರವಾಯಿತಲ್ಲ. ಅಯ್ಯೋ ! ( ಚಿಂತಿಸಿ ) ವಯೋಧರ್ಮಕ್ಕನುಗುಣವಾದ ಕಾಮವಿಕಾರವು ನನ್ನನ್ನು ಹಿಂಸಿಸುವುದು. ನಾನೇನು ಮಾಡಲಿ? ಹಾ ವಿಧಿಯೆ! ನನ್ನನ್ನೇಕೆ ಇಂತಹ ಅವಸ್ಥೆಗೆ ಗುರಿಮಾಡಿದೆ ? ( ನಿಟ್ಟುಸಿರುಬಿಡುತ್ತ ) ಜನ್ಮಾಂತರದ ಪಾಪಫಲವನ್ನು ಅನುಭವಿಸಲೇ ಬೇಕು. ( ಮೇಲೆ ನೋಡಿ ) ಹೊತ್ತಾಯಿತು; ಕಂಸನ ಅಂತಃಪುರಕ್ಕೆ ಈ ಪರಿಮಳ ದ್ರವ್ಯಗಳನ್ನು ಒಪ್ಪಿಸಿ ಬರುವೆನು. ( ಬರುತ್ತಿರುವಳು )

( ಅನಂತರ ಪುಷ್ಪಮಾಲಿಕಾಹಸ್ತಳಾದ ಕೀರ್ತಿಕನ್ಯೆಯು ಪ್ರವೇಶಿಸುವಳು )

ಕೀರ್ತಿ:—ಎಲೌ ಸ್ವಸ್ತಿಕನ್ಯೆ ! ಪೂಜ್ಯಳಾದ ಮಧುರಾಮಾತೆಯು ಆಜ್ಞಾಪಿಸಿರುವಳು, “ ವಿಜಯಲಕ್ಷ್ಮೀ ಸ್ವಯಂವರೋತ್ಸುಕನಾದ ಪುರುಷೋತ್ತಮನಾದ ಜಯ ವಾಸುದೇವನನ್ನು ಮಂಗಳದ್ರವ್ಯಗಳಿಂದ ಅಲಂಕರಿಸಬೇಕು ” ಎಂದು ಪರಮಾತ್ಮನನ್ನು ಸೇವಿಸಿ ಕೃತಾರ್ಥರಾಗಲು ನಮಗಿದು ಸುಸಮಯುವಲ್ಲವೆ ?

ಸ್ವಸ್ತಿ:—ಎಲೌ ಕೀರ್ತಿಕನ್ಯೆ ! ಆ ಭಕ್ತವತ್ಸಲನು ಆಗಮಿಸಿದನೆ? ! ಭಗವಂತನ ಚರಣಸೇವಾಕುತೂಹಲವು ನನಗೆ ಅತ್ಯಧಿಕವಾಗಿದ್ದರೂ ಈ ಅಂಗವೈಕಲ್ಯವು ಆ ಮಹಾನುಭಾವನಿದಿರಿಗೆ ಹೋಗಲು ನನ್ನನ್ನು ನಾಚುಗೆಗೊಳಿಸುತ್ತಿರುವುದಲ್ಲ!

ಕೀರ್ತಿ:—ಪ್ರಿಯ ಸಹೋದರಿ! ನಾಚುಗೆಯೇಕೆ? ಅಹಲ್ಯಾ ಶಾಪವಿಮೋಚನ ಮಾಡಿದ ಮಹಾನುಭಾವನು ನಿನ್ನನ್ನು ಅನುಗ್ರಹಿಸದಿರುವನೆ? ಬಾ! ಬಾ!। ಪರಮಾತ್ಮನ ಸಂದರ್ಶನವನ್ನು ತೆಗೆದುಕೊಳ್ಳುವ.

ಸ್ವಸ್ತಿ:–ಸಖಿ! ಅಂತಾಗಲಿ. (ಮುಂದೆ ನೋಡಿ) ಅಗ್ರಜಸಹಿತನಾದ ನಾರಾಯಣನು ಇತ್ತಲೇ ಬರುತ್ತಿರುವನು.

ಕೀರ್ತಿ—(ನೋಡಿ) ಆಃ! ಇವರು ಎಂತಹ ಸುಂದರಾಂಗರು!

ಕಂದ॥ ರಾರಾಜಿಸಿದಪರೀಸುಕು !
ಮಾರರ್ ಧರೆಗಿಳಿದು ಬಂದ ರವಿಚಂದ್ರರೆನಲ್॥
ಮಾರ ವಸಂತರೆನಲ್ ಮನ ।
ಮಾರಯೆ ಸಂಮುದಮನಾಂಪುದಿವರ ನೋಟಂ ॥ ೧೩ ॥

ಸ್ವಸ್ತಿ—ಸಖಿ ಕೀರ್ತಿಕನ್ಯೆ !

ವೃ॥ ಶ್ರೀಮನ್ಮುಗ್ಧ ಸುಧಾಮರೀಚಿ ವದನಂ ಪೀತಾಂಬರಂ ಸದ್ಘನ।
ಶ್ಯಾಮಂ ಶ್ರೀಮ-ಕುಟೋಜ್ವಲಂ ಸುಕಟಕಂ ಕೇಯೂರ ಹಾರಂ ಮಹಾ ।
ಪ್ರೇಮೋಲ್ಲಾಸವಿಲಾಸನಜ್ಞನಯನಂ ಶ್ರೀಮಂದಿರಂ ಸುಂದರಂ ।
ಕಾಮಾಪ್ರಕ್ಕೆಡೆಗೈದನೆನ್ನಮನಮಂ ಪಂಕೇಜಪತ್ರಾಂಬಕೇ ॥೧೩॥

ಕೀರ್ತಿ—ಸಖಿ! ಕುಬ್ಜೆ! ಈ ಮನೋಹರವಾದ ಶ್ಯಾಮಾಂಗನನ್ನು ನೋಡಿ ನನಗುಂಟಾದ ಅವಸ್ಥೆಯನ್ನು ಏನೆನ್ನಲಿ!—

ವೃ॥ ಮಸೆದಂ ಕೂರ್ಗಣೆಯಂ ಸ್ಮರಂ ಮೃಗಧರಂ ಕಾಯ್ಪಿಂದಮೆನ್ನಂ ಪಲುಂ ।
ಬಿಸುವಂ; ಪೆರ್ಚಿದ ಕೋಪದಿಂ ದಹಿಸುವಂ ಮಂದಾನಿಲಂ; ಮೋಹ್ ವಿರೋ ॥

...ನಿಂದಂ ಮಧುವುಂ ಬಿನರ್ಚಿಡದಪುದೀ ಪುಂಸ್ಕೋ
ಕಿಲಂ ಗರ್ಜಿಸಿ ।
...ಕವೀ ರಾಜಶುಕಾಳಿ ಪಲ್ಮೊರೆವುದೀ ಭೃಂಗಾಳಿಯೇ
ಪೇಳ್ವೆನೋ ॥೧೩೩॥

...ಸ್ತಿ—ಎಲೈ ರಾಮನೆ ! ನನ್ನನ್ನು ಸುಮ್ಮನೆ ಏತಕ್ಕೆ ಪೀ
...ವೆ ? ಇದರಿಂದ ನಿನಗೆ ಫಲವೇನು ?

...ಾನಲರಂ ನೆರಪುವ ಸುವಿ ।
...ೋದವನುಳಿದೀ ವಿರೂಪಿಣಿಯು ಪೀಡಿಪರೇ ? ॥
...ಾದೇವನ ಕರುಣೆಯುನಿನಿ
...ಾದೊಡವೊಂದದಳ ಪೊರೆಯದಿಂತೆಸಗುವರೇ ?
॥೧೩೪॥

...ಲೆ ಮನವೆ ! ಏತಕ್ಕೆ ತಲ್ಲಣಿಸುವೆ ? ಪುರುಷಸುಖವು
... ಈ ಜನ್ಮದಲ್ಲಿ ಲಭಿಸುವುದೆ ?

...ರ್ತಿ—ಸಖಿ ! ಈ ಪರಿಮಳದ್ರವ್ಯಪುಷ್ಪಮಾಲಿಕೆಗಳಿಂದ
...ಹಾನುಭಾವನನ್ನು ಸೇವಿಸಿ ಧನ್ಯರಾಗುವ ಬಾ !
...ತ್ತಿರುವರು)

...ೋವಿಂದ— ಬಲಭದ್ರ ! ಇತ್ತನೋಡು ಅಸಮಾನ
...ದರ್ಮುಖ ಮುಖವುಳ್ಳವಳಾದರೂ ಅವಯವ ವಿರೂಪ
... ಕ್ಲೇಶಪಡುತ್ತಿವ ಈ ತರುಣಿ ಯಾರಾಗಿರಬಹುದು ?
...ಬ್ಬರೂ ಬಾಲಿಕೆಯುರು ಎಲ್ಲಿಗೆ ಹೋಗುತ್ತಿರುವರೊ ?

...ಲ—ಗೋವಿಂದ ! ಸೃಷ್ಟಿಕರ್ತನಾವ ಚತುರ್ಮುಖನು
...ತಜ್ಞನಲ್ಲವೆಂದು ಊಹಿಸುವೆನು. (ಅಷ್ಟರಲ್ಲಿಯೇ ಸ್ವಸ್ತಿ
...ನುರು ಸಮಿಪಸಗತರಾಗುವರು)

...ೋವಿಂದ—ಎಲೌ ತರುಣಿಯರೆ! ನೀವಾರು? ಈ ಮಂ
...ದ್ರವ್ಯಗಳೊಡನೆ ಎಲ್ಲಿಗೆ ಹೊರಟಿರುವಿರಿ.

...ಸ್ತಿ—ಮಂಗಳಾಂಗನೆ ! ನಾವು ಕಂಸಾಸುರನ ಅಂತಃಪು
...ಸೈರಂಧ್ರಿಯರು. ಭಗವಂತರಾದ ನಿಮಗೆ ಮಂಗಳಾಲಂ
...ನನ್ನು ಮಾಡಬೇಕೆಂಸು ಪುರಮಾತೆಯಾದ ಮಧುರಾ
...ಯಿಂದ ಆಜ್ಞಪ್ತರಾಗಿರುವೆವು. ದಯೆಮಾಡಿ ನಮ್ಮ
...ಕಾರವನ್ನು ಕೈಕೊಳ್ಳಬೇಕು.

ಗೋವಿಂದ—ಬಾಲೆಯರೆ ! ನಿಮ್ಮ ಸಂತೋಷವಿದ್ದಂ ತಾಗಲಿ !

ಕೀರ್ತಿ—ಮಹಾನುಭಾವ ! ನಿಸರ್ಗ ಸುಭಗನಾದ ನಿನಗೆ ಈ ಪುಷ್ಪಾಲಂಕಾರವು ಆನಂದದಾಯಕವಾದರೆ ನಾನೀಗ್ಯ ಧನ್ಯಳು !

ಸ್ವಸ್ತಿ—ಮಂಗಳಮೂರ್ತಿಯೆ ! ಈ ಸುಗಂಧವು ನಿನ್ನ ಅಂಗ. ಸಂಗದಿಂದ ಧನ್ಯವೆನಿಸಲಿ.

(ಇಬ್ಬರೂ ಗಂಧಪುಷ್ಪಗಳನ್ನು ಸಮರ್ಪಿಸುವರು)

(ಬಲಗೋವಿಂದರು ಮಂಗಳಾಲಂಕಾರದಿಂದ ಶೋಭಿಸುವರು)

ಗೋವಿಂದ—ಎಲೌ ಕನ್ಯೆಯರೆ ! ನಿಮ್ಮ ಸಂಭಾವನೆ ಯನ್ನು ಬಹುವಾಗಿ ಗೌರವಿಸುವೆವು.

ಸ್ವಸ್ತಿ—ಪ್ರಭುವೆ ! ನಮ್ಮಲ್ಲಿ ದಯೆದೋರುವುದಾದರೆ. (ಎಂದುಅರ್ಧೋಕ್ತಿಯಲ್ಲಿ ಲಜ್ಜಿಸುವಳು)

ಗೋವಿಂದ—ಎಲೌ ಭದ್ರೆ ! ಲಜ್ಜೆಯೇಕೆ ?

ಸ್ವಸ್ತಿ—ಸ್ವಾಮಿ ! ನನ್ನ ಮನೋರಥವು ನನ್ನ ಯೋಗ ತೆಯನ್ನು ಮೀರಿದುದಾಗಿರುವುದು.

ಕೀರ್ತಿ—ಪ್ರಭುವೇ ! ತಮ್ಮ ಚರಣದಾಸ್ಯವನ್ನು ನಿರಂತರ ವಾಗಿ ಬೇಡುವೆನು.

ಗೋವಿಂದ—ಎಲೌ ಸಖಿಯರೆ !

ಕಂದ॥ ಸುಂದರಿ ನೀಂ ಪೂಸಿದ ಸಿರಿ— ।
ಗಂದಕೆ ಪಾಸಟಿಯೆ ? ನನ್ನ ತಳ್ಕೆಯಿಂದಬಲೇ
(ಎಂದು ಕುಬ್ಜೆಯನ್ನು ಆಲಿಂಗಿಸುವನು)
ಚಂದದೆ ಸುಮಮುಮಾಲೆವೊಲಾ—
ನಂದಂಗೊಳಿಕೆನ್ನ ಬಾಹುಯುಗಳಂ ಲಲಿತೇ ॥೧೩೫॥

(ಎಂದು ಕೀರ್ತಿಯನ್ನು ಆಲಿಂಗಿಸುವನು)

ಸ್ವಸ್ತಿ—ಆಃ ಈ ಮಹಾಪುರುಷನು ಅನುಗ್ರಹಿಸಿದುದರಿಂದ ನನ್ನ ವೈರೂಪ್ಯವು ಮಾಯವಾಯಿತು.

ಕೀರ್ತಿ—* ಈ ಪುರುಷೋತ್ತಮನುನ್ನು ಆಲಿಂಗಿಸಿ ನನ್ನ ಮಾಲಿನ್ಯವು ದೂರವಾಯಿತು. (ಇಬ್ಬರೂ) ಪ್ರಿಯನೆ !

---

( ಸದಾ ಇದುವೆ ಆನಂದ ಎಂಬಂತೆ )

* ಪ್ರಿಯಾ! ಬಾ ಬಾ ಸ್ಮರರುಚಾ ಸುತೇಜಾ ಸರೋಜಲೋಚನಾ । ನೆರೆ। ಬೇಡಿಕೊಂಬೆ ನಿನ್ನ ॥ ಪಲ್ಲ ॥ ಮದನನ ಸರಸ—। ಕ್ಕೊದಗೊ ಯೆ
। ಪ್ರಿಯ । ಮೃದುತರಹಾಸ ನೆರೆ । ಬೇಡಿಕೊಂಬೆ ನಿನ್ನ ॥೧॥ ವಿರಹ ಸಂಕಟ । ಸೈರಿಸೆನಕಟಾ । ಅಯ್ಯೊ ಮಾರನ ಕಾಟಾ । ನೀಡು ಸೌಖ್ಯವ !
...ನ ವಿಭವ । ಪ್ರಿಯಾ । ಕೊಡು ಸುಭಾವಾ ॥ ನೆರೆ ಬೇಡಿಕೊಂಬೆ ನಿನ್ನ ॥ ೨ ॥

ಕಂದ॥ ಪ್ರೇಮ ರಸಾರ್ಣವ ಬಾ ! ಬಾ !
ದಾಮೋದರ ಸದನಕ್ಕೈದಿ ಸುಖಿಸುವಮಿಾಗಳ್
ಕಾಮನ ಕೇಳಿಯೊಳರಸಾ
ಸಾವೋರದೆ ಶಣಿಯಿಸುವುದು ಕರುಣಾಭರಣಾ ॥೧೩೬॥

ಗೋವಿಂದ—ಎಲೌ ಸುಭಗೆಯರಿ ! ನೀಮ್ಮ ಕೋರಿಕೆಗೆ ಇದು ಸಮಯವಲ್ಲವು. ಮನೋರಥಪ್ರಾಪ್ತಿಯನ್ನು ಇದಿರು ನೋಡುತ್ತಿರಬಹುದು. ನಾವು ಭಗವತಿಯಾದ ವಸುಮತೀ ದೇವಿಯ ಆಜ್ಞೆಯಂತೆ ವಿಜಯಲಕ್ಷ್ಮಿಯ ಸಂಕಟನ್ನು ಪರಿಹಾರ ಮಾಡಲು ಹೊರಡುವೆವು.

ಇಬ್ಬರೂ—ವಿಭುವಿನ ಅಪ್ಪಣೆಯಂತಾಗಲಿ (ನಮಸ್ಕರಿಸಿ ಹೊರಡುವರು.)

ಗೋವಿಂದ— ಬಲಭದ್ರ ! ಶಸ್ತ್ರಶಾಲೆಯುನ್ನು ಕುರಿತು ಹೋಗುವ ನಡೆ

ಬಲಭದ್ರ—ಅಂತಾಗಲಿ ( ಇಬ್ಬರೂ ಹೊರಟು ಶಸ್ತ್ರಶಾಲೆಯಬಳಿ ಪ್ರವೇಶಿಸುವರು)

ಗೋವಿಂದ—* ಎಲೈ ದ್ವಾರಪಾಲಕರೆ ! ಒಂದು ಮಾತನ್ನಾದರೂ ಪ್ರತಿಮಾಡದೆ, ಕ್ಷಣವೂ ವಿಲಂಬಿಸದೆ, ಈ ತೀವ್ರವಾದ ಮುಷ್ಟಿಪ್ರಹಾರದಿಂದ ಸಾಯುವುದಕ್ಕೆ ಮೊದಲೆ ಶಸ್ತ್ರಗೃಹದ ಬಾಗಿಲನ್ನು ತೆರೆದು ನಮಗೆ ದಾರಿಯನ್ನು ಬಿಟ್ಟುಕೊಡಿ. (ದರ್ಪಿಸುವನು )

ದ್ವಾರಪಾಲಕರು—ಛಿ ! ಮೂರ್ಖರೆ ! ನಿಲ್ಲಿರಿ ! ನಿಲ್ಲಿರಿ ! ವಿಜಯಲಕ್ಷ್ಮೀ ನಿವಾಸಗೃಹವನ್ನು ನಿರಾತಂಕವಾಗಿ ಪ್ರವೇಶಿಸಲು ಆ ತ್ರಿಣೇತ್ರನಿಗೂ ಸಾಧ್ಯವಿಲ್ಲ. ಇಂತಹುದರಲ್ಲಿ ನಮ್ಮ ಕಂಸ ಮಹಾರಾಜನ ಆಜ್ಞೆಯೇನೆಂಬುದನ್ನ ಬಗೆಯದೆ ಉದ್ಧತರಾಗಿ ನುಡಿವ ನೀವು ಅವಿವೇಕಿಗಳಂತೆ ಕಾಣುವಿರಿ; ನಡೆಯಿರಿ ! ನಡೆಯಿರಿ ! ಎಚ್ಚರಿಕೆ ! ಇನ್ನು ಮುಂದೆ ಮಾತನಾಡುವುದಾದರೆ ಈ ಖಡ್ಗಧಾರೆಗೆ ಪ್ರಾಣಗಳನ್ನು ಒಪ್ಪಿಸುವಿರಿ.

ಬಲಗೋವಿಂದರು—ಛೀ! ಬಾಗಿಲು ಕಾಯುವ ನಾಯಿ[illegible] ಬಗುಳುತ್ತ ಬಿದ್ದಿರು ಅಲ್ಲಿ.

(ಎಂದು ಒಳಕ್ಕೆ ನುಗ್ಗಲು ಯತ್ನಿಸುವರು)

ದ್ವಾರಪಾಲಕರು—ಮೂರ್ಖರೆ! ನಿಮ್ಮ ಶಿರಗಳನ್ನು ನೆಲ[illegible] ಳುಹುವೆವು ! ನಿಮಗಿಂದೇ ನೂರು ವರುಷಗಳು ಪೂರ್ತಿಯ[illegible] ರುವುವು ! (ಎಂದು ಖಡ್ಗವನ್ನು ಹಿರಿದು ನೇಳೆ ನುಗ್ಗುವರು)

ಇಬ್ಬರೂ—ಛೀ ಹೇಡಿಗಳೆ ! (ಎಂದು ಮುಷ್ಟಿಯಿಂದ ಇಬ್ಬರ[illegible] ತಿವಿದು ಕೆಡಹುವರು)

ದ್ವಾರಪಾಲಕರು—ಅಯ್ಯೋ ! ಅಹೊ್ಯೀ !! (ಎಂದು ನ[illegible] ಮೇಳೆ ಬಿದ್ದು ಮಡಿವರು)

ಗೋವಿಂದ—(ಬಲದೇವನೊಡನೆ ಒಳಕ್ಕೆ ಪ್ರವೇಶಿಸಿ) ಬಲಭದ್ರ[illegible] ಕಂಸನ ಶಸ್ತ್ರಸಾಮಗ್ರಿಯ ಮಹಾ ವೈಭವವನ್ನು ನೊಡಿದೆಯ[illegible] ಈ ನಿಶಾತ ಖಡ್ಗಗಳು, ಈ ತೀಕ್ಷ್ಣ ಬಾಣಗಳು; ಈ ಮಹಾ[illegible] ದೆಗಳು! ಪ್ರತ್ಯರ್ಥಿಭೀಕರಗಳಾದ ಆ ಕೃಪಾಣಗಳು! ಇವುಗ[illegible] ಕಾಂತಿ ದಿಗಂತವನ್ನು ವ್ಯಾಪಿಸುವಂತಿರುವುದಲ್ಲ !

ಬಲ—ಅಷ್ಟದಿಕ್ಪಾಲಕರ ಐಶ್ವರ್ಯವೆಲ್ಲವನ್ನೂ ಈ ಸಾ[illegible] ನಗಳಿಂದಲೇ ಅಲ್ಲವೇ ಕಂಸನಪಹರಿಸಿದುದು (ಎಂದು ಆಯು[illegible] ಗಳನ್ನು ನೋಡುತ್ತಿರುವರು)

( ಅನಂತರ ವಸುಮತಿ ಮುಧುರೆಯರು ವಿಜಯಲಕ್ಷ್ಮಿಯೊಡನೆ ಪ್ರವೇಶಿ

ವಸುಮತಿ – ವತ್ಸೆ ವಿಜಯೆ ! ಪುಷ್ಪಮಾಲೆಯನ್ನು ಹಿಡಿ[illegible] ಸಿದ್ಧಳಾಗಿರು. ಭಗವಂತನಾದ ವಾಸುದೇವನು ನಿನ್ನನ[illegible] ಸಂತೋಷಗೊಳಿಸುವನು !

ವಿಜಯೆ:—ಮಾತೆ ! ಇದೊ, ಸಿದ್ಧಳಾಗಿಯೇ ಇರುವೆನ[illegible]

ಗೋವಿಂದ:—ಬಲಭದ್ರ ! ದಿವ್ಯಕುಸುಮಗಂಧಾಕ್ಷತೆಗಳ[illegible] ದಲಂಕೃತವಾಗಿ ಚೀನಾಂಬರದಿಂದಾಚ್ಛಾದಿತವಾಗಿರುವ ಶಿ[illegible] ಧನುಸ್ಸಿಗೆ ಸಮಾನವಾದ ಈ ಉದ್ದಾಮಕಾರ್ಮುಕವ[illegible] ನೋಡಿದೆಯಾ ?

---

( ದಾರಿಯ ಬಿಟ್ಟು ಸಾರಿರಿ ಬೇಗ ಎಂಬಂತೆ )

* ಕೃಷ್ಣ ಬಲರಾಮ:—ಛಡ ಛಡ ಮೂಢರೆ! ಬಿಡಿ ಬಿಡಿ ಮಾರ್ಗವ ತಡೆಯುದಿತಿನ್ಮಾನು ಬಲು ಜೋಕೆ। ತಡೆದಿರಾದೊಡೆ। ಕಡಿವೆಂ ನಿಮ್ಮ[illegible] ವ ಡಿಯರೀಪರೀ । ಕೆಡಲುಬೇಡಿರಿ ॥ ೧ ॥

ದ್ವಾರಪಾಲಕರು:—ನಿಲ್ಲಿರಿ ! ನಿಲ್ಲಿರಿ !! ನಿಲ್ಲಿರದೆಲ್ಲಿಗೆ ಖುಲ್ಲರೆ ಪೋಪಿರಿ ನಿಲ್ಲದೆ ನೀವ್ । ಪೊಳ್ಳುಬಾಲರೇ ಜಳ್ಳು । ಮಾತಿದೇ[illegible] ಕೊಲ್ಲುವೆ ನಿಮ್ಮನು ನಿಲ್ಲಿಯೀಗ ನಾಂ ॥ ೨ ॥

ಬಲಗೋವಿಂದ:—ಭಲಾ ಭಲರೆ ಭಲ ಭಲಾಭಲರೆ ಭಲ ಭಲಾ ಭಲರೆ ಭಲ ಭಲ ಭಲರೆ। ಬಲ್ಲ ನೋಡುವ ! ನಿಲ್ಲಿ ನೋಳ್ಪೆವು । [illegible] ದವರು ನೀವೆಲ್ಲಿ ಪೋದಿರಿ ॥ ೩ ॥

ಬಲ:— ಕೃಷ್ಣ ! ಅದನ್ನು ಭಂಗಿಸಿ ವಸುಮತೀದೇವಿಯು ನ್ನನ್ನು ಆನಂದಗೊಳಿಸು.

ಗೋವಿಂದ:— ಅಂತಾಗಲಿ ( ಧನುಸ್ಸನ್ನು ಕೈಯಲ್ಲಿ ಹಿಡಿದು )

ಕಂದ॥ ದಿವಿಜರ್ ಭಾಪೆಂಸೆನೆ ಜಯ— ।
ಯುವತಿ ಮುದಂದಳೆಯೆ ವಸುಧೆ ಪೊಂಪುಳಿ ಪೋಗಲ್ ॥
ಜವದಿಂದೀ ಕಾರ್ಮುಕಮಂ ।
ತವೆ ಭಂಗಿಸಿ ಪೋದವಾಂಪೆನುರೆ ಜಸನ್ನು ಣ್ಮಲ್ ॥ ೧೩೭ ।

( ಎಂದು ಭಂಗಿಸಲು ಫಿಳಿಫಿಟಲೆಂದುಶ್ಶಬ್ದವು ಹೊರಡುವುದು )

ಜಯಲಕ್ಷ್ಮಿ:— * ( ಸವಿಲಾಸಗತವಾಗಿ )

ಕಂ. ಫಲಿಸಿದುದೆನ್ನಯ ಭಾಗ್ಯಂ
ಸಲೆ ಪೊಣ್ಮಿದುದೀಗ ಮೋದಮೆಲ್ಲೆಡೆಯೊಳಗಂ ।
ಜಲಜಾಕ್ಷನ ಕೊರಲೊಳ್ ನಾಂ
ನಲವಿಂದರ್ಪಿಸುವೆನೀಗಳೀವಾಲಿಕೆಯಂ ॥೧೩೮॥

( ಆಕಾಶದಿಂದ ಪುಷ್ಪವೃಷ್ಟಿಯಾಗುವುದು. )

ವಸುಮತೀಮಧುರೆಯರು:— ಜಯಜಯ ! ಯದುಕುಲ ಸಾರ್ವಭೌಮ ! ಜಯವಿಜಯಾಂಗನಾಮನೋಹರ. ಜಯ ತ್ಕೃಧನ, ಜಯ ವಾಸುದೇವ

( ತೆರೆಯಲ್ಲಿ )

ವೃ॥ ಬರಸಿಡಿಲೋ ಮಹಾ ಪ್ರಳಯಮೇಘವಿರಾವವೊ ? ಕಾಲರುದ್ರಭೀ
ಕರನಿಟಿಲಾಕ್ಷವಹ್ನಿಯ ಛಟಚ್ಛಟ ನಿಸ್ವನವೋ ! ಇದೆಂಬಿನಂ ।
ಬಿರಿವಿನಮಬ್ಜಜಾಂಡಮೆಸೆವೀ ದೆಸೆಯೆಲ್ಲ ಕಿವುಂಡು ದಾಳ್ವಿನಂ
ನೆರೆಯೆ ಮಹಾರವಂ ಮುರಿದನಾವನವಂ ಧನುವಂ ದುರಾತ್ಮಕಂ ॥ ೧೩೯ ॥

ವಸುಮತೀ:— ( ಕಿವಿ) ಆಹಾ ! ದುರಾತ್ಮನಾದ ಕಂಸನು ರೋಷಾವಿಷ್ಟನಾಗಿ ಇತ್ತಲೇ ಬರುತ್ತಿರುವನು. ಮುಂದೇನುಗತಿ? ಭಗವಂತನಾದ ನಾರಾಯಣನೇ ! ರಕ್ಷಿಸು ರಕ್ಷಿಸು ! ( ಎಲ್ಲರೂ ಭಯವನ್ನು ನಟಿಸುವರು. )

ಗೋವಿಂದ: — ಪೂಜ್ಯಳಾದ ವಸುಮತೀದೇವಿ ! ಭಯ ವೇಕೆ ? ವಿಜಯೆ ! ನೀನು ನನ್ನ ಬಳಿಯಲ್ಲಿಯೇ ಇರು.

( ಅನಂತರ ಕಂಸನೂ ಅಮಾತ್ಯನಾದ ಕೃಶಾನುವೂ ಪ್ರವೇಶಿಸಿ "ಬರಿ ಸಿಡಿಲೋ" ಇತ್ಯಾದಿ ಪದ್ಯವನ್ನು ಹಾಡುತ್ತಾ)

ಕಂಸ:— * ( ಕೋಪದಿಂದ ಹಲ್ಲನ್ನು ಕಡಿಯುತ್ತಾ ) ಆಹಹ! ಅದಾವನೀಚನು ಕಾಳಸರ್ಪವನ್ನು ಮೆಟ್ಟಿದನು ? ಛಡ ! ಆವ ದುರಾತ್ಮಕನು ಸಿಂಹದ ದಂಷ್ಟ್ರಕ್ಕೆ ಕೈಹಾಕಿದನು ? ಆಹಹ ! ಆವ ನಿಷ್ಠುರನು ಜೀವದಮೇಲಣ ಆಸೆಯನ್ನು ತೊರೆದು ಸಿಡಿ ಲನ್ನು ತುಡುಕಿದನು ?

( ನಾರದನು ಪ್ರವೇಶಿಸಿ )

ನಾರದ:—ಕಂಸಮಹಾರಾಜ! ಧನುರ್ಭಂಗನಿಯಮದಿಂದ ವಿಜಯಲಕ್ಷ್ಮಿಯನ್ನು ವರಿಸತಕ್ಕುದೆಂಬ ವಸುಮತಿಯ ಶಾಸನ ದಂತೆ ಈ ಬಾಲಕೃಷ್ಣನು ಧನುಸ್ಸನ್ನು ಮುರಿದು ವಿಜಯಾಂಗ ನೆಯನ್ನು ವರಿಸಿರುವನು ! ವಸುಮತಿಯ ಆಜ್ಞೆ ಸರ್ವ ಮಾನ್ಯವಲ್ಲವೆ ?

ಕಂಸ:—

ಕಂದ॥ ಛಡ! ಕೊಂದಪೆನೀದುಷ್ಟನ
ಪಿಡಿದೀವಸುಮತಿಯ ಕಟ್ಟುವೆಂ; ಮಧುರೆಯನಾಂ !
ಕಡಿವೆಂ? ವಿಜಯಾಂಗನೆಯಂ
ಮುಡಿವಿಡಿದೀಳ್ವೆಂ; ಖಳಂಗೆ ಸಿಲ್ಕಲೀಯೆಂ ನಿಸದಂ ॥ ೧೪೦ ॥

( ಎಂದು ಮುಂದೆ ನುಗ್ಗುವನು )

---

( ಪರಮ ಪಾವನಾ ವರದಲೋಕಪಾಲ ಎಂಬಂತೆ )

* ಧನ್ಯಳಾದೆನೋ । ಮಾನ್ಯಳಾದೆ ನಾನು ॥ಪ॥ ಸನ್ನುತಾಂಗ ಕೃಷ್ಣನನ್ನು ನೋಡಿದೆ. ॥ ಎನ್ನ ಪೂರ್ವಪುಣ್ಯವೆನ್ನದೇನ ಪೇಳ್ವೆ । ಎನ್ನ ಸಮ ಇನ್ನು ಲೋಕದೊಳು ಸರಸಿಜಾಕ್ಷ ಸುಮುಕರನ ಪತ್ನಿವನ । ಹರುಷದಿಂದ ಕೂಡಿ ಪರಮ ಸೌಖ್ಯದಿಂದಲಿ ದೇವ ದೇವನೆನ್ನ ಪಾಲಿಸಿದನಲ್ತೆ । ದೇವ ವಾಸು । ದೇವ ನೊಲ್ಮೆಯಿಂದಲಿ ॥

( ಸರೋಜಾಸನನ ವರಂಬಡೆದು ಎಂಬಂತೆ )

* ಮದಂ ಮುರಿವೆ ಮುದಂಬಡುವೆ ಮದೋದ್ಧತನಗಾಧ ॥ ಪ ॥ ಕದನರಂಗದೊಳಗೆ ಭೂತಕೊದಗಿಸುವೆನು ಕರಿನುಣಿಸನು ॥ಅ॥ ಮಹಾ ವನಕೋ ಮುರಿದ ಮಹಾತ್ಮಕನನು ಸೀಳ್ವೆ । ಆಹಹ ನೋಡೆ ಮಹಿಪೊಳಗುರಿ ಮಹಿಮೆತೋರಿ ಸ: ಮೆರೆಯುವೆ. ॥

ನಾರದ:— ಕಂಸಭೂಪ! ತಾಳು ತಾಳು! ನಿನ್ನೀ-ಯಿಂದಿರಾದೀಬಾಲರು ಸಾಮಾನ್ಯರಲ್ಲ

ಕಂದ॥ ಬಿಸಯೂಡಿಸಿದಾ ಪೂತನೆ ।
ಯಸುದೊರೆದಳ್ ಶಕಲನಾವನಲ್ತೇ ಶಕಟಂ ॥
ಉಸಿರುಡುಗಿದನಾ ಧೇನುಕ ।
ನಸುರರ್ ಕೇಶಿಯುಮರಿಷ್ಟನುಂ ಮಡಿದ
ರಲೇ ॥ ೧೪೧ ॥

ಆದುದರಿಂದ ಇವರೊಡನೆ ಸಾಹಸವನ್ನು ಮಾಡಬೇಡ !

ಕೃಶಾನು:— ಮಹಾಪ್ರಭು! ಕಾರ್ಮುಕ ಭಂಜನದಿಂದಲೇ ಈ ಬಾಲಕರು ಅಸಹಾಯಶೂರರೆಂದು ತಿಳಿಯಬರುವುದು. ಆದುದರಿಂದ ಇವರೊಡನೆ ಇದಿರಾಗುವ ಸಾಹಸವನ್ನು ಬಿಟ್ಟು ಉಪಾಯಾಂತರದಿಂದ ಈ ಬಾಲಕರನ್ನು ನಿಗ್ರಹಿಸುವುದುಚಿತವು.

ಕಂಸ:—ಅಮಾತ್ಯನೇ! ಹಾಗೆಯೇ ಸರಿ. ಎಂದು (ಗೋವಿಂದನ ಸಮೀಪಕ್ಕೆ ಹೋಗಿ) ಎಲೈ ಪೊಳ್ಳುಬಾಲನೆ! ಧನುರ್ಭಂಗಮಾತ್ರದಿಂದ ವಿಜಯಲಕ್ಷ್ಮಿ ನಿನ್ನ ಸ್ವಾಧೀನವಾಗಲಾರಳು.

ಗೋವಿಂದ:— ರಾಜನೆ ! ವಿಜಯಲಕ್ಷ್ಮಿಯನ್ನು ಹೇಗಾದರೂ ಕಾಪಾಡುವುದು ನನ್ನ ಕರ್ತವ್ಯವಾಗಿರುವುದು.

ನಾರದ:—ಬಾಲಕರೆ ! ರಾಜಾಧಿರಾಜನಾದ ಕಂಸನೊಡನೆ ವಿರೋಧಿಸುವುದು ಸರಿಯೆ ?

ಗೋವಿಂದ:—ನಾರದರೆ! ಓರ್ವ ಅಬಲೆಯನ್ನು ರಕ್ಷಿಸಲು ಎಂತಹ ಸಹಾಸವನ್ನಾದರೂ ಮಾಡುವೆನು.

ಬಲ:— ನಾರದರೆ ! ಹೇಗೂ ನಾವು ಕಾಳಗಕ್ಕೆ ಸಿದ್ಧರಾಗಿಯೇ ಇರುವೆವಲ್ಲವೆ ?

ಕಂಸ:— ಎಲೈ ಕೆಟ್ಟಹುಡುಗರೆ ! ನನ್ನ ಕುವಲಯಾಪೀಡವೆಂಬ ಗಜವನ್ನೂ ಚಾಣೂರಮುಷ್ಟಿಕಾದಿ ಜಟ್ಟಿಗಳನ್ನೂ ಗೆದ್ದಮೇಲೆ ವಿಜಯಾಂಗನೆ ನಿಮ್ಮವಳಾಗುವಳು. ಆ ವರೆಗೂ ನನ್ನ ಸೆರೆಯಿಂದ ಅವಳನ್ನು ಬಿಡುಗಡೆಮಾಡಿಸುವುದಕ್ಕೆ ಯಾರಿಗೂ ಸಾಧ್ಯವಿಲ್ಲ. ಧನುರ್ಮಹೋತ್ಸವದಲ್ಲಿ ಧನುರ್ಭಂಗದ ಅಪರಾಧವನ್ನು ಮಾಡಿದ ಪಾಪಿಗಳಾದ ನಿಮಗೆ ತಕ್ಕ ದಂಡನೆಯನ್ನು ವಿಧಿಸಿದಮೇಲೆ ಶಾಂತನಾಗಿ ವಿಜಯಲಕ್ಷ್ಮಿಯನ್ನು ವಿವಾಹವಾಗುವೆನು.

ನಾರದ:—ಸರಿಸರಿ, ಇದೀಗ ವಿಹಿತವು. ಕೃಷ್ಣ! ಈ ಕಾಳಗವನ್ನು ನೀನು ಗೆದ್ದಹಲ್ಲವೆ ನಿನಗೆ ವಿಜಯಲಕ್ಷ್ಮಿ?

ಗೋವಿಂದ:— ಆಗಲಿ ಆಗಲಿ ! ಮಲ್ಲಗಾಳಗವನ್ನು ಕ[illegible]ಸಬಹುದು.

ಕಂಸ:— ಅಮಾತ್ಯ ಕೃಶಾನು! ಈ ನೀಚರಿಗೆ ತಕ್ಕುದನ[illegible] ಮಾಡಲು ಸಿದ್ಧಿಪಡಿಸುವ ನಡೆ ( ಮಂತ್ರಿಯೊಡನೆ ಹೊರಟುಹೋ[illegible]ವನು )

ಗೋವಿಂದ:— ಉದ್ಧತನಾದ ಈ ರಾಕ್ಷಸನ ಮೇ[illegible] ಮೀರಿದ ಮದವನ್ನು ಮುರಿಯಲು ತಕ್ಕಸಮಯವು ದೊ[illegible]ತಂತಿದೆ. ಇರಲಿ ! ಈ ನೀಚನ ಆಟಗಳೆಲ್ಲವನ್ನೂ ಅಡಗಿಸು[illegible] ಎಲೌ ರಮಣಿ ! ನಿರ್ಭೀತಳಾಗಿ ನೀನು ನನ್ನ ಬಳಿಯಲ್ಲಿಯ[illegible] ಬರಬಹುದು. ಭಗವತಿಯಾದ ವಸುಮತೀದೇವಿ! ಪೂಜ್ಯಳಾ[illegible] ಮಧುರೆ ! ನಿಮ್ಮ ಪೂರ್ಣಾನುಗ್ರಹದಿಂದ ವಿಜಯಲಕ್ಷ್ಮಿ[illegible] ಮೇಲ್ಮೆಯನ್ನು ಬಯಸುವ ನನಗೆ ಅಸಾಧ್ಯವಾದುದ[illegible] ಆವುದೂ ಇರದೆಂದು ನಂಬಿರುವೆನು.

ವಸುಮತೀಮಧುರೆಯರು:— ಪುರುಷೋತ್ತಮನೆ ! ವಿ[illegible]ಯಿಯಾಗು.

ಗೋವಿಂದ:— ಬಲಭದ್ರ ನೋಡು, ಪ್ರಾತಃಕಾಲ[illegible] ಸಮೀಪವಾಗುತ್ತಿರುವುದು.

ಕಂದ॥ ಒಂದಿಸಿ ಕೇಡಂ ಪಂಕಜ
ಮಂದಿರಕಂ ಕರಮಳಲ್ಚಿ ಚಕ್ರಮನನಿಶಂ
ತಾಂ ದೋಷಾಕರನೆನಿಸಿದ
ಚಂದಿರನಿದೊ ಮುಳುಗುತಿರ್ಪನೀ ಖಳ
ರಾಜಂ ॥ ೧೪೨ ॥

ಆಗಲಿ ನಮ್ಮ ಶಕ್ತಿಸಹಾಸಗಳನ್ನು ಪ್ರಕಾಶಗೊಳಿಸುವ ಸ[illegible]ಯವನ್ನು ಅತ್ಯಾದರದಿಂದ ನಿರೀಕ್ಷಿಸುವ ಬಾ ( ಹೊರಟ[illegible] ಹೋಗುವರು )

ನಾರದ:— ( ಸಶಿಷ್ಯನಾಗಿ ಪ್ರವೇಶಿಸಿ ) ಶಿಷ್ಯ ಪುಷ್ಪಕ !

ಪುಷ್ಪಕ:— ಗುರುಗಳೆ ! ಸನ್ನಿಧಿಯಲ್ಲಿಯೇ ಸಿದ್ಧನಾಗಿ[illegible]ವೆನು. ಹಲವುದಿನಗಳಿಂದಲೂ ಸಂಗೀತಪಾಠಕ್ಕೇ ಅವಕಾ[illegible]ವಿಲ್ಲವು. ಸುಮ್ಮನೆ ಕಾಲಹರಣವಾಗುತ್ತಿದೆ. ವೀಣೆಯನ[illegible] ಸ್ವಲ್ಪ ಬಿಚ್ಚಲೆ ?

ನಾರದ— ಅಯ್ಯಾ! ನಿನ್ನ ಸಂಗೀತವು ಯಾರಿಗೆ ಬೇಕು[illegible] ಪ್ರಪಂಚದ ಉಳಿವು ಅಳಿವುಗಳಲ್ಲಿಯೇ ಸಂದೇಹವು ತೋರ[illegible]ತ್ತಿದೆ. ದೇವತೆಗಳೆಲ್ಲರೂ ತಮ್ಮ ಹಣೆಯ ಬರೆಹವನ್ನು ತಿ[illegible]ಯಲು ಆಕಾಶದಲ್ಲಿ ನೆರೆದಿರುವರು ನೋಡು, ಇಂತಹ ವಿಷ[illegible]

ಸಮಯದಲ್ಲಿ ಯಾವ ಯಾವುದು ಹೇಗೆ ಹೇಗೆ ನಡೆವುದೆಂಬುದನ್ನು ನೋಡುವ.

ಪುಷ್ಪಕ—ಗುರುಗಳೆ! ತಮ್ಮ ವರ್ಣನೆಯಿಂದ ಎದೆ ತಲ್ಲಣಿಸುತ್ತಿರುವುದು.

ನಾರದ—... ಪುಷ್ಪಕ! ಭಯದಿಂದ ಪ್ರಯೋಜನವೇನು? ಕಾಲಾನುಸಾರವಾಗಿ ಒದಗಿದುದನ್ನು ಅನುಭವಿಸಲು ಸಿದ್ಧರಾಗಿರಬೇಕು.

( ಕಿರಿಯಲ್ಲಿ )

ಕಂ॥ ಕುಂಭಂ ರೌದ್ರವಿಗುಂಭಿತ ।
ಮಂಭೋರುಹ ಸಂಭವಾಂಡವಿಸ್ಫುಟ ನೋದ್ಯ- ।
ಜ್ಜೃಂಭಣಮಿಾ ಬೃಂಹಣಮು ।
ತ್ತುಂಭಿತಶುಂಡಾಲದಂಡಮಿದೆ ಯಮುವಂಡಂ ॥೧೪೩॥

ನಾರದಂ— (ಕೇಳಿ) ಆಹಾ ! ಕುವಲಯಾಪೀಡಗಜದೊಡನೆ ಬಲರಾಮಕೃಷ್ಣರು ಹೋರಾಡುತ್ತಿರುವ ದೃಶ್ಯವು ಮಹದದ್ಭುತವು. ಪುಷ್ಪಕ! ನೋಡು ಆ ಬಾಲಕರು ಮುಷ್ಟಿಗಳಿಂದಲೇ ಆ ಕೆಟ್ಟ ಪ್ರಾಣಿಯನ್ನು ಕುಟ್ಟಿ ಆಯಾಸ ಪಡಿಸುತ್ತಿದ್ದು. ಈಗ ಅದರ ದಂತಗಳೆರಡನ್ನೂ, ಕಿತ್ತುಕೊಂಡು ಅವುಗಳಿಂದಲೇ ಹೊಡೆದು ಸಂಹರಿಸಿರುವರು ನೋಡು.

ಪುಷ್ಪಕ— ಆಹಾ! ಗಜಾಸುರನೊಡನೆ ಹೋರಿ ಕೊಂದ ಖಂಡಪರಶುವಿನ ಸಾಹಸವನ್ನು ಈ ಬಾಲಕರು ನೆನೆಯಿಸಿದರು. ( ಮತ್ತೆ ನೋಡಿ ) ಗುರುಗಳೆ! ಎಲ್ಲಿ ಬಾಲವಾಸುದೇವರು ಈಗ ಅಲ್ಲಿ ಕಾಣುವುದಿಲ್ಲವಲ್ಲ? ಎಲ್ಲಿ ಹೋದರು ?

ನಾರದ— ಸಂಕರ್ಷಣವಾಸುದೇವರು ಮಲ್ಲರಂಗವನ್ನು ಪ್ರವೇಶಿಸಿರುವರು. ನಾವೂ ಅಲ್ಲಿಯ ಫಲಿತಾಂಶವನ್ನು ನೋಡುವ ಬಾ ( ಎಂದು ಹೊರಡುವರು )

( ಮಲ್ಲರಂಗ—ಕಂಸಾದಿಗಳು ಉಚ್ಚಾಸನದಲ್ಲಿ ಕುಳಿತಿರುವರು )
( ಅಲಂಕೃತರಾದ ಜಟ್ಟಿಗಳು ಕಾಳಗಕ್ಕೆ ಸಿದ್ಧರಾಗಿರುವರು )

( ಪ್ರವೇಶಿಸಿ )

ಗೋವಿಂದ— *

ಕಂ॥ ಮಾತಂಗಮಳಿದುದೆನುತಂ ।
ಮಾತಲನೇ ಚಿಂತಿಸದಿರು; ಕೋಳ್ಕಳನದರಾ ।
ಪ್ರೀತಿಯೊಳಿದೊ ತಂದಿರ್ಪೆವು;
ಭೂತಲದೊಳ್ ಗಜದ ತೊವಲಸೇತಕೆ ಪೇಳ್ವೈ ॥೧೪೪॥

ಈ ಅಮೂಲ್ಯವಾದ ದಂತಗಳನ್ನು ನಿನ್ನ ಭಂಡಾರಕ್ಕೆ ಸೇರಿಸು ( ಎಂದು ಇಬ್ಬರೂ ದಂತಗಳನ್ನು ಕಂಸನ ಬಳಿಗೆ ಎಸೆವರು )

ಕಂಸ— ( ಕೋಪದಿಂದ ) ಎಲೈ ನೀಚರಾದ ಹುಡುಗರಿ! ರಾಜನೆಂಬ ಗೌರವವನ್ನೆಣಿಸದೆ ನೀವು ಮಾಡಿದ ಈ ತಪ್ಪನ್ನು ಕ್ಷಮಿಸಲಾರೆನು. ನಿಮಗೆ ತೋಳ್ಬಲದ ಕೊಬ್ಬು ಹೆಚ್ಚಿರುವುದು. ಆಗಲಿ. ನಮ್ಮ ಜಟ್ಟಿಗಳೊಡನೆ ನಿಮ್ಮ ಸಾಮರ್ಥ್ಯವನ್ನು ತೋರಿಸಿ. ಎಲೈ ಮುಷ್ಟಿಕ-ಚಾಣೂರರೆ! ವೀರರಾದ ಈ ಬಾಲಕರ ಶಕ್ತಿಯನ್ನು ಪರೀಕ್ಷಿಸಿ

ಜಟ್ಟಿಗಳು— ( ಭುಜಗಳನ್ನು ತಟ್ಟಿ ನಿಂತುಕೊಂಡು )

ವೃ ಕಡಲಂ ಪೀರ್ವೆವೊ? ನಾಂ ಕುಲಾದ್ರಿಗಳನೇನುನ್ಮೂಲು
ನಂಗೆಯ್ವೆವೊ ।
ಸಿಡಿಲಂ ಮುತ್ತುವೆವೋ? ಲಯಾಗ್ನಿಯನದೇಂ ನಂದಿ
ಪ್ಪೆವೋ? ದರ್ಪದಿಂ ।
ಘಡ ಚಂದ್ರಾರ್ಕರ ಕೀಳ್ವೆವೋ? ಪೊಡವಿಯಂ ಪಾತಾಳ
ಕಟ್ಟಿಪ್ಪೆವೋ ?
ನುಡಿ ನಿನ್ನಾಜ್ಞೆಯನಾಂತೆವಿಂ ಧರಣಿಪಾ ಈ ಬಾಲರೇಂ
ಗಣ್ಯರೈ ॥೧೪೫॥

ಎಲೈ ಪೊಳ್ಳುಬಾಲರಿ! ಅನ್ಯಾಯವಾಗಿ ಏತಕ್ಕೆ ಪ್ರಾಣಗಳನ್ನು ಬಲಿಗೊಡುವಿರಿ ?

ಬಲ. ಕೃ— ಎಲೈ ಹೇಡಿಗಳೇ! ಪ್ರಾಣಗಳ ಮೇಲಿನ ಆಸೆಯಿದ್ದರೆ ನೀವೇ ನಮಗೆ ಶರಣಾಗತರಾಗಿ ಬದುಕಿಕೊಳ್ಳಿರಿ

ಚಾಣೂರ— ಎಲೈ ಮಾತಿನ ಮಲ್ಲರೆ! ಗೊಲ್ಲರೆ! ಈ ವೀರಮಲ್ಲರೊಡನೆ ನಿಂತು ಮಾತನಾಡುವಷ್ಟು ಧೈರ್ಯವಾದರೂ ನಿಮಗಿರುವುದಕ್ಕೆ ಸಂತೋಷಪಡಬೇಕು. ಬನ್ನಿರಿ. ರಣರಂಗವು ಎಂತಹುದೆಂಬುದು ಈಗ ತಿಳಿವುದು.

ಗೋವಿಂದ— ನೀಚನೆ! ಸುಮ್ಮನೆ ಬಾಯಿಮಾತಿನಿಂದ ಪ್ರಯೋಜನವೇನು? ನಮ್ಮಿಬ್ಬರಲ್ಲಿ ಯಾರೊಡನೆ ಯಾರು ಹೋರುವಿರಿ! ನಿರ್ಣಯಿಸಿಕೊಂಡು ಬನ್ನಿರಿ.

ಚಾಣೂರ— ಎಲೈ ಚಕ್ರಪಾಣಿಯೆ! ಯಾವುದರಲ್ಲಿ ಸಮಾನರೆಂದು ಬಗೆದು ನಿಮ್ಮ ಜತೆಯನ್ನು ಆರಿಸಿಕೊಳ್ಳಬೇಕು! ನಿಮ್ಮಿಬ್ಬರನ್ನೂ ಅಂಗೈಯಲ್ಲಿ ಒಂದೇ ಸಲಕ್ಕೆ ಹೊಸೆದು ಬಿಡುವೆನು.

---

( ನಕೋವಾರುಂ ಚುಡೀನ ಮಲಾ ಎಂಬಂತೆ )

* ಬೇಡ ಬೇಡವೋ ಈ ದುಗುಡ । ಕಂಸಭೂವರಾ ॥ಪ॥ ಕಂಸಭೂವರಾ ವರಧೈರ್ಯಭೂಧರಾ ಬೇಡ ।ಅ॥ ಮಾತಂಗವೊಂದು ಮೃತಿಯಾಂತುದೆಂದು ಮಾತುಲ ನೀನಿಂತು ಮರುಗುವರೇ(ಅಹ) ॥೧॥ ಆನೆಯ ಮಾಂಸ। ಏನಾದೊಡೆನ್ನೈ। ಭೂನಾಥ ತಂದಿಹೆ। ಮೀದುತವ ಓಹೋ ಬೇಡ ಬೇಡವೊ ॥೨॥

ಬಲರಾಮ— * ಎಲೋ ಮದಾಂಧನೆ! ಪರಿಣಾಮದಲ್ಲಿ ಫಲವನ್ನು ಕಾಣಬೇಕಲ್ಲದೆ ಮೊದಲೇ ಹೀಗೆ ಹೇಳಬಹುದೇ? ಬಾ! ಯಾರೊಡನೆ ಹೋರುವೆ ಹೇಳು.

ಮುಷ್ಟಿಕ—ಎಲೋ ಮುಸಲಪಾಣಿ! ನಮ್ಮ ಪ್ರಲಂಬನನ್ನು ಕೊಂದ ನಿನ್ನ ಮೇಲಿನ ಹಗೆತನವನ್ನು ತೀರಿಸಿಕೊಳ್ಳುವುದಕ್ಕೆ ಇದು ಒಳ್ಳೆಯ ಸಮಯವು. ಬಾ! ನೀಚನೆ ನನ್ನೊಡನೆ ಹೋರಾಡು.

ಚಾಣೂರ—ಎಲೋ ಕುಟಿಲ ಕೃಷ್ಣ! ಹೆಂಗುಸನ್ನು ಕೊಂದುದೂ, ಬಂಡಿಯನ್ನು ಮುರಿದುದೂ, ಒಂದು ಸಾಹಸ ವೆಂದು ಎಣಿಸಿರುವೆ, ಎತ್ತು ಕತ್ತೆ ಕುದುರೆಗಳ ಪ್ರಾಣ ತೆಗೆದ ವನು ನೀನೊಬ್ಬ ವೀರನು! ಬಾ ನನ್ನೊಡನೆ ಕಾಳಗಕ್ಕೆ ನಿಲ್ಲು.

(ಮುಷ್ಟಿಕ ಮುಸಲ ಪಾಣಿಗಳು ಚಾಣೂರ ಚಕ್ರಪಾಣಿಗಳೊಡನೆ ಹೋರಾಡುವರು)

(ಆಕಾಶದಲ್ಲಿ ದೇವತೆಗಳು) ಅಕ್ಕಟಾ! ಪರ್ವತೋಪಮಾನ ರಾದ ಈ ಕ್ರೂರ ದೈತ್ಯರು ಶಿರೀಷಕುಸುಮದಂತೆ ಕೋಮಲ ರಾದ ಬಾಲಕರನ್ನು ಏನುಮಾಡುವರೋ ?

ನಾರದ— ಭಾಪು! ಭಾಪು ಚಕ್ರಪಾಣಿ! ಭಾಪು! ಭಾಪು! ಮುಸಲಪಾಣಿ! ಎಲೈ ವೈಮಾನಿಕರೆ! ನೋಡಿರಿ! ನೋಡಿರಿ! ಪರಮಾತ್ಮನ ವಿಜಯವನ್ನು ಕಣ್ದಣಿಯೆ ನೋಡಿರಿ! ಬಲ ಭದ್ರನ ಸಾಹಸವನ್ನು ಕೊಂಡಾಡಿರಿ! ಕರಾಳರಾದ ಜಟ್ಟಿಗಳು ನೆಲಕ್ಕುರುಳಿದರು.

ಗೋವಿಂದ—(ಜಟ್ಟಿಗಳನ್ನು ಕೆಡವಿದ ಅನಂತರ ಕಂಸನೊಡನೆ) ಎಲೆ ಕಂಸ! ನಿನ್ನ ಜಟ್ಟಿಗಳು ನಮ್ಮ ಬಾಹುಬಲವನ್ನು ಪರೀಕ್ಷಿಸಿದು ದಾಯಿತು. ಇನ್ನಾರಾದರೂ ವೀರರಿದ್ದರೆ ಕಳುಹಿಸು.

ಕಂಸ— (ಚಿಂತಿಸಿ) ಅಕ್ಕಟಾ! ನನ್ನ ಹಗೆಯ ಮೇಲೆ ನನ! ಉಪಾಯಗಳಾವುವೂ ನಡೆಯಲಿಲ್ಲವಲ್ಲ. (ಪ್ರಕಾಶಂ) ಎಲೈ ಕೃಷ್ಣ! ನನಗೆಷ್ಟೋ ಅಪ್ರಿಯಗಳನ್ನಾಚರಿಸಿದ ನೀನು ಇನ್ನು ನನ್ನ ಕೈಯಿಂದಲೇ ಸಾಯುವೆ ನಿಜ!

ಬಲ—ಗೋವಿಂದ! ದುರಾಶಯನಾದ ಈ ನೀಚ ಕಂಸ– ನನ್ನು ದಂಡಿಸದೆ ಏಕೆ ವಿಲಂಬಿಸುವೆ?

ಗೋವಿಂದ— ಬಲಭದ್ರ! ಇದೊ ಇದೊ! ಈ ದುಷ್ಟನನ್ನು ಸಂಹರಿಸಿ ವಿಜಯಲಕ್ಷ್ಮಿಗೆ ಆನಂದವನ್ನುಂಟು ಮಾಡುವೆನು. ಎಲೈ† ಕಂಸ! ನೃಶಂಸ! ನಿನ್ನ ಕೃತಿಮಾನುಸಂಧಾನಕ್ಕೆ ತಕ್ಕ ಫಲವನ್ನು ತೋರಿಸುವೆನು. ಮೂರ್ಖನೆ! ಸ್ವರ್ಗದ ಪ್ರಯಾಣಕ್ಕೆ ಪಾಥೇಯವನ್ನು ಸಿದ್ಧಪಡಿಸಿಕೊ (ಎಂದು ಹಾರಿ ಕಂಸನನ್ನು ನೆಲಕ್ಕೆ ಕೆಡಹಿಕೊಳ್ಳುವನು )

ಕಂಸ— ( ಕೃಷ್ಣನನ್ನು ತಳ್ಳಿ ಗರ್ಜಿಸುತ್ತ ಖಡ್ಗ! ಖಡ್ಗ!! ಎಂದು ಕತ್ತಿಯನ್ನು ಹಿರಿದು ) ವಂಚಕನೆ!

* ಕೇದು ಫಡ ಫಡ! ಕಡುಗದೆ ನಿನ್ನಂ ।
ಕಡಿದಿಡುವೆಂ ಭೂತನಿಚಯಕಾಂ ಬಲಿಗುಡುವೆಂ ॥
ಬಿಡು ಜೀವದಾಸೆಯಂ ಖಲ
ರೊಡೆಯನೆ ತೆರೆದಿರ್ಪುದಲ್ತೆ! ಕಾಲದ್ವಾರಂ ॥೧೪೬॥

( ಕೃಷ್ಣನ ಮೇಲೆ ನುಗ್ಗುವನು )

(ಆಕಾಶದಲ್ಲಿ) ಅಯ್ಯೊ! ಅಯ್ಯೋ! ಮುಂದೇನು ಗತಿ? ನಿರಾ ಯುಧನಾದ ಈ ಬಾಲಕನನ್ನು ಈ ಕರಾಳನು ಖಡ್ಗದೊಡನೆ ತುಡುಕಿದನಲ್ಲ! ಎಲೆ ದೇವತೆಗಳೆ! ಪಲಾಯನ ಮಾಡಿರಿ! ಪಲಾಯನ ಮಾಡಿರಿ !!

ಗೋವಿಂದ— (ಕಂಸನನ್ನು ನೆಲಕ್ಕುರುಳಿಸಿ ಎದೆಯ ಮೇಲೆ ಕುಳಿತು) ಎಲವೊ ಯದುಕುಲಕಳಂಕ! ನಿನಗೆ ಮೃತ್ಯುಭಯವು ಹೆಚ್ಚಾ

---

( ಘೋರತಪಮಾವಿರಿ ರಚಿಸಿ ಎಂಬಂತೆ )

* ಬಲಗೋವಿಂ— ಬಾರೊ ದುರುಳ ಧೀರನೆನಿಸಿ ತೋರೊ ಶೌರ್ಯವಾ । ಭರದೆ ॥ಪ॥
ಚಾಣೂರ ಮುಷ್ಟಿಕರು—ಒಸೆದು ಪೊಸೆದು ರಸೆಯೊಳೆಸೆದು ವಿಸರಿಟಂಬಿಸುಡುವೆ ॥ಅ॥
ಬಲ ಗೋ— ಒದರುವುದೇಂ ಅಧಮನೆ ನೀಂ ಕದನರಂಗದೆ । ಅದಿರಿ ಬೆದರಿ ಚೆದರದಿದಿರೊಳೊದಗಿ ಬಾರೆಲೋ ।
ಜಟ್ಟಿಗಳು— ಹುಡುಗರೆ ನೀವಸಗಿಂದೆ । ತುಡುಕಿದಿರೆಮ್ಮ । ಪಿಡಿದು ಜಡಿದು ಕೆಡಹಿ ಮಡುಹಿ ನಡೆವೆ ಫಡ ಫಡ ॥೨॥
ಬಲಗೋ— ಖಲ ದನುಜ ಮಲೆಯುವೆ ಅಳವ ನೋಡುವೆ । ಛಲದ ಬಲದ ನೆಲೆಯನರಿವೆ ತುಳಿವೆ ನೆಲದೊಳು ॥೩॥

† ಗೋವಿಂದ— ಫಡಫಡ! ದುರ್ಮದನೆ ನಿನ್ನ ಮದವ ಮುರಿಯುವೆ ॥ಪ॥ ಸುರರು ನರರು ಗಂಧರರು ಗರುಡರು ಕಿನ್ನರರು ನೆರೆ ಮುದವನು
ಪಡೆಗೆ ಭರದೆ ತಿರಿಯು ಭರವು ಪರಿಗೆ ಮೆರೆಗೆ ॥೧॥

ಕಂಸ— ಖೂಳನೈ ಫಡ ಸೀಳುವೆ ಕರವಾಳದೆ ನಿನೊಡಲ । ತಾಳು ತಾಳು ಕೆರಳು ಹುವೆಷಿದೊ ಕಾಳನಪುರಿಗೀಗ ನಿನ್ನ ॥೨॥

ಗಿರುವುದು; ಕಾಲದ್ವಾರವನ್ನು ಪ್ರವೇಶಿಸಿ ಅವಿತುಕೋ ! ಪಾಪಿಯೆ! ಈ ಮುಷ್ಟಿ ಪ್ರಹಾರದಿಂದ ಭೂಭಾರವು ಪರಿಹಾರ ವಾಗಲಿ!! ವಿಬುಧರು ತಮ್ಮಿಷ್ಟವನ್ನು ಪಡೆಯಲಿ!! (ಎಂದು ಕೈಯನ್ನು ಮೇಲಕ್ಕೆತ್ತಿ) ಎಲೈ ಕಂಸಬಂಧುಗಳೆ! ನಿಮಗೆ ದಯೆ ಯಿದ್ದರೆ ಈ ನೀಚನನ್ನು ಬಿಡಿಸಿಕೊಳ್ಳಿರಿ (ಎಂದು ಗರ್ಜಿಸಿ ತಿವಿದು ಕೊಲ್ಲುವನು)

ನಾರದ:—(ಸಂತೋಷದಿಂದ ಕುಣಿಯುತ್ತ) ಎಲೈ ದೇವತೆಗಳೆ! ದುಷ್ಟನು ನಷ್ಟನಾದನು. ಎಲ್ಲಿ ? ಭಗವಂತನ ಮೇಲೆ ಪುಷ್ಪ ವೃಷ್ಟಿಯನ್ನು ಸುರಿಸಿರಿ! ದೇವದುಂದುಭಿ ಮೊಳಗಲಿ. ಅಪ್ಸರೆಯ ನೃತ್ಯವೂ ಕಿನ್ನರರ ಗಾನವೂ ನಡೆಯಲಿ; ಎಲೈ ವಿದ್ಯಾಧರರೆ! ನಿಮ್ಮ ಸ್ತುತಿಪಾಠಗಳಿಂದ ವೈಭವವನ್ನು ವಿಕಾಸ ಪಡಿಸಿರಿ.

(ಅನಂತರ ಪುಷ್ಪವೃಷ್ಟಿಯಾಗುವುದು; ಮತ್ತು ಸ್ತೋತ್ರ ಮಾಡಲ್ಪಡುವುದು)

ಕಂದ॥* ಜಯ ಜಯ । ವಿಭುಧಪ್ರಿಯ ಜಯ !
ಜಯ ನಂದಕಿಶೋರ! ಧೀರ! ನತಮಂದಾರಾ ॥
ಜಯ ಭೂಭಾರ ವಿನಾಶಕ ।
ಜಯ ಜಯ! ಯದುವಾರ್ಧಿಚಂದ್ರ
ಕರುಣಾಸಾಂದ್ರಾ! ॥ ೧೪೭ ॥

(ಅನಂತರ ವಾಸುದೇವ ದೇವಕಿಯರೂ ಅಕ್ರೂರಾದಿ ಭಕ್ತರೂ ವಿಜಯಲಕ್ಷ್ಮಿ, ಯೊಡನೆ ವಸುಮತೀಮಧುರೆ ಸ್ವಸ್ತಿ ಕೀರ್ತಿಕನ್ಯೆಯರೂ ಪ್ರವೇಶಿಸಿ ಸ್ತೋತ್ರವಾಡುವರು)

ವಸುದೇವ:—ದೇವಕಿದೇವಿ! ಈ ವೀರಕೇಸರಿಯೇ ನಿನ್ನ ಕುವರನು.

ದೇವಕಿ:—ನಾಥ! ಸಕಲಲೋಕಜನಕನಾದ ಈತನನ್ನು ಪುತ್ರನೆಂದುಕೊಳ್ಳಲು ಸಂಕೋಚವಾಗುವುದು. ಆದರೆ ಪುತ್ರ ವ್ಯಾಮೋಹದಿಂದ ಆಲಿಂಗಿಸಿಕೊಳ್ಳಬೇಕೆಂಬ ಅಪೇಕ್ಷೆ ಹುಟ್ಟು ತ್ತಿರುವುದಲ್ಲ! (ಸ್ವಲ್ಪ ನಡೆದು) ಆಃ! ಈ ಉಗ್ರಮೂರ್ತಿಯ ಇದಿರಿಗೆ ಹೋಗಲು ಭಯವಾಗುವುದು. (ಎಲ್ಲರೂ ಸಮೀಪಗತ ರಾಗುತ್ತಿರುವರು.)

ವಸುಮತಿ—ಭಕ್ತಾಗ್ರೇಸರನಾದ ಅಕ್ರೂರ! ಪರಮಾತ್ಮನ ಕೋಪವನ್ನು ಶಾಂತವಾಗಿಸು! ವತ್ಸೆ! ವಿಜಯಲಕ್ಷ್ಮಿ! ದೇವರ ಮನಸ್ಸನ್ನು ಪ್ರಸನ್ನವಾಗಿಸು!

ಅಕ್ರೂರ:—(ಕೈಜೋಡಿಸಿ) ಮಹಾನುಭಾವನೆ! ಶಾಂತನಾಗು, ಶಾಂತನಾಗು!

ವಿಜಯಲಕ್ಷ್ಮಿ:—ದೇವ! ಪ್ರಸನ್ನನಾಗು.

ಅಕ್ರೂರ:—ಪ್ರಭು! ಸರ್ವಜ್ಞಮೂರ್ತಿಯ ಚಿತ್ತಕ್ಕೆ ವೇದ್ಯ ವಿಲ್ಲದುದಾವುದು? ನಂದಗೋಪನ ಮನೆಯಲ್ಲಿ ನೀನು ಬಳೆದ ಯಾದರೂ ಈ ದೇವಕೀವಸುದೇವರೇ ನಿನ್ನನ್ನು ಪಡೆದ ಮಾತಾಪಿತೃಗಳು! (ಎಲ್ಲರೂ ಸಮೀಪಗತರಾಗುವರು)

ಗೋವಿಂದ:—(ಬಲಭದ್ರಸಹಿತನಾಗಿ) ಜನನೀಜನಕರಿಗೆ ವಂದಿ ಸುವೆವು. (ಎಂದು ಇಬ್ಬರೂ ನಮಸ್ಕರಿಸುವರು).

ದೇವಕಿ:—(ಕೃಷ್ಣನನ್ನು ಎತ್ತಿ ಆಲಿಂಗಿಸಿ)

ಕಂದ॥ ಬಾ ಬಾ! ಮಗುವೇ! ನಗುವೇ
ಬಾ ಬಾರೈ! ಕಲ್ಪತರುವೆ! ಬಾರೈ ಗುರುವೇ !
ಬಾ ಬಾರೆನ್ನಯ ಮಣಿಯೇ!
ಬಾ ಬಾರೈ! ಸೊಗದ ಕಣಿಯೆ! ಬಾ ಬಾ! ದಣಿಯೇ
॥೧೪೮॥

*(ಮೈಯನ್ನು ಸವರುತ್ತ) ಮಗುವೆ! ದುಷ್ಟರೊಡನೆ ಹೋರಾಡಿ ಎಷ್ಟು ಆಯಾಸವನ್ನು ಪಡೆದೆಯಾ? ಮೃದುಳ! ಈ ಗಾಯ ಗಳ ನೋವನ್ನು ಹೇಗೆ ಸಹಿಸುವೆ?

ಗೋ:—ಎಲೈ ತಾಯಿಯೆ! ತಂದೆಯೆ! ಈವರೆಗೂ ಗೋಪ ರಮನೆಯಲ್ಲಿ ಬಳೆದ ನಮಗೆ ಉಪನಯನಾದಿ ಸಂಸ್ಕಾರಗಳಿ ಲ್ಲದೆ ಕಾಲವು ವ್ಯರ್ಥವಾಯಿತು. ಮಾತಾಪಿತೃಗಳ ಸೇವೆಯು ಲಭಿಸದೆ ಈ ಜನ್ಮವು ವ್ಯರ್ಥವಾಯಿತು.

ವಸು:—ಮಗುವೆ! ಕಂಸನ ಭಯದಿಂದ ನಿಮ್ಮನ್ನು ಗೋಕುಲದಲ್ಲಿ ಇರಿಸಿದ್ದೆವು.

---

( ಮನೋಹರಿ ವಿರಹಾನಲ ಎಂಬಂತೆ )

* ರಮಾ ಮನೋಹರ ಸುಂದರ। ಕಮಲನಯನ ಪೊರೆಯೊ ಪರಮಪಾವನಾ । ಪಲ್ಲ॥ ಶತದಿವಾಕರಾಭ ಸುಪ್ರಭ । ಧೃತಮನೋಜ್ಞ ಕೌಸ್ತುಭ। ಅತುಲತುಲಸೀಮಾಲ ಭಕ್ತ । ಪಾಲ ದಯಾಶೀಲ ಸದಾ ॥೧॥ ನಿರುಪಮ ಘನನೀಲಕಾಯ। ಸುರುಚಿರ ಮಹಿಮಾಶ್ರಯಾ। ದುರಿತದಮನ ಗ ಎಡಗಮನ। ಪರಮ ಸುಖನಿದಾನ ಚಿದ್ಘನ ॥೨॥ ವಾಸವಾದಿವಿನುತಪದ । ಕುಶೇಶಯಾ ನಿರಾಮಯಾ । ಕೇಶವ ದಾಮೋದರಾ ಶ್ರೀ। ಶೇಷಶಯನ ವೈಕುಂಠ ॥೩॥

( ಬಾರೆಲೆ ವೈಯಾರಿ ನೀರೆ ಎಂಬಂತೆ )

* ಕಂದ! ಬಾ ಬಾ ಬಾ! ಬಾರೊ ಧೀರ ಸುಕುಮಾರ ಬಾರೊ ಮುದು ಮೋಹನಾಂಗ ॥ಪ॥ ಬಳಲಿದೆಯೋನ್ನೆ, ಗಾಯಗಳಾಂತೆಯಾ ಖಳರೊಳ್ ಸೆಣಸುತೆ ನೀಂ ಬಾಲ ॥ ಕಮನೀಯ ಶುಭಕಾಯ ಮುದವೀವ ನಿನ್ನಯ । ಲೀಲೆಗಳ ನೋಡುತೆ । ಮುದ್ದಾಡಿ ಮೋದಗೊಳ್ವೆನೀಗ ॥

ಅಕ್ರೂರ:—ಪ್ರಭುವೆ! ನಿನ್ನ ಭಕ್ತಾನುಗ್ರಹವು ಅಸಾಧಾರಣವಾದುದು. ಭಕ್ತಪ್ರೀತಿ ಮೈತ್ರೀವಾತ್ಸಲ್ಯಾದಿಗಳ ಮೂಲಕ ಹೇಗಾದರೂ ನಿನ್ನನಾಶ್ರಯಿಸಿದ ಲೋಕವನ್ನು ಸಮುದ್ಧರಿಸುವೆ. ನಿನ್ನ ದಯೆಯನ್ನು ವರ್ಣಿಸಲಳವೆ?

ಗೋ:— ಆರ್ಯನೆ! ಇನ್ನು ಮುಂದೆ ನಾವು ಮಾಡಬೇಕಾದ ಕಾರ್ಯವಾವುದಿರುವುದು?

ಅಕ್ರೂರ: –ಮಹಾಪ್ರಭು! ಬ್ರಹ್ಮೇಂದ್ರಾದಿಗಳನ್ನು ತತ್ತದಧಿಕಾರಗಳಲ್ಲಿ ನಿಯೋಜಿಸಿ ಲೀಲಾಮಾತ್ರದಿಂದ ಸಮಸ್ತ ಲೋಕಗಳನ್ನೂ ಆಳುವ ಅರಸಾದ ನೀನೇ ಈ ಮಥುರಾನಗರಕ್ಕೆ ಉತ್ತರಾಧಿಕಾರಿಯನ್ನು ನಿಯಮಿಸುವ ಭಾರವನ್ನು ವಹಿಸಿರುವೆ.

ಗೋ:—ಆರ್ಯನೆ ! ಮಾತಾಮಹನಾದ ಉಗ್ರಸೇನನೆಲ್ಲಿ ?

ಅಕ್ರೂರ—ವೃದ್ಧನಾದ ಉಗ್ರಸೇನನು ಕಂಸನಿಂದ ಬಂಧನದಲ್ಲಿಡಲ್ಪಟ್ಟಿರುವನು.

ಗೋವಿಂದ—ಒಳ್ಳೆಯದು. ಪುತ್ರಶೋಕ ಸಂತಪ್ತನಾದ ಆತನನ್ನು ಸಂತವಿಸಿ ಸೆರೆಯಿಂದ ಬಿಡಿಸಿ ಆತನನ್ನೇ ರಾಜ್ಯಪದದಲ್ಲಿ ಅಭಿಷಿಕ್ತನನ್ನಾಗಿ ಮಾಡುವ.

ಅಕ್ರೂರ—ದೇವರ ಇಷ್ಟವಿದ್ದಂತಾಗಲಿ. (ಎಲ್ಲರೂ ಹೊರಡುವರು )

### ಸಭಾಮಂಟಪ

( ಉಗ್ರಸೇನನು ಸಿಂಹಾಸನಾರೂಢನಾಗಿರುವನು. ಎಲ್ಲರೂ ಉಚಿತಾಸನಗಳಲ್ಲಿ ಮಂಡಿಸಿರುವರು )

ಉಗ್ರಸೇನ— ವತ್ಸರಾದ ರಾಮಕೃಷ್ಣರೆ! ನೀವಿಬ್ಬರೂ ಉಭಯಪಾರ್ಶ್ವಗಳಲ್ಲಿಯೂ ನನ್ನನ್ನಾಲಿಂಗಿಸಿರಿ. (ಇಬ್ಬರೂ ಹಾಗೆಮಾಡುವರು. )

ಗೋವಿಂದ—ಮಾತಾಮಹರೆ ! ನಿಮಗೆ ಇನ್ನಾವ ಅಭಿಮತವಿರುವುದು.

ಉಗ್ರಸೇನ:—ಮಹಾನುಭಾವನೆ ! ಜಯಶ್ರೀಯುತನಾಗಿ, ಸ್ವಕೀರ್ತಿಗಳಿಂದ ಪ್ರಪಂಚಕ್ಕೆ ಆನಂದಕರನಾದೆ! ಪುತ್ರನನ್ನು ಕಾಣದೆ ಕಳವಳಿಸುತ್ತಿದ್ದ ದೇವಕೀ ವಸುದೇವರಿಗೆ ಆನಂದವನ್ನೊಂದಿಸಿದೆ! ಅಕ್ರೂರಾದಿ ಭಕ್ತರನ್ನು ಹರ್ಷಗೊಳಿಸಿದೆ! ಇದಕ್ಕಿಂತಲೂ ಪ್ರಿಯವಾದುದಾವುದಿರುವುದು ?

ಗೋವಿಂದ: – ಆರ್ಯನಾದ ಅಕ್ರೂರ ! ಯಾದವಾಭ್ಯುದಯಕ್ಕೆ ನೀನೇ ಕಾರಣನು. ಇದರಿಂದ ಯಾದವ ಲೋಕವೆಲ್ಲವೂ ನಿನ್ನ ವಿಷಯದಲ್ಲಿ ಕೃತಜ್ಞತೆಯುಳ್ಳುದಿರುವುದು !

ಅಕ್ರೂರ:—ಪ್ರಭು! ಸರ್ವಾಭ್ಯುದಯಕ್ಕೂ ಕಾರಣವಾದ ತಮ್ಮ ಚರಣಾನುಗ್ರಹವು ಯಾದವಾಭ್ಯುದಯಕ್ಕೂ ಕಾರಣವೆಂದು ಬೇರೆ ಹೇಳುವುದೇನು? ಸ್ವಾಮಿ ! ಲೋಕಮಂಗಳಕರವಾದ ನಿನ್ನ ಚರಿತವು ಅಮೋಘವು.

ಗೋವಿಂದ:—ಭಗವತಿಯಾದ ವಸುಮತೀದೇವಿ ! ಜಯಲಕ್ಷ್ಮೀಸಂಶ್ಲೇಷಕ್ಕೆ ಕಾರಣವಾದ ನಿನ್ನ ಪರಮಾನುಗ್ರಹವನ್ನು ಅಭಿನಂದಿಸುವೆನು.

ವಸುಮತೀ:—ಭಗವಂತನಾದ ನಾರಾಯಣ ! ಸದಾ ಶ್ರೀಧರನಾದ ನಿನ್ನನ್ನು ವಿಜಯಲಕ್ಷ್ಮಿಯು ಯಾವಾಗ ತಾನೇ ಅಗಲಿರುವಳು ?

ಗೋವಿಂದ:—ನಿಮ್ಮೆಲ್ಲರ ಆನಂದವೇ ನನ್ನ ಆನಂದವಾಗಿರುವುದು. ಆದರೂ ಲೋಕಾಭ್ಯುದಯಕ್ಕಾಗಿ ಈ ಭರತವಾಕ್ಯವು ನೆರವೇರಲಿ !

* ಕಂದ॥ ಮಳೆ ಸುರಿಗೆ ಕಾಲಕಾಲದೊ ।
ಳಿಳೆಯೆಲ್ಲಂ ಸಸ್ಯಪೂರ್ಣಮೆನಿಸುಗೆ ನೃಪ ಸಂ ।
ಕುಳಮಾಳ್ಗೆ ಧರ್ಮಮನು ।
ಜ್ವಳ ಕೃಷ್ಣನೃಪಾಲನಕ್ಕೆ ! ಗೋದ್ವಿಜ ಸುಖದಂ ॥೯೪॥

( ಎಲ್ಲರೂ "ತಥಾಸ್ತು" ಎಂದು ಹೊರಡುವರು )

ಇದು ಸಪ್ತಮಾಂಕವು.

## ಯಾದವಾಭ್ಯುದಯ ನಾಟಕವು ಸಂಪೂರ್ಣವು.

---

( ಶ್ರೀ ರಾಮಾ ಸುಕ್ರಮ ಎಂಬಂತೆ )

* ಮಂಗಳಾಂಗ ವಿಹಂಗವಾಹನಾ ಜನಾವನಾ । ಫಣೀಂದ್ರಶಯನ ॥ಪ॥ ಅರಿದರ ಶೋಭಿತ । ಸುರಮುನಿ ವಂದಿತ । ಉರಗೇಂದ್ರ ಪರ್ಯಂಕ ಮಾನಾಯಕಾ । ಸುರುಚಿರ ಕೌಸ್ತುಭಸಂಶೋಭಿತ । ವಿಜಯಿಸು, ದೇವ ಕೃಷ್ಣಭೂವರಾವನೋತ್ಸವ ॥

# ಸಾವಿತ್ರಿ.

ಲೇ:— ಶ್ರೀ ದೇವುಡು ನರಸಿಂಹಶಾಸ್ತ್ರಿ ಎಂ. ಎ., ಬೆಂಗಳೂರು

(೧ನೆ ಸಂಚಿಕೆಯಿಂದ ಮುಂದುವರಿದುದು.)

ಸಾವಿತ್ರಿ:—( ನಿರೂಪವನ್ನು ಕಣ್ಣೊತ್ತಿಕೊಂಡು ) ತಂದೆ ತಾಯಿಗಳು ಸುಖವಾಗಿರುವರೆ ?

ಮೈತ್ರೇಯ:—ಒಡೆತಿಯ ಚಿಂತೆಯೊಂದು ವಿನಾ ಮಿಕ್ಕೆಲ್ಲ ದರಲ್ಲಿಯೂ ಸೌಖ್ಯದಿಂದಿರುವರು.

ಸಾವಿತ್ರಿ:—ನಾನಿಲ್ಲಿರುವದು ನಿನಗೆ ಹೇಗೆ ತಿಳಿಯಿತು?

ಮೈತ್ರೇಯ:— ಆಯುಷ್ಮಂತನಾದ ಯುವರಾಜನ ಜತೆಯಲ್ಲಿ ಬಂದು ತಿಳಿದೆನು.

ಸಾವಿತ್ರಿ:—ಸರಿ:(ನಕ್ಕು)ಆರ್ಯ! ನೀನು ಹೋಗಿ ಸಮೀಪದಲ್ಲಿರುವ ಬಿಡಾರದಲ್ಲಿರು. ಸಂಜೆಗೆ ಹೊರಡುವುದಕ್ಕೆ ಸಿದ್ಧವಾಗಿರಿ. ನಾನೂ ಆರ್ಯರಪ್ಪಣೆ ಪಡೆದು ಅಷ್ಟರಲ್ಲಿಯೇ ಹಿಂದಿರುಗಿ ಬರುವೆನು.

ದ್ಯುಮತ್ಸೇನ: ವತ್ಸೆ! ಸಾವಿತ್ರೀ!

ಸಾವಿತ್ರಿ:—ಪೂಜ್ಯರೆ ಆಪ್ಪಣೆಯಾಗಲಿ. ಸಿದ್ಧವಾಗಿರುವೆನು.

ದ್ಯುಮತ್ಸೇನ:—ಮಗಳೇ! ನೀನು ಬಂದು ಬಹಳ ದಿನವಾಯ್ತು. ನಿನ್ನ ತಂದೆ ತಾಯಿಗಳು ಎಷ್ಟು ವ್ಯಥಿಸುತ್ತಿರುವರೊ? ಅಲ್ಲದೆ ನೀನು ಅವಿವಾಹಿತೆಯು. ತಕ್ಕ ರಕ್ಷಣ ಪೋಷಣೆಗಳಿಲ್ಲದೆ ಏಕಾಕಿನಿಯಾಗಿರಲು ಸಾಧ್ಯವೇ?

ಸಾವಿತ್ರಿ:—ಪೂಜ್ಯರೆ! ಚಿರಕಾಲವೂ ತಮ್ಮಗಳ ಪಾದಸೇವೆಯಲ್ಲಿಯೇ ಕಾಲಕಳೆಯಬೇಕು ಎಂದಿರುವ ನನ್ನ ಆಶೆಯು ಸಫಲವಾಗುವಂತೆ ಅನುಗ್ರಹಿಸಬೇಕು

ಸತ್ಯವಾನ:—( ಸ್ವ ) ಮನಸ್ಸೆ! ದುರಾಶೆಪಡಬೇಡ.

ರಾಣಿ:—ತಾಯೆ! ನಿನ್ನಂತಹ ಕನ್ಯಾರತ್ನವು ಲಭಿಸಿದರೆ, ನಮ್ಮ ಕುಲಕೋಟಿಯು ಪಾವನವಾಗುವದು.

ದ್ಯುಮತ್ಸೇನ:—ತಾಯೆ! ಬಾಲಿಕೆಯಾದ ನಿನಗಂತಹ ಅಪೇಕ್ಷೆಯಿದ್ದರೂ,

ಕಂ॥ ಎಳೆಗಿಳಿವರಿಯಂ ಕುಟುಕಂ ॥
ತಳೆದು ಬಳೆಯಿಸಿ ಕೊನೆಗೆ ಬಲಿತೆತ್ತಪರೇನೌ ॥
ಎಳೆಯುಳ್ಳನುರೂಪವರನ॥
ನೆಳೆಸುವ ತಾಯ್ತಂದೆಯ ಬಳಲಿಸಬಿರು ಮಗಳೇ ॥

ಸಾವಿತ್ರಿ:—ತಾಯ್ತಂದೆಗಳ ಅಪ್ಪಣೆಯನ್ನೂ ಪಡೆಯುವೆನು.

ರಾಣಿ:—ನಾಥ! ದೈವಯೋಗವೆಂತಿರುವುದೋ? ಸತ್ಯವಾನನು ಹುಟ್ಟಿದಾಗ ಪತ್ನಿ ಭಾಗ್ಯನೀತನೆಂದು ಜ್ಯೋತಿಷ್ಯರು ಹೇಳಲಿಲ್ಲವೆ?

ದ್ಯುಮತ್ಸೇನಃ— ನಿಜ ( ಪ್ರ. ) ಮಗಳೆ! ಹೀಗೆ ಹೇಳಿದೆನೆಂದು ವ್ಯಥಿಸಬೇಡ. ಚಿಂತಾಮಣಿಯು ಬಡವರಿಗೆ ಬೇಡವಾದುದಲ್ಲ. ಪರಸ್ಪರ ಸಮ್ಮತಿಯಿಂದ ನೀನು ನಮ್ಮ ಮನೆಗೆ ಸೇರಿದರೆ ಪುನಃ ಪ್ರಾಪ್ತ ರಾಜ್ಯನಾದಂತೆ ಭಾವಿಸುವೆನು. ನೀ ನಿನ್ನು ಹೋಗಿಬಾ. ಹಂಬಲದಿಂದ ಬಳಲಿರುವ ನಿನ್ನ ತಂದೆ ತಾಯಿಗಳನ್ನು ಸಂತೋಷಪಡಿಸು. ವತ್ಸ! ಈಕೆಯನ್ನು ಮಾರ್ಗದವರೆಗೂ ಬಿಟ್ಟು ಬಾ.

ಸಾವಿತ್ರಿಃ— ಪೂಜ್ಯರೆ! ಸ್ವಲ್ಪ ದೂರದಲ್ಲಿಯೇ ನಮ್ಮ ಪರಿಜನರಿರುವರು. ನಾನೊಬ್ಬಳೇ ಅಲ್ಲಿನವರೆಗೂ ಹೋಗಬಲ್ಲೆನು.

ದ್ಯುಮತ್ಸೇನಃ— ಹಾಗಲ್ಲ. ದುಷ್ಟಮೃಗಭೂಯಿಷ್ಠವಾದ ಈ ವನಭೂಮಿಯಲ್ಲಿ ಒಬ್ಬಳೇ ಹೋಗಬೇಡ.

ಸಾವಿತ್ರಿಃ— ( ನಮಸ್ಕರಿಸಿ ಆಶೀರ್ವಾದವನ್ನು ಪಡೆದು ಹೊರಡುವಳು )

ರಾಣಿಃ— ನಮ್ಮ ಮನೆಗೆ ಭಾಗ್ಯಲಕ್ಷ್ಮಿಯಂತೆ ಬರುವ ನಿನ್ನನ್ನು ಶೀಘ್ರವಾಗಿ ನೋಡಲೆಳಸುವೆನು.

ದ್ಯುಮತ್ಸೇನಃ— ಎಲೌ! ಸೌಭಾಗ್ಯವತಿಯೆ! ಚಿರಪರಿಚಿತನಾಗಿದ್ದರೂ ಕಷ್ಟದಶೆಯಿಂದ ದೂರನಾಗಿರುವ ನಿನ್ನ ಬಾಲ್ಯ ಸ್ನೇಹಿತನು ಕೇಳಿದನೆಂದು ನಿಮ್ಮ ತಂದೆಗೆ ಹೇಳು.

ಸಾವಿತ್ರಿಃ— ಅಪ್ಪಣೆ (ಎಂದು ಹೊರಡಲು, ಸತ್ಯವಾನನೂ ಹಿಂದೆ ಬರುವನು. ಆಶ್ರಮವನ್ನತಿಕ್ರಮಿಸಿ ಬರುತ್ತಾ )

ಸತ್ಯವಾನಃ— ಈಕೆಯು ದೂರವಾಗುವಳಲ್ಲ ಎಂದು ಚಿಂತೆಯಾಂತ ನನಗೆ ಈಕೆಯನ್ನು ಬಿಟ್ಟುಬಾರೆಂಬ ಗುರುಜನದಾಕ್ಷಿಣ್ಯವು ಬಹು ಸಹಾಯಕಾರಿಯಾಯ್ತು. ಹೊರಟು ಹೋಗುವಮುಂಚೆ ಈಕೆಯೊಡನೆ ಮಾತನಾಡಬೇಕೆಂಬ ಆಶೆಯೋ ಬಲವತ್ತರವಾಗಿರುವುದು. ಈಕೆಯನ್ನೇನೆಂದು ಸಂಬೋಧಿಸಲಿ? ಅಥವಾ ಹೇಗೆ ಸುಮ್ಮನಿರಲಿ?

ಕಂ ॥ ಹೃದಯಾಧೀಶ್ವರಿಯಾಗಿರೆ ॥
ಸುದತಿಯನ ಪರಿಚಿತೆಯುಂತೆ ನುಡಿಸಲ್ಕಾರೆಂ ॥
ಮದುವೆಯೊಳೀಯದ ಮುನ್ನೆ ಮ॥
ನದನ್ನೆ ಯೆಂದೆಂತು ಮಾನಧನೆಯುಂ ನುಡಿಪೆಂ ॥

ಸಾವಿತ್ರಿ:— ಅಡವಿಯು ಬರುಬರುತ್ತ ದಟ್ಟವಾಗುತ್ತಿರುವುದು. ದಾರಿಯನ್ನೇನಾದರೂ ತಪ್ಪಿರುವೆವೋ ಏನೋ ?

ಸತ್ಯವಾನಃ — ಅಹುದಹುದು. ಅನ್ಯಮನಸ್ಕನಾದ ನಾನು ನೋಡಲೇ ಇಲ್ಲ. ಹು. ಇತ್ತ ಹೋಗೋಣ.

ಸಾವಿತ್ರಿಃ— ಅದೇನದು ಶಬ್ದ?

ಸತ್ಯವಾನಃ— ಅದು ಹುಲಿ. ನಿನಗೆ ನೋಡಬೇಕೆಂಬ ಆಶೆಯುಂಟೊ ?

ಸಾವಿತ್ರಿ:— ಬೇಡ ಬೇಡ. ಮೇಲೆ ಬಿದ್ದೀತು.

ಸತ್ಯವಾನಃ—(ಅಷ್ಟರೊಳಗಾಗಿ ಕಲ್ಲು ಹೊಡೆಯಲು ಹುಲಿಯು, ಮತ್ತೆ ಅಬ್ಬರಿಸಿ ಮೇಲೆ ನುಗ್ಗುವುದು. ಸಾವಿತ್ರಿಯು ಭಯದಿಂದ ಸತ್ಯವಾನನನ್ನು ತಬ್ಬಿಕೊಳ್ಳುವಳು, ಸತ್ಯವಾನನೂ ಸುಖಸ್ಪರ್ಶವನ್ನಭಿನಯಿಸಿ ) ಎಲೆ ಹುಲಿಯೆ! ಈಕೆ ಮಾತ್ರ ಹೆದರದಿದ್ದಲ್ಲಿ, ನೀನು ಮಾಡಿದುಪಕಾರಕ್ಕಾಗಿ ನಿನ್ನನ್ನು ಬಿಟ್ಟು ಬಿಡುತ್ತಿದ್ದೆನು. (ಅಷ್ಟರಲ್ಲಿ ಮೇಲೆ ಬಿದ್ದ ಹುಲಿಯನ್ನು ಕಠಾರಿಯಿಂದ ಹೊಡೆದು, ಸಾವಿತ್ರಿಯನ್ನು ಸಂತೈಸುತ್ತ )

ಕಂ ॥ ಪುಲಿ ಮೇಲ್ವಾಯ್ದಿರೆ ಸುಗಿದು ॥
ಲಲನಾಮಣಿ ಮೂರ್ಛೆಗಿಂತು ಸಂದಿರಲಮಮಾ ॥
ಯಿಳಿಗೆಯ್ವಳ್ ಮುಚ್ಚಿದ ಕಂ॥
ಗಳಂ ಪ್ರಭಾತದೊಳು ಮುಗಿದ ಕನ್ನೈದಿಲೆಯಂ ॥

ಕಾಂತಾಮಣಿ, ಸಂತೈಸಿಕೊ.

ಕಂ ॥ ಪರಿದುದು ಪುಲಿಯಿಂದೊಡಗಿದ ॥
ಳುರಿತ್ತ ನೋಡು ಬರಿಡಿಂಬ ಮುರುಳಿದೆ ರಮಣೀ ॥
ಪರಿಯದದೇಕಿನ್ನುಂ ಸರ ।
ಸಿರುಹಾನನೆ! ನಿನ್ನ ಪರ್ವಿರ್ಪೀ ಮೋಹತಮಂ ॥

ಭಯವು ತೊಲಗಿತು. ಎಲೆ ಭೀರುವೆ. ಕಣ್ಣುಬಿಟ್ಟು ನೋಡು ಚೇತರಿಸಿಕೊ.

ಸಾವಿತ್ರಿಃ— (ಅರ್ಧಕಣ್ಣು ಬಿಡುತ್ತಾ) ನಾಥ! ನೀನೆಷ್ಟು ನೊಂದೆಯೋ ?

ಸತ್ಯವಾನಃ— ಮಹತ್ತರವಾದ ಸುಖವು ಲಭಿಸಿರಲು ಕಷ್ಟವೆಲ್ಲಿಯದು ?

ಸಾವಿತ್ರಿಃ— ಭಯಭ್ರಾಂತಳಾದ ನನ್ನ ಆಚರಣೆಯನ್ನು ಬೇರೆ ವಿಧವಾಗಿ ಭಾವಿಸಬಾರದು.

ಸತ್ಯವಾನಃ— ಎಲೌ ಮಂಗಳಾಂಗಿ! ಭಯವೂ ಪ್ರಿಯವನ್ನೆ ಆಚರಿಸಿತಲ್ಲವೆ ?

ಸಾವಿತ್ರಿಃ— (ನಾಚಿಕೆಯಿಂದ ತಲೆಬಗ್ಗಿಸಲು ಸತ್ಯವಾನನು ಚುಂಬಿಸಹೋಗುವನು. ಸಾವಿತ್ರಿಯು ತಡೆದು ) ಪರಾಧೀನಳಾದ ನಾನು ಸ್ವತಂತ್ರಳಲ್ಲ.

ಸತ್ಯವಾನಃ— ನಮ್ಮಿಮ್ಮ ಸಂಬಂಧವನ್ನು ಗುರುಜನರು ಆಕ್ಷೇಪಿಸರು.

ಸಾವಿತ್ರಿಃ— ಆರ್ಯನು ಶೀಘ್ರದಲ್ಲಿಯೇ ಪಾದಸೇವಕಿಯಾಗುವ ನನ್ನಲ್ಲಿ ಕೃಪೆಮಾಡಬೇಕು.

ಸತ್ಯವಾನಃ— ಕೇಳು,

ಕಂ ॥ ಅರುಣೋದಯರುಚಿ ಪುದಿದಿರೆ ।
ಅರೆಬಿರಿದುರೆ ಮೆರೆವ ತಾವರೆ ಗಿಳಿದದೆಂತುಂ ॥
ತಿರುಗದ ತುಂಬಿವೊಲೆಲೆ ಸುಂ ॥
ದರಿ! ಪಿಂತಿರುಗದು ಬಗೆ ಸವಿಯುದ ಚೆಂದುಟಿಯುಂ॥

ಸಾವಿತ್ರಿಃ— ಇದೋ, ತೋಪಿನ ಹಿಂದೆಯೇ ಬಿಡಾರವಿರುವುದು. ಪಾದಧೂಳಿಯನ್ನು ಅನುಗ್ರಹಿಸಿ ಕಳುಹಿಸಿಕೊಡಬೇಕು.

( ಎಂದು ನಮಸ್ಕರಿಸುವಳು )

ಸತ್ಯವಾನಃ— (ಹಿಡಿದೆತ್ತಿ) ನೀರೆ! ಇಷ್ಟುಮಾತ್ರ ಮಾಡು.

ಕಂ ॥ ಅತಿಶಯ ಲಾವಣ್ಯಂ ರೂ ॥
ಹು ತಿಳಿವು ನಡೆನುಡಿಗಳಿಂದೆ ಗೆಲ್ದಿರೆ ತನ್ನಂ ॥
ಸತತಂ ಚಿಂತಿಸು ಕೆಳದಿಯೆ ॥
ಜಿತಮಾದ ಜನಂ ಸನಾಥನಾಗುವ ತೆರನಂ ॥

(ಎಂದು ಬೀಳ್ಕೊಟ್ಟು ಸಾವಿತ್ರಿಯು ಮೆಲ್ಲಮೆಲ್ಲನೆ ಹೋಗಲು)

ಕಂ ॥ ಒಂದೆಡೆಯುಸಿಯಳ ನಲವಿ ।
ನ್ನೊಂದೆಡೆ ಗುರುಜನದ ಸೇವೆಯಿಂತೀಯೆರಡುಂ ॥
ದಂದುಗ ಪಡಿಸುತ್ತಿರೆ ತಾ ।
ನಿಂದೇವನೊ ಮಥಿಸುವಂತಿರೆ ಮನೋದ್ರವ್ಯಂ ॥

( ಎಂದು ಮೆಲ್ಲಮೆಲ್ಲನೆ ಹೋಗುವನು )

( ಪ್ರಮದೆ ಕೋಕಿಲೆಯರೆಂಬಿಬ್ಬರು ಕೆಳದಿಯರು ಪ್ರವೇಶಿಸುವರು.)

ಪ್ರಮದೆ:— ಸಖಿ ! ವಿಶೇಷವನ್ನು ಕೇಳಿದೆಯಾ ?

ಕೋಕಿಲೆ:— ಏನದು ? ಸಖಿ !

ಪ್ರಮದೆ:—( ನಸುನಗುತ್ತಾ ) ರಾಜಪುತ್ರಿಯು ತಪಸ್ವಿನಿಯಾಗುವಳಂತೆ !

ಕೋಕಿಲೆ:—ಹಾಗೆಂದರೇನು ? ಸಖಿ !

ಪ್ರಮದೆ:—ವರನನ್ನು ಹುಡುಕಲು ತಾನೇ ಹೋಗಿದ್ದ ಸಾವಿತ್ರಿಯು ಹಿಂದಿರುಗಿ ಬಂದುದನ್ನು ಬಲ್ಲೆಯಷ್ಟೆ ?

ಕೋಕಿಲೆ:—ಅಹುದು. ಮೊನ್ನೆಯೇ ಬಂದಳು.

ಪ್ರಮದೆ:—ವರನಾರೆಂಬುದು ತಿಳಿಯಿತೇನು ?

ಕೋಕಿಲೆ:—ಹು.

ಪ್ರಮದೆ:—ಆತನೊಬ್ಬ ರಾಜ್ಯವಿಹೀನನಾಗಿ ವನದಲ್ಲಿ ತಪಸ್ವಿಯಂತೆ ಕಾಲಹರಣಮಾಡುತ್ತಿರುವ ಯುವಕನು.

ಕೋಕಿಲೆ:—ಆದರೇನು ?

ಪ್ರಮದೆ:—ಅಕ್ಕರೆಯಿಂದ ಬಳೆಸಿದ ಒಬ್ಬಳೇ ಒಬ್ಬಳು ಮಗಳನ್ನು ಯಾವನೋ ಒಬ್ಬನಿಗೆ ಕೊಡುವರೆ? ಅಲ್ಲದೆ, ನಿರ್ಗತಿಕನಿಗೆ ಹೆಣ್ಣುಕೊಡಲು ಬಡವರೇ ಒಪ್ಪದಿರಲು ಆ ರಾಜದಂಪತಿಗಳು ಒಪ್ಪುವರೆ ?

ಕೋಕಿಲೆ:—ಇರಲಿ. ಪ್ರಮದೆ! ನೀನಾತನಾರೆಂಬುವುದನ್ನು ಬಲ್ಲೆಯಾ ?

ಪ್ರಮದೆ:—ಯಾರಾದರೇನು? ಕೋಕಿಲೆ ! ಆತನು ಅರಣ್ಯದಲ್ಲಿರುವುದು ಸುಳ್ಳೆ ?

ಕೋಕಿಲೆ:—ಬೆಟ್ಟದ ಮೇಲೆ ಶಾಂತವಾಗಿ ನಿಂತಿರುವ ನೀರೂ, ಅಲ್ಲಿಂದ ಹೊರಟರೆ, ಬಂಡೆಗಳನ್ನೂ ಉರುಳಿಸುವುದು. ಪ್ರಮದೆ ! ಆತನಾರೆಂಬುದನ್ನು ಆರ್ಯಮೈತ್ರೇಯಕನಿಂದ ನಾನಾಗಿಯೇ ಅರಿತೆನು. ನಮ್ಮ ಸಾವಿತ್ರಿಯು ಮಹಾನದಿಯು ಸಮುದ್ರವನ್ನೇ ಸೇರುವ ಹಾಗೆ ಅನುರೂಪನಾದ ವರನನ್ನೇ ಪಡೆದಳು. ಇದಕ್ಕೆ ಸಂದೇಹವಿಲ್ಲ.

ಪ್ರಮದೆ:—ಅಹುದು. ಪ್ರಮದೆ ! ಆದರೆ ನೋಡು. ಬಹುಪ್ರಯೋಜನಕಾರಿಯೆಂದೂ, ಬಲುಗಟ್ಟಿಯಾದುದೆಂದೂ ಗೊಬ್ಬಳಿಯ ಮರವನ್ನು ಉದ್ಯಾನವಲ್ಲಿ ಯಾರೂ ನೆಡುವುದಿಲ್ಲವಲ್ಲವೆ ?

ಕೋಕಿಲೆ:—ಹಾಗೆಂದರೇನು ? ಪ್ರಮದೆ !

ಪ್ರಮದೆ:—ತಕ್ಕವರನೆನ್ನುವುದು ಹೇಗೆ ? ಕೋಕಿಲೆ ! ಉಟ್ಟುಕೊಳ್ಳಲು ಸೀರೆಯಿಲ್ಲ. ತೊಟ್ಟುಕೊಳ್ಳಲು ಒಡವೆಯಿಲ್ಲ. ಸೇವೆಗೆ ದಾಸರಿಲ್ಲ. ಇರುವುದಕ್ಕೆ ಅರಮನೆಯಿಲ್ಲ. ಇಂಥವನೂ ತಕ್ಕವರನಾದರೆ ಯಾರಾದರೂ ಆಗಬಹುದು.

ಕೋಕಿಲೆ:—ಎಲೆ ಮುಗ್ಧೆ! ನೀನು ಹೇಳುವುದೆಲ್ಲಾ ಕೇವಲ ಅನಾವಶ್ಯಕವಾದವುಗಳು. ರಾಜಭೋಗವೆಂಬ ಹೆಸರಿನಿಂದ ಮನಸ್ಸನ್ನು ಕಲಕುವ ಬಹಿರಾಡಂಬರಗಳು. ಯೋಗ್ಯರಾದ ಹೆಂಗಸರಿಗೆ ಬೇಕಾದುವು ಇವೊಂದೂ ಅಲ್ಲ. ಪ್ರಪಂಚದಲ್ಲಿನ ಸಮಸ್ತವಾದ ಭಾಗ್ಯವೂ ಪತಿದೇವನ ನಿಷ್ಕಳಂಕವಾದ ಅಕೃತ್ರಿಮವಾದ ಪ್ರಣಯದ ಬಿಂದುಮಾತ್ರವನ್ನಾದರೂ ಸರಿದೂಗುವುದೆ? ಪ್ರಮದೆ! ನಮ್ಮ ಸಖಿಯು ಹುಡುಕಿದುದು ಅಕೃತ್ರಿಮವಾದ ಪ್ರಣಯಧನ. ಪ್ರಾಸಾದಾದಿ ರೂಪವಾದ ನಶ್ವರವಾದ ಧನವಲ್ಲ. ಅನಶ್ವರನಾದ ಪ್ರೇಮಧನವು ಆ ತಪೋಧನನಾದ ರಾಜರ್ಷಿಯಲ್ಲಿ ದೊರೆಯಿತು. ಅದನ್ನು ಸಾದರದಿಂದ ಗ್ರಹಿಸಿದಳು.

ಪ್ರಮದೆ:—ನೀನು ಗಂಡಸಿನಂತೆ ಮಾತನಾಡುತ್ತಿರುವೆ ! ನೀನೆಷ್ಟೇ ಹೇಳು. ದೊಡ್ಡವರನ್ನು ಕೇಳಬೇಕಾಗಿತ್ತು. ಒಂದು ವೇಳೆ ಈ ಮದುವೆಯು ನಡೆದರೂ ಏನನರ್ಥವು ಸಂಭವಿಸುವುದೊ ?

ಕೋಕಿಲೆ:—ಛೀ ! ಛೀ ! ಅಮಂಗಳವು ದೂರವಾಗಲಿ ! ಬಿಟ್ಟಿತೆನ್ನು. ದೈವಭಕ್ತರೂ, ಅಕೃತ್ರಿಮಿಗಳೂ ಆದ ಸತ್ಯವಂತರ ಮನಸ್ಸು ಒಪ್ಪುವುದೆಂದರೆ ದೈವವೇ ಒಪ್ಪಿದಂತೆ. ಅಲ್ಲದೆ ರೂಪಿನಲ್ಲಿ ಹೇಗೆಯೋ ಹಾಗೆಯೇ ವಿದ್ಯಾಬುದ್ಧಿಗಳಲ್ಲಿಯೂ ಅದ್ವಿತೀಯಳಾಗಿರುವ ಸಾವಿತ್ರಿಯು ಆರುತಿಂಗಳು ಪರೀಕ್ಷಿಸಿ ಒಪ್ಪಿರುವ ರತ್ನದಲ್ಲಿ ಇಲ್ಲದ ದೋಷವನ್ನೇಕೆ ಆರೋಪಿಸುವೆ ?

ಪ್ರಮದೆ:—ಆದರೂ ಮಹಾರಾಣಿಯು ಏನೆನ್ನುವಳೊ ?

ಕೋಕಿಲೆ:—ಏನಿದ್ದರೂ ಇಂದು ಗೊತ್ತಾಗುವುದು. ಮಹಾರಾಜನಿಂದು ಲಗ್ನವನ್ನು ಗೊತ್ತುಮಾಡಿ ಬೀಗರಿಗೆ ಲಗ್ನಪತ್ರಿಕೆಯನ್ನು ಕಳುಹಿಸಿಕೊಡುವನು. ಎಲೆ ಪ್ರಮದೆ! ಚೆನ್ನಾಯ್ತು. ನಾವು ಬಂದು ಬಹಳ ಹೊತ್ತಾಯ್ತು. ಸಾವಿತ್ರಿಯ ಪೂಜೆಗೆ ಹೂವು ಕೊಯ್ದುಕೊಂಡು ಹೋಗೋಣ.

ಪ್ರಮದೆ:—ಹೂ, ನಡೆ. (ಎಂದಿಬ್ಬರೂ ಹೋಗುವರು).

(ರಾಜನು ಭದ್ರಾಸನದಲ್ಲಿ ಕುಳಿತಿರುವನು. ಮಂತ್ರಿ ಪುರೋಹಿತರೂ, ಜ್ಯೋತಿಷ್ಕರೂ ಆಪ್ತರಾದ ಸಾಮಾಜಿಕರೂ ಮಹಾರಾಣಿಯೂ ಇರುವರು)

ರಾಜ:—ಪರಸ್ಪರ ಜಾತಕಗಳು ಕೂಡುವವಷ್ಟೆ ?

ಜ್ಯೋತಿಷ್ಕರು:—ಪ್ರಭು ! ಕೂಡುವುದು ಮಾತ್ರವೇ ಅಲ್ಲ. ಒಬ್ಬರನ್ನು ಮತ್ತೊಬ್ಬರಿಗಾಗಿಯೇ ಸೃಷ್ಟಿಮಾಡಿರುವಂತೆ ತೋರುವುದು.

ರಾಣಿ:—ನಾಥ! ವರನು ಕೊನೆಗೂ ಬಡವನಾಗಿಯೇ ಇರುವನೆ ?

ಜ್ಯೋತಿಷ್ಕರು:—ಮಹಾಸ್ವಾಮಿ ! ಶನೀಶ್ವರನ ಪ್ರಭಾವದಿಂದ ಬಡವನಾಗಿರುವನು. ಇನ್ನು ಹದಿನಯ್ದು ತಿಂಗಳೊಳಗಾಗಿ ಅಷ್ಟೈಶ್ವರ್ಯವಂತನಾಗುವನು.

ರಾಣಿ:—ಆಗಬಹುದು.

ರಾಜ:—ಮಂತ್ರಿ ! ನಾವೇ ಆ ದೇಶವನ್ನು ಗೆದ್ದುಕೊಡಬಾರದೇಕೆ ?

ಮಂತ್ರಿ:—ಮಹಾಸ್ವಾಮಿ ! ಆ ದೇಶದವರು ನಿಂತು ಯುದ್ಧ ಮಾಡತಕ್ಕವರಲ್ಲ. ಬೆಟ್ಟಗುಟ್ಟಗಳಲ್ಲಿಯೂ, ಕಾಡುಮೇಡುಗಳಲ್ಲಿಯೂ ಅವಿತಿದ್ದು ಮೇಲೆ ಬೀಳುವ ಜಾತಿಯವರು. ನಮ್ಮವರು ಬಯಲಿನಲ್ಲಿ ನಿಂತು ಯುದ್ಧ ಮಾಡುವವರು, ಅಪ್ಪಣೆಯಾದರೆ ಬೇರೆ ಯಾವುದಾದರೂ ಉಪಾಯವನ್ನು ಚಿಂತಿಸುವೆನು.

ರಾಜ:—ಇರಲಿ. ಜ್ಯೋತಿಷ್ಕರೆ ! ಹಾಗಾದರೆ ಲಗ್ನವಾವುದು ಪ್ರಶಸ್ತವಾಗಿರುವುದು ?

ಜ್ಯೋತಿಷ್ಕರು:—ಮಾಘಶುದ್ಧ ತ್ರಯೋದಶೀ ವೃಷಭಲಗ್ನ ಪ್ರಶಸ್ತವಾಗಿದೆ. ಮಹಾಸ್ವಾಮಿ !

ರಾಜ:—ಪುರೋಹಿತರೆ ! ನಮ್ಮ ನಮ್ಮ ಬಾಂಧವ್ಯಕ್ಕೆ ಏನೂ ಅಡಚಣೆಯಿಲ್ಲವಲ್ಲ ?

ಪುರೋಹಿತ:—ಮಹಾಪ್ರಭು ! ಈಗ ತ್ರಿಪೌರುಷೇಯವಾಗಿ ಸಂಬಂಧವಿಲ್ಲ. ಅಷ್ಟೇ ಹೊರತು ಪೂರ್ವದಲ್ಲಿ ತಮತಮಗೆ ರಕ್ತಸಂಬಂಧವುಂಟು.

ರಾಜ:—ತಮ್ಮೆಲ್ಲರಿಗೂ ಸಮ್ಮತವೇ ತಾನೇ? ( ಎಲ್ಲರೂ ಅನುಮೋದಿಸಿದ ಮೇಲೆ ) ಇನ್ನು ಲಗ್ನಪತ್ರಿಕೆಯನ್ನು ಬರೆಸಿ (ಸ್ವಗತ) ಇಂದಿಗೆ ನಾನು ಅರ್ಧಬದುಕಿದ ಹಾಗಾಯ್ತು, ಕನ್ನೆಯನ್ನು ಪಡೆದಂದಿನಿಂದ ಇಂದಿನವರೆಗೂ ನನ್ನನ್ನು ಆಕ್ರಮಿಸಿದ್ದ ಕಳವಳವು ದೂರವಾಯ್ತು. ಅನುರೂಪನಾದ ವರನಲ್ಲಿ ಕನ್ಯಾರ್ಪಣೆ ಮಾಡುವೆನೆಂದು ನಮ್ಮ ಪಿತೃಗಳು ನಲಿಯುತ್ತಿರುವರು.

ಜ್ಯೋತಿಷ್ಕರು:—ಓಲೆ ಬರೆದಾಯ್ತು, ಮಹಾಸ್ವಾಮಿ !

ರಾಜ:—ಅವರಿಂದ ಬಂದ ರಾಯಸದ ವಿಚಾರವನ್ನು ಕಾಣಿಸಿರುವರೊ ?

ಜ್ಯೋತಿಷ್ಕರು:—ಸೇರಿಸಿದೆ. ಮಹಾಸ್ವಾಮಿ! (ಓದುವರು) ಶ್ರೀಮತ್ಸಾಲ್ವ ದೇಶಾಧೀಶ್ವರರಾದ ಶ್ರೀಮನ್ಮಹಾರಾಜ ದ್ಯುಮತ್ಸೇನ ನರೇಂದ್ರರ ಸನ್ನಿಧಾನದಲ್ಲಿ, ಮದ್ರದೇಶಾಧಿಪತಿಗಳಾದ ಶ್ರೀ ಅಶ್ವಪತಿ ಮಹಾರಾಜರ ಬಿನ್ನವಣೆ, ಅದಾಗಿ, ಉಭಯ ಕುಶಲೋಪರಿ ಸಾಂಪ್ರತ, ತಮ್ಮ ಕಡೆಯಿಂದ ಮುನಿಕುಮಾರಕರ ಹಸ್ತ ಕಳುಹಿಸಿಕೊಟ್ಟ ಕನ್ಯಾವಿಷಯಕವಾದ ರಾಯಸವು ಕರಗತವಾಗಿ ಬಹುಸಂತೋಷವಾಯ್ತು. ಮಿತ್ರವರ್ಯರ ಕೋರಿಕೆಯಂತೆ ಶ್ರೀಮತೀ ಸಾವಿತ್ರೀದೇವಿಯನ್ನು ಚಿರಂಜೀವಿಗಳಾದ ಶೌರ್ಯೌದಾರ್ಯ ಗಂಭೀರಾದಿ ಗುಣವಿಶಿಷ್ಟರು ಶ್ರೀಮಾನ್ ಸತ್ಯವಾನರಾಯರಿಗೆ ಕೊಟ್ಟು ಮಾಘ ಶುದ್ಧ ೧೩ ಗುರುವಾರ ಉದ್ವಾಹ ನಡೆಯಬೇಕಾಗಿ ಹಿರಿಯರು ನಿಶ್ಚಯಿಸಿರುವುದರಿಂದ, ತಾವು ಸಪರಿವಾರರಾಗಿ ಹದಿನಯ್ದುದಿನ ಮುಂಚಿತವಾಗಿಯೇ ಸ್ವಾರೀ ಬೆಳೆಸಿ, ಕನ್ಯಾಪರಿಗ್ರಹಮಾಡಿ, ನನ್ನನ್ನು ಕೃತಕೃತ್ಯನನ್ನಾಗಿ ಮಾಡುವುದು ಎಂದು ಬಿನ್ನವಿಸಿಕೊಳ್ಳುವ.

ರಾಜ:—ಸರಿ. (ಎಂದು ಒಪ್ಪಿಗೆಯನ್ನು ಹಾಕಿ) ಮಂತ್ರಿ ! ಶೀಘ್ರಗಾಮಿಗಳಾದ ಅಶ್ವಾರೋಹಿಗಳೊಡನೆ ಸಕಲ ಮರ್ಯಾದೆಗಳನ್ನೂ ಕೊಟ್ಟು, ಪುರೋಹಿತರನ್ನೂ, ಜ್ಯೋತಿಷ್ಕರನ್ನೂ ಕಳುಹಿಸು.

ಮಂತ್ರಿ:—ಅಪ್ಪಣೆ(ಎಂದು ಪುರೋಹಿತರು ಜ್ಯೋತಿಷ್ಕರು ಸಾಮಾಜಿಕರೊಡನೆ ಬೀಳ್ಕೊಂಡು ಹೋಗುವನು.)

ಅಶ್ವಪತಿ:—ಆಶ್ಚರ್ಯ! ಇದೇನಿದು? ಆಕಾಶದಿಂದ ತೇಜೋಮಂಡಲವಿಳಿಯುತ್ತಿರುವುದು. ಯಾರಲ್ಲಿ? ಬೇಗ ಅರ್ಘ್ಯಪಾದ್ಯಾದಿಗಳನ್ನು ಸಿದ್ಧಪಡಿಸಿ. ( ನಾರದರು ಬರುತ್ತಲೂ ) ದೇವರ್ಷಿಗಳಿಗೆ ಸುಖಾಗಮನನೇ ? ( ಎಂದು ನಮಸ್ಕರಿಸಿ ) ಅರ್ಘ್ಯಪಾದ್ಯಾದಿಗಳನ್ನು ಸ್ವೀಕರಿಸಬೇಕು.

ನಾರದ:—(ಸ್ವೀಕರಿಸಿ) ಮಹಾರಾಜನೆ ! ಶ್ರೇಯೋಸ್ತು ! ಇದೇನು ? ಇಂದು ವಿಶೇಷವೇನೋ ನಡೆದಂತಿದೆ.

ಅಶ್ವಪತಿ:—ಮುನಿವರ್ಯರಿಗೆ ತಿಳಿಯದುದಾವದುಂಟು ? ನಮ್ಮ ಪುತ್ರಿಯ ಲಗ್ನವು ಇಂದು ನಿಷ್ಕರ್ಷೆಯಾಯ್ತು.

ನಾರದ:—ಹಾಗಿದ್ದರೆ ಸಾವಿತ್ರೀದೇವಿಗೆ ಅನುರೂಪನಾದ ವರನು ದೊರೆತನೆ? ಯಾರು ?

ಅಶ್ವಪತಿ:—ಸಾಲ್ವೇಶ್ವರನಾದ ದ್ಯುಮತ್ಸೇನ ಮಹಾರಾಜನ ಮಗನಾದ ಸತ್ಯವಾನರಾಯನು.

ನಾರದ:—ಮಹಾರಾಜ ! ಅನ್ವೇಷಣ ಮಾಡಿಕೊಂಡು ಬಂದವರು ಯಾರು ?

ಅಶ್ವಪತಿ:—ವತ್ಸೆ ಸಾವಿತ್ರಿಯು ತಾನೇ ಹೋಗಿದ್ದಳು.

ನಾರದ:—ಇಷ್ಟೆಲ್ಲಾ ಪರಿವಾರವಿದ್ದು ವರಾನ್ವೇಷಣಕ್ಕೆ ಆ ಹುಡುಗಿಯನ್ನೇ ಕಳುಹಿಸುವುದು ?

ಅಶ್ವಪತಿ:—ವಯಸ್ಸು, ಗುಣ, ರೂಪ, ಸೌಜನ್ಯಾದಿಗಳಿಂದ ಈಡಾದ ವರನಲ್ಲವೆ ? ನೀವಾತನನ್ನು ಕಾಣಿರಾ ?

# ಸಾವಿತ್ರಿ



ಲೇಖಕ: —ದೇವುಡು ನರಸಿಂಹಶಾಸ್ತ್ರಿ, ಎಮ್. ಎ., ಬೆಂಗಳೂರು

( ೫ನೆಯ ವರ್ಷದ ೪ನೆಯ ಸಂಚಿಕೆಯಿಂದ ಮುಂದುವರಿದುದು ).

ಸಾವಿತ್ರಿ:—ಅಯ್ಯೋ ಏನಿದು ? ಯಾವನೋ ಒಬ್ಬ ವಿಕಾರಿಯು! ಯಾವನಾದರೇನು? ಅವನ ಪತ್ನಿಯ ಮಾಂಗಲ್ಯವು ಉಳಿದುಕೊಳ್ಳಲಿ. ಪತಿಪಾದ ಪದ್ಮವೇ ! ಅಪ್ಪಣೆಯನ್ನು ಕೊಡು. ಈತನ ಬಾಯಿಗಿಷ್ಟು ನೀರು ಬಿಡುವೆನು.

ರಾಕ್ಷಸ:—( ನೀರು ಕುಡಿದು ಗಂಧರ್ವನಾಗಿ ನಮಸ್ಕರಿಸಿ ) ತಾಯೆ ! ನಿನಗೆ ಮಂಗಳವಾಗಲಿ.

ಸಾವಿತ್ರಿ:— (ಸ್ವ) ಪತಿದೇವ ! (ಪ್ರ) ನೀನಾರು ?

ಗಂಧರ್ವ:— ತಾಯೆ ! ನಾನು ವಿಶ್ವಪ್ರಿಯನೆಂಬ ಗಂಧರ್ವನು. ಜನ್ಮಾಂತರ ಕರ್ಮದಿಂದ ನನಗೆ ಪ್ರಾಪ್ತವಾಗಿದ್ದ ಈ ರಾಕ್ಷಸ ಜನ್ಮವು ನಿನ್ನ ಹಸ್ತದ ಸ್ಪರ್ಶವನ್ನು ಹೊಂದಿದ ನೀರಿನಿಂದ ಕಳೆಯಿತು. ತಾಯೆ! ಈ ಚತುರ್ದಶ ಭುವನಗಳಲ್ಲಿಯೂ ಅಪ್ರತಿಹತಗಮನನಾದ ನಾನು, ನಿನಗೆ ಬೇಕಾದ ಯಾವ ಕೆಲಸವನ್ನಾದರೂ ಮಾಡಬಲ್ಲೆನು.

ಸಾವಿತ್ರೀ:—ಅಯ್ಯೋ ! ನಿರ್ಭಾಗ್ಯೆಯಾದ ನನಗೆ ಯಾವುದು ತಾನೇ ಬೇಕಾಗಿರುವುದು?

ಗಂಧರ್ವ:—ಹಾ! ಹಾ! ಅಮಂಗಳವು ಶಾಂತವಾಗಲಿ. ತಾಯೆ! ಅಂತಹ ಯೋಚನೆಯನ್ನೂ ಮಾಡಬೇಡ. ದೈವದತ್ತವಾದ ದಿವ್ಯದೃಷ್ಟಿಯಿಂದ ನಿನ್ನ ಮನಸ್ಸನ್ನು ಕೊರಗಿಸುವ ಚಿಂತೆಯನ್ನು ತಿಳಿದೆನು. ಅಮಂಗಳವು ಶಾಂತವಾಗಲಿ. ತಾಯೆ! ನಾಡದು, ಮಧ್ಯಾಹ್ನ ಮೂರುಝಾವ ಕಳೆದಮೇಲೆ, ಸೂರ್ಯನು ಮುಳುಗುವುದಕ್ಕೆ ಸ್ವಲ್ಪ ಮೊದಲು, ನಿನ್ನ ಪತಿಯನ್ನು ಕರೆದುಕೊಂಡು ಹೋಗಲು, ಸ್ವಯಂ ಯಮಧರ್ಮನೇ ಬರುವನು. ತಾಯೆ! ಅಳಬೇಡ. ಸುಮಂಗಲೆಯ ಕರುಣೆಯಿಂದ ಆಪತ್ತು ನಿವಾರಣವಾಗುವುದು. ಆಗ ನೀನು ಹೆದರದೆ ಹಿಂದೆಯೇ ಹೋಗು. ನನ್ನ ಪ್ರಭಾವದಿಂದ ನೀನು ಆಲೋಕಾಲೋಕಗಮನಶಕ್ತಿಯುಳ್ಳವಳಾಗುವೆ. ಆಗ ಆತನು ನಿನ್ನನ್ನು ಹಿಂದಿರುಗೆಂದು ಹೇಳುವನು. ಹಿಂದಿರುಗಬೇಡ. ಆಗ ನಿನ್ನ ಪತಿಭಕ್ತಿಗೆ ಮೆಚ್ಚಿ, ನಿನ್ನನ್ನು ಕುರಿತು ಪತಿಯ ಪ್ರಾಣವನ್ನು ಬಿಟ್ಟು ಬೇರೆ ಯಾವುದಾದರೂ ವರವನ್ನು ಕೇಳಿಕೊಳ್ಳೆನ್ನುವನು. ಆಗ ನೀನು ಧರ್ಮಕಥಾಲಾಪದಿಂದ ಆತನನ್ನು ಆರಾಧಿಸಿ ತೃಪ್ತಿಪಡಿಸು. ಮೂರನೆಯ ಸಲ ಧರ್ಮರಾಜನು ನಿನ್ನಲ್ಲಿ ಅನುಗ್ರಹಮಾಡಿ ನಿನ್ನ ಪತಿಯ ಪ್ರಾಣವನ್ನು ಹಿಂದಕ್ಕೆ ಕೊಡುವನು.

ಸಾವಿತ್ರಿ:— ಏನು! ಧರ್ಮರಾಜನು ಕರ್ತವ್ಯವಿಮುಖನಾಗಿ ಪತಿಯ ಪ್ರಾಣವನ್ನು ಹಿಂದಕ್ಕೆ ಕೊಡುವನೆ?

ಗಂಧರ್ವ:—ತಾಯೆ! ಅಪನಂಬಿಕೆ ಪಡಬೇಡ. ಪ್ರತಿಯೊಂದು ವಿಧಿಗೂ ಅಪವಾದವಿರುವುದು. ಅಲ್ಲದೆ, ತಪಸ್ಸಿಗೆ ಸಾಧ್ಯವಾಗದುದು ಯಾವುದುಂಟು? ಇಂದೂ ನಾಳೆಯೂ ಈ ವೃಕ್ಷರಾಜನನ್ನು ಸೇವಿಸು. ಸ್ವಾಮಿಯು ತೃಪ್ತನಾಗುವನು. ನಾಡದು ಮಾತ್ರ ಉದಯವಾದಂದಿನಿಂದ ನಿನ್ನ ಪತಿದೇವನನ್ನು ಮಾತ್ರ ಅಗಲಬೇಡ. ದೇವರು ನಿನಗೆ ಒಳ್ಳೆಯದನ್ನು ಮಾಡುವನು. ತಾಯೆ! ಇದೋ ನಿನ್ನ ಭಾವಿಸೌಭಾಗ್ಯದಂತೆ ಸೂರ್ಯನುದಯಿಸುತ್ತಿರುವನು. ನನಗೆ ಅಪ್ಪಣೆಯನ್ನು ಕೊಡು. ಮತ್ತೊಮ್ಮೆ ಬಂದು ದರ್ಶನಮಾಡುವೆನು.

ಸಾವಿತ್ರೀ:—ಮಹೋಪಕಾರಿಯೆ! ನಿನಗೆ ನಾನು ಏನು ತಾನೇ ಪ್ರತ್ಯುಪಕಾರ ಮಾಡಬಲ್ಲೆನು?

ಗಂಧರ್ವ:—ತಾಯೆ! ನೀಚವಾದ ರಾಕ್ಷಸಜನ್ಮದಲ್ಲಿ ತೊಳಲುತ್ತಿದ್ದ ನನಗೆ ಗಂಧರ್ವಜನ್ಮವನ್ನು ಕೊಟ್ಟು ಕಾಪಾಡಿರುವೆ. ಇನ್ನೂ ನನ್ನನ್ನು ಅನುಗ್ರಹಿಸುವುದಾದರೆ, ನನ್ನ ಮೇಲೆ ಕೃಪೆಮಾಡಿ, ಈ ನಿನ್ನ ಚರಣಧೂಳಿಯನ್ನು ಅನುಗ್ರಹಿಸಿ, ನನ್ನನ್ನು ಪುನೀತನನ್ನಾಗಿ ಮಾಡು. ನಿನಗೆ ಪ್ರದಕ್ಷಿಣಮಾಡಿ ಸಾಷ್ಟಾಂಗ ನಮಸ್ಕಾರ ಮಾಡಲು ಆಜ್ಞೆಯನ್ನು ಕೊಡು.

ಸಾವಿತ್ರೀ:—ಈ ನನ್ನ ಸರ್ವಪ್ರಭಾವವೂ ನನ್ನ ಪತಿದೇವನದು. ನೀನು ಆತನಿಗೆ ನಮಸ್ಕಾರ ಮಾಡಿದರೆ ನನಗೆ ತೃಪ್ತಿಯಾಗುವುದು.

ಗಂಧರ್ವ:—ಆಹಾ! ಸತೀಶಿರೋಮಣಿಯೇ! ನಿನ್ನ ಅಪ್ಪಣೆಯಂತೇ ಆಗಲಿ ( ಎದ್ದು ಹೋಗುವನು ).

ಸಾವಿತ್ರೀ:—ಭಕ್ತಪರಾಧೀನನಾದ ಶ್ರೀಮನ್ನಾರಾಯಣನೆ! ನಿನ್ನ ಚರಣಾನುಗ್ರಹದಿಂದ ಇಂದಿನವರೆಗೂ ನಡೆಸಿದ ನನ್ನ

ಜಪತಪಗಳೆಲ್ಲವೂ ಇಂದು ಸಫಲವಾದವು. ನಿನ್ನ ಕೃಪೆಯಿಂದ ಈತನ ವಚನವು ಸತ್ಯವಾಗಲಿ. ಇದೊ! ಸೂರ್ಯನಾಗಲೇ ಚೆನ್ನಾಗಿ ಕಾಣುತ್ತಿರುವನು. ಆರ್ಯಪುತ್ರನು ಹೊರಡುವ ಸಮಯವು ಸನ್ನಿಹಿತವಾಯ್ತು. ಗುರುಜನರ ಸೇವೆಗೆ ತಡ ವಾದೀತು. ( ಹೋಗುವಳು ).

---

## ಐದನೆಯ ಅಂಕ

( ಯಮನು ಧರ್ಮಾಸನಾಸೀನನಾಗಿರುವನು. ಚಿತ್ರಗುಪ್ತರೇ ಮೊದಲಾದವರು ಆಸ್ಥಾನದಲ್ಲಿರುವರು. ದೂತನೊಬ್ಬನು ಒಬ್ಬ ಪುಣ್ಯಾತ್ಮನೊಡನೆ ಪ್ರವೇಶಿಸುವನು. )

ದೂತ: — ಮಹಾಸ್ವಾಮಿಗೆ ಜಯವಾಗಲಿ. ಸನ್ನಿಧಿಯಲ್ಲಿ ಅಪ್ಪಣೆಯಾದಂತೆ ನರಕ ಲೋಕಗಳನ್ನೆಲ್ಲಾ ತೋರಿಸಿ ಕರೆದು ತಂದಿರುವೆನು.

ಯಮ:—ಎಲೈ ! ಪುಣ್ಯಾತ್ಮನೆ ! ಎಲ್ಲವನ್ನೂ ನೋಡಿ ಬಂದೆಯಾ ?

ಪುಣ್ಯಾತ್ಮ:—ಅಪ್ಪಣೆಯಾದಂತೆ ನೋಡಿಬಂದೆನು. ದೇವ! ಅದು, ಹೋಗಲಿ.

ಕಂ॥ ಅರಿದೊ ಅರಿಯದೆಯೊ ಎಸಗಿದ ॥
ಪರಾಧಮುಂ ಸರ್ವಮಂತ್ರಿಕರಣೋದ್ಭವಮುಂ ॥
ಹರಿದಾ ಕೇಶವಕೃಪೆಯುಂ ॥
ಪರಿ ಪರಮೋಪಾಯಮೇನು ಕರುಣಿಸುದಯೆಯಿಂ ॥

ಯಮ:—ಎಲೈ! ಪುಣ್ಯಾತ್ಮನೆ! ಸಮಸ್ತವಾದ ಜಗತ್ತಿಗೂ ಆಧಾರಭೂತನಾದ ಅಂತರ್ಯಾಮಿಯು ಸರ್ವವನ್ನೂ ನಡೆಸುವನೆಂದು ತಿಳಿದು,

ಕಂ॥ ಮನವೋ ನಿಸರ್ಗದುಷ್ಟಂ ॥
ವನಜಾಕ್ಷ! ಕೃಪಾಸಮುದ್ರನೈ ನೀನೆನುತಂ ॥
ಅನುಗಾಲದ ತನ್ನೆಸೆಕವ ॥
ಮನಮುಟ್ಟೆ ಸಮರ್ಪಿಸೆ ನಿರಪೇಕ್ಷಂ ಕೃತಿಯೈ ॥

ವೃತ್ತ॥ ರೂಢಿಯು ತುಂಬಿರಲ್ ತವವಿಭೂತಿಯೆ ದೇವರ
ದೇವ! ಮಾಧವಾ? ॥
ಮಾಡುವುದೆಲ್ಲಮುಂ ಸಿರಿಪ! ನಿನ್ನಯ ಕಾರ್ಯ
ಕಲಾಪಮಲ್ಲವೇಂ ॥
ನೋಡುವುದೆಲ್ಲಮುಂ ಪರಿಕಿಸಲ್ಕೆಲೆ ವಿಷ್ಣು !
ನಿನತ್ತು ರೂಹುಗಳ್ ॥
ಆಡುವುದೆಲ್ಲಮುಂ ದೊರೆಯೆ ! ನಿನ್ನ ನೆಗಳ್ತೆಯ
ಕೀರ್ತನಂಗಡಾ ॥

ಎಂದು ಸಮಸ್ತವನ್ನೂ ಆತನಿಗೊಪ್ಪಿಸಿ ಶಾಸಿದ್ದರೆ ಅದೇ ಉಪಾಯವು.

ಪುಣ್ಯಾತ್ಮ:—ಪರಮಾನುಗ್ರಹವಾಯ್ತು. (ನಮಸ್ಕರಿಸುವನು).

ಯಮ:—ಇನ್ನೀತನನ್ನು ಸ್ವರ್ಗಕ್ಕೆ ಕಳುಹಿಸು. (ವಿಮಾನವು ಬಂದು ಕರೆದುಕೊಂಡು ಹೋಗುವುದು).

ಖುತಗುಪ್ತ: —(ಪ್ರವೇಶಿಸಿ) ಮಹಾಸ್ವಾಮಿಗೆ ಜಯವಾಗಲಿ!

ಯಮ:—ಖುತಗುಪ್ತ ! ಏಕೆ ನಿನ್ನ ಕೆಲಸವನ್ನು ಬಿಟ್ಟು ಬಂದೆ ?

ಖುತಗುಪ್ತ:—ಆಜ್ಞಾಭಂಗವನ್ನು ತಿಳಿಸಲು ಹೆದರುವೆನು. ಪ್ರಭು !

ಯಮ:—ಏನು ? ಆಜ್ಞಾಭಂಗವೆ ?

ಖುತಗುಪ್ತ:—ನನ್ನಿಂದಲಲ್ಲ. ನನ್ನಿಂದಲಲ್ಲ. ಕಾಪಾಡಬೇಕು. ಮಹಾಪ್ರಭು ?

ಯಮ:—ಹಾಗಾದರೆ ಮತ್ತೆಯಾರಿಂದ ?

ಖುತಗುಪ್ತ:—ಇಂದು ಸಾಯಂಕಾಲ. ಆ ಸತ್ಯವಾನರಾಯನನ್ನು ಕರೆದು ತರಬೇಕಾಗಿರುವುದು. ಅದಕ್ಕಾಗಿ ನಾವು ಹೋಗಿ ನಿನ್ನಿನ ಸಾಯಂಕಾಲದಿಂದಲೂ ಆ ಆಶ್ರಮವನ್ನು ಹೊಗುವುದಕ್ಕೆ ಪ್ರಯತ್ನಪಟ್ಟೆವು. ಸಾಧ್ಯವಾಗಲಿಲ್ಲ.

ಯಮ: —ಆः !

ಖುತಗುಪ್ತ:—ಹೌದು. ಮಹಾಸ್ವಾಮಿ! ನೋಡುವುದಕ್ಕೆ ಅಸಾಧ್ಯವಾದ ಯಾವುದೋ ಒಂದು ತೇಜಸ್ಸು ಆತನ ಆಶ್ರಮವನ್ನೇ ಬಳಸಿರುವುದು. ಹಾಗೂ ಒಳಹೊಗಲು ಪ್ರಯತ್ನಪಟ್ಟೆವು. ಅದು ನಮ್ಮನ್ನು ದಹಿಸಬಂತು. ಉರಿಯನ್ನು ತಡೆಯದೆ ಓಡಿಬಂದೆವು. ಮಹಾಪ್ರಭು !

ಯಮ: — (ಆಶ್ಚರ್ಯದಿಂದ ಚಿತ್ರಗುಪ್ತರನ್ನು ನೋಡುವನು)

ಚಿತ್ರಗುಪ್ತ:—ಪ್ರಭು ! ಆತನ ಪತ್ನಿಯಾದ ಸಾವಿತ್ರೀದೇವಿಯು ಪರಮ ಪತಿವ್ರತೆಯು. ಆಕೆಯ ಪ್ರಭಾವವಿದು.

ಯಮ:—ಏನು ? ಯಮಭಟರನ್ನೂ ಹಿಂದಿರುಗಿಸಿದಳೆ ? ಹಾಗಾದರೆ ಆ ಪ್ರಭಾವವು ಅತಿ ಲೋಕೋತ್ತರವಾದುದಾಗಿರಬೇಕು. ಆಹಾ ! ಸಂದೇಹವೇನು ?

ವೃತ್ತ॥ ಮೊದಲೊಳ್ ಮೂರ್ತಿತ್ರಯಕ್ಕಂ ಮಗುವಿನಪರಿಜಂ
ಕೊಟ್ಟು ತೇಂ ತೊಟ್ಟಿಲೊಳ್ ತೂ ॥
ಗಿಬುದಂದಾ ನೇಸರಂ ಮೂಡದವೊಲು ತಡೆದುಂ
ಬಂಧಿಸಿತ್ತೀಶ್ವರಂಗಂ ॥
ಬೆವರಂ ಕಂಡಿಲ್ಲ ಶಾಪಂಗುಡುವ ಸಮಯದೊಳ್ನಿ
ಲ್ಲಿಸಿತ್ತಿಂದುತನ್ನಿಂ ॥
ತಿದು ಪಾತಿವ್ರತ್ಯವೆಂತಪ್ಪ ಮಹಿಮೆಯದೊ ಆಃ !
ಬಣ್ಣಿಸಲ್ ಬಲ್ಲನಾವಂ ॥

ಇರಲಿ! ನಾನೇ ಹೊರಡುವೆನು. ಮಹಿಷರಥವು ಸಿದ್ಧವಾಗಲಿ. (ಎಂದು ಎಲ್ಲರೊಡನೆಯೂ ಹೋಗುವನು).

( ಆಶ್ರಮದಲ್ಲಿ ದ್ಯುಮತ್ಸೇನನೂ ಆತನ ಪತ್ನಿಯೂ ಮಾತನಾಡುತ್ತ ಕುಳಿತಿರುವರು).

ದ್ಯುಮತ್ಸೇನ:—ದೇವಿ ! ಇಂದು ಬೆಳಗಿನಿಂದ ಎಡಗಣ್ಣೂ ಬಲಗಣ್ಣೂ ಹಾರುತ್ತಿರುವುವು. ಆದರೂ ಮನಸ್ಸು ಅಪಶಕುನವನ್ನು ಗಣಿಸದೆ ಬಹು ಸಂತುಷ್ಟವಾಗಿ ನಲಿಯುತ್ತಿರುವುದು.

ಪತ್ನೀ:—ನಾಥ ! ನನಗೂ ಹಾಗೇ ಇರುವುದು. ಹಿಂದೆ ನಮ್ಮ ಸತ್ಯವಾನನು ಜನಿಸಿದ ದಿನ ಇದ್ದಂತೆ ಇರುವುದು.

ದ್ಯುಮತ್ಸೇನ:—ಸಾವಿತ್ರಿಯೆಲ್ಲಿ ?

ಪತ್ನೀ:—ದೇವ ! ಇಂದು ಬೆಳಕು ಹರಿಯುತ್ತಿದ್ದ ಹಾಗೆಯೇ ಅಶ್ವತ್ಥ ಪೂಜೆಯಿಂದ ಬಂದವಳು ತಾನು ಇವತ್ತು ಪತಿಯನ್ನು ಎಡೆಬಿಡದೆ ಇರಬೇಕೆಂದು ಹೇಳಿದಳು.

ದ್ಯುಮತ್ಸೇನ:—
ಕ॥ ಪಗಲಿರುಳುಂ ಪತಿಯೊಡನೊಡ ।
ನಗಲದೆ ತಾಯ್ತಂದೆಯಂತೆ ಭಾವಿಸಿ ನಮ್ಮಂ ॥
ಮಿಗೆ ಸೇವೆಗೈವ ಸತಿಯಿಂ ॥
ದಗಲುವೊಡೇನೋ ತಿಳಿಯೆನು ಬಲುಕಾರಣಮಂ ॥

ಪತ್ನೀ:—ನಾನೂ ಹಾಗೆಂದೇ ಅಗತ್ಯವಾಗಿ ಆಗಬಹುದೆಂದನು.

ದ್ಯುಮತ್ಸೇನ:—ದೇವಿ ! ಬಹು ಒಳ್ಳೆಯ ಕೆಲಸವನ್ನು ಮಾಡಿದೆ. ಇಂದಾದರೂ ಗಂಡಹೆಂಡಿರಿಬ್ಬರೇ ಇರಲಿ. ಪ್ರತಿದಿನವೂ ನಮ್ಮನ್ನು ಸೇವಿಸಿ ಸೇವಿಸಿ, ಗಾಣದೆತ್ತಿನಂತೆ ಕೃಶವಾಗಿ ಹೋಗಿರುವರು.

ಪತ್ನೀ:—ಅಹುದಹುದು. ಅವರಿಬ್ಬರೂ ಒಬ್ಬರಿಗಿಂತಲೂ ಒಬ್ಬರು ಮುಂದಾಗಿ ಸೇವೆಗೆ ನಿಂತಿರುವರು. ನಮ್ಮ ಹೊಟ್ಟೆಯಲ್ಲಿ ಹುಟ್ಟಿದ ಮಗನು ಹಾಗಿರಲಿ. ರಾಜಕುಮಾರಿಯಾಗಿ ಸ್ತ್ರೀರತ್ನವಾದ ನಮ್ಮ ಸೊಸೆ. ಆಕೆಯದಲ್ಲವೆ ಅತಿಶಯ; ತನ್ನ ದೇಹವನ್ನೆ ನಮ್ಮ ಸೇವೆಯಲ್ಲಿ ತೇಯುತ್ತಿರುವಳು.

ದ್ಯುಮತ್ಸೇನ:—ದೇವಿ ! ಸದ್ವಿದ್ಯೆಯ ಪಕ್ವ ಫಲವಿದು. ಕರ್ತವ್ಯ ಪರಾಯಣತೆಯ ಗುರುತಿದು. ಇಂತಹ ಸೊಸೆಯು ಸಿಕ್ಕಿದುದು ನಮ್ಮ ಭಾಗ್ಯ ! ಆದರೂ ದೇವಿ ! ನಾನೀವಿಚಾರವಾಗಿ ಬಹುದಿನದಿಂದಲೂ ಯೋಚಿಸುತ್ತಿರುವೆನು. ಇಂದು ಅವಕಾಶ ದೊರೆತಿರುವುದು. ಕೇಳು. ಈ ಯುವಕರಿಬ್ಬರೂ, ಈ ಯೌವ್ವನದಲ್ಲಿ ನಮಗಾಗಿ ಕಷ್ಟ ಪಡುತ್ತಿರುವುದನ್ನು ನೋಡಿ ಮನಸ್ಸು ಸೈರಿಸದು. ಇಂದು ಮಧ್ಯಾಹ್ನವಾದ ಮೇಲೆ ಸತ್ಯವಾನನು ಫಲಪುಷ್ಪಾರ್ಥವಾಗಿ ಹೊರಡುವನು. ತಾಯಿಯೂ ಅವನ ಜತೆಯಲ್ಲಿ ಹೋಗುವಳು. ಅನಂತರ ಯಾರಿಗೂ ತಿಳಿಯದಂತೆ ನಾವಿಬ್ಬರೂ ಎಲ್ಲಾದರೂ ಹೊರಟು ಹೋಗೋಣ.

ಪತ್ನಿ:—ಇದೊ ! ದಂಪತಿಗಳು ಬರುತ್ತಿರುವರು.

(ಸಾವಿತ್ರೀ ಸತ್ಯವಾನರು ಬರುವರು)

ಸತ್ಯವಾನ:—ಪ್ರಿಯೆ ! ನನ್ನ ಮಾತು ಕೇಳು. ಆ ಮುಳ್ಳು ಕಲ್ಲುಗಳಲ್ಲಿ ನಡೆದು ನಿನ್ನ ಕಾಲುನೊಂದರೆ ನಾನು ಸೈರಿಸೆನು. ಇಲ್ಲಿಯೆ ಇರು, ಬೇಗನೆ ಬಂದು ಬಿಡುವೆನು.

ಸಾವಿತ್ರೀ:—ಆರ್ಯಪುತ್ರ ! ಇಂದಿನವರೆಗೂ ಎಂದೂ ನಾನು ನಿನ್ನೊಡನೆ ಬರಬೇಕೆಂದುದಿಲ್ಲ. ಇಂದೇಕೆಹೋ ಆಶೆಯಾಗುತ್ತಿರುವುದು.

ಸತ್ಯವಾನ:—ನಿನಗೆ ವನದ ಪರಿಚಯವು ಸಾಲದು. ಆದುದರಿಂದ ಹೀಗೆ ಹೇಳುವೆ. ಕೇಳು.

ವೃತ್ತ॥ ಕೊರೆವುದು ಮುಳ್ಳು ಮೆಲ್ಲೊಡಲ ಕಲ್ಲು ವಿಘಾತಿ
ಪುದಬ್ಜಪಾದಮಂ ॥
ಹರಿಯುದು ಹಾದಿ ಕತ್ತಲೊಳು ಮುಗ್ಗರಿಸಪ್ಪುದು ಹೆಜ್ಜೆ
ಹೆಜ್ಜೆಗುಂ ॥

ಸಾವಿತ್ರೀ:—ಆದರೂ ಆಗಲಿ.

ಸತ್ಯವಾನ:—ಹರಿವುದು ಹಾವು ಹೆಜ್ಜೆಯಡಿ ಹೆಬ್ಬುಲಿ
ಹಾದಿಯೊಳಿದ್ದು ನೋಡುಗುಂ ॥
ಅರರೆ ಹರೀಂದ್ರನಬ್ಬರಿಸಿ ಹಸ್ತಿಗಳು ಸೀಳೆ ಭಯಂಕರಂ ವನಂ॥

ಸಾವಿತ್ರೀ:—ಕಾಂತ ! ಏನಾದರೂ ಆಗಲಿ! ನನ್ನನ್ನು ಕರೆದುಕೊಂಡೇ ಹೋಗಬೇಕು.

ಸತ್ಯವಾನ:—ಇದೇನೀ ಹುಚ್ಚು ?

ಕಂದ॥ ಸುಮುಕೋಮಲಮೀ ತನುವಾ ॥
ಶ್ರಮುಕ್ಕೆ ಬಂದಂದಿನಿಂದ ಜಪತಪಮೆಸಗಲ್ ॥
ಸಮೆದಿರೆ ಸೀರಿಂ ಬಿಸುಡಿದ ॥
ಕಮಲಿಸಿವೊಲ್ಕಂದಿರೆ ವನಗಮನಮಿದೇಕೌ ॥

ಸಾವಿತ್ರೀ:— ನಾಥ ! ಕರೆದುಕೊಂಡು ಹೋಗಬಾರದೆಂದೊ ?

ಸತ್ಯ:—ಮಡದಿ ! ಇಲ್ಲಿ ತಾಯ್ತಂದೆಗಳು.—

ಸಾವಿತ್ರೀ:—ನಾನು ಅವರಪ್ಪಣೆಯನ್ನು ಪಡೆದಿರುವೆನು.

ಸತ್ಯವಾನ:— ನಾವಿಬ್ಬರೂ ಹೊರಟು ಹೋಗುವುದೆ ? ಮಡದಿ ! ನನ್ನ ಮಾತನ್ನು ಕೇಳು.

ಸಾವಿತ್ರೀ:—ಒಡೆಯ! ತಮ್ಮ ಕೈಹಿಡಿದಂದಿನಿಂದ ನಾನೂ ಯಾವುದನ್ನೂ ಕೇಳಿದವಳಲ್ಲ. ಈಗ ನಿಮ್ಮೊಡನೆ ವನಕ್ಕೆ ಬರುವೆನೆಂದರೆ ಅದರಿಂದೇನು ನಷ್ಟವಾದೀತು ? ನೀನೊಂದು ವೇಳೆ ಬಿಟ್ಟು ಹೋದರೂ ನಾನೇ ನಿನ್ನ ಹಿಂದೆ ಬಂದು ಬಿಡುವೆನು.

ಸತ್ಯವಾನ:—ಹೂ ಹಾಗೆಯೇ ಆಗಲಿ. ಬಾ, ಮಾತಾಪಿತೃಗಳ ಅಪ್ಪಣೆಯನ್ನು ಪಡೆದು ಹೋಗೋಣ. (ಎಂದು ಬಂದು ನಮಸ್ಕರಿಸಿ) ತಂದೆಯೆ ಸವುದೆಗಾಗಿ ಹೋಗಿ ಬರುವೆನು.

ದ್ಯುಮತ್ಸೇನ:—

ಕಂ॥ ವೈರಿಯ ಗಂಟಲ ಬಳೆಯುಂ ॥
ನೂರುಂ ನುಚ್ಚಾಗುವಂತೆ ನೆಗ್ಗಿ ಸಿರಿಯೊಡಂ
ಧಾರಿಣಿಯಂ ಕೈಕೊಂಬುವ ॥
ವೀರಾಗ್ರಣಿ! ಸವುದೆಗಾಗಿ ಪೊರಮಟ್ಟೆಹೆಯಾ? ॥

ಪತ್ನೀ:—ಇಂತಹ ಕಷ್ಟವನ್ನು ಹೇಗೆ ಸೈರಿಸಲಿ? ಇದನ್ನು ನೋಡಿದರೂ ನನ್ನೆದೆ ಒಡೆಯುದಲ್ಲಾ !

ಸತ್ಯವಾನ:—ಅಮ್ಮಾ! ತಾವೇಕೆ ಹೀಗೆ ಚಿಂತಿಸುವಿರಿ?

ಕಂ॥ ಸಿರಿಗಂ ಸಿರಿಪತಿಗುಂ ಸರಿ ॥
ದೊರೆಯೆನೆ ತಾಯ್ತಂದೆ ನೀವು ಜತೆಗೂಡಿರೆ ಕೇಳ್॥
ಪಿರಿದುಂ ಸೇವಾಧರ್ಮದೆ ॥
ಪರಿವರ್ಧಿಸಿ ಗೆಲ್ದೆನಾದೆ ಸಚರಾಚರಮಂ ॥

ದ್ಯುಮತ್ಸೇನ:—ಮಗನೇ ! ಏನು ಹೇಳಲಿ? ಹೋಗಿ ಬಾ. ಯಾತಕ್ಕೊ ನಿನ್ನನ್ನು ಅಗಲಿರಲು ಮನಸ್ಸೇ ಬರದು. ಸತ್ಯವಾನ! ಇನ್ನು ಸ್ವಲ್ಪವೂ ಸವುದೆಯಿಲ್ಲವೆ?

ಸತ್ಯವಾನ:—ತಂದೆಯೆ ! ಸಂಜೆಗೆ ಸವುದೆಯನ್ನು ತಂದಲ್ಲದೆ ಯತ್ನವಿಲ್ಲ.

ದ್ಯುಮತ್ಸೇನ:—(ತಡೆತಡೆದು) ಹೂ! ಹೋಗಿಬಾ.

ಸತ್ಯವಾನ:—ಅಮ್ಮಾ! ನಾನು ಕಾಡಿಗೆ ಹೋಗಿಬರುವೆನು.

ಪತ್ನೀ:—ಮಗು! ಸತ್ಯವಾನ! ಜೋಕೆ! ಎಚ್ಚರವಾಗಿರು. ಎಲ್ಲಾದರೂ ಹತ್ತಿರವಾಗಿ ಒಂಟಿಯಾಗಿರುವ ಮರವನ್ನು ನೋಡಿ ಸ್ವಲ್ಪ ಸವುದೆ ಸಿಕ್ಕಿದರೆ ಸಾಕು. ಬೇಗನೆ ಹಿಂದಿರುಗಿ ಬಂದು ಬಿಡು. ಬಹುಹೊತ್ತು ಅಡವಿಯಲ್ಲಿರಬೇಡ. ಸಾವಿತ್ರಿಯನ್ನು ಚನ್ನಾಗಿ ನೋಡಿಕೊ. ಮತ್ತೊಮ್ಮೆ ನೋಡುವೆನು. ಮಗು! ಬಾ. ಹತ್ತಿರ ಕುಳಿತಿಕೊ. ತಾಯಿ! ಸಾವಿತ್ರೀ! ನೀನೂ ಬಾ. ಕುಳಿತಿಕೊ (ಆಪವಾರಿಸಿ) ಇದೇಕೆ ? ಇಂದು ಸಾವಿತ್ರಿಯ ಮುಖವನ್ನು ನೋಡಿದಿರಾ ? ಎಷ್ಟು ಕಾಂತಿಮಯವಾಗಿರುವುದು ! ತಾಯಿ ! ನಿನಗೆ ದೃಷ್ಟಿ ತಾಕೀತು ! ಏಕೆ ಅರಣ್ಯಕ್ಕೆ ಹೋಗುವೆ? ಇಲ್ಲೆ ಇರು.

ಸತ್ಯವಾನ:—ಅಮ್ಮಾ ! ಇಂದೇಕೊ ಆಕೆಯು ಹಟ ಹಿಡಿದಿರುವಳು. ಬರಲಿ ಬಿಡು.

ಪತ್ನೀ:—( ಸ್ವಗತ ) ಇದೇನು ? ಇವರಿಬ್ಬರನ್ನೂ ಮತ್ತೆ ನೋಡುವೆನೆ? ಎನ್ನಿಸುತ್ತಿರುವುದಲ್ಲ ! ಛೀ ! ಅಮಂಗಳವಾಗದಿರಲಿ.

ದ್ಯುಮತ್ಸೇನ:—ಮಗು! ಸತ್ಯವಾನ ! ನನಗೇಕೋ ದಿಗಿಲಾಗುತ್ತಿರುವುದು. ಬಹಳ ಹೊತ್ತು ಹೊರಗಿರಬೇಡ. ಬೇಗ ಬಂದು ಬಿಡು. ತಾಯಿ ! ನೀನು ನನ್ನ ಮನೆಯ ಸೌಭಾಗ್ಯಲಕ್ಷ್ಮಿ! ನೀನೂ ಹೊರಟಿರುವೆ ! ಏನಾದರೂ ಆಗಲಿ ! ಇಷ್ಟು ಮಾತ್ರ ಮಾಡಿ;

ಕಂ॥ ಮರದಡಿ ಪದವಿಡುವಾಗ ಪೊ ॥
ದರಿನ ಕೆಲದೆ ಚರಿಸುವಾಗ ನಡೆವಾಗಪದಂ ॥
ಪಿರಿದುಂ ನೀವೀರ್ವರುಮೊ ।
ರ್ವರ ನೊರ್ವರು ಕಾಪುಗೊಂಡು ತಿರುಗಿರಿ ಜವದಿಂ॥

ಪತ್ನೀ:—ತಾಯಿ ! ಸಾವಿತ್ರೀ ! ನಿನ್ನ ಪತಿಯು ದುಡುಕಿ ಎಂದಿನಂತೆ ಮರವನ್ನು ಹತ್ತಿಗಿ ಯಾನು, ಹುಲಿಗಿಲಿಯನ್ನು ಕಂಡು ಮೇಲೆ ಬಿದ್ದಾನು. ಘಟಸರ್ಪಗಳನ್ನು ಕೆಣಕಿಯಾನು. ಅದಕ್ಕೆಲ್ಲ ಅವಕಾಶ ಕೊಡದೆ ಜೋಪಾನವಾಗಿ ಕರೆದು ತಾ.

ಸಾವಿತ್ರಿ:—( ಅತ್ತೆಮಾವಂದಿರಿಗೆ ನಮಸ್ಕರಿಸಿ ) ಅಪ್ಪಣೆಯಾದರೆ ಹೋಗಿ ಬರುವೆನು.

ದ್ಯುಮತ್ಸೇನ ಮತ್ತು ಪತ್ನಿ:—ಮಕ್ಕಳಿರಾ! ಹೋಗಿಬನ್ನಿ. ಸತ್ಯವಾನ! ರಾಜಪುತ್ರಿಯಾದ ಸಾವಿತ್ರಿಯು ಬಳಲದಂತೆ ಬೇಗನೆ ಬಂದುಬಿಡು.

ಸತ್ಯವಾನ:—ಹಾಗೇ ಆಗಲಿ. ( ಇಬ್ಬರೂ ಹೊರಡುವರು )

ದ್ಯುಮತ್ಸೇನ:— ಪತ್ನಿಯೆ! ಇದೇಕೋ ಮತ್ತೆ ಸತ್ಯವಾನ ನನ್ನು ನೋಡುವೆನೇ ಎನ್ನಿಸುತ್ತಿರುವುದಲ್ಲಾ !

ಪತ್ನೀ:— ಅಮಂಗಳವು ಶಾಂತವಾಗಲಿ ! ಸಾವಿತ್ರಿಯು ಜತೆಯಲ್ಲಿರುವಳು. ದಿಗಿಲಿಲ್ಲ. ಮತ್ತೊಮ್ಮೆ ನೋಡಬೇಕೆನ್ನಿ ಸುತ್ತಿರುವುದಲ್ಲಾ! ( ಎದ್ದುಹೋಗಿ ನೋಡಿ ) ಇವೇಕೆ ಇವರಿಷ್ಟು ಚೆನ್ನಾಗಿ ಕಾಣುತ್ತಿರುವರು? ( ಪ್ರಕಾಶ ) ಏಕೋ ನನಗೂ ವಿಪರೀತವಾಗಿ ದಿಗಿಲಾಗುತ್ತಿರುವುದಲ್ಲ. ಹೋಗಿ ಹಿಂದಿರುಗ ರೆಂದು ಕೂಗಲೆ ?

ದ್ಯುಮತ್ಸೇನ:— ಏನೋ ಪ್ರತಿನಿತ್ಯವೂ ಹೋಗಿ ಬರುತ್ತಿರ ಲಿಲ್ಲವೆ? ಅಂತೂ ಈ ಹೊತ್ತು ಅವನನ್ನು ಕಳುಹಿಸಿದುದು ನಮ್ಮ ದೇಹದಿಂದ ಜೀವನನ್ನೇ ಕಳುಹಿಸಿದಂತಿದೆ. ದೈವ ಚಿತ್ತ. ಇರಲಿ. ನಡೆ.

ಪತ್ನಿ:— ನನಗೂ ಬಹಳ ಕಳವಳವಾಗುತ್ತಿರುವುದು. ಹೋಗಿ ಮಡಿಯುಟ್ಟು ದೇವರಿಗೆ ಮೀಸಲನ್ನಾದರೂ ಕಟ್ಟು ವೆನು. (ಇಬ್ಬರೂ ಹೋಗುವರು)

( ಸಾವಿತ್ರೀ ಸತ್ಯವಾನರು ಕಾಡಿನಲ್ಲಿ ಪ್ರವೇಶಿಸುವರು. )

ಸತ್ಯವಾನ:— ಕಾಂತೆ! ಇಂದೇಕೆ ಎಂದೂ ಇಲ್ಲದ ಛಲ ಹಿಡಿದೆಯಲ್ಲ ?

ಸಾವಿತ್ರೀ:—ಪತಿಯ ಹಿಂದೆ ಸತಿಯು ಬರಬೇಕೆನ್ನುವುದು ಛಲವೆ ?

ಸತ್ಯವಾನ:— ಹಾಗಾದರೆ ನಿತ್ಯವೂ ಏಕೆ ಬರುತ್ತಿರಲಿಲ್ಲ ?

ಸಾವಿತ್ರೀ:—( ತಬ್ಬಿಕೊಂಡು ) ನಾಥ! ನಾನು ಬಂದುದರಿಂದ ನಿನಗೆ ತೊಂದರೆಯೆ?

ಸತ್ಯವಾನ:— ( ಸಂತವಿಸುತ್ತ ) ಮಡದಿ! ನೀನಿದ್ದರೆ ನನಗೆ ಸಮಸ್ತಲೋಕಗಳೂ ಇದ್ದ ಹಾಗೆ !

ಸತ್ಯವಾನ:— ಕೇಳು

ಕಂ॥ ತನಗಾಗಿ ರಾಜಭೋಗಗಳ ॥
ಳನಗಲಿ ಪಗಲಿರುಳು ತನ್ನ ತಾಯ್ತಂದೆ ವಿರಂ ॥
ತನಗಿಂ ಮಿಗಿಲೆನೆ ಸೇವಿಸಿ ॥
ವನಿತೆ! ಬಳಲ್ದ ನಿನ್ನ ಕಾಡಿಗೆಂಕೆಳೆತರುವೆಂ ॥

ಸಾವಿತ್ರೀ:— ನಾಥ! ನೀನಿರಲು ನನಗೆ ಬೇರೆ ಯೋಚ ನೆಯೂ ಉಂಟೆ ?

ಸತ್ಯವಾನ:— ನಿನ್ನನ್ನು ಬೇಡವೆನ್ನುತ್ತಿದ್ದರೂ ಒಳಗೆ ಹೋಗಿತ್ತು ಬಲ್ಲೆಯಾ?

ಕಂ॥ ಬಗೆ ಪಿಂತೆಗೆದೇಂ ನಿಲ್ಪಳೊ ॥
ಮೃಗಾಕ್ಷಿ ಕಾಂತೆಯೊಡವೆರೆದು ನಡೆವೊಡೆಕಾಡೊಳ್ ।
ಮಿಗೆ ಭಾಗ್ಯವಿಲ್ಲವೋ ? ಎಂ ॥
ದಗಿದಗಿದು ಮನಂ ವ್ಯಥಿಸಿದುದೆಲೆ ವಲ್ಲಭೆಯೇ ॥

ಸಾವಿತ್ರೀ:— ಈಗ ?

ಸತ್ಯವಾನ:— ಸಂತೃಪ್ತನಾಗಿರುವೆನು. ಕಾಂತೆ! ನೋಡು ಈ ಹಗಲಿನಲ್ಲೂ ಈ ನೆರಳೆಷ್ಟು ದಟ್ಟವಾಗಿರುವುದು !

ವೃತ್ತ॥ ಮಾಯ್ದಿಹ ನೇರಿಲಾ ಸುಫಲವಂತಿರೆ ನೀಲದ
ರತ್ನದಜಾತದಂ ॥
ಕೈದೆ ಕರೀಂದ್ರ ಸಂಕುಲದ ಪೇರೋಡಲಂತೆ ಮುಗಿ
ಲ್ಗಳಂತೆ ಕ ॥
ನ್ನೈಯ್ದಿಲೇ ಗುಂಪಿನಂತೆ ಮುಸುರಿರ್ಪ ಮದ್ಯಾಳಿಯು
ವಂಶದಂತೆ ಮೇ ॥
ಣ್ಯಾದಲೆ ! ನಿನ್ನ ಚೆಲ್ಲು ಗುರುಳಂತೆ ವಿರಾಜಿಪು
ದಿತ್ತ ಕತ್ತಲುಂ

ಪ್ರೇಯಸಿ! ಅಲ್ಲಿ ನೋಡು. ತನಿವಣ್ಣು ಜೋಲಾಡುತ್ತಿರು ವುದು. ಸ್ವಲ್ಪ ನಿಂತುಕೊ. ತಂದುಕೊಡುವೆನು.

ಸಾವಿತ್ರೀ:— ಬೇಡ ಬೇಡ. ನಿತ್ಯವೂ ಪತಿಸೇವಾಮೃತ ಮಿರುವಾಗ ಈ ಹಣ್ಣಿನಿಂದಾಗ ಬೇಕಾದುದೇನು?

ಸತ್ಯವಾನ: —ಅಯ್ಯೋ ಭೀರುವೆ! ಏಕೆ ದಿಗಿಲು ಪಡುವೆ ?

ಸಾವಿತ್ರೀ:—ಬಾ! ನಾವಿನ್ನು ಹೋಗಿ ಬಂದ ಕೆಲಸವನ್ನು ಮಾಡಿಕೊಂಡು ಆಶ್ರಮಕ್ಕೆ ಹಿಂದಿರುಗೋಣ.

ಸತ್ಯವಾನ:— ನನ್ನ ಪ್ರಾರ್ಥನೆಯೊಂದುಂಟು. ಮಡದಿ! ಮರದ ಬುಡದಲ್ಲಿ ಒಂದು ಗಳಿಗೆ ಕುಳಿತು ವಿಶ್ರಮಿಸಿ ಕೊಳ್ಳೋಣ.

ಸತ್ಯವಾನ:— ಪ್ರಿಯೆ! ನೀನು ಇಲ್ಲಿಂದ ರಾಜಧಾನಿಗೆ ಹೋಗುವೆಯಲ್ಲ! ಮತ್ತೆ ಇಲ್ಲಿಗೆ ಬರುವವರೆಗೂ ಹೇಗೆ ಕಾಲ ಹರಣ ಮಾಡುತ್ತಿದ್ದೆ?

ಸಾವಿತ್ರೀ:— ಆಶೆಯಿಂದ.

ಸತ್ಯವಾನ:— ಕಣ್ಣೀರೇಕೆ ಮಿಡಿಯುವೆ ?

ಸಾವಿತ್ರೀ:— ಅದೇಕೋ ಕಾಣೆ ?

ಸತ್ಯವಾನ:— ನಾನು ಹೇಳಲೆ? ಅಗಲಿಕೆಯ ಯೋಚನೆ ಯನ್ನೂ ಮನವು ಸೈರಿಸನು. ಅದಕ್ಕಾಗಿ,

ಸಾವಿತ್ರೀ:-ಸರಿ ಸರಿ. (ಎಂದು ಕಣ್ಣೀರು ಸುರಿಸುತ್ತಾ ನಗುವಳು)

ಸತ್ಯವಾನ:—ನೀರೆ! ಈಗ ನೀನು ಹೇಗಿರುವೆ ಬಲ್ಲೆಯಾ ?

ಕಂ॥ ವಿರಹದ ಯೋಚನೆಯಂ ಬಗೆ ॥
ತರಹರಿಸದೆ ಕಂಬನಿಯಿಳಿವೊಡೆ ನಗುವೊಗದೊಳ್ ॥
ಸರಸಿರುಹಾನನೆ ! ಪೋಲುವೆ ॥
ಸುರಿಯುವ ಮಳೆ ನೀರಿನೆಸೆವ ತಾವರೆಯಿರವಂ ॥...

ಆಗ ನನಗೆ ಹೋಗಿತ್ತು ಬಲ್ಲೆಯಾ ?

ಸಾವಿತ್ರಿ :— ಹೂ

ಸತ್ಯವಾನ :— ಇಂದೋ ನಾಳೆಯೋ ನನ್ನ ಸೌಭಾಗ್ಯ ಲಕ್ಷ್ಮಿಯು ಬಲಿಯುವಳು. ನಾನು ಧನ್ಯನಾಗುವೆನು. ಎಂದು ಚಿಂತಿಸುತ್ತಿರಲು, ಇದ್ದಕ್ಕಿದ್ದ ಹಾಗೆಯೇ ।

ಕಂ॥ ತುಂಬುಗೊರಳೊಮ್ಮೆ ಯಿಂಬೆನೆ ॥
ಕಾಂಬುದು! ನೋಳ್ಪಕ್ಷಿಯೊಮ್ಮೆ ಕನ್ನಡಿಕದಪುಂ
ಬಿಂಬಾಧರ ವೊಮ್ಮೆಗೆ, ಮೇ ॥
ಣಂಬುರುಹಾನನಮದೊಮ್ಮೆ ಕಾಂಬುದು ಸುತ್ತಂ ॥

ಸಾವಿತ್ರೀ:— ಆಗ ನೀನೇನು ಮಾಡುವೆ ?

ಸತ್ಯವಾನ:— ಆ ಕಣ್ಣನ್ನು ನೋಡಿ,

ಕಂ॥ ತಿಳಿಗೊಳದೊಳ್ ಬೆಳೆದಿರೆ ನೆ ॥
ಯ್ದಿಲೊಂದದರಗಾಡಿ ಗಂಡು ಗೆದ್ದೆರೆ ತನ್ನಂ ॥
ಮಲರಂಬಗೆ ಕಾಣ್ಕೆಯ ಕೊಡೆ ॥
ಜಲಜಭವಂ ಪುಡುಕಿಯಿಟ್ಟ ತೆರನಂ ಮೆರೆಗುಂ ॥

ಎಂದು ಕೊಳ್ಳುವೆನು. ಮತ್ತೊಮ್ಮೆ ಆ ಚೆಂದುಟಿಯನ್ನು ಕಂಡಾಗ

ಕಂ॥ ತೊಂಡೆಯ ತನಿವಣ್ಣ ರಸಂ ॥
ಪಿಂಡಿದ ನಾದನೆಳೆದಳಿರ ನರೆದವನಾದಂ ॥
ಬಂಡಿನ ಕರುವಿಟ್ಟಿಂಗಜ ।
ಮುಂಡನಕೆನೆ ತಾತನೆರೆದ ಸೀ ಚೆಂದುಟಿಯಂ ॥

ಎಂದುಕೊಳ್ಳುವೆನು. ಮತ್ತೊಮ್ಮೆ ನನ್ನ ಪಾಡಿಗೆ ನಾನಿರಲು,

ಕಂ॥ ಎಳೆಯಳ ನೋಟಂ ನೋಳ್ಪೆಡೆ ॥
ಯೊಳುತನ ನೋಟಂ ಪರಿವೊಡೆ ತಟ್ಟನೆ ನಾಣಿಂ ॥
ಜಲ ಜಾಸ್ಯವ ತಗ್ಗಿಸಿದಾ ॥
ಕೆಳದಿಯ ನಗುವೊಗವ ತಂದು ತೋರ್ಪುದು ಚಿತ್ತಂ ॥

ಸಾವಿತ್ರೀ—ಸರಿ ಸರಿ (ಎಂದು ಎದ್ದು ಸ್ವಲ್ಪ ಅತ್ತ ಸರಿಯುವಳು)

ಸತ್ಯವಾನ— ಆಹಾ! ಪ್ರೇಯಸಿ! ಪ್ರೆಯಸಿ! ಸ್ವಲ್ಪ ಹಾಗೆಯೇ ಇರು. ಸಂಜೆಯ ಬಿಸಿಲಿಂದ ನಿನ್ನ ಮುಖವು ಅಪೂರ್ವವಾಗಿ ಶೋಭಿಸುತ್ತಿರುವುದು.

ಸಾವಿತ್ರೀ:— ( ಬೆಚ್ಚಿಬಿದ್ದು ) ಆರ್ಯಪುತ್ರ! ಹೊತ್ತಾಯ್ತು ನಡೆ ಹೋಗೋಣ.

ಸತ್ಯವಾನ:— ಅಹುದು. ಇದೋ ಸಮೀಪದಲ್ಲಿಯೇ ಯಾವುದೊ ಒಂದು ಒಣ ಮರವಿರುವದು. ಬಾ. ಒಂದು ಕೊಂಬೆಯನ್ನು ಕಡಿದುಕೊಂಡು ಹೋಗೋಣ.

ಸಾವಿತ್ರೀ— ( ಎದ್ದು ನಡುಗುವಳು. )

ಸತ್ಯವಾನ:— (ಗಾಬರಿಯಾಗಿ) ಪ್ರಿಯೆ! ಯಾಕೆ ನಡುಗುವೆ?

ಸಾವಿತ್ರೀ:— ಸಂಜೆಯ ತಂಗಾಳಿ ಬೀಸುತ್ತಿರುವುದು ಅಷ್ಟೆ!

ಸತ್ಯವಾನ:— ಅಹುದು. ನನಗೂ ಚಳಿಯಾಗುತ್ತಿರುವುದು. ಅಯ್ಯೋ! ನನ್ನಿಂದ ನಿನಗೆಷ್ಟು ಶ್ರಮ? ಇರಲಿ. ನೀನೀ ಉತ್ತರೀಯವನ್ನು ಹೊದೆದುಕೊಂಡಿಲ್ಲಿ ಕುಳಿತಿರು. ನಾನೀ ಮರವನ್ನು ಹತ್ತಿ ಕೊಂಬೆಯನ್ನು ತರುವೆನು.

ಸಾವಿತ್ರೀ:— ಆರ್ಯಪುತ್ರ! ನೆಲದಮೇಲೆ ಬಿದ್ದಿರುವ ಒಣ ಕಡ್ಡಿಯನ್ನಾರಿಸಿಕೊಂಡು ಹೋಗೋಣ, ನಾಳೆಯು ಉದಯವಾಗುತ್ತಲೂ ಬರೋಣ.

ಸತ್ಯವಾನ:— ದೇವಿ! ಏಕೆದಿಗಿಲು? ಇನ್ನೂ ಸೂರ್ಯಾಸ್ತಮಯವಾಗುವುದಕ್ಕೆ ಬಹಳ ಹೊತ್ತಿರುವುದು. ( ಕೊಡಲಿಯನ್ನೆತ್ತಿ ಸ್ವಗತ ಇದೇಕೆ? ಕಯ್ಯೋತು ಹೋಗುವುದು? ತ್ಸ್ಚ್ ( ಎಂದು ಮರವನ್ನು ಹತ್ತಿ ಕಡಿಯುವನು ) ( ಸಾವಿತ್ರಿಯು ಕಾಯ್ದು ಕೊಂಡಿರುವಳು )

ಸತ್ಯವಾನ:—ಹಿಂದೆ ಹೋಗು ಸಾವಿತ್ರಿ! ಹಿಂದೆ ಹೋಗು ಕೊಡಲಿಯು ಜಾರಿಬಿತ್ತು.

ಸಾವಿತ್ರೀ:— ಹೋದರೆ ಹೋಗಲಿ ನಾಥ! ನೀನೆಚ್ಚರಿಕೆಯಾಗಿಳಿ.

ಸತ್ಯವಾನ:— ಅಯ್ಯೋ! ಸಾವಿತ್ರೀ! ( ಎಂದು ಕಾಲುಜಾರಿ ತಾನೂ ಬೀಳುವನು. )

ಸಾವಿತ್ರೀ:— ಅಹಹಾ! ಅಯ್ಯಯ್ಯೋ! (ಎಂದು ಹೋಗಿ ಹಿಡಿದುಕೊಂಡು) ಪ್ರಾಣೇಶ್ವರ! ಏಟು ಬಿತ್ತೆ ?

ಸತ್ಯವಾನ:— (ಬಿಕ್ಕಳಿಸುತ್ತಾ) ಮಡದಿ! ತಂದೆತಾಯಿಗಳು ಜೋಕೆ ಅವರಿಗೆ– ನೀನೇ– ಗತಿ– ನಾನು– ಹಾ– ಹಾ– ಸಾವಿತ್ರೀ!

ಸಾವಿತ್ರೀ:— ನಾಥ! ಏನಿದು? ಈ ವಿಕಾರವಾಗಿ ಕಣ್ಣು ಬಿಡುವುದೇಕೆ? ಚೇತರಿಸಿಕೊ. ಅಯ್ಯೊ! ಅಯ್ಯೋ! ಇನ್ನೇನು ಗತಿ?

ಸತ್ಯವಾನ:— (ಅರ್ಧ ಎದ್ದು ಕುಳಿತು) ಇದೋ, ಇದೋ, ವಿಮಾನಾರೂಢರಾಗಿ ನಮ್ಮ ಪಿತೃಗಳು. ಕರೆಯುವಿರಾ? ಇದೋ ಬರುವೆನು. ಇದೋ ಮಹಾನದಿಗಳು ಸಮುದ್ರಗಳು ಇದಾರು? ಹಾ! (ಎಂದು ಬೀಳುವನು, ಯಮನು ಕಾಣಿಸಿಕೊಳ್ಳುವನು)

ಸಾವಿತ್ರೀ: – ನಾಥ! ಒಡೆಯ! ಪ್ರಾಣಕಾಂತ! ಇದೇನು ಮಾತನಾಡೆಯಲ್ಲ? ಆಃ! ಮುಖವು ನಿಸ್ತೇಜವಾಯ್ತು. ಕೈಕಾಲು ತಣ್ಣಗಾಯ್ತು. ಉಸಿರಿಲ್ಲ. ಅಯ್ಯೋ! ಕೊನೆಗೂ ಹೀಗಾಯ್ತೆ? ಅಯ್ಯೊ! ನಾನು ಮಾಡಿದ ಜಪತಪೋವ್ರತಾದಿಗಳ ಫಲವೆಲ್ಲವೂ ಇಷ್ಟರಲ್ಲಿ ಪರಿಣಮಿಸಿತೆ? ನಾಥ! ಏಳು ನಿನ್ನ ಪ್ರಾಣಪ್ರಿಯೆಯಾದ ನನ್ನನ್ನು ಈ ಕಾಡಿನಲ್ಲಿ ಬಿಟ್ಟು ನೀನೊಬ್ಬನೇ ಎಲ್ಲಿಗೆ ಹೋಗುವೆ? ಕಾಡಿಗೆ ಹೊರಟಾಗ ಛಲ ಹಿಡಿದೆನೆಂದು ಮುಳಿಸೊ? ಇದೋ! ಕೈಮುಗಿದು ಕೇಳಿಕೊಳ್ಳುವೆನು. ಮನ್ನಿಸು, ಮತ್ತೊಮ್ಮೆ ಮಾತನಾಡು. ನೀನಿದ್ದರೆ ಸಮಸ್ತ ಲೋಕಗಳೂ ಉಂಟೆಂದು ಹೇಳಿದೆಯಲ್ಲ ಪ್ರಾಣೇಶ್ವರ! ಈಗ ನನ್ನನ್ನುಳಿದು ಯಾವಲೋಕಕ್ಕೆ ಹೊರಟಿರುವೆ? ಹೇಗೆ ಮೃತ್ಯುವು ಬರುವುದು ಎಂದು ತಿಳಿದಿದ್ದರೂ ನಿನಗೆ ಹೇಳಲಿಲ್ಲವೆಂದು ಸಿಟ್ಟಾಗಿರುವೆಯಾ? ಆಹಾ! ಇಲ್ಲಿ ನಿನಗೆ ಸಿಟ್ಟಿಲ್ಲ. ಒಂದು ವೇಳೆ ಇದ್ದರೂ, ನಾಥ! ಕೆಲಸವಿಲ್ಲದೆ ನಿನಗೆ ಹೇಳಿ ವ್ಯಥೆಪಡಿಸಲೇಕೆಂದು ಹೇಳಲಿಲ್ಲ. ನನ್ನ ತಪ್ಪನ್ನು ಕ್ಷಮಿಸು ಏಳು ಹೋಗೋಣ! ದೇವ! ತಪ್ಪಾಯ್ತು ನಿನ್ನ ತಾಯ್ತಂದೆಗಳ ಸೇವೆಯನ್ನೂ ತೊರೆವೆಯಾ? ತಾನಾಗಿ ಒಲಿದು ಬಂದವಳಿಗಿಂತಲೂ, ತಂದೆತಾಯಿಗಳ ಸೇವೆಯೇ ಅಧಿಕವೆಂದು ಇದ್ದ ನಿನ್ನನ್ನು ಮೃತ್ಯುವು ಒಲಿಸಿಕೊಂಡಳೆ? ಪ್ರಾಣಕಾಂತ! ನನಗಾಗಿ ಅಲ್ಲದಿದ್ದರೆ ಹೋಗಲಿ ಅಂಧನಾಗಿಯೂ ವೃದ್ಧನಾಗಿಯೂ ಇರುವ ನಿನ್ನ ತಂದೆಗೋಸ್ಕರ ಏಳು. ವೃದ್ಧೆಯಾಗಿಯೂ ಪುಣ್ಯದರ್ಶನೆಯಾಗಿಯೂ ಇರುವ ನಿನ್ನ ತಾಯಿಗೋಸ್ಕರ ಏಳು. ನೀನು ಹೊರ ಹೊರಟಾಗ, ನನ್ನನ್ನು ಕುರಿತು, ನೀನು ಕರೆದುಕೊಂಡು ಬಾರೆಂದರಲ್ಲ! ಪತಿಯೆ! ನನ್ನ ಸರ್ವಸ್ವವೆ! ನಿನ್ನನ್ನು ಇಲ್ಲಿ ಬಿಟ್ಟು ನಾನೊಬ್ಬಳೆಂತು ಹೋಗಲಿ? ಕಾಂತ! ನೀನು ಪಿತೃಪೂಜಾಧುರಂಧರನು ಪಿತೃಾರಾಧನ ತತ್ಪರನು. ಸಂಜೆಗಿಂತಲೂ ಮುಂಚೆ ಬಾರೆಂದು ಹೇಳಿದ ಗುರುಜನರಮಾತನ್ನು ಮೀರಬಹುದೇ? ಏಳು! ಹೋಗೋಣ! ಇಗೋ! ಸಂಜೆಯಾಗುತ್ತಾ ಬಂತು. ಏಳು! ಹೋಗೋಣ! ಅಯ್ಯೊ! ನಾಥನೆಲ್ಲಿರುವನು? ಆಯ್ತು. ಆಯ್ತು. ಸಾವಿತ್ರೀ! ನಿನ್ನ ಕೆಲಸವು ಮುಗಿಯಿತು. ನಿನ್ನ ಸೌಭಾಗ್ಯವು ಬಯಲಾಯ್ತು. ನಿನ್ನ ಚಿಂತಾರತ್ನವು ಸೂರೆ. ಹೋಯ್ತು. ನನ್ನ ಆಣಿಮುತ್ತು ಒಡೆದು ಹೋಯ್ತು ಕಯ್ಗಿಡಿದ ವಲ್ಲಭನನ್ನು ಕಳೆದುಕೊಂಡು ಮೂಳಿಯಾಗಿ ಹೇಗೆ ಬದುಕಲಿ? ಅಯ್ಯೊ! ವಿಧಿಯೆ! ಹಾ! (ಎಂದು ಮೂರ್ಛೆಗೈವಳು.)

ಯಮ:—ಆಹಾ! ಈಕೆಯ ಶೋಕವು ಎಷ್ಟು ಗುರುತರವಾದುದು!

ಕಂ॥ ಗುರುತರಮೆನೆ ಸತಿ ಶೋಕಿಸು ॥
ತಿರೆ ಕಠಿಣಾತ್ಮಕನ ತನ್ನ ಹೃದಯಮಿದುಂ ತಾ ॥
ನುರಿತಾಗಿದ ಕಬ್ಬೊರ್ನೆಲ್ಲೋಲ್ ॥
ಕರುಣದ ಸಂಚಾರಮಾಗಿ ಮಿದುವಾಯ್ತುಮನಾ॥—

ಪತಿಪ್ರಾಣೆಯಾದ ಸತಿಯೆ! ಭಾಪು! ಭಾಪು! ನೀನೇ ಸೌಭಾಗ್ಯವತಿಯು. ನಿನ್ನನ್ನು ಅಮಂಗಳವು ಸೋಂಕದಿರಲಿ. ಆಹಾ! ಇದೇನಿದು? ನನ್ನ ಕರ್ತವ್ಯಪರಾಙ್ಮುಖತೆ? ಛೇ, (ಎಂದು ಪಾಶವನ್ನು ಬೀಸಲು ಸುಟ್ಟುಹೋಗುವುದು. ಪ್ರಬಲವಾದ ತೇಜಸ್ಸೊಂದು ಸತ್ಯವಾನನನ್ನು ಆಕ್ರಮಿಸುವುದು. ಯಮನು ಹಿಂದೆಗೆದು) ಭಲೆ! ಪತಿವ್ರತೆಯೆ! ಭಲೆ! ನಿನ್ನ ಮಹಿಮೆಯು ಅತಿಶಯವಾದುದು. ಯಮನನ್ನೂ ಹಿಮ್ಮೆಟ್ಟಿಸಿದೆಯಲ್ಲನೆ? ಭಲೆ! (ಎಂದು ಕಯ್ಮುಗಿದು) ಧರ್ಮಪುರುಷನಿಗೆ ನಮಸ್ಕಾರವು. ಎಲೌ ಅಮಾನುಷಿಕವಾದ ತೇಜಸ್ಸೆ! ಶ್ರೀಹರಿಯಪ್ಪಣೆಯಿಂದ ಯಮಪದದಲ್ಲಿ ನಿಯುಕ್ತನಾಗಿರುವ ನಾನು ಗತಾಯುವಾದ ಈತನನ್ನು ಎಳೆದುಕೊಂಡು ಹೋಗಲು ಬಂದಿರುವೆನು. ಧರ್ಮರಕ್ಷಣೆಗಾಗಿ ದಾರಿ ಬಿಡು. (ತೇಜವು ತಟ್ಟನೆ ದಾರಿಬಿಡುವುದು). ಮಗಳೆ! ಸಾವಿತ್ರೀದೇವಿ! ಕಾಲಾತೀತವಾಗುತ್ತ ಬಂದಿತು. ಹಾದಿಬಿಡು.

ಸಾವಿತ್ರೀ:—(ಮೆಲ್ಲನೆದ್ದು) ಪತಿದೇವ! ಇನ್ನೂ ನಿನಗೆ ಕರುಣೆ ಬರಲಿಲ್ಲವೆ?

ಯಮ:—ಮಗಳೆ ! ನಿನ್ನ ಪತಿಯು ಗತಾಯುವಾದನು. ಇನ್ನು ಆತನಿಗೆ ಸ್ಥಾನವು ಪರಲೋಕವು.

ಸಾವಿತ್ರೀ:—ಆಃ! (ಕೈಯ್ಮುಗಿದು) ಮಹಾಪುರುಷನೆ ! ನೀನು ಯಾರು?

ಯಮ:—

ಷ॥ ತೆಂಕಣದಿಶೆಯೊಡೆಯಂ ಶ್ರೀಹರಿ ।
ಕಿಂಕರ ಸಂತತಿಯೊಳೊರ್ವ ಮೃತಮನ್ನೃತವ ನಿ ॥
ಶ್ಯಂಕೆಯಿನಾರಿವಂ ಪಾಪಿ ಭ ॥
ಯಂಕರನೆನ್ನ ಯಮಧರ್ಮನೆಂಬರು ಮಗಳೇ ॥

ಮತ್ಯುವಶನಾದೀತನನ್ನು ಕರೆದೊಯ್ಯಲು ನಾನೇ ಬಂದಿರುವೆನು. ಆತನನ್ನು ಕೆಳಗಿಳುಹು. ನಿನಗೂ ಈ ಪುಣ್ಯಾತ್ಮನಿಗೂ ಋಣಾನುಬಂಧವಿನ್ನು ತೀರಿತು.

ಸಾವಿತ್ರೀ:—ಆ ! ಋಣಾನುಬಂಧವು ತೀರಿತೆ ! ಇಲ್ಲ. ಎಂದಿಗೂ ಇಲ್ಲ.

ಯಮ:—ಮಗಳೆ! ನಿಜ. ಸತಿಪತಿಗಳ ಋಣಾನುಬಂಧವು ಎಂದಿಗೂ ಹರಿಯತಕ್ಕುದಲ್ಲ. ಆದರೂ ಈ ಜನ್ಮದಲ್ಲಿ ಈ ಪಾರ್ಥಿವ ದೇಹದಲ್ಲಿನ ನಿಮ್ಮ ಸಂಬಂಧವು ಮುಗಿಯಿತು. ಇನ್ನೀತನನ್ನು ಬಿಟ್ಟುಕೊಡು.

ಸಾವಿತ್ರೀ:—ಮಹಾನುಭಾವನೆ ! ನಮ್ಮ ನಮ್ಮ ಅನುಬಂಧವು ಅಪಾರ್ಥಿವವಾಗಿರಲು, ನಾನೀತನನ್ನು ಬಿಟ್ಟು ಕೊಡುವುದೆಂತು?

ಯಮ:—ಎಲೆ! ಪತಿವ್ರತೆಯೆ! ಈ ದೇಹವು ಜೀರ್ಣವಾಗಿ ಈತನಿಗೆ ಇರುವುದಕ್ಕೆ ಅಯೋಗ್ಯವಾಯ್ತು. ಇನ್ನು ತನ್ನ ಸಾಧನಕ್ಕಾಗಿ ಈ ಜೀವವು ಬೇರೆ ದೇಹಕ್ಕೆ ಹೋಗಬೇಕಾಗಿರುವುದು. ಆದುದರಿಂದ ಕಾಲಯಾಪನೆ ಮಾಡದೆ ಕೆಳಗಿಳಿಸು.

ಸಾವಿತ್ರೀ:—ಮಹಾನುಭಾವನಾದ ಧರ್ಮರಾಜನೆ ದಯಮಾಡಿ ಈ ನನ್ನ ಪ್ರಾರ್ಥನೆಯೊಂದನ್ನು ಅನುಗ್ರಹಿಸು. ಅನಂತರ ನಿನ್ನಿಚ್ಛೆ ಬಂದಂತೆ ಮಾಡು.

ಯಮ:—ಹಾಗೆಯೇ ಆಗಲಿ. ಅದೇನು? ಕೇಳು.

ಸಾವಿತ್ರೀ:—ಸ್ತ್ರೀಧರ್ಮವೆಂತಹುದು ? ದಯವಿಟ್ಟು ತಿಳಿಸಿಕೊಡು.

ಯಮ:—(ಸ್ವಗತ) ಧರ್ಮಕಥಾ ಪ್ರಸಂಗವು ದೊರಕಿತು. ಶ್ರೀನಾಥನಿಗೆ ಜಯವಾಗಲಿ. (ಪ್ರ) ಮಗಳೆ ! ಸೂಕ್ಷ್ಮವಾಗಿ ಹೇಳುವೆನು ಕೇಳು.

ಕಂ॥ ಪತಿಪಾದಾಂಬುಜ ನಮನಂ ॥
ಪತಿನಾಮೋಚ್ಚಾರಣಂ ಹಿತಾಚರಣಂ ಮೇಣ್ ॥
ಪತಿದೀಪಕೆ ತಾಂ ಬೆಳೆಕೆನೆ ॥
ಸ್ಮೃತಿಸ್ಮೃತಿಯೊಳ್ ಹಿಂದೆ ನಡೆವುದಿದೆ ಸತಿಧರ್ಮಂ॥

ಸಾವಿತ್ರೀ:—ಅನುಗ್ರಹವಾಯ್ತು. (ಎಂದು ಪತಿದೇಹವನ್ನು ಕೆಳಗಿಳಿಸುವಳು).

ಯಮ:—ಎಲೌ ! ಸೌಮ್ಯಮುಖಿಯೆ ! ನಾನಿನ್ನು ನಿನ್ನ ಪತಿಯ ಜೀವವನ್ನು ಕೊಂಡೊಯ್ಯುವೆನು. ನೀನಿನ್ನು ಹಿಂದಿರುಗಿ ಹೋಗಿ ನಿನ್ನಿಷ್ಟಬಾಂಧವರನ್ನು ಕರೆದುಕೊಂಡು ಬಂದು ಔರ್ಧ್ವದೈಹಿಕಕ್ರಿಯೆಗಳನ್ನು ನೆರವೇರಿಸು. ನೀನು ಹಿಂದಿರುಗಿ ಬರುವವರೆಗೂ ಈ ದೇಹವು ಅಚ್ಚಳಿಯದಂತೆ ಇರುವುದು. ಏಕೆ ಶೋಕಿಸುವೆ ? ವೃಥಾ ಶೋಕಿಸದೆ ನೀನು ಯಥೇಚ್ಛವಾಗಿರು. ( ಎಂದು ಹೊರಡಲು ಸಾವಿತ್ರಿಯೂ ಹಿಂದೆಯೇ ಹೋಗುವಳು ).

ಯಮ:—ಮಗಳೆ! ಹಿಂದೆ ನಿಲ್ಲು. ಏಕೆಂದರೆ

ಕಂ॥ ಮೃತನಾದನ ಸೌಭಾಗ್ಯಂ ।
ಕ್ಷಿತಿಯೊಳ್ ಮಿತ್ರಂ ಕಳತ್ರ ಪುತ್ರಪ್ರಮುಖರ್ ॥
ಗತವಾಯುವಾದ ತನು ಸಂ ॥
ಗತಿಯೊಳ್ಳಿಲೆ ಕರ್ಮನೊಂದೆ ಬೆಂಬಳಿವಿಡಿಗುಂ ॥

ಅದರಿಂದ ನಿನ್ನ ಪತಿದೇಹವಿರುವೆಡೆಗೆ ನೀನು ಹೋಗು. ನೀನು ಹೀಗೆ ಬರತಕ್ಕುದಲ್ಲ.

ಸಾವಿತ್ರೀ:—ಧರ್ಮರಾಜನೆ ! ಸಿಹಿಯಾದ ರಸವಿರುವವರಿಗೂ ಸೇವ್ಯವಾದ ಕಬ್ಬಿನಂತೆ, ನನ್ನ ಪತಿಯನ್ನು ಹೊಂದಿದ್ದ ಆ ದೇಹವು ನನಗೆ ಸೇವ್ಯವಾಗಿತ್ತು. ಈಗ ನನ್ನ ಪತಿಯು ನಿನ್ನ ವಶದಲ್ಲಿರಲು, ನಾನೂ ಅನುಗಾಮಿನಿಯಾಗಲೇ ಬೇಕಲ್ಲವೆ ?

ಯಮ:—ಭಲೆ ! ಮಗಳೆ ! ಧರ್ಮಪಾಲಕನಾದ ನನಗೂ ಧರ್ಮವನ್ನು ಬೋಧಿಸಿದೆ. ಸಾಧು! ಸಾಧು! ಮಗಳೆ! ನಿನಗೆ ಒಲಿದಿರುವೆನು. ಕಾಲವಶನಾದ ನಿನ್ನ ಪತಿಯ ಪ್ರಾಣವನ್ನು ವಿನಾ ಮತ್ತೇನನ್ನು ಬೇಕಾದರೂ ಕೇಳಿ ಕೊಡುವೆನು.

# ಸಾವಿತ್ರಿ



ಲೇಖಕ:—ದೇವುಡು ನರಸಿಂಹಶಾಸ್ತ್ರಿ, ಎಮ್. ಎ., ಬೆಂಗಳೂರು

( ೬ನೆಯ ವರ್ಷದ ೧೧ನೆಯ ಸಂಚಿಕೆಯಿಂದ ಮುಂದುವರಿದುದು .

ಸಾವಿತ್ರೀ:—ಎಲೈ ಸಮದರ್ಶಿಯೆ! ನನ್ನ ಸೌಭಾಗ್ಯಸೂತ್ರವನ್ನು ನಿನ್ನ ಕಯ್ಯಲ್ಲಿ ಹಿಡಿದಿರುವೆ. ಮತ್ತೆ ನನಗಾಗಬೇಕಾದುದೇನು ? ಆದರೂ ಆರ್ಯಪುತ್ರನ ತಂದೆತಾಯಿಗಳು ವೃದ್ಧರು. ಉಡುಗಿದ ಇಂದ್ರಿಯಬಲವುಳ್ಳವರು. ರಾಜ್ಯಾದಿಗಳಿಲ್ಲದೆ ವಿಪತ್ತಿಗೆ ಸಿಕ್ಕಿರುವ ಅವರಿಗೆ ಈತನೇ ಆಧಾರನಾಗಿದ್ದನು. ಈತನಿಲ್ಲದಿದ್ದರೆ ಅವರು ಜೀವನ್ಮೃತರೇ ಸರಿ ! ಅವರಿಗೆ ಸುಖವಾಗುವಂತೆ ಅನುಗ್ರಹಿಸು.

ಯಮ:—ಭಲೇ ! ಭಲೇ ! ಮಗಳೇ ! ಭೋಗಭಾಗ್ಯಗಳನ್ನು ಬೇಡದೆ, ಪತಿಬಂಧುಗಳ ಮಂಗಳವನ್ನು ಕೋರಿದ ನಿನಗೂ ಮಂಗಳವಾಗಲಿ.

ಕಂ॥ ನರಪತಿ ನಿನ್ನಯ ಮಾವಂ ॥
ಸಿರಿಸಹಿತಂ ಬಂಧು ಭೃತ್ಯವರ್ಗಸಮೇತಂ ॥
ಕರಣಂಗಳೊಡನೆ ಪಡೆವಂ ॥
ದೊರೆವಡೆದಾ ಸಾಲ್ವರಾಜವಂ ಪಿಂತಿರುಸೌ ॥

ಸಾವಿತ್ರೀ:—ಅನುಗ್ರಹವಾಯ್ತು, ನನ್ನ ಅರ್ಧಸಂಕಟವು ದೂರವಾಯ್ತು. ಎಲೈ ಶ್ಯಾಮಳಾಪತಿಯೆ! ನೀನು ಕಾಲವಶನಾದ ನಿನ್ನ ಪತಿಯನ್ನು ವಿನಾ, ಎಂದು ಹೇಳಿದೆಯಲ್ಲ! ನೀನೇ ಕಾಲನಾಗಿರಲು ಬಿಟ್ಟುಕೊಡಬಾರದೇ ಕಿ ?

ಯಮ:—ಕೇಳು ! ಮಗಳೆ ! ನಾನು ಪ್ರಾಣಿಗಳ ಆಯುಸೂತ್ರವನ್ನು ಮಾತ್ರ ಹಿಡಿದಿರುವೆನು.

ಕಂ॥ ಪಿಡಿದಿರಲಾಯುಸ್ಸೂತ್ರನ ॥
ಕಡೆಗಾಲವ ಮುಂದೆ ಮುಂದೆ ಕಳ್ಳಲ್ ಬಲ್ಲೆಂ ॥
ಪಿಡಿದಿರೆ ಕರ್ಮದ ಪಾಶಂ ॥
ಬಿಡಿಸಲ್ಕಾರೆ ನೆಲೆವತ್ಸೆ ! ಮೃತ್ಯುವಿನೆಂತುಂ ॥

ಸಾವಿತ್ರೀ:—ಸ್ವಾಮಿಯೆ ! ನಿನ್ನನ್ನು ಬಲ್ಲವರು, ಶ್ರೀಹರಿಯವತಾರವೆನ್ನುವರು.

ಯಮ:—ಆಹಾ ಹಾಗೆನ್ನಬೇಡ ! ಶ್ರೀಹರಿಯು ನನ್ನಲ್ಲಿ ಕುಳಿತು ಧರ್ಮಾಧಿಕಾರವಮಾಡುವನೆಂದು ತಿಳಿ.

ಸಾವಿತ್ರೀ:—ಎಲೈ ಧರ್ಮಪ್ರಭುವೆ ! ಸತ್ಯಾತ್ಮಕನಾಗಿ ಶ್ರೀಹರಿಭಕ್ತನಾಗಿ ಧರ್ಮಪಾರಂಗತನಾಗಿ, ಮೃದುಹೃದಯನಾದ ನಿನ್ನನ್ನೂ ಲೋಕವು ಭಯಂಕರನೆಂದುಕೊಳ್ಳುವುದಲ್ಲ. ಅದೇತಕ್ಕೆ ?

ಯಮ:—ಮಗಳೇ! ಕೇಳು. ಲೋಕವು ಜನರ ಯೋಗ್ಯತೆಯನ್ನು ದೋಷಗಳಿಂದ ಒರಿಹಚ್ಚುವುದು. ಹಾಗೆಯೇ ತನ್ನಲ್ಲಿರುವ ಅಪರಾಧವು ಕನ್ನಡಿಯಲ್ಲಿ ಪ್ರತಿಫಲಿಸುವಂತೆ, ನನ್ನಲ್ಲಿ ರೂಪುಗೊಂಡು ಕಾಣುವುದು. ಆಗ ತನ್ನ ಅಪರಾಧಕ್ಕಾಗಿ ತಾನೇ ಹೆದರುವುದು. ಅಷ್ಟೇ ಅಲ್ಲದೆ ನಿನ್ನಂತೆ ನೆರವಾಗಿರುವವರು ನನ್ನಲ್ಲಿ ಆಪ್ತವಾಳಿಕೆಯನ್ನೇ ಹೊಂದುವರು. ಮಗಳೇ ! ದೋಷೈಕದೃಷ್ಟಿಯಾದ ನನಗೂ ಸಂತೋಷಕರವಾದ ನಿನ್ನ ನಡತೆಯಿಂದ ಮೆಚ್ಚಿದೆನು. ಮತ್ತೂ ಒಂದು ವರವನ್ನು ಕೇಳು. ಆದರೆ ಪತಿಪ್ರಾಣವನ್ನು ಮಾತ್ರ ಬೇಡ.

ಸಾವಿತ್ರೀ:—ಎಲೈ ! ವೈವಸ್ವತನೇ ನನ್ನ ತಂದೆತಾಯಿಗಳಿಗೆ ನಾನೊಬ್ಬಳೇ ಮಗಳು. ದೌಹಿತ್ರನಿಗಾಗಿ ನನ್ನನ್ನು ಈತನಿಗೆ ಕೊಟ್ಟಾಗ ಈತನು ಅಲ್ಪಾಯುವೆಂದು ತಿಳಿದು ಅವರು ಬಹು ವ್ಯಥೆಪಟ್ಟರು. ಈಗ ಹೀಗಾಗಿರುವುದನ್ನು ತಿಳಿದರಂತೂ ಅವರ ವ್ಯಸನವನ್ನು ಹೇಳತೀರದು. ಮಗಳಾಗಿ ಹುಟ್ಟಿ ಅವರನ್ನು ಗೋಳಿಡಿಸಲಾರೆನು. ಮಹಾನುಭಾವನೇ ನನಗಾಗಿ ಅವರು ದುಃಖಿಸದಂತೆ ವರವನ್ನು ಅನುಗ್ರಹಿಸು.

ಯಮ:—ಮಗಳೇ ಹಾಗೆಯೆ ಆಗಲಿ. ನಿನ್ನ ತಂದೆಯಾದ ಅಶ್ವಪತಿರಾಜನಿಗೆ ಹತ್ತುಜನ ಸುಪುತ್ರರಾಗಲಿ. ನೀನಿನ್ನಾದರೂ ಹಿಂದಿರುಗು.

ಸಾವಿತ್ರೀ:—ಸ್ವಾಮಿಯೆ ! ಆರ್ಯರಿಗೋಸ್ಕರ ಹಿಂದಿರುಗಬೇಕಾಗಿದ್ದಿತು. ದಯಾಳುವಾದ ನಿನ್ನನುಗ್ರಹದಿಂದ ಆ

ಭಾರವೂ ಇಳಿದಿರುವುದು. ಇನ್ನು ಸಿರಾಲೋಚನೆಯಾಗ ಬೇಕು.

ಯಮ:—(ಸುತ್ತಲೂ ನೋಡಿ) ಮಗಳೇ ! ಭೂಮಂಡಲವನ್ನು ಸುತ್ತಿರುವ ವಾತಾವರಣವನ್ನೂ ಕಳೆದುಬಂದಿರುವೆವು. ಇಗೋ! ಯಮಲೋಕವು ಕಾಣುತ್ತಿರವುದು. ಇಲ್ಲಿಯವರೆಗೂ ಭೌತಿಕವಾದ ದೇಹವನ್ನು ಹೊತ್ತು ಬಂದವರು ಯಾರೂ ಇದುವರೆಗೂ ಇಲ್ಲ. ಇನ್ನು ಮುಂದೆ ಅಮಾನುಷ ಪ್ರದೇಶವು ಮಗಳೇ ! ನಿನ್ನ ಅತ್ತೆಮಾವಂದಿರು ಇಷ್ಟು ಹೊತ್ತಾದರೂ ನೀವು ಬರಲಿಲ್ಲವೆಂದು ಬಹಳ ಚಿಂತಿಸುತ್ತಿರುವರು. ನೀನಿನ್ನು ಹಿಂದಿರುಗು.

ಸಾವಿತ್ರಿ:—ಮಹಾಮಹಿಮನಾದ ಪ್ರಭುವೇ ! ದಂಡಾಧಿಕಾರಿಯೆ ! ನನ್ನ ಮೇಲೆ ಕರುಣೆಯಿಡು. ನೀನೇ ಅಪ್ಪಣೆ ಕೊಟ್ಟಿಯಲ್ಲವೆ ? ಪತಿಯನ್ನು ಬಿಟ್ಟು ನಾನು ಇನ್ನು ಯಾರ ಮರೆಹೊಗಲಿ ? ಪತಿಯಿಲ್ಲದ ನನ್ನ ಜೀವನವೇಕೆ ? ನನ್ನ ಸಮಸ್ತವಾದ ಭಾಗ್ಯವನ್ನೂ ನಿನಗೆ ಒಪ್ಪಿಸಿ, ನಿರ್ಗತಿಕಳಾಗಿ ನಾನು ಮಾಡತಕ್ಕುದೇನು ? ನೀನು ಕರುಣಾಳುವೇ ಆದರೆ ನನ್ನನ್ನು ಈ ದೇಹದಿಂದ ಬಿಡಿಸಿ, ನನ್ನ ಪತಿಯು ಜತೆಯನ್ನು ಸೇರಿಸು.

ಯಮ:—ಮಗಳೇ ! ದುಃಖಾತಿರೇಕದಿಂದ ಆಗದುದನ್ನೇ ಕೇಳುವೆ? ಬೇಡ. ಹೋಗು. ಬೇಕಾದ ಹಾಗೆ ಇರು. ನಿನಗಿನೂ ಭೂರುಣವು ತೀರಲಿಲ್ಲ. ನಿನಗೆ ಯಮಲೋಕದ ಗೊಡವೆಯೇಕೆ ? ಹಿಂದಿರುಗಿ ಹೋಗು.

ಸಾವಿತ್ರೀ:—ಎಲೈ! ಮಹಿಷರಥನೇ! ದಕ್ಷಿಣಾಧಿಕಾರಿಯಾದ ನಿನ್ನನ್ನು, ತ್ರಿಮೂರ್ತಿಗಳನ್ನು ಬಿಟ್ಟರೆ ಈತನ ಸಮನಾರೂ ಇಲ್ಲವೆಂದು ಜ್ಞಾನಿಗಳು ಹೇಳುವರು. ಒಂದೇ ರೂಪಿನಲ್ಲಿಯೇ ಪಾಪಿಗಳಿಗೆ ಭಯಂಕರನಾಗಿಯೂ, ಪುಣ್ಯವಂತರಿಗೆ ಸೌಮ್ಯನಾಗಿಯೂ ಕಾಣುವ ನಿನ್ನ ಮಹಿಮೆಯನ್ನು ಹೊಗಳುವುದಕ್ಕೆ ಯಾರು ತಾನೇ ಬಲ್ಲವರು ? ವೇದಕಥಿಕನಾದ ನಿನ್ನನ್ನು ಬಲ್ಲವರೂ ಆದಿಮನುಷ್ಯನೆಂದು ಹೊಗಳುವರು ! ಎಲೈ ಸ್ವಾಮಿಯೆ ! ಒಂದು ದಿಕ್ಕಿಗೆ ಪಾಲಕನಾಗಿರುವ ನಿನ್ನ ದರ್ಶನ ಮಾಡಿಯೂ, ವಿಫಲ ಮನೋರಥಳಾಗಿ ಹಿಂದಿರುಗುವ ನನ್ನ ದೌರ್ಭಾಗ್ಯವನ್ನು ನೋಡಿ ಕರುಣಿಸು. ಪ್ರಭುವೆ ! ಇದೋ ನಿನ್ನ ಪಾದಾಂಬುಜವೆ . ಸದ್ಗತಿಪ್ರದಾಯಕವೆಂದು ನಂಬಿರುವೆನು. ಏನಾದರೂ ಮಾಡು (ಎರಡು ಕಾಲು ಹಿಡಿಯುವಳು)

ಯಮ:—ಹಾ ! ಮಗಳೇ ! ಪತಿವ್ರತಾಶಿರೋಮಣಿಯಾದ ನಿನಗೆ ನಾನು ನಮಸ್ಕಾರ ಮಾಡಬೇಕು. ಏಳು. ಏಳು. ಪತಿಪ್ರಾಣ ವಿನಾ ಏನು ಬೇಕಾದರೂ ಕೇಳು. ಭೂಮಿಯನ್ನೂ ಧರ್ಮವನ್ನೂ ಧರಿಸುವ ಪತಿವ್ರತೆಯರಲ್ಲಿ ಶ್ರೇಷ್ಠಳಾದ ನೀನು ನನಗೇಕೆ ನಮಸ್ಕಾರ ಮಾಡುವೆ ? ಏಳು. ಏಳು. ಇಗೋ ವಿಷ್ಣುದತ್ತವಾದ ನನ್ನ ಅಧಿಕಾರಕ್ಕೆ ಸಾಕ್ಷಿಯಾಗಿರುವ ಈ ನನ್ನ ದಂಡದ ಸಾಕ್ಷಿಯಾಗಿ ನೀನು ಬಯಸುವುದನ್ನು ಕೊಡುವೆನು ಏಳು. ಹಗಲಿರುಳೂ ನಾನು ಪಾಲಿಸುತ್ತಿರುವ ಧರ್ಮದ ಸಾಕ್ಷಿಯಾಗಿ, ನೀನು ಕೇಳಿದ ವರವನ್ನು ಕೊಡುವೆನು. ಏಳು ಏಳು.

ಸಾವಿತ್ರೀ:—ಎಲೈ ! ಧರ್ಮರಾಜನೆ ! ಹಾಗಾದರೆ ಪತಿವ್ರತೆಯಾದ ನನಗೆ ನೂರುಜನ ಸುಪುತ್ರರಾಗುವಂತೆ ಅನುಗ್ರಹಿಸು.

ಯಮ:—ಹಾಗೇ ಆಗಲಿ. ಮಗಳೇ ! ಇನ್ನಾದರೂ ಹಿಂದಿರುಗು.

ಸಾವಿತ್ರೀ:—ಒಡೆಯ ! ನಿನ್ನ ಅಪ್ಪಣೆಯನ್ನು ಮೀರಲು ಸುರನರೋರಗಾದಿಗಳೊಳಗೆ ಯಾರೂ ಸಮರ್ಥರಿಲ್ಲವು. ಕೇವಲ ನಿನ್ನ ಭಯದಿಂದ ಲೋಕಗಳೆಲ್ಲವೂ ಪಾಪದಿಂದ ವಿರುಮವಾಗಿರುವವು. ನಿನ್ನ ದಂಡಶಕ್ತಿಯ ಬಲದಿಂದ ಸಮಸ್ತರೂ ತಮ್ಮ ತಮ್ಮ ಸ್ಥಾನಗಳಲ್ಲಿರುವರು. ಕೇವಲ ನಿನ್ನ ನಾಮೋಚ್ಚಾರಣ ಮಾತ್ರದಿಂದಲೇ ಪಾಪರಾಶಿಗಳೆಲ್ಲವೂ ತೊಲಗುವುವು. ನಿನ್ನನುಗ್ರಹದಿಂದ ಪಾಪಿಗಳೂ ಪುಣ್ಯವಂತರಾಗುವರು.

ಯಮ:—

ಕಂ॥ ಮಗಳೇ ! ಕೊಂಡಿರೆ ನಿನ್ನೀ ॥
ಸುಗುಣಂಗಳಿನೆನ್ನ ನಿನ್ನು ಪೊಗಳುವುದೇಕೌ ॥
ಬಗೆಯೊಳ್ ದೇನಿರ್ಪುದುಸಿರು ॥
ಮೃಗಧರನಾಣೆ! ಹರಿಯಾಣೆ! ಸಲ್ಲಿಸಿದಪೆನಾಂ ॥

ಸಾವಿತ್ರೀ:—ಎಲೈ ! ಧರ್ಮಪಕ್ಷಪಾತಿಯೆ ! ನನ್ನನ್ನು ಪತಿವ್ರತೆಯೆಂದು ಅಪ್ಪಣೆ ಕೊಡಿಸಿರುವೆ. ನೂರುಮಕ್ಕಳಾಗಲೆಂದು ಆಶೀರ್ವದಿಸಿರುವೆ. ನನ್ನ ಪತಿಯ ಪ್ರಾಣವನ್ನು ತೆಗೆದುಕೊಂಡು ನನ್ನನ್ನು ಹಿಂದಿರುಗೆಂದು ಹೇಳುತ್ತಿರುವೆ. ನೀನೇ ಯೋಚಿಸು. ಮೃತ್ಯುವನ್ನು ತಪ್ಪಿಸಲು ಆಗದಿದ್ದರೂ, ಮರಣದ ಕಾಲವನ್ನು ಹಿಂದುಮುಂದು ಮಾಡಲು ನನ್ನ ಕೈಲಾಗುವುದೆಂದು ನೀನೇ ಹೇಳಲಿಲ್ಲವೆ ? ಸ್ವಾಮಿಯು ! ಅಕಾಲ ಮೃತ್ಯುವಶನಾಗಿರುವ ನನ್ನ ಪತಿಯನ್ನು ಉಳುಹಿಕೊಂಡು ಈಗ ತೆಗೆದುಕೊಂಡು ಹೋಗಬೇಕೆಂದಿರುವ ಈ ಪ್ರಾಣವನ್ನು ಇನ್ನು ನೂರಾರು ವರ್ಷ ಬಿಟ್ಟು ತೆಗೆದುಕೊಂಡು ಹೋದರೆ ನಿನಗೇನೂ ನಷ್ಟವಾಗದು. ಬಡವೆಯಾದ ನಾನು ಬದುಕಿಕೊಳ್ಳುವೆನು. ಸ್ವಾಮಿಯೆ ! ಪಿತೃಮಾನದ ಒಂದು ವರುಷದ ಆಯುಸ್ಸನ್ನು ನಮಗೆ ಕೊಡು. ಪಿತೃಪತಿಯೇ! ದಯಮಾಡು. ನೀನು ನನಗೆ ಒಲಿದಿರುವುದೇ ಆದರೆ ಇದೊಂದು ನೆರವೇರಿಸಿಕೊಡು.

ಯಮ:—ಸಾಧ್ವೀಶಿರೋಮಣಿಯೆ ! ಆಗಲಿ. ನಿನ್ನ ಕೋರಿಕೆಯು ನೆರವೇರಲಿ.

ಕಂ॥ ಸತಿಯರೊಳೆಗ್ಗಳೆಯೆಂದುರೆ ॥
ಸ್ತುತಿವಡೆದು ಸಮಸ್ತ ಭೋಗದಿಂ ಬಾಳ್ವುದು ನೀಂ॥
ಶತಮಾನವೊಂದು ಸೊಗದಿಂ ॥
ಪತಿಸುತ್ರಸದ್ಬಂಧು ವರ್ಗಸಹಿತಂ ನೆಲದೊಳ್ ॥

ಅಸಾಧ್ಯವಾಗಿ ಯೋಚಿಸುವುದಕ್ಕೂ ಆಗದ ಜಯುವನ್ನು ಪಡೆದ ಸತೀರತ್ನವೆ ! ನಿನಗೆ ಮಂಗಳವಾಗಲಿ. ಯಮನನ್ನೂ ಒಲಿಸಿಕೊಂಡು. ಪತಿಯ ಪ್ರಾಣವನ್ನು ಪಡೆದ ಪತಿವ್ರತೆಯೆ !

ಕಂ॥ ನಿನ್ನೀ ಚರಿತಾಮೃತವಂ ॥
ಸನ್ನುತೆ ! ಸಾಧ್ವೀಶಿರೋಮಣೀ ! ಸಾವಿತ್ರೀ ! ॥
ಮುನ್ನೀರ ನಡುವೆ ನೆಲನೊಳ ॥
ಗಿನ್ನಾರು ಕಥಿಪರವರ್ಗ ಭೀಷ್ಟವನೀವೆಂ ॥

ಇನ್ನು ಸಿದ್ಧಳಾಗು. ನಿನ್ನ ಪತಿದೇಹವಿರುವೆಡೆಗೆ ಬಿಟ್ಟುಬರುವೆನು.

ಸಾವಿತ್ರಿ:—ಅಪ್ಪಣೆ (ಎಂದು ಕಣ್ಮುಚ್ಚಿಕೊಳ್ಳಲು ಯಮನು ತನ್ನ ಶಕ್ತಿಯಿಂದ ಮತ್ತೆ ಸತ್ಯವಾನನಿದ್ದೆಡೆಗೆ ತಂದು ಬಿಡುವನು.)

ಯಮ:—ಮಗಳೇ ! ಇದೋ ನಿನ್ನ ಪತಿದೇವನು. (ಎಂದು ಅದೃಶ್ಯನಾಗುವನು)

ಸಾವಿತ್ರೀ:— (ಪತಿಯನ್ನಾಲಿಂಗಿಸಿಕೊಂಡು) ಸ್ವಾಮಿಯೆ! ಸೌಖ್ಯವಾಗಿರುವೆಯಾ ? (ಕೂಡಲೇ ಚೇತನಾಚೇತನಗಳೆಲ್ಲವೂ ಸಾವಿತ್ರಿಯನ್ನು ಸ್ತುತಿಸುವವು.)

ಕಂ॥ ಜಯ ಜಯ ಜಯ ಸಾವಿತ್ರೀ ॥
ಜಯ ಜಯ ಪರಮಸತಿ ಮಹಿತ ಶುಭಮತಿ ಸುಕೃತೀ॥
ಜಯ ಜಯ ಜಯ ಧರ್ಮವತೀ ॥
ಜಯ ಕೃತಯಮವಿಜಯೆ ! ದೇವನುತೆ! ಸಾವಿತ್ರೀ ॥

ಸತ್ಯವಾನ:— ನಿನ್ನೊಡನಿರುವಾಗ ಸೌಖ್ಯವೇ ಅಲ್ಲವೇ? ಕೆಳದಿ ! ಇದೇನು? ಆಗಲೇ ಸೂರ್ಯೋದಯವಾಗಿರುವದು?

ಸಾವಿತ್ರಿ:—ಅಹುದು.

ಸತ್ಯವಾನ:—ನಾವಿಷ್ಟು ಹೊತ್ತೂ ಇಲ್ಲಿಯೇ ಇದ್ದೇವೆ? ಏನುಮಾಡುತ್ತಿದ್ದೆವು? ಅಯ್ಯೋ! ತಂದೆತಾಯಿಗಳೇನೆಂದುಕೊಂಡಿರುವರೋ?

ಸಾವಿತ್ರಿ:—ನಾಥ! ಅಹುದು ಮೊದಲು ಆಶ್ರಮಕ್ಕೆ ಹೋಗಿ ಕಳವಳಿಸುತ್ತಿರುವ ಗುರುಜನರನ್ನು ಸಂತೈಸೋಣ.

ಸತ್ಯವಾನ:—ಇದೇನೀಬೆಳಕು?

ವಿಶ್ವಪ್ರಿಯ:—ತಾಯೆ! ಸಾವಿತ್ರಿದೇವಿ! ದೈವಕೃಪಾಯೋಗದಿಂದ ಅಭಿವರ್ಧಿಸುತ್ತಿರುವೆಯಾ?

ಸಾವಿತ್ರಿ:—ಎಲೈ! ಮಹಾನುಭಾವನೆ! ನಿನ್ನ ಕೃಪೆಯಿಂದ ಲಬ್ಧವಾದ ಸೌಭಾಗ್ಯವುಳ್ಳ ಸಾವಿತ್ರಿಯು ನಮಸ್ಕರಿಸುವಳು.

ವಿಶ್ವಪ್ರಿಯ:—ದೇವಮಾನ್ಯೆಯಾದ ಮಹಿಮಶಾಲಿನಿಯೇ! ಏಳು. ನಿನ್ನ ಸೌಭಾಗ್ಯವಿನ್ನೂ ಅಭಿವರ್ಧಿಸಲಿ.

ಸಾವಿತ್ರಿ:—ಆರ್ಯಪುತ್ರ! ಯಾವ ಗಂಧರ್ವರಾಜನ ಅನುಗ್ರಹದಿಂದ ಪುನರುಜ್ಜೀವಿನಾದೆಯೋ, ಆ ವಿಶ್ವಪ್ರಿಯನಿಗೆ ಒಂದಿಸು.

ಸತ್ಯವಾನ:—ಗಂಧರ್ವಪತಿಯೇ! ನಮಸ್ಕರಿಸುವೆನು.

ಗಂಧರ್ವ:—ಸತ್ಯವಾನರಾಯ! ನಿನಗೆ ಮಂಗಳವಾಗಲಿ.

ಸತ್ಯವಾನ:—ದೇವಿ! ನಾನು ಮೃತನಾಗಿದ್ದೇನೆ?

ಸಾವಿತ್ರಿ:—ನಾಥ! ಆ ವಿಚಾರವನ್ನು ಅವಕಾಶವಾದಾಗ ಬಿನ್ನವಿಸುವೆನು.

ಗಂಧರ್ವ:—ಇದೇ! ನಿಮ್ಮನ್ನೇ ಇದಿರು ನೋಡುತ್ತ ಆರ್ಯರು ಕಾದಿರುವರು. ಇದೋ! ನೋಡಿ (ಎಂದು ತನ್ನ ಶಕ್ತಿಯಿಂದ ದ್ಯುಮತ್ಸೇನನ ಆಸ್ಥಾನಕ್ಕೆ ಕರೆದೊಯ್ಯುವನು). ಇದೋ! ಪ್ರಾಪ್ತರಾಜ್ಯನೂ, ಪುನರ್ಲಬ್ಧೇಂದ್ರಿಯನೂ ಆದ ದ್ಯುಮತ್ಸೇನಮಹಾರಾಜನು. ಇದೋ! ಮಹಾರಾಜನಾದ ಅಶ್ವಪತಿಯು. (ಯಲ್ಲರೂ ಒಬ್ಬರನ್ನೊಬ್ಬರು ಸತ್ಕರಿಸುವರು).

ವಿಶ್ವಪ್ರಿಯ:—ಎಲೈ! ದಂಪತಿಗಳೆ! ಇನ್ನಾವುದಾದರೂ ಅಭೀಷ್ಟವುಂಟೆ?

ದಂಪತಿಗಳು:—ನಿನ್ನ ಪರಮಾನುಗ್ರಹದಿಂದ ಚರಿತಾರ್ಥರಾಗಿರುವೆವು. ಆದರೂ ಇದೂ ನೆರವೇರಲಿ.

ವೃತ್ತ॥ ಶ್ರೀಮತ್ಕೃಷ್ಣ ನರೇಂದ್ರನೆಂದು ಪೊರನೀ ಕರ್ನಾಟ
ಭೂಭಾಗಮಂ ॥
ಕ್ಷೇಮಂ ಕಳ್ತು ಜನಂಗಳೊಳ್ ದೊರೆಗೆ ಭ್ರಾತೃಸ್ನೇಹ
ಸೌಭಾಗ್ಯಮುಂ ॥
ಕಾಮಂ ಬ್ರಾಹ್ಮಣ ಧೇನು ವರ್ಧಿಸುಗೆ ವಾಣೀಶ್ರಯ
ರೋಳ್ಸಂಗಮುಂ ॥
ಭೂಮಿದೇವಿ ವಸುಂಧರಾಂತ ವೆಸೆಯಲ್ ಕೈಗಾಯ್ಗೆ
ಚಾಮುಂಡಿಯುಂ ॥

ವಿಶ್ವಪ್ರಿಯ:—ಅಷ್ಟೆ ಅಲ್ಲದೆ ನಿಮ್ಮಂತಹ ಭರತಪುತ್ರರೇ ಆಗಲೆಂದು ಸರ್ವೇಶ್ವರನಾದ ಶ್ರೀಶನನ್ನು ಎಲ್ಲರೂ ಪ್ರಾರ್ಥಿಸೋಣ (ಎಂದೆಲ್ಲರೂ ಮಂಗಳನ್ನಾಚರಿಸುವರು).

ಕಂ॥ ಭೂಪಶ್ರೀಕೃಷ್ಣಸಖಂ ॥
ಗೋಪಾಲಂ ರಾಜಬಂಧುವರ್ಗ ಶ್ರೇಷ್ಠಂ ॥
ಕಾಪಿಡೆ ತಚ್ಛ್ರೈಯೋರ್ಥಂ ॥
ಶ್ರೀಪತಿಕೃಪೆಯಿಂದೆಂರಚಿತನಾಯ್ತೀ ಕಾವ್ಯಂ ॥

॥ ಶ್ರೀ ॥



ಭಿಷಗ್ರತ್ನ

# ಪಾಳ್ಯದ ವೆಂಕಟಾಚಲ ಪಂಡಿತರ ಸಿದ್ಧೌಷಧಗಳು.

## ಲೋಕಾಮಯಹರ ಕಸ್ತೂರಿ ಮಾತ್ರೆಗಳನ್ನು ಈಗಲಾದರೂ ಪರೀಕ್ಷಿಸಿ ನೋಡಿರಿ!

### ಪ್ರತಿವರ್ಷವೂ ಲಕ್ಷಾಂತರ ಸೀಸೆಗಳು-ವಿಕ್ರಯವಾಗುತ್ತಿವೆ.

ಇಂಡಿಯಾದವರು ಮಾತ್ರವಲ್ಲ; ಬರ್ಮಾ, ಸಿಲೋನ, ಮಲೆಯಸ್ಟೇಟ್; ಗೋವಾ, ಫಿಜಿಲೆಂಡ್, ಈಸ್ಟಾಫ್ರಿಕಾ ಮೊದಲಾದ ಕಡೆಯವರೂ ಕೂಡ ಈ ಸಿದ್ಧೌಷಧಿಯನ್ನು ಉಪಯೋಗಿಸುತ್ತಿರುತ್ತಾರೆ.




ಮಹಾಭಾಗ, ಒಂದೇ ಒಂದು ಲೋಕಾಮಯಹರ ಕಸ್ತೂರಿ ಮಾತ್ರೆಯ ಸೀಸೆಯು ನಿಮ್ಮ ಮನೆಯಲ್ಲಿದ್ದರೆ ಮಾತುಮಾತಿಗೂ ವೈದ್ಯರ ಸಮಯವನ್ನು ಕಾದು ಮೊರೆಯಿಡುವದು ನಿಜವಾಗಿಯೂ ತಪ್ಪುವದು

ಶೀತ, ಶೀತವಾಯು, ಅಜೀರ್ಣ, ಪಾರ್ಶ್ವವಾಯು, ಜ್ವರ, ಮಂದ, ಮಲಬದ್ಧ, ಕೆಮ್ಮು, ಗಸಬೇನೆ, ಬಲಹೀನತೆ, ಕೆಟ್ಟಹವಾ, ಮತ್ತು ಕೆಡುಕಾದ ಎಳವು, ಜ್ವರ, ಕೆಮ್ಮು ವಾಯು, ಇನ್ನೂ ಅನೇಕ ರೋಗಗಳನ್ನು ಈ ಸಿದ್ಧಾಮೃತವು ಆಶ್ಚರ್ಯವಾಗುವಂತೆ ಗುಣಪಡಿಸುತ್ತದೆ.

ರಜಿಸ್ಟರಾದ ಈ ವ್ಯಾಪಾರದ ಗುರ್ತು ಪ್ರತಿ ಸೀಸೆಯಮೇಲೂ ಇರುವುದನ್ನೇ ನೋಡಿ ತೆಗೆದುಕೊಳಬೇಕಾಗಿ. ಅನುಪಾನ ಪ್ರತಿ ಸೀಸೆಯೊಡನೆಯೂ ಇರುವುದು. ೨೦೦ಮಾತ್ರೆಗಳುಳ್ಳ, ಕುಪ್ಪಿಗೆ ೪ ಆಣೆ ಮಾತ್ರ.

| | | |
|---|---|---|
| ಪ್ರತಿ | ಟಪಾಲು ಖರ್ಚು ಸೇರಿ | |
| " ೬ ಸೀಸೆಗಳನ್ನು ಒಟ್ಟಿಗೆ ತರಿಸಿದರೆ | " | ೧-೮-೦ |
| " ೧೨ ಸೀಸೆಗಳನ್ನು ಒಟ್ಟಿಗೆ ತರಿಸಿದರೆ | " | ೨-೧೩-೦ |
| " ೨೪ ಸೀಸೆಗಳನ್ನು ಒಟ್ಟಿಗೆ ತರಿಸಿದರೆ | " | ೫-೯-೦ |

### ಯೋಗ್ಯತಾಪತ್ರಗಳು.

ಡಾಕ್ಟರ್ ಪ್ರಭಾಕರ, ಫೆಲೋ ಆಫ್ ದಿ ಆಯುರ್ವೇದಿಕ್ ಯೂನಿವರ್ಸಿಟಿ ಗ್ರಾಜ್ಯುಯೇಟ್, ಎನ್, ವೈ ಇನ್ಸ್ಟಿಟೂಟ ಆಫ್ ಸೈನ್ಸ್, ಯುನೈಟೆಡ್ ಸ್ಟೇಟ್ಸ ಆಫ್ ಅಮೇರಿಕೆ, ಆ್ಯಂಡ್ ಆಫ್ ದಿ ಸ್ಯಾನಿಟರಿ ಇನ್ಸ್ಟಿಟ್ಯೂಟ್, ಲಂಡನ್,ಕನ್ಸಲ್ಟಿಂಗ್ ಕೆಮಿಸ್ಟ್, ಎಗಿಯರಿವೀನ್ ನಂ. ೨ ಬೊಂಬೈ ಇವರು ಬರೆದಿರುವುದು. "ತಮ್ಮ ಲೋಕಾಮಯಹರ ಕಸ್ತೂರಿ ಮಾತ್ರೆಗಳನ್ನು ಉಪಯೋಗಿಸಿದುದರಲ್ಲಿ ಶ್ವಾಸೋಚ್ಛ್ವಾಸಗಳ ವ್ಯತ್ಯಾಸ, ಅಜೀರ್ಣ, ಮಲಬದ್ಧತೆ. ಪಕ್ಕೆಯ ನೋವು, ಹೊಟ್ಟೇನೋವು, ದಿನಗಟಲೆಯು ಜ್ವರ; ಪಿತ್ತಸಂಬಂಧವಾದ ರೋಗ, ಮಕ್ಕಳ ಎಳವು ವಾಯುಗಳೆಲ್ಲವೂ ಗುಣವಾಗಿರುತ್ತವೆ, ತಮ್ಮಲ್ಲಿಗೆ ಪ್ರತಿನಿತ್ಯವೂ ಬರುವ ರೋಗಿಗಳಿಗೆ ಈ ಕಸ್ತೂರಿ ಮಾತ್ರೆಗಳನ್ನೇ ಸ್ವದೇಶೀ ವೈದ್ಯರು ಮುಖ್ಯವಾಗಿ ಕೊಡಬೇಕೆಂದು ಶಿಫಾರಸ್ ಮಾಡುತ್ತೇನೆ."

ಡಾಕ್ಟರ್ ಪಿ. ಎಸ್. ಅಚ್ಯುತರಾವ ಲೇಟ್ ಸೀನಿಯರ ಸರ್ಜನ್ ಮತ್ತು ಸ್ಯಾನಿಟರಿ ಕಮಿಷನರ್, ಮೈಸೂರ ಗೌರ್ನ್ಮೆಂಟ ಇವರು ಬರೆದಿರುವುದು—ಲೋಕಾಮಯಹರ ಕಸ್ತೂರಿ ಮಾತ್ರೆಗಳನ್ನು ನಾನು ಉಪಯೋಗಿಸಿದ್ದೇನೆ. ಪಂಡಿತರವರಿಂದ ಪತಿಕೆಯಲ್ಲಿ ಪ್ರಸಿದ್ಧಪಡಿಸಿರುವಂತೆ ಅನೇಕ ಉತ್ಕೃಷ್ಟವಾದ ಗುಣಗಳನ್ನು ಈ ಗುಳಿಗೆಗಳು ಹೊಂದಿವೆ ಎಂಬದಾಗಿ ತಿಳಿಸಲು ನಾನು ತುಂಬಾ ಆನಂದಭರಿತನಾಗಿದ್ದೇನೆ. ವೈದ್ಯಶಾಲೆಯಲ್ಲಿ ಅನೇಕ ತರಹ ಉಪಯುಕ್ತವಾದ ಕರ್ನಾಟಕ ಮೂಲಿಕೆಗಳಿಂದಲೇ ಇವರ ಔಷಧವನ್ನು ತಯಾರು ಮಾಡುತ್ತಿರುತ್ತಾರೆ.

ಸಮಸ್ತ ರೋಗಗಳಿಗೂ ನಮ್ಮಲ್ಲಿ ಆಯುರ್ವೇದಿಯ ಸಿದ್ಧೌಷಧಿಗಳು ದೊರೆಯುತ್ತವೆ, ಕ್ಯಾಟಲಾಗು ಉಚಿತ.

ವಿಳಾಸ:- -

**ಸೀತಾರಾಘವ ವೈದ್ಯಶಾಲಾ, ಮೈಸೂರು.**

